# ಮಹಾಭಾರತ ಕೋಶ

## ಸಂಕ್ಷಿಪ್ತ ವ್ಯಕ್ತಿ–ವಿಷಯ ಪರಿಚಯ ಕೋಶ

ಸಿ. ಗೋಪಾಲಕೃಷ್ಣ ಶಾಸ್ತ್ರಿ, ಮೂಡಂಬೈಲು




ಶ್ರೀರಾಮಕೃಷ್ಣ ಆಶ್ರಮ
ಯಾದವಗಿರಿ, ಮೈಸೂರು – 570020

**Mahabharatha Kosha -** A compilation of brief character sketches and themes in the Mahabharata, by C. Gopalakrishna Shastry, Moodambailu, Dakshina Kannada Dist. Published by The Adhyaksha, Sri Ramakrishna Ashrama, Yadavagiri, Mysuru 570020

ಮೊದಲನೆಯ ಮುದ್ರಣ : ೨೦೦೬
ಎರಡನೆಯ ಮುದ್ರಣ : ೨೦೨೦



ಪ್ರಕಾಶಕರು :
ಅಧ್ಯಕ್ಷರು
ಶ್ರೀರಾಮಕೃಷ್ಣ ಆಶ್ರಮ
ಯಾದವಗಿರಿ, ಮೈಸೂರು ೫೭೦೦೨೦
ದೂ : ೦೮೨೧-೨೪೧೭೪೪೪

ಅಕ್ಷರ ಸಂಯೋಜನೆ : ಶ್ರೀಮತಿ ಸವಿತಾ ಶಾಂತಪ್ರಿಯ, ಉಡುಪಿ
ಮುದ್ರಣ : ಪದ್ಮಶೇಖರ್ ಪ್ರಿಂಟರ್ಸ್, ಮೈಸೂರು

# ಪ್ರಕಾಶಕರ ನುಡಿ

ರಾಮಾಯಣ ಮಹಾಭಾರತಗಳ ಮೇಲೆ ಎಷ್ಟೋ ಪುಸ್ತಕಗಳು ಈಗಾಗಲೇ ಪ್ರಕಟಗೊಂಡಿವೆ; ಪ್ರಕಟಗೊಳ್ಳುತ್ತಲೇ ಇವೆ. ಅಂತಹ ಕೃತಿಗಳ ಸಾಲಿಗೆ ಇದೊಂದು ಹೊಸ ಸೇರ್ಪಡೆ. ಮಹಾಭಾರತದೊಳಗಿನ ಸಂಜ್ಞಾರೂಪದ ಎಲ್ಲ ಹೆಸರುಗಳ ಸಂದರ್ಭಸೂಚಿರೂಪದ ಗ್ರಂಥವಿದು. ಕನ್ನಡದಲ್ಲಿ ಇಷ್ಟು ಸಮಗ್ರವಾದ ಈ ಬಗೆಗಿನ ಗ್ರಂಥಗಳು ಅಪರೂಪ.

ಮೂಲ ಮಹಾಭಾರತ, ಪುರಾಣನಾಮಚೂಡಾಮಣಿ, ಪುರಾಣ ಭಾರತಕೋಶಗಳನ್ನಲ್ಲದೆ ಹಿಂದೀ ಮೊದಲಾದ ಇತರ ಭಾರತೀಯ ಭಾಷೆಗಳಲ್ಲಿ ಬಂದ ಈ ಮಾದರಿಯ ಗ್ರಂಥಗಳನ್ನೂ ಅವಲೋಕಿಸಿ ಈ ಕೃತಿಯನ್ನು ಸಿದ್ಧಪಡಿಸಿಕೊಟ್ಟವರು ಖ್ಯಾತ ಯಕ್ಷಗಾನ ಅರ್ಥಧಾರಿಗಳೂ, ನಿವೃತ್ತ ಅಧ್ಯಾಪಕರೂ, ಪುರಾಣಪ್ರವಚನಕಾರರೂ ಆದ ಶ್ರೀ ಮೂಡಂಬೈಲು ಗೋಪಾಲಕೃಷ್ಣ ಶಾಸ್ತ್ರಿಗಳು. ಅವರ ಪ್ರಯತ್ನ ಈ ಪುಸ್ತಕರೂಪದಲ್ಲಿ ಸಾರ್ಥಕವಾಗಿದೆ. ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ವಿಶಿಷ್ಟ ಗ್ರಂಥದ ಕರಡಚ್ಚು ತಿದ್ದುವಿಕೆ ಸುಲಭಕಾಯಕವಲ್ಲ. ಈ ಕಾರ್ಯದಲ್ಲಿ ಸಹಕಾರ ನೀಡಿದ ಖ್ಯಾತ ಯಕ್ಷಗಾನ ವಿಮರ್ಶಕರೂ ಸಂಶೋಧಕರೂ ಆದ ಡಾ. ಕೆ. ಎಂ. ರಾಘವ ನಂಬಿಯಾರ್ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ. ಇಂತಹ ಒಂದು ಅಮೂಲ್ಯ ಪುಸ್ತಕವನ್ನು ಮೊದಲು ಪ್ರಕಟಿಸಿದ 'ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ'ಕ್ಕೆ ಹಾಗೂ ಮೊದಲನೆಯ ಪ್ರಕಟಣೆಯಲ್ಲಿ ನೆರವಾದ ಎಲ್ಲರಿಗೂ ನಮ್ಮ ಧನ್ಯವಾದಗಳನ್ನು ಸಲ್ಲಿಸುತ್ತಿದ್ದೇವೆ.

ಈ ಪುಸ್ತಕದ ಎರಡನೆಯ ಮುದ್ರಣವನ್ನು ನಮ್ಮ ಆಶ್ರಮದಿಂದ ಪ್ರಕಟಿಸುವ ಕುರಿತು ಲೇಖಕರು ಪ್ರಸ್ತಾಪಿಸಿದಾಗ, ಪುಸ್ತಕದ ವೈಶಿಷ್ಟ್ಯತೆಯನ್ನು ಹಾಗೂ ಮಹಾಭಾರತದ ವ್ಯಕ್ತಿ-ವಿಷಯಗಳಲ್ಲಿ ಆಸಕ್ತಿಯನ್ನು ಹೊಂದಿರುವ ಓದುಗರಿಗೆ ಈ ಪುಸ್ತಕವು ನೀಡಬಹುದಾದ ನೆರವನ್ನು ಗಮನಿಸಿ, ಈ ಗ್ರಂಥದ ಪ್ರಕಟಣಾ ಕಾರ್ಯವನ್ನು ಕೈಗೆತ್ತಿಕೊಂಡಿದ್ದೇವೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ ಆಸಕ್ತಿಯುಳ್ಳವರಿಗೂ, ಪುರಾಣಗಳ ಅಧ್ಯಯನಾಸಕ್ತರಿಗೂ, ಅಧ್ಯಾಪಕರಿಗೂ, ಯಕ್ಷಗಾನ ಅರ್ಥಧಾರಿಗಳಿಗೂ, ಹರಿಕಥಾ ಕಾಲಕ್ಷೇಪಗಳಿಗೂ ಈ ಕೃತಿ ಹೆಚ್ಚಿನ ಸಾಮಗ್ರಿಯನ್ನು ಒದಗಿಸಿ ಕೊಡುತ್ತದೆಂಬ ಭರವಸೆ ನಮ್ಮದು.

ಶ್ರೀರಾಮಕೃಷ್ಣ ಜಯಂತಿ
೨೫ ಫೆಬ್ರವರಿ ೨೦೨೦

**ಅಧ್ಯಕ್ಷರು**

# ನಿವೇದನೆ

ವೇದರಹಸ್ಯಗಳನ್ನು ಅರ್ಥೈಸಬೇಕಾದರೆ, ಸ್ಮೃತಿ, ಪುರಾಣ, ಇತಿಹಾಸಗಳನ್ನು ಆಶ್ರಯಿಸಬೇಕಾಗುತ್ತದೆ. ವೇದಮೂಲವಾದ "ಸತ್ಯಂವದ" "ಧರ್ಮಂಚರ" ಎಂಬ ನಿರ್ದೇಶನಕ್ಕೆ ವ್ಯವಹಾರದಲ್ಲಿ ವ್ಯಾಪ್ತಿ ಎಷ್ಟು? ಯಾವುದು ಸತ್ಯ? ಯಾವುದು ಧರ್ಮ? "ಅಪ್ರಿಯ ಸತ್ಯವನ್ನು ನುಡಿಯಬಾರದು. ಸಮಾಜಕ್ಕೆ ಸುಖಕರವಾದರೆ ಸುಳ್ಳನ್ನಾದರೂ ಆಡಬಹುದು" ಇತ್ಯಾದಿಗಳ ವ್ಯಾಖ್ಯಾನ ಮನುಷ್ಯರಿಗೆ ಅರ್ಥವಾಗಬೇಕಾದರೆ, ಪುರಾಣೇತಿಹಾಸಗಳಲ್ಲಿ ಬರುವ ಆಖ್ಯಾನಗಳನ್ನೇ ಅವಲಂಬಿಸಬೇಕಾಗುತ್ತದೆ. ಪೂರ್ವಾಹ್ನ ಕಾಲದಲ್ಲಿ ಸದಾ ವೈದಿಕ ಕರ್ಮಗಳಲ್ಲಿ ಮಗ್ನರಾಗುತ್ತಿದ್ದ ಋಷಿಮುನಿಗಳೂ ಅಪರಾಹ್ನ ಕಾಲದಲ್ಲಿ ಪುರಾಣ ಶ್ರವಣ ಮಾಡುತ್ತಿದ್ದರೆಂದೂ, ನೈಮಿಷಾರಣ್ಯವು ಪುರಾಣಪ್ರವಚನದ ದಿವ್ಯಕ್ಷೇತ್ರವಾಗಿತ್ತೆಂದೂ, ಪ್ರವಚನಕಾರರಲ್ಲಿ ಉಗ್ರಶ್ರವಾ ಸೌತಿ ಎಂಬವರು ಅಗ್ರಮಾನ್ಯರೆಂದೂ ಇತಿಹಾಸವೇ ಸಾರುತ್ತದೆ. ಆದುದ ರಿಂದ ವೇದೋಕ್ತ ನೀತಿಗಳನ್ನು, ಮಾನವೋಚಿತ ಮಾರ್ಗದಲ್ಲಿ ತಿಳಿಸಿ, ಮನುಷ್ಯನನ್ನು ಸುಸಂಸ್ಕೃತನಾಗಿ ಮಾಡುವ ಕಾರ್ಯವನ್ನು, ಪುರಾಣೇತಿಹಾಸಗಳೇ ಮಾಡಿವೆ ಎಂದರೆ ತಪ್ಪಲ್ಲ.

"ರವಿ ಕಾಣದುದನ್ನು ಕವಿ ಕಾಣುತ್ತಾನೆ" ಎಂಬ ನಾಣ್ಣುಡಿ ಇದೆ. ಅದಕ್ಕೆ "ಕವಿ ಕಾಣದುದನ್ನು ತಾಳಮದ್ದಳೆಯ ಅರ್ಥಧಾರಿ ಕಾಣುತ್ತಾನೆ" ಎಂದು ಸೇರಿಸುವುದು ಕಾಲೋಚಿತವಾದುದು. ಅದೇ ರೀತಿ ಪುರಾಣಗಳಲ್ಲಿ ಬರುವ ಹಲವು ಕ್ಲಿಷ್ಟ ಸನ್ನಿವೇಶಗಳನ್ನು ವ್ಯಾಖ್ಯಾನಕಾರರು ವಿವರಿಸುತ್ತಾರೆ. ಅವರ ವ್ಯಾಖ್ಯಾನಗಳಿಗೂ ನಿಲುಕದ ವಿಚಾರಗಳಿಗೆ, ಸರಳ ಸುಂದರ ವಿವರಣೆಯನ್ನು ಕೊಡುವ ಕೆಲಸವನ್ನು ಪುರಾಣಕೋಶಗಳು ಮಾಡುತ್ತಾ ಬಂದಿವೆ. ಪುರಾಣಗಳಲ್ಲಿ ಸೂಚ್ಯವಾಗಿ ಹೇಳಿದ ವಿಚಾರಗಳನ್ನು ಕೋಶಗಳಲ್ಲಿ ವ್ಯಾಖ್ಯಾನಿಸಿದ ಸಂದರ್ಭಗಳು ಅನೇಕವಿವೆ. ಪುರಾಣಾಂತರ್ಗತ ಸೂಕ್ಷ್ಮ ಸನ್ನಿವೇಶಗಳು ಎಲ್ಲಿವೆಯೆಂದು ಹುಡುಕಬೇಕಾದರೆ, ಕೋಶಗಳೇ ದಾರಿದೀಪಗಳು. ದೈನಂದಿನ ಯಕ್ಷಗಾನ, ಪ್ರವಚನ ಇತ್ಯಾದಿಗಳಿಗೆ ಬೇಕಾದ ವಿಷಯ ಸಂಗ್ರಹಕ್ಕೆ, ಆಮೂಲಾಗ್ರ ಪುರಾಣವನ್ನು ಪ್ರತಿದಿನ ಓದುವುದು ಸಲ್ಲದ ಮಾತು. ಆಗ ಕೋಶಗಳನ್ನು ಆಶ್ರಯಿಸುವುದು ಅನಿವಾರ್ಯ.

ಈಗ ನಾನು ಸಂಗ್ರಹಿಸಿ, ರಚಿಸಿದ ಈ ವ್ಯಾಸಪ್ರಣೀತ ಮಹಾಭಾರತದ ಕೋಶ ಕೇವಲ ಮಹಾಭಾರತದಲ್ಲಿ ಬರುವ ವ್ಯಕ್ತಿ, ಕ್ಷೇತ್ರ, ನದಿ, ಪರ್ವತ, ದ್ವೀಪ, ಖಂಡ, ಪ್ರಾಣಿಗಳು, ಬಾಣಗಳು, ಯುದ್ಧತಂತ್ರ, ನಕ್ಷತ್ರ, ಅಗ್ನಿಗಳು, ಯಕ್ಷ, ರಾಕ್ಷಸ, ದೇವತೆ, ಅಪ್ಸರೆ, ನಗರ, ಜನಪದ, ದೇಶ, ಸಮುದ್ರ, ತೀರ್ಥ ಇತ್ಯಾದಿಗಳನ್ನು ಒಳಗೊಂಡ ಗ್ರಂಥ. ಇವಿಷ್ಟನ್ನೂ, ಮೂಲಗ್ರಂಥವನ್ನೋದಿ, ನಾನೇ ವಿಂಗಡಿಸಿ, ರಚಿಸಿದೆನೆಂದು ಹೇಳುವುದು ಸುಳ್ಳಿನ ಕಂತೆಯಾದೀತು. ಈ ರೀತಿಯ ಗ್ರಂಥ ಸಂಪಾದನೆ ಮಾಡಲು ನಾಲ್ಕಾರು ಮಂದಿ ಸೇರಿ, ಆಯುಷ್ಯ ಪರ್ಯಂತ ಶ್ರಮಿಸಬೇಕಾದೀತು. ಆದುದರಿಂದ ಇದನ್ನು ರಚಿಸಲು, ನಾನು ಸಹಕಾರ ಪಡೆದ ಹಿಂದೀ ಭಾಷೆಯ ಉದ್ಗ್ರಂಥಗಳಿಗೂ ಕನ್ನಡ, ಹಿಂದೀ ಪದಕೋಶಗಳಿಗೂ, ಭಾರತದರ್ಶನ ಪ್ರಕಾಶನದವರು ಪ್ರಕಟಿಸಿದ ಮಹಾಭಾರತ ಗ್ರಂಥಕ್ಕೂ ಪೂರ್ಣಋಣಿಯಾಗಿದ್ದೇನೆ. ಈ ಗ್ರಂಥವನ್ನು ರಚಿಸಲು, ಈ ಮೊದಲು ಕನ್ನಡದಲ್ಲಿ

ರಚಿಸಲ್ಪಟ್ಟ ಪುರಾಣಕೋಶಗಳನ್ನು ನಾನು ಅನುಸರಿಸಿಲ್ಲ. ಹಿಂದೀ ಭಾಷೆಯ ಗ್ರಂಥಗಳನ್ನೇ ಆಧಾರವಾಗಿಸಿಕೊಂಡಿದ್ದೇನೆ. ಸಮಗ್ರ ಮಹಾ ಭಾರತದ ನಾಮಾನುಕ್ರಮಣಿಕೆಯನ್ನು ತಯಾರಿಸಲು ಪರಿಶ್ರಮವಹಿಸಿ, ತಮ್ಮ ಆಯುಸ್ಸನ್ನೇ ಮುಡುಪಾಗಿಟ್ಟ ಪಂಡಿತ ಶ್ರೀ ರಾಮನಾರಾಯಣದತ್ತ ಶಾಸ್ತ್ರಿಯವರು ಮತ್ತು ಪಂಡಿತ ರಾಮಧಾರ ಶಾಸ್ತ್ರಿಯವರು ಪ್ರಾತಃಸ್ಮರಣೀಯರು. ಅವರಿಗೆ ನೆರವನ್ನಿತ್ತ ಗೀತಾ ಪ್ರೆಸ್ಸಿನವರು ಅಭಿವಂದನೀಯರು. ಮಹಾಭಾರತದಲ್ಲಿ ಬರುವ ಪ್ರತಿ ಹೆಸರಿನ ವಿವರಣೆಯನ್ನು ಪರ್ವ, ಸರ್ಗ, ಶ್ಲೋಕ ಸಂಖ್ಯೆಯೊಂದಿಗೆ ಸಿದ್ಧಪಡಿಸಿದುದು ಮಾತ್ರವಲ್ಲದೆ, ಮಹಾಭಾರತದ ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಗಳ ಪ್ರಭೇದವನ್ನೂ ಸೂಚಿಸಿದ್ದಾರೆ. ಈ ಕಠಿಣ ತಪಸ್ಸನ್ನು ಪೂರ್ಣಗೊಳಿಸಿ, ಲೋಕಕಲ್ಯಾಣಕಾರಕ ಫಲಸ್ವರೂಪದ ಗ್ರಂಥವನ್ನು ಹಿಂದೀಭಾಷೆ ಯಲ್ಲಿ ತಯಾರಿಸಿದ ಆ ಪುಣ್ಯಾತ್ಮರಿಗೆ ಸಹಸ್ರ ಸಹಸ್ರ ಬಾರಿ ಸಾಷ್ಟಾಂಗ ಪ್ರಣಾಮಮಾಡುತ್ತೇನೆ. ಈ ಗ್ರಂಥವನ್ನು ಕನ್ನಡದಲ್ಲಿ ತಯಾರಿಸಿ, ಪುರಾಣ ಪ್ರಪಂಚದಲ್ಲಿ ವ್ಯವಹರಿಸುವ, ಅಧ್ಯಯನಶೀಲ ಕಲಾವಿದರಿಗೆ ಒದಗಿಸಬೇಕು ಎಂಬ ಹಂಬಲವುಂಟಾಗಿ ಕೆಲವು ವರ್ಷಗಳಾದುವು. ನನ್ನ ಹಿತ ಚಿಂತಕರಾದ ಡಾ। ಎಂ. ಪ್ರಭಾಕರ ಜೋಶಿಯವರು ಪ್ರೋತ್ಸಾಹ ನೀಡಿದರು. ನಾಲ್ಕೈದು ವರ್ಷಗಳ ಹಿಂದೆಯೇ ಈ ಕೃತಿಯನ್ನು ಸಿದ್ಧಗೊಳಿಸಲು ಪ್ರಾರಂಭಿಸಿದರೂ, ಪೂರ್ಣಗೊಳಿಸಲು ಇತ್ತೀಚಿಗಷ್ಟೆ ಸಾಧ್ಯವಾಯಿತು.

ಈ ಗ್ರಂಥವು ಮಹಾಭಾರತದ ಔತ್ತರೇಯ ಪಾಠವನ್ನೇ ಅವಲಂಬಿಸಿದೆ. ಬೆರಳೆಣಿಕೆಯಲ್ಲಿ ಕೆಲವು ಕಡೆ ದಾಕ್ಷಿಣಾತ್ಯ ಪಾಠದ ಶಬ್ದಗಳೂ ಸೇರಿಕೊಂಡಿವೆ. ಪರ್ವ, ಸರ್ಗ, ಶ್ಲೋಕಸಂಖ್ಯೆಗಳನ್ನು ಸೂಚಿಸಿದುದರಲ್ಲಿ ಚಿಕ್ಕಪುಟ್ಟ ಲೋಪದೋಷಗಳು ಇರಲು ಸಾಧ್ಯವಿದೆ. ಸಹೃದಯಿಗಳಾದ ಓದುಗರು ಕ್ಷಮಿಸುವಿರಾಗಿ ನಂಬುತ್ತೇನೆ.

ಹಿಂದಿನವರು ಸಂಗ್ರಹಿಸಿದ ವಿವರಗಳನ್ನು ವಿಸ್ತರಿಸುವರೆ ಅನೇಕ ಸನ್ನಿವೇಶಗಳಲ್ಲಿ ಪರಿಶ್ರಮ ವಹಿಸಿದ್ದೇನೆ. ಹಿಂದೀ ಭಾಷೆಯ ಶಬ್ದಸಾಗರ ಮತ್ತು ಇತರ ವ್ಯಾಖ್ಯಾನ ಗ್ರಂಥಗಳು, ವಿವಿಧ ಭಾಷೆಯ ಅರ್ಥಕೋಶಗಳು, ರಾಮಾಯಣ, ಶ್ರೀಮದ್ಭಾಗವತ, ಗರುಡಪುರಾಣ, ಮತ್ಸ್ಯಪುರಾಣ ಇತ್ಯಾದಿಗಳಲ್ಲಿ ದೊರಕಿದ ಎಷ್ಟೋ ಟಿಪ್ಪಣಿಗಳನ್ನೂ, ವಿವರಣೆಗಳನ್ನೂ ಸೇರಿಸಿದ್ದೇನೆ. ಆದರೂ ವಿವರಿಸದೆ ಉಳಿದ ಒಂದೇ ಒಂದು ಶಬ್ದವಿಲ್ಲವೆಂದು ಖಂಡಿತ ಹೇಳಲಾರೆ. ಯಾಕೆಂದರೆ ವ್ಯಾಸ ಪ್ರಣೀತ ಮಹಾಭಾರತ ಸೀಮಾತೀತ, ಪಾರಾವಾರ. ಅದರಲ್ಲಿ ಮುಳುಗಿದರೆ ಅನರ್ಘ್ಯ ರತ್ನಗಳು ಇನ್ನೂ ಇವೆ. ಓದುಗರು ಸಹಕರಿಸಿದರೆ, ಮುಂದಿನ ಮುದ್ರಣದಲ್ಲಿ ಆ ಪ್ರಯತ್ನವನ್ನೂ ಮಾಡಬಹುದು.

ಈ ಗ್ರಂಥ ಕೇವಲ ಮಹಾಭಾರತದಲ್ಲಿ ಬರುವ ಹೆಸರುಗಳಿಗೆ ಮಾತ್ರ ಮೀಸಲಾದುದು. ಆದರೆ ಮಹಾಭಾರತದೊಳಗೆ ಶ್ರೀಮದ್ಭಾಗವತ, ರಾಮಾಯಣವೇ ಮೊದಲಾದ ಕಥೆಗಳು ಸಂದರ್ಭೋಚಿತವಾಗಿ ಬಂದಿವೆ. ಅವುಗಳಲ್ಲಿ ಬರುವ ಪದಗಳಿಗೂ, ಈ ಕೋಶದಲ್ಲಿ ವಿವರಣೆ ಕೊಡಲಾಗಿದೆ. ಆದರೆ ವ್ಯಾಸಭಾರತದಲ್ಲಿ ಬರುವ ಇತರ ಪುರಾಣದ ಕಥೆಗಳು ತುಸು ಭಿನ್ನವಾಗಿವೆ.

ಈ ಗ್ರಂಥವನ್ನು ಅಚ್ಚುಹಾಕಿಸಲು, ಅಲ್ಪಸ್ವಲ್ಪ ಪ್ರಯತ್ನಪಟ್ಟು ಆಗುವ ಕೆಲಸವಲ್ಲವೆಂದು ಸುಮ್ಮನಿದ್ದಾಗ ನನ್ನಲ್ಲಿ ಧೈರ್ಯ ತುಂಬಿದವರಲ್ಲಿ ಒಬ್ಬರು ಕರ್ನಾಟಕ ಬ್ಯಾಂಕಿನ ನಿವೃತ್ತ

ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಕೃಷ್ಣ ಭಟ್ಟರು; ಇನ್ನೊಬ್ಬರು ಪೂನಾ ಯೂನಿವರ್ಸಿಟಿಯ ಅತಿಥಿಬೋಧಕರಾದ ಶ್ರೀ ಪಂಜ ಭಾಸ್ಕರ ಭಟ್ಟರು. ಅವರಿಗೆ ಕೃತಜ್ಞತೆಗಳು. ಬಂಟ್ವಾಳದ ಒಂದು ಸಮಾರಂಭದಲ್ಲಿ ಆತ್ಮೀಯರಾದ ಡಾ। ಪಾದೇಕಲ್ಲು ವಿಷ್ಣು ಭಟ್ಟರು ಮಂಜೇಶ್ವರ ಗೋವಿಂದ ಪೈ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಪ್ರೊ. ಹೆರಂಜೆ ಕೃಷ್ಣ ಭಟ್ಟರಿಗೆ ನನ್ನ ಪರಿಚಯ ಮಾಡಿಸಿದರು; ಈ ಕೃತಿಯ ಕುರಿತು ಮಾಹಿತಿಯನ್ನಿತ್ತರು. ಮೂಲಪ್ರತಿಯನ್ನು ನೋಡಿದ ನಿರ್ದೇಶಕರು, ಸಮಿತಿಯ ಅನುಮತಿಯನ್ನು ಪಡೆದು, ಈ ಕೃತಿಗೆ ಬೆಳಕು ಕಾಣಿಸಿದರು. ನನ್ನ ಎಪ್ಪತ್ತನೆಯ ವಯಸ್ಸಿನಲ್ಲಿ, ಈ ತನಕ ಕೇವಲ ಅರ್ಥ ಹೇಳಿದುದು ಮಾತ್ರವಲ್ಲ; ಮುಂದೆ ಅಧ್ಯಯನ ಮಾಡುವವರಿಗೆ ಹಾಗೂ ಯಕ್ಷಗಾನಕ್ಕೆ ಕೈಲಾದ ಸೇವೆ ಮಾಡಿದ್ದೇನೆಂಬ ಕೃತಕೃತ್ಯತಾ ಭಾವನೆಯನ್ನು ಈ ಗ್ರಂಥ ಒದಗಿಸಿಕೊಟ್ಟಿತು.

ಪುರಾಣಗಳ ಕುರಿತು ಅಪಾರ ಅಭಿಮಾನವನ್ನು ನನ್ನಲ್ಲಿ ಬೆಳೆಸಲು ಕಾರಣರಾದ ನನ್ನ ಮಾತಾಪಿತೃಗಳಿಗೂ, ಅಕ್ಕ, ಅಣ್ಣಂದಿರಿಗೂ, ಈ ಸಂದರ್ಭದಲ್ಲಿ ಮನಸಾ ವಂದಿಸಿಕೊಳ್ಳುತ್ತಿದ್ದೇನೆ. ಅವರ ಮಕ್ಕಳೂ, ನನ್ನ ಮಗಳಂದಿರೂ ಮೊಮ್ಮಕ್ಕಳೂ ನನ್ನಲ್ಲಿ ತೋರುತ್ತಿರುವ ಅಪಾರ ಭಕ್ತಿ, ಗೌರವಗಳೂ ಈ ಗ್ರಂಥ ರಚನಾಕಾರ್ಯದಲ್ಲಿ ಪ್ರೋತ್ಸಾಹಕಗಳಾಗಿವೆ. ನಾನು ಕೃತಿರಚನೆಯಲ್ಲಿ ತನ್ಮಯನಾಗಿದ್ದಾಗ, ತಾಳಮದ್ದಳೆಗಳಿಗಾಗಿ ಸುತ್ತುತ್ತಿದ್ದಾಗ, ತನ್ನ ಅನಾರೋಗ್ಯವನ್ನು ಲೆಕ್ಕಿಸದೆ, ನನಗೆ ಸರ್ವಸಹಕಾರವನ್ನಿತ್ತು, ತಾನು ಕಷ್ಟದ ವಿಷವನ್ನುಂಡು, ಸುಖದ ಅಮೃತವನ್ನು ನನಗಿತ್ತ, ನನ್ನ ಪತ್ನಿಗೆ ಸದಾ ಕೃತಜ್ಞನಾಗಿದ್ದೇನೆ. ಈ ಗ್ರಂಥವನ್ನು ಪ್ರಕಾಶನ ಮಾಡಲು ಕಾರಣರಾದ ಮಂಜೇಶ್ವರ ಗೋವಿಂದಪೈ ಸಂಶೋಧನ ಕೇಂದ್ರದ ಸಲಹಾಸಮಿತಿಯ ಎಲ್ಲಾ ಸದಸ್ಯರಿಗೂ, ಅಧ್ಯಕ್ಷರಾದ ಶ್ರೀ ಕೆ. ಕೆ. ಪೈಯವರಿಗೂ, ನಿರ್ದೇಶಕರಾದ ಪ್ರೊ. ಹೆರಂಜೆ ಕೃಷ್ಣ ಭಟ್ಟರಿಗೂ ಡಾ। ಪಾದೇಕಲ್ಲು ವಿಷ್ಣು ಭಟ್ಟರಿಗೂ ನಾನು ಚಿರಋಣಿಯಾಗಿದ್ದೇನೆ.

ಇದು ನನ್ನ ಸುಪ್ತಪ್ರತಿಭೆಯನ್ನು ಬೆಳಕಿಗೆ ತಂದ ವಂದನೀಯ ಗ್ರಂಥ. ಈ ಬೃಹತ್ ಗ್ರಂಥದ ಮೊದಲನೆಯ ಆವೃತ್ತಿಯ ಪ್ರತಿಗಳೆಲ್ಲ ಕೇವಲ ಎರಡು ಮೂರು ವರ್ಷಗಳಲ್ಲೇ ವಿಕ್ರಯವಾದುದು ಅದರ ಜನಪ್ರಿಯತೆಗೆ ದ್ಯೋತಕವಾಗಿದೆ. ದ್ವಿತೀಯ ಮುದ್ರಣ ಮಾಡುವುದಕ್ಕೆ ಆಸಕ್ತಿ ತೋರಿದ ಮೈಸೂರಿನ ಶ್ರೀರಾಮಕೃಷ್ಣ ಆಶ್ರಮದ ಭೂತಪೂರ್ವ ಅಧ್ಯಕ್ಷರಿಗೂ, ಪ್ರಕಟಿಸಿ ಪ್ರಚುರಗೊಳಿಸಿದ ಈಗಿನ ಅಧ್ಯಕ್ಷರಿಗೂ ನನ್ನ ಹಾರ್ದಿಕ ಕೃತಜ್ಞತೆಗಳು. ಆರೇಳು ವರ್ಷಗಳಿಂದ ಪ್ರತಿಗಳಿಗಾಗಿ ವಿಚಾರಿಸುತ್ತಿದ್ದ ಪುರಾಣಪ್ರಿಯರಿಗೆ ಈಗ ಇದು ಮತ್ತೆ ಲಭ್ಯವಾಗುತ್ತಿರುವುದು ಸಂತೋಷದ ವಿಚಾರವಾಗಿದೆ. ನಮ್ಮ ನಾಡಿನ ಹೆಮ್ಮೆಯ ಪ್ರಬುದ್ಧ ಕಲೆಯಾದ ತಾಳಮದ್ದಳೆಯ ಅರ್ಥಗಾರಿಕೆ, ಹರಿಕಥೆ, ಪುರಾಣ, ಪ್ರವಚನ, ಭಾಷಣ ಮೊದಲಾದ ಕ್ಷೇತ್ರಗಳಲ್ಲಿ ವ್ಯವಸಾಯ ಮಾಡುವ ಸರ್ವಕಲಾವಿದ ಬಂಧುಗಳೂ, ಕಲಾಭಿಮಾನಿಗಳೂ ಈ ಗ್ರಂಥವನ್ನು ಕೊಂಡುಕೊಂಡು ಓದಿ, ಸಲಹೆ ಸೂಚನೆಗಳನ್ನಿತ್ತು ಸಹಕರಿಸಬೇಕೆಂದು ಕೋರುತ್ತಾ, ಸಜ್ಜನ ವಿಧೇಯನಾಗಿ ವಂದಿಸುತ್ತೇನೆ.

**ಸಿ. ಗೋಪಾಲಕೃಷ್ಣ ಶಾಸ್ತ್ರಿ, ಮೂಡಂಬೈಲು**

# ಅ

**ಅಂಜಲಿಕ** – ಅರ್ಜುನನು ಕರ್ಣನ ಶಿರಸ್ಸನ್ನು ಕತ್ತರಿಸಿದ ಬಾಣ (ಕರ್ಣ ಅಧ್ಯಾಯ 90).

**ಅಂಶ** – ಕಶ್ಯಪರ ಮೂಲಕ ಅದಿತಿಯ ಗರ್ಭದಿಂದ ಹುಟ್ಟಿದ ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ (ಆದಿ 65/15). ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 123/66). ಖಾಂಡವವನ ದಹನ ಯುದ್ಧದಲ್ಲಿ ಇಂದ್ರನ ಪಕ್ಷದಿಂದ ಯುದ್ಧಮಾಡಲು ಇವನ ಆಗಮನ (ಆದಿ 226/35). ಇವನ ಮೂಲಕ ಸ್ಕಂದನಿಗೆ ಐದು ಮಂದಿ ಪಾರ್ಷದರು ಕೊಡಲ್ಪಟ್ಟಿದ್ದರು (ಶಲ್ಯ 45/34). ಶಾಂತಿಪರ್ವದ 208ನೇ ಅಧ್ಯಾಯದಲ್ಲಿ ಮತ್ತು ಅನುಶಾಸನ ಪರ್ವದ 86 ಮತ್ತು 151ನೇ ಅಧ್ಯಾಯಗಳಲ್ಲಿ ಕೂಡಾ ಇವನ ಹೆಸರು ಬಂದಿದೆ.

**ಅಂಶಾವತರಣ ಪರ್ವ** – ಆದಿ ಪರ್ವದ 59ರಿಂದ 64ನೇ ಅಧ್ಯಾಯದ ತನಕ ಇರುವ ವಿಷಯ ಭಾಗದ ಹೆಸರು.

**ಅಂಶುಮಾಲೀ** – ಸೂರ್ಯನ ಒಂದು ಹೆಸರು (ಸಭಾ 11/8).

**ಅಂಶುಮಾನ್** – (1) ಸಗರನ ಮೊಮ್ಮಗ ಮತ್ತು ಅಸಮಂಜಸನ ಮಗ. ಇವನ ಪ್ರಯತ್ನದಿಂದ ಯಜ್ಞಪೂರ್ಣವಾದುದು (ಅನು 107/61). ಇವನ ಮೇಲೆ ಕಪಿಲಮಹರ್ಷಿಯ ಕೃಪೆ (ಅನು 107/56–58). ಇವನ ರಾಜ್ಯಾಭಿಷೇಕ (ಅನು 107/64). ತನ್ನ ಮಗ ದಿಲೀಪನಿಗೆ ರಾಜ್ಯವನ್ನೊಪ್ಪಿಸಿ ಈತನ ಸ್ವರ್ಗಗಮನ (ಅನು 107/66).

(2) ದ್ರೌಪದಿಯ ವಿವಾಹಕ್ಕೆ ಆಗಮಿಸಿದ ಒಬ್ಬ ರಾಜನ ಹೆಸರು (ಆದಿ 185/11).

(3) ಒಬ್ಬ ವಿಶ್ವೇದೇವನ ಹೆಸರು (ಅನು 91/32).

(4) ಅಂಶುಮಾನ್ ಹೆಸರಿನ ಭೋಜರಾಜ ದ್ರೋಣಾಚಾರ್ಯರಿಂದ ಕೊಲ್ಲಲ್ಪಟ್ಟನು. ಇವನ ವರ್ಣನೆ ಕರ್ಣಪರ್ವ ಅಧ್ಯಾಯ 6 ಶ್ಲೋಕ 14ರಲ್ಲಿ ಬಂದಿದೆ.

**ಅಕಂಪನ** – ಸತ್ಯಯುಗದ ಒಬ್ಬ ರಾಜ. ನಾರದರೊಡನೆ ಅವನ ಸಂವಾದ (ದ್ರೋಣ 52/26). ನಾರದರ ಉಪದೇಶದಿಂದ ಅವನು ಶೋಕರಹಿತನಾದುದು (ದ್ರೋಣ 54/52; ಶಾಂತಿ 256/7 ರಿಂದ 258 ಅ).

**ಅಕರ್ಕರ** – ಒಬ್ಬ ನಾಗನ ಹೆಸರು (ಆದಿ 35/16).

**ಅಕೂಪಾರ** – ಇಂದ್ರದ್ಯುಮ್ನ ಸರೋವರದಲ್ಲಿರುವ ಒಬ್ಬ ಚಿರಂಜೀವಿ ಆಮೆ (ವನ 199/8). ಈತನು ಇಂದ್ರದ್ಯುಮ್ನನ ಕಳೆದುಹೋದ ಕೀರ್ತಿಯನ್ನು ಭೂಮಿಯಲ್ಲಿ ಪ್ರಸಾರ ಮಾಡಿದನು.

**ಅಕೃತವ್ರಣ** – ಪರಶುರಾಮರ ಪ್ರಿಯಶಿಷ್ಯ ಮತ್ತು ಸ್ನೇಹಿತ. ಇವನ ಮೂಲಕ ಯುಧಿಷ್ಠಿರನಿಗೆ ಪರಶುರಾಮೋಪಾಖ್ಯಾನದ ವರ್ಣನೆ (ವನ 115 ರಿಂದ 117ಅ ವರೆಗೆ). ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗುತ್ತಿದ್ದಾಗ ಇವನ ಭೇಟಿ (ಉದ್ಯೋಗ 83/64). ಈತ ಹೋತ್ರವಾಹನನಿಗೆ ಪರಶುರಾಮರ ಆಗಮನದ ಸೂಚನೆ ಕೊಡುವುದು ಮತ್ತು ಅಂಬೆಯ ಪರಿಚಯ ಕೇಳುವುದು (ಉದ್ಯೋಗ 76/41–43). ಭೀಷ್ಮನ ಮೇಲೆ ಪ್ರತೀಕಾರ ಮಾಡುವಂತೆ ಅಂಬೆಗೆ ಸಲಹೆ ಕೊಡುವುದು (ಉದ್ಯೋಗ 177/12). ಭೀಷ್ಮನೊಡನೆ ಯುದ್ಧಮಾಡುವಂತೆ ಪರಶುರಾಮರಲ್ಲಿ ಹೇಳುವುದು (ಉದ್ಯೋಗ 178/15). ಆ ಯುದ್ಧದಲ್ಲಿ ಪರಶುರಾಮರಿಗೆ ಸಾರಥ್ಯ ಮಾಡುವುದು (ಉದ್ಯೋಗ 179/9). ಸರಳ ಮಂಚದ ಮೇಲೆ ಒರಗಿದ್ದ ಭೀಷ್ಮರ ಬಳಿಗೆ ಬಂದಿದ್ದ ಋಷಿಗಡಣದಲ್ಲಿ ಇವನೂ ಒಬ್ಬನಾಗಿದ್ದನು (ಅನು 26/8).

**ಅಕೃತಶ್ರಮ** – ವಾನಪ್ರಸ್ಥ ಧರ್ಮವನ್ನು ಪಾಲನೆ ಮಾಡುವ ಒಬ್ಬ ಮುನಿ (ಶಾಂತಿ 244/17).

**ಅಕ್ರೂರ** – ಯದುವಂಶದೊಳಗಿರುವ ಸಾತ್ವತ ವಂಶದ ಶ್ವಫಲ್ಕನ ಪುತ್ರ. ಈತನನ್ನು ದಾನಪತಿ ಎಂದೂ ಕರೆಯುತ್ತಾರೆ. ಈತ ವೃಷ್ಣಿವೀರರ ಸೇನಾಪತಿ (ಆದಿ 220/29). (ಇವನ ತಾಯಿಯ ಹೆಸರು 'ಗಾಂದಿನಿ' ಮತ್ತು ಪತ್ನಿಯ ಹೆಸರು 'ಸುತನು'. ಈಕೆ ಆಹುಕನ ಪುತ್ರಿ ಪುರಾಣಾಂತರದಲ್ಲಿ.) ದ್ರೌಪದೀ ಸ್ವಯಂವರಕ್ಕೆ ಈತನ ಆಗಮನ (ಆದಿ 185/18). ಸುಭದ್ರಾಹರಣ ಸಮಯದಲ್ಲಿ ರೈವತಕ ಪರ್ವತದ ಮೇಲೆ ನಡೆಯುತ್ತಿದ್ದ ಉತ್ಸವದಲ್ಲಿ ಇವನೂ ಭಾಗಿಯಾಗಿದ್ದನು (ಆದಿ 218/10). ಸುಭದ್ರೆಗೋಸ್ಕರ ಶ್ರೀಕೃಷ್ಣನ ಜೊತೆಯಲ್ಲಿ ವರದಕ್ಷಿಣೆ ತೆಗೆದುಕೊಂಡು ಹೋಗಿದ್ದನು (ಆದಿ 220/29).



2

ಅಭಿಮನ್ಯುವಿನ ವಿವಾಹ ಸಂದರ್ಭದಲ್ಲಿ ಈತ ಉಪಪ್ಲವ್ಯನಗರಕ್ಕೆ ಬಂದಿದ್ದನು (ವಿರಾಟ 72/22). ಅಕ್ರೂರ ಮತ್ತು ಆಹುಕರು ವೈರಿಗಳಾಗಿದ್ದರು. ಶ್ರೀಕೃಷ್ಣನು ತನ್ನ ವಿರೋಧಿಯ ಪಕ್ಷಪಾತಿಯೆಂದು ತಿಳಿದುಕೊಂಡು ಇಬ್ಬರೂ ತಮ್ಮ ಅಂತರಂಗದಲ್ಲಿ ಅಸಂತುಷ್ಟರಾಗಿದ್ದರು. ಇದರಿಂದಾಗಿ ಶ್ರೀ ಕೃಷ್ಣನಿಗೆ ಕಳವಳವಿತ್ತು (ಶಾಂತಿ 81/9–11). ಸಭಾಪರ್ವದ 4, ವನಪರ್ವದ 18, 51, ಮೌಸಲಪರ್ವದ 6 ಮತ್ತು ಸ್ವರ್ಗರೋಹಣಪರ್ವದ 5ನೇ ಅಧ್ಯಾಯಗಳಲ್ಲಿ ಇವನ ಹೆಸರು ಬರುತ್ತದೆ. ಈತ ವಿಶ್ವೇದೇವರಲ್ಲಿ ಸೇರಿಹೋಗಿದ್ದನು.

**ಅಕ್ರೋಧನ** – ಪೂರುವಂಶೀಯ ಅಯುತನಾಯಿ ಎಂಬ ರಾಜನ ಮಗ. ಇವನ ತಾಯಿ ಪೃಥುಶ್ರವನ ಪುತ್ರಿಯಾದ ಕಾಮಾ ಎಂಬವಳು. ಇವನ ಪತ್ನಿ ಕಲಿಂಗ ರಾಜಕುಮಾರಿ ಕರಂಭಾ. ಇವನ ಪುತ್ರನ ಹೆಸರು 'ದೇವಾತಿಥಿ' (ಆದಿ 95/21).

**ಅಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ಅಕ್ಷಪ್ರಪತನ** – ಆನರ್ತದೇಶದ ಅಂತರ್ಗತವಾದ ಒಂದು ಸ್ಥಳ. ಅಲ್ಲಿ ಶ್ರೀಕೃಷ್ಣನು ಗೋಪತಿ ಮತ್ತು ತಾಲಕೇತು ಎಂಬ ಅಸುರರನ್ನು ಕೊಂದನು (ಸಭಾ 38/29).

**ಅಕ್ಷಮಾಲಾ – (ಅರುಂಧತಿ)** – ವಸಿಷ್ಠನ ಪತ್ನಿ (ಉದ್ಯೋಗ 117/11) (ನೋಡಿರಿ – ಅರುಂಧತಿ).

**ಅಕ್ಷಯವಟ** – ಗಯಾಕ್ಷೇತ್ರದ ಅಂತರ್ಗತವಾದ ಒಂದು ತ್ರಿಭುವನ ಖ್ಯಾತವಾದ ತೀರ್ಥ (ವನ 84/83; 95/114). (ಪ್ರಳಯ ಕಾಲದಲ್ಲೂ ಕ್ಷಯವಾಗದ ಅಕ್ಷಯವಟವೃಕ್ಷ ಇಲ್ಲಿದೆಯೆಂದು ಹೇಳುತ್ತಾರೆ).

**ಅಕ್ಷರ** – ಅಕ್ಷರ ಪುರುಷ (ಭೀಷ್ಮ 39/16).

**ಅಕ್ಷೀಣ** – ಮಹರ್ಷಿ ವಿಶ್ವಾಮಿತ್ರರ ಪುತ್ರರಲ್ಲಿ ಒಬ್ಬ (ಅನು 4/50).

**ಅಕ್ಷೌಹಿಣೀ** – ಪರಿಗಣಿತ ಸಂಖ್ಯೆಯುಳ್ಳ ರಥ, ಕುದುರೆ, ಆನೆ, ಪದಾತಿಗಳಿಂದ ಕೂಡಿದ ಚತುರಂಗ ಸೇನೆಯ ಹೆಸರು (ವಿಶೇಷ ಪರಿಚಯಕ್ಕೆ ನೋಡಿ ಆದಿ 2/22 ರಿಂದ 26ತನಕ).

**ಅಗಸ್ತ್ಯ** – ಮಿತ್ರಾವರುಣರ ಪುತ್ರನಾದ ಒಬ್ಬ ಮಹರ್ಷಿ ಅವನನ್ನು 'ಕುಂಭಜ'ನೆಂದೂ ಹೇಳುತ್ತಾರೆ (ಶಾಂತಿ 342/51). ಇವನು ಯಜ್ಞವಿಘ್ನಕಾರಿ ಪಶುಗಳ ಮೇಲೆ ಆಕ್ರಮಣ ಮಾಡಿ ಹೊಡೆದೋಡಿಸಿದ್ದನು (ಆದಿ 117/14). ಇವನ ಮೂಲಕ ಅಗ್ನಿವೇಶರಿಗೆ ಧನುರ್ವೇದದ ಶಿಕ್ಷಣ ಪ್ರಾಪ್ತವಾಗಿತ್ತು (ಆದಿ 138/9). ಪಿತೃಗಳ ಉದ್ಧಾರಕ್ಕಾಗಿ ಇವನು ವಿವಾಹವಾಗಲು ನಿರ್ಧರಿಸಿದ ವಿಚಾರ (ವನ 16/19). ಇವನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳುವ ಇಚ್ಛೆಯಿಂದ, ತನ್ನಿಂದಲೇ ರಚಿಸಲ್ಪಟ್ಟ, ಒಬ್ಬ ದಿವ್ಯ ಸ್ತ್ರೀಯನ್ನು, ವಿದರ್ಭರಾಜನಿಗೆ, ಇವನ ಪುತ್ರಿಯನ್ನಾಗಿ ಕೊಟ್ಟಿದ್ದರು (ವನ 96/21). ವಿದರ್ಭ ರಾಜಕುಮಾರಿ ಲೋಪಾಮುದ್ರೆಯೊಡನೆ ಇವನ ವಿವಾಹ (ವನ 97/7). ಗಂಗಾದ್ವಾರದಲ್ಲಿ ಪತ್ನಿ ಸಹಿತ ಇವನ ತಪಸ್ಸು (ವನ 97/11). ಲೋಪಾಮುದ್ರೆಯಿಂದ ಪ್ರೇರಿತನಾಗಿ, ಧನಸಂಗ್ರಹಕ್ಕಾಗಿ ಇವನ ಪ್ರಸ್ಥಾನ (ವನ 97/25). ಇವನು ಶ್ರುತರ್ವಾ, ಬ್ರಧ್ನಶ್ವ ಮತ್ತು ತ್ರಸದ್ದಸ್ಯುವಿನೊಡನೆ ಧನವನ್ನು ಅಪೇಕ್ಷಿಸಿದ್ದು (ವನ 98/4,9,15). ಇವನಿಂದ ವಾತಾಪಿಯ ಭಕ್ಷಣೆ (ವನ 99/6). ಇಲ್ವಲನಲ್ಲಿ ಧನಯಾಚನೆ (ವನ 99/12). ಲೋಪಾಮುದ್ರೆಯ ಗರ್ಭದಿಂದ ಇವನು ಪುತ್ರನನ್ನು ಪಡೆದದ್ದು (ವನ 99/25). ದೇವತೆಗಳ ಮೂಲಕ ಇವನ ಸ್ತುತಿ (ವನ 103/15–18). ವಿಂಧ್ಯಪರ್ವತದ ಊರ್ಧ್ವ ಬೆಳವಣಿಗೆಗೆ ತಡೆ (ವನ 104/12–13). ಇವನ ಮೂಲಕ ಸಮುದ್ರದ ಶೋಷಣೆ (ವನ 105/3–6). ಇವನಿಂದ ಮಣಿಮಾನ್ ರಾಕ್ಷಸನಿಗೆ ಮತ್ತು ಕುಬೇರನಿಗೆ ಶಾಪ (ವನ 161/60–62). ಇವನು ಇಂದ್ರನಿಗೆ ನಹುಷಪತನದ ವೃತ್ತಾಂತ ತಿಳಿಸಿದುದು (ಉದ್ಯೋಗ ಅಧ್ಯಾಯ 17). ಇವನಿಂದ ವಾನಪ್ರಸ್ಥಾಶ್ರಮದ ಪಾಲನೆ (ಶಾಂತಿ 244/16). ಇವನ ಶಾಪದಿಂದ ನಹುಷನ ಪತನ (ಶಾಂತಿ 342/51). ಕಮಲಗಳ ಕಳ್ಳತನವಾದಾಗ ಇವನಿಂದ ಸಾರವತ್ತಾದ ಪ್ರವಚನ (ಅನು 94/9–13). ನಹುಷನ ಅತ್ಯಾಚಾರದ ವಿಷಯವಾಗಿ ಭೃಗುವಿನೊಂದಿಗೆ ಇವನ ಸಂಭಾಷಣೆ (ಅನು 99/16–21). ನಹುಷನ ಮೂಲಕ ಇವನು

ರಥಕ್ಕೆ ಹೂಡಲ್ಪಟ್ಟದ್ದು (ಅನು 100/18–19). ವಾಯುವಿನಿಂದ ಇವನ ಪ್ರಭಾವದ ವರ್ಣನೆ ಇವನ ಕ್ರೋಧದಿಂದ ದಗ್ಧರಾಗಿ ದಾನವರು ಅಂತರಿಕ್ಷದಿಂದ ಬಿದ್ದುದು (ಅನು 115/1–13). ಇವನಿಂದ ದ್ವಾದಶ ವರ್ಷಗಳ ಯಜ್ಞದ ಅನುಷ್ಠಾನ ಮತ್ತು ಅಲ್ಲಿ ಇವನ ತಪಸ್ಸಿನ ಅದ್ಭುತ ಪ್ರಭಾವ (ಆಶ್ವ ಅ 92).

**ಅಗಸ್ತ್ಯತೀರ್ಥ** – ದಕ್ಷಿಣ ಸಮುದ್ರದ ಸಮೀಪವುಳ್ಳ ತೀರ್ಥ. ಐದು ನಾರೀತೀರ್ಥಗಳಲ್ಲಿ ಒಂದು (ಆದಿ 215/3). ತೀರ್ಥಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಅರ್ಜುನನ ಆಗಮನ. ಇಲ್ಲಿ ಬ್ರಾಹ್ಮಣನ ಶಾಪದಿಂದ ಮೊಸಳೆಯಾಗಿದ್ದ ಅಪ್ಸರೆ(ವರ್ಗಾ ಎಂಬವಳ ಸಖಿ)ಯ ಉದ್ಧಾರ (ಆದಿ 216/21) (ವನಪರ್ವ 98/13 ಮತ್ತು 118ರಲ್ಲಿ ಕೂಡಾ ಈ ತೀರ್ಥದ ಹೆಸರು ಬಂದಿದೆ).

**ಅಗಸ್ತ್ಯಪರ್ವತ** – (1) ಮದ್ರಾಸು ಪ್ರಾಂತದ ತಿನೆವಲಿ ಜಿಲ್ಲೆಯ ಅಗಸ್ತ್ಯಕೂಟವೆಂಬ ಪರ್ವತ. ಅದು ತಾಮ್ರಪರ್ಣೀ ನದಿಯ ಉಗಮಸ್ಥಾನ (ಹಿಂದೀ ಮಹಾಭಾರತದ ಪರಿಶಿಷ್ಟ 1). ಇನ್ನೊಂದು (2) ಅಭಿಪ್ರಾಯದಂತೆ ಇದು ಕಾಲಂಜರ ಪರ್ವತದ ಉಪಪವರ್ತತವಾಗಿದೆ)

**ಅಗಸ್ತ್ಯವಟ** – ಹಿಮಾಲಯದ ಸಮೀಪದ ಒಂದು ಪುಣ್ಯಕ್ಷೇತ್ರ. ತೀರ್ಥಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಅರ್ಜುನನ ಆಗಮನವಾಗಿತ್ತು (ಆದಿ 214/2).

**ಅಗಸ್ತ್ಯಸರೋವರ** – (ಅಗಸ್ತ್ಯವರ) ಈ ಮೊದಲು ಸೂಚಿಸಿದ ಅಗಸ್ತ್ಯತೀರ್ಥವೇ ಇದು (ವನ 82/44) (ವನ 88/13) ವಿಶೇಷ ಪರಿಚಯಕ್ಕಾಗಿ ನೋಡಿ – ಅಗಸ್ತ್ಯತೀರ್ಥ).

**ಅಗಸ್ತ್ಯಾಶ್ರಮ** – (1) ಪಂಚವಟಿಯ ಸಮೀಪದ ಒಂದು ಪುಣ್ಯಕ್ಷೇತ್ರ ನಾಸಿಕದಿಂದ 24 ಮೈಲು ದಕ್ಷಿಣಪೂರ್ವ(ಆಗ್ನೇಯ)ದ ಕಡೆಗಿದೆ. ಇದನ್ನು ಈಗ 'ಅಗಸ್ತ್ಯಪುರಿ' ಎನ್ನುತ್ತಾರೆ (ವನ 87/20; 96/1). (2) ಪ್ರಯಾಗದ ಅಂತರ್ಗತ ಒಂದು ತೀರ್ಥವಿಶೇಷ. ಮಹಾಭಾರತದ ವನಪರ್ವದಲ್ಲಿ ಇದರ ವರ್ಣನೆ ಇದೆ. ಇಲ್ಲಿಗೆ ಲೋಮಶರ ಜೊತೆಯಾಗಿ ಯುಧಿಷ್ಠಿರನು ಆಗಮಿಸಿದ್ದನು (ವನ 87/20; 96/1).

**ಅಗ್ನಿ** – ಐದು ಮಹಾಭೂತಗಳಲ್ಲಿ ಒಂದು ಮತ್ತು ಅದರ ಅಭಿಮಾನಿ ದೇವತೆ. ಈತ ಭಗವಂತನ ಮುಖದಿಂದ ಹುಟ್ಟಿದ್ದಾನೆ. ಭೃಗು ಪತ್ನಿ ಪುಲೋಮೆಯ ಸಂಬಂಧವಾಗಿ ಇವನು ಕೊಟ್ಟ ನಿರ್ಣಯ (ವನ 5/31–34). ಮಹರ್ಷಿ ಭೃಗು ಈತನಿಗೆ ಸರ್ವಭಕ್ಷಕನಾಗುವಂತೆ ಶಾಪ ಕೊಟ್ಟನು (ವನ 6/14). ಸುಳ್ಳು ಸಾಕ್ಷಿ ಹೇಳುವುದು ಮತ್ತು ಸತ್ಯವಚನವನ್ನು ಹೇಳದಿರುವುದರಿಂದ, ಏಳು ತಲೆಮಾರಿನ ತನಕ ನಾಶ ಹೊಂದುವ ಸಂಬಂಧವಾಗಿ ಈತನ ವಿವರಣೆ (ವನ 7/3–4). ಭೃಗುವಿನ ಶಾಪದಿಂದ ಕುಪಿತನಾಗಿ ಈತನು ಅಂತರ್ಧಾನನಾದುದು, ಬ್ರಹ್ಮನು ಈತನಿಗೆ ಆಶ್ವಾಸನೆ ಕೊಟ್ಟುದು (ವನ 7/12–25). ರಾಜಾ ಶ್ವೇತಕಿಯ ದ್ವಾದಶವರ್ಷದ ಯಜ್ಞದಲ್ಲಿ ನಿರಂತರ ಘೃತಪಾನ ಮಾಡಿದ್ದರಿಂದ ಈತನಿಗೆ ಅಜೀರ್ಣರೋಗ ಬಂದುದು (ವನ 222/67). ತನ್ನ ಅಜೀರ್ಣ ನಿವೃತ್ತಿಗಾಗಿ ಬ್ರಹ್ಮನಲ್ಲಿ ಈತನ ಪ್ರಾರ್ಥನೆ (ವನ 222/69). ಖಾಂಡವವನವನ್ನು ಉರಿಸಲು ಬ್ರಹ್ಮನ ಆದೇಶ (ವನ 222/77). ಖಾಂಡವವನವನ್ನು ಉರಿಸುವ ಕಾರ್ಯದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನರ ನೆರವನ್ನು ಕೇಳಿಕೊಳ್ಳುವಂತೆ ಬ್ರಹ್ಮನಿಂದ ಈತನಿಗೆ ಪ್ರೇರೇಪಣೆ (ವನ 223/10). ಖಾಂಡವವನವನ್ನು ದಗ್ಧಗೊಳಿಸಲು, ಸಹಾಯಕೋರಿ, ಶ್ರೀಕೃಷ್ಣ ಮತ್ತು ಅರ್ಜುನನಲ್ಲಿ ಈತನ ಪ್ರಾರ್ಥನೆ (ವನ 222/10). ಗಾಂಡೀವ ಧನುಸ್ಸು, ಚಕ್ರ ಮತ್ತು ದಿವ್ಯರಥಗಳಿಗಾಗಿ ವರುಣನಲ್ಲಿ ಈತನ ಪ್ರಾರ್ಥನೆ (ವನ 224/4). ಈತನು ಅರ್ಜುನನಿಗೆ ಗಾಂಡೀವ ಧನುಸ್ಸು, ಅಕ್ಷಯ ಬತ್ತಳಿಕೆ ಮತ್ತು ದಿವ್ಯರಥವನ್ನೂ, ಶ್ರೀ ಕೃಷ್ಣನಿಗೆ ಸುದರ್ಶನ ಚಕ್ರವನ್ನೂ ಕೊಟ್ಟನು (ಆದಿ 224/14). ಇವನಿಂದ ಖಾಂಡವವನ ದಹನ (ಆದಿ 224/34–37). ಮಂದಪಾಲನ ಮೂಲಕ ಇವನ ಸ್ತುತಿ (ಆದಿ 228/23). ಶಾರ್ಙ್ಗಕರಿಂದ ಈತನ ಸ್ತುತಿ (ಆದಿ 231ರಲ್ಲಿ). ಸಹದೇವನ ವಿರುದ್ಧ ನೀಲರಾಜನಿಗೆ ಇವನ ಸಹಾಯ ಮತ್ತು ಸಹದೇವನ ಸೈನಿಕರನ್ನು ಉರಿಸಿದ್ದು (ಸಭಾ 31/23–24). ಮಾಹಿಷ್ಮತಿಯ ರಾಜ ನೀಲನ ಮಗಳು ಸುದರ್ಶನೆಯ ಕಡೆಗೆ ಈತನು ಆಕರ್ಷಿತನಾದುದು

(ಸಭಾ 31/27). ಇವನು ಬ್ರಾಹ್ಮಣ ರೂಪದಲ್ಲಿ ಹೋಗಿ ಸುದರ್ಶನೆಯ ಪ್ರತಿಯಾಗಿ ಕಾಮ ಭಾವನೆಯನ್ನು ಪ್ರಕಟಿಸುವುದು ಮತ್ತು ಇವನ ಮೇಲೆ ನೀಲನ ಶಾಸನ (ಸಭಾ 31/31). ನೀಲನಿಂದ ಈತನಿಗೆ ತನ್ನ ಮಗಳಾದ ಸುದರ್ಶನೆಯ ಕೊಡುಗೆ (31/33). ನೀಲನ ಮೇಲೆ ಅಗ್ನಿಯ ಕೃಪೆ. ವರವನ್ನು ಯಾಚಿಸು ವಂತೆ ನೀಲನಿಗೆ ಸೂಚನೆ. ತನ್ನ ಸೇನೆಗೆ ಅಭಯದಾನ ಕೊಡುವಂತೆ ರಾಜನ ಬೇಡಿಕೆ (ವನ 31/34–35). ಮಾಹಿಷ್ಮತಿಯ ಸ್ತ್ರೀಯರಿಗೆ ಅಗ್ನಿದೇವನ ವರದಾನ (ವನ 31/38). ಸಹದೇವನಿಂದ ಅಗ್ನಿಯ ಸ್ತುತಿ (ಸಭಾ 31/41–49). ಅಗ್ನಿಯ ಆಜ್ಞೆಯಂತೆ ನೀಲನಿಂದ ಸಹ ದೇವನ ಸತ್ಕಾರ (ಸಭಾ 31/58–59). ಇವನು ಬಾಣಾಸುರನ ರಾಜಧಾನಿಯ ರಕ್ಷಣೆ ಮಾಡಿದನು (ಸಭಾ 38/29ರ ಅನಂತರ ದಾಕ್ಷಿಣಾತ್ಯ ಪಾಠ). ದಮಯಂತೀ ಸ್ವಯಂವರದಲ್ಲಿ ನಲರಾಜನಿಗೆ ಈತ ವರಪ್ರದಾನ ಮಾಡಿದನು (ವನ 58/36). ಈತ ಪಾರಿವಾಳವಾಗಿ ರಾಜಾ ಉಶೀನರನ ಮಡಿಲಲ್ಲಿ ಅಡಗಿದನು (ವನ 130/24 ಮತ್ತು 197/3). ಇವನು ಉಶೀರನಿಗೆ ತನ್ನ ಪರಿಚಯ ತಿಳಿಸಿ ವರಪ್ರದಾನ ಮಾಡಿದನು (ವನ 197/25–28). ಅಂಗೀರಸ ಮಹರ್ಷಿಯನ್ನು ತನ್ನ ಪ್ರಥಮ ಪುತ್ರನಾಗಿ ಸ್ವೀಕರಿಸಿದನು (ವನ 217/18). ಸಹನೆಂಬ ಅಗ್ನಿಯಿಂದ ಅದ್ಭುತನೆಂಬ ಅಗ್ನಿಯ ಉತ್ಪತ್ತಿ (ವನ 222/1). ಸಪ್ತರ್ಷಿಗಳ ಪತ್ನಿಯರನ್ನು ಮೋಹಿಸಿ ಈತ ಕಾಡಿಗೆ ನಡೆದನು (ವನ 224/33–38). ಇವನು ಸ್ಕಂದನ ರಕ್ಷಣೆ ಮಾಡಿದನು (ವನ 226/29). ಸೀತಾದೇವಿಯ ಪಾವಿತ್ರ್ಯವನ್ನು ಸಮರ್ಥಿಸಿದನು (ವನ 291/28). ಅರ್ಜುನನು ಅಸ್ತ್ರಪ್ರಾಪ್ತಿಗಾಗಿ ಅಗ್ನಿದೇವನ ಆಶ್ರಯ ಪಡೆದಿದ್ದನು (ವಿರಾಟ 45/40). ಇಂದ್ರನ ಅನ್ವೇಷಣೆಗಾಗಿ ಬೃಹಸ್ಪತಿಯೊಡನೆ ಅಗ್ನಿಯ ಸಂವಾದ (ಉದ್ಯೋಗ 15/28 ರಿಂದ 34). ಅವನು ಬೃಹಸ್ಪತಿಗೆ ಇಂದ್ರನ ನಿವಾಸಸ್ಥಾನ ವನ್ನು ತಿಳಿಸಿದನು (ಉದ್ಯೋಗ 16/12). ಬ್ರಹ್ಮನ ರೋಷದಿಂದ ಪ್ರಕಟನಾದ ಅಗ್ನಿದೇವನಿಂದ ಚರಾಚರ ಜಗತ್ತಿನ ಜ್ವಲನ (ದ್ರೋಣ 52/41). ಸ್ಕಂದನಿಗೆ ಪಾರ್ಷದನನ್ನು ಪ್ರದಾನ ಮಾಡಿದನು (ಶಲ್ಯ 45/33). ಕಾರ್ತವೀರ್ಯ ಅರ್ಜುನನಲ್ಲಿ ಭಿಕ್ಷಾಯಾಚನೆ ಮಾಡಿ, ಅವನ ಸಹಕಾರದಿಂದ ಗ್ರಾಮ, ವನ, ಪರ್ವತಗಳ ಸಮೇತ ಆಪವ ಮುನಿಯ ಆಶ್ರಮವನ್ನೂ ಸುಟ್ಟನು (ಶಾಂತಿ 49/38 ರಿಂದ 41). ಬ್ರಹ್ಮನ ಆದೇಶ ಪ್ರಕಾರ ಇಂದ್ರನಿಗೆ ಬಂದ ಬ್ರಹ್ಮಹತ್ಯಾ ದೋಷದ ನಾಲ್ಕನೇ ಒಂದು ಭಾಗವನ್ನು ಸ್ವೀಕರಿಸಿದನು (ಶಾಂತಿ 282/35). ಇವನು ಕಪ್ಪೆ, ಆನೆ ಮತ್ತು ಗಿಳಿಗಳಿಗೆ ಶಾಪಕೊಟ್ಟನು (ಅನು 85/28, 36,40). ದೇವತೆ ಗಳಿಗೆ ಆಶ್ವಾಸನೆ ಕೊಟ್ಟನು (ಅನು 85/50). ಗಂಗೆಯ ಗರ್ಭದಲ್ಲಿ ಶಿವದೇವನ ವೀರ್ಯವನ್ನು ಸ್ಥಾಪಿಸಿದನು (ಅನು 85/56). ಪ್ರಜಾಪತಿಗಳನ್ನು ತನ್ನ ಸಂತಾನವೆಂದು ಒಪ್ಪಿದನು (ಅನು 85/118). ಕಾರ್ತೀಕೇಯನಿಗೆ ಆಡನ್ನು ಕೊಟ್ಟನು (ಅನು 86/24). ಪಿತೃಗಳಿಗೂ, ದೇವತೆಗಳಿಗೂ ಅಜೀರ್ಣ ನಿವಾರಣೆಯ ಉಪಾಯ ತಿಳಿಸಿದನು (ಅನು 92/10). ಇಂದ್ರಾದಿ ದೇವತೆಗಳ ಸಮಕ್ಷ ದಲ್ಲಿ ಧರ್ಮರಹಸ್ಯಗಳ ವರ್ಣನೆ ಮಾಡಿದನು (ಅನು 126/29–34; 127/1–5). ಈತ ಇಂದ್ರನ ಸಂದೇಶವನ್ನು ಹೊತ್ತು ಮರುತ್ತನ ಬಳಿಗೆ ಹೋದನು (ಆಶ್ವ 9/14–15). ಈತ ಮರುತ್ತನ ಉತ್ತರವನ್ನು ಇಂದ್ರನಿಗೆ ತಿಳಿಸಿದನು (ಆಶ್ವ 9/22–23). ಬ್ರಹ್ಮಬಲದ ಶ್ರೇಷ್ಠತೆಯನ್ನು ಪ್ರತಿಪಾದಿಸಿ ದನು (ಆಶ್ವ 9/31–37) ಕುಂಡಲಗಳ ಅಪಹರಣ ವಾದಾಗ, ನಾಗಲೋಕಕ್ಕೆ ಹೋದ ಉತ್ತಂಕನಿಗೆ, ಅಶ್ವರೂಪಧಾರಿಯಾದ ಅಗ್ನಿದೇವನು ಸಹಾಯ ಕೊಟ್ಟನು ನಾಗಗಳನ್ನು ಕ್ಷೋಭೆಗೊಳಗಾಗಿಸಿ, ಕುಂಡಲವನ್ನು ಹಿಂತಿರುಗಿಸುವಂತೆ ಒತ್ತಡ ಹೇರಿ ದನು (ಆಶ್ವ 58/41–55). ಮಹಾಪ್ರಸ್ಥಾನದ ಕಾಲದಲ್ಲಿ ಈತ ಅರ್ಜುನನಿಂದ ಗಾಂಡೀವವನ್ನು ಹಿಂತೆಗೆದುಕೊಂಡನು (ಮಹಾಪ್ರಸ್ಥಾನ 1/35–43).

**ಅಗ್ನಿಕನ್ಯಾಪುರ** – ಅಗ್ನಿಪುರ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಸಿಗುವ ಪುಣ್ಯಲೋಕ (ಇದೂ ಒಂದು ತೀರ್ಥವೆಂಬ ಅಭಿಪ್ರಾಯವಿದೆ) (ಅನು 25/43).

**ಅಗ್ನಿತೀರ್ಥ** – ಸರಸ್ವತೀ ತಟದ ಒಂದು ಪ್ರಸಿದ್ಧ ತೀರ್ಥ. ಅಲ್ಲಿ ಅಗ್ನಿದೇವನು ಶಮಿಯ ಗರ್ಭದಲ್ಲಿ ಅಡಗಿದ್ದನು (ವನ 83/138) (ಶಲ್ಯ 47/19–21).

**ಅಗ್ನಿಧಾರಾತೀರ್ಥ** – ಒಂದು ಪವಿತ್ರ ತೀರ್ಥದ ಹೆಸರು. (ಕೆಲವರು ಈ ತೀರ್ಥ ಗೌತಮ ವನದ ಬಳಿಯಿದೆ ಎನ್ನುತ್ತಾರೆ) (ವನ 84/146).

**ಅಗ್ನಿಪುರ** – ಒಂದು ತೀರ್ಥದ ಹೆಸರು (ಇದು ಇಂದೋರ್ ರಾಜ್ಯದ ನರ್ಮದೆಯ ದಕ್ಷಿಣ ತೀರದಲ್ಲಿರುವ ಮಹೇಶ್ವರ ಸ್ಥಾನವೆಂದು ಕೆಲವರ ಮತವಿದೆ) (ಅನು 25/43).

**ಅಗ್ನಿಮಾನ್** – ಅಗ್ನಿವಿಶೇಷ ಸೂತಿಕಾ ಗೃಹದ ಅಗ್ನಿಗೆ, ಅಗ್ನಿಹೋತ್ರದ ಅಗ್ನಿಯ ಸ್ಪರ್ಶವಾದರೆ, ಪ್ರಾಯಶ್ಚಿತ್ತಕ್ಕಾಗಿ, ಅಷ್ಟಾಕಪಾಲ ಪುರೋಡಾಶದ ಆಹುತಿಯು ಇದೇ ಅಗ್ನಿಯಲ್ಲಿ ಕೊಡಲ್ಪಡುತ್ತದೆ (ವನ 221/31).

**ಅಗ್ನಿವೇಶ** – ಈತ ಅಗ್ನಿಯ ಪುತ್ರ. ಇವನು ಭಾರದ್ವಾಜರಿಂದ ಆಗ್ನೇಯಾಸ್ತ್ರ ಪಡೆದವನು. ಈತ ದ್ರೋಣಾಚಾರ್ಯ ಮತ್ತು ದ್ರುಪದನಿಗೆ ಅಸ್ತ್ರವಿದ್ಯಾಗುರು (ಆದಿ 129/39–40). ಅಗಸ್ತ್ಯನ ಮೂಲಕ ಇವನಿಗೆ ಧನುರ್ವೇದದ ಶಿಕ್ಷಣ ಪ್ರಾಪ್ತವಾಗಿತ್ತು (ಆದಿ 138/9).

**ಅಗ್ನಿವೇಶ್ಯ** – (1) ಅಗ್ನಿವೇಶನ ಇನ್ನೊಂದು ಹೆಸರು. ಯುಧಿಷ್ಠಿರನಿಂದ ಗೌರವಿಸಲ್ಪಡುವ ಬ್ರಹ್ಮರ್ಷಿಗಳಲ್ಲಿ ಈತನ ಹೆಸರೂ ಇದೆ (ವನ 26/23).

(2) ಭಾರತದ ಒಂದು ಪ್ರಾಚೀನ ಜನಪದ (ಭೀಷ್ಮ 50/52).

**ಅಗ್ನಿಶರ ತೀರ್ಥ** – ಯಮುನಾ ತಟದಲ್ಲಿರುವ ತೀರ್ಥವಿಶೇಷ. ಅಲ್ಲಿ ಸೃಂಜಯಪುತ್ರ ಸಹದೇವನು ಯಜ್ಞ ಮಾಡಿದ್ದನು (ವನ 90/5–7).

**ಅಗ್ನಿಷೋಮ** – (1) ಅಗ್ನಿ ಮತ್ತು ಸೋಮ ಎಂಬ ಹೆಸರಿನ ದೇವತೆಗಳು. ಅವರು ಒಟ್ಟಾಗಿದ್ದು ಹವಿಸ್ಸನ್ನು ಸ್ವೀಕರಿಸುತ್ತಾರೆ (ಸಭಾ 7–21).

(2) ಅಗ್ನಿ ಮತ್ತು ಸೋಮರಿಗೆ ಕೊಡಲ್ಪಡುವ ಆಹುತಿ (ಅನು 97/10).

(3) ಮನು (ಅಥವಾ ಭಾನು) ಎಂಬ ಹೆಸರಿನ ಅಗ್ನಿಯ ಮೂರನೆಯ ಪತ್ನಿ ನಿಶಾ ಎಂಬವಳ ಗರ್ಭದಿಂದ ಹುಟ್ಟಿದ, ಅಗ್ನಿ ಮತ್ತು ಸೋಮ ಎಂಬ ಇಬ್ಬರು ಪುತ್ರರು. ಇವರಿಬ್ಬರೂ ಅಗ್ನಿ ಸ್ವರೂಪರು (ವನ 221/15).

**ಅಗ್ನಿಸ್ವಾತ್ತ** – ಸಪ್ತ ಪಿತೃಗಳಲ್ಲಿ ಒಬ್ಬ (ಸಭಾ 11/45–46).

**ಅಗ್ರಣೀ** – ಭಾನು ಅಥವಾ ಮನುವಿನ ಮೂರನೇ ಹೆಂಡತಿ ನಿಶಾಳ ಗರ್ಭದಿಂದ ಹುಟ್ಟಿದ ಐದನೆಯ ಪುತ್ರ. ಮನುಷ್ಯನು ಯಾವ ಅಗ್ನಿಯ ಮೂಲಕ ಎಲ್ಲ ಭೂತಗಳಿಗೂ ಅನ್ನದ ಅಗ್ರಭಾಗವನ್ನು ಅರ್ಪಿಸುತ್ತಾನೋ, ಅದು 'ಅಗ್ರಣಿ' ಎಂಬ ಹೆಸರಿನ ಅಗ್ನಿಯಾಗಿದೆ (ವನ 221/15, 22).

**ಅಗ್ರಯಾಯೀ**– ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. ಈತನ ಇನ್ನೊಂದು ಹೆಸರು 'ಅನು ಯಾಯೀ' ಎಂದೂ ಇದೆ (ಆದಿ 116/11).

**ಅಗ್ರಹ** – ಚಾತುರ್ಮಾಸ್ಯ ಯಜ್ಞಗಳಲ್ಲಿ ನಿತ್ಯ ವಿಹಿತ ಆಗ್ನೇಯಾದಿ ಎಂಟು ಹವಿಸ್ಸುಗಳ ಉದ್ಭವ ಸ್ಥಾನ. ಈ 'ಅಗ್ರಹ' ಎಂಬ ಹೆಸರಿನ ಅಗ್ನಿ. ಈತ ಭಾನು ಅಥವಾ ಮನುವಿನ 'ಸುಪ್ರಜಾ' ಮತ್ತು 'ಬೃಹದ್ಭಾಸಾ' ಎಂಬ ಪತ್ನಿಯರ ಗರ್ಭದಿಂದ ಜನ್ಮವೆತ್ತಿದ, ಆರು ಪುತ್ರರಲ್ಲಿ ಐದನೇಯವನು (ವನ 221/9–14).

**ಅಘಮರ್ಷಣ** – ವಾನಪ್ರಸ್ಥ ಧರ್ಮಪಾಲನೆ ಮಾಡುವ ಒಬ್ಬ ಋಷಿ (ಶಾಂತಿ 244/16).

**ಅಙ್ಕುಶತೋಮರ** – ಎಗಚೀ ಮುಳ್ಳಿನಂತಿರುವ, ಲೋಹದ ಮುಳ್ಳುಗಳಿಂದ ಕೂಡಿದ ಈಟಿ. ಇವುಗಳ ಪ್ರಯೋಗದಿಂದಾಗಿ ಶತ್ರುಗಳ ಕರುಳು ಕೂಡಾ, ಈ ಆಯುಧದೊಂದಿಗೆ ಹೊರಗೆ ಬರುತ್ತದೆ (ಉದ್ಯೋಗ 155 ಅಧ್ಯಾಯ).

**ಅಙ್ಗ** – (1) ಒಂದು ಪ್ರಾಚೀನ ಜನಪದದ ಹೆಸರು. ದುರ್ಯೋಧನನು ಕರ್ಣನಿಗೆ ಅಂಗ ರಾಜ್ಯಾಭಿಷೇಕ ಮಾಡಿದನು (ಆದಿ 135/38). (ಬಿಹಾರ ರಾಜ್ಯದಲ್ಲಿ ಭಾಗಲ್ಪುರ ಮತ್ತು ಮುಂಗೇರ್ ಜಿಲ್ಲೆಯ ಸಮೀಪದ ಪ್ರದೇಶ. ಅದರ ರಾಜಧಾನಿ ಚಂಪಾಪುರಿಯಾಗಿತ್ತು. ಇದರ ವಿಸ್ತಾರ ವೈದ್ಯನಾಥ ಧಾಮದಿಂದ ಭುವನೇಶ್ವರದ ತನಕವಿತ್ತೆಂದು ಕೆಲವು ಕಡೆ ಹೇಳಲಾಗಿದೆ – ಹಿಂದೀ ಶಬ್ದಸಾಗರ.) ಕರ್ಣ ಇಲ್ಲಿಯ ರಾಜ ನಾಗಿ ಮಾಡಲ್ಪಟ್ಟಿದ್ದ ತೀರ್ಥಯಾತ್ರೆಯ ಸಮಯ ಇಲ್ಲಿಗೆ ಅರ್ಜುನನ ಆಗಮನವಾಗಿತ್ತು (ಆದಿ 214/9–10).

(2) ಅಂಗದೇಶದ ಕ್ಷತ್ರಿಯ ಅಥವಾ ಪ್ರಜಾವರ್ಗ. ಅಂಗದೇಶ ವಾಸಿಗಳು ರಾಜಸೂಯ ಯಜ್ಞ ಸಂದರ್ಭದಲ್ಲಿ ಯುಧಿಷ್ಠಿರನಿಗೆ ಕಾಣಿಕೆ

ಒಪ್ಪಿಸಿದ್ದರು (ಸಭಾ 52/16). ಅಂಗದೇಶದ ಯೋಧರು ಶ್ರೀಕೃಷ್ಣನಿಂದ ಪರಾಜಿತರಾಗಿದ್ದರು (ದ್ರೋಣ 11/15). ಅಂಗದೇಶ ವಾಸಿಗಳ ಮೇಲೆ ಪರಶುರಾಮರ ವಿಜಯ (ದ್ರೋಣ 70/12). ಅಂಗದೇಶೀಯರ ಮೇಲೆ ಕರ್ಣನ ವಿಜಯ (ಕರ್ಣ 8/19). ಅಂಗದೇಶೀಯ ವೀರರು ಹದಿನಾರನೇ ದಿನದ ಯುದ್ಧದಲ್ಲಿ ಅರ್ಜುನನ ಮೇಲೆ ಆಕ್ರಮಣ ಮಾಡಿದ್ದರು (ಕರ್ಣ 17/12). ಅಂಗದೇಶದ ವೀರರಿಂದ ಧೃಷ್ಟದ್ಯುಮ್ನ ಮತ್ತು ಪಾಂಚಾಲ ಸೇನೆಯ ಮೇಲೆ ಆಕ್ರಮಣ (ಕರ್ಣ 22/2).

(3) ಅಂಗದೇಶ ನಿವಾಸಿಗಳಾದ ಮ್ಲೇಚ್ಛರ ಮುಖಂಡ ಅವನು ಮಹಾಭಾರತ ಯುದ್ಧದ ಹನ್ನೆರಡನೇ ದಿನ, ತನ್ನ ಆನೆಯ ಸಹಿತ ಭೀಮಸೇನನಿಂದ ಹತನಾದನು (ದ್ರೋಣ 26/14–17).

(4) ಅಂಗರಾಜ (ಮ್ಲೇಚ್ಛ ಸರದಾರ). ಇವನು ಭೀಮಸೇನನಿಂದ ಕೊಲ್ಲಲ್ಪಟ್ಟ 'ಅಂಗ'(ಅಂಗಾಧಿಪತಿ ಮ್ಲೇಚ್ಛ)ನಲ್ಲ; ಇವನು ಹದಿನಾರನೇ ದಿನದ ಯುದ್ಧದಲ್ಲಿ ನಕುಲನಿಂದ ಕೊಲ್ಲಲ್ಪಟ್ಟನು (ಕರ್ಣ 22–18).

(5) ಅಂಗರಾಜ ಬೃಹದ್ರಥ. ಈತನ ಕಥೆ ಹದಿನಾರು ರಾಜಕೀಯೋಪಾಖ್ಯಾನದಲ್ಲಿ ಬಂದಿದೆ (ಶಾಂತಿ 29/31).

(6) ಮನುವಿನ ಪುತ್ರ ಅಂಗ. ಅವನು ಅಂತರ್ಧಾಮಾನ ತಂದೆಯಾಗಿದ್ದನು (ಅನು 147/23).

(7) ಅಂಗನೆಂಬ ಹೆಸರಿನ ಪ್ರಸಿದ್ಧ ಅಂಗರಾಜ. ಅವನೊಡನೆ ಪೃಥ್ವೀ ಸ್ಪರ್ಧಿಸುತ್ತಿದ್ದಳು (ಅನು 153/2).

**ಅಙ್ಗದ** – (1) ವಾನರರಾಜ ವಾಲಿಯ ಮಗ (ವನ 82/28). ವಾಲಿಯ ಪತ್ನಿ ತಾರಾ ಇವನ ತಾಯಿ (ವನ 280/18). ಸೀತಾನ್ವೇಷಣೆಯಿಂದ ಹಿಂತಿರುಗಿ ಈತ ಮಧುವನದಲ್ಲಿ ಹಣ್ಣು ತಿಂದದ್ದು (ವನ 282/27–28). ಶ್ರೀ ರಾಮನು ಈತನನ್ನು ದೌತ್ಯಕ್ಕಾಗಿ ನಿಯಮಿಸಿ ರಾವಣನ ಸಭೆಗೆ ಕಳುಹಿಸಿದುದು (ವನ 283/54). ಲಂಕೆಗೆ ಹೋಗಿ ರಾವಣನಿಗೆ ಶ್ರೀರಾಮನ ಸಂದೇಶವನ್ನು ತಿಳಿಸಿದುದು (ವನ 284/10–16). ಇಂದ್ರಜಿತುವಿನೊಡನೆ ಅಂಗದನ ಘೋರಯುದ್ಧ (ವನ 288/14–19). ಜೊತೆಗಾರರೊಂದಿಗೆ ಮುಂದುವರಿದು ರಾವಣ ಮತ್ತು ಅವನ ಸೇನೆಯ ಮೇಲೆ ಆಕ್ರಮಣ (ವನ 290/3–4). ಶ್ರೀರಾಮನ ಮೂಲಕ ಇವನಿಗೆ ಕಿಷ್ಕಂಧೆಯ ಯೌವರಾಜ್ಯಾಭಿಷೇಕ (ವನ 291/59).

(2) ಕೌರವ ಪಕ್ಷದ ಒಬ್ಬ ವೀರಯೋಧ. ಅವನು ಹನ್ನೆರಡನೆ ದಿನದ ಯುದ್ಧದಲ್ಲಿ ಉತ್ತಮೌಜಸನೊಡನೆ ಹೋರಾಡಿದನು (ದ್ರೋಣ 25/38–39).

(3) ತೋಳಿನಲ್ಲಿ ಧರಿಸುವ ಒಂದು ಆಭೂಷಣದ ಹೆಸರು.

**ಅಙ್ಗಮಲಜ** – ಭಾರತವರ್ಷದ ಒಂದು ದೇಶ (ಭೀಷ್ಮ 9/50).

**ಅಙ್ಗಾರ** – (1) ಒಂದು ದೇಶ (ಭೀಷ್ಮ 9/60). (2) ಒಬ್ಬ ಪ್ರಾಚೀನ ರಾಜ. ಅವನು ಮಾಂಧಾತನಿಂದ ಪರಾಜಿತನಾದನು (ಶಾಂತಿ 29/88).

**ಅಙ್ಗಾರಕ** – (1) ಸೌವೀರದೇಶದ ಒಬ್ಬ ರಾಜಕುಮಾರ. ಅವನು ಜಯದ್ರಥನ ಹಿಂಬಾಲಕನಾಗಿದ್ದನು (ವನ 265/10).

(2) 'ಮಂಗಳ' ಗ್ರಹ. ಅವನು ಬ್ರಹ್ಮಸಭೆಯಲ್ಲಿ ಸದಾ ಉಪಸ್ಥಿತನಾಗಿರುತ್ತಾನೆ (ಸಭಾ 11/29).

(3) ಸೂರ್ಯನ ನೂರೆಂಟು ಹೆಸರುಗಳಲ್ಲಿ ಒಂದು (ವನ 3/17).

**ಅಙ್ಗಾರಪರ್ಣ** – (1) ಒಬ್ಬ ಗಂಧರ್ವ. ಈತ ಅರ್ಜುನನಿಂದ ಪರಾಜಿತನಾಗಿ, ಅವನ ಮಿತ್ರನಾದ. ಅವನ ಪತ್ನಿಯ ಹೆಸರು 'ಕುಂಭೀನಸಿ' (ಆದಿ 169 ಅ) (ನೋಡು – ಚಿತ್ರರಥ).

(2) ಗಂಗಾತಟವರ್ತೀ ಒಂದು ಕಾಡು. ಅದು ಗಂಧರ್ವರಾಜ ಅಂಗಾರಪರ್ಣನ ಸ್ವಾಧೀನದಲ್ಲಿತ್ತು.

**ಅಙ್ಗಾವಹ** – ವೃಷ್ಣಿವಂಶದ ಮಹಾರಥಿ ವೀರ. ಅವನು ಯುಧಿಷ್ಠಿರನ ರಾಜಸೂಯಾದ್ವರಕ್ಕೆ ಬಲರಾಮನೊಡನೆ ಆಗಮಿಸಿದ್ದನು (ಸಭಾ 34/16).

**ಅಙ್ಗಿರಾ** – ಬ್ರಹ್ಮನ ಆರುಮಂದಿ ಮಾನಸಪುತ್ರರಲ್ಲಿ ಒಬ್ಬ (ಆದಿ 65/10).

**ಅಂಗೀರಸ** – ಈತ ಬ್ರಹ್ಮನ ಸಭಾಸದ (ಸಭಾ 11/19). ಈತನ ಪುತ್ರ ಬೃಹಸ್ಪತಿಯನ್ನು ದೇವತೆಗಳು ತಮ್ಮ ಪೌರೋಹಿತ್ಯಕ್ಕೆ ಆಯ್ಕೆ ಮಾಡಿದ್ದರು

(ಆದಿ 76/6). ಬ್ರಹ್ಮನವೀರ್ಯ ಮತ್ತು ಅಂಗಾರದಿಂದ ಈತನ ಉತ್ಪತ್ತಿಯ ವರ್ಣನೆ (ಅನು 85/105–106). ಈತನಿಂದ ಬೃಹಸ್ಪತಿ, ಉತಥ್ಯ ಮತ್ತು ಸಂವರ್ತರೆಂಬ ಮೂರು ಪುತ್ರರ ಜನನವಾಯಿತು (ಆದಿ 66/5). ಈತ ಸೂರ್ಯದೇವನ ರಕ್ಷಣೆ ಮಾಡಿದ್ದನು (ವನ 92/6). ಈತ ಅಲಕನಂದಾ ಎಂಬ ಹೆಸರಿನ ಗಂಗೆಯ ತಟದಲ್ಲಿ, ನಿತ್ಯ ಸ್ವಾಧ್ಯಾಯ, ಜಪ ಇತ್ಯಾದಿ ಮಾಡುತ್ತಾನೆ (ವನ 142/6). ಅಗ್ನಿದೇವನು ಅಂಗಿರಾನನ್ನು ತನ್ನ ಪ್ರಥಮ ಪುತ್ರನೆಂದು ಸ್ವೀಕರಿಸಿದ್ದನು (ವನ 217/8–18). ಇವನ ಪತ್ನಿ ಸುಭಾ ಎಂಬವಳ ಸಂತತಿಯಲ್ಲಿ, ಬೃಹತ್ಕೀರ್ತಿ ಮೊದಲಾದ ಪುತ್ರರು ಮತ್ತು ಭಾನುಮತಿ ಮೊದಲಾದ ಕನ್ಯೆಯರ ವರ್ಣನೆ (ವನ 218/1–8). ಈತನಿಗೆ ಇಂದ್ರನಿಂದ ವರಪ್ರಾಪ್ತಿ (ಉದ್ಯೋಗ 18/5–7). ಈತ ದ್ರೋಣಾಚಾರ್ಯರ ಬಳಿಗೆ ಬಂದು, ಯುದ್ಧ ನಿಲ್ಲಿಸುವಂತೆ ಹೇಳಿದ್ದನು (ದ್ರೋಣ 190/34–40). ಗೌತಮರ ಕೋರಿಕೆಯನ್ನು ಮನ್ನಿಸಿ, ತೀರ್ಥಗಳ ಮಹತ್ವವನ್ನು ಹೇಳಿದನು (ಅನು 25/7–17). ಅಗಸ್ತ್ಯರ ಸಮ್ಮುಖದಲ್ಲಿ ತಾನು ಕಮಲಗಳ ಅಪಹಾರ ಮಾಡಲಿಲ್ಲವೆಂದು ಶಪಥಮಾಡಿದನು (ಅನು 94/20). ಈತನಿಂದ ಭೀಷ್ಮರಿಗೆ ಅನಶನವ್ರತದ ಮಹಿಮಾವರ್ಣನೆ (ಅನು 106/11–16). ಧರ್ಮರಹಸ್ಯದ ವರ್ಣನೆ (ಅನು 127/8). ಸಮುದ್ರದ ನೀರನ್ನು ಪಾನ ಮಾಡಿದುದು (ಅನು 153). ಅಗ್ನಿಗೆ ಈತನ ಶಾಪ (ಅನು 153/8). ಈತ ರಾಜಾ ಅವಿಕ್ಷಿತನಿಂದ ಯಜ್ಞ ಮಾಡಿಸಿದನು (ಆಶ್ವ 4/22).

**ಅಂಗುಲಿತ್ರ** – ಬಿಲ್ಲಿನ ಹೆದೆಯನ್ನು ಎಳೆಯುವಾಗ ಗಾಯವಾಗದಿರಲು, ಬೆರಳಿಗೆ ಹಾಕಿಕೊಳ್ಳುವ ಚರ್ಮದ ಮುಚ್ಚಳ (ಕೈಚೀಲ) (ಉದ್ಯೋಗ 179 ಅಧ್ಯಾಯ).

**ಅಚಲ** – (1) ಕೌರವ ಪಕ್ಷದ ವೀರರಥಿಕ. ಗಾಂಧಾರ ರಾಜ ಸುಬಲನ ಮಗ ಮತ್ತು ಶಕುನಿಯ ಸಹೋದರ (ಉದ್ಯೋಗ 168/1). ಈತ ಯುಧಿಷ್ಠಿರನ ರಾಜಸೂಯಾಧ್ವರ ನೋಡಲು ಹೋಗಿದ್ದನು (ಸಭಾ 34/7). ತನ್ನ ಸಹೋದರ ವೃಷಕನೊಂದಿಗೆ, ಅರ್ಜುನನಿಂದ ಈತನ ವಧೆಯಾಯಿತು (ದ್ರೋಣ 30/11). ವ್ಯಾಸರು, ಒಂದು ರಾತ್ರಿಯ ಅವಧಿಗೆ, ಜೀವಿತಾವಸ್ಥೆಯಲ್ಲಿ ಕರೆಸಿದ ಮೃತಾತ್ಮಗಳಲ್ಲಿ ಈತನೂ ಒಬ್ಬ (ಆಶ್ರಮ 32/12).

(2) ಸ್ಕಂದನ ಒಬ್ಬ ಪಾರ್ಷದ (ಶಲ್ಯ 45/74).

(3) ವಿಷ್ಣು ಸಹಸ್ರನಾಮದಲ್ಲಿ ಬಂದ ಭಗವಂತನ ಹೆಸರುಗಳಲ್ಲಿ ಒಂದು (ಅನು 149/192).

**ಅಚಲಾ** – ಸ್ಕಂದನ ಅನುಯಾಯಿ ಮಾತೃಕೆ (ಶಲ್ಯ 46/14).

**ಅಚ್ಯುತ** – ಶ್ರೀ ಕೃಷ್ಣನ ಒಂದು ಹೆಸರು (ಭೀಷ್ಮ 25/21). (ತನ್ನ ಮಹಿಮೆ ಅಥವಾ ಸ್ವರೂಪದಿಂದ, ಅಥವಾ ಧರ್ಮದಿಂದ ಎಂದೂ ಚ್ಯುತನಾಗದ ಕಾರಣ ಭಗವಂತನನ್ನು ಅಚ್ಯುತನೆನ್ನುತ್ತಾರೆ. ಈ ಯೌಗಿಕ ಅರ್ಥದಲ್ಲಿ ಈ ಹೆಸರು ಯುಧಿಷ್ಠಿರಾದಿಗಳಿಗೂ ಕೂಡ ವಿಶೇಷರೂಪದಲ್ಲಿ ಪ್ರಯೋಗಿಸಲ್ಪಟ್ಟಿದೆ).

**ಅಚ್ಯುತಸ್ಥಲ** – ವರ್ಣಸಂಕರ ಜಾತಿಯ ಅಂತ್ಯಜರ ನಿವಾಸಸ್ಥಾನ. ಒಂದು ಪ್ರಾಚೀನ ಗ್ರಾಮ (ವನ 129/9).

**ಅಚ್ಯುತಾಯು** – ಕೌರವಪಕ್ಷದ ಒಬ್ಬ ವೀರ. ಶ್ರುತಾಯುವಿನ ಸಹೋದರ. ಅರ್ಜುನನಿಂದ ಅಚ್ಯುತಾಯು ಮತ್ತು ಶ್ರುತಾಯುಗಳ ವಧೆಯಾಯಿತು (ದ್ರೋಣ 93/7–24).

**ಅಜ** – (1) ಇಕ್ಷ್ವಾಕುವಂಶದ ನರೇಶ. ರಾಜಾ ದಶರಥನ ತಂದೆ (ವನ 274/6).

(2) ಪ್ರಾಚೀನ ಋಷಿಗಳ ಒಂದು ಸಮುದಾಯ. ಇವರಿಗೆ ಸ್ವಾಧ್ಯಾಯದ ಮೂಲಕ ಸ್ವರ್ಗಪ್ರಾಪ್ತಿಯಾಯಿತು (ಶಾಂತಿ 26/7).

(3) ಮಹಾರಾಜ ಜಹ್ನುವಿನ ಪುತ್ರ, ಬಲಾಕಾಶ್ವನ ತಂದೆ (ಶಾಂತಿ 49/3).

(4) ಜೀವನದಲ್ಲಿ ಎಂದೂ ಮಾಂಸ ತಿನ್ನದ ಒಬ್ಬ ರಾಜ (ಅನು 115/66). (ಈತ ದಶರಥನ ತಂದೆಯೆಂದೇ ಕೆಲವರ ಅಭಿಪ್ರಾಯ).

(5) ಅಜನ್ಮಾ (ಭೀಷ್ಮ 28/6).

(6) ಸೂರ್ಯ (ವನ 3/16).

(7) ಶಿವ(ಆಶ್ವ 8/21).

(8) ಬ್ರಹ್ಮಾ (ಅನು 153/17).

(9) ವಿಷ್ಣು (ಅನು 149/69).

(10) ಶ್ರೀಕೃಷ್ಣ (ಉದ್ಯೋಗ 70/8) (ಶಾಂತಿ

342/74).
(11) ಬೀಜ (ಶಾಂತಿ 337/4).
(12) ಹೋತ ಅಥವಾ ಆಡು (ಶಾಂತಿ 337/3).
**ಅಜಕ** – ವೃಷಪರ್ವದಾನವನ ತಮ್ಮ. ಈತ ಶಾಲ್ವರೂಪದಿಂದ ಜನ್ಮವೆತ್ತಿದನು (ಆದಿ 65/24 ಮತ್ತು 67/16).
**ಅಜಗರ** – ಒಬ್ಬ ವಿಶಾಲಕಾಯದ ಸರ್ಪ. ಈತ ಪೂರ್ವಜನ್ಮದಲ್ಲಿ ನಹುಷನಾಗಿದ್ದನು. ಅಗಸ್ತ್ಯರ ಶಾಪದಿಂದ ಸರ್ಪವಾಗಿ ಬಿದ್ದಿದ್ದನು. ಈತ ಭೀಮಸೇನನನ್ನು ಹಿಡಕೊಂಡಿದ್ದನು (ವನ 178/28, 179/10–24). ಯುಧಿಷ್ಠಿರನೊಂದಿಗೆ ಅವನ ಸಂವಾದ (ವನ 180 ಮತ್ತು 181 ಅ).
**ಅಜನಾಭ** – ಒಂದು ಪರ್ವತದ ಹೆಸರು (ಅನು 165/32).
**ಅಜಮೀಢ** – (1) ಮಹಾರಾಜ ಸುಹೋತ್ರನಿಂದ ಐಕ್ಷ್ವಾಕೀಯ ಗರ್ಭದಿಂದ ಹುಟ್ಟಿದ, ಚಂದ್ರ ವಂಶದ ಕ್ಷತ್ರಿಯ. ಇವನ ಸಹೋದರರ ಹೆಸರು ಸಮೀಢ ಮತ್ತು ಪುರುಮೀಢ. ಇವನಿಗೆ ಧೂಮಿನಿ, ನೀಲಿ ಮತ್ತು ಕೇಶಿನಿ ಎಂಬ ಮೂವರು ರಾಣಿಯರಿದ್ದರು. ಧೂಮಿನಿಯಿಂದ ಋಕ್ಷ, ನೀಲಿಯಿಂದ ದುಶ್ಯಂತ ಮತ್ತು ಪರಮೇಷ್ಠಿ, ಕೇಶಿನಿಯಿಂದ ಜಹ್ನು, ವ್ರಜನ ಮತ್ತು ರೂಪಿಣರೆಂಬ ಪುತ್ರರಾದರು (ಆದಿ 94/30–32 ಮತ್ತು ಅನು 4/2).
(2) ಚಂದ್ರವಂಶದ ಒಬ್ಬ ಕ್ಷತ್ರಿಯ ರಾಜ. ಈತ ಚಂದ್ರವಂಶದ ವಿಕುಂಠನ ಮತ್ತು ದಾಶಾರ್ಹ ಕುಲದ ಕನ್ಯೆ ಸುದೇವಾರಿಂದ ಜನ್ಮವೆತ್ತಿದವನು. ಇವನಿಗೆ ಕೈಕೆಯಿ, ಗಾಂಧಾರಿ, ವಿಶಾಲಾ ಮತ್ತು ಋಕ್ಷಾ ಎಂಬ ನಾಲ್ಕು ಪತ್ನಿಯರಿದ್ದರು. ಅವರಲ್ಲಿ ಒಂದುನೂರ ಇಪ್ಪತ್ತು ಪುತ್ರರಾಗಿದ್ದರು (ಆದಿ 95/35–37).
**ಅಜವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).
**ಅಜವಿಂದು** – ಸುವೀರ ವಂಶದಲ್ಲಿ ಜನ್ಮವೆತ್ತಿದ ಒಬ್ಬ ಕುಲಕಳಂಕರಾಜ (ಉದ್ಯೋಗ 74/14).
**ಅಜಾತಶತ್ರು** – ಯುಧಿಷ್ಠಿರ (ಭೀಷ್ಮ 75/19 ಮತ್ತು ಸಭಾ 13/19).
**ಅಜೇಯ** – ಒಬ್ಬ ಪ್ರಾಚೀನ ರಾಜ (ಆದಿ 1/234).
**ಅಜೈಕಪಾತ್** – ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಮೊಮ್ಮಗ ಸ್ಥಾಣುವಿನ ಮಗ. (ಆದಿ 66/1–3). ಈತ ಸುವರ್ಣರಕ್ಷಕ (ಉದ್ಯೋಗ 114/4). ಹನ್ನೊಂದು ಮಂದಿ ರುದ್ರರಲ್ಲಿ ಈತನ ಹೆಸರು ಅನೇಕ ಸ್ಥಳಗಳಲ್ಲಿ ಬಂದಿದೆ (ಶಾಂತಿ 208/19).
**ಅಜೋದರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).
**ಅಞ್ಜನ** – (1) ಒಂದು ಪರ್ವತದ ಹೆಸರು (ಸಭಾ 78/15).
(2) ಸುಪ್ರತೀಕದ ವಂಶದಲ್ಲಿ ಹುಟ್ಟಿದ, ಪಾತಾಳ ವಾಸಿಯಾದ, ಅಂಜನ ಹೆಸರಿನ ಆನೆ (ಉದ್ಯೋಗ 99/15).
(3) ಘಟೋತ್ಕಚನ ಸಹಚಾರಿ ರಾಕ್ಷಸನ ವಾಹನನಾಗಿ ಬಂದ ಅಂಜನಾ ಎಂಬ ಹೆಸರಿನ ದಿಗ್ಗಜ (ಭೀಷ್ಮ 64/57 ಮತ್ತು ದ್ರೋಣ 112/33).
**ಅಞ್ಜನಪರ್ವಾ** – ಘಟೋತ್ಕಚನ ಪುತ್ರ (ಉದ್ಯೋಗ 194/20). ಅಶ್ವತ್ಥಾಮನಿಂದ ಈತನ ವಧೆ (ದ್ರೋಣ 156/89–90).
**ಅಞ್ಜಲಿಕಾವೇಧ** – ಗಜರಾಜನನ್ನು ಹತೋಟಿಯಲ್ಲಿಡುವ ವಿದ್ಯೆ. ಇದು ಭೀಮಸೇನನಿಗೆ ಗೊತ್ತಿತ್ತು (ದ್ರೋಣ 26/23).
**ಅಞ್ಜಲಿಕಾಶ್ರಮ** – ಒಂದು ತೀರ್ಥ. ಇಲ್ಲಿ ಶಾಖಾಹಾರ ಭುಂಜಿಸುತ್ತಾ, ಚಿಂದಿಬಟ್ಟೆ ಧರಿಸಿಕೊಂಡು ಸ್ವಲ್ಪ ಕಾಲ ವಾಸವಾಗಿದ್ದರೆ, ಕನ್ಯಾಕುಮಾರಿ ತೀರ್ಥದಲ್ಲಿ ಹತ್ತುಬಾರಿ ಸೇವೆ ಮಾಡಿದ ಫಲ ಪ್ರಾಪ್ತವಾಗುತ್ತದೆ (ಅನು 25/52).
**ಅಟವೀ ಶಿಖರ** – ಒಂದು ದೇಶದ ಹೆಸರು (ಭೀಷ್ಮ 9/48).
**ಅಠಿದ** – ದಕ್ಷಿಣ ದಿಕ್ಕಿನ ಒಂದು ಜನಪದ (ಭೀಷ್ಮ 9/ 64).
**ಅಣೀ** – ಶೂಲದ ಅಗ್ರಭಾಗದ ಹೆಸರು. ಇದನ್ನು ತನ್ನ ಶರೀರದೊಳಗೆ ಇರಿಸಿಕೊಂಡೇ ಸಂಚರಿಸುತ್ತಿದ್ದುದರಿಂದ, ಮಾಂಡವ್ಯ ಋಷಿಗೆ 'ಅಣೀಮಾಂಡವ್ಯ'ನೆಂಬ ಹೆಸರಾಗಿತ್ತು (ಆದಿ 107/8).
**ಅಣೀಮಾಂಡವ್ಯ** – ಮಹರ್ಷಿ ಮಾಂಡವ್ಯ ಮತ್ತು ಈತನ ತಪಸ್ಸು (ಆದಿ 106/2–3). ಈತನಿಗೆ ಅಣಿಮಾಂಡವ್ಯನೆಂಬ ಹೆಸರುಂಟಾಗಲು ಕಾರಣ (ಆದಿ 107/8). ನಿರಪರಾಧಿಯಾದರೂ,

ಇವನಿಗೆ ಶೂಲಕ್ಕೇರಿಸಲ್ಪಡುವ ದಂಡನೆ ಸಿಕ್ಕಿತು (ಆದಿ 63/92 ಮತ್ತು ಆದಿ 106/12). ಶೂಲಾಗ್ರದಲ್ಲಿ ಈತನ ತಪಸ್ಸು (ಆದಿ 106/15). ಈತನ ದಯನೀಯ ಸ್ಥಿತಿಯಿಂದ ಸಂತಪ್ತರಾದ ಮತ್ತು ಈತನ ತಪಸ್ಸಿನಿಂದ ಪ್ರಭಾವಿತರಾದ, ಪಕ್ಷಿರೂಪಧಾರಿ ಮಹರ್ಷಿಗಳು ಇವನ ಬಳಿಗೆ ಆಗಮಿಸಿದುದು (ಆದಿ 106/16). "ಪತಂಗಗಳ ಪುಚ್ಛ ಭಾಗದಲ್ಲಿ ಮುಳ್ಳುಚುಚ್ಚಿದ್ದರ ಫಲವಾಗಿ, ನಿನಗೆ ಶೂಲಕ್ಕೇರಿಸಲ್ಪಡುವ ದಂಡನೆ ಪ್ರಾಪ್ತವಾಗಿದೆ" ಯೆಂದು ಧರ್ಮರಾಜನು ಈತನಿಗೆ ತಿಳಿಯಪಡಿಸಿದುದು (ಆದಿ 107/11). ಬ್ರಾಹ್ಮಣವಧೆಯ ಅತ್ಯಧಿಕ ಭಯಾನಕತೆಯ ಕುರಿತು ಈತನ ಪ್ರತಿಪಾದನೆ (ಆದಿ 107/15). ಧರ್ಮರಾಜನು ಶೂದ್ರಯೋನಿಯಲ್ಲಿ ಜನ್ಮವೆತ್ತುವಂತೆ ಈತನ ಶಾಪ (ಆದಿ 107/16; 63/96). "ಹದಿನಾಲ್ಕು ವರ್ಷ ವಯಸ್ಸಿನ ತನಕ ಮಾಡಿದ ಅಶುಭ ಪ್ರಕಾರ ಆತನ ಘೋಷಣೆ (ಆದಿ 107/17). ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗುತ್ತಿದ್ದಾಗ, ಮಾರ್ಗಮಧ್ಯದಲ್ಲಿ ಭೇಟಿಯಾದ ಋಷಿಗಳಲ್ಲಿ ಅಣಿಮಾಂಡವ್ಯನೂ ಒಬ್ಬ (ಉದ್ಯೋಗ 83/64). ವಿದೇಹ ರಾಜ ಜನಕನಲ್ಲಿ ಆಶೆಯನ್ನು ತ್ಯಾಗ ಮಾಡುವ ಕುರಿತು ಈತನ ಪ್ರಶ್ನೆ (ಶಾಂತಿ 276/3). ಶಿವಮಹಿಮೆಯ ಕುರಿತು ಯುಧಿಷ್ಠಿರನಿಗೆ ತನ್ನ ಅನುಭವವನ್ನು ಹೇಳಿದುದು (ಅನು 18/46).

**ಅಣುಹ** – ಒಬ್ಬ ಪ್ರಾಚೀನ ರಾಜ (ಆದಿ 1/232).

**ಅತಿಬಲ** – (1) ವಾಯುವಿನ ಮೂಲಕ ಸ್ಕಂದನಿಗೆ ಕೊಡಲ್ಪಟ್ಟ ಒಬ್ಬ ಪಾರ್ಷದ (ಶಲ್ಯ 45/44). (2) ಒಬ್ಬ ನೀತಿ ಶಾಸ್ತ್ರಜ್ಞನಾದ ರಾಜ. ಅವನು ರಾಜ್ಯ ಸ್ವೀಕರಿಸಿದ ಅನಂತರ ಇಂದ್ರಿಯಗಳ ಗುಲಾಮನಾದನು. ಇವನ ತಂದೆಯ ಹೆಸರು ಅನಂಗ (ಶಾಂತಿ 49/92).

**ಅತಿಬಾಹು** – ಒಬ್ಬ ಗಂಧರ್ವ. ಈತ ಕಶ್ಯಪನ ಪತ್ನಿ ಪ್ರಾಧಾಳ ಮಗ. ಅವನ ಮೂವರು ಸಹೋದರರು ಹಾಹಾ, ಹೂಹೂ, ಮತ್ತು ತುಂಬರು (ಆದಿ 65/51).

**ಅತಿಯಮ** – ವರುಣನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇವನ ಇನ್ನೊಬ್ಬ ಜೊತೆಗಾರನ ಹೆಸರು ಯಮ (ಶಲ್ಯ 45/45).

**ಅತಿರಥ** – (1) ಪೂರುವಂಶದ ರಾಜಾ ಮತಿನಾರನ ತೃತೀಯ ಪುತ್ರ. ಇವನ ಇತರ ಮೂರು ಮಂದಿ ಸಹೋದರ ಹೆಸರು – ತಂಸು, ಮಹಾನ್ ಮತ್ತು ದ್ರುಹ್ಯು (ಆದಿ 94/14). (2) ಅಸಂಖ್ಯಾತ ಯೋಧರನ್ನು ಏಕಕಾಲದಲ್ಲಿ ವಿರೋಧಿಸಿ ನಿಂತು, ಯುದ್ಧಮಾಡುವ ಸಾಮರ್ಥ್ಯವುಳ್ಳವನು ಅತಿರಥನೆಂದು ಕರೆಯಲ್ಪಡುತ್ತಾನೆ (ಭಾರತದರ್ಶನ) (ಉದ್ಯೋಗ ಅಧ್ಯಾಯ 165).

**ಅತಿಲೋಮಾ** – ಶ್ರೀ ಕೃಷ್ಣನಿಂದ ವಧಿಸಲ್ಪಟ್ಟ ಒಬ್ಬ ಅಸುರ (ಸಭಾ 38/29).

**ಅತಿವರ್ಚಾ** – ಹಿಮವಂತನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇವನ ಇನ್ನೊಬ್ಬ ಜೊತೆಗಾರನ ಹೆಸರು ಸುವರ್ಚಾ (ಶಲ್ಯ 45/46).

**ಅತಿಶೃಂಗ** – ವಿಂಧ್ಯಾಚಲನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾಷಾಣ ಯೋಧಿ ಪಾರ್ಷದರಲ್ಲಿ ಒಬ್ಬ. ಈತನ ಇನ್ನೋರ್ವ ಜೊತೆಗಾರನ ಹೆಸರು ಉಚ್ಛೃಂಗ (ಶಲ್ಯ 45/49–50).

**ಅತಿಷಂಡ** – ಬಲರಾಮನು ಅನಂತನಾಗನ ರೂಪಧರಿಸಿ, ಪರಮಧಾಮಕ್ಕೆ ಆಗಮಿಸುತ್ತಿರುವಾಗ, ಅವನನ್ನು ಸ್ವಾಗತಿಸಲು ಬಂದ ಅನೇಕ ನಾಗಗಳಲ್ಲಿ ಒಬ್ಬ (ಮೌಸಲ 4/16).

**ಅತಿಸ್ಥಿರ** – ಮೇರು ಪರ್ವತನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬ 'ಸ್ಥಿರ'ನಾಗಿದ್ದ (ಶಲ್ಯ 45/48).

**ಅತ್ರಿ** – (1) ಒಬ್ಬ ಮಹರ್ಷಿ. ಅವನು ಬ್ರಹ್ಮನ ಮಾನಸಪುತ್ರನಾಗಿದ್ದ (ಆದಿ 65/10 ಮತ್ತು ಶಾಂತಿ 166, 207, 208ನೇ ಅಧ್ಯಾಯ). ಈತನು ಬ್ರಹ್ಮನ ಏಳು ಮಂದಿ ಪುತ್ರರಲ್ಲಿ ಮತ್ತು ಏಳು ಮಂದಿ ಬ್ರಹ್ಮರಲ್ಲಿ ಒಬ್ಬನಾಗಿದ್ದನು. ಇವನ ವಂಶದಲ್ಲಿ ಪ್ರಾಚೀನಬರ್ಹಿ ಜನ್ಮವೆತ್ತಿದ್ದನು. ಈತ ಹತ್ತುಮಂದಿ ಪ್ರಚೇತಸರ ತಂದೆಯಾಗಿದ್ದನು. ಅತ್ರಿಗೆ ಇಬ್ಬರು ಔರಸಪುತ್ರರೆಂದು ಹೇಳಲಾಗಿದೆ. ವೀರ್ಯವಂತ ರಾಜಾ ಸೋಮ ಮತ್ತು ಭಗವಾನ್ ಅರ್ಯಮಾ (ಶಾಂತಿ 208/3). ಈತ ಇಪ್ಪತ್ತೊಂದು ಮಂದಿ ಪ್ರಜಾಪತಿಗಳಲ್ಲಿ ಒಬ್ಬ (ಶಾಂತಿ 334/35). 'ಚಿತ್ರ ಶಿಖಂಡಿ' ಎಂದು ಕರೆಯಲ್ಪಡುವ ಏಳು ಮಂದಿ ಋಷಿಗಳಲ್ಲಿ ಈತನೂ

ಒಬ್ಬ (ಶಾಂತಿ 335/27). ಎಲ್ಲಾ ಲೋಕಗಳ ಉತ್ಪತ್ತಿ ಮತ್ತು ಪ್ರತಿಷ್ಠೆಗೆ ಆಧಾರಭೂತವಾದ 'ಅಷ್ಟಪ್ರಕೃತಿ'ಗಳೆಂದು ಕರೆಯಲ್ಪಡುವ ಮರೀಚಿ ಮೊದಲಾದ ಪ್ರಜಾಪತಿಗಳಲ್ಲಿ ಈತನೂ ಪರಿಗಣಿಸಲ್ಪಟ್ಟಿದ್ದಾನೆ (ಶಾಂತಿ 340/34–36). ಈತನ ಪತ್ನಿಯ ಹೆಸರು ಅನಸೂಯ (ಅನು 14/95). ಪರಾಶರರ ರಾಕ್ಷಸಯಜ್ಞವನ್ನು ನಿಲ್ಲಿಸುವಂತೆ ಮಾಡಲು ಈತನ ಆಗಮನ (ಆದಿ 180/8). ಮಹಾರಾಜ ಪೃಥುವಿನ ಯಜ್ಞದಲ್ಲಿ ಗೌತಮನೊಡನೆ ಈತನ ಸಂವಾದ (ವನ 185/15–23). ಪೃಥುವಿನ ಮೂಲಕ ಈತನಿಗೆ ಧನಪ್ರಾಪ್ತಿ (ವನ 185/34–36). ಅತ್ರಿಯ ಶರೀರದಿಂದ ವಿಭಿನ್ನ ಅಗ್ನಿಗಳ ಪ್ರಾದುರ್ಭಾವ (ವನ 222/27–29). ದ್ರೋಣಾಚಾರ್ಯರು ಯುದ್ಧನಿಲ್ಲಿಸುವಂತೆ ಹೇಳಿದನು (ದ್ರೋಣ 190/35–40). ಈತ ಸೋಮನ ಯಜ್ಞದಲ್ಲಿ ಹೋತೃವಿನ ಕಾರ್ಯನಿರ್ವಹಿಸಿದ್ದನು (ಶಲ್ಯ 43/47). ದೇವತೆಗಳ ಪ್ರಾರ್ಥನೆಯಂತೆ ಈತ ಹಗಲಲ್ಲಿ ಸೂರ್ಯನಾಗಿ ಜ್ವಲಿಸಿದ, ಮತ್ತು ರಾತ್ರಿಯಲ್ಲಿ ಚಂದ್ರನಾಗಿ ಪ್ರಕಾಶಿಸಿದನು. ಇವನ ತೇಜಸ್ಸಿನಿಂದ ಅಸುರರು ದಗ್ಧರಾದರು. ಇವನು ಸೂರ್ಯನನ್ನು ತೇಜಸ್ವಿಯಾಗಿ ಮಾಡಿದನು (ಅನು 156/9–14). ಉತ್ತರ ದಿಕ್ಕಿನಲ್ಲಿ ಆಶ್ರಯ ಪಡೆದು ಅಭಿವೃದ್ಧಿ ಸಾಧಿಸುವ ಮಹರ್ಷಿಗಳಲ್ಲಿ ಇವನ ಹೆಸರು ಬಂದಿದೆ (ಅನು 165/44). ಈತನ ಧರ್ಮಾತ್ಮನಾದ ಪುತ್ರ ದುರ್ವಾಸ ಪಶ್ಚಿಮ ದಿಕ್ಕಿನಲ್ಲಿದ್ದು ಅಭ್ಯುದಯಶೀಲನಾಗಿರುತ್ತಾನೆ (ಅನು 165/43). ಇವನು ತನ್ನ ವಂಶಜನಾದ ನಿಮಿಗೆ ಶ್ರಾದ್ಧದ ಕುರಿತು ಉಪದೇಶ ಮಾಡಿದ್ದನು (ಅನು 91/20–44). ವೃಷಾದರ್ಭಿಯೊಡನೆ ಪ್ರತಿಗ್ರಹದ ದೋಷವನ್ನು ಹೇಳಿದ್ದನು (ಅನು 93/43). ಅರುಂಧತಿಯೊಡನೆ ಈತ ತನ್ನ ದುರ್ಬಲತೆಯ ಕಾರಣ ಹೇಳಿದ್ದನು (ಅನು 93/62). ಯಾತುಧಾನಿಯೊಡನೆ ತನ್ನ ಹೆಸರಿನ ವಿವರಣೆ ಅರ್ಥ ತಿಳಿಸಿದ್ದನು (ಅನು 93/82). ಕಮಲವನ್ನು ಕದಿಯಲಿಲ್ಲವೆಂದು ಶಪಥಮಾಡಿದ್ದನು (ಅನು 93/113).

(2) ಶುಕ್ರಾಚಾರ್ಯನ ಮಗ. ಭಯಂಕರವಾದ ಕರ್ಮ ಮಾಡುವವ (ಆದಿ 65/37).

(3) ಭಗವಾನ್ ಶಿವನ ಒಂದು ಹೆಸರು (ಅನು 17/38).

**ಅತ್ರಿಭಾರ್ಯಾ** – (ಅನಸೂಯಾ) ಈಕೆ ಅತ್ರಿಯ ಬ್ರಹ್ಮವಾದಿನಿ ಪತ್ನಿಯಾಗಿದ್ದಳು. ಒಂದು ಬಾರಿ ಪತಿಯೊಡನೆ ಸಿಟ್ಟುಗೊಂಡು, ಆತನಿಂದ ದೂರವಾಗಿ, ಮುನ್ನೂರು ವರ್ಷಗಳ ತನಕ ತಪಸ್ಸಿನಲ್ಲಿ ಮಗ್ನಳಾಗಿದ್ದಳು. ಆಗ ಭಗವಾನ್ ಶಂಕರನು ಪ್ರಸನ್ನನಾಗಿ, ಆಕೆಗೆ ಪುತ್ರಪ್ರಾಪ್ತಿಯ ವರವನ್ನು ಅನುಗ್ರಹಿಸಿದನು (ಅನು 14/95–98).

**ಅಥರ್ವಾ** – (1) ಛಂದ(ವೇದ)ಗಳ ಗಾಯಕನಾದ ಒಬ್ಬ ಮುನಿ (ಉದ್ಯೋಗ 43/50). ಇವನೇ ಅಥರ್ವಾ ಅಂಗಿರನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಈತನೇ ಜಲದಲ್ಲಿ ಅಡಗಿದ 'ಸಹ'ನೆಂಬ ಹೆಸರಿನ ಅಗ್ನಿಯ ಶೋಧನೆ ಮಾಡಿದವನು (ವನ 222/8). ಅಗ್ನಿರೂಪದಿಂದ ಪ್ರಕಾಶಿತನಾಗಿ, ದೇವತೆಗಳಿಗೆ ಹವಿಸ್ಸನ್ನು ತಲುಪಿಸುವಂತೆ, ಅಗ್ನಿಯಿಂದ ಅಥರ್ವನಿಗೆ ಆದೇಶ (ವನ 222/9). ಅಗ್ನಿಯ ಪ್ರಕಟನೆಗಾಗಿ ದೇವತೆಗಳು ಅಥರ್ವನಿಗೆ ಶರಣಾಗತರಾದುದು ಮತ್ತು ಆತನನ್ನು ಪೂಜಿಸಿದುದು (ವನ 222/18). ಅಥರ್ವನು ಸಮುದ್ರವನ್ನು ಮಥಿಸಿ, ಅಗ್ನಿಯ ದರ್ಶನ ಮತ್ತು ಸಕಲ ಲೋಕಗಳ ಸೃಷ್ಟಿ ಮಾಡಿದುದು (ವನ 222/19).

(2) ಅಥರ್ವವೇದ.

(3) ಭಗವಾನ್ ಶಂಕರನ ಒಂದು ಹೆಸರು. ಅಥರ್ವಶೀರ್ಷ (ಅನು 17/91).

**ಅಥರ್ವಣಾಸ್ತ್ರ** – ಕರ್ಣಾರ್ಜುನರ ಯುದ್ಧ ಬಿರುಸಾಗಿ ಸಾಗುತ್ತಿದ್ದಾಗ, ಕರ್ಣನು ಪ್ರಯೋಗಿಸಿದ ಅಸ್ತ್ರ ಇದು ಪರಶುರಾಮರ ಕೊಡುಗೆಯಾಗಿತ್ತು (ಕರ್ಣ 90 ಅಧ್ಯಾಯ).

**ಅದಿತಿ** – ದಕ್ಷನ ಮಗಳು, ಕಶ್ಯಪನ ಪತ್ನಿ ಮತ್ತು ದ್ವಾದಶ ಆದಿತ್ಯರ ತಾಯಿ (ಆದಿ 65/11–16). ನರಕಾಸುರನಿಂದ ಈಕೆಯ ಕುಂಡಲಗಳ ಅಪಹರಣ. ಸತ್ಯಭಾಮೆಗೆ ಈಕೆಯಿಂದ ವರಪ್ರದಾನ. ಶ್ರೀಕೃಷ್ಣನಿಂದ ಈಕೆಗೆ ದಿವ್ಯಕುಂಡಲ ಮತ್ತು ಅತ್ಯಮೂಲ್ಯ ರತ್ನಗಳ ಕಾಣಿಕೆ (ಉದ್ಯೋಗ 48/80 ಮತ್ತು ಸಭಾ 38/29). ಮೈನಾಕ ಪರ್ವತದ ಉದರ ಪ್ರದೇಶದಲ್ಲಿರುವ ವಿನಶನ ತೀರ್ಥದ ಒಳಗೆ ಅದಿತಿದೇವಿ ಪುತ್ರಪ್ರಾಪ್ತಿಗಾಗಿ ಸಾಧ್ಯ ದೇವತೆಗಳನ್ನೂ ಉದ್ದೇಶಿಸಿ ಅನ್ನ

(ಬ್ರಹ್ಮೌದನ) ಸಿದ್ಧಪಡಿಸಿದ್ದಳು (ವನ 135/3). ಇವಳು ಒಂದು ಸಾವಿರ ವರ್ಷಗಳ ತನಕ ಮಹಾ ವಿಷ್ಣುವನ್ನು (ವಾಮನ) ಗರ್ಭದಲ್ಲಿ ಧರಿಸಿದ್ದಳು (ವನ 272/62). ಅದಿತಿಯ ಗರ್ಭದಿಂದ ಭಗವಂತನಾದ ವಿಷ್ಣು ಏಳು ಬಾರಿ ಜನ್ಮವೆತ್ತುವ ಕುರಿತು ವರ್ಣನೆ (ಶಾಂತಿ 43/6). ದೇವತೆಗಳ ವಿಜಯದ ಉದ್ದೇಶದಿಂದ ಅನ್ನ ಸಿದ್ಧಪಡಿಸಿದ ಅದಿತಿಗೆ ಬುಧನ ಶಾಪ. ಮೃತ ಅಂಡದ ಉತ್ಪತ್ತಿ ಮತ್ತು ಅದರಿಂದಲೇ ಪ್ರಕಟವಾದುದರಿಂದ ಶ್ರಾದ್ಧದೇವನಿಗೆ ಮಾರ್ತಂಡನೆಂಬ ಪ್ರಸಿದ್ಧಿ (ಶಾಂತಿ 342/56). ಅದಿತಿದೇವಿ ಒಂಟಿ ಕಾಲಲ್ಲಿ ನಿಂತು ಪುತ್ರನಿಗಾಗಿ ಘೋರ ತಪಸ್ಸು ಮಾಡಿದಳು. ಅದರಿಂದಾಗಿ ಮಹಾವಿಷ್ಣು ಅವಳ ಗರ್ಭಕ್ಕೆ ಬಂದನು (ಅನು 83/25–26).

**ಅದೃಶ್ಯಂತಿ** – ಮಹರ್ಷಿ ವಸಿಷ್ಠರ ಸೊಸೆ. ಶಕ್ತಿಯ ಪತ್ನಿ. ಪರಾಶರನ ತಾಯಿ. ಈಕೆಯ ಗರ್ಭಸ್ಥ ಬಾಲಕನ ಮುಖದಿಂದ ವಸಿಷ್ಠರಿಗೆ ವೇದಾಧ್ಯಯನದ ಶಬ್ದ ಕೇಳಿಸುವುದು. ಆಕೆ ಪ್ರಶ್ನಿಸಿದಾಗ ವಸಿಷ್ಠರು ವಂಶಚ್ಛೇದದ ಭಯದಿಂದ ಕಳವಳಗೊಂಡಿರುವುದು, ತನ್ನ ಗರ್ಭದಲ್ಲಿ ಶಕ್ತಿಯ ಪುತ್ರನಿರುವ ಸೂಚನೆಯನ್ನು ಆಕೆ ವಸಿಷ್ಠರಿಗೆ ತಿಳಿಸುವುದು (ಆದಿ 176/11–15). ಕಲ್ಮಾಷಪಾದನ ಭಯದಿಂದ ಭೀತಳಾಗಿರುವ ಅದೃಶ್ಯಂತಿಗೆ ವಸಿಷ್ಠರ ಆಶ್ವಾಸನೆ (ಆದಿ 176/23). ಈಕೆಯ ಗರ್ಭದಿಂದ ಪರಾಶರನ ಜನ್ಮ (ಆದಿ 177/1). ಈಕೆಯ ಆದರ್ಶ ಪತಿ ಪ್ರೇಮದ ವರ್ಣನೆ (ಉದ್ಯೋಗ 117/11).

**ಅದ್ಭುತ** – (1) ಒಬ್ಬ ಅಗ್ನಿ. ಈತ ಸಹನೆಂಬ ಅಗ್ನಿಯ ಮಗ. ಇವನ ತಾಯಿಯ ಹೆಸರು ಮುದಿತಾ. ಇವನು ಎಲ್ಲಾ ಭೂತಗಳ ಅಧಿಪತಿ, ಆತ್ಮಾ ಮತ್ತು ಪ್ರಪಂಚಕರ್ತನಾಗಿದ್ದಾನೆ. ಈತನೇ ಮಹಾಭೂತಪತಿ. ಐಶ್ವರ್ಯಸಂಪನ್ನ, ಸರ್ವತ್ರ ಸಂಚರಿಸುವವ, ಮತ್ತು 'ಗೃಹಪತಿ' ಎಂಬ ಹೆಸರಿನಿಂದ ಜಗತ್ತನ್ನು ಪವಿತ್ರಗೊಳಿಸುವವನಾಗಿ ದ್ದಾನೆ. ಇವನ ಪುತ್ರನ ಹೆಸರು ಭರತ (ವನ 222/1–6). ಅದ್ಭುತನ ಪತ್ನಿಯ ಹೆಸರು 'ಪ್ರಿಯಾ' ಮತ್ತು ಅವಳ ಗರ್ಭದಿಂದ ಹುಟ್ಟಿದ ಔರಸಪುತ್ರನ ಹೆಸರು 'ವಿಭೂರಸಿ' (ವನ 222/26).

(2) ವಿಷ್ಣುಭಗವಂತನ ಒಂದು ಹೆಸರು (ಅನು 149/108).

**ಅದ್ರಿ** – ಒಬ್ಬ ರಾಜ. ಈತ ವಿಶ್ವಗಶ್ವನ ಮಗ ಮತ್ತು ಯುವನಾಶ್ವನ ತಂದೆ (ವನ 202/3).

**ಅದ್ರಿಕಾ** – ಒಬ್ಬ ಅಪ್ಸರೆ. ಈಕೆ ಬ್ರಹ್ಮನ ಶಾಪ ದಿಂದ ಮೀನಾಗಿ ಯಮುನೆಯಲ್ಲಿ ವಾಸಿಸುತ್ತಿದ್ದಳು (ಆದಿ 63/58). ಗೃಧ್ರದ ಮೂಲಕ ಬೀಳಿಸಲ್ಪಟ್ಟ, ಉಪರಿಚರವಸುವಿನ ವೀರ್ಯವನ್ನು ಈಕೆ ಗ್ರಹಣ ಮಾಡಿದಳು (ಆದಿ 63/59–60). ಈಕೆಯ ಗರ್ಭದಿಂದ 'ಸತ್ಯವತಿ' ಎಂಬ ಕನ್ಯೆ ಮತ್ತು ಮತ್ಸ್ಯನೆಂಬ ಹೆಸರಿನ ಪುತ್ರನ ಜನ್ಮ (ಆದಿ 63/61–62). ಈ ಎರಡು ಸಂತಾನಗಳನ್ನು ಪಡೆದು ಈಕೆ ಶಾಪದಿಂದ ಮುಕ್ತಳಾದುದು (ಆದಿ 63/64–66). ಅರ್ಜುನನ ಜನ್ಮಸಮಯ ದಲ್ಲಿ ಇತರ ಅಪ್ಸರೆಯರೊಂದಿಗೆ ಈಕೆಯೂ ಸ್ವರ್ಗದಿಂದ ಬಂದಿದ್ದಳು (122/61).

**ಅಧರ್ಮ** – ಸಮಸ್ತ ಪ್ರಾಣಿಗಳ ವಿನಾಶ ಮಾಡುವ ಪಾಪ (ಪಾಪದ ಅಭಿಮಾನಿ ಪುರುಷ) ಮತ್ತು ಆತನ ಉತ್ಪತ್ತಿಯ ಕಾರಣ (ಆದಿ 66/53). ಅಧರ್ಮನ ಪತ್ನಿಯ ಹೆಸರು ನಿಋತಿ. ಈಕೆಗೆ ಮೂರು ಮಂದಿ 'ನೈಋತ'ರೆಂಬ ಹೆಸರಿನ ರಾಕ್ಷಸ ಪುತ್ರರಿದ್ದರು – ಭಯ, ಮಹಾಭಯ ಮತ್ತು ಮೃತ್ಯು (ಆದಿ 66/54–55). ಈ ಅಧರ್ಮನ ಅಂಶದಿಂದಲೇ ಸಂಪತ್ತಿನ ಮಗನಾದ ದರ್ಪನ ಪ್ರಾದುರ್ಭಾವವಾಯಿತು (ಶಾಂತಿ 90/27).

**ಅಧಿರಥ** – ಒಬ್ಬ ಸೂತ. ಕರ್ಣನ ಸಾಕುತಂದೆ (ಆದಿ 110/23; 136/1–4). ಈತ ರಾಜಾ ಧೃತ ರಾಷ್ಟ್ರನ ಮಿತ್ರ. ಇವನ ಪತ್ನಿಯ ಹೆಸರು ರಾಧಾ. ಅವಳು ಅನುಪಮ ಸುಂದರಿ. ಆಕೆಗೆ ಮಕ್ಕಳಿರ ಲಿಲ್ಲ. ಅವಳು ಸದಾ ಪುತ್ರಪ್ರಾಪ್ತಿಗಾಗಿ ಪ್ರಯತ್ನ ಶೀಲಳಾಗಿದ್ದಳು (ವನ 309/1–3). ಅಧಿರಥನಿಗೆ ಕರ್ಣನ ಪ್ರಾಪ್ತಿ (ವನ 309/8–9).

**ಅಧಿರಾಜ್ಯ** – ಭಾರತವರ್ಷದ ಒಂದು ಜನಪದ (ಇದನ್ನು ಕೆಲವರು ಈಗಿನ ರೀವಾ ರಾಜ್ಯವೆನ್ನುತ್ತಾರೆ) (ಭೀಷ್ಮ 9/44).

**ಅಧೃಷ್ಯಾ** – ಒಂದು ನದಿ (ಭೀಷ್ಮ 9/24).

**ಅಧೋಕ್ಷಜ** – ಶ್ರೀ ಕೃಷ್ಣನ ಒಂದು ಹೆಸರು. ಈ ಹೆಸರಿನ ವ್ಯುತ್ಪತ್ತಿ (ಉದ್ಯೋಗ 70/10; ಅನು

14/69). ಭಗವಾನ್ ವಿಷ್ಣುವಿನ ಹೆಸರು (ಅನು 149/57).

**ಅಧಃಶಿರಾ** – ಒಬ್ಬ ದಿವ್ಯಮಹರ್ಷಿ. ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗುವಾಗ ಈತ ಮಾರ್ಗಮಧ್ಯ ದಲ್ಲಿ ಭೇಟಿ ಮಾಡಿದ್ದನು (ಉದ್ಯೋಗ 83/64).

**ಅನಘ** – (1) ಒಬ್ಬ ದೇವಗಂಧರ್ವ ಈತ ಅರ್ಜುನನ ಜನ್ಮೋತ್ಸವಕ್ಕೆ ಬಂದಿದ್ದನು (ಆದಿ 122/55).

(2) ಒಬ್ಬ ರಾಜ (ಸಭಾ 8/21).

(3) ಒಂದು ದೇಶ ಅಥವಾ ಜನಪದ (ಸಭಾ 30/9).

(4) ಸ್ಕಂದನ ಒಂದು ಹೆಸರು (ವನ 232/5).

(5) ಗರುಡನ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/12).

(6) ಭಗವಾನ್ ಶಂಕರನ ಒಂದು ಹೆಸರು (ಅನು 17/38).

(7) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/29).

**ಅನಙ್ಗ** – ಪ್ರಜಾಪತಿ ಕರ್ದಮನ ಪುತ್ರ. ಅವನು ಪ್ರಜಾ ರಕ್ಷಕ, ಯೋಗಿ ಮತ್ತು ದಂಡನೀತಿಯಲ್ಲಿ ನಿಪುಣನಾಗಿದ್ದನು. ಇವನ ಪುತ್ರನ ಹೆಸರು ಅತಿಬಲ (ಶಾಂತಿ 59/91–92).

**ಅನಙ್ಗಾ** – ಒಂದು ನದಿ (ಭೀಷ್ಮ 9/35).

**ಅನನ್ತ** – (1) ಕದ್ರುವಿನ ಜ್ಯೇಷ್ಠಪುತ್ರ ಭಗವಾನ್ ಅನಂತ (ಶೇಷನಾಗ) (ಆದಿ 65/41). ಏಳು ಮಂದಿ ಧರಣೀಧರರದಲ್ಲಿ ಒಬ್ಬ (ಅನು 150/61). ಭಗವಾನ್ ಅನಂತನು ಬ್ರಹ್ಮನ ಆದೇಶ ಪ್ರಕಾರ ಏಕಾಂಗಿಯಾಗಿ ಈ ಪೂರ್ಣ ಭೂಮಂಡಲವನ್ನು ಧಾರಣೆ ಮಾಡಿದುದು (ಆದಿ 36/24). ಬ್ರಹ್ಮನು ಅನಂತನಿಗೆ ಗರುಡನನ್ನು ಸಹಾಯಕನಾಗಿ ಮಾಡಿ ದನು (ಆದಿ 36/25). ಪಶ್ಚಿಮದಿಕ್ಕಿನಲ್ಲಿ ನಾಗರಾಜ ಅನಂತನ ನಿವಾಸಸ್ಥಾನದ ಕುರಿತು ವರ್ಣನೆ (ಉದ್ಯೋಗ 110/18). ಅನಂತನ (ಬಲರಾಮ) ರಸಾತಲ ಪ್ರವೇಶ (ಸ್ವರ್ಗ 5/23).

(2) ಭಗವಾನ್ ಸೂರ್ಯನ ಹೆಸರು (ವನ 3/24).

(3) ಭಗವಾನ್ ಶ್ರೀಕೃಷ್ಣನ ಹೆಸರು (ಉದ್ಯೋಗ 70/14).

(4) ಸ್ಕಂದನ ಒಬ್ಬ ಸೇನಾಪತಿ (ಶಲ್ಯ 45/57).

(5) ಭಗವಾನ್ ವಿಷ್ಣುವಿನ ಹೆಸರು (ಅನು 149/86).

(6) ಭಗವಾನ್ ಶಿವನ ಹೆಸರು (ಅನು 17/135).

**ಅನನ್ತ ವಿಜಯ** – ಯುಧಿಷ್ಠಿರನ ಶಂಖದ ಹೆಸರು (ಭೀಷ್ಮ 25/16; ಶಲ್ಯ 61/71).

**ಅನನ್ತಾ** – ಮಹಾರಾಜ ಪೂರುವಿನ ಮಗನಾದ ಜನಮೇಜಯನ ಪತ್ನಿ. ಮಧುವಂಶದ ಕನ್ಯೆ. ಈಕೆಯ ಗರ್ಭದಿಂದ ಜನಮೇಜಯನ ಮೂಲಕ ಪ್ರಾಚೀನ್ವನ್ತ ಎಂಬವನ ಜನ್ಮವಾಯಿತು (ಆದಿ 95/12).

**ಅನರಕ ತೀರ್ಥ** – ಒಂದು ತೀರ್ಥ. ಅದರಲ್ಲಿ ಸ್ನಾನ ಮಾಡಿದರೆ ದುರ್ಗತಿ ದೂರವಾಗುತ್ತದೆ. ಅಲ್ಲಿ ನಾರಾಯಣನೇ ಮೊದಲಾದವರ ಜೊತೆ ಯಲ್ಲಿ ಬ್ರಹ್ಮ ಸದಾ ವಾಸಿಸುತ್ತಾನೆ (ವನ 83/168).

**ಅನರಣ್ಯ** – ಇಕ್ಷ್ವಾಕುವಂಶದ ಒಬ್ಬ ಪ್ರಾಚೀನ ರಾಜ (ಆದಿ 1/236). ಈತ ಮಾಂಸಭಕ್ಷಣವನ್ನು ನಿಶೇಧಿಸಿದನು (ಅನು 115/59). ಈತ ಪ್ರಾತಃ ಸಂಧ್ಯೆಗಳಲ್ಲಿ ಸ್ಮರಣೆ ಮಾಡಲು ಯೋಗ್ಯರಾದ ರಾಜರ್ಷಿಗಳಲ್ಲಿ ಒಬ್ಬ (ಅನು 165/ 59).

**ಅನಲ** – (1) ಶಾಂಡಿಲಿಯ ಪುತ್ರರಾದ ಅಷ್ಟವಸುಗಳಲ್ಲಿ ಒಬ್ಬ (ಆದಿ 66/20). (2) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/9).

**ಅನಲಾ** – (1) ಸುರಭಿಯ ಪುತ್ರಿ ರೋಹಿಣಿಯ ಮಗಳು. ಇವಳಿಂದ ಪಿಂಡಾಕಾರದ ಫಲ ಕೊಡುವ ಏಳುರೀತಿಯ ವೃಕ್ಷಗಳು ಮತ್ತು ಶುಕೀ ಎಂಬ ಹೆಸರಿನ ಮಗಳ ಜನ್ಮವಾಯಿತು (ಆದಿ 66/67–69).

(2) ನಾಗಮಾತೆ ಸುರಸೆಯ ಮಗಳು. ಅವಳು ವನಸ್ಪತಿಗಳ, ವೃಕ್ಷಗಳ ಮತ್ತು ಲತಾಗುಲ್ಮಗಳ ತಾಯಿಯಾದಳು (ಆದಿ 66/70).

**ಅನವದ್ಯಾ** – ಕಶ್ಯಪನ ಪತ್ನಿ ಮತ್ತು ದಕ್ಷನ ಮಗಳಾದ ಪ್ರಾಧಾ ಎಂಬವಳ ಏಳು ಪುತ್ರಿಯರಲ್ಲಿ ಒಬ್ಬಳು (ಆದಿ 65/45). ಇವಳು ಸ್ವರ್ಗದ ಅಪ್ಸರೆಯಾಗಿದ್ದಳು. ಆಕೆ ಇತರ ಅಪ್ಸರೆಯ ರೊಂದಿಗೆ ಅರ್ಜುನನ ಜನ್ಮಕಾಲದಲ್ಲಿ ನರ್ತಿಸಲು ಬಂದಿದ್ದಳು (ಆದಿ 122/61).

**ಅನಶ್ವಾ** – ಮಹಾರಾಜ ಕುರುವಿನ ಮೊಮ್ಮಗ ಮತ್ತು ವಿದುರನ ಮಗ. ಮಧುವಂಶದ ಕನ್ಯೆ. ಸಂಪ್ರಿಯಾ ಇವನ ತಾಯಿ. ಇವನು ಮಗಧ ರಾಜಕುಮಾರಿ ಅಮೃತಾ ಎಂಬವಳ ಗರ್ಭದ ಮೂಲಕ ಪರೀಕ್ಷಿತನಿಗೆ ಜನ್ಮವಿತ್ತನು (ಆದಿ 95/39–41).

**ಅನಾದಿ** – ಭಗವಂತ ವಿಷ್ಣುವಿನ ಒಂದು ಹೆಸರು (ಅನು 149/114).

**ಅನಾಧೃಷ್ಟಿ** – (1) ರೌದ್ರಾಶ್ವನಿಂದ ಮಿಶ್ರಕೇಶಿ ಅಪ್ಸರೆಯಲ್ಲಿ ಹುಟ್ಟಿದ 'ಋಚೇಯು', ಅಥವಾ 'ಅನ್ವಗ್ಭಾನು' ಎಂಬವನ ಹೆಸರು 'ಅನಾಧೃಷ್ಟಿ' ಎಂದಾಗಿತ್ತು (ಆದಿ 94/8–12).

(2) ಏಳು ಮಂದಿ ಯಾದವ ಮಹಾರಥಿಗಳಲ್ಲಿ ಒಬ್ಬ (ಸಭಾ 14/58). ಅಭಿಮನ್ಯುವಿನ ವಿವಾಹ ಸಂದರ್ಭದಲ್ಲಿ ಈತ ಉಪಪ್ಲವ್ಯ ನಗರಕ್ಕೆ ಆಗಮಿಸಿದ್ದನು (ವಿರಾಟ 72/22). ಕುರುಕ್ಷೇತ್ರ ದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನರನ್ನು ಆಕ್ರಮಿಸಿದ ಅನೇಕ ವೀರರಲ್ಲಿ ಈತನೂ ಒಬ್ಬ (ಉದ್ಯೋಗ 151/67). ಈತನೇ ವೃದ್ಧಕ್ಷೇಮನ ಪುತ್ರನಾಗಿದ್ದನು ಅವನ ವರ್ಣನೆಯನ್ನು ಧೃತರಾಷ್ಟ್ರ ಮಾಡಿದ್ದನು (ದ್ರೋಣ 10/55). ವೃಷ್ಣಿವಂಶಿ 'ವಾರ್ಧಕ್ಷೇಮಿ' ಯೆಂದು ಈತನನ್ನೇ ಉಲ್ಲೇಖಿಸಿದ್ದಾರೆ. ಕೃಪಾಚಾರ್ಯನು ಈತ ದ್ರೋಣರ ಮೇಲೆ ಆಕ್ರಮಣ ಮಾಡದಂತೆ ತಡೆದಿದ್ದನು (ದ್ರೋಣ 25/51–52).

**ಅನಾಲಮ್ಬ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಪುರುಷಮೇಧ ಯಜ್ಞದ ಫಲ ಪ್ರಾಪ್ತವಾಗುತ್ತದೆ (ಅನು 25/32–33).

**ಅನಿಕೇತ** – ಕುಬೇರನ ಸಭೆಯಲ್ಲಿ, ಅವನ ಸೇವೆಗಾಗಿ ಸದಾ ಉಪಸ್ಥಿತನಾಗಿರುವ ಯಕ್ಷರಲ್ಲಿ ಒಬ್ಬ (ಸಭಾ 10/18).

**ಅನಿಮಿಷ** – (1) ಗರುಡನ ಪ್ರಮುಖ ಸಂತತಿ ಗಳಲ್ಲಿ ಒಬ್ಬ (ಉದ್ಯೋಗ 101/10).

(2) ಭಗವಂತನಾದ ಶಿವನ ಒಂದು ಹೆಸರು (ಅನು 17/41).

(3) ಭಗವಂತ ವಿಷ್ಣುವಿನ ಒಂದು ಹೆಸರು (ಅನು 149/36).

**ಅನಿರುದ್ಧ** – (1) ಶ್ರೀಕೃಷ್ಣನ ಮೊಮ್ಮಗ ಮತ್ತು ಪ್ರದ್ಯುಮ್ನನ ಮಗ (ಆದಿ 185/17). ಅನಿರುದ್ಧನು ಗುಪ್ತರೂಪದಿಂದ ಬಾಣಪುತ್ರಿಯಾದ ಉಷೆಯ ಬಳಿಗೆ ಹೋಗಿ, ಅವಳ ಜೊತೆಯಲ್ಲಿ ಆನಂದ ದಿಂದ ಇದ್ದುದು. ಬಾಣಾಸುರನು ಅನಿರುದ್ಧನನ್ನು ಸೆರೆಹಿಡಿದು ಕಷ್ಟಕ್ಕೀಡುಮಾಡಿದುದು. ನಾರದ ರಿಂದ ಅನಿರುದ್ಧನು ಬಾಣಾಸುರನ ಬಂಧನದಲ್ಲಿ, ಕಷ್ಟದಲ್ಲಿರುವನೆಂಬ ವಾರ್ತೆ ಕೇಳಿ, ಶ್ರೀಕೃಷ್ಣನು ಬಾಣನಗರದ ಮೇಲೆ ಆಕ್ರಮಣ ಮಾಡಿದುದು. ಅನಿರುದ್ಧನ ಬಿಡುಗಡೆ ಮತ್ತು ಉಷಾಳ ಜೊತೆಯಲ್ಲಿ ದ್ವಾರಕೆಗೆ ಆಗಮನ ಇತ್ಯಾದಿ (ಸಭಾ 38ನೇ ಅಧ್ಯಾಯ). ಅರ್ಜುನನಿಂದ ಧನುರ್ವೇದದ ಶಿಕ್ಷಣ ಪಡೆಯುತ್ತಿದ್ದಾಗ, ಈತ ಯುಧಿಷ್ಠಿರನ ಸಭೆಯಲ್ಲಿ ಸಾಂಬ ಮೊದಲಾದವರ ಜೊತೆಯಲ್ಲಿ ಉಪಸ್ಥಿತನಾಗಿರುತ್ತಿದ್ದನು (ಸಭಾ 4/33–36). ಅನಿರುದ್ಧನ ವಿಷ್ಣುರೂಪತ್ವ ಮತ್ತು ಈತನ ಮೂಲಕ ಬ್ರಹ್ಮನ ಉತ್ಪತ್ತಿ (ಭೀಷ್ಮ 65/71; ಶಾಂತಿ 340/30–31). ಅನಿರುದ್ಧ (ವಿಷ್ಣು)ನ ನಾಭಿಕಮಲದಿಂದ ಬ್ರಹ್ಮನ ಜನನ (ಶಾಂತಿ 341/15–17). (2) ವೃಷ್ಣಿವಂಶಿ ಕ್ಷತ್ರಿಯ ಈತ. ಪ್ರದ್ಯುಮ್ನ ಪುತ್ರನಲ್ಲ. ಇವರಿಬ್ಬರೂ ದ್ರೌಪದೀ ವಿವಾಹಕ್ಕೆ ಆಗಮಿಸಿದ್ದರು (ಆದಿ 185/17–20).

(3) ಮಾಂಸ ಭಕ್ಷಣೆ ತ್ಯಾಗ ಮಾಡಿದ ಒಬ್ಬ ರಾಜ (ಅನು 115/60).

(4) ಭಗವಂತನಾದ ವಿಷ್ಣುವಿನ ಒಂದು ಹೆಸರು (ಅನು 149/33).

**ಅನಿಲ** – (1) ಅಷ್ಟವಸುಗಳಲ್ಲಿ ಒಬ್ಬ. ಇವನ ತಂದೆ ಧರ್ಮ ಮತ್ತು ತಾಯಿ ಶ್ವಾಸಾ ಎಂಬವರು. ಈತನ ಪತ್ನಿಯ ಹೆಸರು ಶಿವಾ. ಈತನಿಗೆ ಮನೋಜವ ಮತ್ತು ಅವಿಜ್ಞಾತಗತಿ ಎಂಬ ಇಬ್ಬರು ಮಕ್ಕಳಿದ್ದಾರೆ (ಆದಿ 66/17–25).

(2) ಗರುಡನ ಮುಖ್ಯ ಸಂತತಿಗಳಲ್ಲಿ ಒಬ್ಬ (ಉದ್ಯೋಗ 101/9).

(3) ಶಿವನ ಒಂದು ಹೆಸರು (ಅನು 17/100).

(4) ವಿಷ್ಣುವಿನ ಒಂದು ಹೆಸರು (ಅನು 149/38).

**ಅನೀಕವಿದಾರಣ** – ಸಿಂಧುರಾಜನಾದ ಜಯ ದ್ರಥನ ಸಹೋದರ (ವನ 165/12). ಅರ್ಜುನ ನಿಂದ ಈತನ ವಧೆ (ವನ 271/27).

**ಅನೀಲ** – ಪ್ರಮುಖ ನಾಗಗಳಲ್ಲಿ ಒಬ್ಬ (ಆದಿ 35/7).

**ಅನು** – ಮಹಾರಾಜ ಯಯಾತಿಯಿಂದ ಶರ್ಮಿಷ್ಠೆಯಲ್ಲಿ ಹುಟ್ಟಿದ ಮೂವರು ಪುತ್ರರಲ್ಲಿ ಒಬ್ಬ (ಆದಿ 75/33–35). ತನ್ನ ಯೌವನವನ್ನು ಕೊಡದ ಕಾರಣ, ಈತನಿಗೆ ವೃದ್ಧಾಪ್ಯದಿಂದ ಗ್ರಸ್ತನಾಗಲು, ಅಗ್ನಿಹೋತ್ರ ತ್ಯಾಗಿಯಾಗಲು ಮತ್ತು ಯುವಕರಾಗಿದ್ದಾಗಲೇ ಇವನ ಸಂತಾನದವರು ಮರಣಹೊಂದಲು, ತಂದೆಯಿಂದ ಶಾಪ (ಆದಿ 84/25–26).

**ಅನುಕರ್ಮಾ** – ಒಬ್ಬ ವಿಶ್ವೇದೇವ (ಅನು 91/32).

**ಅನುಕರ್ಷ** – ಯುದ್ಧಕಾಲದಲ್ಲಿ ಅತ್ತಿತ್ತ ಸಂಚರಿಸುವಾಗ ಮುರಿದ ಭಾಗಗಳನ್ನು ಕೂಡಲೇ ಸರಿಪಡಿಸಲು, ರಥದ ಕೆಳಭಾಗದಲ್ಲಿಟ್ಟಿರುವ ಬಿಡಿಭಾಗಗಳು (ಉದ್ಯೋಗ 155 ಅಧ್ಯಾಯ).

**ಅನುಕ್ರಮಣಿಕಾ ಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ, ಮೊದಲನೇ ಅಧ್ಯಾಯ.

**ಅನುಗೀತಾಪರ್ವ** – ಆಶ್ವಮೇಧಿಕ ಪರ್ವದ ಹದಿನಾರನೇ ಅಧ್ಯಾಯದಿಂದ ತೊಂಭತ್ತೆರಡನೇ ಅಧ್ಯಾಯದ ವರೇಗಿನ ಒಂದು ಪರ್ವ.

**ಅನುಗೋಪ್ತಾ** – ಒಬ್ಬ ವಿಶ್ವೇದೇವ (ಅನು 91/37).

**ಅನುಚಕ್ರ** – ಪ್ರಜಾಪತಿ ತ್ವಷ್ಟಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇವನ ಇನ್ನೊಬ್ಬ ಒಡನಾಡಿ ಚಕ್ರ (ಶಲ್ಯ 45/40).

**ಅನುದಾತ್ತ** (ಸ್ವರ) – (1) ಪಾಂಚಜನ್ಯ ಅಗ್ನಿಯ ಮೂಲಕ ತನ್ನ ಎರಡೂ ಭುಜಗಳಿಂದ ಸೃಷ್ಟಿಸಲ್ಪಟ್ಟ ಪ್ರಾಕೃತ ಮತ್ತು ವೈಕೃತ ಭೇದಗಳುಳ್ಳ ಅನುದಾತ್ತ ಎಂಬ ಹೆಸರಿನ ಸ್ವರ (ವನ 220/5–8).

(2) ಪಾಂಚಜನ್ಯನಿಂದ ಪಿತೃಗಳಿಗೋಸ್ಕರ ಉತ್ಪನ್ನಗೊಳಿಸಲ್ಪಟ್ಟ ಐವರು ಪುತ್ರರಲ್ಲಿ ಒಬ್ಬ ಪ್ರಾಣನ ಅಂಶದಿಂದ ಈತನ ಉತ್ಪತ್ತಿಯಾಗಿತ್ತು (ವನ 220/8–10).

**ಅನುದ್ಯೂತ** – ಕೌರವ ಪಾಂಡವರು ವನವಾಸವನ್ನು ಪಣವಾಗಿಟ್ಟು ಎರಡನೇ ಬಾರಿ ಆಡಿದ ಜೂಜು (ಸಭಾ 76/10–24).

**ಅನುದ್ಯೂತ ಪರ್ವ** – ಸಭಾಪರ್ವದ ಅಂತರ್ಗತವಾಗಿರುವ ಅಧ್ಯಾಯ 74ರಿಂದ 81ರ ತನಕದ ಭಾಗ.

**ಅನುಪಾವೃತ್ತ** – ಒಂದು ಭಾರತೀಯ ಜನಪದದ ಹೆಸರು (ಭೀಷ್ಮ 9/48).

**ಅನುಮತಿ** – ಕಳಾರಹಿತವಾಗಿರುವ, ಅಂದರೆ ಚತುರ್ದಶಿಯುಕ್ತ ಹುಣ್ಣಿಮೆಯ ಅಧಿಷ್ಠಾತ್ರಿ ದೇವಿ (ಶಲ್ಯ 75/13).

**ಅನುಯಾಯಿ** – ಧೃತರಾಷ್ಟ್ರನ ನೂರು ಮಂದಿ ಮಕ್ಕಳಲ್ಲಿ ಒಬ್ಬ (ಆದಿ 67/102). ಇವನ ಇನ್ನೊಂದು ಹೆಸರು 'ಅಗ್ರಯಾಯಿ' (ಆದಿ 116/11). ಭೀಮಸೇನನಿಂದ ಕೊಲ್ಲಲ್ಪಡುವ ಸಂದರ್ಭದಲ್ಲಿ 'ಅನುಯಾಯಿ' ಎಂಬ ಹೆಸರೇ ಉಲ್ಲೇಖಿಸಲ್ಪಟ್ಟಿದೆ (ದ್ರೋಣ 157/17–20).

**ಅನುವಿಂದ** – (1) ಧೃತರಾಷ್ಟ್ರನ ಒಂದು ನೂರು ಮಂದಿ ಪುತ್ರರಲ್ಲಿ ಒಬ್ಬ (ಆದಿ 67/94). ಘೋಷಯಾತ್ರೆಯ ಸಂದರ್ಭದಲ್ಲಿ ಈತನೂ ದುರ್ಯೋಧನನ ಜೊತೆಯಲ್ಲಿ ಗಂಧರ್ವರಿಂದ ಬಂಧಿಸಲ್ಪಟ್ಟಿದ್ದ (ವನ 242/8). ಭೀಮಸೇನನಿಂದ ಈತನ ವಧೆ (ದ್ರೋಣ 127/66).

(2) ಅವಂತಿಯ ರಾಜಕುಮಾರ ವಿಂದನ ಸಹೋದರ. ಈ ಸಹೋದರರಿಬ್ಬರೂ ದಕ್ಷಿಣ ವಿಜಯದ ಸಂದರ್ಭದಲ್ಲಿ ಸಹದೇವನಿಂದ ಪರಾಜಿತರಾಗಿದ್ದರು (ಸಭಾ 31/10). ಈ ಇಬ್ಬರೂ ಬಂಧುಗಳು ಒಂದು ಅಕ್ಷೌಹಿಣಿ ಸೇನಾಸಮೇತರಾಗಿ ದುರ್ಯೋಧನನ ಸಹಾಯಕ್ಕೆ ಹೋದರು (ಉದ್ಯೋಗ 19/24–25). ಪ್ರಥಮದಿನದ ಸಂಗ್ರಾಮದಲ್ಲಿ ಕುಂತೀಭೋಜನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/72–75). ಅರ್ಜುನನ ಪುತ್ರ ಇರಾವಂತನಿಂದ ಪರಾಜಯ (ಭೀಷ್ಮ 83/18–22) ಭೀಮ ಮತ್ತು ಅರ್ಜುನರೊಂದಿಗೆ ಯುದ್ಧ (ಭೀಷ್ಮ 113–114 ಅಧ್ಯಾಯ). ಚೇಕಿತಾನನೊಂದಿಗೆ ಯುದ್ಧ (ದ್ರೋಣ 14/48). ವಿರಾಟನೊಂದಿಗೆ ಯುದ್ಧ (ದ್ರೋಣ 25/20–21). ಅರ್ಜುನನಿಂದ ಈತನ ವಧೆ (ದ್ರೋಣ 399/27–29).

(3) ಕೇಕಯರಾಜಕುಮಾರ ಕೌರವ ಪಕ್ಷದ ಯೋಧ. ಸಾತ್ಯಕಿಯಿಂದ ಈತನ ವಧೆ (ಕರ್ಣ 13/21).

**ಅನುಶಾಸನ ಪರ್ವ** – ಮಹಾಭಾರತದ ಒಂದು

ಪ್ರಾಮುಖ್ಯ ಪರ್ವ.

**ಅನುಷ್ಣಾ** – ಒಂದು ನದಿಯ ಹೆಸರು (ಭೀಷ್ಮ 9/24).

**ಅನುಹ್ಲಾದ** – ಹಿರಣ್ಯಕಶಿಪುವಿನ ಮೂರನೇ ಮಗ (ಆದಿ 65/18). ಈತನೇ ಶಿಶುಪಾಲಪುತ್ರ ದೃಷ್ಟಕೇತುವಿನ ರೂಪದಲ್ಲಿ ಹುಟ್ಟಿದನು (ಆದಿ 67/7).

**ಅನೂಚಾನಾ** – ಒಬ್ಬ ಅಪ್ಸರೆ. ಈಕೆ ಇತರ ಅಪ್ಸರೆಯರೊಂದಿಗೆ ಅರ್ಜುನನ ಜನ್ಮದಿನೋತ್ಸವ ದಂದು ಆಗಮಿಸಿ ನರ್ತಿಸಿದ್ದಳು (ಆದಿ 122/61).

**ಅನೂದರ** – ಧೃತರಾಷ್ಟ್ರನ ನೂರು ಮಂದಿ ಮಕ್ಕಳಲ್ಲಿ ಒಬ್ಬ (ಆದಿ 67/99; 116/8).

**ಅನೂಪ** – ಒಂದು ಪ್ರಾಚೀನ ಜನಪದ (ಸಭಾ 51/24). (ಕೆಲವರ ಅಭಿಪ್ರಾಯದಂತೆ ನೀಮಾಡದ ನರ್ಮದಾ ತಟದ ಪ್ರದೇಶ ದಕ್ಷಿಣ ಮಾಳವವೇ ಅನೂಪದೇಶ (ಹಿಂದೀ ಮಹಾಭಾರತ ಪರಿಶಿಷ್ಟ – 5).

**ಅನೂಪಪಕ** – ಅನೂಪದೇಶ ನಿವಾಸಿಯಾದ ಯೋಧ (ಭೀಷ್ಮ 50/47).

**ಅನೂಪಪತಿ** – ಸಮುದ್ರ ಕರಾವಳಿಯ ಅನೂಪ ದೇಶದ ರಾಜಾಕಾರ್ಯವೀರ್ಯ (ವನ 116/19).

**ಅನೂಪರಾಜ** – ಅನೂಪದೇಶದ ರಾಜ (ಸಭಾ 4/28). ('ಅನೂಪರಾಜೋ ದುರ್ಧರ್ಷಃ' ಈ ವಾಕ್ಯಾಂಶವನ್ನು ಕೆಲವರು 'ಅನೂಪರಾಜ ದುರ್ಧರ್ಷ'ನೆಂದು ಅರ್ಥೈಸಿದ್ದಾರೆ ಅಂದರೆ ಅನೂಪರಾಜನ ಹೆಸರು ದುರ್ಧರ್ಷನೆನ್ನುತ್ತಾರೆ ಬೇರೆ ಕೆಲವರು 'ದುರ್ಧರ್ಷ' ಎಂಬುದು ಅನೂಪರಾಜನಿಗೆ ವಿಶೇಷಣವೆನ್ನುತ್ತಾರೆ).

**ಅನೇನಾ** – (1) ಪುರೂರವನ ಪುತ್ರ ರಾಜಾ 'ಆಯು'ವಿನಿಂದ ಸ್ವರ್ಭಾನುಕುಮಾರಿಯಲ್ಲಿ ಹುಟ್ಟಿದ ಐದನೆಯ ಮಗ. ಈತನ ಇತರ ನಾಲ್ಕು ಮಂದಿ ಸಹೋದರರು – ನಹುಷ, ವೃದ್ಧ ಶರ್ಮಾ, ರಜಿ ಮತ್ತು ಗಯ (ಆದಿ 75/24-26).

(2) ಇಕ್ಷ್ವಾಕು ವಂಶದ ಮಹಾರಾಜ ಕಕುತ್ಸ್ಥನ ಮಗ (ವನ 202/2).

**ಅಂತಕ (ಅನ್ತಕ)**– ಹದಿನಾಲ್ಕು ಮಂದಿ ಯಮರಲ್ಲಿ ಒಬ್ಬ. ಈತ ಪಿತೃಗಳ ಪರವಾಗಿ, ಪೃಥ್ವಿಯ ದೋಹನದಲ್ಲಿ (ಹಾಲು ಹಿಂಡುವಾಗ) ಗವಳಿಗ(ದೋಗ್ಧ)ನಾಗಿದ್ದನು (ದ್ರೋಣ 69/26).

**ಅಂತಚಾರ (ಅನ್ತಚಾರ)** – ಒಂದು ಪ್ರಾಚೀನ ಭಾರತೀಯ ಜನಪದ (ಭೀಷ್ಮ 9/68).

**ಅಂತರ್ಗಿರಿ (ಅನ್ತರ್ಗಿರಿ)** – ಹಿಮಾಲಯದ ಒಳಗಿನ ಸಾಲಿನಲ್ಲಿರುವ ಒಂದು ದೇಶ (ಭೀಷ್ಮ) ಈ ದೇಶದ ಮೇಲೆ ಅರ್ಜುನನ ವಿಜಯ (ಸಭಾ 27/3).

**ಅಂತರ್ಧಾನ (ಅನ್ತರ್ಧಾನ)** – ಕುಬೇರನ ಒಂದು ಅಸ್ತ್ರ (ವನ 41/38).

**ಅಂತರ್ಧಾಮಾ (ಅನ್ತರ್ಧಾಮಾ)** – ಮನುವಂಶಿ ಅಂಗನ ಮಗ ಮತ್ತು ಹವಿರ್ಧಾಮಾನ ತಂದೆ (ಅನು 147/23).

**ಅಂತರ್ಯೋಗ (ಅನ್ತರ್ಯೋಗ)** – ಕಿವಿ, ಕಣ್ಣು ಇತ್ಯಾದಿ ಹತ್ತು ಹೋತೃಗಳ ಮೂಲಕ ಸಾಧ್ಯ ವಾಗುವ ಆಧ್ಯಾತ್ಮಿಕ ಯಜ್ಞ (ಆಶ್ವ ಅ 21-27).

**ಅಂತರ್ವೃತ್ತಿ (ಅನ್ತರ್ವೃತ್ತಿ)** – ಸ್ವರ್ಗಪ್ರಾಪ್ತಿ ಮಾಡಿ ಸುವ ಆಂತರಿಕ ಆಚರಣೆ (ಅನು 144/4-17 ಮತ್ತು 29/40).

**ಅನ್ತವಾಸ** – ಒಂದು ಪ್ರಾಚೀನ ದೇಶ (ಸಭಾ 51/17).

**ಅನ್ಧ** – (1) ಒಬ್ಬ ಕಶ್ಯಪವಂಶದ ನಾಗ (ಉದ್ಯೋಗ 103/16).

(2) ಒಂದು ಕಣ್ಣಿಲ್ಲದ ಹಿಂಸ್ರ ಜೀವಿ. ಅದು ಎಲ್ಲಾ ಪ್ರಾಣಿಗಳನ್ನು ವಿನಾಶಗೊಳಿಸುವ ವರವನ್ನು ಪಡೆದಿತ್ತು. ಆದುದರಿಂದಲೇ ಬ್ರಹ್ಮನು ಅದನ್ನು ಕುರುಡಾಗಿಸಿದ ಅದನ್ನು ಕೊಂದು ವ್ಯಾಧನೊಬ್ಬ ಸ್ವರ್ಗಲೋಕದ ಅಧಿಕಾರಿಯಾಗಿದ್ದನು (ಕರ್ಣ 69/41-45).

**ಅನ್ಧಕ** – (1) ಯದುವಂಶದಲ್ಲಿ ಹುಟ್ಟಿದ ಅಂಧಕನಿಂದ ಪ್ರಸಿದ್ಧವಾದ ಕುಲಪರಂಪರೆಯಲ್ಲಿ ಜನ್ಮವೆತ್ತಿದ ಕ್ಷತ್ರಿಯರು. ಇವರಿಂದ ಅರ್ಜುನನಿಗೆ ಸತ್ಕಾರ (ಆದಿ 217/18-19).

(2) ಒಬ್ಬ ರಾಜ. ಯುದ್ಧಕಾಲದಲ್ಲಿ ಸಹಾಯ ಕ್ಕಾಗಿ ಪಾಂಡವ ಪಕ್ಷದಿಂದ ಆತನಿಗೆ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/12).

(3) ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿದರೆ ಪುರುಷಮೇಧ ಯಜ್ಞದ ಫಲಪ್ರಾಪ್ತಿಯಾಗುವು ದೆಂದು ಹೇಳಲಾಗಿದೆ (ಅನು 25/32-33).

(4) ಒಬ್ಬ ಅಸುರ. ಅವನು ಭಗವಂತನಾದ ಶಂಕರನಿಂದ ಕೊಲ್ಲಲ್ಪಟ್ಟಿದ್ದ (ಅನು 14/214–215).

**ಅನ್ಧಕಾರ** – ಕ್ರೌಂಚದ್ವೀಪದ ಒಂದು ಪರ್ವತ (ಭೀಷ್ಮ 12/18).

**ಅನ್ಧಕಾರಕ** – ಕ್ರೌಂಚದ್ವೀಪದ ಒಂದು ಜನಪದ (ಭೀಷ್ಮ 12/22).

**ಅನ್ಧ್ರ** – (1) ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/49).

(2) ಅಂಧ್ರ ದೇಶದ ಒಬ್ಬ ಯೋಧ (ದ್ರೋಣ 4/8).

**ಅನ್ಧ್ರಕ ಅಥವಾ (ಆನ್ಧ್ರಕ)** – (1) ಅಂಧ್ರದೇಶದ ಒಬ್ಬ ರಾಜ. ಈತ ಮಯನಿರ್ಮಿತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/24). ಈತ ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಆಗಮಿಸಿದ್ದನು (ಸಭಾ 34/11).

(2) ಅಂಧ್ರದೇಶವಾಸಿ ಮನುಷ್ಯ ಅಥವಾ ಯೋಧ. ಪಾಂಡ್ಯರಾಜನು ಮಹಾಭಾರತ ಯುದ್ಧದಲ್ಲಿ ಈತನನ್ನು ಸೋಲಿಸಿದ್ದನು (ಕರ್ಣ 20/10–11). ಅಂಧ್ರ, ಪುಲಿಂದ ಇತ್ಯಾದಿ ದೇಶಗಳ ಯೋಧರನ್ನು ಕೊಲ್ಲುವಂತೆ ಶ್ರೀಕೃಷ್ಣನು ಅರ್ಜುನನನ್ನು ಪ್ರೋತ್ಸಾಹಿಸಿದನು (ಕರ್ಣ 73/19–21).

(3) ಜಾತಿ ವಿಶೇಷ. ದಕ್ಷಿಣ ಭಾರತದ ಆಂಧ್ರ, ಪುಲಿಂದ ಇತ್ಯಾದಿ ಜಾತಿಗಳನ್ನು "ಮ್ಲೇಚ್ಛ"ರೆಂದು ಹೇಳಲಾಗಿದೆ (ಶಾಂತಿ 207/42).

**ಅನ್ಯಗೋಚರಿ** – ಸ್ಕಂದನ ಅನುಯಾಯಿ ಮಾತೃಕೆ (ಶಲ್ಯ 46/27).

**ಅನ್ವಗ್ಭಾನು** – ಮಿಶ್ರಕೇಶಿ ಅಪ್ಸರೆಯ ಗರ್ಭದಿಂದ ಜನ್ಮವೆತ್ತಿದ ರೌದ್ರಾಶ್ವನ ಪುತ್ರ, ಈತನಿಗೆ ಇತರ ಎರಡು ಹೆಸರುಗಳಿವೆ. ಋಚೇಯು ಮತ್ತು ಅನಾದೃಷ್ಟಿ (ಆದಿ 94/8–12).

**ಅಪರಕಾಶಿ** – ಭಾರತ ವರ್ಷದ ಒಂದು ಜನಪದ (ಭೀಷ್ಮ 9/42).

**ಅಪರಕುಂತಿ** – ಭಾರತ ವರ್ಷದ ಒಂದು ಜನಪದ (ಭೀಷ್ಮ 9/43).

**ಅಪರನಂದಾ** – ಒಂದು ನದಿ. ಅರ್ಜುನನು ಅದರ ದರ್ಶನ ಮಾಡಿದ್ದನು (ಆದಿ 214/6–7). ಯುಧಿಷ್ಠಿರನೂ ಅಲ್ಲಿಗೆ ಯಾತ್ರೆ ಮಾಡಿದ್ದನು (ವನ 110/1). ದೈವವಂಶ – ಋಷಿವಂಶಗಳ ಜೊತೆಯಲ್ಲಿ, ಕೀರ್ತನಯೋಗ್ಯ ಪುಣ್ಯನದಿಗಳಲ್ಲಿ, "ಅಪರನಂದಾ"ದ ಹೆಸರೂ ಬಂದಿದೆ (ಅನು 165/28).

**ಅಪರಮ್ಲೇಚ್ಛ** – ಒಂದು ಭಾರತೀಯ ಜನಪದ (ಭೀಷ್ಮ 9/65).

**ಅಪರವಲ್ಲವ** – ಒಂದು ಭಾರತೀಯ ಜನಪದ (ಭೀಷ್ಮ 9/62).

**ಅಪರಸೇಕ** – ಮಧ್ಯಭಾರತದ ಒಂದು ಜನಪದ (ಸಭಾ 31/9).

**ಅಪರಾಜಿತ** – (1) ಕಶ್ಯಪವಂಶದ ಒಂದು ನಾಗ (ಆದಿ 35/13) (ಉದ್ಯೋಗ 103–15).

(2) ಒಬ್ಬ ಕ್ಷತ್ರಿಯ ರಾಜ. ಈತ ಕಾಲೇಯರೆಂಬ ಹೆಸರಿನ ದೈತ್ಯರಲ್ಲಿ ಒಬ್ಬನ ಅಂಶದಿಂದ ಜನ್ಮವೆತ್ತಿದವನು (ಆದಿ 67/49). ಇವನಿಗೆ ಪಾಂಡವರ ಪಕ್ಷದಿಂದ ಯುದ್ಧಕ್ಕೆ ಆಮಂತ್ರಣ ದೊರಕಿತ್ತು (ಉದ್ಯೋಗ 4/21).

(3) ಕೌರವ ಧೃತರಾಷ್ಟ್ರನ ಒಬ್ಬ ಮಗ (ಆದಿ 67/101). ಭೀಮಸೇನನಿಂದ ಈತನ ವಧೆ (ಭೀಷ್ಮ 88/21–22).

(4) ಕುರುಪೌತ್ರನೂ ಜನಮೇಜಯನ ಕುಮಾರನೂ ಆದ ಧೃತರಾಷ್ಟ್ರನ ಕುಂಡಿಕನೇ ಮೊದಲಾದ ಒಂಭತ್ತು ಮಂದಿ ಪುತ್ರರಲ್ಲಿ ಒಬ್ಬ (ಆದಿ 94/50 –59).

(5) ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/20). ಆದಿಪರ್ವದ 66ನೇ ಅಧ್ಯಾಯದಲ್ಲಿ ಸಿಗುವ ಏಕಾದಶ ರುದ್ರರ ಹೆಸರು ಶಾಂತಿ ಪರ್ವದ ಹೆಸರುಗಳಿಂದ ಬೇರೆಯಾಗಿದೆ. ಅವುಗಳಲ್ಲಿ 'ಅಪರಾಜಿತ' ಇಲ್ಲ.

(6) ಭಗವಂತನಾದ ವಿಷ್ಣುವಿನ ಒಂದು ಹೆಸರು (ಅನು 149/89).

**ಅಪರಾಂತ** – ಒಂದು ಪ್ರಾಚೀನ ಜನಪದ. ಪಶ್ಚಿಮ ಸಮುದ್ರದ ಕರಾವಳಿಯಲ್ಲಿರುವ ದಕ್ಷಿಣ ಭಾರತದ ಒಂದು ಪ್ರದೇಶ ಇದು ಪಶ್ಚಿಮ ಘಟ್ಟಗಳ ಪಶ್ಚಿಮದ ಸಮುದ್ರ ದಡದಲ್ಲಿದೆ (ಭೀಷ್ಮ 9/47). ಶೂರ್ಪಾರಕ ಕ್ಷೇತ್ರವೆಂದು ಇದರ ಇನ್ನೊಂದು ಹೆಸರು (ಶಾಂತಿ 49/67).

**ಅಪಾಂತರತಮಾ** – ಶ್ರೀ ನಾರಾಯಣನ 'ಭೋ' ಶಬ್ದೋಚ್ಚಾರಣೆಯಿಂದ ಪ್ರಕಟಗೊಂಡ ಒಬ್ಬ ಮಹಾತ್ಮ, ಭಗವಂತನ ವಾಕ್ ಅಥವಾ ಸರಸ್ವತಿ

ಯಿಂದ ಪ್ರಾದುರ್ಭೂತನಾದ ಕಾರಣ ಇವನ ಹೆಸರು ಸಾರಸ್ವತನೆಂದಾಯಿತು. ಈತನೇ ಅಪಾಂತರತಮಾ ಎಂಬ ಹೆಸರಿನಿಂದ ಪ್ರಖ್ಯಾತನಾದನು (ಶಾಂತಿ 349/38–39). ಈತ ತ್ರಿಕಾಲಜ್ಞನಾಗಿದ್ದನು. ವೇದಗಳ ವ್ಯಾಖ್ಯಾನಕ್ಕಾಗಿ ಭಗವಂತನು ಈತನಿಗೆ ಋಕ್, ಸಾಮಾದಿ ಶ್ರುತಿಗಳ ಸಂಗ್ರಹಕ್ಕೆ ಆದೇಶ ನೀಡಿದನು (ಶಾಂತಿ 349/40–41). ಸ್ವಾಯಂಭುವ ಮನ್ವಂತರದಲ್ಲಿ ಈತನ ಮೂಲಕ ವೇದಗಳ ವಿಭಾಗವಾಯಿತು. ಇದರಿಂದ ಪ್ರಸನ್ನನಾದ ಭಗವಂತ, ಆತನಿಗೆ ಎಲ್ಲಾ ಮನ್ವಂತರಗಳಲ್ಲಿ ಧರ್ಮಪ್ರವರ್ತಕನಾಗಿರುವಂತೆ ಆಶೀರ್ವಾದ ಮಾಡಿದನು ಮತ್ತು ಭವಿಷ್ಯದಲ್ಲಿ ವಸಿಷ್ಠವಂಶದ ಪರಾಶರನಿಗೆ, ಜ್ಞಾನಿ, ತಪೋಬಲಸಂಪನ್ನನಾದ ಪುತ್ರರೂಪದಲ್ಲಿ ಅವತಾರವೆತ್ತುವಂತೆ ತಿಳಿಸಿದನು (ಶಾಂತಿ 349/42–49).

**ಅಪ್ಸುಜಾತಾ** – ಸ್ಕಂದನ ಅನುಚರಳಾದ ಮಾತೃಕೆ (ಶಲ್ಯ 46/4).

**ಅಪ್ಸುಹೋಮ್ಯ** – ಒಬ್ಬ ಪ್ರಾಚೀನ ಋಷಿ. ಆತ ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/12).

**ಅಬಲ** – ಪಾಂಚಜನ್ಯನ ಮೂಲಕ ಸೃಷ್ಟಿಸಲ್ಪಟ್ಟ ಹದಿನೈದು ಮಂದಿ ಉತ್ತರದೇವರಲ್ಲಿ (ವಿನಾಯಕರು) ಒಬ್ಬ (ವನ 220/11).

**ಅಬಂಧುದಾಯಾದ** – ಕುಟುಂಬದವನಲ್ಲದಿದ್ದರೂ ಉತ್ತರಾಧಿಕಾರಿಯಾದ ಮಗ (ಆದಿ 119/32). (ಆರು ರೀತಿಯ ಪುತ್ರರು 'ಅಬಂಧು ದಾಯಾದ' ರೆಂದು ಹೇಳಲ್ಪಡುತ್ತಾರೆ. ಅವರ ಹೆಸರು ಈ ಪ್ರಕಾರವಿದೆ. (1) ದತ್ತ (ತಂದೆ ತಾಯಿಯರಿಂದ ಸ್ವಯಂ ಸಮರ್ಪಿಸಲ್ಪಟ್ಟವನು. (2) ಕ್ರೀತ (ಹಣ ಇತ್ಯಾದಿ ಕೊಟ್ಟುಕೊಂಡು ಕೊಳ್ಳಲ್ಪಟ್ಟವನು. (3) ಕೃತ್ರಿಮ – (ಸ್ವಯಂ) 'ನಾನು ನಿಮ್ಮ ಮಗ' ಎಂದು ಹೇಳಿ ಸಮೀಪ ಬಂದವನು. (4) ಸಹೋಢ – (ಕನ್ಯಾವಸ್ಥೆಯಲ್ಲಿಯೇ ಗರ್ಭವತಿಯಾಗಿ ವಿವಾಹವಾಗಲ್ಪಟ್ಟು ಆಕೆಯಿಂದ ಹುಟ್ಟಿದವನು). (5) ಜ್ಞಾತಿರೇತಾ – (ತನ್ನ ಕುಲದ ಪುತ್ರ). (6) ಹೀನ ಜಾತಿಯವಳ ಗರ್ಭದಿಂದ ಹುಟ್ಟಿದವ – ಇವರು ಕುಟುಂಬದವರಲ್ಲದಿದ್ದರೂ ಪುತ್ರತ್ವ ಪಡೆದು ಸಂಪತ್ತಿಗೆ ಅಧಿಕಾರಿಗಳಾಗುತ್ತಾರೆ ಆದುದರಿಂದ ಇವರನ್ನು 'ಅಬಂಧುದಾಯಾದ' ರೆನ್ನುತ್ತಾರೆ.

**ಅಭಯ** – (1) ಧೃತರಾಷ್ಟ್ರನ ಒಬ್ಬ ಮಗ (ಆದಿ 67/104). ಭೀಮಸೇನನಿಂದ ಇವನ ವಧೆ (ದ್ರೋಣ 127/62).
(2) ಒಂದು ಪ್ರಾಚೀನ ಜನಪದ ಭೀಮಸೇನನು ಅದನ್ನು ಗೆದ್ದಿದ್ದನು (ಸಭಾ 30/9).

**ಅಭಿಜಿತ್** – (1) ದಿನದ ಎಂಟನೇ ಮುಹೂರ್ತ. ಮುಹೂರ್ತ ವಿಶೇಷ ಈ ಮುಹೂರ್ತದಲ್ಲಿ ಯುಧಿಷ್ಠಿರನ ಜನ್ಮ (ಆದಿ 122/6).
(2) ರೋಹಿಣಿಯ ತಂಗಿ. ಒಂದು ನಕ್ಷತ್ರ (ವನ 230/8) ಅಭಿಜಿತ್ ನಕ್ಷತ್ರದ ಯೋಗದಲ್ಲಿ ಜೇನು ಮತ್ತು ತುಪ್ಪ ದಾನ ಮಾಡುವುದರಿಂದ ಸ್ವರ್ಗಪ್ರಾಪ್ತಿ (ಅನು 64/27).

**ಅಭಿಭೂ** – ಕಾಶೀರಾಜನ ಪುತ್ರ. ಪಾಂಡವ ಪಕ್ಷದ ಯೋಧ (ಉದ್ಯೋಗ 151/63). ವಸುದಾನನ ಪುತ್ರನಿಂದ ಈತನ ವಧೆಯ ಕುರಿತು ವರ್ಣನೆ (ಕರ್ಣ 6/23–24). ಈತನ ಕುದುರೆಗಳ ವರ್ಣನೆ (ದ್ರೋಣ 23/26–27).

**ಅಭಿಮನ್ಯು** – ಅರ್ಜುನನಿಂದ ಸುಭದ್ರೆಯಲ್ಲಿ ಹುಟ್ಟಿದ ಒಬ್ಬ ವೀರ ರಾಜಕುಮಾರ (ಆದಿ 63/121; 220/65). ಈತ ಚಂದ್ರನ ಮಗ 'ವರ್ಚಾ' ಎಂಬವನ ಅವತಾರವಾಗಿದ್ದನು (ಆದಿ 67/113). ಹದಿನಾರು ವರ್ಷದ ತನಕ ಮಾತ್ರ ಈತ ಭೂಮಿಯಲ್ಲಿರಲು ಕಾರಣ (ಆದಿ 67/113–125). ಈತನಿಗೆ 'ಅಭಿಮನ್ಯು' ಎಂಬ ಹೆಸರಾಗಲು ಕಾರಣ (ಆದಿ – 220/67). ಅರ್ಜುನನಿಂದ ಈತ ಸಮಸ್ತ ಅಸ್ತ್ರವಿದ್ಯೆಗಳನ್ನೂ ಅಧ್ಯಯನ ಮಾಡಿದನು (ಆದಿ 220/72). ತಾಯಿಯ ಸಂಗಡ ಮಾವನಾದ ಶ್ರೀಕೃಷ್ಣನ ಜೊತೆಯಲ್ಲಿ ಅರಣ್ಯದಿಂದ ದ್ವಾರಕೆಗೆ ಹೋದನು (ವನ 22/47). ಪ್ರದ್ಯುಮ್ನನಿಂದ ಈತನಿಗೆ ಅಸ್ತ್ರಶಿಕ್ಷಣ (ವನ 183/27). ಅಭಿಮನ್ಯುವಿನಿಂದ ದ್ರೌಪದೀಕುಮಾರರಿಗೆ ಗದೆ ಮತ್ತು ಕತ್ತಿ ಗುರಾಣಿಗಳ ವರಸೆಯ ಶಿಕ್ಷಣ (ವನ 183/29). ಮಾತೆಯೊಂದಿಗೆ ಅಭಿಮನ್ಯು ಉಪಪ್ಲವ್ಯ ನಗರಕ್ಕೆ ಆಗಮಿಸಿದನು (ವಿರಾಟ 72/22). ಉತ್ತರೆಯೊಡನೆ ಅಭಿಮನ್ಯುವಿನ ವಿವಾಹ (ವಿರಾಟ 72/35). ಸಂಜಯನಿಂದ ಈತನ ಪರಾಕ್ರಮ

ಮತ್ತು ಇಂದ್ರಿಯ ಸಂಯಮದ ವರ್ಣನೆ (ಉದ್ಯೋಗ 50/43). ಪ್ರಥಮ ದಿನ ಯುದ್ಧದಲ್ಲಿ ಕೋಸಲ ರಾಜ ಬೃಹದ್ಬಲನೊಡನೆ ದ್ವಂದ್ವಯುದ್ಧ (ಭೀಷ್ಮ 45/14–17). ಭೀಷ್ಮ ನೊಡನೆ ಭಯಂಕರ ಯುದ್ಧಮಾಡಿ, ಅವನ ಧ್ವಜವನ್ನು ಕತ್ತರಿಸಿದನು (ಭೀಷ್ಮ 47/9–25). ಭೀಷ್ಮನೊಡನೆ ಹೋರಾಡುತ್ತಿದ್ದ ಶ್ವೇತನ ಸಹಾಯ ಕ್ಕಾಗಿ ಈತನ ಆಗಮನ (ಭೀಷ್ಮ 48/101). ಧೃಷ್ಟದ್ಯುಮ್ನನಿಂದ ರಚಿಸಲ್ಪಟ್ಟ ಕ್ರೌಂಚವ್ಯೂಹದಲ್ಲಿ ಈತನ ಸ್ಥಾನ ಸ್ವೀಕಾರ (ಭೀಷ್ಮ 50/50). ಭೀಷ್ಮನ ಮೇಲೆ ಆಕ್ರಮಣ ನಡೆಸುತ್ತಿದ್ದ ಅರ್ಜುನನಿಗೆ ಸಹಾಯ (ಭೀಷ್ಮ 52/30; 60/27–25). ಎರಡನೇ ದಿನದ ಯುದ್ಧದಲ್ಲಿ ಲಕ್ಷ್ಮಣನೊಡನೆ ಯುದ್ಧ (ಭೀಷ್ಮ 55/8–13). ಅರ್ಜುನನಿಂದ ನಿರ್ಮಿಸಲ್ಪಟ್ಟ ಅರ್ಧಚಂದ್ರವ್ಯೂಹ ದಲ್ಲಿ ಸ್ಥಾನಗ್ರಹಣ (ಭೀಷ್ಮ 56/116). ಗಾಂಧಾರ ರೊಡನೆ ಯುದ್ಧ (ಭೀಷ್ಮ 58/7). ಈತನ ಅದ್ಭುತ ಪರಾಕ್ರಮ (ಭೀಷ್ಮ 61/1–11). ಶಲ್ಯನ ಮೇಲೆ ಆಕ್ರಮಣ ಮತ್ತು ಆನೆಯ ಸಹಿತ ಮಗಧರಾಜ(ಜಯತ್ಸೇನ)ನ ವಧೆ (ಭೀಷ್ಮ 62/ 13–48). ಭೀಮನಿಗೆ ಸಹಾಯ (ಭೀಷ್ಮ 63, 64,69 ಮತ್ತು 94). ಲಕ್ಷ್ಮಣನೊಡನೆ ಯುದ್ಧ. ಆತನ ಪರಾಜಯ (ಭೀಷ್ಮ 73/31–37). ಅಭಿಮನ್ಯುವನ್ನು ಮುಂದಿಟ್ಟುಕೊಂಡು ಕೇಕಯ ರಾಜಕುಮಾರರಿಂದ ಶತ್ರುಸೇನೆಯ ಮೇಲೆ ಆಕ್ರಮಣ (ಭೀಷ್ಮ 77/58–61). ವಿಕರ್ಣನ ಮೇಲೆ ವಿಜಯ (ಭೀಷ್ಮ 78/21). ಈತನಿಂದ ಚಿತ್ರಸೇನ, ವಿಕರ್ಣ ಮತ್ತು ದುರ್ಮರ್ಷಣರ ಪರಾಜಯ (ಭೀಷ್ಮ 94/40–42). ಧೃಷ್ಟ ದ್ಯುಮ್ನನ ಶೃಂಗಾಟಕವ್ಯೂಹದಲ್ಲಿ ಸ್ಥಾನಗ್ರಹಣ (ಭೀಷ್ಮ 87/21). ಭಗದತ್ತನೊಡನೆ ಯುದ್ಧ (ಭೀಷ್ಮ 95/40). ಅಂಬಷ್ಠನ ಪರಾಜಯ (ಭೀಷ್ಮ 96/39–40). ಅಲಂಬುಸನೊಡನೆ ಘೋರ ಯುದ್ಧ (ಭೀಷ್ಮ 100ನೇ ಅಧ್ಯಾಯ). ಇವನಿಂದ ಅಲಂಬುಸನ ಪರಾಜಯ (ಭೀಷ್ಮ 101/28–29). ಚಿತ್ರಸೇನನ ಪರಾಜಯ (ಭೀಷ್ಮ 104/22). ಸುದಕ್ಷಿಣನೊಡನೆ ದ್ವಂದ್ವ ಯುದ್ಧ (ಭೀಷ್ಮ 110/15). ಸುದಕ್ಷಿಣನೊಡನೆ ದ್ವಂದ್ವ ಯುದ್ಧ (ಭೀಷ್ಮ 111/18–21). ದುರ್ಯೋಧನ ನೊಡನೆ ಯುದ್ಧ (ಭೀಷ್ಮ 116/1–8). ಬೃಹದ್ಬಲ ನೊಡನೆ ಯುದ್ಧ (ಭೀಷ್ಮ 116/30–36). ಭೀಷ್ಮನ ಮೇಲೆ ಆಕ್ರಮಣ (ಭೀಷ್ಮ 118/40). ಅರ್ಜುನನ ರಕ್ಷಣೆಗಾಗಿ ಯುದ್ಧ ಮಾಡಿದುದು (ಭೀಷ್ಮ 119/21). ಧೃತರಾಷ್ಟ್ರನಿಂದ ಈತನ ಪರಾಕ್ರಮದ ವರ್ಣನೆ (ದ್ರೋಣ 10/47–52). ಪೌರವ ನೊಂದಿಗೆ ಹೋರಾಡಿ, ಅವನ ಜುಟ್ಟು ಹಿಡಿದು ನೆಲಕ್ಕೆ ಕೆಡವಿದುದು (ದ್ರೋಣ 14/50–60). ಜಯದ್ರಥನೊಂದಿಗೆ ಯುದ್ಧ (ದ್ರೋಣ 14/64–74). ಶಲ್ಯನೊಂದಿಗೆ ಯುದ್ಧ (ದ್ರೋಣ 14/78–82). ಇವನ ಕುದುರೆಗಳ ವರ್ಣನೆ (ದ್ರೋಣ 23/33). ಇವನ ವಧೆಯ ಸಂಕ್ಷಿಪ್ತ ವರ್ಣನೆ (ದ್ರೋಣ 33/19–28). ಚಕ್ರವ್ಯೂಹದಿಂದ ಹೊರಗೆ ಬರಲು ಅಸಾಮರ್ಥ್ಯವನ್ನು ಪ್ರಕಟಿಸಿದುದು (ದ್ರೋಣ 35/18–19). ವ್ಯೂಹಭೇದನದ ಪ್ರತಿಜ್ಞೆ (ದ್ರೋಣ 35/24–28). ಚಕ್ರವ್ಯೂಹದೊಳಗೆ ಪ್ರವೇಶ ಮತ್ತು ಕೌರವರ ಚತುರಂಗ ಬಲದ ಸಂಹಾರ (ದ್ರೋಣ 36/15–16). ಈತನಿಂದ ಅಶ್ಮಕಪುತ್ರನ ವಧೆ (ದ್ರೋಣ 37/22–23). ಶಲ್ಯನನ್ನು ಮೂರ್ಛೆಗೊಳಿಸಿದುದು (ದ್ರೋಣ 37/34). ಈತನಿಂದ ಶಲ್ಯನ ಸಹೋದರನ ವಧೆ (ದ್ರೋಣ 38/5–7). ಈತನ ಭಯದಿಂದ ಕೌರವ ಸೇನೆಯ ಪಲಾಯನ (ದ್ರೋಣ 38/ 23–24). ದ್ರೋಣಾಚಾರ್ಯರಿಂದ ಅಭಿಮನ್ಯು ವಿನ ಪರಾಕ್ರಮದ ಪ್ರಶಂಸೆ (ದ್ರೋಣ 39ನೇ ಅಧ್ಯಾಯ). ದುಃಶಾಸನನನ್ನು ನಿಂದಿಸುತ್ತಾ, ಅವನನ್ನು ಮೂರ್ಛೆಗೊಳಿಸಿದುದು (ದ್ರೋಣ 40/2–14). ಇವನಿಂದ ಕರ್ಣನ ಪರಾಜಯ (ದ್ರೋಣ 40/35–36). ಇವನಿಂದ ಕರ್ಣನ ಸಹೋದರನ ವಧೆ, ಕೌರವಸೇನೆಯ ಸಂಹಾರ (ದ್ರೋಣ 41ನೇ ಅಧ್ಯಾಯ). ವೃಷಸೇನನ ಪರಾಜಯ (ದ್ರೋಣ 44/5). ವಸಾತೀಯನ ವಧೆ (ದ್ರೋಣ 44/10). ಸತ್ಯಶ್ರವಾನ ವಧೆ (ದ್ರೋಣ 45/3). ಶಲ್ಯಪುತ್ರ ರುಕ್ಮರಥನ ವಧೆ (ದ್ರೋಣ 45/13). ಇವನ ಪ್ರಹಾರದಿಂದ ಪೀಡಿತನಾದ ಕೌರವನ ಪಲಾಯನ (ದ್ರೋಣ 45/30). ಇವನಿಂದ ದುರ್ಯೋಧನನ ಮಗ ಲಕ್ಷ್ಮಣನ ವಧೆ (ದ್ರೋಣ 46/12–17). ಇವ ನಿಂದ ಕ್ರಾಥಪುತ್ರನ ವಧೆ (ದ್ರೋಣ 46/25–

27). ಅಭಿಮನ್ಯುವಿನ ಘೋರಯುದ್ಧ, ಅವನಿಂದ ವೃಂದಾರಕನ ವಧೆ, ಅಶ್ವತ್ಥಾಮ, ಕರ್ಣ ಮತ್ತು ಬೃಹದ್ಬಲ ಮೊದಲಾದವರೊಡನೆ ಯುದ್ಧ (ದ್ರೋಣ 47/ 1–21). ಇವನಿಂದ ಕೋಸಲ ರಾಜ ಬೃಹದ್ಬಲನ ವಧೆ (ದ್ರೋಣ 47/22). ಕರ್ಣನೊಡನೆ ಈತನ ಯುದ್ಧ ಮತ್ತು ಅವನ ಆರು ಮಂದಿ ಮಂತ್ರಿಗಳ ವಧೆ (ದ್ರೋಣ 48/1–6). ಇವನಿಂದ ಮಗಧರಾಜಪುತ್ರ ಅಶ್ವ ಕೇತುವಿನ ವಧೆ (ದ್ರೋಣ 48/7). ಈತನಿಂದ ಮೂರ್ತಿಕಾವತಕ ರಾಜನಾದ ಭೋಜನ ವಧೆ (ದ್ರೋಣ 48/8). ಈತನಿಂದ 'ಶಲ್ಯನ ಪರಾಜಯ (ದ್ರೋಣ 48/14–15). ಇವನಿಂದ ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚಾ ಮತ್ತು ಸೂರ್ಯಭಾಸರ ವಧೆ (ದ್ರೋಣ 48/15–16). ಇವನು ಶಕುನಿಯನ್ನು ಗಾಯಗೊಳಿಸಿದುದು (ದ್ರೋಣ 48/16–17). ಸುಬಲಪುತ್ರ ಕಾಯಕೇಯನ ವಧೆ (ದ್ರೋಣ 49/7). ದುಃಶಾಸನ ಕುಮಾರನ ಗದಾಪ್ರಹಾರ ದಿಂದ ಅಭಿಮನ್ಯುವಿನ ಪ್ರಾಣತ್ಯಾಗ (ದ್ರೋಣ 49/13–14). ಇವನಿಗೆ ಯೋಗಿಗಳ, ತಪಸ್ವಿಗಳ, ಮುನಿಗಳ ಅಕ್ಷಯಲೋಕಪ್ರಾಪ್ತಿ (ದ್ರೋಣ 71/ 12–16). ಅಭಿಮನ್ಯುವಿನ ಪುತ್ರ ಪರೀಕ್ಷಿತನ ಜನ್ಮ (ಆಶ್ವ 69ನೇ ಅಧ್ಯಾಯ). ಅಭಿಮನ್ಯುವಧಾ ವೃತ್ತಾಂತವನ್ನು ವಸುದೇವನು ಶ್ರೀಕೃಷ್ಣನ ಮುಖ ದಿಂದ ಕೇಳಿದುದು (ಆಶ್ವ 61/15–42). ಸೋಮ ಪುತ್ರ ವರ್ಚಾರೂಪದಿಂದ ಅಭಿಮನ್ಯುವು ಸೋಮನಲ್ಲಿ ಪ್ರವೇಶಿಸಿದುದು (ಸ್ವರ್ಗ 5/18–20). ಮಹಾಭಾರತದಲ್ಲಿ ಬಂದಿರುವ ಅಭಿಮನ್ಯು ವಿನ ಹೆಸರುಗಳು: ಆರ್ಜುನಿ, ಸೌಭದ್ರ, ಕಾರ್ಷ್ಣಿ, ಅರ್ಜುನಾತ್ಮಜ, ಅರ್ಜುನಾವರ, ಫಾಲ್ಗುಣಿ ಮತ್ತು ಶಕ್ರಾತ್ಮಜಾತ್ಮಜ.

**ಅಭಿಮನ್ಯುವಧಪರ್ವ** – ದ್ರೋಣ ಪರ್ವದ ಅಂತರ್ಗತವಾದ ಪರ್ವ (ಅಧ್ಯಾಯ 33ರಿಂದ 71ರ ವರೇಗೆ).

**ಅಭಿಷೇಚನೀಯ** – ಪೂಜ್ಯ ಪುರುಷರ ಅಭಿಷೇಕ ಅರ್ಘ್ಯ ಕೊಟ್ಟು ಸಮ್ಮಾನಿಸುವ ಕರ್ಮಕ್ಕೆ 'ಅಭಿ ಷೇಚನೀಯ'ವೆಂದು ಹೆಸರು. ಇದು ರಾಜಸೂಯ ಯಜ್ಞದ ಅಂತರ್ಗತವಾದ ಸೋಮಯಾಗ ವಿಶೇಷವಾಗಿದೆ (ಸಭಾ 36/1).

**ಅಭಿಷ್ಯಂತ** – ಮಹಾರಾಜ ಕುರುವಿನಿಂದ ವಾಹಿನಿಯಲ್ಲಿ ಹುಟ್ಟಿದವನು. ಇವನ ಇತರ ಸಹೋದರರು – ಅಶ್ವವಂತ, ಚೈತ್ರರಥ, ಮುನಿ ಮತ್ತು ಜನಮೇಜಯ. ಈತ ಅಶ್ವವಂತನಿಂದ ಚಿಕ್ಕವ ಮತ್ತು ಚೈತ್ರರಥನಿಂದ ಹಿರಿಯವ ನಾಗಿದ್ದನು (ಆದಿ 94/50–51).

**ಅಭಿಸಾರಿ** – ಒಂದು ಪ್ರಾಚೀನ ಪಟ್ಟಣ. ದಿಗ್ವಿಜಯ ಸಂದರ್ಭದಲ್ಲಿ ಅರ್ಜುನನು ಅಲ್ಲಿ ವಿಜಯ ಪಡೆದನು (ಸಭಾ 27/19).

**ಅಭೀತಿ** – ಸ್ಕಂದನ ಅನುಯಾಯಿ ಮಾತೃಕೆ (ಶಲ್ಯ 46/27).

**ಅಭೀರೂ** – ಆರನೆಯ ಕಾಲಕೇಯನ ಅಂಶ ದಿಂದ ಹುಟ್ಟಿದ ಒಬ್ಬ ರಾಜರ್ಷಿ (ಆದಿ 67/53).

**ಅಭೀಷಾಹ** – (1) ಒಂದು ಪ್ರಾಚೀನ ಜನಪದ (ಭೀಷ್ಮ 18/12).

(2) ಅಭೀಷಾಹ ಜನಪದವಾಸಿಯಾದ ಯೋಧ (ಭೀಷ್ಮ 93/2).

**ಅಭೀಸಾರ** – ಒಂದು ಪ್ರಾಚೀನ ಭಾರತೀಯ ಜನಪದ (ಭೀಷ್ಮ 9/94).

**ಅಮಧ್ಯ** – ಶ್ರೀ ಕೃಷ್ಣನ ಒಂದು ಹೆಸರು (ಶಾಂತಿ 342/90).

**ಅಮರಪರ್ವತ** – ನಕುಲನು ಗೆದ್ದ ಒಂದು ಪ್ರಾಚೀನ ಸ್ಥಳ (ಸಭಾ 32/11).

**ಅಮರಹ್ರದ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿದರೆ, ಆ ಮನುಷ್ಯ ಸ್ವರ್ಗಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/106).

**ಅಮರಾವತಿ** – ದೇವರಾಜ ಇಂದ್ರನ ನಗರ. ಅಲ್ಲಿಗೆ ಅರ್ಜುನ ಹೋಗಿದ್ದನು (ವನ 42/42; ಉದ್ಯೋಗ 103/1).

**ಅಮಾವಸು** – ಪುರೂರವನಿಂದ ಊರ್ವಶಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ರಾಜ (ಆದಿ 75/24).

**ಅಮಾಹಠ** – ಧೃತರಾಷ್ಟ್ರ ನಾಗನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಭಸ್ಮೀಭೂತನಾದನು (ಆದಿ 57/16).

**ಅಮಿತಧ್ವಜ** – ಒಬ್ಬ ದಾನವ (ಶಾಂತಿ 227/50).

**ಅಮಿತಾಶನಾ** – ಸ್ಕಂದನ ಅನುಯಾಯಿ ಮಾತೃಕೆ (ಶಲ್ಯ 47/7).

**ಅಮಿತೌಜಾ** – ಭಯಂಕರ ಪರಾಕ್ರಮಿಯಾದ ಒಬ್ಬ ಪಾಂಚಾಲಕ್ಷತ್ರಿಯ. ಅವನು ಕೇತುಮಾನ ನೆಂಬ ಅಸುರನ ಅಂಶದಿಂದ ಪ್ರಕಟಗೊಂಡಿದ್ದನು (ಆದಿ 67/12). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/12). ಪಾಂಡವ ಪಕ್ಷದ ಮಹಾರಥಿ ವೀರರಲ್ಲಿ ಈತನು ಗಣಿಸಲ್ಪಟ್ಟಿದ್ದಾನೆ (ಉದ್ಯೋಗ 71/11).

**ಅಮೂರ್ತರಯಾ** – ಒಬ್ಬ ಪ್ರಾಚೀನ ರಾಜ. ಅವನ ಪುತ್ರ ರಾಜಾ ಗಯನಾಗಿದ್ದನು (ವನ 15/17). ಈತನಿಗೆ ಪೂರುವಿನಿಂದ ಖಡ್ಗ ಪ್ರಾಪ್ತಿಯಾಗಿತ್ತು (ಶಾಂತಿ 166/75).

**ಅಮೃತಾ** – ಮಗಧದೇಶದ ರಾಜಕುಮಾರಿ. ಆಕೆ ಅನಶ್ವಾನ ಪತ್ನಿ ಮತ್ತು ಪರೀಕ್ಷಿತನ ತಾಯಿ (ಆದಿ 95/41).

**ಅಮೋಘ** – (1) ಬೃಹಸ್ಪತಿ ಕುಲದಲ್ಲಿ ಹುಟ್ಟಿದ ಒಬ್ಬ ಅಗ್ನಿ (ವನ 220/24).

(2) ಭದ್ರವಟ ಯಾತ್ರೆಯ ಸಮಯದಲ್ಲಿ ಭಗವಂತನಾದ ಶಂಕರನ ಬಲಭಾಗದಲ್ಲಿ ಸಂಚರಿಸುವ ಒಬ್ಬ ಯಕ್ಷ (ವನ 231/35).

(3) ಸ್ಕಂದನ ಒಂದು ಹೆಸರು (ವನ 232/5).

(4) ಶಿವನ ಒಂದು ಹೆಸರು (ಅನು 17/114).

(5) ವಿಷ್ಣುವಿನ ಒಂದು ಹೆಸರು (ಅನು 149/25).

**ಅಮೋಘಾ** – ಸ್ಕಂದನ ಅನುಯಾಯಿ ಮಾತೃಕೆ (ಶಲ್ಯ 46/21).

**ಅಮ್ಬರೀಷ** – (1) ಸೂರ್ಯವಂಶದ ರಾಜಾ ನಾಭಾಗನ ಮಗ. ಅವನು ಯಮುನಾ ದಡದಲ್ಲಿ ಯಜ್ಞಮಾಡಿದ್ದನು (ಆದಿ 1/227; ಭೀಷ್ಮ 9/6 ಮತ್ತು ವನ 129/2). ದುರ್ವಾಸನಿಂದ ಅಂಬರೀಷನ ಪ್ರಭಾವದ ಸ್ಮರಣೆ (ವನ 263/33). ಸೃಂಜಯನಿಗೆ ತಿಳಿಯಪಡಿಸುತ್ತಾ, ನಾರದರಿಂದ ಈತನ ಸ್ವಭಾವದ ಕಥನ (ದ್ರೋಣ 64ನೇ ಅಧ್ಯಾಯ). ಪೂರ್ವಕಾಲದಲ್ಲಿ ಅಂಬರೀಷನ ಅಧಿಕಾರದಲ್ಲಿ ಈ ಭೂಮಿ ಇದ್ದಿತು. ಈ ವಿಷಯದ ವರ್ಣನೆ (ಶಾಂತಿ 8/33–34). ಈತನ ಯಜ್ಞದ ವರ್ಣನೆ (ಶಾಂತಿ 29/100–104). ತನ್ನ ಸೇನಾಪತಿಯಾದ ಸುದೇವನು ತನಗಿಂತ ಉತ್ಕೃಷ್ಟ ಗತಿಯಲ್ಲಿರುವುದನ್ನು ಕಂಡು, ಆ ಕುರಿತು ಇಂದ್ರನೊಡನೆ ಈತನ ಪ್ರಶ್ನೆ (ಶಾಂತಿ 98/6–11). ರಣಯಜ್ಞದ ಕುರಿತು ಇಂದ್ರನೊಡನೆ ಪ್ರಶ್ನೆ (ಶಾಂತಿ 98/14). ಇವನಿಂದ ಬ್ರಾಹ್ಮಣನಿಗೆ ಹನ್ನೊಂದು ಅರ್ಬುದ ಗೋದಾನ (ಶಾಂತಿ 234/23). ಅಗಸ್ತ್ಯರ ಕಮಲಗಳು ಕದಿಯಲ್ಪಟ್ಟಾಗ ಈತನು ಆಣೆ ಮಾಡಿದುದು (ಅನು 94/29). ಮಾಂಸಭಕ್ಷಣ ನಿಷೇದದಿಂದ ಸರ್ವವ್ಯಾಪಕತತ್ವದ ಜ್ಞಾನ ಮತ್ತು ಸರ್ವಭೂತಾತ್ಮಕತೆಯ ಪ್ರಾಪ್ತಿ (ಅನು 115/58–59). ಈತನಿಂದ ಬ್ರಾಹ್ಮಣನಿಗೆ ರಾಜ್ಯದಾನ (ಅನು 137/8). ಪ್ರಾತಃ ಸಾಯಂಕಾಲಗಳಲ್ಲಿ ಕೀರ್ತಿಸಲು ಯೋಗ್ಯರಾದ ರಾಜರುಗಳಲ್ಲಿ ಈತನೂ ಗಣಿಸಲ್ಪಟ್ಟಿದ್ದಾನೆ (ಅನು 165/53). ಈತನಿಂದ ಆಧ್ಯಾತ್ಮಿಕ ಸ್ವರಾಜ್ಯ ಸ್ತುತಿ (ಆಶ್ವ 31/7–12).

(2) ಒಬ್ಬ ನಾಗ. ಬಲರಾಮನು ರಸಾತಲ ಪ್ರವೇಶ ಮಾಡುವ ಸಂದರ್ಭದಲ್ಲಿ ಈತ ಸ್ವಾಗತಿಸಲು ಬಂದಿದ್ದನು (ಮೌಸಲ 4/16).

**ಅಮ್ಬಷ್ಠ** – (1) ನಕುಲನು ಗೆದ್ದ ಒಂದು ಪ್ರಾಚೀನ ದೇಶ (ಸಭಾ 32/7). (ಸಿಂಧದೇಶದ ಉತ್ತರದ ಒಂದು ಪ್ರಜಾತಂತ್ರ ರಾಜ್ಯ. ಗ್ರೀಕ್ ಲೇಖಕರು ಅದನ್ನು 'ಅಂಬಸ್ತಯೀ' ಅಥವಾ 'ಅಂಬಸ್ತನೋಯೀ' ಎಂದು ಬರೆದಿದ್ದಾರೆ. – ಹಿಂದೀ ಮಹಾಭಾರತದ ಪರಿಶಿಷ್ಟ ಪುಟ 7ರಲ್ಲಿದೆ).

(2) ಕೌರವ ಪಕ್ಷದ ಒಬ್ಬ ರಾಜ. ಅವನು ಅಂಬಷ್ಠ ದೇಶದ ಅಧಿಪತಿ ಮತ್ತು 'ಶ್ರುತಾಯು' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಈತ ಅಭಿಮನ್ಯುವಿನಿಂದ ಪರಾಜಿತನಾಗಿದ್ದನು (ಭೀಷ್ಮ 96/39–40). ಅರ್ಜುನನೊಡನೆ ಯುದ್ಧ ಮತ್ತು ಅವನಿಂದ ಈತನ ವಧೆ (ದ್ರೋಣ 93/60–69).

(3) ಪಾಂಡವ ಪಕ್ಷದ ಒಬ್ಬ ಯೋಧ. ಅವನು ಅಂಬಷ್ಠ ಜಾತಿಯವನಾಗಿದ್ದನು. ಇವನು ಕೌರವ ಪಕ್ಷದ ಚೇದಿ ರಾಜನೊಂದಿಗೆ ಯುದ್ಧ ಮಾಡಿ, ಅವನನ್ನು ಭೂಮಿಗೊರಗಿಸಿದನು (ದ್ರೋಣ 25/49–50).

**ಅಮ್ಬಾ** – ಕಾಶೀರಾಜನ ಹಿರಿಯ ಮಗಳು (ಆದಿ 102/60). ವಿಚಿತ್ರವೀರ್ಯನಿಗಾಗಿ ಭೀಷ್ಮ

ನಿಂದ ಈಕೆಯ ಅಪಹರಣ (ಆದಿ 102/ 57 ಮತ್ತು ಸಭಾ 41/23). ಶಾಲ್ವನಲ್ಲಿ ತನಗಿರುವ ಅನುರಕ್ತಿಯನ್ನು ತಿಳಿಸಿ, ಅವನೊಂದಿಗೆ ತನ್ನ ವಿವಾಹವಾಗುವಂತೆ ಭೀಷ್ಮರಲ್ಲಿ ಪ್ರಾರ್ಥನೆ (ಆದಿ 102/61–62). ಈಕೆ ಶಾಲ್ವನ ಬಳಿಗೆ ಹೋಗಲು ಭೀಷ್ಮರಿಂದ ಅನುಮತಿ ಕೊಡಲ್ಪಟ್ಟಿತು (ಆದಿ 102/64). ಅಂಬೆಯು ಶಾಲ್ವನಲ್ಲಿ ತನಗಿರುವ ಪ್ರೀತಿಯನ್ನು ತಿಳಿಸಿ, ಅವನ ಬಳಿಗೆ ಹೋಗಲು, ಭೀಷ್ಮರಿಂದ ಆಜ್ಞೆಯನ್ನು ಯಾಚಿಸಿದುದು (ಉದ್ಯೋಗ 174/5–10). ತನ್ನನ್ನು ಧರ್ಮ ಪತ್ನಿಯಾಗಿ ಮಾಡಿಕೊಳ್ಳೆಂದು ಶಾಲ್ವನಲ್ಲಿ ಆಕೆಯ ಒತ್ತಾಯ (ಉದ್ಯೋಗ 175/11–18). ಶಾಲ್ವನಿಂದ ತಿರಸ್ಕರಿಸಲ್ಪಟ್ಟಾಗ, ಭೀಷ್ಮನ ಮೇಲೆ ಪ್ರತೀಕಾರ ಮಾಡುವ ಯೋಚನೆ (ಉದ್ಯೋಗ 175/26–35). ಶೈಖಾವತ್ಯ ಮುನಿಯ ಆಶ್ರಮಕ್ಕೆ ಹೋಗಿ ತನ್ನ ದುಃಖವನ್ನು ನಿವೇದಿಸಿದುದು (ಉದ್ಯೋಗ 175/38–44). ತಪಸ್ವಿಗಳು ಬುದ್ಧಿ ಹೇಳಿದರೂ, ತಪಸ್ಸು ಮಾಡುವುದೇ ತನ್ನ ನಿಶ್ಚಯವೆಂದು ಹೇಳಿದುದು (ಉದ್ಯೋಗ 176/12–14). ಪರಶುರಾಮನೊಡನೆ ಭೀಷ್ಮನನ್ನು ಕೊಲ್ಲುವಂತೆ ಒತ್ತಾಯ (ಉದ್ಯೋಗ 177/35–42 ಮತ್ತು 178/5–7). ಭೀಷ್ಮನ ವಧೆಗಾಗಿ ಅಂಬೆಯ ಕಠೋರ ತಪಸ್ಸು (ಉದ್ಯೋಗ 186/ 19–29). ಗಂಗೆಯ ಶಾಪದಿಂದ ವತ್ಸದೇಶದಲ್ಲಿ ನದಿಯಾಗಿ ಪ್ರವಹಿಸಿದುದು (ಉದ್ಯೋಗ 186/ 31–40). ಎರಡನೇ ಜನ್ಮದಲ್ಲಿ ತಪಸ್ಸು ಮಾಡಿ ಮಹಾದೇವನಿಂದ ಆಕೆಗೆ ವರಪ್ರಾಪ್ತಿ (ಉದ್ಯೋಗ 187/1–15). ಚಿತೆಯ ಅಗ್ನಿಯಲ್ಲಿ ಪ್ರವೇಶ (ಉದ್ಯೋಗ 187/1–15). ದ್ರುಪದನಲ್ಲಿ ಕನ್ಯಾ ರೂಪದಿಂದ ಈಕೆಯ ಜನನ. 'ಶಿಖಂಡೀ' ಎಂಬ ಹೆಸರಾದುದು (ಉದ್ಯೋಗ 188/7–19).

**ಅಮ್ಬಾಜನ್ಮ** – ಒಂದು ತೀರ್ಥ. ಅದು ನಾರದರಿಗೆ ಸಂಬಂಧಿಸಿದುದು. ಅಲ್ಲಿ ಸಾಯುವವರಿಗೆ ನಾರದರ ಕೃಪೆಯಿಂದ ಪರಮಶ್ರೇಷ್ಠ ಲೋಕಗಳು ಪ್ರಾಪ್ತವಾಗುತ್ತವೆ (ವನ 83/81).

**ಅಮ್ಬಾಲಿಕಾ** – ಕಾಶೀರಾಜನ ಪುತ್ರಿ ವಿಚಿತ್ರ ವೀರ್ಯನ ದ್ವಿತೀಯ ಪತ್ನಿ (ಆದಿ 95/51). ಇವಳ ತಾಯಿಯ ಹೆಸರು 'ಕೌಸಲ್ಯಾ'. ಈಕೆಯ ಗರ್ಭದಿಂದ ವ್ಯಾಸರ ಮೂಲಕ ಪಾಂಡುವಿನ ಜನನ (ಆದಿ 105/21). ವ್ಯಾಸರ ಭಯಂಕರ ರೂಪವನ್ನು ಕಂಡು, ಗಾಬರಿಗೊಂಡು, ಪಾಂಡು ವರ್ಣದವಳಾದುದರಿಂದ, ಈಕೆಯ ಗರ್ಭದಿಂದ ಪಾಂಡುವರ್ಣದವನೇ ಆದ ಪುತ್ರನ ಜನನ (ಆದಿ 105/18). ಪಾಂಡುವಿನ ಮರಣದಿಂದ ಈಕೆ ಮೂರ್ಚ್ಛೆ ಹೋದುದು (ಆದಿ 126/24).

**ಅಮ್ಬಿಕಾ** – (1) ಕಾಶೀರಾಜನ ಪುತ್ರಿ, ವಿಚಿತ್ರ ವೀರ್ಯನ ಪತ್ನಿ. ಧೃತರಾಷ್ಟ್ರನ ತಾಯಿ. ಅಂಬಿಕೆಯ ತಾಯಿಯ ಹೆಸರು 'ಕೌಸಲ್ಯಾ' (ಆದಿ 95/51). ವಿಚಿತ್ರವೀರ್ಯನಿಂದ ಅಂಬಿಕೆ, ಅಂಬಾಲಿಕೆಯರ ಪಾಣಿಗ್ರಹಣ (ಆದಿ 102/65). ವಂಶರಕ್ಷಣೆಗಾಗಿ ಈ ಇಬ್ಬರೂ ಸಹೋದರಿಯರು ವ್ಯಾಸರಿಂದ ಪುತ್ರೋತ್ಪತ್ತಿ ಮಾಡುವಂತೆ ಸತ್ಯವತಿಯ ಆದೇಶ (ಆದಿ 104/51–105/15). ವ್ಯಾಸರಿಂದ ಈಕೆಯಲ್ಲಿ ಧೃತರಾಷ್ಟ್ರನ ಜನನ (ಆದಿ 105/13). ವ್ಯಾಸರ ಭಯಾನಕ ರೂಪ ದಿಂದ ಭೀತಳಾಗಿ ಕಣ್ಣುಗಳನ್ನು ಮುಚ್ಚಿಕೊಂಡದ್ದ ರಿಂದ ಈಕೆಯ ಪುತ್ರನು ಜನ್ಮಾಂಧನಾದುದು (ಆದಿ 105/10). ಈಕೆ ಪುನಃ ವ್ಯಾಸರ ಸಮಾ ಗಮ ಮಾಡುವಂತೆ ಸತ್ಯವತಿಯ ಆಜ್ಞೆ, ಈಕೆಯ ಅಸ್ವೀಕಾರ (ಆದಿ 105/23). ಈಕೆ ತನ್ನ ದಾಸಿ ಯನ್ನು ಮೋಸದಿಂದ ವ್ಯಾಸರ ಬಳಿಗೆ ಕಳುಹಿಸಿ ದುದು. ಆ ದಾಸಿಯ ಗರ್ಭದಿಂದ ವಿದುರನ ಜನನ (ಆದಿ 105/28). ಬಾಹುಬಲದಿಂದ ತಾನು ಗೆದ್ದುತಂದ ಧನವನ್ನು, ಪಾಂಡು ತನ್ನ ಇಬ್ಬರೂ ಮಾತೆಯರಿಗೆ ಕಾಣಿಕೆಯಾಗಿ ಅರ್ಪಿಸಿದುದು (ಆದಿ 113/1). ಈ ಸಹೋದರಿಯರು ಸತ್ಯವತಿಯೊಂದಿಗೆ ತಪೋವನಕ್ಕೆ ಹೋಗಿ ಪ್ರಾಣ ತ್ಯಾಗ ಮಾಡಿದುದು (ಆದಿ 127/13).

(2) ಅರ್ಜುನನ ಜನನಕಾಲದಲ್ಲಿ ನೃತ್ಯ ಮಾಡಲು ಬಂದ ಒಬ್ಬ ಅಪ್ಸರೆ (ಆದಿ 122/ 62).

(3) ಸ್ಕಂದ ಮಾತೆಯಾದ ಪಾರ್ವತೀ ದೇವಿ. ಈಕೆಯ ನಾಮಸ್ಮರಣೆಯಿಂದ ಪಾಪನಾಶವಾಗು ತ್ತದೆ (ಅನು 150/28–29).

**ಅಮ್ಬುಮತಿ** – ಒಂದು ನದಿ ಮತ್ತು ಉತ್ತಮ ತೀರ್ಥ (ವನ 83/56).

**ಅಮ್ಬುವಾಹಿನಿ** – ಒಂದು ನದಿ. ಅದರ ಜಲ ವನ್ನು ದಡದಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/27). ಇದು ಪ್ರಾತಃ ಸಾಯಂ

ಸಮಯಗಳಲ್ಲಿ ಸ್ಮರಣೆ ಮಾಡಲು ಅರ್ಹ ನದಿ (ಅನು 165/20).

**ಅಮ್ಬುವೀಚ** – ಮಗಧರಾಜರಲ್ಲಿ ಒಬ್ಬ. ಇವನ ಮಂತ್ರಿಯ ಹೆಸರು 'ಮಹಾಕರ್ಣಿ' (ಆದಿ 203/17–19).

**ಅಮ್ಬೋಪಾಖ್ಯಾನ** – ಉದ್ಯೋಗಪರ್ವದಲ್ಲಿ ಅಂತಿಮ ಅವಾಂತರ ಪರ್ವ. ಅದು ಅಧ್ಯಾಯ 173 ರಿಂದ 196 ತನಕವಿದೆ

**ಅಮ್ಬೋರುಹ** – ಮಹರ್ಷಿ ವಿಶ್ವಾಮಿತ್ರನ ಪುತ್ರರಲ್ಲಿ ಒಬ್ಬ (ಅನು 4/59).

**ಅಯಃಶಂಕು** – ಒಬ್ಬ ಮಹಾದೈತ್ಯ. ಆತ ಕೇಕಯ ದೇಶದ ರಾಜಕುಮಾರನಾಗಿ ಜನ್ಮವೆತ್ತಿದ (ಆದಿ 67/10).

**ಅಯಃಶಿರಾ** – ಕಶ್ಯಪಪತ್ನಿಯಾದ ದನು ಎಂಬವಳ ಮಕ್ಕಳಲ್ಲಿ ಒಬ್ಬ (ಆದಿ 65/23). ಈತನೇ ಕೇಕಯ ದೇಶದ ಒಬ್ಬ ರಾಜಕುಮಾರನಾಗಿ ಜನ್ಮವೆತ್ತಿದ್ದ (ಆದಿ 67/10).

**ಅಯತಿ** – ನಹುಷರಾಜನ ಮಗ ಯಯಾತಿಯ ಸಹೋದರ (ಆದಿ 75/30).

**ಅಯವಾಹ** – ಒಂದು ಭಾರತೀಯ ಜನಪದ (ಭೀಷ್ಮ 9/45).

**ಅಯುತನಾಯೀ** – ಪೂರುವಂಶದ ಒಬ್ಬ ಕ್ಷತ್ರಿಯ. ಇವನು ಮಹಾಭೌಮರಾಜನ ಪುತ್ರ. ಅವನ ತಾಯಿಯ ಹೆಸರು ಸುಯಜ್ಞಾ; ಪತ್ನಿಯ ಹೆಸರು ಕಾಮಾ ಮತ್ತು ಪುತ್ರನ ಹೆಸರು ಅಕ್ರೋಧನ. ಅಯುತ (ಹತ್ತುಸಾವಿರ) ಪುರುಷ ಮೇಧಗಳ ಅನುಷ್ಠಾನ ಮಾಡಿದುದರಿಂದ ಇವನ ಹೆಸರು 'ಅಯುತನಾಯಿ' ಎಂದಾಯಿತು (ಆದಿ 95/29–21).

**ಅಯೋಧ್ಯಾ** – ಸುಪ್ರಸಿದ್ಧವಾದ ಅಯೋಧ್ಯಾ ನಗರ. ಅದು ಇಕ್ಷ್ವಾಕುವಂಶದ ರಾಜರ ರಾಜಧಾನಿಯಾಗಿತ್ತು. ಋಷಿಶ್ರೇಷ್ಠರಾದ ವಸಿಷ್ಠರು ಅಲ್ಲಿರುವ ರಾಜಾಕಲ್ಮಾಷಪಾದನ ಬಳಿಗೆ ಬಂದಿದ್ದರು (ಆದಿ 176/35–36). ಅಯೋಧ್ಯೆಯ ಧರ್ಮಜ್ಞನೂ, ಮಹಾಬಲವಂತನೂ ಆದ ದೀರ್ಘಯಜ್ಞನೆಂಬ ರಾಜನನ್ನು ಭೀಮಸೇನನು ಮೃದುವರ್ತನೆಯಿಂದ ವಶಮಾಡಿಕೊಂಡನು (ಸಭಾ 30/2). ಶ್ರೀರಾಮನು ಸೀತೆಯೊಡನೆ ವಿವಾಹವಾಗಿ ಅಯೋಧ್ಯಾನಗರಕ್ಕೆ ಆಗಮಿಸಿದನು (ಸಭಾ 38/29). ವನಪರ್ವದ 60/24; 66/21; 70/18; 71/24; 74/17; 99/41; 148/15; 152/3; 202/1; 291/60 ಮತ್ತು ಉದ್ಯೋಗ ಪರ್ವದ 115/18ರಲ್ಲಿ ಅಯೋಧ್ಯೆಯ ಹೆಸರು ಬಂದಿದೆ.

**ಅಯೋಬಾಹು** – (ಅಯೋಭುಜ) ಧೃತರಾಷ್ಟ್ರನ ಒಬ್ಬ ಮಗ (ಆದಿ 67/18). ಭೀಮಸೇನನಿಂದ ಈತನ ವಧೆ (ದ್ರೋಣ 157/19).

**ಅರಟ್ಟ** – ಒಂದು ದೇಶ. ದ್ರೋಣ ಸತ್ತಾಗ, ಆ ದೇಶದ ಯೋಧರನ್ನು ಕರಕೊಂಡು ಕೃತವರ್ಮನು ಓಡಿಹೋಗಿದ್ದ (ದ್ರೋಣ 193/13).

**ಅರಣ್ಯಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1 ರಿಂದ 10 ವರೆಗೆ).

**ಅರಂತುಕ** – ಕುರುಕ್ಷೇತ್ರದ ಒಂದು ಗಡಿಯನ್ನು ನಿರ್ಧರಿಸುವ ಅರಂತುಕನೆಂಬ ದ್ವಾರಪಾಲಕ (ವನ 83/52). ಸರಸ್ವತಿ ನದಿಯಲ್ಲಿರುವ ಕುಬೇರ ಸಂಬಂಧಿಯಾದ ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಅಗ್ನಿಷ್ಟೋಮ ಯಜ್ಞದ ಫಲಪ್ರಾಪ್ತ ವಾಗುತ್ತದೆ (ಶಲ್ಯ 53/24).

**ಅರಾಲಿ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ಅರಿಮೇಜಯ** – ವೃಷ್ಣಿವಂಶದ ಒಬ್ಬ ಯೋಧ (ದ್ರೋಣ 11/28).

**ಅರಿಷ್ಟ** – ವೃಷಭರೂಪಧಾರಿಯಾದ ಒಬ್ಬ ಅಸುರ. ಗೋವುಗಳ ಹಿತಕ್ಕಾಗಿ, ಶ್ರೀಕೃಷ್ಣನು ಆತನನ್ನು ಕೊಂದನು (ಸಭಾ 38/29).

**ಅರಿಷ್ಟನೇಮಾ** – ಕಶ್ಯಪ ಪುತ್ರ. 'ಅರಿಷ್ಟನೇಮಿ' ಎಂಬ ಹೆಸರಿನ ಮುನಿ (ವನ 184/8).

**ಅರಿಷ್ಟನೇಮಿ** – (1) ವಿನತೆಯ ಆರು ಪುತ್ರರಲ್ಲಿ ಒಬ್ಬ. ಈತನ ಇತರ ಸಹೋದರರ ಹೆಸರುಗಳು – ತಾರ್ಕ್ಷ್ಯ, ಗರುಡ, ಅರುಣ, ಆರುಣಿ, ವಾರುಣಿ (ಆದಿ 65/40). ಪರಮಪುರಂಜಯನು ಈತನ ಆಶ್ರಮಕ್ಕೆ ಹೋದುದು (ವನ 184/8). ಈತನಿಂದ ಬ್ರಾಹ್ಮಣರ ಮಹತ್ವದ ವರ್ಣನೆ (ವನ 184/17–22). ರಾಜಾ ಸಗರನಿಗೆ ಮೋಕ್ಷ ವಿಷಯದ ಉಪದೇಶ (ಶಾಂತಿ 288/5–46).

(2) ಕಶ್ಯಪ ಮಹರ್ಷಿಯ ಇನ್ನೊಂದು ಹೆಸರು (ಶಾಂತಿ 208/8).

(3) ಯಮರಾಜನ ಸಭೆಯಲ್ಲಿ ಉಪಸ್ಥಿತನಿರುವ ಒಬ್ಬ ರಾಜ (ಸಭಾ 8/9).
(4) ಅಜ್ಞಾತವಾಸಕಾಲದಲ್ಲಿ ವಿರಾಟನಗರದಲ್ಲಿ ಸಹದೇವನ ಕಲ್ಪಿತ ಹೆಸರು (ವಿರಾಟ 10/5).
(5) ಶ್ರೀಕೃಷ್ಣನ ಒಂದು ಹೆಸರು (ಉದ್ಯೋಗ 71/5).

**ಅರಿಷ್ಟಸೇನ** – ಕೌರವ ಪಕ್ಷದ ಒಬ್ಬ ರಾಜ (ಶಲ್ಯ 6/3).

**ಅರಿಷ್ಟಾ** – ಗಂಧರ್ವರಾಜನಾದ ಹಂಸನ ತಾಯಿ (ಆದಿ 67/83).

**ಅರಿಹ** – (1) ಚಂದ್ರವಂಶದ ಒಬ್ಬ ರಾಜ. ಈತ ಪೂರು ವಂಶದ ಅವಾಚೀನನಿಂದ, ಆತನ ಪತ್ನಿ ವಿದರ್ಭ ರಾಜಕುಮಾರಿ ಮರ್ಯಾದಾ ಎಂಬವಳ ಗರ್ಭದಲ್ಲಿ ಜನ್ಮವೆತ್ತಿದವನು. ಇವನ ಪತ್ನಿ ಅಂಗರಾಜಕುಮಾರಿಯ ಗರ್ಭದಿಂದ ಮಹಾಭೌಮನ ಜನನವಾಯಿತು (ಆದಿ 95/18–19).
(2) ಚಂದ್ರವಂಶದ ಒಬ್ಬ ರಾಜ. ಅವನು ದೇವಾತಿಥಿಯಿಂದ ವಿದೇಹರಾಜಕುಮಾರಿ ಮರ್ಯಾದಾ ಎಂಬವಳ ಗರ್ಭದಲ್ಲಿ ಜನ್ಮವೆತ್ತಿದ್ದ. (ಈ ಮರ್ಯಾದಾ ಎಂಬವಳು ಅವಾಚೀನನ ಪತ್ನಿಯಲ್ಲ) ಅರಿಹನ ಪತ್ನಿ ಅಂಗ ರಾಜಕುಮಾರಿ ಸುದೇವಾ ಎಂಬವಳು. ಈತನ ಮಗನ ಹೆಸರು ಋಕ್ಷ (ಆದಿ 95/23–24).

**ಅರುಜ** – ರಾಕ್ಷಸರ ಸೇನೆ (ವನ 285/2).

**ಅರುಣ** – (1) ವಿನತೆಯ ಮಗ. ತಂದೆಯ ಹೆಸರು ಕಶ್ಯಪ. ಸೂರ್ಯನ ಸಾರಥಿ ಈತನ ಜನನದ ಸನ್ನಿವೇಶ, ಈತ ತನ್ನ ತಾಯಿಯನ್ನು ಶಪಿಸಿದ್ದು ಮತ್ತು ಆ ಶಾಪದಿಂದ ಬಿಡುಗಡೆ ಹೊಂದುವ ಉಪಾಯವನ್ನು ಸೂಚಿಸಿದುದು (ಆದಿ 16/16–23). ಸೂರ್ಯನ ಕ್ರೋಧದಿಂದ ಹುಟ್ಟಿದ ತೀವ್ರ ತೇಜಸ್ಸಿನ ಶಾಂತಿಗಾಗಿ ಈತನು ಅವನ ರಥದಲ್ಲಿ ಉಪಸ್ಥಿತನಾದುದು (ಆದಿ 24/15–20). ಕುಪಿತನಾದ ಸೂರ್ಯನಿಗೆ ಈತನಿಂದ ಸಾರಥ್ಯ (ಆದಿ 16/22–23). ಈತನಿಂದ ಶ್ಯೇನಿಯ ಗರ್ಭದಲ್ಲಿ ಸಂಪಾತಿ ಮತ್ತು ಜಟಾಯುಗಳ ಜನನ (ಆದಿ 66/70). ಸ್ಕಂದನಿಗೆ ಈತನಿಂದ ತನ್ನ ಪುತ್ರ ತಾಮ್ರಚೂಡನ ದಾನ (ಶಲ್ಯ 46/51 ಮತ್ತು ಅನು 86/22).
(2) ಪ್ರಾಚೀನ ಋಷಿಗಳ ಒಂದು ಸಮುದಾಯ. ಅವರಿಗೆ ಸ್ವಾಧ್ಯಾಯದ ಮೂಲಕ ಸ್ವರ್ಗ ಪ್ರಾಪ್ತಿಯಾಯಿತು (ಶಾಂತಿ 26/7).
(3) ಅರುಣನೆಂಬ ಹೆಸರಿನ ಒಬ್ಬ ನಾಗ. ಈತ ಪರಮಧಾಮಕ್ಕೆ ಆಗಮಿಸುತ್ತಿದ್ದ ಬಲರಾಮನ ಸ್ವಾಗತಕ್ಕಾಗಿ ಬಂದಿದ್ದ (ಮೌಸಲ 4/15).

**ಅರುಣಾ** – (1) ಒಬ್ಬ ಅಪ್ಸರೆ. ಈಕೆ ಕಶ್ಯಪ ಪತ್ನಿ ಪ್ರಾಧಾ ಎಂಬವಳಿಂದ ಜನ್ಮವೆತ್ತಿದಳು (ಆದಿ 65/40).
(2) ಅರುಣಾ ಎಂಬ ಹೆಸರಿನ ಒಂದು ನದಿ. ಅದು ಸರಸ್ವತೀ ನದಿಗೆ ಸೇರಿದೆ (ವನ 83/15).

**ಅರುಣಾಸಂಗಮ** – ಅರುಣಾ ಮತ್ತು ಸರಸ್ವತಿಯ ಸಂಗಮದಲ್ಲಿರುವ ಪವಿತ್ರ ತೀರ್ಥ (ಶಲ್ಯ 43/30–43).

**ಅರುಂಧತೀ** – (ಅಕ್ಷಮಾಲಾ) (1) ವಸಿಷ್ಠ ಮಹರ್ಷಿಯ ಪತ್ನಿ (ಆದಿ 198/6). ವಸಿಷ್ಠರ ಚಾರಿತ್ರ್ಯದ ಮೇಲೆ ಸಂಶಯಪಟ್ಟದ್ದರಿಂದ ಈಕೆಯ ಕಾಂತಿ ಮಲಿನವಾದುದು (ಆದಿ 232/27–29). ಈಕೆ ಬ್ರಹ್ಮನ ಸಭೆಯಲ್ಲಿ ಇರುತ್ತಾಳೆ (ಸಭಾ 11/40). ಅರುಂಧತಿ ಸಹಿತನಾಗಿ, ವಸಿಷ್ಠನು ಉಜ್ಜಾನಕ ಸರೋವರದ ದಡದಲ್ಲಿ, ತಪಸ್ಸು ಮಾಡಿ ಶಾಂತಿಯನ್ನು ಪಡೆದನು (ವನ 130/17). ಅರುಂಧತಿಯ ತಪಸ್ಸು ಮತ್ತು ಪತಿಸೇವೆಯ ಪ್ರಭಾವದಿಂದಾಗಿ, ಆಕೆಯ ರೂಪಧಾರಣೆ ಮಾಡಲು ಸ್ವಾಹಾದೇವಿಯಿಂದ ಸಾಧ್ಯವಾಗಲಿಲ್ಲ (ವನ 224/14–15). ಸಪ್ತರ್ಷಿಗಳು, ಅರುಂಧತಿಯೊಬ್ಬಳನ್ನು ಉಳಿದು, ಮಿಕ್ಕ ಆರುಮಂದಿ ಮುನಿಪತ್ನಿಯರನ್ನೂ ತಮ್ಮಲ್ಲಿಂದ ಹೊರಗೆ ಹಾಕಿದ್ದರು (ವನ 226/8). ಶಿವನಿಂದ ಈಕೆಯ ತಪಸ್ಸಿನ ಪರೀಕ್ಷೆ ಮತ್ತು ಅವಳಿಗೆ ವರ ಪ್ರದಾನ (ಶಲ್ಯ 48/38–54). ವೃಷಾದರ್ಭಿಯೊಡನೆ ಪ್ರತಿಗ್ರಹದ ದೋಷವನ್ನು ಹೇಳಿದುದು (ಅನು 93/45). ಯಾತುಧಾನಿಯೊಡನೆ ತನ್ನ ಹೆಸರಿನ ಶಬ್ದವ್ಯುತ್ಪತ್ತಿಯನ್ನು ಹೇಳಿದುದು (ಅನು 93/96). ಕಮಲದ ಅಪಹಾರದ ಕುರಿತು ಈಕೆ ಆಣೆ ಹಾಕಿದುದು (ಅನು 93/127–128). ಅಗಸ್ತ್ಯರ ಕಮಲವು ಕಳ್ಳತನವಾದಾಗ ಆಣೆ ಭಾಷೆ ಹಾಕಿದುದು (ಅನು 94/38). ಈಕೆಯಿಂದ ಧರ್ಮರಹಸ್ಯದ ವರ್ಣನೆ (ಅನು 130/3–11). ದೇವತೆಗಳಿಂದ ಅರುಂಧತಿಯ ಪ್ರಶಂಸೆ. ಬ್ರಹ್ಮ

ನಿಂದ ಆಕೆಗೆ ವರಪ್ರದಾನ (ಅನು 130/12–13).

**ಅರುಂಧತೀವಟ** – ಒಂದು ತೀರ್ಥ. ಇದರ ಸಮೀಪದಲ್ಲಿರುವ ಸಾಮುದ್ರಕ ತೀರ್ಥದಲ್ಲಿ ಸ್ನಾನ ಮತ್ತು ಮೂರು ರಾತ್ರಿ ಬ್ರಹ್ಮಚರ್ಯ ಪಾಲನೆಯ ಮೂಲಕ ಉಪವಾಸವಿರುವುದ ರಿಂದ, ಅಶ್ವಮೇಧಯಜ್ಞದ ಫಲ ದೊರಕುತ್ತದೆ (ವನ 84/41).

**ಅರೂಪಾ** – ದಕ್ಷಕನ್ಯೆ ಪ್ರಾಧಾ ಎಂಬವಳ ಒಬ್ಬ ಮಗಳು (ಆದಿ 65/46).

**ಅರ್ಕ** – (1) ದಿವದ ಪುತ್ರ ಅರ್ಕ. ಅವನು ವಿವಸ್ವಂತನದೇ ರೂಪದವನು (ಆದಿ 1/42).

(2) ಒಬ್ಬ ಪ್ರಾಚೀನ ರಾಜ (ಆದಿ 1/236).

(3) ಒಬ್ಬ ದಾನವ ರಾಜ ಅವನು ರಾಜರ್ಷಿ ಋಷಿಕನ ರೂಪದಿಂದ ಜನ್ಮವೆತ್ತಿದ್ದನು (ಆದಿ 67/32–33).

**ಅರ್ಕಜ** – ಬಲೀಹಕುಲದ ಒಬ್ಬ ರಾಜ (ಉದ್ಯೋಗ 74/14).

**ಅರ್ಕಪರ್ಣ** – ಕಶ್ಯಪ ಪತ್ನಿ ಮುನಿಯಲ್ಲಿ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/43).

**ಅರ್ಘ್ಯಾಭಿಹರಣ ಪರ್ವ** – ಸಭಾಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 36ರಿಂದ 39ರ ವರೆಗೆ).

**ಅರ್ಚಿಷ್ಮತ್** – ಪಿತೃಗಳ ಒಂದು ಗಣ (ಶಾಂತಿ 269/15).

**ಅರ್ಚಿಷ್ಮತೀ** – ಅಂಗಿರಾ ಮಹರ್ಷಿಯ ನಾಲ್ಕನೆಯ ಮಗಳು (ವನ 218/6).

**ಅರ್ಜುನ** – (1) ಈತ ನರಸ್ವರೂಪನು (ಆದಿ 1/1). ಈತನನ್ನು ಧರ್ಮಮಯ ವಿಶಾಲ ವೃಕ್ಷದ ಕಾಂಡವೆಂದು ಹೇಳಲಾಗಿದೆ (ಆದಿ 1/110). ಈತ ಪಾಂಡುವಿನ ಕ್ಷೇತ್ರಜ ಪುತ್ರ. ಇಂದ್ರನಿಂದ ಕುಂತಿಯ ಗರ್ಭದಲ್ಲಿ ಈತನ ಜನನವಾಯಿತು (ಆದಿ 63/116). ಇವನು ಇಂದ್ರನ ಅಂಶದಿಂದ ಪ್ರಕಟವಾದನು (ಆದಿ 67/111). ಫಾಲ್ಗುಣ ಮಾಸ ಮತ್ತು ಎರಡೂ ಫಾಲ್ಗುಣಿಗಳ ಸಂಧಿ ಕಾಲದಲ್ಲಿ ಇವನ ಜನ್ಮವಾಯಿತು. ಆದುದರಿಂದಲೇ ಆತನ ಹೆಸರು 'ಫಾಲ್ಗುಣ'ನೆಂದಾಯಿತು (ಆದಿ 122/35). ಆಕಾಶಭಾಷಿತದ ಮೂಲಕ ಜನ್ಮಕಾಲ ದಲ್ಲಿ ಇವನ ಪ್ರಶಂಸೆ (ಆದಿ 122/38–46). ಇವನ ಜನ್ಮೋತ್ಸವ ಸಮಯದಲ್ಲಿ ಎಲ್ಲಾ ದೇವತೆಗಳ, ಗಂಧರ್ವರ, ಆದಿತ್ಯರ, ರುದ್ರರ, ವಸುಗಳ, ನಾಗರ ಮತ್ತು ಋಷಿಗಳ ಶುಭಾ ಗಮನ ಮತ್ತು ಪ್ರಮುಖ ಅಪ್ಸರೆಯರಿಂದ ನೃತ್ಯಗಾನ (ಆದಿ 122/50–74). ಶತಶೃಂಗ ವಾಸಿಗಳಾದ ಋಷಿಗಳಿಂದ ಇವನ ನಾಮಕರಣ ಸಂಸ್ಕಾರ (ಆದಿ 123/20). ವಸುದೇವನ ಪುರೋಹಿತ ಕಾಶ್ಯಪನಿಂದ ಈತನಿಗೆ ಉಪನಯ ನಾದಿ ಸಂಸ್ಕಾರ. ರಾಜರ್ಷಿ ಶುಕನಿಂದ ಈತನ ಧನುರ್ವೇದದ ಅಧ್ಯಯನ (ಗೋರಖ) ಈತ ನಿಂದ ದ್ರೌಪದಿಯಲ್ಲಿ ಶ್ರುತಕೀರ್ತಿಯ ಜನನ (ಆದಿ 95/75). ಸುಭದ್ರೆಯ ಗರ್ಭದಿಂದ ಅಭಿಮನ್ಯುವಿನ ಜನ್ಮ (ಆದಿ 95/78). ಕೃಪಾ ಚಾರ್ಯನಿಂದ ಈತನ ಅಧ್ಯಯನ (ಆದಿ 129/ 23). ಅರ್ಜುನನೇ ಮೊದಲಾದವರಿಂದ ದ್ರೋಣರ ಶಿಷ್ಯತ್ವದಲ್ಲಿ ಅಧ್ಯಯನ (ಆದಿ 231/ 4). ಗುರುವಿನ ಅಭೀಷ್ಟ ಕಾರ್ಯವನ್ನು ಪೂರೈಸಿ ಕೊಡುವ ಪ್ರತಿಜ್ಞೆ (ಆದಿ 231/7). ಅರ್ಜುನನನ್ನು ಹಾರ್ದಿಕವಾಗಿ ಆಲಿಂಗಿಸಿಕೊಂಡು, ಅವನ ಪ್ರತಿ ಯಾಗಿ ಗುರುಗಳಿಂದ ಸ್ನೇಹ ಪ್ರಕಟಣೆ. ಇವನ ಅಧ್ಯಯನ ನಿಷ್ಠೆ ಮತ್ತು ಸರ್ವಾಧಿಕ ಯೋಗ್ಯತೆ (ಆದಿ 231/13–14). ಇವನೊಡನೆ ಕರ್ಣನ ಸ್ಪರ್ಧೆ (ಆದಿ 231/12). ದ್ರೋಣಾಚಾರ್ಯರ ಅಭಿಪ್ರಾಯದಂತೆ ಅರ್ಜುನ ಅನುಪಮ ಪ್ರತಿಭಾ ಶಾಲಿ (ಆದಿ 231/15). ಈತನು ತನ್ನ ಗುರುಭಕ್ತಿ ಮತ್ತು ಅಸ್ತ್ರಾಭ್ಯಾಸದ ಉತ್ಸಾಹದ ಕಾರಣದಿಂದ ಗುರುವಿಗೆ ವಿಶೇಷ ಪ್ರಿಯನಾದನು (ಆದಿ 131/10). ಈತನಿಂದ ರಾತ್ರಿಯಲ್ಲಿ ಧನುರ್ವಿದ್ಯೆಯ ಅಭ್ಯಾಸ (ಆದಿ 131/25). ಇವನನ್ನು ಅದ್ವಿತೀಯ ಧನುರ್ಧರನಾಗಿ ಮಾಡುವುದಕ್ಕಾಗಿ ದ್ರೋಣಾ ಚಾರ್ಯರಿಂದ ಆಶ್ವಾಸನೆ (ಆದಿ 131/27). ಏಕಲವ್ಯನ ಧನುರ್ವಿದ್ಯೆಯಿಂದ ಈತನ ಚಿಂತೆ ಮತ್ತು ದ್ರೋಣರ ನಿಂದೆ (ಆದಿ 131/48–49). ಸಮಸ್ತ ಯುದ್ಧ ವಿದ್ಯೆಗಳಲ್ಲಿ ಈತನ ಕೌಶಲ್ಯ (ಆದಿ 131/63). ಈತ ಸರ್ವಶ್ರೇಷ್ಠ ಅಸ್ತ್ರಾಭ್ಯಾಸಿ ಮತ್ತು ಗುರುಭಕ್ತನಾಗಿದ್ದನು (ಆದಿ 131/64). ದ್ರೋಣಾಚಾರ್ಯನಿಂದ ಇವನ ಲಕ್ಷ್ಯವೇಧದ ಪರೀಕ್ಷೆ ಮತ್ತು ಈತನಿಂದ ಗೃಧ್ರದ ಶಿರಚ್ಛೇದನ (ಆದಿ 132/1–9). ದ್ರೋಣಾಚಾರ್ಯರ ಮೇಲೆ ಆಕ್ರಮಣ ಮಾಡಿದ ಮೊಸಳೆಯನ್ನು ವಧಿಸಿದ್ದು

(ಆದಿ 132/17). ಪ್ರಸನ್ನರಾದ ದ್ರೋಣಾಚಾರ್ಯರಿಂದ ಇವನಿಗೆ 'ಬ್ರಹ್ಮಶಿರ'ವೆಂಬ ಅಸ್ತ್ರಪ್ರದಾನ (ಆದಿ 132/18). ರಂಗಭೂಮಿಯಲ್ಲಿ ಈತನಿಂದ ಅದ್ಭುತ ರಣಕೌಶಲ (ಆದಿ 134/18–25). ರಂಗಭೂಮಿಯಲ್ಲಿ ಕರ್ಣನಿಗೆ ಧಿಕ್ಕಾರ (ಆದಿ 135/18). ರಂಗಭೂಮಿಯಲ್ಲಿ ಕರ್ಣನೊಡನೆ ಹೋರಾಡಲು ಈತ ಸಿದ್ಧನಾಗುವುದು (ಆದಿ 135/21). ಇವನಿಂದ ಮಂತ್ರಿಗಳ ಸಹಿತ ದ್ರುಪದನ ಪರಾಜಯ ಮತ್ತು ಈತ ಅವನನ್ನು ಸೆರೆಹಿಡಿದು ದ್ರೋಣಾಚಾರ್ಯನಿಗೆ ಒಪ್ಪಿಸಿದುದು (ಆದಿ 137/63). ಇವನು ದ್ರುಪದನ 'ಅಹಿಚ್ಛತ್ರಾ'ವೆಂಬ ಪಟ್ಟಣವನ್ನು ಗೆದ್ದು, ಅದನ್ನು ದ್ರೋಣಾಚಾರ್ಯರಿಗೆ ಗುರುದಕ್ಷಿಣೆಯ ರೂಪದಲ್ಲಿ ಕೊಟ್ಟನು (ಆದಿ 137/77). ಬ್ರಹ್ಮಶಿರವೆಂಬ ಹೆಸರಿನ ಅಸ್ತ್ರದ ಪರಂಪರೆ ಮತ್ತು ಅದರ ಉಪಯೋಗದ ನಿಯಮಗಳನ್ನು ಹೇಳಿ, ವಿರೋಧಿಯಾದಾಗ ತನ್ನೊಂದಿಗೆ ಹೋರಾಡಬೇಕೆಂದು ದ್ರೋಣಾಚಾರ್ಯನು ಅರ್ಜುನನಿಂದ ಶಪಥ ಮಾಡಿಸಿದುದು (ಆದಿ 138/9–15). ಇವನಿಂದ ಯವನರಾಜ, ಸೌವೀರನರೇಶ ವಿಪುಲ ಮತ್ತು ಸುಮಿತ್ರರ ವಧೆ. ಈ ಪರಾಕ್ರಮಗಳಿಂದ ಧೃತರಾಷ್ಟ್ರನ ಚಿಂತೆ (ಆದಿ 153/18–19). ಹಿಡಿಂಬನ ಜೊತೆ ಯುದ್ಧವಾದಾಗ ಭೀಮಸೇನನ ಸಹಾಯಕ್ಕಾಗಿ ಇವನ ಸಿದ್ಧತೆ (ಆದಿ 153/18–19). ದ್ರೌಪದಿಯನ್ನು ಈತನಿಗೆ ಸಮರ್ಪಿಸಲು ದ್ರುಪದನ ಸಂಕಲ್ಪ ಮತ್ತು ಲಾಕ್ಷಾಗೃಹದಲ್ಲಿ ಇವನ ಮೃತ್ಯುವಾಗಿದೆಯೆಂದು ಸುದ್ದಿಕೇಳಿ ದ್ರುಪದನ ಶೋಕ (ಆದಿ 166/53). ಚಿತ್ರರಥ ಗಂಧರ್ವನಿಗೆ ಈತನ ಧಿಕ್ಕಾರ ಮತ್ತು ಇವನಿಂದ ಗಂಗಾದಿನದಿಗಳ ಮಹಿಮಾವರ್ಣನೆ (ಆದಿ 169/16–24). ಯುದ್ಧದಲ್ಲಿ ಈತನಿಂದ ಚಿತ್ರರಥನ ಮೇಲೆ ಆಗ್ನೇಯಾಸ್ತ್ರದ ಪ್ರಹಾರ ಮತ್ತು ಆತನ ಮೂರ್ಛೆ (ಆದಿ 169/31–33). ಚಿತ್ರರಥನಿಗೆ ಪ್ರಾಣದಾನ (ಆದಿ 169/37). ಚಿತ್ರರಥನೊಂದಿಗೆ ಈತನ ಸ್ನೇಹ (ಆದಿ 169/ 38–58). ಚಿತ್ರರಥನಿಂದ ಇವನಿಗೆ 'ಚಾಕ್ಷುಷಿ' ವಿದ್ಯೆ ಮತ್ತು ದಿವ್ಯಾಶ್ವಗಳ ಪ್ರಾಪ್ತಿ (ಆದಿ 169/43–46). ಇವನ ಮೇಲೆ ಚಿತ್ರರಥನ ಆಕ್ರಮಣದ ಕಾರಣ (ಆದಿ 169/60). ಚಿತ್ರರಥನ ಮೇಲೆ ವಿಜಯ ಪಡೆಯಲು ಕಾರಣ (ಆದಿ 169/71). ಯಾವನಾದರೂ ಶ್ರೋತ್ರಿಯ ಬ್ರಾಹ್ಮಣನನ್ನು ಪುರೋಹಿತ ರೂಪದಲ್ಲಿ ವರಣ ಮಾಡುವಂತೆ, ಈತನಿಗೆ ಚಿತ್ರರಥನ ಸಲಹೆ (ಆದಿ 169/74). ಚಿತ್ರರಥನಿಗೆ ಇವನಿಂದ ಆಗ್ನೇಯಾಸ್ತ್ರದ ಕೊಡುಗೆ (ಆದಿ 182/3). ಪಾಂಚಾಲಯಾತ್ರೆಯ ಸಮಯ ದಾರಿಯಲ್ಲಿ ಅರ್ಜುನಾದಿ ಪಾಂಡವರೊಂದಿಗೆ ವ್ಯಾಸರ ಭೇಟಿ (ಆದಿ 184/2). ದ್ರುಪದ ನಗರದಲ್ಲಿ ಅರ್ಜುನಾದಿ ಪಾಂಡವರು ತಾಯಿ ಸಹಿತ ಒಬ್ಬ ಕುಂಬಾರನ ಮನೆಯಲ್ಲಿ ವಾಸಿಸಿದುದು (ಆದಿ 184/6). ದ್ರೌಪದೀ ಸ್ವಯಂವರದಲ್ಲಿ ಈತ ಲಕ್ಷ್ಯಭೇದ ಮಾಡಲು ಸಿದ್ಧನಾಗುವುದನ್ನು ನೋಡಿ, ಈತನ ಸಂಬಂಧದಲ್ಲಿ ಬ್ರಾಹ್ಮಣರ ಊಹಾಪೋಹ (ಆದಿ 187/2–16). ಸ್ವಯಂವರದಲ್ಲಿ ಈತನಿಂದ ಲಕ್ಷ್ಯವೇಧ ಮತ್ತು ದ್ರೌಪದಿ ಈತನ ಕುತ್ತಿಗೆಗೆ ಜಯಮಾಲೆಯನ್ನು ಹಾಕಿದುದು (ಆದಿ 187/21–87). ಸ್ವಯಂವರಕ್ಕೆ ಬಂದ ರಾಜರೊಡನೆ ಬ್ರಾಹ್ಮಣ ವೇಷದಲ್ಲಿ ಯುದ್ಧ ಮಾಡುತ್ತಿದ್ದಾಗ, ಶ್ರೀಕೃಷ್ಣನಿಂದ ಬಲರಾಮನಿಗೆ ಇವರ ಪರಿಚಯ (ಆದಿ 188/20). ಸ್ವಯಂವರದಲ್ಲಿ ಕರ್ಣನೊಡನೆ ಯುದ್ಧ. ಕರ್ಣನ ಪರಾಜಯ (ಆದಿ 189/10–12). ದ್ರೌಪದಿಯ ಕುರಿತಾಗಿ ಯುಧಿಷ್ಠಿರನೊಡನೆ ಈತನ ಮಾತುಕತೆ (ಆದಿ 190/8–10). ದ್ರೌಪದಿಯೊಡನೆ ಇವರ (ಪಾಂಡವರ) ವಿಧಿಪೂರ್ವಕ ವಿವಾಹ (ಆದಿ 197/13). ಬ್ರಾಹ್ಮಣನ ಗೋಸಂಪತ್ತಿನ ರಕ್ಷಣೆಗಾಗಿ ಆಯುಧಾಗಾರ ಪ್ರವೇಶ ಮತ್ತು ವನವಾಸ (ಆದಿ 212/19–35). ಹರಿದ್ವಾರದಲ್ಲಿ ಉಲೂಪಿ ಈತನನ್ನು ನಾಗಲೋಕಕ್ಕೆ ಸೆಳೆದುದು (ಆದಿ 213/13). ಇವನಿಂದ ಉಲೂಪಿಯ ಗರ್ಭದಲ್ಲಿ ಇರಾವಂತನ ಜನನ (ಆದಿ 213/36). ಮಣಿಪುರಕ್ಕೆ ಹೋಗಿ ಚಿತ್ರಾಂಗದೆಯೊಡನೆ ಈತನ ವಿವಾಹ (ಆದಿ 214/15–26). ಇವನಿಂದ ಚಿತ್ರಾಂಗದೆಯ ಗರ್ಭದಲ್ಲಿ ಬಭ್ರುವಾಹನನ ಜನನ (ಆದಿ 214/27). ಈತನಿಂದ ದಕ್ಷಿಣ ತೀರ್ಥಗಳ ಸಂಚಾರ. ವರ್ಗಾ ಇತ್ಯಾದಿ ಅಪ್ಸರೆಯರನ್ನು ಮೊಸಳೆಯ ಜನ್ಮದಿಂದ ಉದ್ಧಾರ ಮಾಡಿದುದು (ಆದಿ 215, 216). ಪುನಃ ಮಣಿಪುರಕ್ಕೆ ಹೋಗಿ ಚಿತ್ರಾಂಗದೆಗೆ ಆಶ್ವಾಸನೆ ಮತ್ತು ರಾಜಸೂಯ ಯಜ್ಞಕ್ಕೆ ಬರು

ವಂತೆ ಆದೇಶ (ಆದಿ 216/23–31). ಗೋಕರ್ಣ ತೀರ್ಥದ ಕಡೆಗೆ ಈತನ ಪ್ರಯಾಣ (ಆದಿ 216/34). ಶ್ರೀಕೃಷ್ಣನೊಡನೆ ರೈವತಕ ಪರ್ವತದ ಮೇಲೆ ಪೂರ್ಣರಾತ್ರಿಯ ವಿಶ್ರಾಂತಿ (ಆದಿ 217/8). ಶ್ರೀಕೃಷ್ಣನೊಡನೆ ದ್ವಾರಕೆಗೆ ಗಮನ (ಆದಿ 217/15). ಸುಭದ್ರಾಹರಣದ ಕುರಿತು ಈತನಿಗೆ ಶ್ರೀಕೃಷ್ಣನ ಸಮ್ಮತಿ (ಆದಿ 218/21–23). ಸುಭದ್ರೆಯೊಡನೆ ವಿವಾಹವಾಗಲು ಯುಧಿಷ್ಠಿರ ನಿಂದ ಈತನಿಗೆ ಒಪ್ಪಿಗೆ (ಆದಿ 218/25). ಇವನಿಂದ ಸುಭದ್ರಾಹರಣ (ಆದಿ 219/7). ಇವನೊಂದಿಗೆ ಯುದ್ಧಮಾಡಲು ವೃಷ್ಣಿವಂಶ ದವರ ಸಿದ್ಧತೆ (ಆದಿ 219/16–19). ಸುಭದ್ರೆ ಯೊಡನೆ ಈತನ ವಿಧಿಪೂರ್ವಕ ವಿವಾಹ (ಆದಿ 220/13). ಪುಷ್ಕರತೀರ್ಥದಲ್ಲಿ ಈತ ವನವಾಸದ ಉಳಿದ ಸಮಯವನ್ನು ಕಳೆದುದು (ಆದಿ 220/14). ಸುಭದ್ರೆಯನ್ನು ಗೋಪಿಯ ವೇಷದಲ್ಲಿ ಅಲಂಕರಿಸಿ, ದ್ರೌಪದಿಯ ಬಳಿಗೆ ಈತ ಕಳುಹಿಸಿ ದುದು (ಆದಿ 220/19). ಯಮುನೆಯಲ್ಲಿ ಶ್ರೀಕೃಷ್ಣನೊಂದಿಗೆ ಈತನ ಜಲವಿಹಾರ (ಆದಿ 221/14–20). ಖಾಂಡವವನವನ್ನು ಸುಡುವಂತೆ, ಬ್ರಾಹ್ಮಣರೂಪಧಾರಿಯಾದ ಅಗ್ನಿಯಿಂದ, ಈತ ನಲ್ಲಿ ಪ್ರಾರ್ಥನೆ (ಆದಿ 222/5–11). ಅಗ್ನಿದೇವ ನಲ್ಲಿ ದಿವ್ಯ ಧನುಸ್ಸು ಮತ್ತು ರಥವನ್ನು ಈತ ಅಪೇಕ್ಷಿಸಿದುದು (ಆದಿ 223/15–21). ಅಗ್ನಿಯು ಈತನಿಗೆ ಗಾಂಡೀವ ಧನುಸ್ಸು, ಅಕ್ಷಯ ಬತ್ತಳಿಕೆ ಮತ್ತು ದಿವ್ಯರಥವನ್ನು ಕೊಟ್ಟುದು (ಆದಿ 224/6–14). ಖಾಂಡವವನ ದಹನ ಕಾಲದಲ್ಲಿ ಇಂದ್ರನೇ ಮೊದಲಾದ ದೇವತೆಗಳೊಡನೆ ಈತನ ಭಯಾನಕ ಯುದ್ಧ (ಆದಿ 226). ಇವನಿಂದ ತಕ್ಷಕಪತ್ನಿಯ ವಧೆ (ಆದಿ 226/6–8). ಇವ ನಿಂದ ಅಶ್ವಸೇನನಿಗೆ ಶಾಪ (ಆದಿ 226/11). ಇವನಿಂದ ಇಂದ್ರನ ಪರಾಜಯ ಮತ್ತು ಸ್ವರ್ಗಕ್ಕೆ ಹಿಂದಿರುಗುವಿಕೆ (ಆದಿ 226/13–23). ಇವನಿಂದ ಮಯಾಸುರನಿಗೆ ಅಭಯದಾನ (ಆದಿ 227/44). ಸಮಸ್ತ ದಿವ್ಯಾಸ್ತ್ರಗಳನ್ನು ಕೊಡುವೆನೆಂದು ಇಂದ್ರ ನಿಂದ ಈತನಿಗೆ ಆಶ್ವಾಸನೆ (ಆದಿ 233/10–12). ಅರ್ಜುನ ಮತ್ತು ಮಯಾಸುರರ ಮಾತುಕತೆ (ಸಭಾ 1/2–8). ಮಯಾಸುರನಿಂದ ಇವನಿಗೆ ದೇವದತ್ತವೆಂಬ ಶಂಖದ ಕೊಡುಗೆ (ಆದಿ 3/21). ಜರಾಸಂಧನನ್ನು ಗೆಲ್ಲುವ ವಿಷಯವಾಗಿ, ಯುಧಿಷ್ಠಿರನಲ್ಲಿ ಉತ್ಸಾಹ ತುಂಬಲು ವೀರೋಚಿತ ಉದ್ಗಾರ (ಸಭಾ 16/7–17). ಶ್ರೀಕೃಷ್ಣ ಮತ್ತು ಭೀಮಸೇನರೊಂದಿಗೆ ಈತನ ಮಗಧಯಾತ್ರೆ (ಸಭಾ 20). ದಿಗ್ವಿಜಯಕ್ಕಾಗಿ ಈತನ ಹೊರಡು ವಿಕೆ (ಸಭಾ 25/7). ಇವನಿಂದ ಕುಳಿಂದಾದಿ ದೇಶಗಳ ವಿಜಯ ಮತ್ತು ಭಗದತ್ತನ ಪರಾಜಯ (ಸಭಾ 26). ಅಂತರ್ಗಿರಿ, ಉಲೂಕಪುರ, ಮೋದಾಪುರ ಇತ್ಯಾದಿ ದೇಶಗಳ ಮೇಲೆ ಈತನ ವಿಜಯ (ಸಭಾ 27). ಕಿಂಪುರುಷ ಹಾಟಕ, ಮತ್ತು ಉತ್ತರ ಕುರುದೇಶಗಳ ಮೇಲೆ ವಿಜಯ ಪ್ರಾಪ್ತಿ ಮಾಡಿ ಈತ ಇಂದ್ರಪ್ರಸ್ಥಕ್ಕೆ ಹಿಂತಿರುಗಿದ್ದು (ಸಭಾ 28). ರಾಜಸೂಯಾನಂತರ ಅರ್ಜುನನು ದ್ರುಪದನನ್ನು ಸ್ವಲ್ಪ ದೂರದ ತನಕ ತಲುಪಿಸಿ ದುದು (ಸಭಾ 45/48). ಕರ್ಣ ಮತ್ತು ಅವನ ಅನುಯಾಯಿಗಳನ್ನು ಮತ್ತು ವಿರೋಧ ಪಕ್ಷದವ ರನ್ನು ಕೊಲ್ಲುವೆನೆಂದು ಅರ್ಜುನನ ಪ್ರತಿಜ್ಞೆ (ಸಭಾ 77/32–36). ಅರಣ್ಯವಾಸಕ್ಕೆ ಹೋಗುತ್ತಿ ರುವಾಗ, ಅರ್ಜುನನು ಹೊಯಿಗೆಯನ್ನು ಹಾರಿ ಸುತ್ತಾ ಹೋಗುತ್ತಿದ್ದುದರ ರಹಸ್ಯ (ಸಭಾ 80/5–15). ಇವನಿಂದ ಶ್ರೀಕೃಷ್ಣನ ಸ್ತೋತ್ರ (ವನ 12/11–43). ಇವನಿಂದ ದ್ರೌಪದಿಗೆ ಆಶ್ವಾಸನೆ (ವನ 12/133). ಜೊತೆಯಾಗಿ ಬಂದ ಪ್ರಜಾ ವರ್ಗದವರಿಗೆ ಕಾಡಿನಲ್ಲಿ ಈತನಿಂದ ಆಶ್ವಾಸನೆ (ವನ 23/13–14). ದ್ವೈತವನದಲ್ಲಿ ವಾಸಿಸುವಂತೆ ಈತನಿಂದ ಯುಧಿಷ್ಠಿರನಿಗೆ ಸಲಹೆ (ವನ 24/5–11). ತಪಸ್ಸಿಗಾಗಿ ನಡೆದುದು, ಮತ್ತು ಇಂದ್ರ ಕೀಲದಲ್ಲಿ ಇವನಿಂದ ಇಂದ್ರನ ಭೇಟಿ, ಮಾತುಕತೆ ಮತ್ತು ಇಂದ್ರನಿಂದ ವರಪ್ರದಾನ (ವನ 37/37–58). ನಾಲ್ಕು ತಿಂಗಳವರೆಗೆ ಈತನ ಉಗ್ರ ತಪಸ್ಸು (ವನ 38/22–27). ಇವನಿಂದ ಮೂಕದಾನವನ ವಧೆ (ವನ 39/7–16). ಕಿರಾತ ರೂಪಿನ ಶಂಕರನೊಡನೆ ಈತನ ಯುದ್ಧ (ವನ 39/32–64). ಇವನಿಂದ ಶಿವನ ಸ್ತುತಿ (ವನ 39/74–82). ಪಾಶುಪತಾಸ್ತ್ರಕ್ಕಾಗಿ ಮಹಾದೇವನಲ್ಲಿ ಈತನ ಪ್ರಾರ್ಥನೆ (ವನ 40/8). ಇವನಿಗೆ ಪಾಶುಪತಾಸ್ತ್ರ ಪ್ರಾಪ್ತಿ (ವನ 40/21). ಯಮನಿಂದ ಈತನಿಗೆ ದಂಡಾಸ್ತ್ರದ ಪ್ರಾಪ್ತಿ (ವನ 41/25–26). ವರುಣ ನಿಂದ ಪಾಶ–ಅಸ್ತ್ರದ ಪ್ರಾಪ್ತಿ (ವನ 41/31–32).

ಕುಬೇರನಿಂದ ಅಂತರ್ಧಾನಾಸ್ತ್ರದ ಪ್ರಾಪ್ತಿ (ವನ 41/91). ಇಂದ್ರನಿಂದ ಈತ ಸ್ವರ್ಗಕ್ಕೆ ಹೋಗುವಂತೆ ಆದೇಶ (ವನ 41/43–44). ಅರ್ಜುನನು ಯೋಚನೆಯಲ್ಲಿದ್ದಾಗ ಮಾತಲಿಯ ಮೂಲಕ ಇಂದ್ರನ ರಥದ ಆಗಮನ ಮತ್ತು ಅದರಲ್ಲಿ ಕುಳಿತು ಈತ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದುದು (ವನ 42/10–31). ಸ್ವರ್ಗಕ್ಕೆ ತಲುಪಿದಾಗ ಈತನಿಗೆ ಮಹಾನ್ ಸ್ವಾಗತ ಮತ್ತು ಇಂದ್ರಸಭೆಯಲ್ಲಿ ಈತನಿಂದ ಇಂದ್ರನ ಭೇಟಿ (ವನ 43/8–15). ಇಂದ್ರಭವನದಲ್ಲಿ ಈತನಿಗೆ ಅಸ್ತ್ರ ಮತ್ತು ಸಂಗೀತದ ಶಿಕ್ಷಣ (ವನ 44/3–11). ಅರ್ಜುನನನ್ನು ಸತ್ಕರಿಸುವುದಕ್ಕಾಗಿ, ಇಂದ್ರನಿಂದ ಚಿತ್ರಸೇನನ ಮೂಲಕ, ಊರ್ವಶಿಗೆ ಸಂದೇಶ ಮತ್ತು ಆದೇಶ (ವನ 45). ಊರ್ವಶಿ ಕಾಮಪೀಡಿತಳಾಗಿ ಅರ್ಜುನನ ಬಳಿಗೆ ಹೋದುದು ಮತ್ತು ತನ್ನ ಆಗಮನದ ಕಾರಣ ತಿಳಿಸಿದುದು (ವನ 46/22–35). ಊರ್ವಶಿಯ ಅಭಿಪ್ರಾಯವನ್ನು ಕೇಳಿ, ಅರ್ಜುನನು ತನ್ನ ಎರಡೂ ಕೈಗಳಿಂದಲೂ, ಕಣ್ಣುಗಳನ್ನು ಮುಚ್ಚಿಕೊಂಡನು. ಆಕೆಯ ಕಡೆಗೆ ನೋಡದಿರಲು ಕಾರಣ ಆಕೆ 'ಪೂರುವಂಶದ ಜನನಿ' ಎಂದನು. ಮಾತ್ರವಲ್ಲದೆ ಆಕೆಗೆ ಕುಂತಿ, ಮಾದ್ರಿ ಮತ್ತು ಶಚಿಯ ಸ್ಥಾನವನ್ನಿತ್ತನು (ವನ 46/36–47). ಅಸ್ವೀಕಾರ ಮಾಡಿದುದರಿಂದ ಈತನಿಗೆ ಊರ್ವಶಿಯು ಶಾಪ ಕೊಟ್ಟು ಹಿಂತಿರುಗಿದುದು (ವನ 46). ಅರ್ಜುನನಿಗೆ ಇಂದ್ರನ ಆಶ್ವಾಸನೆ (ವನ 46/55–59). ಯುಧಿಷ್ಠಿರನನ್ನು ರಕ್ಷಿಸುವಂತೆ ಮಹರ್ಷಿ ಲೋಮಶರೊಡನೆ ಈತನ ಪ್ರಾರ್ಥನೆ (ವನ 47/32–33). ಇಂದ್ರಲೋಕದಿಂದ ಹಿಂತಿರುಗಿ, ಗಂಧಮಾದನ ಪರ್ವತದ ಮೇಲೆ, ಈತ ತನ್ನ ಸಹೋದರರೊಡನೆ ಸೇರಿಕೊಂಡದ್ದು (ವನ 165/4). ಈತನಿಂದ ತನ್ನ ತಪಸ್ಸಿನ ಯಾತ್ರೆ ಮತ್ತು ಪಾಶುಪತಪ್ರಾಪ್ತಿಯ ವರ್ಣನೆ (ವನ 167). ಈತನಿಗೆ ಇಂದ್ರಲೋಕದಲ್ಲಿ ದೊರೆತ ಅಸ್ತ್ರಶಿಕ್ಷಣದ ವೃತ್ತಾಂತವನ್ನು ಹೇಳಿದುದು (ವನ 168). ನಿವಾತ ಕವಚರೊಡನೆ ತನ್ನ ಯುದ್ಧದ ವರ್ಣನೆ (ವನ 169 ರಿಂದ 172). ಹಿರಣ್ಯಪುರವಾಸಿಗಳಾದ ಪೌಲೋಮರು ಮತ್ತು ಕಾಲಕೇಯರ ವಧಾ ವೃತ್ತಾಂತವನ್ನು ತಿಳಿಸಿದುದು (ವನ 173). ಸಹೋದರರಿಗೆ ತನ್ನ ದಿವ್ಯಾಸ್ತ್ರಗಳ ಪ್ರಯೋಗ ತೋರಿಸಲು ಸಿದ್ಧನಾದುದು (ವನ 175/7). ಗಂಧರ್ವರ ಕೈಯಿಂದ ಕೌರವರನ್ನು ಬಿಡಿಸಲು ಅರ್ಜುನನ ಪ್ರತಿಜ್ಞೆ(ವನ 243/21). ಅರ್ಜುನನು ಗಂಧರ್ವರೊಡನೆ ದುರ್ಯೋಧನನನ್ನು ಬಿಡುವಂತೆ ಹೇಳಿದುದು. ಅವರು ಬಿಡದ ಕಾರಣ ಶರವರ್ಷ ಮಾಡಿದುದು (ವನ 244/12–21). ಇವನಿಂದ ಚಿತ್ರಸೇನ ’ಗಂಧರ್ವನ ಪರಾಜಯ (ವನ 245/1–26). ಜಯದ್ರಥನ ಅನುಯಾಯಿಗಳಾದ ಐನೂರು ಮಂದಿ ಪರ್ವತವಾಸಿ ಮಹಾರಥರ ಸಂಹಾರ (ವನ 271/8). ಸೌವೀರ ದೇಶದ ಹನ್ನೆರಡು ರಾಜಕುಮಾರರ ವಧೆ (ವನ 271/2). ಶಿಬಿ, ಇಕ್ಷ್ವಾಕು, ತ್ರಿಗರ್ತ ಮತ್ತು ಸಿಂಧುದೇಶದ ಕ್ಷತ್ರಿಯರ ವಿನಾಶ (ವನ 271/28). ದ್ವೈತವನದಲ್ಲಿ ನೀರು ತರಲು ಹೋಗುವುದು ಮತ್ತು ಮೂರ್ಚ್ಛಿತನಾಗುವುದು (ವನ 312/22–32). ಅರ್ಜುನನಿಂದ ಯುಧಿಷ್ಠಿರನಿಗೆ, ಅಜ್ಞಾತವಾಸ ಕಾಲದಲ್ಲಿರಲು ಕೆಲವು ಉಪಯೋಗೀ ರಾಜ್ಯಗಳ ಹೆಸರುಗಳ ಸೂಚನೆ (ವಿರಾಟ 1/12–13). ವಿರಾಟನಗರದಲ್ಲಿ 'ಬೃಹನ್ನಲಾ' ಎಂಬ ಹೆಸರಿನಿಂದ ಇರುವೆನೆಂದು ತಿಳಿಸಿದುದು (ವಿರಾಟ 2/25–27). ನಪುಂಸಕ ವೇಷದಲ್ಲಿ ವಿರಾಟರಾಜನ ಬಳಿಗೆ ಹೋದುದು ಮತ್ತು ತನ್ನನ್ನು ಅಲ್ಲಿ ಇರಗೊಡಿಸುವಂತೆ ಪ್ರಾರ್ಥಿಸಿದುದು (ವಿರಾಟ 11/2–9). ಬೃಹನ್ನಲಾ ರೂಪದಲ್ಲಿ ತನ್ನ ಮನೋಗತ ದುಃಖವನ್ನು ದ್ರೌಪದಿಯೊಡನೆ ಹೇಳಿದುದು (ವಿರಾಟ 24/23–25). ತನ್ನನ್ನು ಸಾರಥಿಯಾಗಿ ನೇಮಿಸುವಂತೆ ದ್ರೌಪದಿಯ ಮೂಲಕ ಉತ್ತರನಿಗೆ ಹೇಳಿಸಿದುದು (ವಿರಾಟ 36/10–13). ಉತ್ತರನ ಸಾರಥಿಯಾಗಿ ಯುದ್ಧಕ್ಕೆ ನಿರ್ಗಮನ (ವಿರಾಟ 37/27). ಭಯಭೀತನಾಗಿ ಓಡುತ್ತಿರುವ ಉತ್ತರನನ್ನು ಓಡಿ ಹೋಗಿ ಹಿಡಿದುದು (ವಿರಾಟ 38/40). ಉತ್ತರನಿಗೆ ತಿಳುವಳಿಕೆ ನೀಡಿ, ತನ್ನ ಸಾರಥಿಯಾಗಿ ಮಾಡಿ ರಥವನ್ನೇರಿಸಿದ್ದು (ವಿರಾಟ 38/46–51). ಶಮೀವೃಕ್ಷದಿಂದ ಅಸ್ತ್ರಗಳನ್ನು ಇಳಿಸುವಂತೆ ಉತ್ತರನಿಗೆ ಆದೇಶ (ವಿರಾಟ 40/3). ಉತ್ತರನಿಗೆ ಪಾಂಡವರ ದಿವ್ಯಾಯುಧಗಳ ಪರಿಚಯ ಮಾಡಿಕೊಟ್ಟುದು (ವಿರಾಟ 43). ಉತ್ತರ

ಕುಮಾರನಿಗೆ ತನ್ನ ಸಹೋದರರ ಪರಿಚಯ ತಿಳಿಸಿದುದು ಮತ್ತು ತನ್ನ ದಶನಾಮಗಳಲ್ಲಿ ಪ್ರತಿಯೊಂದರ ವಿವರಣೆ ನೀಡಿದುದು (ವಿರಾಟ 44/13–22). ತನ್ನ ನಪುಂಸಕತೆಯ ಕಾರಣವನ್ನು ಉತ್ತರನಿಗೆ ತಿಳಿಸಿದುದು (ವಿರಾಟ 45/13). ತನ್ನ ಅಸ್ತ್ರಗಳನ್ನು ಸ್ಮರಿಸಿದುದು. ಅವುಗಳ ಆಗಮನ ವಾದಾಗ ಮಾತುಕತೆ (ವಿರಾಟ 45/27–28). ಇವನಿಂದ ಶಂಖವನ್ನೂದುವಿಕೆ ಮತ್ತು ಹೆದರಿದ ಉತ್ತರನಿಗೆ ಧೈರ್ಯ ತುಂಬಿದುದು (ವಿರಾಟ 46/8–23). ಬಾಣಗಳ ಮೂಲಕ ಆಚಾರ್ಯ ದ್ರೋಣರಿಗೆ ಪ್ರಣಾಮ ಮಾಡಿದುದು ಮತ್ತು ಯುದ್ಧಕ್ಕೆ ಅಪ್ಪಣೆ ಕೇಳಿದುದು (ವಿರಾಟ 53/7). ಕೌರವಸೇನೆಯ ಮೇಲೆ ಆಕ್ರಮಣ ಮಾಡಿ, ವಿರಾಟನ ಗೋವುಗಳನ್ನು ಹಿಂತಿರುಗಿಸಿದುದು (ವಿರಾಟ 53/24–25). ಕರ್ಣನ ಮೇಲೆ ಆಕ್ರಮಣ (ವಿರಾಟ 54/4–5). ಇವನಿಂದ ವಿಕರ್ಣನ ಪರಾಜಯ (ವಿರಾಟ 54/9–10). ಶತ್ರುಂತಪ ರಾಜನ ವಧೆ (ವಿರಾಟ 54/11–13). ಕರ್ಣನ ಸಹೋದರ ಸಂಗ್ರಾಮಜಿತನ ವಧೆ (ವಿರಾಟ 54/18). ಕರ್ಣನ ಪರಾಜಯ (ವಿರಾಟ 54/19–36). ಕೌರವಸೇನೆಯ ಸಂಹಾರ ಮಾಡಿ, ಧ್ವಸ್ತಗೊಳಿಸಿದುದು (ವಿರಾಟ 55/1–38). ಉತ್ತರ ನಿಗೆ ಕೌರವವೀರರ ಪರಿಚಯ ಹೇಳಿ ಕೃಪಾ ಚಾರ್ಯರ ಬಳಿಗೆ ಹೋದುದು (ವಿರಾಟ 55/ 41–60). ಕೃಪಾಚಾರ್ಯನನ್ನು ರಥಹೀನನಾಗಿ ಮಾಡಿ, ಗಾಯಗೊಳಿಸಿದ್ದು (ವಿರಾಟ 57/36–38). ದ್ರೋಣಾಚಾರ್ಯರೊಂದಿಗೆ ಯುದ್ಧ ಮತ್ತು ಆತನನ್ನು ಗಾಯಗೊಳಿಸಿದ್ದು (ವಿರಾಟ 58). ಅಶ್ವತ್ಥಾಮನೊಂದಿಗೆ ಯುದ್ಧ ಮತ್ತು ಆತನ ಬಾಣಗಳ ಸಮಾಪ್ತಿ (ವಿರಾಟ 59/1–15). ಕರ್ಣ ನೊಂದಿಗೆ ಪುನಃ ಯುದ್ಧ ಮತ್ತು ಅವನನ್ನು ಗಾಯಗೊಳಿಸಿ ಓಡಿಸಿದ್ದು (ವಿರಾಟ 60). ಉತ್ತರನು ಹತೋತ್ಸಾಹನಾದುದನ್ನು ನೋಡಿ, ಅವನಿಗೆ ಆಶ್ವಾಸನೆ ಕೊಟ್ಟು ಭೀಷ್ಮರ ಬಳಿಗೆ ಹೋದುದು; ಅವರ ಧ್ವಜವನ್ನು ಖಂಡಿಸಿದುದು (ವಿರಾಟ 61/13–35). ದುಃಶಾಸನನನ್ನು ಗಾಯ ಗೊಳಿಸಿದ್ದು (ವಿರಾಟ 61/40). ವಿಕರ್ಣನನ್ನು ರಥದಿಂದ ಕೆಳಗೆ ಬೀಳಿಸಿದುದು (ವಿರಾಟ 61/ 42). ದುಃಸಹ ಮತ್ತು ವಿವಿಂಶತಿಯರನ್ನು ಗಾಯಗೊಳಿಸಿದ್ದು (ವಿರಾಟ 61/45). ರಣ ಭೂಮಿಯಲ್ಲಿ ರಕ್ತದ ನದಿಯನ್ನು ಕಾಣಿಸಿದುದು (ವಿರಾಟ 62/17–21). ಸಮಸ್ತ ಕೌರವ ಮಹಾ ರಥಿಗಳನ್ನು ಪರಾಜಯಗೊಳಿಸಿದುದು (ವಿರಾಟ 63/1–16). ಭೀಷ್ಮರೊಡನೆ ಅದ್ಭುತ ಯುದ್ಧ ಅವರನ್ನು ಗಾಯಗೊಳಿಸಿ ವಿಮುಖರನ್ನಾಗಿಸಿ ದುದು (ವಿರಾಟ 64). ಪುನಃ ಆತನಿಂದ ವಿಕರ್ಣನ ಪರಾಜಯ (ವಿರಾಟ 65/10). ದುರ್ಯೋಧನನ ಪರಾಜಯ (ವಿರಾಟ 65/13). ಸಮ್ಮೋಹನಾಸ್ತ್ರದ ಮೂಲಕ ಸಮಸ್ತ ಕೌರವ ಮಹಾರಥಿಗಳನ್ನು ಮೋಹಿತರನ್ನಾಗಿ ಮಾಡಿದುದು (ವಿರಾಟ 66/8–11). ಯುದ್ಧನಿಂತ ಮೇಲೆ, ಈತನಿಂದ ಭೀಷ್ಮರೇ ಮೊದಲಾದ ಶ್ರೇಷ್ಠ ಪುರುಷರಿಗೆ ಅಭಿವಾದನ ಮತ್ತು ಸಮ್ಮಾನ (ವಿರಾಟ 66/25–26). ದುರ್ಯೋಧನನ ಕಿರೀಟ ವನ್ನು ಖಂಡಿಸಿದುದು (ವಿರಾಟ 66/27). ತನ್ನ ರಹಸ್ಯವನ್ನು ಬಹಿರಂಗ ಪಡಿಸದಂತೆ ಉತ್ತರನಲ್ಲಿ ಹೇಳಿದುದು (ವಿರಾಟ 67/9–10). ಉತ್ತರೆಗೆ ಕೌರವ ಮಹಾರಥಿಗಳ ವಸ್ತ್ರಗಳನ್ನಿತ್ತುದು (ವಿರಾಟ 69/16). ವಿರಾಟನಿಗೆ ಯುಧಿಷ್ಠಿರನ ಪರಿಚಯ ಹೇಳಿದುದು (ವಿರಾಟ 70/9–28). ಉಳಿದ ನಾಲ್ಕು ಮಂದಿ ಪಾಂಡವರ ಮತ್ತು ದ್ರೌಪದಿಯ ಪರಿಚಯ ತಿಳಿಸಿದುದು (ವಿರಾಟ 71/3–10). ಉತ್ತರನಿಂದ ಅರ್ಜುನನ ಪರಾಕ್ರಮದ ವರ್ಣನೆ (ವಿರಾಟ 71/19–21). ಪುತ್ರವಧುವಾಗಿ ಉತ್ತರೆಯ ಸ್ವೀಕಾರ (ವಿರಾಟ 72/7). ಯುದ್ಧ ಮಾಡದಿ ರುವ ಶ್ರೀ ಕೃಷ್ಣನನ್ನು ಸಹಾಯಕನಾಗಿ ಸ್ವೀಕರಿಸಿ ದುದು (ಉದ್ಯೋಗ 7/21). ಹಸ್ತಿನಾಪುರಕ್ಕೆ ಹಿಂದಿರುಗುತ್ತಿರುವ ಸಂಜಯನೊಡನೆ ಕೌರವರಿಗೆ ಸಂದೇಶ ತಿಳಿಸಿದುದು (ಉದ್ಯೋಗ 32). ಸಂಜಯನಿಂದ ಈತನ ಪರಾಕ್ರಮದ ವರ್ಣನೆ (ಉದ್ಯೋಗ 50/26–28). ಕೌರವರಲ್ಲಿ ಸಂಧಿ ಮಾಡುವ ಕುರಿತು, ಶ್ರೀಕೃಷ್ಣನ ಸಮ್ಮುಖದಲ್ಲಿ ತನ್ನ ವಿಚಾರವನ್ನು ಪ್ರಕಟಿಸಿದುದು (ಉದ್ಯೋಗ 78). ಅರ್ಧ ರಾಜ್ಯ ಪಡೆದೇ ಸಂಧಿಸ್ವೀಕಾರ ಮಾಡಲು ಶ್ರೀಕೃಷ್ಣನೊಡನೆ ಹೇಳಿದುದು (ಉದ್ಯೋಗ 83/51–53). ಧೃಷ್ಟದ್ಯುಮ್ನನನ್ನು ಪ್ರಧಾನ ಸೇನಾಪತಿಯಾಗಿ ಮಾಡಲು ಈತನಿಂದ ಸೂಚನೆ (ಉದ್ಯೋಗ 151/19–25). ಯುದ್ಧಕ್ಕಾಗಿ

ಹೇಳಲ್ಪಟ್ಟ ಶ್ರೀಕೃಷ್ಣನ ಮಾತುಗಳ ಸಮರ್ಥನೆ (ಉದ್ಯೋಗ 154/25–26). ತನ್ನ ಪರಾಕ್ರಮದ ವರ್ಣನೆಮಾಡಿ, ರುಕ್ಮಿಯ ಸಹಾಯವನ್ನು ಅಸ್ವೀಕಾರ ಮಾಡಿದುದು (ಉದ್ಯೋಗ 158/27–35). ಉಲೂಕನೊಡನೆ ದುರ್ಯೋಧನನ ಸಂದೇಶಕ್ಕೆ ಪ್ರತ್ಯುತ್ತರ (ಉದ್ಯೋಗ 162/37–44). ಯುಧಿಷ್ಠಿರನು ಪ್ರಶ್ನಿಸಿದಾಗ, ಮೂರು ಲೋಕಗಳನ್ನು ರೆಪ್ಪೆಬಡಿಯುವಷ್ಟರಲ್ಲಿ, ನಷ್ಟ ಮಾಡಬಹುದಾದ ತನ್ನ ಶಕ್ತಿಯನ್ನು ಹೇಳಿದುದು (ಉದ್ಯೋಗ 194/10–11). ಯುಧಿಷ್ಠಿರನ ಆಜ್ಞೆಯಂತೆ, ಈತನು ತನ್ನ ಸೇನೆಯಿಂದ ವಜ್ರವ್ಯೂಹ ನಿರ್ಮಿಸಿದುದು (ಭೀಷ್ಮ 19/7). 'ಶ್ರೀಕೃಷ್ಣನ ದಯೆಯಿಂದ ವಿಜಯವಾಗುತ್ತದೆ' ಹೀಗೆ ಹೇಳಿ ಯುಧಿಷ್ಠಿರನಿಗೆ ಆಶ್ವಾಸನೆ (ಭೀಷ್ಮ 20/7–17). ಈತನಿಂದ ದುರ್ಗಾದೇವಿಯ ಸ್ತವನ ಮತ್ತು ವರಪ್ರಾಪ್ತಿ (ಭೀಷ್ಮ 23/4–19). ಎರಡೂ ಸೇನೆಗಳ ಮಧ್ಯದಲ್ಲಿ ತನ್ನ ರಥ ನಿಲ್ಲಿಸುವಂತೆ ಶ್ರೀಕೃಷ್ಣನಲ್ಲಿ ಈತನ ಪ್ರಾರ್ಥನೆ (ಭೀಷ್ಮ 25/21). ಸ್ವಜನರನ್ನು ನೋಡಿ, ಮೋಹಗ್ರಸ್ತನಾಗಿ, ಯುದ್ಧದಿಂದ ದುಃಖ, ಧರ್ಮನಾಶದ ಭಯ ಮತ್ತು ದೋಷಗಳನ್ನು ಪ್ರಕಟಿಸುತ್ತಾ, ಧನುಸ್ಸನ್ನು ತ್ಯಾಗ ಮಾಡಿ, ಕುಳಿತುಕೊಳ್ಳುವುದು (ಭೀಷ್ಮ 25/26–47). ಕಿಂಕರ್ತವ್ಯ ವಿಮೂಢನಾಗಿ, ತನ್ನ ಕರ್ತವ್ಯದ ಕುರಿತು ಉಪದೇಶ ನೀಡಲು ಶ್ರೀಕೃಷ್ಣನಲ್ಲಿ ಪ್ರಾರ್ಥಿಸುತ್ತಾ, ಯುದ್ಧ ಮಾಡದಿರಲು ನಿರ್ಧಾರ ಮಾಡಿ ಕುಳಿತುಕೊಳ್ಳುವುದು (ಭೀಷ್ಮ 26/4–9). ಭಗವಂತನಿಂದ ಅರ್ಜುನನು ಗೀತೋಪದೇಶ ಕೇಳುವುದು (ಭೀಷ್ಮ 26/11–42). ಅರ್ಜುನನು ಭಗವಂತನಲ್ಲಿ ಸ್ಥಿತಪ್ರಜ್ಞ ಪುರುಷನ ಲಕ್ಷಣವನ್ನು ಕೇಳುವುದು (ಭೀಷ್ಮ 26/54). ಜ್ಞಾನ ಮತ್ತು ಕರ್ಮಗಳ ಶ್ರೇಷ್ಠತೆಯ ವಿಷಯದಲ್ಲಿ ಅರ್ಜುನನ ಸಂಶಯ (ಭೀಷ್ಮ 27/1–2). ಬಲಾತ್ಕಾರವಾಗಿ ಪಾಪ ಮಾಡಿಸುವ ಕಾರಣ ಯಾವುದು? ಈ ವಿಷಯದಲ್ಲಿ ಈತನ ಪ್ರಶ್ನೆ (ಭೀಷ್ಮ 27/36). ಭಗವಂತನಾದ ಶ್ರೀಕೃಷ್ಣನ ಜನ್ಮ ಆಧುನಿಕವೆಂದು ತಿಳಿದು ಅರ್ಜುನನು ಸಂದೇಹಪಡುವುದು (ಭೀಷ್ಮ 28/4). ಸನ್ಯಾಸ ಮತ್ತು ನಿಷ್ಕಾಮಕರ್ಮಯೋಗದ ಶ್ರೇಷ್ಠತೆಯ ವಿಷಯದಲ್ಲಿ ಪ್ರಶ್ನೆ (ಭೀಷ್ಮ 29/1). ಯೋಗಭ್ರಷ್ಟ ಪುರುಷನ ಗತಿಯ ಕುರಿತು ಅರ್ಜುನನ ಪ್ರಶ್ನೆ ಮತ್ತು ಸಂಶಯ ನಿವಾರಣೆಗಾಗಿ ಭಗವಂತನಲ್ಲಿ ಪ್ರಾರ್ಥನೆ (ಭೀಷ್ಮ 30/37–39). ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಗಳ ಕುರಿತಾಗಿ ಇವನಿಂದ ಏಳು ಪ್ರಶ್ನೆಗಳು (ಭೀಷ್ಮ 32/1–2). ಅರ್ಜುನನಿಂದ ಭಗವಂತನ ಸ್ತುತಿ ಮತ್ತು ಅವನ ಪ್ರಭಾವಗಳ ವರ್ಣನೆ ಮಾಡುತ್ತಾ, ಅವನ ಅಲೌಕಿಕ ಶಕ್ತಿಗಳನ್ನು ತಿಳಿಯುವುದಕ್ಕೋಸ್ಕರ ಅಪೇಕ್ಷೆಯನ್ನು ವ್ಯಕ್ತಪಡಿಸಿದುದು ಮತ್ತು ಭಗವಂತನ ಕುರಿತಾದ ಚಿಂತನೆಯ ವಿಷಯದಲ್ಲಿ ಏಳು ಪ್ರಶ್ನೆ ಮಾಡಿ, ಯೋಗಶಕ್ತಿ ಮತ್ತು ಅಲೌಕಿಕ ಶಕ್ತಿಗಳನ್ನು ವಿಸ್ತಾರವಾಗಿ ಹೇಳುವಂತೆ ಪ್ರಾರ್ಥನೆ ಮಾಡಿದುದು (ಭೀಷ್ಮ 34/12–18). ತನ್ನ ಮೋಹ ನಿವೃತ್ತಿಯಾಯಿತೆಂದು ಒಪ್ಪಿಕೊಳ್ಳುತ್ತಾ, ಅರ್ಜುನನಿಂದ ಭಗವಂತನ ವಚನಗಳ ಪ್ರಶಂಸೆ ಮತ್ತು ವಿಶ್ವರೂಪವನ್ನು ನೋಡುವ ಇಚ್ಛೆಯನ್ನು ಪ್ರಕಟಿಸಿ, ಆ ರೂಪದರ್ಶನ ಮಾಡಿಸಬೇಕೆಂದು ಭಗವಂತನನ್ನು ಪ್ರಾರ್ಥಿಸಿದುದು (ಭೀಷ್ಮ 35/1–4). ಅರ್ಜುನನು ಭಗವಂತನ ವಿಶ್ವರೂಪ ದರ್ಶನ ಮಾಡಿ, ಸ್ತುತಿಸಿದುದು (ಭೀಷ್ಮ 35/15–31). ಭಯಭೀತನಾದ ಅರ್ಜುನನಿಂದ ಭಗವಂತನ ಸ್ತುತಿ ಮತ್ತು ಚತುರ್ಭುಜ ರೂಪನ ದರ್ಶನ ಮಾಡಿಸಲು ಪ್ರಾರ್ಥನೆ (ಭೀಷ್ಮ 35/35–46). ಸಾಕಾರ, ನಿರಾಕಾರ ಉಪಾಸಕರಲ್ಲಿ ಯಾರು ಶ್ರೇಷ್ಠರು? ಇದನ್ನು ತಿಳಿಯಲು ಅರ್ಜುನನ ಪ್ರಶ್ನೆ (ಭೀಷ್ಮ 36/1). ಗುಣಾತೀತ ಪುರುಷನ ಕುರಿತು ಅರ್ಜುನನ ಮೂರು ಪ್ರಶ್ನೆ (ಭೀಷ್ಮ 38/21). ಶಾಸ್ತ್ರ ವಿಧಿಯನ್ನು ತ್ಯಜಿಸಿ, ಶ್ರದ್ಧೆಯಿಂದ ಪೂಜೆ ಮಾಡುವ ಪುರುಷರ ನಿಷ್ಠೆಯ ಕುರಿತಾಗಿ ಈತನ ಪ್ರಶ್ನೆ (ಭೀಷ್ಮ 41/1). ಸನ್ಯಾಸ ಮತ್ತು ತ್ಯಾಗದ ತತ್ವವನ್ನು ತಿಳಿಯಲು ಅರ್ಜುನನ ಪ್ರಶ್ನೆ (ಭೀಷ್ಮ 42/1). ಅರ್ಜುನ ಮತ್ತು ಶ್ರೀಕೃಷ್ಣನ ಪ್ರಭಾವದ ವರ್ಣನೆ (ಭೀಷ್ಮ 42/78). ಕವಚವನ್ನು ಕಳಚಿ, ಕಾಲ್ನಡಿಗೆಯಿಂದಲೇ ಕೌರವಸೇನೆಯ ಕಡೆಗೆ ಹೋಗುತ್ತಿದ್ದ ಯುಧಿಷ್ಠಿರನೊಡನೆ, ಆ ಕಡೆಗೆ ಹೋದ ಕಾರಣವನ್ನು ಕೇಳಿದುದು (ಭೀಷ್ಮ 43/16). ಪ್ರಥಮ ದಿನದ ಯುದ್ಧದಲ್ಲಿ ಭೀಷ್ಮರೊಡನೆ ಈತನ ದ್ವಂದ್ವ ಯುದ್ಧ (ಭೀಷ್ಮ 45/3–11). ಭೀಷ್ಮನೊಡನೆ

ಘೋರಯುದ್ಧ (ಭೀಷ್ಮ 52). ಎರಡನೇ ದಿನದ ಯುದ್ಧದಲ್ಲಿ ಅದ್ಭುತ ಪರಾಕ್ರಮ ತೋರಿಸುತ್ತಾ ಕೌರವ ಸೇನೆಯನ್ನು ನುಚ್ಚುನೂರಾಗಿಸಿದುದು (ಭೀಷ್ಮ 55/17–35). ಭೀಷ್ಮನನ್ನು ಕೊಲ್ಲಲು ಸಿದ್ಧನಾದ ಶ್ರೀಕೃಷ್ಣನನ್ನು ತಡೆದು, ತನ್ನ ಕರ್ತವ್ಯ ಪಾಲನೆ ಮಾಡುವೆನೆಂದು ಪ್ರತಿಜ್ಞಾಬದ್ಧನಾದುದು (ಭೀಷ್ಮ 59/101–103). ಈತನಿಂದ ಕೌರವ ಸೇನೆಯ ಪರಾಜಯ ಮತ್ತು ಮೂರನೇ ದಿನದ ಯುದ್ಧ ಸಮಾಪ್ತಿ (ಭೀಷ್ಮ 59/111–132). ಭೀಷ್ಮನ ಜೊತೆಯಲ್ಲಿ ದ್ವೈರಥ ಯುದ್ಧ (ಭೀಷ್ಮ 60/25–29). ಭೀಷ್ಮನೊಂದಿಗೆ ಭಯಂಕರ ಯುದ್ಧ (ಭೀಷ್ಮ 71). ಅಶ್ವತ್ಥಾಮನೊಂದಿಗೆ ಯುದ್ಧ (ಭೀಷ್ಮ 73/3–16). ಇವನಿಂದ ತ್ರಿಗರ್ತರಾಜ ಸುಶರ್ಮನ ಪರಾಜಯ ಮತ್ತು ಕೌರವಸೇನೆಯ ಓಡಾಟ (ಭೀಷ್ಮ 82/1). ಇವನ ಅದ್ಭುತ ಪರಾಕ್ರಮ (ಭೀಷ್ಮ 85/1–8). ಇವನಿಂದ ರಥಸೇನೆಯ ಸಂಹಾರ (ಭೀಷ್ಮ 89/35–38). ಇರಾವಂತನ ವಧೆಯಿಂದ ಈತನ ದುಃಖಪೂರ್ಣ ಉದ್ಗಾರ (ಭೀಷ್ಮ 96/2–12). ದುರ್ಯೋಧನನಲ್ಲಿ ಭೀಷ್ಮರಿಂದ ಈತನ ಪರಾಕ್ರಮದ ವರ್ಣನೆ (ಭೀಷ್ಮ 98/4–15). ದ್ರೋಣಾಚಾರ್ಯ ಮತ್ತು ಸುಶರ್ಮನೊಡನೆ ಯುದ್ಧ (ಭೀಷ್ಮ 102/6–23). ಇವನಿಂದ ತ್ರಿಗರ್ತರ ಪರಾಜಯ (ಭೀಷ್ಮ 104/4–8). ಶ್ರೀಕೃಷ್ಣನು ಎಚ್ಚರಿಕೆ ಕೊಟ್ಟ ಬಳಿಕ ಭೀಷ್ಮರೊಡನೆ ಯುದ್ಧ (ಭೀಷ್ಮ 106/42–54). ಭೀಷ್ಮರ ವಧೆ ಮಾಡಲು ಸಿದ್ಧನಾಗದಿರುವುದು (ಭೀಷ್ಮ 107/91–95). ಶ್ರೀಕೃಷ್ಣನು ತಿಳಿಯಪಡಿಸಿದ ಬಳಿಕ ಭೀಷ್ಮರ ವಧೆಗೆ ಸಿದ್ಧನಾಗುವುದು (ಭೀಷ್ಮ 107/103–106). ಭೀಷ್ಮವಧೆಗಾಗಿ ಶಿಖಂಡಿಗೆ ಪ್ರೋತ್ಸಾಹಕೊಡುವುದು (ಭೀಷ್ಮ 108/52–60). ಈತನ ಭಯದಿಂದ ಪೀಡಿತವಾಗಿ ಕೌರವ ಸೇನೆಯ ಪಲಾಯನ (ಭೀಷ್ಮ 109/13–14). ದುಃಶಾಸನನೊಡನೆ ಈತನ ದ್ವಂದ್ವಯುದ್ಧ (ಭೀಷ್ಮ 110/28–46; 111/57–58). ಈತನ ಅದ್ಭುತ ಪುರುಷಾರ್ಥ (ಭೀಷ್ಮ 114). ಭಗದತ್ತನೊಡನೆ ಅರ್ಜುನನ ದ್ವಂದ್ವಯುದ್ಧ (ಭೀಷ್ಮ 116/56–60). ಭೀಷ್ಮನೊಡನೆ ದ್ವಂದ್ವಯುದ್ಧ (ಭೀಷ್ಮ 116/62–78). ಭೀಷ್ಮನೊಡನೆ ಘೋರ ಯುದ್ಧ. ಅವನನ್ನು ಮೂರ್ಛೆಗೊಳಿಸಿದ್ದು (ಭೀಷ್ಮ 117/35–64). ದುಃಶಾಸನನೊಡನೆ ಯುದ್ಧ (ಭೀಷ್ಮ 117/12–19). ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮನ ಮೇಲೆ ಆಕ್ರಮಣ (ಭೀಷ್ಮ 118/37–54). ಭೀಷ್ಮನನ್ನು ರಥದಿಂದ ಬೀಳಿಸಿದುದು (ಭೀಷ್ಮ 119/87). ಬಾಣಶಯ್ಯೆಯಲ್ಲಿ ಮಲಗಿರುವ ಭೀಷ್ಮನಿಗೆ, ಮೂರು ಬಾಣಗಳಿಂದ, ದಿಂಬನ್ನು ಮಾಡಿಕೊಟ್ಟುದು (ಭೀಷ್ಮ 120/45). ದಿವ್ಯಾಸ್ತ್ರಗಳ ಮೂಲಕ ಭೀಷ್ಮನ ಬಾಯಿಗೆ ಶೀತಲ ಜಲಧಾರೆಯನ್ನು ಸುರಿಸಿದುದು (ಭೀಷ್ಮ 121/24–25). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/15–28). ನರಸ್ವರೂಪದಲ್ಲಿ ಇವನ ಮಹಿಮಾವರ್ಣನೆ (ದ್ರೋಣ 11/41–42). ದ್ರೋಣಾಚಾರ್ಯರಿಂದ ಸೆರೆಹಿಡಿಯಲ್ಪಡುವೆನೆಂದು ಭೀತನಾದ ಯುಧಿಷ್ಠಿರನಿಗೆ ಸಾಂತ್ವನ (ದ್ರೋಣ 13/7–14). ದ್ರೋಣಾಚಾರ್ಯನೊಡನೆ ಯುದ್ಧ ಮತ್ತು ಅವನ ಸೇನೆಯ ಪರಾಜಯ (ದ್ರೋಣ 16/43–51). ಯುಧಿಷ್ಠಿರನ ರಕ್ಷಣೆಯನ್ನು ಸತ್ಯಜಿತನಿಗೆ ಒಪ್ಪಿಸಿದುದು (ದ್ರೋಣ 17/44). ಸಂಶಪ್ತಕರೊಡನೆ ಯುದ್ಧ ಮತ್ತು ಸುಧನ್ವಾ ಎಂಬವನ ವಧೆ (ದ್ರೋಣ 18/22 ಮತ್ತು 19ನೇ ಅಧ್ಯಾಯ). ಈತನಿಂದ ಸಂಶಪ್ತಕರ ವಧೆ (ದ್ರೋಣ 27/18–26). ಸುಶರ್ಮನ ಸಹೋದರರ ವಧೆ ಮತ್ತು ಸುಶರ್ಮನ ಪರಾಜಯ (ದ್ರೋಣ 28/8–10). ಭಗದತ್ತನೊಡನೆ ಯುದ್ಧ (ದ್ರೋಣ 28/14–30). ಶ್ರೀಕೃಷ್ಣನೊಡನೆ ವೈಷ್ಣವಾಸ್ತ್ರದ ರಹಸ್ಯವನ್ನು ಕೇಳಿದುದು (ದ್ರೋಣ 29/21–24). ಇವನಿಂದ ಭಗದತ್ತನ ಆನೆಯಾದ ಸುಪ್ರತೀಕದ ವಧೆ (ದ್ರೋಣ 29/43). ಅರ್ಜುನನಿಂದ ಭಗದತ್ತನ ವಧೆ (ದ್ರೋಣ 29/47–50). ವೃಷಕ ಮತ್ತು ಅಚಲರ ವಧೆ (ದ್ರೋಣ 30/11). ಈತ ಶಕುನಿಯ ಮಾಯೆಯನ್ನು ನಾಶಗೊಳಿಸಿ, ಪರಾಜಯಗೊಳಿಸಿದ್ದು (ದ್ರೋಣ 30/15–28). ಕರ್ಣನೊಡನೆ ಯುದ್ಧ (ದ್ರೋಣ 32/52–62). ಇವನಿಂದ ಕರ್ಣನ ಮೂರು ಮಂದಿ ಸೋದರರ ವಧೆ (ದ್ರೋಣ 32/60–61). ಅಭಿಮನ್ಯುವಿನ ಮರಣದಿಂದ ವಿಲಾಪ (ದ್ರೋಣ 72/19–65). ಸಹೋದರರ ಮೇಲೆ ಸಿಟ್ಟಾದುದು (ದ್ರೋಣ 72/76–83) ಯುಧಿಷ್ಠಿರನಿಂದ ಅಭಿಮನ್ಯು

ವಧೆಯ ವೃತ್ತಾಂತ ಕೇಳಿ ಮೂರ್ಚ್ಛಿತನಾದುದು (ದ್ರೋಣ 73/16–17). ಜಯದ್ರಥ ವಧೆಯ ಪ್ರತಿಜ್ಞೆ ಮಾಡಿದುದು (ದ್ರೋಣ 73/20–49). ಜಯದ್ರಥ ವಧೆಯ ಕುರಿತು ಶ್ರೀಕೃಷ್ಣನೊಡನೆ ವೀರೋಚಿತ ಮಾತನ್ನಾಡಿದುದು (ದ್ರೋಣ 76). ಸೊಸೆ ಉತ್ತರೆ ಮತ್ತು ಸುಭದ್ರೆಯರನ್ನು ಸಾಂತ್ವನಗೊಳಿಸುವಂತೆ ಶ್ರೀಕೃಷ್ಣನಿಗೆ ಹೇಳಿದುದು (ದ್ರೋಣ 77/9–10). ಈತನಿಂದ ಶಂಕರನ ರಾತ್ರಿ ಪೂಜೆ (ದ್ರೋಣ 79/1–4). ಅರ್ಜುನನ ಸ್ವಪ್ನ. ಸ್ವಪ್ನದಲ್ಲಿ ಶ್ರೀಕೃಷ್ಣನ ಆಗಮನ ಮತ್ತು ಆತನ ಒಪ್ಪಿಗೆಯಂತೆ, ಅವನೊಂದಿಗೆ ಮಹಾದೇವನ ಬಳಿಗೆ ಹೋಗಿ ವಂದಿಸಿದುದು (ದ್ರೋಣ 80/2–49). ಇವನಿಂದ ಶಿವನ ಸ್ತುತಿ (ದ್ರೋಣ 80/55–64). ಶಿವನಿಂದ ದಿವ್ಯಾಸ್ತ್ರಗಳ ಯಾಚನೆ (ದ್ರೋಣ 81/3). ಪಾಶುಪತಾಸ್ತ್ರ ಪ್ರಾಪ್ತಿ ಮತ್ತು ಶ್ರೀಕೃಷ್ಣನೊಡನೆ ಶಿಬಿರಕ್ಕೆ ಪುನರಾಗಮನ – ಸ್ವಪ್ನದ ಸಮಾಪ್ತಿ (ದ್ರೋಣ 81/21–24). ಪಾಂಡವ ಸಭೆಯಲ್ಲಿ ತನ್ನ ಸ್ವಪ್ನವೃತ್ತಾಂತ ತಿಳಿಸಿದುದು (ದ್ರೋಣ 84/6). ಶ್ರೀಕೃಷ್ಣ ಮತ್ತು ಸಾತ್ಯಕಿಯೊಂದಿಗೆ ರಣಯಾತ್ರೆ (ದ್ರೋಣ 84/21). ಸಾತ್ಯಕಿಗೆ ಯುಧಿಷ್ಠಿರನ ರಕ್ಷಣೆಯ ಜವಾಬ್ದಾರಿ, ವಹಿಸಿಕೊಡುವುದು (ದ್ರೋಣ 84/27–34). ಯುದ್ಧಾರಂಭದಲ್ಲಿ ಈತನಿಂದ ಶಂಖನಾದ (ದ್ರೋಣ 88/20). ದುರ್ಮರ್ಷಣನ ಗಜಸೇನೆಯ ಸಂಹಾರ (ದ್ರೋಣ 89). ದುಃಶಾಸನನೊಡನೆ ಈತನ ಯುದ್ಧ ಮತ್ತು ಆತನ ಪಲಾಯನ (ದ್ರೋಣ 90). ಇವನಿಂದ ದ್ರೋಣಾಚಾರ್ಯನಿಗೆ ಸಮ್ಮಾನ (ದ್ರೋಣ 91/3–6). ದ್ರೋಣಾಚಾರ್ಯರೊಂದಿಗೆ ಯುದ್ಧ ಮತ್ತು ಆತನನ್ನು ಬಿಟ್ಟು ಮುಂದುವರಿದುದು (ದ್ರೋಣ 91/11–32; 92/6–14). ಕೃತವರ್ಮನೊಡನೆ ಯುದ್ಧ (ದ್ರೋಣ 92/16–26). ಶ್ರುತಾಯುಧನೊಡನೆ ಯುದ್ಧ (ದ್ರೋಣ 92/35–43). ಕಾಂಬೋಜದ ರಾಜ ಸುದಕ್ಷಿಣನೊಡನೆ ಯುದ್ಧ ಮತ್ತು ಆತನ ವಧೆ (ದ್ರೋಣ 92/61–71). ಶ್ರುತಾಯು ಮತ್ತು ಅಚ್ಯುತಾಯುಗಳೊಡನೆ ಇವನ ಯುದ್ಧ ಮತ್ತು ಅವರಿಬ್ಬರ ವಧೆ (ದ್ರೋಣ 93/7–24). ಇವನಿಂದ ನಿಯುತಾಯು ಮತ್ತು ದೀರ್ಘಾಯುಗಳ ವಧೆ (ದ್ರೋಣ 93/29). ಮ್ಲೇಚ್ಛಸೇನೆಯ ಸಂಹಾರ (ದ್ರೋಣ 93/31–59). ಶ್ರುತಾಯು ಮತ್ತು ಅಂಬಷ್ಠರೊಡನೆ ಯುದ್ಧ ಮತ್ತು ಅಂಬಷ್ಠನ ವಧೆ (ದ್ರೋಣ 93/60–69). ವಿಂದ ಮತ್ತು ಅನುವಿಂದರ ವಧೆ (ದ್ರೋಣ 99/25–29). ಸಂಗ್ರಾಮ ಕ್ಷೇತ್ರದಲ್ಲಿ ಈತನು ಸರೋವರವನ್ನು ಸೃಷ್ಟಿಸಿದುದು (ದ್ರೋಣ 99/59). ರಣಕ್ಷೇತ್ರದಲ್ಲಿ ಬಾಣಮಯವಾದ ಗೃಹನಿರ್ಮಾಣ (ದ್ರೋಣ 99/62). ಶ್ರೀಕೃಷ್ಣನ ಪ್ರೋತ್ಸಾಹದಿಂದ ಕೌರವನನ್ನು ಹೊಡೆಯಲು ಸಿದ್ಧನಾದುದು (ದ್ರೋಣ 102/19–21). ದುರ್ಯೋಧನನೊಡನೆ ಯುದ್ಧ ಮತ್ತು ಆತನನ್ನು ಪರಾಜಯಗೊಳಿಸಿದುದು (ದ್ರೋಣ 103/21–32). ಕೌರವ ಮಹಾರಥಿಗಳೊಡನೆ ಈತನ ಘೋರಯುದ್ಧ (ದ್ರೋಣ 104). ಈತನ ಧ್ವಜದ ವರ್ಣನೆ (ದ್ರೋಣ 105/8–9). ಒಂಭತ್ತು ಮಂದಿ ಮಹಾರಥಿಗಳೊಡನೆ ಈತನ ಯುದ್ಧ (ದ್ರೋಣ 105/33–38). ಕರ್ಣ ಮತ್ತು ಅಶ್ವತ್ಥಾಮರನ್ನು ಘಾಸಿಗೊಳಿಸಿದುದು (ದ್ರೋಣ 139/112–121) ಸಾತ್ಯಕಿಯನ್ನು ನೋಡಿ ಈತನ ಚಿಂತೆ (ದ್ರೋಣ 141/26–37). ಶ್ರೀಕೃಷ್ಣನ ಪ್ರೇರಣೆಯಿಂದ ಭೂರಿಶ್ರವನ ಬಲ ಭುಜವನ್ನು ಕಡಿದುದು (ದ್ರೋಣ 142/72). ಭೂರಿಶ್ರವನಿಗೆ ಉತ್ತರಕೊಟ್ಟದ್ದು (ದ್ರೋಣ 143/16–32). ಏಳು ಮಂದಿ ಕೌರವ ಯೋಧರೊಡನೆ ಯುದ್ಧ (ದ್ರೋಣ 145) ಈತನಿಂದ ಕರ್ಣನ ಪರಾಜಯ (ದ್ರೋಣ 145/83) ಕೌರವಸೇನೆಯ ಭೀಷಣ ಸಂಹಾರ (ದ್ರೋಣ 146) ಇವನು ಜಯದ್ರಥನ ಶಿರಚ್ಛೇದನ ಮಾಡಿ, ಬಾಣಗಳ ಮೂಲಕ ಅದನ್ನು, ಅವನ ತಂದೆ ವೃದ್ಧಕ್ಷತ್ರನ ತೊಡೆಯ ಮೇಲೆ ಹಾಕಿದುದು (ದ್ರೋಣ 146/122–127). ಕೃಪಾಚಾರ್ಯ ಮತ್ತು ಅಶ್ವತ್ಥಾಮನನ್ನು ಪರಾಜಯಗೊಳಿಸಿದ್ದು (ದ್ರೋಣ 147/9–11). ಕೃಪಾಚಾರ್ಯನು ಮೂರ್ಚ್ಛಿತನಾದಾಗ ವಿಲಪಿಸಿದುದು (ದ್ರೋಣ 147/13–27). ಭೀಮನನ್ನು ನಿಂದಿಸಿದುದಕ್ಕಾಗಿ ಕರ್ಣನನ್ನು ತೆಗಳಿದುದು (ದ್ರೋಣ 148/8–12). ಕರ್ಣನ ಮಗ ವೃಷಸೇನನನ್ನು ವಧಿಸುವ ಪ್ರತಿಜ್ಞೆ (ದ್ರೋಣ 148/19–20). ಕರ್ಣನೊಂದಿಗೆ ಯುದ್ಧ. ಆತನ ಪರಾಜಯ (ದ್ರೋಣ 159/62–64). ದ್ರೋಣಾಚಾರ್ಯನೊಂದಿಗೆ ಯುದ್ಧ ಮತ್ತು ಕೌರವ

ಸೇನೆಯ ನಾಶ (ದ್ರೋಣ 161). ಈತನಿಂದ ರಾಕ್ಷಸರಾಜ ಅಲುಂಬಸನ ಪರಾಜಯ (ದ್ರೋಣ 167/47). ಶಕುನಿ ಮತ್ತು ಉಲೂಕನ ಪರಾಜಯ (ದ್ರೋಣ 171/38–40). ಕರ್ಣನ ಪರಾಕ್ರಮ ದಿಂದ ಭಯಭೀತನಾದ ಯುಧಿಷ್ಠಿರನಿಂದ ಪ್ರೇರೇಪಿತನಾಗಿ ತನ್ನ ಕರ್ತವ್ಯವೇನೆಂದು ಶ್ರೀಕೃಷ್ಣ ನೊಡನೆ ಕೇಳಿದುದು (ದ್ರೋಣ 173/29–34). ಕರ್ಣನೊಡನೆ ಯುದ್ಧ ಮಾಡಲು ಘಟೋತ್ಕಚ ನಿಗೆ ಆದೇಶ ನೀಡಿದುದು (ದ್ರೋಣ 173/60–62). ಘಟೋತ್ಕಚ ವಧೆಯಿಂದ ಪ್ರಸನ್ನನಾದ ಕೃಷ್ಣನೊಡನೆ ಆ ಸಂತೋಷದ ಕಾರಣವನ್ನು ವಿಚಾರಿಸಿದುದು (ದ್ರೋಣ 180/6–10). ಜರಾಸಂಧನೇ ಮೊದಲಾದವರ ವಧಾವಿಚಾರದಲ್ಲಿ ಶ್ರೀಕೃಷ್ಣನೊಡನೆ ಪ್ರಶ್ನಿಸಿದುದು (ದ್ರೋಣ 181/1). ಉಭಯಪಕ್ಷದ ಸೈನಿಕರು ನಿದ್ರಿಸುವಂತೆ ಆದೇಶ ನೀಡಿದುದು (ದ್ರೋಣ 184/26–28). ದ್ರೋಣಾಚಾರ್ಯನೊಡನೆ ಘೋರಯುದ್ಧ ಮಾಡಿದುದು (ದ್ರೋಣ 188/24–25). ಶ್ರೀ ಕೃಷ್ಣನಿಂದ ಸಾತ್ಯಕಿಯ ಪ್ರಶಂಸೆ (ದ್ರೋಣ 191/48–53). ಅಶ್ವತ್ಥಾಮನ ಕ್ರೋಧ ಮತ್ತು ಗುರುಹತ್ಯೆಯ ಭೀಕರ ಪರಿಣಾಮದ ವರ್ಣನೆ (ದ್ರೋಣ 196/26–53). ನಾರಾಯಣಾಸ್ತ್ರ, ಗೋವು ಮತ್ತ ಬ್ರಾಹ್ಮಣರ ಮುಂದೆ ಗಾಂಡೀವವನ್ನು ಕೆಳಗಿಡುವ ಕುರಿತು ಹೇಳಿದುದು (ದ್ರೋಣ 199/53). ತನ್ನ ಮುಂದೆ ಮುಂದೆ ನಡೆಯುತ್ತಿರುವ ತ್ರಿಶೂಲಧಾರೀ ಪುರುಷನ ಕುರಿತಾಗಿ ವ್ಯಾಸರೊಡನೆ ಪ್ರಶ್ನಿಸಿದುದು (ದ್ರೋಣ 202/4–8). ಯುಧಿಷ್ಠಿರನ ಆದೇಶದಂತೆ ಅರ್ಧಚಂದ್ರವ್ಯೂಹ ಮಾಡಿ, ಕರ್ಣನೊಡನೆ ಯುದ್ಧಮಾಡಲು ಹೊರಟದ್ದು (ಕರ್ಣ 11/28). ಅಶ್ವತ್ಥಾಮನೊಡನೆ ಘೋರಯುದ್ಧ ಮತ್ತು ಆತನ ಪರಾಜಯ (ಕರ್ಣ 16 ಮತ್ತು 17ನೇ ಅಧ್ಯಾಯ). ಈತನಿಂದ ಗಜಸಹಿತ ದಂಡನ ವಧೆ (ಕರ್ಣ 18/19). ಸಂಶಪ್ತಕರ ಭೀಷಣ ಸಂಹಾರ (ಕರ್ಣ 19/2–26). ಸುಶರ್ಮನ ಆರು ಮಂದಿ ಸಹೋದರರ (ಸತ್ಯದೇವ, ಚಂದ್ರದೇವ, ಮಿತ್ರದೇವ, ಶ್ರುತಂಜಯ, ಸೌಶ್ರುತಿ ಮತ್ತು ಮಿತ್ರವರ್ಮ) ವಧೆ (ಕರ್ಣ 27/12–25). ಕೌರವಸೇನೆಯ ಸಂಹಾರ (ಕರ್ಣ 30/15–36). ಯುಧಿಷ್ಠಿರನ ಆದೇಶದಿಂದ ಕರ್ಣನ ಮೇಲೆ ಆಕ್ರಮಣ (ಕರ್ಣ 46/37). ಸಂಶಪ್ತಕರ ಸಂಹಾರ (ಕರ್ಣ 47). ಸುಶರ್ಮನೊಂದಿಗೆ ಯುದ್ಧ ಮತ್ತು ಹತ್ತುಸಾವಿರ ಸಂಶಪ್ತಕರ ವಧೆ (ಕರ್ಣ 43). ಸಂಶಪ್ತಕರ ಸಂಹಾರ ಮತ್ತು ಸುದಕ್ಷಿಣನ ಸಹೋದರನ ವಧೆ (ಕರ್ಣ 56/100–117). ಅಶ್ವತ್ಥಾಮನೊಡನೆ ಯುದ್ಧ ಮತ್ತು ಆತನನ್ನು ಸೋಲಿಸಿದುದು (ಕರ್ಣ 56/121–142). ಯುಧಿಷ್ಠಿರನನ್ನು ನೋಡಲು ಹೋಗುವಂತೆ ಶ್ರೀಕೃಷ್ಣನಲ್ಲಿ ಆಗ್ರಹ (ಕರ್ಣ 58/3–7). ಧೃಷ್ಟದ್ಯುಮ್ನನನ್ನು ಅಶ್ವತ್ಥಾಮನ ಹಿಡಿತದಿಂದ ಬಿಡಿಸಿದುದು ಮತ್ತು ಅಶ್ವತ್ಥಾಮನನ್ನು ಪರಾಜಯಗೊಳಿಸಿದ್ದು (ಕರ್ಣ 54/61). ಈತನಿಂದ ಅಶ್ವತ್ಥಾಮನ ಪರಾಜಯ (ಕರ್ಣ 64/31–32). ಶ್ರೀಕೃಷ್ಣನೊಂದಿಗೆ ಯುಧಿಷ್ಠಿರನ ಬಳಿಗೆ ಹೋಗಿ, ಪ್ರಣಾಮ ಮಾಡಿದುದು (ಕರ್ಣ 65/17). ಈ ತನಕ ಕರ್ಣನನ್ನು ಕೊಲ್ಲಲು ಸಾಧ್ಯವಾಗದ ಕಾರಣವನ್ನು ಯುಧಿಷ್ಠಿರನಿಗೆ ತಿಳಿಸಿ, ಅವನನ್ನು ವಧಿಸುವ ಪ್ರತಿಜ್ಞೆ ಮಾಡಿದುದು (ಕರ್ಣ 67). ಯುಧಿಷ್ಠಿರನ ವಧೆ ಮಾಡಲು ಸಿದ್ಧನಾದುದು (ಕರ್ಣ 69/9–15). ಶ್ರೀಕೃಷ್ಣನೊಡನೆ ತನ್ನ ಪ್ರತಿಜ್ಞಾ ಪೂರ್ತಿಕೆಯ ಉಪಾಯ ಕೇಳಿದುದು (ಕರ್ಣ 69/67–75). 'ನೀನು' ಎಂಬ ಸಂಬೋಧನೆಯಿಂದ ಯುಧಿಷ್ಠಿರನಿಗೆ ಕಟು ಮಾತುಗಳನ್ನಾಡಿದುದು (ಕರ್ಣ 70/2–21). ಯುಧಿಷ್ಠಿರನಿಗೆ ಅಪಮಾನ ಮಾಡಿದ ಕಾರಣ, ಆತ್ಮಹತ್ಯೆಗಾಗಿ ಕತ್ತಿಯನ್ನೆತ್ತಿದುದು (ಕರ್ಣ 70/23). ಯುಧಿಷ್ಠಿರನೊಡನೆ ಕ್ಷಮಾಯಾಚನೆ (ಕರ್ಣ 70/38–39). ಯುಧಿಷ್ಠಿರನಲ್ಲಿ ಕರ್ಣವಧೆಗಾಗಿ ಪ್ರತಿಜ್ಞೆ (ಕರ್ಣ 70/40–41). ಯುಧಿಷ್ಠಿರನ ಚರಣಗಳಲ್ಲಿ ಪ್ರಣಾಮ ಮತ್ತು ಕರ್ಣನ ವಧೆಗೆ ಪ್ರತಿಜ್ಞೆ (ಕರ್ಣ 71/35–38). ಕರ್ಣ ವಧೆಗಾಗಿ ಹೋಗುತ್ತಿದ್ದಾಗ ಚಿಂತಾಮಗ್ನನಾಗುವುದು (ಕರ್ಣ 72/16–17). ಶ್ರೀಕೃಷ್ಣನಲ್ಲಿ ಈತನ ವೀರೋದ್ಗಾರ (ಕರ್ಣ 74). ಇವನಿಂದ ಕೌರವಸೇನೆಯ ಭೀಷಣ ಸಂಹಾರ (ಕರ್ಣ 77/5–20). ಶ್ರೀಕೃಷ್ಣನೊಡನೆ ಕರ್ಣನ ಬಳಿಗೆ ಕೊಂಡೊಯ್ಯುವಂತೆ ಹೇಳಿದುದು (ಕರ್ಣ 79/7–12). ಇವನಿಂದ ಕೌರವಸೇನೆಯ ವಿಧ್ವಂಸ (ಕರ್ಣ 79/71–90; 80; 81). ಕೌರವರನ್ನು ಆಹ್ವಾನಿಸುತ್ತಾ

ವೃಷಸೇನನ ವಧೆ (ಕರ್ಣ 85/39). ಕರ್ಣನ ಸಮ್ಮುಖದಲ್ಲಿ ಯುದ್ಧಕ್ಕೆ ಉಪಸ್ಥಿತನಾದುದು (ಕರ್ಣ 86/23). ಕರ್ಣನ ವಧೆಗಾಗಿ ಶ್ರೀಕೃಷ್ಣ ನೊಡನೆ ವಾರ್ತಾಲಾಪ (ಕರ್ಣ 87/105–117). ಕರ್ಣನೊಡನೆ ದ್ವೈರಥ ಯುದ್ಧ (ಕರ್ಣ 89–90). ಈತನಿಂದ ರಾಜಕುಮಾರ ಸಭಾಪತಿಯ ವಧೆ (ಕರ್ಣ 89–64). ಕರ್ಣನ ಸರ್ಪಮುಖಿ ಬಾಣದಿಂದ ಈತನ ಕಿರೀಟ ಬಿದ್ದುಹೋದುದು (ಕರ್ಣ 90/33). ಈತನಿಂದ ಕರ್ಣನ ವಧೆ (ಕರ್ಣ 91/50). ರಥಸೇನೆಯ ನಾಶ (ಕರ್ಣ 93/42–46). ಅಶ್ವತ್ಥಾಮನೊಡನೆ ಯುದ್ಧ (ಶಲ್ಯ 14) ಶ್ರೀಕೃಷ್ಣನ ಸಮ್ಮುಖದಲ್ಲಿ ದುರ್ಯೋಧನನ ದುರಾಗ್ರಹದ ನಿಂದೆ (ಶಲ್ಯ 24/16–50). ದುರ್ಯೋಧನನನ್ನು ಕೊಲ್ಲುವ ಕುರಿತು ಶ್ರೀಕೃಷ್ಣ ನೊಡನೆ ಮಾತುಕತೆ (ಶಲ್ಯ 27/13–27). ಸತ್ಯಕರ್ಮಾ, ಸತ್ಯೇಷು ಮತ್ತು ನಲುವತ್ತೈದು ಪುತ್ರರ ಸಹಿತ ಸುಶರ್ಮನ ವಧೆ (ಶಲ್ಯ 27/38–48). ಶ್ರೀಕೃಷ್ಣನೊಡನೆ ಭೀಮಸೇನರ ಮತ್ತು ದುರ್ಯೋಧನರ ಬಲಾಬಲಗಳ ಕುರಿತು ಪ್ರಶ್ನಿಸಿದುದು (ಶಲ್ಯ 58/2). ಭೀಮಸೇನನಿಗೆ ತನ್ನ ತೊಡೆಯನ್ನು ತಟ್ಟಿ ಸಂಕೇತ ಕೊಟ್ಟುದು (ಶಲ್ಯ 58/21). ಯುದ್ಧಾನಂತರ ಈತನ ರಥ ದಗ್ಧವಾದುದು (ಶಲ್ಯ 62/13). ತನ್ನ ರಥ ಸುಟ್ಟು ಹೋದ ಕಾರಣವನ್ನು ಶ್ರೀಕೃಷ್ಣನಲ್ಲಿ ಕೇಳಿದುದು (ಶಲ್ಯ 62/16–17). ಅಶ್ವತ್ಥಾಮನಿಂದ ಭೀಮ ಸೇನನನ್ನು ರಕ್ಷಿಸುವುದಕ್ಕಾಗಿ ಶ್ರೀಕೃಷ್ಣನ ಸಂಗಡ ಹೋದುದು (ಸೌಪ್ತಿಕ). ಅಶ್ವತ್ಥಾಮನ ಅಸ್ತ್ರವನ್ನು ಶಾಂತಗೊಳಿಸಲು ಬ್ರಹ್ಮಾಸ್ತ್ರದ ಪ್ರಯೋಗ (ಶಲ್ಯ 14/5–6). ವ್ಯಾಸರನ್ನು ಕಂಡು ತನ್ನ ಅಸ್ತ್ರವನ್ನು ಹಿಂತೆಗೆದುಕೊಂಡುದು (ಸೌಪ್ತಿಕ 15/2–4). ಗಾಂಧಾರಿಯ ಶಾಪದ ಭಯದಿಂದ ಶ್ರೀಕೃಷ್ಣನ ಹಿಂದೆ ಅಡಗಿದ್ದು (ಸ್ತ್ರೀ 15/31). ಐಶ್ವರ್ಯದ ಮಹತ್ವವನ್ನು ತೋರಿಸುತ್ತಾ, ರಾಜಧರ್ಮ ಪಾಲನೆಗೋಸ್ಕರ ಯುಧಿಷ್ಠಿರನಿಗೆ ತಿಳಿಸಿದುದು (ಶಾಂತಿ 8). ಯುಧಿಷ್ಠಿರನಿಗೆ ತಿಳಿಯಪಡಿಸುತ್ತಾ, ಗೃಹಸ್ಥಧರ್ಮ ಪಾಲನೆಗೆ ಒತ್ತಾಯ (ಶಾಂತಿ 11). ಈತನಿಂದ ಯುಧಿಷ್ಠಿರನಿಗೆ ರಾಜಧರ್ಮದ ಪಾಲನೆಯ ಮಹತ್ವದ ವರ್ಣನೆ (ಶಾಂತಿ 15). ಜನಕರಾಜ ಮತ್ತು ಆತನ ರಾಣಿಯ ದೃಷ್ಟಾಂತ ಕೊಟ್ಟು, ಯುಧಿಷ್ಠಿರನು ಸನ್ಯಾಸ ಸ್ವೀಕರಿಸದಂತೆ ತಡೆದುದು (ಶಾಂತಿ 18). ಯುಧಿಷ್ಠಿರನೊಡನೆ ಕ್ಷತ್ರಿಯ ಧರ್ಮದ ಪ್ರಶಂಸೆ ಮಾಡಿದುದು (ಶಾಂತಿ 22). ಯುಧಿಷ್ಠಿರನ ಶೋಕ ದೂರ ಮಾಡುವಂತೆ ಶ್ರೀಕೃಷ್ಣನೊಡನೆ ಪ್ರಾರ್ಥಿಸಿದುದು (ಶಾಂತಿ 29/2–3). ಯುಧಿಷ್ಠಿರನ ಶತ್ರುಗಳ ಮತ್ತು ದುಷ್ಟರ ದಮನ ಕಾರ್ಯವನ್ನು ಅರ್ಜುನ ನಿಗೆ ಒಪ್ಪಿಸಿದುದು (ಶಾಂತಿ 41/13). ಈತನಿಗೆ ವಾಸಿಸಲು ಯುಧಿಷ್ಠಿರನು ದುಃಶಾಸನನ ಅರಮನೆ ಯನ್ನು ಕೊಟ್ಟದ್ದು (ಶಾಂತಿ 44/8–9). ಯುಧಿಷ್ಠಿರನು ಕೇಳಿದಾಗ ತ್ರಿವರ್ಗಗಳಲ್ಲಿ ಅರ್ಥವೇ ಪ್ರಧಾನವೆಂದು ಹೇಳಿದುದು (ಶಾಂತಿ 167/11–20). ಶ್ರೀಕೃಷ್ಣನೊಡನೆ ಅವನ ಹೆಸರು ಗಳ ವ್ಯುತ್ಪತ್ತಿಯನ್ನು ಕೇಳಿದುದು (ಶಾಂತಿ 34/5 –7). ಶ್ರೀಕೃಷ್ಣನೊಡನೆ ಪುನಃ ಗೀತೆಯ ಜ್ಞಾನ ವನ್ನು ಕೇಳಿದುದು (ಆಶ್ವ 16/5–7). ಪರಬ್ರಹ್ಮನ ಸ್ವರೂಪ ವಿಷಯದಲ್ಲಿ ಶ್ರೀಕೃಷ್ಣನೊಡನೆ ಪ್ರಶ್ನೆ ಮಾಡಿದುದು (ಆಶ್ವ 35/1). ಶ್ರೀಕೃಷ್ಣನ ಬಗ್ಗೆ ಈತನ ಪ್ರಶಂಸಾಸೂಚಕ ಮಾತು (ಆಶ್ವ 52/16–24). ಶ್ರೀಕೃಷ್ಣನ ದ್ವಾರಕಾಯಾತ್ರೆಯ ಬಗ್ಗೆ ಯುಧಿಷ್ಠಿರನಲ್ಲಿ ಆಜ್ಞೆ ಯಾಚಿಸಿದುದು (ಆಶ್ವ 52/42–43). ವ್ಯಾಸರ ಬೋಧನೆಯಿಂದ, ಪುತ್ರ ಶೋಕದಿಂದ ನಿವೃತ್ತನಾಗಿ, ಸಂತೋಷ ಹೊಂದಿ ದುದು (ಆಶ್ವ 62/18). ಧನವನ್ನು ತರುವ ಕುರಿತು ಐದೂ ಮಂದಿ ಸಹೋದರರಲ್ಲಿ ಮಾತುಕತೆ ಮತ್ತು ಇವರು ಹಿಮಾಲಯಕ್ಕೆ ಹೋಗಿ ಮರುತ್ತನ ಧನವನ್ನು ತಂದುದು (ಆಶ್ವ 63ರಿಂದ 65). ಅರ್ಜುನನನ್ನು ಅಶ್ವರಕ್ಷೆಗೆ ನೇಮಿಸಿದುದು (ಆಶ್ವ 72/16). ಸೇನಾಸಹಿತನಾದ ಅರ್ಜುನ ಕುದುರೆಯ ರಕ್ಷಣೆಗಾಗಿ, ಅದರ ಹಿಂದೆಯೇ ಕಾಲ್ನಡಿಗೆಯಿಂದ ಹೋಗುವುದು (ಆಶ್ವ 73/7–8). ಅರ್ಜುನನ ಮೂಲಕ ತ್ರಿಗರ್ತರ ಪರಾಜಯ, ಸೂರ್ಯ ವರ್ಮನ ಸೋಲು, ಕೇತುವರ್ಮನ ವಧೆ, ಧೃತ ವರ್ಮನು ಗಾಯಾಳುವಾದುದು ಇತ್ಯಾದಿ (ಆಶ್ವ 74). ಪ್ರಾಗ್ಜ್ಯೋತಿಷಪುರದಲ್ಲಿ ಭಗದತ್ತನ ಮಗ ವಜ್ರದತ್ತನ ಪರಾಜಯ ಮತ್ತು ಅವನ ಆನೆಯ ನಾಶ (ಆಶ್ವ 76/17–19). ಸೈಂಧವರೊಡನೆ ಅರ್ಜುನನ ಯುದ್ಧ ದುಶ್ಶಲೆಯ ಒತ್ತಾಯದಿಂದ ಯುದ್ಧ ಸಮಾಪ್ತಿ (ಆಶ್ವ 77–78). ಅರ್ಜುನ

ಮತ್ತು ಬಭ್ರುವಾಹನರ ಯುದ್ಧ ಮತ್ತು ಅರ್ಜುನನ ಮರಣ (ಆಶ್ವ 79). ಉಲೂಪಿಯ ಪ್ರಯತ್ನದಿಂದ ಸಂಜೀವನ ಮಣಿಯ ಮೂಲಕ, ಅರ್ಜುನನ ಪುನರ್ಜೀವನ (ಆಶ್ವ 80). ಯುದ್ಧ ಕ್ಷೇತ್ರಕ್ಕೆ ಉಲೂಪಿ ಮತ್ತು ಚಿತ್ರಾಂಗದೆಯರು ಬಂದ ಕಾರಣ ವಿಚಾರಿಸಿದುದು (ಆಶ್ವ 81/1). ಅರ್ಜುನನ ಪರಾಜಯದ ರಹಸ್ಯ. ಉಲೂಪಿ ಚಿತ್ರಾಂಗದೆಯರ ವಿದಾಯ. ಪುನಃ ಅಶ್ವದ ಹಿಂದಿನಿಂದ ಪಯಣ (ಆಶ್ವ 81). ಅರ್ಜುನನಿಂದ ಮಗಧರಾಜ ಮೇಘಸಂಧಿಯ ಪರಾಜಯ (ಆಶ್ವ 82). ಶಕುನಿ ಪುತ್ರನ ಪರಾಜಯ, ಶಕುನಿಯ ಹೆಂಡತಿಯ ಒತ್ತಾಯಕ್ಕಾಗಿ ಯುದ್ಧ ನಿಲ್ಲಿಸಿದುದು (ಆಶ್ವ 84). ಅರ್ಜುನನು ಶ್ರೀಕೃಷ್ಣನ ಸಂದೇಶವನ್ನು ಯುಧಿಷ್ಠಿರನೊಡನೆ ಹೇಳಿದುದು (ಆಶ್ವ 86/9–21). ಅರ್ಜುನನ ಕುರಿತು ಶ್ರೀ ಕೃಷ್ಣ – ಯುಧಿಷ್ಠಿರರ ಮಾತುಕತೆ, ಅರ್ಜುನ ದೂತ ಮತ್ತು ಅರ್ಜುನ ಹಸ್ತಿನಾವತಿಗೆ ಬಂದುದು (ಆಶ್ವ 87/1–22). ಧೃತರಾಷ್ಟ್ರನ ಶ್ರಾದ್ಧ ಮತ್ತು ದಾನಕ್ಕೋಸ್ಕರ ಹಣ ಕೇಳಿದಾಗ ಅರ್ಜುನನ ಸಮ್ಮತಿ. ಆಗ ಭೀಮಸೇನನು ಅಸ್ವೀಕಾರಮಾಡಿದಾಗ ಅವನನ್ನು ಅರ್ಜುನನು ಸಮಾಧಾನಗೊಳಿಸಿದುದು (ಆಶ್ರಮ 11–12). ಈತ ಯಾದವರ ಸಹಿತ ಕಾಡಿಗೆ ಹೋಗಿ ಧೃತರಾಷ್ಟ್ರ ಮತ್ತು ತಾಯಿ ಕುಂತಿಯ ದರ್ಶನ ಮಾಡಿದುದು. ವ್ಯಾಸರಿಂದ ಮೃತ ವ್ಯಕ್ತಿಗಳ ಆವಾಹನೆಯಾದಾಗ, ಅವರೆಲ್ಲರೊಡನೆ ಭೇಟಿ ಮಾಡಿದುದು. ಹಸ್ತಿನಾಪುರಕ್ಕೆ ಹಿಂದಿರುಗಿದುದು ಮತ್ತು ಧೃತರಾಷ್ಟ್ರಾದಿಗಳು ದಗ್ಧರಾದ ಸಮಾಚಾರ ಕೇಳಿ ದುಃಖಿತನಾದುದು ಮತ್ತು ಅವರ ಶ್ರಾದ್ಧ ಮಾಡಿದುದು (ಆಶ್ರಮ 23–39). ಅರ್ಜುನನು ದಾರುಕನೊಂದಿಗೆ ದ್ವಾರಕೆಗೆ ಹೋದುದು, ಶ್ರೀಕೃಷ್ಣನ ಪತ್ನಿಯರ ಭೇಟಿ ಮಾಡಿದುದು, ಅವರಿಗೆ ಧೈರ್ಯ ಹೇಳಿ, ವಸುದೇವನ ಬಳಿಗೆ ಹೋದುದು (ಮೌಸಲ 5). ಅರ್ಜುನನೊಂದಿಗೆ ವಸುದೇವನ ವಿಲಾಪ. ವಸುದೇವನಿಗೆ ಶ್ರೀಕೃಷ್ಣನು ಹೇಳಿದ ಸಂದೇಶವನ್ನು ತಿಳಿಸಿದುದು (ಮೌಸಲ 6). "ಈಗ ಪಾಂಡವರಿಗೂ ಕೂಡ ಪರಲೋಕ ಗಮನದ ಸಮಯ ಬಂದಿದೆ, ನಾನು ಇಲ್ಲಿರುವ ಜನರನ್ನು ಇಂದ್ರಪ್ರಸ್ಥಕ್ಕೆ ಕರಕೊಂಡು ಹೋಗುವೆನು." ಅರ್ಜುನನು ವಸುದೇವನಲ್ಲಿ ಹೀಗೆ ಹೇಳಿ, ದಾರುಕ ಮತ್ತು ಮಂತ್ರಿಗಳಿಗೆ ಯಾತ್ರೆಯ ತಯಾರಿಗಾಗಿ ಆದೇಶನೀಡಿದುದು. ರಾತ್ರಿ ಶ್ರೀಕೃಷ್ಣನ ಸಭಾಭವನದಲ್ಲಿ ತಂಗಿದುದು (ಮೌಸಲ 7/1–14). ವಸುದೇವನ ಪರಲೋಕವಾಸ ಮತ್ತು ಅರ್ಜುನನಿಂದ ಆತನ ದಹನ ಸಂಸ್ಕಾರ ಮತ್ತು ಕೃಷ್ಣನ ವಂಶದ ಕುಮಾರರಿಂದ ಜಲದಾನ (ಮೌಸಲ 7/15–57). ಯಾದವರ ವಿನಾಶ ಸ್ಥಳಕ್ಕೆ ಹೋಗಿ ಅರ್ಜುನನು ಎಳೆಯ ಹಿರಿಯರಾದಿಯಾಗಿ ಎಲ್ಲರ ದಹನ ಸಂಸ್ಕಾರ ಮಾಡಿದುದು. ಅನಂತರ ಕೃಷ್ಣ ಬಲರಾಮರ ಶರೀರಗಳ ಅನುಸಂಧಾನ ಮಾಡಿಸಿ, ಅವರ ದಹನ ಸಂಸ್ಕಾರ ಮಾಡಿದುದು (ಮೌಸಲ 7/28–31). ಶ್ರೀಕೃಷ್ಣನ ಪತ್ನಿಯರನ್ನೂ, ದ್ವಾರಕಾವಾಸಿಗಳನ್ನೂ ಕರಕೊಂಡು, ಅರ್ಜುನನು ಇಂದ್ರಪ್ರಸ್ಥದ ಕಡೆಗೆ ನಡೆದುದು (ಮೌಸಲ 7/32). ಹಾದಿಯಲ್ಲಿ ಚೋರರಿಂದ ಆಕ್ರಮಣ; ಸ್ತ್ರೀಯರ ರಕ್ಷಣೆ ಮಾಡಲು ಅರ್ಜುನನು ಅಸಮರ್ಥನಾದುದು. ಉಳಿದ ವ್ಯಕ್ತಿಗಳನ್ನು ಕರಕೊಂಡು ಹೋದುದು. ಮಾರ್ತಿಕಾವತದಲ್ಲಿ ಕೃತವರ್ಮನ ಮಗನನ್ನೂ, ಸರಸ್ವತಿಯ ತಟದಲ್ಲಿ ಸಾತ್ಯಕಿಯ ಮಗನನ್ನೂ ಆಯಾ ಪ್ರದೇಶಗಳ ರಾಜರನ್ನಾಗಿ ಮಾಡಿದುದು. ವಜ್ರನನ್ನು ಇಂದ್ರಪ್ರಸ್ಥದಲ್ಲಿ ಅಭಿಷಿಕ್ತನಾಗಿ ಮಾಡಿದುದು (ಮೌಸಲ 7/51–52). ವ್ಯಾಸರೊಡನೆ ನಡೆದ ಘಟನೆಗಳನ್ನು ಅರ್ಜುನನು ಹೇಳಿದುದು, ವ್ಯಾಸರು ಅವನಿಗೆ ಧೈರ್ಯಹೇಳಿ, ಪಾಂಡವರನ್ನು ಮಹಾಪ್ರಸ್ಥಾನಕ್ಕೆ ಹುರಿದುಂಬಿಸಿದುದು (ಮೌಸಲ 8). ಸಹೋದರರ ಸಹಿತನಾಗಿ ಅರ್ಜುನನ ಮಹಾ ಪ್ರಸ್ಥಾನ; ಮಾರ್ಗದಲ್ಲಿ ಅಗ್ನಿದೇವ ಮತ್ತು ಸಹೋದರರ ಹೇಳಿಕೆಯಂತೆ ಗಾಂಡೀವ ಧನುಸ್ಸನ್ನು ನೀರಿನಲ್ಲಿ ಹಾಕಿದುದು (ಮಹಾಪ್ರ 1/1–42). ದಾರಿಯಲ್ಲಿ ಅರ್ಜುನನು ಬಿದ್ದು ಹೋದುದು; ಯುಧಿಷ್ಠಿರನು ಆತನ ಬೀಳುವಿಕೆಯ ಕಾರಣ ಹೇಳಿದುದು (ಮಹಾಪ್ರ 2/18–22). ಭಗವಂತನಾದ ಶ್ರೀಕೃಷ್ಣನ ಪಾರ್ಷದನ ರೂಪದಲ್ಲಿ ಅರ್ಜುನನ ದರ್ಶನ (ಸ್ವರ್ಗಾ 4/4). ಮಹಾಭಾರತದಲ್ಲಿ ಬಂದ ಅರ್ಜುನನ ಹೆಸರುಗಳು – ಐಂದ್ರಿ, ಭಾರತ, ಭೀಮಾನುಜ, ಭೀಮಸೇನಾನುಜ, ಬೀಭತ್ಸು, ಬೃಹನ್ನಲಾ, ಶಾಖಾ

ಮೃಗಧ್ವಜ, ಶಕ್ರಜ, ಶಕ್ರನಂದನ, ಶಕ್ರಸೂನು, ಶಕ್ರಾತ್ಮಜ, ಶಕ್ರಸುತ, ಶ್ವೇತಾಶ್ವ, ಶ್ವೇತಹಯ, ಶ್ವೇತವಾಹ, ಶ್ವೇತವಾಹನ, ದೇವೇಂದ್ರತನಯ, ಧನಂಜಯ, ಗಾಂಡೀವಭೃತ್, ಗಾಂಡೀವಧನ್ವಾ, ಗಾಂಡೀವಧಾರಿ, ಗಾಂಡೀವಿ, ಗುಡಾಕೇಶ, ಇಂದ್ರ ರೂಪ, ಇಂದ್ರಸುತ, ಇಂದ್ರಾತ್ಮಜ, ಇಂದ್ರಾವರಜ, ಜಯ, ಜಿಷ್ಣು, ಕಪಿಧ್ವಜ, ಕಪಿಕೇತನ, ಕಪಿಪ್ರವರ, ಕಪಿವರಧ್ವಜ, ಕೌಂತೇಯ, ಕೌರವ, ಕೌರವಶ್ರೇಷ್ಠ, ಕೌರವ್ಯ, ಕೌರವೇಯ, ಕಿರೀಟಭೃತ್, ಕಿರೀಟ ಮಾಲಿ, ಕಿರೀಟವಾನ್, ಕಿರೀಟಿ, ಕೃಷ್ಣ, ಕೃಷ್ಣ ಸಾರಥಿ, ಕುಂತೀಪುತ್ರ, ಮಹೇಂದ್ರಸೂನು, ಮಹೇಂದ್ರಾತ್ಮಜ, ನರ, ಪಾಕಶಾಸನಿ, ಪಾಂಡವ, ಪಾಂಡವೇಯ, ಪಾಂಡುನಂದನ, ಪಾರ್ಥ, ಪೌರವ, ಫಾಲ್ಗುನ, ಪ್ರಭಂಜನಸುತಾನುಜ, ಸವ್ಯಸಾಚೀ, ಸುರಸೂನು, ತಾಪತ್ಯ, ತ್ರಿದಶೇಶ್ವ ರಾತ್ಮಜ, ವಾನರಧ್ವಜ, ವಾನರಕೇತನ, ವಾನರ ಕೇತು, ವಾನರವರ್ಯಕೇತನ, ವಾಸವಜ, ವಾಸವ ನಂದನ, ವಾಸವಾತ್ಮಜ, ವಾಸವಿ, ವಿಜಯ – ಇತ್ಯಾದಿ. ಅರ್ಜುನನ ಪತ್ನಿಯರ ಹೆಸರು – ದ್ರೌಪದಿ, ಉಲೂಪಿ, ಚಿತ್ರಾಂಗದೆ ಮತ್ತು ಸುಭದ್ರೆ. ಅರ್ಜುನನ ಪುತ್ರರ ಹೆಸರು – ಶುತ್ರಕೀರ್ತಿ, ಇರಾವಂತ, ಬಭ್ರುವಾಹನ ಮತ್ತು ಅಭಿಮನ್ಯು.

(2) ಹೈಹಯರಾಜ ಕಾರ್ತವೀರ್ಯ, ಯಮನ ಸಭೆಯ ಒಬ್ಬ ಸದಸ್ಯ (ಸಭಾ 8/11). (ನೋಡಿ – ಕಾರ್ತವೀರ್ಯ).

(3) ಯಮನ ಸಭೆಯಲ್ಲಿರುವ ಒಬ್ಬ ರಾಜ (ಸಭಾ 8/17).

**ಅರ್ಜುನಕ** – ಒಬ್ಬ ವ್ಯಾಧ ಗೌತಮೀ, ಸರ್ಪ, ಮೃತ್ಯು ಮತ್ತು ಕಾಲರೊಡನೆ ಈತನ ಸಂವಾದ (ಅನು 1/21–68).

**ಅರ್ಜುನ ವನವಾಸಪರ್ವ** – ಆದಿಪರ್ವದ ಅವಾಂತರಪರ್ವ (ಅಧ್ಯಾಯ 212ರಿಂದ 217 ವರೆಗೆ).

**ಅರ್ಜುನಾಭಿಗಮನಪರ್ವ** – ವನಪರ್ವದ ಅವಾಂತರಪರ್ವ (ಅಧ್ಯಾಯ 12 ರಿಂದ 37 ವರೆಗೆ).

**ಅರ್ಥ** – ಧರ್ಮನಿಂದ ಶ್ರೀದೇವಿಯಲ್ಲಿ ಜನಿಸಿದವ (ಶಾಂತಿ 59/132).

**ಅರ್ಧಕೀಲತೀರ್ಥ** – ದರ್ಭೀಮುನಿಯ ಮೂಲಕ ಪ್ರಕಟವಾದ ಒಂದು ತೀರ್ಥ (ವನ 83/153).

**ಅರ್ಬುಕ** – ಒಂದು ದೇಶ. ಅದನ್ನು ಸಹದೇವನು ಜಯಿಸಿದ್ದನು (ಸಭಾ 31/14).

**ಅರ್ಬುದ** – (1) ಗಿರಿವ್ರಜನಿವಾಸಿ ಒಬ್ಬ ನಾಗ (ಸಭಾ 21/9).

(2) ಆಬು ಪರ್ವತ (ವನ 82/55).

**ಅರ್ಯಮಾ** – ದ್ವಾದಶ ಆದಿತ್ಯರಲ್ಲಿ ಒಬ್ಬ. ಈತನ ತಾಯಿ ಅದಿತಿ ಮತ್ತು ತಂದೆ ಕಶ್ಯಪ (ಆದಿ 65/15; ಶಾಂತಿ 208/15).

**ಅರ್ವಾವಸು** – ಒಬ್ಬ ಪ್ರಾಚೀನ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿ ವಿರಾಜಮಾನನಾಗಿದ್ದ (ಸಭಾ 4/10). ಅರ್ವಾವಸುವಿನ ತಪಸ್ಸಿನ ಮೂಲಕ ಪರಾವಸುವಿನ ಬ್ರಹ್ಮಹತ್ಯಾ ಪಾಪ ನಿವೃತ್ತಿ. ಅರ್ವಾವಸುವಿನಿಂದ ಸೂರ್ಯಸಂಬಂಧಿ ರಹಸ್ಯಮಯ ವೇದಮಂತ್ರದ ಅನುಷ್ಠಾನ ಮತ್ತು ಇದರಿಂದ ಸಂತುಷ್ಟನಾದ ಸೂರ್ಯನಿಂದ ಅರ್ವಾವಸುವಿಗೆ ಮನೋವಾಂಛಿತ ವರದಾನ (ವನ 138). ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗುವಾಗ ಈತನು ಭೇಟಿ ಮಾಡಿದುದು (ಉದ್ಯೋಗ 83/64). ಉಪರಿಚರನ ಯಜ್ಞದಲ್ಲಿ ಈತನು ಸದಸ್ಯತನ ಸ್ವೀಕರಿಸಿದುದು (ಶಾಂತಿ 336/7). ಬ್ರಹ್ಮತೇಜಸ್ವಿಗಳೂ, ಲೋಕಸೃಷ್ಟಿಗೆ ಶಕ್ತರೂ, ರುದ್ರನೇ ಮೊದಲಾದವರಂತೆ ಪ್ರಭಾವಶಾಲಿಗಳೂ ಆದ ಋಷಿಗಳಲ್ಲಿ ಇವನು ಗಣಿಸಲ್ಪಡುತ್ತಾನೆ (ಅನು 150/30–32).

**ಅಲಕನಂದಾ** – ದೇವಲೋಕದ ಗಂಗೆ, ಗಂಗಾ ಮಾತೆ. ದೇವಲೋಕದಲ್ಲಿ ಪ್ರವಹಿಸುವಾಗ ಆಕೆಯ ಹೆಸರು ಅಲಕನಂದಾ. ಪಿತೃಲೋಕದಲ್ಲಿ ಪ್ರವಹಿಸುವಾಗ ವೈತರಣೀ ಎಂದು ಹೇಳಲ್ಪಡುತ್ತಾಳೆ. ಈ ಲೋಕಕ್ಕೆ ಬಂದಾಗ ಅವಳ ಹೆಸರು ಗಂಗೆಯಾಯಿತು (ಆದಿ 169/22). ವಿಷ್ಣು ಗಂಗಾ (ಧವಲಗಂಗಾ ಅಥವಾ ಧೌಲಿ) ಮತ್ತು ಸರಸ್ವತಿ ಎಂಬ ಹೆಸರಿನ ಚಿಕ್ಕ ನದಿಗಳ ಸಂಯುಕ್ತ ಧಾರೆಯಿಂದಾದ ಅಲಕನಂದಾ ಎಂಬ ನದಿ ಗಢವಾಲ ಜಿಲ್ಲೆಯಲ್ಲಿದೆ. ಇದು ಗಂಗೆಯ ಸಹಾಯಕ ನದಿ (ಹಿಂದೀ ಮಹಾಭಾರತದ ಪರಿಶಿಷ್ಟ 6).

**ಅಲಕಾ** – ಕುಬೇರನ ನಗರ ಮತ್ತು ಪುಷ್ಕರಿಣಿ (ಆದಿ 85/9; ಸಭಾ 10/8).

**ಅಲಂಬತೀರ್ಥ** – ಒಂದು ದಿವ್ಯ ತೀರ್ಥ. ಅಲ್ಲಿಗೆ ಗರುಡನು ಕಚ್ಛಪ ಮತ್ತು ಆನೆಯನ್ನು ತೆಗೆದು

ಕೊಂಡು ಹೋಗಿದ್ದನು (ಆದಿ 39/39).

**ಅಲಂಬುಷ** – (1) ಕೌರವ ಪಕ್ಷದ ಯೋಧ ಮತ್ತು ಮಹಾರಥಿ ರಾಜ. ಈತ ರಾಕ್ಷಸ ಋಷ್ಯ ಶೃಂಗನ ಪುತ್ರ (ಉದ್ಯೋಗ 167/33; ದ್ರೋಣ 106/16). ಪ್ರಥಮದಿನದ ಯುದ್ಧದಲ್ಲಿ ಘಟೋ ತ್ಕಚನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/42–45). ಸಾತ್ಯಕಿಯಿಂದ ಈತನ ಪರಾಜಯ (ಭೀಷ್ಮ 82/44–45). ಇರಾವಂತನೊಡನೆ ಯುದ್ಧ. ಈತನಿಂದ ಇರಾವಂತನ ವಧೆ (ಭೀಷ್ಮ 90/56–76). ಅಭಿಮನ್ಯುವಿನೊಡನೆ ಯುದ್ಧ. ದ್ರೌಪದೀ ಪುತ್ರರ ಪರಾಜಯ (ಭೀಷ್ಮ 100/31–54). ಅಭಿಮನ್ಯುವಿನಿಂದ ಈತ ಪರಾಜಿತನಾದುದು (ಭೀಷ್ಮ 101/28–29). ಸಾತ್ಯಕಿಯೊಡನೆ ದ್ವಂದ್ವ ಯುದ್ಧ (ಭೀಷ್ಮ 111/1–6). ಘಟೋತ್ಕಚನೊಡನೆ ಯುದ್ಧ (ದ್ರೋಣ 14/46–47; 25/61–62). ಕುಂತೀಭೋಜನೊಡನೆ ಯುದ್ಧ (ದ್ರೋಣ 96/18–20). ಭೀಮಸೇನನೊಡನೆ ಯುದ್ಧ (ದ್ರೋಣ 106/16–17). ಭೀಮಸೇನನೊಡನೆ ಮಾಯಾ ಯುದ್ಧ ಮತ್ತು ಆತನಿಂದ ಸೋತು ಓಡಿದುದು (ದ್ರೋಣ 108/13–42). ಇವನ ಇನ್ನೊಂದು ಹೆಸರು 'ಶಾಲಕಟಂಕಟ' ಎಂದಾಗಿತ್ತು ಈತ ಘಟೋತ್ಕಚನಿಂದ ಮರಣಹೊಂದಿದನು (ದ್ರೋಣ 109/22–31)

(2) ಕೌರವ ಪಕ್ಷದ ಒಬ್ಬ ಶ್ರೇಷ್ಠ ರಾಜ. ಆತ ಸಾತ್ಯಕಿಯಿಂದ ಕೊಲ್ಲಲ್ಪಟ್ಟನು (ದ್ರೋಣ 140/18).

(3) ಒಬ್ಬ ರಾಕ್ಷಸ ರಾಜ. ಈತ ಅರ್ಜುನನಿಂದ ಪರಾಜಿತನಾಗಿ, ಯುದ್ಧರಂಗಬಿಟ್ಟು ಓಡಿ ಹೋದನು (ದ್ರೋಣ 167/37–47).

(4) ಒಬ್ಬ ರಾಕ್ಷಸ. ಜಟಾಸುರನ ಪುತ್ರ, ಈತ ದುರ್ಯೋಧನನೊಡನೆ ಯುದ್ಧಕ್ಕಾಗಿ ಆಜ್ಞೆ ಬೇಡಿದುದು (ದ್ರೋಣ 174/6–8). ಘಟೋತ್ಕಚ ನಿಂದ ಈತ ಕೊಲ್ಲಲ್ಪಟ್ಟನು (ದ್ರೋಣ 174/37–38).

**ಅಲಂಬುಷಾ** – ಒಬ್ಬ ಅಪ್ಸರೆ. ಈಕೆ ಮಹರ್ಷಿ ಕಶ್ಯಪ ಮತ್ತು ಪ್ರಾಧಾ ಎಂಬವಳ ಪುತ್ರಿ (ಆದಿ 65/49). ಇವಳು ಮಿಕ್ಕ ಅಪ್ಸರೆಯರೊಂದಿಗೆ ಬಂದು, ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯ ಮಾಡಿದ್ದಳು (ಆದಿ 122/61). ಈಕೆ ದಧೀಚಿ ಮಹರ್ಷಿಯನ್ನು ಮೋಹಿತನಾಗಿಸಿದ್ದಳು (ಶಲ್ಯ 51/7–8).

**ಅಲರ್ಕ** – (1) ಕಾಶಿ ಮತ್ತು ಕರೂಷದ ಅಧಿಪತಿ. ಈತ ದೊಡ್ಡ ಸತ್ಯಪ್ರತಿಜ್ಞನಾಗಿದ್ದ (ವನ 25/13). ಈತ ಯಮನ ಸಭೆಯಲ್ಲಿ ಒಬ್ಬ ಸದಸ್ಯ (ಸಭಾ 8/18). ಈತ ರಾಜ್ಯ ಮತ್ತು ಧನವನ್ನು ತ್ಯಾಗ ಮಾಡಿ, ಧರ್ಮವನ್ನು ಆಶ್ರಯಿಸಿದ ಮಾಂಸಭಕ್ಷಣ ವನ್ನು ನಿಷೇಧಿಸಿದ (ಅನು 115/14). ತನ್ನ ಇಂದ್ರಿಯಗಳ ಮೇಲೆ ವಿಜಯ ಪಡೆಯಲು ಪ್ರಯತ್ನ ಮತ್ತು ಇಂದ್ರಿಯಗಳಿಂದ ಉತ್ತರ (ಆಶ್ವ 30/5–25). ಧ್ಯಾನಯೋಗದ ಮೂಲಕ ಈತನಿಗೆ ಪರಮಸಿದ್ಧಿ ಪ್ರಾಪ್ತಿ (ಆಶ್ವ 30/28–29).

(2) ಒಂದು ಭಯಂಕರ ಕೀಟ. ಅದು ಕರ್ಣನ ತೊಡೆಯನ್ನು ಕೊರೆದಿತ್ತು (ಶಾಂತಿ 3/13).

**ಅಲಾತಾಕ್ಷಿ** – ಸ್ಕಂದನ ಅನುಯಾಯಿಯಾದ ಮಾತೃಕೆ (ಶಲ್ಯ 46/8).

**ಅಲಾಯುಧ** – ಒಬ್ಬ ರಾಕ್ಷಸ. ಅವನು ಬಕಾಸುರನ ಸಹೋದರ ಮತ್ತು ಕೌರವ ಪಕ್ಷದ ಯೋಧನಾಗಿದ್ದನು (ದ್ರೋಣ 95/46; 176/6). ಘಟೋತ್ಕಚನೊಡನೆ ಈತನ ಯುದ್ಧ (ದ್ರೋಣ 96/27–28). ಭೀಮಸೇನನೊಡನೆ ಯುದ್ಧ ಮಾಡಲು ಈತ ದುರ್ಯೋಧನನಲ್ಲಿ ಅಪ್ಪಣೆ ಬೇಡಿದುದು (ದ್ರೋಣ 176/6–10). ಭೀಮಸೇನ ನೊಡನೆ ಘೋರ ಯುದ್ಧ (ದ್ರೋಣ 177). ಘಟೋತ್ಕಚನಿಂದ ಈತನ ವಧೆ (ದ್ರೋಣ 178/31).

**ಅಲೋಲುಪ** – ಧೃತರಾಷ್ಟ್ರನ ಒಬ್ಬ ಮಗ (ಆದಿ 67/103). ಭೀಮಸೇನನಿಂದ ಈತನ ವಧೆ (ಕರ್ಣ 84/6).

**ಅವಗಾಹ** – ವೃಷ್ಣಿವಂಶದ ಒಬ್ಬ ಯೋಧ (ದ್ರೋಣ 11/27).

**ಅವಂತಿ** – ಭಾರತದ ಒಂದು ಜನಪದ. ಮಾಳವ ಪ್ರದೇಶ. ಅದರ ರಾಜಧಾನಿ ಉಜ್ಜಯಿನಿ (ಈ ಸ್ಥಳ ಶಿಪ್ರಾ ನದಿ ತಟದಲ್ಲಿದೆ ಮತ್ತು ಏಳು ಮೋಕ್ಷಪ್ರದ ಪಟ್ಟಣಗಳಲ್ಲಿ ಒಂದಾಗಿದೆ (ಸಭಾ 38/29; ಭೀಷ್ಮ 9/43).

**ಅವಭೃಥ** – ಯಜ್ಞಾಂತದ ಸ್ನಾನ (ಸಭಾ 45/40).

**ಅವಸಾನ** – ಒಂದು ಪ್ರಾಚೀನ ತೀರ್ಥ. ಅಲ್ಲಿಗೆ ಹೋದರೆ ಸಾವಿರ ಗೋದಾನದ ಫಲ ಪ್ರಾಪ್ತ

ವಾಗುತ್ತದೆ (ವನ 82/128).

**ಅವಾಕೀರ್ಣ** – ಸರಸ್ವತೀ ತಟದಲ್ಲಿರುವ ಒಂದು ತೀರ್ಥ (ಶಲ್ಯ 41/1–30).

**ಅವಾಚೀನ** – ಪೂರುವಂಶದ ಜಯತ್ಸೇನ ರಾಜನಿಂದ, ವಿದರ್ಭರಾಜಕುಮಾರಿ ಸುಶ್ರವಾಳಲ್ಲಿ ಹುಟ್ಟಿದ ಒಬ್ಬ ರಾಜ. ಇವನಿಂದ ವಿದರ್ಭ ರಾಜ ಕುಮಾರಿ ಮರ್ಯಾದಾ ಎಂಬವಳಲ್ಲಿ ಅರಿಹನ ಜನ್ಮವಾಯಿತು (ಆದಿ 95/17–18).

**ಅವಿಕಂಪನ** – ಒಬ್ಬ ಪ್ರಾಚೀನ ರಾಜ. ಈತನಿಗೆ ಜ್ಯೇಷ್ಠ ಮುನಿಯಿಂದ ಸಾತ್ವತ ಧರ್ಮ ಪ್ರಾಪ್ತ ವಾಯಿತು (ಶಾಂತಿ 348/47).

**ಅವಿಕ್ಷಿತ** – (1) ಒಬ್ಬ ಸಮ್ರಾಟ. ಮಹಾರಾಜ ಮರುತ್ತನ ತಂದೆ (ದ್ರೋಣ 55/37). ಈತನು ಯಜಮಾನನಾಗಿ ಅಂಗೀರಸ್ಸಿನ ಮೂಲಕ ಯಜ್ಞ ಮಾಡಿದನು. ಈತನ ಅನುಪಮ ಗುಣಗಳ ವರ್ಣನೆ (ಆಶ್ವ 4/17–22).

(2) ಕುರುವೆಂಬವನಿಗೆ ವಾಹಿನಿಯಲ್ಲಿ ಹುಟ್ಟಿದ ಐದು ಪುತ್ರರಲ್ಲಿ ಒಬ್ಬನಾದ ಅಶ್ವವಂತ. ಅವನ ಇನ್ನೊಂದು ಹೆಸರು ಅವಿಕ್ಷಿತನೆಂದೂ ಆಗಿತ್ತು (ಆದಿ 94/50–52).

**ಅವಿಜ್ಞಾತಗತಿ** – ಅನಿಲನೆಂಬ ವಸುವಿನಿಂದ ಶಿವಾ ಎಂಬವಳ ಗರ್ಭದಿಂದ ಹುಟ್ಟಿದ ಮಗ. ಇವನ ಸಹೋದರನ ಹೆಸರು 'ಮನೋಜವ' (ಆದಿ 66/25).

**ಅವಿಂಧ್ಯ** – ಒಬ್ಬ ಬುದ್ಧಿವಂತನೂ, ವೃದ್ಧನೂ ಆದ ಶ್ರೇಷ್ಠ ರಾಕ್ಷಸ. ಅವನು ಸೀತಾದೇವಿಗೆ ಧೈರ್ಯಕೊಡಲು, ಅಶೋಕವನಕ್ಕೆ ತ್ರಿಜಟೆಯನ್ನು ಕಳುಹಿಸಿದ್ದನು (ವನ 280/56–57). ಇವನು ಸೀತೆಯನ್ನು ಕೊಲ್ಲಲು ಸಿದ್ಧನಾದ ರಾವಣನನ್ನು ಸಮಾಧಾನಪಡಿಸಿ ತಡೆದಿದ್ದನು (ವನ 289/28–32). ಲಂಕಾವಿಜಯದ ಅನಂತರ ಸೀತಾದೇವಿ ಯನ್ನು ಕರಕೊಂಡು, ಶ್ರೀರಾಮನ ಬಳಿಗೆ ಬಂದಿ ದ್ದನು (ವನ 291/6–7).

**ಅವಿಮುಕ್ತ** – ವಾರಣಾಸಿಯ ಮಧ್ಯಭಾಗ – ಅವಿಮುಕ್ತ ಕ್ಷೇತ್ರ; ಇಲ್ಲಿ ಪ್ರಾಣೋತ್ಸರ್ಗ ಮಾಡಿ ಕೊಳ್ಳುವವರಿಗೆ ಮೋಕ್ಷಪ್ರಾಪ್ತಿಯಾಗುತ್ತದೆ (ವನ 84/78–79).

**ಅವ್ಯಯ** – ಧೃತರಾಷ್ಟ್ರಕುಲದಲ್ಲಿ ಹುಟ್ಟಿದ ಒಬ್ಬ ಸರ್ಪ. ಅವನು ಜನಮೇಜಯನ ನಾಗಯಜ್ಞದಲ್ಲಿ ದಗ್ಧನಾಗಿದ್ದ (ಆದಿ 57/16).

**ಅಶನಿ** – ಒಬ್ಬ ದಿವ್ಯ ಮಹರ್ಷಿ. ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗುವಾಗ ಈತ ಭೇಟಿ ಮಾಡಿದ್ದ (ಉದ್ಯೋಗ 33/64).

**ಅಶೋಕ** – (1) ಭೀಮಸೇನನ ಸಾರಥಿ, ಕಲಿಂಗ ರಾಜ. ಶ್ರುತಾಯುವಿನೊಂದಿಗೆ ಯುದ್ಧ ಮಾಡುತ್ತಿ ದ್ದಾಗ, ರಥಹೀನನಾದ ಭೀಮನ ಬಳಿಗೆ ಈತ ರಥವನ್ನು ತಲುಪಿಸಿದ್ದ (ಭೀಷ್ಮ 54/70–71).

(2) ಅಶ್ವನಾಮನೆಂದು ಪ್ರಸಿದ್ಧನಾದ ಅಸುರನ ಅಂಶದಿಂದ ಹುಟ್ಟಿದ ಒಬ್ಬ ಕ್ಷತ್ರಿಯ ರಾಜ (ಆದಿ 67/14). ಈತನು ಕಳಿಂಗ ರಾಜ. ಚಿತ್ರಾಂಗದನ ಮಗಳ ಸ್ವಯಂವರಕ್ಕೆ ಹೋಗಿದ್ದನು (ಶಾಂತಿ 4/7).

**ಅಶೋಕತೀರ್ಥ** – ಶೂರ್ಪಾರಕ ಕ್ಷೇತ್ರದಲ್ಲಿರುವ ಒಂದು ತೀರ್ಥ (ವನ 88/13).

**ಅಶೋಕವನಿಕಾ** – ಲಂಕೆಯ ಸುಪ್ರಸಿದ್ಧ ಅಶೋಕ ವನ. ಅಲ್ಲಿ ಸೀತಾದೇವಿಯನ್ನು ಇರಗೊಡಿಸ ಲಾಗಿತ್ತು (ವನ 280/41–42).

**ಅಶ್ಮಕ** – (1) ಮಹಾರಾಜ ಕಲ್ಮಾಷಪಾದನ ಕ್ಷೇತ್ರಜ ಪುತ್ರ ವಸಿಷ್ಠ ಮಹರ್ಷಿಯ ಮೂಲಕ ಕಲ್ಮಾಷಪಾದನ ಪತ್ನಿ ಮದಯಂತಿಯ ಗರ್ಭ ದಿಂದ ಹುಟ್ಟಿದವ (ಆದಿ 176/47). ಈತನ ಹೆಸರು 'ಅಶ್ಮಕ'ನೆಂದಾದುದಕ್ಕೆ ಕಾರಣ (ಆದಿ 176/46). ಇವನಿಂದ ಪೌದನ್ಯ ನಗರ ನಿರ್ಮಾಣ (ಆದಿ 176/47).

(2) (ಗೋದಾವರಿ ಮತ್ತು ಮಾಹಿಷ್ಮತಿಯ ಮಧ್ಯದ) ಒಂದು ದೇಶ (ಭೀಷ್ಮ 9/44).

(3) ಅಶ್ಮಕ ದೇಶದ ರಾಜ. ಪಾಂಡವ ಪಕ್ಷದ ಯೋಧ. ಈತ ಕರ್ಣನಿಂದ ಪರಾಜಿತನಾಗಿ ಬಂಧಿಸಲ್ಪಟ್ಟಿದ್ದ (ಕರ್ಣ). ಪ್ರಾಯಶಃ ಈತನೇ ಯುಧಿಷ್ಠಿರನಿಗೆ, ಕರುಸಹಿತ ಹತ್ತುಸಾವಿರ ಹಾಲೂಡುವ ಹಸುಗಳನ್ನು ಕೊಟ್ಟಿದ್ದನು (ಸಭಾ 51).

(4) ಒಬ್ಬ ಋಷಿಯ ಹೆಸರು (ಶಾಂತಿ 47/5).

**ಅಶ್ಮಕೀ** – ಯಾದವ ವಂಶದಲ್ಲಿ ಹುಟ್ಟಿದ ಒಬ್ಬ ರಾಜಕುಮಾರಿ. ಪ್ರಾಚೀನ್ವಂತನ ಪತ್ನಿ. ಈಕೆಯಿಂದ ಸಂಜಾತಳೆಂಬ ಪುತ್ರಿಯ ಜನನವಾಯಿತು (ಆದಿ 95/14).

**ಅಶ್ಮಕದಾಯಾದ** – (ಅಶ್ಮಕಪುತ್ರ) ಕೌರವಪಕ್ಷದ

ಒಬ್ಬ ಯೋಧ. ಈತ ಅಭಿಮನ್ಯುವಿನಿಂದ ವಧಿಸಲ್ಪಟ್ಟ (ದ್ರೋಣ 37/22–23).

**ಅಶ್ಮಪೃಷ್ಠ** – ಗಯೆಯಲ್ಲಿರುವ ಪ್ರೇತಶಿಲಾ ತೀರ್ಥ. ಇಲ್ಲಿ ಪಿಂಡ ಪ್ರದಾನ ಮಾಡುವುದರಿಂದ ಬ್ರಹ್ಮಹತ್ಯೆ ದೂರವಾಗುತ್ತದೆ (ಅನು 25/42).

**ಅಶ್ಮಾ** – ಒಬ್ಬ ಪ್ರಾಚೀನ ಋಷಿ. ಪ್ರಾರಬ್ಧದ ಪ್ರಾಬಲ್ಯವನ್ನು ಹೇಳುತ್ತಾ, ಈತ ಜನಕನ ಪ್ರಶ್ನೆಗಳನ್ನು ಉತ್ತರಿಸಿದುದು (ಶಾಂತಿ 28/5–57).

**ಅಶ್ವ** – ಕಶ್ಯಪ ಪತ್ನಿ ದನುವಿನ ಪುತ್ರರಲ್ಲಿ ಒಬ್ಬ (ಆದಿ 65/24).

**ಅಶ್ವಕೇತು** – ಗಾಂಧಾರ ರಾಜನ ಮಗ. ಅವನು ಕೌರವ ಪಕ್ಷದ ಯೋಧ. ಈತ ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟ (ದ್ರೋಣ 48/7).

**ಅಶ್ವಗ್ರೀವ** – ಕಶ್ಯಪ ಪತ್ನಿ. ದನುವಿನ ಪುತ್ರರಲ್ಲಿ ಒಬ್ಬ (ಆದಿ 65/24).

**ಅಶ್ವತರ** – (1) ಒಬ್ಬ ಪ್ರಮುಖ ನಾಗ (ಆದಿ 35/10).

(2) ಅಶ್ವತರ ನಾಗನಿಂದ ಆಶ್ರಯಿಸಲ್ಪಟ್ಟ ಪ್ರಯಾಗದ ಒಂದು ತೀರ್ಥ (ವನ 85/76).

**ಅಶ್ವತೀರ್ಥ** – ಒಂದು ಪ್ರಾಚೀನ ತೀರ್ಥ. ಅದು ಕನೌಜದ ಬಳಿ ಗಂಗೆಯ ದಡದಲ್ಲಿದೆ (ವನ 95/3). ಇದು ಪ್ರಕಟವಾದುದರ ವರ್ಣನೆ (ಅನು 4/17).

**ಅಶ್ವತ್ಥಾಮಾ** – (1) ಕೃಪಿಯ ಗರ್ಭದಿಂದ ಹುಟ್ಟಿದ ದ್ರೋಣಾಚಾರ್ಯರ ಪುತ್ರ (ಆದಿ 63/107; 129/47). ಈತನ ಜನ್ಮ ಶಿವ, ಯಮ, ಕಾಮ ಮತ್ತು ಕ್ರೋಧರ ಸಮ್ಮಿಲಿತ ಅಂಶದಿಂದ ಆಗಿತ್ತು (ಆದಿ 67/72). ಈತನ ಹೆಸರು ಅಶ್ವತ್ಥಾಮನೆಂದಾಗಲು ಕಾರಣ (ಆದಿ 129/48–49). ಈತ ಹಿಟ್ಟಿನ ನೀರನ್ನು ಹಾಲೆಂದು ತಿಳಿದು ಕುಡಿದುದು ಮತ್ತು ಸಂತುಷ್ಟನಾದುದು (ಆದಿ 130/54). ಕೌರವ ರಾಜಕುಮಾರರೊಡನೆ ಈತನೂ ತನ್ನ ಪಿತನಿಂದ ಅಧ್ಯಯನ ಮಾಡಿದುದು (ಆದಿ 131). ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಈತನ ಆಗಮನ (ಸಭಾ 34/8). ಕರ್ಣ ಮತ್ತು ದುರ್ಯೋಧನರನ್ನು ನಿಂದಿಸುತ್ತಾ, ಈತನು ಅರ್ಜುನನ ಕುರಿತು ತನ್ನ ಉದ್ಗಾರವನ್ನು ಪ್ರಕಟಿಸಿದುದು (ವಿರಾಟ 50) ಅರ್ಜುನನೊಡನೆ ಯುದ್ಧ ಬಾಣಗಳು ಬರಿದಾದಾಗ, ಅರ್ಜುನನ ಮುಂದೆ ತಲೆತಗ್ಗಿಸಿದುದು (ವಿರಾಟ 69/1–15). ಹತ್ತುದಿನಗಳಲ್ಲಿ ಪಾಂಡವ ಸೇನೆಯನ್ನು ನಾಶ ಮಾಡಬಲ್ಲೆನೆಂಬ ತನ್ನ ಶಕ್ತಿಯನ್ನು ದುರ್ಯೋಧನನಲ್ಲಿ ಹೇಳಿದುದು (ಉದ್ಯೋಗ 193/19). ಪ್ರಥಮದಿನ ಶಿಖಂಡಿಯೊಡನೆ ಈತನ ದ್ವಂದ್ವ ಯುದ್ಧ (ಭೀಷ್ಮ 45/46–48). ಎರಡನೇ ದಿನ ಶಲ್ಯ ಮತ್ತು ಕೃಪರೊಡಗೂಡಿ, ಈತ ಧೃಷ್ಟದ್ಯುಮ್ನ ಮತ್ತು ಅಭಿಮನ್ಯುವಿನೊಡನೆ ಯುದ್ಧಮಾಡಿದುದು (ಭೀಷ್ಮ 55/2–7). ಅರ್ಜುನನೊಂದಿಗೆ ಯುದ್ಧ ಮಾಡಿದುದು (ಭೀಷ್ಮ 73/6–16). ಇವನಿಂದ ಶಿಖಂಡಿಯ ಪರಾಜಯ (ಭೀಷ್ಮ 82/34–38). ಅನೂಪದ ರಾಜ ನೀಲನ ಪರಾಜಯ (ಭೀಷ್ಮ 94/35–36). ಸಾತ್ಯಕಿಯ ಪ್ರಹಾರದಿಂದ ಈತ ಮೂರ್ಛಿತನಾದುದು (ಭೀಷ್ಮ 101/46–47). ವಿರಾಟ ಮತ್ತು ದ್ರುಪದರೊಡನೆ ದ್ವಂದ್ವ ಯುದ್ಧ (ಭೀಷ್ಮ 110/16). ಸಾತ್ಯಕಿಯೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 116/9–12). ಪ್ರತಿವಿಂಧ್ಯನೊಡನೆ ಯುದ್ಧ (ದ್ರೋಣ 25/29–31). ಇವನಿಂದ ರಾಜಾನೀಲನ ವಧೆ (ದ್ರೋಣ 31/24–25). ಈತ ಅಭಿಮನ್ಯುವನ್ನು ಗಾಯಗೊಳಿಸಿದ್ದು (ದ್ರೋಣ 37/24–31). ಇವನ ಧ್ವಜದ ವರ್ಣನೆ (ದ್ರೋಣ 105/10–11). ಅರ್ಜುನನ ಬಾಣಗಳಿಂದ ವ್ಯಾಕುಲನಾಗಿ ಈತ ಓಡಿದ್ದು (ದ್ರೋಣ 139/121–123). ಅರ್ಜುನನೊಂದಿಗೆ ಯುದ್ಧ (ದ್ರೋಣ 145). ಅರ್ಜುನನೊಂದಿಗೆ ಯುದ್ಧ ಮತ್ತು ಈತನ ಪರಾಜಯ (ದ್ರೋಣ 147/11). ಈತನಿಂದ ಅಂಜನಪರ್ವಾನ ವಧೆ (ದ್ರೋಣ 156/89–90). ಇವನಿಂದ ಸುರಥ, ಶತ್ರುಂಜಯ, ಬಲಾನೀಕ, ಜಯಾನೀಕ, ಮತ್ತು ಜಯಾಶ್ವರ ವಧೆ (ದ್ರೋಣ 156/180–181). ಈತನಿಂದ ಶ್ರುತಾಹ್ವ ರಾಜನ ವಧೆ (ದ್ರೋಣ 156/182). ಇವನಿಂದ ಹೇಮಮಾಲಿ, ಪೃಷಧ್ರ ಮತ್ತು ಚಂದ್ರಸೇನರ ವಧೆ (ದ್ರೋಣ 156/183). ಇವನಿಂದ ಕುಂತೀಭೋಜನ ಹತ್ತು ಮಕ್ಕಳ ವಧೆ (ದ್ರೋಣ 156/183). ಘಟೋತ್ಕಚನನ್ನು ಯುದ್ಧದಲ್ಲಿ ಪರಾಜಯಗೊಳಿಸಿದುದು (ದ್ರೋಣ 156/184–186). ಕರ್ಣನನ್ನು ಕೊಲ್ಲಲು ಈತ ಸಿದ್ಧನಾದುದು (ದ್ರೋಣ 159/3–9). ಅರ್ಜುನನೊಂದಿಗೆ ಯುದ್ಧ ಮಾಡಲು ಸಿದ್ಧನಾದ ಕೌರವ

ನನ್ನು ತಡೆದುದು (ದ್ರೋಣ 159/84–85). ದುರ್ಯೋಧನನಿಗೆ ವ್ಯಂಗಭರಿತ ಧೈರ್ಯದ ಮಾತು (ದ್ರೋಣ 160/2–17). ಧೃಷ್ಟದ್ಯುಮ್ನ ನನ್ನು ಸೇನಾಸಮೇತ ಪರಾಜಯಗೊಳಿಸಿದುದು (ದ್ರೋಣ 160/41–43). ಇವನಿಂದ ಘಟೋತ್ಕಚನ ಪರಾಜಯ (ದ್ರೋಣ 166/18). ಕೌರವ ಸೇನೆ ಓಡಿಹೋದ ಕಾರಣವನ್ನು ದುರ್ಯೋಧನ ನೊಡನೆ ವಿಚಾರಿಸಿದುದು (ದ್ರೋಣ 193/29–32). ತನ್ನ ತಂದೆಯ ವಧೆಯ ವಾರ್ತೆಯನ್ನು ಕೃಪಾಚಾರ್ಯರಿಂದ ಕೇಳಿ ಕೋಪೋದ್ರಿಕ್ತನಾದುದು (ದ್ರೋಣ 193/68–70). ದರ್ಯೋಧನನ ಸಮ್ಮುಖದಲ್ಲಿ ಈತನ ಕ್ರೋಧಪೂರ್ಣ ಉದ್ಗಾರ ಮತ್ತು ನಾರಾಯಣಾಸ್ತ್ರವನ್ನು ಪ್ರಕಟಗೊಳಿಸಿ ದುದು (ದ್ರೋಣ 194). ದುರ್ಯೋಧನನಿಗೆ ತನ್ನ ಪ್ರತಿಜ್ಞೆಯನ್ನು ಹೇಳಿದುದು (ದ್ರೋಣ 199/5–7). ಇವನಿಂದ ನಾರಾಯಣಾಸ್ತ್ರದ ಪ್ರಯೋಗ (ದ್ರೋಣ 199/15). ಪುನಃ ನಾರಾಯಣಾಸ್ತ್ರ ಪ್ರಕಟಿಸಲು, ತನ್ನ ಅಸಮರ್ಥತೆಯನ್ನು ಪ್ರಕಟಿಸಿದುದು (ದ್ರೋಣ 200/27–29). ಧೃಷ್ಟದ್ಯುಮ್ನನನ್ನು ಪರಾಜಯಗೊಳಿಸಿದುದು (ದ್ರೋಣ 200/43–44). ಇವನ ಮೂಲಕ ಮಾಳವರಾಜ ಸುದರ್ಶನನ ವಧೆ (ದ್ರೋಣ 200–83). ಇವನಿಂದ ಪೌರವ ವೃದ್ಧಕ್ಷತ್ರನ ವಧೆ (ದ್ರೋಣ 200). ಇವನಿಂದ ಚೇದಿಯ ಯುವ ರಾಜನ ವಧೆ (ದ್ರೋಣ 200/85). ಭೀಮಸೇನ ನೊಡನೆ ಘೋರಯುದ್ಧ ಮತ್ತು ಆತನನ್ನು ಸೋಲಿಸಿದುದು (ದ್ರೋಣ 200/87–128). ಇವನಿಂದ ಆಗ್ನೇಯಾಸ್ತ್ರ ಪ್ರಯೋಗ (ದ್ರೋಣ 201/16–17). ಶ್ರೀಕೃಷ್ಣನೂ ಅರ್ಜುನನೂ ಆಗ್ನೇಯಾಸ್ತ್ರದಿಂದ ಮುಕ್ತರಾದುದನ್ನು ಕಂಡು, ಎಲ್ಲವೂ ಮಿಥ್ಯೆ ಎಂದು ಹೇಳುತ್ತಾ, ಯುದ್ಧರಂಗದಿಂದ ಓಡಿಹೋದುದು (ದ್ರೋಣ 201/45–47). ಮಾರ್ಗದಲ್ಲಿ ವ್ಯಾಸರೊಡನೆ ಭೇಟಿ ಅವನೊಡನೆ, ಶ್ರೀಕೃಷ್ಣ ಮತ್ತು ಅರ್ಜುನರ ಮೇಲೆ, ಆಗ್ನೇಯಾಸ್ತ್ರ ಪ್ರಭಾವ ಬೀರದಿರಲು ಕಾರಣ ಕೇಳಿದುದು (ದ್ರೋಣ 201/50–55). ಕರ್ಣನನ್ನು ಸೇನಾಪತಿ ಯಾಗಿ ಮಾಡಲು ಸಲಹೆ ನೀಡಿದುದು (ಕರ್ಣ 10/12–17). ಭೀಮಸೇನನೊಡನೆ ಘೋರ ಯುದ್ಧ ಮತ್ತು ಮೂರ್ಛಿತನಾದುದು (ಕರ್ಣ 15). ಅರ್ಜುನನೊಡನೆ ಘೋರಯುದ್ಧ ಮತ್ತು ಪರಾಜಿತನಾದುದು (ಕರ್ಣ 16 ಮತ್ತು 17). ಪಾಂಡ್ಯ ನರೇಶ ಮಲಯಧ್ವಜನ ವಧೆ (ಕರ್ಣ 20/46). ಪಾಂಡವ ಮಹಾರಥಿಗಳನ್ನು ಸೋಲಿಸಿ, ಯುಧಿಷ್ಠಿರನನ್ನು ಓಡಿಸಿದುದು (ಕರ್ಣ 55). ಅರ್ಜುನನಿಂದ ಪರಾಜಿತನಾದುದು (ಕರ್ಣ 56/121–142). ಧೃಷ್ಟದ್ಯುಮ್ನನನ್ನು ವಧಿಸುವ ಪ್ರತಿಜ್ಞೆ ಮಾಡಿದುದು (ಕರ್ಣ 57/7–10). ಧೃಷ್ಟದ್ಯುಮ್ನ ನನ್ನು ಸೋಲಿಸಿ, ಅವನನ್ನು ಜೀವಂತ ಸೆಳೆದುದು (ಕರ್ಣ 59/39–53). ಅರ್ಜುನನಿಂದ ಪರಾಜಿತ ನಾದುದು (ಕರ್ಣ 59/60–61). ಪಾಂಡವ ರೊಡನೆ ಸಂಧಿ ಮಾಡುವಂತೆ ದುರ್ಯೋಧನ ನನ್ನು ಒತ್ತಾಯಿಸಿದುದು (ಕರ್ಣ 88/21–29). ದುರ್ಯೋಧನನು ಕೇಳಿದಾಗ ಸೇನಾಪತಿ ಯಾಗಲು ಶಲ್ಯನ ಹೆಸರನ್ನು ಸೂಚಿಸಿದುದು (ಶಲ್ಯ 6/19–21). ಅರ್ಜುನನೊಂದಿಗೆ ಯುದ್ಧ (ಶಲ್ಯ 14). ಇವನಿಂದ ಪಾಂಚಾಲ ಮಹಾರಥಿ ಸುರಥನ ವಧೆ (ಶಲ್ಯ 14/43). ದ್ವೈಪಾಯನ ಸರೋವರಕ್ಕೆ ಹೋಗಿ, ದುರ್ಯೋಧನನಲ್ಲಿ ಸೋಮಕರ ವಧೆ ಮಾಡುವ ಪ್ರತಿಜ್ಞೆ ಮಾಡಿ ದುದು (ಶಲ್ಯ 30/19–22). ಆಗ ಸೇನಾಸಮೇತ ಯುಧಿಷ್ಠಿರನು ಅಲ್ಲಿಗೆ ಬಂದುದರಿಂದ ದೂರ ತೊಲಗಿದುದು (ಶಲ್ಯ 30/63). ದುರ್ಯೋಧನನ ಪರಿಸ್ಥಿತಿ ನೋಡಿ ವಿಷಾದಪಟ್ಟುದು (ಶಲ್ಯ 65/13–20). ಪಾಂಚಾಲರ ವಧೆ ಮಾಡುವ ಪ್ರತಿಜ್ಞೆ ಮಾಡಿದುದು (ಶಲ್ಯ 65/34–37). ಸೇನಾಪತಿ ಪದದಲ್ಲಿ ಅಭಿಷಿಕ್ತನಾಗಿ, ದುರ್ಯೋಧನನನ್ನು ಅಪ್ಪಿಕೊಂಡು, ಯುದ್ಧಕ್ಕೆ ಹೊರಟದ್ದು (ಶಲ್ಯ 65/44). ಗೂಗೆಗಳು ಕಾಗೆಗಳ ಮೇಲೆ ಮಾಡಿದ ಆಕ್ರಮಣ ನೋಡಿ ಇವನ ಮನಸ್ಸಿನಲ್ಲಿ ಕ್ರೂರ ಸಂಕಲ್ಪವು ಹುಟ್ಟಿಕೊಂಡದ್ದು (ಸೌಪ್ತಿಕ 1/45–56). ಕೃತವರ್ಮ ಮತ್ತು ಕೃಪಾಚಾರ್ಯ ರೊಂದಿಗೆ ಸಲಹೆ ಪಡೆದುದು (ಸೌಪ್ತಿಕ 1/59–69). ಕೃತವರ್ಮ ಮತ್ತು ಕೃಪರಿಗೆ ತನ್ನ ಕ್ರೌರ್ಯಪೂರ್ಣ ನಿಶ್ಚಯ ತಿಳಿಸಿದುದು (ಸೌಪ್ತಿಕ 3). ಕೃಪಾಚಾರ್ಯನು ತಿಳುವಳಿಕೆ ನೀಡಿದರೂ, ತನ್ನ ಉತ್ತರ ಹೇಳಿದುದು (ಸೌಪ್ತಿಕ 4/22–34). ಕೃಪಾಚಾರ್ಯ ಮತ್ತು ಕೃತವರ್ಮರಿಗೆ ತನ್ನ ನಿಶ್ಚಯ ತಿಳಿಸಿದುದು (ಸೌಪ್ತಿಕ 5/34–37).

ಪಾಂಡವರ ಶಿಬಿರ ದ್ವಾರದಲ್ಲಿ ಒಬ್ಬ ಅದ್ಭುತ ಪುರುಷನೊಡನೆ ಯುದ್ಧ ಶಸ್ತ್ರಗಳ ಅಭಾವವುಂಟಾದಾಗ ಭಗವಂತನಾದ ಶಿವನ ಮರೆಹೊಕ್ಕದ್ದು (ಸೌಪ್ತಿಕ 6). ಇವನಿಂದ ಶಿವನಸ್ತುತಿ (ಸೌಪ್ತಿಕ 7/2–12). ಇವನ ಸಮ್ಮುಖದಲ್ಲಿ ಅಗ್ನಿವೇದಿ ಮತ್ತು ಭೂತಗಣಗಳ ಪ್ರತ್ಯಕ್ಷ (ಸೌಪ್ತಿಕ 7/13–15). ಇವನಿಂದ ಶಂಕರನಿಗೆ ಆತ್ಮಸಮರ್ಪಣೆ (ಸೌಪ್ತಿಕ 7/52). ಶಿವನಿಂದ ಈತನಿಗೆ ಖಡ್ಗ ಪ್ರಾಪ್ತಿ (ಸೌಪ್ತಿಕ 7/66). ರಾತ್ರಿ ಇವನಿಂದ ನಿದ್ರಿಸುತ್ತಿದ್ದ ಪಾಂಚಾಲರ, ಸೋಮಕರ ಮತ್ತು ದ್ರೌಪದಿ ಪುತ್ರರ ಸಂಹಾರ (ಸೌಪ್ತಿಕ 8/17–132). ದುರ್ಯೋಧನನ ಪರಿಸ್ಥಿತಿ ನೋಡಿ ವಿಲಾಪ (ಸೌಪ್ತಿಕ 9/19–46). ದುರ್ಯೋಧನನಿಗೆ ಪಾಂಚಾಲರೂ, ದ್ರೌಪದಿ ಪುತ್ರರೂ ಕೊಲ್ಲಲ್ಪಟ್ಟ ವಾರ್ತೆ ತಿಳಿಸಿದುದು (ಸೌಪ್ತಿಕ 9/48–52). ಈತನು ಸುದರ್ಶನ ಚಕ್ರವನ್ನು ಕೊಡುವಂತೆ ಶ್ರೀಕೃಷ್ಣನಲ್ಲಿ ಕೇಳಿದ ವಿಚಾರವನ್ನು ಕೃಷ್ಣನು ವಿವರಿಸಿದುದು (ಸೌಪ್ತಿಕ 12). ಪಾಂಡವರ ವಧೆಗೆ ಐಷೀಕಾಸ್ತ್ರ ಪ್ರಯೋಗ (ಸೌಪ್ತಿಕ 13/19–22). ಈತ ತನ್ನ ಅಸ್ತ್ರವನ್ನು ಹಿಂತಿರುಗಿಸುವಲ್ಲಿ ತನಗಿರುವ ಅಸಮರ್ಥತೆಯನ್ನು ವ್ಯಾಸರಿಗೆ ತಿಳಿಸಿದುದು (ಸೌಪ್ತಿಕ 15/13–18). ವ್ಯಾಸರು ಹೇಳಿದುದರಿಂದ ತನ್ನ ಮಣಿಯನ್ನು ಪ್ರತ್ಯೇಕಿಸಿಟ್ಟು, ಪಾಂಡವರ ಗರ್ಭದ ಮೇಲೆ ಅಸ್ತ್ರಪ್ರಯೋಗ ಮಾಡಿದುದು (ಸೌಪ್ತಿಕ 15/28–35). ತನ್ನ ಅಸ್ತ್ರ ಉತ್ತರೆಯ ಗರ್ಭದ ಮೇಲೆ ಬೀಳುವಂತೆ ಸಂಕಲ್ಪ ಮಾಡಿದುದು (ಸೌಪ್ತಿಕ 16/6–7). ಶ್ರೀ ಕೃಷ್ಣನಿಂದ ಶಪಿಸಲ್ಪಟ್ಟು, ಪಾಂಡವರಿಗೆ ಮಣಿಯನ್ನು ಕೊಟ್ಟು, ಈತ ಕಾಡಿಗೆ ಹೋದುದು (ಸೌಪ್ತಿಕ 16/20). ಧೃತರಾಷ್ಟ್ರನನ್ನು ಭೇಟಿ ಮಾಡಿ, ಈತ ವ್ಯಾಸಾಶ್ರಮದ ಕಡೆಗೆ ಹೋದುದು (ಸ್ತ್ರೀ 11/21). ಮಹಾಭಾರತದಲ್ಲಿ ಬಂದಿರುವ ಅಶ್ವತ್ಥಾಮನ ಹೆಸರು – ಅಚಾರ್ಯನಂದನ, ಆಚಾರ್ಯಪುತ್ರ, ಆಚಾರ್ಯಸುತ, ಆಚಾರ್ಯತನಯ, ಆಚಾರ್ಯಸತ್ತಮ, ದ್ರೌಣಿ, ದ್ರೌಣಾಯನಿ, ದ್ರೋಣಪುತ್ರ, ದ್ರೋಣಸೂನು, ಗುರುಪುತ್ರ, ಗುರುಸುತ, ಭಾರತಾಚಾರ್ಯಪುತ್ರ.

(2) ಮಾಳವದ ರಾಜ ಇಂದ್ರವರ್ಮನ ಆನೆ. ಅದು ಭೀಮಸೇನನಿಂದ ಕೊಲ್ಲಲ್ಪಟ್ಟಿತು (ದ್ರೋಣ 190/15).

**ಅಶ್ವನದಿ** – ಕುಂತೀಭೋಜ ದೇಶದ ಒಂದು ನದಿ. ಅದು ಚರ್ಮಣ್ವತಿಗೆ ಸೇರಿದೆ. ಕುಂತಿಯು ಶಿಶುಕರ್ಣನನ್ನು ಪೆಟ್ಟಿಗೆಯಲ್ಲಿಟ್ಟು ಇದರಲ್ಲೇ ತೇಲಬಿಟ್ಟಳು (ವನ 308/22).

**ಅಶ್ವಪತಿ** – (1) ಕಶ್ಯಪ ಪತ್ನಿ. ದನುವಿನ ಪುತ್ರರಲ್ಲಿ ಒಬ್ಬ (ಆದಿ 65/24).

(2) ಮದ್ರದೇಶದ ರಾಜ. ಸಂತಾನ ಪ್ರಾಪ್ತಿಗಾಗಿ ಇವನಿಂದ ತಪಸ್ಸು ಮತ್ತು ಸಾವಿತ್ರಿಯ ಆರಾಧನೆ (ವನ 293/1–8). ಈತ ಸಾವಿತ್ರಿದೇವಿಯಲ್ಲಿ ವರಯಾಚಿಸಿದುದು (ವನ 293/14) ಈತನಿಗೆ ಸಾವಿತ್ರಿ ಎಂಬ ಹೆಸರಿನ ಕನ್ಯೆ ಪ್ರಾಪ್ತವಾದಳು (ವನ 293/23). ಈತ ಸಾವಿತ್ರಿಯನ್ನು ಸ್ವಯಂವರಾನ್ವೇಷಣೆಗೆ ಕಳುಹಿಸಿದುದು (ವನ 293/33). ನಾರದನೊಡನೆ ಸತ್ಯವಾನನ ಗುಣ ದೋಷಗಳ ಕುರಿತು ಪ್ರಶ್ನೆ (ವನ 294/14). ರಾಜರ್ಷಿ ದ್ಯುಮತ್ಸೇನನೊಡನೆ ಸಾವಿತ್ರಿಯನ್ನು ಸೊಸೆಯಾಗಿ ಸ್ವೀಕರಿಸಲು ಪ್ರಾರ್ಥನೆ (ವನ 295/10–12). ಈತನಿಗೆ ಮಾಲವಿಯ ಗರ್ಭದಿಂದ ನೂರುಪುತ್ರರ ಪ್ರಾಪ್ತಿ (ವನ 299/13).

**ಅಶ್ವಬಂಧ** – ಕುದುರೆಗಳನ್ನು ವಶದಲ್ಲಿರಿಸಿಕೊಳ್ಳುವ ಸವಾರ (ವಿರಾಟ 3/3).

**ಅಶ್ವಮೇಧ** – ಪ್ರಾಚೀನ ದೇಶ. ಈ ದೇಶದ ರಾಜನ ಹೆಸರು ರೋಚಮಾನನೆಂದಾಗಿತ್ತು. ಅವನನ್ನು ಭೀಮಸೇನನು ಬಲವಂತನಾಗಿ ಗೆದ್ದಿದ್ದನು (ಸಭಾ 29/8).

**ಅಶ್ವಮೇಧದತ್ತ** – ಶತಾನೀಕನ ಪತ್ನಿ ವಿದೇಹ ರಾಜಕುಮಾರಿಯ ಗರ್ಭದಿಂದ ಹುಟ್ಟಿದ ಮಗ (ಆದಿ 95/86).

**ಅಶ್ವಮೇಧ ಪರ್ವ** – ಅಶ್ವಮೇಧಿಕ ಪರ್ವದ ಒಂದು ಅವಾಂತರ ಪರ್ವ (1ರಿಂದ 15 ಅಧ್ಯಾಯವರೆಗೆ).

**ಅಶ್ವರಥಾ** – ಗಂಧಮಾದನ ಪರ್ವತದ ಕೆಳಗೆ ಆರ್ಷ್ಟಿಷೇಣನ ಆಶ್ರಮದ ಬಳಿ ಹರಿಯುವ ಒಂದು ನದಿ (ವನ 160/21).

**ಅಶ್ವವತಿ** – ತ್ರಿಕಾಲಗಳಲ್ಲೂ ಸ್ಮರಣೆ ಮಾಡಲು ಯೋಗ್ಯವಾದ ನದಿಗಳಲ್ಲಿ ಒಂದು (ಅನು 165/25).

**ಅಶ್ವವಂತ** – ಭರತವಂಶದ ಮಹಾರಾಜ

ಕುರುವಿನ ಪ್ರಥಮ ಪುತ್ರ. ಇವನ ತಾಯಿಯ ಹೆಸರು 'ವಾಹಿನಿ'. ಇವನ ಇನ್ನೊಂದು ಹೆಸರು ಅವಿಕ್ಷಿತ. ಇವನಿಗೆ ಪರೀಕ್ಷಿತ, ಶಬಲಾಶ್ವ, ಆದಿ ರಾಜ, ವಿರಾಜ, ಶಾಲ್ಮಲಿ, ಉಚ್ಚೈಃಶ್ರವಾ, ಭಯಂಕರ ಮತ್ತು ಜಿತಾರಿ ಎಂಬ ಎಂಟು ಮಂದಿ ಪುತ್ರರಿದ್ದರು (ಆದಿ 94/50–53)

**ಅಶ್ವಶಂಕು** – ಕಶ್ಯಪಪತ್ನಿ ದನುವಿನ ಪುತ್ರರಲ್ಲಿ ಒಬ್ಬ (ಆದಿ 67/10).

**ಅಶ್ವಶಿರಃಸ್ಥಾನ** – ಒಂದು ಪವಿತ್ರ ಸ್ಥಾನ. ಸ್ವಪ್ನದಲ್ಲಿ ಶಿವನ ಬಳಿಗೆ ಹೋಗುತ್ತಿದ್ದ ಕೃಷ್ಣಾರ್ಜುನರು ಇಲ್ಲಿಗೆ ಹೋಗಿದ್ದರು (ದ್ರೋಣ 80/32).

**ಅಶ್ವಶಿರಾ** – (1) ಕಶ್ಯಪ ಪತ್ನಿ ದನುವಿನ ಪುತ್ರರಲ್ಲಿ ಒಬ್ಬ (ಆದಿ 65/23).

(2) ನರನಾರಾಯಣಾಶ್ರಮದ ಬಳಿ ವೈಹಾಯ ಸಕುಂಡದಲ್ಲಿ ವೇದಪಾಠಿಯಾದ ಭಗವಾನ್ ಹಯಗ್ರೀವ (ಶಾಂತಿ 120/3).

**ಅಶ್ವಸೇನ** – ತಕ್ಷಕ ನಾಗನ ಮಗ (ಆದಿ 226/5). ಖಾಂಡವವನದಾಹದ ಸಮಯದಲ್ಲಿ ಈತನ ತಾಯಿಯನ್ನು ಅರ್ಜುನ ವಧಿಸಿದುದು (ಆದಿ 226/8). ಇಂದ್ರನಿಂದ ಈತನ ರಕ್ಷಣೆ (ಆದಿ 226/9). ಅರ್ಜುನನಿಂದ ಈತನಿಗೆ ಆಶ್ರಯ ಹೀನತೆಯ ಶಾಪ (ಆದಿ 226/11). ಕರ್ಣನಿಂದ ಬಿಡಲ್ಪಟ್ಟ ಸರ್ಪಮುಖ ಬಾಣದಲ್ಲಿ ಪ್ರವಿಷ್ಟನಾಗಿ, ಈತ ಅರ್ಜುನನ ಕಿರೀಟವನ್ನು ಸುಟ್ಟುಹಾಕಿದುದು (ಕರ್ಣ 90/33). ಕರ್ಣನಿಂದ ಅಸ್ವೀಕೃತನಾದ ಈತನಿಂದ ಅರ್ಜುನನ ಮೇಲೆ ಆಕ್ರಮಣ (ಕರ್ಣ 90/50). ಶ್ರೀಕೃಷ್ಣನಿಂದ ಈತನ ಪರಿಚಯ ಪಡೆದು, ಅರ್ಜುನನಿಂದ ಈತನ ವಧೆ (ಕರ್ಣ 90/54).

**ಅಶ್ವಹೃದಯ** – ಕುದುರೆಗಳ ಹರ್ಷ ಮತ್ತು ಉತ್ಸಾಹವನ್ನು ಹೆಚ್ಚಿಸುವ ಒಂದು ಮಂತ್ರ (ದ್ರೋಣ 16/18)

**ಅಶ್ವಾತಕ** – ಒಂದು ದೇಶ (ಭೀಷ್ಮ 51/15).

**ಅಶ್ವಿನೀಕುಮಾರ** – ನಾಸತ್ಯ ಮತ್ತು ದಸ್ರರೆಂಬ ಇಬ್ಬರು ಸಹೋದರರು. ಅವರು ದೇವತೆಗಳು. ತ್ವಷ್ಟಾನ ಮಗಳು ಸಂಜ್ಞೆ, ಅಶ್ವಿನೀರೂಪದಲ್ಲಿದ್ದು, ಸೂರ್ಯನಿಂದ ಅಂತರಿಕ್ಷದಲ್ಲಿ ಇವರನ್ನು ಪಡೆದಳು. ಇವರು ಸಂಜ್ಞೆಯ ಮೂಗಿನಿಂದ ಹುಟ್ಟಿದವರು (ಆದಿ 66/35; ಅನು 150/17–18). ಇವರು ಬ್ರಹ್ಮನೇ ಮೊದಲಾದ ಅನ್ಯ ದೇವತೆಗಳಂತೆ ಸ್ವಯಂ ಅಂಡದಿಂದ ಉತ್ಪನ್ನರಾದರು (ಆದಿ 1–34). ಆಯೋದಧೌಮ್ಯನ ಶಿಷ್ಯ ಉಪಮನ್ಯುವಿನಿಂದ ಇವರ ಸ್ತುತಿ (ಆದಿ 3/57–68). ಇವರಿಂದ ಉಪಮನ್ಯುವಿಗೆ ವರದಾನ (ಆದಿ 3/73). ಇವರು ಮಾದ್ರಿಯ ಗರ್ಭದಿಂದ ನಕುಲ ಸಹದೇವರನ್ನು ಉತ್ಪನ್ನಗೊಳಿಸಿದರು (ಆದಿ 95/63). ಇವರು ದೇವತೆಗಳ ಜೊತೆಯಲ್ಲಿ ವಿಮಾನದಲ್ಲಿ ಕುಳಿತು, ದ್ರೌಪದೀ ಸ್ವಯಂವರ ನೋಡಲು ಬಂದಿದ್ದರು (ಆದಿ 186/6). ಖಾಂಡವವನದಹನ ಕಾಲದಲ್ಲಿ ಕೃಷ್ಣಾರ್ಜುನರೊಡನೆ ಹೋರಾಡಲು ಬಂದ ದೇವತೆಗಳಲ್ಲಿ ಇವರೂ ಇದ್ದರು (ಆದಿ 226/33). ಇವರು ಸುಕನ್ಯೆಯೊಡನೆ ತಮ್ಮನ್ನು ಪತಿಗಳಾಗಿ ವರಿಸುವಂತೆ ಆಗ್ರಹಿಸಿ, ಆಕೆಯ ಪಾತಿವ್ರತ್ಯವನ್ನು ಪರೀಕ್ಷಿಸಿದರು (ವನ 123/10). ತಮ್ಮನ್ನು ದೇವತೆಗಳ ಶ್ರೇಷ್ಠ ವೈದ್ಯರೆಂದು ಹೇಳಿದರು (ವನ 123/12). ಇವರಿಂದ ಚ್ಯವನನಿಗೆ ಯೌವನದಾನ ಮತ್ತು ಸುಕನ್ಯೆಯಿಂದ ಪತಿಯ ಪರಿಚಯ (ವನ 123/13–21). ಚ್ಯವನ ಮುನಿಯ ಪ್ರಭಾವದಿಂದ ಶರ್ಯಾತಿಯ ಯಜ್ಞದಲ್ಲಿ ಇವರಿಗೆ ಸೋಮಪಾನ (ವನ 124–125). ಈ ಅಶ್ವಿನೀಕುಮಾರರು ಮಾಂಧಾತನನ್ನು ತಂದೆಯ ಹೊಟ್ಟೆಯಿಂದ ಹೊರಗೆ ತೆಗೆದರು (ದ್ರೋಣ 62/4). ಇವರಿಂದ ಸ್ಕಂದನಿಗೆ ವರ್ಧನ ಮತ್ತು ನಂದನ ಎಂಬ ಇಬ್ಬರು ಪಾರ್ಷದರ ಕೊಡುಗೆ (ಶಲ್ಯ 45/38). ತುಪ್ಪದ ಆಹುತಿ ಮತ್ತು ಅದರ ದಾನದಿಂದ ಇವರಿಗೆ ಅಧಿಕ ಸಂತೋಷವಾಗುತ್ತದೆ (ಅನು 65/7). ಆಶ್ವಿನಿ ಮಾಸದಲ್ಲಿ ಬ್ರಾಹ್ಮಣರಿಗೆ ತುಪ್ಪದಾನ ಮಾಡುವ ಪುರುಷನಿಗೆ ಅಶ್ವಿನೀ ಕುಮಾರರು ರೂಪಕೊಡುತ್ತಾರೆ (ಅನು 65/10). ಇಪ್ಪತ್ತೊಂದು ಮತ್ತು ಇಪ್ಪತ್ತೊಂಭತ್ತು ದಿನಕ್ಕೊಂದು ಬಾರಿ ಭೋಜನ ಮಾಡುವವರಿಗೆ ಅಶ್ವಿನೀ ಕುಮಾರರ ಲೋಕಪ್ರಾಪ್ತಿಯಾಗುತ್ತದೆ (ಅನು 107/95–126). ಕೀರ್ತನೀಯ ಹೆಸರುಗಳಲ್ಲಿ ನಾಮನಿರ್ದೇಶ (ಅನು 150/81).

**ಅಶ್ವಿನೀಕುಮಾರತೀರ್ಥ** – ಅಲ್ಲಿ ಸ್ನಾನ ಮಾಡುವುದರಿಂದ ರೂಪ ಪ್ರಾಪ್ತಿಯಾಗುತ್ತದೆ

(ವನ 83/17).

**ಅಶ್ವಿನೀತೀರ್ಥ** – ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯ ರೂಪವಂತನಾಗುತ್ತಾನೆ (ಅನು 25/21).

**ಅಷ್ಟಕ** – ಒಬ್ಬ ಪ್ರಾಚೀನ ರಾಜರ್ಷಿ (ಆದಿ 86 /5). ಈತ ರಾಜಾ ಯಯಾತಿಯ ದೌಹಿತ್ರನಾಗಿದ್ದ (ಆದಿ 89/13). ಅಷ್ಟಕ ಮತ್ತು ರಾಜಾ ಯಯಾತಿಯ ಸಂವಾದ (ಆದಿ 88ರಿಂದ 92). ಯಯಾತಿಯ ಪುತ್ರಿ ಮಾಧವಿಯ ಗರ್ಭದಿಂದ, ವಿಶ್ವಾಮಿತ್ರನ ಮೂಲಕ ಈತನ ಜನನವಾಯಿತು (ಉದ್ಯೋಗ 119/18). ಇವನಿಂದ ಯಯಾತಿಗೆ ತನ್ನ ಪುಣ್ಯಫಲದ ದಾನ (ಉದ್ಯೋಗ 122/13–14). ಯಯಾತಿ ಮತ್ತು ಶಿಬಿ ಮೊದಲಾದ ರಾಜರ ಜೊತೆಯಲ್ಲಿ ಈತನ ಸ್ವರ್ಗಗಮನ (ಉದ್ಯೋಗ 93/16). ಸ್ವರ್ಗಕ್ಕೆ ಹೋಗುತ್ತಿರುವಾಗ, ಶಿಬಿಯ ಶ್ರೇಷ್ಠತೆಯ ಕುರಿತು, ಯಯಾತಿಯೊಡನೆ ಈತನ ಪ್ರಶ್ನೆ (ಉದ್ಯೋಗ 93/17). ದೇವರ್ಷಿ ನಾರದರಿಂದ ಈತ ಸ್ವರ್ಗದಿಂದ ಬಿದ್ದುದರ ವರ್ಣನೆ (ವನ 198/4–5). ಮಹಾರಾಜ ಪ್ರತರ್ದನನಿಂದ ಖಡ್ಗಪ್ರಾಪ್ತಿ (ಶಾಂತಿ 166/80). ಅಗಸ್ತ್ಯರ ಕಮಲಗಳ ಅಪಹಾರವಾದಾಗ ಈತನ ಶಪಥ (ಅನು 94/36). ಪ್ರಾತಃ ಸಂಧ್ಯಾಕಾಲಗಳಲ್ಲಿ ಸ್ಮರಿಸಲು ಯೋಗ್ಯರಾದ ಮತ್ತು ಪಾಪನಾಶಕ ರಾಜರಲ್ಲಿ, ಅಷ್ಟಕನೂ ಗಣನೀಯನಾಗಿದ್ದಾನೆ (ಅನು 165/56).

**ಅಷ್ಟಜಿಹ್ವ** – ಸ್ಕಂದನ ಸೈನಿಕರಲ್ಲಿ ಒಬ್ಬ (ಶಲ್ಯ 45/62).

**ಅಷ್ಟವಸು** – ಗಣದೇವತೆ ಧರ್ಮನಿಂದ ದಕ್ಷನ ಬೇರೆ ಬೇರೆ ಕನ್ಯೆಯರಲ್ಲಿ ಹುಟ್ಟಿದವರು. ಇವರು ಎಂಟು ಮಂದಿ ಅವರ ಹೆಸರು – ಧರ, ಧ್ರುವ, ಸೋಮ, ಅಹ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ (ಆದಿ 66/17–20). ಇವರ ಹೆಸರುಗಳ ಸಂಬಂಧದಲ್ಲಿ ಪುರಾಣಗಳಲ್ಲಿ ಮತಭೇದವಿದೆ. ಉದಾಹರಣೆಗಾಗಿ ವಿಷ್ಣುಪುರಾಣದಲ್ಲಿ – ಆಪ, ಧ್ರುವ, ಸೋಮ, ಧರ್ಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ (ವಿಷ್ಣು – 1/15). ಭಾಗವತ ಪ್ರಕಾರ – ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು ಮತ್ತು ವಿಭಾವಸು (ಭಾಗವತ 6/6). ಹರಿವಂಶ ಪ್ರಕಾರ – ಆಪ, ಧರ, ದ್ರುವ, ಸೋಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ. ಇದರಿಂದಾಗಿ ಪರಸ್ಪರ ವಿರೋಧವೆಂದು ತಿಳಿಯಬೇಕಾಗಿಲ್ಲ. ಯಾಕೆಂದರೆ ಒಬ್ಬನೇ ವ್ಯಕ್ತಿಗೆ ಹಲವು ಹೆಸರುಗಳಿರುತ್ತವೆ ಮತ್ತು ಬೇರೆ ಬೇರೆ ಸ್ಥಳಗಳಲ್ಲಿ ವಿಭಿನ್ನ ಹೆಸರುಗಳು ಹೇಳಲ್ಪಡುತ್ತವೆ. ಇವರ ವಿಶೇಷ ಪರಿಚಯ ಆಯಾಯ ಹೆಸರಿನಲ್ಲಿ ನೋಡಬಹುದು. ಗಂಗೆಯ ಗರ್ಭದಿಂದ ಶಾಂತನುವಿನ ಮೂಲಕ ಇವರೆಲ್ಲರ ಜನ್ಮ (ಆದಿ 98/12). ಇವರೆಲ್ಲರೂ ಮನುಷ್ಯ ಯೋನಿಯಲ್ಲಿ ಜನ್ಮವೆತ್ತುವಂತೆ ವಸಿಷ್ಠರಿಂದ ಶಾಪ (ಆದಿ 99/32). ಪ್ರಾರ್ಥಿಸಿಕೊಂಡಾಗ, 'ದ್ಯು' ಎಂಬವನ ಹೊರತಾಗಿ, ಇತರ ಎಲ್ಲರಿಗೂ ಆದಷ್ಟು ಬೇಗನೆ ಶಾಪದಿಂದ ಮುಕ್ತಿಹೊಂದುವಂತೆ ವಸಿಷ್ಠರಿಂದ ಆಶ್ವಾಸನೆ (ಆದಿ 99/38–39). ಪರಶುರಾಮರೊಡನೆ ಯುದ್ಧಮಾಡುತ್ತಿದ್ದಾಗ, ಇವರಿಂದ ಭೀಷ್ಮರಿಗೆ ಪ್ರಸ್ವಾಪನಾಸ್ತ್ರದ ದಾನ (ಉದ್ಯೋಗ 183/11–13). ಮೃತ್ಯುವಿಗಾಗಿ ವಿಚಾರ ಮಾಡುತ್ತಿರುವ ಭೀಷ್ಮನ ವಿಚಾರವನ್ನು ಸಮರ್ಥಿಸಿದುದು (ಭೀಷ್ಮ 119/37).

**ಅಷ್ಟವಿವಾಹ** – ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ – ಇವು ಎಂಟು ವಿವಾಹಗಳು (ಆದಿ 73/8–9).

**ಅಷ್ಟಾಕಪಾಲ** – ಎಂಟು ಕಪಾಲಗಳ ಮೂಲಕ ಸಂಸ್ಕಾರಪೂರ್ವಕ ಸಿದ್ಧಪಡಿಸಿದ ಪುರೋಡಾಶ (ಶಾಂತಿ 221/24).

**ಅಷ್ಟಾವಕ್ರ** – ಮಹರ್ಷಿ ಕಹೋಳ(ಡ)ನ ಮೂಲಕ ಉದ್ದಾಲಕ ಕುಮಾರಿ ಸುಜಾತೆಯ ಗರ್ಭದಿಂದ ಜನ್ಮವೆತ್ತಿದ ಮುನಿ. ತನ್ನ ತಂದೆಯ ಅಧ್ಯಯನದಲ್ಲಿ ಈತ ಬಾಲಕನಾಗಿದ್ದಾಗ ದೋಷ ಹುಡುಕಿದುದು (ವನ 132/8–10). ಈತ ಜನಕ ರಾಜನ ಯಜ್ಞಕ್ಕೆ ಹೋದುದು (ವನ 132/23). ದ್ವಾರಪಾಲಕನೊಡನೆ ಮಾತುಕತೆ (ವನ 133/5–16). ಜನಕರಾಜನೊಡನೆ ಪ್ರಶ್ನೋತ್ತರ (ವನ 133/20–30). ವಂದಿಯೊಡನೆ ಶಾಸ್ತ್ರಾರ್ಥಮಾಡಿ ಅವನನ್ನು ಸೋಲಿಸಿದುದು (ವನ 134/1–21). ಸಮಂಗಾದಲ್ಲಿ ಸ್ನಾನ ಸ್ನಾನಮಾಡಿದುದರಿಂದ ಈತನ ಅಂಗಗಳು ಸರಿಯಾದುದು (ವನ 134/39). ಮಹರ್ಷಿ ವದಾನ್ಯನ ಕನ್ಯೆಯನ್ನು

ಯಾಚಿಸಿದುದು (ಅನು 19/11). ವದಾನ್ಯನು ಹೇಳಿದುದರಿಂದ ಈತ ಉತ್ತರ ದಿಕ್ಕಿನ ಕಡೆಗೆ ನಡೆದುದು (ಅನು 19/27). ಕುಬೇರನ ಭವನ ದಲ್ಲಿ ವಿಶ್ರಾಂತಿ (ಅನು 19/40–41). ನಾರಿರೂಪ ಧಾರಿಣಿಯಾದ ಉತ್ತರ ದಿಕ್ಕಿನೊಡನೆ ಸಂವಾದ (ಅನು 19/73). ವದಾನ್ಯ ಋಷಿಯೊಡನೆ ತನ್ನ ಎಲ್ಲಾ ಸಮಾಚಾರ ಹೇಳಿದುದು (ಅನು 21/15–16). ವದಾನ್ಯನ ಮಗಳು ಸುಪ್ರಭಾಳೊಂದಿಗೆ ಈತನ ವಿವಾಹ (ಅನು 21/18).

**ಅಷ್ಟಾವಕ್ರತೀರ್ಥ** – ಇಲ್ಲಿ ತರ್ಪಣ ಮಾಡಿ, ಹನ್ನೆರಡು ದಿನಗಳ ವರೆಗೆ ನಿರಾಹಾರನಾಗಿರು ವುದರಿಂದ ನರಮೇಧ ಯಜ್ಞದ ಫಲ ಸಿಗುತ್ತದೆ (ಅನು 25/41).

**ಅಸಮಂಜ** – ಸಗರ ಮತ್ತು ಶೈವ್ಯಾರಿಂದ ಜನಿಸಿದ ಒಬ್ಬ ಇಕ್ಷ್ವಾಕುವಂಶದ ರಾಜ. ಅವನು ಪ್ರಜೆಗಳ ಬಾಲಕರನ್ನು ಸರಯೂನದಿಗೆ ಎಸೆಯು ತ್ತಿದ್ದನು. ಪ್ರಜೆಗಳ ಆರ್ತಕೋರಿಕೆಯಿಂದ, ಮನ ಕರಗಿ, ಸಗರನು ಮಂತ್ರಿಯ ಮೂಲಕ ಅಸಮಂಜನನ್ನು ಹೊರಗೆ ಹಾಕಿಸಿದನು (ವನ 107/43; ಶಾಂತಿ 57/7–9).

**ಅಸಿಕ್ನಿ** – ಭಾರತದ ಪಂಜಾಬ ಪ್ರಾಂತದಲ್ಲಿರುವ ಒಂದು ನದಿ ಚಂದ್ರಭಾಗ ಅಥವಾ ಚಿನಾಬ್ (ಭೀಷ್ಮ 9/23).

**ಅಸಿತ** – (1) ಒಬ್ಬ ರಾಜ (ದ್ರೋಣ 62/11; ಶಾಂತಿ 28/88).

(2) ಒಬ್ಬ ಋಷಿ (ಶಾಂತಿ 47/7).

**ಅಸಿತದೇವಲ** – ಒಬ್ಬ ಪ್ರಸಿದ್ಧ ಋಷಿ. ಮಹಾ ಭಾರತದ ಅನೇಕ ಕಡೆಗಳಲ್ಲಿ ಈತನ ಹೆಸರು ಬಂದಿದೆ. ಇವನು ಪಿತೃಗಳಿಗೆ ಹದಿನೈದು ಲಕ್ಷ ಶ್ಲೋಕಗಳುಳ್ಳ ಮಹಾಭಾರತವನ್ನು ಹೇಳಿದ್ದನು (ಆದಿ 1/107). ಈತ ಜನಮೇಜಯನ ಸರ್ಪ ಯಜ್ಞದಲ್ಲಿ ಸದಸ್ಯನಾಗಿದ್ದ (ಆದಿ 53/8). ರಾಜಾ ಯುಧಿಷ್ಠಿರನ ಪಟ್ಟಾಭಿಷೇಕ ಕಾಲದಲ್ಲಿ ವ್ಯಾಸ ಮತ್ತು ನಾರದರೊಂದಿಗೆ ಈತನೂ ಉಪಸ್ಥಿತ ನಾಗಿದ್ದ (ಸಭಾ 53/10). ಇವನು ಅಂಜನ ಪರ್ವತದಲ್ಲಿ ಯುಧಿಷ್ಠಿರನಿಗೆ ಉಪದೇಶ ಮಾಡಿ ದುದು (ಸಭಾ 78/15). ಆದಿತ್ಯತೀರ್ಥದ ಮಹಿಮಾಪ್ರಸಂಗದಲ್ಲಿ ಈತನ ಚರಿತ್ರೆಯ ವರ್ಣನೆ (ಶಲ್ಯ 50). ಜೈಗೀಷವ್ಯ ಮುನಿಯಿಂದ ಸಮತಾಳ ವಿಷಯವಾಗಿ ಈತನ ಪ್ರಶ್ನೆ (ಶಾಂತಿ 229/5). ಸೃಷ್ಟಿ ವಿಷಯವಾಗಿ ನಾರದನ ಪ್ರಶ್ನೆಗೆ ಉತ್ತರ (ಶಾಂತಿ 275/4–39). ಶಿವಮಹಿಮೆಯ ಕುರಿತು, ಈತ ಯುಧಿಷ್ಠಿರನೊಡನೆ ತನ್ನ ಅನುಭವ ಹೇಳಿ ದುದು (ಅನು 18/17–18).

**ಅಸಿತಧ್ವಜ** – ಕಶ್ಯಪ ಮತ್ತು ವಿನತೆಯರ ಒಬ್ಬ ಮಗ. ಈತ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/73).

**ಅಸಿತಪರ್ವತ** – ಆನರ್ತದೇಶದಲ್ಲಿ ನರ್ಮದಾ ತಟದಲ್ಲಿರುವ ಒಂದು ಪರ್ವತ (ವನ 89/11).

**ಅಸಿತಾ** – ಒಬ್ಬ ಅಪ್ಸರೆ. ಆಕೆ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದಳು (ಆದಿ 122/63).

**ಅಸಿಪತ್ರವನ** – ಒಂದು ನರಕ. ಅದರ ಮಾಯಾ ಮಯ ಸ್ವರೂಪವನ್ನು ಯುಧಿಷ್ಠಿರನಿಗೆ ಕಾಣಿಸ ಲಾಗಿತ್ತು (ಸ್ವರ್ಗಾರೋಹಣ 2/23). ಯಮ ಲೋಕದ ಅಸಿಪತ್ರವೆಂಬ ಹೆಸರಿನ ವನ (ಶಾಂತಿ 321/32).

**ಅಸಿಲೋಮಾ** – ಕಶ್ಯಪ ಪತ್ನಿ ದನುವಿನ ಪುತ್ರರಲ್ಲಿ ಒಬ್ಬ (ಆದಿ 65/23).

**ಅಸುರಾ** – ಕಶ್ಯಪ ಮತ್ತು ಪ್ರಾಧಾರ ಇವರ ಎಂಟು ಪುತ್ರಿಯರಲ್ಲಿ ಒಬ್ಬಳು (ಆದಿ 65/41).

**ಅಸ್ತಾಚಲಾ** – ಪಶ್ಚಿಮ ದಿಕ್ಕಿನ ಒಂದು ಪರ್ವತ (ಉದ್ಯೋಗ 110/6).

**ಅಸ್ತಿ** – ಮಗಧರಾಜ ಜರಾಸಂಧನ ಪುತ್ರಿ, ಕಂಸನ ಪತ್ನಿ ಸಹದೇವನ ಸಹೋದರಿ. ಈಕೆಯ ಇನ್ನೊಬ್ಬ ಸಹೋದರಿಯ ಹೆಸರು 'ಪ್ರಾಪ್ತಿ'. ಅವಳೂ ಕಂಸನ ಪತ್ನಿಯಾಗಿದ್ದಳು (ಸಭಾ 14/29–32).

**ಅಹಂಯಾತಿ** – ಪೂರುವಂಶದ ರಾಜ ಸಂಯಾತಿ ಮತ್ತು ವರಾಂಗಿಯ ಪುತ್ರ. ಇವನಿಂದ ಭಾನು ಮತಿಯ ಗರ್ಭದಲ್ಲಿ ಸಾರ್ವಭೌಮನೆಂಬ ಪುತ್ರನ ಜನನವಾಯಿತು (ಆದಿ 95/14–15).

**ಅಹ** – ಧರ್ಮಪುತ್ರ ಅಷ್ಟವಸುಗಳಲ್ಲಿ ಒಬ್ಬ . ಇವನ ತಾಯಿಯ ಹೆಸರು 'ರತಾ' ಎಂದಾಗಿತ್ತು (ಆದಿ 66/17–20).

**ಅಹಃ** – (ಅಥವಾ ಅಹನ್) ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಸೂರ್ಯಲೋಕ ಪ್ರಾಪ್ತಿಯಾಗುತ್ತದೆ (ವನ 83/100).

**ಅಹರ** – ಕಶ್ಯಪ ಮತ್ತು ದನು ಪುತ್ರರಲ್ಲಿ ಒಬ್ಬ

(ಆದಿ 65/25).

**ಅಹಲ್ಯಾ** – ಗೌತಮ ಮಹರ್ಷಿಯ ಪತ್ನಿ. ಈಕೆ ಉತ್ತಂಕನೊಡನೆ ಗುರುದಕ್ಷಿಣಾರೂಪದಲ್ಲಿ, ಸೌದಾಸನ ರಾಣಿಯ ಕುಂಡಲಗಳನ್ನು ಕೇಳಿದುದು (ಆಶ್ವ 56/29). ಗೌತಮರೊಡನೆ ಉತ್ತಂಕನಿಗೆ ಕಲ್ಯಾಣವುಂಟಾಗುವಂತೆ ಕೇಳಿಕೊಂಡುದು (ಆಶ್ವ 56/34). ಇಂದ್ರನಿಂದ ಈಕೆಯ ಜಾರತನ (ಶಾಂತಿ 342/23).

**ಅಹಲ್ಯಾಹ್ರದ** – ಗೌತಮ ಮಹರ್ಷಿಗಳ ತಪೋವನದಲ್ಲಿ, ಅಹಲ್ಯಾಹ್ರದವೆಂಬ ತೀರ್ಥಸ್ನಾನ ಮಾಡಿದರೆ ಮನುಷ್ಯನಿಗೆ ಪರಮಗತಿ ಪ್ರಾಪ್ತವಾಗುತ್ತದೆ (ವನ 84/109).

**ಅಹಿಚ್ಛತ್ರ** – ಉತ್ತರ ಪಾಂಚಾಲವರ್ತಿ ರಾಜ್ಯ. ಇದು ದ್ರೋಣಾಚಾರ್ಯರ ಅಧಿಕಾರದಲ್ಲಿತ್ತು. ಇದನ್ನು ದ್ರೋಣಾಚಾರ್ಯನು, ಅರ್ಜುನನ ಮೂಲಕ, ದ್ರುಪದನನ್ನು ಸೋಲಿಸಿ, ಪಡಕೊಂಡಿದ್ದನು (ಆದಿ 137/73–76).

**ಅಹಿಚ್ಛತ್ರಾ** – ಒಂದು ಪ್ರಾಚೀನ ಪಟ್ಟಣ. ಅದು ಅಹಿಚ್ಛತ್ರ ರಾಜ್ಯದ ರಾಜಧಾನಿಯಾಗಿತ್ತು ದ್ರುಪದನನ್ನು ಗೆದ್ದು, ಅರ್ಜುನನು ಈ ನಗರವನ್ನು ಗುರುದಕ್ಷಿಣೆಯಾಗಿ ದ್ರೋಣಾಚಾರ್ಯನಿಗೆ ಕೊಟ್ಟಿದ್ದನು (ಆದಿ 137/73–77).

**ಅಹಿತಾ** – ಭಾರತದ ಒಂದು ಪ್ರಮುಖ ನದಿ (ಭೀಷ್ಮ 9/21).

**ಅಹಿರ್ಬುಧ್ನ್ಯ** – ಏಕಾದಶ ರುದ್ರರಲ್ಲಿ ಒಬ್ಬ. ಈತ ಸುವರ್ಣ ರಕ್ಷಕ (ಉದ್ಯೋಗ 114/4). ಏಕಾದಶ ರುದ್ರರಲ್ಲಿ ಈತನ ಹೆಸರು ಅನೇಕ ಸ್ಥಳಗಳಲ್ಲಿ ಬಂದಿದೆ (ಶಾಂತಿ 208/19–20).

**ಅಹೋವೀರ್ಯ** – ವಾನಪ್ರಸ್ಥ ಧರ್ಮಪಾಲನೆ ಮಾಡುವ ಒಬ್ಬ ಮುನಿ (ಶಾಂತಿ 144/17).

## ಆ

**ಆಕರ್ಷ** – ಆಕರ್ಷ ಎಂಬ ಹೆಸರಿನ ದೇಶ ಮತ್ತು ಅಲ್ಲಿನ ನಿವಾಸಿ (ಸಭಾ 34/11).

**ಆಕಾಶಜನನಿ** – ಕೋಟೆಯ ಪ್ರಾಕಾರದಲ್ಲಿರುವ ಚಿಕ್ಕ ಚಿಕ್ಕ ತೂತುಗಳು ಅದರ ಮೂಲಕ ತೋಪುಗಳಿಂದ ಗುಂಡು ಹಾರಿಸಲ್ಪಡುತ್ತದೆ (ಶಾಂತಿ 69/43).

**ಆಕೃತಿ** – ಸುರಾಷ್ಟ್ರ ದೇಶದ ರಾಜ ಕೌಶಿಕಾಚಾರ್ಯ. ಸಹದೇವನ ಮೂಲಕ ಈತನ ಪರಾಜಯ (ಸಭಾ 31/61).

**ಆಕೃತೀಪುತ್ರ** – ಆಕೃತಿ ಎಂಬ ಹೆಸರಿನ ತಾಯಿಯ ಮಗ ರುಚಿಪರ್ವಾ. ಈತ ಪಾಂಡವ ಪಕ್ಷದ ಯೋಧ. ಇವನು ಭಗದತ್ತನಿಂದ ಕೊಲ್ಲಲ್ಪಟ್ಟನು (ದ್ರೋಣ 27/50–52).

**ಆಕ್ರೋಶ** – ಮಹೋತ್ಥ ದೇಶದ ರಾಜ. ಅದನ್ನು ನಕುಲ ಗೆದ್ದಿದ್ದನು (ಸಭಾ 32/5–6).

**ಆಗ್ನಿವೇಶ್ಯ** – ಒಬ್ಬ ಪ್ರಾಚೀನ ಮಹರ್ಷಿ ಇವನು ಬೃಹಸ್ಪತಿಯಿಂದ ಕವಚವನ್ನೂ, ಅದನ್ನು ಬಂಧಿಸುವ (ಕಟ್ಟುವ) ವಿದ್ಯೆಯನ್ನೂ ಪಡಕೊಂಡಿದ್ದ ಈತ ಧನುರ್ವೇದದ ಆಚಾರ್ಯನಾದ ದ್ರೋಣಾಚಾರ್ಯನ ಗುರುವಾಗಿದ್ದನು (ದ್ರೋಣ 94/67–68).

**ಆಗ್ರಾಯಣ** – ಭಾನು(ಮನು)ವೆಂಬ ಹೆಸರಿನ ಅಗ್ನಿಯ ನಾಲ್ಕನೆಯ ಮಗ (ವನ 221/13).

**ಆಗ್ರೇಯ** – ಒಂದು ಗಣತಂತ್ರ ರಾಜ್ಯ. ಅದನ್ನು ಕರ್ಣನು ಗೆದ್ದಿದ್ದನು (ವನ 254/19–21).

**ಆಙ್ಗರಿಷ್ಟ** – ಒಬ್ಬ ಪ್ರಾಚೀನ ರಾಜ. ಮೋಹವಶನಾಗಿ ತನ್ನಿಂದ ಪಾಪ ಸಂಘಟಿಸಿದುದಕ್ಕೆ, ಪ್ರಾಯಶ್ಚಿತ್ತ ಮಾಡುವ ಕುರಿತು ಕಾಮಂದಕ ಮುನಿಯೊಡನೆ ಈತನ ಪ್ರಶ್ನೆ (ಶಾಂತಿ 123/13–14).

**ಆಙ್ಗೀರಸಿ** – ಒಬ್ಬ ಬ್ರಾಹ್ಮಣನ ಪತಿವ್ರತೆ ಪತ್ನಿ. ರಾಕ್ಷಸ ಸ್ವಭಾವಕ್ಕೆ ಬದಲಾದ ಕಲ್ಮಾಷಪಾದನಿಂದ ಈಕೆಯ ಪತಿಯ ಭಕ್ಷಣೆ. ಪತ್ನಿ ಸಮಾಗಮದಲ್ಲಿ ಮರಣಹೊಂದುವಂತೆಯೂ ವಸಿಷ್ಠನಿಂದ ಪುತ್ರ ಪ್ರಾಪ್ತಿಯಾಗುವಂತೆಯೂ ಕಲ್ಮಾಷಪಾದನಿಗೆ ಈಕೆಯಿಂದ ಶಾಪ (ಆದಿ 181/16–22).

**ಆಜ್ಯಪ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/54).

**ಆಜಗರ** – ಅಜಗರ ವೃತ್ತಿಯಲ್ಲಿರುವ ಒಬ್ಬ ಮುನಿ. ಅವನೊಂದಿಗೆ ಪ್ರಹ್ಲಾದ ಸಂವಾದ ಮಾಡಿದ್ದನು (ಶಾಂತಿ 179/2).

**ಆಜಗರಪರ್ವ** – ವನಪರ್ವದ ಒಂದು ಅವಾಂತರ ಪರ್ವ (176 ರಿಂದ 181 ಅಧ್ಯಾಯ ವರೆಗೆ).

**ಆಜಗರವ್ರತ** – ಆಜಗರ ಮುನಿಯಿಂದ ಆಚರಿಸ

ಲ್ಪಟ್ಟ ಅವಧೂತ ಧರ್ಮ (ಶಾಂತಿ 179/18–36).

**ಆಜಗವ** – ಮಾಂಧಾತರಾಜನ ಧನುಸ್ಸು (ವನ 126/33–34). ಮಹಾರಾಜ ಪೃಥುವಿನ ಧನುಸ್ಸು (ದ್ರೋಣ 69/13). ಅರ್ಜುನನ ಗಾಂಡೀವದ ನಾಮಾಂತರ (ದ್ರೋಣ 145/94).

**ಆಜಮೀಢ** – ಅಜಮೀಢ ವಂಶದಲ್ಲಿ ಹುಟ್ಟಿದ ಕೌರವ– ಪಾಂಡವರು (ಆದಿ 172/50).

**ಆಜಾನೇಯ** – ಕುದುರೆಗಳ ಒಂದು ಉತ್ತಮ ಜಾತಿ (ವನ 270/10).

**ಆಞ್ಜನಕಕುಲ** – ಆನೆಗಳ ಸೇನೆಯ ಹೆಸರು ಸಾತ್ಯಕಿಯಿಂದ ವರ್ಣನೆ (ದ್ರೋಣ 112/17–18).

**ಆಟವೀಪುರಿ** – ಒಂದು ಪ್ರಾಚೀನ ನಗರ. ಅದನ್ನು ಸಹದೇವನು ಗೆದ್ದಿದ್ದನು (ಸಭಾ 31/72).

**ಆಡಂಬರ** – ಧಾತೃವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಮಂದಿ ಪಾರ್ಷದರಲ್ಲಿ ಒಬ್ಬ (ಶಲ್ಯ 45/39).

**ಆತಕ** – ಕೌರವ್ಯಕುಲದಲ್ಲಿ ಹುಟ್ಟಿದ ಒಬ್ಬ ನಾಗ ಆತ ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟು ಹೋದ (ಆದಿ 57/13).

**ಆತ್ಮಾ** – (1) ದಿವಃಪುತ್ರನೇ ಮೊದಲಾದ, ವಿವಸ್ವಂತನ ಪುತ್ರರಲ್ಲಿ ಅಥವಾ ಸ್ವರೂಪಗಳಲ್ಲಿ ಒಬ್ಬ (ಆದಿ 1/42).

(2) ನಿತ್ಯ, ಅವಿನಾಶಿ, ಒಬ್ಬ, ಶುದ್ಧಬುದ್ಧ ಆತ್ಮ ಮತ್ತು ಪರಮಾತ್ಮಾ (ಭೀಷ್ಮ 26/11–30).

**ಆತ್ರೇಯ** – (1) ಒಬ್ಬ ಪ್ರಾಚೀನ ಋಷಿ ಆತ ಜನಮೇಜಯನ ಸರ್ಪಯಜ್ಞದ ಸದಸ್ಯನಾಗಿದ್ದನು (ಆದಿ 53/8).

(2) ಮಹರ್ಷಿ ವಾಮದೇವನ ಶಿಷ್ಯ (ವನ 192 /46).

(3) ಭಾರತದ ಒಂದು ಜನಪದ (ಭೀಷ್ಮ 9/68).

(4) ಒಬ್ಬ ಅತ್ಯಂತ ಪ್ರಾಚೀನ ಮಹರ್ಷಿ. ಈತನಿಂದ ಶಿಷ್ಯರಿಗೆ ನಿರ್ಗುಣ ಬ್ರಹ್ಮನ ಉಪದೇಶ ಕೊಡಲ್ಪಟ್ಟಿತು (ಅನು 137/3).

**ಆತ್ರೇಯಿ** – ಒಂದು ನದಿ (ಸಭಾ 9/22).

**ಆಥರ್ವಣ** – ಒಬ್ಬ ಮುನಿ. ಸ್ವಪ್ನದಲ್ಲಿ ಶ್ರೀಕೃಷ್ಣನೊಡನೆ ಶಿವನ ಬಳಿಗೆ ಹೋಗುತ್ತಿದ್ದ ಅರ್ಜುನ ಈತನ ಸ್ಥಳಕ್ಕೂ ಹೋಗಿದ್ದನು (ದ್ರೋಣ 80/32).

**ಆದಿತ್ಯ** – (1) ಇವರ ಸಂಖ್ಯೆ ಹನ್ನೆರಡು. ಇವರ ತಂದೆಯ ಹೆಸರು ಕಶ್ಯಪ ಮತ್ತು ತಾಯಿಯ ಹೆಸರು ಅದಿತಿ. ಇವರಲ್ಲಿ ಇಂದ್ರ ಎಲ್ಲರಿಗಿಂತ ಹಿರಿಯವ ಮತ್ತು ವಿಷ್ಣು (ವಾಮನ) ಎಲ್ಲರಿಗಿಂತ ಕಿರಿಯವ (ಆದಿ 66/36).

(2) ಒಬ್ಬ ವಿಶ್ವೇದೇವ (ಅನು 91/36).

**ಆದಿತ್ಯಕೇತು** – ಧೃತರಾಷ್ಟ್ರನ ಪುತ್ರರಲ್ಲಿ ಒಬ್ಬ (ಆದಿ 67/102). ಭೀಮಸೇನನಿಂದ ಈತನ ವಧೆ (ಭೀಷ್ಮ 88/28).

**ಆದಿತ್ಯತೀರ್ಥ** – ಸರಸ್ವತೀ ತಟದಲ್ಲಿರುವ ಒಂದು ತೀರ್ಥ (ಶಲ್ಯ 49/17). ಇದರ ವಿಶೇಷ ಮಹಿಮೆ (ಶಲ್ಯ 50).

**ಆದಿತ್ಯಪರ್ವತ** – ಹಿಮಾಲಯದ ಒಂದು ಶಿಖರ. ಶಿವನ ನಿವಾಸ ಸ್ಥಾನ (ಶಾಂತಿ 327/22).

**ಆದಿಪರ್ವ** – ಮಹಾಭಾರತದ ಮೊದಲ ಪರ್ವ.

**ಆದಿರಾಜ** – ಪೂರುವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು ಅವಿಕ್ಷಿತನ ಮಗ (ಆದಿ 94/52).

**ಆದಿಷ್ಟೀ** – ಅವನಿಗೆ ಗುರುವು. ನಿಶ್ಚಿತ ವರ್ಷಗಳವರೆಗೆ ಬ್ರಹ್ಮಚರ್ಯ ವ್ರತಪಾಲನೆಯ ಆದೇಶ ಕೊಟ್ಟಿದ್ದನು (ಅನು 22/77).

**ಆದ್ಯಕಠ** – ಒಬ್ಬ ಪ್ರಾಚೀನ ಋಷಿ. ಈತ ರಾಜಾ ಉಪರಿಚರನ ಯಜ್ಞದ ಸದಸ್ಯನಾಗಿದ್ದನು (ಶಾಂತಿ 336/9).

**ಆನಂದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

**ಆನರ್ತ** – ಒಂದು ಪ್ರಾಚೀನ ದೇಶ. ಅದನ್ನು ಅರ್ಜುನ ಗೆದ್ದಿದ್ದನು (ಸಭಾ 26/4).

**ಆನುಶಾಸನಿಕ ಪರ್ವ** – ಮಹಾಭಾರತದ ಒಂದು ಪರ್ವ.

**ಆನ್ಧ್ರ** – ದಕ್ಷಿಣದ ಒಂದು ದೇಶ. ಅದನ್ನು ಸಹದೇವನು ದೂತರ ಮೂಲಕವೇ ವಶಪಡಿಸಿದ್ದನು (ಸಭಾ 31/71).

**ಆಪಗಾ** – ನದಿ ಮತ್ತು ತೀರ್ಥ. ಅಲ್ಲಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ, ಕೋಟಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಫಲ ದೊರಕುತ್ತದೆ (ವನ 83/68).

**ಆಪದ್ಧರ್ಮಪರ್ವ** – ಶಾಂತಿಪರ್ವದ ಒಂದು

ಅವಾಂತರ ಪರ್ವ (ಅಧ್ಯಾಯ 131 ರಿಂದ 173 ವರೆಗೆ).

**ಆಪವ** – (1) ವಸಿಷ್ಠ ಮುನಿಯ ನಾಮಾಂತರ (ಆದಿ 99/5).

(2) ಒಬ್ಬ ಪ್ರಾಚೀನ ಋಷಿ. ಅಗ್ನಿಯ ಜೊತೆಯಲ್ಲಿ ಬಂದು, ಕಾರ್ತವೀರ್ಯನಿಂದ ತನ್ನ ಆಶ್ರಮವು ಸುಡಲ್ಪಟ್ಟಾಗ, ಈತ ರಾಜನಿಗೆ ಶಾಪ ಕೊಟ್ಟಿದ್ದ (ಶಾಂತಿ 49/42–43).

**ಆಪಸ್ತಂಬ** – ಒಬ್ಬ ಪ್ರಸಿದ್ಧ ಋಷಿ. ಇವನಿಂದ ರಾಜಾ ದ್ಯುಮತ್ಸೇನನಿಗೆ ಆಶ್ವಾಸನೆ (ವನ 298/18).

**ಆಪೂರಣ** – ಒಬ್ಬ ಪ್ರಮುಖ ನಾಗ. ಕಶ್ಯಪನ ವಂಶಜ (ಆದಿ 35/6) (ಉದ್ಯೋಗ 103/10).

**ಆಪ್ತ** – ಒಬ್ಬ ಪ್ರಮುಖ ನಾಗ. ಕಶ್ಯಪನ ವಂಶಜ (ಆದಿ 35/8) (ಉದ್ಯೋಗ 103/12).

**ಆಭೀರ** – (1) ಸಿಂಧು ಮತ್ತು ಸರಸ್ವತಿ ತಟವರ್ತಿ ಆಭೀರ ಗಣತಂತ್ರದ ನಿವಾಸಿಗಳು ಅವರನ್ನು ನಕುಲ ಗೆದ್ದಿದ್ದನು (ಸಭಾ 32/9–10). ಸಮುದ್ರ ದಡದಲ್ಲಿರುವ ಗೃಹೋದ್ಯಾನ ಮತ್ತು ಸಿಂಧುವಿನ ಆಚೆ ದಡದಲ್ಲಿ (ಆಭೀರ ದೇಶದಲ್ಲಿ) ವಾಸಿಸುವ ಆಭೀರ ಜಾತಿಯ ಜನರು. ಈ ಜನರು ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನ ಆಸ್ಥಾನಕ್ಕೆ ಬಂದಿದ್ದರು (ಸಭಾ 51/11–13). ಮಾರ್ಕಂಡೇಯರ ಹೇಳಿಕೆಯಂತೆ, ಕಲಿಯುಗದಲ್ಲಿ ಆಭೀರ, ಶಕ ಇತ್ಯಾದಿ ಮ್ಲೇಚ್ಛವರ್ಗದವರು ಭಾರತದೇಶದ ವಿಭಿನ್ನ ಭಾಗಗಳಲ್ಲಿ ರಾಜರಾಗುವರು (ವನ 188/35–36). ಶೂರರಾದ ಆಭೀರವರ್ಗದವರು ದ್ರೋಣ ನಿರ್ಮಿತ ಗರುಡವ್ಯೂಹದ ಕಂಠಪ್ರದೇಶದಲ್ಲಿ ನಿಲ್ಲಿಸಲ್ಪಟ್ಟಿದ್ದರು (ದ್ರೋಣ 20/6). ಶೂದ್ರರಲ್ಲಿ ಮತ್ತು ಆಭೀರರಲ್ಲಿ ದ್ವೇಷವುಂಟಾದುದರಿಂದ ಸರಸ್ವತಿ ನದಿ ವಿನಶನ ತೀರ್ಥದಲ್ಲಿ ಅದೃಶ್ಯಳಾದಳು (ಶಲ್ಯ 37/1–2). ಆಭೀರರು ಮೊದಲು ಕ್ಷತ್ರಿಯರಾಗಿದ್ದರು. ಪರಶುರಾಮರ ಭಯದಿಂದ ಪರ್ವತಗುಹೆಗಳಲ್ಲಿ ಅಡಗಿದರು ಮತ್ತು ತಮ್ಮ ಕರ್ಮಭ್ರಷ್ಟರಾದರು. ಆದುದರಿಂದ ಅವರ ಸಂತಾನದವರು ಶೂದ್ರತ್ವವನ್ನು ಪಡೆದರು (ಆಶ್ವ 29/16). ಇದೇ ಆಭೀರರು ದ್ವಾರಕೆಯ ಸ್ತ್ರೀಯರನ್ನು ಕರಕೊಂಡು ಹೋಗುತ್ತಿದ್ದ ಅರ್ಜುನನ ಮೇಲೆ ಆಕ್ರಮಣ ಮಾಡಿದರು (ಮೌಸಲ 7/47–63).

(2) ಆಭೀರದೇಶ (ಭೀಷ್ಮ 9/47–67).

**ಆಮರಥ** – ಭಾರತದ ಒಂದು ಜನಪದ (ಭೀಷ್ಮ 9/54).

**ಆಯಾತಿ** – ನಹುಷನ ಮಗ ಯಯಾತಿಯ ಸೋದರ (ಆದಿ 75/30).

**ಆಯು** – (1) ಪುರೂರವನಿಂದ ಉರ್ವಶಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ರಾಜ. ಈತ ಸ್ವರ್ಭಾನವಿಯ ಗರ್ಭದಲ್ಲಿ ನಹುಷನೇ ಮೊದಲಾದವರಿಗೆ ಜನ್ಮವನ್ನಿತ್ತ (ಆದಿ 75/24). ಈತನಿಗೆ ಪುರೂರವನಿಂದ ಖಡ್ಗಪ್ರಾಪ್ತಿ (ಶಾಂತಿ 166/74). ಈತನು ತಪೋಬಲದಿಂದಲೇ ಸಮಾಜದಲ್ಲಿ ಪ್ರತಿಷ್ಠಾ ಪ್ರಾಪ್ತಿ ಹೊಂದಿದ್ದ (ಶಾಂತಿ 296/15). ಈತನಿಂದ ಮಾಂಸ ಭಕ್ಷಣೆ ನಿಷೇಧಿಸಲ್ಪಟ್ಟಿತು (ಅನು 115/59).

(2) ಒಬ್ಬ ಮಂಡೂಕರಾಜ. ಈತ ಸುಂದರಿಯಾದ ಸುಶೋಭನೆಯ ತಂದೆ. ಈತ ಇಕ್ಷ್ವಾಕು ವಂಶದ ರಾಜಾ ಪರೀಕ್ಷಿತನಿಗೆ ತನ್ನ ಕನ್ಯೆಯನ್ನು ಅರ್ಪಿಸಿದ್ದನು (ವನ 192/32–35). ಮಂಡೂಕಗಳನ್ನು ಕೊಲ್ಲುವ ಆಜ್ಞೆಯನ್ನು ತಡೆಯುವಂತೆ ಈತ ರಾಜನಲ್ಲಿ ಪ್ರಾರ್ಥಿಸಿದನು (ವನ 192/27). ಇವನಿಂದ ತನ್ನ ಕನ್ಯೆಗೆ ಶಾಪ (ವನ 192/35).

**ಆಯೋದಧೌಮ್ಯ** – ಒಬ್ಬ ಪ್ರಸಿದ್ಧ ಋಷಿ. ಈತನಿಗೆ ಆರುಣಿ, ಉಪಮನ್ಯು ಮತ್ತು ವೇದ ಎಂಬ ಮೂವರು ಪ್ರಸಿದ್ಧ ಶಿಷ್ಯರಿದ್ದರು (ಆದಿ 3/21). ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಈತ ಭೇಟಿ ಮಾಡಿದುದು (ಉದ್ಯೋಗ 83/64).

**ಆರಣೇಯಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 311ರಿಂದ 315ರ ವರೆಗೆ).

**ಆರಾಲಿಕ** – ಮದಬಂದ ಆನೆಗಳನ್ನು ನಿಯಂತ್ರಿಸುವ ಗಜಶಿಕ್ಷಕ (ವಿರಾಟ 2/9).

**ಆರುಣಿ** – (1) ಆಯೋದ್ಯಧೌಮ್ಯ ಋಷಿಯ ಶಿಷ್ಯ. ಪಾಂಚಾಲ ದೇಶ ನಿವಾಸಿ. ಈತನ ಗುರುಭಕ್ತಿ ಇವನಿಗೆ ಗುರುಗಳ ಆಶೀರ್ವಾದ ಮತ್ತು ಈತ ಉದ್ದಾಲಕನೆಂಬ ಹೆಸರಿನಿಂದ ಪ್ರಸಿದ್ಧನಾದುದು (ಆದಿ 3/22–32).

(2) ಧೃತರಾಷ್ಟ್ರ ನಾಗಕುಲದಲ್ಲಿ ಹುಟ್ಟಿದ ಒಬ್ಬ ಸರ್ಪ. ಈತ ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟುಹೋಗಿದ್ದ (ಆದಿ 37/19).

(3) ಕಶ್ಯಪ ಮತ್ತು ವಿನತೆಯ ಮಗ (ಆದಿ 65/40).

(4) ಕೌರವಪಕ್ಷದ ಒಬ್ಬ ಮಹಾರಥಿ ವೀರ. ಆತ ಶಕುನಿಯ ಜೊತೆ ಸೇರಿ ಅರ್ಜುನನ ಮೇಲೆ ಆಕ್ರಮಣ ಮಾಡಿದ್ದನು (ದ್ರೋಣ 156/122).

**ಆರುಷಿ** – ಮನುವಿನ ಮಗಳು ಚ್ಯವನನ ಪತ್ನಿ. ಇವಳ ಪುತ್ರನ ಹೆಸರು "ಔರ್ವ". ಈತ ತನ್ನ ತಾಯಿಯ ತೊಡೆಯಿಂದ ಹುಟ್ಟಿದ. ಆದುದರಿಂದ ಔರ್ವನೆಂದು ಕರೆಯಲ್ಪಟ್ಟ (ಆದಿ 66/46).

**ಆರೋಚಕ** – ಭಾರತದೇಶದ ಒಂದು ಜನಪದ ಮತ್ತು ಅಲ್ಲಿರುವ ನಿವಾಸಿಗಳು (ಭೀಷ್ಮ 51/7).

**ಆರ್ಚೀಕ** – ಸೈಂಧವಾರಣ್ಯದಿಂದ ಮುಂದೆ ಬುದ್ಧಿವಂತ ಮನುಷ್ಯರು ವಾಸಿಸುವ ಒಂದು ಪರ್ವತ (ವನ 125/16).

**ಆರ್ಜವ** – ಸುಬಲನ ಮಗ. ಶಕುನಿಯ ಸಹೋದರ. ಈತ ಇರಾವಂತನಿಂದ ಮಡಿದ (ಭೀಷ್ಮ 90/27–46).

**ಆರ್ತಾಯನಿ** – ಋತಾಯನನ ಪುತ್ರ ಶಲ್ಯ. ಇವನ ಪೂರ್ವಜರು ಶ್ರೇಷ್ಠರಾಗಿದ್ದರು ಮತ್ತು ಸದಾ ಸತ್ಯವನ್ನೇ ಆಡುತ್ತಿದ್ದರು. ಆದುದರಿಂದ ಇವರು "ಆರ್ತಾಯನಿ"ಗಳೆಂದು ಹೇಳಲ್ಪಟ್ಟಿದ್ದಾರೆ (ಶಲ್ಯ 32/56).

**ಆರ್ತಿಮಂತ್ರ** – ಸರ್ಪಭಯ ನಿವಾರಣೆಯ ಒಂದು ಮಂತ್ರ (ಆದಿ 58/23–26).

**ಆರ್ಯಕ** – ಒಬ್ಬ ಪ್ರಮುಖ ನಾಗ (ಆದಿ 35/7). ಈತ ಶೂರಸೇನನ ಮಾತಾಮಹನಾಗಿದ್ದ. ಈತನು ಭೀಮಸೇನನಿಗೆ ರಸಪಾನ ಮಾಡಿಸುವಂತೆ ವಾಸುಕಿಯನ್ನು ಪ್ರಾರ್ಥಿಸಿಕೊಂಡಿದ್ದ (ಆದಿ 127/64–68). ತನ್ನ ಮೊಮ್ಮಗ ಸುಮುಖನೊಂದಿಗೆ, ಮಾತಲಿಯ ಮಗಳ ವಿವಾಹ ಸಂದರ್ಭದಲ್ಲಿ, ಈತ ನಾರದರೊಂದಿಗೆ ನಡೆಸಿದ ಮಾತುಕತೆ (ಉದ್ಯೋಗ 104/13–17).

**ಆರ್ಯಾ** – ಶಿಶುವಿನ ತಾಯಿ. ಸಪ್ತಮಾತೃಕೆಗಳಲ್ಲಿ ಒಬ್ಬಳು (ವನ 228/10).

**ಆರ್ಯಾವರ್ತ** – ಭಾರತವರ್ಷದ ನಾಮಾಂತರ ಅಥವಾ ಒಂದು ಭಾರತೀಯ ಪ್ರದೇಶ (ಶಾಂತಿ 325/15). (ಸ್ಮೃತಿಗಳ ಪ್ರಕಾರ ವಿಂಧ್ಯ ಮತ್ತು ಹಿಮಾಲಯದ ಮಧ್ಯಭಾಗ ಆರ್ಯಾವರ್ತವಾಗಿದೆ).

**ಆರ್ಷ್ಟಿಷೇಣ** – ಒಬ್ಬ ರಾಜರ್ಷಿ. ಈತನಿಂದ ಯುಧಿಷ್ಠಿರನಿಗೆ ಪ್ರಶ್ನಾರೂಪದಲ್ಲಿ ಉಪದೇಶ ದೊರಕಿತು (ವನ 156/16; 159). ಪೃಥೂದಕ ತೀರ್ಥದಲ್ಲಿ ತಪಸ್ಸು ಮಾಡಿ, ಈತನು ಬ್ರಾಹ್ಮಣ್ಯ ಸಂಪಾದಿಸಿದ (ಶಲ್ಯ 39/36). ಇವನ ತಪಸ್ಸಿನ ವರ್ಣನೆ (ಶಲ್ಯ 40/39). ಸರಸ್ವತೀ ನದಿಗೆ ಈ ಋಷಿಯ ಆಶೀರ್ವಾದ ಇಲ್ಲಿ ಸ್ನಾನ ಮಾಡುವವನಿಗೆ ಅಶ್ವಮೇಧ ಫಲ ಪ್ರಾಪ್ತಿಯಾಗುತ್ತದೆ. ಇಲ್ಲಿ ಸರ್ಪಭಯವಿಲ್ಲ ಸ್ವಲ್ಪವೇ ಸಮಯ ಈ ತೀರ್ಥಸೇವನೆಯಿಂದ ಮಹಾನ್ ಫಲಪ್ರಾಪ್ತವಾಗುತ್ತದೆ (ಶಲ್ಯ 40/7–8).

**ಆರ್ಷ್ಟಿಷೇಣಆಶ್ರಮ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವವರಿಗೆ ಎಲ್ಲಾ ಪಾಪಗಳಿಂದ ಬಿಡುಗಡೆಯಾಗುತ್ತದೆ (ಅನು 25/25).

**ಆಲಂಬ** – ಒಬ್ಬ ಪ್ರಾಚೀನ ಋಷಿ. ಅವನು ಯುಧಿಷ್ಠಿರನ ಸಭೆಯಲ್ಲಿ ಇದ್ದನು (ಸಭಾ 4/14)

**ಆಲಂಬಾಯನ** – ಇಂದ್ರನ ಸಖ. ಆಲಂಬ ಗೋತ್ರದ ಚಾರುಶೀರ್ಷನೆಂಬವನೇ ಆಲಂಬಾಯನನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ (ಅನು 18/5)

**ಆವರ್ತನಂದಾ** – ಒಂದು ತೀರ್ಥ. ಇದರ ಸೇವನೆ ಮಾಡುವವರಿಗೆ ನಂದನವನದಲ್ಲಿ ಸ್ವರ್ಗೀಯ ಸುಖ ಪ್ರಾಪ್ತವಾಗುತ್ತದೆ (ಅನು 25/45).

**ಆವಶೀರ** – ಪೂರ್ವದಿಕ್ಕಿನ ಒಂದು ಭಾರತೀಯ ಜನಪದ ಅದನ್ನು ದಿಗ್ವಿಜಯ ಸಮಯದಲ್ಲಿ ಕರ್ಣನು ಗೆದ್ದಿದ್ದನು (ವನ 254/9).

**ಆವಸಥ್ಯ** – ಮಹಾ ತೇಜಪುಂಜದಿಂದ ಕೂಡಿದ ಒಂದು ಅಗ್ನಿ (ವನ 221/5).

**ಆವಹ** – ವಾಯುವಿನ ಏಳು ಭೇದಗಳಲ್ಲಿ ಎರಡನೆಯದು (ಶಾಂತಿ 328/37).

**ಆಶಾವಹ** – (1) ದಿವಃಪುತ್ರನೇ ಮೊದಲಾದ ದ್ವಾದಶ ಸೂರ್ಯರಲ್ಲಿ ಒಬ್ಬ (ಆದಿ 1/42).

(2) ವೃಷ್ಣಿವಂಶದ ಒಬ್ಬ ರಾಜಕುಮಾರ. ಅವನು ದ್ರೌಪದಿ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದ (ಆದಿ 185/19).

**ಆಶ್ರಮವಾಸಪರ್ವ** – ಆಶ್ರಮವಾಸಿಕಪರ್ವದ ಒಂದು ಅವಾಂತರ ಪರ್ವ (1 ರಿಂದ 28 ಅಧ್ಯಾಯವರೆಗೆ).

**ಆಶ್ರಮವಾಸಿಕಪರ್ವ** – ಮಹಾಭಾರತದ ಒಂದು ಪರ್ವ.

**ಆಶ್ರಾವ್ಯ** – ಇಂದ್ರ ಸಭೆಯಲ್ಲಿರುವ ಮುನಿ (ಸಭಾ 7/18).

**ಆಶ್ವಲಾಯನ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/54)

**ಆಷಾಢ** – (1) ಒಬ್ಬ ಕ್ಷತ್ರಿಯ ರಾಜ. ಅವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದವನು (ಆದಿ 67/59–63). ಈತನಿಗೆ ಪಾಂಡವ ಪಕ್ಷದಿಂದ ಯುದ್ಧದ ಆಮಂತ್ರಣ ಪ್ರಾಪ್ತವಾಗಿತ್ತು (ಉದ್ಯೋಗ 4/17).

(2) ಒಂದು ತಿಂಗಳ ಹೆಸರು. ಆಷಾಢ ಮಾಸದಲ್ಲಿ ಒಂದು ಹೊತ್ತು ಊಟ ಮಾಡುವವ ಪುತ್ರ ಧನಧಾನ್ಯಾದಿ ಸಂಪದ್ಭರಿತನಾಗುತ್ತಾನೆ (ಅನು 106/26).

(3) ಭಗವಂತನಾದ ಶಿವನ ಹೆಸರು (ಅನು 17/121).

(4) ಒಂದು ನಕ್ಷತ್ರದ ಹೆಸರು. ಪೂರ್ವಾಷಾಢಾ – ಉತ್ತರಾಷಾಢಾ ಇದರಲ್ಲಿ ಉಪವಾಸ ಮಾಡಿ, ಕುಲೀನ ಬ್ರಾಹ್ಮಣನಿಗೆ ಮೊಸರು ದಾನ ಮಾಡುವವ, ಗೋಧನ ಸಂಪದ್ಭರಿತ ಕುಲದಲ್ಲಿ ಜನ್ಮವೆತ್ತುತ್ತಾನೆ (ಅನು 64/25–26).

**ಆಸುರಾಯಣ** – ವಿಶ್ವಾಮಿತ್ರನ ಒಬ್ಬ ಬ್ರಹ್ಮವಾದಿ ಪುತ್ರ (ಅನು 4/56).

**ಆಸುರಿ** – ಒಬ್ಬ ಪ್ರಾಚೀನ ಋಷಿ. ಈತ ಕಪಿಲ ಸಾಂಖ್ಯ ದರ್ಶನದ ಆಚಾರ್ಯನೂ, ಪಂಚಶಿಖನ ಗುರುವೂ ಆಗಿದ್ದನು. ಈತ ಮುನಿಗಳಿಗೆ ಬ್ರಹ್ಮ ಜ್ಞಾನದ ಉಪದೇಶ ಮಾಡಿದ್ದನು (ಶಾಂತಿ 218/10–14).

**ಆಸ್ತೀಕ** – ಒಬ್ಬ ಋಷಿ. ಇವನು ಯಾಯಾವರ ಕುಲದ ಜರತ್ಕಾರು ಋಷಿಯ ಪುತ್ರನಾಗಿದ್ದನು. ಇವನ ತಾಯಿಯ ಹೆಸರೂ ಜರತ್ಕಾರು ಎಂದಾಗಿತ್ತು (ಆದಿ 13/10–11). ಈತನ ಜನ್ಮ (ಆದಿ 48/17). ಚ್ಯವನನಿಂದ ಈತನ ಅಧ್ಯಯನ (ಆದಿ 48/18). ಆಸ್ತೀಕನೆಂಬ ಹೆಸರು ಬರಲು ಕಾರಣ (ಆದಿ 48/20). ನಾಗರಾಜ ವಾಸುಕಿಯ ಮನೆಯಲ್ಲಿ ಇವನ ಪಾಲನೆ (ಆದಿ 48/21). ವಾಸುಕಿಗೆ ಇವನ ಆಶ್ವಾಸನೆ (ಆದಿ 54/17–25). ಜನಮೇಜಯನ ಯಜ್ಞಮಂಟಪಕ್ಕೆ ಈತನ ಆಗಮನ (ಆದಿ 54/26–27). ಇವನಿಂದ ಯಜಮಾನ, ಋತ್ವಿಜರೇ ಮೊದಲಾದವರ ಸ್ತುತಿ, (ಆದಿ 55/1–16). ಇವನಿಗೆ ರಾಜಾ ಜನಮೇಜಯನಿಂದ ವರದಾನ (ಆದಿ 56/17). "ನಿನ್ನ ಯಜ್ಞ ನಿಲ್ಲಲಿ; ಇದರಲ್ಲಿ ಸರ್ಪಗಳು ಬೀಳಲ್ಪಡದಿರಲಿ" ಎಂದು ಆಸ್ತೀಕನು ರಾಜನೊಡನೆ ವರವನ್ನು ಕೇಳಿದನು (ಆದಿ 56/21–26). ಇವನಿಂದ ತಕ್ಷಕನ ಪ್ರಾಣರಕ್ಷಣೆ (ಆದಿ 58/1–10). ಅಶ್ವಮೇಧಯಜ್ಞದಲ್ಲಿ ಸದಸ್ಯನಾಗುವಂತೆ ಜನಮೇಜಯನಿಂದ ಈತನಲ್ಲಿ ಪ್ರಾರ್ಥನೆ (ಆದಿ 58/15–16). "ನನ್ನ ಆಖ್ಯಾನವನ್ನು ಅಭ್ಯಾಸ ಮಾಡುವವರಿಗೆ ಸರ್ಪಗಳಿಂದ ಯಾವ ಭಯವೂ ಇಲ್ಲದಿರಲಿ" ಎಂದು ಈತನು ಸರ್ಪಗಳಲ್ಲಿ ವರಬೇಡಿದುದು (ಆದಿ 58/21). ಆಸ್ತೀಕನು ವ್ಯಾಸರ ಮಹತ್ತ್ವವನ್ನು ಹೇಳುತ್ತಾ, ಜನಮೇಜಯನ ಪ್ರಶಂಸೆ ಮಾಡಿದುದು (ಆಶ್ರಮ 36/12–16). ಸರ್ಪಗಳನ್ನು ಸಂಕಟದಿಂದ ಪಾರುಮಾಡಿ, ಆಸ್ತೀಕನು ಪ್ರಸನ್ನನಾದುದು (ಸ್ವರ್ಗಾ 5/32).

**ಆಸ್ತೀಕಪರ್ವ** – ಮಹಾಭಾರತದ ಆದಿಪರ್ವದಲ್ಲಿ ಒಂದು ಅವಾಂತರ ಪರ್ವ (ಅಧ್ಯಾಯ 13 ರಿಂದ 58 ವರೆಗೆ).

**ಆಹುಕ** – ಯದುವಂಶದ ರಾಜಾ ಉಗ್ರಸೇನನ ನಾಮಾಂತರ (ಉದ್ಯೋಗ 128/38–39) (ಅನು 14/41). ಇವನ ಮಗಳು ಸುತನುವಿನೊಂದಿಗೆ ಅಕ್ರೂರನ ವಿವಾಹ (ಸಭಾ 14/33). ಆಹುಕನಿಗೆ ನೂರು ಮಂದಿ ಮಕ್ಕಳಿದ್ದರು (ಸಭಾ 14/56). ಆಹುಕ ಮತ್ತು ಅಕ್ರೂರನ ಪರಸ್ಪರ ವೈರದಿಂದ ಶ್ರೀ ಕೃಷ್ಣನ ಚಿಂತೆ (ಶಾಂತಿ 81/8–11). ಆಹುಕನ ಆಜ್ಞೆಯ ಪ್ರಕಾರ (ಉಗ್ರಸೇನನ) ದ್ವಾರಕೆಯಲ್ಲಿ ಯಾರೂ ಮದ್ಯಸೇವನೆ ಮಾಡಕೂಡದೆಂದೂ, ಮಾದಕವಸ್ತು ತಯಾರಿಸುವವರನ್ನು ಶೂಲಕ್ಕೇರಿಸಲಾಗುವುದೆಂದೂ ಘೋಷಿಸಲ್ಪಟ್ಟಿತು (ಮೌಸಲ 1/28–39). (ಕೆಲವು ಕಡೆ 'ಆಹುಕ'ನನ್ನು ಉಗ್ರಸೇನನ ತಂದೆಯೆಂದು ಹೇಳಲಾಗಿದೆ. ಆದರೆ ಮಹಾಭಾರತದಲ್ಲಿ ಈ ಬಗ್ಗೆ ಸ್ಪಷ್ಟ

ಉಲ್ಲೇಖವಿಲ್ಲ ಬದಲಾಗಿ ಉದ್ಯೋಗಪರ್ವದ 128/38–39ರಲ್ಲಿ ಆಹುಕ ಉಗ್ರಸೇನನನ್ನು ಒಬ್ಬ ವ್ಯಕ್ತಿಯೆಂದು ಹೇಳಲಾಗಿದೆ).

**ಆಹುತಿ** – (1) ಒಬ್ಬ ಕ್ಷತ್ರಿಯ ಅವನು ಜಾರೂಥೀನಗರದಲ್ಲಿ ಶ್ರೀಕೃಷ್ಣನಿಂದ ಪರಾಜಿತ ನಾಗಿದ್ದನು. ಇದೇ ಪಟ್ಟಣದಲ್ಲಿ ಶಿಶುಪಾಲನೇ ಮೊದಲಾದವರ ಪರಾಜಯದ ಉಲ್ಲೇಖ ದೊರೆಯುತ್ತದೆ (ವನ 12/30).

(2) ನಾರಾಯಣನ ಒಂದು ಹೆಸರು (ಶಾಂತಿ 338/92).

## ಇ

**ಇಕ್ಷುಮತಿ** – ಕುರುಕ್ಷೇತ್ರದಲ್ಲಿ ಅಥವಾ ಅದರ ಸಮೀಪ ಹರಿಯುವ ಒಂದು ನದಿ. ಅಲ್ಲಿ ತಕ್ಷಕ ಮತ್ತು ಅಶ್ವಸೇನರೆಂಬ ಇಬ್ಬರು ನಾಗಗಳು ವಾಸಿಸುತ್ತಿದ್ದರು (ಆದಿ 3/141).

**ಇಕ್ಷುಲಾ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತದೇಶದ ಜನರು ಕುಡಿಯುತ್ತಾರೆ (ಭೀಷ್ಮ 9/17).

**ಇಕ್ಷ್ವಾಕು** – (1) ವೈವಸ್ವತ ಮನುವಿನ ಹತ್ತು ಮಂದಿ ಪುತ್ರರಲ್ಲಿ ಒಬ್ಬ (ಆದಿ 75/15 ಅನು 2/5). ಜಾಪಕ ಬ್ರಾಹ್ಮಣನೊಡನೆ ಈತನ ಸಂವಾದ (ಶಾಂತಿ 199/39–117). ಈತನ ಸದ್ಗತಿಯ ವರ್ಣನೆ (ಶಾಂತಿ 200/26). ಈತನಿಂದ ಮಾಂಸಭಕ್ಷಣ ನಿಷೇಧ (ಅನು 115/66). ಈತನಿಗೆ ನೂರು ಮಂದಿ ಪುತ್ರರಿದ್ದರು (ಅನು 2/5). ಇವನ ಮರಣಾನಂತರ ಈತನ ಪುತ್ರ ಶಶಾದನು ರಾಜನಾದನು (ವನ 202/1).

(2) ವೈವಸ್ವತ ಮನುವಿನ ಮರಿಮಗ ಮತ್ತು ಕ್ಷುಪನ ಮಗ. ಇವನಿಗೂ ನೂರುಮಂದಿ ಮಕ್ಕಳಿದ್ದರು ಅವರಲ್ಲಿ ಎಲ್ಲರಿಗಿಂತ ಹಿರಿಯವ ವಿಂಶನೆಂಬವನು (ಅಶ್ವ 4/2–5). ಇವನಿಗೆ ತನ್ನ ತಂದೆ ಕ್ಷುಪನ ಮೂಲಕ ಖಡ್ಗ ಪ್ರಾಪ್ತಿಯಾಗಿತ್ತು (ಶಾಂತಿ 166/73).

**ಇಧ್ಮವಾಹ** – ದೃಢಸ್ಯುವಿನ ಇನ್ನೊಂದು ಹೆಸರು. ಈತನು ಅಗಸ್ತ್ಯನ ಪುತ್ರ. ಈತ ಇಧ್ಮದ (ಸಮಿಧೆ) ಭಾರಹೊತ್ತುದರಿಂದ 'ಇಧ್ಮವಾಹ'ನೆಂದು ಕರೆಯಲ್ಪಟ್ಟನು (ವನ 99/27).

**ಇನ್ದ್ರ** – (1) ಕಶ್ಯಪರಿಂದ ಅವರ ಪತ್ನಿ ಅದಿತಿಯ ಗರ್ಭದಲ್ಲಿ ಹುಟ್ಟಿದ ಹನ್ನೆರಡು ಮಂದಿ ಆದಿತ್ಯರಲ್ಲಿ ಈತ ಪ್ರಮುಖನು (ಆದಿ 65/11–16; 75/10–11). ಈತ ವಜ್ರಧಾರಿ ವೃತ್ರಾರಿ, ಪುರಂದರ ಮತ್ತು ಮೂರು ಲೋಕಗಳ ಸ್ವಾಮಿಯಾಗಿದ್ದಾನೆ (ಆದಿ 3/148–149). ಈತ ದೇವಶ್ರೇಷ್ಠ ಮತ್ತು ಸಹಸ್ರಾಕ್ಷನಾಗಿದ್ದಾನೆ (ಆದಿ 25/9–13). ತಕ್ಷಕನಿಂದ ಅಪಹರಿಸಲ್ಪಟ್ಟ ಮದಯಂತಿಯ ಕುಂಡಲಗಳನ್ನು ಪುನಃ ಪಡೆಯುವ ಕಾರ್ಯದಲ್ಲಿ, ಈತ ಉತ್ತಂಕನಿಗೆ ಸಹಾಯ ಮಾಡಿದನು (ಆದಿ 3/131). ಉತ್ತಂಕನಿಂದ ಈತನ ಸ್ತುತಿ (ಆದಿ 3/146–149). ಸಮುದ್ರ ಮಥನದಿಂದ ಇವನಿಗೆ ಐರಾವತವು ಪ್ರಾಪ್ತವಾಯಿತು (ಆದಿ 18/40). ಕದ್ರುವಿನಿಂದ ಈತನ ಸ್ತುತಿ (ಆದಿ 25/7–17). ಈತನಿಂದ ಸುರಿಸಲ್ಪಟ್ಟ ಮಳೆಯಿಂದ ಸರ್ಪಗಳಿಗೆ ಸಂತೋಷ (ಆದಿ 26). ಈತನಿಂದ ವಾಲಖಿಲ್ಯ ಋಷಿಗಳ ಅಪಮಾನ (ಆದಿ 31/10). ಗರುಡನ ಮೇಲೆ ಈತನ ವಜ್ರಪ್ರಹಾರ ಮತ್ತು ಆತನೊಡನೆ ಸ್ನೇಹಮಾಡುವ ಅಪೇಕ್ಷೆ (ಆದಿ 33/18–25). ಇಂದ್ರ ಮತ್ತು ಗರುಡರ ಸ್ನೇಹ (ಆದಿ 34/1). ಸರ್ಪಗಳು ಮೋಸದಿಂದ ಅಮೃತವನ್ನು ಅಪಹರಿಸಿದ್ದು (ಆದಿ 34/8–20). ಇಂದ್ರನಿಂದ ತಕ್ಷಕನಿಗೆ ಆಶ್ವಾಸನೆ (ಆದಿ 53/15–17). ಇವನಿಂದ ಕುಂತಿಯ ಗರ್ಭದಲ್ಲಿ ಅರ್ಜುನನ ಜನನ (ಆದಿ 63/111). ಬ್ರಾಹ್ಮಣ ರೂಪ ಧರಿಸಿ ಈತ ಕರ್ಣನಲ್ಲಿ ಕವಚಕುಂಡಲಗಳನ್ನು ಬೇಡಿದುದು (ಆದಿ 67/144–145). ವಿಶ್ವಾಮಿತ್ರತಪೋಭಂಗ ಮಾಡಿಸಲು ಮೇನಕೆಯೆಂಬ ಅಪ್ಸರೆಯನ್ನು ಕಳುಹಿಸಿದುದು (ಆದಿ 71/21–26). ವಾಯುವಿನ ರೂಪ ಧರಿಸಿ, ಜಲಕ್ರೀಡೆಯಾಡುತ್ತಿರುವ ದೇವಯಾನಿಯೇ ಮೊದಲಾದ ಸ್ತ್ರೀಯರ ವಸ್ತ್ರಗಳನ್ನು ಈತ ಸಮ್ಮಿಶ್ರಗೊಳಿಸಿದುದು (ಆದಿ 78/4). ಯಯಾತಿಯೊಂದಿಗೆ ಈತನ ವಾರ್ತಾಲಾಪ ಮತ್ತು ಆತನನ್ನು ಸ್ವರ್ಗದಿಂದ ಬೀಳಿಸಿದ್ದು (ಆದಿ 88/1–5). ಪಾಂಡುವಿನಿಂದ ಇಂದ್ರನ ಆರಾಧನೆ ಮತ್ತು ಇಂದ್ರನಿಂದ ಆತನಿಗೆ ವರಪ್ರದಾನ (ಆದಿ 122/26–27). ಕುಂತಿಯಿಂದ ಈತನ ಆವಾಹನೆ ಮತ್ತು ಈತನ ಮೂಲಕ ಅರ್ಜುನನ ಜನ್ಮ (ಆದಿ 122/35). ಜಾನಪದೀ ಎಂಬ ಅಪ್ಸರೆ

ಯನ್ನು ಕಳುಹಿಸಿ, ಶರದ್ವತನೆಂಬ ಋಷಿಯ ತಪಸ್ಸಿಗೆ ಈತ ವಿಘ್ನವನ್ನುಂಟುಮಾಡಿದುದು (ಆದಿ 129/6). ಶಿವನಿಂದ ಹಿಮಾಲಯದ ಗುಹೆಯಲ್ಲಿ ಈತನಿಗೆ ತಡೆ ಮತ್ತು ಮನುಷ್ಯ ಲೋಕದಲ್ಲಿ ಅರ್ಜುನ ರೂಪದಿಂದ ಜನ್ಮವೆತ್ತುವಂತೆ ಈತನಿಗೆ ಆದೇಶ (ಆದಿ 196/9–26). ಪಾಂಡವರ ವಾಸಸ್ಥಳಕ್ಕಾಗಿ, ಖಾಂಡವಪ್ರಸ್ಥದಲ್ಲಿ ದಿವ್ಯನಗರದ ನಿರ್ಮಾಣಕ್ಕಾಗಿ, ಈತನಿಗೆ ಶ್ರೀಕೃಷ್ಣನಿಂದ ಮಾನಸಿಕ ಪ್ರೇರಣೆ ಮತ್ತು ಖಾಂಡವ ಪ್ರಸ್ಥದಲ್ಲಿ ದಿವ್ಯನಗರ ನಿರ್ಮಾಣಕ್ಕಾಗಿ, ಈತನಿಂದ ವಿಶ್ವ ಕರ್ಮನಿಗೆ ಆದೇಶ (ಆದಿ 206/28). ತಿಲೋ ತ್ತಮೆಯ ರೂಪದಿಂದ ಮೋಹಿತನಾಗಿ, ಈತನಿಗೆ ಸಾವಿರ ಕಣ್ಣುಗಳಾದುದು (ಆದಿ 210/27). ಖಾಂಡವ ವನದ ರಕ್ಷಣೆಗಾಗಿ, ಶ್ರೀಕೃಷ್ಣ ಮತ್ತು ಅರ್ಜುನರೊಡನೆ ಈತನ ಯುದ್ಧ (ಆದಿ 226) ಇವನ ಮೂಲಕ ತಕ್ಷಕಪುತ್ರ ಅಶ್ವಸೇನನ ರಕ್ಷಣೆ (ಆದಿ 226/9). ಅರ್ಜುನನಿಂದ ಈತನ ಪರಾ ಜಯ (ಆದಿ 227/23). ಶ್ರೀಕೃಷ್ಣ ಮತ್ತು ಅರ್ಜುನನಿಗೆ ಈತನ ವರದಾನ (ಆದಿ 233/ 10–12). ಯುಧಿಷ್ಠಿರನಿಗೆ ಈತನ ದಿವ್ಯಸಭೆಯ ಕುರಿತು ನಾರದರಿಂದ ವರ್ಣನೆ (ಸಭಾ 7). ಭಗವಾನ್ ಶ್ರೀಕೃಷ್ಣನಿಂದ ಈತನ ಗರ್ವಾಪಹಾರ ಇವನಿಂದ ಶ್ರೀಕೃಷ್ಣನಿಗೆ 'ಗೋವಿಂದ'ನೆಂಬ ನಾಮಕರಣ (ಸಭಾ 28/29). ನರಕಾಸುರನನ್ನು ಕೊಲ್ಲುವಂತೆ ಈತನಿಂದ ಶ್ರೀಕೃಷ್ಣನಲ್ಲಿ ಪ್ರಾರ್ಥನೆ (ದಾಕ್ಷಿಣಾತ್ಯ ಪಾಠ) ಸುರಭಿಯೊಡನೆ ಈತನ ಸಂಭಾಷಣೆ (ವನ 9/6–16). ಅರ್ಜುನನಿಗೆ ದಿವ್ಯಾಸ್ತ್ರಗಳನ್ನು ಕೊಡಲು ಈತನ ಒಪ್ಪಿಗೆ (ವನ 37/57–58). ಅರ್ಜುನನು ಸ್ವರ್ಗಕ್ಕೆ ಬರುವಂತೆ ಈತನ ಆದೇಶ (ವನ 41/43–45). ಅರ್ಜುನ ನಿಗೆ ಸಂಗೀತ ವಿದ್ಯೆಯ ಶಿಕ್ಷಣ ನೀಡುವಂತೆ, ಈತನಿಂದ ಚಿತ್ರಸೇನನಿಗೆ ಆದೇಶ (ವನ 44/8). ಅರ್ಜುನನನ್ನು ಪ್ರಸನ್ನಗೊಳಿಸುವಂತೆ ಈತ ಚಿತ್ರ ಸೇನನನ್ನು ಊರ್ವಶಿಯ ಬಳಿಗೆ ಕಳುಹಿಸಿದುದು (ವನ 45/2). ಊರ್ವಶಿ ಶಾಪ ಕೊಟ್ಟಾಗ, ಈತನಿಂದ ಅರ್ಜುನನಿಗೆ ಧೈರ್ಯದ ಆಶ್ವಾಸನೆ (ವನ 46/55–58). ನರನಾರಾಯಣರ ಮಹಿಮೆ ಯನ್ನು ಹೇಳುತ್ತಾ, ಯುಧಿಷ್ಠಿರನಿಗೆ ಸಂದೇಶ ತಿಳಿಸುವಂತೆ ಲೋಮಶ ಮಹರ್ಷಿಗಳನ್ನು, ಈತ ಕಳುಹಿಸಿದುದು (ಆದಿ 47/7–31). ಈತ ನಲನ ಮೂಲಕ ದಮಯಂತಿಗೆ ಸಂದೇಶ ಕಳುಹಿಸಿ ದುದು (ವನ 55/6) ದಮಯಂತಿ ಸ್ವಯಂವರ ದಲ್ಲಿ ಈತ ರಾಜಾ ನಲನಿಗೆ ವರಪ್ರದಾನ ಮಾಡಿದುದು (ವನ 57/35–36). ಈತ ನಲನ ವಿರೋಧವಾಗಿ ಅನ್ಯಾಯಮಾಡದಂತೆ ಕಲಿಯುಗ ವನ್ನು ತಡೆದುದು (ವನ 58/11–12). ಇವನಿಂದ ವೃತ್ರಾಸುರನ ವಧೆ (ವನ 101/14–15). ಚ್ಯವನ ಮಹರ್ಷಿಯ ಮೇಲೆ ಈತನು ವಜ್ರಪ್ರಹಾರ ಮಾಡಲು ಸಿದ್ಧನಾದುದು (ವನ 124/17). ಮದಾಸುರನಿಗೆ ಹೆದರಿದ ಇಂದ್ರ, ಅಶ್ವಿನೀ ಕುಮಾರರಿಗೆ ಸೋಮಪಾನದ ಅಧಿಕಾರ ಕೊಡಿಸಿ ದುದು (ವನ 125/2–3). ಈ ಯುವನಾಶ್ವ ಕುಮಾರ ಮಾಂಧಾತನಿಗೆ ಬೆರಳನ್ನು ಕುಡಿಸಿದ್ದು (ಚೀಪುವಂತೆ ಮಾಡುವುದು) (ವನ 126/30). ಈತ ಹದ್ದಿನ ರೂಪದಿಂದ, ಪಾರಿವಾಳಕ್ಕೆ ಸಮ ತೂಕದ ತನ್ನ ಮಾಂಸ ಕಡಿದು ಕೊಡುವಂತೆ, ಉಶೀನರನಲ್ಲಿ ಕೇಳಿದುದು (ವನ 131/23–24). ಈತನಿಂದ ರಾಜಾ ಉಶೀನರನಿಗೆ ವರದಾನ (ವನ 231/30–31). ಇವನಿಂದ ಯವಕ್ರೀತನಿಗೆ ವರದಾನ (ವನ 135/41–42). ನರಕಾಸುರ ನನ್ನು ಕೊಲ್ಲುವಂತೆ ಈತ ವಿಷ್ಣುವನ್ನು ಪ್ರಾರ್ಥಿಸಿ ದುದು (ವನ 142/24). ಈತನಿಂದ ಗಂಧ ಮಾದನ ಪರ್ವತದಲ್ಲಿ ಯುಧಿಷ್ಠಿರನಿಗೆ ಧೈರ್ಯದ ಮಾತು (ವನ 166/3–14). ಹಿರಣ್ಯಪುರವನ್ನು ನಾಶಮಾಡಿದ ಪುರಸ್ಕಾರ ರೂಪದಲ್ಲಿ ಇವನಿಂದ ಅರ್ಜುನನಿಗೆ ಅಭಿನಂದನೆ (ವನ 193/72–75). ಈತ ಬಕ ಮಹರ್ಷಿಯೊಡನೆ ಚಿರಂಜೀವಿಗಳ ಸುಖ–ದುಃಖದ ವಿಷಯದಲ್ಲಿ ಪ್ರಶ್ನೆಮಾಡಿದುದು (ವನ 163). ಗೃಧ್ರರೂಪದಿಂದ ಶಿಬಿರಾಜನೊಡನೆ ಸಂವಾದ ಮತ್ತು ಅವನೊಡನೆ ಈತ ಪಾರಿ ವಾಳದ ಸಮತೂಕ ಮಾಂಸ ಕೊಡುವಂತೆ ಕೇಳಿದುದು (ವನ 197/20). ಇವನಿಂದ ಕೇಶಿ ದಾನವನ ಪರಾಜಯ ಮತ್ತು ದೇವಸೇನೆಯ ಉದ್ಧಾರ (ವನ 223/15) ದೇವಸೇನೆಯೊಡನೆ ಬ್ರಹ್ಮನ ಬಳಿಗೆ ಹೋದುದು (ವನ 224/21–22). ಸ್ಕಂದನಿಂದ ಪರಾಜಿತನಾಗಿ ಶರಣಾಗತ ನಾದುದು (ವನ 227/17–18). ಸ್ಕಂದನನ್ನು ದೇವಸೇನಾಪತಿ ಹುದ್ದೆಯಲ್ಲಿ ಅಭಿಷಿಕ್ತನಾಗಿ

ಮಾಡಿದುದು (ವನ 229/23). ಸ್ಕಂದನು ದೇವಸೇನೆಯೊಡನೆ ಪಾಣಿಗ್ರಹಣ ಮಾಡುವಂತೆ ಹೇಳಿದುದು (ವನ 229/48). ರಾವಣನ ಪುತ್ರ ಇಂದ್ರಜಿತುವಿನಿಂದ ಇವನ ಪರಾಜಯದ ವರ್ಣನೆ (ವನ 288/3). ಕರ್ಣನೊಡನೆ ಆತನ ಕವಚಕುಂಡಲಗಳನ್ನು ಕೇಳಿದುದು (ವನ 310/4). ಕರ್ಣನಿಗೆ ತನ್ನ ಅಮೋಘ ಶಕ್ತಿಯನ್ನು ಕೊಟ್ಟದು (ವನ 310–23). ತ್ರಿಶಿರನನ್ನು ತಪಸ್ಸಿನಿಂದ ದೂರಸರಿಸಲು ಅಪ್ಸರೆಯರನ್ನು ಕಳುಹಿಸಿದುದು (ಉದ್ಯೋಗ 9/9–12). ಇವನಿಂದ ತ್ರಿಶಿರನ ವಧೆ (ಉದ್ಯೋಗ 9/22–24). ತ್ರಿಶಿರನ ತಲೆಕಡಿಯಲು ಈತನಿಂದ ಬಡಗಿಗೆ ವರದಾನ (ಉದ್ಯೋಗ 9/37). ತ್ರಿಶಿರನ ವಧೆಯಿಂದ ಬಂದ ಬ್ರಹ್ಮಹತ್ಯಾ ಪಾತಕವನ್ನು ವಿಭಾಗಿಸಿದುದು (ಉದ್ಯೋಗ 9/43). ಈತ ವೃತ್ರಾಸುರನ ಬಾಯಿಯಿಂದ ಹೊರಗೆ ಬಂದುದು (ಉದ್ಯೋಗ 9/54) ವಿಷ್ಣುವಿನ ಉಪದೇಶದಂತೆ ಈತ ವೃತ್ರಾಸುರನೊಂದಿಗೆ ಸ್ನೇಹ ಮಾಡಿಕೊಂಡದ್ದು (ಉದ್ಯೋಗ 10/32). ಇವನಿಂದ ವೃತ್ರಾಸುರನ ವಧೆ (ಉದ್ಯೋಗ 10/39). ಬ್ರಹ್ಮಹತ್ಯೆಯ ಭಯದಿಂದ ಈತ ಜಲದಲ್ಲಿ ಅಡಗಿದುದು (ಉದ್ಯೋಗ 10/46). ಇವನಿಂದ ಬ್ರಹ್ಮಹತ್ಯೆಯ ವಿಭಜನೆ (ಉದ್ಯೋಗ 9/43). ಈತನು ಪ್ರಕಟಗೊಂಡ ಬಳಿಕ ಪುನಃ ನಹುಷನ ಭಯದಿಂದ ಅಂತರ್ಧಾನನಾದುದು (ಉದ್ಯೋಗ 13/21–22). ಲೋಕಪಾಲರಿಗೆ ಈತ ಅಧಿಕಾರ ಪ್ರದಾನ ಮಾಡಿದುದು (ಉದ್ಯೋಗ 16/31–34). ಅಗಸ್ತ್ಯರಿಂದ ನಹುಷನ ಪತನದ ವೃತ್ತಾಂತ ಕೇಳಿದುದು (ಉದ್ಯೋಗ 17/6). ಅಂಗಿರಸ ಮಹರ್ಷಿಗೆ ಈತನಿಂದ ವರದಾನ (ಉದ್ಯೋಗ 18/7). ಸ್ವರ್ಗಕ್ಕೆ ಬಂದು ಇಂದ್ರಪದದಲ್ಲಿ ಪ್ರತಿಷ್ಠಿತನಾದುದು (ಉದ್ಯೋಗ 18/9). ಮಾತಲಿಯ ಅಳಿಯ ನಾಗಕುಮಾರ ಸುಮುಖನನ್ನು ಭಗವಂತ ವಿಷ್ಣುವಿನ ಆಜ್ಞೆಯ ಪ್ರಕಾರ ದೀರ್ಘಾಯುವಾಗಿ ಮಾಡಿದುದು (ಉದ್ಯೋಗ 104/28). ಶಿವನಿಂದ ದಿವ್ಯಕವಚ ಪ್ರಾಪ್ತಿ. ಅದರಿಂದ ಸುರಕ್ಷಿತವಾಗಿದ್ದು, ಈತ ವೃತ್ರನನ್ನು ಕೊಂದುದು. ಮಂತ್ರ ಮತ್ತು ವಿಧಿ ಸಹಿತ ಆ ಕವಚವನ್ನು ಅಂಗಿರನಿಗೆ ಕೊಟ್ಟದ್ದು (ದ್ರೋಣ 94/64–66). ಇಂದ್ರನಿಗಾಗಿ ವಿಶ್ವಕರ್ಮನಿಂದ ವಿಜಯವೆಂಬ ಧನುಸ್ಸಿನ ನಿರ್ಮಾಣ ಮತ್ತು ಇಂದ್ರನು ಅದನ್ನು ಪರಶುರಾಮನಿಗೆ ಅರ್ಪಿಸಿದುದು (ಕರ್ಣ 31/42–44). ತ್ರಿಪುರರಿಂದ ಭೀತನಾಗಿ, ಈತ ದೇವತೆಗಳ ಸಮೇತನಾಗಿ ಬ್ರಹ್ಮನ ಬಳಿಗೆ ಹೋದುದು (ಕರ್ಣ 33/37–40). ಕರ್ಣ ಮತ್ತು ಅರ್ಜುನರ ದ್ವೈರಥ ಯುದ್ಧದಲ್ಲಿ, ಅರ್ಜುನನ ವಿಜಯಕ್ಕಾಗಿ, ಈತನು ಸೂರ್ಯನೊಡನೆ ವಿವಾದ ಮಾಡಿದ್ದು (ಕರ್ಣ 87/57–59). ಇಂದ್ರನ ಆಗ್ರಹದಿಂದ ಬ್ರಹ್ಮ ಮತ್ತು ಈಶ್ವರರ ಮೂಲಕ ಅರ್ಜುನನ ವಿಜಯ ಘೋಷಣೆ (ಕರ್ಣ 87/68–73). ನಮುಚಿಯ ವಧೆಯಿಂದ ಸಂಕಟಕ್ಕೆ ಸಿಲುಕಿದ ಇಂದ್ರ, ಅರುಣಾಸಂಗಮದಲ್ಲಿ ಸ್ನಾನ ಮಾಡಿದುದರಿಂದ ಉದ್ಧಾರವಾದುದು (ಶಲ್ಯ 43/43–45). ಇವನಿಂದ ಸ್ಕಂದನಿಗೆ 'ಉತ್ಕ್ರೋಷ' ಮತ್ತು 'ಪಂಚಕ'ರೆಂಬ ಇಬ್ಬರು ಅನುಚರರ ಕೊಡುಗೆ (ಶಲ್ಯ 45/35–36). ಸ್ಕಂದನಿಗೆ ಶಕ್ತಿಯೆಂಬ ಹೆಸರಿನ ಅಸ್ತ್ರ ಮತ್ತು ಘಂಟೆಯ ದಾನ (ಶಲ್ಯ 46/44–45). ಇವನಿಂದ ಭರದ್ವಾಜ ಕನ್ಯೆ ಶ್ರುತಾವತಿಯ ಪರೀಕ್ಷೆ ಮತ್ತು ಆಕೆಗೆ ವರದಾನ (ಶಲ್ಯ 48/2–58). ಇಂದ್ರತೀರ್ಥದಲ್ಲಿ ನೂರು ಯಜ್ಞ ಮಾಡಿದುದರಿಂದ ಈತನಿಗೆ 'ಶತಕ್ರತು'ವೆಂದು ಹೆಸರಾದುದು (ಶಲ್ಯ 49/2–4). ಕುರುಕ್ಷೇತ್ರದ ಭೂಮಿಯನ್ನು ಉಳುತ್ತಿದ್ದ ರಾಜರ್ಷಿ ಕುರುವಿನೊಡನೆ ಈತನ ಸಂಭಾಷಣೆ (ಶಲ್ಯ 53/5–15). ಪಕ್ಷಿರೂಪದಿಂದ ಬಂದು, ಈತನು ತಪಸ್ವಿಗಳಿಗೆ ಗೃಹಸ್ಥಧರ್ಮದ ಉಪದೇಶ ಮಾಡಿದುದು (ಶಾಂತಿ 11/11–26). ರಂತೀದೇವನಿಗೆ ಈತನ ವರದಾನ (ಶಾಂತಿ 29/120–121). ಸಮಸ್ತ ಪ್ರಾಣಿಗಳಿಗೂ ಪ್ರೀತಿಪಾತ್ರನಾಗುವ ಉಪಾಯವನ್ನು ಬೃಹಸ್ಪತಿಯೊಡನೆ ಕೇಳಿದುದು (ಶಾಂತಿ 84/2) ಅಂಬರೀಷನ ಕೇಳಿಕೆಯಂತೆ, ಅವನ ಸೇನಾಪತಿ ಸುದೇವನ ಸದ್ಗತಿಯ ಕಾರಣವನ್ನು ಈತನು ಹೇಳಿದುದು (ಶಾಂತಿ 98/11). ಅಂಬರೀಷನು ಕೇಳಿದಾಗ, ಇಂದ್ರನು ರಣಯಜ್ಞದ ವರ್ಣನೆ ಮಾಡಿದುದು (ಶಾಂತಿ 98/15–50). ಬೃಹಸ್ಪತಿಯೊಡನೆ ವಿಜಯಪ್ರಾಪ್ತಿಯ ಉಪಾಯ ಕೇಳಿದುದು (ಶಾಂತಿ 103/4–5). ಶೀಲದ ಶಿಕ್ಷಣಕ್ಕಾಗಿ, ಈತ ಪ್ರಹ್ಲಾದನ ಬಳಿ ಶಿಷ್ಯರೂಪದಿಂದ

ವಾಸಮಾಡಿದುದು ಮತ್ತು ವರರೂಪದಲ್ಲಿ ಅದರ ಪ್ರಾಪ್ತಿ (ಶಾಂತಿ 124/28–62). ವಿರೂಪಾಕ್ಷನಿಗೆ ರಾಜಧರ್ಮನ ಶಾಪದ ಕಥೆ ಹೇಳಿದುದು (ಶಾಂತಿ 173/8–10). ರಾಜಧರ್ಮನ ಕೋರಿಕೆಯಂತೆ ಗೌತಮನಿಗೆ ಜೀವದಾನ ಕೊಟ್ಟದ್ದು (ಶಾಂತಿ 173/12–13). ಆತ್ಮಹತ್ಯೆ ಮಾಡಲು ಸಿದ್ಧನಾದ ಕಾಶ್ಯಪನಿಗೆ, ನರಿಯ ರೂಪದಲ್ಲಿ ಪ್ರಕಟನಾಗಿ ತಿಳಿಯಹೇಳಿದುದು (ಶಾಂತಿ 180). ಪ್ರಹ್ಲಾದ ನೊಡನೆ ಜ್ಞಾನವಿಷಯಕವಾಗಿ ಈತನ ಸಂವಾದ (ಶಾಂತಿ 222/9–37). ಬ್ರಹ್ಮನೊಡನೆ ಬಲಿಯ ವಾಸಸ್ಥಳವನ್ನು ಕೇಳಿದುದು (ಶಾಂತಿ 223/3–7). ಬಲಿಯ ಮೇಲೆ ಆಕ್ಷೇಪ (ಶಾಂತಿ 223/14–25; 224/2–4). ಲಕ್ಷ್ಮಿಯೊಂದಿಗೆ ಸಂಭಾಷಣೆ ಮತ್ತು ಆಕೆಯ ಸುಪ್ರತಿಷ್ಠೆ (ಶಾಂತಿ 225/5–29). ಬಲಿಯು ಜೀವಂತನಾಗಿ ಹೊರಟು ಹೋಗುವಂತೆ ಆಜ್ಞೆ ನೀಡಿದುದು (ಶಾಂತಿ 225/33–36). ನಮುಚಿಯು ಐಶ್ವರ್ಯಹೀನನಾದರೂ ದುಃಖಿತನಾಗದಿರಲು ಕಾರಣ ಕೇಳಿದುದು (ಶಾಂತಿ 226/3). ರಾಜಲಕ್ಷ್ಮಿಯಿಂದ ಭ್ರಷ್ಟನಾದರೂ, ಬಲಿಯು ಶೋಕಿಸದಿರುವ ಕಾರಣವನ್ನು ಕೇಳಿದುದು (ಶಾಂತಿ 227/14–19). ಬಲಿಯ ಉತ್ತರವನ್ನು ಕೇಳಿ ಅವನ ಮಾತುಗಳನ್ನು ಸಮರ್ಥಿಸಿ ಅಭಯದಾನ ಮಾಡಿದುದು (ಶಾಂತಿ 227/89–116). ನಾರದರೊಂದಿಗೆ ಲಕ್ಷ್ಮಿಯ ದರ್ಶನ (ಶಾಂತಿ 228/16–18). ಅಸುರರನ್ನು ತ್ಯಜಿಸಿ ಬಂದಿರುವ ವಿಷಯದಲ್ಲಿ ಲಕ್ಷ್ಮಿಯೊಡನೆ ಪ್ರಶ್ನೆ (ಶಾಂತಿ 228/28). ಲಕ್ಷ್ಮಿಯನ್ನು ಜೊತೆಯಲ್ಲಿ ಕರೆಸಿಕೊಂಡು ಅಮರಾವತಿಗೆ ಪ್ರವೇಶ (ಶಾಂತಿ 228/89). ಈತನಿಂದ ತನ್ನ ಪತ್ನಿ ಅಹಲ್ಯೆ ಅಪಮಾನಿತಳಾದ ಕುರಿತು ಗೌತಮನಿಂದ ವಿವರಣೆ (ಶಾಂತಿ 266/47–51). ವೃತ್ರಾಸುರನೊಡನೆ ಈತನ ಯುದ್ಧ ಮತ್ತು ಮೋಹಿತನಾದುದು (ಶಾಂತಿ 281/13–21). ದೇವತೆಗಳ ಮತ್ತು ಋಷಿಗಳ ಪ್ರೋತ್ಸಾಹದಿಂದ ಈತನು ವೃತ್ರಾಸುರನ ವಧೆ ಮಾಡಿದುದು (ಶಾಂತಿ 282/9). ಬ್ರಹ್ಮಹತ್ಯೆಯ ಭಯದಿಂದ ಓಡಿದುದು ಮತ್ತು ಕಮಲನಾಳದಲ್ಲಿ ಅಡಗಿದುದು (ಶಾಂತಿ 282/11–18). ಬ್ರಹ್ಮನ ಮೂಲಕ ಈತನಿಗೆ ಬ್ರಹ್ಮಹತ್ಯೆಯಿಂದ ಬಿಡುಗಡೆ (ಶಾಂತಿ 282/56). ಅಹಲ್ಯೆಯ ಮೇಲೆ ಬಲಾತ್ಕಾರ ಮಾಡಿದುದರಿಂದ, ಗೌತಮ ಶಾಪದ ಮೂಲಕ ಇಂದ್ರನ ಗಡ್ಡಮೀಸೆ ಹಸುರಾಯಿತು ಮತ್ತು ವಿಶ್ವಾಮಿತ್ರರ ಶಾಪದಿಂದ ಈತನು ಅಂಡಕೋಶವನ್ನು ಕಳಕೊಳ್ಳಬೇಕಾಗಿ ಬಂತು. ಆ ಕಾರಣದಿಂದ ಗಂಡುಕುರಿಯ ವೃಷಣವನ್ನು ಜೋಡಿಸಬೇಕಾಯಿತು (ಶಾಂತಿ 342/23). ಇವನಿಗೆ ಎರಡನೇ ಬಾರಿ ಬ್ರಹ್ಮಹತ್ಯೆ ಅಂಟಿತು (ಶಾಂತಿ 342/42). ಅದ್ಭುತ ಘಟನೆಯ ಕುರಿತು ನಾರದರೊಡನೆ ಈತನು ಪ್ರಶ್ನೆ ಮಾಡಿದುದು (ಶಾಂತಿ 352/7–9). ಒಂದು ಗಿಳಿಯೊಡನೆ ಸಂಭಾಷಣೆ (ಅನು 5/13–28). ರಾಜರ್ಷಿ ಭಂಗಾಸ್ವನನನ್ನು ಸ್ತ್ರೀಯಾಗಿ ಮಾಡಿದುದು (ಅನು 12/5–10). ಭಂಗಾಸ್ವನನ ಇನ್ನೂರು ಪುತ್ರರೊಳಗೆ ಕಲಹವನ್ನುಂಟು ಮಾಡಿದುದು (ಅನು 12/29–31). ಭಂಗಾಸ್ವನನ ಮೇಲೆ ಪ್ರಸನ್ನನಾಗಿ ವರಕೊಟ್ಟದ್ದು (ಅನು 12/42–43). ಮತಂಗರನ್ನು ತಪಸ್ಸಿನಿಂದ ವಿಚಲಿತಗೊಳಿಸುವ ಸಂದರ್ಭದಲ್ಲಿ, ಆತನೊಡನೆ ಸಂವಾದ (ಅನು 27/27ರಿಂದ 29/12). ಮತಂಗರಿಗೆ ವರದಾನ (ಅನು 29/24–25). ಶಂಬರಾಸುರನೊಡನೆ ವ್ಯವಹಾರದ ಕುರಿತು ಪ್ರಶ್ನೆ (ಅನು 36–3). ಮಹರ್ಷಿ ದೇವಶರ್ಮನ ಪತ್ನಿಯಾದ ರುಚಿಯನ್ನು ಪ್ರಲೋಭನಗೊಳಿಸಿದುದು ಮತ್ತು ವಿಪುಲನಿಂದ ಛೀಮಾರಿ ಕೇಳಿದುದು (ಅನು 41/7–26). ಬೃಹಸ್ಪತಿಯೊಡನೆ ಉತ್ತಮದಾನದ ಕುರಿತು ಕೇಳಿದುದು (ಅನು 62/43). ಬ್ರಹ್ಮನೊಡನೆ ಗೋಲೋಕ ಮತ್ತು ಗೋದಾನದ ವಿಷಯವಾಗಿ ಪ್ರಶ್ನಿಸಿದುದು (ಅನು 72/6–12). ಇತರರ ಗೋವನ್ನು ಅಪಹರಿಸಿದ್ದರ ಫಲದ ಕುರಿತಾಗಿ ಬ್ರಹ್ಮನೊಡನೆ ಪ್ರಶ್ನೆ (ಅನು 74/1). ಬ್ರಹ್ಮನೊಡನೆ ಗೋಲೋಕದ ಶ್ರೇಷ್ಠತೆಯ ಕುರಿತಾಗಿ ಪ್ರಶ್ನೆ (ಅನು 83/13–14). ಕಾರ್ತಿಕೇಯನಿಗೆ ಉಡುಗೊರೆ ಸಮರ್ಪಣೆ (ಅನು 86/25). ಅಗಸ್ತ್ಯರಿಗೆ ತನ್ನ ಪರಿಚಯ ತಿಳಿಸಿ, ಕಮಲದ ಅಪಹಾರದ ಕಾರಣ ತಿಳಿಸಿದುದು (ಅನು 94/47–49). ಮಾತಲಿಯು ಕೇಳಿದಾಗ, ಎಲ್ಲರಿಗೂ ವಂದನೀಯನಾದ ಪುರುಷನ ಪರಿಚಯ ತಿಳಿಸಿದುದು (ಅನು 96/22). ಧೃತರಾಷ್ಟ್ರನ ರೂಪದಲ್ಲಿ, ಈತನು ಗೌತಮನೆಂಬ ಬ್ರಾಹ್ಮಣನ

ಆನೆಯನ್ನು ಅಪಹರಿಸಿದಾಗ ಈತನೊಡನೆ ಸಂಭಾಷಣೆ (ಅನು 102/7–61). ವಿದ್ಯುತ್ಪ್ರಭನೆಂಬ ಋಷಿಗೆ ಪಾಪದಿಂದ ಬಿಡುಗಡೆ ಹೊಂದುವ ಉಪಾಯ ತಿಳಿಸಿದುದು (ಅನು 125/48–50). ಬೃಹಸ್ಪತಿಯೊಡನೆ ಧರ್ಮದ ಕುರಿತಾಗಿ ಜಿಜ್ಞಾಸೆ (ಅನು 125/59). ಅಶ್ವಿನೀ ಕುಮಾರರ ಕಾರಣ ದಿಂದ ಚ್ಯವನನೊಡನೆ ಸಂಘರ್ಷ (ಅನು 156/ 16–31). ಪಂಚಶಿಖೆಯುಳ್ಳ ಬಾಲಕನ ರೂಪದಲ್ಲಿ, ಶಿವನ ಮೇಲೆ ವಜ್ರಪ್ರಹಾರ ಮಾಡುವಾಗ, ಈತನ ಬಾಹುಸ್ತಂಭಿತವಾದುದು ಮತ್ತು ಶಿವನ ಕೃಪೆಯಿಂದ, ಈತನು ಸಂಕಟ ಮುಕ್ತನಾದುದು (ಅನು 160/33–36). ಮರುತ್ತನಯಜ್ಞ ಮಾಡಿಸ ದಂತೆ ಬೃಹಸ್ಪತಿಯನ್ನು ತಡೆದುದು (ಆಶ್ವ 5/18 –21). ಬೃಹಸ್ಪತಿಯೊಡನೆ ಆತನ ಚಿಂತೆಯ ಕಾರಣ ಕೇಳಿದುದು (ಆಶ್ವ 9/1–5). ಅಗ್ನಿಯನ್ನು ದೂತನಾಗಿ ಮಾಡಿ, ಮರುತ್ತನ ಬಳಿಗೆ ಸಂದೇಶ ಕಳುಹಿಸಿದುದು (ಆಶ್ವ 9/8). ಗಂಧರ್ವರಾಜ ಧೃತರಾಷ್ಟ್ರನನ್ನು ದೂತನಾಗಿ ಮಾಡಿ, ಮರುತ್ತನ ಬಳಿಗೆ ಕಳುಹಿಸಿದುದು (ಆಶ್ವ 10/2). ಮರುತ್ತನ ಮೇಲೆ ವಜ್ರಪ್ರಹಾರ ಮಾಡಲು ಸಿದ್ಧನಾದುದು (ಆಶ್ವ 10/8). ಮರುತ್ತನ ಯಜ್ಞಕ್ಕೆ ಹೋದುದು (ಆಶ್ವ 10/20). ಯಜ್ಞಮಂಟಪದ ವ್ಯವಸ್ಥೆ ಮಾಡಿದುದು (ಆಶ್ವ 10/26–30). ಇವನಿಂದ ಶರೀರವುಳ್ಳ ವೃತ್ರಾಸುರನ ಸಂಹಾರ (ಆಶ್ವ 11/19). ಚಂಡಾಲರೂಪದಿಂದ, ಉತ್ತಂಕನಿಗೆ ಅಮೃತ ಕುಡಿಸಲು ಪ್ರತ್ಯಕ್ಷನಾದುದು (ಆಶ್ವ 55/18–19). ಮುನಿಯು ತಿರಸ್ಕರಿಸಿದಾಗ ಅಂತರ್ಧಾನನಾದುದು (ಆಶ್ವ 55/22). ಬ್ರಾಹ್ಮಣರೂಪಧರಿಸಿ, ಉತ್ತಂಕ ನಿಗೆ ಸಹಾಯಮಾಡಿದುದು (ಆಶ್ವ 58/32–33). ಉತ್ತಂಕ ಮುನಿಯ ದಂಡದಲ್ಲಿ ವಜ್ರಾಸ್ತ್ರವನ್ನು ಸಂಯೋಗಗೊಳಿಸಿದುದು (ಆಶ್ವ 58/35). ಇವನಿಂದ ಸ್ವರ್ಗದಲ್ಲಿ ಶ್ರೀಕೃಷ್ಣನ ಸ್ವಾಗತ (ಮೌಸಲ 4/28) ಇಂದ್ರನು ಯುಧಿಷ್ಠಿರನಿಗೆ ತನ್ನ ರಥದಲ್ಲಿ ಕುಳಿತು ಸ್ವರ್ಗಕ್ಕೆ ಸಶರೀರನಾಗಿ ಹೋಗುವಂತೆ ಹೇಳಿದುದು ಮತ್ತು ಆತನ ಆಶ್ರಿತವಾತ್ಸಲ್ಯದ ಪರೀಕ್ಷೆ ಮಾಡಿದುದು (ಮಹಾ ಪ್ರಸ್ಥಾ 3/1–29). ಧರ್ಮ ಪ್ರೇರಿತನಾದ ಇಂದ್ರ ನಿಂದ ಪುನಃ ಯುಧಿಷ್ಠಿರನ ಪರೀಕ್ಷೆ. ದೇವದೂತನ ಮೂಲಕ ಆತನಿಗೆ ಮಾಯಾಮಯ ನರಕದ ದರ್ಶನ ಮಾಡಿಸಿದುದು (ಸ್ವರ್ಗಾ 2). ಮಹಾ ಭಾರತದಲ್ಲಿ ಬಂದಿರುವ ಇಂದ್ರನ ಹೆಸರುಗಳು – ಅದಿತಿನಂದನ, ಆಖಂಡಲ, ಅಮರಶ್ರೇಷ್ಠ, ಅಮ ರೇಶ, ಅಮರರಾಜ, ಅಮರಾಧಿಪ, ಅಮರೇಶ್ವರ, ಅಮರೇಂದ್ರ, ಅಮರೋತ್ತಮ, ಅಸುರಾರ್ದನ, ಅಸುರಸೂದನ, ಬಲಭಿತ್, ಬಲಹಂತಾ, ಬಲ ಹನ್, ಬಲಜಿತ್, ಬಲನಾಶನ, ಬಲನಿಷೂದನ, ಬಲಸೂದನ, ಬಲವೃತ್ರಘ್ನ, ಬಲವೃತ್ರಹನ್, ಬಲವೃತ್ರನಿಷೂದನ, ಬಲವೃತ್ರಸೂದನ, ಭೂತ ಭವ್ಯೇಶ, ಶಚೀಪತಿ, ಶಕ್ರ, ಶಂಬರಹನ್, ಶಂಬರಪಾಕಹನ್, ಶತಕ್ರತು, ಶತಮನ್ಯು, ದಶಶತಾಕ್ಷ, ದಶಶತನಯನ, ದಶಶತೇಕ್ಷಣ, ದೈತ್ಯ ನಿಬರ್ಹಣ, ದೈತ್ಯಾಸುರನಿಬರ್ಹಣ, ದಾನವಶತ್ರು, ದಾನವಘ್ನ, ದಾನವಾರಿ, ದಾನವಸೂದನ, ದೇವ ಶ್ರೇಷ್ಠ, ದೇವದೇವ, ದೇವಾಧಿಪ, ದೇವಗಣೇಶ್ವರ, ದೇವಪತಿ, ದೇವರಾಜ, ದೇವರಾಟ್, ದೇವೇಶ, ದೇವೇಂದ್ರ, ಹರಿ, ಹರಿಶ್ಮಶ್ರು, ಹರಿಹಯ, ಹರಿಮಾನ್, ಹರಿವಾಹನ, ಈಶ್ವರ, ಜಗದೀಶ್ವರ, ಕಾಶ್ಯಪ, ಕೌಶಿಕ, ಕಿರೀಟಿ, ಕುಶಿಕೋತ್ತಮ, ಲೋಕತ್ರಯೇಶ, ಲೋಕೇಶ್ವರೇಶ್ವರ, ಮಘವಾ, ಮಹೇಂದ್ರ, ಮರುತ್ಪತಿ, ಮರುತ್ವಾನ್, ಮುಕುಟೀ, ನಮುಚಿಘ್ನ, ನಮುಚಿಹನ್, ಪಾಕಶಾಸನ, ಪರ್ಜನ್ಯ, ಪುರಂದರ, ಪುರುಭೂತ, ಪೂಷಾನುಜ, ಪುಷ್ಕರೇಕ್ಷಣ, ಸಹಸ್ರದೃಕ್, ಸಹಸ್ರಾಕ್ಷ, ಸಹಸ್ರ ಲೋಚನ, ಸಹಸ್ರನಯನ, ಸಹಸ್ರನೇತ್ರ, ಸರ್ವ ದಾನವಸೂದನ, ಸರ್ವದೇವೇಶ, ಸರ್ವಲೋಕಾ ಮರ, ಸುರಶ್ರೇಷ್ಠ, ಸುರಾಧಿಪ, ಸುರಗಣೇಶ್ವರ, ಸುರರ್ಷಭ, ಸುರಸತ್ತಮ, ಸುರೇಶ, ಸುರೇಶ್ವರ, ಸುರೇಂದ್ರ, ಸುರೋತ್ತಮ, ತ್ರೈಲೋಕ್ಯಪತಿ, ತ್ರೈಲೋಕ್ಯರಾಜ, ತ್ರಿಭುವನೇಶ್ವರ, ತ್ರಿದಶಾಧಿಪ, ತ್ರಿದಶಾಧಿಪತಿ, ತ್ರಿದಶೇಶ, ತ್ರಿದಶೇಶ್ವರ, ತ್ರಿದಶೇಂದ್ರ, ತ್ರಿದಿವೇಶ್ವರ, ತ್ರಿಲೋಕರಾಜ, ತ್ರಿಲೋಕೇಶ, ವಜ್ರ ಭೃತ್, ವಜ್ರಧರ, ವಜ್ರಧಾರಿ, ವಜ್ರಧೃಕ್, ವಜ್ರಹಸ್ತ, ವಜ್ರಪಾಣಿ, ವಜ್ರಾಯುಧ, ವಜ್ರೀ, ವರದ, ವಾಸವ, ವಿಬುಧಶ್ರೇಷ್ಠ, ವಿಬುಧಾಧಿಪ, ವಿಬುಧಾ ಧಿಪತಿ, ವಿಬುಧೇಶ್ವರ, ವಿಶ್ವಭುಕ್, ವೃಷಾಕಪಿ, ವೃತ್ರಶತ್ರು, ವೃತ್ರಹನ್, ವೃತ್ರಹಂತಾ, ವೃತ್ರನಿ ಷೂದನ

(2) ಪಾಂಚಜನ್ಯವೆಂಬ ಐದು ಬಣ್ಣದ

ದೇವತೆಯ (ಋಷಿಗಳ ಪಂಚಮಹಾ ವ್ಯಾಹೃತಿಗಳಿಂದ) ಮೂಲಕ ಬಲದಿಂದ ಪ್ರಕಟವಾದ ಇಂದ್ರನೆಂಬ ಹೆಸರಿನ ಅಗ್ನಿ (ವನ 220/7).

**ಇನ್ದ್ರಕೀಲ** – ಹಿಮಾಲಯ ಮತ್ತು ಗಂಧಮಾದನದ ಮುಂದಿನ ಒಂದು ಪರ್ವತ. ಅದರ ಅಭಿಮಾನಿ ದೇವತೆ ಕುಬೇರನ ಉಪಾಸಕನಾಗಿದ್ದಾನೆ (ಸಭಾ 10/32 ವನ 37/42).

**ಇನ್ದ್ರಜಿತ್** – ರಾಕ್ಷಸರಾಜ ರಾವಣನ ಪುತ್ರ, ಲಕ್ಷ್ಮಣನೊಡನೆ ಈತನ ಯುದ್ಧ (ವನ 285/8). ಈತನಿಂದ ರಾಮಲಕ್ಷ್ಮಣರು ಮೂರ್ಛಿತರಾದುದು (ವನ 288/26). ಲಕ್ಷ್ಮಣನಿಂದ ಈತನ ವಧೆ (ವನ 289/23).

**ಇನ್ದ್ರತಾಪನ** – ವರುಣನ ಸಭೆಯಲ್ಲಿ ಆತನ ಪೂಜೆ ಮಾಡುತ್ತಿರುವ ಒಬ್ಬ ದೈತ್ಯ (ಸಭಾ 8/15).

**ಇನ್ದ್ರತೀರ್ಥ** – ಸರಸ್ವತಿ ತಟದಲ್ಲಿರುವ ಒಂದು ತೀರ್ಥ. ಅಲ್ಲಿ ಇಂದ್ರನು ನೂರು ಯಜ್ಞಗಳನ್ನು ಅನುಷ್ಠಾನಗೊಳಿಸಿದ್ದನು. ಇದರ ವಿಶೇಷ ಮಹಿಮೆ (ಶಲ್ಯ 48/18; 49/2–5).

**ಇನ್ದ್ರತೋಯಾ** – ಗಂಧಮಾದನ ಪರ್ವತದ ಹತ್ತಿರ ಹರಿಯುತ್ತಿರುವ ಒಂದು ನದಿ. ಇಲ್ಲಿ ಸ್ನಾನ ಮತ್ತು ಮೂರು ದಿನದ ಉಪಾಸನೆಯಿಂದ ಅಶ್ವಮೇಧದ ಪುಣ್ಯ ಬರುತ್ತದೆ (ಅನು 25/11).

**ಇನ್ದ್ರದಮನ** – ಒಬ್ಬ ಪ್ರಾಚೀನ ರಾಜ. ಈತನಿಂದ ಬ್ರಾಹ್ಮಣನಿಗೆ ಧನದಾನ (ಶಾಂತಿ 234/18).

**ಇನ್ದ್ರದ್ಯುಮ್ನ** – (1) ಅಸುರಭಾವದಿಂದ ಕೂಡಿದ್ದ ಒಬ್ಬ ರಾಜ. ಈತ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟ (ವನ 12/32).

(2) ಒಬ್ಬ ಮಹರ್ಷಿ (ವನ 26/22).

(3) ರಾಜಾ ಜನಕನ ತಂದೆ (ವನ 133/4)

(4) ಒಬ್ಬ ಪ್ರಾಚೀನ ರಾಜರ್ಷಿ. ಆತ ಕೀರ್ತಿ ಲೋಪವಾದುದರಿಂದ ಸ್ವರ್ಗದಿಂದ ಭೂಮಿಗೆ ಬಿದ್ದನು. ಒಂದು ಚಿರಂಜೀವಿ ಆಮೆಯ ಮೂಲಕ ತನ್ನ ಕೀರ್ತಿಯ ವ್ಯಾಖ್ಯಾನ ಕೇಳಿ, ಪುನಃ ಸ್ವರ್ಗ ಲೋಕಕ್ಕೆ ಹೋದನು (ವನ 199).

**ಇನ್ದ್ರದ್ಯುಮ್ನ ಸರೋವರ** – (1) ಗಂಧಮಾದನ ಪರ್ವತದ ಬಳಿಯ ಸರೋವರ. ಇಲ್ಲಿಗೆ ಪಾಂಡು ಪತ್ನಿಯರ ಸಹಿತ ಆಗಮಿಸಿದ್ದನು (ಆದಿ 118/50).

(2) ದ್ವಾರಕಾಪುರದ ಒಂದು ಸರೋವರ (ಸಭಾ 38/29).

**ಇನ್ದ್ರದ್ವೀಪ** – ಒಂದು ದ್ವೀಪದ ಹೆಸರು. ಮೊದಲಾಗಿ ಸಹಸ್ರಬಾಹು ಅದನ್ನು ಗೆದ್ದು ತನ್ನ ಅಧಿಕಾರದೊಳಗೆ ಸೇರಿಸಿದ್ದ (ಸಭಾ 38/29).

**ಇನ್ದ್ರಪರ್ವತ** – ವಿದೇಹ ದೇಶದಲ್ಲಿರುವ ಒಂದು ಪರ್ವತ (ಸಭಾ 30/15).

**ಇನ್ದ್ರಪ್ರಸ್ಥ** – ಪಾಂಡವರ ರಾಜಧಾನಿ (ವರ್ತಮಾನ ಕಾಲದ ದಿಲ್ಲಿ). ವಿಶ್ವಕರ್ಮನ ಮೂಲಕ ಇದರ ನಿರ್ಮಾಣ. ಇದರ ಹೆಸರು ಇಂದ್ರಪ್ರಸ್ಥವೆಂದಾಗಲು ಕಾರಣ (ಆದಿ 206/28). ವ್ಯಾಸರಿಂದ ಇದರ ಭೂಭಾಗದ ಶೋಧನೆ (ಆದಿ 206/29). ಇದರ ವಿಶದವಾದ ವರ್ಣನೆ (ಆದಿ 206/29) (ಆದಿಪರ್ವದ 207, 218, 220, 221 ಅಧ್ಯಾಯಗಳಲ್ಲಿ; ಸಭಾಪರ್ವದ 13, 24, 32, 73, ವನಪರ್ವದ 51, 233, 237, ವಿರಾಟಪರ್ವದ 18, 50, ಉದ್ಯೋಗಪರ್ವದ 26, 55, 95, ಭೀಷ್ಮಪರ್ವದ 121, ಶಾಂತಿ ಪರ್ವದ 124 ಮತ್ತು ಅಶ್ವಮೇಧಿಕ ಪರ್ವದ 15ನೇ ಅಧ್ಯಾಯಗಳಲ್ಲಿ ಕೂಡ ಇಂದ್ರಪ್ರಸ್ಥದ ಹೆಸರು ಬಂದಿದೆ ಮೌಸಲ ಪರ್ವ 7/72ರಲ್ಲಿ, ಅನಿರುದ್ಧನ ಪುತ್ರ ವಜ್ರನಿಗೆ ಇಂದ್ರಪ್ರಸ್ಥದಲ್ಲಿ ಯಾದವರ ಪಟ್ಟಾಭಿಷೇಕ ಮಾಡಿದ ಕಥೆ ಬರುತ್ತದೆ).

**ಇನ್ದ್ರಮಾರ್ಗ** – ಒಂದು ಪ್ರಾಚೀನ ತೀರ್ಥ ಇಲ್ಲಿ ಸ್ನಾನ ಮಾಡಿದ ಫಲವಾಗಿ ಸ್ವರ್ಗಪ್ರಾಪ್ತಿಯಾಗುತ್ತದೆ (ಅನು 25/9).

**ಇನ್ದ್ರಲೋಕಾಭಿಗಮನಪರ್ವ** – ವನಪರ್ವದ ಒಳಗಿರುವ ಒಂದು ಅವಾಂತರ ಪರ್ವ (ಅಧ್ಯಾಯ 42 ರಿಂದ 51).

**ಇನ್ದ್ರವರ್ಮಾ** – ಮಾಲವನರೇಶ ಪಾಂಡವಪಕ್ಷದ ಯೋಧ. ಭೀಮಸೇನನಿಂದ ಈತನ ಅಶ್ವತ್ಥಾಮ ಎಂಬ ಹೆಸರಿನ ಆನೆಯ ವಧೆ (ದ್ರೋಣ 190/15).

**ಇನ್ದ್ರಸೇನ** – (1) ಚಂದ್ರವಂಶದ ಮಹಾರಾಜ ಅವಿಕ್ಷಿತನ ಮೊಮ್ಮಗ ಮತ್ತು ಪರೀಕ್ಷಿತನ ಮಗ (ಆದಿ 94/55).

(2) ಪಾಂಡವರ ಸಾರಥಿ (ಸಭಾ 33/30).

ಯುಧಿಷ್ಠಿರನ ಆಜ್ಞೆಯಿಂದ ಈತ ದ್ವಾರಕೆಯಿಂದ ಶ್ರೀಕೃಷ್ಣನನ್ನು ಕರೆದು ತರಲು ಹೋದುದು ಮತ್ತು ಆತನು ಬರುವಂತೆ ಆಗ್ರಹ ಮಾಡಿದುದು (ಸಭಾ 13/41–42). ಈತ ಪಾಂಡವರೊಂದಿಗೆ ಕಾಡಿಗೆ ಹೋದುದು (ವನ 1/11). ಗಂಧ ಮಾದನಕ್ಕೆ ಹೋಗುವ ಸಮಯದಲ್ಲಿ ಪಾಂಡವರು ಇಂದ್ರಸೇನನನ್ನು ಕಿರಾತರಾಜ ಸುಬಾಹುವಿನ ಬಳಿ ಬಿಟ್ಟುಹೋದುದು (ವನ 140/27). ಈತ ಧಾತ್ರೇಯಿಕಾಳೊಡನೆ ದ್ರೌಪದಿಯ ಸಮಾಚಾರ ಕೇಳಿದುದು (ವನ 269/11–15). ಇಂದ್ರಸೇನನು ದ್ವಾರಕೆಗೆ ಹೋಗುವಂತೆ ಆದೇಶ (ವಿರಾಟ 4/3). ಇಂದ್ರಸೇನನು ದ್ವಾರಕೆಗೆ ಹೋದುದು (ವಿರಾಟ 4/58). ಅಭಿಮನ್ಯುವಿನ ವಿವಾಹಕ್ಕಾಗಿ ಉಪಪ್ಲವ್ಯಕ್ಕೆ ಹೋದುದು (ವಿರಾಟ 72/23).

(3) ಕೌರವ ಪಕ್ಷದ ಒಬ್ಬ ಯೋಧ (ದ್ರೋಣ 156/122).

(4) ಇಂದ್ರಸೇನ ಮತ್ತು ಇಂದ್ರಸೇನಾ – ನಿಷಧರಾಜ ನಳನ ಪುತ್ರ ಮತ್ತು ಪುತ್ರಿ. ಇವರ ತಾಯಿ ದಮಯಂತಿ ಆಗಿದ್ದಳು. ನಳನು ಜೂಜಿನಲ್ಲಿ ಸೋಲುವ ಸಂದೇಹ ಬಂದಾಗ, ವಾರ್ಷ್ಣೇಯನ ಮೂಲಕ ಇಂದ್ರಸೇನ ಮತ್ತು ಇಂದ್ರಸೇನೆಯರನ್ನು, ದಮಯಂತಿಯು ಕುಂಡಿನ ಪುರಕ್ಕೆ ಕಳುಹಿಸಿದುದು (ವನ 60/18–24). ಇವರಿಬ್ಬರೂ ಪುನಃ ರಾಜಾ ನಳನೊಂದಿಗೆ ಭೇಟಿಯಾದುದು (ವನ 75/24).

**ಇನ್ದ್ರಸೇನಾ** – (1) ರಾಜಾ ನಳನ ಪುತ್ರಿ (ನೋಡಿ – ಇಂದ್ರಸೇನ ಮತ್ತು ಇಂದ್ರಸೇನೆ).

(2) ನಾರಾಯಣನ ಪುತ್ರಿ ಮತ್ತು ಮುದ್ಗಲನ ಪತ್ನಿ. ಅಪ್ರತಿಮ ಸುಂದರಿಯಾಗಿದ್ದರೂ, ಆಕೆ ಒಂದು ಸಾವಿರ ವರ್ಷದ ಮುದುಕ ಪತಿಯಾದ ಮುದ್ಗಲನನ್ನು ಹಿಂಬಾಲಿಸಿದಳು (ವನ 113/24) (ವಿರಾಟ 21/11).

**ಇನ್ದ್ರಾಣಿ** – ಇಂದ್ರಪತ್ನಿ ಶಚಿ (ನೋಡಿ– ಶಚಿ).

**ಇನ್ದ್ರಾಭ** – ಭರತವಂಶದ ರಾಜಾಕುರುವಿನ ಮರಿಮಗ ಮತ್ತು ಧೃತರಾಷ್ಟ್ರನ ಏಳನೆಯ ಮಗ (ಆದಿ 94/54)

**ಇನ್ದ್ರೋತ** – ಶುನಕವಂಶದ ಋಷಿ. ಜನ ಮೇಜಯ ರಾಜನನ್ನು ನಿಂದಿಸಿದುದು (ಶಾಂತಿ 150/9–19). ಬ್ರಾಹ್ಮಣರಿಗೆ ದ್ರೋಹ ಮಾಡುವು ದಿಲ್ಲವೆಂದು ಜನಮೇಜಯನಿಂದ ಪ್ರತಿಜ್ಞೆ ಮಾಡಿಸಿ, ತನ್ನ ಶರಣಾಗತಿಗೆ ಸ್ವೀಕರಿಸಿದ (ಶಾಂತಿ 151/10–21). ರಾಜಾ ಜನಮೇಜಯನಿಗೆ ಧರ್ಮೋಪದೇಶ ಮಾಡಿ, ಅವನಿಂದ ಅಶ್ವಮೇಧ ಯಜ್ಞ ಮಾಡಿಸಿದುದು (ಶಾಂತಿ 152).

**ಇರಾ** – (1) ಕುಬೇರನ ಸೇವೆಯಲ್ಲಿ ವಾಸಿಸುವ ಅಪ್ಸರೆ (ಸಭಾ 10/11).

(2) ಬ್ರಹ್ಮಸಭೆಯಲ್ಲಿ ಅವನ ಪೂಜೆ ಮಾಡುವ ಒಬ್ಬಳು ದೇವಿ (ಸಭಾ 11/39).

**ಇರಾಮಾ** – ಒಂದು ಮಹಾನದಿ. ಅದನ್ನು ಭಗವಂತನಾದ ಬಾಲಮುಕುಂದನ ಉದರದಲ್ಲಿ ಮಾರ್ಕಂಡೇಯನು ನೋಡಿದ್ದನು (ವನ 188/104).

**ಇರಾವತಿ** – ಪಂಚನದ ಪ್ರದೇಶದ ರಾವಿ ನದಿ. ಆಕೆ ದಿವ್ಯರೂಪ ಧರಿಸಿ, ಇತರ ನದಿಗಳೊಡ ಗೂಡಿ, ವರುಣನ ಸೇವೆಗೆ ಉಪಸ್ಥಿತಳಾಗುತ್ತಾಳೆ (ಸಭಾ 9/19). ಪಾರ್ವತಿ ದೇವಿಯು ಸ್ತ್ರೀಧರ್ಮ ವರ್ಣನೆ ಮಾಡುವ ಸಂಬಂಧದಲ್ಲಿ ಯಾವ್ಯಾವ ನದಿಗಳ ಸಲಹೆ ಕೇಳಿದ್ದಳೋ ಅವರಲ್ಲಿ ಇರಾ ವತಿಯು ಉಪಸ್ಥಿತಳಾಗಿದ್ದಳು (ಅನು 146/18).

**ಇರಾವಂತ** – ಅರ್ಜುನನಿಂದ ನಾಗಕನ್ಯೆ ಉಲೂಪಿಯ ಗರ್ಭದಿಂದ ಜನ್ಮವೆತ್ತಿದವ (ಆದಿ 213/36). ಪ್ರಥಮದಿನದ ಯುದ್ಧದಲ್ಲಿ ಶ್ರುತಾ ಯುಧನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/69–71). ಈತನಿಂದ ವಿಂದಾನುವಿಂದರ ಪರಾಜಯ (ಭೀಷ್ಮ 83/18–22). ಈತನು ಯುದ್ಧದಲ್ಲಿ ಶಕುನಿಯ ಐದು ಮಂದಿ ಸಹೋ ದರರ ವಧೆ ಮಾಡಿದುದು (ಭೀಷ್ಮ 90/27–46). ಅಲಂಬುಷನೊಂದಿಗೆ ಈತನ ಯುದ್ಧ ಮತ್ತು ಮರಣ (ಭೀಷ್ಮ 90/56–76).

**ಇಲಾ** – (1) ವೈವಸ್ವತ ಮನುವಿನ ಪುತ್ರಿ. ಪುರುಷರೂಪದಲ್ಲಿ ಪರಿವರ್ತಿತನಾದಾಗ ಈತನ ಹೆಸರು ಸುದ್ಯುಮ್ನನೆಂದಾಗಿತ್ತು (ಆದಿ 75/16; ಅನು 147/26). [ಈತ ಎರಡು ಬಾರಿ ತನ್ನ ಜೀವನದಲ್ಲಿ ಸ್ತ್ರೀಯಾಗಿ ಪುರುಷನಾಗಿದ್ದನು. ಮೊದಲಾಗಿ ಈತ ಹೋತೃವಿನ ದೋಷದಿಂದ ಕನ್ಯೆಯಾಗಿ ಜನ್ಮವೆತ್ತಿದ್ದನು. ಅನಂತರ ವಸಿಷ್ಠರ ಕೃಪೆಯಿಂದ ಪುರುಷನಾದನು. ಎರಡನೇ ಬಾರಿ ಇಲಾವೃತಖಂಡಕ್ಕೆ ಹೋಗಿ ಮಹಾದೇವನ

ಶಾಪದಿಂದ ಸ್ತ್ರೀ ಆದನು. ಈ ಕಥೆಯನ್ನು ಶ್ರೀಮದ್ಭಾಗವತದ ನವಮಸ್ಕಂಧದಲ್ಲಿ ನೋಡ ಬಹುದು] ಈಕೆಯ ಗರ್ಭದಿಂದ ಪುರೂರವನ ಜನ್ಮವಾಯಿತು (ಪುನಃ ಈತ ಪುರುಷನಾದನು) ಆದುದರಿಂದ ಈತ ಪುರೂರವನ ತಾಯಿ ಯೆಂದೂ ತಂದೆಯೆಂದೂ ಕರೆಯಲ್ಪಡುತ್ತಾನೆ (ಆದಿ 75/18–19). ಇಲಾ ಬುಧನ ಪತ್ನಿ ಮತ್ತು ಪುರೂರವನ ತಾಯಿಯಾಗಿದ್ದಳು (ಅನು 147/27).

(2) ಒಂದು ನದಿ. ಆಕೆ ಸ್ಕಂದನಿಗೆ ಫಲಪುಷ್ಪಗಳ ಕಾಣಿಕೆ ಕೊಟ್ಟಿದ್ದಳು (ಅನು 86/24). ಇಲಾ ನದಿಗೆ ಸಂಬಂಧಿಸಿದ ತೀರ್ಥದಲ್ಲಿ ಯುಧಿಷ್ಠಿರನು ಬ್ರಾಹ್ಮಣರ ಸಮೇತ ಸ್ನಾನ ಮಾಡಿದ್ದನು (ವನ 156/8).

**ಇಲಾವೃತವರ್ಷ** – ಜಂಬೂದ್ವೀಪದ ಮಧ್ಯ ದಲ್ಲಿರುವ ಭೂಭಾಗ (ಸಭಾ 28/6).

**ಇಲಾಸ್ಪದ** – ಒಂದು ಪ್ರಾಚೀನ ತೀರ್ಥ. ಇದರಲ್ಲಿ ಸ್ನಾನ ಮಾಡಿದರೆ ದುರ್ಗತಿಯ ನಿವಾರಣೆ ಯಾಗುತ್ತದೆ ಮತ್ತು ವಾಜಪೇಯ ಯಜ್ಞದ ಪುಣ್ಯ ಫಲ ಸುಲಭವಾಗುತ್ತದೆ (ವನ 83/77–78).

**ಇಲಿಲ** – ಪುರುವಂಶದ ಒಬ್ಬ ರಾಜ. ದುಷ್ಯಂತನ ತಂದೆ (ಆದಿ 81/7). ಇವನ ಪತ್ನಿಯ ಹೆಸರು ರಥಂತರ್ಯಾ (ಆದಿ 74/125). ದುಷ್ಯಂತನ ಮಾತಾಪಿತರ ಈ ಹೆಸರುಗಳು ದಾಕ್ಷಿಣಾತ್ಯ ಪಾಠ ಪ್ರಕಾರ ಕೊಡಲ್ಪಟ್ಟಿವೆ. ಉದೀಚ್ಯ ಪಾಠಕ್ಕೆ ಸರಿಯಾಗಿ, ಇವನ ತಂದೆಯ ಹೆಸರು 'ಈಲಿನ' ಮತ್ತು ತಾಯಿಯ ಹೆಸರು 'ರಥಂತರಿ' ಆಗಿತ್ತು (ಆದಿ 94/16–18).

**ಇಲ್ವಲ** – ಮಣಿಮತಿನಗರ ನಿವಾಸಿಯಾದ ಒಬ್ಬ ದೈತ್ಯ (ವನ 96/4). ಒಬ್ಬ ಬ್ರಾಹ್ಮಣನಲ್ಲಿ ಕ್ರೋಧ ಗೊಂಡು, ಈತ ಬ್ರಾಹ್ಮಣದ್ರೋಹಿಯಾಗಿ, ಮೋಸ ದಿಂದ ಬ್ರಾಹ್ಮಣರ ಹತ್ಯೆ ಮಾಡುತ್ತಿದ್ದನು (ವನ 96/5–13). ಈತ ಅಗಸ್ತ್ಯರೊಡನೆ, 'ನಾನು ಎಷ್ಟು ಧನವನ್ನು ದಾನ ಮಾಡಲು ಇಚ್ಛಿಸು ತ್ತೇನೆ?' ಎಂದು ಕೇಳಿದುದು (ವನ 99/13). ಈತನಿಂದ ಶ್ರುತರ್ವಾ, ಬ್ರಧ್ನಶ್ವ, ತ್ರಸದಸ್ಯು ಮತ್ತು ಅಗಸ್ತ್ಯರಿಗೆ ಧನದಾನ (ವನ 99/16). ಅಗಸ್ತ್ಯರ ಹುಂಕಾರದಿಂದ ಈತನು ಭಸ್ಮವಾದುದು (ವನ 99/17).

**ಇಷುಪಾದ** – ಒಬ್ಬ ದಾನವ. ತಾಯಿ ದನು ತಂದೆ ಕಶ್ಯಪ (ಆದಿ 65/25). ವಿಖ್ಯಾತ ಪರಾಕ್ರಮಿಯಾದ ರಾಜಾ ನಗ್ನಜಿತನ ರೂಪದಲ್ಲಿ ಈತನೇ ಜನ್ಮವೆತ್ತಿದ್ದನು (ಆದಿ 67/20–21).

## ಈ

**ಈಜಿಕ** – ಒಂದು ದೇಶ (ಭೀಷ್ಮ 9/52)

**ಈರೀ** – ಯಮರಾಜನ ಸಭೆಯಲ್ಲಿ ವೈವಸ್ವತ ಯಮನ ಉಪಾಸನೆ ಮಾಡುವ ನೂರುಮಂದಿ "ಈರೀ" ಎಂಬ ಹೆಸರಿನ ರಾಜರು (ಸಭಾ 8/23).

**ಈಲಿನ** – ಪೂರುವಂಶದ ರಾಜ. ತಂಸುವಿನ ಪುತ್ರ. ಈತನ ಪತ್ನಿಯ ಹೆಸರು ರಥಂತರಿ. ಆಕೆಯ ಗರ್ಭದಲ್ಲಿ ಈತನಿಗೆ ದುಷ್ಯಂತ, ಶೂರ, ಭೀಮ, ಪ್ರವಸು ಮತ್ತು ವಸು ಎಂಬ ಹೆಸರಿನ ಐದು ಮಂದಿ ಪುತ್ರರಾದರು (ಆದಿ 94/16–18).

**ಈಶ** – ಒಬ್ಬ ವಿಶ್ವೇದೇವ (ಅನು 91/35).

**ಈಶಾನುಧ್ಯುಷಿತ ತೀರ್ಥ** – ಒಂದು ಪ್ರಾಚೀನ ತೀರ್ಥ. ಅದರ ಸೇವನೆಯಿಂದ ಸಹಸ್ರ ಕಪಿಲಾ ಗೋವುಗಳ ದಾನ ಮತ್ತು ಅಶ್ವಮೇಧ ಯಜ್ಞದ ಫಲ ದೊರಕುತ್ತದೆ (ವನ 84/8–9).

**ಈಶ್ವರ** – (1) ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಮೊಮ್ಮಗ ಸ್ಥಾಣುವಿನ ಮಗ (ಆದಿ 66/3).

(2) ಒಬ್ಬ ರಾಜ. ಕ್ರೋಧವಶರೆಂಬ ದೈತ್ಯರಲ್ಲಿ ಒಬ್ಬನ ಅಂಶದಿಂದ ಹುಟ್ಟಿದವ (ಆದಿ 67/65).

(3) ರಾಜ ಪೂರುವಿನಿಂದ ಪೌಷ್ಟಿಯ ಗರ್ಭ ದಿಂದ ಹುಟ್ಟಿದ ಎರಡನೇ ಮಗ ಮಹಾರಥಿ (ಆದಿ 94/5).

(4) ಒಬ್ಬ ವಿಶ್ವೇದೇವ (ಅನು 91/37).

## ಉ

**ಉಕ್ಥ** – (1) ಪರಾವಾಣಿಯ ಉತ್ಪಾದಕವಾದ ಒಂದು ಅಗ್ನಿ. ಅದು ತ್ರಿವಿಧ ಉಕ್ಥ–ಮಂತ್ರಗಳ ಮೂಲಕ ಸ್ತುತಿಸಲ್ಪಡುತ್ತದೆ (ವನ 219/25).

(2) ಸಾಮವೇದದ ಒಂದು ವಿಶೇಷ ಭಾಗ.

**ಉಕ್ಷಾ** – ಋಷಭಕಂದನ ಹೆಸರು (ಗೋರಖ

ವನ 197/17).

**ಉಗ್ರ** – (1) ಧೃತರಾಷ್ಟ್ರನ ಪುತ್ರರಲ್ಲಿ ಒಬ್ಬ (ಆದಿ 67/103). ಭೀಮಸೇನನಿಂದ ಈತನ ವಧೆ (ಭೀಷ್ಮ 64/34–35).

(2) ಒಬ್ಬ ಯಾದವ ರಾಜಕುಮಾರ ಆತನಿಗೆ ಪಾಂಡವರ ಪಕ್ಷದಿಂದ ಯುದ್ಧಾಹ್ವಾನ ಕಳುಹಿಸಲ್ಪಟ್ಟಿತು (ಉದ್ಯೋಗ 4/12).

(3) ಶಿವನ ಒಂದು ಹೆಸರು (ಅನು 17/100).

(4) ಪ್ರಜಾಪತಿ ಕವಿಯ ಪುತ್ರ (ಅನು 85/133).

(5) ಒಂದು ವರ್ಣಸಂಕರ ಜಾತಿ. ಕ್ಷತ್ರಿಯ ಪುರುಷ ಮತ್ತು ಶೂದ್ರ ಸ್ತ್ರೀಯ ಸಂಯೋಗದಿಂದ ಹುಟ್ಟಿದ ಬಾಲಕ (ಅನು 148/7).

**ಉಗ್ರಕ** – ಒಬ್ಬ ಪ್ರಮುಖ ನಾಗ (ಆದಿ 35/7).

**ಉಗ್ರಕರ್ಮಾ**– (1) ಶಾಲ್ವದೇಶದ ರಾಜ. ಅವನು ಭೀಮಸೇನನಿಂದ ಕೊಲ್ಲಲ್ಪಟ್ಟ (ಕರ್ಣ 5/41)

(2) ಕೇಕಯ ರಾಜಕುಮಾರ. ವಿಶೋಕನ ಸೇನಾಪತಿ ಕರ್ಣನಿಂದ ಈತನ ವಧೆ (ಕರ್ಣ 82/4–5).

**ಉಗ್ರತೀರ್ಥ** – ಕ್ರೋಧವಶರೆಂಬ ದೈತ್ಯರಲ್ಲಿ ಒಬ್ಬನ ಅಂಶದಿಂದ ಪ್ರಕಟನಾದ ಒಬ್ಬ ಕ್ಷತ್ರಿಯ ರಾಜ (ಆದಿ 67/65).

**ಉಗ್ರತೇಜಾ** – (1) ಶಿವನ ಒಂದು ಹೆಸರು (ಅನು 17/57).

(2) ಒಬ್ಬ ಶ್ರೇಷ್ಠ ನಾಗ. ಈತ ಬಲರಾಮನು ಪರಮಧಾಮಕ್ಕೆ ಆಗಮಿಸುವ ವೇಳೆ ಸ್ವಾಗತಕ್ಕಾಗಿ ಬಂದಿದ್ದ (ಮೌಸಲ 4/16).

**ಉಗ್ರಶ್ರವ** – (1) ಲೋಮಹರ್ಷಣ ಪುತ್ರ; ಸೌತಿ, ಪೌರಾಣಿಕ (ಆದಿ 1/1).

(2) ಧೃತರಾಷ್ಟ್ರನ ಒಬ್ಬ ಮಗ (ಆದಿ 67/100). ಭೀಮಸೇನನಿಂದ ಈತನ ವಧೆ (ದ್ರೋಣ 157/9).

**ಉಗ್ರಸೇನ** – (1) ಮಹಾರಾಜ ಜನಮೇಜಯನ ಒಬ್ಬ ಸಹೋದರ. ಆತನು ತನ್ನ ಇನ್ನಿಬ್ಬರು ಸಹೋದರರೊಂದಿಗೆ ಸರಮೆಯ ಪುತ್ರರನ್ನು ಹೊಡೆದಿದ್ದನು (ಆದಿ 3/1–2).

(2) ಕಶ್ಯಪ ಪತ್ನಿ 'ಮುನಿ' ಎಂಬವಳ ಒಬ್ಬ ಮಗ. ದೇವಗಂಧರ್ವ (ಆದಿ 65/42). ಈತ ಅರ್ಜುನನ ಜನ್ಮೋತ್ಸವ ನೋಡಲು ಬಂದಿದ್ದ (ಆದಿ 122/55). ವಿರಾಟನಗರದಲ್ಲಿ ಅರ್ಜುನ ಮತ್ತು ಕೃಪಾಚಾರ್ಯರ ಯುದ್ಧವನ್ನು ನೋಡುವುದಕ್ಕಾಗಿಯೂ ಈತನು ಬಂದಿದ್ದನು (ವಿರಾಟ 56/11–12).

(3) ಸ್ವರ್ಭಾನುವೆಂಬ ಅಸುರನ ಅಂಶದಿಂದ ಪ್ರಕಟನಾದ ಒಬ್ಬ ರಾಜ (ಆದಿ 67/12–13).

(4) (ಚಿತ್ರಸೇನ) ಧೃತರಾಷ್ಟ್ರನ ಒಬ್ಬ ಮಗ (ಆದಿ 67/100). ಭೀಮನಿಂದ ಈತನ ವಧೆ (ದ್ರೋಣ 137/29–30).

(5) ಈತ ವೃಷ್ಣಿವಂಶದ ಪ್ರತಾಪಿರಾಜನಾಗಿದ್ದ. ಈತ ರಾಜಾ ಕುಂತೀಭೋಜನ ಸೋದರಭಾವನಾಗಿದ್ದ (ಆದಿ 67/130; 216/8). ಇವನ ಇನ್ನೊಂದು ಹೆಸರು ಆಹುಕನೆಂದಾಗಿತ್ತು (ಉದ್ಯೋಗ 128/38–39; ಅನು 14–41). ಇವನ ಮಂತ್ರಿ ವಸುದೇವ ಮತ್ತು ಬಲವಂತನಾದ ಕಂಸ ಮಗನಾಗಿದ್ದನು. ಕಂಸನು ತನ್ನ ತಂದೆ ಉಗ್ರಸೇನನನ್ನು ಮಂತ್ರಿಗಳ ಸಹಿತ ಸೆರೆಮನೆಯಲ್ಲಿ ಹಾಕಿ, ರಾಜ್ಯವನ್ನು ಭೋಗಿಸಿದನು (ಸಭಾ 22–36). ಉಗ್ರಸೇನನ ಅನುಮತಿಯಿಂದ, ಶ್ರೀಕೃಷ್ಣನು ಸಹೋದರ ಸಹಿತನಾದ ಕಂಸನನ್ನು ಕೊಂದು, ಪುನಃ ಉಗ್ರಸೇನನನ್ನೇ ಮಥುರಾ ನಗರದಲ್ಲಿ ಅಭಿಷೇಚಿಸಿದ (ಸಭಾ ಪುಟ 732). ಉಗ್ರಸೇನ ಮತ್ತು ವೃಷ್ಣಿವಂಶದವರಿಗೆ ಯಾವಾಗಲೂ ಜರಾಸಂಧನಿಂದ ಕಷ್ಟವುಂಟಾಗುತ್ತಿತ್ತು (ಸಭಾ 732). ಶಾಲ್ವನಿಂದ ಆಕ್ರಮಣವಾದಾಗ ಈತನಿಂದ ನಗರ ರಕ್ಷಣೆ (ವನ). ನಾರದರ ಪೂಜ್ಯತೆಯ ಕುರಿತು ಶ್ರೀಕೃಷ್ಣನಿಂದ ಪ್ರಶ್ನೆ (ಶಾಂತಿ 230/3). ಸಾಂಬನ ಹೊಟ್ಟೆಯಿಂದ ಹುಟ್ಟಿದ ಮುಸಲವು ಉಗ್ರಸೇನನಿಗೆ ಕೊಡಲ್ಪಟ್ಟಿತು. ಅದನ್ನು ನೋಡಿ ಈತ ದುಃಖಿಯಾದನು. ಅದನ್ನು ಕುಟ್ಟಿ ಪುಡಿ ಪುಡಿ ಮಾಡಿಸಿ, ಈತ ಸಮುದ್ರದಲ್ಲಿ ಹಾಕಿಸಿದನು. ಅನಂತರ ಮದ್ಯನಿಷೇದದ ಆಜ್ಞೆಯನ್ನು ಜಾರಿಗೊಳಿಸಿದನು (ಮೌಸಲ 1/27–30). ಮೃತ್ಯುವಿನ ಅನಂತರ ಈತ ವಿಶ್ವೇದೇವರಲ್ಲಿ ಲೀನವಾದನು (ಸ್ವರ್ಗ 5/17–18).

(6) ಸೋಮವಂಶದ ರಾಜಾ ಅವಿಕ್ಷಿತನ ಮೊಮ್ಮಗ ಮತ್ತು ಪರೀಕ್ಷಿತನ ಪುತ್ರ (ಆದಿ 94/52–54).

**ಉಗ್ರಾಯುಧ** – (1) ಧೃತರಾಷ್ಟ್ರನ ಒಬ್ಬ ಮಗ (ಆದಿ 67/99). ಈತ ದ್ರೌಪದಿಯ

ಸ್ವಯಂವರಕ್ಕೆ ಹೋಗಿದ್ದನು (ಆದಿ 185/2).
(2) ಪಾಂಡವ ಪಕ್ಷದ ಒಬ್ಬ ಯೋಧ. ಈತ ಪಾಂಚಾಲ ಕರ್ಣನಿಂದ ಗಾಯಗೊಂಡನು (ಕರ್ಣ 56/44).
(3) ಪರಾಕ್ರಮಿಯೂ, ಆದರ್ಶ ಧನುರ್ಧರನೂ ಆದ ಕೌರವಪಕ್ಷದ ಒಬ್ಬ ಯೋಧ (ಶಲ್ಯ 2-37). ಈತ ಯುದ್ಧಕ್ಷೇತ್ರದಲ್ಲಿ ಕೊಲ್ಲಲ್ಪಟ್ಟ.
(4) ಯಾವುದೋ ಸಂದರ್ಭದಲ್ಲಿ ಭೀಷ್ಮನಿಂದ ಹತನಾದ ಒಬ್ಬ ದುರ್ದಶ ಚಕ್ರವರ್ತಿ (ಶಾಂತಿ ).

**ಉಗ್ರಾಯುಧಪುತ್ರ** – ಅರ್ಜುನನಿಂದ ಹತನಾದ, ಕೌರವ ಪಕ್ಷದ ಒಬ್ಬ ಸಂಶಪ್ತಕ ಯೋಧ (ಕರ್ಣ 19/7).

**ಉಚ್ಚೈಃಶ್ರವಾ** – (1) ಸಮುದ್ರ ಮಥನವಾದಾಗ ಶರಧಿಯಿಂದ ಪ್ರಕಟವಾದ ಸರ್ವಶ್ರೇಷ್ಠ ಕುದುರೆ. ಅದು ದೇವಲೋಕಕ್ಕೆ ಹೊರಟುಹೋಯಿತು (ಆದಿ 18/33-37). ಇದರ ಶರೀರದ ಬಣ್ಣ ಹೇಗಿದೆ – ಎಂಬ ಪ್ರಶ್ನೆಯನ್ನೆತ್ತಿಕೊಂಡು ಕದ್ರು ಮತ್ತು ವಿನತೆಯರ ವಿವಾದ (ಆದಿ 20/2 ರಿಂದ 23/3).
(2) ಪೂರುವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು ಅವಿಕ್ಷಿತನ ಆರನೆಯ ಮಗ (ಆದಿ 94/53).

**ಉಚ್ಚಿಖ** – ತಕ್ಷಕ ಕುಲದಲ್ಲಿ ಹುಟ್ಟಿದ ಒಂದು ನಾಗ. ಅದು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋಯಿತು (ಆದಿ 57/9).

**ಉಚ್ಛೃಂಗ** – ವಿಂಧ್ಯನಿಂದ ಸ್ಕಂಧನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇವನ ಇನ್ನೊಬ್ಬ ಒಡನಾಡಿ ಅತಿಶೃಂಗನಾಗಿದ್ದನು (ಶಲ್ಯ 45/49).

**ಉಜ್ಜಯನ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ಉಜ್ಜಯಂತ ಪರ್ವತ** – ಸೌರಾಷ್ಟ್ರದೇಶದ (ಕಠಿಯಾವಾಡ) ಪಿಂಡಾರಕ ಕ್ಷೇತ್ರದೊಳಗಿರುವ ಒಂದು ಮಹಾನ್ ಸಿದ್ಧಿದಾಯಕ ಪರ್ವತ (ವನ 88/21).

**ಉಜ್ಜಾನಕ** – ಮಾನಸ ಸರೋವರದಿಂದ ಮುಂದೆ, ಗಂಧಮಾದನದ ಸಮೀಪ, ಆರ್ಷ್ಟಿಷೇಣನ ಆಶ್ರಮದ ಬಳಿಯಿರುವ ಒಂದು ತೀರ್ಥ ಸರೋವರ. ಇಲ್ಲಿ ಸ್ನಾನ ಮಾಡುವುದರಿಂದ, ಪಾಪಗಳ ಬಿಡುಗಡೆಯಾಗುತ್ತದೆ (ವನ 130/17; ಅನು 25/55).

**ಉಜ್ಜಾಲಕ** – ಮಧ್ಯಪ್ರದೇಶದಲ್ಲಿರುವ ಹೊಯಿಗೆಯಿಂದ ತುಂಬಿದ ಸಮುದ್ರ (ವನ 202/16).

**ಉಣ್ಡ್ರ (ಉಡ್ರ)** – ದಕ್ಷಿಣ ಭಾರತದ ಒಂದು ಜನಪದ. ಅದನ್ನು ಸಹದೇವನು ದೂತರ ಮೂಲಕ ಗೆದ್ದಿದ್ದನು (ಸಭಾ 31/71). ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಉಂಡ್ರ ನಿವಾಸಿಗಳು ಕಾಣಿಕೆ ತೆಗೆದುಕೊಂಡು ಬಂದಿದ್ದರು (ವನ 51/22).

**ಉತಥ್ಯ** – ಮಹರ್ಷಿ ಅಂಗಿರಸನ ಮಧ್ಯಮ ಪುತ್ರ (ಆದಿ 66/5). ಮಾಂಧಾತ ರಾಜನಿಗೆ ರಾಜಧರ್ಮದ ಕುರಿತು ಈತನ ಉಪದೇಶ (ಶಾಂತಿ 90 ಮತ್ತು 91). ಸೋಮನ ಕನ್ಯೆ ಭದ್ರಾಳೊಂದಿಗೆ ವಿವಾಹ (ಅನು 154/12). ವರುಣನಿಂದ ಭದ್ರಾಳ ಅಪಹರಣವಾದುದರಿಂದ ಈತ ಸಂಪೂರ್ಣ ನೀರನ್ನು ಕುಡಿದುದು (ಅನು 154/22-28).

**ಉತ್ಕಲ** – ಭಾರತವರ್ಷದ ಒಂದು ಜನಪದ (ಭೀಷ್ಮ 9/41). ಕರ್ಣನು ದುರ್ಯೋಧನನಿಗಾಗಿ ಈ ದೇಶವನ್ನು ಗೆದ್ದಿದ್ದನು (ದ್ರೋಣ 4/8).

**ಉತ್ಕೋಚಕ** – ಒಂದು ಪ್ರಾಚೀನ ತೀರ್ಥ. ಅಲ್ಲಿ ಧೌಮ್ಯ ಮಹರ್ಷಿಗಳು ತಪಸ್ಸು ಮಾಡುತ್ತಿದ್ದರು ಪಾಂಡವರು ಇಲ್ಲಿಯೇ ಧೌಮ್ಯರನ್ನು ಪುರೋಹಿತನಾಗಿ ಸ್ವೀಕರಿಸಿದ್ದರು (ಆದಿ 182/2-6).

**ಉತ್ಕ್ರಾಥಿನಿ** – ಸ್ಕಂಧನ ಸಹಚರಿ ಮಾತೃಕೆ (ಶಲ್ಯ 46/16).

**ಉತ್ಕ್ರೋಶ** – ಇಂದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇವನ ಇನ್ನೊಬ್ಬ ಒಡನಾಡಿಯ ಹೆಸರು ಪಂಚಕ (ಶಲ್ಯ 45/35).

**ಉತ್ತಂಕ** – (1) ಆಯೋದ ಧೌಮ್ಯನ ಮೂರನೆಯ ಶಿಷ್ಯನಾದ ವೇದನ ಶಿಷ್ಯ (ಆದಿ 3/83). ಇವನ ಗುರುಸೇವೆ (ಆದಿ 3/85). ಈತನಿಂದ ಗುರುಪತ್ನಿಯ ನಿಷಿದ್ಧ ಆಜ್ಞೆಯ ಉಲ್ಲಂಘನೆ (ಆದಿ 3/87). ಗುರುಪತ್ನಿಯ ಕೇಳಿಕೆಯ ಪ್ರಕಾರ ರಾಜಾ ಪೌಷ್ಯನಲ್ಲಿಂದ ಕುಂಡಲಗಳನ್ನು ತರಲು ಈತ ಹೋದುದು (ಆದಿ 3/98). ಈತನಿಂದ ಅಮೃತಸ್ವರೂಪವಾದ ಸೆಗಣಿಯ ಭಕ್ಷಣೆ (ಆದಿ 3/101). ಗುರುಪತ್ನಿಗಾಗಿ ರಾಜನಿಂದ ಕುಂಡಲಗಳ ಯಾಚನೆ (ಆದಿ 3/104). ಕ್ಷತ್ರಾಣಿಯು

ಅಂತಃಪುರದಲ್ಲಿ ಇಲ್ಲವೆಂಬ ವಿಚಾರ ಹೇಳಿ, ಈತ ರಾಜನನ್ನು ನಿಂದಿಸಿದುದು (ಆದಿ 3/106). ಪುನಃ ಆಚಮನಾದಿಗಳಿಂದ ಶುದ್ಧನಾಗಿ ಹೋದಾಗ ಕ್ಷತ್ರಾಣಿಯ ದರ್ಶನವಾದುದು ಆಕೆಯ ಕುಂಡಲ ಗಳನ್ನು ಇವನು ಯಾಚಿಸಿದುದು (ಆದಿ 3/111). ಅಪವಿತ್ರ ಅನ್ನ ತಿನ್ನಿಸಿದುದಕ್ಕಾಗಿ ಈತ ಪೌಷ್ಯನಿಗೆ ಶಾಪಕೊಟ್ಟದ್ದು (ಆದಿ 3/116). ಪೌಷ್ಯನಿಂದ ಈತನಿಗೆ ಮಕ್ಕಳಾಗದಂತೆ ಶಾಪ (ಆದಿ 3/117). ಕುಂಡಲಗಳನ್ನು ತೆಗೆದುಕೊಂಡು ಬರುತ್ತಿರುವಾಗ, ಕ್ಷಪಣಕವೇಷಧಾರಿಯಾದ ತಕ್ಷಕನೊಡನೆ ಈತನ ಭೇಟಿ ಮತ್ತು ಆತನಿಂದ ಕುಂಡಲಗಳ ಅಪಹರಣ (ಆದಿ 3/127). ಈತ ಕ್ಷಪಣಕನನ್ನು ಹಿಂಬಾಲಿಸಿ ದುದು ಮತ್ತು ಕ್ಷಪಣಕನು ತಕ್ಷಕರೂಪದಲ್ಲಿ ಪ್ರಕಟನಾಗಿ ನಾಗಲೋಕಕ್ಕೆ ಹೋದುದು (ಆದಿ 3/129–130). ನಾಗಲೋಕಕ್ಕೆ ಹೋಗುತ್ತಿರು ವಾಗ, ಇವನ ಸಹಾಯಕ್ಕಾಗಿ, ಇಂದ್ರನು ವಜ್ರಕ್ಕೆ ಆದೇಶಕೊಟ್ಟದು (ಆದಿ 3/131). ನಾಗಲೋಕಕ್ಕೆ ಹೋಗಿ ಈತನಿಂದ ತಕ್ಷಕನ ಸ್ತುತಿ (ಆದಿ 3/140). ನಾಗಲೋಕದಲ್ಲಿ ವಸ್ತ್ರ ನೇಯುತ್ತಿರುವ ಇಬ್ಬರು ಸ್ತ್ರೀಯರು ಚಕ್ರ ತಿರುಗಿಸುತ್ತಿರುವ ಆರು ಕುಮಾರರ ಮತ್ತು ಒಬ್ಬ ದಿವ್ಯ ಪುರುಷನ ದರ್ಶನ ಈತನಿಗಾದುದು. ಇವನಿಂದ ಅವರ ಸ್ತುತಿ (ಆದಿ 3/144–149). ಇವನು ಕುದುರೆಯ ಮಲದ್ವಾರವನ್ನು ಊದಿದ್ದರಿಂದ ಬೆಂಕಿಯ ಜ್ವಾಲೆ ಪ್ರಕಟವಾದುದು. ಆ ಅಗ್ನಿಯಿಂದ ಭೀತನಾಗಿ ತಕ್ಷಕನು ಕುಂಡಲಗಳನ್ನು ಕೊಟ್ಟದ್ದು (ಆದಿ 3/151–153). ನಾಗಲೋಕದಲ್ಲಿ ತಾನು ನೋಡಿದ ಕುಮಾರರು ಇತ್ಯಾದಿಗಳ ಕುರಿತು ಗುರುವಿನೊಡನೆ ಪ್ರಶ್ನಿಸಿದುದು (ಆದಿ 3/163). ಎತ್ತು ಮತ್ತು ಅದರ ಮೇಲೆ ಏರಿ ಕುಳಿತ ಪುರುಷನ ವಿಚಾರವಾಗಿ ಈತನ ಜಿಜ್ಞಾಸೆ (ಆದಿ 3/165). ಗುರುಗಳಿಂದ ಈತನ ಪ್ರಶ್ನೆಗಳಿಗೆ ಉತ್ತರ (ಆದಿ 3/166–168). ತಕ್ಷಕನ ವಿನಾಶಕ್ಕಾಗಿ, ರಾಜಾ ಜನಮೇಜಯನಿಗೆ ಸರ್ಪಯಜ್ಞ ಮಾಡುವಂತೆ ಈತನ ಸಲಹೆ (ಆದಿ 3/178–184).

(2) ಗೌತಮ ಋಷಿಯ ಶಿಷ್ಯ. ದ್ವಾರಕೆಗೆ ಹೋಗುವಾಗ ಶ್ರೀಕೃಷ್ಣನೊಡನೆ ಈತನ ಭೇಟಿ, ಆತನೊಡನೆ ಕೌರವ ಪಾಂಡವರ ಸಮಾಚಾರ ಕೇಳಿದುದು (ಆಶ್ವ 53/8–14). ಕುಪಿತನಾದ ಈತ ಶ್ರೀಕೃಷ್ಣನಿಗೆ ಶಾಪ ಕೊಡಲು ಸಿದ್ಧನಾದುದು (ಆಶ್ವ 53/20–22). ಶ್ರೀ ಕೃಷ್ಣನೊಡನೆ ಅಧ್ಯಾತ್ಮ ತತ್ತ್ವದ ವರ್ಣನೆ ಮಾಡಲು ಹೇಳಿದುದು (ಆಶ್ವ 54/1). ಶಾಪದಾನಗಳಿಂದ ನಿವೃತ್ತನಾಗಿ, ಈತ ಶ್ರೀಕೃಷ್ಣನೊಡನೆ ವಿಶ್ವರೂಪದರ್ಶನ ಮಾಡುವಂತೆ ಕೇಳಿಕೊಂಡುದು (ಆಶ್ವ 55/1–3). ಶ್ರೀಕೃಷ್ಣ ನೊಡನೆ ಜಲಕ್ಕಾಗಿ ವರದಾನ ಯಾಚಿಸಿದುದು (ಆಶ್ವ 55/13). ಈತನಿಗೆ ಉತ್ತಂಕನೆಂಬ ಹೆಸರಿನ ಮುಗಿಲುಗಳಿಂದ ಜಲಪ್ರಾಪ್ತಿಯಾಗುವಂತೆ ಶ್ರೀಕೃಷ್ಣ ವರದಾನ (ಆಶ್ವ 55/35–37). ಈತನ ಉತ್ಕೃಷ್ಟ ಗುರುಭಕ್ತಿ (ಆಶ್ವ 56/2–6). ಗುರುವಿಗಾಗಿ ಉತ್ತಂಕನು ಕಟ್ಟಿಗೆಯ ಹೊರೆಯನ್ನು ತಂದದ್ದು ಆ ಹೊರೆಯ ಜೊತೆಯಲ್ಲಿ ಬಿದ್ದುಹೋದ ಬಿಳಿಯಾದ ಜಟೆಯನ್ನು ನೋಡಿ, ವೃದ್ಧಾಪ್ಯ ಬಂದ ಸಂಶಯದಿಂದ ಈತನ ರೋದನ. ಈತನ ಕಣ್ಣೀರನ್ನು ಗುರುಪುತ್ರಿ ತನ್ನ ಕೈಯಲ್ಲಿ ತೆಗೆದು ಕೊಂಡದ್ದು. ಅದರಿಂದ ಆಕೆಯ ಕೈ ಸುಟ್ಟು ಹೋದುದು. ಗುರುವು ಕೇಳಿದಾಗ, 'ಮನೆಗೆ ಹೋಗುವ ಆಜ್ಞೆ ಸಿಗದುದರಿಂದಲೇ ನನಗೆ ದುಃಖವಾಗಿದೆ' ಎಂದು ಹೇಳಿದುದು. 'ಆಜ್ಞೆ ಪಡೆದು ಮನೆಗೆ ಹೋಗೆಂದು' ಗುರುಗಳ ಆದೇಶ, 'ಗುರುದಕ್ಷಿಣೆ ಏನು ಕೊಡಲಿ' ಎಂದು ಉತ್ತಂಕನ ಕೇಳಿಕೆ. ಗುರುವು ಯಾವ ದಕ್ಷಿಣೆ ಯನ್ನು ಸ್ವೀಕರಿಸದೆ ಸಂತೋಷ ಸೂಚಿಸಿ, ತನ್ನ ಪುತ್ರಿಯನ್ನು ಈತನಿಗೆ ಕೊಡುವ ಬಯಕೆಯನ್ನು ವ್ಯಕ್ತಪಡಿಸಿದುದು, ಉತ್ತಂಕನು ಹದಿನಾರು ವರ್ಷದ ಯುವಕನಾಗಿ ಆಕೆಯ ಪಾಣಿಗ್ರಹಣ ಮಾಡಿದುದು (ಆಶ್ವ 56/7–24). ಗುರುಪತ್ನಿಯು ಗುರುದಕ್ಷಿಣೆ ಕೇಳುವಂತೆ ಈತನ ಒತ್ತಾಯ ಮತ್ತು ಅಹಲ್ಯೆಯು ಮದಯಂತಿಯ ಕುಂಡಲಗಳನ್ನು ಯಾಚಿಸಿದುದು (ಆಶ್ವ 56/25–29). ಕುಂಡಲ ತರುವುದಕ್ಕಾಗಿ, ಸೌದಾಸನ ಬಳಿಗೆ ಹೋಗಿ, ಆತನೊಡನೆ ಸಂಭಾಷಣೆ ಮಾಡಿದುದು (ಆಶ್ವ 57/3–18). ಮದಯಂತಿಗೆ ರಾಜನ ಸಂದೇಶ ತಿಳಿಸಿ, ಕುಂಡಲಗಳನ್ನು ಬೇಡಿದುದು (ಆಶ್ವ 57/19). ಸೌದಾಸನೊಡನೆ ರಾಣಿಗೆ ಕೊಡುವ ಸಂದೇಶಕ್ಕೆ ಪ್ರಮಾಣವನ್ನು ಕೇಳಿದುದು (ಆಶ್ವ 58/1). ಮದಯಂತಿಗೆ ರಾಜನ ಸಂದೇಶ ಹೇಳಿ ಕುಂಡಲಗಳನ್ನು ಪಡಕೊಂಡದ್ದು (ಆಶ್ವ 58/3).

ಸೌದಾಸನೊಡನೆ ಪುನಃ ಈತನ ಮಾತುಕತೆ (ಆಶ್ವ 58/4–16). ಈತ ಮರದ ಮೇಲೆ ಹತ್ತಿ ಬಿಲ್ವಫಲವನ್ನು ಕೊಯಿದು ಬೀಳಿಸುತ್ತಿದ್ದಾಗ ಕುಂಡಲಗಳ ಅಪಹಾರ (ಆಶ್ವ 58/24–26). ಈತನು ದಂಡದಿಂದ ಹಾವಿನ ಹುತ್ತವನ್ನು ಅಗೆದುದು (ಆಶ್ವ 58/27–28). ಇಂದ್ರನ ಸಹಾಯದಿಂದ ನಾಗಲೋಕಕ್ಕೆ ಹೋದುದು (ಆಶ್ವ 58/36–38). ಕುದುರೆ ರೂಪದ ಅಗ್ನಿಯ ಸಹಾಯದಿಂದ ಕುಂಡಲಗಳನ್ನು ಪಡಕೊಂಡುದು (ಆಶ್ವ 58/56). ಗುರುಪತ್ನಿಗೆ ಕುಂಡಲಗಳನ್ನು ಕೊಟ್ಟದ್ದು (ಆಶ್ವ 58/58). ಈತನ ತಪಸ್ಸಿನಿಂದ ಪ್ರಸನ್ನನಾಗಿ, ಭಗವಂತನಾದ ವಿಷ್ಣು ಈತನಿಗೆ ವರಕೊಟ್ಟದ್ದು (ವನ 201/30). ಅಯೋಧ್ಯಾ ನರೇಶ ಬೃಹದಶ್ವನೊಡನೆ ದುಂಧುವನ್ನು ಕೊಲ್ಲಲು ಈತನ ಆಗ್ರಹ (ವನ 202/22).

**ಉತ್ತಮಾಶ್ವ** – ಭಾರತವರ್ಷದ ಒಂದು ಜನಪದ (ಭೀಷ್ಮ 9/41).

**ಉತ್ತಮೌಜ** – ಪಾಂಡವರ ಸಂಬಂಧಿ ಪಾಂಚಾಲ ದೇಶದ ಯೋಧ (ಉದ್ಯೋಗ 57/32). ಇವನ ಮೂಲಕ ಅರ್ಜುನನ ರಥದ ಬಲಚಕ್ರದ ರಕ್ಷಣೆ (ಭೀಷ್ಮ 15/19; 19/24; 98/43). ಈತನ ರಥದ ಕುದುರೆಗಳ ರಕ್ಷಣೆ (ದ್ರೋಣ 23/8). ಅಂಗದನೊಂದಿಗೆ ಈತನ ಯುದ್ಧ (ದ್ರೋಣ 25/38–39). ಕೃತವರ್ಮನೊಂದಿಗೆ ಯುದ್ಧ (ದ್ರೋಣ 92/27–32). ದುರ್ಯೋಧನನೊಂದಿಗೆ ಯುದ್ಧಮಾಡಿ ಈತ ಸೋತದ್ದು (ದ್ರೋಣ 130/30–43). ಕೃತವರ್ಮನಿಂದ ಈತನ ಪರಾಜಯ (ಕರ್ಣ 61/59). ಇವನಿಂದ ಕರ್ಣಪುತ್ರ ಸುಷೇಣನ ವಧೆ (ಕರ್ಣ 95/13). ಅಶ್ವತ್ಥಾಮನಿಂದ ಈತನ ವಧೆ (ಸೌಪ್ತಿಕ 3/35–36). ಉತ್ತಮೌಜನೇ ಮೊದಲಾದವರ ಅಂತ್ಯಸಂಸ್ಕಾರ (ಸ್ತ್ರೀ 26/34).

**ಉತ್ತರ** – (1) ವಿರಾಟರಾಜನ ಪುತ್ರ. ಈತ ವಿರಾಟನ ಸಂಗಡ ದ್ರೌಪದೀ ಸ್ವಯಂವರಕ್ಕೆ ಆಗಮಿಸಿದುದು (ಆದಿ 185/8). ಇವನ ಇನ್ನೊಂದು ಹೆಸರು 'ಭೂಮಿಂಜಯ'ನೆಂದಾಗಿತ್ತು (ವಿರಾಟ 35/9). ಇವನ ಬಳಿಗೆ ಗೋಪಾಲರ ಮುಖಂಡ ಬಂದುದು ಮತ್ತು ಈತನನ್ನು ಯುದ್ಧಕ್ಕೆ ಹೊರಡಲು ಪ್ರೋತ್ಸಾಹಿಸಿದುದು (ವಿರಾಟ 35/9). ತನಗೊಬ್ಬ ಸಾರಥಿಯನ್ನು ಹುಡುಕುವಂತೆ ಈತನ ಸೂಚನೆ (ವಿರಾಟ 36/2). ಬೃಹನ್ನಲೆ ಎಂಬ ಹೆಸರಿನ ಅರ್ಜುನನನ್ನು ಸಾರಥಿಯಾಗಿಟ್ಟುಕೊಂಡು ಈತ ಯುದ್ಧಕ್ಕೆ ಹೊರಟದ್ದು (ವಿರಾಟ 37/27). ಕೌರವರ ಸೈನ್ಯ ನೋಡಿ ಭಯಭೀತನಾಗಿ ರಥದಿಂದ ಹಾರಿ ಓಡಿದುದು (ವಿರಾಟ 38/28). ಅರ್ಜುನನು ಒಡಂಬಡಿಸಿದ ಮೇಲೆ ಸಾರಥ್ಯ ಮಾಡಲು ಈತ ಒಪ್ಪಿದುದು (ವಿರಾಟ 38/51). ಅರ್ಜುನನ ಆಜ್ಞೆಯಂತೆ ಪಾಂಡವರ ದಿವ್ಯ ಧನುಸ್ಸು ಮೊದಲಾದವುಗಳನ್ನು ಶಮೀ ವೃಕ್ಷದಿಂದ ಈತ ಕೆಳಗಿಳಿಸಿದುದು (ವಿರಾಟ 41/8). ಬೃಹನ್ನಲೆಯೊಡನೆ ಪಾಂಡವರ ಅಸ್ತ್ರಗಳ ಕುರಿತು ಪ್ರಶ್ನಿಸಿದುದು (ವಿರಾಟ 42). ಅರ್ಜುನನೊಡನೆ ಆತನ ಹತ್ತು ಹೆಸರುಗಳ ಕಾರಣಗಳನ್ನು ಪ್ರತ್ಯೇಕವಾಗಿ ಕೇಳಿದುದು (ವಿರಾಟ 44/10–12). ಅರ್ಜುನನ್ನು ಗುರುತಿಸಿ, ಅವನಿಗೆ ಶರಣಾಗತನಾದುದು (ವಿರಾಟ 44/24–25). ಅರ್ಜುನನೊಡನೆ ಆತ ನಪುಂಸಕನಾದ ಕಾರಣ ಕೇಳಿದುದು (ವಿರಾಟ 45/12). ಗಾಯಗೊಂಡು ಹತೋತ್ಸಾಹನಾಗಿ, ಸಾರಥ್ಯ ಮಾಡಲು ತನ್ನ ಅಸಮರ್ಥತೆಯನ್ನು, ಅರ್ಜುನನೊಡನೆ ಹೇಳಿದುದು (ವಿರಾಟ 61/4–12). ಅರ್ಜುನನ ಆದೇಶದಿಂದ ಕೌರವ ಮಹಾರಥಿಗಳ ವಸ್ತ್ರವನ್ನು ಬಿಚ್ಚಿದುದು (ವಿರಾಟ 66/15). ಬೃಹನ್ನಲೆಯನ್ನು ಸಾರಥಿಯಾಗಿಟ್ಟುಕೊಂಡು ಈತ ಪುನಃ ನಗರದ ಕಡೆಗೆ ಹೊರಟದ್ದು (ವಿರಾಟ 67/14). ಉತ್ತರನು ನಗರಕ್ಕೆ ಪ್ರವೇಶಿಸಿ, ತಂದೆ ಮತ್ತು ಕಂಕನ ಪಾದಾಭಿವಂದನೆ ಮಾಡಿದುದು (ವಿರಾಟ 68/57). ವಿರಾಟನಿಗೆ ಯುದ್ಧದ ಸಮಾಚಾರ ತಿಳಿಸಿದುದು (ವಿರಾಟ 69/1–11). ತಂದೆಗೆ ಪಾಂಡವರ ಪರಿಚಯ ತಿಳಿಸಿದುದು (ವಿರಾಟ 71/13–17). ವಿಶೇಷ ರೂಪದಿಂದ ಅರ್ಜುನನ ಪರಿಚಯ ಹೇಳಿದುದು (ವಿರಾಟ 71/18–21). ಪ್ರಥಮ ದಿನದ ಯುದ್ಧದಲ್ಲಿ ವೀರಬಾಹುವಿನೊಡನೆ ದ್ವಂದ್ವಯುದ್ಧ (ಭೀಷ್ಮ 45/77). ಶಲ್ಯನ ಮೇಲೆ ಆಕ್ರಮಣ ಮತ್ತು ಆತನಿಂದ ಈತನ ವಧೆ (ಭೀಷ್ಮ 47/36–39). ದಿವಂಗತನಾಗಿ ಈತ ವಿಶ್ವೇದೇವರಲ್ಲಿ ಸೇರಿದುದು (ಸ್ವರ್ಗ 5/17–18).

(2) ಒಬ್ಬ ರಾಜ. ತನ್ನ ಹಿರಿಯರ ಅಪಮಾನ ಮಾಡಿದ್ದರಿಂದ ನಾಶವಾದನು (ಸಭಾ 22/24).
(3) ಒಬ್ಬ ಅಗ್ನಿ. ಮೂರುದಿನ ಅಗ್ನಿಹೋತ್ರ ಬಿಟ್ಟು ಹೋದರೆ, ಈತನಿಗೆ ಅಷ್ಟಾಕಪಾಲ ಚರುವನ್ನು ಆಹುತಿಕೊಡುವುದು ಕರ್ತವ್ಯ (ವನ 221/29).
(4) ಉತ್ತರ ಭಾರತದ ಒಂದು ಜನಪದ (ಭೀಷ್ಮ 9/65).

**ಉತ್ತರ ಉಲೂಕ** – ಉತ್ತರ ದಿಕ್ಕಿನಲ್ಲಿರುವ ಉಲೂಕ ದೇಶ. ಅದನ್ನು ಅರ್ಜುನನು ಜಯಿಸಿದ್ದನು (ಸಭಾ 27/11).

**ಉತ್ತರಕುರು** – ಜಂಬೂದ್ವೀಪದ ಒಂದು ದೇಶ (ಖಂಡ). ಅದರ ಗಡಿಯವರೇಗೆ ಅರ್ಜುನ ಹೋಗಿದ್ದನು. ಅಲ್ಲಿಂದ ಕಪ್ಪಕಾಣಿಕೆಯಾಗಿ ಅಪಾರ ಧನವನ್ನು ತಂದಿದ್ದನು. ಆ ಭೂಮಿ ಮನುಷ್ಯರಿಗೆ ಅಗಮ್ಯವಾದುದು (ಸಭಾ 28/7–20). ಈ ಉತ್ತರ ಕುರುವರ್ಷ ನೀಲಗಿರಿಯಿಂದ ದಕ್ಷಿಣಕ್ಕೆ ಮೇರುಪರ್ವತದಿಂದ ಉತ್ತರಕ್ಕಿದೆ. ಅಲ್ಲಿ ಸಿದ್ಧ ಪುರುಷರು ವಾಸಿಸುತ್ತಾರೆ. ಅಲ್ಲಿನ ಮರಗಳು ಫಲಪುಷ್ಪಭರಿತವಾಗಿವೆ. ಹೂಗಳು ಸುಗಂಧಿತ ವಾಗಿಯೂ, ಫಲಗಳು ಮಧುರ ಹಾಗೂ ಸರಸ ವಾಗಿಯೂ ಇವೆ. 'ಕ್ಷೀರೀ' ಎಂಬ ಹೆಸರಿನ ವೃಕ್ಷಗಳು ಅಲ್ಲಿ ಷಡ್ರಸಯುಕ್ತ ಅಮೃತಮಯವಾದ ಹಾಲು ಕೊಡುತ್ತವೆ. ಕೆಲವು ಮರಗಳು ಮನೋ ವಾಂಛಿತ ಹಣ್ಣು ಕೊಡುತ್ತವೆ. 'ಕ್ಷೀರ'ದ ಫಲಗಳಲ್ಲಿ ಇಚ್ಛೆಗೆ ಅನುಸಾರವಾಗಿ ವಸ್ತ್ರ ಮತ್ತು ಆಭೂಷಣ ಗಳು ಪ್ರಕಟಗೊಳ್ಳುತ್ತವೆ. ಅಲ್ಲಿ ಮಣಿಗಳಿಂದ ಕೂಡಿದ ಭೂಮಿ ಮತ್ತು ಚಿನ್ನದ ಮರಳು ಇದೆ ಸ್ವರ್ಗಚ್ಯುತರಾದ ಪುಣ್ಯಾತ್ಮರು ಅಲ್ಲಿ ವಾಸಿಸುತ್ತಾರೆ. ಅಲ್ಲಿ ವಾಸಿಸುವವರ ಆಯುಸ್ಸು ಹನ್ನೊಂದು ಸಾವಿರ ವರ್ಷಗಳಾಗಿರುತ್ತವೆ. ಅಲ್ಲಿ ಭಾರುಂಡ ವೆಂಬ ಹೆಸರಿನ ಪಕ್ಷಿಗಳಿರುತ್ತವೆ. ಅವುಗಳು ಮೃತರ ಹೆಣಗಳನ್ನು ಎತ್ತಿ ಕಂದರಗಳಲ್ಲಿ ಹಾಕುತ್ತವೆ (ಭೀಷ್ಮ 7/2–13).

**ಉತ್ತರ ಕೋಸಲ** – ಒಂದು ಭಾರತೀಯ ಜನಪದ. ಅದನ್ನು ಭೀಮಸೇನನು ಗೆದ್ದಿದ್ದನು (ಸಭಾ 30/3).

**ಉತ್ತರ ಜ್ಯೋತಿಷ** – ಪಶ್ಚಿಮದ ಒಂದು ಪ್ರಾಚೀನ ನಗರ. ಅದನ್ನು ನಕುಲನು ಗೆದ್ದಿದ್ದನು (ಸಭಾ 32/11).

**ಉತ್ತರ ದಿಶಾ** – ಗಾಲವನ ಮುಂದೆ ಗರುಡನು ಉತ್ತರ ದೆಸೆಯ ವಿಸ್ತಾರವಾದ ವರ್ಣನೆ ಮಾಡಿದ್ದಾನೆ (ಉದ್ಯೋಗ 111). ಮೂರ್ತಿಸ್ವರೂಪದ ಉತ್ತರ ದಿಶೆಯಿಂದ ಅಷ್ಟಾವಕ್ರನ ಸ್ವಾಗತ (ಅನು 19ರಿಂದ 21).

**ಉತ್ತರ ಪಾಂಚಾಲ** – ಒಂದು ಜನಪದ. ಅಲ್ಲಿ ಪೃಷದನ ಮರಣಾನಂತರ ದ್ರುಪದನು ರಾಜ ನಾದನು (ಆದಿ 129/43). ಮುಂದೆ ಉತ್ತರ ಪಾಂಚಾಲ ಮತ್ತು ಅಹಿಚ್ಛತ್ರದ ಮೇಲೆ ದ್ರೋಣ ನಿಗೆ ಅಧಿಕಾರ ಬಂತು. ಈ ಪ್ರದೇಶ ಗಂಗೆಯ ಉತ್ತರ ದಡದಲ್ಲಿತ್ತು (ಆದಿ 137/70–76).

**ಉತ್ತರ ಪಾರಿಯಾತ್ರ** – ಒಂದು ಪರ್ವತ. ಅಲ್ಲಿ ಅರ್ಜುನನಿಗೋಸ್ಕರ ಶುಭಾಶಂಸನೆ ಮಾಡಲ್ಪಟ್ಟಿತ್ತು (ವನ 313/8).

**ಉತ್ತರಮಾನಸ** – ಒಂದು ತೀರ್ಥ. ಅಲ್ಲಿಗೆ ಯಾತ್ರೆ ಮಾಡಿದರೆ, ಭ್ರೂಣಹತ್ಯೆ ಮಾಡಿದವನೂ ಪಾಪದಿಂದ ಮುಕ್ತನಾಗುತ್ತಾನೆ (ಅನು 25/60).

**ಉತ್ತರಾ** – ಮತ್ಸ್ಯರಾಜನ ಪುತ್ರಿ, ಅಭಿಮನ್ಯುವಿನ ಪತ್ನಿ. ಪರೀಕ್ಷಿತನ ತಾಯಿ (ಆದಿ 95/83–84). ಉತ್ತರೆಯ ಶಿಕ್ಷಣಕ್ಕಾಗಿ, ತನ್ನನ್ನು ಇರಿಸಿಕೊಳ್ಳುವಂತೆ ಅರ್ಜುನನು ವಿರಾಟರಾಜನನ್ನು ಆಗ್ರಹಿಸಿದ್ದನು. "ನೀನು ಉತ್ತರೆಗೆ ನೃತ್ಯ ಶಿಕ್ಷಣ ಕೊಡೆ"ಂದು ವಿರಾಟನು ಹೇಳಿದನು. ಅನಂತರ ಅರ್ಜುನನು ಉತ್ತರೆಗೆ ನೃತ್ಯ ಮತ್ತು ಗಾಯನವನ್ನು ಕಲಿಸಲು ತೊಡಗಿದನು (ವಿರಾಟ 11/8–12). ಉತ್ತರನ ಸಾರಥಿಯಾಗುವಂತೆ ಉತ್ತರೆಯು ಬೃಹನ್ನಲೆ ಯೊಡನೆ ಕೇಳಿಕೊಂಡದ್ದು (ವಿರಾಟ 37/5–19). ಬೃಹನ್ನಲೆಯೊಡನೆ, ಬೊಂಬೆಗಳನ್ನು ರಚಿಸಲು ಕೌರವರ ವಸ್ತ್ರಗಳನ್ನು ಯಾಚಿಸಿದುದು (ವಿರಾಟ 37/28–29). ಅಭಿಮನ್ಯುವಿನೊಂದಿಗೆ ಉತ್ತರೆಯ ವಿವಾಹ (ವಿರಾಟ 72/35). ಪತಿಯ ಮೃತ್ಯುವಿನ ಶೋಕದಿಂದ ದುಃಖಿತಳಾಗಿ ಮೂರ್ಛಿತಳಾದುದು (ದ್ರೋಣ 78/37). ಶ್ರೀಕೃಷ್ಣನಿಂದ ಆಕೆಗೆ ಧೈರ್ಯದ ಆಶ್ವಾಸನೆ (ದ್ರೋಣ 78/40–42). ಯುದ್ಧಸ್ಥಳದಲ್ಲಿ ಮೃತ ಅಭಿಮನ್ಯುವನ್ನು ಕಂಡು ವಿಲಪಿಸಿದುದು (ಸ್ತ್ರೀ 20/4–28). ಅಭಿಮನ್ಯುವಿಗಾಗಿ ಶೋಕಿಸಿದುದು ಮತ್ತು ವ್ಯಾಸರಿಂದ ಸಮಾಧಾನಗೊಳಿಸುವಿಕೆ (ಆಶ್ವ 62/8–12). ಕಾಡಿಗೆ ಹೋಗುವ ಧೃತರಾಷ್ಟ್ರನನ್ನು ಹಿಂಬಾಲಿ

ಸುತ್ತಾ ಸ್ವಲ್ಪ ದೂರ ಹೋದ ಸ್ತ್ರೀಯರಲ್ಲಿ ಉತ್ತರೆಯೂ ಇದ್ದಳು (ಆಶ್ರಮ 15/10).

**ಉತ್ತರಾಪಥ** – ಉತ್ತರ ಭಾರತ (ಶಾಂತಿ 207/43).

**ಉತ್ತೇಜನಿ** – ಸ್ಕಂದನ ಸಹಚಾರಿ ಮಾತೃಕೆ (ಶಲ್ಯ 46/6).

**ಉತ್ಪಲಾವನ** – ಪಂಜಾಬದ ಒಂದು ತೀರ್ಥ. ಅಲ್ಲಿ ವಿಶ್ವಾಮಿತ್ರನು ತನ್ನ ಪುತ್ರನೊಂದಿಗೆ ಯಜ್ಞ ಮಾಡಿದ್ದನು (ವನ 87/15). ಇಲ್ಲಿ ಸ್ನಾನ ಮಾಡಿದುದರ ಫಲ (ಅನು 25/34).

**ಉತ್ಪಲಿನಿ** – ನೈಮಿಷಾರಣ್ಯದ ಸಮೀಪ ಹರಿಯುವ ಒಂದು ನದಿ. ಅರ್ಜುನನು ಅದರ ದರ್ಶನ ಮಾಡಿದ್ದನು (ಆದಿ 214/6).

**ಉತ್ಪಾತಕ** – ಇಲ್ಲಿ ಸ್ನಾನ ಮಾಡಿ ಉಪವಾಸ ಮಾಡಿದರೆ ನರಮೇಧದ ಫಲಪ್ರಾಪ್ತವಾಗುತ್ತದೆ (ಅನು 25/41).

**ಉತ್ಸವಸಂಕೇತ** – (1) ದರೋಡೆಕೋರರ ಗುಂಪು. ಅರ್ಜುನನು ಅವರನ್ನು ಗೆದ್ದಿದ್ದನು (ಸಭಾ 27/16).

(2) ದಕ್ಷಿಣ ದಿಕ್ಕಿನ ಒಂದು ಜನಪದ (ಭೀಷ್ಮ 9/16).

**ಉದಪಾನ ತೀರ್ಥ** – ಸರಸ್ವತೀ ನದಿಯ ನೀರಿನಲ್ಲಿರುವ ಒಂದು ಪ್ರಾಚೀನ ತೀರ್ಥ. ಇದರ ಉತ್ಪತ್ತಿಯ ಕಥೆ (ಶಲ್ಯ 36).

**ಉದಯಗಿರಿ** – ಒಂದು ಪ್ರಾಚೀನ ತೀರ್ಥ. ಅಲ್ಲಿ ಒಂದು ದಿನ ಸಂಧ್ಯೋಪಾಸನೆ ಮಾಡಿದರೆ ಹನ್ನೆರಡು ವರ್ಷ ಸಂಧ್ಯೋಪಾಸನೆ ಮಾಡಿದ ಫಲ ಸಿಗುತ್ತದೆ (ವನ 84/93).

**ಉದಯಾಚಲ** – ಉದಯಗಿರಿ (ದ್ರೋಣ 184/47).

**ಉದರಶಾಂಡಿಲ್ಯ** – ಇಂದ್ರಸಭೆಯಲ್ಲಿರುವ ಒಬ್ಬ ಋಷಿ (ಸಭಾ 7/13).

**ಉದರಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/63).

**ಉದಾನವಾಯು** – ಪ್ರಾಣವಾಯುವಿನ ಐದು ಭೇದಗಳಲ್ಲಿ ಒಂದು (ವನ 213/12).

**ಉದಾಪೇಕ್ಷಿ** – ವಿಶ್ವಾಮಿತ್ರನ ಒಬ್ಬ ಬ್ರಹ್ಮಜ್ಞಾನಿ ಪುತ್ರ (ಅನು 4/59).

**ಉದ್ದಾಲಕ** – ಒಬ್ಬ ಋಷಿ. ಆತ ಜನಮೇಜಯನ ಸರ್ಪಯಜ್ಞದ ಸದಸ್ಯನಾಗಿದ್ದನು (ಆದಿ 52/7). ಈತನೇ ಆಯೋದ ಧೌಮ್ಯನ ಶಿಷ್ಯ ಆರುಣೀ ಪಾಂಚಾಲ. ಮುಂದೆ ಈತ ಉದ್ಧಾಲಕನೆಂಬ ಹೆಸರಿನಿಂದ ಪ್ರಸಿದ್ಧನಾದನು. ಈತ ಇಂದ್ರನ ಸಭೆಯಲ್ಲೂ ಉಪಸ್ಥಿತನಾಗಿರುತ್ತಾನೆ (ಸಭಾ 7/12). ಉದ್ದಾಲಕನ ಪುತ್ರನ ಹೆಸರು ಶ್ವೇತಕೇತು ಮತ್ತು ಪುತ್ರಿಯ ಹೆಸರು ಸುಜಾತೆ ಎಂದಾಗಿತ್ತು. ಉದ್ದಾಲಕನು ತನ್ನ ಮಗಳನ್ನು ತನ್ನ ಪ್ರಿಯಶಿಷ್ಯ ಕಹೋಳನಿಗೆ ಮದುವೆಮಾಡಿ ಕೊಟ್ಟಿದ್ದನು. ಆಕೆಯ ಗರ್ಭದಿಂದ ಅಷ್ಟಾವಕ್ರನ ಜನ್ಮವಾಯಿತು (ವನ 132/1–9). ಉದ್ದಾಲಕನ ಯಜ್ಞದಲ್ಲಿ, ಆತ ಸ್ಮರಿಸಿದಾಗ, ಸರಸ್ವತಿ ನದಿಯು ಪ್ರಕಟವಾದಳು. ಆಗ ಆಕೆಯ ಧಾರೆಯ ಹೆಸರು 'ಮನೋರಮಾ' ಎಂದಾಗಿತ್ತು (ಶಲ್ಯ 38/22–25). ಈತನು ತನ್ನ ಮಗ ಶ್ವೇತಕೇತುವನ್ನು, ಆತ ಬ್ರಾಹ್ಮಣರ ಪ್ರತಿಯಾಗಿ ಮಾಡಿದ ಕಪಟ ವ್ಯವಹಾರಕ್ಕಾಗಿ, ಹೊರಗೆ ಹಾಕಿದನು (ಶಾಂತಿ 57/10).

**ಉದ್ದಾಲಕಿ** – ಪ್ರಾಚೀನ ಋಷಿ. ನಚಿಕೇತನ ತಂದೆ (ಅನು 71/2–3). ನಚಿಕೇತನ ಮೇಲೆ ಸಿಟ್ಟಾಗಿ ಈತ ಶಾಪಕೊಟ್ಟದ್ದು (ಅನು 71/7). ಪುತ್ರಶೋಕದಿಂದ ಸಂತಪ್ತನಾಗಿ ಈತ ಪೃಥ್ವಿಯ ಮೇಲೆ ಬಿದ್ದದ್ದು (ಅನು 71/9). ಸತ್ತು ಬದುಕಿದ ಪುತ್ರನೊಡನೆ ಆತನ ವಿಷಯ ಕೇಳಿದುದು (ಅನು 71/13).

**ಉದ್ಧವ** – ಒಬ್ಬ ಯಾದವ. ಶ್ರೀಕೃಷ್ಣನ ಸ್ನೇಹಿತ ಮತ್ತು ಮಂತ್ರಿ. ಮಹಾಭಾರತದಲ್ಲಿ ಈತನ ಪರಿಚಯ ಹೀಗಿದೆ – ಉದ್ಧವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/18). ಈತ ರೈವತಕ ಪರ್ವತದ ಉತ್ಸವದಲ್ಲಿ ಭಾಗಿಯಾಗಿದ್ದನು (ಆದಿ 218/11). ಬೃಹಸ್ಪತಿಯ ಶಿಷ್ಯನೂ ಮಹಾಬುದ್ಧಿವಂತನೂ ಆದ ಉದ್ಧವ ಸುಭದ್ರೆಗೋಸ್ಕರ ವರದಕ್ಷಿಣೆ ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಹೋಗಿದ್ದನು (ಆದಿ 220/30). ಶಾಲ್ವನು ಆಕ್ರಮಿಸಿದಾಗ ಈತನಿಂದ ದ್ವಾರಕಾ ನಗರದ ರಕ್ಷಣೆ (ವನ 15/9). ಈತ ವೃಷ್ಣಿ ವಂಶದವರಿಗೆ ವಿದಾಯ ಹೇಳಿ ತನ್ನ ತೇಜಸ್ಸಿನಿಂದ ಪೃಥ್ವಿ ಮತ್ತು ಆಕಾಶಗಳನ್ನು ವ್ಯಾಪಿಸುತ್ತಾ, ಪ್ರಭಾಸಕ್ಷೇತ್ರದಿಂದ ಎಲ್ಲಿಗೋ ಹೊರಟು ಹೋದನು. ವೃಷ್ಣಿಕುಲದ ಭಾವೀ ವಿನಾಶವನ್ನು

ತಿಳಿದಿದ್ದ ಕೃಷ್ಣನು ಇವನನ್ನು ತಡೆಯಲಿಲ್ಲ (ಮೌಸಲ 3/11–13).

**ಉದ್ಭವ** – ಒಬ್ಬ ರಾಜ. ಇವನಿಗೆ ಪಾಂಡವ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸ ಲ್ಪಟ್ಟಿತ್ತು (ಉದ್ಯೋಗ 4/23).

**ಉದ್ಭಸ** – ಉದ್ಭಸ ದೇಶದ ಯೋಧ. ಧೃಷ್ಟದ್ಯುಮ್ನ ನಿರ್ಮಿತ ಕ್ರೌಂಚವ್ಯೂಹದ ಎಡ ರೆಕ್ಕೆಯ ಸ್ಥಾನದಲ್ಲಿ, ನಕುಲಸಹದೇವರು ಈತ ನೊಂದಿಗೆ ನಿಂತಿದ್ದರು (ಭೀಷ್ಮ 50/53).

**ಉದ್ಭಿದ್** – ಕುಶದ್ವೀಪದ ಪ್ರಥಮವರ್ಷ (ಖಂಡ)ದ ಹೆಸರು (ಭೀಷ್ಮ 12/12).

**ಉದ್ಯೋಗಪರ್ವ** – ಮಹಾಭಾರತದ ಒಂದು ಪ್ರಧಾನ ಪರ್ವ.

**ಉದ್ರಪಾರಕ** – ಧೃತರಾಷ್ಟ್ರ ನಾಗಕುಲದಲ್ಲಿ ಹುಟ್ಟಿದ ಒಬ್ಬ ಸರ್ಪ. ಆತ ಜನಮೇಜಯನ ಸರ್ಪ ಯಜ್ಞದಲ್ಲಿ ದಗ್ಧನಾದನು (ಆದಿ 57/17).

**ಉದ್ವಹ** – (1) ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ಕ್ಷತ್ರಿಯ ರಾಜ (ಆದಿ 67/64).

(2) ವಾಯುವಿನ ಏಳು ಭೇದಗಳಲ್ಲಿ ಮೂರನೆ ಯದು (ಶಾಂತಿ 328/40).

**ಉನ್ಮಾಥ** – ಯಮರಾಜನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಪ್ರಮಾಥನೆಂದಾಗಿತ್ತು (ಶಲ್ಯ 45/30).

**ಉನ್ಮಾದ** – ಪಾರ್ವತಿಯಿಂದ ಸ್ಕಂದನಿಗೆ ಕೊಡ ಲ್ಪಟ್ಟ ಪಾರ್ಷದರಲ್ಲಿ ಒಬ್ಬ (ಶಲ್ಯ 45/41).

**ಉನ್ಮುಚ** – ದಕ್ಷಿಣ ದಿಕ್ಕಿನಲ್ಲಿರುವ ಒಬ್ಬ ಬ್ರಹ್ಮರ್ಷಿ (ಶಾಂತಿ 208/28).

**ಉಪಕೀಚಕ** – ಕಾಲೇಯ ರಾಕ್ಷಸರ ಅಂಶದಿಂದ ಹುಟ್ಟಿದವನು. ಕೀಚಕನ ತಮ್ಮ. ಕೀಚಕನು ಕೊಲ್ಲಲ್ಪಟ್ಟಾಗ, ದ್ರೌಪದಿಯನ್ನು ಕಟ್ಟಿ ಶ್ಮಶಾನಕ್ಕೆ ತೆಗೆದುಕೊಂಡುಹೋಗಿದ್ದ. ಈ ಸಹೋದರರು ನೂರೈದು ಮಂದಿ ಇದ್ದರು. ಭೀಮಸೇನನಿಂದ ಇವರ ವಧೆ (ವಿರಾಟ 23/5–28).

**ಉಪಕೃಷ್ಣಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/51).

**ಉಪಗಹನ** – ವಿಶ್ವಾಮಿತ್ರ ಮಹರ್ಷಿಯ ಒಬ್ಬ ಬ್ರಹ್ಮಜ್ಞಾನಿ ಪುತ್ರ (ಅನು 4/56).

**ಉಪಗಿರಿ** – ಉತ್ತರ ದಿಕ್ಕಿನ ಒಂದು ಪರ್ವತ ರಾಜ್ಯ (ಸಭಾ 27/3).

**ಉಪಚಿತ್ರ** – ಧೃತರಾಷ್ಟ್ರನ ಒಬ್ಬ ಮಗ (ಆದಿ 67/95). (ಭೀಷ್ಮರಲ್ಲಿ 51/8 ಕೂಡಾ ಈತನ ಹೆಸರು ಬಂದಿದೆ). ಭೀಮಸೇನನಿಂದ ಈತನ ವಧೆ (ದ್ರೋಣ 136/22).

**ಉಪಜಲಾ** – ಒಂದು ನದಿ. ಅಲ್ಲಿ ಯಜ್ಞಮಾಡಿ ಉಶೀನರನು ಇಂದ್ರನಿಗಿಂತಲೂ ಉಚ್ಚಸ್ಥಾನ ಪಡೆದಿದ್ದನು (ವನ 130/31).

**ಉಪತ್ಯಕ** – ಒಂದು ಭಾರತೀಯ ಜನಪದ. ಅದು ಪರ್ವತದ ಕಂದರದಲ್ಲಿ ನೆಲಸಿದೆ (ಭೀಷ್ಮ 9/55).

**ಉಪನಂದ** – (1) ಧೃತರಾಷ್ಟ್ರನ ಒಬ್ಬ ಮಗ (ಆದಿ 67/96). ಭೀಮಸೇನನಿಂದ ಈತನ ವಧೆ (ಕರ್ಣ 51/19).

(2) ನಾಗಲೋಕದ ಒಬ್ಬ ನಾಗ (ಉದ್ಯೋಗ 103/12).

(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ಉಪಪ್ಲವ್ಯ** – ವಿರಾಟರಾಜ್ಯದ ಒಂದು ಉಪನಗರ. ಅದು ರಾಜಧಾನಿಯ ಹತ್ತಿರದಲ್ಲೇ ಇದ್ದಿತು. ಅಜ್ಞಾತವಾಸದ ಬಳಿಕ ಪಾಂಡವರು ಇಲ್ಲಿ ವಾಸಿಸಿ ದ್ದರು (ವಿರಾಟ 72/14). (ಇದರ ಹೆಸರು ಅನೇಕ ಬಾರಿ ಬಂದಿದೆ).

**ಉಪಮನ್ಯು** – (1) ಆಯೋಧ್ಯಧೌಮ್ಯ ಋಷಿಯ ಶಿಷ್ಯ (ಆದಿ 3/22–33). ಈತನ ಗುರುಭಕ್ತಿ (ಆದಿ 3/35–49). ಈತ ಎಕ್ಕೆಯ ಎಲೆ ತಿಂದು, ಕುರುಡನಾಗಿ, ಬಾವಿಗೆ ಬಿದ್ದುದು ಮತ್ತು ಗುರುವಿನ ಆದೇಶದಂತೆ ಅಶ್ವಿನೀಕುಮಾರರನ್ನು ಸ್ತುತಿಸಿದುದು (ಆದಿ 3/50–68). ಈತನಿಗೆ ಗುರುವಿನ ಅಶೀರ್ವಾದ (ಆದಿ 3/76–77).

(2) ಸತ್ಯಯುಗದ ಮಹಾಯಶಸ್ವೀ ಋಷಿ ವ್ಯಾಘ್ರ ಪಾದನ ಪುತ್ರ ಧೌಮ್ಯನ ಅಣ್ಣ (ಅನು 14/12; ಅನು 14/55). ಈತನ ಆಶ್ರಮದ ವರ್ಣನೆ (ಅನು 14/45–63). ಶ್ರೀಕೃಷ್ಣನು ಈತನಿಗೆ ನಮಸ್ಕರಿಸಿದುದು. ಪುತ್ರ ಪ್ರಾಪ್ತಿಯಾಗುವಂತೆ ಈತನು ಅನುಗ್ರಹ ಕೊಡುತ್ತಾ ಶಿವನ ಆರಾಧನೆ ಮಾಡಲು ಹೇಳಿದುದು ಮತ್ತು ಶಿವನ ಮಹಿಮೆ ಯನ್ನು ತಿಳಿಸಿದುದು (ಅನು 14/64–110). ಈತ ಬಾಲ್ಯದಲ್ಲಿ ತಾಯಿಯೊಡನೆ ಹಾಲನ್ನವನ್ನು

ಬಯಸಿದನು. ತಾಯಿ ಹಿಟ್ಟನ್ನು ಕಲಸಿದ ನೀರನ್ನು ಸಹೋದರರಿಬ್ಬರಿಗೂ ಹಾಲೆಂದು ಕೊಟ್ಟಳು. ಅನಂತರ ಈತ ತಂದೆಯೊಂದಿಗೆ ಯಾರೋ ಯಜ್ಞಕರ್ತನ ಬಳಿಗೆ ಹೋಗಿ ಹಾಲಿನ ರುಚಿಯನ್ನು ಸವಿದನು ಮತ್ತು ಮನೆಗೆ ಬಂದು ತಾಯಿಯೊಡನೆ ಹೇಳಿದನು 'ನೀನು ಯಾವುದನ್ನು ಹಾಲೆಂದು ಕೊಟ್ಟೆಯೋ ಅದು ಹಾಲಾಗಿರಲಿಲ್ಲ'. ತಾಯಿ ಹೇಳಿದಳು, 'ಭಗವಂತ ನಾದ ಶಿವನ ಕರುಣೆ ಇಲ್ಲವಾದರೆ ಹಾಲನ್ನವೆ ಲ್ಲಿಂದ?' ಆಗ ಈತ ಕೇಳಿದ 'ಮಹಾದೇವ ನೆಲ್ಲಿದ್ದಾನೆ?' ಆಗ ತಾಯಿ ಶಿವನ ಮಹಿಮೆ ತಿಳಿಸಿದಳು. ಇದರಿಂದಾಗಿ ಆತ ಶಿವಾರಾಧನೆಯಲ್ಲಿ ಪ್ರವೃತ್ತನಾದನು (ಅನು 14/115–167). ಈತನ ತಪಸ್ಸು, ಶಿವಭಕ್ತಿ, ಸ್ತುತಿ, ಪ್ರಾರ್ಥನೆ, ಶಿವದರ್ಶನ ಮತ್ತು ವರಪ್ರಾಪ್ತಿ (ಅನು 14/168–377). ಈತ ಶ್ರೀಕೃಷ್ಣನೊಡನೆ ತಂಡಿಮುನಿ ಮಾಡಿದ ಶಿವಸ್ತುತಿಯನ್ನು ವರ್ಣಿಸಿ ದುದು (ಅನು 16). ಈತ ಶ್ರೀಕೃಷ್ಣನಿಗೆ ಶಿವಸಹಸ್ರ ನಾಮ ಸ್ತೋತ್ರವನ್ನು ವರ್ಣಿಸಿದುದು (ಅನು 17).

**ಉಪಯಾಜ** – ಪರಮ ಶಾಂತ, ಬ್ರಹ್ಮ ಸಮಾನ ನಾದ ಪ್ರಭಾವಶಾಲಿ, ಸಂಹಿತೆಯ ಸ್ವಾಧ್ಯಾಯ ದಲ್ಲಿ ತತ್ಪರ, ಕಶ್ಯಪ ಗೋತ್ರದಲ್ಲಿ ಹುಟ್ಟಿದವನು, ಸೂರ್ಯನ ಭಕ್ತ ಮತ್ತು ಒಬ್ಬ ಶ್ರೇಷ್ಠ ಮಹರ್ಷಿ. ಈತ ಯಾಜನ ಸಹೋದರನಾಗಿದ್ದನು (ಆದಿ 166/7–10). ಈತನಿಂದ ದ್ರೋಣವಿನಾಶಕವಾದ ಪುತ್ರ ಪ್ರಾಪ್ತಿಯನ್ನು ಅಪೇಕ್ಷಿಸಿದ ದ್ರುಪದನ ಕೋರಿಕೆಯ ಅಸ್ವೀಕಾರ. ದ್ರುಪದನಿಂದ ಒಂದು ಅರ್ಬುದ ಧೇನುಗಳ ಕೊಡುಗೆಯ ಪ್ರಲೋಭನೆ (ಆದಿ 166/10–12). ಈತ ದ್ರುಪದನ ಪ್ರಾರ್ಥನೆ ಯನ್ನು ತಿರಸ್ಕರಿಸಿದುದು ಮತ್ತು ದ್ರುಪದನಿಗೆ ತನ್ನ ಅಭೀಷ್ಟ ಸಿದ್ಧಿಗಾಗಿ ಯಾಜನ ಬಳಿಗೆ ಹೋಗಲು ಆದೇಶವಿತ್ತುದು (ಆದಿ 166/13–20). ಈತನಿಂದ ಯಾಜನ ಹೀನವೃತ್ತಿಯ ವರ್ಣನೆ (ಆದಿ 166/15–19). ದ್ರೋಣವಿನಾಶಕ ಪುತ್ರೇಷ್ಟಿಯಲ್ಲಿ ಸಹಯೋಗ ಕೊಡುವಂತೆ ಈತ ನಿಗೆ ಯಾಜನಿಂದ ಪ್ರೇರಣೆ (ಆದಿ 166/32). [ಯಾಜ ಮತ್ತು ] ಉಪಯಾಜರ ತಪಸ್ಸಿನಿಂದ ದ್ರುಪದನಿಗೆ ದ್ರೌಪದೀ ಮತ್ತು ಧೃಷ್ಟದ್ಯುಮ್ನರ ಪ್ರಾಪ್ತಿ (ಸಭಾ 70/45).

**ಉಪರಿಚರವಸು** – ಪುರುವಂಶದ ಒಬ್ಬ ಪ್ರಾಚೀನ ರಾಜ. ಆತ ಸದಾ ಧರ್ಮ ಪರಾಯಣನಾಗಿದ್ದನು (ಆದಿ 63/1). ಇಂದ್ರನ ಆಜ್ಞೆಯಿಂದ ಆತ ಚೇದಿರಾಜ್ಯವನ್ನು ಸ್ವೀಕಾರ ಮಾಡಿದನು (ಆದಿ 62/2). ಇಂದ್ರನಿಂದ ಈತನ ಪ್ರತಿಯಾಗಿ ಮತ್ತು ಚೇದಿ ದೇಶದ ಕುರಿತು ಪ್ರಶಂಸೆ (ಆದಿ 63/8–11). ದೇವರಾಜನಿಂದ ಈತ ಸರ್ವಜ್ಞನಾಗುವಂತೆ ವರದಾನ (ಆದಿ 63/12). ಈತನಿಗೆ ದೇವೇಂದ್ರ ನಿಂದ ದಿವ್ಯವಿಮಾನ, ಬಿದಿರಿನ ಕೋಲು ಮತ್ತು ವೈಜಯಂತಿ ಮಾಲೆಯ ಉಡುಗೊರೆ (ಆದಿ 63/13–17). ಬಿದಿರ ಬೆತ್ತವನ್ನು ಭೂಮಿಯಲ್ಲಿ ನೆಟ್ಟು, ಇಂದ್ರಪೂಜೆ ಮಾಡುವ ರೂಢಿಯನ್ನು ಈತ ಆಚರಣೆಗೆ ತಂದುದು (ಆದಿ 63/18–19). ಹಂಸದ ಸ್ವರೂಪಧರಿಸಿ ಇಂದ್ರ ಈತನ ಪೂಜೆ ಯನ್ನು ಸ್ವೀಕರಿಸಿದುದು ಮತ್ತು ತನ್ನ ಪೂಜೆಯ ಮಹತ್ವ ಹೇಳಿದುದು (ಆದಿ 63/22–25). ಚೇದಿದೇಶದಲ್ಲಿದ್ದುಕೊಂಡು, ಉಪರಿಚರವಸುವು ಈ ಭೂಮಂಡಲವನ್ನು ಧರ್ಮಪೂರ್ವಕ ಪರಿ ಪಾಲಿಸಿದುದು (ಆದಿ 63/28). ಈತನಿಗೆ ಬೃಹ ದ್ರಥ, ಪ್ರತ್ಯಗ್ರಹ, ಕುಶಾಂಬು, ಮಾವೆಲ್ಲ ಮತ್ತು ಯದು ಎಂಬ ಐದು ಮಂದಿ ಪುತ್ರರಿದ್ದರು (ಆದಿ 63/30–31). ಈತನಿಗೆ 'ಉಪರಿಚರ' ನೆಂದು ಹೆಸರಾಗಲು ಕಾರಣ (ಆದಿ 63/34). ಈತನ ರಾಜಧಾನಿಯ ಸಮೀಪ 'ಶುಕ್ತಿಮತಿ' ಎಂಬ ಪ್ರಸಿದ್ಧ ನದಿ ಹರಿಯುತ್ತಿತ್ತು (ಆದಿ 63/35). ಈತನಿಂದ ಕೋಲಾಹಲ ಪರ್ವತದ ಮೇಲೆ ಕಾಲಿನಿಂದ ಪ್ರಹಾರ (ಆದಿ 63/36) ಶುಕ್ತಿಮತಿಯ ಪುತ್ರಿ ಗಿರಿಕಾಳೊಂದಿಗೆ ಈತ ಪಾಣಿಗ್ರಹಣ (ಆದಿ 63/39). ಪಿತೃಗಳ ಆಜ್ಞಾ ಪಾಲನೆ ಮಾಡುವುದಕ್ಕಾಗಿ, ಹಿಂಸ್ರಪಶುಗಳನ್ನು ಕೊಲ್ಲಲು, ಈತನ ಅರಣ್ಯಕ್ಕೆ ಹೋದುದು (ಆದಿ 63/41–42). ತನ್ನ ಪತ್ನಿ ಗಿರಿಕಾಳಿಗಾಗಿ ಶ್ಯೇನ ಪಕ್ಷಿಯ ಮೂಲಕ ತನ್ನ ವೀರ್ಯ ಕಳುಹಿಸಿದುದು (ಆದಿ 63/54). ಗೃಧ್ರಗಳ ಪರಸ್ಪರ ಯುದ್ಧದಿಂದ, ಈತನ ವೀರ್ಯ ಯಮುನೆಯಲ್ಲಿ ಬಿದ್ದುದು (ಆದಿ 63/58). ಯಮುನೆಯಲ್ಲಿ ಬಿದ್ದ ಈ ವೀರ್ಯ ಮತ್ಸ್ಯರೂಪಧಾರಿಣಿ ಅದ್ರಿಕೆಯೆಂಬ ಅಪ್ಸರಸಿಯಿಂದ ಸ್ವೀಕರಿಸಲ್ಪಟ್ಟು ಆಕೆಯಿಂದ 'ಸತ್ಯವತಿ' ಮತ್ತು 'ಮತ್ಸ್ಯ'ರಾಜನ ಜನನ (ಆದಿ 63/58–61). ಮೀನಿನ ಹೊಟ್ಟೆಯಿಂದ ಹುಟ್ಟಿದ

ಮತ್ಸ್ಯನೆಂಬ ಬಾಲಕನನ್ನು ಈತ ಸ್ವೀಕರಿಸಿದುದು ಮತ್ತು ಸತ್ಯವತಿಯನ್ನು ಅಂಬಿಗನಿಗೆ ಒಪ್ಪಿಸಿದುದು (ಆದಿ 63/63-67). ಯಮನ ಸಭೆಯಲ್ಲಿ ಈತ ಇರುತ್ತಾನೆ (ಸಭಾ 8/20). ಈತ ಇಂದ್ರನ ಸ್ನೇಹಿತ, ನಾರಾಯಣನ ಭಕ್ತ, ಧರ್ಮಾತ್ಮ, ಪಿತೃ ಭಕ್ತ ಮತ್ತು ಆಲಸ್ಯರಹಿತನಾಗಿದ್ದನು. ನಾರಾಯಣ ದೇವರ ವರದಿಂದ ಈತನಿಗೆ ಸಾಮ್ರಾಜ್ಯ ಪ್ರಾಪ್ತ ವಾಗಿತ್ತು. ಈತ ವೈಷ್ಣವ ಶಾಸ್ತ್ರಾನುಸಾರ ಭಗವಂತನ ಪೂಜೆ ಮಾಡುತ್ತಿದ್ದನು. ಯಜ್ಞ ಶೇಷದ ಅನ್ನವನ್ನು ಉಣ್ಣುವವ, ಸತ್ಯಪರಾಯಣ ಮತ್ತು ಅಹಿಂಸಕನಾಗಿದ್ದನು. ಈತ ಸರ್ವಸ್ವ ವನ್ನೂ ಭಗವಂತನಿಗೆ ಅರ್ಪಿಸಿದ್ದನು. ಇವನನ್ನು ಇಂದ್ರನು ಒಂದೇ ಹಾಸಿಗೆ ಮತ್ತು ಆಸನದಲ್ಲಿ ತನ್ನ ಜೊತೆ ಕುಳ್ಳಿರಿಸಿಕೊಳ್ಳುತ್ತಿದ್ದನು (ಶಾಂತಿ 335/17-26). ಈತನ ಯಜ್ಞಾರಂಭ (ಶಾಂತಿ 336/5). ಈತನ ಯಜ್ಞ ಸಮಾಪ್ತಿ (ಶಾಂತಿ 336/61). ಅಜ ಶಬ್ದಕ್ಕೆ ಆಡೆಂದು ಹೇಳಿದುದ ರಿಂದ, ಋಷಿಗಳ ಶಾಪದ ಪರಿಣಾಮವಾಗಿ ಈತನಿಂದ ಪಾತಾಳ ಪ್ರವೇಶ (ಶಾಂತಿ 337/13-16). ದೇವತೆಗಳ ಮೂಲಕ ಇವನಿಗೆ ವರ ಪ್ರಾಪ್ತಿ (ಶಾಂತಿ 337/24-27). ಭಗವತ್ಕೃಪೆಯಿಂದ ಗರುಡನು ಈತನನ್ನು ಆಕಾಶಚಾರಿಯಾಗಿ ಮಾಡಿ ದನು (ಶಾಂತಿ 337/37). ಈತ ಬ್ರಹ್ಮಲೋಕಕ್ಕೆ ಹೋದುದು (ಶಾಂತಿ 337/38).

**ಉಪವೇಣಾ** – ಒಂದು ನದಿ. ಆಕೆ ಅಗ್ನಿಯ ತಾಯಿಯೆಂದು ಹೇಳಲ್ಪಡುತ್ತಾಳೆ (ಕೆಲವರ ಅಭಿಪ್ರಾಯದಂತೆ ಇದು ಪ್ರಾಯಶಃ ದಕ್ಷಿಣ ಭಾರತದ ಕೃಷ್ಣವೇಣಾ ಅಥವಾ ಕೃಷ್ಣಾ ಎಂಬ ಹೆಸರಿನ ನದಿಯ ಒಂದು ಶಾಖೆಯಾಗಿದೆ) (ವನ 222/14)

**ಉಪಶ್ರುತಿ** – ಉತ್ತರಾಯಣದ ಅಧಿಷ್ಠಾತ್ರಿ ದೇವಿ. ಇವಳೇ ಕಮಲನಾಳದ ಗ್ರಂಥಿಯಲ್ಲಿ, ಇಂದ್ರಾಣಿಗೆ ಇಂದ್ರನ ದರ್ಶನ ಮಾಡಿಸಿದಳು (ಆದಿ 166/56). ಈಕೆಯ ಸಹಾಯದಿಂದ ಇಂದ್ರನೊಡನೆ ಶಚಿಯ ಭೇಟಿ (ಉದ್ಯೋಗ 14/12-13).

**ಉಪಸುಂದ** – ನಿಕುಂಭನ ಮಗ ಸುಂದನ ಸಹೋದರ. ಇವರಿಬ್ಬರೂ ಭಯಂಕರರು ಮತ್ತು ಕ್ರೂರಹೃದಯಿಗಳಾಗಿದ್ದರು (ಆದಿ 208/2-3). ಈ ಇಬ್ಬರು ಸಹೋದರರ ಪರಸ್ಪರ ಪ್ರೇಮದ ವರ್ಣನೆ (ಆದಿ 208/4-6). ತ್ರಿಭುವನಗಳನ್ನು ಜಯಿಸುವುದಕ್ಕಾಗಿ, ವಿಂಧ್ಯಪರ್ವತದ ಮೇಲೆ ಇವರಿಬ್ಬರ ಉಗ್ರತಪಸ್ಸು (ಆದಿ 208/7). ಇವರಿಬ್ಬರ ತಪಸ್ಸಿಗೆ ದೇವತೆಗಳು ಅಡ್ಡಿಯನ್ನುಂಟು ಮಾಡಿದುದು (ಆದಿ 208/11). ತನ್ನ ಸಹೋ ದರನ ಹೊರತು ಅನ್ಯರಿಂದ ಮರಣ ಬಾರದಂತೆ, ಇವರಿಬ್ಬರಿಗೂ ಬ್ರಹ್ಮನಿಂದ ವರದಾನ (ಆದಿ 208/24-25). ಮೂರು ಲೋಕಗಳಲ್ಲೂ ಇವ ರಿಂದ ಅತ್ಯಾಚಾರ (ಆದಿ 209). ತಿಲೋತ್ತಮೆಯ ಕಾರಣದಿಂದಾಗಿ ಈ ಇಬ್ಬರು ಸಹೊದರರು ಹೋರಾಡಿ, ಗದಾಯುದ್ಧದಲ್ಲಿ ಸತ್ತರು (211/19).

**ಉಪಾವರ್ತ್ಯ** – ಉಪಾವರ್ತನವೆಂದರೆ ದಣಿವಾ ರಿಸಿಕೊಳ್ಳಲು ಕುದುರೆಗಳನ್ನು ನೆಲದ ಮೇಲೆ ಹೊರಳಾಡಿಸುವುದು. ಆಯಾಸ ಪರಿಹಾರಕ್ಕೆ ಕುದುರೆಗಳು ನೆಲದ ಮೇಲೆ ಹೊರಳಾಡುವುದು ಪ್ರಸಿದ್ಧವಾಗಿದೆ (ದ್ರೋಣ 100).

**ಉಪಾವೃತ್ತ** – ಭಾರತ ವರ್ಷದ ಒಂದು ಜನಪದ (ಭೀಷ್ಮ 9/48).

**ಉಪಾಸಂಗ** – ಕುದುರೆಗಳೂ ಆನೆಗಳೂ ಒಯ್ಯುವ ಬತ್ತಳಿಕೆಗಳು ಎಂದು ವ್ಯಾಖ್ಯಾನಕಾರರ ಅಭಿಪ್ರಾಯ (ಉದ್ಯೋಗ 155 ಅಧ್ಯಾಯ).

**ಉಪೇಂದ್ರ** – ವಿಷ್ಣು ಭಗವಂತನ ಒಂದು ಹೆಸರು (ಅನು 149/30).

**ಉಪೇಂದ್ರಾ** – ಒಂದು ನದಿ. ಅದರ ನೀರನ್ನು ಭಾರತದ ಜನರು ಕುಡಿಯುತ್ತಾರೆ.

**ಉಮಾ** – ಪಾರ್ವತಿ ದೇವಿ (ವನ 37/33). (ಪಾರ್ವತಿ – ಶಬ್ದ ನೋಡಿರಿ).

**ಉಮ್ಲೋಚಾ** – ಒಬ್ಬ ಅಪ್ಸರೆ. ಆಕೆ ಅರ್ಜುನನ ಜನ್ಮೋತ್ಸವದಲ್ಲಿ ಹಾಡಲು-ಕುಣಿಯಲು ಇತರ ಅಪ್ಸರೆಯರೊಂದಿಗೆ ಬಂದಿದ್ದಳು (ಆದಿ 122/65).

**ಉರಗ** – ಭಾರತದ ಜನಪದ (ಭೀಷ್ಮ 9/54).

**ಉರಗಾ** – ಉತ್ತರ ಭಾರತದ ಒಂದು ಪರ್ವತೀಯ ರಾಜಧಾನಿ. ಅಲ್ಲಿನ ರಾಜಾ ರೋಚಮಾನವನ್ನು ಅರ್ಜುನನು ಸೋಲಿಸಿದ್ದನು (ಸಭಾ 27/19).

**ಉರ್ವರಾ** – ಕುಬೇರ ಭವನದ ಒಬ್ಬ ಅಪ್ಸರೆ. ಈಕೆ ಅನ್ಯ ನರ್ತಕಿಯರ ಜೊತೆಯಲ್ಲಿ ಅಷ್ಟಾ ವಕ್ರನ ಸ್ವಾಗತದಲ್ಲಿ ನೃತ್ಯ ಮಾಡಿದ್ದಳು (ಅನು

19/44).

**ಉರ್ವಶಿ** – (1) ಪ್ರಸಿದ್ಧಳಾದ ಒಬ್ಬ ಸರ್ವಶ್ರೇಷ್ಠ ಅಪ್ಸರೆ (ಆದಿ 74/68; ವನ 43/29). ಉರ್ವಶಿಯ ಗರ್ಭದಲ್ಲಿ ರಾಜಾ ಪುರೂರವನಿಂದ ಆರು ಪುತ್ರರು ಜನ್ಮವೆತ್ತಿದರು. ಆಯು, ಧೀಮಾನ್, ಅಮಾವಸು, ದೃಢಾಯು, ವನಾಯು ಮತ್ತು ಶತಾಯು (ಆದಿ 75/24–25). ಈಕೆ ಸ್ವರ್ಗದ ಪ್ರಖ್ಯಾತ ಹನ್ನೊಂದು ಮಂದಿ ಅಪ್ಸರೆಯರಲ್ಲಿ ಹನ್ನೊಂದನೆಯವಳು. ಈಕೆ ಅರ್ಜುನನ ಜನ್ಮೋತ್ಸವದಲ್ಲಿ ಹಾಡುಹಾಡಿದ್ದಳು (ಆದಿ 122/66). ಕುಬೇರನ ಸಭೆಯಲ್ಲಿ ನೃತ್ಯ–ಗಾನ ಮಾಡುವ ಅಪ್ಸರೆಯರಲ್ಲಿ ಈಕೆಯೂ ಇದ್ದಾಳೆ (ಸಭಾ 10/11). ಈಕೆ ಅರ್ಜುನನ ಬಳಿ ಹೋಗುವಂತೆ ಚಿತ್ರಸೇನನ ಸೂಚನೆ (ವನ 45/14–16). ಈಕೆ ಕಾಮಪೀಡಿತಳಾಗಿ ಅರ್ಜುನನ ಬಳಿಗೆ ಹೋದುದು (ವನ 46/16). ಉರ್ವಶಿ ಅರ್ಜುನನ ಬಳಿಗೆ ಹೋಗಿ ತನ್ನ ಆಗಮನದ ಕಾರಣ ತಿಳಿಸಿದುದು ಮತ್ತು ತನ್ನ ಕಾಮ ಪರವಶತೆಯನ್ನು ಪ್ರಕಟಿಸಿದುದು (ವನ 46/22–35). 'ಸ್ವರ್ಗದ ಅಪ್ಸರೆಯರು ಯಾರಿಂದಲೂ ಮರೆಯಾಗಿರಬೇಕಾಗಿಲ್ಲ, ಅವರೊಂದಿಗೆ ಸಂಪರ್ಕ ಮಾಡಿದರೆ ದೋಷವಿಲ್ಲ' ಹೀಗೆ ಹೇಳಿ ಉರ್ವಶಿ ಅರ್ಜುನನ ಸಮಾಗಮಕ್ಕಾಗಿ ಪ್ರಾರ್ಥಿಸಿದುದು (ವನ 46/42–44). ತನ್ನ ಕಾಮನೆ ಪೂರ್ಣ ವಾಗದುದರಿಂದ, ಈಕೆಯಿಂದ ಅರ್ಜುನನಿಗೆ ಶಾಪ (ವನ 46/49–50). ಶುಕದೇವನ ಪರಮ ಪದ ಪ್ರಾಪ್ತಿಯ ಸಮಯ ಆಶ್ಚರ್ಯಚಕಿತ ಳಾದುದು (ಶಾಂತಿ 332/21–24).

(2) ಭಗೀರಥನ ಊರುವಿನ ಮೇಲೆ ಕುಳಿತ ಕಾರಣ ಗಂಗಾದೇವಿ ಉರ್ವಶಿ ಎಂಬ ಹೆಸರು ಪಡೆದಳು. ಮಗಳ ಸ್ಥಾನದಲ್ಲಿ ಕುಳಿತುದರಿಂದ ಭಾಗೀರಥಿ ಆದಳು (ದ್ರೋಣ 60/6).

**ಉರ್ವಶಿ ತೀರ್ಥ** – ಒಂದು ತೀರ್ಥ. ಅಲ್ಲಿಗೆ ಯಾತ್ರೆ ಮಾಡಿದರೆ, ಮನುಷ್ಯ ಈ ಭೂಮಿಯ ಮೇಲೆ ಪೂಜಿಸಲ್ಪಡುತ್ತಾನೆ (ವನ 84/157). ಇಲ್ಲಿ ಸ್ನಾನಮಾಡಿದರೆ ಸಿಗುವ ಫಲದ ವಿವರಣೆ (ಅನು 25/46).

**ಉರ್ವೀ** – ಪೃಥ್ವಿಯ ಹೆಸರು. ಈ ಹೆಸರಾಗಲು ಕಾರಣ (ಶಾಂತಿ 208/28).

**ಉಲೂಕ** – (1) ಶಕುನಿಯ ಮಗ (ಉದ್ಯೋಗ 57/23). ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 182/22). ದುರ್ಯೋಧನನ ಆದೇಶದಿಂದ ಪಾಂಡವರ ಶಿಬಿರಕ್ಕೆ ಹೋಗಿ, ತುಂಬಿದ ಸಭೆಯಲ್ಲಿ ದುರ್ಯೋಧನನ ಸಂದೇಶ ತಿಳಿಸಿದುದು (ಉದ್ಯೋಗ 161). ದುರ್ಯೋಧನ ನಿಗೆ ಪಾಂಡವರ ಸಂದೇಶ ತಿಳಿಸಿದುದು (ಉದ್ಯೋಗ 161/51–53). ಪ್ರಥಮ ದಿನದ ಯುದ್ಧದಲ್ಲಿ ಚೇದಿರಾಜನೊಂದಿಗೆ ಈತನ ದ್ವಂದ್ವ ಯುದ್ಧ (ಭೀಷ್ಮ 45/78–80). ಈತನ ಮೇಲೆ ಸಹದೇವನ ಆಕ್ರಮಣ (ಭೀಷ್ಮ 72/5). ಅರ್ಜುನನಿಂದ ಈತನ ಪರಾಜಯ (ದ್ರೋಣ 171/40). ದ್ರೋಣಾಚಾರ್ಯನು ಕೊಲ್ಲಲ್ಪಟ್ಟಾಗ ಯುದ್ಧಸ್ಥಳದಿಂದ ಓಡಿದುದು (ದ್ರೋಣ 193/14). ಇವನಿಂದ ಯುಯುತ್ಸುವಿನ ಪರಾಜಯ (ಕರ್ಣ 25/9–11). ಸಹದೇವನಿಂದ ಈತನ ಪರಾಜಯ (ಕರ್ಣ 61/40–44). ನಕುಲನೊಂದಿಗೆ ಈತನ ಯುದ್ಧ (ಶಲ್ಯ 22/28–29). ಮಹಾಭಾರತದಲ್ಲಿ ಬಂದಿರುವ ಈತನ ಹೆಸರುಗಳು–ಶಾಕುನಿ ಕೈತವ, ಸೌಬಲಸುತ ಮತ್ತು ಕೈತವ.

(2) ಒಬ್ಬ ಯಕ್ಷ (ಅಥವಾ ನಾಗ). ಅವನೊಂದಿಗೆ ಗರುಡನು ಯುದ್ಧಮಾಡಿದ್ದನು (ಆದಿ 32/18–19).

(3) ಉತ್ತರಭಾರತದ ಒಂದು ಜನಪದ. ಅಲ್ಲಿದ್ದ ರಾಜ ಬೃಹಂತನನ್ನು ಅರ್ಜುನನು ಪರಾಜಯ ಗೊಳಿಸಿದ್ದನು (ಸಭಾ 27/5).

(4) ಒಬ್ಬ ಪ್ರಾಚೀನ ಋಷಿ. ಅವನು ವಿಶ್ವಾಮಿತ್ರನ ಪುತ್ರ (ಅನು 4/51). ಈತ ಶರಶಯ್ಯೆಯಲ್ಲಿ ಮಲಗಿದ ಭೀಷ್ಮನ ಬಳಿಗೆ ಬಂದಿದ್ದನು (ಶಾಂತಿ 47/11).

**ಉಲೂಕದೂತಾಗಮನಪರ್ವ** – ಉದ್ಯೋಗ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 160 ರಿಂದ 164 ವರೆಗೆ).

**ಉಲೂಕಾಶ್ರಮ** – ಒಂದು ತೀರ್ಥ (ಉದ್ಯೋಗ 186/26).

**ಉಲೂತ** – ಒಂದು ಭಾರತೀಯ ಜನಪದ (ಭೀಷ್ಮ 9/54).

**ಉಲೂಪಿ** – ಐರಾವತ ಕುಲದಲ್ಲಿ ಹುಟ್ಟಿದ ಕೌರವ್ಯ ನಾಗನ ಮಗಳು (ಆದಿ 213/12). ಈಕೆ

ಅರ್ಜುನನನ್ನು ಹರಿದ್ವಾರದಿಂದ ನಾಗಲೋಕಕ್ಕೆ ಸೆಳೆದುದು (ಆದಿ 213/13). ಅರ್ಜುನನಿಂದ ಈಕೆಯಲ್ಲಿ ಇರಾವಂತನ ಜನ್ಮ (ಆದಿ 213/36). ಅರ್ಜುನನೊಡನೆ ಯುದ್ಧ ಮಾಡುವಂತೆ ಈಕೆ ಬಭ್ರುವಾಹನನನ್ನು ಪ್ರೋತ್ಸಾಹಿಸಿದುದು ಮತ್ತು ಉತ್ತೇಜಿಸಿದುದು (ಆಶ್ವ 79/11–12). ಸಂಜೀವನ ಮಣಿಯ ಮೂಲಕ ಅರ್ಜುನನನ್ನು ಬದುಕಿಸಿದುದು (ಆಶ್ವ 80/50–52). ಅರ್ಜುನನು ವಿಚಾರಿಸಿದಾಗ ತಾನು ಯುದ್ಧ ಭೂಮಿಗೆ ಬಂದ ಕಾರಣ ಹೇಳಿ, ಅವನಿಗೆ ದೊರೆತ ಶಾಪ ಮತ್ತು ಆತ ಬಿಡುಗಡೆಹೊಂದಿದ ವೃತ್ತಾಂತ ತಿಳಿಸಿದುದು ಮತ್ತು ಆತನಿಂದ ವಿದಾಯಗೊಂಡದ್ದು (ಆಶ್ವ 81). ಬಭ್ರುವಾಹನ ಮತ್ತು ಚಿತ್ರಾಂಗದೆಯೊಂದಿಗೆ ಆಕೆ ಹಸ್ತಿನಾವತಿಗೆ ಬಂದದ್ದು (ಆಶ್ವ 87/26–27). ಈಕೆಯಿಂದ ಕುಂತಿ ಮತ್ತು ದ್ರೌಪದಿಯ ಪಾದಾಭಿವಂದನೆ. ಸುಭದ್ರೆಯೊಂದಿಗೆ ಭೇಟಿ. ನಾನಾ ಪ್ರಕಾರದ ಉಡುಗೊರೆ ಸ್ವೀಕಾರ (ಆಶ್ವ 88/1–5). ಈಕೆಯಿಂದ ಗಾಂಧಾರಿಯ ಸೇವೆ (ಆಶ್ರಮ 1/23). ಈಕೆ ಪ್ರಜೆಗಳೊಂದಿಗೆ ಪ್ರತಿಕೂಲ ವರ್ತನೆ ಮಾಡಲಾರಳೆಂದು, ಪ್ರಜೆಗಳ ವಿಶ್ವಾಸ (ಆಶ್ರಮ 10/46). ಸಂಜಯನಿಂದ ಋಷಿಗಳಿಗೆ ಈಕೆಯ ಪರಿಚಯ (ಆಶ್ರಮ 25/11). ಪಾಂಡವರು ಮಹಾಪ್ರಸ್ಥಾನಕ್ಕೆ ಹೋದ ಮೇಲೆ ಉಲೂಪಿ ಗಂಗೆಯಲ್ಲಿ ಪ್ರವೇಶಿಸಿದುದು (ಮಹಾಪ್ರ 1/27). ಮಹಾಭಾರತದಲ್ಲಿ ಬಂದಿರುವ ಉಲೂಪಿಯ ಹೆಸರುಗಳು – ಭುಜಗಾತ್ಮಜಾ, ಭುಜಗೇಂದ್ರಕನ್ಯಾ, ಭುಜಗೋತ್ತಮಾ, ಕೌರವೀ, ಕೌರವ್ಯದುಹಿತಾ, ಕೌರವ್ಯಕುಲನಂದಿನೀ, ಪನ್ನಗನಂದಿನಿ, ಪನ್ನಗಸುತಾ, ಪನ್ನಗಾತ್ಮಜಾ, ಪನ್ನಗೇಶ್ವರಕನ್ಯಾ, ಪನ್ನಗೀ, ಉರಗಾತ್ಮಜಾ.

**ಉಲ್ಮುಕ** – ವೃಷ್ಣಿವಂಶದ ಒಬ್ಬ ಮಹಾರಥಿ. ರಾಜಕುಮಾರ. ಆತ ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಬಂದಿದ್ದನು (ಸಭಾ 34/16) ಪ್ರಭಾಸ ಕ್ಷೇತ್ರದಲ್ಲಿ ಪಾಂಡವರನ್ನು ಭೇಟಿಯಾಗಲು ಬಂದ ವೃಷ್ಣಿವಂಶದವರಲ್ಲಿ ಉಲ್ಮುಕನೂ ಇದ್ದನು (ವನ 120/19). ಯುದ್ಧಕ್ಕೆ ಉಲ್ಮುಕನೇ ಮೊದಲಾದ ವೃಷ್ಣಿವೀರರು ಬರುವ ನಿರೀಕ್ಷೆಯಿಂದ ಧೃತರಾಷ್ಟ್ರನಿಗೆ ಭಯ (ದ್ರೋಣ 11/28).

**ಉಶಂಗವ** – ಯಮನ ಸಭೆಯಲ್ಲಿ ಕುಳಿತುಕೊಳ್ಳುವ ಒಬ್ಬ ರಾಜ (ಸಭಾ 8/26).

**ಉಶನಾ** – ಮಹರ್ಷಿ ಭೃಗುವಿನ ಮಗ ಶುಕ್ರಾಚಾರ್ಯ. ಈತ ಅಸುರರ ಉಪಾಧ್ಯಾಯನಾಗಿದ್ದನು. ಈತನ ಒಂದು ಹೆಸರು ಉಶನಾ (ಆದಿ 65/36) (ಶುಕ್ರ–ನೋಡಿರಿ).

**ಉಶೀನರ** – (1) ವೃಷ್ಣಿವಂಶದ ಒಬ್ಬ ಪರಾಕ್ರಮಿ ರಾಜಕುಮಾರ. ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/20).

(2) ಶಿಬಿ ದೇಶದ ರಾಜ. ಈತ ಯಮಸಭೆಯ ಸದಸ್ಯ (ಸಭಾ 8/14). ಈತ ಗೃಧ್ರರೂಪದ ಇಂದ್ರನಿಗೆ ಪಾರಿವಾಳ ರೂಪದ ಅಗ್ನಿಯ ರಕ್ಷಣೆಗಾಗಿ, ತನ್ನ ಮಾಂಸವನ್ನು ಕಡಿದು ಕೊಟ್ಟದ್ದು (ವನ 130/21; 131/28). ಇಂದ್ರ ಮತ್ತು ಅಗ್ನಿಯಿಂದ ರಾಜನಿಗೆ ಅಭಿನಂದನೆ (ವನ 131/30–31). ಈತನ ಸ್ವರ್ಗಗಮನ (ವನ 131/32–33). ಈತ ಗಾಲವನಿಗೆ ಇನ್ನೂರು ಕುದುರೆಗಳನ್ನು ಶುಲ್ಕ ರೂಪದಲ್ಲಿ ತೆತ್ತು ಯಯಾತಿಯ ಕನ್ಯೆ ಮಾಧವಿಯನ್ನು ಸ್ವೀಕರಿಸಿದುದು (ಉದ್ಯೋಗ 118/15). ಮಹಾರಾಜ ಶುನಕನಿಂದ ಈತನಿಗೆ ಖಡ್ಗಪ್ರಾಪ್ತಿ (ಶಾಂತಿ 166/79). ಈತ ಶರಣಾಗತ ವತ್ಸಲನಾದ ಶಿಬಿಯ ತಂದೆ ಮಾಧವಿಯ ಗರ್ಭದಿಂದ ಶಿಬಿ ಎಂಬ ಹೆಸರಿನ ಪುತ್ರ ಪ್ರಾಪ್ತಿ (ಉದ್ಯೋಗ 118/20). ಈತನಿಗೆ ಗೋದಾನದಿಂದ ಸ್ವರ್ಗ ಪ್ರಾಪ್ತಿಯಾಯಿತು (ಅನು 76/25).

(3) ಕಾಶೀರಾಜ ವೃಷಾದರ್ಭಿ, ಈತನ ಶರಣಾಗತ ರಕ್ಷಣೆಯ ಪ್ರಸಂಗದಲ್ಲಿ, ಪಾರಿವಾಳ ಮತ್ತು ಗೃಧ್ರದ ಕಥೆ (ಅನು 32). ಈತ ಉಶೀನರ ಮತ್ತು ವೃಷಾದರ್ಭೀ ಎಂಬ ಎರಡೂ ಹೆಸರುಗಳಿಂದ ಪ್ರಖ್ಯಾತನಾಗಿದ್ದನು. ಆತ ಕಾಶಿ ಜನಪದಕ್ಕೆ ರಾಜನಾಗಿದ್ದನು (ಅನು 32/22–37).

(4) ಒಂದು ದೇಶ. ಅಲ್ಲಿ ವಾಸಿಸುವ ಸೈನಿಕರು ಅರ್ಜುನನಿಂದ ಕೊಲ್ಲಲ್ಪಟ್ಟರು (ಕರ್ಣ 5/47). ಈ ದೇಶದ ವೀರರು ಎಲ್ಲಾ ರೀತಿಯ ಅಸ್ತ್ರಶಸ್ತ್ರಗಳಲ್ಲಿ ಕುಶಲರು ಮತ್ತು ಬಲವಂತರಾಗಿರುತ್ತಾರೆ (ಶಾಂತಿ 101/4). ಉಶೀನರ ದೇಶದ ಕ್ಷತ್ರಿಯರು ಬ್ರಾಹ್ಮಣರ ಕೃಪಾದೃಷ್ಟಿಯಿಂದ ವಂಚಿತರಾದುದರಿಂದ, ಶೂದ್ರರಾದರು (ಅನು 33/22–23).

**ಉಶೀರಬೀಜ** – (1) ಉತ್ತರ ಖಂಡದ ಒಂದು ಪರ್ವತ (ವನ 139/1).
(2) ಹಿಮಾಲಯದ ಬಳಿ ಉತ್ತರದಿಕ್ಕಿನ ಸ್ಥಾನ. ವಿಶೇಷ ಅಲ್ಲಿ ಮರುತ್ತರಾಜನ ಯಜ್ಞವಾಗಿತ್ತು (ಉದ್ಯೋಗ 111/23).
**ಉಷಾ** – ಬಾಣಾಸುರನ ಪುತ್ರಿ. ಈಕೆಯೊಂದಿಗೆ ಅನಿರುದ್ಧನ ಗುಪ್ತ ವಿಹಾರ. ಬಾಣಾಸುರನಿಂದ ಅನಿರುದ್ಧನ ನಿಗ್ರಹ ಮತ್ತು ಶ್ರೀಕೃಷ್ಣನು ಬಾಣಾಸುರನನ್ನು ಗೆದ್ದು ಅನಿರುದ್ಧ ಮತ್ತು ಉಷೆ ಯರನ್ನು ದ್ವಾರಕೆಗೆ ತಂದುದು (ಸಭಾ 38/29).
**ಉಷಂಗು** – (1) ಪಶ್ಚಿಮ ದಿಕ್ಕಿನಲ್ಲಿ ವಾಸ ಮಾಡುವ ಒಬ್ಬ ಋಷಿ (ಶಾಂತಿ 208/30).
(2) ಶಿವನ ಒಂದು ಹೆಸರು (ಅನು 17/105).
(3) ಯದುವಂಶದ ವೃಜಿನೀವಂತನ ಪುತ್ರ ಚಿತ್ರರಥನ ತಂದೆ (ಅನು 147/29).
**ಉಷ್ಟ್ರಕರ್ಣಿಕ** – ದಕ್ಷಿಣಭಾರತದ ಒಂದು ಜನ ಪದ. ಅದನ್ನು ಸಹದೇವನು ದೂತರ ಮೂಲಕ ವಶಪಡಿಸಿದ್ದನು (ಸಭಾ 31/71).
**ಉಷ್ಣದೇಶ** – ಕ್ರೌಂಚದ್ವೀಪದೊಳಗೆ, ಕ್ರೌಂಚ ಪರ್ವತದ ಬಳಿ ಮನೋನುಗ ದೇಶದ ಅನಂತರ ಇರುವ ಒಂದು ದೇಶ (ಭೀಷ್ಮ 12/21).
**ಉಷ್ಣೀಗಂಗ** – ಒಂದು ಪ್ರಾಚೀನ ತೀರ್ಥ (ವನ 135/7).
**ಉಷ್ಣೀನಾಭ** – ಒಬ್ಬ ವಿಶ್ವೇದೇವ (ಅನು 91/34).

## ಊ

**ಊರ್ಜಯೋನಿ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/59).
**ಊರ್ಣನಾಭ** – (ಸುದರ್ಶನ) ಧೃತರಾಷ್ಟ್ರನ ಒಬ್ಬ ಮಗ (ಆದಿ 67/96). ಭೀಮಸೇನನಿಂದ ಈತನ ವಧೆ (ದ್ರೋಣ 127/67).
**ಊರ್ಣಾಯು** – ಒಬ್ಬ ದೇವಗಂಧರ್ವ. ಈತ ಅರ್ಜುನನ ಜನ್ಮೋತ್ಸವಕ್ಕೆ ಬಂದಿದ್ದನು (ಆದಿ 122/55). ಮೇನಕೆಯ ಪ್ರತಿಯಾಗಿ ಈತನ ಅನುರಾಗ (ಉದ್ಯೋಗ 117/16).
**ಊರ್ಧ್ವಬಾಹು** – ದಕ್ಷಿಣ ದಿಕ್ಕಿನಲ್ಲಿ ವಾಸಿಸುವ ಒಬ್ಬ ಋಷಿ. ಈತ ಧರ್ಮರಾಜನ ಋತ್ವಿಜ (ಅನು 150/34–35; 165/40).
**ಊರ್ಧ್ವಭಾಕ್** – ಒಬ್ಬ ಅಗ್ನಿ. ಆತ ಬೃಹಸ್ಪತಿಯ ಐದನೆಯ ಮಗ (ವನ 219/20).
**ಊರ್ಧ್ವರೇತಾ** – ಒಬ್ಬ ಮಹರ್ಷಿ. ಈತ ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/24).
**ಊರ್ಧ್ವವೇಣೀಧರಾ** – ಸ್ಕಂದನ ಅನುಚರಳಾದ ಮಾತೃಕೆ (ಶಲ್ಯ 46/18).
**ಊರ್ವ** (ಔರ್ವ) – ತೇಜಸ್ವಿಯಾದ ಭೃಗು ವಂಶದ ಒಬ್ಬ ಋಷಿ. ಆತ ತ್ರಿಲೋಕಿಯ ನಾಶಕ್ಕಾಗಿ ಒಂದು ಭಯಂಕರ ಅಗ್ನಿಯನ್ನು ಸೃಷ್ಟಿಸಿದ ಮತ್ತು ಅದನ್ನು ಸಮುದ್ರಕ್ಕೆ ಹಾಕಿ ಆರಿಸಿದ. ಈತ ಚ್ಯವನನ ಪುತ್ರ ಮತ್ತು ಋಚೀಕನ ತಂದೆಯಾಗಿದ್ದನು (ಅನು 56/1–7).
**ಊಷ್ಮಪ** – ಪಿತೃಗಳ ಒಂದು ಗಣ. ಈತ ಯಮಸಭೆಯಲ್ಲಿ ಯಮರಾಜನ ಉಪಾಸನೆ ಮಾಡುತ್ತಾನೆ (ಸಭಾ 8/30).
**ಊಷ್ಮಾ** – ಪಾಂಚಜನ್ಯನೆಂಬ ಅಗ್ನಿಯ ಮಗ (ವನ 221/4).

## ಋ

**ಋಕ್ಷ** – (1) ಮಹಾರಾಜ ಅಜಮೀಢನಿಂದ ಧೂಮಿನಿಯಲ್ಲಿ ಹುಟ್ಟಿದವನು. ಇವನ ಮಗನ ಹೆಸರು ಸಂವರಣ. ಆತ ಪ್ರಸಿದ್ಧ ರಾಜನಾಗಿದ್ದನು (ಆದಿ 94/31–34).
(2) ಪೂರುವಂಶದ ರಾಜ ಅರಿಹನಿಂದ ಸುದೇವಾಳಲ್ಲಿ ಹುಟ್ಟಿದವನು. ಇವನ ಪತ್ನಿಯ ಹೆಸರು 'ಜ್ವಾಲಾ' ಮತ್ತು ಪುತ್ರನ ಹೆಸರು 'ಮತಿನಾರ'ನೆಂದಾಗಿತ್ತು (ಆದಿ 95/24–25).
**ಋಕ್ಷದೇವ** – ಶಿಖಂಡಿಯ ಮಗ. ಇವನ ಕುದುರೆಗಳು ಬಿಳಿ ಮತ್ತು ಕೆಂಪುಬಣ್ಣದ ಸಮ್ಮಿ ಶ್ರಣದವುಗಳಾಗಿ ಕಮಲದಂತೆ ಬಣ್ಣವುಳ್ಳವುಗಳಾ ಗಿದ್ದವು (ದ್ರೋಣ 23/24–25).
**ಋಕ್ಷವಂತ** – ಭಾರತವರ್ಷದ ಏಳು ಕುಲ ಪರ್ವತಗಳಲ್ಲಿ ಒಂದು (ಭೀಷ್ಮ 9/11 ವನ 61/21).

**ಋಕ್ಷಾ** – ಚಂದ್ರವಂಶದ ಮಹಾರಾಜ ಅಜಮೀಢನ ಪತ್ನಿ (ಆದಿ 95/37).

**ಋಕ್ಷಾಂಬಿಕಾ** – ಸ್ಕಂದನ ಅನುಚರಳಾದ ಮಾತೃಕೆ (ಶಲ್ಯ 46/12).

**ಋಚೀಕ** – (1) ಒಬ್ಬ ಮಹರ್ಷಿ. ಈತ ಭೃಗುಕುಮಾರ ಚ್ಯವನನ ಪುತ್ರನಾಗಿದ್ದನು (ವನ 99/42). ಈತನೇ ಕಲ್ಪಾಂತರದಲ್ಲಿ ಔರ್ವನ ಪುತ್ರನಾಗಿದ್ದನು. ಈತ ಜಮದಗ್ನಿಯ ತಂದೆಯಾಗಿದ್ದನು (ಆದಿ 66/45–47). ಇವನು ಶುಲ್ಕರೂಪದಲ್ಲಿ ಮಹಾರಾಜ ಗಾಧಿಗೆ ಕೊಡುವುದಕ್ಕಾಗಿ, ವರುಣನಿಂದ ಒಂದು ಸಾವಿರ ಕುದುರೆಗಳನ್ನು ಯಾಚಿಸಿದ್ದನು (ವನ 115/26–27). ಸತ್ಯವತಿಯೊಂದಿಗೆ ಈತನ ವಿವಾಹ (ವನ 115/29). ಪರಶುರಾಮನು ಕ್ಷತ್ರಿಯರ ವಧೆ ಮಾಡದಂತೆ ಈತ ತಡೆದುದು (ವನ 117/10; ಆಶ್ವ 29/20). ಇವನು ವರುಣನಲ್ಲಿ ಯಾಚಿಸಿಪಡೆದ ಒಂದು ಸಾವಿರ ಕಿವಿಕಪ್ಪಾದ ಕುದುರೆಗಳನ್ನು ಸತ್ಯವತಿಯ ಶುಲ್ಕ ರೂಪದಲ್ಲಿ ಗಾಧಿಗೆ ಕೊಟ್ಟದ್ದು (ಉದ್ಯೋಗ 119/56). ಗಾಧಿಪುತ್ರಿ ಸತ್ಯವತಿಯೊಂದಿಗೆ ಈತನ ವಿವಾಹ (ಶಾಂತಿ 49/7). ಈತನು ಪುತ್ರೋತ್ಪತ್ತಿಗಾಗಿ ಚರುವನ್ನು ಕೊಟ್ಟದ್ದು (ಶಾಂತಿ 49/9). ತಾಯಿಯ ಜೊತೆಯಲ್ಲಿ ಚರು ಅದಲು ಬದಲಾದುದರಿಂದ ತನ್ನ ಪತ್ನಿ ಸತ್ಯವತಿಯೊಂದಿಗೆ ಈತನ ಸಂಭಾಷಣೆ (ಶಾಂತಿ 49/18–28). ವಿಶ್ವಾಮಿತ್ರನ ಜನ್ಮಪ್ರಸಂಗದಲ್ಲಿ ಪುನಃ ಈ ಕಥೆಯ ವರ್ಣನೆ (ಅನು 4). ಋಚೀಕನಿಗೆ ಶಾಲ್ವರಾಜ ದ್ಯುತಿಮಂತನಿಂದ ರಾಜ್ಯದಾನ ಪ್ರಾಪ್ತವಾಗಿತ್ತು (ಅನು 137/23).

(2) ವಿವಸ್ವಂತನ ಸ್ವರೂಪಭೂತವಾದ ಹನ್ನೆರಡು ಸೂರ್ಯರಲ್ಲಿ ಒಬ್ಬ (ಆದಿ 1/42).

(3) ಸಮ್ರಾಟನಾದ ಭರತನ ಮೊಮ್ಮಗ ಮತ್ತು ಭುಮನ್ಯುವಿನ ಪುತ್ರ (ಆದಿ 94/24).

**ಋಚೇಯು** – ಪೂರುವಿನ ಮೂರನೇ ಮಗನಾದ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ಪ್ರಥಮಪುತ್ರ (ಆದಿ 94/10). ಅನ್ವಗ್ಭಾನು ಮತ್ತು ಅನಾದೃಷ್ಟಿ ಕೂಡಾ ಈತನದೇ ಹೆಸರುಗಳಾಗಿದ್ದವು. ಈತ ಮಹಾವಿದ್ವಾಂಸ ಮತ್ತು ಚಕ್ರವರ್ತಿ ಸಮ್ರಾಟನಾಗಿದ್ದನು. ಇವನ ಮಗನ ಹೆಸರು 'ಮತಿನಾರ'ನೆಂದಾಗಿತ್ತು (ಆದಿ 94/11–13).

**ಋಣ** – ನಾಲ್ಕು ರೀತಿಯ ಋಣಗಳು (ಆದಿ 119/17). ಈ ಋಣಗಳ ನಿರಾಕರಣೆಯ ಆವಶ್ಯಕತೆ (ಆದಿ 119/18–20).

**ಋತ** – ಏಕಾದಶ ರುದ್ರರಲ್ಲಿ ಒಬ್ಬ (ಅನು 150/12).

**ಋತಧಾಮ** – ಶ್ರೀಕೃಷ್ಣನ ಒಂದು ಹೆಸರು (ಶಾಂತಿ 342/69).

**ಋತುಪರ್ಣ** – ಅಯೋಧ್ಯೆಯ ಒಬ್ಬ ರಾಜ. ಅವನು ಇಕ್ಷ್ವಾಕುಕುಲದಲ್ಲಿ ಹುಟ್ಟಿದವನು. ದ್ಯೂತ ವಿದ್ಯೆಯ ಮರ್ಮಜ್ಞನಾಗಿದ್ದನು. ನಳನು ದ್ಯೂತದಲ್ಲಿ ಸೋತಾಗ, ಅವನ ಸಾರಥಿ ವಾರ್ಷ್ಣೇಯ ಇವನಲ್ಲಿರಲು ತೊಡಗಿದನು (ವನ 66/21–22; 60/25). ಬಾಹುಕನಾಗಿದ್ದ ನಳನನ್ನು ಈತ ತನ್ನಲ್ಲಿ ಅಶ್ವಾಧ್ಯಕ್ಷನಾಗಿ ನೇಮಿಸಿದುದು (ವನ 67/5–7). ದಮಯಂತಿಯ ದ್ವಿತೀಯ ಸ್ವಯಂವರಕ್ಕಾಗಿ ಇವನು ವಿದರ್ಭದೇಶಕ್ಕೆ ಹೋದುದು (ವನ 7/20). ಬಾಹುಕನ ಅಶ್ವಸಂಚಾಲನ ಕಲೆಯಿಂದ ಈತ ಆಶ್ಚರ್ಯಚಕಿತನಾದುದು (ವನ 71/24). ಗಣಿತ ವಿದ್ಯೆಯಲ್ಲಿ ಈತನ ಅದ್ಭುತ ಶಕ್ತಿ (ವನ 72/7–11). ಇವನಿಂದ ನಳನಿಗೆ ದ್ಯೂತವಿದ್ಯೆಯ ದಾನ (ವನ 72/29). ವಿದರ್ಭರಾಜ ಭೀಮನಿಂದ ಇವನಿಗೆ ಅತಿಥಿ ಸತ್ಕಾರ (ವನ 73/20). ಇವನಿಗೆ ನಳನಿಂದ ಅಶ್ವವಿದ್ಯಾಪ್ರಾಪ್ತಿ ಮತ್ತು ಈತ ಅಯೋಧ್ಯೆಗೆ ಹಿಂತಿರುಗಿದುದು (ವನ 77/17–19).

**ಋತುಸ್ಥಲಾ** – ಸ್ವರ್ಗದ ಹನ್ನೊಂದು ಮಂದಿ ಪ್ರಧಾನ ಅಪ್ಸರೆಯರಲ್ಲಿ ಒಬ್ಬಳು. ಆಕೆ ಅನ್ಯ ಅಪ್ಸರೆಯರೊಂದಿಗೆ ಅರ್ಜುನನ ಜನ್ಮೋತ್ಸವಕ್ಕೆ ಬಂದು ನೃತ್ಯ ಮತ್ತು ಗಾಯನ ಮಾಡಿದ್ದಳು (ಆದಿ 122/65–66).

**ಋತೇಯು** – ಪಶ್ಚಿಮದಿಕ್ಕಿನಲ್ಲಿ ವಾಸಿಸುವ ಒಬ್ಬ ಋಷಿ. ಇವನು ವರುಣನ ಏಳುಮಂದಿ ಋತ್ವಿಜರಲ್ಲಿ ಒಬ್ಬ (ಅನು 150/36).

**ಋತ್ವಾ** – ಒಬ್ಬ ದೇವಗಂಧರ್ವ. ಅವನು ಅರ್ಜುನನ ಜನ್ಮೋತ್ಸವದಲ್ಲಿ ಉಪಸ್ಥಿತನಾಗಿದ್ದನು (ಆದಿ 122/57).

**ಋದ್ಧಿ** – ಕುಬೇರನ ಪತ್ನಿ (ಉದ್ಯೋಗ 117/9).

**ಋದ್ಧಿಮಂತ** – ಒಬ್ಬ ಮಹಾನಾಗ. ಈತ ಗರುಡ

ನಿಂದ ಕೊಲ್ಲಲ್ಪಟ್ಟನು (ವನ 160/15)

**ಋಭು** – ಋಭುವೆಂಬ ಹೆಸರಿನ ದೇವತೆಗಳ ಗಣ. ಅವರು ದೇವತೆಗಳಿಂದಲೂ ಆರಾಧಿಸ ಲ್ಪಡುತ್ತಾರೆ (ವನ 261/19 ಶಾಂತಿ 208/22 ; ಅನು 137/25).

**ಋಷಭ** – (1) ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಯಜ್ಞ ದಲ್ಲಿ ಸುಟ್ಟುಹೋದನು (ಆದಿ 57/17).

(2) ವೃಷಭರೂಪಧಾರಿಯಾದ ಒಬ್ಬ ರಾಕ್ಷಸ. ಮಗಧರಾಜ ಬೃಹದ್ರಥನ ಮೂಲಕ ಈತ ವಧಿಸಲ್ಪಟ್ಟ. ಅವನ ಚರ್ಮದಿಂದ ಮೂರು ನಗಾರಿಗಳು ಮಾಡಲ್ಪಟ್ಟವು (ಸಭಾ 21/16).

(3) ಒಬ್ಬ ಪ್ರಾಚೀನ ತಪಸ್ವೀ ಋಷಿ. ಅವನು ಹಿಂದೊಮ್ಮೆ ಋಷಭಕೂಟದ ಮೇಲೆ ವಾಸಿಸು ತ್ತಿದ್ದನು (ವನ 110/8). ಇವನು ಬ್ರಹ್ಮಸಭೆಯಲ್ಲಿ, ಅವನ ಸೇವೆ ಮಾಡುತ್ತಾ ಉಪಸ್ಥಿತನಾಗಿರುತ್ತಾನೆ (ಸಭಾ 11/24). ಸುಮಿತ್ರನಿಗೆ ಋಷಭ ಮುನಿ ಯಿಂದ ದುರಾಶೆಯ ತ್ಯಾಗಮಾಡಲು ಉಪದೇಶ (ಶಾಂತಿ 125ರಿಂದ 128).

(4) ದಕ್ಷಿಣ ತೀರದಲ್ಲಿರುವ ಒಂದು ಪರ್ವತ. ಅಲ್ಲಿ ಗಾಲವ ಮತ್ತು ಗರುಡರಿಗೆ ಶಾಂಡಿಲಿಯ ದರ್ಶನವಾಗಿತ್ತು (ಉದ್ಯೋಗ 112/22; 113/1). ಪಾಂಡ್ಯದೇಶದಲ್ಲಿರುವ ಈ ಪರ್ವತ ಒಂದು ಪವಿತ್ರ ತೀರ್ಥವಾಗಿದೆ. ಅಲ್ಲಿಗೆ ಯಾತ್ರೆ ಮಾಡು ವುದರಿಂದ ವಾಜಪೇಯ ಯಜ್ಞದ ಫಲ ಮತ್ತು ಸ್ವರ್ಗಲೋಕಗಳು ಸುಲಭವಾಗುತ್ತವೆ (ವನ 85/21).

(5) ಒಬ್ಬ ರಾಜ. ಅವನಿಗೆ ಭಾರತ ದೇಶ ಬಹಳ ಪ್ರಿಯವಾದುದು (ಭೀಷ್ಮ 9/7).

(6) ಒಬ್ಬ ರಾಜ ಅಥವಾ ರಾಜಕುಮಾರ. ಅವನು ದ್ರೋಣನಿರ್ಮಿತ ಗರುಡವ್ಯೂಹದ ಹೃದಯಸ್ಥಾನದಲ್ಲಿ ನಿಲ್ಲಿಸಲ್ಪಟ್ಟಿದ್ದನು (ದ್ರೋಣ 20/12).

(7) ಒಬ್ಬ ದೈತ್ಯ ಅಥವಾ ದಾನವ (ಶಾಂತಿ 227/51).

**ಋಷಭಕೂಟ** – ಒಂದು ಪರ್ವತ. ಇಲ್ಲಿ ಹಿಂದೊಮ್ಮೆ ಋಷಭಮುನಿ ತಪಸ್ಸು ಮಾಡಿದ್ದನು (ವನ 110/8).

**ಋಷಭತೀರ್ಥ** – ಕೋಸಲ ಅಥವಾ ಅಯೋಧ್ಯೆಯಲ್ಲಿರುವ ಒಂದು ಪ್ರಾಚೀನ ತೀರ್ಥ. ಅಲ್ಲಿ ಉಪವಾಸ ಮಾಡುವುದರಿಂದ ಸಾವಿರ ಗೋದಾನ ಮತ್ತು ವಾಜಪೇಯ ಯಜ್ಞಮಾಡಿದ ಫಲಸಿಗುತ್ತದೆ (ವನ 85/10–11).

**ಋಷಭದ್ವೀಪ** – ಸರಸ್ವತೀತಟದಲ್ಲಿರುವ ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ದೇವವಿಮಾನ ಲಭ್ಯವಾಗುತ್ತದೆ (ವನ 84/160).

**ಋಷಿಕ** – (1) ದಾನವರ ಯೋಧ 'ಅರ್ಕ'ನ ಅಂಶದಿಂದ ಹುಟ್ಟಿದ ಒಬ್ಬ ರಾಜರ್ಷಿ (ಆದಿ 67/32–33).

(2) ಒಂದು ಔತ್ತರೇಯ ಜನಪದ. ಅಲ್ಲಿ ಋಷಿಕ ರಾಜನೊಂದಿಗೆ ಅರ್ಜುನನ ಭಯಾನಕ ಯುದ್ಧವಾಗಿತ್ತು (ಸಭಾ 27/25; ಭೀಷ್ಮ 9/64)

**ಋಷಿಕುಲ್ಯಾ** – ಒಂದು ನದಿ ಮತ್ತು ಪ್ರಾಚೀನ ತೀರ್ಥ. ಅಲ್ಲಿ ಸ್ನಾನ ಮಾಡಿ ಪಾಪರಹಿತನಾದ ಮನುಷ್ಯ ದೇವತೆಗಳ ಮತ್ತು ಪಿತೃಗಳ ಪೂಜೆ ಮಾಡುವುದರಿಂದ ಋಷಿಲೋಕಕ್ಕೆ ಹೋಗುತ್ತಾನೆ (ವನ 84/48–49; ಭೀಷ್ಮ 9/47).

**ಋಷಿಗಿರಿ** – ಮಗಧದ ರಾಜಧಾನಿಯಾದ ಗಿರಿ ವ್ರಜದ ಸಮೀಪವಿರುವ ಒಂದು ಪರ್ವತ. ಅದರ ಇನ್ನೊಂದು ಹೆಸರು ಮಾತಂಗ (ಸಭಾ 21/2–3).

**ಋಷ್ಯಮೂಕ** – ಒಂದು ಪರ್ವತ. ಅದರ ಶಿಖರದಲ್ಲಿ ಮಾರ್ಕಂಡೇಯನು ಧನುರ್ಧರ ನಾದ ಶ್ರೀರಾಮ ಮತ್ತು ಲಕ್ಷ್ಮಣರ ಭೇಟಿ ಮಾಡಿದ್ದನು (ವನ 25/9). ಇಲ್ಲಿಯೇ ಹನುಮಂತನು ಸುಗ್ರೀವನೊಡನಿದ್ದನು (ವನ 147/30). ಇದೇ ಋಷ್ಯಮೂಕಕ್ಕೆ ತಾಗಿಕೊಂಡು ಪಂಪಾಸರೋವರವಿದೆ (ವನ 279/44). ಶ್ರೀರಾಮ ಮತ್ತು ಲಕ್ಷ್ಮಣ ಋಷ್ಯಮೂಕಕ್ಕೆ ಹೋದುದು ಮತ್ತು ಸುಗ್ರೀವನೊಡನೆ ಶ್ರೀರಾಮನ ಮೈತ್ರಿ (ವನ 280/9–11).

**ಋಷ್ಯಶೃಂಗ** – (1) ಮಹರ್ಷಿ ವಿಭಾಂಡಕನ ಮಗ. ಹೆಣ್ಣು ಜಿಂಕೆಯಿಂದ ಇವನ ಜನನ ಮತ್ತು ಋಷ್ಯಶೃಂಗನೆಂದು ಹೆಸರಾಗಲು ಕಾರಣ (ವನ 110/37–39). ಇವನು ಕಶ್ಯಪ ಗೋತ್ರದ ವನು. ತಪಸ್ಸು ಮತ್ತು ಇಂದ್ರಿಯ ಸಂಯಮ ದಿಂದಲೇ ಪ್ರತಿಷ್ಠಿತನಾಗಿದ್ದನು (ಶಾಂತಿ 296/ 14–16). ಈತ ಬ್ರಹ್ಮಸಭೆಯಲ್ಲಿ ಕುಳಿತು, ಬ್ರಹ್ಮನ ಉಪಾಸನೆ ಮಾಡುತ್ತಾನೆ (ಸಭಾ 11/23). ತನ್ನ

ಆಶ್ರಮಕ್ಕೆ ಬಂದ ಒಬ್ಬ ವೇಶ್ಯೆಯನ್ನು ಬ್ರಹ್ಮಚಾರಿ ಮುನಿಯೆಂದು ತಿಳಿದು ಈತನಿಂದ ಆಕೆಯ ಅತಿಥಿಸತ್ಕಾರ (ವನ 111/13). ವೇಶ್ಯೆಯನ್ನು ಬ್ರಹ್ಮಚಾರಿಯೆಂದು ತಿಳಿದು, ಈತ ತನ್ನ ತಂದೆಗೆ ಆಕೆಯ ಸ್ವರೂಪ ಮತ್ತು ಆಚರಣೆಗಳ ವರ್ಣನೆ ಮಾಡಿದುದು (ವನ 112). ಈತ ರಾಜ ಲೋಮಪಾದನಲ್ಲಿಗೆ ಬಂದುದು (ವನ 113/8). ಲೋಮಪಾದನ ಪುತ್ರಿ ಶಾಂತೆಯೊಡನೆ ಈತನ ವಿವಾಹ (ವನ 113/11; ಶಾಂತಿ 234/34). ಮಹಾಭಾರತದಲ್ಲಿ ಬಂದಿರುವ ಋಷ್ಯಶೃಂಗನ ಹೆಸರುಗಳು – ಕಾಶ್ಯಪ, ಕಶ್ಯಪಪುತ್ರ ಮತ್ತು ಕಾಶ್ಯಪಾತ್ಮಜ.

(2) ಒಬ್ಬ ರಾಕ್ಷಸ ಅವನ ಮಗನ ಹೆಸರು ಅಲಂಬುಷನೆಂದಾಗಿತ್ತು (ದ್ರೋಣ 106/16).

## ಏ

**ಏಕಚಕ್ರ** – ಕಶ್ಯಪ ಮತ್ತು ದನುವಿನ ಮಗನಾದ ಒಬ್ಬ ಪ್ರಖ್ಯಾತ ದಾನವ (ಆದಿ 65/25).

**ಏಕಚಕ್ರಾ** – ಒಂದು ಪ್ರಾಚೀನ ಪಟ್ಟಣ. ಕುಂತೀ ದೇವಿ ತನ್ನ ಮಕ್ಕಳೊಂದಿಗೆ ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಸ್ವಲ್ಪ ಕಾಲ ವಾಸವಾಗಿದ್ದಳು. ಇಲ್ಲಿ ಪಾಂಡವರು ವೇದಾಭ್ಯಾಸ ಪರಾಯಣ ಬ್ರಹ್ಮಚಾರಿಗಳಾಗಿ ತಾಯಿಯೊಂದಿಗೆ ವಾಸಿಸುತ್ತಿದ್ದರು (ಆದಿ 61/26–27). ಭೀಮನು ಇಲ್ಲಿಯೇ ಬಕಾಸುರನನ್ನು ಕೊಂದಿದ್ದನು (ಆದಿ 61/29). ಪಾಂಡವರು ಏಕಚಕ್ರಾನಗರಕ್ಕೆ ಹೋದುದು, ಒಂದು ತಿಂಗಳ ತನಕ ಅಲ್ಲಿ ವಾಸಿದುದು ಮತ್ತು ಭೀಮನಿಂದ ಬಕಾಸುರನ ವಧೆಯ ವಿಸ್ತೃತ ವೃತ್ತಾಂತ (ಆದಿ 155 ಅಧ್ಯಾಯದಿಂದ 163 ಅಧ್ಯಾಯದ ತನಕ).

**ಏಕಚಂದ್ರಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/30).

**ಏಕಚೂಡಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/5).

**ಏಕಜಟ** – ಸ್ಕಂದನ ಒಬ್ಬ ಸೈನಿಕನ ಹೆಸರು (ಶಲ್ಯ 45/58).

**ಏಕತ** – ಒಬ್ಬ ಪ್ರಾಚೀನ ಮಹರ್ಷಿ. ಅವನು ಗೌತಮನ ಮಗ. ಅವನ ಇಬ್ಬರು ಸಹೋದರರು ದ್ವಿತ ಮತ್ತು ತ್ರಿತ. ಇವನು ತೇಜಸ್ವಿಯೂ ಮಹಾತ್ಮನೂ ಆಗಿದ್ದನು. ಆದರೂ ಒಂದು ಬಾರಿ ಈತ ತ್ರಿತನೊಡನೆ ಕಪಟಾಚರಣೆ ಮಾಡಿದನು. ಈ ಕಥೆಯ ವರ್ಣನೆ (ಶಲ್ಯ 36). ಈತ ಪಶ್ಚಿಮ ದಿಕ್ಕಾನ್ನಾಶ್ರಯಿಸಿದ ಋಷಿಯಾಗಿದ್ದನು (ಶಾಂತಿ 208/31). ಇವನು ಉಪರಿಚರವಸುವಿನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/5–6). ಈ ಮೂವರೂ ಸಹೋದರರು ಶ್ರೀಮನ್ನಾರಾಯಣನ ದರ್ಶನಕ್ಕಾಗಿ ಶ್ವೇತದ್ವೀಪಕ್ಕೆ ಹೋಗಿದ್ದರು (ಶಾಂತಿ 339/12). ಇವನು ತನ್ನ ಸಹೋದರ ತ್ರಿತನನ್ನು ಬಾವಿಗೆ ಬೀಳಿಸಿದ್ದನು (ಶಾಂತಿ 341/46). ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮನ ಬಳಿಗೆ ಈತನೂ ಹೋಗಿದ್ದನು (ಅನು 26/7). ಈ ಮೂವರೂ ವರುಣನ ಏಳುಮಂದಿ ಋತ್ವಿಜರ ಸಮೂಹದಲ್ಲಿರುವವರು ಮತ್ತು ಪಶ್ಚಿಮ ದಿಕ್ಕಿನಲ್ಲಿರುವವರು (ಅನು 150/36; 165/42).

**ಏಕತ್ವಚಾ** – ಸ್ಕಂದನ ಅನುಚರಿಯಾದ ಮಾತೃಕೆ (ಶಲ್ಯ 46/24).

**ಏಕಪಾದ** – ಒಂದು ಜನಪದ ಅಲ್ಲಿದ್ದ ರಾಜನೂ, ನಿವಾಸಿಗಳೂ ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಬಂದಿದ್ದರು. ಆದರೆ ಜನಜಂಗುಳಿಯಿಂದಾಗಿ ದ್ವಾರದಲ್ಲಿ ತಡೆಯಲ್ಪಟ್ಟರು (ಸಭಾ 51/17).

**ಏಕಪಾದ** – ವಿಷ್ಣುವಿನ ಒಂದು ಹೆಸರು (ಅನು 149/95).

**ಏಕರಾತ್ರ ತೀರ್ಥ** – ಒಂದು ತೀರ್ಥ. ಅಲ್ಲಿ ಒಂದು ರಾತ್ರಿ ನಿಯಮಪೂರ್ವಕವಾಗಿ, ಸತ್ಯವಾದಿಯಾಗಿದ್ದರೆ, ಆ ಮನುಷ್ಯ ಸತ್ಯಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/182).

**ಏಕಲವ್ಯ** – (1) ನಿಷಾದರಾಜ ಹಿರಣ್ಯಧನುವಿನ ಮಗ. ದ್ರೋಣಾಚಾರ್ಯರ ಬಳಿಗೆ ಧನುರ್ವೇದ ಅಧ್ಯಯನಕ್ಕಾಗಿ ಈತನ ಆಗಮನ (ಆದಿ 131/31). ನಿಷಾದಪುತ್ರನಾದ ಕಾರಣ ದ್ರೋಣನಿಂದ ಈತನ ತಿರಸ್ಕಾರ (ಆದಿ 131/32). ದ್ರೋಣಾಚಾರ್ಯನ ಮೂರ್ತಿಯಲ್ಲಿ ಗುರುಭಾವನೆಯನ್ನಿಟ್ಟು, ಈತನಿಂದ ಧನುರ್ವಿದ್ಯಾಭ್ಯಾಸ (ಆದಿ 131/34). ಗುರುಭಕ್ತಿಯಿಂದಾಗಿ ಈತನಿಗೆ ಬಾಣವಿದ್ಯೆಯಲ್ಲಿ ಸಫಲತೆ (ಆದಿ 131/35). ಪಾಂಡವರ ನಾಯಿಯ ಬಾಯಿಯನ್ನು ಬಾಣಗಳಿಂದ ತುಂಬಿಸಿ, ಈತ ಅವರನ್ನು ವಿಸ್ಮಯಗೊಳಿಸಿದುದು (ಆದಿ 131/41).

ಪಾಂಡವರಿಂದಲೂ ಕೌರವರಿಂದಲೂ ಈತನ ಪ್ರಶಂಸೆ (ಆದಿ 131/42). ಪಾಂಡವರೊಡನೆ ಈತ ತನ್ನ ಪರಿಚಯ ತಿಳಿಸಿದುದು (ಆದಿ 131/45). ಇವನು ತನ್ನ ಬಲಗೈ ಹೆಬ್ಬೆರಳನ್ನು ಗುರು ದಕ್ಷಿಣೆಯ ರೂಪದಲ್ಲಿ ದ್ರೋಣಾಚಾರ್ಯರಿಗೆ ಅರ್ಪಿಸಿದುದು (ಆದಿ 131/58). ಅರ್ಜುನನ ಹಿತಕ್ಕಾಗಿ ದ್ರೋಣಾಚಾರ್ಯನು ಈತನ ಹೆಬ್ಬೆರಳನ್ನು ಕೊಯ್ದಿದುದು (ದ್ರೋಣ 181/17). ಆತನ ಪರಾಕ್ರಮ ಮತ್ತು ತನ್ನಿಂದ ಆತನ ವಧೆಯ ಕಾರಣದ ವಿವರಣೆಯನ್ನು ಶ್ರೀಕೃಷ್ಣನು ಅರ್ಜುನನಲ್ಲಿ ಹೇಳಿದುದು (ದ್ರೋಣ 181/18–21). ನಿಷಾದರಾಜ ಏಕಲವ್ಯನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟ ವರ್ಣನೆ (ಉದ್ಯೋಗ 48/77; ಮೌಸಲ 6/11).

(2) ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ರಾಜ (ಆದಿ 67/63). ಪಾಂಡವ ಪಕ್ಷದಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/17).

**ಏಕಲವ್ಯಸುತ** – ಏಕಲವ್ಯನ ಪುತ್ರ. ಅಶ್ವಮೇಧದ ಕುದುರೆಯನ್ನು ಹಿಂಬಾಲಿಸುತ್ತಿದ್ದ ಅರ್ಜುನನೊಡನೆ ಈತ ಘೋರ ಯುದ್ಧ ಮಾಡಿದನು. ಅರ್ಜುನನಿಂದ ಪರಾಜಿತನಾಗಿ, ಪಾರ್ಥನನ್ನು ಸತ್ಕರಿಸಿದನು (ಆಶ್ವ 83/8–10).

**ಏಕಶೃಂಗ** – ಸಪ್ತಪಿತೃಗಳಲ್ಲಿ ಒಬ್ಬ. ಈತ ಮೂರು ಮಂದಿ ಅಮೂರ್ತ ಪಿತೃಗಳಲ್ಲಿ ಒಬ್ಬನಾಗಿದ್ದಾನೆ. ಇವರೆಲ್ಲರೂ ಬ್ರಹ್ಮಸಭೆಯಲ್ಲಿ ಬ್ರಹ್ಮನ ಉಪಾಸನೆ ಮಾಡುತ್ತಾರೆ (ಸಭಾ 11/47–48).

**ಏಕಹಂಸ ತೀರ್ಥ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಸಹಸ್ರ ಗೋದಾನದ ಫಲ ಬರುತ್ತದೆ (ವನ 83/20).

**ಏಕಾಕ್ಷ** – (1) ಕಶ್ಯಪ ಮತ್ತು ದನುವಿನ ಮಗನಾದ ಒಬ್ಬ ವಿಖ್ಯಾತ ದಾನವ (ಆದಿ 65/29).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ಏಕಾನಂಗಾ** – ಯಶೋದೆಯ ಪುತ್ರಿ, ಶ್ರೀಕೃಷ್ಣನ ಸಹೋದರಿ. ಶ್ರೀಕೃಷ್ಣನು ಯಾರ ನಿಮಿತ್ತವಾಗಿ ಕಂಸನನ್ನು ವಧಿಸಿದನೋ, ಆಕೆ ಇವಳೇ ಆಗಿದ್ದಳು (ಸಭಾ 38/29).

**ಏಡಿ** – ಸ್ಕಂದನ ಅನುಚರಳಾದ ಮಾತೃಕೆ (ಶಲ್ಯ 46/13).

**ಏರಕ** – ಕೌರವ್ಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಆತ ಸರ್ಪಯಾಗದಲ್ಲಿ ಸುಟ್ಟು ಭಸ್ಮವಾದನು (ಆದಿ 57/13).

ಏಲಾಪತ್ರ – ಒಬ್ಬ ಮುಖ್ಯ ನಾಗ. ಇವನ ತಾಯಿ ಕದ್ರು ಮತ್ತು ತಂದೆ ಕಶ್ಯಪ. ದೇವತೆಗಳಿಗೆ ಬ್ರಹ್ಮನಿಂದ ಹೇಳಲ್ಪಟ್ಟ ಶಾಪೋದ್ಧಾರದ ಉಪಾಯಗಳ ವರ್ಣನೆಯನ್ನು ಈತ ತಾಯಿಯ ಶಾಪದಿಂದ ಚಿಂತಿತನಾದ ವಾಸುಕಿಗೆ ಹೇಳಿದುದು (ಆದಿ 38/1–19).

## ಐ

**ಐಕ್ಷ್ವಾಕಿ** – ಭುಮನ್ಯುರಾಜನ ಸೊಸೆ ಮತ್ತು ಸುಹೋತ್ರನ ಪತ್ನಿ. ಸುಹೋತ್ರನಿಂದ ಈಕೆಯ ಗರ್ಭದಲ್ಲಿ ಅಜಮೀಢ, ಸುಮೀಢ ಮತ್ತು ಪುರುಮೀಢ ಎಂಬ ಮೂವರು ಪುತ್ರರಾಗಿದ್ದರು (ಆದಿ 94/24–30)

**ಐರಾವತ** – (1) ಸಮುದ್ರಮಥನದ ಸಮಯದಲ್ಲಿ ಪ್ರಕಟವಾದ ಒಂದು ಆನೆ. ಅದು ಇಂದ್ರನ ಅಧಿಕಾರದಲ್ಲಿದೆ (ಆದಿ 18/40). ಇದು ಕ್ರೋಧವಶೆಯ ಮಗಳು ಭದ್ರಮನಾಳ ಮಗ. ದೇವತೆಗಳ ಆನೆ ಇದೇ ಆಗಿದೆ (ಆದಿ 66/62–63). (ಇದು ಪೂರ್ವದಿಕ್ಕಿನ ದಿಗ್ಗಜ) ಐರಾವತವೇ ಮೊದಲಾದ ನಾಲ್ಕು ದಿಗ್ಗಜಗಳು ಪುಷ್ಕರ ದ್ವೀಪದಲ್ಲಿ ಕೂಡಾ ಇರುತ್ತವೆ (ಭೀಷ್ಮ 12/33).

(2) ಕಶ್ಯಪ ಮತ್ತು ಕದ್ರುವಿನಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/5). ಈತನ ವಂಶದಲ್ಲಿ ಉಲೂಪಿಯ ತಂದೆಯಾದ ಕೌರವ್ಯನ ಜನ್ಮವಾಯಿತು (ಆದಿ 213/8). ಕಾಶ್ಯಪ ವಂಶದ ನಾಗಗಳಲ್ಲಿ ಈತನ ಗಣನೆ (ಉದ್ಯೋಗ 103/11).

(3) ಒಬ್ಬ ಅಸುರ. ಈತ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟ (ಸಭಾ 38/29).

**ಐರಾವತ ಖಂಡ** – ಶೃಂಗವಂತ ಪರ್ವತದಿಂದ ಉತ್ತರ ಸಮುದ್ರ ತಟದ ವರೆಗಿನ ಒಂದು ದೇಶ (ಭೀಷ್ಮ 6/37). ಸಂಜಯನಿಂದ ಧೃತರಾಷ್ಟ್ರನಿಗೆ ಇದರ ವಿಶೇಷ ವರ್ಣನೆ (ಭೀಷ್ಮ 8/10–15).

**ಐಲ** – ಇಲಾನಂದನ ಪುರೂರವ. ಈತ

ಯಮರಾಜನ ಸಭೆಯಲ್ಲಿ ವಿರಾಜಮಾನನಾಗಿದ್ದಾನೆ (ಸಭಾ 8/16). ಈತ ಜೀವನದಲ್ಲಿ ಎಂದೂ ಮಾಂಸ ಸೇವನೆ ಮಾಡಿರಲಿಲ್ಲ (ಅನು). ಪ್ರಾತಃ ಸಂಧ್ಯಾ ಕಾಲಗಳಲ್ಲಿ ಸ್ಮರಣೆ ಮಾಡಲು ಯೋಗ್ಯರಾದ ರಾಜರಲ್ಲಿ ಈತನೂ ಒಬ್ಬ (ಅನು 165/62).

**ಐಷೀಕ** – ಸೌಪ್ತಿಕ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 10ರಿಂದ 18 ತನಕ).

## ಓ

**ಓಘರಥ** – ಓಘವಂತನ ಪುತ್ರ (ಅನು 2/38).

**ಓಘವತಿ** – (1) ಒಂದು ನದಿ (ಭೀಷ್ಮ 9/22). ವಸಿಷ್ಠನಿಂದ ಆವಾಹಿಸಲ್ಪಟ್ಟಾಗ, ಕುರುಕ್ಷೇತ್ರದಲ್ಲಿ ಪ್ರಕಟವಾದ ಸರಸ್ವತಿಯ ಹೆಸರು (ಶಲ್ಯ 38/27). ಭೀಷ್ಮನು ಓಘವತಿಯ ದಡದಲ್ಲಿ ಶರಶಯ್ಯೆಯ ಮೇಲೆ ಮಲಗಿದ್ದನು (ಶಾಂತಿ 50/7).

(2) ಓಘವಂತನ ಪುತ್ರಿ (ಅನು 2/38). ಅಗ್ನಿಪುತ್ರ ಸುದರ್ಶನನೊಂದಿಗೆ ಈಕೆಯ ವಿವಾಹ (ಅನು 2/39). ಅತಿಥಿಸತ್ಕಾರಕ್ಕೋಸ್ಕರ ಬ್ರಾಹ್ಮಣರೂಪ ಧಾರಿ ಧರ್ಮನಿಗೆ ಆತ್ಮಸಮರ್ಪಣೆ (ಅನು 2/57).

**ಓಘವಂತ** – (1) ಕೌರವ ಪಕ್ಷದ ಒಬ್ಬ ಯೋಧ (ಕರ್ಣ 5/42).

(2) ನೃಗನ ಅಜ್ಜ (ಅನು 2/38).

**ಓಡ್ರ** – ಒಂದು ಪ್ರಾಚೀನ ದೇಶ. ಅಲ್ಲಿದ್ದ ರಾಜ ಕಾಣಿಕೆ ಒಪ್ಪಿಸಲು ಯುಧಿಷ್ಠಿರನ ಯಜ್ಞಕ್ಕೆ ಬಂದಿದ್ದನು (ಸಭಾ 57/23).

## ಔ

ಔಕ್ಥ್ಯ – ಒಂದು ಸಾಮ (ವನ 134/36).

ಔದಕಾ – ನರಕಾಸುರನು ಹದಿನಾರು ಸಾವಿರ ಕನ್ಯೆಯರನ್ನು ಸೆರೆಯಲ್ಲಿಟ್ಟ ಸ್ಥಳದ ಹೆಸರು. ನರಕಾಸುರನ ಈ ಅಂತಃಪುರ ಮಣಿಪರ್ವತದ ಮೇಲೆ ರಚಿಸಲ್ಪಟ್ಟಿತ್ತು. ನೀರಿನ ಉತ್ತಮ ಸೌಲಭ್ಯ ವಿದ್ದುದರಿಂದ ಆ ಸ್ಥಳದ ಹೆಸರು 'ಔದಕಾ' ಎಂದಾಗಿತ್ತು. ಇದು ಮುರಾಸುರನ ರಕ್ಷಣೆಯಲ್ಲಿತ್ತು (ಸಭಾ 38).

**ಔದುಂಬರಾ** – ಉದುಂಬರ ಅಥವಾ ಔದುಂಬರ ದೇಶದ ಕ್ಷತ್ರಿಯ ರಾಜಕುಮಾರ. ಈತ ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದನು (ಸಭಾ 52/13).

**ಔದ್ದಾಲಕ** – ಒಂದು ಮುನಿಸೇವಿತ ತೀರ್ಥ. ಅಲ್ಲಿ ಸ್ನಾನ ಮಾಡಿದರೆ ಮನುಷ್ಯ ಪಾಪಮುಕ್ತನಾಗುತ್ತಾನೆ (ವನ 84/61).

**ಔರಸಿಕ** – ಒಂದು ದೇಶ. ಆ ದೇಶದ ಯೋಧರನ್ನು ಶ್ರೀಕೃಷ್ಣನು ಗೆದ್ದಿದ್ದನು (ದ್ರೋಣ 11/16).

**ಔರ್ವ** – (ಊರ್ವ) ಒಬ್ಬ ಋಷಿ. ಈತ ಚ್ಯವನನಿಂದ ಮನುಪುತ್ರಿ ಆರುಷಿ ಎಂಬವಳ ಗರ್ಭದಲ್ಲಿ ಹುಟ್ಟಿದವನು. ಇವನು ತನ್ನ ತಾಯಿಯ ತೊಡೆಯನ್ನು ಸಿಗಿದು ಪ್ರಕಟಗೊಂಡನು (ಆದಿ 66/46). ಇವನ ಪುತ್ರನ ಹೆಸರು ಋಚೀಕ (ಆದಿ 66/47). ತಾಯಿಯ ತೊಡೆಯಿಂದ ಈತನ ಆವಿರ್ಭಾವ (ಆದಿ 177/24). ಈತನಿಗೆ ಔರ್ವನೆಂಬ ಹೆಸರಾಗಲು ಕಾರಣ (ಆದಿ 178/8). ಇವನಿಂದ ಕ್ಷತ್ರಿಯರ ಕಣ್ಣುಗಳ ದೃಷ್ಟಿಶಕ್ತಿಯ ಅಪಹಾರ (ಆದಿ 177/25). ಅಂಧರಾದ ಕ್ಷತ್ರಿಯರು ದೃಷ್ಟಿಶಕ್ತಿಯನ್ನು ಬೇಡಿದುದು ಮತ್ತು ಈತನು ಅನುಗ್ರಹಿಸಿದುದು (ಆದಿ 178/7). ಎಲ್ಲಾ ಲೋಕಗಳ ವಿನಾಶಕ್ಕಾಗಿ ಈತನ ಸಂಕಲ್ಪ ಮತ್ತು ಪ್ರಯತ್ನ (ಆದಿ 178/9–10). ಪಿತೃಗಳಿಂದ ಈತನ ಜಗದ್ವಿನಾಶಕ ಸಂಕಲ್ಪದ ನಿವಾರಣೆ (ಆದಿ 178/14–22). ತನ್ನ ಕ್ರೋಧಾಗ್ನಿಯನ್ನು ಈತ ಬಡಬಾಗ್ನಿಯ ರೂಪದಲ್ಲಿ ಸಮುದ್ರದಲ್ಲಿ ತ್ಯಾಗ ಮಾಡಿದುದು (ಆದಿ 179/21). ಈತನಿಂದ ತಾಲಜಂಘವಂಶ ವಿನಾಶದ ವರ್ಣನೆ (ಅನು 153/11).

**ಔಶನಸ** – ಸರಸ್ವತಿ ದಡದ ಒಂದು ತೀರ್ಥ. ಅಲ್ಲಿ ಬ್ರಹ್ಮಾದಿದೇವತೆಗಳೂ ಮುನಿಗಳೂ ವಾಸಿಸುತ್ತಾರೆ (ವನ 83/135). ಕಪಾಲಮೋಚನವೆಂದು ಇದರ ಹೆಸರಾಗಲು ಕಾರಣ ಮತ್ತು ಮಾಹಾತ್ಮ್ಯ (ಶಲ್ಯ 39/9–22).

**ಔಶಿಜ** – (1) ಒಬ್ಬ ಪ್ರಾಚೀನ ರಾಜ. ಅವನು ಇಂದ್ರನಿಗೆ ಸಮಾನನಾದ ಪರಾಕ್ರಮಿಯಾಗಿದ್ದನು

(ಆದಿ 1/226).

(2) ಒಬ್ಬ ಪ್ರಾಚೀನ ಧರ್ಮಜ್ಞ ಮುನಿ. ಅವನು ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/17). ಇವನು ಅಂಗಿರಸನ ಮಗ (ಶಾಂತಿ 208/27).

**ಔಶೀನರ (ಔಶೀನರಿ)** – ಉಶೀನರ ಕುಮಾರ ಶಿಬಿ. ಅವನು ಯಮರಾಜನ ಸಭೆಯಲ್ಲಿರುವ ರಾಜ (ಸಭಾ 8/14).

**ಔಶೀನರೀ** – ಉಶೀನರ ದೇಶದ ಶೂದ್ರ ಜಾತಿಯ ಒಬ್ಬ ಕನ್ಯೆ. ಅವಳ ಗರ್ಭದಿಂದ ಗೌತಮನು ಕಾಕ್ಷಿವಂತನೇ ಮೊದಲಾದ ಪುತ್ರರನ್ನು ಪಡೆದಿದ್ದನು (ಸಭಾ 21/5).

**ಔಷ್ಣೀಕ** – ಒಂದು ಪ್ರಾಚೀನ ದೇಶ. ಅಲ್ಲಿದ್ದ ರಾಜ ಕಪ್ಪಕಾಣಿಕೆ ತೆಗೆದುಕೊಂಡು ಯುಧಿಷ್ಠಿರನಲ್ಲಿಗೆ ಬಂದಿದ್ದನು (ಸಭಾ 51/17).

## ಕ

**ಕಂಸ** – (1) ಮಥುರೆಯ ಮಹಾರಾಜ ಉಗ್ರಸೇನನ ಪುತ್ರ (ಸಭಾ 22/36). ಈತನ ರೂಪದಲ್ಲಿ ಕಾಲನೇಮಿ ಎಂಬ ರಾಕ್ಷಸನೇ ಹುಟ್ಟಿ ಬಂದಿದ್ದನು (ಆದಿ 67/67). ಜರಾಸಂಧನ ಪುತ್ರಿ ಅವನ ಪತ್ನಿಯಾಗಿದ್ದಳು. ಇವನನ್ನು ರಾಜನಾಗಿ ಮಾಡುವ ಶರ್ತದೊಂದಿಗೆ ಆಕೆ ದೊರಕಿದ್ದಳು. ಮಂತ್ರಿಗಳ ಮೂಲಕ ಈತನಿಗೆ ರಾಜ್ಯಾಭಿಷೇಕ. ಇವನು ತಂದೆಯನ್ನು ಸೆರೆಯಲ್ಲಿಟ್ಟು ಸ್ವತಃ ರಾಜ್ಯ ಭೋಗವನ್ನು ಅನುಭವಿಸಿದುದು. ಈತನಿಂದ ವಸುದೇವನೊಡನೆ ದೇವಕಿಯ ವಿವಾಹ ಆಕಾಶದಿಂದ ದೇವದೂತನ ವಾಣಿಯನ್ನು ಕೇಳಿ, ಈತ ದೇವಕಿಯನ್ನು ಕೊಲ್ಲಲು ಉದ್ಯುಕ್ತನಾದುದು. ಇವನಿಂದ ದೇವಕಿಯ ಆರು ಮಕ್ಕಳ ವಧೆ (ಸಭಾ 22/36). ಕಂಸನಿಂದ ವಸುದೇವನ ಮೇಲೆ ಕಠಿನ ಕಾವಲು. ವಸುದೇವನು ತಂದು ಕೊಟ್ಟ ಗೋಪಕನ್ಯೆಯನ್ನು ಕೊಲ್ಲಲು ಈತನ ಪ್ರಯತ್ನ. ಈತನಿಂದ ವ್ರಜವಾಸಿ ಗೋಪಾಲಕರಿಗೆ ಪೀಡನೆ. ಶ್ರೀಕೃಷ್ಣ ಬಲರಾಮರಿಂದ ಸುನಾಮ ಮತ್ತು ಮುಷ್ಟಿಕರು ಕೊಲ್ಲಲ್ಪಟ್ಟಾಗ, ಕಂಸನ ಮನಸ್ಸಿನಲ್ಲಿ ಭಯದ ಆತಂಕ ಮತ್ತು ಶ್ರೀಕೃಷ್ಣನಿಂದ ಕಂಸನ ವಧೆ (ಸಭಾ 38). ಈತ ಅಸ್ತ್ರಜ್ಞಾನ ಮತ್ತು ಬಲಪರಾಕ್ರಮಗಳಲ್ಲಿ ಕಾರ್ತವೀರ್ಯನಿಗೆ ಸಮಾನನಾಗಿದ್ದನು. ಇವನಿಂದ ಸಮಸ್ತ ರಾಜರಿಗೂ ಉದ್ವೇಗ ಉಂಟಾಗುತ್ತಿತ್ತು. ಅವನಲ್ಲಿ ಒಂದು ಕೋಟಿ ಕಾಲಾಳು ಸೈನಿಕರಿದ್ದರು. ಎಂಟು ಲಕ್ಷ ರಥಿಕರು ಮತ್ತು ಅಷ್ಟೇ ಆನೆ ಸವಾರರಿದ್ದರು. ಮೂವತ್ತೆರಡು ಲಕ್ಷ ಕುದುರೆ ಸವಾರರ ಸೇನೆ ಇದ್ದಿತ್ತು (ಸಭಾ 38). ಶ್ರೀಕೃಷ್ಣನಿಂದ ಸಭೆಯಲ್ಲಿದ್ದ ಕಂಸ ಮತ್ತು ಮಂತ್ರಿ, ಪರಿವಾರಗಳ ವಧೆ (ಸಭಾ 38).

(2) ಒಬ್ಬ ಅಸುರ. ಅವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು. ಇವನು ಉಗ್ರಸೇನ ಪುತ್ರನಾದ ಕಂಸನಲ್ಲ (ಸಭಾ 38).

**ಕ** – (1) ಪ್ರಜಾಪತಿ (ಆದಿ 1/32).

(2) ದಕ್ಷಪ್ರಜಾಪತಿಯ ಒಂದು ಹೆಸರು (ಶಾಂತಿ 208/7).

(3) ಭಗವಂತನಾದ ವಿಷ್ಣುವಿನ ಒಂದು ಹೆಸರು (ಅನು 149/91).

**ಕಕುತ್ಸ್ಥ** – ಇಕ್ಷ್ವಾಕುವಂಶದ ಮಹಾರಾಜ ಶಶಾದನ ಮಗ. ಅವನು ಅನೇನಾ ಎಂಬವನ ತಂದೆ (ವನ 202/1–2).

**ಕಕ್ಷ** – ಒಂದು ಭಾರತೀಯ ಜನಪದ (ಭೀಷ್ಮ 9/49).

**ಕಕ್ಷಕ** – ವಾಸುಕಿ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಾಗದಲ್ಲಿ ಸುಟ್ಟುಹೋದನು (ಆದಿ 57/6).

**ಕಕ್ಷಸೇನ** – (1) ರಾಜಾ ಅವಿಕ್ಷಿತನ ಮೊಮ್ಮಗ ಅಥವಾ ಪರೀಕ್ಷಿತನ ಮೊದಲ ಮಗ (ಆದಿ 94/54). ಈತ ಯಮಸಭೆಯ ಸದಸ್ಯ ಮತ್ತು ಸೂರ್ಯಪುತ್ರ ಯಮನ ಉಪಾಸಕನೆಂದು ಹೇಳಲಾಗಿದೆ (ಸಭಾ 8/18). ವಸಿಷ್ಠರಿಗೆ ಸರ್ವಸ್ವ ಸಮರ್ಪಣೆ ಮಾಡಿ ಈತನ ಸ್ವರ್ಗಲೋಕ ಗಮನ (ಅನು 137/15). ಸಾಯಂ ಪ್ರಾತಃಕಾಲಗಳಲ್ಲಿ ಸ್ಮರಣೆಮಾಡಲು ಯೋಗ್ಯರಾದ ಪುಣ್ಯಾತ್ಮ ರಾಜರಲ್ಲಿ ಈತನೂ ಒಬ್ಬ (ಅನು 165/59). ಈತ ನ್ಯಾಯಮಾರ್ಗದಿಂದ ಸಂಪಾದಿಸಿದ ಧನವನ್ನು ದಾನಮಾಡಿ, ಸತ್ಯಭಾಷಣದಿಂದ ಪರಮಸಿದ್ಧಿಯನ್ನು ಪ್ರಾಪ್ತಿಮಾಡಿಕೊಂಡನು (ಆಶ್ವ 91/35–36).

(2) ಯುಧಿಷ್ಠಿರನ ಸಭೆಯಲ್ಲಿ ಕುಳಿತು, ಅವನ ಉಪಾಸನೆ ಮಾಡುತ್ತಿರುವ ಒಬ್ಬ ರಾಜ (ಸಭಾ 4/22).

**ಕಕ್ಷಸೇನ ಆಶ್ರಮ** – ಅಸಿತವೆಂಬ ಹೆಸರಿನ ಪರ್ವತದ ಮೇಲೆ ಇರುವ ಒಂದು ಪುಣ್ಯದಾಯಕ ಆಶ್ರಮ (ವನ 89/12).

**ಕಕ್ಷೀವಂತ** – (1) ಒಬ್ಬ ಪ್ರಾಚೀನ ರಾಜ. ಅವನು ವ್ಯುಷಿತಾಶ್ವನ ಪತ್ನಿಯಾದ ಭದ್ರೆಯ ತಂದೆ (ಆದಿ 120/17)

(2) ಒಬ್ಬ ಋಷಿ. ಅವನು ಅಂಗೀರಸನ ಮಗ. ಪೂರ್ವದಿಕ್ಕಿನಲ್ಲಿ ವಾಸಿಸುತ್ತಾನೆ (ಶಾಂತಿ 208/27–28, ಅನು 165/37–38). ಇವನು ಏಕಾಗ್ರ ಚಿತ್ತದಿಂದ ವೇದಗಳ ಋಚೆಗಳ ಮೂಲಕ ಭಗವಾನ್ ವಿಷ್ಣುವನ್ನು ಸ್ತುತಿಸಿ, ಅವನ ಕೃಪೆ ಮತ್ತು ತಪಸ್ಸಿನಿಂದ ಸಿದ್ಧಿಯನ್ನು ಪ್ರಾಪ್ತಿಸಿಕೊಂಡನು (ಶಾಂತಿ 292/15–17). ಈತ ತಪಸ್ಸಿನಿಂದ ತನ್ನ ಶ್ರೇಷ್ಠವಾದ ಪ್ರಕೃತಿಯನ್ನು ಹೊಂದಿದನು (ಶಾಂತಿ 296/14–16). ಈತ ಮಹೇಂದ್ರನ ಗುರು, ಬ್ರಹ್ಮತೇಜಸ್ಸಿನಿಂದ ಸಂಪನ್ನ ಮತ್ತು ಲೋಕಸೃಜಕನೆಂದು ಹೇಳಲ್ಪಟ್ಟಿದ್ದಾನೆ. ಇವನ ತೇಜಸ್ಸು ರುದ್ರ, ಅಗ್ನಿ ಮತ್ತು ವಸುಗಳಿಗೆ ಸಮಾನವಾಗಿದೆ ಇವನು ಭೂಮಿಯಲ್ಲಿ ಶುಭಕರ್ಮಗಳನ್ನು ಮಾಡಿ, ದೇವತೆಗಳೊಡಗೂಡಿ ಆನಂದವನ್ನು ಅನುಭವಿಸುತ್ತಾನೆ. ಇವನನ್ನು ಕೀರ್ತಿಸುವುದರಿಂದ ಇಂದ್ರಲೋಕ ಪ್ರಾಪ್ತವಾಗುತ್ತದೆ (ಅನು 150/30–33).

**ಕಕ್ಷೇಯ** – ಪೂರುಪುತ್ರ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯಲ್ಲಿ ಹುಟ್ಟಿದ ಪುತ್ರ (ಆದಿ 94/10). ಸಾಯಂಪ್ರಾತಃಕಾಲಗಳಲ್ಲಿ ಸ್ಮರಣೆಗೆ ಅರ್ಹರಾದ ರಾಜರಲ್ಲಿ ಈತನೂ ಒಬ್ಬ (ಅನು 165/6).

**ಕಙ್ಕ** – (1) ಒಬ್ಬ ಪ್ರಾಚೀನ ರಾಜ (ಆದಿ 1/233).

(2) ಒಂದು ಪಕ್ಷಿ. ಅದು ಸುರಸೆಯ ಸಂತಾನ (ಆದಿ 66/69).

(3) ವೃಷ್ಣಿಕುಲದ ಏಳು ಮಹಾರಥಿ ವೀರರಲ್ಲಿ ಒಬ್ಬ (ಸಭಾ 14/59). ಇವನು ದ್ರೌಪದಿ ಸ್ವಯಂವರಕ್ಕೆ ಬಂದಿದ್ದನು (ಆದಿ 185/19). ಯುಧಿಷ್ಠಿರನ ರಾಜಸೂಯಾಧ್ವರಕ್ಕೂ ಈತ ಬಂದಿದ್ದನು (ಸಭಾ 34/15).

(4) ಒಂದು ಜನಪದ. ಅಲ್ಲಿನ ಜನರು ಧರ್ಮರಾಯನಿಗೆ ಕಪ್ಪಕಾಣಿಕೆ ತಂದಿದ್ದರು (ಸಭಾ 51/30) (ಶಾಂತಿ 65/13).

(5) ಛದ್ಮವೇಷದ ಬ್ರಾಹ್ಮಣ ಅಜ್ಞಾತವಾಸದ ಸಮಯದಲ್ಲಿ ಇದು ಯುಧಿಷ್ಠಿರನ ಬದಲಾದ ಹೆಸರಾಗಿತ್ತು (ವಿರಾಟ 1/24; 18/25; 31/21; 70/4).

**ಕಙ್ಕಣಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/16).

**ಕಚ** – ದೇವಗುರು ಬೃಹಸ್ಪತಿಯ ಜ್ಯೇಷ್ಠ ಪುತ್ರ (ಆದಿ 76/11). ದೇವತೆಗಳ ಒತ್ತಾಯದಿಂದ ಈತ ಸಂಜೀವನೀ ವಿದ್ಯೆ ಕಲಿಯಲು ಶುಕ್ರಾಚಾರ್ಯನ ಬಳಿಗೆ ಹೋದುದು (ಆದಿ 76/12–18). ಶುಕ್ರಾಚಾರ್ಯನಲ್ಲಿ ತನ್ನ ಪರಿಚಯ ಹೇಳಿ, ಒಂದು ಸಾವಿರ ವರ್ಷಗಳ ವರೆಗೆ, ಬ್ರಹ್ಮಚರ್ಯ ಪಾಲನೆಗೋಸ್ಕರ ಈತ ಅನುಮತಿ ಕೇಳಿದುದು (ಆದಿ 76/20). ಶುಕ್ರಾಚಾರ್ಯನಿಂದ ಇವನಿಗೆ ಸ್ವಾಗತ (ಆದಿ 76/21) ಗುರುಕುಲದಲ್ಲಿ ಈತನಿಂದ ಶುಕ್ರಾಚಾರ್ಯ ಮತ್ತು ಆಚಾರ್ಯ ಪುತ್ರಿ ದೇವಯಾನಿಯ ಆರಾಧನೆ (ಆದಿ 76/22–25). ದೇವಯಾನಿಯಿಂದ ಈತನ ಏಕಾಂತ ಪರಿಚರ್ಯೆ (ಆದಿ 76/26). ಇವನಿಂದ ಗುರುಗಳ ಗೋಸೇವೆ (ಆದಿ 76/27). ಈತನನ್ನು ಕೊಂದು ದಾನವರು ನರಿನಾಯಿಗಳಿಗೆ ತಿನ್ನಿಸಿದುದು (ಆದಿ 76/29). ಈತನ ವಿಯೋಗದಿಂದ ದೇವಯಾನಿಯ ಚಿಂತೆ (ಆದಿ 76/31–32). ಶುಕ್ರಾಚಾರ್ಯರ ಸಂಜೀವಿನಿಯ ಪ್ರಭಾವದಿಂದ ಈತ ನಾಯಿಗಳ ಹೊಟ್ಟೆಯನ್ನು ಹರಿದು ಹೊರಗೆ ಪ್ರಕಟವಾದುದು (ಆದಿ 76/34). ದಾನವರು ಈತನನ್ನು ಅರೆದು ಸಮುದ್ರದ ನೀರಿನಲ್ಲಿ ಸೇರಿಸಿದುದು (ಆದಿ 76/41). ದೇವಯಾನಿಯು ಪುನಃ ಚಿಂತಿತಳಾದುದರಿಂದ, ಶುಕ್ರಾಚಾರ್ಯನು ಈತನನ್ನು ಪುನಃ ಸಜೀವಗೊಳಿಸಿದುದು (ಆದಿ 76/42). ದಾನವರು ಇವನನ್ನು ಕೊಂದು, ಸುಟ್ಟು, ಈತನ ಬೂದಿಯನ್ನು ಮದಿರೆಯಲ್ಲಿ ಸೇರಿಸಿ ಶುಕ್ರಾಚಾರ್ಯರಿಗೆ ಕುಡಿಸಿದುದು (ಆದಿ 76/43). ಗುರುವಿನ ಹೊಟ್ಟೆಯಲ್ಲಿ ಮೃತಸಂಜೀವಿನಿ ವಿದ್ಯೆಕಲಿತು, ಈತ ಶುಕ್ರಾಚಾರ್ಯನನ್ನು ಜೀವಿಸುವಂತೆ ಮಾಡಿದುದು (ಆದಿ 76/58–62).

ಇವನಿಂದ ಗುರುವಿನ ಮಹಿಮೆ ಮತ್ತು ಅನಾದರದಿಂದಾಗುವ ಹಾನಿಯ ವರ್ಣನೆ (ಆದಿ 76/63–64). ದೇವಯಾನಿ ಆಗ್ರಹ ಮಾಡಿದರೂ, ಇವನು ಆಕೆಯೊಂದಿಗೆ ವಿವಾಹವಾಗಲು ಒಪ್ಪದಿದ್ದದ್ದು (ಆದಿ 77/6–15). ದೇವಯಾನಿಯಿಂದ ಈತನಿಗೆ ಸಂಜೀವಿನಿ ವಿದ್ಯೆ ಸಿದ್ಧಿಸದಂತೆ ಶಾಪ (ಆದಿ 77/16). ದೇವಯಾನಿಗೆ ಬ್ರಾಹ್ಮಣ ಜಾತಿಯ ಪತಿ ದೊರಕದಂತೆ ಈತನಿಂದ ಶಾಪ (77/19). ಸ್ವರ್ಗಕ್ಕೆ ಹೋದಮೇಲೆ ದೇವತೆಗಳಿಂದ ಈತನಿಗೆ ವರದಾನ (ಆದಿ 77/23). ಈತನಿಂದ ಸಂಜೀವನಿ ವಿದ್ಯೆಕಲಿತು ದೇವತೆಗಳು ಕೃತಾರ್ಥರಾದುದು (ಆದಿ 78/1). ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮನ ಬಳಿಗೆ ಈತನೂ ಹೋಗಿದ್ದನು (ಶಾಂತಿ 47/9, ಅನು 26/8).

**ಕಚಗ್ರಹ ವಿಕ್ಷೇಪಕ ಯಂತ್ರ** – ಯುದ್ಧದಲ್ಲಿ ಶತ್ರುಗಳ ನುಣುಪಾದ ಕೂದಲು ಜಾರಿ ಹೋಗದಂತೆ ಸೆಳೆದೆಳೆದು, ಬಹುದೂರದ ವರೆಗೆ ನೂಕಬಹುದಾದ ಯಂತ್ರ (ಉದ್ಯೋಗ 155 ಅಧ್ಯಾಯ).

**ಕಚ್ಛ** – ಒಂದು ಭಾರತೀಯ ಜನಪದ (ಭೀಷ್ಮ 9/56).

**ಕಚ್ಛಪೀ** – ನಾರದನ ವೀಣೆ (ಶಲ್ಯ 54/19).

**ಕಠ** – ಧರ್ಮಜ್ಞನಾದ ಒಬ್ಬ ಜಿತೇಂದ್ರಿಯ ಋಷಿ. ಅವನು ಯುಧಿಷ್ಠಿರನ ಸಭೆಯಲ್ಲಿ ಇದ್ದನು (ಸಭಾ 4/18). ರಾಜಸೂಯಯಜ್ಞದಲ್ಲಿ ಯುಧಿಷ್ಠಿರನು ಇವನನ್ನು ಸತ್ಕರಿಸಿದ್ದನು (ಸಭಾ 45/38). ಸರ್ಪದಂಶನದಿಂದ ಸತ್ತ ಪ್ರಮದ್ವರೆಯನ್ನು ನೋಡಲು ಈತ ಬಂದಿದ್ದನು (ಆದಿ 8/25).

**ಕಣಿಕ** – (1) ಧೃತರಾಷ್ಟ್ರನ ಒಬ್ಬ ಮಂತ್ರಿ. ಅವನು ಕಪಟ ರಾಜನೀತಿ ಮತ್ತು ಅರ್ಥಶಾಸ್ತ್ರದಲ್ಲಿ ಪಂಡಿತನಾಗಿದ್ದನು ಮತ್ತು ಉತ್ತಮ ಮಂತ್ರಗಳ ಜ್ಞಾನಿಯಾಗಿದ್ದನು (ಆದಿ 139/2). ಇವನಿಂದ ಧೃತರಾಷ್ಟ್ರನಿಗೆ ಕಪಟನೀತಿಯ ಉಪದೇಶ (ಆದಿ 139/5–92).

(2) ಭರದ್ವಾಜಕುಲದಲ್ಲಿ ಹುಟ್ಟಿದ ಒಬ್ಬ ಕೂಟನೀತಿಜ್ಞ ಬ್ರಾಹ್ಮಣ. ಅವನು ಸೌವೀರರಾಜ ಶತ್ರುಂಜಯನಿಗೆ ಕಪಟನೀತಿಯ ಉಪದೇಶ ಮಾಡಿದ್ದನು (ಶಾಂತಿ 140).

**ಕಣ್ಟಕಿನಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/16).

**ಕಣ್ದರೀಕ** – ಒಬ್ಬ ಗೋತ್ರ ಪ್ರವರ್ತಕ ಋಷಿ. ಅವನ ಕುಲದಲ್ಲಿ ಪ್ರತಾಪವಂತನಾದ ರಾಜಾಬ್ರಹ್ಮದತ್ತನು ಹುಟ್ಟಿದನು (ಶಾಂತಿ 342/105).

**ಕಣ್ಡು** – ಒಬ್ಬ ಮಹರ್ಷಿ. ಅವನ ಪುತ್ರಿ 'ವಾರ್ಕ್ಷಿ' ಹತ್ತುಮಂದಿ ಪ್ರಚೇತಸರೊಂದಿಗೆ ವಿವಾಹ ಸಂಬಂಧ ಸ್ಥಾಪಿಸಿಕೊಂಡಿದ್ದಳು (ಆದಿ 195/15).

**ಕಣ್ಡೂತಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/14).

**ಕಣ್ವ** – (1) ಕಶ್ಯಪಗೋತ್ರದ ಪ್ರಾಚೀನ ಮಹರ್ಷಿ. ಅವನ ಆಶ್ರಮ ಮಾಲಿನೀ ನದಿಯ ತಟದಲ್ಲಿತ್ತು (ಆದಿ 70/21–28). ಈತನ ಆಶ್ರಮದ ವರ್ಣನೆ (ಆದಿ 70/24–29). ಈತನನ್ನು ಮೇಧಾತಿಥಿಯ ಪುತ್ರನೆಂದೂ, ಪೂರ್ವ ದಿಕ್ಕಿನಲ್ಲಿರುವ ಋಷಿಯೆಂದೂ ಹೇಳಲಾಗಿದೆ (ಶಾಂತಿ 208/27) (ಅನು 15/31; 165/38). ಇವನಿಂದ ಶಕುಂತಲೆಯ ಪಾಲನೆ ಪೋಷಣೆ ಮತ್ತು ನಾಮಕರಣ (ಆದಿ 72/13–16). ಶಕುಂತಲೆಯ ಗಾಂಧರ್ವ ವಿವಾಹದ ಸಮರ್ಥನೆ (ಆದಿ 73/26–27). ಈತನಿಂದ ಶಕುಂತಲೆಗೆ ಪಾತಿವ್ರತ್ಯ ಧರ್ಮದ ಉಪದೇಶ ಮತ್ತು ಅದರ ಮಹಿಮೆಯ ವರ್ಣನೆ (ಆದಿ 74/9–10). ಶಕುಂತಲೆಯನ್ನು ಪತಿಗೃಹಕ್ಕೆ ತಲುಪಿಸುವಂತೆ ಶಿಷ್ಯರಿಗೆ ಈತನ ಆದೇಶ (ಆದಿ 74/10–11). ಸ್ತ್ರೀಯರು ತಂದೆಯ ಮನೆಯಲ್ಲಿ ಅಧಿಕ ದಿನಗಳಿರುವ ಬಗ್ಗೆ ಈತನಿಂದ ಆಕ್ಷೇಪ (ಆದಿ 74/12). ಈತ ಆಚಾರ್ಯನಾಗಿ ರಾಜಾ ಭರತನ 'ಗೋವಿತತ'ವೆಂಬ ಹೆಸರಿನ ಅಶ್ವಮೇಧಯಜ್ಞವನ್ನು ಸಾಂಗಗೊಳಿಸಿದುದು (ಆದಿ 74/130). ಈತ ದುರ್ಯೋಧನನಿಗೆ ತಿಳುವಳಿಕೆ ನೀಡುತ್ತಾ, ಮಾತಲಿಯ ಉಪಾಖ್ಯಾನ ಹೇಳಿದುದು (ಉದ್ಯೋಗ 97/12 ರಿಂದ 105/37). ಇವನಿಗೆ ಭರತನಿಂದ ದಕ್ಷಿಣೆಯ ರೂಪದಲ್ಲಿ ಜಾಂಬೂನದ ಸುವರ್ಣದಿಂದ ತಯಾರಿಸಲ್ಪಟ್ಟ ಒಂದು ಸಾವಿರ ಕಮಲಗಳು ಪ್ರಾಪ್ತವಾಗಿದ್ದವು (ದ್ರೋಣ 68/11–12).

(2) ಪ್ರಾಚೀನ ಯುಗಾಂತರದ ಒಬ್ಬ ಪ್ರಸಿದ್ಧ ತಪಸ್ವಿಯಾದ ಮಹಾಮುನಿ. ಅವನಿಗೆ ಬ್ರಹ್ಮನು ವರಕೊಟ್ಟಿದ್ದನು (ಅನು 141).

**ಕಣ್ವಾಶ್ರಮ** – ಕಣ್ವ ಮುನಿಯ ಆಶ್ರಮ. ಇದು ಲಕ್ಷ್ಮಿಯಿಂದ ಸೇವ್ಯವಾದುದು ಮತ್ತು ಲೋಕ ಪೂಜಿತವಾದುದು. ಈ ಸ್ಥಳ ಧರ್ಮಾರಣ್ಯದ ಒಳಗಿದೆ. ಇಲ್ಲಿಗೆ ಪ್ರವೇಶ ಮಾಡಿದ ಮಾತ್ರಕ್ಕೇ ಮನುಷ್ಯ ಪಾಪಮುಕ್ತನಾಗುತ್ತಾನೆ (ವನ 82/45–46). ಪ್ರವೇಣಿ ನದಿಯ ಉತ್ತರ ಮಾರ್ಗದಲ್ಲಿ ಕಣ್ವನ ಪುಣ್ಯಮಯ ಆಶ್ರಮವಿದೆ ಅಲ್ಲಿ ವರುಣ ಶ್ರೋತಸ್ ಎಂಬ ಪರ್ವತದ ಮೇಲೆ, ಸೂರ್ಯನ ಪಾರ್ಶ್ವವರ್ತಿ ಮಾಠರ ದೇವತೆಯ ವಿಜಯ ಸ್ತಂಭ ಸುಶೋಭಿತವಾಗಿದೆ (ವನ 88/10–11). (ಕೆಲವರ ಅಭಿಪ್ರಾಯ ಪ್ರಕಾರ ಈ ಸ್ಥಾನವು ರಾಜಪುತಾನದಲ್ಲಿ ಕೋಟಾದಿಂದ ನಾಲ್ಕು ಮೈಲು ಆಗ್ನೇಯದಲ್ಲಿ ಚಂಬಲ್ ನದಿಯ ತಟದ ಮೇಲಿದೆ.

**ಕಥಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ಕದಲೀವನ** – ಸೌಗಂಧಿಕ ಕಮಲಗಳಿಂದ ತುಂಬಿರುವ, ಕುಬೇರ ಪುಷ್ಕರಿಣಿಯ ದಡದಲ್ಲಿರುವ, ಸುವರ್ಣಮಯ ಬಾಳೆಗಳಿಂದ ಕೂಡಿದ ಒಂದು ಉಪವನ. ಅದು ಹನುಮಂತನ ನಿವಾಸಸ್ಥಾನವಾಗಿತ್ತು (ವನ 146/58).

**ಕದ್ರು** – ದಕ್ಷ ಪ್ರಜಾಪತಿಯ ಒಬ್ಬಳು ಮಗಳು (ಆದಿ 65/13). ಈಕೆ ನಾಗಗಳ ತಾಯಿ ಮತ್ತು ಕಶ್ಯಪನ ಪತ್ನಿ. ಕಶ್ಯಪನು ವರಕೊಡಲು ಸಿದ್ಧನಾದಾಗ, ತಾನು ಒಂದು ಸಾವಿರ ನಾಗಗಳನ್ನು ಪುತ್ರರೂಪದಲ್ಲಿ ಪಡೆಯುವಂತೆ ಆಕೆಯ ಪ್ರಾರ್ಥನೆ (ಆದಿ 16/5–8). ಐನೂರು ವರ್ಷಗಳ ಅನಂತರ ಅವಳಿಗೆ ಒಂದುಸಾವಿರ ಪುತ್ರರ ಪ್ರಾಪ್ತಿ (ಆದಿ 16/15). ತನ್ನ ಮಕ್ಕಳು ಆಜ್ಞಾಪಾಲನೆ ಮಾಡದ ಕಾರಣ ಈಕೆಯಿಂದ ಶಾಪ (ಆದಿ 20/8). "ಉಚ್ಚೈಃಶ್ರವ ಕುದುರೆಯ ಬಣ್ಣವೇನು?" ಈ ಪ್ರಶ್ನೆಯ ಮೇಲೆ ಕದ್ರು ಮತ್ತು ವಿನತೆಯ ಪರಸ್ಪರ ವಿವಾದ ಪರಾಜಿತರಾದರೆ ದಾಸಿಯಾಗಿರುವ ಶರ್ತವನ್ನಿಟ್ಟದ್ದು. ಕದ್ರು ಮೋಸದಿಂದ ವಿನತೆಯನ್ನು ತನ್ನ ದಾಸಿಯಾಗಿ ಮಾಡಿಕೊಂಡದ್ದು (ಆದಿ 20/2 ರಿಂದ 23). ಇವಳು ತನ್ನ ಮಕ್ಕಳು ಸೂರ್ಯನ ತಾಪದಿಂದ ರಕ್ಷಣೆ ಪಡೆಯುವಂತೆ ಇಂದ್ರನನ್ನು ಸ್ತುತಿಸಿದುದು (ಆದಿ 25/7–17). ಕದ್ರುವಿನ ಪ್ರಮುಖ ಸಂತಾನಗಳ ನಾಮಾವಳಿ (ಆದಿ 35). ಇವಳು ಬ್ರಹ್ಮಸಭೆಯಲ್ಲಿ ಬ್ರಹ್ಮನ ಉಪಾಸನೆ ಮಾಡುತ್ತಾಳೆ (ಸಭಾ 11/41–43). ಇವಳು ಸ್ಕಂದಗ್ರಹದ ರೂಪದಲ್ಲಿ ಸೂಕ್ಷ್ಮಶರೀರ ಧಾರಣೆಮಾಡಿ, ಗರ್ಭವತಿ ಸ್ತ್ರೀಯರ ಗರ್ಭಪ್ರವೇಶ ಮಾಡಿ, ಅಲ್ಲಿ ಆ ಗರ್ಭವನ್ನು ತಿಂದುಬಿಡುತ್ತಾಳೆ. ಇದರಿಂದಾಗಿ ಅವಳು ಗರ್ಭಿಣಿ ಸರ್ಪಗಳನ್ನು ಪ್ರಸವಿಸುತ್ತಾಳೆ (ವನ 230/37–38). ಇದರ ಶಾಂತಿಗೆ ಉಪಾಯ (ವನ 230/43–45).

**ಕಧ್ಮೋರ** – ಪ್ರಾತಃಕಾಲ ಮತ್ತು ಸಂಜೆ ಸ್ಮರಣೆ ಮಾಡಲು ಯೋಗ್ಯನಾದ ಒಬ್ಬ ರಾಜರ್ಷಿ (ಅನು 165/53).

**ಕನಕಧ್ವಜ** – ಧೃತರಾಷ್ಟ್ರನ ಮಗ (ಕನಕಾಂಗದ) (ಆದಿ 116/14). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/3). ಭೀಮಸೇನನಿಂದ ಇವನ ವಧೆ (ಭೀಷ್ಮ 96/26–27).

**ಕನಕಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಕನಕಾಂಗದ** (ಕನಕಧ್ವಜ) – ಧೃತರಾಷ್ಟ್ರನ ಒಬ್ಬ ಮಗ (ಆದಿ 67/105). (ನೋಡಿ – ಕನಕಧ್ವಜ).

**ಕನಕಾಪೀಡ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಕನಕಾಯು** – ಧೃತರಾಷ್ಟ್ರನ ಪುತ್ರ (ಆದಿ 67/99). ಇವನಿಗೆ ಕರಕಾಯು ಎಂಬ ಹೆಸರೂ ಇತ್ತು ದ್ರೌಪದೀ ಸ್ವಯಂವರದ ಸಂದರ್ಭದಲ್ಲಿ ಅವನ ಇದೇ ಹೆಸರು ಉಲ್ಲೇಖವಾಗಿದೆ (ಆದಿ 185/2). (ಈ ಎರಡೂ ಹೆಸರುಗಳಲ್ಲಿ ಅವನ ಮರಣದ ಉಲ್ಲೇಖವಿಲ್ಲ ಅವನಿಗೆ ಮೂರನೆಯ ಯಾವುದಾದರೂ ಹೆಸರೂ ಇರಲು ಸಾಧ್ಯವಿದೆ)

**ಕನಕಾವತಿ** – ಸ್ಕಂಧನ ಅನುಚರಿ ಮಾತೃಕೆ (ಶಲ್ಯ 46/8).

**ಕನಖಲ** – ಒಂದು ತೀರ್ಥ. ಅಲ್ಲಿ ಸ್ನಾನಮಾಡಿ, ಮೂರು ದಿನ ಉಪವಾಸ ಮಾಡುವ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ (ವನ 84/30;90/32). ಇಲ್ಲಿ ಸ್ನಾನಮಾಡಿದರೆ ಸಿಗುವ ಫಲ (ಅನು 25/13).

**ಕನ್ದರಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/9).

**ಕನ್ದರ್ಪ** – ಕಾಮದೇವನ ಒಂದು ಹೆಸರು (ವನ 53/28).

**ಕನ್ಯಕಾಗುಣ** – ಒಂದು ಭಾರತೀಯ ಜನಪದ

(ಭೀಷ್ಮ 9/52).

**ಕನ್ಯಾಕೂಪ** – ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನದ ಫಲದಿಂದ ಕೀರ್ತಿಯ ಪ್ರಾಪ್ತಿ (ಅನು 25/19–20).

**ಕನ್ಯಾತೀರ್ಥ** – (1) ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ (ವನ 83/112).

(2) ಪಾಂಡ್ಯದೇಶದಲ್ಲಿ ದಕ್ಷಿಣ ಸಮುದ್ರದ ದಡದಲ್ಲಿರುವ ಕನ್ಯಾ ಅಥವಾ ಕುಮಾರಿ ಎಂಬ ಹೆಸರಿನ ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಸಾವಿರ ಗೋದಾನದ ಫಲದೊರಕುತ್ತದೆ ಮತ್ತು ಪಾಪದಿಂದ ಬಿಡುಗಡೆಯಾಗುತ್ತದೆ (ವನ 85/23; 88/14; 95/3).

**ಕನ್ಯಾಶ್ರಮ** – ಒಂದು ತೀರ್ಥ. ಅಲ್ಲಿ ಮೂರು ರಾತ್ರಿಗಳ ವರೆಗೆ ಉಪವಾಸವಿದ್ದು, ನಿಯಮಿತ ಭೋಜನ ಮಾಡುವುದರಿಂದ, ಸ್ವರ್ಗೀಯ ಸುಖ ಸುಲಭವಾಗುತ್ತದೆ (ವನ 83/18–19).

**ಕನ್ಯಾಸಂವೇದ್ಯತೀರ್ಥ** – ಒಂದು ಪ್ರಾಚೀನ ತೀರ್ಥ. ಅದರ ಸೇವನೆಯಿಂದ ಮನುಷ್ಯನಿಗೆ ಪ್ರಜಾಪತಿ ಮನುವಿನ ಲೋಕ ಪ್ರಾಪ್ತವಾಗುತ್ತದೆ (ವನ 84/136).

**ಕನ್ಯಾಹ್ರದ** – ಒಂದು ತೀರ್ಥ. ಅಲ್ಲಿ ನಿವಾಸ ಮಾಡುವುದರಿಂದ ದೇವಲೋಕ ಪ್ರಾಪ್ತವಾಗುತ್ತದೆ (ಅನು 25/13).

**ಕಪ** – ದಾನವರ ಒಂದು ದಳ. ಇದು ಸ್ವರ್ಗದ ಮೇಲೆ ಅಧಿಕಾರ ಮಾಡಿದುದು (ಅನು 157/4). ಬ್ರಾಹ್ಮಣರಿಂದ ಇದರ ಸಂಹಾರ (ಅನು 157/17–18).

**ಕಪಟ** – ಒಬ್ಬ ದಾನವ ಕಶ್ಯಪ ಪತ್ನಿ ದನುವಿನ ಪುತ್ರ (ಭೀಷ್ಮ 65/26).

**ಕಪಾಲಮೋಚನ** – ಕುರುಕ್ಷೇತ್ರದಲ್ಲಿ ಸರಸ್ವತಿ ತಟದಲ್ಲಿರುವ ಒಂದು ತೀರ್ಥ. ಅದು ಎಲ್ಲಾ ಪಾಪಗಳಿಂದಲೂ ಮುಕ್ತಗೊಳಿಸುತ್ತದೆ (ವನ 83/137 ಶಲ್ಯ 39).

**ಕಪಾಲಿ** – ಏಕಾದಶ ರುದ್ರರಲ್ಲಿ ಒಬ್ಬ. ಈತ ಬ್ರಹ್ಮನ ಪೌತ್ರ ಮತ್ತು ಸ್ಥಾಣುವಿನ ಪುತ್ರನಾಗಿದ್ದನು (ಆದಿ 66/1–3).

**ಕಪಿಂಜಲ** – ಒಂದು ಜಾತಿಯ ಪಕ್ಷಿಗಳು ಅವುಗಳು ಸತ್ತುಹೋದ ತ್ರಿಶಿರನ ವೇದಪಾಠದ ಮುಖದಿಂದ ಉತ್ಪನ್ನವಾಗಿದ್ದವು (ಉದ್ಯೋಗ 9/40).

**ಕಪಿಂಜಲಾ** – ಒಂದು ನದಿ. ಭಾರತೀಯ ಪ್ರಜೆಗಳು ಅದರ ನೀರು ಕುಡಿಯುತ್ತಾರೆ (ಭೀಷ್ಮ 9/26).

**ಕಪಿಧ್ವಜ** – ಅರ್ಜುನನ ಒಂದು ಹೆಸರು (ಭೀಷ್ಮ 25/20).

**ಕಪಿಲ** – (1) ಭಗವಂತ ಶ್ರೀಕೃಷ್ಣ ಅಥವಾ ವಿಷ್ಣುವಿನ ಪುರಾತನ ಅವತಾರವಾದ ಮಹರ್ಷಿ ಕಪಿಲ. ಅವನು ಕೇವಲ ದೃಷ್ಟಿಪಾತದಿಂದ ಸಗರ ಪುತ್ರರನ್ನು ಭಸ್ಮಮಾಡಿದ್ದನು (ವನ 47/18–19; 107/32–33). ಇವನು ಕರ್ದಮ ಪ್ರಜಾಪತಿಯ ಪುತ್ರ. ಇವನ ತಾಯಿಯ ಹೆಸರು ದೇವಹೂತಿ ಇವನ ಇನ್ನೊಂದು ಹೆಸರು 'ಚಕ್ರಧನು' (ಉದ್ಯೋಗ 109/17–18) ಶಾಂತಿ 43ನೇ ಅಧ್ಯಾಯದಲ್ಲಿ ಕೂಡಾ ಇವನ ಮಹಿಮೆ ಉಲ್ಲೇಖಿಸಲ್ಪಟ್ಟಿದೆ. ಶರಶಯ್ಯೆಯಲ್ಲಿ ಬಿದ್ದಿದ್ದ ಭೀಷ್ಮರ ಬಳಿಗೆ ಬಂದ ಮಹರ್ಷಿಗಳಲ್ಲಿ ಇವನ ಹೆಸರೂ ಬಂದಿದೆ (ಶಾಂತಿ 47/8). ಸ್ಯೂಮರಶ್ಮಿ ಋಷಿಯೊಡನೆ ಯಜ್ಞ ವಿಷಯಕವಾಗಿ ಈತನ ಸಂವಾದ (ಶಾಂತಿ 268). ಪ್ರವೃತ್ತಿ–ನಿವೃತ್ತಿ ಮಾರ್ಗದ ಕುರಿತೂ ಅದೇ ಋಷಿಯೊಡನೆ ಸಂವಾದ (ಶಾಂತಿ). ಸ್ಯೂಮ ರಶ್ಮಿಯೊಡನೆ ಬ್ರಹ್ಮಪ್ರಾಪ್ತಿಯ ಸಂಬಂಧವಾಗಿ ಮಾತುಕತೆ (ಶಾಂತಿ 270). ಶಿವಮಹಿಮೆಯ ವಿಷಯವಾಗಿ ಯುಧಿಷ್ಠಿರನಿಗೆ ಈತನು ತನ್ನ ಅನುಭವ ಹೇಳಿದುದು (ಅನು 18/4–5). ಏಳು ಮಂದಿ ಧರಣೀಧರ ಋಷಿಗಳಲ್ಲಿ ಈತನೂ ಒಬ್ಬನಾಗಿದ್ದಾನೆ (ಅನು 150/41) ಇವನ ಶಾಪದಿಂದ ಸಗರಪುತ್ರರು ದಗ್ಧರಾದ ವರ್ಣನೆ (ಅನು 153/153).

(2) ಸೂರ್ಯನ ಒಂದು ಹೆಸರು (ವನ 3/24).

(3) ಒಬ್ಬ ನಾಗರಾಜ. ಅವನ ಕಪಿಲತೀರ್ಥ ಪ್ರಸಿದ್ಧವಾದುದು. ಕಪಿಲನ ಆ ತೀರ್ಥದಲ್ಲಿ ಸ್ನಾನಮಾಡಿದರೆ ಸಾವಿರ ಕಪಿಲೆಗಳನ್ನು ದಾನ ಮಾಡಿದ ಫಲಸಿಗುತ್ತದೆ (ವನ 84/32).

(4) ಭಾನು (ಮನು) ಎಂಬ ಹೆಸರಿನ ಅಗ್ನಿಯ ನಾಲ್ಕನೆಯ ಮಗ. ಮೇಲೆ ಹೇಳಿದ ಕಪಿಲ ಮಹರ್ಷಿಯದೇ ಅವತಾರ ಅಥವಾ ಸ್ವರೂಪ (ವನ 221/21).

(5) ಒಬ್ಬ ಶ್ರೇಷ್ಠ ಋಷಿ. ಅವನು ಶಾಲಿಹೋತ್ರನ ತಂದೆ ಇವನು ಉಪರಿಚರನ ಯಜ್ಞದ ಸದಸ್ಯತ್ವವನ್ನು ಸ್ವೀಕರಿಸಿದ್ದನು (ಶಾಂತಿ 336/8).

(6) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/56).

(7) ಭಗವಾನ್ ಶಿವನ ಒಂದು ಹೆಸರು (ಅನು 17/98).

(8) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/70; ವನ 149/109).

**ಕಪಿಲಕೇದಾರತೀರ್ಥ** – ಕಪಿಲನ ಕೇದಾರ ರೂಪ ತೀರ್ಥ. ಇದರಲ್ಲಿ ಸ್ನಾನ ಮಾಡುವುದರಿಂದ ತುಂಬಾ ಪುಣ್ಯ ಪ್ರಾಪ್ತಿಯಾಗುತ್ತದೆ. ಈ ದುರ್ಲಭ ತೀರ್ಥಕ್ಕೆ ಹೋಗಿ, ತಪಸ್ಸಿನ ಮೂಲಕ, ಪಾಪ ವನ್ನು ನಷ್ಟಗೊಳಿಸಿದರೆ ಮನುಷ್ಯನಿಗೆ ಅಂತ ರ್ಧಾನ ವಿದ್ಯೆಯ ಪ್ರಾಪ್ತಿಯಾಗುತ್ತದೆ (ವನ 83/72–74).

**ಕಪಿಲತೀರ್ಥ** – ನಾಗರಾಜ ಕಪಿಲನ ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ಸಹಸ್ರ ಕಪಿಲಗಳ ದಾನದ ಫಲ ಪ್ರಾಪ್ತವಾಗುತ್ತದೆ (ವನ 84/32).

**ಕಪಿಲಾ** – (1) ದಕ್ಷ ಪ್ರಜಾಪತಿಯ ಪುತ್ರಿ ಕಶ್ಯಪಪತ್ನಿ (ಆದಿ 65/12).

(2) ಕುರುಕ್ಷೇತ್ರದ ಒಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನದ ಫಲಸಿಗುತ್ತದೆ (ವನ 83/47–48).

(3) ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/28).

(4) ಪಂಚಶಿಖನ ತಾಯಿ (ಶಾಂತಿ 218/5).

**ಕಪಿಲಾಹಸು** – ಇವಳ ಹುಟ್ಟು ಮತ್ತು ದಾನದ ವರ್ಣನೆ (ಅನು 77; 130/19–20).

**ಕಪಿಲಾವಟ** – ಒಂದು ತೀರ್ಥ. ಇಲ್ಲಿ ಉಪವಾಸವಿರುವುದರಿಂದ ಸಹಸ್ರಗೋದಾನದ ಫಲ ಬರುತ್ತದೆ (ವನ 84/31).

**ಕಪಿಲಾಶ್ವ** – ಮಹಾರಾಜ ಕುವಲಾಶ್ವನ ಪುತ್ರ. ದೃಢಾಶ್ವ ಮತ್ತು ಚಂದ್ರಾಶ್ವ ಈತನ ಸಹೋದರರು. ಈ ಮೂರು ಮಂದಿ ಪುತ್ರರು ದುಂಧುವಿನ ಕ್ರೋಧಾಗ್ನಿಯಿಂದ ಬದುಕಿಕೊಂಡಿದ್ದರು. ಈತ ನಿಂದಲೇ ಇಕ್ಷ್ವಾಕು ವಂಶೀಯ ರಾಜರ ವಂಶ ಪರಂಪರೆ ಮುಂದುವರಿಯಿತು (ವನ 204/40). ಪ್ರಾಚೀನ ಕಾಲದಲ್ಲಿ ಪ್ರಪಂಚದ ಅಧಿಕಾರ ವನ್ನು ತ್ಯಜಿಸಿ ಸ್ವರ್ಗಕ್ಕೆ ಹೋದ ರಾಜರಲ್ಲಿ ಇವನೂ ಒಬ್ಬ (ಶಾಂತಿ 227/51).

**ಕಪಿಲಾಹ್ರದ** – ವಾರಣಾಸಿಯಲ್ಲಿರುವ ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ರಾಜ ಸೂಯಯಜ್ಞದ ಫಲಪ್ರಾಪ್ತವಾಗುತ್ತದೆ (ವನ 84/78). ಇಲ್ಲಿ ಸ್ನಾನಮಾಡಿದರೆ ಸಿಗುವ ಫಲ (ಅನು 25/25).

**ಕಪಿಸ್ಕಂಧ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/57).

**ಕಪೋತ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಂದು (ಉದ್ಯೋಗ 101/13). ಕಪೋತ, ಕಪೋತಿ ಮತ್ತು ಬೇಟೆಗಾರನ ಕಥೆ – (ಶಾಂತಿ ಅಧ್ಯಾಯ 143ರಿಂದ 149ವರೆಗೆ). ಕಪೋತನಿಂದ ಶರಣಾಗತನಾದ ಅತಿಥಿಯ ಸತ್ಕಾರ (ಶಾಂತಿ 143/4). ಆ ಬೇಡನನ್ನು, ಅವನ ಕ್ರೂರಕರ್ಮದ ಕಾರಣದಿಂದಾಗಿ, ಹತ್ತಿರದ ಸಂಬಂಧಿಗಳೂ ತ್ಯಾಗ ಮಾಡಿದ್ದರು (ಶಾಂತಿ 143/10–14). ಪಕ್ಷಿಗಳ ವಧೆಯಿಂದ ತನ್ನ ಪತ್ನಿಸಹಿತನಾಗಿ ಜೀವಿಸುತ್ತಿದ್ದ ಆವ್ಯಾಧನಿಗೆ, ಒಂದು ದಿನ ಬಿರುಗಾಳಿ ಮತ್ತು ಮಳೆಯಿಂದಾಗಿ ಕಷ್ಟಪ್ರಾಪ್ತ ವಾಯಿತು (ಶಾಂತಿ 143/18–25). ಚಳಿಯಿಂದ ವ್ಯಾಕುಲಗೊಂಡು ಭೂಮಿಯ ಮೇಲೆ ಬಿದ್ದಿದ್ದ ಒಂದು ಹೆಣ್ಣು ಪಾರಿವಾಳವನ್ನು ಅವನು ತನ್ನ ಪಂಜರದಲ್ಲಿ ಹಾಕಿದನು. ಸ್ವಯಂ ದುಃಖಿತ ನಾಗಿದ್ದರೂ, ಆ ಪಾಪಿ ಇತರರನ್ನು ಹಿಂಸಿಸು ವುದನ್ನು ಬಿಡಲಿಲ್ಲ (ಶಾಂತಿ 143/25–27). ವ್ಯಾಧನು ಒಂದು ಮರದ ಕೆಳಗೆ ವಿಶ್ರಮಿಸಿದುದು (143/28–33). ಅದೇ ಮರದ ಮೇಲಿದ್ದ ಗಂಡು ಪಾರಿವಾಳದಿಂದ ತನ್ನ ಪ್ರೀತಿಯ ಹೆಂಡತಿಯಾದ ಕಪೋತಿಯ ಗುಣಗಾನ ಮತ್ತು ಪತಿವ್ರತಾ ಸ್ತ್ರೀಯರ ಪ್ರಶಂಸೆ (ಶಾಂತಿ 144/1–17). ಶರಣಾಗತನಾದ ವ್ಯಾಧನ ಸೇವೆಮಾಡುವಂತೆ ಕಪೋತಿಯಿಂದ ಕಪೋತನಲ್ಲಿ ಪ್ರಾರ್ಥನೆ (ಶಾಂತಿ 145). ಕಪೋತನಿಂದ ಅತಿಥಿ ಸತ್ಕಾರ ಮತ್ತು ವ್ಯಾಧನಿಗಾಗಿ ತನ್ನ ಶರೀರ ತ್ಯಾಗ (ಶಾಂತಿ 146). ಬೇಡನ ವೈರಾಗ್ಯ (ಶಾಂತಿ 147). ಕಪೋತಿಯ ವಿಲಾಪ ಮತ್ತು ಅಗ್ನಿ ಪ್ರವೇಶ. ಈ ಕಪೋತ ದಂಪತಿಗಳಿಗೆ ಸ್ವರ್ಗಪ್ರಾಪ್ತಿ (ಶಾಂತಿ 148). ವ್ಯಾಧನ ತಪಸ್ಸು. ಆತ ದಾವಾನಲದಲ್ಲಿ

ದಗ್ಧನಾಗಿ ಸ್ವರ್ಗಕ್ಕೆ ಹೋದುದು. ಕಪೋತನ ಶರಣಾಗತ ವಾತ್ಸ್ಯಲ ಮತ್ತು ಕಪೋತಿಯ ಪಾತಿವ್ರತ್ಯದ ಅನುಕರಣೀಯತೆ. ಕಪೋತ ಕಪೋತಿಯರ ಈ ಪ್ರಸಂಗವನ್ನು ಶ್ರವಣ ಮಾಡಿದುದರ ಫಲ (ಶಾಂತಿ 149).

**ಕಪೋತರೋಮಾ** – ಉಶೀನರನ ಮಗನಾದ ಶಿಬಿಯ ಪುತ್ರ. ಅವನ ಇನ್ನೊಂದು ಹೆಸರು 'ಔದ್ಭಿದ'ನೆಂದಾಗಿತ್ತು (ವನ 197/27–28). ಯಮನ ಸಭೆಯಲ್ಲಿದ್ದ ನರೇಶರಲ್ಲಿ ಈತನ ಹೆಸರೂ ಇದೆ (ಸಭಾ 8/17). ಈತ ಕಲಿಂಗ ರಾಜ ಚಿತ್ರಾಂಗದನ ಮಗಳ ಸ್ವಯಂವರಕ್ಕೆ ಹೋಗಿದ್ದನು (ಶಾಂತಿ 4/6).

**ಕಬಂಧ** – ಒಬ್ಬ ರಾಕ್ಷಸ. ಶ್ರೀರಾಮನಿಂದ ಈತನ ವಧೆ (ಸಭಾ 38/29). ಈತ ಲಕ್ಷ್ಮಣನನ್ನು ಹಿಡಕೊಂಡದ್ದು (ವನ 279/30). ಶಾಪದಿಂದ ಮುಕ್ತನಾಗಿ ಈತ ವಿಶ್ವಾವಸುವೆಂಬ ಗಂಧರ್ವನಾಗಿ ಪ್ರಕಟಗೊಂಡದ್ದು ಮತ್ತು ಸೀತೆಯ ಸುಳಿವನ್ನು ತಿಳಿಸಿದುದು (ವನ 279/42–43).

**ಕಮಠ** – (1) ಯುಧಿಷ್ಠಿರನ ಸಭೆಯಲ್ಲಿದ್ದ ಕಾಂಬೋಜ ರಾಜ (ಸಭಾ 4/22).

(2) ಒಬ್ಬ ಋಷಿ. ಅವನು ತಪಸ್ಸಿನ ಮೂಲಕ ಸಿದ್ದಿಯನ್ನು ಪ್ರಾಪ್ತಿಸಿಕೊಂಡಿದ್ದನು (ಶಾಂತಿ 296/14–16).

**ಕಮಲಾ** – ಸ್ಕಂದನ ಅನುಚಾರಿಯಾದ ಮಾತೃಕೆ (ಶಲ್ಯ 46/9).

**ಕಮಲಾಕ್ಷ** – (1) ಕೌರವ ಪಕ್ಷದ ಒಬ್ಬ ಮಹಾ ರಥಿ ಯೋಧ. ಅವನನ್ನು ಅರ್ಜುನನ ಮೇಲೆ ಆಕ್ರಮಣ ಮಾಡುವುಕ್ಕಾಗಿ, ಕೌರವನು ಶಕುನಿಯ ಜೊತೆಯಲ್ಲಿ ಕಳುಹಿಸಿದ್ದನು (ದ್ರೋಣ 156/120 –123).

(2) ತಾರಕಾಸುರನ ಪುತ್ರ ತ್ರಿಪುರದಲ್ಲಿ ಬೆಳ್ಳಿಯ ನಗರದ ಅಧಿಪತಿ (ಕರ್ಣ 33/5). ಶಿವನಿಂದ ಮೂರೂ ಪುರಗಳ ಸಂಹಾರ (ಕರ್ಣ 34/114). ಇತರೆಡೆಯ ವರ್ಣನೆ ಪ್ರಕಾರ ಕಮಲಾಕ್ಷನ ಅಧಿಕಾರದಲ್ಲಿ ಸುವರ್ಣಮಯ ಪುರವಿತ್ತು. ಶಿವನು ಮೂರೂ ಪುರಗಳನ್ನು ದಗ್ಧಗೊಳಿಸಿದ್ದನು (ದ್ರೋಣ 202/64–83).

**ಕಮಲಾಕ್ಷೀ** – ಸ್ಕಂದನ ಅನುಚರಿಯಾದ ಮಾತೃಕೆ (ಶಲ್ಯ 46/6).

**ಕಮ್ಪ** – ವೃಷ್ಣಿವಂಶದ ಒಬ್ಬ ರಾಜಕುಮಾರ. ಮರಣಾನಂತರ ಆತ ವಿಶ್ವೇದೇವರಲ್ಲಿ ಸೇರಿದನು (ಸ್ವರ್ಗಾ 5/16).

**ಕಮ್ಪನ** – ಒಬ್ಬ ಮಹಾಶಕ್ತಿಶಾಲಿ ರಾಜ. ಅವನು ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/22).

**ಕಮ್ಪನಾ** – ಸಿದ್ಧರಿಂದ ಸೇವಿಸಲ್ಪಡುವ ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/25). ಇದರಲ್ಲಿ ಸ್ನಾನ ಮಾಡುವುದರಿಂದ ಪುಂಡರೀಕ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 84/116).

**ಕಮ್ಬಲ** – (1) ಒಂದು ಪ್ರಮುಖ ನಾಗ (ಆದಿ 35/10). ಈತ ವರುಣನ ಸಭೆಯಲ್ಲೂ ಇರುತ್ತಾನೆ (ಸಭಾ 9/9). ಮಾತಲಿಯ ಉಪಾಖ್ಯಾನದಲ್ಲಿ ಈತ ಕಶ್ಯಪನ ವಂಶಜನೆಂದು ಹೇಳಲ್ಪಟ್ಟಿದೆ (ಉದ್ಯೋಗ 103/9). ಪ್ರಯಾಗತೀರ್ಥದಲ್ಲಿ ಕಂಬಲನಾಗನ ಸ್ಥಾನವಿದೆ. ಅದು ಬ್ರಹ್ಮನ ವೇದಿಕೆಯ ಅಂತರ್ಗತವಾಗಿದೆ (ವನ 85/76–77).

(2) ಕುಶದ್ವೀಪದ ನಾಲ್ಕನೇ ವರ್ಷ (ಭೂಭಾಗ) (ಭೀಷ್ಮ 12/13).

**ಕರಂಜನಿಲಯಾ** – ವೃಕ್ಷಗಳ ತಾಯಿ ಅನಲಾ ಅಥವಾ ವೀರುಧಾ. ಆಕೆ ಕರಂಜ ಎಂಬ ಹೆಸರಿನ ಮರದ ಮೇಲೆ ನಿವಾಸ ಮಾಡುತ್ತಾಳೆ. ಈಕೆ ವರದಾಯಿನಿ ಮತ್ತು ಪ್ರಾಣಿಗಳ ಮೇಲೆ ಕೃಪೆ ಮಾಡುವವಳಾಗಿದ್ದಾಳೆ. ಆದುದರಿಂದ ಪುತ್ರಾರ್ಥಿ ಮನುಷ್ಯರು ಕರಂಜ ವೃಕ್ಷದ ಮೇಲ್ಭಾಗಕ್ಕೆ ಈ ಉದ್ದೇಶದಿಂದ ಪ್ರಣಾಮ ಮಾಡುತ್ತಾರೆ (ವನ 230/35–36).

**ಕರಕ** – ಒಂದು ಭಾರತೀಯ ಜನಪದ (ಭೀಷ್ಮ 9/60).

**ಕರಕರ್ಷ** – ಚೇದಿರಾಜನ ಸಹೋದರ. ಶರಭನ ತಮ್ಮ. ಈ ಇಬ್ಬರನ್ನೂ ಕರಕೊಂಡು ಆತ (ಚೇದಿ ರಾಜ) ಪಾಂಡವರ ಸಹಾಯಕ್ಕೆ ಬಂದಿದ್ದನು (ಉದ್ಯೋಗ 50/47). ಇವನು ಯುದ್ಧಕ್ಷೇತ್ರದಲ್ಲಿ ಮುಂದುವರಿದು, ಚೇಕಿತಾನನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು, ಆತನ ರಕ್ಷಣೆ ಮಾಡಿದ್ದನು (ಭೀಷ್ಮ 84/32–33).

**ಕರಕಾಶ** – ಕೌರವ ಪಕ್ಷದ ಒಬ್ಬ ಯೋಧ. ಆತ ದ್ರೋಣ ನಿರ್ಮಿತ ಗರುಡವ್ಯೂಹದಲ್ಲಿ, ಅದರ

ಕುತ್ತಿಗೆಯ ಸ್ಥಾನದಲ್ಲಿ ನಿಲ್ಲಿಸಲ್ಪಟ್ಟಿದ್ದನು (ದ್ರೋಣ 20/6).

**ಕರಟ** – ಒಂದು ಭಾರತೀಯ ಜನಪದ (ಭೀಷ್ಮ 9/63).

**ಕರತೋಯಾ** – ಒಂದು ತೀರ್ಥದಿಂದ ಹುಟ್ಟಿದ ಪವಿತ್ರ ನದಿ. ಆಕೆ ವರುಣ ಸಭೆಯಲ್ಲಿ ಉಪಸ್ಥಿತ ಳಾಗಿದ್ದು ವರುಣನ ಉಪಾಸನೆ ಮಾಡುತ್ತಾಳೆ (ಸಭಾ 9/22). ಇಲ್ಲಿ ಮೂರು ರಾತ್ರಿ ಉಪವಾಸ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ದೊರಕುತ್ತದೆ (ವನ 85/3).

**ಕರಂಧಮ** – ಇಕ್ಷ್ವಾಕು ವಂಶದ ಒಬ್ಬ ರಾಜ. ಅವನು ಖನೀನೇತ್ರನ ಪುತ್ರ ಮತ್ತು ಅವಿಕ್ಷಿತನ ತಂದೆ. ಇವನ ಮೊದಲ ಹೆಸರು ಸುವರ್ಚಾ ಎಂದಾಗಿತ್ತು. ಇವನು ತನ್ನ ಕರಗಳ ಧಮನ ಮಾಡಿ (ಕೈಯನ್ನು ಬಾರಿಸಿ) ಸೇನೆಯನ್ನು ಸೃಷ್ಟಿಸಿದ್ದನು ಮತ್ತು ಶತ್ರುಗಳನ್ನು ಹೊಡೆದು ಓಡಿಸಿದ್ದನು. ಆದುದರಿಂದ ಇವನು ಕರಂಧಮ ನೆಂದು ಹೇಳಲ್ಪಟ್ಟನು (ಆಶ್ವ 4/2–19). ಈತ ಯಮರಾಜನ ಸಭೆಯಲ್ಲಿದ್ದುಕೊಂಡು, ಯಮನ ಉಪಾಸನೆ ಮಾಡುತ್ತಾನೆ (ಸಭಾ 8/16).

**ಕರಭ** – ಒಬ್ಬ ರಾಜ. ಅವನು ಮಗಧರಾಜ ಜರಾಸಂಧನ ಮುಂದೆ ನತಮಸ್ತಕನಾಗಿರುತ್ತಿದ್ದನು (ಸಭಾ 14/13).

**ಕರಭಂಜಕ** – ಒಂದು ಭಾರತೀಯ ಜನಪದ (ಭೀಷ್ಮ 9/69).

**ಕರಂಭಾ** – ಕಲಿಂಗ ದೇಶದ ರಾಜಕುಮಾರಿ. ಪೂರುವಂಶದ ಮಹಾರಾಜ ಅಕ್ರೋಧನನ ಪತ್ನಿ ದೇವಾತಿಥಿಯ ತಾಯಿ (ಆದಿ 95/22).

**ಕರವೀರ** – (1) ಒಂದು ಪ್ರಮುಖ ನಾಗ (ಆದಿ 35/12).

(2) ದ್ವಾರಕೆಯ ಸಮೀಪದಲ್ಲಿರುವ ಒಂದು ವನ (ಸಭಾ 38/29).

ಕರವೀರಪುರ – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಬ್ರಹ್ಮರೂಪನಾಗು ತ್ತಾನೆ (ಅನು 25/44).

**ಕರಹಾಟಕ** – ದಕ್ಷಿಣ ಭಾರತದ ಒಂದು ದೇಶ ಸಹದೇವನು ಅದನ್ನು ದೂತರ ಮೂಲಕ ಜಯಿಸಿದ್ದನು (ಸಭಾ 31/70).

**ಕರಾಲ** – ಒಬ್ಬ ದೇವಗಂಧರ್ವ. ಅವನು ಅರ್ಜುನನ ಜನ್ಮೋತ್ಸವದ ಸಮಯದಲ್ಲಿ ಬಂದಿ ದ್ದನು (ಆದಿ 122/57).

**ಕರಾಲಜನಕ** – ಮಿಥಿಲೆಯ ಒಬ್ಬ ರಾಜ. ಅವನು ವಸಿಷ್ಠನೊಡನೆ ವಿವಿಧ ಜ್ಞಾನವಿಷಯವಾಗಿ ಪ್ರಶ್ನೆ ಮಾಡಿದ್ದನು ಮತ್ತು ಅವನ ಸದುಪದೇಶಗಳನ್ನು ಕೇಳಿದ್ದನು (ಶಾಂತಿ 302 ಅಧ್ಯಾಯದಿಂದ 308 ವರೆಗೆ).

**ಕರಾಲದಂತ** – ಇಂದ್ರಸಭೆಯಲ್ಲಿ ಇರುತ್ತಿದ್ದ ಒಬ್ಬ ಮಹರ್ಷಿ. ಅವನು ಅಲ್ಲಿದ್ದು ಇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/14),

**ಕರಾಲಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

**ಕರೀತಿ** – ಒಂದು ಭಾರತೀಯ ಜನಪದ (ಭೀಷ್ಮ 9/44).

ಕರೀಷಕ – ಒಂದು ಭಾರತೀಯ ಜನಪದ (ಭೀಷ್ಮ 9/55).

**ಕರೀಷಿಣೀ** – ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/17; 23).

**ಕರೂಷ** – (1) ಒಂದು ಭಾರತೀಯ ಜನಪದ (ಆಧುನಿಕ ವಿದ್ವಾಂಸರ ಅಭಿಪ್ರಾಯದಂತೆ ಬಘೇಲ ಖಂಡ ಮತ್ತು ಬಂದೇಲಖಂಡದ ಸ್ವಲ್ಪ ಭಾಗ) (ಆದಿ 122/40).

(2) ಕರೂಷ ರಾಜ. ಅವನನ್ನು ಪಡೆಯಲು ತಪಸ್ಸು ಮಾಡುತ್ತಿದ್ದ ವೈಶಾಲಿಭದ್ರೆಯನ್ನು ಶಿಶು ಪಾಲನು ಅಪಹರಣ ಮಾಡಿದ್ದನು (ಸಭಾ 45/11).

(3) ಒಬ್ಬ ರಾಜ. ಅವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/64).

**ಕರೇಣುಮತಿ** – ಚೇದಿ ರಾಜ ಶಿಶುಪಾಲನ ಪುತ್ರಿ. ನಕುಲನ ಪತ್ನಿ ಮತ್ತು ನಿರಮಿತ್ರನ ತಾಯಿ (ಆದಿ 95/79).

**ಕರ್ಕಖಂಡ** – ಪೂರ್ವೀಯ ಭಾರತದ ಒಂದು ಜನಪದ. ಅದನ್ನು ದುರ್ಯೋಧನನಿಗಾಗಿ ಕರ್ಣನು ಜಯಿಸಿದ್ದನು (ವನ 254/8).

**ಕರ್ಕರ** – ಒಬ್ಬ ಪ್ರಮುಖ ನಾಗ (ಆದಿ 35/16).

**ಕರ್ಕೋಟಕ** – (1) ಕಶ್ಯಪ ಮತ್ತು ಕದ್ರುವಿನ ಸಂತಾನಗಳಲ್ಲಿ ಪ್ರಮುಖನಾದ ಒಬ್ಬ ನಾಗ (ಆದಿ 35/5). ಈತ ಅರ್ಜುನನ ಜನ್ಮೋತ್ಸವಕ್ಕೆ

ಹೋಗಿದ್ದನು (ಆದಿ 122/71). ಈತ ವರುಣ ಸಭೆಯಲ್ಲಿ ಇರುತ್ತಾನೆ (ಸಭಾ 9/9). ದಾವಾನಲ ನಿಂದ ದಗ್ಧನಾಗುವ ಭಯದಿಂದ, ಈತ ರಾಜಾ ನಳನನ್ನು ಕೂಗಿ ಕರೆದುದು, ನಳನು ಬಂದಾಗ ಆತನೊಡನೆ ನಾರದರ ಶಾಪದಿಂದ ತಾನು ಸ್ಥಾವರನಂತಾದುದರ ಪರಿಸ್ಥಿತಿಯನ್ನು ತಿಳಿಸಿ ದುದು, ಅವನ ಗೆಳೆಯನಾದುದು, ರಾಜಾ ನಳ ನನ್ನು ಕಚ್ಚಿ, ಅವನ ರೂಪವನ್ನು ವಿಕೃತಗೊಳಿಸಿ ದುದು, ಅವನಿಗೆ ಧೈರ್ಯದ ಅಶ್ವಾಸನೆ ಕೊಟ್ಟದ್ದು, ಪುನಃ ಪೂರ್ವರೂಪಕ್ಕೆ ಪರಿವರ್ತನೆ ಹೊಂದಲು, ಹೊದೆದುಕೊಳ್ಳುವಂತೆ ಎರಡು ವಸ್ತ್ರಗಳನ್ನು ಪ್ರದಾನಮಾಡಿದುದು (ವನ 66/2–25). ಈತ ಶಿವನ ರಥದ ಕುದುರೆಗಳ ಕೇಸರವನ್ನು ಕಟ್ಟಲು ಹಗ್ಗವಾಗಿ ಉಪಯೋಗಿಸಲ್ಪಟ್ಟಿದ್ದನು (ಕರ್ಣ 4/29). ಬಲರಾಮನ ಸ್ವಧಾಮಗಮನದ ಸಮಯ ದಲ್ಲಿ ಸ್ವಾಗತಕ್ಕಾಗಿ ಈತನೂ ಹೋಗಿದ್ದನು (ಮೌಸಲ 4/15).

(2) ಕರ್ಕೋಟಕ ದೇಶ ಮತ್ತು ಅಲ್ಲಿಯ ನಿವಾಸಿಗಳು (ಕರ್ಣ 44/43).

**ಕರ್ಣ** – (1) ಕುಂತಿಯ ಗರ್ಭ ಮತ್ತು ಸೂರ್ಯನ ಅಂಶದಿಂದ ಕವಚ ಕುಂಡಲಧಾರಿ, ಬಲಶಾಲಿಯಾದ ಕರ್ಣನ ಜನ್ಮ (ಆದಿ 63/98; 110/18). ಮೊದಲು ಈತನ ಹೆಸರು 'ವಸುಷೇಣ' ಎಂದಾಗಿತ್ತು. ಆದರೆ ಈತ ತನ್ನ ಕವಚ ಕುಂಡಲ ಗಳನ್ನು ಶರೀರದಿಂದ ಬೇರ್ಪಡಿಸಿ ಇಂದ್ರನಿಗೆ ಕೊಟ್ಟ ಅನಂತರ ಅವನ ಹೆಸರು 'ವೈಕರ್ತನ' ನೆಂದಾಯಿತು (ಆದಿ 67/144–147). ಕುಂತಿ ಯಿಂದ ನದಿಯಲ್ಲಿ ಈತನ ಪರಿತ್ಯಾಗ (ಆದಿ 67/139; 110/22). ಬ್ರಾಹ್ಮಣರಿಗೆ ಕೊಡದ ಯಾವುದೇ ವಸ್ತು ಈತನಲ್ಲಿರಲಿಲ್ಲ (ಆದಿ 67/431). ಬ್ರಾಹ್ಮಣರೂಪದಿಂದ ಯಾಚಕನಾಗಿ ಬಂದ ಇಂದ್ರನಿಗೆ ಈತನಿಂದ ಕವಚಕುಂಡಲಗಳ ದಾನ. ಪ್ರಸನ್ನನಾದ ಇಂದ್ರನಿಂದ ಇವನಿಗೆ 'ಶಕ್ತಿ' ಎಂಬ ಹೆಸರಿನ ಅಮೋಘ ಅಸ್ತ್ರದ ಪ್ರಾಪ್ತಿ (ಆದಿ 67/144–146; 110/28–29). ಇವನು ಸೂರ್ಯನ ಸರ್ವೋತ್ತಮ ಅಂಶವಾಗಿದ್ದನು (ಆದಿ 67/150). ಗಂಗಾಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ಈ ಬಾಲಕ ಕರ್ಣನು ಅಧಿರಥನ ಕೈಗೆ ದೊರಕಿದುದು (ಆದಿ 100/23). ಅಧಿರಥ ಮತ್ತು ಅವನ ಪತ್ನಿ ರಾಧೆ ಈತನನ್ನು ತಮ್ಮ ಪುತ್ರನಾಗಿ ಮಾಡಿಕೊಂಡದ್ದು (ಆದಿ 110/23). ಇವನಿಗೆ 'ವಸುಷೇಣ'ನೆಂದು ಹೆಸರಾಗಲು ಕಾರಣ (ಆದಿ 110/24). ಇವನ ಸೂರ್ಯಭಕ್ತಿ (ಆದಿ 110/26). ಇವನ ಬ್ರಾಹ್ಮಣ ಭಕ್ತಿ (ಆದಿ 110/26). ಇವನಿಗೆ 'ಕರ್ಣ' ಮತ್ತು 'ವೈಕರ್ತನ' ಹೆಸರಾಗಲು ಕಾರಣ (ಆದಿ 110/31). ದ್ರೋಣಾಚಾರ್ಯರ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಈತನ ಆಗಮನ (ಆದಿ 131/11). ಕಲಿಯುವ ಪ್ರಾಯದಲ್ಲಿ ಅರ್ಜುನನೊಡನೆ ಈತನ ಸ್ಪರ್ಧೆ (ಆದಿ 135/13–14). ರಂಗಭೂಮಿಯಲ್ಲಿ ಅರ್ಜುನನೊಡನೆ ಈತನ ಸ್ಪರ್ಧೆ. ಇವನ ಅಸ್ತ್ರ ಕುಶಲತೆ (ಆದಿ 135/9–12). ರಂಗಭೂಮಿಯಲ್ಲಿ ದುರ್ಯೋಧನನಿಂದ ಈತನಿಗೆ ಗೌರವಾರ್ಪಣೆ (ಆದಿ 135/13–12). ರಂಗಭೂಮಿಯಲ್ಲಿ ಅರ್ಜುನನಿಂದ ಈತನಿಗೆ ಧಿಕ್ಕಾರ (ಆದಿ 135/18). ಅರ್ಜುನನೊಡನೆ ಹೋರಾಡಲು ಈತ ರಂಗಭೂಮಿಯಲ್ಲಿ ಸಿದ್ಧನಾದುದು (ಆದಿ 135/20). ರಂಗಭೂಮಿಯಲ್ಲಿ ಕೃಪಾಚಾರ್ಯನು ಈತನ ಪರಿಚಯ ಕೇಳಿದುದು. ಈತನು ನಾಚಿಕೆ ಗೊಂಡುದು (ಆದಿ 135/34). ದುರ್ಯೋಧನನ ಮೂಲಕ ಇವನಿಗೆ ಅಂಗರಾಜ್ಯಾಭಿಷೇಕ (ಆದಿ 135/38). ಇವನಿಂದ ದುರ್ಯೋಧನನಿಗೆ ಅಚಲ ಸ್ನೇಹದ ವರದಾನ (ಆದಿ 135/41). ರಂಗ ಭೂಮಿಯಲ್ಲಿ ಈತ ತನ್ನ ತಂದೆ ಅಧಿರಥನಿಗೆ ನಮಸ್ಕರಿಸಿದುದು (ಆದಿ 136/2). ಭೀಮಸೇನ ನಿಂದ ಈತನ ತಿರಸ್ಕಾರ (ಆದಿ 136/6). ದ್ರುಪದ ನಿಂದ ಪರಾಜಿತನಾಗಿ ಈತನ ಪಲಾಯನ (ಆದಿ 137/24). ದ್ರೌಪದಿ ಸ್ವಯಂವರದಲ್ಲಿ ಈತನ ಆಗಮನ (ಆದಿ 185/4). ಸ್ವಯಂವರದಲ್ಲಿ ಲಕ್ಷ್ಯಭೇದನಕ್ಕೆ ಸಿದ್ಧನಾದ ಕರ್ಣನನ್ನು ನೋಡಿ, ಸೂತಪುತ್ರನಾದುದರಿಂದ ಆತನನ್ನು ವರಿಸುವು ದಿಲ್ಲವೆಂದು ದ್ರೌಪದಿಯ ಮಾತು (ಆದಿ 186/23). ದ್ರೌಪದಿ ಸ್ವಯಂವರದಲ್ಲಿ ಅರ್ಜುನನಿಂದ ಈತನ ಪರಾಜಯ (ಆದಿ 189/22). ಪರಾಕ್ರಮ ದಿಂದ ದ್ರುಪದನನ್ನು ಸೋಲಿಸಿ, ಪಾಂಡವರನ್ನು ಬಂಧಿಸಲು ದುರ್ಯೋಧನನೊಡನೆ ಈತನ ಆಲೋಚನೆ (ಆದಿ 208/1–21). ಈತನಿಗೆ ದ್ರೋಣನಿಂದ ಧಿಕ್ಕಾರ (ಆದಿ 203/26).

ರಾಜಸೂಯ ದಿಗ್ವಿಜಯದ ಸಮಯದಲ್ಲಿ ಭೀಮಸೇನನಿಂದ ಈತನ ಪರಾಜಯ (ಸಭಾ 30/20). ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಶ್ರೇಷ್ಠ ರಥಿಕನಾದ ಕರ್ಣನ ಆಗಮನ (ಸಭಾ 34/7). ಇವನು ಅಂಗ ಮತ್ತು ವಂಗ ದೇಶಗಳ ರಾಜನಾಗಿದ್ದನು. ಇವನು ಜರಾಸಂಧನನ್ನು ಸೋಲಿಸಿದ್ದನು (ಸಭಾ 44/9–11). ದ್ಯೂತಕ್ಕಾಗಿ ಬಂದ ರಾಜಾಯುಧಿಷ್ಠಿರನು ಕರ್ಣನೊಡನೆಯೂ ಭೇಟಿಮಾಡಿದ್ದನು (ಸಭಾ 58/23). ದ್ಯೂತ ಸಭೆಯಲ್ಲಿ ಕರ್ಣನೂ ಉಪಸ್ಥಿತನಾಗಿದ್ದನು ಮತ್ತು ದ್ರೌಪದಿಯನ್ನು ಪಣವಾಗಿಟ್ಟಾಗ ಸಂತೋಷ ಪಟ್ಟನು (ಸಭಾ 65/44). ಈತ ವಿಕರ್ಣನನ್ನು ನಿಂದಿಸುತ್ತಾ, ದ್ರೌಪದಿಯು ಸೋತಳೆಂದು ಘೋಷಿಸಿದುದು. ದ್ರೌಪದಿ ಮತ್ತು ಪಾಂಡವರ ವಸ್ತ್ರ ಕಳಚುವಂತೆ ದುಶ್ಶಾಸನನಿಗೆ ಈತನ ಆದೇಶ (ಸಭಾ 68/27–38). ದ್ರೌಪದಿ ಬೇರೆ ಗಂಡನನ್ನು ಆರಿಸಿಕೊಳ್ಳುವಂತೆ ಈತ ಹೇಳಿದುದು ಮತ್ತು ಆಕೆಯನ್ನು ದಾಸಿಯೆಂದು ಹೇಳಿದುದು (ಸಭಾ 71/1–4). ಕಾಡಿಗೆ ಹೋಗಿ ಪಾಂಡವರ ವಧೆಮಾಡುವಂತೆ ದುರ್ಯೋಧನನಿಗೆ ಈತನ ಸಲಹೆ (ವನ 7/16–20). ದ್ವೈತವನದಲ್ಲಿ ಪಾಂಡವರ ಬಳಿಗೆ ಹೋಗುವಂತೆ ಈತ ದುರ್ಯೋಧನನನ್ನು ಹುರಿದುಂಬಿಸಿದುದು (ವನ 237). ಘೋಷಯಾತ್ರೆಯ ಸೂಚನೆ ನೀಡಿದುದು (ವನ 238/19–20). ಘೋಷಯಾತ್ರೆಯ ಪ್ರಸ್ತಾವನೆಯನ್ನು ಧೃತರಾಷ್ಟ್ರನ ಮುಂದೆ ಇರಿಸಿ ದುದು (ವನ 239/3–5). ದ್ವೈತವನದಲ್ಲಿ ಗಂಧರ್ವರಿಂದ ಈತನ ಪರಾಜಯ (ವನ 241 /32). ಮಾರ್ಗಮಧ್ಯದಲ್ಲಿ ಇವನಿಂದ ದುರ್ಯೋ ಧನನಿಗೆ ಅಭಿನಂದನೆ (ವನ 247/10–15). ಅನಶನ ಹಠ ಕೈಗೊಳ್ಳದಂತೆ ದುರ್ಯೋಧನನಿಗೆ ಈತನ ಹಿತವಚನ (ವನ 250). ಭೀಷ್ಮನಿಂದ ಈತನ ನಿಂದೆ. ಇವನ ವ್ಯಾಕುಲಪೂರ್ಣ ಮಾತು. ಈತ ದಿಗ್ವಿಜಯಕ್ಕಾಗಿ ಹೊರಟದ್ದು (ವನ 253). ಇವನಿಂದ ಸಂಪೂರ್ಣ ಭೂಮಿಯ ದಿಗ್ವಿಜಯ ಮತ್ತು ಹಸ್ತಿನಾಪುರದಲ್ಲಿ ಇವನಿಗೆ ಸ್ವಾಗತ (ವನ 254). ಯಜ್ಞಮಾಡುವಂತೆ ದುರ್ಯೋಧನನಿಗೆ ಈತನು ಸಲಹೆ ನೀಡಿದುದು (ವನ 255). ಅರ್ಜುನನ ವಧೆ ಮಾಡುವ ಬಗ್ಗೆ ಕರ್ಣನಿಂದ ಪ್ರತಿಜ್ಞೆ (ವನ 257/16–17). ಸೂರ್ಯನು ತಿಳಿಯಪಡಿಸಿದರೂ, ಈತ ಕವಚಕುಂಡಲಗಳನ್ನು ಕೊಡುವ ನಿರ್ಧಾರವನ್ನೇ ಮಾಡಿದುದು (ವನ 300/27–39). ಇಂದ್ರನಿಂದ ಶಕ್ತಿಯನ್ನು ಪಡ ಕೊಂಡೇ ಕವಚಕುಂಡಲಗಳನ್ನು ಕೊಡುವ ನಿರ್ಧಾರ (ವನ 302/17). ಕುಂತಿಯ ಗರ್ಭ ದಿಂದ ಕರ್ಣನ ಜನ್ಮ. ಕುಂತಿ ಆತನನ್ನು ಪೆಟ್ಟಿಗೆ ಯಲ್ಲಿಟ್ಟು ಅಶ್ವನದಿಯಲ್ಲಿ ತೇಲಬಿಟ್ಟುದು, ಅಮೃತದಿಂದ ಪ್ರಕಟವಾದ ಕವಚಕುಂಡಲ ಧಾರಣೆ ಮಾಡಿದವನಾದುದರಿಂದ ಇವನು ನದಿಯಲ್ಲಿ ಜೀವಿತನಾಗಿ ಉಳಿದುದು (ವನ 308/4–7–27). ಪೆಟ್ಟಿಗೆಯಲ್ಲಿಡಲ್ಪಟ್ಟ ಕರ್ಣನು ಅದಿರಥ ಮತ್ತು ರಾಧೆಯರಿಗೆ ದೊರಕಿದುದು. ರಾಧೆಯಿಂದ ಕರ್ಣನ ವಿಧಿವತ್ತಾದ ಪಾಲನೆ (ವನ 309/5–6). ಇವನಿಗೆ 'ವಸುಷೇಣ' ಮತ್ತು 'ವೃಷ' ಎಂಬ ಹೆಸರು ಬರಲು ಕಾರಣ (ವನ 309/13–14). ಹಸ್ತಿನಾವತಿಯಲ್ಲಿ ಈತನ ಶಿಕ್ಷಣ ಮತ್ತು ದುರ್ಯೋಧನನೊಂದಿಗೆ ಮಿತ್ರತ್ವ (ವನ 309/17–18). ಇಂದ್ರನೊಡನೆ ಶಕ್ತಿಯನ್ನು ಬೇಡಿ ದುದು (ವನ 310/21). ಇವನಿಂದ ಇಂದ್ರನಿಗೆ ಕವಚಕುಂಡಲಗಳ ದಾನ (ವನ 310/38). ಪಾಂಡವರ ಸುಳಿವನ್ನು ತಿಳಿಯುವುದಕ್ಕಾಗಿ ಪುನಃ ಗುಪ್ತಚರರನ್ನು ಕಳುಹಿಸಲು ಈತನ ಸಲಹೆ (ವಿರಾಟ 26/8–12). ದ್ರೋಣಾಚಾರ್ಯರ ಮಾತುಗಳನ್ನು ಆಕ್ಷೇಪಿಸುತ್ತಾ, ಅರ್ಜುನನೊಡನೆ ಯುದ್ಧಮಾಡಲು ಈತನ ನಿರ್ಧಾರ (ವಿರಾಟ 47/21–34). ಈತನಿಂದ ಆತ್ಮಪ್ರಶಂಸೆಯ ಅಹಂಕಾರೋಕ್ತಿಗಳು (ವಿರಾಟ 48). ಅರ್ಜುನನ ಮೇಲೆ ಇವನ ಆಕ್ರಮಣ (ವಿರಾಟ 54/19). ಅರ್ಜುನನಿಂದ ಪರಾಜಿತನಾಗಿ ಇವನು ಓಡಿ ಹೋದುದು (ವಿರಾಟ 54/36). ಅರ್ಜುನ ನೊಡನೆ ಪುನಃ ಯುದ್ಧ ಮತ್ತು ಪರಾಜಿತನಾಗಿ ಓಡಿದುದು (ವಿರಾಟ 60/27). ಕರ್ಣನ ಉಡುಗೆ ಗಳು ಉತ್ತರನಿಂದ ಕಳಚಲ್ಪಟ್ಟದ್ದು (ವಿರಾಟ 65/15). ದ್ರುಪದ ಪುರೋಹಿತರ ಮಾತನ್ನು ಸಮರ್ಥಿಸಿದ ಭೀಷ್ಮರ ಮಾತುಗಳನ್ನು ಇವನು ಆಕ್ಷೇಪಿಸಿದುದು (ಉದ್ಯೋಗ 21/9–15). ಇವನ ಆತ್ಮ ಪ್ರಶಂಸೆ (ಉದ್ಯೋಗ 49/29–32; 62/2–6). ಭೀಷ್ಮರು ಆಕ್ಷೇಪ ಮಾಡಿದಾಗ ಈತ

ಶಸ್ತ್ರತ್ಯಾಗ ಮಾಡಿ ಸಭೆಯಿಂದ ಹೊರನಡೆದುದು (ಉದ್ಯೋಗ 62/13). ಇವನು ದುರ್ಯೋಧನನ ಪಕ್ಷದಲ್ಲಿರುವ ತನ್ನ ನಿರ್ಧಾರವನ್ನು ಪ್ರಕಟಿಸುತ್ತಾ, ಶ್ರೀಕೃಷ್ಣನ ರಣಯಜ್ಞದ ರೂಪಕವನ್ನು ವರ್ಣಿಸಿದುದು (ಉದ್ಯೋಗ 141). ಈತ ಶ್ರೀಕೃಷ್ಣನೊಡನೆ ಯುಧಿಷ್ಠಿರನ ವಿಜಯ ಮತ್ತು ದುರ್ಯೋಧನನ ಪರಾಜಯದ ಲಕ್ಷಣಗಳನ್ನು ವರ್ಣಿಸಿದುದು (ಉದ್ಯೋಗ 143/2–45). ಕುಂತಿಗೆ ಉತ್ತರ ಕೊಡುತ್ತಾ, ಆಕೆಯ ನಾಲ್ಕು ಮಂದಿ ಪುತ್ರರನ್ನು ವಧಿಸದಿರಲು ಪ್ರತಿಜ್ಞೆ ಮಾಡಿದುದು (ಉದ್ಯೋಗ 146/4–23). ಭೀಷ್ಮನು ಜೀವಂತನಾಗಿರುವವರೆಗೆ ಯುದ್ಧಮಾಡದಿರುವ ಪ್ರತಿಜ್ಞೆ (ಉದ್ಯೋಗ 156/25). ಈತ ಭೀಷ್ಮನನ್ನು ಕಟುವಾಗಿ ಟೀಕಿಸಿದುದು (ಉದ್ಯೋಗ 168/11–29). ಐದೇ ದಿನಗಳಲ್ಲಿ ಪಾಂಡವ ಸೇನೆಯನ್ನು ನಷ್ಟಗೊಳಿಸುವ ತನ್ನ ಶಕ್ತಿಯನ್ನು ವರ್ಣಿಸಿದುದು (ಉದ್ಯೋಗ 193/20). ಶ್ರೀಕೃಷ್ಣನು ಬೋಧಿಸಿದರೂ, ದುರ್ಯೋಧನನ ಪಕ್ಷವನ್ನೇ ವಹಿಸಲು ಈತನ ನಿರ್ಧಾರ (ಭೀಷ್ಮ 43/92). ಭೀಷ್ಮರಿಂದ ಶಸ್ತ್ರತ್ಯಾಗ ಮಾಡಿಸುವಂತೆ ದುರ್ಯೋಧನನಿಗೆ ಸಲಹೆ (ಭೀಷ್ಮ 97/7–13). ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರ ಬಳಿಗೆ ಹೋಗಿ ಇವನು ಅವರನ್ನು ವಂದಿಸಿದುದು (ಭೀಷ್ಮ 122/4–5). ಭೀಷ್ಮರು ಹಿತಬೋಧೆ ಮಾಡಿದರೂ, ಇವನು ಕ್ಷಮಾಯಾಚನೆ ಮಾಡುತ್ತಾ, ತನ್ನ ಯುದ್ಧ ನಿರ್ಧಾರವನ್ನೇ ತಿಳಿಸಿದುದು (ಭೀಷ್ಮ 122/23–33). ಕೌರವರಿಂದ ಈತನ ಸ್ಮರಣೆ (ದ್ರೋಣ 1/33–47). ಭೀಷ್ಮರಿಗಾಗಿ ಶೋಕವನ್ನು ವ್ಯಕ್ತಪಡಿಸುತ್ತಾ ಇವನು ಯುದ್ಧಕ್ಕೆ ತೆರಳಿದುದು (ದ್ರೋಣ 2). ಭೀಷ್ಮರ ಪ್ರಶಂಸೆಮಾಡುತ್ತಾ, ಯುದ್ಧಕ್ಕಾಗಿ ಅವರ ಆಜ್ಞೆಯನ್ನು ಬೇಡಿದುದು (ದ್ರೋಣ 3). ಭೀಷ್ಮರಿಂದ ಆದೇಶ ಪಡೆದು ಈತ ಕೌರವರ ಸೇನೆಗೆ ನಡೆದುದು (ದ್ರೋಣ 4/15). ದುರ್ಯೋಧನನು ಕೇಳಿದಾಗ, ಸೇನಾಪತಿ ಪದಕ್ಕೆ ದ್ರೋಣಾಚಾರ್ಯರನ್ನು ಸೂಚಿಸಿದುದು (ದ್ರೋಣ 5/13–21). ದುರ್ಯೋಧನನಲ್ಲಿ ಭೀಮಸೇನನ ಸ್ವಭಾವವನ್ನು ವರ್ಣಿಸುತ್ತಾ, ದ್ರೋಣಾಚಾರ್ಯರಿಗೆ ರಕ್ಷಣೆ ಒದಗಿಸುವಂತೆ ಹೇಳಿದುದು (ದ್ರೋಣ 22/18–28). ಕೇಕಯ ರಾಜಕುಮಾರರೊಂದಿಗೆ ಯುದ್ಧ (ದ್ರೋಣ 25/42–44). ಅರ್ಜುನ, ಭೀಮಸೇನ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿಗಳೊಂದಿಗೆ ಯುದ್ಧ (ದ್ರೋಣ 32/52–70). ಈತ ಅಭಿಮನ್ಯುವಿನಿಂದ ಪರಾಜಿತನಾದುದು (ದ್ರೋಣ 40/17–36). ಈತ ದ್ರೋಣಾಚಾರ್ಯರೊಡನೆ ಅಭಿಮನ್ಯುವಿನ ವಧೆಗೆ ಉಪಾಯವನ್ನು ಕೇಳಿದುದು (ದ್ರೋಣ 48/18). ಇವನಿಂದ ಅಭಿಮನ್ಯುವಿನ ಧನುಸ್ಸು ಮತ್ತು ಖಡ್ಗಗಳು ಕಡಿಯಲ್ಪಡುವುದು (ದ್ರೋಣ 48/32–39). ಇವನ ಧ್ವಜದ ವರ್ಣನೆ (ದ್ರೋಣ 105/12–14). ಭೀಮಸೇನನೊಂದಿಗೆ ಯುದ್ಧದಲ್ಲಿ ಈತ ಪರಾಜಿತನಾದುದು (ದ್ರೋಣ 129/33). ಭೀಮಸೇನನೊಂದಿಗೆ ಈತನ ಯುದ್ಧ ಮತ್ತು ಪರಾಜಯ (ದ್ರೋಣ 131 ರಿಂದ 138). ಭೀಮನಿಂದ ಬದುಕಿಕೊಳ್ಳಲು ಈತ ರಥದಲ್ಲಿ ಹುದುಗಿಕೊಂಡದ್ದು (ದ್ರೋಣ 139/76). ಭೀಮಸೇನನನ್ನು ಮೂರ್ಛೆಗೊಳಿಸಿ, ಈತ ಧನುಸ್ಸಿನ ತುದಿಯಿಂದ ಅವನನ್ನು ತಿವಿದುದು (ದ್ರೋಣ 139/91–92). ಭೀಮಸೇನನನ್ನು ಕಟುವಚನಗಳಿಂದ ನಿಂದಿಸಿದುದು (ದ್ರೋಣ 139/95–109). ಅರ್ಜುನನ ಬಾಣಗಳಿಂದ ಆಹತನಾಗಿ ಈತ ದೂರ ಸರಿದುದು (ದ್ರೋಣ 139/114). ಅರ್ಜುನನಿಂದ ಯುದ್ಧದಲ್ಲಿ ಪರಾಜಯ ಹೊಂದಿದುದು (ದ್ರೋಣ 145/83–84). ದುರ್ಯೋಧನನು ಪ್ರೋತ್ಸಾಹಿಸಿದಾಗ ಅವನಿಗೆ ಉತ್ತರವಿತ್ತದ್ದು (ದ್ರೋಣ 145/25–33). ಸಾತ್ಯಕಿಯೊಂದಿಗೆ ಯುದ್ಧದಲ್ಲಿ ಈತನ ಪರಾಜಯ (ದ್ರೋಣ 147/64–65) ದ್ರೋಣಾಚಾರ್ಯರ ಮೇಲೆ ದುರ್ಯೋಧನನು ಮಾಡಿದ ದೋಷಾರೋಪಣೆಗಳ ನಿರಾಕರಣೆ (ದ್ರೋಣ 152/15–22). ದುರ್ಯೋಧನನೊಡನೆ ದೈವಬಲದ ಪ್ರಧಾನತೆಯನ್ನು ವರ್ಣಿಸಿದುದು (ದ್ರೋಣ 152/23–34). ದುರ್ಯೋಧನನಿಗೆ ಜಯದ ಆಶ್ವಾಸನೆ (ದ್ರೋಣ 158/5–11). ಇವನಿಂದ ಕೃಪಾಚಾರ್ಯರ ಅಪಮಾನ (ದ್ರೋಣ 158/25–32; 158/49–70). ಅರ್ಜುನನೊಂದಿಗೆ ಈತನ ಪರಾಜಯ (ದ್ರೋಣ 159/62–64). ಸಹದೇವನನ್ನು ಯುದ್ಧದಲ್ಲಿ ಸೋಲಿಸಿ, ಅವನ ಶರೀರವನ್ನು ಧನುಸ್ಸಿನ ತುದಿಯಿಂದ ಚುಚ್ಚಿ, ನಿಂದಿಸಿ

ದುದು (ದ್ರೋಣ 167/2–18). ಸಾತ್ಯಕಿಯೊಂದಿಗೆ ಈತನ ಯುದ್ಧ (ದ್ರೋಣ 170/30–43). ಇವನಿಂದ ಧೃಷ್ಟದ್ಯುಮ್ನನ ಪರಾಜಯ (ದ್ರೋಣ 173/7). ಘಟೋತ್ಕಚನೊಂದಿಗೆ ಈತನ ಘೋರ ಯುದ್ಧ (ದ್ರೋಣ 175). ಇಂದ್ರದತ್ತ ಶಕ್ತಿಯ ಮೂಲಕ ಈತನಿಂದ ಘಟೋತ್ಕಚ ವಧೆ (ದ್ರೋಣ 179/54–58). ಭೀಮಸೇನನೊಂದಿಗೆ ಯುದ್ಧ ಮತ್ತು ಅವನನ್ನು ಪರಾಜಯಗೊಳಿಸಿದುದು (ದ್ರೋಣ 188/10–12). ಭೀಮಸೇನನೊಂದಿಗೆ ಯುದ್ಧ (ದ್ರೋಣ 189/50–55). ದ್ರೋಣಾಚಾರ್ಯರು ಕೊಲ್ಲಲ್ಪಟ್ಟಾಗ ಯುದ್ಧಕ್ಷೇತ್ರದಿಂದ ಓಡಿದುದು (ದ್ರೋಣ 193/10). ಸಾತ್ಯಕಿಯಿಂದ ಈತನ ಪರಾಜಯ (ದ್ರೋಣ 200/53). ಸಂಜಯನಿಂದ ಈತನ ಸೇನಾಪತಿತ್ವ ಮತ್ತು ಮೃತ್ಯುವಿನ ವರ್ಣನೆ (ಕರ್ಣ 3/17–21). ಅರ್ಜುನನಿಂದ ಇವನ ಪುತ್ರ ವೃಷಸೇನನ ವಧೆಯ ವರ್ಣನೆ (ಕರ್ಣ 5/23–24). ಸೇನಾಪತಿಯಾಗಲು ಪ್ರಸ್ತಾವನೆಯನ್ನಿಟ್ಟಾಗ ದುರ್ಯೋಧನನಿಗೆ ಆಶ್ವಾಸನೆ (ಕರ್ಣ 10/40–41). ಸೇನಾಪತಿ ಪದವಿಗೆ ಅಭಿಷೇಕ ಹೊಂದಿದುದು (ಕರ್ಣ 10/43). ಕೌರವ ಸೇನೆಯನ್ನು ಮಕರವ್ಯೂಹದಲ್ಲಿ ನಿಲ್ಲಿಸಿ, ಈತ ಯುದ್ಧಕ್ಕೆ ಹೊರಟದ್ದು (ಕರ್ಣ 11/14). ಇವನಿಂದ ಪಾಂಡವ ಸೇನೆಯ ಸಂಹಾರ (ಕರ್ಣ 21/18–24). ಓಡುತ್ತಿದ್ದ ನಕುಲನ ಕುತ್ತಿಗೆಗೆ ಧನುಸ್ಸನ್ನು ಸಿಕ್ಕಿಸಿ, ಅವನನ್ನು ಹಿಡಿದುದು ಮತ್ತು ಜೀವಂತನಾಗಿ ಬಿಡುಗಡೆಗೊಳಿಸಿದುದು (ಕರ್ಣ 24/45–51). ಸಾತ್ಯಕಿಯೊಂದಿಗೆ ಈತನ ಯುದ್ಧ (ಕರ್ಣ 30). ದುರ್ಯೋಧನನೊಂದಿಗೆ ತನ್ನ ಯುದ್ಧ ಸಂಬಂಧವಾದ ವ್ಯವಸ್ಥೆಗಳ ಕುರಿತು ಹೇಳಿದುದು (ಕರ್ಣ 31/35–69). ಶಲ್ಯನನ್ನು ಸಾರಥಿಯಾಗಿಟ್ಟುಕೊಂಡು ಯುದ್ಧಕ್ಕೆ ಹೋದುದು (ಕರ್ಣ 36/24–25). ಇವನ ಆತ್ಮಪ್ರಶಂಸೆ (ಕರ್ಣ 37/13–31). ಅರ್ಜುನನ ಸುಳಿವನ್ನು ಕೊಟ್ಟವರಿಗೆ ಪುರಸ್ಕಾರ ಕೊಡುವುದಾಗಿ ಘೋಷಿಸಿದುದು (ಕರ್ಣ 38). ಶಲ್ಯನನ್ನು ನಿಂದಿಸುತ್ತಾ ಮದ್ರನಿವಾಸಿಗಳನ್ನು ತುಚ್ಛೀಕರಿಸಿದುದು ಮತ್ತು ಅವನನ್ನು ಕೊಲ್ಲುವ ಬೆದರಿಕೆ ಹಾಕಿದುದು (ಕರ್ಣ 40). ಶಲ್ಯನನ್ನು ನಿಂದಿಸುತ್ತಾ, ತನಗೆ ಪರಶುರಾಮ ಮತ್ತು ಒಬ್ಬ ಬ್ರಾಹ್ಮಣನಿಂದ ಬಂದ ಶಾಪಗಳ ವಿಚಾರ ತಿಳಿಸಿದುದು (ಕರ್ಣ 42). ಆತ್ಮಪ್ರಶಂಸೆ ಮಾಡುತ್ತಾ ಶಲ್ಯನನ್ನು ತೆಗಳಿದುದು (ಕರ್ಣ 43). ಇವನಿಂದ ಮದ್ರವೇ ಮೊದಲಾದ ವಾಹೀಕ ದೇಶವಾಸಿಗಳ ನಿಂದೆ (ಕರ್ಣ 44 ರಿಂದ 45). ಇವನಿಂದ ಪಾಂಚಾಲರ ಸಂಹಾರ (ಕರ್ಣ 46/21–22). ಪಾಂಡವ ಸೇನೆಯ ಸಂಹಾರ (ಕರ್ಣ 48/9–17). ಕರ್ಣಪುತ್ರ ಸುಶೇಣ ಮತ್ತು ಚಿತ್ರಸೇನರ ಮೂಲಕ ತಂದೆಯ ರಥಚಕ್ರಗಳ ರಕ್ಷಣೆ, ವೃಷಸೇನನಿಂದ ಅವನ ಹಿಂಭಾಗದ ರಕ್ಷಣೆ (ಕರ್ಣ 48/18–19). ಭೀಮಸೇನನಿಂದ ಕರ್ಣಪುತ್ರ ಭಾನುಸೇನನ ವಧೆ (ಕರ್ಣ 48/27). ಕರ್ಣನಿಂದ ಯುಧಿಷ್ಠಿರನ ಮೇಲೆ ಆಕ್ರಮಣ (ಕರ್ಣ 48/63). ಯುಧಿಷ್ಠಿರನೊಂದಿಗೆ ಯುದ್ಧದಲ್ಲಿ ಈತ ಮೂರ್ಛಿತನಾದುದು (ಕರ್ಣ 49/21). ಯುಧಿಷ್ಠಿರನ ಚಕ್ರರಕ್ಷಕರಾದ ಚಂದ್ರದೇವ ಮತ್ತು ದಂಡಧಾರರನ್ನು ಈತ ವಧಿಸಿದುದು (ಕರ್ಣ 49/27). ಯುಧಿಷ್ಠಿರನನ್ನು ಪರಾಜಯಗೊಳಿಸಿ ತಿರಸ್ಕರಿಸಿದುದು (ಕರ್ಣ 49/48–59). ಭೀಮಸೇನನಿಂದ ಇವನ ಪರಾಜಯ (ಕರ್ಣ 50/47). ಭೀಮಸೇನನೊಂದಿಗೆ ಈತನ ಘೋರ ಸಂಗ್ರಾಮ (ಕರ್ಣ 51). ಇವನಿಂದ ಪಾಂಚಾಲ, ಚೇದಿ ಮತ್ತು ಕೇಕಯವೀರರ ಭೀಷಣ ಸಂಹಾರ (ಕರ್ಣ 56/38–69). ಧೃಷ್ಟದ್ಯುಮ್ನನೊಂದಿಗೆ ಯುದ್ಧ (ಕರ್ಣ 59/7–14) ಇವನಿಂದ ಶಿಖಂಡಿಯ ಪರಾಜಯ (ಕರ್ಣ 61/23) ಯುಧಿಷ್ಠಿರನನ್ನು ಗಾಯಗೊಳಿಸಿ, ಯುದ್ಧ ವಿಮುಖನಾಗಿ ಮಾಡಿದುದು (ಕರ್ಣ 62/29–31). ಇವನ ಮೂಲಕ ನಕುಲ, ಸಹದೇವ ಮತ್ತು ಯುಧಿಷ್ಠಿರನ ಭೀಷಣ ಪರಾಜಯ (ಕರ್ಣ 63). ದುರ್ಯೋಧನನ ಪ್ರೇರಣೆಯಿಂದ ಈತ ಭಾಗವಾಸ್ತ್ರ ಪ್ರಕಟಿಸಿದುದು (ಕರ್ಣ 64/47). ಉತ್ತಮೌಜಸನಿಂದ ಕರ್ಣಪುತ್ರ ಸುಷೇಣನ ವಧೆ (ಕರ್ಣ 75/9). ಇವನಿಂದ ಪಾಂಡವ ಸೇನೆಯ ಭೀಷಣ ಸಂಹಾರ (ಕರ್ಣ 78). ಅರ್ಜುನನ ಪರಾಕ್ರಮದ ಕುರಿತು ಶಲ್ಯನೊಡನೆ ಮಾತುಕತೆ (ಕರ್ಣ 79/49–70). ಅರ್ಜುನ ಮತ್ತು ಭೀಮಸೇನನಿಂದ ಹೊಡೆಯಲ್ಪಟ್ಟ ಧೃತರಾಷ್ಟ್ರ ಪುತ್ರರನ್ನು ರಕ್ಷಿಸಿದುದು (ಕರ್ಣ 81/51). ಇವನಿಂದ

ಕೇಕಯ ರಾಜಕುಮಾರ ವಿಶೋಕನ ವಧೆ (ಕರ್ಣ 82/3). ಕೇಕಯಸೇನಾಪತಿ ಉಗ್ರ ಕರ್ಮನ ವಧೆ (ಕರ್ಣ 82/5). ಸಾತ್ಯಕಿಯಿಂದ ಕರ್ಣ ಪುತ್ರ ಪ್ರಸೇನನ ವಧೆ (ಕರ್ಣ 82/6) ಇವನ ಮೂಲಕ ಧೃಷ್ಟದ್ಯುಮ್ನನ ಮಗನ ಮರಣ (ಕರ್ಣ 82/9). ಈತ ಭೀಮಸೇನನಿಂದ ಭೀತನಾದುದು (ಕರ್ಣ 84/7–8). ಅರ್ಜುನ ನಿಂದ ಕರ್ಣಪುತ್ರ ವೃಷಸೇನನ ವಧೆ (ಕರ್ಣ 85/36). ಶಲ್ಯನೊಂದಿಗೆ ಸಂಭಾಷಣೆ (ಕರ್ಣ 87/101–103). ಅರ್ಜುನನೊಂದಿಗೆ ದ್ವೈರಥ ಯುದ್ಧ (ಕರ್ಣ 89). ಕರ್ಣನ ಸರ್ಪಮುಖ ಬಾಣದಿಂದ ಅರ್ಜುನನ ಕಿರೀಟ ಬಿದ್ದುದು (ಕರ್ಣ 90/33). ರಥಚಕ್ರವು ಹೂತು ಹೋದುದ ರಿಂದ ಅದನ್ನು ಮೇಲಕ್ಕೆತ್ತಲು ಈತನು ರಥದಿಂದ ಇಳಿದುದು ಮತ್ತು ಬಾಣ ಪ್ರಯೋಗಮಾಡದಂತೆ ಅರ್ಜುನನಲ್ಲಿ ಆಗ್ರಹಪಡಿಸಿದುದು (ಕರ್ಣ 90/ 105–116). ಅರ್ಜುನನಿಂದ ಈತನ ವಧೆ (ಕರ್ಣ 91/50). ಕರ್ಣನ ದಹನ ಸಂಸ್ಕಾರ (ಸ್ತ್ರೀ ). ಬ್ರಾಹ್ಮಣನ ಮೂಲಕ ಶಾಪಪ್ರಾಪ್ತವಾದ ಸನ್ನಿವೇಶ (ಶಾಂತಿ 2/23–26). ಇವನಿಗೆ ಬ್ರಹ್ಮಾಸ್ತ್ರ ಪ್ರಾಪ್ತಿ ಮತ್ತು ಪರಶುರಾಮನ ಶಾಪ (ಶಾಂತಿ 3). ಕಳಿಂಗ ರಾಜಕನ್ಯೆಯನ್ನು ದುರ್ಯೋಧನನು ಅಪಹರಿಸಿದಾಗ, ಈತನಿಂದ ಅಲ್ಲಿರುವ ಸಮಸ್ತರಾಜರ ಪರಾಭವ (ಶಾಂತಿ 4/17–20). ಇವನ ಬಲಪರಾಕ್ರಮಗಳ ವರ್ಣನೆ (ಕರ್ಣ 4). ಇವನಿಂದ ಜರಾಸಂಧನ ಪರಾಜಯ (ಕರ್ಣ 5/4). ಇದರಿಂದಾಗಿ ಮಾಲಿನಿ ಮತ್ತು ಚಂಪಾನಗರಗಳ ಪ್ರಾಪ್ತಿ (ಕರ್ಣ 5/6–7). ಇವನ ಕುಂಡಲ ದಾನದ ವರ್ಣನೆ (ಅನು 137/9). ಕರ್ಣನ ಜನ್ಮಪ್ರಸಂಗದ ಕುರಿತು ಕುಂತಿಯು ವ್ಯಾಸರೊಡನೆ ಚರ್ಚಿಸಿದುದು ಮತ್ತು ಈತನನ್ನು ಕಾಣುವ ಇಚ್ಛೆ ಪ್ರಕಟಿಸಿದುದು (ಆಶ್ರಮ 30). ಈತ ಸೂರ್ಯನ ಅಂಶವಾಗಿ ದ್ದನು (ಆಶ್ರಮ 31/14). ವ್ಯಾಸರ ಆವಾಹನೆ ಯಿಂದ ಕರ್ಣನು ಪ್ರಕಟನಾದುದು (ಆಶ್ರಮ 32/9). ಸ್ವರ್ಗಕ್ಕೆ ಹೋಗಿ ಈತ ಸೂರ್ಯನಲ್ಲಿ ಸೇರಿದುದು (ಸ್ವರ್ಗ 5/20). ಮಹಾಭಾರತದಲ್ಲಿ ಬಂದಿರುವ ಕರ್ಣನ ಹೆಸರುಗಳು – ಆಧಿರಥಿ, ಆದಿತ್ಯನಂದನ, ಆದಿತ್ಯತನಯ, ಅಂಗರಾಜ, ಅಂಗೇಶ್ವರ, ಅರ್ಕಪುತ್ರ, ಭರತರ್ಷಭ, ಗೋಪುತ್ರ, ಕೌಂತೇಯ, ಕುಂತೀಸುತ, ಕುರೂದ್ವಹ, ಕುರು ಪೃತನಾಪತಿ, ಕುರುವೀರ, ಕುರುಯೋಧ, ಪಾರ್ಥ, ಪೂಷಾತ್ಮಜ, ರಾಧಾಸುತ, ರಾಧಾತ್ಮಜ, ರಾಧೇಯ, ರವಿಸೂನು, ಸೌತಿ, ಸಾವಿತ್ರ, ಸೂರ್ಯಜ, ಸೂರ್ಯಪುತ್ರ, ಸೂರ್ಯಸಂಭವ, ಸೂತ, ಸೂತನಂದನ, ಸೂತಪುತ್ರ, ಸೂತಸೂನು, ಸೂತ ಸುತ, ಸೂತತನಯ, ಸೂತಾತ್ಮಜ, ವೈಕರ್ತನ, ವೈವಸ್ವತ, ವಸುಷೇಣ, ವೃಷ.

(2) ಧೃತರಾಷ್ಟ್ರನ ಒಬ್ಬ ಮಗ (ಆದಿ 67/95). ಭೀಮಸೇನನಿಂದ ಇವನ ಮೇಲೆ ಆಕ್ರಮಣ (ಭೀಷ್ಮ 77/8). ಭೀಮಸೇನನಿಂದ ಇವನ ವಧೆ (ಭೀಷ್ಮ 77/16).

**ಕರ್ಣನಿರ್ವಾಕ** – ವಾನಪ್ರಸ್ಥ ಧರ್ಮದ ಪಾಲನೆ ಮಾಡಿ ಸ್ವರ್ಗಪ್ರಾಪ್ತಿಮಾಡಿಕೊಂಡ ಒಬ್ಬ ಬ್ರಹ್ಮರ್ಷಿ (ಶಾಂತಿ 244/18).

**ಕರ್ಣಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಕರ್ಣಪ್ರಾವರಣ** – (1) ಪ್ರಾಚೀನ ಕಾಲದ ಮನುಷ್ಯರ ಒಂದು ಜಾತಿ. ಅದು ದಕ್ಷಿಣ ಸಮುದ್ರದ ದಡದಲ್ಲಿತ್ತು. ಸಹದೇವ ಈ ಜಾತಿ ಯವರನ್ನು ಸೋಲಿಸಿದ್ದನು (ಸಭಾ 31/67). (ಕಿವಿಗಳಿಂದಲೇ ತಮ್ಮ ಶರೀರವನ್ನು ಮುಚ್ಚಿ ಕೊಳ್ಳುವವರು "ಕರ್ಣ ಪ್ರಾವರಣ"ರೆಂದು ಕರೆಯಲ್ಪಡುತ್ತಾರೆ. ಪ್ರಾಚೀನ ಕಾಲದಲ್ಲಿ ಇಂತಹ ಜಾತಿಯ ಜನರಿದ್ದರು. ಅವರ ಕಿವಿಗಳು ಕಾಲು ಗಳ ವರೆಗೆ ತೂಗಾಡುತ್ತಿದ್ದವು). ಈ ಜಾತಿಯ ಜನರು ಯುಧಿಷ್ಠಿರನಿಗೆ ಕಾಣಿಕೆ ಕೊಡಲು ಬಂದಿ ದ್ದರು (ಸಭಾ 52/19).

(2) ದಕ್ಷಿಣ ಭಾರತದ ಒಂದು ಜನಪದ. ಅಲ್ಲಿನ ಯೋಧರು ದುರ್ಯೋಧನನ ಸೇನೆಯಲ್ಲಿದ್ದರು (ಭೀಷ್ಮ 51/13).

**ಕರ್ಣಪ್ರಾವರಣಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/25).

**ಕರ್ಣವೇಷ್ಟ** – ಒಬ್ಬ ಕ್ಷತ್ರಿಯ ರಾಜ. ಅವನು 'ಕ್ರೋಧವಶ' ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/60–66). ಪಾಂಡವ ಪಕ್ಷದಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/15).

**ಕರ್ಣಶ್ರವಾ** – ಅಜಾತಶತ್ರುವಾದ ಯುಧಿಷ್ಠಿರನನ್ನು ಗೌರವಿಸುವ ಒಬ್ಬ ಮಹರ್ಷಿ (ವನ 26/23).

**ಕರ್ಣಾಟಕ** – ಒಂದು ದಕ್ಷಿಣ ಭಾರತೀಯ ಜನಪದ (ಭೀಷ್ಮ 9/59).

**ಕರ್ಣಿಕಾ** – ದ್ವಾದಶ ಪ್ರಖ್ಯಾತ ಅಪ್ಸರೆಯರಲ್ಲಿ ಒಬ್ಬಳು. ಅವಳು ಅರ್ಜುನನ ಜನ್ಮಸಮಯದಲ್ಲಿ ಬಂದು ಗಾನ ನೃತ್ಯ ಮಾಡಿದ್ದಳು (ಆದಿ 122/64–66).

**ಕರ್ಣಿಕಾರವನ** – ಸುಮೇರು ಪರ್ವತದ ಉತ್ತರ ಭಾಗದಲ್ಲಿ ಎಲ್ಲಾ ಋತುಗಳಲ್ಲೂ ಪುಷ್ಪಭರಿತ ವಾಗಿರುವ ಒಂದು ದಿವ್ಯ ರಮಣೀಯ ವನ (ಭೀಷ್ಮ 6/24).

**ಕರ್ತಾ** – ಒಬ್ಬ ವಿಶ್ವೇದೇವ (ಅನು 91/35).

**ಕರ್ದಮ** – (1) ಒಬ್ಬ ಪ್ರಮುಖ ನಾಗ (ಆದಿ).
(2) ಒಬ್ಬ ಪ್ರಾಚೀನ ಋಷಿ ಅವನು ಬ್ರಹ್ಮ ಸಭೆ ಯಲ್ಲಿದ್ದುಕೊಂಡು ಬ್ರಹ್ಮನ ಉಪಾಸನೆ ಮಾಡು ತ್ತಾನೆ (ಸಭಾ 11/19). ಇಪ್ಪತ್ತೊಂದು ಮಂದಿ ಪ್ರಜಾಪತಿಗಳಲ್ಲಿ ಈತನ ಹೆಸರು ಬಂದಿದೆ (ಶಾಂತಿ 234/36–37).
(3) ಒಬ್ಬ ರಾಜರ್ಷಿ. ಅವನು ವಿರಜೆಯ ಪೌತ್ರ ಮತ್ತು ಕೀರ್ತಿವಂತನ ಪುತ್ರನಾಗಿದ್ದ. ಇವನ ಪುತ್ರನ ಹೆಸರು ಅನಂಗ (ಶಾಂತಿ 59/90–91).

**ಕರ್ದಮಿಲಕ್ಷೇತ್ರ** – ಸಮಂಗಾದ ಹತ್ತಿರವಿರುವ ಒಂದು ಕ್ಷೇತ್ರ. ಅಲ್ಲಿ ರಾಜಾ ಭರತನ ಅಭಿಷೇಕವಾಗಿತ್ತು (ವನ 135/1).

**ಕರ್ವಟ** – ಒಂದು ಪ್ರಾಚೀನ ದೇಶ. ಆ ದೇಶದ ರಾಜನನ್ನು ಭೀಮಸೇನನು ಜಯಿಸಿದ್ದನು (ಸಭಾ 30/24).

**ಕಲ** – ಪಿತೃಗಳ ಒಂದು ಗಣ. ಇವರು ಬ್ರಹ್ಮ ಸಭೆಯಲ್ಲಿದ್ದುಕೊಂಡು ಬ್ರಹ್ಮನ ಉಪಾಸನೆ ಮಾಡುತ್ತಾರೆ (ಸಭಾ 11/47).

**ಕಲವಿಂಕ** – (1) ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ಅನೇಕ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲ ದೊರಕುತ್ತದೆ (ಅನು 25/43).
(2) ಒಂದು ರೀತಿಯ ಪಕ್ಷಿ ಮೃತನಾದ ತ್ರಿಶಿರನ ಸುರಾಪಾನ ಮಾಡುವ ಮುಖದಿಂದ ಅದರ ಉತ್ಪತ್ತಿಯಾಯಿತು (ಉದ್ಯೋಗ 9/42).

**ಕಲಶ** – ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/11).

**ಕಲಶಪೋತಕ** – ಒಬ್ಬ ಪ್ರಮುಖ ನಾಗ (ಆದಿ 35/7).

**ಕಲಶೀ** – ಒಂದು ತೀರ್ಥ ಅಲ್ಲಿ ಆಚಮನ ಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲ ದೊರಕುತ್ತದೆ (ವನ 83/80).

**ಕಲಶೋದರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ಕಲಾ** – ಕಾಲ ಪರಿಮಾಣ (ಶಲ್ಯ 45/15).

**ಕಲಾಪ** – ಒಬ್ಬ ಮಹಾತೇಜಸ್ವಿ ಋಷಿ ರಾಜಸೂಯಯಜ್ಞದ ಅಂತ್ಯದಲ್ಲಿ ಯುಧಿಷ್ಠಿರನು ಅವನ ಪೂಜೆ ಮಾಡಿದ್ದನು (ಸಭಾ 45/38).

**ಕಲಿ** – (1) ಹದಿನಾರು ಮಂದಿ ದೇವ ಗಂಧರ್ವರಲ್ಲಿ ಒಬ್ಬ ಕಶ್ಯಪ ಪತ್ನಿ. 'ಮುನಿ'ಯ ಪುತ್ರ (ಆದಿ 65/44) ಈತ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/57).
(2) ಸತ್ಯಯುಗವು ಮೊದಲಾಗಿರುವ ಕ್ರಮದಂತೆ ಮುಂದುವರಿದ ನಾಲ್ಕನೆಯ ಯುಗ (ಶಾಂತಿ 69/81–92). ಇಂದ್ರನೊಡನೆ ಈತನ ಸಂವಾದ ದಮಯಂತಿಯು ನಳರಾಜನನ್ನು ತನ್ನ ಪತಿಯಾಗಿ ಆರಿಸಿಕೊಂಡಳು – ಈ ಮಾತನ್ನು ಇಂದ್ರನಿಂದ ಕೇಳಿ ಈತ ಕುಪಿತನಾದುದು ಮತ್ತು ಅವನಿಗೆ ದಂಡನೆಯನ್ನು ಕೊಡಲು ಸಿದ್ಧನಾದುದು (ವನ 58/6). ನಳನ ಶರೀರವನ್ನು ಪ್ರವೇಶಮಾಡಿ, ಅವನನ್ನು ರಾಜ್ಯಭ್ರಷ್ಟನಾಗಿ ಮಾಡುವ ಸಂಕಲ್ಪ ಮಾಡಿದುದು. ಈತ ಈ ಕೆಲಸಕ್ಕೆ ದ್ವಾಪರನೊಡನೆ ಸಹಾಯಕ್ಕಾಗಿ ಪ್ರಾರ್ಥಿಸಿದುದು. ಇವನು ನಳನ ಶರೀರವನ್ನು ಪ್ರವೇಶಿಸಿದುದು (ವನ 59/3). ಪುಷ್ಕರನನ್ನು ಜೂಜಾಡಲು ಸಿದ್ಧಗೊಳಿಸಿದುದು (ವನ 59/4–5). ನಳನಿಗೆ ದುಃಖ ಕೊಟ್ಟದ್ದಕ್ಕಾಗಿ ದಮಯಂತಿಯ ಶಾಪ (ವನ 63/16–17). ಕರ್ಕೋಟಕ ನಾಗನ ವಿಷದಿಂದ ದಗ್ಧನಾಗುತ್ತಾ ಕಲಿಯುಗನು ತುಂಬಾ ದುಃಖದಿಂದ ನಳನ ಶರೀರದಲ್ಲಿದ್ದುದು (ವನ 66/15–16). ದ್ಯೂತ ವಿದ್ಯೆಯ ರಹಸ್ಯ ತಿಳಿದ ಅನಂತರ ನಳನ ಶರೀರ ದಿಂದ ಕಲಿಯುಗನು ಹೊರಟುದು ಮತ್ತು ಶಾಪಾ ಗ್ನಿಯಿಂದ ಮುಕ್ತನಾದುದು (ವನ 72/ 30–31). ಕಲಿಯು ತನ್ನ ಸ್ವರೂಪ ಪ್ರಕಟಿಸಿದುದು. ಆಗ ನಳನು ಆತನಿಗೆ ಶಾಪಕೊಡಲು ಯೋಚಿಸಿದುದು (ವನ 72/32). ಭಯಭೀತನಾಗಿ ಕಂಪಿಸುತ್ತಿದ್ದ

ಕಲಿಯು ಕೈಗಳನ್ನು ಜೋಡಿಸಿ ರಾಜನೊಡನೆ ಸಿಟ್ಟನ್ನು ತಡೆಯುವಂತೆ ಪ್ರಾರ್ಥಿಸಿದುದು, ಇಂದ್ರ ಸೇನನ ತಾಯಿಯಾದ ದಮಯಂತಿಯ ಶಾಪ ದಿಂದ ತಾನು ಪೀಡಿತನಾದ ವಿಚಾರ ತಿಳಿಸಿದುದು. ನಳನಿಗೆ ಶರಣಾಗತನಾದುದು ಮತ್ತು ನಳನ ಗುಣಕಥನ ಮಾಡುವವರಿಗೆ ತನ್ನಿಂದ (ಕಲಿ ಯಿಂದ) ಭಯವಾಗದಿರುವಂತೆ ಘೋಷಣೆ ಮಾಡಿದುದು. ಮತ್ತು ಹೆದರಿ ವಿಭೀತಕವೃಕ್ಷವನ್ನು ಸೇರಿದುದು (ವನ 72/30–38). ಕಲಿಯುಗದ ಸರ್ವಶ್ರೇಷ್ಠ ತೀರ್ಥ ಗಂಗೆ (ವನ 35/89–91). ಕಲಿಯುಗದ ಮಾನ (ವನ 188/26–27). ಕಲಿಯುಗದ ಅಂತಿಮ ಭಾಗದಲ್ಲಿ ಪ್ರಪಂಚದ ಪರಿಸ್ಥಿತಿ (ವನ 188/39–64). ಕಲಿಯುಗ ಮತ್ತು ಯುಗಾಂತದಲ್ಲಿ ಜಗತ್ತಿನ ಪರಿಸ್ಥಿತಿ (ವನ 190/11–88). ಕಲಿಯುಗದ ಮನುಷ್ಯನ ಆಯುಸ್ಸು (ಶಾಂತಿ 23/ 25). ಕಲಿಯ ಯುಗಧರ್ಮದ ವರ್ಣನೆ (ವನ 149/33–38; ಶಾಂತಿ 69/91–97). ಮಾರ್ಕಂಡೇಯನಿಂದ ಆತನ ಪ್ರಭಾವದ ವರ್ಣನೆ (ವನ 188/25–85). ಈ ಕಲಿಯುಗನ ಅಂಶದಿಂದಲೇ ಕುರುಕುಲಕಲಂಕನಾದ ರಾಜಾ ದುರ್ಯೋಧನನ ಜನ್ಮವಾಯಿತು (ಆದಿ 67/87, ಆಶ್ರಮ 31/10).

(3) ಸೂರ್ಯನ ಒಂದು ಹೆಸರು (ವನ 3/20).

(4) ಶಿವನ ಒಂದು ಹೆಸರು (ಅನು 17/79).

**ಕಲಿಂಗ** (ಕಾಲಿಂಗ) – (1) ದಕ್ಷಿಣ ಭಾರತದ ಒಂದು ಪ್ರಾಚೀನ ದೇಶ. ತೀರ್ಥಯಾತ್ರೆಯ ಸಂದ ರ್ಭದಲ್ಲಿ ಅರ್ಜುನನು ಇಲ್ಲಿಗೆ ಆಗಮಿಸಿದ್ದನು (ಆದಿ 214/9; ಭೀಷ್ಮ 9/46). ದಕ್ಷಿಣ ವಿಜಯದ ಸಮಯದಲ್ಲಿ ಸಹದೇವನು ಅದನ್ನು ಗೆದ್ದಿದ್ದನು (ವನ 31/71). ಈ ದೇಶದ ಜನರು ರಾಜ ಸೂಯಾಧ್ವರಕ್ಕೆ ಕಾಣಿಕೆ ತಂದಿದ್ದರು (ಸಭಾ 52/ 18). ತೀರ್ಥಯಾತ್ರೆಯ ಸಂದರ್ಭದಲ್ಲಿ ಯುಧಿ ಷ್ಠಿರನು ಅಲ್ಲಿಗೆ ಹೋಗಿದ್ದನು (ವನ 114/14). ದಿಗ್ವಿಜಯ ಸಮಯದಲ್ಲಿ ಕರ್ಣನು ಈ ದೇಶ ವನ್ನು ಗೆದ್ದಿದ್ದನು (ವನ 254/8). ಸಹದೇವನು ದಂತಕೂರದಲ್ಲಿ ಕಲಿಂಗನನ್ನು ಸೋಲಿಸಿ ದ್ದನು (ಉದ್ಯೋಗ 23/24). ದಂತಕೂರದಲ್ಲಿ ಶ್ರೀ ಕೃಷ್ಣನು ಕಲಿಂಗರ ಸಂಹಾರ ಮಾಡಿದ್ದನು. (ಉದ್ಯೋಗ 48/76) ಸಹದೇವನು ಈ ದೇಶ ವನ್ನು ಗೆದ್ದ ವರ್ಣನೆ (ಉದ್ಯೋಗ 50/31). ಕರ್ಣನು ಈ ದೇಶವನ್ನು ಮೊದಲೇ ಗೆದ್ದಿದ್ದನು (ದ್ರೋಣ 4/8). ದ್ರೋಣನಿರ್ಮಿತ ಗರುಡ ವ್ಯೂಹದ ಕುತ್ತಿಗೆ ಮತ್ತು ಬೆನ್ನಿನ ಸ್ಥಾನದಲ್ಲಿ ಕಳಿಂಗ ಯೋಧರು ನಿಲ್ಲಿಸಲ್ಪಟ್ಟಿದ್ದರು (ದ್ರೋಣ 20/6–10). ಪರಶುರಾಮನಿಂದ ಈ ದೇಶ ನಿವಾಸಿಗಳು ಪರಾಜಿತರಾಗಿದ್ದರು (ದ್ರೋಣ 70/ 12). ಕಳಿಂಗ ದೇಶದ ಯೋಧರು ಸಾತ್ಯಕಿ ಯೊಂದಿಗೆ ಹೋರಾಡಿದ್ದರು (ದ್ರೋಣ 141/10–11). ಪರಶುರಾಮನ ಹೆದರಿಕೆಯಿಂದ ಓಡಿಹೋದ ಕ್ಷತ್ರಿಯರಲ್ಲಿ ಕೆಲವರು ಶೂದ್ರರಾಗಿದ್ದರು. ಕಳಿಂಗರು ಆ ವರ್ಗದಲ್ಲಿ ಗಣಿಸಲ್ಪಡುತ್ತಾರೆ (ಅನು 33/22).

(2) ಕಲಿಂಗ ದೇಶದ ರಾಜ (ಸಭಾ 51/7). ಈತನ ಹೆಸರು ಶ್ರುತಾಯು (ಭೀಷ್ಮ 54/68–69) ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/13). ದ್ರೋಣನಿರ್ಮಿತವ್ಯೂಹದ ಬಲ ಭಾಗದಲ್ಲಿ ನಿಂತಿದ್ದನು (ದ್ರೋಣ 7/11). ಈತ ಜಯದ್ರಥನ ರಕ್ಷಣೆಗೆ ನಿಯುಕ್ತನಾಗಿದ್ದನು (ದ್ರೋಣ 74/17). ಭೀಮಸೇನನೊಂದಿಗೆ ಕಳಿಂಗ ರಾಜಕುಮಾರನ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 155/21–24). ಕಲಿಂಗ ರಾಜ ಶ್ರುತಾಯುವನ್ನು ಮುಂದಿಟ್ಟುಕೊಂಡು, ಕಲಿಂಗವಾಸಿಗಳು ಭೀಮನೊಡನೆ ಹೋರಾಡಿ ಸತ್ತರು. (ಭೀಷ್ಮ 54/3–42) (ನೋಡಿ – ಶ್ರುತಾಯು)

(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ಕಲ್ಕಿ** – ಭವಿಷ್ಯದಲ್ಲಿ ಆಗಲಿರುವ ವಿಷ್ಣುವಿನ ಹತ್ತನೇ ಅವತಾರ. ಅವನು ಕಲಿಯುಗಾಂತ್ಯದಲ್ಲಿ, ಧರ್ಮವು ಶಿಥಿಲವಾದಾಗ ಪ್ರಕಟಗೊಳ್ಳುವನು. ಅವನ ಹೆಸರು ಕಲ್ಕಿ ವಿಷ್ಣುಯಶಾ ಎಂದಾಗಿ ರುತ್ತದೆ (ಸಭಾ 38/29; ವನ 190/93–94). ಕಲ್ಕಿಯ ಸ್ವರೂಪ ಮತ್ತು ಕಾರ್ಯದ ವರ್ಣನೆ (ವನ 190/93–97). ಇವನ ಮೂಲಕ ಕಲಿ ಯುಗದ ಅನಂತರ ಕೃತಯುಗದ ಸ್ಥಾಪನೆ (ವನ 191/1–14). ನಾರಾಯಣನು ನಾರದನೊಡನೆ, ಕಲ್ಕಿಯು ತನ್ನ ಅವತಾರವೆಂದು ತಿಳಿಸಿದುದು (ಶಾಂತಿ 339/104).

**ಕಲ್ಮಾಷ** – (1) ಒಬ್ಬ ಪ್ರಮುಖ ನಾಗ. (ಆದಿ 35/7).

(2) ಒಂದು ಉತ್ತಮ ಕುದುರೆ. ಅದರ ಬಣ್ಣ ನಾನಾತರವಾಗಿತ್ತು. ದಿಗ್ವಿಜಯ ಸಂದರ್ಭದಲ್ಲಿ ಅರ್ಜುನನು ಈ ಕುದುರೆಯನ್ನು ಹಾಟಕ ದೇಶದ ಬಳಿಯ ಗಂಧರ್ವನಗರದಿಂದ ಪಡೆದಿದ್ದನು (ಸಭಾ 28/6).

**ಕಲ್ಮಾಷಪಾದ** – ಇಕ್ಷ್ವಾಕು ವಂಶದ ಒಬ್ಬ ರಾಜ. ಅವನು ಋತುಪರ್ಣನ ಮೊಮ್ಮಗ ಮತ್ತು ಸುದಾಸನ ಮಗನಾಗಿದ್ದನು. ಇವನ ಇನ್ನೊಂದು ಹೆಸರು ಮಿತ್ರಸಹನೆಂದಾಗಿತ್ತು. ಸುದಾಸನ ಪುತ್ರನಾದುದರಿಂದ ಸೌದಾಸನೆಂದು ಕರೆಯಲ್ಪಡುತ್ತಿದ್ದನು. ಈ ಪ್ರಪಂಚದಲ್ಲಿ ಅವನು ಅಸಾಧಾರಣ ತೇಜಸ್ವಿಯಾಗಿದ್ದನು (ಆದಿ 175/1; ಅನು 78/1–2). ಇವನು ನಗರದಿಂದ ಹೊರಟು ಬೇಟೆಗಾಗಿ ಕಾಡಿಗೆ ಹೋದುದು, ಅಲ್ಲಿ ಈತನಿಂದ ಹಿಂಸ್ರ ಪಶುಗಳ ವಧೆ (ಆದಿ 175/2). ಆಯಾಸಗೊಂಡು ಅಲ್ಲಿಂದ ನಗರದ ಕಡೆಗೆ ಹಿಂತಿರುಗುವಾಗ, ಒಂದು ಇಕ್ಕಟ್ಟಾದ ದಾರಿಯಲ್ಲಿ ಶಕ್ತಿಯೆಂಬ ಮುನಿಯ ಭೇಟಿ (ಆದಿ 175/6–7). ಅಲ್ಲಿ ದಾರಿ ಬಿಟ್ಟು ಕೊಡುವ ಕುರಿತಾಗಿ ಅವರೊಳಗೆ ವಿವಾದ ಮತ್ತು ರಾಜನಿಂದ ಋಷಿಯ ತಿರಸ್ಕಾರ. (ಆದಿ 175/8–11) ರಾಕ್ಷಸನಾಗುವಂತೆ ಶಕ್ತಿಯಿಂದ ಈತನಿಗೆ ಶಾಪ (ಆದಿ 175/13–14). ವಿಶ್ವಾಮಿತ್ರನ ಪ್ರೇರಣೆಯಿಂದ ಇವನ ಶರೀರದಲ್ಲಿ 'ಕಿಂಕರ'ನೆಂಬ ಹೆಸರಿನ ರಾಕ್ಷಸನ ಆವೇಶ (ಆದಿ 175/21). ಇವನಿಂದ ಬ್ರಾಹ್ಮಣನೊಬ್ಬನ ಭೋಜನಕ್ಕೆ ಮನುಷ್ಯಮಾಂಸ ಕೊಡುವಂತೆ ಅಡುಗೆಯವನಿಗೆ ಪ್ರೇರಣೆ (ಆದಿ 175/31). ಬ್ರಾಹ್ಮಣನಿಂದ ಇವನಿಗೆ ರಾಕ್ಷಸಸ್ವಭಾವ ಬರುವಂತೆ ಶಾಪ (ಆದಿ 175/35–36). ಇವನಿಂದ ಶಕ್ತಿ ಮಹರ್ಷಿಯ ಭಕ್ಷಣ (ಆದಿ 175/40). ವಿಶ್ವಾಮಿತ್ರನ ಪ್ರೇರಣೆಯಿಂದ, ಈತನ ಮೂಲಕ ವಸಿಷ್ಠನ ಎಲ್ಲಾ ಪುತ್ರರ ಸಂಹಾರ (ಆದಿ 175/42). ವಸಿಷ್ಠನ ಮೇಲೆ ಇವನ ಆಕ್ರಮಣ (ಆದಿ 176/18). ಮಂತ್ರಪೂತ ಜಲದಿಂದ ಅಭಿಷೇಕಮಾಡಿ, ವಸಿಷ್ಠನ ಮೂಲಕ ಇವನ ಉದ್ಧಾರ (ಆದಿ 176/26). ಎಂದೆಂದೂ ಬ್ರಾಹ್ಮಣನಿಗೆ ಅಪಮಾನ ಮಾಡಕೂಡದೆಂದು ವಸಿಷ್ಠನಿಂದ ಇವನಿಗೆ ಆದೇಶ (ಆದಿ 176/31). ವಸಿಷ್ಠನೊಡನೆ ಪುತ್ರ ಪ್ರಾಪ್ತಿಮಾಡಿಸಿಕೊಳ್ಳಲು ಇವನ ಪ್ರಾರ್ಥನೆ (ಆದಿ 76/33). ವಸಿಷ್ಠನ ಮೂಲಕ ಇವನ ಪತ್ನಿಯ ಗರ್ಭದಿಂದ 'ಅಶ್ಮಕ'ನೆಂಬ ಹೆಸರಿನ ಪುತ್ರನ ಜನನ (ಆದಿ 176/47). ಶಾಪಗ್ರಸ್ತನಾಗಿದ್ದಾಗ ಸಂಭೋಗದಲ್ಲಿ ಮಗ್ನನಾಗಿದ್ದ ಬ್ರಾಹ್ಮಣನನ್ನು ಈತ ಭಕ್ಷಿಸಿದುದು (ಆದಿ 181/16). ತನ್ನ ಪತ್ನಿಯೊಂದಿಗೆ ಸಮಾಗಮ ಮಾಡುವಾಗ ಮರಣವುಂಟಾಗುವಂತೆಯೂ, ವಸಿಷ್ಠನಿಂದಲೇ ಪುತ್ರ ಪ್ರಾಪ್ತಿಯಾಗುವಂತೆಯೂ ಬ್ರಾಹ್ಮಣ ಪತ್ನಿ ಅಂಗೀರಸಿಯಿಂದ ಇವನಿಗೆ ಶಾಪ (ಆದಿ 181/20). ಮಹರ್ಷಿ ಪರಾಶರನ ಮೂಲಕ ಸೌದಾಸಕುಮಾರ ಸರ್ವಕರ್ಮನ ಪ್ರಾಣ ರಕ್ಷಣೆ (ಶಾಂತಿ 149/76–77). ಇವನ ಹೆಸರು ಮಿತ್ರಸಹ ಮತ್ತು ಇವನ ರಾಣಿಯ ಹೆಸರು ಮದಯಂತಿ ಆಗಿತ್ತು. ಆಕೆಯನ್ನು ಇವನು ವಸಿಷ್ಠನ ಸೇವೆಗೆ ಒಪ್ಪಿಸಿದ್ದನು (ಶಾಂತಿ 234/30; ಅನು 137/18). ಈತ ವಸಿಷ್ಠನೊಡನೆ ಗೋವಿನ ಕುರಿತಾಗಿ ಕೇಳಿದುದು (ಅನು 78/3). ಕುಂಡಲದ ಯಾಚನೆಗಾಗಿ ಹೋಗಿದ್ದ ಉತ್ತಂಕ ಮುನಿಯೊಡನೆ ಈತನ ಸಂವಾದ (ಆಶ್ವ 57/18; 58/4–16).

**ಕಲ್ಮಾಷಿ** – ಒಂದು ನದಿ. ಅದರ ಅಕ್ಕಪಕ್ಕದಲ್ಲಿ ಸುತ್ತಾಡುತ್ತಿದ್ದ ರಾಜಾದ್ರುಪದ ಒಂದು ಬ್ರಾಹ್ಮಣ ಕೇರಿಗೆ ಹೋದನು. ಅಲ್ಲಿ ಯಾಜ ಉಪಯಾಜರನ್ನು ಭೇಟಿ ಮಾಡಿದ್ದನು (ಆದಿ 166/5–6). ಇದರ ದಡದಲ್ಲಿಯೇ ವಾಸಿಸುತ್ತಿದ್ದ ಭೃಗು ಯುಧಿಷ್ಠಿರನಿಗೆ ಉಪದೇಶ ಮಾಡಿ ಅನುಗ್ರಹಿಸಿದ್ದನು (ಸಭಾ 78/16). (ಅಚಾರ್ಯ ನೀಲಕಂಠರು 'ಕಲ್ಮಾಷಿ'ಯ ಅರ್ಥ ಕೃಷ್ಣವರ್ಣದ ಯಮುನೆಯೆಂದಿದ್ದಾರೆ.)

**ಕಲ್ಯಾಣಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/7).

**ಕವಚ** – ಇಂದ್ರಸಭೆಯಲ್ಲಿದ್ದ ಒಬ್ಬ ಋಷಿ (ಸಭಾ 7/17). ಈತ ಪಶ್ಚಿಮ ದಿಕ್ಕಿನಲ್ಲಿ ವಾಸಿಸುತ್ತಾನೆ. (ಶಾಂತಿ 208/30).

**ಕವಚಿ** – ಧೃತರಾಷ್ಟ್ರನ ಮಗ (ಆದಿ 67/103). ಭೀಮಸೇನನಿಂದ ಇವನ ವಧೆ (ಕರ್ಣ 24/2–6).

**ಕವಿ** – (1) ಭೃಗು ಮಹರ್ಷಿಯ ಪುತ್ರ (ಆದಿ 66/42). ಅಗಸ್ತ್ಯರ ಕಮಲಗಳು ಕದಿಯಲ್ಪಟ್ಟಾಗ ಶಪಥ ಮಾಡಿದುದು (ಅನು 94/32).

(2) ಬೃಹಸ್ಪತಿಯ ಐದನೆಯ ಮಗ. ಒಬ್ಬ ಅಗ್ನಿ. ಅವನು ಬಡಬಾನಲನ ರೂಪದಿಂದ ಸಮುದ್ರದ ನೀರನ್ನು ಕುದಿಸುತ್ತಾನೆ. ಶರೀರದ ಒಳಗೆ ಮೇಲಿನ ಕಡೆಗೆ ಗತಿಶೀಲವಾಗಿರುವುದರಿಂದ ಇವನನ್ನು 'ಉದಾನ' ಮತ್ತು 'ಊರ್ಧ್ವಭಾಕ್' ಎಂದೂ ಕರೆಯುತ್ತಾರೆ (ವನ 219/20).

(3) ವರುಣಯಜ್ಞದಲ್ಲಿ ಬ್ರಹ್ಮನ ಶುಕ್ರವು ಹೋಮಿಸಲ್ಪಟ್ಟಾಗ ಮೂವರು ಪುರುಷರು ಪ್ರಕಟವಾದರು. ಅವರಲ್ಲಿ ಈತ ಒಬ್ಬ. ಇತರ ಇಬ್ಬರು ಭೃಗು ಮತ್ತು ಅಂಗೀರಸರು. ಬ್ರಹ್ಮನು ಕವಿಯನ್ನೇ ತನ್ನ ಪುತ್ರನಾಗಿ ಸ್ವೀಕರಿಸಿದ. ಈ ಕವಿಗೆ 'ಕವಿ' ಕಾವ್ಯ ಮೊದಲಾದ ಎಂಟು ಮಕ್ಕಳಾದರು. ಅವರನ್ನು ವಾರುಣರೆಂದು ಕರೆಯುತ್ತಾರೆ. ಇವರೆಲ್ಲ ಪ್ರಜಾಪತಿಗಳು (ಅನು 85/132–134).

(4) ಬ್ರಹ್ಮನ ಪುತ್ರನಾದ ಕವಿಯ ಮಗ (ಅನು 85/133).

(5) ಒಬ್ಬ ವಿಶ್ವೇದೇವ (ಅನು 91/36).

**ಕಶೇರಕ** – ಕುಬೇರನ ಸಭೆಯಲ್ಲಿರುವ, ಸೇವಾಮಗ್ನ ಬಹುಸಂಖ್ಯೆಯ ಯಕ್ಷರಲ್ಲಿ ಒಬ್ಬ (ಸಭಾ 10/15).

**ಕಶೇರು** – 'ತ್ವಷ್ಟಾ' ಪ್ರಜಾಪತಿಯ ಒಬ್ಬ ಸುಂದರ ಪುತ್ರಿ. ಅವಳನ್ನು ಹದಿನಾಲ್ಕನೆಯ ವರ್ಷ ಪ್ರಾಯದಲ್ಲಿ ನರಕಾಸುರನು ಅಪಹರಿಸಿದ್ದನು. ಹದಿನಾರು ಸಾವಿರದ ತೊಂಭತೊಂಭತ್ತು ಇತರ ಕನ್ನಿಕೆಯರೊಂದಿಗೆ ಈಕೆಯನ್ನೂ ಶ್ರೀಕೃಷ್ಣನು ವಿವಾಹವಾದನು. ಈ ಎಲ್ಲಾ ಕನ್ನಿಕೆಯರು ಶ್ರೀಕೃಷ್ಣನೊಡನೆ, ದೇವರ್ಷಿ ನಾರದ ಮತ್ತು ವಾಯುದೇವರ ಭವಿಷ್ಯವಾಕ್ಯಗಳ ಸತ್ಯತೆಯನ್ನು ಹೇಳುತ್ತಾ, ಆತನ ಸಂದರ್ಶನ ಮಾತ್ರದಿಂದ ತಾವು ಕೃತಕೃತ್ಯರಾದುದನ್ನು ಹೇಳಿದರು ಮತ್ತು ಅವನ ಕುರಿತಾಗಿ ತಮಗಿರುವ ಸಕಾಮಭಾವನೆಯನ್ನು ಪ್ರಕಟಿಸಿದರು. ಅನಂತರ ಭಗವಂತನು ಅವರನ್ನು ಸ್ವೀಕರಿಸಿದನು (ಸಭಾ 38/29).

**ಕಶೇರುಮಾನ್** – ಕಶೇರುಮಂತ (ಕಸೇರುಮಾನ್) – ಒಬ್ಬ ಯವನ ಜಾತಿಯ ಅಸುರ. ಅವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು (ಸಭಾ 38/29; ವನ 12/32).

**ಕಶ್ಯಪ** – (1) ಒಬ್ಬ ದೇವರ್ಷಿ, ಬ್ರಹ್ಮರ್ಷಿ ಮತ್ತು ಪ್ರಜಾಪತಿ. ಅವನು ಮರೀಚಿಯ ಮಗ ಮತ್ತು ದಕ್ಷ ಪ್ರಜಾಪತಿಯ ಅಳಿಯ (ಆದಿ 65/11). ಈತ ಕದ್ರು ಮತ್ತು ವಿನತೆಯರ ಪತಿ (ಆದಿ 16/16). ಬ್ರಹ್ಮನು ಇವನೊಡನೆ ಸರ್ಪಗಳ ಮೇಲೆ ಕ್ರೋಧ ಮಾಡದಂತೆ ಹೇಳಿದನು ಮತ್ತು ಅವುಗಳ ವಿಷವನ್ನು ಇಳಿಸುವ ವಿದ್ಯೆಯನ್ನು ಉಪದೇಶಿಸಿದನು (ಆದಿ 20/14–15). ಕಶ್ಯಪನು ಗರುಡನ ಕುಶಲ ಸಮಾಚಾರ ಕೇಳಿದನು. ಅವನು ಆಹಾರವನ್ನು ಬೇಡಿದಾಗ, ಒಂದು ಆನೆ ಮತ್ತು ಆಮೆಯನ್ನು ತಿನ್ನುವಂತೆ ಆದೇಶ ನೀಡಿದನು. ವಿಭಾವಸು ಮತ್ತು ಸುಪ್ರತೀಕ ಮುನಿಗಳ ವೈರ ಮತ್ತು ಶಾಪದ ಕಥೆ ಹೇಳಿ, ಅವರೇ ಆನೆ ಮತ್ತು ಆಮೆಯಾದ ವಿಚಾರ ಹೇಳಿದನು ಮತ್ತು ಆತನ ವಿಶಾಲ ಶರೀರ ಮತ್ತು ಯುದ್ಧದ ವರ್ಣನೆ ಮಾಡಿದುದು (ಆದಿ 19/13–32). ತಪಸ್ಸಿನಲ್ಲಿ ಮಗ್ನನಾಗಿದ್ದ ಕಶ್ಯಪ ಗರುಡನಿಗೆ ದರ್ಶನ ನೀಡಿದನು (ಆದಿ 30/11). ಈತ ಪುತ್ರ ಕಾಮನೆಯಿಂದ ಯಜ್ಞ ಮಾಡಿದನು (ಆದಿ 31/5). ವಾಲಖಿಲ್ಯರ ಪ್ರಸಾದದಿಂದ, ಈತ ವಿನತೆಯ ಗರ್ಭದಿಂದ ಅರುಣ ಮತ್ತು ಗರುಡನನ್ನು ಪಡೆದು, ಗರುಡನನ್ನು ಪಕ್ಷಿಗಳ 'ಇಂದ್ರ' ಪದವಿಯಲ್ಲಿ ಅಭಿಷಿಕ್ತನಾಗಿ ಮಾಡಿದನು (ಆದಿ 31/12–15). ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಕ್ರೋಧಾ, ಪ್ರಾಧಾ, ವಿಶ್ವಾ, ವಿನತಾ, ಕಪಿಲಾ, ಮುನಿ, ಕದ್ರು – ದಕ್ಷನ ಈ ಹದಿಮೂರು ಕನ್ಯೆಯರು ಕಶ್ಯಪನ ಪತ್ನಿಯರಾಗಿದ್ದರು (ಆದಿ 65/12). ಇವನ ಸಂತಾನಗಳ ವರ್ಣನೆ (ಆದಿ 65/14–54). ಇವರಿಂದ ದೇವತೆಗಳೂ ಅಸುರರೂ ಹುಟ್ಟಿದರು (ಆದಿ 66/34). ಈತ ತನ್ನ ಜ್ಯೇಷ್ಠ ಪತ್ನಿ ಅದಿತಿಯ ಗರ್ಭದಿಂದ ಇಂದ್ರನೇ ಮೊದಲಾದ ದ್ವಾದಶ ಆದಿತ್ಯರನ್ನು ಪಡೆದನು (ಆದಿ 75/10). ಕಶ್ಯಪ ಮತ್ತು ಸುರಭಿಯ ಸಹವಾಸದಿಂದ ನಂದಿನಿಯೆಂಬ ಗೋವಿನ ಜನ್ಮ (ಆದಿ 99/8–14). ಅರ್ಜುನನ ಜನ್ಮಸಮಯದಲ್ಲಿ ಉಪಸ್ಥಿತರಾಗಿದ್ದ ಏಳುಮಂದಿ ಋಷಿಗಳಲ್ಲಿ ಈತನೂ ಒಬ್ಬನಾಗಿದ್ದನು (ಆದಿ 122/51). ಪರಶುರಾಮನು ಈತನಿಗೆ ಪೂರ್ಣ ಭೂಮಂಡಲವನ್ನು ದಾನವಾಗಿ ಕೊಟ್ಟಿದ್ದನು (ಆದಿ 129/62). ಈತ ಬ್ರಹ್ಮನ ಸಭೆಯಲ್ಲಿ ಇರುತ್ತಾನೆ (ಸಭಾ 11/18). ಪ್ರಶ್ನೆಗೆ ಅಸತ್ಯ ಉತ್ತರ

ಕೊಡುವುದು ಅಥವಾ ಯಥಾರ್ಥ ವಿಷಯ ಗೊತ್ತಿದ್ದರೂ ಉತ್ತರ ಕೊಡದಿರುವ ದೋಷದ ಕುರಿತು ಪ್ರಹ್ಲಾದನು ಕೇಳಿದಾಗ, ಈತ ತಿಳಿಸಿದುದು ಮತ್ತು ಎರಡೂ ಪಕ್ಷಗಳೊಡನೆ ಸೇರಿರುವ ಕಾರಣ ದಿಂದ ಸಾಕ್ಷಿಹೇಳದಿರುವ ಸಾಕ್ಷಿದಾರನಿಗೆ ಬರುವ ದೋಷದ ವರ್ಣನೆ ಮಾಡಿದುದು (ಸಭಾ 68/73–75). ಯುಧಿಷ್ಠಿರನೊಂದಿಗೆ ತೀರ್ಥ ಯಾತ್ರೆ ಮಾಡಿದ ಋಷಿಗಳಲ್ಲಿ ಈತನ ಹೆಸರೂ ಸೇರಿದೆ (ವನ 85/119). ಬ್ರಹ್ಮನು ಯಜ್ಞಮಾಡಿ ದಾಗ ಅಖಂಡ ಭೂಮಿಯನ್ನು ಕಶ್ಯಪನಿಗೆ ದಾನ ವಾಗಿತ್ತನು. ಇದರಿಂದಾಗಿ ಪೃಥ್ವಿಗೆ ದುಃಖ ವಾಯಿತು. ಆಕೆ ರಸಾತಲಕ್ಕೆ ಹೋಗಲು ತೊಡಗಿದಳು. ಆಗ ಕಶ್ಯಪನು ಆಕೆಯನ್ನು ತನ್ನ ತಪಸ್ಸಿನಿಂದ ಪ್ರಸನ್ನಗೊಳಿಸಿದನು (ವನ 114/18–22). ಪರಶುರಾಮನು ಕಶ್ಯಪನಿಗೆ ಭೂಮಿದಾನ ಮಾಡಿ ಮಹೇಂದ್ರ ಪರ್ವತದ ಮೇಲೆ ವಾಸಿಸಿ ದನು (ವನ 117/14). ಕಶ್ಯಪಪತ್ನಿ ಅದಿತಿಯ ಗರ್ಭದಿಂದ ವಾಮನಾವತಾರ (ವನ 272/62). ಪರಶುರಾಮನಿಂದ ಪೂರ್ಣ ಪೃಥ್ವಿಯನ್ನು ದಾನ ವಾಗಿ ಪಡೆದು, ಅವನು ಈ ಪೃಥ್ವಿಯಿಂದ ಹೊರಗೆ ಹೋಗುವಂತೆ ಆದೇಶಿಸಿದನು (ದ್ರೋಣ 70/19–21). ಇವನು ದ್ರೋಣಾಚಾರ್ಯನ ಬಳಿಗೆ ಹೋಗಿ ಯುದ್ಧ ನಿಲ್ಲಿಸುವಂತೆ ಹೇಳಿದನು (ದ್ರೋಣ 190/35–40). ಸ್ಕಂದನ ಜನ್ಮ ಸಮಯದಲ್ಲಿ ಈತನ ಆಗಮನ (ಶಲ್ಯ 45/10). ಪರಶುರಾಮನಿಂದ ದಕ್ಷಿಣೆಯ ರೂಪದಲ್ಲಿ ಪೃಥ್ವಿ ಯನ್ನು ದಾನವಾಗಿ ಪಡೆದನು (ಶಾಂತಿ 49/64). ಪರಶುರಾಮನನ್ನು ರಾಜ್ಯದಿಂದ ಹೊರಗೆ ಕಳುಹಿಸಿದನು (ಶಾಂತಿ 49/65–66). ರಸಾತಲಕ್ಕೆ ಹೋಗುತ್ತಿರುವ ಭೂಮಿಯನ್ನು ತೊಡೆಗಳ ಸಹಾಯದಿಂದ ತಡೆದನು (ಶಾಂತಿ 49/72). ಪುರೋಹಿತನ ವಿಷಯದಲ್ಲಿ ಪುರೂರವನಿಗೆ ಉಪ ದೇಶ (ಶಾಂತಿ 73/7–22). ಕಶ್ಯಪನ ಇನ್ನೊಂದು ಹೆಸರು 'ಅರಿಷ್ಟನೇಮಿ' ಎಂದೂ ಇದೆ (ಶಾಂತಿ 208/8). ಈತ ಭೀಷ್ಮನಿಗೆ ವರಾಹಾವತಾರದ ಕಥೆ ತಿಳಿಸಿದನು (ಶಾಂತಿ 209/6). ಈತ ಮೂಲಭೂತ ಕಶ್ಯಪಗೋತ್ರದ ಪ್ರವರ್ತಕನಾಗಿ ದ್ದಾನೆ (ಶಾಂತಿ 296/17–18). ಮಹರ್ಷಿ ಕಶ್ಯಪರ ಅಂಗಗಳಿಂದ ಎಳ್ಳಿನ ಉತ್ಪತ್ತಿ (ಅನು 66/10). ಈತ ವೃಷಾದರ್ಭಿಯೊಡನೆ ಪ್ರತಿಗ್ರಹದ ದೋಷ ತಿಳಿಸಿದನು (ಅನು 93/40). ಅರುಂಧತಿಯೊಡನೆ ತನ್ನ ಶರೀರದ ದೌರ್ಬಲ್ಯದ ಕಾರಣ ತಿಳಿಸಿದನು (ಅನು 93/65). ಯಾತುಧಾನಿಯೊಡನೆ ತನ್ನ ಹೆಸರಿನ ಪರಿಚಯ ತಿಳಿಸಿದನು (ಅನು 93/86). ಕಮಲದಂಟಿನ ಚೋರತನದ ವಿಷಯದಲ್ಲಿ ಶಪಥ ಮಾಡಿದನು (ಅನು 93/116–117). ಅಗಸ್ತ್ಯರ ಕಮಲಗಳ ಕಳ್ಳತನವಾದಾಗ ಶಪಥ ಮಾಡಿದನು (ಅನು 94/18). ಕುಬೇರನ ಏಳು ಗುರುಗಳಲ್ಲಿ ಈತನೂ ಒಬ್ಬ. ಈತ ಉತ್ತರ ದಿಕ್ಕಿನ ಆಶ್ರಯ ಪಡೆದು ವಾಸಿಸುತ್ತಾನೆ. ಇವನ ಕೀರ್ತನೆಯಿಂದ ಕೀರ್ತಿ ಮತ್ತು ಕಲ್ಯಾಣ ಪ್ರಾಪ್ತಿ ಯಾಗುತ್ತದೆ (ಅನು 150/38–39). ತಪೋಬಲ ದಿಂದ ಈತ ಪೃಥ್ವಿಯನ್ನು ಧಾರಣೆ ಮಾಡಿದನು (ಅನು 153/2) ಮಹಾಭಾರತದಲ್ಲಿ ಬಂದಿರುವ ಕಶ್ಯಪನ ಹೆಸರುಗಳು– ದೇವರ್ಷಿ, ಕಾಶ್ಯಪ, ಮಹರ್ಷಿ, ಮಾರೀಚ, ಪ್ರಜಾಪತಿ, ಅರಿಷ್ಟನೇಮಿ – ಇತ್ಯಾದಿ.

(2) ಒಬ್ಬ ನಾಗ. ಅವನು ಅರ್ಜುನನ ಜನ್ಮ ಮಹೋತ್ಸವದಲ್ಲಿ ಉಪಸ್ಥಿತನಾಗಿದ್ದನು (ಆದಿ 122/71).

**ಕಹೋಡ** – ಮಹರ್ಷಿ ಉದ್ದಾಲಕನ ಶಿಷ್ಯ ಮತ್ತು ಅಳಿಯ. ಅಷ್ಟಾವಕ್ರನ ತಂದೆ (ವನ 132/3–8). ಈತ ಉದ್ದಾಲಕನ ಶಿಷ್ಯನಾಗಿ ವಿನೀತ ಭಾವದಿಂದ ಅವನ ಪರಿಚರ್ಯೆಯಲ್ಲಿ ಮಗ್ನನಾ ಗಿರುವುದು. ಇವನಿಂದಾದ ಸೇವೆಯ ಮಹತ್ವ ವನ್ನು ತಿಳಿದು ಗುರುವು ಶೀಘ್ರವಾಗಿ ಈತನಿಗೆ ಸಂಪೂರ್ಣ ವೇದಶಾಸ್ತ್ರಗಳ ಜ್ಞಾನ ಮಾಡಿಸಿ ದುದು. ತನ್ನ ಕನ್ಯೆ ಸುಜಾತೆಯನ್ನು ಈತನಿಗೆ ವಿವಾಹಮಾಡಿಕೊಟ್ಟದ್ದು (ವನ 132/9). ಗರ್ಭಸ್ಥ ನಾದ ತನ್ನ ಬಾಲಕನಿಂದಲೇ ತನ್ನ ಅಧ್ಯಯನದ ಕಟು ವಿಮರ್ಶೆಯನ್ನು ಕೇಳಿ, ಆತನಿಗೆ ಎಂಟು ಅಂಗಗಳಲ್ಲಿ ವಕ್ರನಾಗುವಂತೆ ಈತನಿಂದ ಶಾಪ (ವನ 132/10). ಗರ್ಭವತಿ ಸುಜಾತೆ ಈತನಲ್ಲಿ ಧನವನ್ನು ಯಾಚಿಸಿದುದು (ವನ 132/15). ಈತ ಜನಕನ ಆಸ್ಥಾನಕ್ಕೆ ಹೋದುದು ಮತ್ತು ಶಾಸ್ತ್ರಾರ್ಥಿ ಪಂಡಿತ ಬಂದಿಯಿಂದ ಸೋತು ನೀರಿನಲ್ಲಿ ಮುಳುಗಿಸಲ್ಪಡುವುದು (ವನ 132/15). ಈತ ನೀರಿನಿಂದ ಹೊರಗೆ ಬರುವುದು

ಮತ್ತು ಸಮಂಗಾ ನದಿಯಲ್ಲಿ ಸ್ನಾನ ಮಾಡುವಂತೆ ಅಷ್ಟಾವಕ್ರನಿಗೆ ಆದೇಶ ನೀಡಿದುದು (ವನ 134/32–39).

**ಕಹೋಲ** – ಇಂದ್ರನ ಸಭೆಯಲ್ಲಿದ್ದ ಒಬ್ಬ ಪ್ರಾಚೀನ ಋಷಿ (ಸಭಾ 7/17). ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನೊಡನೆ ಈತನ ಭೇಟಿ (ಉದ್ಯೋಗ 83/64).

**ಕಾಕ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ಕಾಕಿ** – (1) ತಾಮ್ರಾ ಎಂಬವಳ ಲೋಕ ವಿಖ್ಯಾತ ಪುತ್ರಿ. ಇವಳು ಗೂಗೆಗಳಿಗೆ ಜನ್ಮವಿತ್ತಳು (ಆದಿ 66/56–57).

(2) ಶಿಶುಗಳ ಏಳು ಮಾತೃಕೆಯರಲ್ಲಿ ಒಬ್ಬಳು (ವನ 228/10).

**ಕಾಕ್ಷೀವಂತ** – ಗೌತಮಋಷಿಯ ಪುತ್ರ. ಚಂಡ ಕೌಶಿಕನ ತಂದೆ (ಸಭಾ 17/22; 21/5). ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/17).

**ಕಾಞ್ಚನ** – ಮೇರುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬ ಮೇಘಮಾಲಿ (ಶಲ್ಯ 45/47).

**ಕಾಞ್ಚನಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/57).

**ಕಾಞ್ಚನಾಕ್ಷಿ** – ನೈಮಿಷ್ಯಾರಣ್ಯದಲ್ಲಿ ಹರಿಯುತ್ತಿರುವ ಸರಸ್ವತಿಯ ಹೆಸರು (ಶಲ್ಯ 38/19).

**ಕಾಞ್ಚೀ** – (ಮದ್ರಾಸಿನಿಂದ 37 ಮೈಲು ನೈಋತ್ಯದಲ್ಲಿರುವ ಒಂದು ನಗರ. ಅದು ಪ್ರಾಚೀನ ಕಾಲದಲ್ಲಿ ಚೋಳ ರಾಜರ ರಾಜಧಾನಿಯಾಗಿತ್ತು. ಈಗ ಅದನ್ನು 'ಕಾಂಜೀವರಮ್' ಎನ್ನುತ್ತಾರೆ. ಏಳು ಮೋಕ್ಷದಾಯಕ ಪಟ್ಟಣಗಳಲ್ಲಿ ಇದೂ ಒಂದು.) ಇಲ್ಲಿದ್ದ ಯೋಧರು ದುರ್ಯೋಧನನ ಸೈನ್ಯದಲ್ಲಿದ್ದರು (ಉದ್ಯೋಗ 161/21).

**ಕಾತ್ಯಾಯನ** – ಇಂದ್ರನ ಸಭೆಯಲ್ಲಿರುವ ಒಬ್ಬ ಋಷಿ (ಸಭಾ 7/19).

**ಕಾನೀನ** – ಒಂದು ರೀತಿಯ ಬಂಧು. ದಾಯಾದಿ ಪುತ್ರ (ಆದಿ 119/33). ('ಈಕೆಯ ಗರ್ಭದಲ್ಲಿ ಹುಟ್ಟಿದ ಪುತ್ರ ನನ್ನ ಪುತ್ರನೆಂದೇ ಪರಿಗಣಿಸಲ್ಪಡುತ್ತಾನೆ' ಎಂಬ ಶರ್ತವನ್ನು ವಿವಾಹಪೂರ್ವದಲ್ಲಿ ಮಾಡಿದ ಪತಿಗೆ, ಯಾವ ಕನ್ಯೆ ಕೊಡಲ್ಪಡುತ್ತಾಳೋ, ಆ ಕನ್ಯೆಯ ಗರ್ಭದಿಂದ ಹುಟ್ಟಿದ ಮಗನು 'ಕಾನೀನ'ನೆನ್ನಿಸುತ್ತಾನೆ. – ಇದು ನೀಲಕಂಠರ ವ್ಯಾಖ್ಯಾನ.) ಸ್ತ್ರೀಯು ಕನ್ಯಾವಸ್ಥೆಯಲ್ಲಿಯೇ (ವಿವಾಹ ಪೂರ್ವ) ಯಾವ ಪುತ್ರನನ್ನು ಪಡೆದಿರುತ್ತಾಳೋ ಆತ 'ಕಾನೀನ'ನೆನ್ನಿಸುತ್ತಾನೆ ಎಂಬುದು ಸರ್ವಸಮ್ಮತ ಅಭಿಪ್ರಾಯವಾಗಿದೆ. ಉದಾ: ವ್ಯಾಸ, ಕರ್ಣ, ಶಿಬಿ, ಅಷ್ಟಕ, ಪ್ರತರ್ದನ ಮತ್ತು ವಸುಮಂತ ಇತ್ಯಾದಿ.

**ಕಾನ್ತಾರಕ** – ಕಾಂತಾರಕ – ದಕ್ಷಿಣ ಭಾರತದ ಒಂದು ಜನಪದ. ಅಲ್ಲಿದ್ದ ರಾಜನನ್ನು ದಕ್ಷಿಣ ವಿಜಯದ ಸಮಯದಲ್ಲಿ ಸಹದೇವನು ಸೋಲಿಸಿದ್ದನು (ಸಭಾ 31/13). (ವೇಣಾ ನದಿಯ ದಡದಲ್ಲಿರುವ ಭೂಭಾಗವನ್ನೇ 'ಕಾಂತಾರಕ'ವೆಂದು ಕರೆಯುತ್ತಾರೆ. ಇದು ಆಧುನಿಕರ ವಿಚಾರಕರ ಅಭಿಪ್ರಾಯ.)

**ಕಾನ್ತಿ** – ಒಂದು ಭಾರತೀಯ ಜನಪದ (ಭೀಷ್ಮ 9/40).

**ಕಾನ್ಯಕುಬ್ಜ** – ಗಂಗಾ ತಟದಲ್ಲಿರುವ ಒಂದು ಪ್ರಾಚೀನ ನಗರ. ಅದು ಗಾಧಿಯ ರಾಜಧಾನಿಯಾಗಿತ್ತು. (ಆಧುನಿಕ ಕನೌಜವೇ ಪ್ರಾಚೀನ ಕಾನ್ಯಕುಬ್ಜವಾಗಿತ್ತು.) ಆ ರಾಜ್ಯ ಅಥವಾ ಜನಪದವೇ ಕಾನ್ಯಕುಬ್ಜವೆಂಬ ಹೆಸರಿನಿಂದ ಪ್ರಖ್ಯಾತವಾಗಿತ್ತು (ಆದಿ 174/3; ವನ 15/20). ಇಲ್ಲಿ ವಿಶ್ವಾಮಿತ್ರನು ಇಂದ್ರನೊಂದಿಗೆ ಸೋಮಪಾನ ಮಾಡಿದ್ದನು (ವನ 87/17). ಕಾನ್ಯಕುಬ್ಜದಲ್ಲಿ ಗಾಧಿರಾಜನ ಕುಮಾರಿ ಸತ್ಯವತಿಯನ್ನು, ತನಗೆ ವಿವಾಹ ಮಾಡಿಕೊಡುವಂತೆ, ಋಚೀಕ ಮುನಿಯು ರಾಜನೊಡನೆ ಕೇಳಿದ್ದನು (ಉದ್ಯೋಗ 119/4).

**ಕಾನ್ವಶಿರಾ** – ಒಂದು ಜಾತಿ. ಈ ಜಾತಿಯವರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರೊಂದಿಗೆ ಮತ್ಸರಪಟ್ಟುದರಿಂದ ನೀಚ ಸ್ವಭಾವವನ್ನು ಪ್ರಾಪ್ತಿಸಿಕೊಂಡರು (ಅನು 35/17).

**ಕಾಪಿಲ** – ಕುಶದ್ವೀಪದ ಏಳನೇ ದೇಶ (ಭೀಷ್ಮ 12/14).

**ಕಾಪೀ** – ಒಂದು ನದಿ. ಅದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/24).

**ಕಾಮ** – (1) ಧರ್ಮನ ಮೂವರು ಪುತ್ರರಲ್ಲಿ ಒಬ್ಬ. ಇವನ ಪತ್ನಿಯ ಹೆಸರು ರತಿ (ಆದಿ

66/32–33).

(2) ಅನುಪಮ ರೂಪವಂತ ಸ್ವಾಹಾಪುತ್ರ ಅಗ್ನಿ (ವನ 219/23).

(3) ಶಿವನ ಒಂದು ಹೆಸರು (ಅನು 17/42).

(4) ಕಾಮಸ್ವರೂಪನಾದ ರುಕ್ಮಿಣೀಪುತ್ರ ಪ್ರದ್ಯುಮ್ನ (ಅನು 148/20–21).

(5) ವಿಷ್ಣುವಿನ ಒಂದು ಹೆಸರು (ಅನು 149/45).

(6) ಒಬ್ಬ ಋಷಿಯ ಹೆಸರು (ಅನು 150/41).

**ಕಾಮಚರಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/23).

**ಕಾಮಠಕ** – (ಕಾಮಠ) – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಆತ ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋಗಿದ್ದನು (ಆದಿ 57/16).

**ಕಾಮ** (ಅಥವಾ ಕಾಮಾಖ್ಯ) **ತೀರ್ಥ** – ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ಮನೋವಾಂಛಿತ ಫಲಪ್ರಾಪ್ತವಾಗುತ್ತದೆ (ವನ 82/105).

**ಕಾಮದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/27).

**ಕಾಮದೇವ** – ವಿಷ್ಣುವಿನ ಒಂದು ಹೆಸರು (ಅನು 149/83).

**ಕಾಮಂದಕ** – ಒಬ್ಬ ಪ್ರಾಚೀನ ಋಷಿ. ಅವನು ಆಂಗರಿಷ್ಠನಿಗೆ ರಾಜಧರ್ಮವನ್ನು ಉಪದೇಶಿಸಿದ್ದನು (ಶಾಂತಿ 123/15–25).

**ಕಾಮಾ** – ಪೃಥುಶ್ರವಾನ ಪತ್ನಿ. ಅವಳು ಪೂರು ವಂಶದ ಮಹಾರಾಜ ಅಯುತನಾಯಿಯ ಪತ್ನಿ ಮತ್ತು ಅಕ್ರೋಧನನ ತಾಯಿಯಾಗಿದ್ದಳು. (ಆದಿ 177/21)

**ಕಾಮ್ಪಿಲ್ಯ** – ದಕ್ಷಿಣ ಪಾಂಚಾಲದ ಒಂದು ನಗರ. ಅದು ದ್ರುಪದನ ರಾಜಧಾನಿಯಾಗಿತ್ತು (ಆದಿ 137/73). ವಿವಾಹಾನಂತರ ಕಾಂಪಿಲ್ಯ ನಗರಕ್ಕೆ ಶಿಖಂಡಿಯ ಆಗಮನ (ಉದ್ಯೋಗ 189/13). ದಶಾರ್ಣರಾಜನು ಒಮ್ಮೆ ಇದರ ಸಮೀಪ ಹೋಗಿ, ಒಬ್ಬ ಬ್ರಾಹ್ಮಣನನ್ನು ದೂತನಾಗಿ ಅಲ್ಲಿಗೆ ಕಳುಹಿಸಿದ್ದನು (ಉದ್ಯೋಗ 192/14). ಪ್ರಾಚೀನ ಕಾಲದಲ್ಲಿ ಇಲ್ಲಿಯೇ ಬ್ರಹ್ಮದತ್ತನು ರಾಜ್ಯಪರಿಪಾಲನೆ ಮಾಡುತ್ತಿದ್ದನು. ಅವನಲ್ಲಿ ಪೂಜನೀ ಎಂಬ ಹೆಸರಿನ ಪಕ್ಷಿ ಇತ್ತು (ಶಾಂತಿ 139/5).

**ಕಾಮ್ಬೋಜ** – (1) ವಾಯವ್ಯ ಭರತಖಂಡದ ಒಂದು ಜನಪದ. ಮತ್ತು ಅಲ್ಲರುವ ನಿವಾಸಿಗಳು. ಅರ್ಜುನನು ಅವರನ್ನು ಜಯಿಸಿದ್ದನು (ಸಭಾ 27/23). ಯುಧಿಷ್ಠಿರನ ರಥಕ್ಕೆ ಕಾಂಬೋಜದಲ್ಲಿ ಹುಟ್ಟಿದ (ಕಾಬೂಲಿ) ಕುದುರೆಗಳು ಹೂಡಲ್ಪಟ್ಟಿದ್ದವು (ಸಭಾ 53/5). ಕಾಂಬೋಜ ದೇಶದ ಮ್ಲೇಚ್ಛರು ಕಲಿಯುಗದಲ್ಲಿ ರಾಜರಾಗುತ್ತಾರೆ ಎಂಬುದು ಭವಿಷ್ಯವಾಣಿ (ವನ 188/36). ಕಾಂಬೋಜದ ಯೋಧರು ದುರ್ಯೋಧನನ ಸೈನಿಕರಾಗಿದ್ದರು (ಉದ್ಯೋಗ 160/103). ಮಹಾಭಾರತ ಕಾಲದಲ್ಲಿ ಸುದಕ್ಷಿಣನು ಈ ದೇಶದ ರಾಜನಾಗಿದ್ದನು. ಅವನು ಮಹಾರಥಿಯಾಗಿದ್ದನು (ಉದ್ಯೋಗ 166/1–3). ಭೀಷ್ಮ ನಿರ್ಮಿತ ಗರುಡವ್ಯೂಹದ ಬಾಲದ ಭಾಗದಲ್ಲಿ ಕಾಂಬೋಜರು ನಿಲ್ಲಿಸಲ್ಪಟ್ಟಿದ್ದರು (ಭೀಷ್ಮ 56/7). ಕಾಂಬೋಜ ದೇಶದ ಕುದುರೆಗಳು ನೋಡಲು ಯೋಗ್ಯವಾಗಿದ್ದು, ಗಿಳಿಯ ರೆಕ್ಕೆಗಳಿಗೆ ಸಮಾನವಾದ ಬಣ್ಣದಿಂದ ಕೂಡಿರುತ್ತವೆ. ಇದೇ ರೀತಿಯ ಕುದುರೆಗಳು ನಕುಲನ ರಥಕ್ಕೆ ಹೂಡಲ್ಪಟ್ಟಿದ್ದವು (ದ್ರೋಣ 23/7). ಕಾಂಬೋಜವೇ ಮೊದಲಾದ ಅನೇಕ ದೇಶಗಳ ಅಶ್ವಗಳು ಬಾಲ, ಕಿವಿ, ಕಣ್ಣುಗಳನ್ನು ಸ್ಥಿರವಾಗಿಟ್ಟು ವೇಗದಿಂದ ಓಡಬಲ್ಲವುಗಳಾಗಿರುತ್ತವೆ (ದ್ರೋಣ 36/36).

(2) ಕಾಂಬೋಜರಾಜ ಸುದಕ್ಷಿಣ. ಅವನು ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/15). ಅವನ ತಮ್ಮನನ್ನು ಅರ್ಜುನ ವಧಿಸಿದ್ದನು (ಕರ್ಣ 156/111). ಈತ ಕಾಂಬೋಜ ದೇಶದ ಕುದುರೆಗಳ ಮೇಲೆ ಕುಳಿತು ಯುದ್ಧಕ್ಕೆ ಹೋಗಿದ್ದನು (ಭೀಷ್ಮ 71/13). ಇವನ ಯುದ್ಧ ಮತ್ತು ಅರ್ಜುನನಿಂದ ವಧೆ (ದ್ರೋಣ 92/61–63). ಕಾಂಬೋಜನ ನರೇಶ ಸುದಕ್ಷಿಣನ ವಧೆಯ ವರ್ಣನೆ (ದ್ರೋಣ 94/30). ಸುದಕ್ಷಿಣನ ತಂದೆಯೂ ಕಾಂಬೋಜ ಅಥವಾ ಕಾಂಬೋಜ ರಾಜನೆಂದು ಕರೆಯಲ್ಪಡುತ್ತಿದ್ದನು (ದ್ರೋಣ 92/61).

(3) ಕಾಂಬೋಜ ದೇಶದ ಒಬ್ಬ ಪ್ರಾಚೀನ ರಾಜ. ಮಹಾರಾಜ ಧುಂಧುಮಾರನಿಂದ ಈತನಿಗೆ ಖಡ್ಗಪ್ರಾಪ್ತವಾಗಿತ್ತು (ಶಾಂತಿ 166/77).

**ಕಾಮ್ಯಕವನ** – ಒಂದು ವನದ ಹೆಸರು. ವನವಾಸ ಕಾಲದಲ್ಲಿ ಪಾಂಡವರು ಇಲ್ಲಿ ವಾಸವಾಗಿದ್ದರು. ಈ ವನ ಋಷಿಮುನಿಗಳಿಗೆ ಅತ್ಯಂತ ಪ್ರಿಯ ವಾಗಿತ್ತು. ಕಾಮ್ಯಕ ವನದೊಳಗೆ ಪಾಂಡವರ ಪ್ರವೇಶ, ವಿದುರನು ಅಲ್ಲಿ ಹೋಗಿ ಭೇಟಿ ಯಾದುದು ಮತ್ತು ಮಾತುಕತೆ ಮಾಡಿದುದು (ವನ 5). ಸಂಜಯನು ಕಾಮ್ಯಕವನಕ್ಕೆ ಹೋಗಿ ವಿದುರನನ್ನು ಕರೆತಂದುದು (ವನ 6/11–17). ಯುಧಿಷ್ಠಿರಾದಿಗಳು ದ್ವೈತವನದಿಂದ ಕಾಮ್ಯಕ ವನಕ್ಕೆ ಪ್ರವೇಶಿಸಿದುದು, ಕಾಮ್ಯಕವನದಲ್ಲಿ ಪಾಂಡ ವರ ಬಳಿಗೆ ಶ್ರೀಕೃಷ್ಣ, ಮುನಿಶ್ರೇಷ್ಠ ಮಾರ್ಕಂ ಡೇಯ ಮತ್ತು ನಾರದರ ಆಗಮನ. (ವನ 182 ಮತ್ತು 183) ಪಾಂಡವರು ಕಾಮ್ಯಕವನಕ್ಕೆ ಹೋದುದು (ವನ 258).

**ಕಾಮ್ಯಾ** – ಸ್ವರ್ಗದ ಒಬ್ಬ ಅಪ್ಸರೆ. ಆಕೆ ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/64).

**ಕಾಯವ್ಯ** – ಒಬ್ಬ ಕಳ್ಳ, ನಿಷಾದ ಪುತ್ರ, ಆತ ಕ್ಷತ್ರಿಯ ತಂದೆ ಮತ್ತು ನಿಷಾದ ಜಾತಿಯ ತಾಯಿಯಿಂದ ಹುಟ್ಟಿದ್ದನು. ಇವನ ಸದಾಚಾರದ ವರ್ಣನೆ (ಶಾಂತಿ 135/2–9). ಆತ ತಮ್ಮ ಸರದಾರನಾಗುವಂತೆ ಚೋರರಿಂದ ಪ್ರಾರ್ಥನೆ. ಅದಕ್ಕೆ ಆತನ ಧರ್ಮೋಪದೇಶ (ಶಾಂತಿ 135/ 13–22).

**ಕಾಯಶೋಧನ ತೀರ್ಥ** – ಕುರುಕ್ಷೇತ್ರದಲ್ಲಿರುವ ಒಂದು ತೀರ್ಥ. ಅಲ್ಲಿ ಹೋಗಿ ಸ್ನಾನಮಾಡಿದರೆ ಶರೀರ ಶುದ್ಧವಾಗುತ್ತದೆ (ವನ 83/42).

**ಕಾರಂಧಮ** – ದಕ್ಷಿಣಸಮುದ್ರದ ಸಮೀಪದಲ್ಲಿ ರುವ ಒಂದು ತೀರ್ಥ (ಪಂಚನಾರೀ ತೀರ್ಥ ಗಳಲ್ಲಿ ಒಂದು) (ಆದಿ 215/3). ಇಲ್ಲಿ ಶಾಪಗ್ರಸ್ತ ಳಾಗಿ ಮೊಸಳೆಯಾಗಿದ್ದ ಅಪ್ಸರೆ(ವರ್ಗಾ ಎಂಬ ವಳ ಸಖಿ)ಯನ್ನು ಅರ್ಜುನನು ಉದ್ಧಾರ ಮಾಡಿ ದುದು (ಆದಿ 215/21).

**ಕಾರಪವನ** – ಸರಸ್ವತಿ ನದಿ ಸಂಬಂಧವಾದ ಒಂದು ತೀರ್ಥ (ಶಲ್ಯ 54/12).

**ಕಾರಸ್ಕರ** – ಒಂದು ನಿಂದ್ಯ ಮತ್ತು ತ್ಯಾಜ್ಯ ದೇಶ. ಆ ದೇಶದ ಧರ್ಮ ದೂಷಿತವಾಗಿದೆ (ಕರ್ಣ44/43).

**ಕಾರೀಷ** – ವಿಶ್ವಾಮಿತ್ರ ಮಹರ್ಷಿಯ ಬ್ರಹ್ಮಜ್ಞಾನಿ ಪುತ್ರ (ಅನು 4/55).

**ಕಾರೂಷ** – (1) ವೈವಸ್ವತ ಮನುವಿನ ಆರನೆಯ ಮಗ (ಆದಿ 75/16).

(2) ಒಂದು ಪ್ರಾಚೀನ ದೇಶ. ಆ ದೇಶದ ರಾಜ ಕಳ್ಳಕಾಕರನ್ನು ಕೊಲ್ಲುವವನಾಗಿದ್ದನು. ಈತ ದ್ರೌಪದಿ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದನು (ಆದಿ 185/16).

**ಕಾರ್ತವೀರ್ಯ** – ಹೈಹಯನರೇಶ ಕೃತವೀರ್ಯನ ಪುತ್ರ, ಸಹಸ್ರಬಾಹು ಅರ್ಜುನ. ಇವನ ಪ್ರಭಾವ ಮತ್ತು ಅತ್ಯಾಚಾರದ ವರ್ಣನೆ (ವನ 115/12–14). ಪರಾಕ್ರಮಿ ಸಹಸ್ರಬಾಹುವಿನಿಂದ ಅಗ್ನಿ ದೇವನಿಗೆ ಭಿಕ್ಷೆ (ಶಾಂತಿ 49/38). ಆಪವ ಮುನಿಯಿಂದ ಇವನಿಗೆ ಶಾಪ (ಶಾಂತಿ 49/43). ಪರಶುರಾಮನಿಂದ ಇವನ ಭುಜಗಳ ಛೇದನ (ಶಾಂತಿ 49/48). ಇವನ ವಂಶದ ಸಂಹಾರ (ಶಾಂತಿ 49/52–53). ಇವನಿಂದ ಮಾಂಸ ಭಕ್ಷಣ ನಿಷೇಧ (ಅನು 115/60). ದತ್ತಾತ್ರೇಯ ರಿಂದ ಈತ ವರವನ್ನು ಯಾಚಿಸಿದುದು (ಅನು 152/10). ವರಪ್ರಾಪ್ತಿಯ ಅನಂತರ ಇವನ ಅಹಂಕಾರ ಯುಕ್ತಮಾತು ಬ್ರಾಹ್ಮಣನಿಗಿಂತ ಕ್ಷತ್ರಿಯನ ಶ್ರೇಷ್ಠತ್ವವನ್ನು ಪ್ರತಿಪಾದಿಸಿದುದು (ಅನು 152/15–22). ವಾಯುದೇವನು ಹೇಳಿದ ಮೇಲೆ ಈತ ಬ್ರಾಹ್ಮಣನ ಮಹತ್ವವನ್ನು ಒಪ್ಪಿದುದು (ಅನು 157/24–26). ಈತ ಅಭಿಮಾನವಶನಾಗಿ ಸಮುದ್ರವನ್ನು ಬಾಣಗಳಿಂದ ಮುಚ್ಚಿದುದು (ಆಶ್ವ 29/3). ಪರಶುರಾಮನಿಂದ ಈತನ ವಧೆ (ಆಶ್ವ 29/11).

ಮಹಾಭಾರತದಲ್ಲಿ ಬಂದಿರುವ ಕಾರ್ತವೀರ್ಯಾ ರ್ಜುನನ ಹೆಸರುಗಳು – ಅನೂಪಪತಿ, ಅರ್ಜುನ, ಹೈಹಯ, ಹೈಹಯೇಂದ್ರ, ಹೈಹಯಾ ಧಿಪತಿ, ಹೈಹಯರ್ಷಭ, ಹೈಹಯಶ್ರೇಷ್ಠ – ಇತ್ಯಾದಿ.

**ಕಾರ್ತಸ್ವರ** – ಒಬ್ಬ ದೈತ್ಯ. ಅವನು ಹಿಂದೊಮ್ಮೆ ಈ ಪೃಥ್ವಿಯ ಅಧಿಪತಿಯಾಗಿದ್ದನು. ಆದರೆ ಇದನ್ನು ಬಿಟ್ಟು ಮೃತನಾದನು. (ಶಾಂತಿ 227/ 52)

**ಕಾರ್ತಿಕೇಯ** – ಸ್ಕಂದನ ಒಂದು ಹೆಸರು. ಕೃತ್ತಿಕಾದಿಗಳು ಇವನಿಗೆ ಸ್ತನ್ಯಪಾನ ಮಾಡಿಸಿದರು. ಆದುದರಿಂದ ಈತ ಕಾರ್ತಿಕೇಯನೆಂಬ ಹೆಸರಿ

ನಿಂದ ಪ್ರಸಿದ್ಧನಾದನು (ಅನು 85/81–82; 86/13–14) (ನೋಡು– ಸ್ಕಂದ).

**ಕಾರ್ಪಾಸಿಕ** – ಒಂದು ಪ್ರಾಚೀನ ದೇಶ. ಅಲ್ಲಿ ವಾಸಿಸುವ ದಾಸಿಯರು ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಸೇವಾಕಾರ್ಯ ಮಾಡುತ್ತಿದ್ದರು (ಸಭಾ 51/8).

**ಕಾರ್ಷ್ಣಿ** – ಒಬ್ಬ ದೇವಗಂಧರ್ವ. ಅವನು ಅರ್ಜುನನ ಜನ್ಮೋತ್ಸವದಲ್ಲಿ ಉಪಸ್ಥಿತನಾಗಿದ್ದನು. (ಆದಿ 122/56).

**ಕಾಲ** – (1) ಧ್ರುವನೆಂಬ ಹೆಸರಿನ ವಸುವಿನ ಮಗ. ಎಲ್ಲರನ್ನು ತನ್ನ ಗ್ರಾಸವಾಗಿ ಮಾಡಿಕೊಳ್ಳುವ ಭಗವಂತನಾದ ಕಾಲ (ಆದಿ 66/21). ಈತ ಸ್ಕಂದನ ಅಭಿಷೇಕಕ್ಕೆ ಹೋಗಿದ್ದನು (ಶಲ್ಯ 45/17).

(2) ಒಬ್ಬ ಮಹರ್ಷಿ. ಅವನು ಇಂದ್ರಸಭೆಯಲ್ಲಿ ಉಪಸ್ಥಿತನಾಗಿದ್ದು, ಅವನನ್ನು ಉಪಾಸಿಸುತ್ತಾನೆ (ಸಭಾ 7/14).

**ಕಾಲಕಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಕಾಲಕಂಠ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಕಾಲಕವೃಕ್ಷೀಯ** – ಒಬ್ಬ ಪ್ರಾಚೀನ ಋಷಿ. ಅವನು ಇಂದ್ರ ಸಭೆಯಲ್ಲಿರುತ್ತಾನೆ. ಈತ ಒಂದು ಕಾಗೆಯನ್ನು ಪಂಜರದಲ್ಲಿ ಬಂಧಿಸಿ ತೆಗೆದುಕೊಂಡದ್ದು ಮತ್ತು ಕೋಸಲರಾಜ ಕ್ಷೇಮದರ್ಶಿಯ ರಾಜ್ಯದಲ್ಲೆಲ್ಲ, ಅಲ್ಲಿನ ಸಮಾಚಾರ ತಿಳಿಯಲು ಬಾರಿಬಾರಿ ಸುತ್ತಾಡಿದುದು (ಶಾಂತಿ 82/6–7). ಜನರಿಗೆ ವಾಯಸೀವಿದ್ಯೆ ಕಲಿಯಲು ಪ್ರೇರಣೆ ಕೊಡುತ್ತಾ, ಸುತ್ತುತ್ತಾ, ತಿರುಗಾಡುತ್ತಾ ರಾಜಕರ್ಮಚಾರಿಗಳ ದುಷ್ಕರ್ಮಗಳನ್ನು ಕಣ್ಣಾರೆ ಕಂಡದ್ದು (ಶಾಂತಿ 82/8). ಸರ್ವಜ್ಞ ಕಾಗೆಯ ಹೇಳಿಕೆಯನ್ನು ನೆಪವಾಗಿಟ್ಟು ಅವನು ಎಲ್ಲಾ ರಾಜಕರ್ಮಚಾರಿಗಳ ಚೋರತನದ ವಿಚಾರ ತಿಳಿಸಿದುದು ಮತ್ತು ರಾಜನು ಸದಾ ಜಾಗರೂಕನಾಗಿರುವಂತೆ ಉಪದೇಶಿಸಿದುದು (ಶಾಂತಿ 82/12–57). ಕ್ಷೇಮದರ್ಶಿ ರಾಜನಿಗೆ ಇವನಿಂದ ವೈರಾಗ್ಯ ಪೂರ್ಣ ಉಪದೇಶ (ಶಾಂತಿ 104/12–54). ಕ್ಷೇಮದರ್ಶಿ ರಾಜನೊಡನೆ ರಾಜ್ಯ ಪ್ರಾಪ್ತಿಯ ವಿಭಿನ್ನ ಉಪಾಯಗಳ ವರ್ಣನೆ (ಶಾಂತಿ 105/5–25). ಕ್ಷೇಮದರ್ಶಿಯೊಂದಿಗೆ ಸಂಧಿಮಾಡಿಕೊಳ್ಳಲು ಜನಕರಾಜನಿಗೆ ತಿಳಿಯ ಹೇಳಿದುದು (ಶಾಂತಿ 106/9–19).

**ಕಾಲಕಾ** – ಮಹಾನ್ ಅಸುರ ಕುಲದ ಕನ್ಯೆ ಕಾಲಕೇಯ ಅಥವಾ ಕಾಲಕಂಜರ ತಾಯಿ. ಈಕೆಯಿಂದ ತನ್ನ ಪುತ್ರರಿಗಾಗಿ ತಪಸ್ಸು ಮತ್ತು ಬ್ರಹ್ಮನೊಡನೆ ವರಯಾಚನೆ (ಅನು 173/7–11).

**ಕಾಲಕಾಕ್ಷ** – ಒಬ್ಬ ದೈತ್ಯ. ಗರುಡನಿಂದ ಅವನ ವಧೆಯಾಗಿತ್ತು (ಉದ್ಯೋಗ 105/2).

**ಕಾಲಕೀರ್ತಿ** – ಮಯೂರನ ತಮ್ಮ ಸುಪರ್ಣನೆಂಬ ಹೆಸರಿನ ಅಸುರನ ಅಂಶದಿಂದ ಹುಟ್ಟಿದ ಒಬ್ಬ ಕ್ಷತ್ರಿಯ ರಾಜ (ಆದಿ 67/37).

**ಕಾಲಕೂಟ** – (1) ಸಮುದ್ರದಿಂದ ಪ್ರಕಟಗೊಂಡ ಒಂದು ಭಯಂಕರ ವಿಷ ಮತ್ತು ಶಿವನಿಂದ ಅದರ ಪಾನ (ಆದಿ 18/41–43). ಭೀಮಸೇನನ ಭೋಜನದಲ್ಲಿ, ದುರ್ಯೋಧನನ ಮೂಲಕ ಕಾಲಕೂಟ ಸೇರಿಸಲ್ಪಟ್ಟಿತ್ತು (ಆದಿ 127/45–48; ವನ 12/80).

(2) ಒಂದು ಪರ್ವತ. ಅದು ಪತ್ನಿಯರ ಸಹಿತ ತಪಸ್ಸಿಗೆ ಹೋಗುತ್ತಿದ್ದ ಪಾಂಡುರಾಜನಿಗೆ ದಾರಿಯಲ್ಲಿ ಸಿಕ್ಕಿತ್ತು (ಆದಿ 118/47–48). ಶ್ರೀಕೃಷ್ಣನು ಇಂದ್ರಪ್ರಸ್ಥದಿಂದ ಗಿರಿವ್ರಜಕ್ಕೆ ಹೋಗುವ ಮಾರ್ಗದಲ್ಲಿ ಯಾವುದೋ ಕಾಲಕೂಟಪರ್ವತವನ್ನು ಏರಬೇಕಾಗಿ ಬಂದಿತ್ತು (ಸಭಾ 20/26–27). ಇಲ್ಲಿ ದುರ್ಯೋಧನನ ಸೇನೆಯ ಶಿಬಿರವಿತ್ತು (ಉದ್ಯೋಗ 19/30).

(3) ಉತ್ತರಾಖಂಡದಲ್ಲಿ ಕಾಲಕೂಟ ಪರ್ವತದ ಆಸುಪಾಸಿನ ಪ್ರದೇಶ. ಅದನ್ನು ದಿಗ್ವಿಜಯ ಸಮಯದಲ್ಲಿ ಅರ್ಜುನನು ಜಯಿಸಿದ್ದನು (ಸಭಾ 26/4).

**ಕಾಲಕೇಯ** (ಕಾಲಖಂಜ) – (ಕಾಲಕಾ ಅಥವಾ) ಕಾಲಾಳ ಪುತ್ರ. ಹಿರಣ್ಯಪುರ ನಿವಾಸಿ ದಾನವ. ಅರ್ಜುನನೊಂದಿಗೆ ಈತನ ಯುದ್ಧ. ಅರ್ಜುನನಿಂದ ಈತನ ಸಂಹಾರ (ಆದಿ 66/35; ವನ 173/19–55; ಉದ್ಯೋಗ 158/30; ದ್ರೋಣ 51/16; ಕರ್ಣ 79/62). ಇವರೆಲ್ಲರೂ ವೃತ್ರಾಸುರನ ಮುಂದಾಳ್ತನದಲ್ಲಿ ದೇವತೆಗಳ ಮೇಲೆ ಆಕ್ರಮಣ ಮಾಡಿದ್ದರು (ವನ 100/3–4).

**ಕಾಲಕೋಟಿ** – ನೈಮಿಷಾರಣ್ಯದಲ್ಲಿರುವ ಒಂದು

ಪ್ರಾಚೀನ ತೀರ್ಥ (ವನ 95/3).

**ಕಾಲಖಂಜ** (ಕಾಲಕಂಜ) – ಅಸುರ ವಂಶದ ಕನ್ಯೆ ಕಾಲಕಾಳ ಪುತ್ರರು. ಕಾಲಕಂಜ ಅಥವಾ ಕಾಲಖಂಜರೆಂದು ಕರೆಯಲ್ಪಟ್ಟಿದ್ದಾರೆ. ಇವರೇ ಕಾಲಕೇಯರು. ಇವರ ಸಂಖ್ಯೆ ಲಕ್ಷದಷ್ಟಿತ್ತು. ಇದರ ತಾಯಿ ತಪಸ್ಸುಮಾಡಿ, ಇವರಿಗಾಗಿ ಹಿರಣ್ಯ ಪುರವೆಂಬ ವಿಶಾಲನಗರವನ್ನು ಬ್ರಹ್ಮನಿಂದ ಪಡೆದಿದ್ದಳು. ಅಲ್ಲಿ ಇವರು ದೇವತೆಗಳಿಂದ ಅವಧ್ಯರಾಗಿ, ಸುರಕ್ಷಿತರಾಗಿ ವಾಸಿಸುತ್ತಿದ್ದರು (ವನ 103/7–13). ಇವರು ವರುಣನ ಸಭೆಯ ಲ್ಲಿದ್ದುಕೊಂಡು, ಅವನನ್ನು ಉಪಾಸಿಸುತ್ತಿದ್ದರು (ಸಭಾ 9/12). ಇವರೊಂದಿಗೆ ಅರ್ಜುನನ ಯುದ್ಧ ಮತ್ತು ಆತನಿಂದ ಇವರ ಸಂಹಾರ (ವನ 173). ಇಂದ್ರನ ಆಜ್ಞೆಯಿಂದ ಅರ್ಜುನನು ಇವರ ವಧೆ ಮಾಡಿದ್ದನು (ವಿರಾಟ 49/10; 61/25; ಉದ್ಯೋಗ 49/14). ಇವರು ವಿಷ್ಣುವಿನ ಪಾದಗಳಿಂದ ಹುಟ್ಟಿದವರೆಂದು ಹೇಳಲಾಗಿದೆ (ಉದ್ಯೋಗ 100/5–6).

**ಕಾಲಘಟ** – ವೇದವಿದ್ಯಾಪಾರಂಗತನಾದ ಒಬ್ಬ ಬ್ರಾಹ್ಮಣ. ಅವನು ಜನಮೇಜಯನ ಸರ್ಪ ಯಜ್ಞದ ಸದಸ್ಯನಾಗಿದ್ದನು (ಆದಿ 53/8).

**ಕಾಲಂಜರಗಿರಿ** – ಮೇಧಾವಿಕ ತೀರ್ಥದ ಲೋಕ ವಿಖ್ಯಾತ ಪರ್ವತ. ಅಲ್ಲಿ ಸ್ನಾನದಿಂದ ಸಹಸ್ರ ಗೋದಾನಗಳ ಫಲ ಸಿಗುತ್ತದೆ (ವನ 85/56) ಈ ತೀರ್ಥದ ಮಹಿಮೆಯ ವರ್ಣನೆ (ಅನು 25/35).

**ಕಾಲತೀರ್ಥ** – ಅಯೋಧ್ಯೆಯ ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿದರೆ ಹನ್ನೊಂದು ವೃಷಭ ದಾನ ಮಾಡಿದ ಫಲ ಪ್ರಾಪ್ತವಾಗುತ್ತದೆ (ವನ 85/11).

**ಕಾಲತೋಯಕ** – ಒಂದು ಭಾರತೀಯ ಜನಪದ (ಭೀಷ್ಮ 9/47).

**ಕಾಲದ** – ಒಂದು ಭಾರತೀಯ ಜನಪದ (ಭೀಷ್ಮ 9/63).

**ಕಾಲದಂತಕ** (ಕಾಲದಂತ) – ವಾಸುಕಿಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನ ಮೇಜಯನ ಸರ್ಪಯಜ್ಞದಲ್ಲಿ ಸುಟ್ಟು ಹೋದನು (ಆದಿ 57/6).

**ಕಾಲನೇಮಿ** – ಒಬ್ಬ ಬಲವಂತನಾದ ದಾನವ. ಈತ ಭೂಮಿಯಲ್ಲಿ ಕಂಸನೆಂಬ ಹೆಸರಿನಿಂದ ಜನ್ಮವೆತ್ತಿದ್ದನು (ಆದಿ 67/67).

**ಕಾಲಪಥ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/50).

**ಕಾಲಪರ್ವತ** – (1) ಲಂಕೆಯ ಸಮೀಪ ಸಮುದ್ರ ತಟದಲ್ಲಿರುವ ಒಂದು ಪರ್ವತ (ವನ 277/54). (2) ಒಂದು ಪರ್ವತ. ಅದು ಸ್ವಪ್ನದಲ್ಲಿ ಶ್ರೀಕೃಷ್ಣ ಸಹಿತನಾಗಿ ಶಿವನ ಬಳಿ ಹೋಗುತ್ತಿದ್ದ ಅರ್ಜುನ ನಿಗೆ ದಾರಿಯಲ್ಲಿ ಸಿಕ್ಕಿತ್ತು (ದ್ರೋಣ 80/31).

**ಕಾಲಪೃಷ್ಠ** – ಒಬ್ಬ ನಾಗ. ತ್ರಿಪುರ ವಿನಾಶದ ಸಮಯದಲ್ಲಿ ಶಿವನ ರಥಕ್ಕೆ ಹೂಡಲ್ಪಟ್ಟ ಕುದುರೆ ಗಳ ಕೇಸರಗಳನ್ನು ಕಟ್ಟಲು ಈತ ಹಗ್ಗವಾಗಿ ಉಪಯೋಗಿಸಲ್ಪಟ್ಟಿದ್ದನು (ಕರ್ಣ 34/29–30).

**ಕಾಲಮುಖ** – 'ಕಾಲಮುಖ' ಒಂದು ವಿಶೇಷ ಹೆಸರಿನ ಜನರು. ಅವರು ಮನುಷ್ಯ ಮತ್ತು ರಾಕ್ಷಸರ ಸಂಯೋಗದಿಂದ ಹುಟ್ಟಿದ್ದರು. ದಕ್ಷಿಣ ದಿಗ್ವಿಜಯದ ಸಂದರ್ಭದಲ್ಲಿ ಸಹದೇವನು ಅವರ ಮೇಲೆ ವಿಜಯ ಸಾಧಿಸಿದ್ದನು (ಸಭಾ31/67).

**ಕಾಲಯವನ** – ರಾಕ್ಷಸೀ ಪ್ರವೃತ್ತಿಯ ಒಬ್ಬ ಯವನ. ಅವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟಿದ್ದನು (ಸಭಾ 38/29) (ದ್ರೋಣ 11/16–18). ಇವನು ಗರ್ಗಾಚಾರ್ಯರ ತೇಜಸ್ಸಿನಿಂದ ಹುಟ್ಟಿದವನು. ಮತ್ತು ಅತ್ಯಂತ ಶಕ್ತಿಶಾಲಿ ಅಸುರನಾಗಿದ್ದನು. (ಶಾಂತಿ 339/95).

**ಕಾಲರಾತ್ರಿ** – ಮೃತ್ಯುವಿನ ರಾತ್ರಿಯ ಅಧಿದೇವತೆ. ಸೌಪ್ತಿಕ ಆಕ್ರಮಣದ ಸಮಯದಲ್ಲಿ ಆಕೆಯನ್ನು ಪಾಂಡವಪಕ್ಷದ ಯೋಧರು ಪ್ರತ್ಯಕ್ಷ ಕಂಡಿದ್ದರು. ಅವಳ ಸ್ವರೂಪವರ್ಣನೆ (ಸೌಪ್ತಿಕ 8/69–84).

**ಕಾಲವೇಗ** – ವಾಸುಕಿ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞ ದಲ್ಲಿ ಸುಟ್ಟುಹೋದನು (ಆದಿ 57/6).

**ಕಾಲಶೈಲ** – ಉತ್ತರಾಖಂಡದ ಒಂದು ಪರ್ವತ ಸಾಲು (ವನ 139/1).

**ಕಾಲಾ** – ದಕ್ಷ ಪ್ರಜಾಪತಿಯ ಪುತ್ರಿ, ಕಶ್ಯಪನ ಪತ್ನಿ. ಕಾಲಕೇಯರೆಂಬ ಅಸುರರ ತಾಯಿ (ಆದಿ 65/12, 34, 35).

**ಕಾಲಾಪ** – ಧರ್ಮಜ್ಞನೂ, ಜಿತೇಂದ್ರಿಯನೂ ಆದ ಒಬ್ಬ ಋಷಿ. ಅವನು ಯುಧಿಷ್ಠಿರನ ಸಭೆ ಯಲ್ಲಿ ಇರುತ್ತಿದ್ದನು (ಸಭಾ 4/18).

**ಕಾಲಾಮ್ರ** – ಭದ್ರಾಶ್ವ ವರ್ಷದ ಶಿಖರದ ಮೇಲಿರುವ ಭದ್ರಶಾಲವನದಲ್ಲಿ ಸುಶೋಭಿತ ವಾದ, ಒಂದು ಮಹಾನ್ ವೃಕ್ಷ. ಅದು ಒಂದು ಯೋಜನ ಎತ್ತರವಾಗಿದೆ. ಅದರಲ್ಲಿ ಸದಾ ಹೂಹಣ್ಣುಗಳು ತುಂಬಿರುತ್ತವೆ. ಅದರ ರಸವನ್ನು ಕುಡಿದು ಭದ್ರಾಶ್ವವರ್ಷದ ಸ್ತ್ರೀಪುರುಷರು ಸದಾ ಯುವಕರಾಗಿರುತ್ತಾರೆ. ಸಿದ್ಧ ಮತ್ತು ಚಾರಣರು ಯಾವಾಗಲೂ ಆ ಮರದ ಅಕ್ಕಪಕ್ಕದಲ್ಲಿರುತ್ತಾರೆ (ಭೀಷ್ಮ 7/14–18).

**ಕಾಲಿಕ** – ಪೂಷನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಪಾಣೀತಕನೆಂದಾಗಿತ್ತು (ಶಲ್ಯ 45/43–44).

**ಕಾಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/14).

**ಕಾಲಿಕಾಶ್ರಮ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿ, ಮೂರು ರಾತ್ರಿ ವಾಸ ಮಾಡಿದರೆ ಮನುಷ್ಯನು ಜನ್ಮ ಮರಣದ ಜಂಜಡದಿಂದ ಬಿಡುಗಡೆ ಹೊಂದುತ್ತಾನೆ (ಅನು 25/24).

**ಕಾಲಿಕಾಸಂಗಮ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿ ಮೂರು ರಾತ್ರಿ ಉಪವಾಸ ಮಾಡುವುದ ರಿಂದ, ಮನುಷ್ಯನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ (ವನ 84/156).

**ಕಾಲಿಕೇಯ** – ಸುಬಲನ ಪುತ್ರ. ಅವನು ಅಭಿ ಮನ್ಯುವಿನಿಂದ ಹತನಾದನು (ದ್ರೋಣ 49/7).

**ಕಾಲಿಂಗ** – ಕಲಿಂಗ ದೇಶದ ರಾಜ ಶ್ರುತಾಯುಧ. ಅವನು ಯುಧಿಷ್ಠರನ ಸಭೆಯಲ್ಲಿದ್ದನು (ಸಭಾ). ಶ್ರುತಾಯುವೆಂದೂ ಈತನಿಗೆ ಹೆಸರಿತ್ತು (ಸಭಾ 51/7).

**ಕಾಲಿಂದೀ** – ಕಲಿಂದ ಗಿರಿನಂದಿನಿಯಾದ ಯಮುನೆ. ಆಕೆ ಇತರ ನದಿಗಳ ಜೊತೆಯಲ್ಲಿ. ತಾನು ಕೂಡಾ ವರುಣಸಭೆಗೆ ಪಾದಾರ್ಪಣ ಮಾಡುತ್ತಾಳೆ (ಸಭಾ 9/18) (ನೋಡಿರಿ–ಯಮುನಾ).

**ಕಾಲಿಯ** – ಒಬ್ಬ ಪ್ರಮುಖ ನಾಗ (ಆದಿ 35/6). ವೃಂದಾವನದಲ್ಲಿ ಕದಂಬವನದ ಬಳಿ ಒಂದು ಮಡುವಿತ್ತು. ಅದನ್ನು ಪ್ರವೇಶಿಸಿ, ಶ್ರೀಕೃಷ್ಣನು ಕಾಲಿಯನಾಗನ ತಲೆಯ ಮೇಲೆ ನೃತ್ಯಕ್ರೀಡೆಯಾಡಿದನು ಮತ್ತು ಈತ ಬೇರೆಲ್ಲಿಗಾದರೂ ಹೋಗುವಂತೆ ಆದೇಶಿಸಿದನು (ಸಭಾ 38/29).

**ಕಾಲೀ** – ವೇದವ್ಯಾಸನ ತಾಯಿಯಾದ ಸತ್ಯವತಿ (ಆದಿ 60/2)

**ಕಾಲೀಯಕ** – ಒಬ್ಬ ಪ್ರಮುಖ ನಾಗ. (ಆದಿ 35/10)

**ಕಾಲೇಯ** – ಇದೇ ಹೆಸರಿನಿಂದ ಪ್ರಸಿದ್ಧರಾದ ದೈತ್ಯರ ಗಣ. (ಆದಿ 67/47–55). ವಸಿಷ್ಠ, ಚ್ಯವನ, ಭರದ್ವಾಜನೇ ಮೊದಲಾದ ಮುನಿಗಳ ಆಶ್ರಮಕ್ಕೆ ಹೋಗಿ ಇವರಿಂದ ಋಷಿಗಳ ಭಕ್ಷಣೆ (ವನ 102/3–6). ದೇವತೆಗಳ ಮೂಲಕ ಇವರ ವಧೆ (ವನ 105/10). ಕೆಲವು ಕಾಲೇಯರು ಪಾತಾಳಕ್ಕೆ ಓಡಿಹೋದರು (ವನ 105/12).

**ಕಾಲೇಹಿಕಾ** – ಸ್ಕಂದನ ಅನುಚರಿ ಮಾತೃಕೆ. (ಶಲ್ಯ 46/23).

**ಕಾಲೋದಕ** – ಒಂದು ತೀರ್ಥ. ಅಲ್ಲಿಗೆ ನೂರು ಯೋಜನ ದೂರದಿಂದ ಬಂದು ಸ್ನಾನ ಮಾಡುವ ಮನುಷ್ಯನ, ಭ್ರೂಣಹತ್ಯಾ ಪಾಪವೂ ದೂರ ವಾಗುತ್ತದೆ (ಅನು 25/60). ಇಲ್ಲಿ ಸ್ನಾನ ಮಾಡಿದರೆ ದೀರ್ಘಾಯುಸ್ಸು ಪ್ರಾಪ್ತವಾಗುತ್ತದೆ (ಶಾಂತಿ 152/12–13).

**ಕಾವೇರಿ** – ಒಂದು ಉತ್ತಮ ತೀರ್ಥದಿಂದ ಹುಟ್ಟಿದ ನದಿ. ಆಕೆ ವರುಣಸಭೆಯಲ್ಲಿದ್ದು ಅವನ ಉಪಾಸನೆ ಮಾಡುತ್ತಾಳೆ (ಸಭಾ 9/20). (ಇದು ದಕ್ಷಿಣ ಭಾರತದ ಪ್ರಸಿದ್ಧ ನದಿಯಾಗಿದೆ. ಇದರ ದಡದಲ್ಲಿ ಶ್ರೀರಂಗ ಕ್ಷೇತ್ರ, ತಿರುಚಿನಾಪಳ್ಳಿ ಮತ್ತು ಕುಂಭಕೋಣಂ ಇತ್ಯಾದಿ ಪ್ರಖ್ಯಾತ ನಗರಗಳೂ, ತೀರ್ಥಗಳೂ ಇವೆ) ಇದರಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನಗಳ ಫಲ ಸಿಗುತ್ತದೆ (ವನ 85/22).

**ಕಾವ್ಯ** – ಪ್ರಜಾಪತಿ ಕವಿಯ ಅಷ್ಟ ವಾರುಣ ರೆಂಬ ಹೆಸರಿನ ಪುತ್ರರಲ್ಲಿ ಒಬ್ಬ (ಅನು 85/133).

**ಕಾಶ** – ಕಾಶವೆಂಬ ಸಸ್ಯ(ಹುಲ್ಲು)ದ ಅಭಿಮಾನಿ ದೇವತೆ. ಆತ ಯಮನಸಭೆಯಲ್ಲಿ ಧರ್ಮರಾಜನ ಉಪಾಸನೆ ಮಾಡುತ್ತಾನೆ (ಸಭಾ 8/32).

**ಕಾಶಿ** – (1) ಒಂದು ಭಾರತೀಯ ಜನಪದ. (ವರ್ತಮಾನ ಕಾಶೀರಾಜ್ಯ ಮತ್ತು ವಾರಣಾಸಿ ಮಂಡಲ) ಅದನ್ನು ಪಾಂಡುವು ಜಯಿಸಿದ್ದನು (ಆದಿ 112/29) (ಭೀಷ್ಮ 9/52). ಭೀಮಸೇನನು ಕಾಶೀದೇಶದ ರಾಜನ ಕನ್ಯೆಯಾದ ಬಲಂಧರೆ

ಯೊಂದಿಗೆ ವಿವಾಹವಾಗಿದ್ದನು (ಆದಿ 95/77). ಭೀಮಸೇನನು ಈ ದೇಶದ ಮೇಲೆ ವಿಜಯ ಸಾಧಿಸಿದ್ದನು (ಸಭಾ 30/6; ಉದ್ಯೋಗ 50/19). ಸಹದೇವನೂ ಕಾಶೀದೇಶದ ಮೇಲೆ ವಿಜಯ ಪಡೆದಿದ್ದನು (ಉದ್ಯೋಗ 95/77). ಈ ಕಾಶೀ ದೇಶದ ಮಹಾರಥಿ ರಾಜರು ವಾರಣಾಸಿಯಲ್ಲಿ ರುತ್ತಿದ್ದರು. ಮತ್ತು ಪಾಂಡವ ಪಕ್ಷದ ಯೋಧ ರಾಗಿದ್ದರು (ಉದ್ಯೋಗ 50/41; 196/2). ಅರ್ಜುನನು ಈ ದೇಶವನ್ನು ಗೆದ್ದು ವಶಪಡಿಸಿ ದ್ದನು (ಆದಿ 122/40). ಶ್ರೀಕೃಷ್ಣನು ಈ ದೇಶ ವನ್ನು ಗೆದ್ದಿದ್ದನು (ದ್ರೋಣ 11/15). ಕರ್ಣನು ದುರ್ಯೋಧನನಿಗಾಗಿ ಈ ದೇಶವನ್ನು ವಶ ಪಡಿಸಿದ್ದನು (ಕರ್ಣ 8/19). ಕಾಶೀದೇಶದಲ್ಲಿ ಹರ್ಯಶ್ವ ರಾಜನಾಗಿದ್ದನು. ಅವನ ಅನಂತರ ಸುದೇವ, ಆಮೇಲೆ ದಿವೋದಾಸ, (ಅನು 30/12–15) (ಉದ್ಯೋಗ 117/1). ವೃಷದರ್ಭ ಉಶೀನರರನೂ ಒಮ್ಮೆ ಅಲ್ಲಿ ರಾಜನಾಗಿದ್ದನು (ಅನು 32/9). ಅಂಬಾ ಸ್ವಯಂವರದ ಸಂದರ್ಭದಲ್ಲಿ ಭೀಷ್ಮನು ಈ ದೇಶವನ್ನು ಗೆದ್ದಿದ್ದನು (ಅನು 44/38). ಯುಧಿಷ್ಠಿರನ ಅಶ್ವ ಮೇಧದ ಕುದುರೆ ಈ ದೇಶಕ್ಕೆ ಹೋಗಿತ್ತು (ಆಶ್ವ 83/4).

(2) ಕಾಶೀರಾಜ್ಯ ಅಥವಾ ಜನಪದದಲ್ಲಿರುವ ಜನರು. ಕಾಶೀರಾಜ ಮತ್ತು ಕಾಶೀಪ್ರದೇಶದ ಯೋಧರು ಯುಧಿಷ್ಠಿರನ ಸೇನೆಯಲ್ಲಿದ್ದರು ಮತ್ತು ಭೀಷ್ಮನಿಂದ ಗಾಯಗೊಂಡರು; ಕೊಲ್ಲಲ್ಪಟ್ಟರು (ಭೀಷ್ಮ 106/18–20).

**ಕಾಶಿಕ** – ಪಾಂಡವ ಪಕ್ಷದಲ್ಲಿದ್ದ ಒಬ್ಬ ಉದಾರನಾದ ರಥಿಕ (ಉದ್ಯೋಗ 171/15).

**ಕಾಶಿರಾಜ** – ಕಾಶೀದೇಶದ ರಾಜ. ಅವನು 'ದೀರ್ಘಜಿಹ್ವ'ನೆಂಬ ಹೆಸರಿನ ದಾನವನ ಅಂಶ ದಿಂದ ಹುಟ್ಟಿದ್ದನು (ಆದಿ 67/40). ಈತ ಯುಧಿಷ್ಠಿರನ ಪ್ರೀತಿಪಾತ್ರನಾಗಿದ್ದನು. ಉಪಪ್ಲವ್ಯ ನಗರದಲ್ಲಿ ಅಭಿಮನ್ಯುವಿನ ವಿವಾಹವಾದಾಗ, ಒಂದು ಅಕ್ಷೌಹಿಣಿ ಸೇನೆಯೊಂದಿಗೆ ಈತನ ಶುಭಾಗಮನವಾಗಿತ್ತು (ವಿರಾಟ 72/16). ಈತ ದೊಡ್ಡ ಪರಾಕ್ರಮಿಯಾಗಿದ್ದನು ಮತ್ತು ಮಹಾ ಭಾರತ ಯುದ್ಧದಲ್ಲಿ ಈತ ಪಾಂಡವರ ಪಕ್ಷ ವಹಿಸಿದ್ದನು (ಭೀಷ್ಮ 25/5).

**ಕಾಶೀ** – ಪ್ರಜಾಪತಿ ಕವಿಯ ಪುತ್ರ, ಎಂಟು ಮಂದಿ ವಾರುಣರಲ್ಲಿ ಒಬ್ಬ (ಅನು 85/133).

**ಕಾಶೀಪುರಿ** – ವಾರಣಾಸಿ ನಗರ. ಅದನ್ನು ಶ್ರೀಕೃಷ್ಣನು ಉರಿಸಿದ್ದನು (ಉದ್ಯೋಗ 48/76).

**ಕಾಶೀಶ್ವರತೀರ್ಥ** – ಕುರುಕ್ಷೇತ್ರದ ಎಲ್ಲೆಯಲ್ಲಿ ಅಂಬುಮತಿ ನದಿಯ ಸಮೀಪದಲ್ಲಿರುವ ಒಂದು ತೀರ್ಥ. ಅದರಲ್ಲಿ ಸ್ನಾನ ಮಾಡಿ ಮನುಷ್ಯ ಎಲ್ಲಾ ರೋಗಗಳಿಂದ ಮುಕ್ತನಾಗುತ್ತಾನೆ ಮತ್ತು ಬ್ರಹ್ಮಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/57).

**ಕಾಶ್ಮೀರ** (ಕಾಶ್ಮೀರಕ) – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ಪ್ರಜೆಗಳು. ದಿಗ್ವಿಜಯದ ಸಮಯದಲ್ಲಿ ಅರ್ಜುನನು ಇದನ್ನು ಗೆದ್ದಿದ್ದನು (ಸಭಾ 27/17; ಭೀಷ್ಮ 9/53–67). ಈ ದೇಶ ನಿವಾಸಿಗಳು ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದರು (ಸಭಾ 34/12; 52/14; ವನ 51/26). ಶ್ರೀಕೃಷ್ಣನು ಕೂಡಾ ಕಾಶ್ಮೀರವಾಸಿಗಳನ್ನು ಸೋಲಿ ಸಿದ್ದನು (ದ್ರೋಣ 11/16). ಪರಶುರಾಮನೂ ಇವರೆನ್ನು ಪರಾಜಯಗೊಳಿಸಿದ್ದನು (ದ್ರೋಣ 70/11).

**ಕಾಶ್ಮೀರಮಂಡಲ** – ಪುಣ್ಯಮಯವಾದ ಕಾಶ್ಮೀರ ಮಂಡಲದ ಒಂದು ಸ್ಥಾನ. ಅಲ್ಲಿ ಉತ್ತರದ ಸಮಸ್ತಋಷಿಗಳು, ನಹುಷಕುಮಾರ ಯಯಾತಿ, ಅಗ್ನಿ ಮತ್ತು ಕಾಶ್ಯಪರ ಸಂವಾದ ನಡೆದಿತ್ತು (ವನ 130/10–11). ಕಾಶ್ಮೀರಮಂಡಲದ ಚಂದ್ರ ಭಾಗಾ (ಚನಾಬ್) ಮತ್ತು ವಿತಸ್ತಾ(ಝೀಲಂ) ನಲ್ಲಿ ಏಳು ದಿನ ಸ್ನಾನ ಮಾಡಿದರೆ ಮನುಷ್ಯನು ಮುನಿಯಂತೆ ನಿರ್ಮಲನಾಗುತ್ತಾನೆ. ಮಹಾನದಿ ಸಿಂಧುವನ್ನು ಸೇರುವ ಕಾಶ್ಮೀರಮಂಡಲದ ನದಿ ಗಳಲ್ಲಿ ಮತ್ತು ಸಿಂಧುವಿನಲ್ಲಿ ಸ್ನಾನಮಾಡಿ, ಮನುಷ್ಯ ಮರಣಾನಂತರ ಸ್ವರ್ಗಗಾಮಿಯಾಗು ತ್ತಾನೆ (ಅನು 25/7–8).

**ಕಾಶ್ಯ** – (1) ಕಾಶಿಯ ಒಬ್ಬ ರಾಜ. ಅವನು ಅಂಬಾ, ಅಂಬಿಕಾ ಮತ್ತು ಅಂಬಾಲಿಕೆಯರ ತಂದೆ. ಅವನ ಮೂವರೂ ಕನ್ಯೆಯರನ್ನು ಭೀಷ್ಮನು ಅಪಹರಿಸಿದ್ದನು (ಆದಿ 102/56, 64, 65).

(2) ಯುಧಿಷ್ಠಿರನ ಕಾಲದಲ್ಲಿದ್ದ ಕಾಶೀರಾಜ. ಅವನು ರಾಜಸೂಯ ಯಜ್ಞದಲ್ಲಿ, ಯುಧಿಷ್ಠಿರನ ಅಭಿಷೇಕ ಸಮಯದಲ್ಲಿ, ಅವನಿಗೆ ಧನುಸ್ಸನ್ನು

ಅರ್ಪಿಸಿದ್ದನು (ಸಭಾ 53/9). ಕಾಶ್ಯ ಮತ್ತು ಅನ್ಯ ರಾಜರಿಂದ ಕೊಡಲ್ಪಟ್ಟ ಧನವನ್ನು ಯುಧಿಷ್ಠಿರನು ಜೂಜಿನಲ್ಲಿ ಕಳಕೊಂಡನು (ಸಭಾ 68/2). ಈತನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/19). ಕಾಶ್ಯನ ಪುತ್ರನ ಹೆಸರು ಅಭಿಭೂ ಎಂದಾಗಿತ್ತು (ಉದ್ಯೋಗ 151/63; ಭೀಷ್ಮ 93/13). ಉತ್ತಮ ರಥಿಕನೂ, ನರಶ್ರೇಷ್ಠನೂ ಆದ ಕಾಶ್ಯ (ಅಥವಾ ಕಾಶೀರಾಜ) ಭೀಷ್ಮ ಮತ್ತು ದ್ರೋಣರ ಸಮಾನ ಪರಾಕ್ರಮಿಯಾಗಿದ್ದನು (ಉದ್ಯೋಗ 171/22). ಕಾಶ್ಯನ ಹೆಸರು 'ಸೇನಾಬಿಂದು' ಮತ್ತು 'ಕ್ರೋಧ ಹಂತಾ' ಎಂದಾಗಿತ್ತು (ಉದ್ಯೋಗ 171/20–22). ಪಾಂಡವಸೇನೆಯ ಮಹಾಧನುರ್ಧರಲ್ಲಿ ಕಾಶ್ಯನೂ ಇದ್ದಾನೆ. ಎಲ್ಲರ ಜೊತೆಯಲ್ಲಿ ಈತನೂ ಶಂಖ ನಾದ ಮಾಡಿದ್ದನು (ಭೀಷ್ಮ 25/17). ಧೃತ ರಾಷ್ಟ್ರಪುತ್ರ ಜಯನೊಂದಿಗೆ ಈತನ ಯುದ್ಧ (ದ್ರೋಣ 25/45). ವಸುದಾನನ ಪುತ್ರನಿಂದ ಕಾಶೀರಾಜ (ಕುಮಾರ) ಅಭಿಭೂವಿನ ವಧೆಯ ವರ್ಣನೆ (ಕರ್ಣ 6/23–24).

(2) ಒಬ್ಬ ಪ್ರಾಚೀನ ಋಷಿ. ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರ ಬಳಿಗೆ ಈತ ಬಂದಿದ್ದನು (ಶಾಂತಿ 47/10).

**ಕಾಶ್ಯಪ** – (1) ಒಬ್ಬ ಪ್ರಸಿದ್ಧ ಮಂತ್ರವಾದಿ ಬ್ರಾಹ್ಮಣ. ಅವನು ಸರ್ಪದಂಶನದಿಂದ ಸಾಯ ಲಿರುವ ಪರೀಕ್ಷಿತನ ಪ್ರಾಣ ಉಳಿಸಲು ಬರುತ್ತಿ ದ್ದನು (ಆದಿ 42/33). ಹಸ್ತಿನಾಪುರಕ್ಕೆ ಹೋಗು ತ್ತಿದ್ದಾಗ ಹಾದಿಯಲ್ಲಿ ಈತನೊಂದಿಗೆ ತಕ್ಷಕನ ಭೇಟಿ. ತಕ್ಷಕನ ದಂಶನದಿಂದ ಭಸ್ಮವಾದ ವೃಕ್ಷ ವನ್ನು ಈತ ಮಂತ್ರಬಲದಿಂದ ಪುನಃ ಹಿಂದಿ ನಂತೆ ಹಸುರಾಗಿ ಮಾಡಿದುದು. (ಆದಿ 42/33). ಈತ ತಕ್ಷಕನೊಡನೆ ಸಂಭಾಷಣೆ ಮಾಡಿದುದು ಮತ್ತು ಅವನಿಂದ ಯಥೇಷ್ಟ ಧನ ಪಡಕೊಂಡು ಹಿಂತಿರುಗಿದುದು (ಆದಿ 50/19–27).

(2) ವಸುದೇವನ ಪುರೋಹಿತ. ಅವನು ಪಾಂಡ ವರ ಗರ್ಭಾಧಾನದಿಂದ ತೊಡಗಿ ಚೂಡಾಕರಣದ ವರೆಗಿನ ಎಲ್ಲಾ ಸಂಸ್ಕಾರಗಳನ್ನು ಮಾಡಿಸಿದನು (ಆದಿ 123/31). ಇವನ ಮೂಲಕ ಪಾಂಡುವಿನ ಅಂತ್ಯೇಷ್ಟಿ ಸಂಸ್ಕಾರಗಳು ಮಾಡಿಸಲ್ಪಟ್ಟವು (ಆದಿ 124/31). ಯುಧಿಷ್ಠಿರನನ್ನು ಗೌರವಿಸುವ ಋಷಿ ಗಳಲ್ಲಿ ಈತನೂ ಒಬ್ಬನಾಗಿದ್ದನು (ವನ 26/ 23). ಸಿದ್ಧಮಹರ್ಷಿಯೊಂದಿಗೆ ಇವನ ಸಂವಾದ (ಆಶ್ವ 16/19 ರಿಂದ 19/53).

(3) ಇಂದ್ರಸಭೆಯಲ್ಲಿರುತ್ತಿದ್ದ ಒಬ್ಬ ಋಷಿ. ಆತ ಕಾಶ್ಯಪನಪುತ್ರ (ಸಭಾ 7/17). ಪರಮ ಧರ್ಮಾತ್ಮನಾದ ಕಾಶ್ಯಪನು ಪೃಥುವಿನ ಯಜ್ಞದಲ್ಲಿ ಸದಸ್ಯತ್ವವನ್ನು ಸ್ವೀಕರಿಸಿದ್ದನು. ಅವನು ಅತ್ರಿ ಮತ್ತು ಗೌತಮರ ವಿವಾದವನ್ನು ಸಭೆಯಲ್ಲಿ ಉಪಸ್ಥಿತ ಗೊಳಿಸಿದ್ದನು (ವನ 185/21). ಕಾಶ್ಯಪಪುತ್ರ ವಿಭಾಂಡಕ, ರಾಜ ಧರ್ಮಾ, ವಿಶ್ವಾವಸು, ಇಂದ್ರ, ಆದಿತ್ಯ, ವಸು ಇತರ ದೇವತೆಗಳು ಮತ್ತು ಕಶ್ಯಪ ಕುಲದಲ್ಲಿ ಹುಟ್ಟಿದ ಸಮಸ್ತ ಪ್ರಜೆಗಳು ಕಾಶ್ಯಪ ರೆಂದು ಕರೆಯಲ್ಪಡುತ್ತಾರೆ.

(4) ಕಶ್ಯಪಪುತ್ರ ಕಾಶ್ಯಪನೆಂಬ ಅಗ್ನಿ. ಈತ ತೀವ್ರ ತಪಸ್ಸುಮಾಡಿ ಪಾಂಚಜನ್ಯನನ್ನು ಉತ್ಪನ್ನಗೊಳಿಸಿದ ಐದು ಅಗ್ನಿಗಳಲ್ಲಿ ಒಬ್ಬ (ವನ 220/1–5). ಕಾಶ್ಯಪನ ಅಂಶದಿಂದ ಪ್ರಕಟಗೊಂಡ ಮಹತ್ತರ ನೆಂಬ ಅಗ್ನಿಯೂ ಕಾಶ್ಯಪನೆಂದು ಹೇಳಲ್ಪಟ್ಟಿದ್ದಾನೆ. ಈತನನ್ನು ಪಾಂಚಜನ್ಯನು ಪಿತೃಗಳಿಗಾಗಿ ಉತ್ಪನ್ನ ಗೊಳಿಸಿದ್ದನು (ವನ 220/9).

(5) ಒಬ್ಬ ಋಷಿಕುಮಾರ. ಆತ ಒಬ್ಬ ವೈಶ್ಯನ ರಥದ ಢಿಕ್ಕಿಯಿಂದ ಬಿದ್ದು, ಆತ್ಮಹತ್ಯೆ ಮಾಡಿ ಕೊಳ್ಳಲು ಸಿದ್ಧನಾಗಿದ್ದನು. ಶೃಗಾಲ ರೂಪಧಾರಿ ಇಂದ್ರನೊಡನೆ ಅವನ ಸಂವಾದ (ಶಾಂತಿ 180/6).

**ಕಾಶ್ಯಪದ್ವೀಪ** – ಒಂದು ದ್ವೀಪ. ಅದು ಚಂದ್ರನಲ್ಲಿ ಪ್ರತಿಬಿಂಬಿತವಾಗಿರುವ ಮೊಲದ ಆಕೃತಿಯಲ್ಲಿ, ಒಂದು ಕಿವಿಯ ರೂಪದಿಂದ, ದೃಷ್ಟಿ ಗೋಚರವಾಗುತ್ತದೆ (ಭೀಷ್ಮ 6/55).

**ಕಾಷ್ಠಾ** – ಕಾಲಪರಿಮಾಣ (ಶಲ್ಯ 45/15).

**ಕಿಂಜಪ್ಯ** – ಕುರುಕ್ಷೇತ್ರದೊಳಗಿರುವ ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ, ಜಪ ದಿಂದ ಸೀಮಾತೀತ ಫಲ ಪ್ರಾಪ್ತವಾಗುತ್ತದೆ (ವನ 83/79).

**ಕಿಂದತ್ತಕೂಪ** – ಒಂದು ಬಾವಿಯಂತಹ ತೀರ್ಥ. ಅಲ್ಲಿ ಒಂದು ಸೇರಿನಷ್ಟು ತಿಲದಾನ ಮಾಡಿದರೆ ಮನುಷ್ಯನು ಮೂರು ಋಣಗಳಿಂದ ಮುಕ್ತ ನಾಗುತ್ತಾನೆ (ವನ 83/98).

**ಕಿಂದಮ** – ಒಬ್ಬ ಋಷಿ. ಹೆಣ್ಣು ಜಿಂಕೆಯ

ರೂಪಧರಿಸಿದ ಪತ್ನಿಯೊಡನೆ ಗಂಡು ಜಿಂಕೆಯ ರೂಪಧರಿಸಿ ಸಂಭೋಗಮಾಡುತ್ತಿದ್ದ ಸಮಯದಲ್ಲಿ ಈತ ಪಾಂಡುವಿನ ಬಾಣಗಳಿಂದ ಗಾಯಗೊಂಡದ್ದು (ಆದಿ 117/6–7). ಬಾಣದಿಂದ ಪೆಟ್ಟಾದಾಗ ಮನುಷ್ಯ ಸ್ವರದಲ್ಲಿ ಈತನ ವಿಲಾಪ (ವನ 117/8–11). ಪಾಂಡುವಿನೊಂದಿಗೆ ಇವನ ಸಂವಾದ (ವನ 117/12–19). ಇವನಿಂದ ಪಾಂಡುರಾಜನಿಗೆ ಶಾಪ (ವನ 117/30–33). ಇವನ ಪ್ರಾಣತ್ಯಾಗ (ವನ 117/34).

**ಕಿಂದಾನ** – ಕುರುಕ್ಷೇತ್ರದಲ್ಲಿರುವ ಒಂದು ತೀರ್ಥ. ಅಲ್ಲಿ ಸ್ನಾನ ಮತ್ತು ದಾನ ಮಾಡುವುದರಿಂದ ಸೀಮಾತೀತ ಫಲಪ್ರಾಪ್ತವಾಗುತ್ತದೆ (ವನ 83/79).

**ಕಿಂಕರ** – (1) ಒಬ್ಬ ರಾಕ್ಷಸ. ಅವನು ವಿಶ್ವಾಮಿತ್ರನ ಪ್ರೇರಣೆಯಿಂದ, ಶಾಪಗ್ರಸ್ತ ಕಲ್ಮಾಷಪಾದನ ಶರೀರವನ್ನು ಪ್ರವೇಶಿಸಿದ್ದನು (ಆದಿ 175/21). ವಿಶ್ವಾಮಿತ್ರನ ಪ್ರೇರಣೆಯಿಂದ ಈತನ ಮೂಲಕ ವಸಿಷ್ಠನ ಎಲ್ಲಾ ಮಕ್ಕಳ ಸಂಹಾರ (ಆದಿ 175/41).

(2) ರಾಕ್ಷಸರ ಒಂದು ಜಾತಿ ಅಥವಾ ವರ್ಗ. ಅವರು ಮಯಾಸುರನ ಆಜ್ಞೆಯ ಪ್ರಕಾರ ಎಂಟು ಸಾವಿರ ಮಂದಿ ಯುಧಿಷ್ಠಿರನ ಮಯನಿರ್ಮಿತ ಸಭಾಭವನದ ರಕ್ಷಣೆ ಮಾಡುತ್ತಾರೆ ಮತ್ತು ಅವರು ಅದನ್ನು ಒಂದು ಸ್ಥಳದಿಂದ ಮತ್ತೊಂದೆಡೆಗೆ ಎತ್ತಿಕೊಂಡು ಹೋಗುತ್ತಿದ್ದರು (ಸಭಾ 3/28; 48/9). ಯುಧಿಷ್ಠಿರನು ಧನವನ್ನು ತರಲು ಹಿಮಾಲಯದ ಮೇಲೆ ಹೋದನಂತರ, ಅಲ್ಲಿ ಕಿಂಕರರೆಂಬ ರಾಕ್ಷಸರಿಗೆ ಕಾಣಿಕೆ, ಪೂಜೆಗಳನ್ನು ಒಪ್ಪಿಸಿದ್ದನು (ಆಶ್ವ 65/6).

(3) ಯಮರಾಜನ ದಂಡದ ಹೆಸರು. ಆತ ಅಂತ್ಯಕಾಲದಲ್ಲಿ ಇದರಿಂದ ಪ್ರಾಣಿಗಳ ಸಂಹಾರ ಮಾಡುತ್ತಾನೆ (ಕರ್ಣ 56/120).

**ಕಿಂಕಿಣೀಕಾಶ್ರಮ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಸ್ವರ್ಗಲೋಕ ಪ್ರಾಪ್ತವಾಗುತ್ತದೆ (ಅನು 25/23).

**ಕಿತವ** – ಒಂದು ಪ್ರಾಚೀನ ಜಾತಿಯ ಜನಾಂಗ. ಅವರು ನಾನಾ ಪ್ರಕಾರದ ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನಲ್ಲಿಗೆ ಬಂದಿದ್ದರು (ಸಭಾ 51/12).

**ಕಿನ್ನರ** – ಗಂಧರ್ವವಿಶೇಷ (ಸಭಾ 10/14).

**ಕಿಂಪುನಾ** – ತೀರ್ಥಸ್ವರೂಪವಾದ ಒಂದು ಪವಿತ್ರನದಿ. ಆಕೆ ವರುಣಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾಳೆ (ಸಭಾ 9/20).

**ಕಿಂಪುರುಷ** – (1) ಧವಳಗಿರಿಯಿಂದ ಮುಂದೆ ಹಿಮಾಲಯದ ಉತ್ತರ ಭಾಗದಲ್ಲಿರುವ ಒಂದು ದೇಶ. ಅದು ದ್ರುಮಪುತ್ರನಿಂದ ಸುರಕ್ಷಿತವಾಗಿತ್ತು. ಇದನ್ನು ಅರ್ಜುನನು ಗೆದ್ದಿದ್ದನು (ಸಭಾ 28/1–2).

(2) ಒಂದು ಜಾತಿಯ ಹೆಸರು. ಅವರು ಪುಲಹನ ಸಂತಾನದವರು (ಆದಿ 66/8). ಕಿಂಪುರುಷರು ಸಮುದ್ರಪಾನದ ಅದ್ಭುತ ಧೃಶ್ಯ ನೋಡುವುದಕ್ಕಾಗಿ, ಅಗಸ್ತ್ಯನನ್ನು ಅನುಸರಿಸಿದ್ದರು (ವನ 104/21). ಕುಬೇರನ ಕ್ರೀಡಾಸ್ಥಲ ರೂಪವಾದ ಸರೋವರ ರಕ್ಷಣೆಯಲ್ಲಿ ಕಿಂಪುರುಷರೂ ತತ್ಪರರಾಗಿದ್ದರು (ವನ 153/9). ಕುಬೇರನು ಲಂಕೆಯನ್ನು ಬಿಟ್ಟು, ಕಿಂಪುರುಷರೊಡನೆ ಗಂಧಮಾದನ ಪರ್ವತಕ್ಕೆ ಬಂದು ವಾಸಿಸತೊಡಗಿದನು (ವನ 275/33). ಇವರು ದಕ್ಷಕನ್ಯೆಯ ಸಂತತಿಯವರು. (ಶಾಂತಿ 207/25). ಯುಧಿಷ್ಠಿರನ ಅಶ್ವಮೇಧ ಯಜ್ಞದಲ್ಲಿ ಕಿಂಪುರುಷರೂ ಇದ್ದರು. (ಆಶ್ವ 88/37).

(3) ಜಂಬೂದ್ವೀಪದ ಒಂದು ಖಂಡ. ಅದನ್ನು ಕಿಂಪುರುಷವರ್ಷವೆಂದೂ, ಹೈಮವತವೆಂದೂ ಹೇಳುತ್ತಾರೆ. ಶುಕದೇವನು ಇದನ್ನು ದಾಟಿ ಭಾರತವರ್ಷವನ್ನು ತಲುಪಿದ್ದನು. (ಶಾಂತಿ 325/13–14).

**ಕಿರಾತ** – ಒಂದು ಭಾರತೀಯ ಜನಪದ (ಭೀಷ್ಮ 2/51, 57).

**ಕಿರೀಟೀ** – ಸ್ಕಂದನ ಒಬ್ಬ ಸೈನಿಕ. (ಶಲ್ಯ 45/71).

**ಕಿರ್ಮೀರ** – ಒಬ್ಬ ರಾಕ್ಷಸ. ಅವನು ನರಕಾಸುರನ ಸಹೋದರ. ಕಾಮ್ಯಕವನದಲ್ಲಿ ವಾಸವಾಗಿದ್ದನು. ಭೀಮಸೇನನೊಡನೆ ಈತನ ಯುದ್ಧ (ವನ 11/44–64). ಭೀಮಸೇನನಿಂದ ಈತನ ವಧೆ (ವನ 11/67).

**ಕಿರ್ಮೀರವಧ ಪರ್ವ** – ವನಪರ್ವದ ಒಂದು ಅವಾಂತರ ಪರ್ವದ ಹೆಸರು (ವನಪರ್ವದ 11ನೇ ಅಧ್ಯಾಯ).

**ಕಿಷ್ಕಿಂಧಾಗುಹಾ** – ದಕ್ಷಿಣ ಭಾರತದಲ್ಲಿ ಧಾರ

ವಾಡ ಜಿಲ್ಲೆಯ ಒಂದು ಪರ್ವತೀಯ ಸ್ಥಾನ. ಪ್ರಾಚೀನ ಕಾಲದಲ್ಲಿ ಅಲ್ಲಿ ವಾನರ ರಾಜರಾದ ವಾಲಿ ಸುಗ್ರೀವರು ವಾಸಿಸುತ್ತಿದ್ದರು. ಇಲ್ಲಿ ಮೈಂದ ದ್ವಿವಿದರನ್ನು ಸಹದೇವನು ಗೆದ್ದಿದ್ದನು (ಸಭಾ 31/17). ಇದೇ ಕಿಷ್ಕಿಂಧೆಯಲ್ಲಿ ಶ್ರೀರಾಮನು ವಾಲಿಯನ್ನು ಕೊಂದನು ಮತ್ತು ಸುಗ್ರೀವನನ್ನು ಅಲ್ಲಿ ರಾಜನಾಗಿ ಮಾಡಿದನು (ವನ 280/15–39).

**ಕೀಚಕ** – ಮತ್ಸ್ಯರಾಜ ವಿರಾಟನ ಭಾವ ಮತ್ತು ಸೇನಾಪತಿ. ಒಬ್ಬ ಬಲವಂತನಾದ ವೀರ. ಅವನು ದ್ರೌಪದಿಯನ್ನು ನೋಡಿ ಕಾಮಮೋಹಿತನಾದನು (ವಿರಾಟ 14/4–10; 18/7). ಇವನು ರಾಣಿ ಸುಧೇಷ್ಣೆಯ ಸಹೋದರ (ವಿರಾಟ 15/7; 21/29) ಇವನು ಸೂತಪುತ್ರನೆಂದು ಹೇಳಲ್ಪಡುತ್ತಿದ್ದನು. (ವಿರಾಟ 14/47) ಕಾಲೇಯರೆಂಬ ದೈತ್ಯರಲ್ಲಿ ಹಿರಿಯನಾದ 'ಬಾಣ'ನೇ ಕೀಚಕ ರೂಪದಿಂದ ಹುಟ್ಟಿದ್ದನು. ಇವನ ತಮ್ಮನೂ ಕಾಲೇಯನಾಗಿದ್ದನು (ವಿರಾಟ 16). ಇವನಿಗೆ ಒಂದು ನೂರ ಐದು ಮಂದಿ ತಮ್ಮಂದಿರಿದ್ದರು. ಅವರು ಉಪಕೀಚಕರೆಂದು ಕರೆಯಲ್ಪಡುತ್ತಿದ್ದರು. ಅವರೆಲ್ಲರೂ ಭೀಮಸೇನನಿಂದ ಕೊಲ್ಲಲ್ಪಟ್ಟರು (ವಿರಾಟ 23/32–33). ಸೂತರಾಜ ಕೇಕಯನ ಹಿರಿಯ ಹೆಂಡತಿ ಮಾಲವಿಯ ಗರ್ಭದಿಂದ ಕೀಚಕ ಮತ್ತು ಅವನ ಸಹೋದರರು ಹುಟ್ಟಿದರು (ವಿರಾಟ 16). ಈತ ಸುಧೇಷ್ಣೆಯೊಡನೆ ದ್ರೌಪದಿಯ ಪರಿಚಯ ಕೇಳಿದುದು (ವಿರಾಟ 14/7–23). ದ್ರೌಪದಿಯೊಡನೆ ಪ್ರೇಮಯಾಚನೆ ಮಾಡಿದುದು (ವಿರಾಟ 14/40–45). ದ್ರೌಪದಿಯನ್ನು ತನಗೆ ಪ್ರಾಪ್ತಿಸಿಕೊಡಲು ಸುಧೇಷ್ಣೆಗೆ ಈತನ ಒತ್ತಡ (ವಿರಾಟ). ದ್ರೌಪದಿಯ ತಲೆ ಕೂದಲನ್ನು ಹಿಡಿದುದು ಮತ್ತು ಆಕೆಯನ್ನು ಒದೆದದ್ದು (ವಿರಾಟ 16/10). ಸಂಕೇತಾನುಸಾರವಾಗಿ ದ್ರೌಪದಿಯೊಡಗೂಡಲು ಈತ ರಾತ್ರಿಯ ವೇಳೆ ನೃತ್ಯ ಶಾಲೆಗೆ ಹೋದುದು (ವಿರಾಟ 22/40) ಅಲ್ಲಿ ರಾತ್ರಿಯೇ ಭೀಮ ಸೇನನೊಡನೆ ಯುದ್ಧ ಮತ್ತು ಆತನಿಂದ ಇವನ ವಧೆ (ವಿರಾಟ 22/52–82). ಇವನು ತನ್ನ ಜೀವತ ಕಾಲದಲ್ಲಿ ತ್ರಿಗರ್ತರಾಜ ಸುಶರ್ಮನನ್ನು ಆಗಾಗ ಸೋಲಿಸಿದ್ದನು (ವಿರಾಟ 25 ರಿಂದ 30).

**ಕೀಚಕವಧ ಪರ್ವ** – ವಿರಾಟಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 14 ರಿಂದ 24).

**ಕೀಟಕ** – ಕ್ರೋಧವಶರೆಂಬ ದೈತ್ಯರ ಅಂಶದಿಂದ ಹುಟ್ಟಿದ ಒಬ್ಬ ರಾಜ (ಆದಿ 67/60).

**ಕೀರ್ತಿ** – ದಕ್ಷ ಪ್ರಜಾಪತಿಯ ಒಬ್ಬ ಮಗಳು ಮತ್ತು ಧರ್ಮರಾಜನ ಪತ್ನಿ. (ಆದಿ 66/14). ಕೀರ್ತಿಯ ಅಧಿದೇವತೆ (ವನ 37/33).

**ಕೀರ್ತಿಧರ್ಮಾ** – ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕನಾದ ಕ್ಷತ್ರಿಯ ವೀರ (ದ್ರೋಣ 158/39).

**ಕೀರ್ತಿಮಂತ** – (1) ನಾರಾಯಣನ ಮಾನಸಿಕ ಪುತ್ರ ವಿರಜಾನ ಆತ್ಮಜ. ಅವನು ಐದೂ ವಿಷಯಗಳಿಂದ ಮೇಲೇರಿ ಮೋಕ್ಷಮಾರ್ಗವನ್ನು ಅವಲಂಬಿಸತೊಡಗಿದನು. (ಶಾಂತಿ 59/90).

(2) ಒಬ್ಬ ವಿಶ್ವೇದೇವ (ಅನು 91/31).

**ಕುಕುಣ** – ಒಬ್ಬ ಕಶ್ಯಪವಂಶೀ ನಾಗ (ಉದ್ಯೋಗ 103/10).

**ಕುಕುರ** – (1) ಯದುವಂಶದ 'ಕುಕುರ'ನೆಂಬ ರಾಜನಿಂದ ಪ್ರಚಲಿತವಾದ ವಂಶಪರಂಪರೆ. ಈ ವಂಶದ ಕ್ಷತ್ರಿಯರು ಶ್ರೀಕೃಷ್ಣನ ಆಜ್ಞೆಯಂತೆ ನಡೆದು ಶತ್ರುಗಳನ್ನು ಸೆರೆಹಿಡಿಯುತ್ತಿದ್ದರು. ಮತ್ತು ಮಿತ್ರರಿಗೆ ಆನಂದ ಕೊಡುತ್ತಿದ್ದರು (ಉದ್ಯೋಗ 28/11). ಕುಕುರ ಮತ್ತು ಅಂಧಕ ವಂಶದ ಜನರು ಮೌಸಲ ಯುದ್ಧದಲ್ಲಿ ಪರಸ್ಪರ ಹೋರಾಡುತ್ತಾ ಒಬ್ಬರ ಮೇಲೊಬ್ಬರು ಹುಚ್ಚರಂತೆ ಕಾದಾಡುತ್ತಿದ್ದರು (ಮೌಸಲ 3/42).

(2) ಒಬ್ಬ ಕಾಶ್ಯಪ ವಂಶದ ನಾಗ (ಉದ್ಯೋಗ 103/10).

(3) ಒಂದು ಭಾರತೀಯ ಜನಪದ (ಭೀಷ್ಮ 9/60).

**ಕುಕ್ಕುಟಿಕಾ** – ಸ್ಕಂದನ ಅನುಚರಿ ಮಾತೃಕೆ (ಭೀಷ್ಮ 46/15).

**ಕುಕ್ಕುರ** – (1) ಒಬ್ಬ ಧರ್ಮಜ್ಞ, ಜಿತೇಂದ್ರಿಯ ಋಷಿ. ಅವನು ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/18).

(2) ಒಂದು ಭಾರತೀಯ ಜನಪದ (ಭೀಷ್ಮ 9/42).

**ಕುಕ್ಷಿ** – (1) ಒಬ್ಬ ಸುಪ್ರಸಿದ್ಧ ದಾನವ ರಾಜ. ಅವನು ಮೇರುಪರ್ವತದಂತೆ ತೇಜಸ್ವಿಯಾದ

'ಪಾರ್ವತೀಯ' ಎಂಬ ಹೆಸರಿನ ರಾಜನಾದನು (ಆದಿ 67/56).

(2) ರೈಭ್ಯನಪುತ್ರ. ಅವನು ಶುದ್ಧನೂ, ಸುವ್ರತನೂ, ಧರ್ಮಾತ್ಮನೂ ಆದ ದಿಕ್ಪಾಲನಾಗಿದ್ದನು (ಶಾಂತಿ 348/42–43).

**ಕುಞ್ಜರ** – ಒಬ್ಬ ಪ್ರಮುಖ ನಾಗ (ಆದಿ 35/15). ಸೌವೀರ ದೇಶದ ಒಬ್ಬ ರಾಜಕುಮಾರ. ಅವನು ಜಯದ್ರಥನ ಅನುಗಾಮಿಯಾಗಿದ್ದನು (ವನ 265/10). ಅರ್ಜುನನಿಂದ ಈತನ ವಧೆ (ವನ 271/27).

**ಕುಞ್ಜಲ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಕುಟೀಚಕ** – ಕಾಷಾಯ ತ್ರಿದಂಡಗಳನ್ನು ಧರಿಸಿ, ಪುತ್ರನಿಂದ ನಿರ್ಮಿಸಲ್ಪಟ್ಟ ಒಂದು ಕುಟೀರದಲ್ಲಿ ವಾಸಿಸುತ್ತಾ, ತನ್ನ ಅಥವಾ ಬಂಧುಗಳ ಮನೆಯಲ್ಲಿ ಊಟ ಮಾಡುತ್ತಾ ಅಧ್ಯಾತ್ಮಪರನಾಗಿರುವವನು. ಇವನಿಗಿಂತ ಬಹೂದಕನೂ, ಅವನಿಗಿಂತ ಹಂಸನೂ, ಆತನಿಗಿಂತ ಪರಮ ಹಂಸನೂ ಕ್ರಮವಾಗಿ ಶ್ರೇಷ್ಠರು (ಅನು 141 ಅಧ್ಯಾಯ).

**ಕುಠರ** – ಒಬ್ಬ ಪ್ರಮುಖ ನಾಗ (ಆದಿ 35/15). ಬಲರಾಮನು ನಾಗರೂಪದಿಂದ ಸಮುದ್ರದ ಕಡೆಗೆ ಹೋಗುವಾಗ ಅವನನ್ನು ಸ್ವಾಗತಿಸಲು ಈತ ಬಂದಿದ್ದನು (ಮೌಸಲ 4/15).

**ಕುಠಾರ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/15).

**ಕುಣಿಗರ್ಗ**– ಮಹಾಯಶಸ್ವಿಯೂ ಶಕ್ತಿಶಾಲಿಯೂ ಆದ ಒಬ್ಬ ಋಷಿ. ಅವನ ಕನ್ಯೆ ವಿವಾಹವಾಗದೆ, ತಪಸ್ಸಿನಲ್ಲಿ ಮಗ್ನಳಾಗಿದ್ದು, ವೃದ್ಧೆಯಾದಳು. ಕೊನೆಗೆ ತನ್ನ ತಪಸ್ಸಿನ ಅರ್ಧಾಂಶವನ್ನು ಕೊಟ್ಟು, ಆಕೆ ಒಬ್ಬ ಋಷಿಯನ್ನು ಮದುವೆಯಾದಳು (ಶಲ್ಯ 52/3).

**ಕುಣಿಂದ** – ಒಬ್ಬ ದ್ವಿಜಮುಖ್ಯ (ಬ್ರಾಹ್ಮಣ ಅಥವಾ ಕ್ಷತ್ರಿಯ ರಾಜ). ಅವನು ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ದಿವ್ಯಶಂಖದ ಉಡುಗೊರೆ ಕೊಟ್ಟಿದ್ದನು (ಸಭಾ 51/7).

**ಕುಂಡ** – ಕುಂಡನೆಂಬ ಹೆಸರಿನ ಒಬ್ಬ ವಿದ್ವಾಂಸ ಬ್ರಾಹ್ಮಣ ಋಷಿ. ಅವನು ಜನಮೇಜಯನ ಸರ್ಪಯಜ್ಞದ ಸದಸ್ಯನಾಗಿದ್ದನು (ಆದಿ 53/8).

**ಕುಂಡಜ** (ಕುಂಡಭೇದಿ) – ಧೃತರಾಷ್ಟ್ರನ ಪುತ್ರ (ಆದಿ 67/105). ಭೀಮಸೇನನಿಂದ ಕುಂಡಭೇದಿ ಹೆಸರಿನ ಈತನ ವಧೆ (ಭೀಷ್ಮ 96/26).

**ಕುಂಡಧಾರ** – (1) ಧೃತರಾಷ್ಟ್ರನ ಒಬ್ಬ ಮಗ. ಭೀಮಸೇನನಿಂದ ಈತನ ವಧೆ. ಇವನ ಇನ್ನೊಂದು ಹೆಸರು ಕುಂಡೋದರ (ಭೀಷ್ಮ 88/23).

(2) ವರುಣ ಸಭೆಯಲ್ಲಿರುವ ಒಬ್ಬ ನಾಗ (ಸಭಾ 9/9).

(3) ಒಬ್ಬ ಮೇಘ. ತನ್ನ ಭಕ್ತ ಬ್ರಾಹ್ಮಣನಿಗಾಗಿ ಯಕ್ಷರಾಜ ಮಣಿಭದ್ರನೊಡನೆ ಇವನ ಪ್ರಾರ್ಥನೆ (ಶಾಂತಿ 271/19–20). ಬ್ರಾಹ್ಮಣನಿಗಾಗಿ ಧರ್ಮದ ವರವನ್ನು ಕೊಡಿಸಿದುದು (ಶಾಂತಿ 27/24–26). ತಪಸ್ಸಿದ್ಧನಾದ ಬ್ರಾಹ್ಮಣನೊಡನೆ ಸೇರಿ ಅಂತರ್ಧಾನನಾದುದು (ಶಾಂತಿ 271/52).

**ಕುಂಡಭೇದಿ** – ಧೃತರಾಷ್ಟ್ರನ ಒಬ್ಬ ಪುತ್ರ (ಆದಿ 67/104). ಭೀಮಸೇನನಿಂದ ಇವನ ವಧೆ (ದ್ರೋಣ 127/60).

**ಕುಂಡಲ** – ಕೌರವಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/13).

(2) ಒಂದು ಭಾರತೀಯ ಜನಪದ (ಭೀಷ್ಮ 9/63).

**ಕುಂಡಲಾಹರಣ ಪರ್ವ** – ವನವಾಸದ ಒಂದು ಅವಾಂತರ ಪರ್ವದ ಹೆಸರು (ಅಧ್ಯಾಯ 300ರಿಂದ 310ವರೆಗೆ).

**ಕುಂಡಲೀ** – (1) ಗರುಡನ ಸಂತತಿಗಳಲ್ಲಿ ಒಬ್ಬ (ಉದ್ಯೋಗ 101/9).

(2) ಒಂದು ನದಿ. ಅದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/21).

(3) ಧೃತರಾಷ್ಟ್ರನ ಒಬ್ಬ ಪುತ್ರ. ಇವನ ಇನ್ನೊಂದು ಹೆಸರು 'ಕುಂಡಾಶೀ' (ಈ ಹೆಸರು ಆದಿಪರ್ವ 67/98ರಲ್ಲಿ ಬಂದಿದೆ) ಭೀಮಸೇನನಿಂದ ಇವನ ವಧೆ (ಭೀಷ್ಮ 96/24).

(4) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/110).

**ಕುಂಡಾರಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/15).

**ಕುಂಡಾಶೀ** – ಧೃತರಾಷ್ಟ್ರನ ಒಬ್ಬ ಪುತ್ರ (ಆದಿ 116/14) 'ಕುಂಡಲೀ' ಹೆಸರಿನಲ್ಲಿ ಭೀಮಸೇನ

ನಿಂದ ಈತನ ವಧೆ (ಭೀಷ್ಮ 96/24).

**ಕುಂಡಿಕ** – ಚಂದ್ರವಂಶದ ಮಹಾರಾಜ ಕುರುವಿನ ಮರಿಮಗ ಮತ್ತು ಧೃತರಾಷ್ಟ್ರನ ಪ್ರಥಮ ಪುತ್ರ (ಆದಿ 94/58).

**ಕುಂಡಿನ** – (1) ಪೂರುವಂಶದ ಮಹಾರಾಜ ಕುರುವಿನ ಮರಿಮಗ ಮತ್ತು ಧೃತರಾಷ್ಟ್ರನ ಪಂಚಮ ಪುತ್ರ (ಆದಿ 94/58).

(2) 'ಕುಂಡಿನ'ವೆಂಬ ಹೆಸರಿನ ಪ್ರಸಿದ್ಧ ನಗರ. ಅದು ವಿದರ್ಭದೇಶದ ರಾಜಧಾನಿಯಾಗಿತ್ತು (ವನ 60, 73, 77; ಉದ್ಯೋಗ 158).

**ಕುಂಡೀವಿಷ** – ಒಂದು ಭಾರತೀಯ ಜನಪದ (ಭೀಷ್ಮ 50/50).

**ಕುಂಡೀವೃಷ** – ಒಂದು ಭಾರತೀಯ ಜನಪದ (ಭೀಷ್ಮ 56/9).

**ಕುಂಡೋದ ಪರ್ವತ** – ಒಂದು ತೀರ್ಥದಿಂದ ಕೂಡಿದ ಪರ್ವತ. ಅಲ್ಲಿ ನಳರಾಜನಿಗೆ ನೀರು ಮತ್ತು ಶಾಂತಿ ದೊರಕಿತು (ವನ 87/25).

**ಕುಂಡೋದರ** – (1) ಒಬ್ಬ ಪ್ರಮುಖ ನಾಗ (ಆದಿ 35/16).

(2) ಧೃತರಾಷ್ಟ್ರನ ಒಬ್ಬಪುತ್ರ (ಆದಿ 67/97). 'ಕುಂಡಧಾರ'ನೆಂಬ ಹೆಸರಿನಲ್ಲಿ ಭೀಮಸೇನನಿಂದ ಇವನ ವಧೆ (ಭೀಷ್ಮ 88/23).

(3) ಪೂರುವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು ಜನಮೇಜಯನ ಆರನೇ ಪುತ್ರ (ಆದಿ 94/55).

**ಕುತಪ** – ಶ್ರಾದ್ಧಕ್ಕೆ ಪ್ರಶಸ್ತಕಾಲ (ಹಗಲಿನ ಎಂಟನೆಯ ಭಾಗ. ಆಗ ಸೂರ್ಯನ ತಾಪ ಕಡಿಮೆಯಾಗ ತೊಡಗುತ್ತದೆ. ಆ ಸಮಯದ ಹೆಸರು ಕುತಪ. ಆ ಸಮಯದಲ್ಲಿ ಪಿತೃಗಳಿಗೆ ಕೊಟ್ಟ ದಾನ ಅಕ್ಷಯವಾಗುತ್ತದೆ (ಆದಿ 93/13). (ಈ ಸಮಯ ಮಧ್ಯಾಹ್ನ ಹನ್ನೆರಡು ಗಂಟೆಯ ಅನಂತರ ಬರುತ್ತದೆ.)

**ಕುನದೀಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ಕನ್ತಲ** – (1) ದಕ್ಷಿಣ ಭಾರತದ ಕುನ್ತಲ ಪ್ರದೇಶದ ನಿವಾಸಿ (ಸಭಾ 34/11; ಉದ್ಯೋಗ 140/26). ಕುನ್ತಲ ದೇಶದ ಯೋಧ (ಭೀಷ್ಮ 51/12; ಕರ್ಣ 20/10).

(2) ದಕ್ಷಿಣ ಭಾರತದ ಜನಪದ (ಭೀಷ್ಮ 9/52–59).

**ಕುನ್ತಿ** – (1) ಕುಂತಿದೇಶದ ರಾಜ ಮತ್ತು ಯೋಧ (ಸಭಾ 14/26).

(2) ಒಂದು ಭಾರತೀಯ ಜನಪದ (ಸಭಾ 14/27; ಭೀಷ್ಮ 9/40–43).

**ಕುನ್ತಿಭೋಜ** – (1) ಒಬ್ಬ ಕ್ಷತ್ರಿಯ ರಾಜ. ಅವನು ಶೂರಸೇನನ ಸೋದರಭಾವನಾಗಿದ್ದನು (ಆದಿ 67/130). ಶೂರಸೇನನು ತನ್ನ ಪುತ್ರಿ ಪೃಥೆಯನ್ನು ಈತನಿಗೆ ದತ್ತಕ್ಕೆ ಕೊಟ್ಟದ್ದು (ಆದಿ 67/131). ದಕ್ಷಿಣ ದಿಗ್ವಿಜಯದ ಸಮಯದಲ್ಲಿ ಸಹದೇವನಿಂದ ಈತನ ಮೇಲೆ ಆಕ್ರಮಣ. ಇವನು ಸಂತೋಷಪೂರ್ವಕವಾಗಿ ಸಹದೇವನ ಶಾಸನವನ್ನು ಅಂಗೀಕರಿಸಿದುದು (ಸಭಾ 31/6). ಈತ ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಆಗಮಿಸಿದ್ದನು (ಸಭಾ 34/12). ದುರ್ವಾಸನ ಸೇವೆ ಮಾಡುವಂತೆ ತನ್ನ ಪುತ್ರಿ ಕುಂತಿಗೆ ಈತನ ಉಪದೇಶ (ವನ 303/13–29).

(2) ಕುಂತಿಭೋಜನ ಪುತ್ರನೂ ಇದೇ ಹೆಸರಿನಿಂದ ಪ್ರಸಿದ್ಧರಾಗಿದ್ದನು. ಇವನ ಇನ್ನೊಬ್ಬ ಸಹೋದರ ಪುರುಜಿತನಾಗಿದ್ದನು. ಇವರಿಬ್ಬರೂ ಪಾಂಡವರ ಮಾವಂದಿರು (ಕರ್ಣ 6/12). ಮಹಾಭಾರತದ ಪ್ರಥಮ ದಿನದ ಯುದ್ಧದಲ್ಲಿ ಕುಂತಿಭೋಜ ಮತ್ತು ಅವನ ಪುತ್ರ ವಿಂದ ಮತ್ತು ಅನುವಿಂದನೊಡನೆ ಯುದ್ಧ ಮಾಡಿದ್ದರು (ಭೀಷ್ಮ 45/72–76). ಧೃಷ್ಟದ್ಯುಮ್ನ ನಿರ್ಮಿತ ಕ್ರೌಂಚವ್ಯೂಹದ ಕಣ್ಣಿನ ಸ್ಥಾನದಲ್ಲಿ ಕುಂತಿಭೋಜ ಮತ್ತು ಶೈಬ್ಯರು ನಿಲ್ಲಿಸಲ್ಪಟ್ಟಿದ್ದರು (ಭೀಷ್ಮ 50/47). ಮಕರವ್ಯೂಹದಲ್ಲಿ ಕುಂತಿಭೋಜ ಮತ್ತು ಶತಾನೀಕರು ಕಾಲಿನ ಸ್ಥಾನದಲ್ಲಿ ನಿಂತಿದ್ದರು (ಭೀಷ್ಮ 75/11). ಇವರ ಕುದುರೆಗಳ ವರ್ಣನೆ (ದ್ರೋಣ 23/46). ಅಲಂಬುಷನೊಂದಿಗೆ ಯುದ್ಧ (ದ್ರೋಣ 16/183). ಅಶ್ವತ್ಥಾಮನಿಂದ ಇವನ ಹತ್ತು ಮಂದಿ ಪುತ್ರರು ಕೊಲ್ಲಲ್ಪಟ್ಟರು (ದ್ರೋಣ 96/18–20). ಮಾವಂದಿರಾದ ಕುಂತಿಭೋಜ ಮತ್ತು ಪುರುಜಿತರು ದ್ರೋಣನಿಂದ ಕೊಲ್ಲಲ್ಪಟ್ಟ ಕುರಿತು ಅರ್ಜುನನಿಂದ ವಿವರಣೆ (ಕರ್ಣ 6/12).

**ಕುಂತೀ** – ಶೂರಸೇನನ ಮಗಳು. ಕುಂತಿಭೋಜನ (ದತ್ತಕ) ಕನ್ಯೆಯಾದ ಪೃಥೆ (ಆದಿ 63/98;

109/5). ಈಕೆ ಸಿದ್ಧಿ ಎಂಬ ದೇವಿಯ ಅಂಶ ದಿಂದ ಹುಟ್ಟಿದ್ದಳು (ಆದಿ 67/160) ಈಕೆಯನ್ನು ಶೂರಸೇನನು ಕುಂತಿಭೋಜನಿಗೆ ದತ್ತಪುತ್ರಿಯಾಗಿ ದಾನಮಾಡಿದುದು (ಆದಿ 110/3). ತಂದೆಯಾದ ಕುಂತಿಭೋಜನ ಮನೆಯಲ್ಲಿ, ದೇವತೆಗಳ ಮತ್ತು ಅತಿಥಿಗಳ ಪೂಜಾಸತ್ಕಾರಗಳಿಗಾಗಿ ಈಕೆಯ ನೇಮಕ (ಆದಿ 110/4). ಈಕೆಯಿಂದ ದುರ್ವಾಸರ ಸೇವೆ ಮತ್ತು ಸಂತುಷ್ಟನಾದ ಮಹರ್ಷಿಯಿಂದ ಈಕೆಗೆ ಮಂತ್ರೋಪದೇಶ (ಆದಿ 67/133–134; 110/6). ಕುತೂಹಲದಿಂದ ಈಕೆ ಸೂರ್ಯನನ್ನು ಆವಾಹಿಸಿದುದು (ಆದಿ 67/136; 110/8). ತನ್ನೊಂದಿಗೆ ಸಮಾಗಮ ಮಾಡುವಂತೆ ಸೂರ್ಯನಿಂದ ಈಕೆಗೆ ಆದೇಶ (ಆದಿ 110/13). ಈಕೆ ಸೂರ್ಯನೊಡನೆ ಕ್ಷಮೆ ಯಾಚಿಸುತ್ತಾ, ಅವನ ಆದೇಶವನ್ನು ಅಸ್ವೀಕಾರ ಮಾಡಿದುದು (ಆದಿ 110/11–16). ನಿರ್ದೋಷತ್ವದ ಆಶ್ವಾಸನೆ ಮತ್ತು ದಿವ್ಯಪುತ್ರನ ಪ್ರಲೋಭನೆಗಳನ್ನು ಕೊಟ್ಟು ಸೂರ್ಯನು ಈಕೆಯೊಡನೆ ಸಮಾಗಮ ಮಾಡಿದುದು (ಆದಿ 110/16–18). ಈಕೆಯ ಗರ್ಭದಿಂದ ಕರ್ಣನ ಜನನ (ಆದಿ 67/137; 110/18). ಸೂರ್ಯನು ಈಕೆಗೆ ಪುನಃ ಕನ್ಯಾತ್ವಪ್ರದಾನ ಮಾಡಿದುದು (ಆದಿ 110/20) ತಾಯಿ ತಂದೆಯೇ ಮೊದಲಾದ ಬಾಂಧವರ ಭಯದಿಂದ ಈಕೆ ನವಜಾತ ಶಿಶುವನ್ನು ನೀರಿನಲ್ಲಿ ಪರಿತ್ಯಾಗ ಮಾಡಿದುದು (ಆದಿ 67/139; 110/22). ಈಕೆ ಸ್ವಯಂವರದಲ್ಲಿ ಪಾಂಡುವನ್ನು ವರಿಸಿದುದು ಮತ್ತು ತಂದೆಯಿಂದ ಪಾಂಡುವಿನೊಡನೆ ಈಕೆಯ ವಿಧಿಪೂರ್ವಕ ವಿವಾಹ (ಆದಿ 111/8–9). ಸನ್ಯಾಸದಲ್ಲಿರಲು ಸಂಕಲ್ಪ ಮಾಡಿದ ಪಾಂಡುವಿಗೆ, ವಾನಪ್ರಸ್ಥಾಶ್ರಮದಲ್ಲಿರುವಂತೆ ಇವಳ ಒತ್ತಡ (ಆದಿ 118/27–30). ಯಾರಾದರೂ ಶ್ರೇಷ್ಠ ಪುರುಷನ ಸಂಪರ್ಕದಿಂದ ಪುತ್ರೋತ್ಪಾದನೆ ಮಾಡುವಂತೆ ಪಾಂಡುವಿನಿಂದ ಈಕೆಗೆ ಆದೇಶ (ಆದಿ 119/37). ಪರಪುರುಷನಿಂದ ಸಂತಾನೋತ್ಪಾದನೆ ಮಾಡುವ ವಿಷಯದಲ್ಲಿ ಈಕೆಯಿಂದ ವಿರೋಧ ಮತ್ತು ವ್ಯುಷಿತಾಶ್ವ ಮತ್ತು ಭದ್ರಾಳ ಉದಾಹರಣೆ ಕೊಟ್ಟು, ತನ್ನ ಮಾನಸಿಕ ಸಂಕಲ್ಪದಿಂದಲೇ ಪುತ್ರೋತ್ಪಾದನೆ ಮಾಡುವಂತೆ ಪಾಂಡುವಿನೊಂದಿಗೆ ಈಕೆಯ ಪ್ರಾರ್ಥನೆ (ಆದಿ 120/1–37). ಈಕೆ ದುರ್ವಾಸನಿಂದ ಪ್ರಾಪ್ತವಾದ ಮಂತ್ರದ ಮಹಿಮೆಯನ್ನು ತಿಳಿಸಿ, ಯಾರಾದರೂ ದೇವತೆಯನ್ನು ಆವಾಹಿಸಿಕೊಳ್ಳಲು ಪಾಂಡುವಿನೊಂದಿಗೆ ಆಜ್ಞೆ ಬೇಡಿದುದು (ಆದಿ 121/10–16). ಧರ್ಮರಾಜನನ್ನು ಆಹ್ವಾನಿಸುವಂತೆ ಈಕೆಗೆ ಪಾಂಡುವಿನ ಆದೇಶ (ಆದಿ 121/17–20) ಈಕೆ ಧರ್ಮನನ್ನು ಕರೆದುದು. ಅವನಿಂದ ಈಕೆಯ ಗರ್ಭದಲ್ಲಿ ಯುಧಿಷ್ಠಿರನ ಜನ್ಮ (ಆದಿ 122/7) ವಾಯುದೇವನ ಆವಾಹನೆ. ಅವನ ಮೂಲಕ ಈಕೆಯ ಗರ್ಭದಿಂದ ಭೀಮನ ಜನ್ಮ (ಆದಿ 122/14). ಇಂದ್ರನ ಆವಾಹನೆ. ಅವನ ಮೂಲಕ ಈಕೆಯ ಗರ್ಭದಿಂದ ಅರ್ಜುನನ ಜನ್ಮ (ಆದಿ 122/35). ಮೂರಕ್ಕಿಂತ ಹೆಚ್ಚು ಸಂತಾನೋತ್ಪಾದನೆಗೆ ಈಕೆಯ ನಿಷೇಧ (ಆದಿ 122/77–78). ಮಾದ್ರಿಯ ಗರ್ಭದಿಂದ ಪುತ್ರೋತ್ಪತ್ತಿಗಾಗಿ ಈಕೆಗೆ ಪಾಂಡುವಿನ ಒತ್ತಡ (ಆದಿ 123/9–34). ಇವಳ ಕೃಪೆಯಿಂದ ಮಾದ್ರಿಗೆ ಪುತ್ರಲಾಭ (ಆದಿ 123/15–16). ಪಾಂಡುವು ನಿಧನ ಹೊಂದಿದಾಗ ಈಕೆಯ ವಿಲಾಪ (ಆದಿ 124/16–23). ಕುಂತಿಯು ಮೂರ್ಚ್ಛಿತಳಾಗಿ ಬಿದ್ದುದು. ಮಾದ್ರಿಯು ಎಬ್ಬಿಸಿದಾಗ ವಿಲಪಿಸಿದುದು. ಶತಶೃಂಗ ನಿವಾಸಿಗಳಾದ ಋಷಿಗಳಿಂದ ಈಕೆಗೆ ಸಾಂತ್ವನ (ಆದಿ 124/22). ತಾನು ಪತಿಯೊಂದಿಗೆ ಚಿತೆಯನ್ನೇರುವೆನೆಂದು ಈಕೆ ಮಾದ್ರಿಯೊಡನೆ ವಿನಂತಿಸಿದುದು (ಆದಿ 124/23–24). ಮಕ್ಕಳ ರಕ್ಷಣೆಗಾಗಿ, ಚಿತೆಯನ್ನೇರದಂತೆ, ಮಾದ್ರಿಯು ಈಕೆಯನ್ನು ವಿನಂತಿಸಿದುದು (ಆದಿ 124/28). ಪಾಂಡವರು ಅಲ್ಪವಯಸ್ಕರಾದುದರಿಂದ ಈಕೆ ಚಿತೆಯೇರಬಾರದೆಂದು ಋಷಿಗಳ ಕೋರಿಕೆ. ಪತಿಯ ಶವದೊಂದಿಗೆ ಚಿತೆಯೇರಲು ಮಾದ್ರಿ ಈಕೆಯೊಂದಿಗೆ ಆಜ್ಞೆಬೇಡಿದುದು (ಆದಿ 124/28). ಮಾದ್ರಿಯು ಸತಿಪದ್ಧತಿಯನ್ನು ಅನುಸರಿಸಲು ಈಕೆಯ ಒಪ್ಪಿಗೆ (ಆದಿ 124/29). ಋಷಿಗಳು ಕುಂತಿ ಮತ್ತು ಪಾಂಡವರನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹೋದುದು (ಆದಿ 125). ಭೀಮನು ನಾಗಲೋಕಕ್ಕೆ ಹೋದಾಗ ಈಕೆಯ ಚಿಂತೆ, ವಿದುರನಿಂದ ಇವಳಿಗೆ ಸಾಂತ್ವನ (ಆದಿ 128/11–18). ರಂಗಭೂಮಿಯಲ್ಲಿ ಕರ್ಣ ಮತ್ತು ಅರ್ಜುನ ಯುದ್ಧಕ್ಕೆ ಸಿದ್ಧರಾದಾಗ, ಈಕೆಯ ಮೂರ್ಚ್ಛೆ.

ವಿದುರನಿಂದ ಈಕೆಗೆ ಸಾಂತ್ವನ (ಆದಿ 135/27–28). ಕುಂತೀಸಹಿತ ಪಾಂಡವರ ವಾರಣಾವತ ಯಾತ್ರೆ. (ಆದಿ 144). ಈಕೆಯೊಂದಿಗೆ ಪಾಂಡವರು ಅರಗಿನ ಮನೆಯಿಂದ ಹೊರಗೆ ಹೋದುದು (ಆದಿ 147). ತುಂಬಾ ದಣಿದಿದ್ದುದರಿಂದ, ತಾಯಿಯಾದ ಕುಂತಿಯನ್ನು ಭೀಮಸೇನನು ತನ್ನ ಬೆನ್ನ ಮೇಲೆ ಕುಳಿತುಕೊಳ್ಳಿಸಿ ತೆಗೆದುಕೊಂಡು ಹೋದುದು (ಆದಿ 147/20–21). ಭೀಮನನ್ನು ಪತಿಯಾಗಿ ಪ್ರಾಪ್ತಿಸಿಕೊಡುವಂತೆ ಹಿಡಿಂಬೆ ಈಕೆಯನ್ನು ಪ್ರಾರ್ಥಿಸಿದುದು (ಆದಿ 154/4–15). ಹಿಡಿಂಬೆಯ ಮನೋರಥವನ್ನು ಪೂರ್ತಿಗೊಳಿಸುವಂತೆ ಈಕೆ ಯುಧಿಷ್ಠಿರನಲ್ಲಿ ಹೇಳಿದುದು (ಆದಿ 154/15). ಕಾಮಪೀಡಿತೆಯಾದ ಹಿಡಿಂಬೆಗೆ ಪುತ್ರದಾನ ಮಾಡುವಂತೆ ಈಕೆಯಿಂದ ಭೀಮನಿಗೆ ಆದೇಶ. (ಆದಿ 154/18). ಏಕಚಕ್ರ ನಗರದ ಸಮೀಪದಲ್ಲಿ ವ್ಯಾಸರಿಂದ ಈಕೆಗೆ ಸಾಂತ್ವನ. (ಆದಿ 155/12). ಬ್ರಾಹ್ಮಣ ಪರಿವಾರದ ಕುರಿತಾಗಿ ಈಕೆ ಭೀಮನೊಡನೆ ಸಂಭಾಷಣೆ ಮಾಡಿದುದು. (ಆದಿ 156/11–15). ಬ್ರಾಹ್ಮಣನಿಂದ ಈಕೆಗೆ ಬಕಾಸುರನ ವೃತ್ತಾಂತ ಕಥನ (ಆದಿ 159/2–17). ಬ್ರಾಹ್ಮಣ ಪರಿವಾರಕ್ಕೆ ಈಕೆಯ ಸಾಂತ್ವನ (ಆದಿ 160/1–3). ಭೀಮನಿಂದಾದ ಬಕಾಸುರವಧೆಯ ವೃತ್ತಾಂತವನ್ನು ಗುಪ್ತವಾಗಿಡುವಂತೆ ಈಕೆ ಬ್ರಾಹ್ಮಣನಲ್ಲಿ ವಿನಂತಿಸಿದುದು (ಆದಿ 160/16–17). ಬ್ರಾಹ್ಮಣ ಪರಿವಾರವನ್ನು ದುಃಖದಿಂದ ಮುಕ್ತಗೊಳಿಸಲು ಮತ್ತು ಅತ್ಯಾಚಾರಿ ಬಕಾಸುರನ ವಿನಾಶಕ್ಕಾಗಿ ಈಕೆಯಿಂದ ಭೀಮನಿಗೆ ಆದೇಶ (ಆದಿ 160/20). ಈಕೆಯ ಈ ಆದೇಶಕ್ಕೆ ಯುಧಿಷ್ಠಿರನ ಪ್ರತಿವಾದ (ಆದಿ 161/5). ಯುಧಿಷ್ಠಿರನಿಗೆ ಇವಳಿಂದ ಕೃತಜ್ಞತೆಯ ಪ್ರಶಂಸೆ (ಆದಿ 161/14). ಈಕೆಯು ಯುಧಿಷ್ಠಿರನಲ್ಲಿ ಭೀಮನ ಬಾಹುಬಲವನ್ನು ಪ್ರತಿಪಾದಿಸಿದುದು (ಆದಿ 161/15–18). ಇವಳು ಪುತ್ರರ ಸಹಿತ ಪಾಂಚಾಲದೇಶಕ್ಕೆ ಪ್ರಯಾಣ ಬೆಳೆಸುವಂತೆ ಆಗುಂತಕ ಬ್ರಾಹ್ಮಣನಿಂದ ಪ್ರೇರಣೆ (ಆದಿ 166/56). ಪಾಂಚಾಲದೇಶಕ್ಕೆ ಪ್ರಯಾಣ ಬೆಳೆಸಲು ಯುಧಿಷ್ಠಿರನೊಡನೆ ಈಕೆಯ ನಿರ್ಣಯ (ಆದಿ 167/8). ದ್ರೌಪದಿರೂಪದ ಭಿಕ್ಷೆಯನ್ನು ಒಟ್ಟಾಗಿ ಉಪಭೋಗಿಸುವಂತೆ ಈಕೆಯಿಂದ ಪಾಂಡವರಿಗೆ ಉಪದೇಶ (ಆದಿ 190/2). ದ್ರುಪದ ರಾಣಿವಾಸದಲ್ಲಿ ಈಕೆಗೆ ಗೌರವ (ಆದಿ 193/9). ವ್ಯಾಸರು ಕೇಳಿದಾಗ, ದ್ರೌಪದಿ ವಿವಾಹಸಂಬಂಧವಾಗಿ ಈಕೆಯ ನಿರ್ಣಯ (ಆದಿ 195/18). ಈಕೆಯಿಂದ ದ್ರೌಪದಿಗೆ ಆಶೀರ್ವಾದ ಮತ್ತು ಶಿಕ್ಷಣ (ಆದಿ 198/4). ದ್ರುಪದನ ಅರಮನೆಗೆ ಬಂದು ಕುಂತಿ, ದ್ರೌಪದಿ ಮತ್ತು ಪಾಂಡವರಿಗೆ ನಾನಾ ರೀತಿಯ ರತ್ನಗಳನ್ನೂ, ಧನವನ್ನೂ ವಿದುರನು ಉಡುಗೊರೆಯಾಗಿ ಕೊಟ್ಟದ್ದು (ಆದಿ 205/14). ವಿದುರನು ಅರಮನೆಯೊಳಗೆ ಹೋಗಿ ಕುಂತಿಯ ಪಾದಗಳಿಗೆ ಪ್ರಣಾಮ ಮಾಡಿದುದು. "ಹೇಗಾದರೂ ನನ್ನ ಪುತ್ರರ ಪ್ರಾಣ ಉಳಿಯಿತು" ಎಂದು ಹೇಳುತ್ತಾ ಈಕೆ ದುಃಖವನ್ನು ಪ್ರಕಟಿಸಿದುದು, ವಿದುರನೇ ಅವರ ಜೀವನ ರಕ್ಷಕನೆಂದು ಹೇಳಿ, ಅವನಿಗೆ ಕೃತಜ್ಞತೆಯನ್ನರ್ಪಿಸಿದುದು. ಭವಿಷ್ಯದಲ್ಲಿ ಏನಾದೀತು? ಎಂಬುದಕ್ಕಾಗಿ ಶೋಕಾಕುಲಳಾದುದು. ವಿದುರನು ಪುನಃ ಆಕೆಗೆ ಭರವಸೆ ನೀಡಿದುದು ಮತ್ತು ಅವರೆಲ್ಲರನ್ನು ಹಸ್ತಿನಾಪುರಕ್ಕೆ ಕರಕೊಂಡು ಹೋದುದು (ಆದಿ 206/9). ಕುಂತಿ ಮತ್ತು ದ್ರೌಪದಿ ಪಾಂಡುರಾಜನ ಅರಮನೆಯಲ್ಲಿರುವಂತೆ ಮಾಡಲು ಗಾಂಧಾರಿಯಿಂದ ವಿದುರನಿಗೆ ಆದೇಶ (ಆದಿ 206/22). ಇಂದ್ರಪ್ರಸ್ಥದಲ್ಲಿ ಶ್ರೀಕೃಷ್ಣನು ಕುಂತಿಯೊಡನೆ ವಿದಾಯ ಕೋರಿದುದು. ಕುಂತಿಯು ಅವನೇ ತನ್ನ ಮತ್ತು ತನ್ನ ಪುತ್ರರ ರಕ್ಷಕನೆಂದು ಹೇಳಿ, ಸದಾ ಎಚ್ಚರದಿಂದಿರಬೇಕೆಂದು ಅವನಲ್ಲಿ ಪ್ರಾರ್ಥಿಸಿದುದು (ಆದಿ 206/51). ಅರ್ಜುನನು ಸುಭದ್ರಾ ಸಹಿತನಾಗಿ ಬಂದು ಮಾತೆಯಾದ ಕುಂತಿಗೆ ಪ್ರಣಾಮ ಮಾಡುದು. ಕುಂತಿಯು ಸುಭದ್ರೆಯನ್ನು ಅಪ್ಪಿಕೊಂಡು ಆಕೆಯ ತಲೆಯನ್ನು ಆಘ್ರಾಣಿಸಿದುದು (ಆದಿ 220/14–21). ವಿದುರನು ಕುಂತಿಯನ್ನು ತನ್ನ ಮನೆಯಲ್ಲಿ ಇರಗೊಡಿಸುವಂತೆ ಪಾಂಡವರಲ್ಲಿ ಹೇಳಿದುದು ಮತ್ತು ಪಾಂಡವರು ಅವನ ವಿನಂತಿಯನ್ನು ಒಪ್ಪಿದುದು (ಸಭಾ 78/5–8). ದ್ರೌಪದಿಯು ವನಗಮನಕ್ಕಾಗಿ ಕುಂತಿಯೊಡನೆ ವಿದಾಯ ಕೋರಿದುದು, ಕುಂತಿಯು ಅವಳಿಗೆ ಧೈರ್ಯ ತುಂಬುತ್ತಾ, ಹೋಗಲು ಆಜ್ಞೆಯನ್ನೂ ಕರ್ತವ್ಯದ ಉಪದೇಶವನ್ನೂ ಕೊಟ್ಟು, ತಾನೂ

ಪುತ್ರರ ಹಿಂದಿನಿಂದ ವಿಲಪಿಸುತ್ತಾ ಹೋದುದು (ಸಭಾ 79/1–29). ವಿದುರನು ಕುಂತಿಗೆ ಭರವಸೆಯನ್ನಿತ್ತದ್ದು (ಸಭಾ 79/31). ಕುಂತಿಯು ದುರ್ವಾಸನ ಸೇವೆಗೆ ಸಿದ್ಧಳಾದುದು (ವನ 304 /1–11). ಇವಳ ಸೇವೆಯಿಂದ ಪ್ರಸನ್ನನಾಗಿ ದುರ್ವಾಸನು ಈಕೆಗೆ ಮಂತ್ರೋಪದೇಶ ಮಾಡಿದುದು. (ವನ 305/20). ಈಕೆಯಿಂದ ಸೂರ್ಯದೇವನ ಆವಾಹನ. (ವನ 306/7). ಈಕೆಯಿಂದ ಸೂರ್ಯನೊಡನೆ ಕವಚಕುಂಡಲ ವಿಭೂಷಿತನಾದ ಪುತ್ರನ ಕೋರಿಕೆ. (ವನ 307/17). ಈಕೆ ನವಜಾತ ಶಿಶುವನ್ನು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ಬಿಟ್ಟದ್ದು (ವನ 308/22). ಶ್ರೀಕೃಷ್ಣನು ಸಿಕ್ಕಿದಾಗ, ಅವನಿಂದ ಪಾಂಡವರ ಸಮಾಚಾರ ಕೇಳಿ ಈಕೆ ವಿಲಪಿಸಿದುದು. (ಉದ್ಯೋಗ 90/5–90) ಶ್ರೀಕೃಷ್ಣನ ಮೂಲಕ ಪಾಂಡವರಿಗೆ ಉತ್ಸಾಹವರ್ಧಕ ಸಂದೇಶ ನೀಡಿದುದು ಮತ್ತು ವಿದ್ಯುಲೋಪಾಖ್ಯಾನವನ್ನು ತಿಳಿಸಿ, ಅವರನ್ನು ಯುದ್ಧಕ್ಕಾಗಿ ಉತ್ತೇಜಿಸಿದುದು (ಉದ್ಯೋಗ 132/5 ರಿಂದ 137/23). ವಿದುರನ ಮಾತಿನಿಂದ ಯೋಚನಾಮಗ್ನಳಾಗಿ ಈಕೆ ಕರ್ಣನ ಬಳಿಗೆ ಹೋದುದು (ಉದ್ಯೋಗ 144/26). ಕರ್ಣನನ್ನು ತನ್ನ ಪ್ರಥಮ ಪುತ್ರನೆಂದು ತಿಳಿಸುತ್ತಾ ಅವನು ಪಾಂಡವಪಕ್ಷವನ್ನು ಸೇರುವಂತೆ ಪ್ರೇರಿಸಿದುದು (ಉದ್ಯೋಗ 145). ಕುಂತಿಯು ಪಾಂಡವರನ್ನು ಸೇರಿದುದು ಮತ್ತು ದ್ರೌಪದಿಗೆ ಧೈರ್ಯ ತುಂಬಿದುದು (ಸ್ತ್ರೀ 15/33–38). ಕರ್ಣನಿಗೂ ಜಲಾಂಜಲಿ ಕೊಡುವಂತೆ ಹೇಳಿದುದು ಮತ್ತು ಪಾಂಡವರ ಮುಂದೆ ಕರ್ಣನು ತನ್ನ ಗರ್ಭದಿಂದ ಹುಟ್ಟಿದ ವಿಚಾರವನ್ನು ಪ್ರಕಟಿಸಿದುದು. ಕರ್ಣನಿಗಾಗಿ ದುಃಖಿಸುವ ಯುಧಿಷ್ಠಿರನನ್ನು ಸಮಾಧಾನಪಡಿಸಿದುದು (ಶಾಂತಿ 6/4–8). ಅಭಿಮನ್ಯುವಧೆಯಿಂದ ಶೋಕಪೀಡಿತರಾದ ಸುಭದ್ರೆ ಮತ್ತು ಉತ್ತರೆಗೆ ಇವಳಿಂದ ಭರವಸೆ (ಆಶ್ವ 61/33–40). ಉತ್ತರೆಯ ಮೃತಬಾಲಕನನ್ನು ಜೀವಗೊಳಿಸುವಂತೆ ಶ್ರೀಕೃಷ್ಣನಲ್ಲಿ ಈಕೆಯ ಪ್ರಾರ್ಥನೆ. (ಆಶ್ವ 66/14–26). ಈಕೆಯಿಂದ ಗಾಂಧಾರಿಯ ಸೇವೆ (ಆಶ್ರಮ 1/23–24). ಕಾಡಿಗೆ ತೆರಳುವ ಗಾಂಧಾರಿ ಮತ್ತು ಧೃತರಾಷ್ಟ್ರರ ಜೊತೆಯಲ್ಲಿ ಈಕೆಯೂ ಹೋದುದು. ಈಕೆ ಗಾಂಧಾರಿಯ ಕೈಹಿಡಿದು ಮುಂದೆ ಮುಂದೆ ಹೋಗುತ್ತಿದ್ದಳು (ಆಶ್ರಮ 15/1–9). ಪಾಂಡವರು ಆಗ್ರಹಪಡಿಸಿದರೂ ಕುಂತಿ ಕಾಡಿಗೆ ಹೋಗದಿರಲಿಲ್ಲ. ಯುಧಿಷ್ಠಿರ ಮತ್ತು ಸಹದೇವರ ಬಗ್ಗೆ ಗಮನವಿಡುವಂತೆ, ಕರ್ಣನನ್ನು ಜ್ಞಾಪಿಸಿಕೊಳ್ಳುವಂತೆ ಮತ್ತು ದ್ರೌಪದಿ, ಭೀಮಸೇನನೇ ಮೊದಲಾದವರಿಗೂ ಪ್ರಿಯವನ್ನುಂಟುಮಾಡುವಂತೆ ಆದೇಶ ನೀಡಿದುದು (ಆಶ್ರಮ 16/7–16). ಯುಧಿಷ್ಠಿರನೇ ಮೊದಲಾದ ಪುತ್ರರು ಹಿಂತಿರುಗಿ ಹೋಗುವಂತೆ ಅತ್ಯಂತ ಆಗ್ರಹ. ದ್ರೌಪದಿ ಮತ್ತು ಸುಭದ್ರೆಯರು ತನ್ನ ಹಿಂದೆಯೇ ಬರುವುದನ್ನು ಕಂಡು ಕಣ್ಣೀರು ಒರಸುತ್ತಿರುವ ಕುಂತಿ, ಪಾಂಡವರ ಆಗ್ರಹಕ್ಕೆ ಉತ್ತರಿಸಿದುದು (ಆಶ್ರಮ 16/17ರಿಂದ 17). ಧೃತರಾಷ್ಟ್ರ ಮತ್ತು ಗಾಂಧಾರಿಯೇ ಹೇಳಿದರೂ ಕುಂತಿ ಹಿಂದಿರುಗದಿದ್ದುದು, ಗಾಂಧಾರಿ ಮತ್ತು ಧೃತರಾಷ್ಟ್ರರೊಡನೆ ಆಕೆ ಗಂಗಾತಟದಲ್ಲಿ ನಿವಾಸ ಮಾಡಿದುದು (ಆಶ್ರಮ 18/4–16). ಕಾಡಿನಲ್ಲಿದ್ದ ಕುಂತಿಯ ಬಳಿಗೆ ಪುತ್ರರ ಆಗಮನ. ಅಳುತ್ತಿರುವ ಸಹದೇವನನ್ನು ಅಪ್ಪಿಕೊಂಡದ್ದು (ಆಶ್ರಮ 24/7–10). ಕುಂತಿಯು ಆ ಪುತ್ರಹೀನ ದಂಪತಿಗಳನ್ನು ತನ್ನ ಜೊತೆಯಲ್ಲಿ ಸೆಳೆದು ತಂದದ್ದು (ಆಶ್ರಮ 24/12). ಕುಂತಿಯು ಕರ್ಣಜನ್ಮದ ಗುಪ್ತ ರಹಸ್ಯವನ್ನು ವ್ಯಾಸರಿಗೆ ಹೇಳಿ, ತನ್ನ ಆ ಪುತ್ರನ ದರ್ಶನವಾಗಬೇಕೆಂಬ ಅಪೇಕ್ಷೆ ವ್ಯಕ್ತಪಡಿಸಿದುದು (ಆಶ್ರಮ 29/49ರಿಂದ 30/18). ಯುಧಿಷ್ಠಿರನೂ, ಸಹದೇವನೂ ಕುಂತಿಯೊಡನೆ ಸೇವೆಗಾಗಿ ತಾವೂ ವನದಲ್ಲಿರುವ ಅಪೇಕ್ಷೆಯನ್ನು ವ್ಯಕ್ತಪಡಿಸಿದುದು. ಕುಂತಿಯು ಅವರನ್ನು ಆಲಿಂಗಿಸಿ, ತಪಸ್ಸಿಗೆ ವಿಘ್ನಬಾರದಂತೆ ಅವರು ಹಿಂತಿರುಗಬೇಕೆಂದು ಆದೇಶ ನೀಡಿದುದು (ಆಶ್ರಮ 36/28–42). ಕುಂತಿಯಿಂದ ಕಾಡಿನಲ್ಲಿ ಕಠೋರ ತಪಸ್ಸು. ಒಂದು ತಿಂಗಳ ಪರ್ಯಂತ ಉಪವಾಸವಿದ್ದು ಒಂದು ದಿನ ಊಟಮಾಡುವುದು. (ಆಶ್ರಮ 37 /14). ಕುಂತಿಯು ಧ್ಯಾನಮಾಡುತ್ತಾ ಕುಳಿತಿರುವುದು ಮತ್ತು ದಾವಾಗ್ನಿಯಲ್ಲಿ ಭಸ್ಮವಾಗುವುದು (ಆಶ್ರಮ 37/31–32). ಕುಂತಿಯ ಎಲುಬುಗಳು ಗಂಗೆಯಲ್ಲಿ ಹಾಕಲ್ಪಡುವುದು, ಅವಳ ಶ್ರಾದ್ಧಕ್ರಿಯೆ ನೆರವೇರುವುದು (ಆಶ್ರಮ 39). ಕುಂತಿ ಮತ್ತು ಮಾದ್ರಿಯರಿಬ್ಬರೊಡನೆ ಪಾಂಡುರಾಜನು

ಮಹೇಂದ್ರಭವನಕ್ಕೆ ಹೋದುದು (ಸ್ವರ್ಗ 5/15).

**ಕುನ್ದ** – ಧಾತಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಪಾರ್ಷದರಲ್ಲಿ ಒಬ್ಬ (ಶಲ್ಯ 45/39).

**ಕುನ್ದಾಪರಾಂತ** – ಒಂದು ಭಾರತೀಯ ಜನಪದ (ಭೀಷ್ಮ 9/49).

**ಕುಪಟ**– ಒಬ್ಬ ದಾನವ. ಕಶ್ಯಪ ಪತ್ನಿ ದನುವಿನ ಮಗ (ಆದಿ 65/26).

**ಕುಬೇರ** – ಪುಲಸ್ತ್ಯಕುಮಾರ ವಿಶ್ರವಸುವಿನ ಮಗ. ಅವನು ರಾಕ್ಷಸ ರಾಜನಾಗಿ ಲಂಕೆಯಲ್ಲಿ ವಾಸಿಸುತ್ತಿದ್ದನು; ನರಯಾನ(ಪಲ್ಲಕಿ)ವನ್ನೇರಿದುದರಿಂದ 'ನರವಾಹನ' ಮತ್ತು ರಾಜರಿಗೂ ರಾಜನಾದುದರಿಂದ 'ರಾಜರಾಜ'ನೆಂದು ಕರೆಯಲ್ಪಡುತ್ತಿದ್ದನು. ಇವನ ತಂದೆ ವಿಶ್ರವಸು ಇವನ ಮೇಲೆ ಕೋಪಗೊಂಡಿದ್ದನು. ತಂದೆಯ ಕ್ರೋಧವನ್ನು ತಿಳಿದು, ಈತ ಅವನ ಸೇವೆ ಮತ್ತು ಪ್ರಸನ್ನತೆಗಾಗಿ ಮೂರು ರಾಕ್ಷಸಕನ್ಯೆಯರನ್ನು ನಿಯುಕ್ತಗೊಳಿಸಿದ್ದನು (ಆದಿ 275/1–3). ಇವನ ಪತ್ನಿಯ ಹೆಸರು ಭದ್ರಾ (ಆದಿ 198/6). ಉತ್ತರದಿಕ್ಕಿನಲ್ಲಿ ಕೈಲಾಸ ಪರ್ವತದ ಮೇಲೆ, ಯಕ್ಷ ರಾಕ್ಷಸರ ಅಧಿಪತಿಯಾಗಿ ಈತ ಅಭಿಷೇಕಗೊಂಡನು (ವನ 111/10–11). ಬ್ರಹ್ಮನಿಂದ ವರ ಪಡೆದು ರಾವಣನು ಕುಬೇರನನ್ನು ಗೆದ್ದುದು, ಈತನನ್ನು ಲಂಕೆಯಿಂದ ಹೊರದಬ್ಬಿದುದು, ಈತನ ಪುಷ್ಪಕವಿಮಾನವನ್ನು ಸೆಳಕೊಂಡದ್ದು. ಅನಂತರ ಕುಬೇರನಿಂದ ರಾವಣನಿಗೆ ಶಾಪ (ವನ 275/32–35). ಖಾಂಡವ ವನದಹನ ಯುದ್ಧದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನನ ಮೇಲೆ ಪ್ರಹಾರ ಮಾಡಲು ಈತ ಗದೆಯನ್ನು ಕೈಗೆತ್ತಿಕೊಂಡಿದ್ದನು (ಆದಿ 226/32). ನಾರದನಿಂದ ಇವನ ದಿವ್ಯ ಸಭಾ ವರ್ಣನೆ (ಸಭಾ 10). ಇವನಿಂದ ಅರ್ಜುನನಿಗೆ ಅಂತರ್ಧಾನಾಸ್ತ್ರದಾನ (ವನ 41/38). ಗಂಧಮಾದನದ ಮೇಲೆ ಪಾಂಡವರೊಡನೆ ಈತನ ಭೇಟಿ. ಯುಧಿಷ್ಠಿರ ಮತ್ತು ಭೀಮಸೇನನಿಗೆ ಸಾಂತ್ವನ ಮಾತು (ವನ 161/43–51). ತನಗೆ ಅಗಸ್ತ್ಯರಿಂದ ಬಂದ ಶಾಪದ ಕಥೆಯನ್ನು ಈತ ಯುಧಿಷ್ಠಿರನಲ್ಲಿ ವರ್ಣಿಸಿದುದು (ವನ 161/54–62). ಇವನಿಂದ ಯುಧಿಷ್ಠಿರ ಮತ್ತು ಭೀಮಸೇನನಿಗೆ ಉಪದೇಶ ಮತ್ತು ಸಮಾಧಾನ (ವನ 162). ಈತ ಶ್ರೀರಾಮನಿಗೆ ಅಭಿಮಂತ್ರಿತ ಜಲ ಕಳುಹಿಸಿದುದು (ವನ 289/9). ಸ್ಥೂಣಾ ಕರ್ಣನಿಗೆ ಸ್ತ್ರೀಯಾಗಿಯೇ ಉಳಿಯುವಂತೆ ಶಾಪಕೊಟ್ಟದ್ದು (ಉದ್ಯೋಗ 192/45–47). ಯಕ್ಷರ ಒತ್ತಡದಿಂದ ಅವನ ಶಾಪದ ಮುಕ್ತಾಯವನ್ನು ತಿಳಿಸಿದುದು (ಉದ್ಯೋಗ 192/50). ಕುಬೇರನು ಶುಕ್ರಾಚಾರ್ಯರಿಂದ ಕಾಲಂಶ ಧನಪಡೆದು, ಅದರಲ್ಲಿ ಹದಿನಾರನೇ ಒಂದಂಶ ಮನುಷ್ಯರಿಗಾಗಿ ಒಪ್ಪಿಸುತ್ತಾನೆ (ಭೀಷ್ಮ 6/23). ಪೃಥ್ವೀದೋಹನ ಸಮಯದಲ್ಲಿ ಈತ ಗೌಳಿಗನಾಗಿದ್ದನು (ದ್ರೋಣ 69/24). ಕುಬೇರನು ಸರಸ್ವತಿ ತಟದಲ್ಲಿ ತಪಸ್ಸು ಮಾಡಿದುದು. ಕುಬೇರತೀರ್ಥದ ಉತ್ಪತ್ತಿ ಮತ್ತು ಕುಬೇರನಿಗೆ ಅನೇಕ ವರಗಳ ಪ್ರಾಪ್ತಿ. ಕುಬೇರನು ಅಲ್ಲಿ ಧನಾಧಿಪತ್ಯ, ರುದ್ರನ ಸ್ನೇಹ, ದೇವತ್ವ, ಲೋಕಪಾಲತ್ವ, ನಲಕೂಬರನೆಂಬ ಹೆಸರಿನ ಪುತ್ರ ಮತ್ತು ಪುಷ್ಪಕವಿಮಾನವನ್ನು ಪ್ರಾಪ್ತಿಸಿಕೊಂಡನು (ಶಲ್ಯ 47/28–31). ಮುಚುಕುಂದ ಮಹಾರಾಜನೊಡನೆ ಯುದ್ಧ ಮತ್ತು ಮಾತುಕತೆ (ಶಾಂತಿ 74/4–18). ಉಶನಾ ಎಂಬವನಿಂದ ತನ್ನ ಧನಾಪಹಾರವಾದಾಗ ಈತ ಶಿವನಿಗೆ ಶರಣಾಗತನಾದುದು (ಶಾಂತಿ 289/12). ಇವನ ಮೂಲಕ ಅಷ್ಟಾವಕ್ರ ಮುನಿಯ ಸ್ವಾಗತ ಸತ್ಕಾರ (ಅನು 19/37–50). ಮಹಾಭಾರತದಲ್ಲಿ ಬಂದಿರುವ ಕುಬೇರನ ಹೆಸರು – ಅಲಕಾಧಿಪ, ಧನದ, ಧನದೇಶ್ವರ, ಧನಾಧಿಗೋಪ್ತಾ, ಧನಾಧಿಪ, ಧನಾಧಿಪತಿ, ಧನಾ ಧ್ಯಕ್ಷ, ಧನೇಶ್ವರ, ಧನಪತಿ, ಧನೇಶ, ದ್ರವಿಣಪತಿ, ಗದಾಧರ, ಗುಹ್ಯಕಾಧಿಪ, ಗುಹ್ಯಕಾಧಿಪತಿ, ಕೈಲಾಸನಿಲಯ, ನರವಾಹನ, ನಿಧಿಪ, ಪೌಲಸ್ತ್ಯ, ರಾಜರಾಜ, ರಾಜರಾಟ್, ರಾಕ್ಷಸಾಧಿಪತಿ, ರಾಕ್ಷಸೇಶ್ವರ, ವೈಶ್ರವಣ, ವಿತ್ತಗೋಪ್ತಾ, ವಿತ್ತಪತಿ, ವಿತ್ತೇಶ, ಯಕ್ಷಾಧಿಪ, ಯಕ್ಷಾಧಿಪತಿ, ಯಕ್ಷಪತಿ, ಯಕ್ಷಪ್ರವರ, ಯಕ್ಷರಾಟ್, ಯಕ್ಷರಾಜ, ಯಕ್ಷ ರಾಕ್ಷಸಭರ್ತಾ, ಯಕ್ಷರಕ್ಷೋಧಿಪ ಇತ್ಯಾದಿ.

**ಕುಬೇರತೀರ್ಥ** – ಸರಸ್ವತಿ ನದಿ ಸಂಬಂಧವಾದ ಒಂದು ತೀರ್ಥ. ಇದರ ಉತ್ಪತ್ತಿಯ ಸಂದರ್ಭ (ಶಲ್ಯ 47/25–31).

**ಕುಬ್ಜಾಮ್ರಕ** – ಕೇವಲ ಯಾತ್ರೆಯಿಂದ ಸಹಸ್ರ ಗೋದಾನದ ಫಲ ಮತ್ತು ಸ್ವರ್ಗವನ್ನು ಕೊಡುವ

ಒಂದು ತೀರ್ಥ (ವನ 84/40).

**ಕುಮಾರ** – (1) 'ಅನಲ'ನೆಂಬ ವಸುವಿನ ಪುತ್ರ ಸ್ಕಂದ. ಅವನು ಜನ್ಮಕಾಲದಲ್ಲಿ ಶರವಣವನದಲ್ಲಿ ವಾಸಿಸುತ್ತಿದ್ದನು (ಆದಿ 66/23). ಇವನಿಗೆ 'ಕಾರ್ತಿಕೇಯ'ನೆಂದು ಹೆಸರಾಗಲು ಕಾರಣ (ಆದಿ 66/24). ಕುಮಾರಗ್ರಹ ಅಥವಾ ಕುಮಾರಸ್ಕಂದನ ಪಾರ್ಷದ, ಅವನು ವಜ್ರಪ್ರಹಾರವಾದಾಗ ಕುಮಾರನ ಶರೀರದಿಂದ ಪ್ರಕಟಗೊಂಡಿದ್ದನು. (ವನ 288/1).

(2) ಭಾರತವರ್ಷದ ಪೂರ್ವಭಾಗದ ಜನಪದ. ಅಲ್ಲಿದ್ದ ರಾಜಾಶ್ರೇಣಿಮಂತನನ್ನು ಭೀಮಸೇನನು ಪರಾಜಯಗೊಳಿಸಿದ್ದನು (ಸಭಾ 30/1). ಅಲ್ಲಿದ್ದ ರಾಜಕುಮಾರನು ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಉಡುಗೊರೆ ತಂದಿದ್ದನು (ಸಭಾ 52/14–17).

(3) ಒಬ್ಬ ಪ್ರಾಚೀನ ರಾಜ. ಪಾಂಡವ ಪಕ್ಷದಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/24). ದ್ರೋಣಾಚಾರ್ಯನೊಡನೆ ಯುದ್ಧ ಮತ್ತು ಈತನ ಪರಾಜಯ (ದ್ರೋಣ 16/21–25).

(4) 'ಸನತ್ಕುಮಾರ' ಅಥವಾ ಕುಮಾರ ಸನತ್ಸುಜಾತ ಋಷಿ. 'ಮೃತ್ಯುವಿನ ಅಸ್ತಿತ್ವವೇ ಇಲ್ಲ'ವೆಂದು ಅವನು ಒಮ್ಮೆ ಹೇಳಿದ್ದಿದೆ (ಉದ್ಯೋಗ 41/2).

(5) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/13).

**ಕುಮಾರಕ** – ಕೌರವ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/13).

**ಕುಮಾರಕೋಟಿ** – ಒಂದು ತೀರ್ಥ. ಅಲ್ಲಿ ನಿಯಮಪೂರ್ವಕ ಸೇವೆಮಾಡಿದರೆ ಹತ್ತುಸಾವಿರ ಗೋದಾನದ ಫಲಪ್ರಾಪ್ತವಾಗುತ್ತದೆ (ವನ 2/117).

**ಕುಮಾರಧಾರಾ** – ಪಿತಾಮಹ ಸರೋವರದಿಂದ ಹುಟ್ಟಿದ 'ಕುಮಾರಧಾರಾ' ಎಂಬ ಹೆಸರಿನ ಒಂದು ಧಾರೆ. ಅಲ್ಲಿ ಸ್ನಾನಮಾಡಿದರೆ ಕೃತಾರ್ಥತೆ ಪ್ರಾಪ್ತವಾಗುತ್ತದೆ (ವನ 84/149).

**ಕುಮಾರವರ್ಷ** – ರೈವತಕ ಪರ್ವತದ ಸಮೀಪವಿರುವ ಒಂದು ದೇಶ (ಭೀಷ್ಮ 11/26).

**ಕುಮಾರಿ** – (1) ಕೇಕಯದೇಶದ ಒಬ್ಬಳು ರಾಜಕುಮಾರಿ. ಪೂರುವಂಶದ ರಾಜಾ ಭೀಮಸೇನನ ಪತ್ನಿ. ಪ್ರತಿಶ್ರವನ ತಾಯಿ (ಆದಿ 95/43).

(2) ಸ್ಕಂದನ ಶರೀರದಿಂದ ಹುಟ್ಟಿದ ಕುಮಾರಿ ಗ್ರಹ. ಈ ಕುಮಾರಿಯರು ಗರ್ಭದಲ್ಲಿರುವ ಬಾಲಕರನ್ನು ಭಕ್ಷಿಸುವವರಾಗಿದ್ದಾರೆ (ವನ 230/31).

(3) ಧನಂಜಯ ನಾಗನ ಪತ್ನಿ (ಉದ್ಯೋಗ 117/17).

(4) ಭಾರತದ ಒಂದು ನದಿ. ಅದರ ನೀರನ್ನು ಅಲ್ಲಿರುವ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/36)

(5) ಶಾಕದ್ವೀಪದ ಒಂದು ನದಿ (ಭೀಷ್ಮ 11/32).

**ಕುಮುದ** – (1) ಒಂದು ಪ್ರಮುಖ ನಾಗ (ಆದಿ 35/15; ಉದ್ಯೋಗ 103/13; ಮೌಸಲ 4/15).

(2) ವಾನರರಾಜ ಸುಗ್ರೀವನ ಸಹಾಯಕನೂ, ಹಿಂಬಾಲಕನೂ ಆಗಿದ್ದ ಒಬ್ಬ ಕಪಿ (ವನ 289/4)

(3) ಸುಪ್ರತೀಕದ ಕುಲದಲ್ಲಿ ಹುಟ್ಟಿದ ಒಬ್ಬ ಗಜರಾಜ. (ಉದ್ಯೋಗ 99/15)

(4) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ. (ಉದ್ಯೋಗ 101/12).

(5) ಕುಶದ್ವೀಪದ ಒಂದು ಪರ್ವತ (ಭೀಷ್ಮ 12/10).

(6) ಧಾತಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಪಾರ್ಷದರಲ್ಲಿ ಒಬ್ಬ (ಶಲ್ಯ 45/39).

(7) ಸ್ಕಂದನ ಒಬ್ಬ ಸೈನಿಕ (ಶಲ್ಯ 45/56).

(8) ವಿಷ್ಣುವಿನ ಒಂದು ಹೆಸರು (ಅನು 149/76).

**ಕುಮುದಮಾಲಿ** – ಬ್ರಹ್ಮನಿಂದ ಸ್ಕಂದನಿಗೆ ಕೊಡಲ್ಪಟ್ಟ ನಾಲ್ಕು ಪಾರ್ಷದರಲ್ಲಿ ಒಬ್ಬ (ಶಲ್ಯ 45/25).

**ಕುಮುದಾಕ್ಷ** – ಒಬ್ಬ ಪ್ರಮುಖ ನಾಗ (ಆದಿ 35/15).

**ಕುಮುದೋತ್ತರ** – ಶಾಕದ್ವೀಪದ ಒಂದು ದೇಶ. ಅದು ಜಲದ ಅಥವಾ ಮಲಯದ ಹತ್ತಿರವಿದೆ (ಭೀಷ್ಮ 11/25).

**ಕುಮ್ಭ** – ಪ್ರಹ್ಲಾದನ ಮೂವರು ಪುತ್ರರಲ್ಲಿ ಒಬ್ಬ. ಇವನ ಇಬ್ಬರು ಸಹೋದರರು ನಿಕುಂಭ ಮತ್ತು ವಿರೋಚನ (ಆದಿ 65/19)

**ಕುಮ್ಭಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಕುಮ್ಭಕರ್ಣ** – ರಾಕ್ಷಸಕನ್ಯೆ ಪುಷ್ಪೋತ್ಕಟೆಯ ಇಬ್ಬರು ಪುತ್ರರಲ್ಲಿ ಒಬ್ಬ. ರಾವಣನ ತಮ್ಮ. ಇವನ

ತಂದೆ ಪುಲಸ್ತ್ಯಪುತ್ರ ವಿಶ್ರವಸು (ವನ 275/1–7). ಇವನು ತಪಸ್ಸು ಮಾಡಿ ಬ್ರಹ್ಮನಿಂದ ನಿದ್ರಿಸುವ ವರ ಬೇಡಿದುದು (ವನ 275/28). ಲಕ್ಷ್ಮಣನಿಂದ ಈತನ ವಧೆ (ವನ 297/19).

**ಕುಮ್ಭಕರ್ಣಾಶ್ರಮ** – ಒಂದು ತೀರ್ಥ. ಇಲ್ಲಿಗೆ ಯಾತ್ರೆ ಮಾಡುವುದರಿಂದ ಭೂಮಿಯಲ್ಲಿ ಸನ್ಮಾನ ಲಭ್ಯವಾಗುತ್ತದೆ (ವನ 84/157).

**ಕುಮ್ಭಯೋನಿ** – ಅರ್ಜುನನು ಹೋದಾಗ ಇಂದ್ರಸಭೆಯಲ್ಲಿ ನೃತ್ಯಮಾಡಿದ ಅಪ್ಸರೆಯಲ್ಲಿ ಒಬ್ಬಳು (ವನ 43/30).

**ಕುಮ್ಭರೇತಾ** – ಶಂಯುವಿನ ಪ್ರಥಮ ಪುತ್ರ. ಭರದ್ವಾಜನ ಪತ್ನಿ ವೀರಾ ಎಂಬವಳ ಗರ್ಭದಿಂದ ಹುಟ್ಟಿದ ವೀರನೆಂಬ ಹೆಸರಿನ ಅಗ್ನಿ. ಈತನಿಗೆ ಸೋಮದೇವತೆಯೊಂದಿಗೆ ದ್ವಿತೀಯ ಆಜ್ಯಭಾಗ ಪ್ರಾಪ್ತವಾಗುತ್ತದೆ. ಈತನಿಗೆ 'ರಥಪ್ರಭು' 'ರಥಧ್ವಾನ' ಮತ್ತು 'ಕುಮ್ಭರೇತಾ' ಎಂದೂ ಹೇಳುತ್ತಾರೆ (ವನ 220/9–10).

**ಕುಮ್ಭವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಕುಮ್ಭಶ್ರವಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಕುಮ್ಮಾಂಡಕೋದರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಕುಮ್ಭಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/15).

**ಕುಮ್ಭೀನಸಿ** – ಒಬ್ಬ ಮಾಯಾವಿ ಅಸುರ (ಅನು 39/7).

**ಕುಮ್ಭೀನಸೀ** – ಗಂಧರ್ವರಾಜ ಚಿತ್ರರಥನ ಪತ್ನಿ. ಅವಳು ಚಿತ್ರರಥನ ಜೀವರಕ್ಷಣೆಗಾಗಿ ಯುಧಿಷ್ಠಿರನಲ್ಲಿ ಪ್ರಾರ್ಥಿಸಿದ್ದಳು (ಆದಿ 169/35).

**ಕುರಂಗಕ್ಷೇತ್ರ** – ಒಂದು ತೀರ್ಥ. ಇಲ್ಲಿ ಸ್ನಾನ ಮತ್ತು ತ್ರಿರಾತ್ರಿ ಉಪವಾಸದ ಫಲ (ಅನು 25/1–12).

**ಕುರು** – (1) ಸೂರ್ಯಕನ್ಯೆ ತಪತಿಯ ಗರ್ಭದಿಂದ ಹುಟ್ಟಿದ ಮಹಾರಾಜ ಸಂವರಣನ ಮಗ (ಆದಿ 94/48). ಇವನಿಂದ ವಾಹಿನಿ ಎಂಬವಳಲ್ಲಿ ಅಶ್ವವಂತ, ಅಭಿಷ್ಯಂತ, ಚೈತ್ರರಥ, ಮುನಿ ಮತ್ತು ಜನಮೇಜಯ ಎಂಬವರ ಜನನ. ಈತನಿಂದ ಕುರುಜಾಂಗಲ ದೇಶದ ಪ್ರಸಿದ್ಧಿ. ಇವನ ತಪಸ್ಸಿನಿಂದ ಕುರುಕ್ಷೇತ್ರ ಪವಿತ್ರವಾದುದು (ಆದಿ 94/50–51). ಇವನ ದ್ವಿತೀಯ ಪತ್ನಿ ಶುಭಾಂಗಿಯಿಂದ ವಿದುರನ ಜನನ (ಆದಿ 95/29). ಕುರುಕ್ಷೇತ್ರದ ಭೂಮಿಯನ್ನು ಉಳುತ್ತಾ, ಇಂದ್ರನೊಡನೆ ಈತನ ಸಂವಾದ (ಶಲ್ಯ 53/6–15). ಕುರುಕ್ಷೇತ್ರದಲ್ಲಿ ಈತ ಯಜ್ಞಮಾಡುತ್ತಿದ್ದಾಗ ಸರಸ್ವತಿ ನದಿ 'ಸುರೇಣು' ಎಂಬ ಹೆಸರಿನಿಂದ ಪ್ರಕಟವಾಗಿದ್ದಳು. ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ, 'ಓಘವತಿ' ಎಂಬ ಎಂಬ ಹೆಸರಿನಿಂದ ಈಕೆಯು ಪ್ರಕಟವಾಗಿದ್ದಳು (ಶಲ್ಯ 38/26–27).

(2) ಶ್ರದ್ಧಾ, ಶಮ, ದಮ ಸಂಪನ್ನನಾದ ಒಬ್ಬ ಋಷಿ. ಅವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/8).

**ಕುರುಕ್ಷೇತ್ರ** – ಸರಸ್ವತಿ ಮತ್ತು ದೃಷದ್ವತಿ ಎಂಬ ನದಿಗಳ ಮಧ್ಯವರ್ತಿ ಕ್ಷೇತ್ರ. ಇಲ್ಲಿ ವಾಸಿಸುವುದರ ಮಹಿಮೆ (ವನ 83/4; 204; 205). ಕುರುಕ್ಷೇತ್ರದಲ್ಲಿ, ಇಕ್ಷುಮತಿ ನದಿ ದಡದಲ್ಲಿ ತಕ್ಷಕನು ವಾಸವಾಗಿದ್ದನು (ಆದಿ 3/139–142). ಕುರುವು ತನ್ನ ತಪಸ್ಸಿನಿಂದ ಈ ಕ್ಷೇತ್ರವನ್ನು ಪವಿತ್ರಗೊಳಿಸಿದನು (ಆದಿ 94/50). ಚಿತ್ರಾಂಗದನೆಂಬ ಗಂಧರ್ವನೊಡನೆ ಹೋರಾಡಿ, ಮಹಾರಾಜ ಚಿತ್ರಾಂಗದನು ಇಲ್ಲಿಯೇ ಮಡಿದನು (ಆದಿ 101/8–9). ಸುಂದ ಮತ್ತು ಉಪಸುಂದರು ಸರ್ವ ದಿಕ್ಕುಗಳನ್ನು ಗೆದ್ದು ಕುರುಕ್ಷೇತ್ರದಲ್ಲಿ ವಾಸಿಸುತ್ತಿದ್ದರು (ಆದಿ 209/27). ಖಾಂಡವವನ ದಹನಕ್ಕಿಂತ ಮೊದಲು ತಕ್ಷಕನು ಅಲ್ಲಿಂದ ಕುರುಕ್ಷೇತ್ರಕ್ಕೆ ಹೊರಟು ಹೋಗಿದ್ದನು (ಆದಿ 226/4). ಅರಣ್ಯವಾಸದ ಅವಧಿಯಲ್ಲಿ ಇಲ್ಲಿಗೆ ಪಾಂಡವರ ಆಗಮನ (ವನ 5/1). ಇದೊಂದು ಪ್ರಸಿದ್ಧ ತೀರ್ಥ. ಅದರ ದರ್ಶನ ಮಾತ್ರದಿಂದ ಪಾಪ ನಾಶವಾಗುತ್ತದೆ (ವನ 83/1–3). ಕುರುಕ್ಷೇತ್ರದ ಎಲ್ಲೆಯೊಳಗಡೆ ಒಂದು ಪವಿತ್ರ ಸ್ಥಳದಲ್ಲಿ ಮಾಂಧಾತನು ಯಜ್ಞ ಮಾಡಿದ್ದನು (ವನ 126/45). ಉಂಚವೃತ್ತಿಯಿಂದಲೇ ಜೀವಿಸುತ್ತಿದ್ದ, ಮುದ್ಗಲನೆಂಬ ಋಷಿ, ಜಿತೇಂದ್ರಿಯನಾಗಿ ಕುರುಕ್ಷೇತ್ರದಲ್ಲೇ ವಾಸಿಸುತ್ತಿದ್ದನು (ವನ 260/3). ಭೀಷ್ಮ ಮತ್ತು ಪರಶುರಾಮರ ಯುದ್ಧ ಕುರುಕ್ಷೇತ್ರದಲ್ಲೇ ಆಯಿತು (ಉದ್ಯೋಗ 178/72). ಕೌರವ ಪಾಂಡವರು ಯುದ್ಧಕ್ಕಾಗಿ ಕುರುಕ್ಷೇತ್ರ

ದಲ್ಲಿಯೇ ಒಟ್ಟಾದರು. ಅಲ್ಲಿಯೇ ಶ್ರೀಕೃಷ್ಣನಿಂದ ಅರ್ಜುನನಿಗೆ ಗೀತೋಪದೇಶವಾಯಿತು (ಭೀಷ್ಮ 25ರಿಂದ 42). ಕುರುಕ್ಷೇತ್ರವೇ ಮಹಾಭಾರತ ಯುದ್ಧದ ಅಂಗಳವಾಗಿತ್ತು (ಭೀಷ್ಮಪರ್ವದಿಂದ ಶಲ್ಯಪರ್ವದ ವರೆಗೆ). ಇದೇ ಕ್ಷೇತ್ರದಲ್ಲಿ ಭೀಷ್ಮರು ಶರಶಯ್ಯೆಯಲ್ಲಿ ಮಲಗಿದರು (ಭೀಷ್ಮ 119/92). ಕುರುಕ್ಷೇತ್ರದಲ್ಲಿ ಸರಸ್ವತಿ ನದಿ 'ಓಘವತಿ'ಯ ರೂಪದಲ್ಲಿ ಪ್ರಕಟವಾದಳು (ಶಲ್ಯ 38/3–4). ಮೊದಲು ಇದು ಸಮಂತಪಂಚಕ ಕ್ಷೇತ್ರವಾಗಿತ್ತು. ಮಹಾರಾಜ ಕುರುವಿನ ಕಾಲದಿಂದ ಅದರ ಹೆಸರು ಕುರುಕ್ಷೇತ್ರವಾಯಿತು. ಇದರ ಎಲ್ಲೆಯ ನಿರ್ಧಾರ ಮತ್ತು ಮಹಿಮೆ (ಶಲ್ಯ 53). ಬಲ ರಾಮನಿಂದ ಇದರ ಮಹಿಮೆಯ ವರ್ಣನೆ (ಶಲ್ಯ 55/6–10). ಭೀಮಸೇನ ಮತ್ತು ದುರ್ಯೋಧನರ ಯುದ್ಧ ಮತ್ತು ದುರ್ಯೋಧನನ ವಧೆ ಇದೇ ಕ್ಷೇತ್ರದಲ್ಲಿ ನಡೆಯಿತು (ಶಲ್ಯ 55ರಿಂದ 58). ಅತಿಥಿಸತ್ಕಾರಪರಾಯಣ ಅಗ್ನಿಪುತ್ರ ಸುದರ್ಶನ ತನ್ನ ಪತ್ನಿ ಓಘವತಿಯೊಂದಿಗೆ ಕುರುಕ್ಷೇತ್ರದಲ್ಲೇ ಇರುತ್ತಿದ್ದನು (ಅನು 2/40).

**ಕುರುಜಾಂಗಲ** ಅಥವಾ ಕುರು – ಭಾರತ ವರ್ಷದ ಪ್ರಸಿದ್ಧ ಜನಪದ. ಅದರ ರಾಜಧಾನಿ ಹಸ್ತಿನಾಪುರವಾಗಿತ್ತು. ಕುರುವೆಂಬ ಹೆಸರಿನಿಂದಲೇ ಕುರುಜಾಂಗಲ ದೇಶ ಪ್ರಸಿದ್ಧವಾಯಿತು (ಆದಿ 94/49). ಧೃತರಾಷ್ಟ್ರ ಮತ್ತು ಪಾಂಡುವಿನ ಜನ್ಮದ ಅನಂತರ ಈ ದೇಶದ ಸರ್ವಾಂಗೀಣ ಉನ್ನತಿಯ ವರ್ಣನೆ (ಆದಿ 108/1–6).

**ಕುರುತೀರ್ಥ** – ಕುರುಕ್ಷೇತ್ರದಲ್ಲಿ ತೈಜಸ ತೀರ್ಥ ದಿಂದ ಪೂರ್ವಭಾಗದಲ್ಲಿರುವ ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ಬ್ರಹ್ಮಲೋಕ ಪ್ರಾಪ್ತವಾಗು ತ್ತದೆ (ವನ 83/165).

**ಕುರುಪಾಂಚಾಲ** – ಕುರು ಮತ್ತು ಪಾಂಚಾಲ ವೆಂಬ ಹೆಸರಿನ ಭಾರತವರ್ಷದ ಎರಡು ಜನಪದ ಗಳು (ಭೀಷ್ಮ 9/39).

**ಕುರುವರ್ಣಕ** – ಒಂದು ಭಾರತೀಯ ಜನಪದ (ಭೀಷ್ಮ 9/56).

**ಕುರುವಿಂದ** – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ನಿವಾಸಿಗಳು (ಭೀಷ್ಮ 87/9).

**ಕುಲತ್ಥ** – ಒಂದು ಭಾರತೀಯ ಜನಪದ (ಭೀಷ್ಮ 9/66).

**ಕುಲಧರ್ಮ** – ಸನಾತನ ಕಾಲದಿಂದ ನಡೆದು ಬಂದ ಕುಲಾಚಾರ (ಭೀಷ್ಮ 25/40).

**ಕುಲಪಾಂಸನರಾಜ** – (ಉದ್ಯೋಗ 74).

**ಕುಲಂಪುನ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಮನುಷ್ಯನು ತನ್ನ ಸಂಪೂರ್ಣ ಕುಲವನ್ನು ಪವಿತ್ರಗೊಳಿಸುತ್ತಾನೆ (ವನ 83/104).

**ಕುಲಂಪುನಾ** – ಒಂದು ನಿತ್ಯ ಸ್ಮರಣೀಯ ನದಿ (ಅನು 165/20).

**ಕುಲಾಚಲ** – ಮಹೇಂದ್ರ, ಮಲಯ, ಸಹ್ಯ, ಶಕ್ತಿಮಂತ, ಋಕ್ಷವಂತ, ವಿಂಧ್ಯ, ಪಾರಿಯಾತ್ರ – ಇವು ಏಳು ಕುಲಪರ್ವತಗಳು (ಭೀಷ್ಮ 9/11).

**ಕುಲಿಕ** – ಒಬ್ಬ ಪ್ರಮುಖ ನಾಗ. ಅವನು ಕದ್ರುವಿನ ಮಗ (ಆದಿ 65/41).

**ಕುಲಿಂದ** – (1) ಒಬ್ಬ ಪ್ರಾಚೀನ ರಾಜ (ಸಭಾ 14/26).

(2) ಪ್ರಾಚೀನ ದೇಶ (ಸಭಾ 26/3; ಭೀಷ್ಮ 9/55, 63)

**ಕುಲ್ಯಾ** – ಒಂದು ತೀರ್ಥ. ಅಲ್ಲಿ ಉಪವಾಸ ವಿರುವುದರಿಂದ ಅಶ್ವಮೇಧ ಯಜ್ಞದ ಫಲ ದೊರಕುತ್ತದೆ (ಅನು 25/56).

**ಕುವಲಯಾಪೀಡ** – ಐರಾವತಕುಲದಲ್ಲಿ ಹುಟ್ಟಿದ ಕಂಸನ ಆನೆ. ಶ್ರೀಕೃಷ್ಣನಿಂದ ಇದರ ವಧೆ (ಸಭಾ 38/29).

**ಕುವಲಾಶ್ವ** – ಇಕ್ಷ್ವಾಕುವಂಶದ ರಾಜಾ ಬೃಹ ದಶ್ವನ ಪುತ್ರ. ಇವನಿಗೆ ಇಪತ್ತೊಂದು ಸಾವಿರ ಪುತ್ರರಿದ್ದರು (ವನ 202/5). ಇವನು ಧುಂಧು ವನ್ನು ಕೊಲ್ಲಲು ಹೊರಟದ್ದು (ವನ 204/11). ಇವನೊಳಗೆ ಭಗವಂತನಾದ ವಿಷ್ಣುವಿನ ತೇಜಸ್ಸಿನ ಪ್ರವೇಶ (ವನ 204/13). ಇವನಿಂದ ಧುಂಧು ವಿನ ವಧೆ (ವನ 204/32). ಇವನಿಗೆ ದೇವತೆ ಗಳಿಂದ ವರಪ್ರಾಪ್ತಿ (ವನ 204/36–38). ಇವನಿಗೆ ಧುಂಧುಮಾರನೆಂಬ ಹೆಸರು ಬರಲು ಕಾರಣ (ವನ 204/42).

**ಕುವೀರಾ** – ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/27).

**ಕುಶ** – ಪ್ರಾಚೀನ ಕಾಲದ ಒಬ್ಬ ಮಹರ್ಷಿ. ಅವನು ಅಗ್ನಿಯ ಸಮಾನನಾದ ಪ್ರತಾಪಿಯಾಗಿ ದ್ದನು. ಇವನು ಬ್ರಹ್ಮನ ಪುತ್ರ ಮತ್ತು ವಿಶ್ವಾಮಿತ್ರನ

ಪ್ರಪಿತಾಮಹನಾಗಿದ್ದನು (ಆದಿ 74/69).

**ಕುಶಚೀರಾ** – ಒಂದು ನದಿ. ಅದರ ನೀರನ್ನು ಭಾರತದ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/23).

**ಕುಶದ್ವೀಪ** – ಸುಪ್ರಸಿದ್ಧವಾದ ಏಳು ದ್ವೀಪಗಳಲ್ಲಿ ಒಂದು. ಇದರ ವಿಶೇಷವರ್ಣನೆ (ಭೀಷ್ಮ 12/6–16).

**ಕುಶಧಾರಾ** – ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/24).

**ಕುಶನಾಭ** – ಮಹರ್ಷಿ ಕುಶನ ಧರ್ಮಾತ್ಮನಾದ ಪುತ್ರ. ಗಾಧಿಯ ತಂದೆ ವಿಶ್ವಾಮಿತ್ರನ ಪಿತಾಮಹ (ಆದಿ 74/69).

**ಕುಶಪ್ಲವನ** – ಒಂದು ತೀರ್ಥ. ಅಲ್ಲಿ ಸ್ನಾನ ಮತ್ತು ಮೂರು ರಾತ್ರಿ ವಾಸಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ದೊರಕುತ್ತದೆ (ವನ 85/36).

**ಕುಶಲ** – ಕ್ರೌಂಚ ಪರ್ವತದ ಹತ್ತಿರವಿರುವ ಒಂದು ದೇಶ (ಭೀಷ್ಮ 12/21).

**ಕುಶಲ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/40).

**ಕುಶವತಿ** – ದೇವಲೋಕದ ಒಂದು ನಗರ (ವನ 161/54).

**ಕುಶವಾನ್** – ಮಾನಸ ಸರೋವರದ ಹತ್ತಿರವಿರುವ ಉಜ್ಜಾನಕ ಸರೋವರದ ಒಂದು ಗಡಿ (ವನ 130/17–18).

**ಕುಶವಿಂದು** – ಒಂದು ಭಾರತೀಯ ಜನಪದ (ಭೀಷ್ಮ 9/56).

**ಕುಶಸ್ತಂಬ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವ ಮನುಷ್ಯ ಸ್ವರ್ಗದಲ್ಲಿ ಅಪ್ಸರೆಯರಿಂದ ಸೇವೆ ಪಡೆಯುತ್ತಾನೆ (ಅನು 25/28).

**ಕುಶಸ್ಥಲೀ** – ದ್ವಾರಕಾಪುರದ ಪ್ರಾಚೀನ ಹೆಸರು (ಸಭಾ 14/50).

**ಕುಶಾಢ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/44).

**ಕುಶಾಂಬ** – ರಾಜಾ ಉಪರಿಚರ ವಸುವಿನ ತೃತೀಯ ಪುತ್ರ. ಇವನ ಇನ್ನೊಂದು ಹೆಸರು ಮಣಿವಾಹನ ಎಂದಾಗಿತ್ತು (ಆದಿ 63/31).

**ಕುಶಾವರ್ತ** – ಒಂದು ತೀರ್ಥ. ಅಲ್ಲಿ ಸ್ನಾನದ ಫಲ (ಅನು 25/13).

**ಕುಶಿಕ** – (1) ಅಜಮೀಢನ ವಂಶದಲ್ಲಿ ಹುಟ್ಟಿದ ಜಹ್ನುವಿನ ವಂಶಜನಾದ ವಲ್ಲಭನ ಪುತ್ರ (ಆದಿ 95/33; ಭೀಷ್ಮ 9/8; ಅನು 4/5). ಒಂದು ಕಡೆ ಇವನನ್ನು ಜಹ್ನುವಂಶಜ ಬಲಾಕಾಶ್ವನ ಪುತ್ರ ನೆಂದು ಹೇಳಲಾಗಿದೆ (ಶಾಂತಿ 49/3). ಪುತ್ರ ಪ್ರಾಪ್ತಿಗಾಗಿ ಈತನ ತಪಸ್ಸು (ಶಾಂತಿ 49/4). ಪುತ್ರರೂಪದಲ್ಲಿ ಇಂದ್ರನ ಜನ್ಮ (ಶಾಂತಿ 49/5–6). ಇವನಲ್ಲಿಗೆ ಚ್ಯವನನು ಬಂದುದು ಮತ್ತು ವಾಸಿಸುವ ಬಯಕೆಯನ್ನು ವ್ಯಕ್ತಪಡಿಸಿದುದು (ಶಾಂತಿ 52/9–10). ಭಾರ್ಯಾಸಮೇತನಾಗಿ ಈತನು ಚ್ಯವನನ್ನು ಸತ್ಕರಿಸಿದುದು ಮತ್ತು ಆತನಿಗೆ ಸರ್ವಸ್ವವನ್ನು ಅರ್ಪಿಸಿದುದು (ಶಾಂತಿ 52/13–18). ಈತನು ಚ್ಯವನನ್ನು ತನ್ನ ಮನೆಗೆ ಕರಕೊಂಡು ಹೋಗಿ ಉಳಕೊಳ್ಳುವಂತೆ ಮಾಡಿದುದು, ಶಯ್ಯೆ ಇತ್ಯಾದಿಕೊಟ್ಟದ್ದು, ಮತ್ತು ಸೇವೆ ಮಾಡುವ ಪ್ರತಿಜ್ಞೆ ಮಾಡಿದುದು (ಶಾಂತಿ 52/23–24). ಪತ್ನಿಸಹಿತನಾಗಿ ನಿರಾಹಾರನಾಗಿದ್ದು, ಇಪ್ಪತ್ತೊಂದು ದಿನಗಳ ವರೆಗೆ ನಿದ್ರಿಸುತ್ತಿದ್ದ ಚ್ಯವನನ ಕಾಲನ್ನು ಒತ್ತಿದುದು (ಶಾಂತಿ 52/34–35). ಚ್ಯವನನು ಒಮ್ಮೆಗೇ ಹೊರಟು ಹೋದುದರಿಂದ ಈತನ ಚಿಂತೆ ಮತ್ತು ಪುನಃ ಶಯ್ಯೆಯ ಮೇಲೆ ವಿರಾಜಮಾನನಾಗಿರುವುದನ್ನು ಕಂಡು ಆಶ್ಚರ್ಯ ಮತ್ತು ಆತನ ಆಜ್ಞೆಯ ಪ್ರಕಾರ ಪುನಃ ಅಷ್ಟೇ ದಿನಗಳ ತನಕ ನಿದ್ರಿಸಿದ ಮುನಿಯ ಪಾದಸೇವೆ (ಶಾಂತಿ 53/2–7). ಮುನಿಯ ಪ್ರತಿಕೂಲ ಆಚರಣೆಯಿಂದ ರಾಜ ರಾಣಿಯರು ಕ್ರೋಧಗೊಳ್ಳದಿದ್ದುದು (ಶಾಂತಿ 53/8–24). ಈ ರಾಜದಂಪತಿಗಳನ್ನು ರಥಕ್ಕೆ ಕಟ್ಟಿ, ಚಾವಟಿಯಿಂದ ಹೊಡೆದುದು. ಕೊನೆಗೆ ಮುನಿಯ ಕೃಪೆಯಿಂದ ನವಯೌವನಸಂಪನ್ನರೂ, ಸ್ವಸ್ಥರೂ ಆದುದು (ಶಾಂತಿ 53/27–63). ಚ್ಯವನನು ವರವನ್ನು ಕೇಳಲು ಹೇಳಿದಾಗ ಸಂತೋಷ ಪ್ರಕಟಿಸಿ, ನಗರಕ್ಕೆ ಹಿಂತಿರುಗಿದುದು (ಅನು 53/59–65). ಮರುದಿನ ಮುನಿಯ ಬಳಿಗೆ ಹೋಗಿ ಅದ್ಭುತವಾದ ಸ್ವರ್ಗೀಯ ದೃಶ್ಯವನ್ನು ನೋಡಿದುದು (ಅನು 54/2–25). ರಾಣಿಯು ಮುನಿಯ ಪ್ರಶಂಸೆ ಮಾಡಿದುದು (ಅನು 54/26–31). ಚ್ಯವನನು ವರಕೇಳಲು ಹೇಳಿದಾಗ ಸಂತೋಷ ಪ್ರಕಟಿಸಿದುದು (ಅನು 54/38–42). ತನ್ನಲ್ಲಿದ್ದ ಕಾರಣವನ್ನೂ, ಪರೀ

ಕ್ಷಿಸಿದ ಕಷ್ಟಗಳ ವಿಷಯವನ್ನೂ ಚ್ಯವನಮುನಿಯೊಡನೆ ಕೇಳಿದುದು (ಅನು 55/2–9). ಚ್ಯವನನೊಡನೆ ವರ ಕೇಳಿದುದು (ಅನು 55/18; 55/35). ತನ್ನ ಮೊಮ್ಮಗನ ಬ್ರಾಹ್ಮಣತ್ವದ ಕುರಿತಾಗಿ ಕೇಳಿದುದು (ಅನು 55/36–37).

(2) ಒಬ್ಬ ವನವಾಸಿ ಋಷಿ. ಸರ್ಪವಿಷದಿಂದ ಸತ್ತ ಪ್ರಮದ್ವರೆಯನ್ನು ನೋಡಲು ಆತ ಹೋಗಿದ್ದನು (ಆದಿ 8/25). ಇವನು ಹಸ್ತಿನಾವತಿಗೆ ಹೋಗುವ ಶ್ರೀಕೃಷ್ಣನನ್ನು ಮಾರ್ಗದಲ್ಲಿ ಸಂಧಿಸಿದ್ದನು (ಉದ್ಯೋಗ 83/27).

**ಕುಶಿಕಾಶ್ರಮ** – ಕೋಶೀನದಿಯ ಹತ್ತಿರವಿರುವ, ತೀರ್ಥಭೂತವಾದ ಒಂದು ಆಶ್ರಮದ ಹೆಸರು (ವನ 84/131).

**ಕುಶೇಶಯ** – ಕುಶದ್ವೀಪದ ಆರು ಶ್ರೇಷ್ಠ ಪರ್ವತಗಳಲ್ಲಿ ಒಂದು (ಭೀಷ್ಮ 12/10–11).

**ಕುಸುಮ** – ಧಾತಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದುಮಂದಿ ಪಾರ್ಷದರಲ್ಲಿ ಒಬ್ಬ (ಶಲ್ಯ 45/39).

**ಕುಸುಂಭಿ** – ದ್ವಾರಕೆಯ ಸಮೀಪವಿರುವ ಒಂದು ವನ (ಸಭಾ 38/29).

**ಕುಸ್ತುಂಬುರು** – ಕುಬೇರನ ಸಭೆಯ ಒಂದು ಪಿಶಾಚ (ಸಭಾ 10/16).

**ಕುಹನ** – ಸೌವೀರ ದೇಶದ ಒಬ್ಬ ರಾಜಕುಮಾರ. ಅವನು ಜಯದ್ರಥನ ಅನುಗಾಮಿಯಾಗಿದ್ದನು (ವನ 265/11).

**ಕುಹರ** – ಕಲಿಂಗದೇಶದ ಒಬ್ಬ ರಾಜ. ಅವನು ಕ್ರೋಧವಶರೆಂಬ ದೈತ್ಯರ ಅಂಶದಿಂದ ಹುಟ್ಟಿದವನು (ಆದಿ 67/65).

**ಕುಹುರ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/15).

**ಕುಹೂ** – ಮಹರ್ಷಿ ಅಂಗೀರಸನ ಎಂಟನೇ ಪುತ್ರಿ (ವನ 218/8). ಈಕೆ ಸ್ಕಂದನ ಜನ್ಮ ಸಮಯದಲ್ಲಿ ಬಂದಿದ್ದಳು (ಶಲ್ಯ 45/13).

**ಕೂರ್ಚಾಮುಖ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/53).

**ಕೂರ್ಮ** – ಒಬ್ಬ ಪ್ರಮುಖ ನಾಗ. ಅವನು ಕದ್ರುವಿನ ಮಗ (ಆದಿ 65/41).

**ಕೂಷ್ಮಾಂಡಕ** – ಒಬ್ಬ ಪ್ರಮುಖ ನಾಗ (ಆದಿ 35/11).

**ಕೃಕಣೇಯು** – ಪೂರುವಿನ ತೃತೀಯ ಪುತ್ರ, ರೌದ್ರಾಶ್ವನಿಂದ ಮಿಶ್ರಕೇಶಿ ಅಪ್ಸರೆಯಲ್ಲಿ ಹುಟ್ಟಿದ ಹತ್ತುಮಂದಿ ಪುತ್ರರಲ್ಲಿ ಒಬ್ಬ (ಆದಿ 94/10).

**ಕೃತ** – ಒಬ್ಬ ವಿಶ್ವೇದೇವ (ಅನು 91/31).

**ಕೃತಕ್ಷಣ** – ವಿದೇಹದೇಶದ ಒಬ್ಬ ರಾಜ. ಅವನು ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/27). ಈತ ಯುಧಿಷ್ಠಿರನಿಗೆ ಹದಿನಾಲ್ಕು ಸಾವಿರ ಕುದುರೆಗಳನ್ನು ಉಡುಗೊರೆಯಾಗಿ ಕೊಟ್ಟಿದ್ದನು (ಸಭಾ 15/7).

**ಕೃತಚೇತಾ** – ಒಬ್ಬ ಪ್ರಾಚೀನ ಋಷಿ. ಆತ ಅಜಾತಶತ್ರು ಯುಧಿಷ್ಠಿರನನ್ನು ವಿಶೇಷವಾಗಿ ಗೌರವಿಸುತ್ತಿದ್ದನು (ವನ 26/22).

**ಕೃತಬಂಧು** – ಒಬ್ಬ ಪ್ರಾಚೀನ ರಾಜ (ಆದಿ 1/238).

**ಕೃತಯುಗ** – ಹನುಮಂತನಿಂದ ಈ ಯುಗಧರ್ಮದ ವರ್ಣನೆ. (ವನ 149/11–25) ಮಾರ್ಕಂಡೇಯನಿಂದ ಇದರ ವರ್ಣನೆ (ವನ 188/22). ಕಲಿಯುಗದ ಅನಂತರ ಕಲ್ಕಿಯ ಮೂಲಕ ಇದರ ಸ್ಥಾಪನೆ (ವನ 191/1–14).

**ಕೃತವರ್ಮಾ** – ಯದುಕುಲದ ಒಳಗಿರುವ ಭೋಜ ವಂಶದ ಹೃದಿಕನ ಮಗ. ಅವನು ಶ್ರೀಕೃಷ್ಣನಿಗೆ ಪ್ರೀತಿಪಾತ್ರನೂ, ಆಜ್ಞಾಪಾಲಕನೂ ಆಗಿದ್ದನು (ಆದಿ 63/105). ಈತ ಮರುದ್ಗಣಗಳ ಅಂಶದಿಂದ ಹುಟ್ಟಿದ್ದನು (ಆದಿ 67/81). ಈತ ದ್ರೌಪದಿಸ್ವಯಂವರಕ್ಕೆ ಹೋಗಿದ್ದನು (ಆದಿ 185/18). ಇವನು ಸುಭದ್ರೆಗಾಗಿ ಉಡುಗೊರೆ ಸಾಮಗ್ರಿಗಳನ್ನು ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಹೋದನು (ಆದಿ 220/31). ಈತ ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/30). ಇವನು ವೃಷ್ಣಿವಂಶದ ಏಳು ಮಹಾರಥಿಗಳಲ್ಲಿ ಒಬ್ಬನಾಗಿದ್ದನು (ಸಭಾ 14/58). ಉಪಪ್ಲವ್ಯನಗರದಲ್ಲಿ ಅಭಿಮನ್ಯು ವಿವಾಹದಲ್ಲಿ ಉಪಸ್ಥಿತನಾಗಿದ್ದನು (ವಿರಾಟ 72/21). ಪಾಂಡವರಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/12). ದುರ್ಯೋಧನನ ಕೋರಿಕೆಯಂತೆ ಒಂದು ಅಕ್ಷೌಹಿಣಿ ಸೇನಾಸಮೇತನಾಗಿ ಸಹಕರಿಸಿದುದು (ಉದ್ಯೋಗ 7/32). ಸಾತ್ಯಕಿಯ ಅಪೇಕ್ಷೆಯಂತೆ ಶ್ರೀಕೃಷ್ಣನ ರಕ್ಷಣೆಗಾಗಿ, ಕೌರವ ಸಭೆಯ ದ್ವಾರದಲ್ಲಿ ಈತ ಸೇನಾಸಮೇತನಾಗಿ ನಿಂತದ್ದು (ಉದ್ಯೋಗ 130/10–11). ಇವನು

ಕೌರವಪಕ್ಷದ ಅತಿರಥಿ ವೀರನಾಗಿದ್ದನು (ಉದ್ಯೋಗ 165/24). ಪ್ರಥಮ ದಿನದ ಯುದ್ಧದಲ್ಲಿ ಇವನು ಸಾತ್ಯಕಿಯೊಂದಿಗೆ ದ್ವಂದ್ವಯುದ್ಧ ಮಾಡಿದನು (ಭೀಷ್ಮ 45/12–13). ಅಭಿಮನ್ಯುವಿನಿಂದ ಈತ ಗಾಯಗೊಂಡಿದ್ದನು (ಭೀಷ್ಮ 47/10). ಭೀಷ್ಮನಿಂದ ನಿರ್ಮಿಸಲ್ಪಟ್ಟ ಕ್ರೌಂಚಾರುಣವ್ಯೂಹದಲ್ಲಿ, ಮಸ್ತಕದ ಸ್ಥಾನದಲ್ಲಿ ಈತ ನಿಲ್ಲಿಸಲ್ಪಟ್ಟಿದ್ದನು (ಭೀಷ್ಮ 75/17). ಭೀಮಸೇನನಿಂದ ಈತ ಪರಾಜಿತನಾದುದು (ಭೀಷ್ಮ 82/61). ಸಾತ್ಯಕಿಯಿಂದ ಈತ ಗಾಯಗೊಂಡದ್ದು (ಭೀಷ್ಮ 82/61). ಧೃಷ್ಟದ್ಯುಮ್ನನೊಂದಿಗೆ ದ್ವಂದ್ವಯುದ್ಧ (ಭೀಷ್ಮ 104/16) ಭೀಮಸೇನ ಮತ್ತು ಅರ್ಜುನರೊಂದಿಗೆ ಯುದ್ಧ (ಭೀಷ್ಮ 113, 114) ಸಾತ್ಯಕಿಯೊಂದಿಗೆ ಯುದ್ಧ (ದ್ರೋಣ 14/35–36). ಅಭಿಮನ್ಯುವಿನ ಮೇಲೆ ಪ್ರಹಾರ ಮತ್ತು ಅವನ ಕುದುರೆಗಳನ್ನು ಕೊಂದು ಹಾಕಿದುದು (ದ್ರೋಣ 48/32). ಅಭಿಮನ್ಯುವಿನ ಮೇಲೆ ಆಕ್ರಮಣ ಮಾಡಿದ ಆರು ಮಂದಿ ಮಹಾರಥದಲ್ಲಿ ಈತನೂ ಒಬ್ಬನಾಗಿದ್ದನು (ದ್ರೋಣ 73/10). ಅರ್ಜುನನೊಂದಿಗೆ ಯುದ್ಧ ಮತ್ತು ಅವನ ಪ್ರಹಾರದಿಂದ ಈತ ಮೂರ್ಛಿತನಾದುದು (ದ್ರೋಣ 92/16–26). ಅಭಿಮನ್ಯು ಮತ್ತು ಉತ್ತಮೌಜಸರೊಂದಿಗೆ ಈತನ ಯುದ್ಧ (ದ್ರೋಣ 92/27–32). ಸಾತ್ಯಕಿಯೊಂದಿಗೆ ಯುದ್ಧ (ದ್ರೋಣ 113/46–58). ಭೀಮಸೇನನು ಮುಂದುವರಿಯದಂತೆ ತಡೆದುದು (ದ್ರೋಣ 113/64–67). ಭೀಮಸೇನ ಮತ್ತು ಶಿಖಂಡಿಯನ್ನು ಪರಾಜಯಗೊಳಿಸಿ, ಈತ ಪಾಂಡವ ಸೇನೆಯನ್ನು ಅಲ್ಲೋಲಕಲ್ಲೋಲ ಮಾಡಿದುದು (ದ್ರೋಣ 114/59–103). ಸಾತ್ಯಕಿಯಿಂದ ಇವನ ಪರಾಜಯ (ದ್ರೋಣ 115/10–11; 116/41). ಯುಧಿಷ್ಠಿರನೊಂದಿಗೆ ಯುದ್ಧ ಮತ್ತು ಅವನನ್ನು ಪರಾಜಯಗೊಳಿಸಿದುದು (ದ್ರೋಣ 165/24–40). ದ್ರೋಣನು ವಧಿಸಲ್ಪಟ್ಟಾಗ ಯುದ್ಧಕ್ಷೇತ್ರದಿಂದ ಓಡಿದುದು (ದ್ರೋಣ 193/13). ಸಾತ್ಯಕಿಯಿಂದ ಈತನ ಪರಾಜಯ (ದ್ರೋಣ 200/53). ಇವನಿಂದ ಶಿಖಂಡಿಯ ಪರಾಜಯ (ಕರ್ಣ 26/36–37). ಈತ ಧೃಷ್ಟದ್ಯುಮ್ನನಿಂದ ಮೂರ್ಛಿತನಾದುದು. (ಕರ್ಣ 54/40). ಇವನಿಂದ ಉತ್ತಮೌಜಸನ ಪರಾಜಯ (ಕರ್ಣ 61/59). ಭೀಮಸೇನನೊಂದಿಗೆ ಯುದ್ಧಮಾಡಿ ಓಡಿದುದು (ಶಲ್ಯ 11/45–47). ಸಾತ್ಯಕಿಯಿಂದ ಇವನ ಪರಾಜಯ (ಶಲ್ಯ 17/77–78; 21/29–30). ಯುಧಿಷ್ಠಿರನಿಂದ ಪರಾಜಯ (ಶಲ್ಯ 17/87). ದ್ವೈಪಾಯನ ಸರೋವರದ ಬಳಿಗೆ ಹೋಗಿ, ದುರ್ಯೋಧನನನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸಿದುದು (ಶಲ್ಯ 30/9–14). ಸೇನಾಸಹಿತನಾಗಿ ಯುಧಿಷ್ಠಿರನು ಅಲ್ಲಿಗೆ ತಲುಪಿದಾಗ ಈತ ಅಲ್ಲಿಂದ ತೊಲಗಿದುದು (ಶಲ್ಯ 30/63). ಅಶ್ವತ್ಥಾಮನ ಜೊತೆಯಲ್ಲಿ ರಾತ್ರಿ ಸೌಪ್ತಿಕ ಯುದ್ಧಕ್ಕಾಗಿ ಹೋದುದು (ಸೌಪ್ತಿಕ 5/38). ರಾತ್ರಿಯಲ್ಲಿ ಶಿಬಿರದಿಂದ ಓಡಿಹೋಗುತ್ತಿದ್ದ ಯೋಧರನ್ನು ಈತ ವಧಿಸಿದುದು (ಸೌಪ್ತಿಕ 8/106–107). ಪಾಂಡವರ ಶಿಬಿರಕ್ಕೆ ಈತ ಬೆಂಕಿ ಹಚ್ಚಿದುದು (ಸೌಪ್ತಿಕ 8/108–110). ದುರ್ಯೋಧನನು ಸತ್ತ ಸುದ್ದಿಯನ್ನು ಧೃತರಾಷ್ಟ್ರನಿಗೆ ಹೇಳಿ ಇವನು ತನ್ನ ದೇಶದ ಕಡೆಗೆ ನಡೆದುದು (ಸ್ತ್ರೀ 11/21). ಯುಧಿಷ್ಠಿರನ ಅಶ್ವಮೇಧ ಯಜ್ಞದಲ್ಲಿ ಭಾಗವಹಿಸಲು ಶ್ರೀಕೃಷ್ಣನೊಂದಿಗೆ ಕೃತವರ್ಮನ ಆಗಮನ (ಆಶ್ವ 66/3–4). ಸಾತ್ಯಕಿಯೊಂದಿಗೆ ಮೌಸಲ ಯುದ್ಧದಲ್ಲಿ ಇವನ ವಧೆ (ಮೌಸಲ 3/28). ಸ್ವರ್ಗಕ್ಕೆ ಹೋದ ಬಳಿಕ ಮರುದ್ಗಣಗಳೊಂದಿಗೆ ಇವನ ಪ್ರವೇಶ (ಸ್ವರ್ಗಾ 5/13). ಮಹಾಭಾರತದಲ್ಲಿ ಬಂದಿರುವ ಕೃತವರ್ಮನ ಹೆಸರುಗಳು – ಆನರ್ತವಾಸಿ, ಭೋಜ, ಭೋಜರಾಜ, ಹಾರ್ದಿಕ್ಯ, ಹೃದಿಕಸುತ, ಹೃದಿಕಾತ್ಮಜ, ಮಾಧವ, ಸಾತ್ವತ, ವಾರ್ಷ್ಣೇಯ, ವೃಷ್ಣಿ, ವೃಷ್ಣಿಸಿಂಹ ಇತ್ಯಾದಿ.

**ಕೃತವಾಕ್** – ಅಜಾತಶತ್ರು ಯುಧಿಷ್ಠಿರನನ್ನು ಗೌರವಿಸುವ ಒಬ್ಬ ಮಹರ್ಷಿ. (ವನ 26/24)

**ಕೃತವೀರ್ಯ** – (1) ಚಂದ್ರವಂಶದ ರಾಜ ಅಹಂಯಾತಿಯ ಮಾವ, ಭಾನುಮತಿಯ ತಂದೆ (ಆದಿ 15/15).

(2) ಭೂಮಂಡಲದ ಒಬ್ಬ ಸುಪ್ರಸಿದ್ಧ ಪ್ರಾಚೀನ ರಾಜ. ಅವನು ಕಾರ್ತವೀರ್ಯನ ತಂದೆ ಮತ್ತು ವೇದಜ್ಞರಾದ ಭೃಗುವಂಶೀಯರ ಯಜಮಾನನಾಗಿದ್ದನು (ಆದಿ 177/11). ಸೋಮಯಜ್ಞ ಮಾಡಿ ಭೃಗುವಂಶೀಯರಿಗೆ ಈತನಿಂದ ವಿಪುಲ

ಧನರಾಶಿಯ ದಾನ (ಆದಿ 177/13). ಈತ ಯಮರಾಜನ ಸಭೆಯ ಒಬ್ಬ ಸದಸ್ಯ (ಸಭಾ 8/9). ಮಾಹಿಷ್ಮತಿಯ ರಾಜ ಅರ್ಜುನ ಇದೇ ಕೃತವೀರ್ಯನ ಜ್ಯೇಷ್ಠ ಪುತ್ರನಾಗಿದ್ದನು (ಸಭಾ 38/29).

**ಕೃತವೇಗ** – ಒಬ್ಬ ಪುಣ್ಯಾತ್ಮನೂ, ಬಹುಶ್ರುತನೂ, ಆದ ರಾಜರ್ಷಿ. ಅವನು ಯಮಸಭೆಯನ್ನು ಸುಶೋಭಿತಗೊಳಿಸುತ್ತಾನೆ (ಸಭಾ 8/9).

**ಕೃತಶೌಚ** – ಕುರುಕ್ಷೇತ್ರದ ಅಂತರ್ಗತವಾದ ಒಂದು ತೀರ್ಥ. ಅಲ್ಲಿ ಹೋಗುವುದು ಮತ್ತು ತೀರ್ಥಸೇವನೆ ಮಾಡುವುದರಿಂದ ಪುಂಡರೀಕ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 83/21).

**ಕೃತಶ್ರಮ** – ಯುಧಿಷ್ಠಿರನ ಸಭೆಯಲ್ಲಿ ಕುಳಿತುಕೊಳ್ಳುವ ಒಬ್ಬ ಋಷಿ (ಸಭಾ ). ವಾನಪ್ರಸ್ಥ ಧರ್ಮಪಾಲನೆಯಿಂದ ಇವನಿಗೆ ಸ್ವರ್ಗಲೋಕ ಪ್ರಾಪ್ತಿಯಾಯಿತು (ಶಾಂತಿ 244/18).

**ಕೃತಿ** – (1) ಒಬ್ಬ ಪುಣ್ಯಾತ್ಮನೂ ಬಹುಶ್ರುತನೂ ಆದ ರಾಜರ್ಷಿ. ಅವನು ಯಮಸಭೆಗೆ ಶೋಭೆಯನ್ನೀಯುತ್ತಾನೆ (ಸಭಾ 8/9).

(2) ಒಬ್ಬ ವಿಶ್ವೇದೇವ (ಅನು 91/35).

(3) ಭಗವಂತ ವಿಷ್ಣುವಿನ ಒಂದು ಹೆಸರು (ಅನು 149/22).

**ಕೃತೀ** – ಶೂಕರ ದೇಶದ ಒಬ್ಬ ರಾಜ. ಅವನು ಯುಧಿಷ್ಠಿರನಿಗೆ ಒಂದು ನೂರು ಗಜರತ್ನಗಳ ಉಡುಗೊರೆಯನ್ನಿತ್ತಿದ್ದನು (ಸಭಾ 52/25).

**ಕೃತ್ತಿಕಾ** – (1) ಒಂದು ತೀರ್ಥ. ಇಲ್ಲಿಗೆ ಯಾತ್ರೆ ಮಾಡಿದರೆ ಅತಿರಾತ್ರಿ ಯಾಗದ ಫಲಸಿಗುತ್ತದೆ (ವನ 84/51).

(2) ಕೃತ್ತಿಕೆಯರು ಆರು ಮಂದಿ. ತಮ್ಮನ್ನು ಮಾತೆಯರಾಗಿ ಸ್ವೀಕರಿಸಬೇಕೆಂದು ಸ್ಕಂದನಿಗೆ ಇವರ ಒತ್ತಾಯ (ವನ 230/5). ಇವರಿಗೆ ನಕ್ಷತ್ರ ಮಂಡಲದಲ್ಲಿ ಸ್ಥಾನಪ್ರಾಪ್ತಿ (ವನ 230/11). ಕೃತ್ತಿಕಾ ನಕ್ಷತ್ರದಲ್ಲಿ ದಾನ ಕೊಟ್ಟದ್ದರ ಫಲ (ಅನು 64/5).

**ಕೃತ್ತಿಕಾಂಗಾರಕ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿ ಒಂದು ಪಕ್ಷದ ತನಕ ನಿರಾಹಾರನಾಗಿರುವವ ನಿಷ್ಪಾಪನಾಗಿ ಸ್ವರ್ಗಕ್ಕೆ ಹೋಗುತ್ತಾನೆ (ಅನು 25/22–26).

**ಕೃತ್ತಿಕಾಶ್ರಮ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿ ಪಿತೃಗಳಿಗೆ ತರ್ಪಣ ಕೊಡುವವನು ಮತ್ತು ಮಹಾದೇವನನ್ನು ಸಂತುಷ್ಟಗೊಳಿಸುವ ಪುರುಷ ಪಾಪಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ. (ಅನು 25/25).

**ಕೃತ್ಯಾ** – (1) ದೈತ್ಯರಿಂದ ಆಭಿಚಾರಿಕ ಯಜ್ಞದ ಮೂಲಕ ಉತ್ಪನ್ನಗೊಳಸಲ್ಪಟ್ಟ ಒಬ್ಬ ರಾಕ್ಷಸಿ. ಅವಳು ಆಮರಣ ಉಪವಾಸಕ್ಕೆ ಕುಳಿತ ದುರ್ಯೋಧನನನ್ನು ಕಾಡಿನಿಂದ ಎತ್ತಿ, ರಸಾತಲಕ್ಕೆ ಕೊಂಡುಹೋಗಿದ್ದಳು (ವನ 252/21–29).

(2) ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ. (ಭೀಷ್ಮ 9/18)

**ಕೃತ್ರಿಮ** – ಒಂದು ರೀತಿಯ 'ಅಬಂಧು ದಾಯಾದಪುತ್ರ' ('ನಾನು ತಮ್ಮ ಪುತ್ರನಾಗಿದ್ದೇನೆ' ಎಂದು ಹೇಳಿ ಸ್ವತಃ ಸಮೀಪಕ್ಕೆ ಬಂದವನು) (ಆದಿ 119/34).

**ಕೃಪ** – ಒಬ್ಬ ಪ್ರಾಚೀನ ರಾಜ. ಅವನು ಎಂದೂ ಮಾಂಸ ತಿಂದಿರಲಿಲ್ಲ (ಅನು 115/64).

**ಕೃಪಾಚಾರ್ಯ** – ಯಾವುದೋ ಸಂದರ್ಭದಲ್ಲಿ ಗೌತಮಗೋತ್ರದ ಶರದ್ವಂತನ ವೀರ್ಯ ನೊದೆಯ ಸಮೂಹದ ಮೇಲೆ ಬಿದ್ದಿತು ಮತ್ತು ಎರಡು ವಿಭಾಗವಾಯಿತು. ಅದರಿಂದಲೇ ಒಬ್ಬ ಪುತ್ರ ಮತ್ತು ಒಬ್ಬ ಪುತ್ರಿಯ ಜನನವಾಯಿತು. ಕನ್ಯೆಯ ಹೆಸರು ಕೃಪೀ ಎಂದಾಯಿತು. ಪುತ್ರನ ಹೆಸರು ಮಹಾಬಲಿ ಕೃಪನೆಂಬ ಹೆಸರಿನಿಂದ ಪ್ರಸಿದ್ಧವಾಯಿತು (ಆದಿ 63/107). ಈತ ರುದ್ರ ಗಣದ ಅಂಶಾವತಾರನು ಮತ್ತು ಅತ್ಯಂತ ಪುರು ಷಾರ್ಥಿಯಾಗಿದ್ದನು (ಆದಿ 67/77). 'ಜಾನಪದಿ' ಎಂಬ ಹೆಸರಿನ ಅಪ್ಸರೆಯ ದರ್ಶನದಿಂದ, ನೊದೆಯ ಮೇಲೆ ಸ್ಖಲಿತವಾದ ಮಹರ್ಷಿ ಶರದ್ವಂತನ ಎರಡು ಭಾಗವಾದ ವೀರ್ಯದಿಂದ, ಒಬ್ಬ ಪುತ್ರ ಮತ್ತು ಒಬ್ಬ ಕನ್ಯೆಯ ಉತ್ಪತ್ತಿಯಾಯಿತು (ಆದಿ 129/6–14). ಕಾಡಿಗೆ ಬೇಟೆಗಾಗಿ ಬಂದ ಮಹಾರಾಜ ಶಾಂತನು ಈತನನ್ನು ನೋಡಿದುದು, ಕೃಪಾದೃಷ್ಟಿಯಿಂದ ಈತನನ್ನು ತಂದು ಪಾಲನೆ ಘೋಷಣೆ ಮತ್ತು ಎಲ್ಲಾ ಸಂಸ್ಕಾರಗಳನ್ನು ಮಾಡಿದುದು (ಆದಿ

129/15–18). ಈತನಿಗೆ ಕೃಪನೆಂದು ಹೆಸರಾಗಲು ಕಾರಣ (ಆದಿ 129/20). ಶರದ್ವಂತನು ಈತನಿಗೆ ಇವನ ಕುಲಗೋತ್ರಗಳ ಕುರಿತು ಗುಪ್ತವಾಗಿ ಪರಿಚಯ ಕೊಟ್ಟು. ಎಲ್ಲಾ ಶಾಸ್ತ್ರಗಳ ಉಪದೇಶ ಮಾಡಿದುದು (ಆದಿ 129/21–22). ಈತ ಧನುರ್ವೇದದ ಪರಮಚಾರ್ಯನಾದನು (ಆದಿ 129/22). ಈತನಿಂದ ಕೌರವ ಪಾಂಡವರು ಮತ್ತು ಯಾದವರು ಧನುರ್ವೇದಾಭ್ಯಾಸ ಮಾಡಿದುದು (ಆದಿ 129/23). ರಂಗಭೂಮಿಯಲ್ಲಿ ಅರ್ಜುನನ ಮೇಲೆ ಆಕ್ಷೇಪ ಮಾಡುತ್ತಿದ್ದಾಗ, ಈತ ಕರ್ಣನೊಡನೆ ಅವನ ಕುಲದ ಪರಿಚಯ ಕೇಳಿದುದು (ಆದಿ 135/32). ಈತ ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಉಪಸ್ಥಿತನಾಗಿದ್ದನು (ಸಭಾ 34/8). ಧನದ ಮೇಲ್ವಿಚಾರಣೆ ಮತ್ತು ದಕ್ಷಿಣೆಯ ವಿತರಣಾ ಕೆಲಸಕ್ಕೆ ನಿಯುಕ್ತನಾಗಿದ್ದನು (ಸಭಾ 35/7). ಪಾಂಡವರ ಅನ್ವೇಷಣೆಮಾಡಲು ಈತ ಸಲಹೆ ಕೊಟ್ಟದ್ದು (ವಿರಾಟ 29/1–14). ಕರ್ಣನನ್ನು ನಿಂದಿಸುತ್ತಾ ಯುದ್ಧದ ಕುರಿತು ತನ್ನ ಅಭಿಪ್ರಾಯ ಪ್ರಕಟಿಸಿದುದು (ವಿರಾಟ 49). ಅರ್ಜುನನಿಂದ ಗಾಯಗೊಂಡಾಗ, ಕೌರವರು ಈತನನ್ನು ಬೇರೆಡೆಗೆ ಸಾಗಿಸಿದುದು (ವಿರಾಟ 57/43). ಎರಡು ತಿಂಗಳುಗಳಲ್ಲಿ ಪಾಂಡವ ಸೇನೆಯನ್ನು, ನಷ್ಟಪಡಿಸಬಹುದಾದ ತನ್ನ ಶಕ್ತಿಯನ್ನು ದುರ್ಯೋಧನನಿಗೆ ವರ್ಣಿಸಿದುದು (ವಿರಾಟ 193/19). ಯುಧಿಷ್ಠಿರನಿಗೆ ಆಜ್ಞೆಯನ್ನಿತ್ತು. ತಾನು ಅವಧ್ಯನೆಂದು ತಿಳಿಸಿದುದು. (ಭೀಷ್ಮ 43/70–75). ಪ್ರಥಮ ದಿನದ ಯುದ್ಧದಲ್ಲಿ ಬೃಹತ್ಕ್ಷತ್ರನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/52–54). ಚೇಕಿತಾನನಿಂದ ಈತ ಮೂರ್ಛಿತನಾದುದು (ಭೀಷ್ಮ 84/31). ಸಾತ್ಯಕಿಯನ್ನು ಗಾಯಗೊಳಿಸಿದುದು (ಭೀಷ್ಮ 101/40–41). ಸಹದೇವನೊಂದಿಗೆ ದ್ವಂದ್ವಯುದ್ಧ ಮಾಡಿದುದು (ಭೀಷ್ಮ 110/12–13; 111/28–33). ಭೀಮಸೇನ ಮತ್ತು ಅರ್ಜುನನೊಂದಿಗೆ ಯುದ್ಧ (ಭೀಷ್ಮ 113, 114). ಧೃಷ್ಟಕೇತುವಿನೊಂದಿಗೆ ಯುದ್ಧ (ದ್ರೋಣ 14/33–34) ವಾರ್ಧಕ್ಷೇಮಿಯೊಂದಿಗೆ ಯುದ್ಧ (ದ್ರೋಣ 25/51–52). ಅಭಿಮನ್ಯುವಿನ ಪಾರ್ಶ್ವ ರಕ್ಷಕರ ವಧೆ ಮಾಡಿದುದು (ದ್ರೋಣ 48/32). ಇವನ ಧ್ವಜದ ವರ್ಣನೆ (ದ್ರೋಣ 105/14–16). ಅರ್ಜುನನೊಂದಿಗೆ ಯುದ್ಧ (ದ್ರೋಣ 145). ಅರ್ಜುನನೊಂದಿಗೆ ಯುದ್ಧದಲ್ಲಿ ಮೂರ್ಛಿತನಾದುದು (ದ್ರೋಣ 147/9). ಕರ್ಣನನ್ನು ನಿಂದಿಸಿದುದು (ದ್ರೋಣ 158/13–23). ದುರ್ಯೋಧನನು ಅರ್ಜುನನೊಂದಿಗೆ ಯುದ್ಧಕ್ಕೆ ಹೋಗುವುದನ್ನು ತಡೆಯುವಂತೆ, ಅಶ್ವತ್ಥಾಮನಿಗೆ ಹೇಳಿದುದು (ದ್ರೋಣ 159/77–82). ಇವನಿಂದ ಶಿಖಂಡಿಯ ಪರಾಜಯ (ದ್ರೋಣ169/32). ದ್ರೋಣಾಚಾರ್ಯನು ಕೊಲ್ಲಲ್ಪಟ್ಟಾಗ ಯುದ್ಧಕ್ಷೇತ್ರನಿಂದ ಓಡಿದುದು (ದ್ರೋಣ 193/12) ಅಶ್ವತ್ಥಾಮನೊಡನೆ ದ್ರೋಣವಧೆಯ ವೃತ್ತಾಂತವನ್ನು ತಿಳಿಸಿದುದು (ದ್ರೋಣ 193/37–67). ಸಾತ್ಯಕಿಯಿಂದ ಪರಾಜಯ (ದ್ರೋಣ 200/53). ಈತನಿಂದ ಶಿಖಂಡಿಯ ಪರಾಜಯ (ಕರ್ಣ 54/23). ಚಿತ್ರಕೇತುವಿನ ಪುತ್ರ ಸುಕೇತುವಿನ ವಧೆ (ಕರ್ಣ 54/28). ಯುಧಾಮನ್ಯುವನ್ನು ಸೋಲಿಸಿದುದು (ಕರ್ಣ 61/55–56). ಈತನಿಂದ ಕುಲಿಂದ ರಾಜಕುಮಾರನ ವಧೆ (ಕರ್ಣ 85/6). ಸಂಧಿಗೆ ಒಡಂಬಡುವಂತೆ ದುರ್ಯೋಧನನಿಗೆ ತಿಳಿಸಿದುದು (ಶಲ್ಯ 4). ದ್ವೈಪಾಯಾನ ಸರೋವರಕ್ಕೆ ಹೋಗಿ, ದುರ್ಯೋಧನನನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದುದು (ಶಲ್ಯ ). ಸೇನಾಸಹಿತನಾಗಿ ಯುಧಿಷ್ಠಿರನು ಬಂದುದರಿಂದ ಈತ ಅಲ್ಲಿಂದ ದೂರಸರಿದುದು (ಶಲ್ಯ 30/9–14). ದುರ್ಯೋಧನನ ಹೇಳಿಕೆಯಂತೆ, ಅಶ್ವತ್ಥಾಮನನ್ನು ಸೇನಾಪತಿ ಹುದ್ದೆಯಲ್ಲಿ ಅಭಿಷಿಕ್ತನಾಗುವಂತೆ ಮಾಡಿದುದು (ಶಲ್ಯ 65/43). ದೈವದ ಪ್ರಾಬಲ್ಯವನ್ನು ತಿಳಿಸುತ್ತಾ, ಸತ್ಪುರುಷರ ಸಲಹೆಯನ್ನು ಸ್ವೀಕರಿಸುವಂತೆ ಅಶ್ವತ್ಥಾಮನಿಗೆ ತಿಳಿಸಿದುದು (ಸೌಪ್ತಿಕ 2). ಪ್ರಾತಃಕಾಲ ಯುದ್ಧ ಮಾಡುವಂತೆ ಅಶ್ವತ್ಥಾಮನಿಗೆ ತಿಳಿಸಿದುದು (ಸೌಪ್ತಿಕ 4/1–20; 5/1–17). ಅಶ್ವತ್ಥಾಮನೊಂದಿಗೆ ರಾತ್ರಿಯಲ್ಲಿ ಯುದ್ಧಕ್ಕೆ ಹೋದುದು (ಸೌಪ್ತಿಕ 5/38). ಪಾಂಡವ ಶಿಬಿರದಿಂದ ಓಡುತ್ತಿದ್ದ ಯೋಧರನ್ನು ಈತ ವಧಿಸಿದುದು (ಸೌಪ್ತಿಕ 8/106–107). ದುರ್ಯೋಧನನ ಅವಸ್ಥೆಯನ್ನು ನೋಡಿ ವಿಲಪಿಸಿದುದು (ಸೌಪ್ತಿಕ 9/10–17). ಧೃತರಾಷ್ಟ್ರ ಮತ್ತು ಗಾಂಧಾರಿಗೆ ಕೌರವ

ಪಾಂಡವರ ವಿನಾಶದ ಸೂಚನೆಯನ್ನಿತ್ತದು. (ಸ್ತ್ರೀ 11/5–17). ಸಮಾಚಾರ ತಿಳಿಸಿ ಹಸ್ತಿನಾವತಿಯ ಕಡೆಗೆ ಹೋದುದು (ಸ್ತ್ರೀ 11/21). ಈತನಿಗೆ ದ್ರೋಣಾಚಾರ್ಯರಿಂದ ಖಡ್ಗವಿದ್ಯೆ ಪ್ರಾಪ್ತವಾದ ಪ್ರಸಂಗ (ಶಾಂತಿ 166/81). ತಪಸ್ಸಿನಿಂದ ಸಿದ್ಧಿ ಮತ್ತು ಪ್ರತಿಷ್ಠೆಯನ್ನು ಪಡೆದ ಜನರಲ್ಲಿ ಇವನ ಹೆಸರೂ ಇದೆ (ಶಾಂತಿ 296/14). ಕಾಡಿಗೆ ಹೋಗುವಾಗ ಧೃತರಾಷ್ಟ್ರನು ಕೃಪಾಚಾರ್ಯನನ್ನು ಯುಧಿಷ್ಠಿರನಿಗೆ ಒಪ್ಪಿಸಿ, ತನ್ನೊಂದಿಗೆ ಅರಣ್ಯಕ್ಕೆ ಬಾರದಂತೆ ತಡೆದು, ಹಿಂತಿರುಗಿಸಿದುದು (ಆಶ್ರಮ 16/5). ಮಹಾಪ್ರಸ್ಥಾನಕ್ಕೆ ಮೊದಲು, ಯುಧಿಷ್ಠಿರನು ಕೃಪಾಚಾರ್ಯನನ್ನು ಪೂಜಿಸಿ, ಈತನಿಗೆ ಪರೀಕ್ಷಿತನನ್ನು ಶಿಷ್ಯರೂಪದಿಂದ ಅರ್ಪಿಸಿದನು (ಮಹಾಪ್ರಸ್ಥಾನ 1/14–15). ಮಹಾಭಾರತದಲ್ಲಿ ಬಂದಿರುವ ಕೃಪಾಚಾರ್ಯನ ಹೆಸರುಗಳು – ಆಚಾರ್ಯ, ಆಚಾರ್ಯಸತ್ತಮ, ಭಾರತಾಚಾರ್ಯ, ಬ್ರಹ್ಮರ್ಷಿ, ಶಾರದ್ವತ, ಶರದ್ವತಸುತ, ಗೌತಮ – ಇತ್ಯಾದಿ.

**ಕೃಪೀ** – ಶರದ್ವಂತ ಋಷಿಯ ಮಗಳು. ಕೃಪಾಚಾರ್ಯನ ಸೋದರಿ. ದ್ರೋಣಾಚಾರ್ಯನ ಪತ್ನಿ ಮತ್ತು ಅಶ್ವತ್ಥಾಮನ ತಾಯಿ (ಆದಿ 63/107–108). ಶಾಂತನುವಿನ ಮೂಲಕ ಈಕೆಯ ಪಾಲನೆ ಪೋಷಣೆ ಮತ್ತು ಸಮಸ್ತ ಸಂಸ್ಕಾರ (ಆದಿ 129/18). ದ್ರೋಣಾಚಾರ್ಯನು ಈಕೆಯನ್ನು ಧರ್ಮಪತ್ನಿಯಾಗಿ ಸ್ವೀಕರಿಸಿದುದು. (ಆದಿ 129/46) ಈಕೆ ಮೃತ ದ್ರೋಣಾಚಾರ್ಯನಿಗಾಗಿ ದುಃಖಿಸಿದುದು (ಸ್ತ್ರೀ 23/34–37). ಮಹಾಭಾರತದಲ್ಲಿ ಬಂದಿರುವ ಈಕೆಯ ಹೆಸರುಗಳು – ಶಾರದ್ವತಿ, ಕೃಪೀ, ಗೌತಮೀ ಇತ್ಯಾದಿ.

**ಕೃಮಿ** – (1) ಒಂದು ಕ್ಷತ್ರಿಯ ಕುಲ (ಉದ್ಯೋಗ 74/13).

(2) ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/17).

**ಕೃಶ** – (1) ಶೃಂಗೀ ಋಷಿಯ ಒಬ್ಬ ಮಿತ್ರ. ಅವನು ಧರ್ಮಕ್ಕೋಸ್ಕರವಾಗಿ ಕಷ್ಟವನ್ನನುಭವಿಸಿದುದರಿಂದ ಸದಾ ಕೃಶನಾಗಿರುತ್ತಿದ್ದನು (ಆದಿ 40/27–28). ಈತ ಶೃಂಗೀ ಋಷಿಯನ್ನು ಉತ್ತೇಜಿಸಿದುದು (ಆದಿ 40/29–32). ಈತ ಶೃಂಗೀ ಋಷಿಗೆ, ಆತನ ತಂದೆಯ ಕಂಠದ ಮೇಲೆ ಪರೀಕ್ಷಿತ ರಾಜನು ಸರ್ಪವನ್ನು ಹಾಕಿದ ಸಮಾಚಾರ ತಿಳಿಸಿದುದು (ಆದಿ 41/5–9).

(2) ಐರಾವತ ಕುಲೋತ್ಪನ್ನವಾದ ಒಂದು ನಾಗ. ಅದು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧವಾಗಿತ್ತು (ಆದಿ 57/11).

(3) ಒಬ್ಬ ದಿವ್ಯಮಹರ್ಷಿ. ಈತ ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/7).

**ಕೃಶಕ** – ಒಬ್ಬ ಕಶ್ಯಪವಂಶದ ನಾಗ (ಉದ್ಯೋಗ 103/15).

**ಕೃಶಾಶ್ವ** – ಯಮನ ಸಭೆಯಲ್ಲಿದ್ದು, ಧರ್ಮರಾಜನ ಉಪಾಸನೆ ಮಾಡುತ್ತಿರುವ ಒಬ್ಬ ರಾಜ (ಸಭಾ 8/17). ಉತ್ತರಗೋಗ್ರಹಣದ ಸಮಯದಲ್ಲಿ ಈತ ಕೃಪಾಚಾರ್ಯ ಮತ್ತು ಇತರ ಕೌರವ ವೀರರೊಡನೆ ಅರ್ಜುನನ ಯುದ್ಧವನ್ನು ನೋಡಲು, ಇಂದ್ರನ ವಿಮಾನವನ್ನೇರಿ ಬಂದಿದ್ದನು (ಸಭಾ 56/10). ಪ್ರಾತಃ ಸಾಯಂ ಸಮಯಗಳಲ್ಲಿ ಈತನ ಸ್ಮರಣೆ, ಕೀರ್ತನೆ ಮಾಡುವ ಮನುಷ್ಯ ಧರ್ಮಫಲದ ಹಕ್ಕುದಾರನಾಗುತ್ತಾನೆ (ಅನು 165/49).

**ಕೃಷೀವಲ** – ಇಂದ್ರನ ಸಭೆಯಲ್ಲಿ ಕುಳಿತು ಅವನ ಉಪಾಸನೆ ಮಾಡುವ ಒಬ್ಬ ಪ್ರಾಚೀನ ಮಹರ್ಷಿ (ಸಭಾ 7/13).

**ಕೃಷ್ಣ** – (1) ಸತ್ಯವತಿ ಪುತ್ರ ದ್ವೈಪಾಯನ ವ್ಯಾಸ. ಅವನ ಶರೀರದ ವರ್ಣ ಕಪ್ಪಾದುದರಿಂದ ಜನರು 'ಕೃಷ್ಣ'ನೆಂದೂ ಕರೆಯುತ್ತಿದ್ದರು (ಆದಿ 104/15) (ನೋಡಿರಿ – ವ್ಯಾಸ).

(2) ಒಂದು ನಾಗ. ಅವನು ವರುಣ ಸಭೆಯಲ್ಲಿದ್ದುಕೊಂಡು ವರುಣನ ಉಪಾಸನೆ ಮಾಡುತ್ತಾನೆ (ಸಭಾ 9/8).

(3) ಅರ್ಜುನನ ಒಂದು ಹೆಸರು (ವಿರಾಟ 44/22).

(4) ಸ್ಕಂದನ ಒಬ್ಬ ಸೈನಿಕ (ಶಲ್ಯ 45/57).

(5) ಒಬ್ಬ ಮಹರ್ಷಿ. ಈತ ಉತ್ತರಾಯಾಣದ ಆರಂಭದಲ್ಲಿ ಶರಶಯ್ಯಾಶಾಯಿಯಾಗಿದ್ದ ಭೀಷ್ಮನನ್ನು ನೋಡಲು ಆಗಮಿಸಿದ್ದನು (ಶಾಂತಿ 47/12).

(6) ಶಿವನ ಒಂದು ಹೆಸರು. (ಅನು 17/45).

(7) ವಿಷ್ಣುವಿನ ಒಂದು ಹೆಸರು. (ಅನು 149/72).

(8) ಈತ ನಾರಾಯಣ ಸ್ವರೂಪನು. ಇವನನ್ನು ವಂದಿಸಿ ಮಹಾಭಾರತ ವಾಚನ (ಪಾಠ) ಮಾಡುವ ವಿಧಾನ (ಆದಿ 1 ಮಂಗಲಾಚರಣ 1). ಈ ಶ್ರೀಕೃಷ್ಣನೇ ಧರ್ಮಮಯ ವೃಕ್ಷದ ಮೂಲನು. (ಆದಿ 1/111). ವಿಶ್ವವಂದಿತನೂ, ಮಹಾಯಶಸ್ವಿಯೂ ಆದ ವಿಷ್ಣು ಭಗವಂತನು ಜಗತ್ತಿನ ಜೀವಗಳ ಮೇಲೆ ಅನುಗ್ರಹ ಮಾಡುವುದಕ್ಕಾಗಿ, ವಸುದೇವನ ಮೂಲಕ ದೇವಕಿಯ ಗರ್ಭದಿಂದ ಪ್ರಕಟವಾದನು (ಆದಿ 63/99). ಆದಿ, ಅಂತ ರಹಿತನೂ, ಸರ್ವರ ಆತ್ಮನೂ, ಅವ್ಯಯನೂ, ಅನಂತನೂ, ಅಚಲನೂ, ಅಜನ್ಮನೂ, ನಾರಾಯಣ ಸ್ವರೂಪನೂ, ಅನಾದಿಯೂ, ಸರ್ವವ್ಯಾಪಿಯೂ, ಪರಮಪುರುಷನೂ, ಪೂರ್ಣ ಸ್ವರೂಪ ಪರಮಾತ್ಮನೇ ಧರ್ಮದ ವೃದ್ಧಿಗಾಗಿ, ಅಂಧಕ ಮತ್ತು ವೃಷ್ಣಿಕುಲದಲ್ಲಿ ಬಲರಾಮ ಮತ್ತು ಶ್ರೀಕೃಷ್ಣ ರೂಪದಿಂದ ಅವತಾರವೆತ್ತಿದನು (ಆದಿ 63/100–104). ಎಲ್ಲ ದೇವತೆಗಳಿಂದಲೂ, ಇಂದ್ರನಿಂದಲೂ ಶ್ರೀಹರಿಯೊಡನೆ ಅವತಾರವನ್ನೆತ್ತಲು ಪ್ರಾರ್ಥನೆ ಮತ್ತು ಆ ಪ್ರಾರ್ಥನೆಯನ್ನು ಭಗವಂತನು ಸ್ವೀಕರಿಸಿದುದು (ಆದಿ 64/51–54). ದೇವತೆಗಳಿಗೂ ದೇವತೆಯಾದ, ಸನಾತನ ಪುರುಷ, ನಾರಾಯಣನ ಅಂಶ ಸ್ವರೂಪ, ಪ್ರತಾಪಿಯಾದ ವಸುದೇವನಂದನ, ಶ್ರೀಕೃಷ್ಣ ಮನುಷ್ಯರಲ್ಲಿ ಅವತಾರವೆತ್ತಿದನು (ಆದಿ 67/51). ತನ್ನ ಶ್ಯಾಮ ಮತ್ತು ಶ್ವೇತ ಕೇಶಗಳ ದ್ವಾರ ವನ್ನಿಟ್ಟುಕೊಂಡು, ಸಚ್ಚಿದಾನಂದನಾದ ನಾರಾಯಣನು ತನ್ನನ್ನು ಪೂರ್ಣ ಪುರುಷೋತ್ತಮ ಶ್ರೀಕೃಷ್ಣ ರೂಪದಿಂದ ಪ್ರಕಟಗೊಳಿಸಿದನು. (ಆದಿ 196/32–33) ವೃಷ್ಣಿ ವಂಶಜರ ಜೊತೆಯಲ್ಲಿ ಈತ ದ್ರೌಪದಿ ಸ್ವಯಂವರಕ್ಕೆ ಆಗಮಿಸಿದುದು (ಆದಿ 185/16–20). ಸ್ವಯಂವರಕ್ಕೆ ಬಂದಿದ್ದ ಬ್ರಾಹ್ಮಣ ವೇಷಧಾರಿ ಪಾಂಡವರನ್ನು ಈತ ಗುರುತಿಸಿದುದು ಮತ್ತು ಬಲರಾಮನಿಗೆ ಸಂಕೇತಗಳ ಮೂಲಕ ತಿಳಿಸಿದುದು (ಆದಿ 186/8–10). ದ್ರೌಪದಿಸ್ವಯಂವರದಲ್ಲಿ ಭೀಮಾರ್ಜುನ ಕುರಿತು ಬಲರಾಮನೊಡನೆ ಮಾತುಕತೆ (ಆದಿ 188/20–23). ಪಾಂಡವರ ಭೇಟಿ ಮಾಡಲು ಬಲರಾಮ ಸಹಿತನಾಗಿ ಈತ ಕುಂಬಾರನ ಮನೆಗೆ ಆಗಮಿಸಿದುದು (ಆದಿ 190/18). ದ್ರೌಪದಿ ವಿವಾಹ ಸಂದರ್ಭದಲ್ಲಿ, ಪಾಂಡವರಿಗೆ ಇವನಿಂದ ವಿವಿಧ ಉಪಹಾರಗಳ ಕೊಡುಗೆ (ಆದಿ 198/13–19). ಪಾಂಡವರು ದ್ರುಪದ ನಗರದಿಂದ ಹಸ್ತಿನಾಪುರಕ್ಕೆ ಹೋಗಲು ಇವರ ಸಮ್ಮತಿ (ಆದಿ 206/6). ಪಾಂಡವರ ನಿವಾಸಕ್ಕಾಗಿ ದಿವ್ಯ ನಗರ ನಿರ್ಮಾಣಕ್ಕಾಗಿ, ಈತನಿಂದ ಇಂದ್ರನಿಗೆ ಪ್ರೇರಣೆ (ಆದಿ 206/28). ಪ್ರಭಾಸ ಕ್ಷೇತ್ರದಲ್ಲಿ ಅರ್ಜುನನೊಡನೆ ಈತನ ಭೇಟಿ ಮತ್ತು ರೈವತಕ ಪರ್ವತದ ಮೇಲೆ ವಿಶ್ರಾಂತಿ (ಆದಿ 217/3–8). ಅರ್ಜುನನ ಸುಭದ್ರಾಹರಣಕ್ಕೆ ಇವನ ಸಮ್ಮತಿ (ಆದಿ 218/23). ಸುಭದ್ರಾಹರಣದಿಂದ ಕುಪಿತರಾದ ವೃಷ್ಣಿ ವಂಶಜರಿಗೆ ಇವನ ಸಮಾಧಾನ (ಆದಿ 220/1–11). ವರದಕ್ಷಿಣೆಯ ರೂಪದಲ್ಲಿ ಅಪಾರ ಧನರಾಶಿಯನ್ನು ತೆಗೆದುಕೊಂಡು, ಇಂದ್ರಪ್ರಸ್ಥಕ್ಕೆ ಈತನ ಆಗಮನ ಮತ್ತು ಕೊಡುಗೆಯ ಸಮರ್ಪಣೆ (ಆದಿ 220/27–52). ಅರ್ಜುನನೊಂದಿಗೆ ಈತನಿಂದ ಯಮುನಾಜಲ ವಿಹಾರ (ಆದಿ 22/14–20). ಖಾಂಡವವನ ದಹನಕ್ಕಾಗಿ ಈತನಲ್ಲಿ ಅಗ್ನಿಯ ಪ್ರಾರ್ಥನೆ (ಆದಿ 222/2–11). ಅಗ್ನಿಯಿಂದ ಈತನಿಗೆ ದಿವ್ಯಚಕ್ರದ ದಾನ (ಆದಿ 224/23). ವರುಣನ ಮೂಲಕ ಈತನಿಗೆ ಕೌಮೋದಕಿ ಗದೆಯ ಕೊಡುಗೆ (ಆದಿ 224/28). ಖಾಂಡವವನ ದಹನ ಕಾಲದಲ್ಲಿ ಇಂದ್ರನೇ ಮೊದಲಾದ ದೇವತೆಗಳೊಡನೆ ಈತನ ಯುದ್ಧ (ಆದಿ 226). ಅರ್ಜುನನು ಅಭಯದಾನ ಕೊಟ್ಟದ್ದರಿಂದ ಈತನು ಮಯಾಸುರನಿಗೆ ಜೀವದಾನವಿತ್ತದ್ದು (ಆದಿ 227/44–45). ಅರ್ಜುನನೊಡನೆ ನಿರಂತರ ಪ್ರೇಮವೃದ್ಧಿಗಾಗಿ ಈತ ಇಂದ್ರನೊಡನೆ ವರ ಯಾಚಿಸಿದುದು (ಆದಿ 233/13). ಸಭಾಭವನ ನಿರ್ಮಾಣಮಾಡುವಂತೆ ಮಯಾಸುರನಿಗೆ ಈತನ ಆಜ್ಞೆ (ಸಭಾ 10/13). ಇವನ ದ್ವಾರಕಾಯಾತ್ರೆ (ಸಭಾ 2). ಈ ಭಗವಾನ್ ವಾಸುದೇವನು ಬಿಂದು ಸರೋವರದಲ್ಲಿ ಧರ್ಮಪರಂಪರೆಯ ರಕ್ಷಣೆಗಾಗಿ, ಅನೇಕ ವರ್ಷಗಳ ವರೆಗೆ ನಿರಂತರ ಶ್ರದ್ಧಾಪೂರ್ವಕ ಯಜ್ಞಮಾಡಿದ್ದನು. (ಸಭಾ 3/16). ರಾಜಸೂಯ ಯಜ್ಞಮಾಡುವಂತೆ ಯುಧಿಷ್ಠಿರನಿಗೆ ಇವನ ಸಮ್ಮತಿ (ಸಭಾ 14). ಜರಾಸಂಧನ ವಧಾ ವಿಚಾರದಲ್ಲಿ ಯುಧಿಷ್ಠಿರ ಮತ್ತು ಭೀಮಸೇನರೊಡನೆ ಇವನ ಮಾತುಕತೆ (ಸಭಾ

15/14–25). ಅರ್ಜುನನ ಮಾತಿಗೆ ಇವನಿಂದ ಅನುಮೋದನೆ ಮತ್ತು ಜರಾಸಂಧನ ಜನ್ಮ ವಿಚಾರದ ವರ್ಣನೆ (ಸಭಾ 17). ಜರಾಸಂಧ ವಧೆಗಾಗಿ ಭೀಮ ಮತ್ತು ಅರ್ಜುನರೊಡನೆ ಬ್ರಾಹ್ಮಣ ರೂಪಧಾರಣೆ ಮಾಡಿ ಈತ ಮಗಧ ಯಾತ್ರೆ ಮಾಡಿದುದು (ಸಭಾ 20). ಇವನಿಂದ ಮಗಧರಾಜಧಾನಿಯ ಪ್ರಶಂಸೆ (ಸಭಾ 21/1–11). ಜರಾಸಂಧನೊಡನೆ ಇವನ ಸಂವಾದ (ಸಭಾ 21/49–54). ಸೆರೆಯಲ್ಲಿಟ್ಟಿರುವ ನಿರಪ ರಾಧಿ ರಾಜರನ್ನು ಬಿಟ್ಟುಬಿಡಲು ಜರಾಸಂಧನಿಗೆ ಇವನಿಂದ ಎಚ್ಚರಿಕೆ (ಸಭಾ 22/7–26). ಜರಾ ಸಂಧನ ವಧೆಗಾಗಿ ಭೀಮನಿಗೆ ಇವನ ಸಂಕೇತ (ಸಭಾ 24/5). ಜರಾಸಂಧ ಪುತ್ರ ಸಹದೇವನಿಗೆ ಇವನಿಂದ ರಾಜ್ಯಾಭಿಷೇಕ (ಸಭಾ 24/43). ರಾಜಸೂಯ ಯಜ್ಞ ಸನ್ನಿವೇಶದಲ್ಲಿ ಇವನಿಂದ ಯುಧಿಷ್ಠಿರನಿಗೆ ಅಪಾರ ಧನರಾಶಿಯ ಕೊಡುಗೆ (ಸಭಾ 33/13). ರಾಜಸೂಯ ಯಜ್ಞದಲ್ಲಿ ಭೀಷ್ಮನ ಆದೇಶ ಪ್ರಕಾರ, ಸಹದೇವನು ಇವನಿಗೆ ಅಗ್ರಪೂಜೆ ಮಾಡಿದುದು (ಸಭಾ 36/30). ಶಿಶುಪಾಲನಿಂದ ಇವನ ಪ್ರತಿಯಾಗಿ ಆಕ್ಷೇಪ ಪೂರ್ಣ ಮಾತು. (ಸಭಾ 37). ಭೀಷ್ಮನಿಂದ ಇವನ ಮಹಿಮಾ ವರ್ಣನೆ (ಸಭಾ 38/6–29). ಶ್ರೀಕೃಷ್ಣನ ಅವತಾರದಿಂದ ಪ್ರಕೃತಿಯ ಮೇಲೆ ಪ್ರಭಾವ. ಅವತಾರ ಕಾಲದಲ್ಲಿ ಮಹರ್ಷಿ, ದೇವರ್ಷಿಗಳ ಆಗಮನ ಮತ್ತು ಇಂದ್ರನಿಂದ ಭಗವಂತನ ಪ್ರಾರ್ಥನೆ (ಸಭಾ 38). ವಸು ದೇವನು ನವಜಾತ ಶಿಶು ಕೃಷ್ಣನನ್ನು ಕಂಸನ ಭಯದಿಂದ ಗೋಕುಲದಲ್ಲಿ ನಂದಗೋಪನ ಮನೆಯಲ್ಲಿ ಅಡಗಿಸಿದುದು. (ಸಭಾ 38). ಇವನ ಪದಾಘಾತದಿಂದ ಮೊಸರು ಇತ್ಯಾದಿಗಳ ಮಡಿಕೆ ಗಳಿಂದ ತುಂಬಿದ ಗಾಡಿ ಮುಗುಚಿದುದು. (ಸಭಾ 38). ಇವನಿಂದ ಪೂತನೆಯ ವಧೆ, ಯಶೋದೆ ಇವನನ್ನು ಒರಳಿಗೆ ಕಟ್ಟಿದುದು, ಇವನಿಂದ ಯಮಲಾರ್ಜುನರ ಉದ್ಧಾರ (ಸಭಾ 38) ಏಳನೇವರ್ಷ ಪ್ರಾಯದಲ್ಲಿ ಇವನ ವೇಷಭೂಷಣಗಳು, ಆಟಕೂಟಗಳು, ಮನೋ ರಂಜನೆ ಮತ್ತು ಇವನಿಂದ ವತ್ಸಚಾರಣ (ಸಭಾ 38). ಶ್ರೀ ಕೃಷ್ಣನಿಂದ ವೃಂದಾವನಕ್ಕೆ ಏಕಾಂತ ಪ್ರಯಾಣ, ಇವನ ಶೋಭೆ, ವನವಿಹಾರ ಮತ್ತು ಇವನಿಂದ ಕಾಲಿಯ ನಾಗನ ಮಾನಮರ್ದನ ಮತ್ತು ಬೇರೆಡೆಗೆ ಕಳುಹಿಸಿದುದು. ಬಲಭದ್ರ ನೊಂದಿಗೆ ಇವನ ವನವಿಹಾರ (ಸಭಾ 38). ಇವನಿಂದ ಇಂದ್ರನ ಮಾನಭಂಗ ಮತ್ತು ಗೋವರ್ಧನ ಧಾರಣೆ. ದೇವೇಂದ್ರನಿಂದ ಇವನಿಗೆ 'ಗೋವಿಂದ' ನಾಮಕರಣ ಮತ್ತು 'ಗವೇಂದ್ರ' ಪದವಿಯಲ್ಲಿ ಅಭಿಷೇಕ. ಇವನಿಂದ ಅರಿಷ್ಟಾ ಸುರ, ಕೇಶಿ ಎಂಬ ದೈತ್ಯ, ಆಂಧ್ರದೇಶದ ಮಲ್ಲ ಚಾಣೂರ, ಕಂಸನ ಸೇನಾಧಿಪತಿ, 'ಸುನಾಮ'ನ ವಧೆ. ಇವನಿಂದ ಕಂಸನ ಮನದಲ್ಲಿ ಭಯದ ಉತ್ಪಾದನೆ ಮತ್ತು ಕುವಲಯಾಪೀಡದ ವಧೆ, ಶ್ರೀಕೃಷ್ಣನಿಂದ ಕಂಸನ ವಧೆ ಮತ್ತು ಉಗ್ರಸೇನ ನನ್ನು ರಾಜಸಿಂಹಾಸನದಲ್ಲಿ ಅಭಿಷೇಚಿಸಿದುದು (ಸಭಾ 38) ಬಲರಾಮನೊಂದಿಗೆ ಮಥುರೆ ಯಲ್ಲಿಯೇ ಈತನ ನಿವಾಸ. ಉಜ್ಜಯಿನಿಯಲ್ಲಿ ಸಾಂದೀಪನಿ ಮುನಿಯ ಆಶ್ರಮದಲ್ಲಿ ಈ ಸಹೋದರರಿಬ್ಬರು ಅಧ್ಯಯನಕ್ಕಾಗಿ ಹೋದುದು ಮತ್ತು ಅರುವತ್ತನಾಲ್ಕು ಕಲೆಗಳ ಅಧ್ಯಯನ ಮತ್ತು ಗುರುಸೇವೆ ಮಾಡಿದುದು. ಇವನಿಗೆ ಹನ್ನೆರಡು ದಿನಗಳಲ್ಲಿ ಗಜವಿದ್ಯೆ ಮತ್ತು ಅಶ್ವ ವಿದ್ಯೆಯ ಪ್ರಾಪ್ತಿ. ಇವನು ಪುನಃ ಧನುರ್ವೇಧ ಶಿಕ್ಷಣಕ್ಕಾಗಿ ಸಾಂದೀಪನಿಯಲ್ಲಿಗೆ ಹೋದುದು ಮತ್ತು ಅವಂತಿಯಲ್ಲಿ ನಿವಾಸ ಮಾಡಿದುದು, ಹದಿನೈದು ದಿವಾ ರಾತ್ರಿಗಳಲ್ಲಿಯೇ ಹತ್ತು ಅಂಗಗಳಿಂದ ಯುಕ್ತವಾದ, ಸುಪ್ರತಿಷ್ಠಿತ ಮತ್ತು ರಹಸ್ಯ ಸಹಿತ ಧನುರ್ವೇದದ ಜ್ಞಾನಪ್ರಾಪ್ತಿ ಮಾಡಿದುದು, ಸಾಂದೀಪನಿಪುತ್ರನನ್ನು ಕೊಂದ ಅಸುರನನ್ನು ಕೃಷ್ಣ ಬಲರಾಮರು ವಧಿಸಿದುದು, ಮೃತನಾದ ಗುರುಪುತ್ರನನ್ನು ಯಮಲೋಕದಿಂದ ತಂದು ಈತನಿಂದ ಗುರುದಕ್ಷಿಣೆ ಮತ್ತು ಐಶ್ವರ್ಯದ ಸಮರ್ಪಣೆ (ಸಭಾ 38). ಅರುವತ್ತ ನಾಲ್ಕು ಕಲೆಗಳ ಹೆಸರು ಹೀಗಿದೆ– (1) ಗೀತ (ಹಾಡುವಿಕೆ) (2) ವಾದ್ಯ (ವಾದ್ಯ ಬಾರಿಸುವುದು.) (3) ನೃತ್ಯ (ಕುಣಿತ) (4) ನಾಟ್ಯ (ನಾಟಕ ಮಾಡುವುದು) (ಅಭಿನಯಿಸುವುದು) (5) ಆಲೇಖ್ಯ (ಚಿತ್ರಗಾರಿಕೆ) (6) ವಿಶೇಷಕಚ್ಛೇದ್ಯ (ಹಣೆಯ ಮೇಲೆ ವಿವಿಧಾಕೃತಿಯ ಎಲೆ ಬಿಡಿಸು ವುದು) (7) ತಂಡುಲ ಕುಸುಮ ವಲಿವಿಕಾರ (ಅಕ್ಕಿ ಮತ್ತು ಹೂಗಳನ್ನು ಬಗೆಬಗೆಯಾಗಿ ಜೋಡಿಸು

ವುದು) (8) ಪುಷ್ಪಾಸ್ತರಣ (ಹೂಗಳಿಂದ ಕೊಠಡಿಯನ್ನು ಮುಚ್ಚುವುದು ಅಥವಾ ಅಲಂಕರಿಸುವುದು. (9) ದಶನವಸನಾಂಗರಾಗ (ಹಲ್ಲುಗಳಿಗೂ, ಬಟ್ಟೆಗಳಿಗೂ ಮತ್ತು ಶರೀರಕ್ಕೂ ಬಣ್ಣಗಳನ್ನು ಹಚ್ಚುವುದು ಅಥವಾ ಹಲ್ಲುಗಳಿಗೆ ಮಂಜನ, ವಸ್ತ್ರಗಳಿಗೆ ಬಣ್ಣ ಅಥವಾ ಬಣ್ಣದ ಸಾಮಗ್ರಿ ಮತ್ತು ಅಂಗಗಳಿಗೆ ಹಚ್ಚುವುದಕ್ಕೆ ಗಂಧ, ಕೇಸರ, ಮದರಂಗಿ ಇತ್ಯಾದಿ ಮಾಡುವುದು ಮತ್ತು ಅವುಗಳನ್ನು ತಯಾರಿಸುವ ವಿಧಾನಗಳ ಜ್ಞಾನ) (10) ಮಣಿಭೂಮಿಕಾ ಕರ್ಮ (ಋತು ಕಾಲಕ್ಕೆ ಅನುಕೂಲವಾಗಿ ಮನೆಯನ್ನಲಂಕರಿಸುವುದು) (ರತ್ನಖಚಿತವಾದ ನೆಲಗಟ್ಟು ಮಾಡುವುದು, ಮೊಸಾಯಿಕ್ ಕೆಲಸ, ಗೊಂಬೆಗಳನ್ನು ಮಾಡುವುದು ಎಂದೂ ಬೇರೆ ಗ್ರಂಥಗಳಲ್ಲಿ ಅರ್ಥೈಸಿದ್ದಾರೆ) (11) ಶಯನರಚನಾ (ಹಾಸಿಗೆಗಳನ್ನು ಹರಡುವುದು) (12) ಉದಕವಾದ್ಯ (ಜಲತರಂಗ ಬಾರಿಸುವುದು) (13) ಉದಕಘಾತ (ನೀರನ್ನು ಬೊಗಸೆಯಲ್ಲಿ ತುಂಬಿ ಇತರರ ಮೇಲೆ ಎರಚುವುದು, ಪಿಚಕಾರಿ ಸೇಚನ, ಪನ್ನೀರು ಸಿಂಪಡಿಸುವುದು ಇತ್ಯಾದಿ) (14) ಚಿತ್ರಯೋಗ– (ವಯಸ್ಸಿನ ಪರಿವರ್ತನೆ ಮಾಡುವುದು, ನಪುಂಸಕನಾಗಿ ಮಾಡುವುದು ಯುವಕನನ್ನು ಮುದುಕನಾಗಿ, ಮುದುಕನನ್ನು ಯುವಕನಾಗಿ ಪರಿವರ್ತಿಸುವುದು) (15) ಮಾಲ್ಯಗ್ರಂಥ ವಿಕಲ್ಪ (ಮಾಲ್ಯ ಗ್ರಥನ ವಿಕಲ್ಪ) (ವಿವಿಧ ರೂಪಗಳಲ್ಲಿ ಹೂವಿನಹಾರ ರಚನೆ) (16) ಕೇಶ–ಶೇಖರಾಪೀಡ– ಯೋಜನ (ಕೇಶ ಶೇಖರಕಾಪೀಡಯೋಜನ)– (ತಲೆಯ ಮೇಲೆ ಹೂಗಳಿಂದ ಅನೇಕ ರೀತಿಯ ರಚನೆ ಮಾಡುವುದು ಅಥವಾ ತಲೆಯ ಕೂದಲುಗಳಲ್ಲಿ ಹೂವನ್ನಿಟ್ಟು ಹೆಣೆಯುವುದು) (ಉಚಿತವಾದ ಸ್ಥಳಗಳಲ್ಲಿ ಶೇಖರ ಮತ್ತು ಆಪೀಡಕ ಎಂಬೆರಡು ರೀತಿಯ ಆಭರಣಗಳನ್ನು ಧರಿಸುವುದು) (17) ನೇಪಥ್ಯ ಯೋಗ (ನೇಪಥ್ಯ ಪ್ರಯೋಗ) (ದೇಶ ಕಾಲಕ್ಕೆ ಸರಿಯಾಗಿ ವಸ್ತ್ರ ಆಭೂಷಣಗಳನ್ನು ಧರಿಸುವುದು) (ತಾನು ವಸ್ತ್ರಾಲಂಕಾರ ಮಾಡುವುದು ಅಥವಾ ಇತರರಿಗೆ ಮಾಡುವುದು) (18) ಕರ್ಣಪತ್ರಭಂಗ (ಕಿವಿಗಳಿಗಾಗಿ ಕರ್ಣಾಭರಣಗಳನ್ನು ತಯಾರಿಸುವುದು) (19) ಗಂಧಯುಕ್ತಿ (ಸುಗಂಧಿತ ಪದಾರ್ಥಗಳಾದ ಪನ್ನೀರು, ಸುಗಂಧ ಸಾರ, ಸುಗಂಧ ತೈಲ ಇತ್ಯಾದಿಗಳ ತಯಾರಿ) (20) ಭೂಷಣಭೋಜನ– (ಆಭರಣ ತಯಾರಿ) (21) ಇಂದ್ರಜಾಲ (ಭ್ರಮಾಸೃಷ್ಟಿರಚನೆ) (22) ಕೌಚುಮಾರಯೋಗ (ಕುರೂಪನನ್ನು ಸುಂದರನಾಗಿ ಮಾಡುವುದು ಮತ್ತು ಮುಖ ಶರೀರಗಳ ಮೇಲೆ ಪೂಸಲು ಅಂಗಲೇಪ ಸಿದ್ಧಪಡಿಸುವುದು ಅದರಿಂದ ಕುರುಪಿಯೂ ಸುಂದರನಾಗುತ್ತಾನೆ.) (ಧೃಢದೇಹಿಯೂ ವೀರ್ಯವಂತನೂ ಆಗಲೂ ಸಾಧ್ಯವಾಗುವಂತಹ ಕುಚಮಾರನ ಚಿಕಿತ್ಸಾ ನಿರ್ದೇಶನ) (23) ಹಸ್ತಲಾಘವ (ಕೈಗಳ ಸ್ವಚ್ಛತೆ, ಕೈಚಳಕ) (ವ್ಯಕ್ತಿಗಳ ಎದುರಿನಲ್ಲಿಯೇ ಪದಾರ್ಥಗಳನ್ನು ಕದಿಯುವುದು ಎಂದೂ ಅರ್ಥೈಸಿದ್ದಾರೆ.) (24) ಚಿತ್ರಶಾಕಾಪೂಪ – ಭಕ್ಷ್ಯವಿಕಾರ ಕ್ರಿಯಾ (ಅನೇಕ ರೀತಿಯ ತರಕಾರಿಗಳ ಪದಾರ್ಥಗಳನ್ನೂ, ಭಕ್ಷ್ಯಗಳನ್ನೂ ಮಾಡುವುದು – ಸೂಪಕರ್ಮ) (25) ಪಾನಕರಸ ರಾಗಾಸವ – ಭೋಜನ (ಕುಡಿಯಲು ಅನೇಕ ವಿಧದ ಪಾನಕ, ರಸಗಳನ್ನು ಸಿದ್ಧಪಡಿಸುವುದು.) (26) ಸೂಚೀ ಕರ್ಮ (ಸೂಚಿವಾನಕರ್ಮ) (ಹೊಲಿಯುವುದು, ನೇಯುವುದು ಇತ್ಯಾದಿ) (27) ಸೂತ್ರಕರ್ಮ (ಸೂತ್ರಕ್ರೀಡಾ) (ಹರಿದಬಟ್ಟೆ ಇತ್ಯಾದಿ ಕಸೂತಿ, ನೂಲಿನಿಂದ ತರತರದ ಬಳ್ಳಿಗಳನ್ನು ಮಾಡುವುದು) (ದಾರಗಳಿಂದ ಆಡುವುದು ಅಂದರೆ ದಾರವನ್ನು ಹಿಡಿದು ಅದರಿಂದ ಮನೆ ದೇವಾಲಯ ಇತ್ಯಾದಿ ಸ್ಥೂಲರೇಖಾಕೃತಿ ರಚನೆ, ಹಾರಗಳನ್ನೆಳೆಯುವುದರಿಂದ ಆಕೃತಿಗಳು ಚಲಿಸುವಂತೆ ಮಾಡುವುದು ಎಂದೂ ಅರ್ಥೈಸಿದ್ದಾರೆ.) (28) ಪ್ರಹೇಲಿಕಾ (ಒಗಟುಗಳು) (29) ಪ್ರತಿಮಾಲಾ (ಅಂತ್ಯಾಕ್ಷರಿ ಅಂದರೆ ಶ್ಲೋಕದ ಅಂತಿಮ ಅಕ್ಷರ ತೆಗೆದುಕೊಂಡು, ಅದೇ ಅಕ್ಷರದಿಂದ ಆರಂಭವಾಗುವ ಇನ್ನೊಂದು ಶ್ಲೋಕ ಹೇಳುವುದು.) (30) ದುರ್ವಾಚಕಯೋಗ (ಕಠಿನ ಪದಗಳ ತಾತ್ಪರ್ಯ ಹುಡುಕುವುದು) (ರತ್ನಕೋಶ ಪ್ರಕಾರ ಪರುಷಾಕ್ಷರ ಘಟಿತವಾದ ಶ್ಲೋಕಗಳನ್ನು ಹೇಳುವುದು) (31) ಪುಸ್ತಕವಾಚನ (ಉಪಯುಕ್ತ ರೀತಿಯಿಂದ ಪುಸ್ತಕ ಓದುವುದು.) (32) ನಾಟಿಕಾಖ್ಯಾಯಿಕಾದರ್ಶನ (ನಾಟಕ ನೋಡುವುದು ಮತ್ತು ತೋರಿಸುವುದು) (33)

ಕಾವ್ಯಸಮಸ್ಯಾಪೂರ್ತಿ (ರತ್ನಕೋಶಪ್ರಕಾರ ಶ್ಲೋಕದ ಕೊನೆಯ ಪಾದ ಮೊದಲೇ ಕೊಡಲಾಗಿದ್ದು, ಅದರ ಮೊದಲ ಮೂರು ಪಾದಗಳನ್ನು ಸಮಂಜಸ ಅರ್ಥ ಬರುವಂತೆ ಸೇರಿಸುವುದು.) (34) ಪಟ್ಟಿಕಾವೇತ್ರವಾಣವಿಕಲ್ಪ (ಬೆತ್ತ ಬಿದಿರುಗಳಿಂದ ಚಾಪೆ, ಮಂಚ ಇತ್ಯಾದಿ ವಸ್ತು ತಯಾರಿಕೆ) (35) ತರ್ಕಕರ್ಮ (ವಾದವಿವಾದ) (ಇದನ್ನೇ ರತ್ನಕೋಶದಲ್ಲಿ ತಕ್ಷಕರ್ಮವೆಂದೂ ಅದರ ಅರ್ಥ – ಚಿನ್ನ, ಉಕ್ಕು ಮರದ ಕೆಲಸವೆಂದೂ ಹೇಳಲಾಗಿದೆ.) (36) ತಕ್ಷಣ – (ಮರಕೆಲಸ) (ರತ್ನಕೋಶದಲ್ಲಿ ಇದನ್ನು ತಕ್ಷ ಎನ್ನಲಾಗಿದೆ. (37) ವಾಸ್ತುವಿದ್ಯಾ (ಮನೆತಯಾರಿ) (ಗೃಹನಿರ್ಮಾಣ ವಿಜ್ಞಾನ) (38) ರೂಪ್ಯರತ್ನ ಪರೀಕ್ಷಾ (ಚಿನ್ನ, ಬೆಳ್ಳಿ ಇತ್ಯಾದಿ ಲೋಹ ಮತ್ತು ರತ್ನಗಳ ಪರೀಕ್ಷೆ) (39) ಧಾತುವಾದ (ಲೋಹಗಳ ಶುದ್ಧೀಕರಣ ಮತ್ತು ಮಿಶ್ರಲೋಹಗಳನ್ನು ಬೇರ್ಪಡಿಸುವುದು) (40) ಮಣಿರಾಗ ಜ್ಞಾನ – ಮಣಿರಾಗಾಕರ ಜ್ಞಾನ – (ರತ್ನಗಳ ಬಣ್ಣವನ್ನು ತಿಳಿಯುವುದು) (41) ಆಕರ ಜ್ಞಾನ (ಗಣಿಗಾರಿಕೆ ವಿದ್ಯೆ) (42) ವೃಕ್ಷಾಯುರ್ವೇದಯೋಗ (ವೃಕ್ಷಗಳ ಜ್ಞಾನ, ಚಿಕಿತ್ಸೆ ಇತ್ಯಾದಿ) (43) ಮೇಷಕುಕ್ಕುಟ ಲಾವಕ ಯುದ್ಧ ವಿಧಿ – ಟಗರು, ಹುಂಜ, ಬುಲ್‌ಬುಲ್ ಹಕ್ಕಿಗಳನ್ನು ಜಗಳಾಡಿಸುವುದು ಕ್ರಮ) (44) ಶುಕಸಾರಿಕಾ ಪ್ರಲಾಪನ (ಗಿಳಿಗಳಿಗೆ ಮಾತು ಕಲಿಸುವುದು) (45) ಉತ್ಸಾನ – ಉತ್ಸಾದನ (ಅಂಗಲೇಪ ಹಾಕಿ ಕೈಕಾಲು ತಲೆಗಳನ್ನು ಒತ್ತುವುದು) (46) ಕೇಶಮಾರ್ಜನ ಕೌಶಲ (ಕೂದಲುಗಳನ್ನು ತಿಕ್ಕುವುದು ಮತ್ತು ಎಣ್ಣೆ ಹಾಕುವುದು) (47) ಅಕ್ಷರ ಮುಷ್ಟಿಕಾಕಥನ (ಅಕ್ಷರ ಶ್ರೇಣಿಗಳಿಂದ ಅರ್ಥವನ್ನರಿಯುವುದು. ಉದಾ: 'ಮೇ ವೈಮಿಕನಿಂಕತು ವೃಧಮಕುಂಮೀ' ಎಂಬ ಅಕ್ಷರ ಶ್ರೇಣಿ ಮೇಷಾದಿ ದ್ವಾದಶ ರಾಶಿಗಳನ್ನು ಸೂಚಿಸುತ್ತದೆ – ರತ್ನಕೋಶ ಆಧಾರ) (48) ಮ್ಲೇಚ್ಛಿತ ಕಲಾವಿಕಲ್ಪ– (ಮ್ಲೇಚ್ಛ ಅಥವಾ ವಿದೇಶೀ ಭಾಷೆಗಳನ್ನು ತಿಳಿಯುವುದು. ರತ್ನಕೋಶ ಪ್ರಕಾರ ಗೂಢ ಲಿಪಿ ಭಾಷಾ ಭೇದಗಳು) (49) ದೇಶಭಾಷಾಜ್ಞಾನ (ಪ್ರಾಕೃತಿಕ ಭಾಷೆಗಳನ್ನು ತಿಳಿಯುವುದು.) (50) ಪುಷ್ಪ ಶಕಟಿಕಾನಿಮಿತ್ತ ಜ್ಞಾನ ದೈವೀ ಲಕ್ಷಣ (ಉದಾ: ಗುಡುಗು, ಮಿಂಚಿನ ಬೆಳಕು) ಇತ್ಯಾದಿ ನೋಡಿ ಮುಂದೆ ಬರುವ ಘಟನೆಗಳ ಬಗ್ಗೆ ಭವಿಷ್ಯವಾಣಿ ಹೇಳುವುದು) (51) ಯಂತ್ರ ಮಾತೃಕಾ (ಯಂತ್ರ ನಿರ್ಮಾಣ) (52) ಧಾರಣ ಮಾತೃಕಾ (ಸ್ಮರಣೆ ಹೆಚ್ಚಿಸುವುದು.) (53) ಸಂಪಾಠ್ಯ (ಇತರರು ಏನಾದರೂ ಓದುತ್ತಿರುವುದನ್ನು ಕೇಳಿ, ಅದನ್ನು ಹಾಗೆಯೇ ಓದುವುದು) (ರತ್ನಕೋಶ ಪ್ರಕಾರ ಇದೊಂದು ಆಟ – ಒಬ್ಬನು ಹೇಳಿದ ಶ್ಲೋಕ ಅಪರಿಚಿತವಾಗಿದ್ದರೂ ಇನ್ನೊಬ್ಬನು ಯಥಾರೀತಿ ಹೇಳಿ ಒಪ್ಪಿಸುವುದು) (54) ಮಾನಸೀ ಕಾವ್ಯಕ್ರಿಯಾ (ಇತರ ಅಭಿಪ್ರಾಯ ತಿಳಿದು ಆ ಪ್ರಕಾರ ಕೂಡಲೇ ಕವಿತೆ ರಚಿಸುವುದು ಅಥವಾ ಮನಸ್ಸಿನಲ್ಲಿ ಕಾವ್ಯರಚಿಸಿ ಶೀಘ್ರವಾಗಿ ಹೇಳುತ್ತಾ ಹೋಗುವುದು) (55) ಕ್ರಿಯಾವಿಕಲ್ಪ (ಕ್ರೀಯೆಯ ಪ್ರಭಾವವನ್ನು ಬದಲಿಸುವುದು) (ರತ್ನಕೋಶ ಪ್ರಕಾರ ಕಾವ್ಯ ಮತ್ತು ಅಲಂಕಾರ) (56) ಛಲಿತಕಯೋಗ (ಮೋಸ ಅಥವಾ ಧೂರ್ತತನ ಮಾಡುವುದು. ರತ್ನಕೋಶ ಪ್ರಕಾರ– ವಂಚನೆಯ ವಿಧಾನ ಎಂದರೆ ವ್ಯಕ್ತಿಯ ಆಕೃತಿ ಮತ್ತು ಸ್ವರವನ್ನು ಗುರುತು ಹಿಡಿಯಲಾಗದಂತೆ ಅಥವಾ ಮತ್ತೊಬ್ಬನ ಕಡೆಗೆ ಮುಂದುವರಿಯುವಂತೆ ಮರೆಮಾಡುವುದು) (57) ಅಭಿಧಾನ (ಕೋಷ ಛಂದೋಜ್ಞಾನ) (58) ವಸ್ತ್ರಗೋಪನ (ವಸ್ತ್ರಗಳ ರಕ್ಷಣೆ ಮಾಡುವುದು. ರತ್ನಕೋಶ ಪ್ರಕಾರ ವಸ್ತುಗೋಪನ ಅಂದರೆ ವಸ್ತುಗಳನ್ನು ತೊಡುವುದರಲ್ಲಿ ಭ್ರಮೋತ್ಪಾದನೆ) (59) ದ್ಯೂತ ವಿಶೇಷ (ಜೂಜಾಡುವುದು) (60) ಆಕರ್ಷಣ ಕ್ರೀಡಾ (ಪಗಡೆಯಿಂದಾಡುವ ಒಂದು ಜೂಜು) (61) ಬಾಲಕ್ರೀಡಾಕರ್ಮ (ಮಗುವನ್ನಾಡಿಸುವುದು ರತ್ನಕೋಶ ಪ್ರಕಾರ ಚೆಂಡುಗೊಂಬೆ ಇತ್ಯಾದಿ ಮಕ್ಕಳ ಆಟ) (62) ವೈನಾಯಿಕೀ ವಿದ್ಯಾಜ್ಞಾನ (ವಿನಯ ಮತ್ತು ಶಿಷ್ಟಾಚಾರ ರತ್ನಕೋಶ ಪ್ರಕಾರ ವ್ಯಕ್ತಿಯನ್ನು ವಿದ್ಯಾವಂತನಾಗಿ ಮಾಡುವ ವಿಜ್ಞಾನ) (63) ವೈಜಯಿಕೀ ವಿದ್ಯಾಜ್ಞಾನ (ಜಯವನ್ನು ಗಳಿಸಿಕೊಡುವ ವಿದ್ಯೆಗಳ ತಿಳುವಳಿಕೆ) (64) ವೈತಾಲಿಕೀ ವಿದ್ಯಾಜ್ಞಾನ (ರತ್ನಕೋಶದಲ್ಲಿ ವ್ಯಾಯಾಮಿಕೀಯ ವಿದ್ಯೆಗಳ ಜ್ಞಾನ ಎನ್ನಲಾಗಿದೆ.)

[ಆಧಾರ ಶಬ್ದಸಾಗರ]

ಶ್ರೀಕೃಷ್ಣನಿಗೆ ಗದೆ ಮತ್ತು ಪರಿಘಯುದ್ಧದಲ್ಲಿ,

ಮತ್ತು ಸಂಪೂರ್ಣ ಅಸ್ತ್ರಶಸ್ತ್ರಗಳ ಜ್ಞಾನದಲ್ಲಿ ಉತ್ಕೃಷ್ಟ ಸ್ಥಾನದ ಪ್ರಾಪ್ತಿ ಮತ್ತು ಸಮಸ್ತ ಲೋಕಗಳಲ್ಲಿ ಈತನ ಪ್ರಸಿದ್ಧಿ (ಸಭಾ 38). ಈತ ಮಥುರೆಯಿಂದ ದ್ವಾರಕೆಗೆ ಹೋದುದು. ಇವ ನಿಂದ ದೊಡ್ಡ ದೊಡ್ಡ ರಾಕ್ಷಸರ ವಧೆ (ಸಭಾ 38). ಭೌಮಾಸುರನನ್ನು ಕೊಲ್ಲಲು ಈತನೊಡನೆ ಇಂದ್ರನ ಪ್ರಾರ್ಥನೆ (ಸಭಾ 38). ನರಕಾಸುರ ನನ್ನು ಕೊಂದು ಅವನ ತಾಯಿಯಾದ ಅದಿತಿ ದೇವಿಯ ಕುಂಡಲಗಳನ್ನು ತಂದು ಕೊಡುವೆ ನೆಂದು ಈತನ ಪ್ರತಿಜ್ಞೆ. ಈತನಿಂದ ಮುರಾಸುರ, ನಿಶುಂಭ, ಹಯಗ್ರೀವ, ವಿರೂಪಾಕ್ಷ, ಪಂಚಜನ ಮತ್ತು ನರಕಾಸುರನ ವಧೆ (ಸಭೆ 38). ಭೂಮಿ ಯಿಂದ ಈತನಿಗೆ ಕುಂಡಲದಾನ (ಸಭಾ 38). ಮಣಿಪರ್ವತದಲ್ಲಿದ್ದ ನರಕಾಸುರನ ಅಂತಃಪುರಕ್ಕೆ ಈತನ ಪ್ರವೇಶ. ನರಕಾಸುರನಿಂದ ಅಪಹರಿಸ ಲ್ಪಟ್ಟ ಕನ್ಯೆಯರಿಂದ ಶ್ರೀಕೃಷ್ಣನು ತಮ್ಮನ್ನು ಗಾಂಧರ್ವ ವಿಧಿಯಿಂದ ವಿವಾಹವಾಗುಂತೆ ಪ್ರಾರ್ಥನೆ (ಸಭಾ 38). ಅವರ ಪ್ರಾರ್ಥನೆಯನ್ನು ಸ್ವೀಕರಿಸಿ, ಶ್ರೀಕೃಷ್ಣನು ಅವರನ್ನು ದ್ವಾರಕೆಗೆ ಕಳುಹಿಸಿದುದು (ಸಭಾ 38). ಈತ ಮಣಿ ಪರ್ವತವನ್ನು ಗರುಡನ ಬೆನ್ನಮೇಲೆ ಹೇರಿ, ಬಲರಾಮ ಮತ್ತು ಇಂದ್ರರ ಜೊತೆಯಲ್ಲಿ ಸ್ವರ್ಗಕ್ಕೆ ಹೋದುದು. ಮೇರು ಪರ್ವತದ ಮಧ್ಯ ಶಿಖರಕ್ಕೆ ತಲುಪಿ, ಶ್ರೀಕೃಷ್ಣನು ದೇವಸ್ಥಾನಗಳ ದರ್ಶನ ಮಾಡಿದುದು. ದೇವಲೋಕಕ್ಕೆ ಹೋಗಿ ಇಂದ್ರನ ಭವನದ ಬಳಿ ಗರುಡನಿಂದ ಇಳಿದುದು, ದೇವತೆಗಳಿಂದ ಇವನ ಸ್ವಾಗತ, ಇವನಿಂದ ಅದಿತಿದೇವಿಯ ಚರಣಗಳಲ್ಲಿ ಪ್ರಣಾಮ ಮತ್ತು ಆಕೆಯ ಕುಂಡಲಗಳನ್ನು ಅರ್ಪಿಸಿದುದು (ಸಭಾ 38). ದೇವಮಾತೆ ಅದಿತಿ ಮತ್ತು ಇಂದ್ರಪತ್ನಿ ಶಚಿಯ ಮೂಲಕ ಶ್ರೀಕೃಷ್ಣ ಮತ್ತು ಸತ್ಯಭಾಮೆಯರಿಗೆ ಸತ್ಕಾರ. ಅಲ್ಲಿಂದ ಹಿಂತಿರುಗಿ ಇವರೆಲ್ಲರೂ ದ್ವಾರಕೆಗೆ ಆಗಮಿಸಿ ದುದು (ಸಭಾ 38). ಈತನ ಮೂಲಕ ಮಣಿಪರ್ವತ(ಪ್ರಾಗ್ಜ್ಯೋತಿಷಪುರ)ದಿಂದ ತರ ಲ್ಪಟ್ಟ ಧನರಾಶಿ ವೃಷ್ಣಿವಂಶೀಯರಿಗೆ ವಿತರಿಸ ಲ್ಪಟ್ಟಿದ್ದು. (ಸಭಾ 38). ಇಂದ್ರನಿಂದ ಶ್ರೀಕೃಷ್ಣನ ಮಹಿಮಾ ವರ್ಣನೆ (ಸಭಾ 38). ಶೋಣಿತ ಪುರದಲ್ಲಿ ಶಿವನೊಡನೆ ಈತನ ಯುದ್ಧ ಮತ್ತು ಆತನ ಪರಾಜಯ (ಸಭಾ 38). ಇವನಿಂದ ಬಾಣಾಸುರನ ಬಾಹುಚ್ಛೇದನ (ಸಭಾ 38). ಈತ ರುಕ್ಮಿಯನ್ನು ಭಯಭೀತನಾಗಿ ಮಾಡಿ ದುದು, ಜಾರೂಥಿಯಲ್ಲಿ ಆಹುತಿ ಕ್ರಾಥ ಮತ್ತು ಶಿಶುಪಾಲರನ್ನು ಪರಾಜಯಗೊಳಿಸಿದುದು, ಶೈವ್ಯ, ದಂತವಕ್ರ, ಮತ್ತು ಶತಧನ್ವರನ್ನು ಕೂಡ ಸೋಲಿಸಿ ದುದು; ಇಂದ್ರದ್ಯುಮ್ನ, ಕಾಲಯವನ, ಕಶೇರು ಮಾನರನ್ನು ವಧಿಸಿದುದು; ದ್ಯುಮತ್ಸೇನನೊಡನೆ ಈತನ ಯುದ್ಧ, ಈತನಿಂದ ಮಹಾಬಲಶಾಲಿ ಯಾದ ಗೋಪತಿ ಮತ್ತು ತಾಲಕೇತು ಎಂಬವರ ವಧೆ; ಪಾಂಡ್ಯ, ಪೌಂಡ್ರ, ಮತ್ಸ್ಯ, ಕಲಿಂಗ ಮತ್ತು ಅಂಗ ಇತ್ಯಾದಿ ಅನೇಕ ದೇಶಗಳ ಎಲ್ಲಾ ರಾಜರ ಪರಾಜಯ; (ಸಭಾ 38). ಈತನಿಂದ ಬಭ್ರುವಿನ ಪತ್ನಿಯ ಉದ್ಧಾರ, ಪೀಠ, ಕಂಸ, ಪೈಠಕ ಮತ್ತು ಅತಿಲೋಮ ಎಂಬ ಹೆಸರಿನ ಅಸುರರ ವಧೆ; ಜಂಭ, ಐರಾವತ, ವಿರೂಪ, ಶಂಬರ ಮೊದ ಲಾದ ಅಸುರರ ವಧೆ; ಭೋಗವತಿಯಲ್ಲಿ ವಾಸುಕಿ ನಾಗನನ್ನು ಗೆದ್ದು, ಈತ ರೋಹಿಣಿ ಕುಮಾರ ಗದನನ್ನು ಉದ್ಧರಿಸಿದುದು (ಸಭಾ 38). ಇವನ ಮಡಿಲಿಗೆ ಬರುತ್ತಲೇ ಶಿಶುಪಾಲನ ಎರಡು ಭುಜ ಮತ್ತು ಮೂರನೇ ಕಣ್ಣಿನ ವಿನಾಶ (ಸಭಾ 43/18). 'ಶಿಶುಪಾಲನ ನೂರು ಅಪ ರಾಧ ಕ್ಷಮಿಸುತ್ತೇನೆ' ಎಂದು ಈತನಿಂದ ಶ್ರುತಶ್ರವೆ (ತನ್ನ ಅತ್ತೆ)ಗೆ ಆಶ್ವಾಸನೆ (ಸಭಾ 43/24). ಇವನಿಂದ ಶಿಶುಪಾಲನ ವಧೆ (ಸಭಾ 45/25). ಯಜ್ಞಸಮಾಪ್ತಿಯಾದ ಮೇಲೆ ಶ್ರೀಕೃಷ್ಣನಿಂದ ಯುಧಿಷ್ಠಿರನಿಗೆ ಅಭಿನಂದನೆ (ಸಭಾ 45/39–43). ರಾಜಸೂಯ ಯಜ್ಞದಲ್ಲಿ ಋಷಿಗಳ ಸಹಿತ ಶ್ರೀಕೃಷ್ಣನು ಯುಧಿಷ್ಠಿರನಿಗೆ ಅಭಿಷೇಕ ಮಾಡಿ ದುದು (ಸಭಾ 53/15–16). ದ್ರೌಪದಿಯ ಮಾನ ಕಾಪಾಡಲು, ಈತ ಅವ್ಯಕ್ತರೂಪದಿಂದ ಆಕೆಯ ಸೀರೆಯನ್ನು ಪ್ರವೇಶಿಸಿ, ಅದನ್ನು ಅಕ್ಷಯಗೊಳಿಸಿ ದುದು. (ಸಭಾ 68/47). ಈತನಿಂದ ಅಳುತ್ತಿ ರುವ ದ್ರೌಪದಿಗೆ ಧೈರ್ಯ ಪ್ರದಾನ. (ವನ 12/28–132). ಈತ ಜೂಜಿನ ದೋಷವನ್ನು ಹೇಳುತ್ತಾ, ಪಾಂಡವರಿಗೆ ಈ ವಿಪತ್ತು ಬರುವಾಗ ತಾನು ಅನುಪಸ್ಥಿತನಾಗಿದ್ದುದೇ ಕಾರಣವೆಂದು ಹೇಳಿದುದು (ವನ 13). ಶಾಲ್ವನೊಂದಿಗೆ ಮಾಡಿದ ಯುದ್ಧ ಮತ್ತು ಸೌಭವಿಮಾನ ಸಹಿತ

ಅವನನ್ನು ನಾಶಮಾಡಿದ ಕುರಿತು ಈತನಿಂದ ಸಂಕ್ಷಿಪ್ತ ವರ್ಣನೆ (ವನ 14/22). ಇವನಿಂದ ಶಾಲ್ವನೊಡನೆ ಭೀಷಣ ಯುದ್ಧ (ವನ 20). ಈತ ಶಾಲ್ವನ ಮಾಯೆಯಿಂದ ಮೋಹಿತ ನಾದುದು (ವನ 21/22). ಶ್ರೀಕೃಷ್ಣನಿಂದ ಸೌಭ ವಿಮಾನ ಸಹಿತ ಶಾಲ್ವನ ವಧೆ (ವನ 22/36–37). ಈತ ಪಾಂಡವರಿಂದ ಗೌರವಿಸಲ್ಪಟ್ಟು, ಸುಭದ್ರೆ ಮತ್ತು ಅಭಿಮನ್ಯುವನ್ನು ಕರಕೊಂಡು ದ್ವಾರಕೆಗೆ ಹೋದುದು (ವನ 22/47–48). ಪ್ರಭಾಸಕ್ಷೇತ್ರದಲ್ಲಿ ಪಾಂಡವರೊಂದಿಗೆ ಭೇಟಿ ಮತ್ತು ಸಾತ್ಯಕಿಯ ಮಾತುಗಳನ್ನು ಈತ ಸಮ ರ್ಥಿಸಿದುದು (ವನ 120/23–26). ಕಾಮ್ಯಕ ವನದಲ್ಲಿ ಪಾಂಡವರ ಬಳಿಗೆ ಈತನ ಆಗಮನ. ಮತ್ತು ಈತನಿಂದ ಅವರಿಗೆ ಧೈರ್ಯದ ಆಶ್ವಾಸನೆ. (ವನ 183/16–36). ಮಾರ್ಕಂಡೇಯನನ್ನು ಕಥೆ ಹೇಳುವಂತೆ ಪ್ರೇರಿಸಿದುದು (ವನ 183/50). ದ್ರೌಪದಿ ಸ್ಮರಣೆ ಮಾಡಿದಾಗ ಪಾಂಡವರ ಆಶ್ರಮ ದಲ್ಲಿ ಪ್ರಕಟಗೊಂಡದ್ದು; ಅಕ್ಷಯಪಾತ್ರೆಯಿಂದ ಪಲ್ಯದ ಎಲೆಯನ್ನು ತಿಂದು ವಿಶ್ವಾತ್ಮನನ್ನು ತೃಪ್ತಿ ಪಡಿಸಿದುದು (ವನ 263/18–25). ಅಭಿಮನ್ಯು ವಿನ ವಿವಾಹ ಸಂದರ್ಭದಲ್ಲಿ ಹೋಗಿ, ಯುಧಿ ಷ್ಠಿರನಿಗೆ ತುಂಬಾ ಧನವನ್ನು ಉಡುಗೊರೆಯಾಗಿ ಕೊಟ್ಟದ್ದು (ವಿರಾಟ 72/24–25). ವಿರಾಟ ರಾಜನ ಸಭೆಯಲ್ಲಿ ಕೌರವರ ಅತ್ಯಾಚಾರ ಮತ್ತು ಪಾಂಡವರ ಧರ್ಮವ್ಯವಹಾರದ ವರ್ಣನೆ ಮಾಡುತ್ತಾ, ಯಾರಾದರೊಬ್ಬ ಯೋಗ್ಯದೂತನನ್ನು ಕೌರವರ ಬಳಿಗೆ ಕಳುಹಿಸಲು ಸಲಹೆ (ಉದ್ಯೋಗ 1). ಕಾರ್ಯಭಾರವನ್ನು ದ್ರುಪದನಿಗೆ ಒಪ್ಪಿಸಿ ಈತ ದ್ವಾರಕೆಗೆ ನಿರ್ಗಮಿಸಿದುದು (ಉದ್ಯೋಗ 5/11). ದುರ್ಯೋಧನ ಮತ್ತು ಅರ್ಜುನ ಇಬ್ಬರಿಗೂ ಸಹಾಯ ಮಾಡಲು ಒಪ್ಪಿದುದು (ಉದ್ಯೋಗ 7/16). ಅರ್ಜುನನ ಸಾರಥ್ಯವನ್ನು ಸ್ವೀಕರಿಸಿದುದು (ಉದ್ಯೋಗ 7/38). ಸಂಜಯನಿಗೆ ಪ್ರತ್ಯುತ್ತರ ಕೊಡುತ್ತಾ ಈತನಿಂದ ಕರ್ಮಯೋಗದ ಸಮರ್ಥನೆ. (ಉದ್ಯೋಗ 29/6–16) ಇವನಿಂದ ವರ್ಣಧರ್ಮದ ನಿರೂಪಣೆ (ಉದ್ಯೋಗ 29/22–26). ಕೌರವರ ಅನ್ಯಾಯದ ವಿವರ ನೀಡುತ್ತಾ, ಸಂಜಯನ ಮೂಲಕ ಧೃತರಾಷ್ಟ್ರನಿಗೆ ಈತನ ಎಚ್ಚರಿಕೆಯ ಸಂದೇಶ (ಉದ್ಯೋಗ 29/31–58). ಸಂಜಯನ ಮೂಲಕ ಕೌರವರಿಗೆ ಸಂದೇಶ ನೀಡಿದುದು (ಉದ್ಯೋಗ 59/18–29). ಶಾಂತಿ ಸ್ಥಾಪನಾರ್ಥವಾಗಿ ಕೌರವಸಭೆಗೆ ಹೋಗಲುಸಿದ್ಧನಾದುದು (ಉದ್ಯೋಗ 72/79–81). ಕೌರವರ ಅತ್ಯಾಚಾರದ ವರ್ಣನೆ ಮಾಡಿ ಯುಧಿಷ್ಠಿರನನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದುದು (ಉದ್ಯೋಗ 23). ಭೀಮಸೇನನಿಗೆ ಧೈರ್ಯ ತುಂಬಿದುದು (ಉದ್ಯೋಗ 77). ಅರ್ಜುನನ ಮಾತುಗಳನ್ನು ಉತ್ತರಿಸಿದುದು (ಉದ್ಯೋಗ 79). ಶ್ರೀಕೃಷ್ಣನಿಂದ ದ್ರೌಪದಿಗೆ ಆಶ್ವಾಸನೆ (ಉದ್ಯೋಗ 82/44–49). ಸಾತ್ಯಕಿ ಸಹಿತ ರಥವನ್ನೇರಿ ಹಸ್ತಿನಾವತಿಗೆ ಪ್ರಯಾಣ (ಉದ್ಯೋಗ 83/29). ಮಾರ್ಗದಲ್ಲಿ ಈತ ದಿವ್ಯ ಮಹರ್ಷಿಗಳ ದರ್ಶನಮಾಡಿದುದು (ಉದ್ಯೋಗ 83/60). ಹಸ್ತಿನಾಪುರಕ್ಕೆ ಹೋಗುತ್ತಿದ್ದಾಗ ಮಾರ್ಗದಲ್ಲಿ ವೃಕಸ್ಥಳ ಎಂಬಲ್ಲಿ ವಿಶ್ರಾಂತಿ (ಉದ್ಯೋಗ 84/20–21). ಶ್ರೀ ಕೃಷ್ಣನಿಗೆ ಹಸ್ತಿನಾವತಿಯಲ್ಲಿ ಸ್ವಾಗತ (ಉದ್ಯೋಗ 89/5). ಈತ ಅರಮನೆಯನ್ನು ಪ್ರವೇಶಿಸಿದುದು. (ಉದ್ಯೋಗ 89/11). ವಿದುರನ ಮನೆಗೆ ಪಾದಾರ್ಪಣೆ. (ಉದ್ಯೋಗ 89/22). ಕುಂತಿಯ ಭೇಟಿಮಾಡಿ ಧೈರ್ಯತುಂಬಿದುದು (ಉದ್ಯೋಗ 90/91–99). ದುರ್ಯೋಧನ ನೊಡನೆ ಅವನ ಆಮಂತ್ರಣವನ್ನು ಅಸ್ವೀಕಾರ ಮಾಡಿದ ಕಾರಣ ತಿಳಿಸಿದುದು (ಉದ್ಯೋಗ 91/24–32). ವಿದುರನ ಮನೆಯಲ್ಲಿ ಇವನ ಭೋಜನ ಮತ್ತು ವಿಶ್ರಾಂತಿ (ಉದ್ಯೋಗ 91/41). ವಿದುರನೊಡನೆ ಕೌರವಸಭೆಗೆ ಹೋಗುವ ಔಚಿತ್ಯ ತಿಳಿಸಿದುದು (ಉದ್ಯೋಗ 93). ಶ್ರೀಕೃಷ್ಣನಿಂದ ಕೌರವಸಭಾಪ್ರವೇಶ (ಉದ್ಯೋಗ 94/33). ಕೌರವನ ಸಭೆಯಲ್ಲಿ ಈತನ ಪ್ರಭಾವಶಾಲಿ ಭಾಷಣ (ಉದ್ಯೋಗ 95). ಪಾಂಡವರೊಡನೆ ಸಂಧಿ ಮಾಡುವಂತೆ ದುರ್ಯೋಧನನಿಗೆ ತಿಳಿಸಿ ದುದು (ಉದ್ಯೋಗ 124/8–62). ದುರ್ಯೋ ಧನನನ್ನು ನಿಂದಿಸಿದುದು (ಉದ್ಯೋಗ 128/2–31). ಕಂಸ ಮತ್ತು ದೈತ್ಯ ದಾನವರ ಧೃಷ್ಟಾಂತ ವನ್ನಿತ್ತು, ದುರ್ಯೋಧನನನ್ನು ಬಂಧಿಸಿಡುವಂತೆ ಸಲಹೆ ನೀಡಿದುದು (ಉದ್ಯೋಗ 128/50). ದುರ್ಯೋಧನನಿಂದ ತಾನು ಬಂಧಿಸಲ್ಪಡುವ ವಿಚಾರ ತಿಳಿದು ಈತನಿಂದ ಸಿಂಹಘರ್ಜನೆ

(ಉದ್ಯೋಗ 130/24–29). ಕೌರವ ಸಭೆಯಲ್ಲಿ ಈತನ ವಿಶ್ವರೂಪದರ್ಶನ (ಉದ್ಯೋಗ 131/5–13). ಈತನಿಂದ ಧೃತರಾಷ್ಟ್ರನಿಗೆ ಅಧೃಶ್ಯ ನೇತ್ರ ಪ್ರದಾನ (ಉದ್ಯೋಗ 131/19). ಕೌರವನ ಸಭೆಯಿಂದ ಪ್ರಸ್ಥಾನ (ಉದ್ಯೋಗ 131/37–38). ಕುಂತಿಯ ಬಳಿಗೆ ಹೋಗಿ ಪಾಂಡವರಿಗೆ ಹೇಳಲು ಸಂದೇಶಯಾಚಿಸಿದುದು (ಉದ್ಯೋಗ 132/4). ಕರ್ಣನೊಡನೆ ಮಂತ್ರಾಲೋಚನೆ ಮತ್ತು ಉಪಪ್ಲವ್ಯ ನಗರಕ್ಕೆ ಪ್ರಸ್ಥಾನ (ಉದ್ಯೋಗ 137/29–30). ಕರ್ಣನು ಪಾಂಡವ ಪಕ್ಷಕ್ಕೆ ಬರುವಂತೆ ತಿಳಿಸಿದುದು (ಉದ್ಯೋಗ 140/6–29). ಕರ್ಣನೊಡನೆ ಪಾಂಡವರ ನಿಶ್ಚಿತ ವಿಜಯವನ್ನು ಪ್ರತಿಪಾದಿಸುತ್ತಾ, ಯುದ್ಧದ ದಿನ ನಿರ್ಧಾರ ಮಾಡಿದುದು (ಉದ್ಯೋಗ 142/17–20). ಯುಧಿಷ್ಠಿರನಲ್ಲಿ ಭೀಷ್ಮನ ಮಾತುಗಳ ವರ್ಣನೆ (ಉದ್ಯೋಗ 147/16–43). ಯುಧಿಷ್ಠಿರನೊಂದಿಗೆ ದ್ರೋಣಾಚಾರ್ಯರ ವಚನಗಳ ವರ್ಣನೆ (ಉದ್ಯೋಗ 148/2–16). ಯುಧಿಷ್ಠಿರನಿಗೆ ವಿದುರನ ವಚನಗಳ ವರ್ಣನೆ (ಉದ್ಯೋಗ 148/18–26). ಯುಧಿಷ್ಠಿರನಿಗೆ ಗಾಂಧಾರಿಯ ಮಾತುಗಳ ವರ್ಣನೆ (ಉದ್ಯೋಗ 148/29–36). ಯುಧಿಷ್ಠಿರನಿಗೆ ಧೃತರಾಷ್ಟ್ರನ ಮಾತುಗಳ ವರ್ಣನೆ (ಉದ್ಯೋಗ 149). ಕೌರವಸಭೆಯಲ್ಲಿ ತಾನು ಮಾಡಿದ ಪ್ರಯತ್ನಗಳನ್ನು ವರ್ಣಿಸುತ್ತಾ ದಂಡೋಪಾಯವನ್ನೇ ಒತ್ತಿಹೇಳಿದುದು (ಉದ್ಯೋಗ 150/18). ಧೃಷ್ಟದ್ಯುಮ್ನನನ್ನು ಪ್ರಧಾನ ಸೇನಾಪತಿಯಾಗಿ ಮಾಡಿದ ಕುರಿತು ಸಮರ್ಥನೆ (ಉದ್ಯೋಗ 151/49). ಯುದ್ಧ ಮಾಡುವುದೇ ಕರ್ತವ್ಯವೆಂದು ಯುಧಿಷ್ಠಿರನಿಗೆ ಹೇಳಿದುದು (ಉದ್ಯೋಗ 154/15). ದುರ್ಯೋಧನನ ಸಂದೇಶಕ್ಕೆ ಉತ್ತರ ನೀಡಿದುದು (ಉದ್ಯೋಗ 162/6). ಕೌರವಸೇನೆಯನ್ನು ಕೊಲ್ಲಲು ಅರ್ಜುನನಿಗೆ ಆದೇಶ (ಭೀಷ್ಮ 22/16). ದುರ್ಗಾಸ್ತುತಿಮಾಡಲು ಅರ್ಜುನನಿಗೆ ಹೇಳಿದುದು (ಭೀಷ್ಮ 23/2). ಅರ್ಜುನನಿಗೆ ಗೀತೋಪದೇಶ ಮಾಡಿದುದು. (ಭೀಷ್ಮ 26/11). ಕುರುಕ್ಷೇತ್ರದಲ್ಲಿ ಈತನಿಂದ ಪಾಂಚಜನ್ಯವೆಂಬ ಶಂಖ ಬಾರಿಸುವಿಕೆ (ಭೀಷ್ಮ 25/15). ಸಾಂಖ್ಯಯೋಗದ ವರ್ಣನೆ (ಭೀಷ್ಮ 26/11–30). ಅಜ್ಞಾನಿ ಮತ್ತು ಜ್ಞಾನವಂತನ ಲಕ್ಷಣ. ರಾಗದ್ವೇಷರಹಿತನಾಗಿ ಕರ್ಮಮಾಡಲು ಪ್ರೇರಣೆ (ಭೀಷ್ಮ 27/25–35). ಫಲಸಹಿತ ಬೇರೆ ಬೇರೆ ಯಜ್ಞಗಳ ವರ್ಣನೆ ಮತ್ತು ಜ್ಞಾನದ ಮೇಲ್ಮೆ (ಭೀಷ್ಮ 28/24–42). ಸಾಂಖ್ಯಯೋಗಿ ಮತ್ತು ನಿಷ್ಕಾಮಕರ್ಮಯೋಗಿಗಳ ಲಕ್ಷಣ ಮತ್ತು ಜ್ಞಾನಯೋಗದ ವರ್ಣನೆ (ಭೀಷ್ಮ 29/7–26). ಯೋಗಭ್ರಷ್ಟ ಪುರುಷನ ಗತಿ ಮತ್ತು ಧ್ಯಾನಯೋಗಿಯ ಮೇಲ್ಮೆ (ಭೀಷ್ಮ 30/37–47). ಆಸುರ ಸ್ವಭಾವದವರ ನಿಂದೆ ಮತ್ತು ಭಗವದ್ಭಕ್ತರ ಪ್ರಶಂಸೆ ಮತ್ತು ಅನ್ಯ ದೇವತೆಗಳ ಉಪಾಸನೆಯ ವರ್ಣನೆ (ಭೀಷ್ಮ 31/13–23). ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಾದಿಗಳ ವರ್ಣನೆ (ಭೀಷ್ಮ 32/3–7). ಸಕಾಮ ಮತ್ತು ನಿಷ್ಕಾಮ ಉಪಾಸನೆಯ ಫಲ ಮತ್ತು ನಿಷ್ಕಾಮ ಭಗವದ್ಭಕ್ತಿಯ ಮೇಲ್ಮೆ (ಭೀಷ್ಮ 33/20–34). ಶ್ರೀಕೃಷ್ಣನು ತನ್ನ ವಿಭೂತಿ ಶಕ್ತಿ ಮತ್ತು ಯೋಗ ಶಕ್ತಿಯ ವರ್ಣನೆ ಮಾಡಿದುದು (ಭೀಷ್ಮ 34/19–42). ಈತನಿಂದ ತನ್ನ ವಿಶ್ವರೂಪದ ವರ್ಣನೆ ಮತ್ತು ಫಲಸಹಿತ ಅನನ್ಯ ಭಕ್ತಿಯ ವರ್ಣನೆ (ಭೀಷ್ಮ 35/5–18; 55). ಸಾಕಾರ ನಿರಾಕಾರನ ಉಪಾಸಕರು ಮತ್ತು ಭಗವತ್ಪ್ರಾಪ್ತಿಯ ಉಪಾಯಗಳು, ಭಗವತ್ಪ್ರಾಪ್ತ ಪುರುಷರ ಲಕ್ಷಣಗಳ ವರ್ಣನೆ (ಭೀಷ್ಮ 36/1–20). ಕ್ಷೇತ್ರ-ಕ್ಷೇತ್ರಜ್ಞ ಮತ್ತು ಜ್ಞಾನ ಸಹಿತ ಪ್ರಕೃತಿ-ಪುರುಷರ ವರ್ಣನೆ (ಭೀಷ್ಮ 37/1–34). ಸತ್ತ್ವ, ರಜ, ತಮ ಮತ್ತು ಭಗವತ್ಪ್ರಾಪ್ತಿಯ ಉಪಾಯಗಳು ಮತ್ತು ಗುಣಾತೀತ ಪುರುಷನ ಲಕ್ಷಣಗಳು (ಭೀಷ್ಮ 38/5–27). ಜೀವಾತ್ಮವಿಚಾರ, ಪ್ರಭಾವಸಹಿತ ಪರಮೇಶ್ವರನ ಸ್ವರೂಪ, ಕ್ಷರ-ಅಕ್ಷರ ಮತ್ತು ಪುರುಷೋತ್ತಮನ ವರ್ಣನೆ (ಭೀಷ್ಮ 39/7–20). ದೈವೀ ಮತ್ತು ಆಸುರೀ ಸಂಪತ್ತು ಮತ್ತು ಆಸುರೀ ಸಂಪದ್ಭರಿತರ ಲಕ್ಷಣ ಮತ್ತು ಅವರ ಅಧೋಗತಿಯ ವರ್ಣನೆ (ಭೀಷ್ಮ 40/1–20). ಆಹಾರ, ಯಜ್ಞ, ತಪಸ್ಸು, ದಾನಗಳ ಪ್ರತ್ಯೇಕ ಪ್ರತ್ಯೇಕ ಭೇದ (ಭೀಷ್ಮ 41/7–22). ಜ್ಞಾನ, ಕರ್ಮ, ಕರ್ತಾ, ಬುದ್ಧಿ, ಧೃತಿ ಮತ್ತು ಸುಖದ ಪ್ರತ್ಯೇಕ ಪ್ರತ್ಯೇಕ ಭೇದ (ಭೀಷ್ಮ 42/19–40). ಕರ್ಣನು ಪಾಂಡವರ ಪಕ್ಷಕ್ಕೆ ಬರುವಂತೆ ಪ್ರಯತ್ನಿಸಿದುದು (ಭೀಷ್ಮ 43/9–91). ಭೀಷ್ಮನ ಪರಾಕ್ರಮದಿಂದ

ವ್ಯಥಿತನಾದ ಯುಧಿಷ್ಠಿರನಿಗೆ ಸಾಂತ್ವನ (ಭೀಷ್ಮ 50/26–30). ಚಕ್ರವನ್ನು ತೆಗೆದುಕೊಂಡು ಭೀಷ್ಮನನ್ನು ಕೊಲ್ಲಲು ಸಿದ್ಧನಾದುದು (ಭೀಷ್ಮ 59/88–89). ಭೀಷ್ಮನಿಂದ ಈತನ ಮಹಿಮಾ ವರ್ಣನೆ (ಭೀಷ್ಮ 65/25ರಿಂದ 68) ಭೀಷ್ಮನನ್ನು ಕೊಲ್ಲಲು ಅರ್ಜುನನಿಗೆ ಎಚ್ಚರಿಕೆ (ಭೀಷ್ಮ 106/30–33). ಚಾಟಿ ತೆಗೆದುಕೊಂಡು ಭೀಷ್ಮನ ವಧೆಗಾಗಿ ಓಡಿದುದು (ಭೀಷ್ಮ 106/55–57). ಭೀಷ್ಮನ ಪರಾಕ್ರಮದಿಂದ ದುಃಖಿತನಾದ ಯುಧಿಷ್ಠಿರನಿಗೆ ಸಾಂತ್ವನ ಹೇಳಿದುದು (ಭೀಷ್ಮ 107/26–40). ಭೀಷ್ಮನ ಬಳಿಗೆ ಹೋಗಲು ಯುಧಿಷ್ಠಿರನ ಪ್ರಸ್ತಾವವನ್ನು ಸ್ವೀಕರಿಸಿದುದು (ಭೀಷ್ಮ 107/52–55). ಭೀಷ್ಮವಧೆಗೆ ಸಿದ್ಧನಾಗದ ಅರ್ಜುನನನ್ನು ಒಪ್ಪಿಸಿದುದು (ಭೀಷ್ಮ 107/96–102). ಭೀಷ್ಮವಧೆ ಮಾಡಲು ಅರ್ಜುನನಿಗೆ ಪ್ರೇರಣೆ (ಭೀಷ್ಮ 118/35–36). ಭೀಷ್ಮನು ಮರ್ದಿಸಲ್ಪಟ್ಟಾಗ ಯುಧಿಷ್ಠಿರನೊಡನೆ ಮಾತುಕತೆ (ಭೀಷ್ಮ 120/66–67). ಧೃತರಾಷ್ಟ್ರನಿಂದ ಈತನ ಲೀಲೆಗಳ ಸಹಿತ ಮಹಿಮೆಯ ವರ್ಣನೆ (ದ್ರೋಣ 11/1–40). ಭಗದತ್ತನಿಂದ ಅರ್ಜುನನ ಮೇಲೆ ಪ್ರಯೋಗಿಸಲ್ಪಟ್ಟ ವೈಷ್ಣವಾಸ್ತ್ರವನ್ನು ತನ್ನ ಎದೆಯೊಡ್ಡಿ ಸ್ವೀಕರಿಸಿದುದು (ದ್ರೋಣ 29/18). ಅರ್ಜುನನು ಕೇಳಿದಾಗ ವೈಷ್ಣವಾಸ್ತ್ರದ ರಹಸ್ಯ ಹೇಳಿ ಭಗದತ್ತನನ್ನು ಕೊಲ್ಲಲು ಆದೇಶಿಸಿದುದು (ದ್ರೋಣ 29/25–34; 44–45). ಅಭಿಮನ್ಯು ವಧೆಯಿಂದ ದುಃಖಿಯಾಗಿ ವಿಲಪಿಸುತ್ತಿದ್ದ ಅರ್ಜುನನನ್ನು ಶಾಂತಗೊಳಿಸಿದುದು (ದ್ರೋಣ 72/66–74). ಅರ್ಜುನನೊಡನೆ ಜಯದ್ರಥನ ರಕ್ಷಣೆಯ ಸಮಾಚಾರ ತಿಳಿಸಿದುದು (ದ್ರೋಣ 75). ಪುತ್ರಶೋಕದಿಂದ ದುಃಖಿತೆಯಾದ ಸುಭದ್ರೆಗೆ ಸಮಾಧಾನ ಹೇಳಿದುದು (ದ್ರೋಣ 77/12–26). ವಿಲಪಿಸುತ್ತಿದ್ದ ದ್ರೌಪದಿ, ಸುಭದ್ರೆ ಮತ್ತು ಉತ್ತರೆಯರಿಗೆ ಧೈರ್ಯ ಹೇಳಿದುದು (ದ್ರೋಣ 78/40–42). ಅರ್ಜುನನ ವಿಜಯಕ್ಕಾಗಿ ಸಮಯಕ್ಕೆ ಸರಿಯಾಗಿ, ರಥವನ್ನು ಸಿದ್ಧಗೊಳಿಸಿ ತರುವಂತೆ ದಾರುಕನಿಗೆ ಆದೇಶ ನೀಡಿದುದು (ದ್ರೋಣ 79/21–42). ನಿದ್ರಿಸುತ್ತಿದ್ದ ಅರ್ಜುನನಿಗೆ ಸ್ವಪ್ನದಲ್ಲಿ ದರ್ಶನವನ್ನಿತ್ತದ್ದು ಮತ್ತು ಆತನೊಡನೆ ಮಾತುಕತೆ ನಡೆಸಿ ಶಿವನ ಬಳಿಗೆ ಕರಕೊಂಡು ಹೋದುದು (ದ್ರೋಣ 80/2–49). ಇವನಿಂದ ಶಿವನ ಸ್ತುತಿ (ದ್ರೋಣ 80/55–64). ಜಯದ್ರಥನನ್ನು ವಧಿಸುವ ಕುರಿತು ಯುಧಿಷ್ಠಿರನಿಗೆ ಸಾಂತ್ವನ (ದ್ರೋಣ 83/21–28). ಇವನಿಂದ ಶಂಖ ಬಾರಿಸಲ್ಪಟ್ಟದ್ದು (ದ್ರೋಣ 88/21). ದ್ರೋಣಾಚಾರ್ಯನನ್ನು ಬಿಟ್ಟು ಮುಂದೆ ಹೋಗಲು ಅರ್ಜುನನಿಗೆ ಪ್ರೇರಣೆ (ದ್ರೋಣ 91/30–31). ಕುದುರೆಗಳಿಗೆ ಕುಡಿಸಲು ಜಲವನ್ನು ಪ್ರಕಟಗೊಳಿಸುವಂತೆ ಅರ್ಜುನನ್ನು ಪ್ರೇರಿಸಿದುದು (ದ್ರೋಣ 99/48). ಇವನಿಂದ ಸಂಗ್ರಾಮ ಭೂಮಿಯಲ್ಲಿ ಅಶ್ವಗಳ ಸೇವೆ (ದ್ರೋಣ 100/10–16). ದುರ್ಯೋಧನನ ವಧೆ ಮಾಡುವಂತೆ ಅರ್ಜುನನಿಗೆ ಉತ್ತೇಜನ (ದ್ರೋಣ 102/1–18). ದುರ್ಯೋಧನನ ಮೇಲೆ ಬಾಣಗಳು ವಿಫಲವಾಗುತ್ತಿರುವುದನ್ನು ಕಂಡು ಅರ್ಜುನನ್ನು ನಿಂದಿಸಿದುದು (ದ್ರೋಣ 103/6–10). ಅರ್ಜುನನಿಗೆ ಸಾತ್ಯಕಿಯ ಆಗಮನದ ಸೂಚನೆಯನ್ನಿತ್ತದ್ದು (ದ್ರೋಣ 141/13–25). ಭೂರಿಶ್ರವನ ಮುಷ್ಟಿಯಿಂದ ಸಾತ್ಯಕಿಯನ್ನು ಬಿಡಿಸಲು ಅರ್ಜುನನನ್ನು ಪ್ರೇರಿಸಿದುದು (ದ್ರೋಣ 142/64–65). ಭೂರಿಶ್ರವನಿಗೆ ಮುಕ್ತನಾಗಲು ವರದಾನ (ದ್ರೋಣ 143/48). ಮಾಯೆಯಿಂದ ಅಂಧಕಾರದ ಸೃಷ್ಟಿ ಮಾಡಿ ಜಯದ್ರಥವಧೆಗೆ ಅರ್ಜುನನನ್ನು ಪ್ರೇರಿಸಿದುದು (ದ್ರೋಣ 146/62–72). ಜಯದ್ರಥನ ತಲೆಯನ್ನು ಅವನ ತಂದೆಯ ತೊಡೆಯ ಮೇಲೆ ಹಾಕಲು ಹೇಳಿದುದು ಮತ್ತು ಅದರ ಗುಟ್ಟನ್ನು ತಿಳಿಸಿದುದು (ದ್ರೋಣ 146/104–119). ಜಯದ್ರಥ ವಧೆಯ ಅನಂತರ ಮಾಯಾರೂಪಿ ಅಂಧಕಾರವನ್ನು ಪರಿಹರಿಸಿದುದು (ದ್ರೋಣ 146/132). ಕರ್ಣನೊಂದಿಗೆ ಅರ್ಜುನ ಯುದ್ಧ ಮಾಡುವುದಕ್ಕೆ ಅಡ್ಡಿಪಡಿಸಿದುದು (ದ್ರೋಣ 147/33–36). ಜಯದ್ರಥವಧೆಯ ಅನಂತರ ಅರ್ಜುನನಿಗೆ ಶುಭಹಾರೈಸಿದುದು (ದ್ರೋಣ 148/25–32). ಅರ್ಜುನನಿಗೆ ಸಂಗ್ರಾಮದ ದೃಶ್ಯ ತೋರಿಸುತ್ತಾ ಯುಧಿಷ್ಠಿರನ ಬಳಿಗೆ ಕರಕೊಂಡು ಹೋದುದು (ದ್ರೋಣ 148/36–59). ಜಯದ್ರಥ ವಧೆಯ ಅನಂತರ ಯುಧಿಷ್ಠಿರನಿಗೆ ವಿಜಯದ ಸಮಾಚಾರ ತಿಳಿಸಿದುದು (ದ್ರೋಣ 149/2). ಯುಧಿಷ್ಠಿರನ ಕ್ರೋಧವೇ ಶತ್ರುವಧೆಗೆ ಕಾರಣ

ವೆಂದು ಹೇಳಿದುದು (ದ್ರೋಣ 149/45–51). ಯುಧಿಷ್ಠಿರನು ದ್ರೋಣಾಚಾರ್ಯರೊಂದಿಗೆ ಯುದ್ಧಮಾಡದಂತೆ ತಡೆದುದು (ದ್ರೋಣ 162/47–51). ಅರ್ಧ ರಾತ್ರಿಯ ಸಮಯ ಕರ್ಣ ನೊಂದಿಗೆ ಅರ್ಜುನನ ಯುದ್ಧದ ಅನೌಚಿತ್ಯ ವನ್ನು ತಿಳಿಸಿ, ಘಟೋತ್ಕಚನನ್ನು ಕಳುಹಿಸಲು ಅನುಮತಿಯನ್ನಿತ್ತದ್ದು (ದ್ರೋಣ 173/35–41). ಕರ್ಣನೊಡನೆ ಯುದ್ಧ ಮಾಡಲು ಘಟೋತ್ಕಚ ನಿಗೆ ಆದೇಶ ನೀಡಿದುದು (ದ್ರೋಣ 173/45–58). ಅರ್ಜುನನೊಡನೆ ಭಿನ್ನಭಿನ್ನ ಮಹಾರಥಿ ಗಳನ್ನು ಇದಿರಿಸುವುದಕ್ಕಾಗಿ ವ್ಯವಸ್ಥೆಯನ್ನು ತಿಳಿಸಿ ದುದು (ದ್ರೋಣ 177/33–36). ಅಲಾಯುಧನ ವಧೆಮಾಡಲು ಘಟೋತ್ಕಚನನ್ನು ಪ್ರೇರೇಪಿಸಿ ದುದು (ದ್ರೋಣ 178/2–3). ಘಟೋತ್ಕಚನ ವಧೆಯಾದಾಗ ಈತ ಪ್ರಸನ್ನನಾಗಿದ್ದುದರ ಕಾರಣ ವನ್ನು ಅರ್ಜುನನು ಕೇಳಿದಾಗ, ಇವನು ಕರ್ಣನ ಪ್ರಶಂಸೆ ಮಾಡುತ್ತಾ, ತನ್ನ ಸಂತೋಷದ ಕಾರಣ ತಿಳಿಸಿದುದು (ದ್ರೋಣ 180/11–33). ಅರ್ಜುನ ನೊಡನೆ ಜರಾಸಂಧನೇ ಮೊದಲಾದ ಧರ್ಮ ದ್ರೋಹಿಗಳ ವಧೆಯ ಕಾರಣ ತಿಳಿಸಿದುದು (ದ್ರೋಣ 181/2–33). ಕರ್ಣನು ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗ ಮಾಡದೆ ಇದ್ದ ಕಾರಣವನ್ನು ಸಾತ್ಯಕಿಯೊಡನೆ ಹೇಳಿದುದು (ದ್ರೋಣ 182/35–46). ಘಟೋತ್ಕಚವಧೆ ಯಿಂದ ದುಃಖಿತನಾದ ಯುಧಿಷ್ಠಿರನನ್ನು ಸಮಾ ಧಾನಪಡಿಸಿದುದು (ದ್ರೋಣ 183/24–26). ದ್ರೋಣಾಚಾರ್ಯನ ವಧೆಗೆ ಉಪಾಯ ಸೂಚಿಸಿ ದುದು (ದ್ರೋಣ 190/10–12). ಯುಧಿಷ್ಠಿರನು ಕಪಟದಿಂದ ಅಶ್ವತ್ಥಾಮನು ಕೊಲ್ಲಲ್ಪಟ್ಟನೆಂಬ ಸುಳ್ಳು ವಾರ್ತೆಯನ್ನು ಹೇಳುವಂತೆ ಒತ್ತಾಯಿಸಿ ದುದು (ದ್ರೋಣ 190/46–47). ನಾರಾಯ ಣಾಸ್ತ್ರವನ್ನು ಶಾಂತಗೊಳಿಸುವ ಉಪಾಯ ತಿಳಿಸಿ ದುದು (ದ್ರೋಣ 199/38–42). ಭೀಮಸೇನ ನನ್ನು ರಥದಿಂದ ಎಳೆದು ನಾರಾಯಣಾಸ್ತ್ರವನ್ನು ಶಾಂತಗೊಳಿಸಿದುದು (ದ್ರೋಣ 200/15–17). ಅರ್ಜುನನಿಗೆ ಯುದ್ಧರಂಗದ ಭಯಂಕರ ದೃಶ್ಯ ತೋರಿಸಿದುದು (ಕರ್ಣ 19/28–53). ಅಶ್ವ ತ್ಥಾಮನೊಂದಿಗೆ ಯುದ್ಧದಲ್ಲಿ ಶಿಥಿಲನಾಗುವು ದನ್ನು ನೋಡಿ, ಅರ್ಜುನನಿಗೆ ಎಚ್ಚರಿಕೆ ಕೊಟ್ಟದ್ದು (ಕರ್ಣ 56/135–138). ಅರ್ಜುನನಿಗೆ ಯುದ್ಧ ಕ್ಷೇತ್ರದ ದೃಶ್ಯ ತೋರಿಸುತ್ತಾ ಯುಧಿಷ್ಠಿರನ ಬಳಿಗೆ ಕರಕೊಂಡು ಹೋದುದು (ಕರ್ಣ 58/10–41). ಧೃಷ್ಟದ್ಯುಮ್ನನನ್ನು ಅಶ್ವತ್ಥಾಮನ ಹಿಡಿತದಿಂದ ಬಿಡಿಸುವಂತೆ ಅರ್ಜುನನೊಡನೆ ಹೇಳಿದುದು (ಕರ್ಣ 59/47–49). ಅರ್ಜುನನೊಡನೆ ದುರ್ಯೋಧನ ಮತ್ತು ಕರ್ಣನ ಪರಾಕ್ರಮದ ವರ್ಣನೆಮಾಡಿ, ಕರ್ಣನನ್ನು ಕೊಲ್ಲಲು ಆತ ನನ್ನು ಪ್ರೋತ್ಸಾಹಿಸಿದುದು ಮತ್ತು ಭೀಮಸೇನನ ಪರಾಕ್ರಮದ ವರ್ಣನೆ ಮಾಡಿದುದು (ಕರ್ಣ 60). ಗಾಯಗೊಂಡ ಯುಧಿಷ್ಠಿರನನ್ನು ನೋಡುವ ನೆಪದಿಂದ ಅರ್ಜುನನನ್ನು ಕರ್ಣನ ಬಳಿಯಿಂದ ದೂರ ಮಾಡಿದುದು (ಕರ್ಣ 64/66). ಅರ್ಜುನನೊಂದಿಗೆ ಯುಧಿಷ್ಠಿರನ ಬಳಿಗೆ ಹೋಗಿ, ಅವನ ಪಾದಾಭಿವಂದನೆ ಮಾಡಿದುದು (ಕರ್ಣ 65/17). ಯುಧಿಷ್ಠಿರನ ವಧೆಯಿಂದ ಅರ್ಜುನನನ್ನು ತಡೆಯುವ ಸಂದರ್ಭದಲ್ಲಿ ಬಲಾಕನೆಂಬ ವ್ಯಾಧ ಮತ್ತು ಕೌಶಿಕ ಬ್ರಾಹ್ಮಣನ ಕಥೆಯನ್ನು ಹೇಳಿ ತಿಳಿಯಪಡಿಸಿದುದು ಮತ್ತು ಯುಧಿಷ್ಠಿರನನ್ನು 'ನೀನು' ಎಂಬ ಶಬ್ದದಿಂದ ಕರೆದ ಮಾತ್ರಕ್ಕೇ ಅರ್ಜುನನ ಪ್ರತಿಜ್ಞೆ ಪೂರ್ಣ ವಾಗುವುದೆಂದು ತಿಳಿಸಿದುದು (ಕರ್ಣ 69). ಅರ್ಜುನನನ್ನು ಆತ್ಮಹತ್ಯೆಯಿಂದ ಉಳಿಸಿದುದು (ಕರ್ಣ 70/23–24). ಯುಧಿಷ್ಠಿರನನ್ನು ಸಂ ತೋಷಗೊಳಿಸಿದುದು (ಕರ್ಣ 70/49–55). ಅರ್ಜುನನಿಗೆ ಉಪದೇಶ (ಕರ್ಣ 71/3–12). ಕರ್ಣನ ವಧೆ ಮಾಡಲು ಅರ್ಜುನನಿಗೆ ಪ್ರೋತ್ಸಾಹ. (ಕರ್ಣ 72/18ರಿಂದ 73) ಕರ್ಣನ ಸರ್ಪಮುಖ ಬಾಣದಿಂದ ಅರ್ಜುನನ ರಕ್ಷಣೆ. (ಕರ್ಣ 90/29–31) ಧರ್ಮರಕ್ಷಣೆಯ ಕೂಗನ್ನು ಮಾಡಿದಾಗ ಕರ್ಣನಿಗೆ ಎಚ್ಚರಿಕೆ ಕೊಟ್ಟುದು (ಕರ್ಣ 91/1–10). ಕರ್ಣವಧೆಯ ಶುಭಸಮಾ ಚಾರ ತಿಳಿಸಲು ಅರ್ಜುನನು ಯುಧಿಷ್ಠಿರನ ಬಳಿಗೆ ಹೋಗುವಂತೆ ಹೇಳಿದುದು ಮತ್ತು ಸೈನಿಕರಿಗೆ ಯುದ್ಧ ವ್ಯವಸ್ಥೆಯ ಆದೇಶವನ್ನಿತ್ತದ್ದು (ಕರ್ಣ 96/2–11). ಯುಧಿಷ್ಠಿರನ ಬಳಿಗೆ ಹೋಗಿ ಕರ್ಣವಧೆಯ ಸಮಾಚಾರ ತಿಳಿಸಿದುದು (ಕರ್ಣ 96/18–23). ಶಲ್ಯನ ವಧೆಮಾಡಲು ಯುಧಿಷ್ಠಿರ ನನ್ನು ಪ್ರೋತ್ಸಾಹಿಸಿದುದು (ಶಲ್ಯ 7/25–41).

ಅರ್ಜುನನೊಡನೆ ದುರ್ಯೋಧನನನ್ನು ಕೊಲ್ಲುವಂತೆ ಹೇಳಿದುದು (ಶಲ್ಯ 27/3–12). ಕ್ರಿಯಾತ್ಮಕ ಪ್ರಯೋಗದ ಮೂಲಕ ದುರ್ಯೋಧನನನ್ನು ಕೊಲ್ಲುವಂತೆ ಯುಧಿಷ್ಠಿರನಿಗೆ ಸಲಹೆ (ಶಲ್ಯ 31/6–15). ಯುಧಿಷ್ಠಿರನನ್ನು ನಿಂದಿಸಿದುದು (ಶಲ್ಯ 33/2–16). ಅರ್ಜುನನೊಡನೆ ಭೀಮಸೇನ ಮತ್ತು ದುರ್ಯೋಧನರ ಬಲಾಬಲವನ್ನು ವರ್ಣನೆ ಮಾಡಿ, ಮಾಯೆ(ವಂಚನೆ)ಯಿಂದ ದುರ್ಯೋಧನನನ್ನು ವಧೆ ಮಾಡಲು ಸಲಹೆ (ಶಲ್ಯ 58/3–20). ದುರ್ಯೋಧನನ ವಧೆಯಿಂದ ಕುಪಿತನಾದ ಬಲರಾಮನನ್ನು ಸಮಾಧಾನಪಡಿಸಿದುದು (ಶಲ್ಯ 60/14–25). 'ಭೀಮಸೇನನಿಂದ ಮಾಡಲ್ಪಡುತ್ತಿರುವ ಅಧರ್ಮಪೂರ್ಣ ವರ್ತನೆಯನ್ನು ತಾವು ಸುಮ್ಮನಿದ್ದು ಏಕೆ ನೋಡುತ್ತೀರಿ? ಅವನನ್ನೇಕೆ ತಡೆಯುವುದಿಲ್ಲ' ಎಂದು ಯುಧ್ಧಿಷ್ಠಿರನಲ್ಲಿ ಕೇಳಿದುದು (ಶಲ್ಯ 60/33–34). ಈತನಿಂದ ದುರ್ಯೋಧನನ ಮೇಲೆ ಆಕ್ಷೇಪ (ಶಲ್ಯ 61/8–23). ದುರ್ಯೋಧನನ ಆಕ್ಷೇಪಗಳಿಗೆ ಇವನಿಂದ ಉತ್ತರ (ಶಲ್ಯ 61/39–50). ಇವನಿಂದ ಪಾಂಡವರಿಗೆ ಸಮಾಧಾನ (ಶಲ್ಯ 61/61–69). ಅರ್ಜುನನು ರಥದಿಂದ ಇಳಿಯುವಂತೆ ಈತನ ಆದೇಶ (ಶಲ್ಯ 62/9–10). ರಥವು ದಗ್ಧವಾದುದರ ಕಾರಣ ಕೇಳಿದ ಅರ್ಜುನನಿಗೆ ಈತನ ಉತ್ತರ (ಶಲ್ಯ 62/18–19). ಇವನಿಂದ ಯುಧಿಷ್ಠಿರನಿಗೆ ಅಭಿನಂದನೆ (ಶಲ್ಯ 62/21–27). ಯುಧಿಷ್ಠಿರನು ಕಳುಹಿಸಿದುದರಿಂದ ಹಸ್ತಿನಾವತಿಗೆ ಹೋದುದು (ಶಲ್ಯ 62/45). ಗಾಂಧಾರಿಗೆ ಸಮಾಧಾನ (ಶಲ್ಯ 63/59–65). ಹಸ್ತಿನಾವತಿಯಿಂದ ಶಿಬಿರಕ್ಕೆ ಹಿಂತಿರುಗಿದುದು (ಶಲ್ಯ 63/78). ಅಶ್ವತ್ಥಾಮನ ಚಪಲತೆ ಮತ್ತು ಕ್ರೌರ್ಯ ಪ್ರಸಂಗದಲ್ಲಿ, ಆತ ತನ್ನೊಡನೆ (ಕೃಷ್ಣ) ಹಿಂದೆ ಸುದರ್ಶನ ಚಕ್ರವನ್ನು ಬೇಡಿದ ವಿಚಾರ ತಿಳಿಸುತ್ತಾ, ಯುಧಿಷ್ಠಿರನೊಡನೆ ಭೀಮಸೇನನ ರಕ್ಷಣೆಗಾಗಿ ಪ್ರಯತ್ನ ಪಡುವಂತೆ ಆದೇಶ ನೀಡಿದುದು (ಸೌಪ್ತಿಕ 12). ಅರ್ಜುನ ಮತ್ತು ಯುಧಿಷ್ಠಿರನನ್ನು ಜೊತೆಯಲ್ಲಿ ಕರಕೊಂಡು ಭೀಮಸೇನನ ರಕ್ಷಣೆಗೆ ಹೋದುದು (ಸೌಪ್ತಿಕ 13/1–9). ಬ್ರಹ್ಮಾಸ್ತ್ರವನ್ನು ಪ್ರಕಟಿಸುವಂತೆ ಅರ್ಜುನನಿಗೆ ಆದೇಶವನ್ನಿತ್ತದ್ದು (ಸೌಪ್ತಿಕ 14/2–3). ಇವನಿಂದ ಅಶ್ವತ್ಥಾಮನಿಗೆ ಶಾಪ (ಸೌಪ್ತಿಕ 16/8–16). ಮಹಾದೇವನ ಮಹಿಮೆಯ ಪ್ರತಿಪಾದನೆ (ಸೌಪ್ತಿಕ 17/6–26). ಈತ ಧೃತರಾಷ್ಟ್ರನನ್ನು ಸಮಾಧಾನ ಪಡಿಸಿದುದು (ಸ್ತ್ರೀ 12/23–30). ಧೃತರಾಷ್ಟ್ರನನ್ನು ನಿಂದಿಸಿ ಅವನ ಕ್ರೋಧವನ್ನು ಶಾಂತಗೊಳಿಸಿದುದು (ಸ್ತ್ರೀ 13/2–11). ಗಾಂಧಾರಿಯಿಂದ ತನಗೆ ಕೊಡಲ್ಪಟ್ಟ ಶಾಪವನ್ನು ಸಮರ್ಥಿಸಿಕೊಂಡದ್ದು (ಸ್ತ್ರೀ 25/48–49). ಗಾಂಧಾರಿಗೆ ಸಮಾಧಾನ ಹೇಳಿದುದು (ಸ್ತ್ರೀ 26/1–5). ನಾರದ ಸಂಜಯ ಸಂವಾದ ರೂಪದಲ್ಲಿ ಷೋಡಶರಾಜಕೀಯೋಪಾಖ್ಯಾನ ತಿಳಿಸಿ, ಯುಧಿಷ್ಠಿರನನ್ನು ಸಮಾಧಾನಪಡಿಸಿದುದು (ಶಾಂತಿ 39). ಯುಧಿಷ್ಠಿರನು ಕೇಳಿದಾಗ ನಾರದ ಪರ್ವತದ ಉಪಾಖ್ಯಾನ ತಿಳಿಸಿದುದು (ಶಾಂತಿ 30). ವ್ಯಾಸರ ಮಾತನ್ನು ಒಪ್ಪುವಂತೆ ಯುಧಿಷ್ಠಿರನಿಗೆ ತಿಳಿಯಹೇಳಿದುದು (ಶಾಂತಿ 37/21–25) ಚಾರ್ವಾಕನಿಗೆ ದೊರಕಿದ ವರ ಇತ್ಯಾದಿಗಳನ್ನು ಯುಧಿಷ್ಠಿರನಿಗೆ ವರ್ಣಿಸಿದುದು (ಶಾಂತಿ 39) ಭೀಷ್ಮನ ಪ್ರಶಂಸೆ ಮತ್ತು ಅವನ ಬಳಿಗೆ ಹೋಗುವಂತೆ ಯುಧಿಷ್ಠಿರನಿಗೆ ಆದೇಶ (ಶಾಂತಿ 46/11–23). ಯುಧಿಷ್ಠಿರನಿಗೆ ಪರಶುರಾಮೋ–ಪಾಖ್ಯಾನ ತಿಳಿಸಿದುದು (ಶಾಂತಿ 49). ಭೀಷ್ಮನ ಗುಣಪ್ರಭಾವಗಳ ಸವಿಸ್ತಾರ ವರ್ಣನೆ ಮಾಡುತ್ತಾ ಯುಧಿಷ್ಠಿರನ ಶೋಕ ದೂರಮಾಡುವಂತೆ ಆತನಿಗೆ ಹೇಳಿದುದು (ಶಾಂತಿ 50/13–38). ಭೀಷ್ಮನ ಪ್ರಶಂಸೆ ಮಾಡುತ್ತಾ, ಯುಧಿಷ್ಠಿರನಿಗೆ ಧರ್ಮೋಪದೇಶ ಮಾಡಲು ಆದೇಶಿಸಿದುದು (ಶಾಂತಿ 51/10–18). ಧರ್ಮೋಪದೇಶ ಮಾಡಲು ಭೀಷ್ಮನಿಗೆ ವರಪ್ರದಾನ (ಶಾಂತಿ 52/14–21). ಇವನ ಪ್ರಾತಶ್ಚರ್ಯೆ (ಶಾಂತಿ 53/1–9). ಭೀಷ್ಮನಿಂದಲೇ ಧರ್ಮೋಪದೇಶವಾಗುವ ಕಾರಣ ಹೇಳಿ, ಆತ ಉಪದೇಶಿಸುವಂತೆ ಹೇಳಿದುದು (ಶಾಂತಿ 54/25–39). ಯುಧಿಷ್ಠಿರನು ಲಜ್ಜಿತನೂ, ಭಯಭೀತನೂ ಆದ ಕಾರಣವನ್ನು ಭೀಷ್ಮನೊಡನೆ ಹೇಳಿದುದು (ಶಾಂತಿ 55/11–13). ಜಾತಿ ಸಹೋದರರಲ್ಲಿ ಜಗಳ ಬಾರದಿರುವ ವಿಷಯದಲ್ಲಿ ನಾರದನೊಡನೆ ಕೇಳಿದುದು (ಶಾಂತಿ 81). ಆತನೊಡನೆ ಎಲ್ಲಾ ಭೂತಗಳ ಉತ್ಪತ್ತಿಯ ವರ್ಣನೆ ಮಾಡಿದುದು (ಶಾಂತಿ 207). ಉಗ್ರಸೇನನೊಡನೆ

ನಾರದನ ಗುಣವರ್ಣನೆ ಮಾಡಿದುದು (ಶಾಂತಿ 230/4–24). ಅರ್ಜುನನಿಗೆ ತನ್ನ ಹೆಸರುಗಳ ವ್ಯುತ್ಪತ್ತಿಯನ್ನು ಹೇಳಿದುದು (ಶಾಂತಿ 341/8–51). ಸೃಷ್ಟಿಯ ಪ್ರಾರಂಭಿಕ ಅವಸ್ಥೆಯನ್ನು ಅರ್ಜುನನಿಗೆ ವರ್ಣಿಸಿದುದು (ಶಾಂತಿ 342/3–21). ಅರ್ಜುನನೊಡನೆ ತನ್ನ ಹೆಸರುಗಳ ವ್ಯಾಖ್ಯಾನ ಮಾಡಿದುದು (ಶಾಂತಿ 342/67–116). ಯುಧಿಷ್ಠಿರನಿಗೆ ಮಹಾದೇವ ಮಾಹಾತ್ಮ್ಯದ ಕಥೆ ಹೇಳುವ ಸಂದರ್ಭದಲ್ಲಿ ಉಪಮನ್ಯುವಿನ ಕಥೆ ಹೇಳಿದುದು ಮತ್ತು ತನ್ನ ತಪಸ್ಸು ಮತ್ತು ದರ್ಶನ ಪಡೆದುದರ ವೃತ್ತಾಂತ ತಿಳಿಸಿದುದು (ಅನು 14). ಭಗವತಿ ಉಮೆಯೊಡನೆ ಎಂಟು ವರದಾನ ಪಡೆದುದು. (ಅನು 15/6). ಉಪ ಮನ್ಯುವಿನೊಡನೆ ಶಿವನ ವಿಷಯವಾಗಿ ಮಾತು ಕತೆ (ಅನು 16). ಇವನಿಂದ ಭಗವಂತ ಶಿವನ ಮಹಿಮಾವರ್ಣನೆ (ಅನು) ನಾರದನೊಡನೆ ಪೂಜನೀಯ ಪುರುಷರ ಲಕ್ಷಣ ಕೇಳಿದುದು (ಅನು 31/2–4). ಗೃಹಸ್ಥರ ಪಾಪನಾಶಕ ಅನು ಷ್ಠಾನದ ವಿಷಯವಾಗಿ ಪೃಥ್ವಿಯೊಡನೆ ಪ್ರಶ್ನೆ ಮಾಡಿದುದು (ಅನು 34/21). ಓತಿಕಾಟನ ಜನ್ಮ ದಿಂದ ನೃಗಮಹಾರಾಜನ ಉದ್ಧಾರ ಮಾಡಿ ದುದು (ಅನು 70/7). ನೃಗನೊಡನೆ ಆತನ ದುರ್ಗತಿಯ ಕಾರಣ ಕೇಳಿದುದು (ಅನು 70/8–9). ಬ್ರಾಹ್ಮಣನ ಸಂಪತ್ತನ್ನು ತೆಗೆದುಕೊಳ್ಳಬಾರ ದೆಂಬ ವಿಷಯವಾಗಿ ಘೋಷಣೆ ಮಾಡಿದುದು (ಅನು 70/31). ಪೃಥ್ವಿದೇವಿಯೊಡನೆ ಗೃಹಸ್ಥ ಧರ್ಮದ ಕುರಿತಾಗಿ ಕೇಳಿದುದು. (ಅನು 77/44) ಪರ್ವತವನ್ನು ಉರಿಸಿ, ಪುನಃ ಅದನ್ನು ಪೂರ್ವಪ್ರಕೃತಿಗೆ ತಂದುದು (ಅನು 139/16–21). ಋಷಿಗಳು ಕೇಳಿದಾಗ ಅದರ ರಹಸ್ಯ ಹೇಳಿದುದು (ಅನು 139/30–44). ಭೀಷ್ಮರಿಂದ ಈತನ ಮಹಿಮಾವರ್ಣನೆ (ಅನು 158). ಯುಧಿಷ್ಠಿರನಿಗೆ ಬ್ರಾಹ್ಮಣರ ಮಹಿಮೆಯ ಕುರಿತು ತಿಳಿಸುವ ಪ್ರಸಂಗದಲ್ಲಿ, ಪ್ರದ್ಯುಮ್ನನ ಕೇಳಿಕೆಗೆ ದುರ್ವಾಸರ ಚರಿತ್ರೆ ತಿಳಿಸಿದುದು (ಅನು 159). ಯುಧಿಷ್ಠಿರನಿಗೆ ಶಿವನ ಮಹಿಮೆಯ ವರ್ಣನೆ ಮಾಡಿದುದು (ಅನು 160 ರಿಂದ 161). ದೇಹತ್ಯಾಗ ಮಾಡಲು ಭೀಷ್ಮನಿಗೆ ಅನುಮತಿ ಯನ್ನಿತ್ತದ್ದು (ಅನು 167/46–47). ಭೀಷ್ಮನಿಗಾಗಿ ಶೋಕಿಸುತ್ತಿರುವ ಗಂಗೆಗೆ ಸಮಾಧಾನ ಹೇಳಿದುದು (ಅನು 168/30–35). ಶೋಕಾಕುಲನಾದ ಯುಧಿ ಷ್ಠಿರನಿಗೆ ತಿಳಿಯಪಡಿಸಿದುದು (ಆಶ್ವ 2/2–8). ವಿವಿಧ ಧೃಷ್ಟಾಂತಗಳ ಮೂಲಕ ಯುಧಿಷ್ಠಿರ ನನ್ನು ಸಮಾಧಾನಗೊಳಿಸಿದುದು (ಆಶ್ವ 11ರಿಂದ 13). ಅರ್ಜುನನೊಡನೆ ತಾನು ದ್ವಾರಕೆಗೆ ಹೋಗುವ ಪ್ರಸ್ತಾವಮಾಡಿದುದು (ಆಶ್ವ 15/12–34). ಅರ್ಜುನನು ಕೇಳಿದಾಗ ಪುನಃ ಗೀತೆಯ ಜ್ಞಾನವನ್ನು ಸಿದ್ಧ ಮಹರ್ಷಿ ಮತ್ತು ಕಾಶ್ಯಪರ ಸಂವಾದರೂಪದಲ್ಲಿ ತಿಳಿಸಿದುದು (ಆಶ್ವ 16/9 ರಿಂದ 12). ಪುನಃ ಬ್ರಾಹ್ಮಣಗೀತೆಯ ಮೂಲಕ ಜ್ಞಾನೋಪದೇಶ ಮಾಡಿದುದು (ಆಶ್ವ 20/34). ಅರ್ಜುನನಿಗೆ ಗುರುಶಿಷ್ಯರ ಸಂವಾದ ರೂಪದಲ್ಲಿ, ಬ್ರಹ್ಮ ಮತ್ತು ಮಹರ್ಷಿಗಳ ಪ್ರಶ್ನೋತ್ತರ ರೂಪವಾದ ಮೋಕ್ಷ ಧರ್ಮದ ವರ್ಣನೆ (ಆಶ್ವ 35 ರಿಂದ 51). ಯುಧಿಷ್ಠಿರನ ಅನುಜ್ಞೆಪಡೆದು ಸುಭದ್ರೆ ಮತ್ತು ಸಾತ್ಯಕಿಯೊಂದಿಗೆ ದ್ವಾರಕೆಗೆ ಹೋದುದು (ಆಶ್ವ 52/54–58). ಉತ್ತಂಕಮುನಿ ಕೇಳಿದಾಗ ಕೌರವ ಪಾಂಡವರ ಸಮಾಚಾರ ತಿಳಿಸಿದುದು (ಆಶ್ವ 53/15–18). ಉತ್ತಂಕಮುನಿಗೆ ಅಧ್ಯಾತ್ಮ ತತ್ತ್ವದ ವರ್ಣನೆ ಮಾಡಿದುದು (ಆಶ್ವ 54/2–19). ಉತ್ತಂಕಮುನಿಗೆ ದರ್ಶನವನ್ನಿತ್ತು, ಚಂಡಾಲ ರೂಪಧಾರಿ ಇಂದ್ರನ ರಹಸ್ಯ ತಿಳಿ ಸುತ್ತಾ, ಮರು ದೇಶದಲ್ಲಿ ಉತ್ತಂಕನೆಂಬ ಹೆಸರಿನ ಮೇಘಗಳ ಮೂಲಕ ಮಳೆಯಾಗುವಂತೆ ವರ ಪ್ರದಾನ (ಆಶ್ವ 55/26–37). ರೈವತಕ ಪರ್ವತ ದಲ್ಲಿ ಜರಗುವ ಮಹೋತ್ಸವದಲ್ಲಿ ಭಾಗವಹಿಸಿ ದುದು (ಆಶ್ವ 59/3–4). ಆ ಮಹೋತ್ಸವದಿಂದ ತನ್ನ ಅರಮನೆಗೆ ಹಿಂತಿರುಗಿದುದು (ಆಶ್ವ 59/16). ವಸುದೇವನು ಕೇಳಿದಾಗ ಮಹಾ ಭಾರತ ಯುದ್ಧದ ವೃತ್ತಾಂತ ತಿಳಿಸಿದುದು (ಆಶ್ವ 60/6–36). ಈತನಿಂದ ಅಭಿಮನ್ಯುವಿಗೆ ಶ್ರಾದ್ಧ ಕರ್ಮ (ಆಶ್ವ 62/2–5). ಈತ ಹಸ್ತಿನಾಪುರಕ್ಕೆ ಆಗಮಿಸಿದುದು ಮತ್ತು ಉತ್ತರೆಯ ಮೃತಬಾಲಕ ನನ್ನು ಸಜೀವಗೊಳಿಸುವಂತೆ ಕುಂತಿಯಿಂದ ಈತ ನಲ್ಲಿ ಪ್ರಾರ್ಥನೆ (ಆಶ್ವ 66). ಉತ್ತರೆಯ ಮೃತ ಬಾಲಕನಿಗೆ ಈತನಿಂದ ಜೀವನದಾನ (ಆಶ್ವ 69/16–24). ಉತ್ತರೆಯ ಆ ಶಿಶುವಿನ ನಾಮ ಕರಣ (ಆಶ್ವ 70/11–12). ಯುಧಿಷ್ಠಿರನು

ಅಶ್ವಮೇಧ ಮಾಡಲು ಶ್ರೀಕೃಷ್ಣನ ಸಮ್ಮತಿ (ಆಶ್ವ 71/23–26). ಶ್ರೀಕೃಷ್ಣನು ಬಲರಾಮನ ಜೊತೆಯಲ್ಲಿ ಆಗಮಿಸಿದುದು, ಅರ್ಜುನನು ಯುಧಿಷ್ಠಿರನಿಗೆ ಸಂದೇಶ ತಿಳಿಸಿದುದು ಮತ್ತು ಅವರು ಅನುಭವಿಸಿದ ಅಧಿಕ ಕಷ್ಟಗಳ ಕಾರಣ ತಿಳಿಸಿದುದು (ಆಶ್ವ 86/3–21). ಬ್ರಾಹ್ಮಣರಿಗೆ ದಕ್ಷಿಣೆ ಕೊಡುವ ವಿಚಾರದಲ್ಲಿ, ಯುಧಿಷ್ಠಿರನು ವ್ಯಾಸರ ಆಜ್ಞೆ ಪಾಲಿಸಲು ಹೇಳಿದುದು (ಆಶ್ವ 89/18–19). ಯುಧಿಷ್ಠಿರನಿಗೆ ವಿದಾಯಹೇಳಿ, ಬಂಧುಗಳ ಸಹಿತ ಈತ ದ್ವಾರಕೆಗೆ ಹಿಂತಿರುಗಿದುದು (ಆಶ್ವ 89/37–38). ಶ್ರೀಕೃಷ್ಣನಿಂದ ಧರ್ಮರಾಯನಿಗೆ ವೈಷ್ಣವ ಧರ್ಮ ಸಂಬಂಧಿ ವಿವಿಧ ವಿಷಯಗಳ ಉಪದೇಶ (ಆಶ್ವ 92). ಶಾಪ ವಿಚಾರವನ್ನು ತಿಳಿದು 'ವೃಷ್ಣಿವಂಶೀಯರ ಭವಿಷ್ಯ ಹೀಗೆಯೇ ಆಗತಕ್ಕದ್ದಾಗಿದೆ' ಎಂದು ಹೇಳುತ್ತಾ ಕೃಷ್ಣನ ನಗರ ಪ್ರವೇಶ (ಮೌಸಲ 1/23–24). ಮದಿರಾ ನಿರ್ಮಾಣ ನಿಷೇಧವನ್ನು ಜಾರಿಗೊಳಿಸಿದುದು (ಮೌಸಲ 1/29–31). ದ್ವಾರಕೆಯಲ್ಲಿ ಭಯಂಕರ ಉತ್ಪಾತಗಳನ್ನು ನೋಡಿ, ಯದುವಂಶೀಯರು ತೀರ್ಥಯಾತ್ರೆ ಮಾಡುವಂತೆ ಕೃಷ್ಣನು ಆಜ್ಞೆ ಮಾಡಿದುದು (ಮೌಸಲ 2). ಸಾತ್ಯಕಿ ಮತ್ತು ಪ್ರದ್ಯುಮ್ನರು ಕೊಲ್ಲಲ್ಪಟ್ಟುದನ್ನು ನೋಡಿ ಕುಪಿತನಾದ ಕೃಷ್ಣ ಒಂದು ಹಿಡಿ ಜೊಂಡುಹುಲ್ಲನ್ನು ಎತ್ತಿ, ಅದರಿಂದಲೇ ಭೋಜ ಮತ್ತು ಅಂಧಕಕುಲದ ಪ್ರಮುಖ ಯೋಧರ ಸಂಹಾರ ಮಾಡಿದುದು (ಮೌಸಲ 3/35–37). ಸಾಂಬ ಮತ್ತು ಗದರು ಕೊಲ್ಲಲ್ಪಟ್ಟಾಗ ಕುಪಿತನಾದ ಕೃಷ್ಣನಿಂದ ಸಮಸ್ತ ಯಾದವರ ಸಂಹಾರ (ಮೌಸಲ 3/44–47). ಬಲರಾಮನು ಒಂದು ಮರದ ಕೆಳಗೆ ಧ್ಯಾನಸ್ಥನಾಗಿ ಕುಳಿತುದನ್ನು ಕೃಷ್ಣನು ನೋಡಿದುದು ಮತ್ತು ದಾರುಕನನ್ನು ಅರ್ಜುನನ ಬಳಿಗೆ ಕಳುಹಿಸಿ ಸಂದೇಶ ತಿಳಿಸಿದುದು (ಮೌಸಲ 4/1–3). ಈತ ಬಲರಾಮನೊಂದಿಗೆ ತನ್ನ ನಿರೀಕ್ಷೆಯಲ್ಲಿರುವಂತೆ ಹೇಳಿ ಸ್ತ್ರೀಯರನ್ನು ಕೌಟುಂಬಿಕ ಜನರ ಸಂರಕ್ಷಣೆಗೆ ಒಪ್ಪಿಸುವುದಕ್ಕಾಗಿ, ದ್ವಾರಕೆಗೆ ಹೋದುದು ಮತ್ತು ಅರ್ಜುನನು ಬರುವ ತನಕ ಸ್ತ್ರೀಯರ ರಕ್ಷಣೆಮಾಡುವಂತೆ ತಂದೆಯೊಡನೆ ಹೇಳಿ, ತಾನು ತಪಸ್ಸಿಗಾಗಿ ಬಲರಾಮನ ಬಳಿಗೆ ಹೋಗುವ ವಿಚಾರವನ್ನು ಪ್ರಕಟಿಸಿದುದು (ಮೌಸಲ 4/7–10). ಅಳುತ್ತಿರುವ ಸ್ತ್ರೀಯರಿಗೆ ಧೈರ್ಯವನ್ನಿತ್ತು, ಅರ್ಜುನನು ಬರುವ ವಿಚಾರ ತಿಳಿಸಿ ಹೊರಟು ಹೋಗುವುದು, ಕಾಡಿನ ಏಕಾಂತ ಪ್ರದೇಶದಲ್ಲಿ ಬಲರಾಮನ ಬಳಿಗೆ ಹೋಗಿ, ಅವನ ಮುಖದಿಂದ ಒಂದು ವಿಶಾಲ ಸರ್ಪವು ಹೊರಟು ಸಮುದ್ರದ ಕಡೆಗೆ ಹೋದುದನ್ನು ನೋಡುವುದು (ಮೌಸಲ 4/12–13). ಬಲರಾಮನು ಪರಮಧಾಮಕ್ಕೆ ಹೊರಟು ಹೋದ ಮೇಲೆ ಈತ ವನದಲ್ಲಿ ಸಂಚರಿಸಿದುದು. ಕಳೆದು ಹೋದ ಘಟನೆ ಹಾಗೂ ವಿಚಾರಗಳನ್ನು ಜ್ಞಾಪಿಸಿಕೊಂಡು, ಅವುಗಳ ಕುರಿತು ವಿಮರ್ಶಿಸಿದುದು. ಗಾಂಧಾರಿ ಮತ್ತು ದುರ್ವಾಸರ ನಿವೇದನೆಯನ್ನೂ ನೆನಪಿಸಿಕೊಂಡದ್ದು ಮತ್ತು ಪರಮಧಾಮಕ್ಕೆ ಹೋಗಲು ಯಾವುದಾದರೂ ಕಾರಣವನ್ನು ನಿರೀಕ್ಷಿಸಿದುದು. ಯೋಗಯುಕ್ತನಾಗಿ ನೆಲದಮೇಲೆ ಮಲಗಿದುದು. ಜರಾ ಎಂಬ ಹೆಸರಿನ ವ್ಯಾಧನ ಬಾಣದಿಂದ ಅಂಗಾಲಿಗೆ ಗಾಯವಾಗಿ, ತನ್ನ ತೇಜಸ್ಸಿನಿಂದ ಪ್ರಕಾಶಿಸಲ್ಪಡುತ್ತಾ, ಊರ್ಧ್ವಲೋಕಕ್ಕೆ ಹೋದುದು. ಅಲ್ಲಿ ಅವನ ಸ್ವಾಗತ, ಇಂದ್ರಾದಿ ದೇವತೆಗಳೊಡನೆ ಭೇಟಿ. (ಮೌಸಲ 4/18–28) ಅರ್ಜುನನ ಮೂಲಕ ಈತನ ಶರೀರದ ದಾಹಸಂಸ್ಕಾರ. (ಮೌಸಲ 7/31) ದಿವ್ಯಧಾಮದಲ್ಲಿ ನಾರಾಯಣ ರೂಪದಿಂದ ಈತನ ಉಪಸ್ಥಿತಿ. (ಸ್ವರ್ಗಾ 5/24–26) ಈತನ ಪಟ್ಟದ ರಾಣಿಯರಲ್ಲಿ ರುಕ್ಮಿಣಿ, ಗಾಂಧಾರಿ, ಶೈವ್ಯಾ, ಹೈಮವತಿ ಮತ್ತು ಜಾಂಬವತಿ ಎಂಬ ಐದು ಮಂದಿ ಪತಿಲೋಕದ ಕಾಮನೆಯಿಂದ ಅಗ್ನಿಪ್ರವೇಶ ಮಾಡಿದರು (ಮೌಸಲ 7). ಸತ್ಯಭಾಮೆ ಮತ್ತು ಇತರ ಇಬ್ಬರು ದೇವಿಯರು ತಪಸ್ಸಿಗಾಗಿ ವನಪ್ರವೇಶ ಮಾಡಿದರು (ಮೌಸಲ 7/73–74). ಉಳಿದ ಹದಿನಾರು ಸಾವಿರ ರಾಣಿಯರು ದಸ್ಯುಗಳ ಕೈಯಿಂದ ತಪ್ಪಿ ಹೋಗಿ ಸರಸ್ವತಿ ನದಿಯ ನೀರಿಗೆ ಹಾರಿದರು ಮತ್ತು ಸ್ವರ್ಗದಲ್ಲಿ ಭಗವಂತನೊಡನೆ ಸೇರಿಕೊಂಡರು (ಸ್ವರ್ಗಾ 5/25). (ಈತನ ಎಲ್ಲಾ ರಾಣಿಯರಲ್ಲಿ ಹತ್ತು ಹತ್ತು ಮಂದಿ ಪುತ್ರರು ಜನಿಸಿದ್ದರು. ಇವರಲ್ಲಿ ಪ್ರದ್ಯುಮ್ನ, ಸಾಂಬ, ಚಾರುದೇಷ್ಣ ಮೊದಲಾದವರು ಮುಖ್ಯರು.) ಮಹಾಭಾರತದಲ್ಲಿ ಬಂದ ಕೃಷ್ಣನ ಹೆಸರುಗಳು

– ಅಚ್ಯುತ, ಅಧಿದೇವ, ಅಧೋಕ್ಷಜ, ಆದಿದೇವ, ಅಜ, ಅಮಧ್ಯ, ಅನಾದಿ, ಅನಾದಿಮಧ್ಯ ಪರ್ಯಂತ, ಅನಾದಿನಿಧನ, ಅನಾದ್ಯ, ಅನಂತ, ಅಂಧಕವೃಷ್ಣಿನಾಥ, ಅಸಿತ, ಆತ್ಮಾ, ಅವ್ಯಕ್ತ, ಅವ್ಯಯ, ಭೋಜರಾಜನ್ಯವರ್ಧನ, ಭೂತೇಶ್ವರ, ಭೂತಪತಿ, ಭೂತಾತ್ಮಾ, ಭೂತೇಶ, ಚಕ್ರಧರ, ಚಕ್ರಧಾರಿ, ಚಕ್ರಗದಾಭೃತ್, ಚಕ್ರಗದಾಧರ, ಚಕ್ರ ಗದಾಪಾಣಿ, ಚಕ್ರಪಾಣಿ, ಚಕ್ರಾಯುಧ, ಶೈವ್ಯ ಸುಗ್ರೀವವಾಹನ, ಶಂಭು, ಶಂಖಚಕ್ರ ಗದಾಧರ, ಶಂಖ ಚಕ್ರಗದಾಹಸ್ತ, ಶಂಖಚಕ್ರಗದಾಪಾಣಿ, ಶಂಖಚಕ್ರಾಸಿಪಾಣಿ, ಶಾರ್ಙ್ಗಚಕ್ರಗದಾಧರ, ಶಾರ್ಙ್ಗ ಚಕ್ರಾಸಿಪಾಣಿ, ಶಾರ್ಙ್ಗಧನುರ್ಧರ, ಶಾರ್ಙ್ಗಧನ್ವಾ, ಶಾರ್ಙ್ಗಗದಾಪಾಣಿ, ಶಾರ್ಙ್ಗಗದಾಸಿಪಾಣಿ, ಶಾರ್ಙ್ಗೀ, ಶೌರಿ, ಶೂಲಭೃತ್, ಶೂಲಿ, ದಾಶಾರ್ಹ, ದಶಾರ್ಹಭರ್ತಾ, ದಶಾರ್ಹಾಧಿಪತಿ, ದಾಶಾರ್ಹ ಕುಲವರ್ಧನ, ದಾಶಾರ್ಹನಂದನ, ದಾಶಾರ್ಹ ನಾಥ, ದಾಶಾರ್ಹಸಿಂಹ, ದಾಶಾರ್ಹವೀರ, ದಾಮೋದರ, ದೇವದೇವ, ದೇವದೇವೇಶ, ದೇವದೇವೇಶ್ವರ, ದೇವಕೀಮಾತಃ, ದೇವಕೀ ನಂದನ, ದೇವಕೀಪುತ್ರ, ದೇವಕೀಸುತ, ದೇವಕೀ ತನಯ, ಗದಾಗ್ರಜ, ಗದಪೂರ್ವಜ, ಗರುಡಧ್ವಜ, ಗೋಪಾಲ, ಗೋಪೇಂದ್ರ, ಗೋಪೀಜನಪ್ರಿಯ, ಗೋವಿಂದ, ಹಲಧರಾನುಜ, ಹರಿ, ಹೃಷಿಕೇಶ, ಜನಾರ್ದನ, ಕಂಸಕೇಶಿನಿಷೂದನ, ಕಂಸನಿಷೂ ದನ, ಕೌಸ್ತುಭ ಭೂಷಣ, ಕೇಶವ, ಕೇಶಿಹಂತ, ಕೇಶಿಹಂತಾ, ಕೇಶಿನಿಷೂದನ, ಕೇಶಿಸೂದನ, ಮಹಾಬಾಹು, ಪೀತವಾಸಾ, ರಮಾನಾಥ, ರಾಮಾನುಜ, ಸಂಕರ್ಷಣಾನುಜ, ಸರ್ವದಾ ಶಾರ್ಹಹರ್ತಾ, ಸರ್ವನಾಗರಿಪುಧ್ವಜ, ಸರ್ವ ಯಾದವನಂದನ, ಸತ್ಯ, ಸುಪರ್ಣಕೇತು, ತಾರ್ಕ್ಷ್ಯಧ್ವಜ, ತಾರ್ಕ್ಷ್ಯಲಕ್ಷಣ, ತ್ರೈಲೋಕ್ಯನಾಥ, ತ್ರಿಯುಗ, ವಾಸುದೇವ, ವಸುದೇವಪುತ್ರ, ವಸು ದೇವಸುತ, ವಸುದೇವಾತ್ಮಜ, ವ್ರಜನಾಥ, ವೃಷ್ಣಿ ಶಾರ್ದೂಲ, ವೃಷ್ಣಿಶ್ರೇಷ್ಠ, ವೃಷ್ಣಿಕುಲೋದ್ವಹ, ವೃಷ್ಣಿನಂದನ, ವೃಷ್ಣಿಪತಿ, ವೃಷ್ಣಿಪ್ರವರ, ವೃಷ್ಣಿ ಪ್ರವೀರ, ವೃಷ್ಣಿಪುಂಗವ, ವೃಷ್ಣಿಸತ್ತಮ, ವೃಷ್ಣಿ ಸಿಂಹ, ವೃಷ್ಣಿಜೀವ, ವೃಷ್ಣ್ಯಂಧಕಪತಿ, ವೃಷ್ಣ್ಯಂಧ ಕೋತ್ತಮ, ಯಾದವ, ಯಾದವಶಾರ್ದೂಲ, ಯಾದವಶ್ರೇಷ್ಠ, ಯಾದವಾಗ್ರ್ಯ, ಯಾದವ ನಂದನ, ಯಾದವೇಶ್ವರ, ಯದುಶಾರ್ದೂಲ, ಯದುಶ್ರೇಷ್ಠ, ಯದೂದ್ವಹ, ಯದುಕುಲಶ್ರೇಷ್ಠ, ಯದುಕುಲನಂದನ, ಯದುಕುಲೋದ್ವಹ, ಯದು ನಂದನ, ಯದುಪ್ರವೀರ, ಯದುಪುಂಗವ, ಯದು ಸುಖಾವಹ, ಯದೂತ್ತಮ, ಯದುವಂಶವಿವ ರ್ಧನ, ಯದುವರ, ಯದುವೀರ, ಯದುವೀರ ಮುಖ್ಯ, ಯೋಗೇಶ್ವರ, ಯೋಗೀಶ, ಯೋಗೀಶ್ವರ, ಯೋಗಿ – ಇತ್ಯಾದಿ.

**ಕೃಷ್ಣಕರ್ಣಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/24).

**ಕೃಷ್ಣಕೇಶ** – ಸ್ಕಂದನ ಸೈನಿಕ (ಶಲ್ಯ 45/61).

**ಕೃಷ್ಣದ್ವೈಪಾಯನ** – ಮಹರ್ಷಿ ಪರಾಶರನ ಮಗ. ಸತ್ಯವತಿ ನಂದನ ವ್ಯಾಸ (ಆದಿ 1/10–55). ಹಸ್ತಿ ನಾವತಿಗೆ ಹೋಗುತ್ತಿದ್ದಾಗ ಶ್ರೀಕೃಷ್ಣನಿಗೆ ಮಾರ್ಗ ದಲ್ಲಿ ಈತನ ಭೇಟಿ (ಉದ್ಯೋಗ 83/ 64) (ನೋಡಿರಿ ವ್ಯಾಸ).

**ಕೃಷ್ಣಪರ್ವತ** – ಕುಶದ್ವೀಪದ ಒಂದು ಪರ್ವತ. ಅದು 'ಗೌರ' ಎಂಬ ಹೆಸರಿನ ಮೈನಸಿಲ (ಮನಃ ಶಿಲಾ) ಪರ್ವತದಿಂದ ಪಶ್ಚಿಮ ಭಾಗದಲ್ಲಿದೆ. ಅದು ನಾರಾಯಣನಿಗೆ ವಿಶೇಷಪ್ರಿಯವಾಗಿದೆ (ಭೀಷ್ಮ 12/4).

**ಕೃಷ್ಣವರ್ತ್ಮಾ** – ಅಗ್ನಿದೇವನ ಒಂದು ಹೆಸರು. ಅದನ್ನು ಆಸ್ತೀಕನು, ಜನಮೇಜಯನ ನಾಗ ಯಜ್ಞದಲ್ಲಿ ಅಗ್ನಿಯನ್ನು ಸ್ತುತಿಸುತ್ತಾ, ಉಚ್ಚಾರಣೆ ಮಾಡಿದ್ದನು (ಆದಿ 55/10).

**ಕೃಷ್ಣವೇಣಾ** – ದಕ್ಷಿಣ ಭಾರತದ ಒಂದು ಪವಿತ್ರ ನದಿ. ಅದರ ದೇವಕುಂಡ(ಜಾತಿಸ್ಮರಹ್ರದ)ದಲ್ಲಿ ಸ್ನಾನ ಮಾಡುವುದರಿಂದ ಪೂರ್ವಜನ್ಮದ ಸ್ಮೃತಿ ಉಂಟಾಗುತ್ತದೆ (ಸಭಾ 9/20) (ಭೀಷ್ಮ 9/28; ವನ 85/37). ಇದು ಅಗ್ನಿಯ ಉತ್ಪತ್ತಿ ಸ್ಥಾನ ವಾಗಿದೆ (ವನ 222/26).

**ಕೃಷ್ಣಾ** – (1) ದ್ರೌಪದಿ. ಆಕೆ ಯಜ್ಞವೇದಿಯಲ್ಲಿ ಹುಟ್ಟಿದ್ದಳು. (ಆದಿ 63/110) (ನೋಡಿರಿ ದ್ರೌಪದೀ) (2) ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/33).
(3) ದುರ್ಗೆಯ ಒಂದು ಹೆಸರು (ವಿರಾಟ 6/9).
(4) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/ 22).

**ಕೃಷ್ಣಾತ್ರೇಯ** – ಒಬ್ಬ ಪ್ರಾಚೀನ ಋಷಿ. ಈತ

10

ತಪೋಬಲದ ಮೂಲಕ ಚಿಕಿತ್ಸಾಶಾಸ್ತ್ರ (ಆಯುರ್ವೇದ)ದಲ್ಲಿ ಎಲ್ಲರಿಗಿಂತ ಮೊದಲು ಜ್ಞಾನಪ್ರಾಪ್ತಿ ಮಾಡಿಕೊಂಡಿದ್ದನು (ಶಾಂತಿ 210/21).

**ಕೃಷ್ಣಾನುಭೌತಿಕ** – ಒಬ್ಬ ಮಹರ್ಷಿ. ಈತ ಉತ್ತರಾಯಣದ ಆರಂಭದಲ್ಲಿ ಶರಶಯ್ಯಾಶಾಯಿ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/11).

**ಕೃಷ್ಣೌಜಾ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಕೇಕಯ** – (1) ಒಂದು ಭಾರತೀಯ ಜನಪದ (ವ್ಯಾಸ ಮತ್ತು ಶತಲಜದ ಮಧ್ಯದ ಭೂಭಾಗ) (ಭೀಷ್ಮ 9/48). ದಶರಥನ ಪತ್ನಿ ಕೈಕೇಯಿಯ ತಂದೆಯ ರಾಜ್ಯ ಇಲ್ಲಿಯೇ ಇತ್ತು. ಆದುದರಿಂದಲೇ ಆಕೆ ಕೈಕೇಯಿ ಎಂದು ಕರೆಯಲ್ಪಡುತ್ತಿದ್ದಳು (ವನ 277/15).

(2) ಕೈಕಯ ಅಥವಾ ಕೈಕೇಯ – ಕೇಕಯ ದೇಶದ ನಿವಾಸಿ ಅಥವಾ ಅಧಿಪತಿ, ರಾಜ ಮತ್ತು ರಾಜಕುಮಾರ. ವಿಶೇಷವಾಗಿ ಕೇಕಯ ದೇಶದ ಐದು ರಾಜಕುಮಾರರು. ಅವರು ಪರಸ್ಪರ ಸಹೋದರರಾಗಿದ್ದರು ಮತ್ತು ಪಾಂಡವ ಪಕ್ಷದಲ್ಲಿ ಸಮ್ಮಿಲಿತರಾಗಿದ್ದರು (ವನ 120/26) ದ್ರೋಣಾಚಾರ್ಯನೊಡನೆ ಇವರ ಯುದ್ಧ (ದ್ರೋಣ 21/23–29). ಇವರು ದ್ರೋಣಾಚಾರ್ಯನಿಂದ ಕೊಲ್ಲಲ್ಪಟ್ಟಿದ್ದರು (ಸ್ತ್ರೀ 25/15). ಇವರ ದಾಹಸಂಸ್ಕಾರ (ಸ್ತ್ರೀ 26/36).

(3) ಕೇಕಯ ದೇಶದ ಇಬ್ಬರು ರಾಜಕುಮಾರರು ವಿಂದ ಮತ್ತು ಅನುವಿಂದ. ದುರ್ಯೋಧನನ ಪಕ್ಷದಲ್ಲಿದ್ದರು. ಇವರು ಸಾತ್ಯಕಿಯಿಂದ ಕೊಲ್ಲಲ್ಪಟ್ಟರು (ಕರ್ಣ 13/20–26).

(4) ಒಬ್ಬ ಸೂತರಾಜ. ಅವನು ಇದೇ ಹೆಸರಿನಿಂದ (ಕೇಕಯ) ವಿಖ್ಯಾತನಾಗಿದ್ದನು. ಮಾಳವ ಕನ್ಯೆಯರಿಬ್ಬರು ಇವನ ಪತ್ನಿಯರಾಗಿದ್ದರು. ಹಿರಿಯ ಮಾಳವಿಯಲ್ಲಿ ಕೀಚಕ, ಉಪಕೀಚಕ ಹುಟ್ಟಿದ್ದರು ಮತ್ತು ಚಿಕ್ಕವಳಿಂದ ಕೈಕೆಯಿ ಸುಧೇಷ್ಣೆಯ ಜನನವಾಗಿತ್ತು. ಆಕೆ ವಿರಾಟ ರಾಜನ ಪತ್ನಿಯಾಗಿದ್ದಳು (ವಿರಾಟ 16).

**ಕೇತು** – (1) ಒಂದು ಗ್ರಹ. ಒಬ್ಬನೇ ಆಗಿದ್ದ ರಾಹುವಿನ ಶಿರಚ್ಛೇದನದಿಂದ ರುಂಡಮುಂಡಗಳು ಬೇರೆ ಬೇರಾಗಿದ್ದವು (ಆದಿ 19/6–8). ಈತ ರಾಹುವಿನ ಮುಂಡ ಅಥವಾ ಬಾಲದ ಭಾಗವೆಂದು ಹೇಳಲಾಗಿದೆ. ಅರ್ಜುನ ಮತ್ತು ಕರ್ಣನ ಧ್ವಜಗಳಿಗೆ ರಾಹುಕೇತುಗಳ ಉಪಮೆ ಕೊಡಲ್ಪಟ್ಟಿದೆ (ಕರ್ಣ 87/92).

(2) ಒಬ್ಬ ಪ್ರಾಚೀನ ಋಷಿ. ಇವನಿಗೆ ಸ್ವಾಧ್ವಾಯದ ಮೂಲಕ ಸ್ವರ್ಗಪ್ರಾಪ್ತಿ (ಶಾಂತಿ 26/7).

(3) ಶಿವನ ಒಂದು ಹೆಸರು. (ಅನು 17/38)

**ಕೇತುಮಂತ** – (ಕೇತುಮಾನ್) (1) ಒಬ್ಬ ದಾನವ. ಕಶ್ಯಪ ಪತ್ನಿ ದನುವಿನ ಮಗ (ಆದಿ 65/24) ಈತನೇ 'ಅಮಿತೌಜಾ' ಹೆಸರಿನಲ್ಲಿ ಪಾಂಚಾಲಕ್ಷತ್ರಿಯ ವೀರನ ರೂಪದಲ್ಲಿ ಉತ್ಪನ್ನನಾಗಿದ್ದನು (ಆದಿ 67/11). ಅಮಿತೌಜನು ಪಾಂಡವ ಪಕ್ಷದ ಮಹಾರಥಿ ವೀರನಾಗಿದ್ದನು.

(2) ಯುಧಿಷ್ಠಿರನ ಸಭೆಯಲ್ಲಿರುವ ಒಬ್ಬ ರಾಜ. (ಸಭಾ 4/29). ಕಲಿಂಗ ರಾಜ ಶ್ರುತಾಯುಧನ ಮಿತ್ರ, ಕೌರವಪಕ್ಷದ ಯೋಧ (ಭೀಷ್ಮ 17/32). ಭೀಮಸೇನನೊಂದಿಗೆ ಈತನ ಯುದ್ಧ ಮತ್ತು ಈತನ ವಧೆ (ಭೀಷ್ಮ 54/77).

(3) ಯುಧಿಷ್ಠಿರನ ಸಭೆಯನ್ನು ಸುಶೋಭಿತಗೊಳಿಸುವ ಒಬ್ಬ ನರೇಶ. ಅವನು ಈ ಹಿಂದೆ ಹೇಳಿದ ಕೇತುಮಂತನಿಗಿಂತ ಭಿನ್ನನಾಗಿದ್ದನು (ಸಭಾ 4/32). ಈತ ಪಾಂಡವಪಕ್ಷದ ಯೋಧನಾಗಿದ್ದನು. ಧೃತರಾಷ್ಟ್ರನಿಂದ ಈತನ ಪರಾಕ್ರಮದ ವರ್ಣನೆ (ದ್ರೋಣ 10/44).

(4) ದ್ವಾರಕೆಯಲ್ಲಿ ಶ್ರೀಕೃಷ್ಣನ ಒಂದು ಸೌಧದ ಹೆಸರು. ಅಲ್ಲಿ ಶ್ರೀಕೃಷ್ಣನ ಪತ್ನಿ ಸುದತ್ತಾ ವಾಸಿಸುತ್ತಿದ್ದಳು (ಸಭಾ 38/29).

**ಕೇತುಮಾಲ** – ಜಂಬೂದ್ವೀಪದ ಒಂಭತ್ತು ದೇಶಗಳಲ್ಲಿ ಒಂದು. ಅದು ದೇವತೆಗಳಂತಿರುವ ಪುರುಷರೂ, ಸುಂದರಿ ಸ್ತ್ರೀಯರೂ ಇರುವ ನಿವಾಸಭೂಮಿಯಾಗಿತ್ತು. ಇದನ್ನು ಅರ್ಜುನನು ಗೆದ್ದಿದ್ದನು (ಸಭಾ 28/6). ಈ ದ್ವೀಪ ಅಥವಾ ದೇಶ ಮೇರುಪರ್ವತದ ಪಶ್ಚಿಮಭಾಗದಲ್ಲಿದೆ. ಇದೇ ಜಂಬೂಖಂಡ ಪ್ರದೇಶವಾಗಿದೆ. ಅಲ್ಲಿರುವ ಜನರು ಹತ್ತು ಸಾವಿರ ವರ್ಷಗಳ ಆಯುಸ್ಸಿನವರಾಗಿರುತ್ತಾರೆ (ಭೀಷ್ಮ 6/13, 31, 32). ಇಲ್ಲಿ ಪುರುಷರು ಚಿನ್ನದ ಬಣ್ಣದವರೂ, ಸ್ತ್ರೀಯರು ಅಪ್ಸರೆಯರಿಗೆ ಸಮಾನ ಸುಂದರಿಯೂ

ಆಗಿರುತ್ತಾರೆ. ಇವರಿಗೆ ಎಂದೂ ರೋಗ ಶೋಕ ಗಳಿರುವುದಿಲ್ಲ (ಭೀಷ್ಮ 6/32–33).

**ಕೇತುಮಾಲಾ** – ಪಶ್ಚಿಮದಲ್ಲಿ ಜಂಬೂಮಾರ್ಗದ ಅಂತ್ಯದಲ್ಲಿರುವ ಒಂದು ತೀರ್ಥ (ವನ 89/15).

**ಕೇತುವರ್ಮಾ** – ತ್ರಿಗರ್ತದೇಶದ ಒಬ್ಬ ರಾಜ ಕುಮಾರ. ಅವನು ತ್ರಿಗರ್ತರಾಜ ಸೂರ್ಯ ವರ್ಮನ ತಮ್ಮನಾಗಿದ್ದನು. ಅಶ್ವಮೇಧದ ಅಶ್ವರಕ್ಷಕ ನಾಗಿ ಹೋದ ಅರ್ಜುನನೊಡನೆ ಈತ ಯುದ್ಧ ಮಾಡಿ ಕೊಲ್ಲಲ್ಪಟ್ಟನು (ಆಶ್ವ 74/14–15).

**ಕೇತುಶೃಂಗ** – ಒಬ್ಬ ಪ್ರಾಚೀನ ರಾಜ. ಅವನು ಕಾಲಾಧೀನನಾಗಿದ್ದನು (ಆದಿ 1/237).

**ಕೇದಾರ** – ಕುರುಕ್ಷೇತ್ರದ ಒಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಪುಣ್ಯ ಪ್ರಾಪ್ತಿ (ವನ 83/72).

**ಕೇರಲ** – (1) ಒಂದು ಮ್ಲೇಚ್ಛ ಜಾತಿ. ವಶಿಷ್ಠನ ಹೋಮಧೇನುವಾದ ನಂದಿನಿ ತನ್ನ ಬಾಯಿಯ ನೊರೆಯಿಂದ ಕೇರಲ, ಹೂಣ ಇತ್ಯಾದಿ ಹತ್ತು ರೀತಿಯ ಮ್ಲೇಚ್ಛರ ಸೃಷ್ಟಿಮಾಡಿದ್ದಳು (ಆದಿ 174/38).

(2) ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/58). ಅಲ್ಲಿ ರಾಜ ಮತ್ತು ನಿವಾಸಿಗಳು ಕೇರಲರೆಂದೇ ಕರೆಯಲ್ಪಡುತ್ತಾರೆ. ಸಹದೇವನು ದೂತರ ಮೂಲಕ ಕೇರಲ ದೇಶವನ್ನು ವಶಪಡಿಸಿ ಕೊಂಡನು ಮತ್ತು ತೆರಿಗೆ ಕೊಡಲು ಒತ್ತಾಯಿಸಿ ದನು (ಸಭಾ 31/71–72). ಕೇರಲ ನರೇಶನು ಯುಧಿಷ್ಠಿರನಿಗೆ ಗಂಧ, ಅಗರು, ಮುತ್ತು, ವೈದೂ ರ್ಯ ಮತ್ತು ಚಿತ್ರಕವೆಂಬ ಹೆಸರಿನ ರತ್ನವನ್ನು ಉಡುಗೊರೆ ಕೊಟ್ಟನು (ಸಭಾ 51/4). ಕರ್ಣನು ದಿಗ್ವಿಜಯ ಸಮಯದಲ್ಲಿ ಇಲ್ಲಿರುವ ರಾಜನನ್ನು ಗೆದ್ದನು ಮತ್ತು ದುರ್ಯೋಧನನಿಗೆ ಕರಕೊಡುವ ವನಾಗಿ ಮಾಡಿದ್ದನು (ವನ 254/15–16).

**ಕೇವಲಾ** – ಒಂದು ನಗರ. ಅದನ್ನು ದಿಗ್ವಿಜಯ ಕಾಲದಲ್ಲಿ ಕರ್ಣನು ಗೆದ್ದಿದ್ದನು (ವನ 254/10–11).

**ಕೇಶಯಂತ್ರೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ಕೇಶವ** – ಶ್ರೀಕೃಷ್ಣನ ಒಂದು ಹೆಸರು. ಇದರ ನಿರುಕ್ತಿ (ಶಾಂತಿ 34/48–49). ಕೇಶವನೆಂಬ ಹೆಸರು ಮಹಾಭಾರತದಲ್ಲಿ ಅನೇಕ ಸ್ಥಳಗಳಲ್ಲಿ ಪ್ರಯುಕ್ತವಾಗಿದೆ (ಭೀಷ್ಮ 25/31; 26/54; 27/1; 34/14; 35/35; 42/76).

**ಕೇಶಿನಿ** – (1) ಒಬ್ಬ ಅಪ್ಸರೆ. ಈಕೆ ಪ್ರಾಧಾ ಎಂಬವಳ ಗರ್ಭದಿಂದ ದೇವರ್ಷಿ ಕಶ್ಯಪನ ಮೂಲಕ ಜನ್ಮತಾಳಿದಳು (ಆದಿ 65/50).

(2) ಮಹಾರಾಜ ಅಜಮೀಢನ ತೃತೀಯ ಪತ್ನಿ. ಈಕೆಯ ಗರ್ಭದಿಂದ ಅಜಮೀಢನ ಮೂಲಕ ಜಹ್ನು, ವ್ರಜನ ಮತ್ತು ರೂಪಿಣ ಎಂಬ ಮೂವರು ಪುತ್ರರಾದರು (ಆದಿ 94/32).

(3) ದಮಯಂತಿಯ ದಾಸಿ. ಬಾಹುಕನೆಂಬ ಹೆಸರಿನ ನಲನೊಡನೆ ಈಕೆಯ ಸಂವಾದ (ವನ 74). ಈಕೆಯಿಂದ ಬಾಹುಕನ ಪರೀಕ್ಷೆ (ವನ 75).

(4) ಉಮಾದೇವಿಯ ಅನುಗಾಮಿನಿ ಸಹಚರಿ (ವನ 231/48).

(5) ಒಬ್ಬ ಸುಂದರಿ ಕನ್ಯೆ. ಆಕೆಗಾಗಿ ವಿರೋಚನ ಮತ್ತು ಸುಧನ್ವರೊಳಗೆ ಸಂವಾದವಾಗಿತ್ತು (ಉದ್ಯೋಗ 35/5–15).

**ಕೇಶೀ** – (1) ಒಬ್ಬ ದಾನವ. ಕಶ್ಯಪಪತ್ನಿ ದನುವಿನ ಪುತ್ರ (ಆದಿ 65/23). ಈತನೇ ವಿಷ್ಣುಭಗವಂತನೊಂದಿಗೆ ಹದಿಮೂರು ದಿನಗಳ ತನಕ ಹೋರಾಡಿದ್ದನು (ವನ 134/20). ಇವನಿಂದ ದೇವಸೇನೆಯ ಅಪಹರಣ (ವನ 223/9). ಈತ ಇಂದ್ರನಿಂದ ಪರಾಜಿತನಾಗಿ ಓಡಿದನು (ವನ 223/15).

(2) ಒಬ್ಬ ದೈತ್ಯ. ಅವನು ಕಂಸನ ಅನುಚರನಾಗಿದ್ದನು. ಇವನ ಶರೀರದಲ್ಲಿ ಹತ್ತು ಸಾವಿರ ಆನೆಗಳ ಬಲವಿತ್ತು. ಇವನು ಕುದುರೆಯ ರೂಪದಲ್ಲೇ ಇರುತ್ತಿದ್ದನು. ಕಂಸನ ಪ್ರೇರಣೆಯಿಂದ ಶ್ರೀಕೃಷ್ಣನನ್ನು ಕೊಲ್ಲಲು ಬಂದಿದ್ದನು. ಆದರೆ ಸ್ವತಃ ಶ್ರೀಕೃಷ್ಣನಿಂದ ಮಡಿದನು (ಸಭಾ 38). (ಇವನು ವೃಂದಾವನದಲ್ಲಿ ಕೊಲ್ಲಲ್ಪಟ್ಟ ಸ್ಥಳ ಈಗ ಕೇಶೀಘಾಟ್ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ) ಕೃಷ್ಣನು ಕೇಶಿಯನ್ನು ಧಾರ್ಮಿಕ ಕ್ರಮದಿಂದ ಕೊಂದಿದ್ದನು. ಈ ಕುರಿತು ಕೃಷ್ಣ ಶಪಥ ಪೂರ್ವಕ ಘೋಷಣೆಮಾಡಿದ್ದನು (ಆಶ್ವ 69/23). ಈತನಿಂದ ಕೇಶೀವಧೆಯ ವರ್ಣನೆ (ಮೌಸಲ 6/10).

**ಕೇಸರ** – ಶಾಕದ್ವೀಪದ ಒಂದು ಪರ್ವತ. ಅಲ್ಲಿ ವಾಯುವಿನಲ್ಲಿ ಕೇಸರದ ಸುಗಂಧ ತುಂಬಿರುತ್ತದೆ

(ಭೀಷ್ಮ 11/23).

**ಕೇಸರಿ** – ಒಬ್ಬ ವಾನರರಾಜ. ಅವನ ಕ್ಷೇತ್ರಳಾಗಿದ್ದ ಅಂಜನಾ ದೇವಿಯ ಗರ್ಭದಿಂದ ವಾಯುವಿನ ಮೂಲಕ ಹನುಮಂತನ ಜನ್ಮವಾಗಿತ್ತು (ವನ 147/27).

**ಕೈಕೆಯಿ** – (1) ಪೂರುವಂಶದ ಅಜಮೀಢ ರಾಜನ ಪತ್ನಿ (ಆದಿ 95/37).

(2) ಮಹಾರಾಜ ದಶರಥನ ಪಟ್ಟಮಹಿಷಿ. ಭರತನ ತಾಯಿ (ವನ 274/8). ಈಕೆ ಮಹಾ ರಾಜ ದಶರಥನೊಡನೆ ಭರತನಿಗಾಗಿ ರಾಜ್ಯ ಮತ್ತು ರಾಮನಿಗೆ ವನವಾಸವಾಗಬೇಕೆಂಬ ವರ ವನ್ನು ಬೇಡಿದುದು (ವನ 277/26). ಭರತನು ರಾಜ್ಯಗ್ರಹಣ ಮಾಡುವಂತೆ ಈಕೆ ಹೇಳಿದುದು (ವನ 277/32).

(3) ಸೂತರಾಜ ಕೇಕಯನ ಕಿರಿಯ ಪತ್ನಿ ಮಾಲವಿಯ ಗರ್ಭದಿಂದ ಹುಟ್ಟಿದ ಸುಧೇಷ್ಣೆ. ಈಕೆ ವಿರಾಟರಾಜನ ಪತ್ನಿಯಾಗಿದ್ದಳು (ವಿರಾಟ 16). ಕೇಕಯ ದೇಶದ ರಾಜರ ಎಲ್ಲಾ ಕುಮಾರಿಯರು ಕೈಕೇಯಿ ಎಂದು ಹೇಳಲ್ಪಡು ತ್ತಾರೆ. ಉದಾಹರಣೆಗಾಗಿ ಸಾರ್ವಭೌಮನ ಪತ್ನಿ ಮತ್ತು ಜಯತ್ಸೇನನ ತಾಯಿ ಸುನಂದಾ (ಆದಿ 95/16). ಪರೀಕ್ಷಿತ ಪುತ್ರ ಭೀಮಸೇನನ ಧರ್ಮ ಪತ್ನಿ ಹಾಗೂ ಪ್ರತಿಶ್ರವನ ತಾಯಿ ಕುಮಾರಿ (ಆದಿ 95/43).

**ಕೈಟಭ** – (1) ಒಬ್ಬ ಮಹಾನ್ ಅಸುರ. ಅವನು ಮಧುವಿನ ಸಹೋದರ ಮತ್ತು ಸಹಚರನಾಗಿ ದ್ದನು. ಇವರಿಬ್ಬರ ಜನನ ಭಗವಾನ್ ವಿಷ್ಣುವಿನ ಕಿವಿಯ ಕಶ್ಮಲದಿಂದಾಗಿತ್ತು. ಭಗವಂತನು ಮಣ್ಣಿನಿಂದ ಅವರ ಆಕೃತಿ ಮಾಡಿದ್ದನು. ಈ ಮೂರ್ತಿಗಳಲ್ಲಿ ವಾಯುವು ಪ್ರವೇಶಮಾಡಿದ್ದ ರಿಂದ ಇವರು ಪ್ರಾಣಧಾರಣೆ ಹೊಂದಿದರು. ಇವನ ಜೊತೆಗಾರನಿಗೆ ಮಧುವೆಂದೂ ಈತನಿಗೆ ಕೈಟಭನೆಂದೂ ಹೆಸರಾಗಲು ಕಾರಣ (ಸಭಾ 38). ವಿಷ್ಣುವಿನಿಂದ ಇವರಿಬ್ಬರ ವಧೆ (ಸಭಾ 38). ಮಧುಸಹಿತನಾಗಿ ಕೈಟಭನ ಹುಟ್ಟಿನ ವರ್ಣನೆ. ನಾಭಿಕಮಲದಲ್ಲಿ ಭಗವತ್ಪ್ರೇರಣೆಯಿಂದ ನೀರಿನ ಎರಡುಬಿಂದುಗಳು ಬಿದ್ದವು. ಅವು ರಜೋಗುಣ ಮತ್ತು ತಮೋಗುಣದ ಪ್ರತೀಕವಾಗಿ ದ್ದವು. ಭಗವಂತನು ಆ ಎರಡೂ ಬಿಂದುಗಳ ಕಡೆಗೆ ನೋಡಿದನು. ಒಂದು ಬಿಂದು ಮಧುವಾ ಗಿಯೂ, ಎರಡನೇ ಬಿಂದು ಕೈಟಭನಾಗಿಯೂ ಆಕಾರ ಹೊಂದಿದವು (ಶಾಂತಿ 347/25–26). ಭಗವಾನ್ ಹಯಗ್ರೀವನಿಂದ ಈತನ ವಧೆ (ಶಾಂತಿ 347/69–70).

(2) ಒಬ್ಬ ದಾನವ. ಅವನು ಒಮ್ಮೆ ಈ ಪೃಥ್ವಿಯ ಅಧಿಪತಿಯಾಗಿದ್ದನು. ಆದರೆ ಇದನ್ನು ಬಿಟ್ಟು ಸತ್ತು ಹೋದನು (ಶಾಂತಿ 227/53).

**ಕೈತವ** – (1) ಶಕುನಿಯ ಮಗನಾದ ಉಲೂಕ (ಆದಿ 185/22).

(2) ಒಂದು ಭಾರತೀಯ ಜನಪದ (ಭೀಷ್ಮ 18/13).

**ಕೈರಾತಪರ್ವ**– ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 38 ರಿಂದ 41 ವರೆಗೆ).

**ಕೈಲಾಸ** – ಒಂದು ಪರ್ವತ. ಅದು ಕುಬೇರ ಮತ್ತು ಪರಮೇಶ್ವರನ ನಿವಾಸಸ್ಥಾನವಾಗಿದೆ (ವನ 109/16–17; 141/11–12). ಇಲ್ಲಿ ಭಗವಂತನಾದ ಶಿವನ ಪ್ರಸನ್ನತೆಗಾಗಿ ಶ್ವೇತಕಿ ಉಗ್ರತಪಸ್ಸು ಮಾಡಿದ್ದನು (ಆದಿ 222/36–40). ಕೈಲಾಸದ ಉತ್ತರಕ್ಕೆ ಮೈನಾಕವಿದೆ. ಅಲ್ಲಿ ಮಯಾಸುರನು ಮಣಿಮಯ ಭಾಂಡವನ್ನು ಸಿದ್ಧಪಡಿಸಿ ಇರಿಸಿ ದ್ದನು (ಸಭಾ 3/2–9). ಕೈಲಾಸಪರ್ವತನು ಕುಬೇರನ ಸಭಾಭವನಕ್ಕೆ ಹೋಗಿ ಅವನ ಉಪಾ ಸನೆ ಮಾಡುತ್ತಾನೆ (ಸಭಾ 10/31–33). ವ್ಯಾಸನು ಕೈಲಾಸಕ್ಕೆ ಹೋಗಿದ್ದನು (ಸಭಾ 46/17). ಸಗರ ರಾಜನೂ ತನ್ನ ಇಬ್ಬರು ಪತ್ನಿಯರೊಡನೆ ಕೈಲಾಸ ಪರ್ವತದಲ್ಲಿ ತಪಸ್ಸು ಮಾಡಿದ್ದನು (ವನ 106/10). ಶಿವನನ್ನು ಪ್ರಸನ್ನಗೊಳಿಸಲು ಭಗೀರಥನು ಕೈಲಾಸದಲ್ಲಿ ತಪಸ್ಸು ಮಾಡಿದ್ದನು (ವನ 108/26). ಕೈಲಾಸಪರ್ವತ ಆರು ಯೋಜನ ಎತ್ತರವಾಗಿದೆ. ಅಲ್ಲಿಗೆ ಎಲ್ಲಾ ದೇವತೆ ಗಳು ಬರುತ್ತಿರುತ್ತಾರೆ. ಅದರ ಹತ್ತಿರವೇ ವಿಶಾಲಾ (ಬದರಿಕಾಶ್ರಮ) ಇದೆ. ಕುಬೇರಭವನ ರೂಪದ ಕೈಲಾಸದಲ್ಲಿ ಅಸಂಖ್ಯಾತ ಯಕ್ಷ, ರಾಕ್ಷಸ, ಕಿನ್ನರ, ಸುಪರ್ಣ, ನಾಗ ಮತ್ತು ಗಂಧರ್ವರಿರುತ್ತಾರೆ (ವನ 141/11–12). ಕೈಲಾಸ ಶಿಖರದ ಹತ್ತಿರವೇ ಕುಬೇರನ ಕೊಳವಿದೆ. ಅಲ್ಲಿಗೆ ಭೀಮಸೇನ ಹೋಗಿದ್ದನು (ವನ 153/1–2). ಅಲ್ಲಿಗೆ ಇತರ ಪಾಂಡವರ ಗಮನ (ವನ 155/23). ಕೈಲಾಸ

ದಲ್ಲಿ ಕುಬೇರ ಯಕ್ಷರಾಕ್ಷಸರ ರಾಜನಾಗಿ ಮಾಡಲ್ಪಟ್ಟನು (ಉದ್ಯೋಗ 111/11). ಅಷ್ಟಾವಕ್ರನು ಕೈಲಾಸದ ಮೂಲಕ ಉತ್ತರದಿಕ್ಕಿನ ಕಡೆಗೆ ಹೋದನು. ಅಲ್ಲಿ ಕುಬೇರ ಭವನದಲ್ಲಿ ಅವನಿಗೆ ಸತ್ಕಾರವಾಗಿತ್ತು (ಅನು 19/31). ದೇವಗಂಧರ್ವ ಸೇವಿತ ಕೈಲಾಸದ ಸುರಮ್ಯ ಶಿಖರದ ಮೇಲೆ ಸುರಭಿಯು ತಪಸ್ಸು ಮಾಡಿದಳು (ಅನು 83/28–30).

**ಕೈಲಾಸಕ** (ಅಥವಾ ಕೈಲಾಸ) – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/11).

**ಕೈಶಿಕ** – ಒಂದು ಪ್ರಾಚೀನ ದೇಶ. ವಿದರ್ಭ ರಾಜ ಭೀಷ್ಮಕನು ಅದನ್ನು ಜಯಿಸಿದ್ದನು (ಸಭಾ 14/21).

**ಕೋಕನದ** – (1) ಒಬ್ಬ ಪ್ರಾಚೀನ ಕ್ಷತ್ರಿಯ ರಾಜ, ದಿಗ್ವಿಜಯ ಸಂದರ್ಭದಲ್ಲಿ ಅರ್ಜುನನಿಂದ ಭಯಭೀತನಾಗಿ ಆತನಿಗೆ ಶರಣಾಗತನಾಗಿದ್ದನು (ಸಭಾ 27/8).
(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).
(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).
(4) ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಕೋಕವಕ** – ಒಂದು ಭಾರತೀಯ ಜನಪದ (ಭೀಷ್ಮ 9/61).

**ಕೋಕಾಮುಖ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಪೂರ್ವಜನ್ಮದ ಸ್ಮೃತಿ ಜಾಗ್ರತವಾಗುತ್ತದೆ (ವನ 84/158).

**ಕೋಕಿಲಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ಕೊಂಕಣ** – ದಕ್ಷಿಣ ಭಾರತದ ಒಂದು ಜನಪದ. (ಭೀಷ್ಮ 9/60).

**ಕೋಟರಕ** – ಕಶ್ಯಪವಂಶದ ಒಂದು ನಾಗ (ಉದ್ಯೋಗ 103/12).

**ಕೋಟರಾ** – (1) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/14).
(2) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ಕೋಟಿಕಾಸ್ಯ** (ಕೋಟಿಕ) – ಶಿಬಿನರೇಶ ಸುರಥನ ಮಗ. ಈತ ಕಾಡಿನಲ್ಲಿ ಜಯದ್ರಥನೇ ಮೊದಲಾದ ಒಡನಾಡಿಗಳನ್ನು ದ್ರೌಪದಿಗೆ ಪರಿಚಯ ಮಾಡಿಸಿದ್ದನು (ವನ 165). ಭೀಮಸೇನನಿಂದ ಈತನ ವಧೆ (ವನ 271/26).

**ಕೋಟಿತೀರ್ಥ** – ಒಂದು ತೀರ್ಥ. ಅಲ್ಲಿ ಆಚಮನ ಮಾಡಿದರೆ ಅಶ್ವಮೇಧ ಯಜ್ಞದ ಫಲ ಸಿಗುತ್ತದೆ (ವನ 82/49; 84/77; 85/61). ಇದು ಕುರುಕ್ಷೇತ್ರದ ಅಂತರ್ಗತವಾಗಿದೆ (ವನ 83/17; 83/200).

**ಕೋಟಿಶ** – ವಾಸುಕಿಕುಲದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 57/5).

**ಕೋಪವೇಗ** – ಒಬ್ಬ ಮಹರ್ಷಿ. ಅವನು ಯುಧಿಷ್ಠಿರನ ಸಭೆಯಲ್ಲಿ ಉಪಸ್ಥಿತನಾಗಿದ್ದನು (ಸಭಾ 4/16).

**ಕೋಲಗಿರಿ** – ದಕ್ಷಿಣ ಭಾರತದ ಒಂದು ಪರ್ವತ ಕೋಲಾಚಲ. ಅಲ್ಲಿರುವ ನಿವಾಸಿಗಳನ್ನು ಸಹದೇವನು ಗೆದ್ದಿದ್ದನು (ಸಭಾ 31/68).

**ಕೋಲಾಹಲ** – ಪ್ರಾಚೀನ ಕಾಲದ ಒಂದು ಸಚೇತನ ಪರ್ವತ. ಅವನು ಕಾಮವಶನಾಗಿ ದಿವ್ಯರೂಪಧಾರಿಣಿಯಾದ ಶುಕ್ತಿಮತಿ ನದಿಯನ್ನು ತಡೆದಿದ್ದನು (ಆದಿ 63/35–36). ಇವನ ಮೇಲೆ ಉಪರಿಚರ ವಸುವಿನಿಂದ ಪದಾಘಾತ (ಆದಿ 63/36). ಇವನಿಂದಾದ ಶುಕ್ತಿಮತಿ ನದಿಯ ಗರ್ಭದಿಂದ ಅವಳಿ ಸಂತಾನದ ಜನನ (ಆದಿ 63/37).

**ಕೋಲಿಕ** – ವಿಡಾಲಕೋಪಾಖ್ಯಾನದಲ್ಲಿ ಬಂದಿರುವ ಒಂದು ಇಲಿಯ ಹೆಸರು (ಉದ್ಯೋಗ 160/38).

**ಕೋಲಿಸರ್ಪ** – ಒಂದು ಜಾತಿ. ಅದು ಮೊದಲು ಕ್ಷತ್ರಿಯವಾಗಿತ್ತು. ಆದರೆ ಬ್ರಾಹ್ಮಣರ ಕೃಪಾದೃಷ್ಟಿ ಸಿಗದುದರಿಂದ ಶೂದ್ರತ್ವ ಬಂತು (ಅನು 33/22).

**ಕೊಲ್ಲಗಿರೇಯ** – ದಕ್ಷಿಣದ ಒಂದು ದೇಶ. ಅದನ್ನು ಅರ್ಜುನನು ಅಶ್ವಮೇಧ ಯಜ್ಞ ರಕ್ಷಣೆಯ ಸಂದರ್ಭದಲ್ಲಿ ಗೆದ್ದಿದ್ದನು (ಆಶ್ವ 83/11).

**ಕೋಶಲ** – ಕೋಶಲ ದೇಶದ ಕ್ಷತ್ರಿಯ. ಅವನು ಜರಾಸಂಧನ ಭಯದಿಂದ ದಕ್ಷಿಣ ಭಾಗಕ್ಕೆ ಓಡಿಹೋಗಿದ್ದನು (ಸಭಾ 14/27).

**ಕೋಷಾ** – ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/34).

**ಕೋಷ್ಠವಂತ** – ಒಂದು ಪರ್ವತ. ಅದು ಇತರ

ಅನೇಕ ಪರ್ವತಗಳ ಅಧಿಪತಿ. (ಆಶ್ವ 43/5)

**ಕೋಸಲ** – ಭಾರತದ ಒಂದು ಜನಪದ. (ಭೀಷ್ಮ 9/40–41). ಪೂರ್ವದಿಗ್ವಿಜಯದ ಸಂದರ್ಭದಲ್ಲಿ ಭೀಮಸೇನನು ಉತ್ತರ ಕೋಶಲವನ್ನು ಗೆದ್ದಿದ್ದನು (ಸಭಾ 30/3). ದಕ್ಷಿಣ ದಿಗ್ವಿಜಯದ ಸಮಯದಲ್ಲಿ ಸಹದೇವನು ದಕ್ಷಿಣ ಕೋಶಲವನ್ನು ಗೆದ್ದು ತನ್ನ ಅಧಿಕಾರದೊಳಗೆ ಸೇರಿಸಿದ್ದನು (ಸಭಾ 31/12–13). ಮೊದಲು ಶ್ರೀಕೃಷ್ಣನೂ ಈ ಜನಪದದ ಮೇಲೆ ವಿಜಯ ಗಳಿಸಿದ್ದನು (ದ್ರೋಣ 21/15). ಕೋಶಲರಾಜನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ಕರ್ಣ 5/21). ದುರ್ಯೋಧನನಿಗಾಗಿ ಕರ್ಣನು ಈ ದೇಶವನ್ನು ಗೆದ್ದಿದ್ದನು (ಕರ್ಣ 8/19). ಇಲ್ಲಿ ಕ್ಷೇಮದರ್ಶಿ ರಾಜನಾಗಿದ್ದನು (ಶಾಂತಿ 82/6). ಅಂಬೆಯ ಸ್ವಯಂವರದಲ್ಲಿ ಭೀಷ್ಮನೂ ಕೋಸಲವನ್ನು ಗೆದ್ದಿದ್ದನು (ಅನು 44/38). ಅಶ್ವಮೇಧದ ಅಶ್ವರಕ್ಷಣೆ ಮಾಡುತ್ತಿದ್ದ ಅರ್ಜುನನು ಈ ದೇಶದ ಮೇಲೆ ವಿಜಯ ಸಾಧಿಸಿದ್ದನು (ಆಶ್ವ 83/4).

**ಕೋಸಲಾ** – (ಅಯೋಧ್ಯಾ) ಸುಪ್ರಸಿದ್ಧ ನಗರ. ಅಲ್ಲಿ ಋಷಭತೀರ್ಥದಲ್ಲಿ ಸ್ನಾನ ಮತ್ತು ತ್ರಿರಾತ್ರಿ ಉಪವಾಸ ಮಾಡಿದರೆ ವಾಜಪೇಯ ಮತ್ತು ಸಹಸ್ರಗೋದಾನದ ಫಲ ಸಿಗುತ್ತದೆ (ವನ 85/10–11).

**ಕೋಹಲ** – (1) ವೇದವಿದ್ಯಾಪಾರಂಗತನಾದ ಒಬ್ಬ ವಿದ್ವಾಂಸ ಬ್ರಾಹ್ಮಣ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಸದಸ್ಯನಾಗಿದ್ದನು (ಆದಿ 53/9).

(2) ಒಬ್ಬ ಬ್ರಾಹ್ಮಣ. ಅವನಿಗೆ ಭಗೀರಥ ರಾಜನು ಕರುಸಹಿತ ಒಂದು ಲಕ್ಷ ಗೋವುಗಳನ್ನು ದಾನ ಮಾಡಿದ್ದನು (ಅನು 137/27).

(3) ಉತ್ತರ ದಿಕ್ಕಿನ ಆಶ್ರಯ ಹೊಂದಿರುವ ಒಬ್ಬ ಋಷಿ. ಬಹುಶಃ ಇವನೇ ಜನಮೇಜಯನ ಸರ್ಪಯಜ್ಞದಲ್ಲಿ ಸದಸ್ಯನಾಗಿರಬೇಕು (ಅನು 165/45).

**ಕೌಕುಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/15).

**ಕೌಕುಹಕ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/60).

**ಕೌಣಪ** – ವಾಸುಕಿಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ತಾಯಿಯ ಶಾಪದಿಂದ ಪೀಡಿತನಾಗಿ, ಅನಿವಾರ್ಯವಾಗಿ, ಸರ್ಪಸತ್ರದ ಬೆಂಕಿಗೆ ಬಿದ್ದು ದಗ್ಧನಾದನು. (ಆದಿ 57/6).

**ಕೌಣಪಾಸನ** – ಒಬ್ಬ ಪ್ರಮುಖ ನಾಗ (ಆದಿ 35/14).

**ಕೌಣಿಕುತ್ಸ್ಯ** – ವನವಾಸಿಯಾದ ಒಬ್ಬ ಶ್ರೇಷ್ಠ ಬ್ರಾಹ್ಮಣ. ಅವನು ಸರ್ಪದಂಶನದಿಂದ ಮೃತಳಾದ ಪ್ರಮದ್ವರೆಯನ್ನು ನೋಡಲು ಬಂದಿದ್ದನು. (ಆದಿ 8/25).

**ಕೌಂಡಿನ್ಯ** – ಒಬ್ಬ ಮಹರ್ಷಿ. ಅವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು. (ಸಭಾ 4/16).

**ಕೌತ್ಸ** – ವೃದ್ಧನೂ, ವಿದ್ವಾಂಸನೂ ಆದ ಒಬ್ಬ ಬ್ರಾಹ್ಮಣ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ಉದ್ಗಾತೃವಾಗಿದ್ದನು (ಆದಿ 53/6). ರಾಜರ್ಷಿ ಭಗೀರಥನು ಈತನಿಗೇ ತನ್ನ ಕನ್ಯೆ 'ಹಂಸಿ'ಯನ್ನು ದಾನವಾಗಿತ್ತಿದ್ದನು. ಅದರಿಂದಾಗಿ ಆತ ಅಕ್ಷಯಲೋಕ ಪ್ರಾಪ್ತಿಸಿಕೊಂಡನು (ಅನು 137/26).

**ಕೌಮೋದಕೀ** – ಶ್ರೀಕೃಷ್ಣನ ಗದೆ. ಈ ಗದೆಯನ್ನು ಖಾಂಡವವನ ದಹನಕಾಲದಲ್ಲಿ ವರುಣನು ಕೃಷ್ಣನಿಗೆ ಉಡುಗೊರೆಯಾಗಿತ್ತಿದ್ದನು (ಆದಿ 224/28).

**ಕೌರವ** – ಕುರುವಿನ ಪುತ್ರರು ಮತ್ತು ಕುರುಕುಲದಲ್ಲಿ ಜನಿಸುವ ಪುರುಷರು 'ಕೌರವ'ರೆಂದು ಹೇಳಲ್ಪಡುತ್ತಾರೆ. (ಪಾಂಡವ ಮತ್ತು ಧೃತರಾಷ್ಟ್ರ ಪುತ್ರರೆಲ್ಲಾ ಕೌರವರೆಂದು ಕರೆಯಲ್ಪಡುವರಾದರೂ ಪಾಂಡವರಿಗೆ ಪ್ರತ್ಯೇಕ ಉಲ್ಲೇಖವಿರುವುದರಿಂದ 'ಕೌರವ' ಶಬ್ದವು ಪ್ರಾಯಶಃ ದುರ್ಯೋಧನನೇ ಮೊದಲಾದವರಿಗೆ ವ್ಯವಹರಿಸಲ್ಪಟ್ಟಿದೆ. ಆದರೂ ಪಾಂಡವರಿಗೂ ಕೂಡಾ ಈ ಶಬ್ದ ಪ್ರಯೋಗ ಆಗಿದೆ.) ಆಚಾರ್ಯ ಮತ್ತು ಅಸ್ತ್ರಗಳನ್ನು ಪೂಜಿಸಿ, ರಂಗಭೂಮಿಯಲ್ಲಿ ಇವರಿಂದ ಅಸ್ತ್ರಕಲಾ ಪ್ರದರ್ಶನ (ಆದಿ 133/23 ರಿಂದ 35). ದ್ರುಪದನಿಂದ ಇವರ ಪರಾಜಯ (ಆದಿ 137/24–25). ದ್ರುಪದನು ಪಾಂಡವರ ಸಂಬಂಧಿಯಾದಾಗ ಇವರು ಭಯಭೀತರೂ ನಿರಾಶರೂ ಆದುದು (ಆದಿ 199/14–15).

**ಕೌರವ್ಯ** – ಒಬ್ಬ ಪ್ರಮುಖ ನಾಗ (ಆದಿ 35/13).

**ಕೌಶಿಕ** – (1) ಯುಧಿಷ್ಠಿರನ ಸಭೆಯಲ್ಲಿದ್ದ ಒಬ್ಬ ಋಷಿ. (ಸಭಾ 4/12) ಹಸ್ತಿನಾಪುರಕ್ಕೆ ಹೋಗುವಾಗ ಮಾರ್ಗದಲ್ಲಿ ಕೃಷ್ಣನ ಭೇಟಿ ಮಾಡಿದುದು.

(ಉದ್ಯೋಗ 83/64).

(2) ಒಬ್ಬ ಪ್ರಾಚೀನ ಋಷಿ. ಇವನು ಇಂದ್ರ ಸಭೆಯಲ್ಲಿದ್ದನು (ಸಭಾ 7/18).

(3) ಜರಾಸಂಧನ ಒಬ್ಬ ಮಂತ್ರಿ. ಅವನ ಇನ್ನೊಂದು ಹೆಸರು ಹಂಸನೆಂದಾಗಿತ್ತು (ಸಭಾ 22/32–33). (ನೋಡಿರಿ –ಹಂಸ)

(4) ಒಬ್ಬ ತಪಸ್ವಿ ಬ್ರಾಹ್ಮಣ. ಇವನ ಸಿಟ್ಟಿನಿಂದ ಕೂಡಿದ ಧೃಷ್ಟಿಯಿಂದ, ಕೊಕ್ಕರೆಯು ಭಸ್ಮವಾದುದು (ವನ 206/5). ಪತಿವ್ರತೆಯೊಡನೆ ಇವನ ವಾರ್ತಾಲಾಪ (ವನ 206/18). ಧರ್ಮವ್ಯಾಧನೊಡನೆ ವಿವಿಧ ಧಾರ್ಮಿಕ ವಿಷಯಗಳಲ್ಲಿ ಈತನ ಸಂಭಾಷಣೆ (ವನ 207 ರಿಂದ 216). ಈತ ಮನೆಗೆ ಹಿಂತಿರುಗಿ ಮಾತಾಪಿತರ ಸೇವೆಯಲ್ಲಿ ತತ್ಪರನಾದುದು (ವನ 216/23).

(5) ಹೈಮವತಿಯ ಪ್ರಿಯತಮ ಪತಿ. ಕುಶಿಕ ವಂಶದ ವಿಶ್ವಾಮಿತ್ರ (ವನ 84/142–143; ಉದ್ಯೋಗ 117/13)

(6) ಒಬ್ಬ ಸತ್ಯವಾದಿ ತಪಸ್ವಿ ಬ್ರಾಹ್ಮಣ. ಈತ ಅಡಗಿದ ಮನುಷ್ಯರ ಇರವನ್ನು ಕಳ್ಳಕಾಕರಿಗೆ ತಿಳಿಸಿದ್ದರಿಂದ ನರಕಭಾಜನನಾದನು (ಕರ್ಣ 69/46–52).

**ಕೌಶಿಕಕುಂಡ** – ಒಂದು ತೀರ್ಥ. ಅಲ್ಲಿ ವಿಶ್ವಾಮಿತ್ರನು ಉತ್ತಮ ಸಿದ್ಧಿ ಪಡೆದಿದ್ದನು (ವನ 84/142).

**ಕೌಶಿಕಾಚಾರ್ಯ** – ಈ ಪದವಿಯಿಂದ ವಿಭೂಷಿತನಾದ ರಾಜಾ ಆಕೃತಿ (ಸಭಾ 2/61–62) (ನೋಡಿರಿ– ಆಕೃತಿ).

**ಕೌಶಿಕಾಶ್ರಮ** – ಒಂದು ತೀರ್ಥ. ಅಲ್ಲಿ ಕಾಶೀರಾಜ ಕನ್ಯೆ ಕಠೋರ ತಪಸ್ಸನ್ನಾಚರಿಸಿದಳು (ಉದ್ಯೋಗ 186/27).

**ಕೌಶಿಕೀ** – (1) ಒಂದು ನದಿ (ಅನು 94/6). ಮಹರ್ಷಿ ವಿಶ್ವಾಮಿತ್ರನ ಮೂಲಕ ಇದರ ನಿರ್ಮಾಣ (ಆದಿ 71/30). (ಇದನ್ನು ಈಗ 'ಕೋಸೀ' ಎನ್ನುತ್ತಾರೆ. ಈ ನದಿ ಬಿಹಾರದ ಪೂರ್ವ ಭಾಗದ ಅನೇಕ ಜಿಲ್ಲೆಗಳಲ್ಲಿ ಹರಿಯುತ್ತದೆ.)

(2) ಒಂದು ಪಾಪನಾಶಿನಿ ನದಿ. ಇದರಲ್ಲಿ ಸ್ನಾನ ಮಾಡಿದರೆ ರಾಜಸೂಯ ಯಜ್ಞದ ಫಲಪ್ರಾಪ್ತವಾಗುತ್ತದೆ (ವನ 84/132; 87/13; ಭೀಷ್ಮ 9/29). ಇಲ್ಲಿ ಸ್ನಾನ ಮಾಡಿದರೆ ಸಿಗುವ ಫಲ (ಅನು 25/21).

**ಕೌಶಿಕೀ** – ಅರುಣಾಸಂಗಮ – ಒಂದು ತೀರ್ಥ. ಅಲ್ಲಿ ಸ್ನಾನ ಮತ್ತು ತ್ರಿರಾತ್ರಿ ಉಪವಾಸದಿಂದ ಪಾಪಗಳು ಕಳೆದುಹೋಗುತ್ತವೆ (ವನ 84/156).

**ಕೌಶಿಕೀಕಚ್ಚ** – ಕೋಸೀ ನದಿಯ ತೀರದ ಭೂಮಿ (ಸಭಾ 30/22).

**ಕೌಸಲ** – ಆಡಿನಂತೆ ಮುಖಧಾರಣೆ ಮಾಡುವ ಸ್ಕಂದದೇವನ ಒಂದು ಹೆಸರು (ವನ 228/4).

**ಕೌಸಲ್ಯಾ** – (1) ಯಯಾತಿನಂದನ ಮಹಾರಾಜ ಪೂರುವಿನ ಪತ್ನಿ ಮತ್ತು ಜನಮೇಜಯ (ಪ್ರವೀರ)ನ ತಾಯಿ. ಈಕೆಯ ಇನ್ನೊಂದು ಹೆಸರು. 'ಪೌಷ್ಟೀ' ಎಂದಾಗಿತ್ತು (ಆದಿ 95/10–11).

(2) ಕಾಶೀರಾಜನ ಪತ್ನಿ ಮತ್ತು ಅಂಬೆ, ಅಂಬಿಕೆ, ಅಂಬಾಲಿಕೆಯರ ತಾಯಿ (ಆದಿ 95/51).

(3) ದಶರಥನಂದನ ಶ್ರೀರಾಮನ ತಾಯಿ (ವನ 274/7–8).

(4) ಮಿಥಿಲೆಯ ರಾಜನಾದ ಜನಕನ ಪಟ್ಟದ ರಾಣಿ. ಈಕೆ ತನ್ನ ಪತಿ ಸನ್ಯಾಸ ಸ್ವೀಕರಿಸದಂತೆ ತಿಳಿಸಿದುದು (ಶಾಂತಿ 18/7–26).

**ಕೌಸ್ತುಭ** – ಸಮುದ್ರದಿಂದ ಪ್ರಕಟಗೊಂಡ ಒಂದು ರತ್ನ. ಅದು ವಿಷ್ಣುವಿನ ವಕ್ಷಸ್ಥಲದ ಆಭೂಷಣವಾಯಿತು (ಆದಿ 18/36). ಕೌಸ್ತುಭ ಮಣಿಯ ಪ್ರಾದುರ್ಭಾವ (ಉದ್ಯೋಗ 102/12).

**ಕ್ರತು** – ಬ್ರಹ್ಮನ ಒಬ್ಬ ಮಾನಸ ಪುತ್ರ (ಆದಿ 65/10;66/4; ಶಾಂತಿ 166/16). ವಾಲಖಿಲ್ಯ ಎಂಬ ಹೆಸರಿನ ಋಷಿಗಳು ಕ್ರತುವಿನ ಪುತ್ರರು (ಆದಿ 66/9). ಈತ ಅರ್ಜುನನ ಜನ್ಮ ಸಮಯದಲ್ಲಿ ಆಗಮಿಸಿದ್ದನು (ಆದಿ 122/52). ಪರಾಶರನ ರಾಕ್ಷಸಯಜ್ಞದಲ್ಲಿ, ರಾಕ್ಷಸರ ಜೀವನ ರಕ್ಷೆಗಾಗಿ ಹೋಗಿದ್ದನು (ಆದಿ 180/9). ಈತ ಇಂದ್ರ ಮತ್ತು ಬ್ರಹ್ಮನ ಸಭೆಯಲ್ಲಿರುತ್ತಾನೆ (ಸಭಾ 7/17; 11/19). ಸ್ಕಂದನ ಜನ್ಮಕಾಲದಲ್ಲೂ ಈತ ಆಗಮಿಸಿದ್ದನು (ಶಲ್ಯ 45/10). ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಹೋಗಿದ್ದನು (ಶಾಂತಿ 47/10). ಇಪ್ಪತ್ತೊಂದು ಮಂದಿ ಪ್ರಜಾಪತಿಗಳಲ್ಲಿ ಈತನೂ ಒಬ್ಬ (ಶಾಂತಿ 334/35–37). ಏಳು ಮಂದಿ 'ಚಿತ್ರ ಶಿಖಂಡೀ' ಋಷಿಗಳಲ್ಲಿ ಕೂಡ ಕ್ರತುವು

ಗಣಿಸಲ್ಪಟ್ಟಿದ್ದಾನೆ (ಶಾಂತಿ 335/27). ಎಂಟು ಪ್ರಕೃತಿಗಳಲ್ಲಿಯೂ ಇವನಿಗೆ ಸ್ಥಾನವಿದೆ (ಶಾಂತಿ 340/34). ಇವನಿಗೆ ಶಿವಭಕ್ತಿಯ ಮೂಲಕ ಸಾವಿರಾರು ಪುತ್ರರ ಪ್ರಾಪ್ತಿಯಾಯಿತು (ಅನು 14/87–88). ಉತ್ತರಾಯಣ ಆರಂಭವಾದಾಗ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/4). ಈತ ಮಹಾಯೋಗೇಶ್ವರನೆಂದು ಗಣಿಸಲ್ಪಟ್ಟಿದ್ದಾನೆ (ಅನು 92/21).

**ಕ್ರಥ** – (1) ಒಬ್ಬ ಕ್ಷತ್ರಿಯ ರಾಜ. ಅವನು ಕ್ರೋಧವಶನೆಂಬ ಹೆಸರಿನ ಅಸುರನ ಅಂಶದಿಂದ ಜನ್ಮತಾಳಿದ್ದನು (ಆದಿ 67/61).

(2) ಒಂದು ಪ್ರಾಚೀನ ದೇಶ. ವಿದರ್ಭರಾಜ ಭೀಷ್ಮಕನು ಅದನ್ನು ಜಯಿಸಿದ್ದನು (ಸಭಾ 14/21).

(3) ಒಬ್ಬ ರಾಜರಾಜೇಶ್ವರ. ಭೀಮಸೇನನು ದಿಗ್ವಿಜಯ ಕಾಲದಲ್ಲಿ ಈತನನ್ನು ಪರಾಜಯ ಗೊಳಿಸಿದ್ದನು (ಸಭಾ 30/7).

(4) ಒಬ್ಬ ಮಹರ್ಷಿ. ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನಿಗೆ ಈತ ಪ್ರದಕ್ಷಿಣೆ ಮಾಡಿದ್ದನು. (ಉದ್ಯೋಗ 83/27).

(5) ಒಬ್ಬ ಕೌರವಯೋಧ. (ದ್ರೋಣ 120/10–11).

(6) ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

**ಕ್ರಥನ** – (1) ಒಬ್ಬ ಯಕ್ಷ. ಅವನೊಂದಿಗೆ ಪಕ್ಷಿ ರಾಜ ಗರುಡ ಯುದ್ಧ ಮಾಡಿದ್ದನು (ಆದಿ 32/18).

(2) ಒಬ್ಬ ಅಸುರ. ಈತ ಭೂಲೋಕದಲ್ಲಿ ರಾಜಾಸೂರ್ಯಾಕ್ಷನ ರೂಪದಲ್ಲಿ ಜನ್ಮತಾಳಿದ್ದನು (ಆದಿ 67/57).

(3) ಧೃತರಾಷ್ಟ್ರನ ಒಬ್ಬ ಪುತ್ರ (ಆದಿ 116/11).

**ಕ್ರಮಜಿತ್** – ಒಬ್ಬ ಕ್ಷತ್ರಿಯ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿ ಅವನ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದನು (ಸಭಾ 4/28).

**ಕ್ರವ್ಯಾದ** – ಪಿತೃಗಳ ಒಂದು ಗಣ (ಶಾಂತಿ 269/15).

**ಕ್ರಾಥ** – (1) ಒಬ್ಬ ಪ್ರಸಿದ್ಧ ರಾಜ. ಅವನು ಸಿಂಹಿಕಾಕುಮಾರ ರಾಹುವಿನ ಅಂಶದಿಂದ ಹುಟ್ಟಿದ್ದನು (ಆದಿ 67/40). ಈತ ದ್ರೌಪದೀ ಸ್ವಯಂವರದಲ್ಲಿ ಉಪಸ್ಥಿತನಿದ್ದನು (ಆದಿ 186/15). ಜಾರೂಥಿ ನಗರದಲ್ಲಿ ಶ್ರೀಕೃಷ್ಣನಿಂದ ಪರಾಜಿತನಾಗಿದ್ದನು (ವನ 12/30). ಈತ ದುರ್ಯೋಧನನ ಸೇನೆಯಲ್ಲಿ ಸಮ್ಮಿಲಿತನಾಗಿ, ಅಭಿಮನ್ಯುವಿನ ಮೇಲೆ ಆಕ್ರಮಣ ಮಾಡಿದ್ದನು (ದ್ರೋಣ 37/25). ಇವನ ಪುತ್ರ ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 46/26–27). ಇವನಿಂದ ಕಲಿಂಗರಾಜ ಕುಮಾರನ ವಧೆಯಾಯಿತು ಮತ್ತು ಪಾಂಡವ ಪಕ್ಷದ ಪರ್ವತೀಯ ರಾಜನಿಂದ ಇವನ ವಧೆಯಾಯಿತು. (ಕರ್ಣ 85/15–16).

(2) ಪೂರುವಂಶದ ಮಹಾರಾಜ ಕುರುವಿನ ಮರಿ ಮಗ ಮತ್ತು ಧೃತರಾಷ್ಟ್ರನ ಒಬ್ಬ ಪುತ್ರ. (ಆದಿ 94/58).

(3) ಒಬ್ಬ ವಾನರ ಸೇನಾಪತಿ (ವನ 283/19).

(4) (ಕ್ರಥನ) ಧೃತರಾಷ್ಟ್ರನ ಒಬ್ಬ ಪುತ್ರ. ಭೀಮ ಸೇನನಿಂದ ಈತನ ವಧೆ (ಕರ್ಣ 51/16).

(5) ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

(6) ಒಬ್ಬ ನಾಗ. ಬಲರಾಮನು ಪರಮಧಾಮಕ್ಕೆ ಆಗಮಿಸುವ ಸಮಯದಲ್ಲಿ, ಅವನ ಸ್ವಾಗತಕ್ಕಾಗಿ ಹೋಗಿದ್ದನು (ಮೌಸಲ 4/16).

**ಕ್ರಿಯಾ** – ದಕ್ಷಪ್ರಜಾಪತಿಯ ಒಬ್ಬ ಪುತ್ರಿ ಮತ್ತು ಧರ್ಮರಾಜನ ಪತ್ನಿ (ಆದಿ 66/14).

**ಕ್ರೀತ** – ಒಂದು ರೀತಿಯ ಅಬಂಧು ದಾಯಾದ ಪುತ್ರ. ಈತ ಧನ ಇತ್ಯಾದಿ ಕೊಟ್ಟು ಕೊಂಡು ಕೊಳ್ಳಲ್ಪಟ್ಟವನು (ಆದಿ 119/34).

**ಕ್ರೂರ** – ಒಂದು ಭಾರತೀಯ ಜನಪದ (ಭೀಷ್ಮ 9/65).

**ಕ್ರೂರಾ** – (ಅಥವಾ ಕ್ರೋಧಾ) ದಕ್ಷ ಪ್ರಜಾಪತಿಯ ಪುತ್ರಿ. ಕಶ್ಯಪನ ಪತ್ನಿ (ಆದಿ 65/12–13; 66/13). ಈ ಕ್ರೂರಾ ಅಥವಾ ಕ್ರೋಧಾಳಿಗೆ ಕ್ರೂರ ಸ್ವಭಾವದ ಅಸಂಖ್ಯಾತ ಪುತ್ರಪೌತ್ರರಿದ್ದಾರೆ. ಈಕೆಯೇ 'ಕ್ರೋಧವಶ' ಎಂಬ ಅಸುರರ ತಾಯಿಯಾಗಿದ್ದಾಳೆ (ಆದಿ 65/32).

**ಕ್ರೋಧ** – ಒಬ್ಬ ಪ್ರಸಿದ್ಧ ದಾನವ. ಅವನು ಕಶ್ಯಪ ಪತ್ನಿ ಕಾಲಾ ಎಂಬವಳ ಪುತ್ರ (ಆದಿ 65/35).

**ಕ್ರೋಧನ** – ಒಬ್ಬ ಋಷಿ. ಈತ ಇಂದ್ರ ಸಭೆಯಲ್ಲಿರುತ್ತಾನೆ (ಸಭಾ 7/11).

**ಕ್ರೋಧನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/6).

**ಕ್ರೋಧವರ್ಧನ** – ಒಬ್ಬ ಅಸುರ. ಈತ 'ದಂಡ

ಧಾರ' ಎಂಬ ಹೆಸರಿನ ರಾಜನ ರೂಪದಲ್ಲಿ ಈ ಭೂಮಿಯಲ್ಲಿ ಹುಟ್ಟಿದ್ದನು (ಆದಿ 67/46).

**ಕ್ರೋಧವಶ** – ಒಂದು ರಾಕ್ಷಸ ಗಣದ ಹೆಸರು. ಇವರ ತಾಯಿ ಕಶ್ಯಪ ಪತ್ನಿ ಕ್ರೋಧಾ ಅಥವಾ ಕ್ರೂರಾ ಆಗಿದ್ದಳು (ಆದಿ 65/32). ಇವರೇ ಅಲಕಾ ಎಂಬ ಹೆಸರಿನ, ಕುಬೇರನ ಸೌಗಂಧಿಕ ಕಮಲಗಳ ಸರೋವರ (ಅಥವಾ ನದಿ)ದ ರಕ್ಷಣೆ ಮಾಡುತ್ತಿದ್ದರು. ಭೀಮಸೇನನು ಇವರೊಂದಿಗೆ ಯುದ್ಧಮಾಡಿ ಇವರನ್ನು ಸೋಲಿಸಿದ್ದನು (ವನ 154/20–21). ಇವರು ಧನಾಧ್ಯಕ್ಷ ಕುಬೇರನಿಗೆ ಭೀಮಸೇನನ ಬಲಪರಾಕ್ರಮಗಳ ವೃತ್ತಾಂತ ತಿಳಿಸಿದ್ದರು (ವನ 154/25). ಇವರು ರಾವಣನ ಸೇನೆಯಲ್ಲೂ ಸಮ್ಮಿಲಿತರಾಗಿದ್ದರು (ವನ 285/2).

**ಕ್ರೋಧಶತ್ರು** – ಒಬ್ಬ ವಿಖ್ಯಾತ ದಾನವ. ಅವನು ಕಾಲಾ ಎಂಬ ಕಶ್ಯಪ ಪತ್ನಿಯ ಪುತ್ರನಾಗಿದ್ದನು (ಆದಿ 65/35).

**ಕ್ರೋಧಹಂತಾ** – (1) ಕಶ್ಯಪಪತ್ನಿ ಕಾಲಾ ಎಂಬ ವಳ ನಾಲ್ಕು ಮಂದಿ ಪುತ್ರರಲ್ಲಿ ಒಬ್ಬ ಪ್ರಸಿದ್ಧ ದಾನವ (ಆದಿ 65/35). ಈತನನ್ನು ವೃತ್ರಾಸುರನ ತಮ್ಮನೆಂದು ಹೇಳಲಾಗಿದೆ. ಇವನೇ ರಾಜಾದಂಡನ ರೂಪದಲ್ಲಿ ಹುಟ್ಟಿದ್ದನು (ಆದಿ 67/45).

(2) ಪಾಂಡವ ಪಕ್ಷದ ರಾಜ ಸೇನಾಬಿಂದುವಿನ ಇನ್ನೊಂದು ಹೆಸರು (ಉದ್ಯೋಗ 171/20)

**ಕ್ರೋಶನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ಕ್ರೋಷ್ಟಾ** – ಯದುವಿನ ಪುತ್ರ (ಅನು 147/28).

**ಕ್ರೌಞ್ಚ** – ಒಂದು ಪರ್ವತ. ಅದನ್ನು ಸ್ಕಂದನು ವಿದೀರ್ಣಗೊಳಿಸಿದ್ದನು (ಶಲ್ಯ 46/84).

**ಕ್ರೌಞ್ಚದ್ವೀಪ** – ಒಂದು ಪ್ರಸಿದ್ಧ ದ್ವೀಪ. ಇದರ ವಿಶೇಷ ವರ್ಣನೆ (ಭೀಷ್ಮ 12/17–23).

**ಕ್ರೌಞ್ಚನಿಷೂದನ** – ಸರಸ್ವತೀ ಸಂಬಂಧಿಯಾದ ತೀರ್ಥ. ಅಲ್ಲಿ, ಸರಸ್ವತಿಯಲ್ಲಿ ಸ್ನಾನಮಾಡಿದವನು. ಅವಸಾನಾನಂತರ ಸ್ವರ್ಗದ ವಿಮಾನದಲ್ಲಿ ವಿರಾಜಿಸುತ್ತಾನೆ (ವನ 84/60).

**ಕ್ರೌಞ್ಚಪದಿ** – ಒಂದು ತೀರ್ಥ. ಅಲ್ಲಿ ಪಿಂಡ ಪ್ರದಾನ ಮಾಡಿದರೆ ಮನುಷ್ಯ ಮೂರು ಬ್ರಹ್ಮಹತ್ಯೆಗಳಿಂದ ಮುಕ್ತನಾಗುತ್ತಾನೆ (ಅನು 25/42).

**ಕ್ರೌಞ್ಚವ್ಯೂಹ** – ಸೇನೆಯನ್ನು ಕೋಟೆಯಾಗಿ ನಿಲ್ಲಿಸುವ ಒಂದು ಕ್ರಮ. ಅದರಲ್ಲಿ ಸೈನಿಕರನ್ನು ಕ್ರೌಂಚಪಕ್ಷಿಯ ಆಕಾರದಲ್ಲಿ ನಿಲ್ಲಿಸಲಾಗುತ್ತದೆ. ಭೀಷ್ಮನಿಂದ ಕ್ರೌಂಚವ್ಯೂಹದ ರಚನೆ (ಭೀಷ್ಮ 75/15–22). ಯುಧಿಷ್ಠಿರನಿಂದ ಈ ವ್ಯೂಹದ ರಚನೆ (ದ್ರೋಣ 7/25–27).

**ಕ್ರೌಞ್ಚಾರುಣವ್ಯೂಹ** – ಇದು ಕ್ರೌಂಚವ್ಯೂಹದ ನಾಮಾಂತರ. ಧೃಷ್ಟದ್ಯುಮ್ನನು ಇದರ ನಿರ್ಮಾಣ ಮಾಡಿದ್ದನು (ಭೀಷ್ಮ 50/42–47).

**ಕ್ಷತ್ತಾ** – ವಿದುರ (ಉದ್ಯೋಗ – 33/2–6) (ನೋಡಿರಿ – ವಿದುರ).

**ಕ್ಷತ್ರಂಜಯ** – ಧೃಷ್ಟದ್ಯುಮ್ನನ ಒಬ್ಬ ವೀರಪುತ್ರ (ದ್ರೋಣ 10/53). ದ್ರೋಣಾಚಾರ್ಯರ ಮೂಲಕ ಧೃಷ್ಟದ್ಯುಮ್ನನ ಮೂವರು ಪುತ್ರರ (ಕ್ಷತ್ರದೇವ, ಕ್ಷತ್ರಂಜಯ ಮತ್ತು ಕ್ಷತ್ರವರ್ಮಾ) ವಧೆ (ದ್ರೋಣ 186/33–34).

**ಕ್ಷತ್ರದೇವ** – ಶಿಖಂಡಿಯ ಮಗ (ಉದ್ಯೋಗ 57/32 ದ್ರೋಣ 23/6). ಈತ ಒಬ್ಬ ಶ್ರೇಷ್ಠ ರಥಿಕನಾಗಿದ್ದನು (ಉದ್ಯೋಗ 171/10). ಭಗದತ್ತನಿಂದ ಈತನ ಬಲಭುಜದಲ್ಲಿ ಆಳವಾದ ಆಘಾತವಾಗಿತ್ತು (ಭೀಷ್ಮ 95/73). ಲಕ್ಷಣನೊಂದಿಗೆ ಈತನ ಯುದ್ಧ (ದ್ರೋಣ 14/49). ದ್ರೋಣನೊಂದಿಗೆ ಯುದ್ಧ (ದ್ರೋಣ 21/50–56). ಇವನ ರಥದ ಕುದುರೆಗಳ ಬಣ್ಣ (ದ್ರೋಣ 23/6). ಲಕ್ಷಣನಿಂದ ಈತನ ವಧೆ (ಕರ್ಣ 6/26–27).

**ಕ್ಷತ್ರಧರ್ಮಾ** – ಧೃಷ್ಟದ್ಯುಮ್ನನ ಪುತ್ರ ಅರ್ಧ ರಥಿಕ (ಉದ್ಯೋಗ 170/7). ಇವನ ರಥದ ಕುದುರೆಗಳ ಬಣ್ಣ (ದ್ರೋಣ 23/5). ದ್ರೋಣಾಚಾರ್ಯನ ಮೂಲಕ ಇವನ ವಧೆ (ದ್ರೋಣ 125/66).

**ಕ್ಷತ್ರವರ್ಮಾ** – ಧೃಷ್ಟದ್ಯುಮ್ನನ ಒಬ್ಬ ವೀರ ಪುತ್ರ (ದ್ರೋಣ 10/53). ಜಯದ್ರಥನೊಂದಿಗೆ ಯುದ್ಧ (ದ್ರೋಣ 25/10–12). ದ್ರೋಣನಿಂದ ಈತನ ವಧೆ. (ದ್ರೋಣ 186/34).

**ಕ್ಷಿತಿಕಂಪನ** – ಸ್ಕಂದನ ಸೇನಾಪತಿ (ಶಲ್ಯ 45/59).

**ಕ್ಷೀರವತೀ** – ಒಂದು ಪುಣ್ಯ ತೀರ್ಥ. ಇಲ್ಲಿ ಸ್ನಾನಮಾಡಿ ದೇವತೆಗಳ ಪೂಜೆಯಲ್ಲಿ ಮಗ್ನನಾದ ಮನುಷ್ಯ ವಾಜಪೇಯ ಯಜ್ಞದ ಫಲವನ್ನು

ಪಡೆಯುತ್ತಾನೆ (ವನ 84/68–69).

**ಕ್ಷೀರಸಾಗರ** (ಕ್ಷೀರನಿಧಿ) – ಇದರ ಉತ್ಪತ್ತಿ. (ಉದ್ಯೋಗ 102/4) ಬೇರೆ ಹೆಸರುಗಳ ಮೂಲಕ ಇದರ ವರ್ಣನೆ. –ಕ್ಷೀರೋದ (ಆದಿ 2/91; ಭೀಷ್ಮ 10/11; ಶಾಂತಿ 336/23; 340/45; ಅನು 14/240). ಕ್ಷೀರೋದಧಿ (ಶಾಂತಿ 336/27).

**ಕ್ಷೀರೀ** – ಉತ್ತರ ಕುರುವರ್ಷದ ಕೆಲವು ಮರಗಳು. ಅವು ಸದಾ ಆರು ವಿಧದ ರಸಗಳಿಂದ ಕೂಡಿಕೊಂಡು ಅಮೃತ ಸಮಾನವಾದ ರುಚಿಕರ ಹಾಲನ್ನು ಸುರಿಸುತ್ತಾ ಇರುತ್ತವೆ. ಅವುಗಳ ಫಲಗಳಲ್ಲಿ ಅಪೇಕ್ಷೆಗೆ ಅನುಸಾರವಾಗಿ ವಸ್ತ್ರ ಮತ್ತು ಆಭೂಷಣಗಳು ಕೂಡಾ ಪ್ರಕಟಗೊಳ್ಳುತ್ತವೆ (ಭೀಷ್ಮ 7/4–5).

**ಕ್ಷುದ್ರಕ** – ಒಂದು ದೇಶ ಮತ್ತು ಅಲ್ಲಿರುವ ನಿವಾಸಿಗಳು. ಇವರು ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದರು (ಸಭಾ 52/15). ಕ್ಷುದ್ರಕರನ್ನೊಡಗೂಡಿ ದುರ್ಯೋಧನನು ಶಕುನಿಯ ಸೇನಾ ರಕ್ಷಣೆಯಲ್ಲಿದ್ದನು (ಭೀಷ್ಮ 51/16). ಕ್ಷುದ್ರಕ ಮೊದಲಾದ ದೇಶದ ಸೈನಿಕರು ಭೀಷ್ಮನ ಆಜ್ಞಾಪಾಲನೆ ಮಾಡುತ್ತಾ ಅರ್ಜುನನ ಸಮೀಪಕ್ಕೆ ಹೋದರು (ಭೀಷ್ಮ 59/76). ಭೀಷ್ಮನ ಹಿಂದೆ ದ್ರೋಣಾಚಾರ್ಯನೊಡಗೂಡಿ, ಕ್ಷುದ್ರಕರೂ ಶತ್ರುಗಳೊಡನೆ ಹೋರಾಡಲು ಹೋಗಿದ್ದರು (ಭೀಷ್ಮ 87/7). ಪರಶುರಾಮನು ಹಿಂದೆ ಒಮ್ಮೆ ಕ್ಷುದ್ರಕರನ್ನು ಸಂಹಾರ ಮಾಡಿದ್ದನು (ದ್ರೋಣ 70/11). ಅರ್ಜುನನಿಂದ ಕ್ಷುದ್ರಕರ ವಧೆ (ಕರ್ಣ 5/47).

**ಕ್ಷುಪ** – (1) ಒಬ್ಬ ಪ್ರಜಾಪತಿ. ಬ್ರಹ್ಮನು ತನ್ನ ತಲೆಯಲ್ಲಿ ಧರಿಸಿದ್ದ ಗರ್ಭದಿಂದ ಈತ ಹುಟ್ಟಿದ್ದನು. ಬ್ರಹ್ಮನು ಸೀನಿದಾಗ ಈತ ಅವನ ತಲೆಯಿಂದ ಬಿದ್ದಿದ್ದನು (ಶಾಂತಿ 122/16–17). ಇವನೇ ಬ್ರಹ್ಮನ ಯಜ್ಞದ ಋತ್ವಿಜನಾಗಿದ್ದನು (ಶಾಂತಿ 122/17). ರುದ್ರನು ಈತನನ್ನು ಸಮಸ್ತ ಪ್ರಜೆಗಳ ಮತ್ತು ಧರ್ಮಧಾರಿಗಳ ಅಧಿಪತಿಯಾಗಿ ಮಾಡಿದ್ದನು (ಶಾಂತಿ 122/35).

(2) ಶಕ್ತಿಶಾಲಿಯಾದ ವೈವಸ್ವತ ಮನುವಿನ ಆತ್ಮಜ ಮಹಾಬಾಹು ಪ್ರಸಂಧಿಯ ಪುತ್ರ ಮತ್ತು ಇಕ್ಷ್ವಾಕುವಿನ ತಂದೆ (ಆಶ್ವ 4/3).

(3) ಈ ಶಕ್ತಿಶಾಲಿ ರಾಜರ್ಷಿ ಯಮರಾಜನ ಸಭೆಯಲ್ಲಿರುತ್ತಾನೆ (ಸಭಾ 8/13). ಮನುವಿನಿಂದ ಈತನಿಗೆ ಖಡ್ಗಪ್ರಾಪ್ತಿಯಾಗಿತ್ತು (ಶಾಂತಿ 166/73). ಈ ಮಹಾರಾಜ ಕ್ಷುಪನು ಜೀವನದಲ್ಲಿ ಎಂದೂ ಮಾಂಸತಿಂದಿರಲಿಲ್ಲ (ಅನು 115/67).

**ಕ್ಷುರಕರ್ಣಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/25).

**ಕ್ಷೇತ್ರ** – ದೇಹಧಾರಿಗಳ ಈ ಶರೀರ (ಭೀಷ್ಮ 37/1). ಕ್ಷೇತ್ರದ ವರ್ಣನೆ (ಭೀಷ್ಮ 37/5–6).

**ಕ್ಷೇತ್ರಜ್ಞ** – ಈ ಶರೀರವನ್ನು ತಿಳಿದಿರುವ ಜೀವಾತ್ಮ. ಶರೀರವಿಡೀ ಕ್ಷೇತ್ರಜ್ಞರೂಪದಲ್ಲಿದ್ದು ಶರೀರದಲ್ಲೆಲ್ಲಾ ಭಗವಂತನೇ ವಾಸವಾಗಿರುತ್ತಾನೆ ಎಂಬ ಅರಿವಿರುವವನು (ಭೀಷ್ಮ 37/1–2). ಕ್ಷೇತ್ರದ ಸ್ವಭಾವ ಮತ್ತು ಪ್ರಭಾವಸಹಿತ ಕ್ಷೇತ್ರಜ್ಞನ ವರ್ಣನೆ (ಭೀಷ್ಮ 37/19–33).

**ಕ್ಷೇತ್ರ–ಕ್ಷೇತ್ರಜ್ಞ** – ಜ್ಞಾನ ಕ್ಷೇತ್ರ ಮತ್ತು ಕ್ಷೇತ್ರಜ್ಞನ ಅಂದರೆ ವಿಕಾರಪೂರ್ಣ ಪ್ರಕೃತಿ ಮತ್ತು ಪುರುಷನ ವಿಭಾಗ ಪೂರ್ಣವಾದ ಯಥಾರ್ಥ ಜ್ಞಾನ– ಇದುವೇ ಜ್ಞಾನವಾಗಿದೆ (ಭೀಷ್ಮ 37/2).

**ಕ್ಷೇಮ** – ಒಬ್ಬ ಕ್ಷತ್ರಿಯ ರಾಜ. ಅವನು ಕ್ರೋಧ ವಶನೆಂಬ ದೈತ್ಯನ ಅಂಶದಿಂದ ಜನ್ಮವೆತ್ತಿದ್ದನು (ಆದಿ 67/65). ಇವನು ಪಾಂಡವ ಪಕ್ಷದ ಯೋಧನಾಗಿದ್ದನು ಮತ್ತು ದ್ರೋಣಾಚಾರ್ಯನಿಂದ ಕೊಲ್ಲಲ್ಪಟ್ಟಿದ್ದನು (ದ್ರೋಣ 21/53).

**ಕ್ಷೇಮಕ** – (1) ಕಶ್ಯಪ ಮತ್ತು ಕದ್ರುವಿಗೆ ಹುಟ್ಟಿದ ಒಬ್ಬ ನಾಗ (ಆದಿ 35/11).

(2) ಒಬ್ಬ ಪ್ರಾಚೀನ ರಾಜ. ಅವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/22) ಇವನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/23)

**ಕ್ಷೇಮಂಕರ** – ಜಯದ್ರಥನ ಒಡನಾಡಿ, ತ್ರಿಗರ್ತ ದೇಶದ ಒಬ್ಬ ರಾಜ. ಕೋಟಿಕಾಸ್ಯನ ಮೂಲಕ ದ್ರೌಪದಿಗೆ ಈತನ ಪರಿಚಯ (ವನ 265/6–7). ನಕುಲನಿಂದ ಈತನ ವಧೆ (ವನ 271/70).

**ಕ್ಷೇಮದರ್ಶಿ** – ಕೋಸಲದೇಶದ ಒಬ್ಬ ರಾಜ (ಶಾಂತಿ 82/6). ಈತನ ಸಭೆಯಲ್ಲಿದ್ದುಕೊಂಡು ಕಾಲಕವೃಕ್ಷೀಯ ಮುನಿಯು ಈತನ ಮಂತ್ರಿ ಮೊದಲಾದವರ ದೋಷವನ್ನು ತಿಳಿಸಿದುದು ಮತ್ತು ರಾಜನಿಗೆ ಉಪದೇಶವನ್ನಿತ್ತದ್ದು (ಶಾಂತಿ 82/12–67). ಸೇನೆ ಇತ್ಯಾದಿ ನಷ್ಟವಾದಾಗ,

ಈತ ಕಾಲಕವೃಕ್ಷೀಯ ಮುನಿಯೊಡನೆ ಐಶ್ವರ್ಯದ ಹೊರತಾಗಿ ಇತರ ಸುಖದ ಉಪಾಯಗಳನ್ನು ಕೇಳಿದುದು (ಶಾಂತಿ 104/4–10). ಕಾಲಕವೃಕ್ಷಿಯ ಮುನಿಯ ಪ್ರಯತ್ನದಿಂದ, ಜನಕ (ವಿದೇಹ) ರಾಜನೊಂದಿಗೆ ಇವನ ಸಂಧಿ ಮತ್ತು ಈತನಿಗೆ ಜನಕನಿಂದ ಸತ್ಕಾರ ಮತ್ತು ಈತನಿಗೆ ಜನಕ ತನ್ನ ಮಗಳನ್ನು ವಿವಾಹ ಮಾಡಿದುದು (ಶಾಂತಿ 106/23–28).

**ಕ್ಷೇಮಧನ್ವಾ** – ಕೌರವ ಪಕ್ಷದ ಒಬ್ಬ ಪ್ರಧಾನ ರಥಿಕ. ಅವನು ದುರ್ಯೋಧನನ ಅಗ್ರಗಾಮಿ ಸಹಾಯಕರಲ್ಲಿದ್ದನು (ಭೀಷ್ಮ 17/27).

**ಕ್ಷೇಮಧೂರ್ತಿ** – (1) ಒಬ್ಬ ಕ್ಷತ್ರಿಯ ರಾಜ. ಇವನು ಕ್ರೋಧವಶನೆಂಬ ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/64). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸಲ್ಪಡುವ ವಿಚಾರ (ಉದ್ಯೋಗ 4/8). ಇವನೇ ಕುಲೂತದೇಶದ ಅಧಿಪತಿಯಾಗಿದ್ದನು ಮತ್ತು ಕೌರವ ಪಕ್ಷದಿಂದ ಯುದ್ಧಕ್ಕೆ ಬಂದು, ಭೀಮಸೇನನಿಂದ ಕೊಲ್ಲಲ್ಪಟ್ಟನು (ಕರ್ಣ 12/44).

(2) ಕೌರವ ಪಕ್ಷದ ಒಬ್ಬ ರಾಜ. ಬೃಹಂತನ ಒಡಹುಟ್ಟಿದ ಸಹೋದರ. ಸಾತ್ಯಕಿಯೊಂದಿಗೆ ಈತನ ಯುದ್ಧ (ದ್ರೋಣ 25/47–48). ಸಾತ್ಯಕಿಯಿಂದ ಈತನ ವಧೆ (ಶಲ್ಯ 21/8).

(3) ಕೌರವ ಪಕ್ಷದ ಒಬ್ಬ ಯೋಧ. ಪಾಂಡವ ಪಕ್ಷದ ಬೃಹತ್ಕ್ಷತ್ರನೊಂದಿಗೆ ಈತನ ಯುದ್ಧ (ದ್ರೋಣ 106/8). ಬೃಹತ್ಕ್ಷತ್ರನಿಂದ ಈತನ ವಧೆ. (ದ್ರೋಣ 107/6).

**ಕ್ಷೇಮಮೂರ್ತಿ** – ಧೃತರಾಷ್ಟ್ರನ ಒಬ್ಬ ಮಗ (ಆದಿ 67/100).

**ಕ್ಷೇಮವಾಹ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಕ್ಷೇಮವೃದ್ಧಿ** – ಶಾಲ್ವ ರಾಜನ ಮಂತ್ರಿ ಮತ್ತು ಸೇನಾಪತಿ. ಜಾಂಬವತೀ ಕುಮಾರ ಸಾಂಬನಿಂದ ಈತನ ಪರಾಜಯ (ವನ 16/11–16).

**ಕ್ಷೇಮಶರ್ಮಾ** – ಕೌರವ ಪಕ್ಷದ ಒಬ್ಬ ಯೋಧ. ಅವನು ದ್ರೋಣ ನಿರ್ಮಿತ ಗರುಡವ್ಯೂಹದ ಕುತ್ತಿಗೆಯ ಭಾಗದಲ್ಲಿ ನಿಲ್ಲಿಸಲ್ಪಟ್ಟಿದ್ದನು (ದ್ರೋಣ 20/66).

**ಕ್ಷೇಮಾ** – ಒಬ್ಬ ಸ್ವರ್ಗೀಯ ಅಪ್ಸರೆ. ಆಕೆ ಇತರ ಅಪ್ಸರೆಯರ ಜೊತೆಯಲ್ಲಿ ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/6).

**ಕ್ಷೈಮಿ** – ಕ್ಷೇಮ ಕುಮಾರ ಸತ್ಯಧೃತಿ. ಅವನನ್ನು ನಾನಾವರ್ಣದ, ವಿಶಾಲ ಕಾಯವುಳ್ಳ, ವಶೀಕರಿಸಲ್ಪಟ್ಟ, ಸ್ವರ್ಣಮಾಲೆಗಳಿಂದ ವಿಭೂಷಿತವಾದ ಮತ್ತು ಎತ್ತರವಾದ ಶರೀರವುಳ್ಳ, ಶುಭಲಕ್ಷಣದ ಕುದುರೆಗಳು ಯುದ್ಧ ಭೂಮಿಗೆ ತಲುಪಿಸಿದವು (ದ್ರೋಣ 23/58).

## ಖ

**ಖಗ** (1) ಕಶ್ಯಪವಂಶದಲ್ಲಿ ಹುಟ್ಟಿದ ಒಬ್ಬ ನಾಗ (ಉದ್ಯೋಗ 103/10).

(2) ಶಿವನ ಒಂದು ಹೆಸರು (ಅನು 17/67).

**ಖಗಮ** – ಪೂರ್ವಕಾಲದ ಒಬ್ಬ ತಪೋಬಲ ಸಂಪನ್ನ ಬ್ರಾಹ್ಮಣ. ಈತ ಸಹಸ್ರಪಾದ ಋಷಿಯ ಮಿತ್ರನಾಗಿದ್ದನು (ಆದಿ 11/1). ಇವನ ಶಾಪದಿಂದ ಸಹಸ್ರಪಾದ ಋಷಿ 'ಡುಂಡುಭ' ಸರ್ಪವಾದನು (ಆದಿ 11/2–4).

**ಖಟ್ವಾಂಗ** – ಇಲಬಿಲೆಯ ಮಗ ಮಹಾರಾಜ ದಿಲೀಪನ ಇನ್ನೊಂದು ಹೆಸರು (ದ್ರೋಣ 61/1–1–). ಈತ ಈ ಭೂಮಂಡಲವನ್ನು ಬ್ರಾಹ್ಮಣರಿಗೆ ದಾನಮಾಡಿದ್ದನು (ದ್ರೋಣ 61/2). ಇವನ ಯಜ್ಞದಲ್ಲಿ ಮಾರ್ಗಗಳು ಚಿನ್ನದಿಂದ ಮಾಡಲ್ಪಟ್ಟಿದ್ದವು. ಸಭಾ ಮಂಟಪ ಕೂಡಾ ಸುವರ್ಣದಿಂದಲೇ ನಿರ್ಮಿಸಲ್ಪಟ್ಟಿತ್ತು (ದ್ರೋಣ 61/3–4). ಇವನ ಯಜ್ಞದ ದಿವ್ಯ ವೈಭವದ ವರ್ಣನೆ (ದ್ರೋಣ 61/5–11).

**ಖಜ್ಗ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ಖಜ್ಗೇ** – ಶಿವನ ಒಂದು ಹೆಸರು (ಅನು 17/43).

**ಖಣ್ಡಖಣ್ಡಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

**ಖನೀನೇತ್ರ** – ಸೂರ್ಯವಂಶದ ವಿವಿಂಶನ ಜ್ಯೇಷ್ಠಪುತ್ರ, ಈತ ಪರಾಕ್ರಮಿಯಾಗಿದ್ದರೂ, ನಿಷ್ಕಂಟಕ ರಾಜ್ಯ ಪಡೆದಿದ್ದರೂ ಪ್ರಜೆಗಳ ಅನು

ರಾಗಕ್ಕೆ ಪಾತ್ರನಾಗಲಿಲ್ಲ. ಅದರಿಂದಾಗಿ ರಾಜಪಟ್ಟದಿಂದ ಇಳಿಸಲ್ಪಟ್ಟನು (ಆಶ್ವ 4/6–9).

**ಖರ** – (1) ಒಬ್ಬ ರಾಕ್ಷಸ. ಅವನು ವಿಶ್ರವಸುವಿನ ಪುತ್ರ ಮತ್ತು ಶೂರ್ಪಣಖೆಯ ಸಹೋದರನಾಗಿದ್ದನು. ಇವನ ತಾಯಿಯ ಹೆಸರು ರಾಕಾ ಎಂದಾಗಿತ್ತು (ವನ 275/4–8). ಈತ ಧನುರ್ವಿದ್ಯೆಯಲ್ಲಿ ವಿಶೇಷ ಪರಾಕ್ರಮಿ ಮತ್ತು ಬ್ರಹ್ಮದ್ರೋಹಿಯಾಗಿದ್ದನು (ವನ 275/12). ರಾವಣ, ಕುಂಭಕರ್ಣ ಮತ್ತು ವಿಭೀಷಣನ ತಪಸ್ಸಿನ ಸಮಯದಲ್ಲಿ ಈ ಸಹೋದರ ಸಹೋದರಿಯರಿಬ್ಬರು ಅವರ ಸೇವೆ ಮಾಡುತ್ತಿದ್ದರು (ವನ 275/12). ಶೂರ್ಪಣಖೆಯ ಕಾರಣದಿಂದ ಈತನಿಗೆ ಶ್ರೀರಾಮನೊಡನೆ ಬಹಳ ದೊಡ್ಡ ವೈರವುಂಟಾಯಿತು (ವನ 277/42). ಶ್ರೀರಾಮನು ತಪಸ್ವೀಜನರ ರಕ್ಷಣೆಗೋಸ್ಕರ ಖರನೇ ಮೊದಲಾದ ಹದಿನಾಲ್ಕು ಸಾವಿರ ರಾಕ್ಷಸರ ಸಂಹಾರ ಮಾಡಿದನು (ಸಭಾ 38/29).

(2) ರಾಕ್ಷಸರ ಒಂದು ಗುಂಪು. ಆ ದಳ ಇತರ ದಳಗಳೊಂದಿಗೆ ಸೇರಿ ವಾನರ ಸೇನೆಯ ಮೇಲೆ ಆಕ್ರಮಣ ಮಾಡಿತ್ತು (ವನ 285/2).

**ಖರಕರ್ಣೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಖರಜಙ್ಘಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/22).

**ಖರೀ** –ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/6).

**ಖಲೀ** – (1) ಶಿವನ ಒಂದು ಹೆಸರು (ಅನು 17/43).

(2) ದಾನವರ ಒಂದು ಸಮುದಾಯ. ಅದನ್ನು ವಸಿಷ್ಠನು ತನ್ನ ತೇಜಸ್ಸಿನಿಂದ ದಗ್ಧಗೊಳಿಸಿದ್ದನು (ಅನು 155/22).

**ಖಲು** – ಭಾರತವರ್ಷದ ಒಂದು ನದಿ. ಅದರ ನೀರನ್ನು ಇಲ್ಲಿ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/28).

**ಖಸ** – ಒಂದು ದೇಶ (ದ್ರೋಣ 121/42).

**ಖಾಣ್ಡವ** (ವನ )– ಯಮುನಾ ತಟದ ಒಂದು ವನ. ಅದನ್ನು ಶ್ರೀಕೃಷ್ಣ ಮತ್ತು ಅರ್ಜುನನ ಸಹಾಯದಿಂದ ಅಗ್ನಿದೇವನು ಉರಿಸಿದ್ದನು. ಇದರ ರಕ್ಷಣೆಗೆ ಇಂದ್ರನ ಪ್ರಯತ್ನ. ಇದನ್ನು ಉರಿಸುವಾಗ ಅರ್ಜುನನಿಂದ ತಕ್ಷಕ ಪತ್ನಿಯ ವಧೆ (ಆದಿ 223ರಿಂದ 225).

**ಖಾಣ್ಡವದಾಹಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 221 ರಿಂದ 226 ವರೆಗೆ).

**ಖಾಣ್ಡವಪ್ರಸ್ಥ** – ಪ್ರಾಚೀನ ಕಾಲದ ಒಂದು ನಗರ. ಅದು ಪಾಂಡವರ ರಾಜಧಾನಿಯಾಗಿತ್ತು– ಇಂದ್ರಪ್ರಸ್ಥ (ಆದಿ 61/35). ಇಲ್ಲಿಯೇ ಇದ್ದು ಅರ್ಜುನನು ಶ್ರೀಕೃಷ್ಣನ ಸಹಾಯದಿಂದ ಅಗ್ನಿದೇವನನ್ನು ತೃಪ್ತಿಗೊಳಿಸಿದ್ದನು (ಆದಿ 61/45). ಪೂರ್ವಕಾಲದಲ್ಲಿ ಪುರೂರವ, ನಹುಷ ಮತ್ತು ಯಯಾತಿ ಕೂಡಾ ಇಲ್ಲಿಯೇ ವಾಸಮಾಡುತ್ತಿದ್ದರು (ಆದಿ 206/25). (ನೋಡಿರಿ– ಇಂದ್ರಪ್ರಸ್ಥ).

**ಖಾಣ್ಡವಾಯನ** – ಪರಶುರಾಮನು ಕೊಟ್ಟ ಸ್ವರ್ಣವೇದಿಯನ್ನು ಖಂಡಖಂಡವಾಗಿ ಮಾಡಿ ತಮ್ಮಲ್ಲಿ ಹಂಚಿಕೊಂಡ ಬ್ರಾಹ್ಮಣರ ಹೆಸರು (ವನ 117/13).

**ಖಾಶೀರ** – ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/68).

**ಖಿಲ** – ಮಹಾಭಾರತದ ಪರಿಶಿಷ್ಟ ಭಾಗ. ಹರಿವಂಶದ ಇನ್ನೊಂದು ಹೆಸರು (ಆದಿ 2/82–83; 379–380).

**ಖ್ಯಾತಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

## ಗ

**ಗಗನ ಮೂರ್ಧಾ** – ಕಶ್ಯಪ ಮತ್ತು ದನುವಿನ ವಂಶದ ಒಬ್ಬ ವಿಖ್ಯಾತ ದಾನವ (ಆದಿ 65/24). ಐದುಮಂದಿ ಕೇಕಯ ರಾಜಕುಮಾರರಲ್ಲಿ ಒಬ್ಬನ ರೂಪದಲ್ಲಿ ಈತ ಹುಟ್ಟಿದ್ದನು (ಆದಿ 67/10).

**ಗಙ್ಗಾ** – ದೇವನದಿ. ವಸುಗಳ ತಾಯಿ. ಭೀಷ್ಮನ ತಾಯಿ. ಮಹರ್ಷಿ ವಶಿಷ್ಠನ ಶಾಪ ಮತ್ತು ಇಂದ್ರನ ಆದೇಶದಿಂದ ಗಂಗೆಯ ಗರ್ಭದಿಂದ ಶಾಂತನು ಪುತ್ರರಾಗಿ ಅಷ್ಟವಸುಗಳ ಜನ್ಮ (ಆದಿ 67/74). ಗಂಗೆಯ ಆಧಿದೈವಿಕ ರೂಪ ದೇವಾಂಗನೆಯ ಸಮಾನವಾದುದು. ಅವಳು

ಅದೇ ರೂಪದಿಂದ ಒಂದು ದಿನ ಬ್ರಹ್ಮನ ಸಭೆಯಲ್ಲಿ ಉಪಸ್ಥಿತಳಾಗಿದ್ದಳು. ಆಗ ವಾಯುವಿನ ಬೀಸುವಿಕೆಯಿಂದ ಆಕೆಯ ಶರೀರದ, ಚಂದ್ರಿಕೆಗೆ ಸಮಾನವಾದ ಉಜ್ವಲವಸ್ತ್ರ ಒಮ್ಮೆಯೇ ಸ್ವಲ್ಪ ಮೇಲಕ್ಕೆ ಹಾರಿತು. ಆ ಪರಿಸ್ಥಿತಿಯಲ್ಲಿ ಆಕೆಯ ಕಡೆಗೆ ನೋಡಿದ್ದರಿಂದ ಮಹಾಭಿಷನಿಗೆ ಮರ್ತ್ಯ ಲೋಕದಲ್ಲಿ ಜನ್ಮವೆತ್ತುವಂತೆ ಬ್ರಹ್ಮನಿಂದ ಶಾಪ ದೊರಕಿತು. ಬ್ರಹ್ಮನ ಪ್ರತಿಕೂಲ ಆಚರಣೆ ಮಾಡಿ ದ್ದರಿಂದ ಈಕೆಯೂ ಮಹಾಭಿಷನ ಜೊತೆಯಲ್ಲಿ ಹೋಗಲು ಸಂಕೇತ ದೊರಕಿತು (ಆದಿ 96/4–8). ಮಹಾಭಿಷನನ್ನು ನೆನೆಯುತ್ತಿದ್ದ ಗಂಗೆ ಅಲ್ಲಿಂದ ಹೋದುದು, ಮಾರ್ಗದಲ್ಲಿ ವಸುಗಳು ಆಕೆಯ ದುಃಖದ ಕಾರಣ ಕೇಳಿದುದು (ಆದಿ 96/9–12). 'ವಶಿಷ್ಠನ ಶಾಪದಿಂದಾಗಿ ನಾವು ಮರ್ತ್ಯಲೋಕದಲ್ಲಿ ಜನ್ಮವೆತ್ತ ಬೇಕಾಗುವುದು. ಅಲ್ಲಿ ನೀನೇ ನಮ್ಮ ತಾಯಿಯಾಗು' ಎಂದು ಗಂಗೆಯೊಡನೆ ವಸುಗಳ ಪ್ರಾರ್ಥನೆ ಮತ್ತು ಈಕೆ ಅವರ ಪ್ರಾರ್ಥನೆಯನ್ನು ಸ್ವೀಕರಿಸಿದುದು (ಆದಿ 96/12–18). ಜನ್ಮ ಹೊಂದುತ್ತಲೇ ನೀರಲ್ಲಿ ಎಸೆದುಬಿಡುವಂತೆ ಈಕೆಯೊಡನೆ ವಸುಗಳ ಕೋರಿಕೆ (ಆದಿ 96/19). ಶಾಂತನುಗೆ ಒಬ್ಬ ಪುತ್ರ ಪ್ರಾಪ್ತನಾಗಿರುವಂತೆ, ಈಕೆ ವಸುಗಳೊಡನೆ ಒಪ್ಪಂದ ಮಾಡಿಕೊಂಡದ್ದು (ಆದಿ 96–20/22). ತನ್ನ ಪತಿಯಾಗುವಂತೆ ಪ್ರತೀಪರಾಜನಲ್ಲಿ ಈಕೆಯ ಪ್ರಾರ್ಥನೆ (ಆದಿ 97/5). ಬಲತೊಡೆ ಯಲ್ಲಿ ಕುಳಿತುದರಿಂದ ಈಕೆ ಪತ್ನಿರೂಪದಿಂದಲ್ಲ; ಸೊಸೆಯಾಗಿರಲು ಪ್ರತೀಪನ ಅಂಗೀಕಾರ (ಆದಿ 97/11). ಗಂಗೆಯು ಪ್ರತೀಪನ ಆಜ್ಞೆಯನ್ನು ಸ್ವೀಕರಿಸಿದುದು (ಆದಿ 97/12–15). ಪರಮ ಸುಂದರ ದಿವ್ಯಪ್ರಭೆಯಿಂದ ಪ್ರಕಾಶಮಾನಳೂ, ಸಾಕ್ಷಾತ್ ಲಕ್ಷ್ಮಿಯಂತೆ ಮನೋರಮಳೂ, ಅನಿಂದ್ಯ ಸೌಂದರ್ಯ ಸಂಪನ್ನಳೂ, ದಿವ್ಯಾಭರಣ ಭೂಷಿತಳೂ, ಸೂಕ್ಷ್ಮಾಂಬರ ವಿಲಸಿತಳೂ, ಕಮ ಲೋದರ ಕಾಂತಿಯಿಂದ ಸುಶೋಭಿತಳೂ ಆಗಿ, ದಿವ್ಯ ರೂಪದರ್ಶನವುಳ್ಳ ಗಂಗೆಯಿಂದ ಆಕೃಷ್ಟ ನಾಗಿ, ಶಾಂತನು ಮಹಾರಾಜನು ತನ್ನ ಪತ್ನಿ ಯಾಗುವಂತೆ ಆಕೆಯನ್ನು ಪ್ರಾರ್ಥಿಸಿದನು (ಆದಿ 97/27–33). ಕೆಲವು ಶರ್ತಗಳೊಂದಿಗೆ ಆತನ ಕೋರಿಕೆಯನ್ನು ಈಕೆ ಮನ್ನಿಸಿದುದು (ಆದಿ 98/1–4). ಶಾಂತನುವಿನಿಂದ ಈಕೆಯ ಗರ್ಭದಲ್ಲಿ ಎಂಟು ದೇವಸಮಾನ ಪುತ್ರರ ಜನನ (ಆದಿ 98/12). ಹುಟ್ಟಿದ ಶಿಶುಗಳನ್ನು ಈಕೆ ಜಲದಲ್ಲಿ ಎಸೆದುದು (ಆದಿ 98/13). ಭೀಷ್ಮನ ಜನ್ಮವಾದಾಗ, ಅವನ ವಧೆಯೂ ಆಗುವುದೆಂಬ ಅಂಜಿಕೆಯಿಂದ, ಶಾಂತನು ಈಕೆಯನ್ನು ಕಠಿನವಾಗಿ ನಿಂದಿಸಿದುದು (ಆದಿ 98/12). ತನ್ನ ಗುಟ್ಟನ್ನು ಪ್ರಕಟಗೊಳಿಸಿ, ತನ್ನ ನವಜಾತ ಶಿಶುಗಳ (ವಸು). ಪರಿಚಯ ವನ್ನು ಈಕೆ ಶಾಂತನುವಿಗೆ ತಿಳಿಸಿದುದು (ಆದಿ 98/17–24). ವಸುಗಳಿಗೆ ವಶಿಷ್ಠನಿಂದ ಪ್ರಾಪ್ತ ವಾದ ಶಾಪವಿಚಾರ ತಿಳಿಸಿ, ಈ ಒಬ್ಬನೇ ಪುತ್ರ ಚಿರಕಾಲದ ವರೆಗೆ ಮಾನವಲೋಕದಲ್ಲಿ ಇರುವ ನೆಂದು ಹೇಳಿ, ಭೀಷ್ಮನ ಭಾವೀಗುಣಗಳ ವರ್ಣನೆ ಮಾಡಿ, ಅವನನ್ನು ಪಾಲಿಸುವುದಕ್ಕಾಗಿ, ಜೊತೆ ಯಲ್ಲಿ ಕರಕೊಂಡು ಈಕೆ ಅಂತರ್ಧಾನಳಾದುದು (ಆದಿ 99). ತನ್ನ ಪುತ್ರನನ್ನು ತೋರಿಸುವಂತೆ ಶಾಂತನು ಗಂಗೆಯೊಡನೆ ಹೇಳಿದುದು. ಗಂಗೆಯು ಪಾಲನೆ ಪೋಷಣೆ ಮಾಡಿ ಸುಶಿಕ್ಷಿತನಾದ ಆ ಪುತ್ರನನ್ನು ರಾಜನ ಕೈಗೆ ಒಪ್ಪಿಸಿದುದು (ಆದಿ 100/30–40). ಗಂಗೆಯು ಪ್ರಾಚೀನ ಕಾಲದಲ್ಲಿ ಹಿಮಾಲಯದ ಸ್ವರ್ಣಶಿಖರದಿಂದ ಉದ್ಭವಿಸಿ ದಳು ಮತ್ತು ಏಳು ಧಾರೆಗಳಾಗಿ ವಿಭಕ್ತಳಾಗಿ ಸಮುದ್ರವನ್ನು ಸೇರಿದಳು. ಈ ಏಳು ಧಾರೆಗಳ ಹೆಸರು: ಗಂಗಾ, ಯಮುನಾ, ಸರಸ್ವತಿ, ರಥಸ್ಥಾ, ಸರಯೂ, ಗೋಮತಿ ಮತ್ತು ಗಂಡಕಿ. ಈ ಧಾರೆಗಳ ನೀರನ್ನು ಕುಡಿಯುವ ಪುರುಷರ ಪಾಪ ತಕ್ಷಣ ನಷ್ಟವಾಗುತ್ತದೆ. ಈ ಗಂಗೆ ದೇವ ಲೋಕದಲ್ಲಿ ಅಲಕನಂದಾ ಮತ್ತು ಪಿತೃಲೋಕ ದಲ್ಲಿ ವೈತರಣಿ ಎಂಬ ಹೆಸರನ್ನು ಧರಿಸಿದ್ದಾಳೆ. ಈ ಮರ್ತ್ಯಲೋಕದಲ್ಲಿ ಈಕೆಯ ಹೆಸರು 'ಗಂಗಾ' ಎಂದಾಗಿದೆ. ತೀರ್ಥರೂಪದಲ್ಲಿ ಈಕೆಯ ವರ್ಣನೆ (ವನ 85/88–89). ಈಕೆ ಭಗೀರಥ ರಾಜನಿಗೆ ವರಕೊಟ್ಟದ್ದು (ವನ 108/15). ಈಕೆ ಭೂತಲ ದಲ್ಲಿ ಬಿದ್ದದ್ದು (ವನ 109/8). ಈಕೆಯಿಂದ ಸಮುದ್ರ ತುಂಬಿದುದು (ವನ 109/18). ಅಗ್ನಿಯ ಉತ್ಪತ್ತಿ ಸ್ಥಾನವೆಂದು ಪರಿಗಣಿಸಲ್ಪಟ್ಟ ನದಿಗಳಲ್ಲಿ ಈಕೆಯ ಗಣನೆ (ವನ 222/22). ಪರಶು ರಾಮನೊಂದಿಗೆ ಯುದ್ಧ ಮಾಡಲು ಸಿದ್ಧನಾದ ಭೀಷ್ಮನನ್ನು ಈಕೆ ನಿಂದಿಸಿದುದು (ಉದ್ಯೋಗ

178/86–88). ಭೀಷ್ಮನಿಗಾಗಿ ಪರಶುರಾಮ ನೊಡನೆ ಕ್ಷಮೆಯಾಚಿಸಿದುದು (ಉದ್ಯೋಗ 178 /86–88). ಪರಶುರಾಮನೊಡನೆ ನಡೆದ ಯುದ್ಧ ದಲ್ಲಿ ಸಾರಥಿ ಕೊಲ್ಲಲ್ಪಟ್ಟಾಗ ಭೀಷ್ಮನ ಸಾರಥ್ಯ ಮಾಡಿದುದು (ಉದ್ಯೋಗ 182/16). ಈಕೆ ಅಂಬೆಗೆ ನದಿಯಾಗುವಂತೆ ಶಾಪಕೊಟ್ಟದ್ದು (ಉದ್ಯೋಗ 186/36). ಮೇರುಪರ್ವತದ ಶಿಖರ ದಿಂದ, ಹಾಲಿನಂತೆ ಶ್ವೇತಧಾರೆಯುಳ್ಳ, ವಿಶ್ವ ರೂಪೆಯೂ ಅಪರಿಮಿತ ಶಕ್ತಿಶಾಲಿನಿಯೂ ಆದ, ಭಯಂಕರ ವಜ್ರಪಾತದಂತೆ ಶಬ್ದಮಾಡುವ, ಪರಮಪುಣ್ಯಾತ್ಮರಾದ ಪುರುಷರ ಮೂಲಕ ಸೇವೆ ಮಾಡಲ್ಪಡುವ ಸುಭಗ ಸ್ವರೂಪೆ, ಪುಣ್ಯಮಯೀ ಭಾಗೀರಥಿ, ಗಂಗೆ ಅತ್ಯಂತ ಪ್ರಬಲವೇಗದಿಂದ ಸುಂದರವಾದ ಚಂದ್ರಮೋಹ್ರದ(ಚಂದ್ರಕುಂಡ) ದಲ್ಲಿ ಧುಮುಕುತ್ತಾಳೆ. ಗಂಗೆಯ ಮೂಲಕ ಪ್ರಕಟಿಸಲ್ಪಟ್ಟ ಆ ಆಳವಾದ ಮಡು ಸಮುದ್ರದಂತೆ ಕಾಣಿಸುತ್ತದೆ. ಭಗವಾನ್ ಶಂಕರನು ಒಂದು ಲಕ್ಷ ವರ್ಷಗಳ ವರೆಗೆ ತನ್ನ ಮಸ್ತಕದಲ್ಲಿ ಧರಿಸಿದ್ದನು. ಬ್ರಹ್ಮಲೋಕದಿಂದ ಇಳಿದು ತ್ರಿಪಥಗಾಮಿನಿ ಗಂಗೆ ಮೊದಲು ಹಿರಣ್ಯ ಶೃಂಗದ ಬಳಿ ಬಿಂದು ಸರೋವರವನ್ನು ಪ್ರವೇಶಿಸಿದಳು. ಅಲ್ಲಿ ಆಕೆಯಿಂದ ಏಳು ಧಾರೆಗಳು ವಿಭಕ್ತವಾದುವು. ಅವುಗಳ ಹೆಸರು: ವಸ್ವೋಕಸಾರಾ, ನಲಿನಿ, ಪಾವನಿ, ಸರಸ್ವತಿ, ಜಂಬೂನದಿ, ಸೀತಾಗಂಗಾ ಮತ್ತು ಸಿಂಧು (ಭೀಷ್ಮ 6/28–50). ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರ ಬಳಿಗೆ ಈಕೆ ಮಹರ್ಷಿಗಳನ್ನು ಕಳುಹಿಸಿದುದು (ಭೀಷ್ಮ 119/97–98). ಈಕೆ ಭಾಗೀರಥಿಯೆಂದು ಹೆಸರು ಬರಲು ಕಾರಣ (ದ್ರೋಣ 60/6). ಈಕೆಯಿಂದ ಸ್ಕಂದನಿಗೆ ಕಮಂಡಲು ದಾನ (ಶಲ್ಯ 46/50). ಸಮುದ್ರ ನೊಡನೆ ಬೆತ್ತದ ನಮ್ರತೆಯನ್ನು ವರ್ಣಿಸಿದುದು (ಶಾಂತಿ 116/8–10). ಈಕೆ ಜಹ್ನುವಿನ ಪುತ್ರಿ ಯೆಂದು ಪ್ರಸಿದ್ಧವಾದುದು (ಅನು 4/3). ಗಂಗೆ ಯಲ್ಲಿ ಸ್ನಾನ ಮಾಡಿದರೆ ಫಲ (ಅನು 25/39). ಈಕೆಯ ಮಹಿಮೆಯ ವರ್ಣನೆ (ಅನು 26/ 26–96). ಅಗ್ನಿಯಿಂದ ಸ್ಥಾಪಿಸಲ್ಪಟ್ಟ ಶಿವನ ತೇಜಸ್ಸನ್ನು ಈಕೆ ಮೇರುಪರ್ವತದ ಮೇಲೆ ಬಿಟ್ಟದ್ದು (ಅನು 85/68). ಅಗ್ನಿಯೊಡನೆ ತನ್ನ ಸ್ವರೂಪ ಇತ್ಯಾದಿಗಳ ಕುರಿತು ವರ್ಣನೆ (ಅನು 85/72–76). ಸ್ತ್ರೀಧರ್ಮದ ವರ್ಣನೆ ಮಾಡಲು ಪಾರ್ವತಿಯೊಡನೆ ಪ್ರಾರ್ಥನೆ (ಅನು 146/27–32). ತನ್ನ ಪುತ್ರ ಭೀಷ್ಮನ ಮೃತ್ಯುವಿಗಾಗಿ ಈಕೆ ಶೋಕಿಸಿದುದು (ಅನು 168/23–28). ಭೀಷ್ಮನು ಧರಾಶಾಯಿಯಾದಾಗ, ವಸುಗಳು ಗಂಗೆಯ ತಟಕ್ಕೆ ಬಂದು, ಅರ್ಜುನನಿಗೆ ಶಾಪಕೊಡುವ ಇಚ್ಛೆಯನ್ನು ಪ್ರಕಟಿಸಿದುದು ಮತ್ತು ಗಂಗೆ ಅವರ ಈ ವಿಚಾರವನ್ನು ಅನುಮೋದಿಸಿದುದು (ಅಶ್ವ 81/12–15). ಮಹಾಭಾರತದಲ್ಲಿ ಬಂದಿರುವ ಗಂಗೆಯ ಹೆಸರುಗಳು – ಆಕಾಶಗಂಗಾ, ಭಗೀರಥ ಸುತಾ, ಭಾಗೀರಥೀ, ಶೈಲರಾಜಸುತಾ, ಶೈಲ ಸುತಾ, ದೇವನದಿ, ಹೈಮವತಿ, ಜಾಹ್ನವಿ, ಜಹ್ನು ಕನ್ಯಾ, ಜಹ್ನುಸುತಾ, ಸಮುದ್ರಮಹಿಷಿ, ತ್ರಿಪಥಗಾ, ತ್ರಿಪಥಗಾಮಿನಿ ಇತ್ಯಾದಿ.

**ಗಙ್ಗಾದತ್ತ** (ಗಂಗಾದತ್ತ) – ಶಂತನು ರಾಜನಿಂದ ಗಂಗೆಯ ಗರ್ಭದಲ್ಲಿ ಹುಟ್ಟಿದ ಕುಮಾರ ದೇವ ವ್ರತ (ಆದಿ 99/45) (ನೋಡಿರಿ–ಭೀಷ್ಮ).

**ಗಙ್ಗಾದ್ವಾರ** (ಗಂಗಾದ್ವಾರ) – ಎಲ್ಲಿ ಗಂಗೆ ಪರ್ವತಮಾಲೆಗಳಿಂದ ಹೊರಟು ಸಮತಲ ಭೂಮಿ ಅಥವಾ ಬಯಲುಪ್ರದೇಶಕ್ಕೆ ಬರು ತ್ತಾಳೋ, ಆ ಸ್ಥಾನದ ಹೆಸರು ಗಂಗಾದ್ವಾರ. ಇದನ್ನೇ 'ಹರದ್ವಾರ' ಅಥವಾ 'ಹರಿದ್ವಾರ' ಎನ್ನು ತ್ತಾರೆ. ಗಂಗಾದ್ವಾರದಲ್ಲಿ ಪ್ರತೀಪನು ತಪಸ್ಸು ಮಾಡಿದನು (ಆದಿ 97/1). ಭರದ್ವಾಜ ಮುನಿ ಇಲ್ಲಿ ವಾಸಿಸುತ್ತಿದ್ದನು (ಆದಿ 129/33). ಅರ್ಜುನನು ಇಲ್ಲಿರುವ ತೀರ್ಥಗಳ ಯಾತ್ರೆ ಮಾಡಿದ್ದನು (ಆದಿ 213). ಗಂಗಾದ್ವಾರ ಸ್ವರ್ಗ ದ್ವಾರಕ್ಕೆ ಸಮಾನವಾದುದು. ಅಲ್ಲಿ ಏಕಾಗ್ರಚಿತ್ತದಿಂದ ಕೋಟಿತೀರ್ಥದಲ್ಲಿ ಸ್ನಾನಮಾಡಿದರೆ ಪುಂಡರೀಕ ಯಜ್ಞದ ಫಲಸಿಗುತ್ತದೆ (ವನ 84/27; 89/155; 90/21). ಪತ್ನಿಸಹಿತನಾಗಿ ಅಗಸ್ತ್ಯಮಹರ್ಷಿ ಇಲ್ಲಿ ತಪಸ್ಸುಮಾಡಿದ್ದನು (ವನ 97/11). ಜಯದ್ರಥನು ಇಲ್ಲಿಯೇ ಶಿವನನ್ನು ಆರಾಧಿಸಿ ಪ್ರಸನ್ನಗೊಳಿಸಿದ್ದನು (ವನ 272/24–26). ದಕ್ಷ ಪ್ರಜಾಪತಿಯೂ ಇಲ್ಲಿಯೇ (ಕನಖಲದಲ್ಲಿ) ಯಜ್ಞಮಾಡಿದ್ದನು (ಶಲ್ಯ 38/27–28). ಗಂಗಾದ್ವಾರ ಮತ್ತು ಅಲ್ಲಿ ರುವ ತೀರ್ಥವಿಶೇಷಗಳಾದ ಕುಶಾವರ್ತ, ವಿಲ್ವಕ, ನೀಲಪರ್ವತ, ಮತ್ತು ಕನಖಲದಲ್ಲಿ ಸ್ನಾನ ಮಾಡಿ ಪಾಪರಹಿತನಾದ ಮನುಷ್ಯ ಸ್ವರ್ಗಕ್ಕೆ ಹೋಗುತ್ತಾನೆ

(ಅನು 25/13). ಗಂಗಾದ್ವಾರದಲ್ಲಿ ಭೀಷ್ಮನು ತನ್ನ ತಂದೆಯ ಶ್ರಾದ್ಧ ಮಾಡಿದ್ದನು, ಅಲ್ಲಿ ಪಿಂಡ ತೆಗೆದುಕೊಳ್ಳಲು ಶಾಂತನುವಿನ ಹಸ್ತ ಪ್ರಕಟ ವಾಗಿತ್ತು (ಅನು 84/11–15). ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿ ಗಂಗಾದ್ವಾರದ ಕಾಡಿ ನಲ್ಲಿ ದಗ್ಧರಾಗಿದ್ದರು. ಯುಧಿಷ್ಠಿರನು ಇಲ್ಲಿ ಅವ ರಿಗೆ ಶ್ರಾದ್ಧಕರ್ಮವನ್ನು ಮಾಡಿಸಿದ್ದನು (ಆಶ್ರಮ 39/14–20).

**ಗಙ್ಗಾಮಹಾದ್ವಾರ** – ಹಿಮಾಲಯದ ಶಿಖರ ದಿಂದ ಗಂಗೆಯು ಇಳಿಯುವ ಸ್ಥಾನ. ಇದು ಗಂಗೋತ್ತರಿಯಿಂದಲೂ ತುಂಬಾ ಮುಂದೆ ಇದೆ. ಒಬ್ಬ ಸತ್ಯವಾದಿ, ಮಹತ್ಮಾ, ಧಾಮಮುನಿ ಅದರ ರಕ್ಷಣೆ ಮಾಡುತ್ತಾನೆ. ಅವನ ಮೂರ್ತಿ, ಆಕೃತಿ ಮತ್ತು ಸಂಚಿತ ತಪಸ್ಸಿನ ಪರಿಮಾಣ ಯಾರಿಗೂ ತಿಳಿದಿರುವುದಿಲ್ಲ. ಆ ಗಂಗಾ ಮಹಾ ದ್ವಾರದಿಂದ ಮುಂದೆಹೋಗುವ ಮನುಷ್ಯ ಹಿಮ ರಾಶಿಯಲ್ಲಿ ಕರಗಿಹೋಗುತ್ತಾನೆ. ಭಗವಾನ್ ನರ ನಾರಾಯಣರನ್ನು ಬಿಟ್ಟು ಇನ್ನಿತರ ಯಾರೂ ಆ ಗಂಗಾಮಹಾದ್ವಾರದಲ್ಲಿ ಮುಂದೆ ಎಂದೂ ಹೋಗಲಿಲ್ಲ (ಉದ್ಯೋಗ 111/16–20).

**ಗಙ್ಗಾಯಮುನಾಸಂಗಮ** – ಪ್ರಯಾಗದ ಒಂದು ಪಾವನ ತೀರ್ಥ. ಅಲ್ಲಿ ಸ್ನಾನ ಮಾಡಿದರೆ ಹತ್ತು ಅಶ್ವಮೇಧ ಯಜ್ಞದ ಫಲ ಸಿಗುತ್ತದೆ. ಮತ್ತು ಸಮಸ್ತ ಕುಲದ ಉದ್ಧಾರವಾಗುತ್ತದೆ (ವನ 84/35; 85/74–76).

**ಗಙ್ಗಾಸರಸ್ವತಿ–ಸಂಗಮ** – ಪ್ರಯಾಗದ ಒಂದು ಪವಿತ್ರ ತೀರ್ಥ. ಅಲ್ಲಿ ಸ್ನಾನ ಮಾಡಿದರೆ ಅಶ್ವ ಮೇಧಯಜ್ಞದ ಫಲ ದೊರಕುತ್ತದೆ ಮತ್ತು ಸ್ವರ್ಗ ಪ್ರಾಪ್ತವಾಗುತ್ತದೆ (ವನ 84/38).

**ಗಙ್ಗಾ–ಸಾಗರ–ಸಂಗಮ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿದುದರಿಂದ ಹತ್ತು ಅಶ್ವಮೇಧ ಯಜ್ಞಗಳ ಫಲಪ್ರಾಪ್ತಿಯಾಗುತ್ತದೆ. ಅಲ್ಲಿ ಗಂಗೆಯ ಇನ್ನೊಂದು ದಡಕ್ಕೆ ಹೋಗಿ ಸ್ನಾನಮಾಡಿ, ಮೂರುರಾತ್ರಿ ವಾಸಿಸುವವ ಮನುಷ್ಯ ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ (ವನ 85/4–5).

**ಗಙ್ಗಾಹ್ರದ** – ಇಲ್ಲಿ ಸ್ನಾನ ಮಾಡಿದರೆ ಫಲ (ಅನು 25–34). ಕುರುಕ್ಷೇತ್ರದ ಗಡಿಯಲ್ಲಿರುವ ಯೌವನ ತೀರ್ಥದ ಒಳಗೆ ಗಂಗಾಹ್ರದ ಎಂಬ ಹೆಸರಿನ ಕೂಪವಿದೆ. ಅದರಲ್ಲಿ ಮೂರು ಕೋಟಿ ತೀರ್ಥಗಳ ಸಾನಿಧ್ಯವಿದೆ. ಅಲ್ಲಿ ಸ್ನಾನ ಮಾಡುವ ಮನುಷ್ಯ ಸ್ವರ್ಗಲೋಕಕ್ಕೆ ಹೋಗುತ್ತಾನೆ (ವನ 83/176; 83/201).

**ಗಙ್ಗೋದ್ಭೇದ** – ಒಂದುತೀರ್ಥ. ಅಲ್ಲಿ ಮೂರು ರಾತ್ರಿ ಉಪವಾಸಮಾಡುವ ಮನುಷ್ಯ ವಾಜ ಪೇಯ ಯಜ್ಞದ ಫಲಪಡೆಯುತ್ತಾನೆ ಮತ್ತು ಶಾಶ್ವತವಾಗಿ ಬ್ರಹ್ಮೀಭೂತನಾಗುತ್ತಾನೆ (ವನ 84/65).

**ಗಜ** – (1) ಒಬ್ಬ ಮಹಾಪರಾಕ್ರಮಿ ವಾನರ ರಾಜ. ಅವನು ಒಂದು ನೂರು ಕೋಟಿ ಸೇನೆ ಯೊಂದಿಗೆ ಶ್ರೀರಾಮನ ಬಳಿಗೆ ಬಂದಿದ್ದನು (ವನ 283/3).

(2) ಸುಬಲಪುತ್ರ ಶಕುನಿಯ ಒಬ್ಬ ತಮ್ಮ. ಅವನು ಇತರ ಸಹೋದರರೊಂದಿಗೆ ಪಾಂಡವ ಸೈನ್ಯದ ದುರ್ಜಯವಾದ ವ್ಯೂಹವನ್ನು ಪ್ರವೇಶಿಸಿದ್ದನು (ಭೀಷ್ಮ 90/27–30). ಇರಾವಂತನಿಂದ ಈತನ ವಧೆ (ಭೀಷ್ಮ 90/45–46).

**ಗಜಕರ್ಣ** – ಕುಬೇರನ ಸಭೆಯಲ್ಲಿ ಉಪಸ್ಥಿತ ನಾಗಿದ್ದು ಅವನ ಸೇವೆ ಮಾಡುವ ಒಬ್ಬ ಯಕ್ಷ (ಸಭಾ 10/16).

**ಗಜಶಿರಾ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45 /60).

**ಗಣ** – ಸೇನಾಗಣನೆಯ ಒಂದು ಪಾರಿಭಾಷಿಕ ಶಬ್ದ. ಮೂರು ಗುಲ್ಮಗಳಿಗೆ ಒಂದು ಗಣವಾಗು ತ್ತದೆ (ಆದಿ 2/21).

**ಗಣಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

**ಗಣಿತ** – ಒಬ್ಬ ಸನಾತನ ವಿಶ್ವೇದೇವ. ಕಾಲದ ಗತಿಯನ್ನು ತಿಳಿದವ (ಅನು 91/36).

**ಗಣೇಶ** – ವ್ಯಾಸ ನಿರ್ಮಿತ ಮಹಾಭಾರತವನ್ನು ಲಿಪಿಬದ್ಧವಾಗಿ ಮಾಡಿದ ವಿಘ್ನೇಶ್ವರ, ಭಗವಾನ್ ಗಣನಾಯಕ (ಆದಿ 1/75–79).

**ಗಣ್ಡಕ** – ಒಂದು ದೇಶ. ಅದು ಗಂಡಕೀನದಿಯ ಹತ್ತಿರದಲ್ಲಿ ನೆಲಸಿದೆ. ದಿಗ್ವಿಜಯ ಕಾಲದಲ್ಲಿ ಭೀಮಸೇನನು ಇದನ್ನು ಗೆದ್ದಿದ್ದನು (ಸಭಾ 29/4).

**ಗಣ್ಡಕಂಡೂ** – ಕುಬೇರ ಸಭೆಯ ಒಬ್ಬ ಯಕ್ಷ. ಅವನು ಅಲ್ಲಿ ಧನಾಧ್ಯಕ್ಷ ಕುಬೇರನ ಸೇವೆ ಮಾಡುತ್ತಾನೆ (ಸಭಾ 10/15).

**ಗಣ್ಡಕೀ** – ಗಂಗೆಯ ಏಳುಧಾರೆಗಳಲ್ಲಿ ಒಂದು.

ಗಂಡಕಿಯ ನೀರು ಕುಡಿಯುವ ಮನುಷ್ಯ ತಕ್ಷಣ ಪಾಪರಹಿತನಾಗುತ್ತಾನೆ (ಆದಿ 169/20-21). ಗ್ರಂಥಾಂತರದಲ್ಲಿ ಈಕೆಯ ಇನ್ನೆರಡು ಹೆಸರು ಪ್ರಸಿದ್ಧವಾಗಿವೆ – ನಾರಾಯಣೀ ಮತ್ತು ಶಾಲಗ್ರಾಮೀ ಮಹಾಭಾರತ (ಭೀಷ್ಮ 9/25). ದಲ್ಲಿ ಮತ್ತು ಬೌದ್ಧಗ್ರಂಥಗಳಲ್ಲಿ ಈಕೆಗೆ ಹಿರಣ್ವತಿ ಮತ್ತು ಹಿರಣ್ಯವತಿ ಎಂಬ ಹೆಸರುಗಳೂ ಉಪಲಬ್ಧವಾಗಿವೆ. ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನರು ಇಂದ್ರಪ್ರಸ್ಥದಿಂದ ಗಿರಿವ್ರಜಕ್ಕೆ ಹೋಗುವಾಗ ಈ ನದಿಯನ್ನು ದಾಟಿದ್ದರು (ಸಭಾ 20/27). ಗಂಡಕೀ ನದಿ ಎಲ್ಲಾ ತೀರ್ಥ ಗಳ ಜಲದಿಂದ ಉತ್ಪನ್ನವಾಗಿದೆ. ಇಲ್ಲಿ ಹೋಗು ವುದರಿಂದ ತೀರ್ಥಯಾತ್ರಿಕನು ಅಶ್ವಮೇಧ ಯಜ್ಞದ ಫಲಪಡೆಯುತ್ತಾನೆ ಮತ್ತು ಸೂರ್ಯ ಲೋಕಕ್ಕೆ ಹೋಗುತ್ತಾನೆ (ವನ 84/113). ಅಗ್ನಿಯ ಉತ್ಪತ್ತಿಗೆ ಸ್ಥಾನಭೂತವಾದ ನದಿಗಳಲ್ಲಿ 'ಗಣ್ಡಕಿ'ಯೂ ಗಣಿಸಲ್ಪಡುತ್ತದೆ (ವನ 222/22). ಹಿರಣ್ವತಿ ಅಥವಾ ಗಂಡಕಿ ಭಾರತವರ್ಷದ ಪ್ರಧಾನ ನದಿಗಳಲ್ಲಿ ಒಂದಾಗಿದೆ (ಭೀಷ್ಮ 9/25).

**ಗಣ್ಡಾ** – ಸಪ್ತರ್ಷಿಗಳ ಸೇವೆ ಮಾಡುವ ಒಬ್ಬ ದಾಸಿ (ಅನು 93/22). ಈಕೆ ವೃಷಾದರ್ಭಿ ಯೊಡನೆ ಪ್ರತಿಗ್ರಹದ ದೋಷವನ್ನು ಹೇಳಿ, ಅದ ರಿಂದಾಗುವ ಭಯವನ್ನು ಪ್ರಕಟಿಸಿದುದು (ಅನು 93/22). ಯಾತುಧಾನಿಯೊಡನೆ ಈಕೆ ತನ್ನ ಹೆಸರಿನ ಅಭಿಪ್ರಾಯವನ್ನು ತಿಳಿಸಿದುದು (ಅನು 93/46). ಕಮಲದಂಟಿನ ಕಳ್ಳತನದ ಕುರಿತು ಶಪಥ ಮಾಡಿದುದು (ಅನು 93/98).

**ಗತಿತಾಲಿ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ಗದ** – ಶ್ರೀ ಕೃಷ್ಣನ ಸಹೋದರ (ತಮ್ಮ). ಈತ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/17). ಅರ್ಜುನ ಮತ್ತು ಸುಭದ್ರೆಗೆ ವರದಕ್ಷಿಣೆ ತೆಗೆದುಕೊಂಡು, ಈತ ದ್ವಾರಕೆಯಿಂದ ಇಂದ್ರ ಪ್ರಸ್ಥಕ್ಕೆ ಬಂದಿದ್ದನು (ಆದಿ 220/32). ಶ್ರೀ ಕೃಷ್ಣನು ದ್ವಾರಕೆಗೆ ಹೋದಾಗ ಗದನು ಸ್ವಾಗತಿಸಿ ದನು ಮತ್ತು ಶ್ರೀಕೃಷ್ಣನು ಅವನನ್ನು ಅಪ್ಪಿ ಕೊಂಡನು (ಸಭಾ 2/35). ಯುಧಿಷ್ಠಿರನು ಮಯನಿರ್ಮಿತ ಸಭಾಭವನ ಪ್ರವೇಶ ಮಾಡುವ ಸಮಯದಲ್ಲಿ ಗದನೂ ಅಲ್ಲಿ ಉಪಸ್ಥಿತನಿದ್ದನು (ಸಭಾ 4/30). ಪಾಂಡುಪುತ್ರ ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ, ಇತರ ವೃಷ್ಣಿವಂಶದವ ರೊಂದಿಗೆ ಗದನೂ ಆಗಮಿಸಿದ್ದನು (ಸಭಾ 34 /16). ಶಾಲ್ವನು ಆಕ್ರಮಣಮಾಡಿದಾಗ, ಈತ ದ್ವಾರಕಾನಗರದ ರಕ್ಷಣೆಯ ವ್ಯವಸ್ಥೆಯಲ್ಲಿ ಸಹ ಯೋಗವನ್ನಿತ್ತಿದ್ದನು (ವನ 15/9). ಯುಧಿಷ್ಠಿರನ ಅಶ್ವಮೇಧಯಜ್ಞದಲ್ಲಿ ಶ್ರೀಕೃಷ್ಣನೊಂದಿಗೆ ಈತನೂ ಬಂದಿದ್ದನು (ಆಶ್ವ 86/5). ಮೌಸಲಯುದ್ಧದಲ್ಲಿ ಗದನು ಕೊಲ್ಲಲ್ಪಟ್ಟುದನು ನೋಡಿ, ಕೃಷ್ಣನಿಗೆ ವಿರೋಧಿಗಳ ಮೇಲೆ ಭಯಂಕರ ಕೋಪ ಬಂದಿತ್ತು (ಮೌಸಲ 3/45).

**ಗದಾಪರ್ವ** – ಶಲ್ಯಪರ್ವದ ಒಂದು ಅವಾಂತರ ಪರ್ವ (ಶಲ್ಯ ಅಧ್ಯಾಯ 30ರಿಂದ 65ವರೆಗೆ).

**ಗದಾವಸಾನ** – ಮಥುರೆಯ ಒಂದು ಸ್ಥಾನ ವಿಶೇಷ. ಶ್ರೀಕೃಷ್ಣನಿಂದ ತನ್ನ ಅಳಿಯ ಕಂಸನು ಕೊಲ್ಲಲ್ಪಟ್ಟಾಗ, ಅತ್ಯಂತ ಕೋಪಗೊಂಡ ಮಗಧ ರಾಜ ಜರಾಸಂಧನು, ಶ್ರೀಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ, ತೊಂಭತ್ತೊಂಭತ್ತು ಬಾರಿ ತನ್ನ ಗದೆಯನ್ನು ತಿರುಗಿಸಿ, ಗಿರಿವ್ರಜದಿಂದ ಮಥುರೆಯ ಕಡೆ ಎಸೆದನು. ಆ ಗದೆ ತೊಂಭತ್ತೊಂಭತ್ತು ಯೋಜನ ದೂರದ ಮಥುರೆಯಲ್ಲಿ ಹೋಗಿ ಬಿದ್ದಿತು. ಗದೆಯು ಬಿದ್ದ ಆ ಸ್ಥಳ, ಮಥುರೆ ಯಲ್ಲಿ 'ಗದಾವಸಾನ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು (ಸಭಾ 19/22-25).

**ಗನ್ಧಕಾಲಿ** (ಗಂಧಕಾಲಿ) – ಸತ್ಯವತಿಯ ಇನ್ನೊಂದು ಹೆಸರು. ತಂದೆಗೆ ಪ್ರಿಯವನ್ನುಂಟು ಮಾಡುವುದಕ್ಕಾಗಿ, ಭೀಷ್ಮನು ಸತ್ಯವತಿ ಅಥವಾ ಗಂಧಕಾಲಿಯನ್ನು ತಂದೆಗೆ ವಿವಾಹ ಮಾಡಿಸಿದ್ದನು (ಆದಿ 95/48) (ನೋಡಿರಿ-ಸತ್ಯವತಿ).

**ಗನ್ಧಮಾದನ** (ಗಂಧಮಾದನ) – (1) ಹಿಮಾಲಯದ ಉತ್ತರ ಭಾಗದಲ್ಲಿರುವ ಬದರಿ ಕಾಶ್ರಮದ ಸಮೀಪದಲ್ಲಿರುವ ಪರ್ವತ. ಗಂಧ ಮಾದನದ ಮೇಲೆ ಕಶ್ಯಪನು ತಪಸ್ಸು ಮಾಡಿದನು (ಆದಿ 30/10). ಇಲ್ಲಿಯೇ ಭಗವಾನ್ ಶೇಷನೂ ತಪಸ್ಸು ಮಾಡಿದ್ದನು (ಆದಿ 36/3). ಶತಶೃಂಗ ಪರ್ವತದ ಮೇಲೆ ತಪಸ್ಸು ಮಾಡಲು ಹೋಗು ತ್ತಿದ್ದಾಗ, ತನ್ನ ಇಬ್ಬರು ಪತ್ನಿಯರೊಡನೆ ಇಲ್ಲಿಗೆ ಪಾಂಡುವಿನ ಆಗಮನ (ಆದಿ 118/48). ಈ ಗಂಧಮಾದನ ಪರ್ವತ ದಿವ್ಯರೂಪಧರಿಸಿ,

ಕುಬೇರನ ಸಭೆಯಲ್ಲಿರುತ್ತಾ, ಭಗವಾನ್ ಧನಾಧ್ಯಕ್ಷನ ಉಪಾಸನೆ ಮಾಡುತ್ತಾನೆ (ಸಭಾ 10/32). ಶ್ರೀಕೃಷ್ಣನು ನಾರಾಯಣರೂಪದಿಂದ ಯತ್ರ ಸಾಯಂಗೃಹ ಮುನಿಯಾಗಿ ಹತ್ತು ಸಾವಿರ ವರ್ಷಗಳ ತನಕ ಗಂಧಮಾದನ ಪರ್ವತದ ಮೇಲೆ ನಿವಾಸಮಾಡಿದ್ದಾನೆ (ವನ 12/11). ತಪಸ್ಸಿಗೆ ಹೋಗುವಾಗ ಅರ್ಜುನನು ಹಿಮವಂತ ಮತ್ತು ಗಂಧಮಾದನ ಪರ್ವತಗಳನ್ನು ದಾಟಿ, ಮುಂದಿನ ಯಾತ್ರೆ ಮಾಡಿದ್ದನು (ವನ 30/41). ತಪೋಬಲದಿಂದ ಮಾತ್ರ ಗಂಧಮಾದನದ ಮೇಲೆ ಹೋಗಲು ಸಾಧ್ಯವಿದೆ- ಇದು ಲೋಮಶರ ವಚನ (ವನ 140/22). ಗಂಧಮಾದನದ ಮೇಲೆ ವಿಶಾಲವಾದ ಬದರಿಯ ಮರ ಮತ್ತು ಭಗವಾನ್ ನರನಾರಾಯಣರ ಆಶ್ರಮವಿದೆ. ಅಲ್ಲಿ ಸದಾ ಯಕ್ಷರು ವಾಸಿಸುತ್ತಾರೆ (ವನ 14/22-24). ಗಂಧಮಾದನಕ್ಕೆ ಪಾಂಡವರ ಪ್ರವೇಶ ಮತ್ತು ಅಲ್ಲಿಯ ಪ್ರಾಕೃತಿಕ ಸ್ಥಿತಿಯ ವರ್ಣನೆ (ವನ 143/2-6). ಘಟೋತ್ಕಚ ಮತ್ತು ಅವನ ಒಡನಾಡಿಗಳ ಸಹಾಯದಿಂದ ಪಾಂಡವರು ಗಂಧಮಾದನ ಪರ್ವತಕ್ಕೆ ತಲುಪಿದುದು (ವನ 145). ಗಂಧಮಾದನದ ಪ್ರಾಕೃತಿಕ ಶೋಭೆಯ ವರ್ಣನೆ (ವನ 148). ಗಂಧಮಾದನದಲ್ಲಿ ಭೀಮಸೇನನಿಂದ, ಕುಬೇರನ ಸ್ನೇಹಿತ, ರಾಕ್ಷಸ ಶ್ರೇಷ್ಠ ಮಣಿಮಂತನ ವಧೆ (ವನ 160/76-77). ಅರ್ಜುನನು ಇಂದ್ರಲೋಕದಿಂದ ಹಿಂತಿರುಗಿ ಗಂಧಮಾದನಕ್ಕೆ ಬಂದುದು (ವನ 164). ಲಂಕೆಯಿಂದ ಸ್ಥಾನಭ್ರಷ್ಟನಾದ ಕುಬೇರ ಗಂಧಮಾದನದಲ್ಲಿ ವಾಸಿಸಿದುದು (ವನ 275/33). ಇಲ್ಲಿ ನರನಾರಾಯಣರು ಅವರ್ಣನೀಯ ತಪಸ್ಸು ಮಾಡಿದ್ದಾರೆ (ಉದ್ಯೋಗ 96/15).

(2) ಗಂಧಮಾದನ ನಿವಾಸಿ ಮತ್ತು ಗಂಧಮಾದನ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ವಾನರಸೇನಾಪತಿ. ಅವನು ಒಂದು ಲಕ್ಷ ಕೋಟಿ ವಾನರ ಸೇನಾಸಮೇತನಾಗಿ ಶ್ರೀರಾಮನ ಬಳಿಗೆ ಬಂದಿದ್ದನು (ವನ 283).

(3) ಒಬ್ಬ ರಾಕ್ಷಸ ರಾಜ. ಅವನು ಯಕ್ಷ, ಗಂಧರ್ವ ಮತ್ತು ನಿಶಾಚರರೊಂದಿಗೆ, ಕುಬೇರನ ಸಭೆಯಲ್ಲಿ ಅವನ ಉಪಾಸನೆಮಾಡುತ್ತಾನೆ (ಸಭಾ 10/30-31).

**ಗನ್ಧರ್ವತೀರ್ಥ** - ಸರಸ್ವತೀ ತಟದ ಒಂದು ಪ್ರಾಚೀನ ತೀರ್ಥ. ಅಲ್ಲಿ ವಿಶ್ವಾವಸು ಮೊದಲಾದ ಗಂಧರ್ವರು ನೃತ್ಯ ಮೊದಲಾದುವನ್ನು ಮಾಡುತ್ತಿರುತ್ತಾರೆ. ಬಲರಾಮನು ಇಲ್ಲಿಗೆ ಯಾತ್ರೆ ಮಾಡಿದ್ದನು (ಶಲ್ಯ 37/9-13).

**ಗನ್ಧರ್ವನಗರ** - (ಪಟ್ಟಣ, ಗ್ರಾಮ ಇತ್ಯಾದಿಗಳು ಆಕಾಶದಲ್ಲಿ ಅಥವಾ ನೆಲದಲ್ಲಿ ದೃಷ್ಟಿದೋಷದಿಂದ ಕಂಡಂತಾಗುವ ಭ್ರಾಂತಿ. ಬೇಸಗೆಯ ದಿನಗಳಲ್ಲಿ ಮರುಭೂಮಿ ಅಥವಾ ಸಮುದ್ರದಲ್ಲಿ ವಾಯುವಿನ ಸ್ತರಗಳ ಘನತ್ವ, ಉಷ್ಣತೆಯ ಕಾರಣದಿಂದ ಅಸಮಾನವಾದಾಗ, ಪ್ರಕಾಶದ ಗತಿಯ ವಿಚ್ಛೇದದಿಂದ ಬೇರೆ ನಗರ, ಹಳ್ಳಿ, ಮರ, ಹಡಗು ಇತ್ಯಾದಿಗಳ ಪ್ರತಿಬಿಂಬ ಆಕಾಶದಲ್ಲಿ ಬೀಳುತ್ತದೆ. ಅದರಿಂದಾಗಿ ದೂರದ ಹಳ್ಳಿ, ನಗರಗಳು ಒಂದೋ ಅಡಿಮೇಲಾಗಿ ನೇತಾಡುತ್ತಾ ಅಥವಾ ಸಮೀಪದಲ್ಲಿ ಕಾಣಿಸುತ್ತವೆ. ಕೆಳಗಿನ ಸ್ತರದ ವಾಯು ಮೇಲಿನ ವಾಯು ಮೇಲೆ ಹೋಗಲಾರದಷ್ಟು ಬೇಗನೆ, ಹಗುರವಾದಾಗ ವಾಯುವಿನ ಅಸಮಾನಸ್ತರದ ಕಾರಣದಿಂದ, ಆ ಸಮಯದಲ್ಲಿ ಈ ದೃಷ್ಟಿದೋಷ ಉಂಟಾಗುತ್ತದೆ. ಗಂಧರ್ವನಗರದ ಫಲವನ್ನು ಬೃಹತ್ಸಂಹಿತೆಯಲ್ಲಿ ಬರೆಯಲಾಗಿದೆ (ಹಿಂದೀ ಶಬ್ದಸಾಗರ). ಮಹರ್ಷಿಗಳ ಅಂತರ್ಧಾನವನ್ನು ಗಂಧರ್ವ ನಗರಕ್ಕೆ ಉಪಮೆಯಾಗಿ ಕೊಡುತ್ತಾರೆ (ಆದಿ 125/35).

**ಗನ್ಧರ್ವೀ** - ಕ್ರೋಧವಶನ ಪುತ್ರಿ. ಸುರಭಿಯ ಕನ್ಯೆ. ಈಕೆಯಿಂದ ಕುದುರೆಗಳ ಉತ್ಪತ್ತಿ (ಆದಿ 65/67-68).

**ಗನ್ಧವತಿ** - ಸತ್ಯವತಿಯು ಪರಾಶರನೊಡನೆ ತನ್ನ ಶರೀರಕ್ಕೆ ಉತ್ತಮ ಸುಗಂಧ ಬರುವಂತೆ ವರ ಬೇಡಿದಳು. ವರ ಪಡೆದು ಆಕೆ 'ಗಂಧವತಿ' ಮತ್ತು 'ಯೋಜನಗಂಧಾ' ಎಂಬ ಹೆಸರಿನಿಂದ ಪ್ರಸಿದ್ಧಳಾದಳು (ಆದಿ 63/80-83) (ನೋಡಿರಿ -ಸತ್ಯವತಿ).

**ಗಭಸ್ತಿಮಂತ** (ಗಭಸ್ತಿಮಾನ್) **ದ್ವೀಪ** - ಒಂದು ದ್ವೀಪ. ಅದನ್ನು ಶಕ್ತಿವಂತನಾದ ಸಹಸ್ರಬಾಹು ಗೆದ್ದಿದ್ದನು (ಸಭಾ 38/29).

**ಗಯ** - (1) 'ಆಯು'ವಿನಿಂದ ಸ್ವರ್ಭಾನು ಕುಮಾರಿಯ ಗರ್ಭದಲ್ಲಿ ಹುಟ್ಟಿದ ಚತುರ್ಥಪುತ್ರ, ಪುರೂರವನ ಪೌತ್ರ (ಆದಿ 75/25).

(2) ಒಬ್ಬ ಪ್ರಾಚೀನ ರಾಜ. ಅವನು ಅಮೂರ್ತರಯಾನ ಪುತ್ರ ಮತ್ತು ರಾಜರ್ಷಿಗಳಲ್ಲಿ ಶ್ರೇಷ್ಠನಾಗಿದ್ದನು. ಶಮಠನಿಂದ ಈತನ ಯಜ್ಞದ ವರ್ಣನೆ (ವನ 95/18–29). ಈತ ಯಮರಾಜನ ಸಭೆಯಲ್ಲಿದ್ದಾನೆ (ಸಭಾ 8/18). ಇವನು ಎಲ್ಲಾ ತೀರ್ಥಗಳ ಯಾತ್ರೆ ಮಾಡಿದನು. ಅಲ್ಲಿರುವ ಪಾವನ ಜಲದ ಸ್ಪರ್ಶ ಮತ್ತು ಮಹಾತ್ಮರ ದರ್ಶನದಿಂದ, ತುಂಬಾ ಧನ ಮತ್ತು ಯಶಸ್ಸನ್ನು ಪಡೆದಿದ್ದನು (ವನ 94/18–19). ಇವನ ಯಜ್ಞದ ಪ್ರಶಂಸೆ (ವನ 121/5–13). ವಿರಾಟ ನಗರದಲ್ಲಿ ಗೋಹರಣದ ಸಂದರ್ಭದಲ್ಲಿ ಅರ್ಜುನ ಮತ್ತು ಕೃಪಾಚಾರ್ಯರ ಯುದ್ಧನೋಡಲು ಈತ ಇಂದ್ರನ ವಿಮಾನದಲ್ಲಿ ಕುಳಿತು ಬಂದಿದ್ದನು (ವಿರಾಟ 56/9–10). ಈತ ಹಸ್ತಿನಾವತಿಗೆ ಹೋಗುವ ಶ್ರೀಕೃಷ್ಣನಿಗೆ ಮಾರ್ಗದಲ್ಲಿ ಪ್ರದಕ್ಷಿಣೆ ಮಾಡಿದ್ದನು (ಉದ್ಯೋಗ 83/27). ಇವನ ಮೇಲೆ ಮಾಂಧಾತನ ವಿಜಯ (ದ್ರೋಣ 62/ 10). ಸೃಂಜಯನಿಗೆ ಸಮಾಧಾನಹೇಳುತ್ತಾ ನಾರದ ರಿಂದ ಈತನ ಯಜ್ಞದ ವರ್ಣನೆ (ದ್ರೋಣ 66). ಇವನು ಗಯಾದಲ್ಲಿ ಯಜ್ಞಮಾಡಿದನು. ಇವನ ಯಜ್ಞಕ್ಕೆ ಬಂದ ಸರಸ್ವತಿಯ ಹೆಸರು 'ವಿಶಾಲಾ' (ನದಿ) ಎಂದಾಗಿತ್ತು (ಶಲ್ಯ 38/20–21). ಶ್ರೀಕೃಷ್ಣನಿಂದ ಈತನ ಯಜ್ಞವರ್ಣನೆ (ಶಾಂತಿ 29/111–119). ಈತನಿಂದ ಬ್ರಾಹ್ಮಣನಿಗೆ ಪೃಥ್ವೀದಾನ (ಶಾಂತಿ 234/26). ಇವನು ಮಾಂಸಭಕ್ಷಣವನ್ನು ನಿಷೇಧಿಸಿದ್ದನು (ಅನು 115 /59).

(3) ಒಂದು ಅತ್ಯಂತ ಪುಣ್ಯತಮವಾದ ಶ್ರೇಷ್ಠ ಪರ್ವತ. ಅದು ಗಯನೆಂಬ ರಾಜನಿಂದ ಗೌರವಿ ಸಲ್ಪಟ್ಟಿದೆ. ಅಲ್ಲಿಯೇ ದೇವರ್ಷಿಗಳಿಂದ ಸೇವೆ ಕೈಗೊಳ್ಳುವ ಕಲ್ಯಾಣಮಯವಾದ ಬ್ರಹ್ಮ ಸರೋವರವಿದೆ. ಗಯೆಯಲ್ಲಿ ಹೋಗಿ ಶ್ರಾದ್ಧ ಮಾಡುವು ದರಿಂದ ಮನುಷ್ಯನ ಇಪ್ಪತ್ತು ತಲೆಮಾರಿನವರ ಉದ್ಧಾರವಾಗುತ್ತದೆ (ವನ 87/8–10).

(4) ಒಂದು ದೇಶ. ಅದರೊಳಗೆ ಗಯ ಪರ್ವತ ಮತ್ತು ಗಯಾತೀರ್ಥವಿದೆ. ಈ ದೇಶದ ಜನರು ರಾಜಾ ಯುಧಿಷ್ಠಿರನ ಬಳಿಗೆ ಕಾಣಿಕೆ ತಂದಿದ್ದರು (ಸಭಾ 52/16).

**ಗಯಶಿರ** – ಗಯಾತೀರ್ಥದ ಒಳಗೆ ಇರುವ ಗಯ ಎಂಬ ಹೆಸರಿನ ಪರ್ವತ. ಅದನ್ನೇ ಗಯ ಶಿರ ಅಥವಾ ಗಯಶೀರ್ಷವೆನ್ನುತ್ತಾರೆ. ಅಲ್ಲಿಯೇ ಅಕ್ಷಯ ವಟವಿದೆ (ವನ 87/11; 95/9).

**ಗಯಶೀರ್ಷ** – ಗಯೆಯ ತೀರ್ಥವಿಶೇಷ. ಅಲ್ಲಿ ಅಕ್ಷಯವಟವಿದೆ. ಅಲ್ಲಿ ಪಿತೃಗಳಿಗೆ ಕೊಟ್ಟ ಅನ್ನ ಅಕ್ಷಯವಾಗುತ್ತದೆ (ವನ 87/11; 95/9).

**ಗಯಾ** – ಒಂದು ಪರಮ ಪಾವನ ತೀರ್ಥ. ಇಲ್ಲಿ ಬ್ರಹ್ಮಚರ್ಯಪಾಲನೆಯ ಮೂಲಕ ಏಕಾಗ್ರ ಚಿತ್ತನಾದರೆ, ಮನುಷ್ಯನು ಅಶ್ವಮೇಧದ ಫಲ ಪಡೆಯುತ್ತಾನೆ ಮತ್ತು ತನ್ನ ಕುಲದ ಉದ್ಧಾರ ಮಾಡುತ್ತಾನೆ (ವನ 84/82; 95/8).

**ಗರಿಷ್ಠ** – ಒಬ್ಬ ಮುನಿ. ಅವನು ಇಂದ್ರ ಸಭೆ ಯಲ್ಲಿದ್ದುಕೊಂಡು, ವಜ್ರಧಾರಿ ಇಂದ್ರನ ಉಪಾ ಸನೆ ಮಾಡುತ್ತಾನೆ (ಸಭಾ 7/13).

**ಗರುಡ** – ಕಶ್ಯಪ ಮತ್ತು ವಿನತೆಯ ಪರಮತೇಜಸ್ವಿ ಪುತ್ರ. ಈತ ವಿಷ್ಣುವಿನ ವಾಹನ ಮತ್ತು ಧ್ವಜವಾಗಿದ್ದಾನೆ (ಆದಿ 23/12). ಈತ ಸಮಯವಾದಾಗ ತನ್ನ ತಾಯಿಯ ಸಹಾಯ ವಿಲ್ಲದೆಯೇ ಮೊಟ್ಟೆಯನ್ನು ಒಡೆದು ಹೊರಗೆ ಬಂದನು. ಈತನಲ್ಲಿ ಮಹತ್ತರ ಸಾಹಸ ಮತ್ತು ಬಲಪರಾಕ್ರಮವಿತ್ತು. ಈತ ತನ್ನ ತೇಜಸ್ಸಿನಿಂದ ಎಲ್ಲಾ ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು. ಇಚ್ಛಾನು ಸಾರ ರೂಪ ಧರಿಸುವುದು, ಚಲಿಸುವುದು, ಪರಾಕ್ರಮ ತೋರಿಸುವುದರಲ್ಲಿ ಸಮರ್ಥನಾಗಿ ದ್ದನು. ಪ್ರಜ್ವಲಿತ ಅಗ್ನಿಪುಂಜದಂತೆ. ಅತ್ಯಂತ ಭಯಂಕರನಾಗಿ ಕಾಣಿಸುತ್ತಿದ್ದನು. ಇವನ ಪಿಂಗಲ ವರ್ಣದ ಕಣ್ಣುಗಳು ವಿದ್ಯುತ್ತಿನಂತೆ ಹೊಳೆಯು ತ್ತಿದ್ದವು. ಈತ ಹುಟ್ಟುತ್ತಲೇ ಒಮ್ಮಿಂದೊಮ್ಮೆಗೆ ಬೆಳೆದು ವಿಶಾಲನಾದನು ಮತ್ತು ಆಕಾಶದಲ್ಲಿ ಹಾರಿಹೋದನು. ಬಡವಾನಲನಂತೆ ಈತನನ್ನು ಭೀಷಣನಾಗಿ ಕಂಡ ದೇವತೆಗಳು ಅಗ್ನಿಗೆ ಶರಣಾದರು. ಈತ ಮಹಾತೇಜಸ್ವಿ ವಿನತಾನಂದನ ಗರುಡನೆಂದು ಅಗ್ನಿದೇವನು ತಿಳಿಸಿದನು. ಈ ಕಶ್ಯಪ ಕುಮಾರನು ದೇವತೆಗಳ ಹಿತೈಷಿಯೂ, ಸರ್ಪಗಳ ಸಂಹಾರಕನೂ ಆಗಿದ್ದಾನೆ (ಆದಿ 23/5–13). ದೇವತೆಗಳಿಂದ ಸ್ತುತಿಸಲ್ಪಟ್ಟಾಗ ಈತ ತನ್ನ ತೇಜಸ್ಸನ್ನು ಕುಂಠಿತಗೊಳಿಸಿದುದು (ಆದಿ 23/27; 24/2). ತಾನು ಮತ್ತು ತಾಯಿ ದಾಸ್ಯ ದಿಂದ ಬಿಡುಗಡೆಹೊಂದಲು ಈತ ಸರ್ಪ

ಗಳೊಡನೆ ಉಪಾಯವೇನೆಂದು ಕೇಳಿದುದು (ಆದಿ 27/14–15). ಸ್ವರ್ಗಕ್ಕೆ ಹೋಗುವ ಸಂದರ್ಭದಲ್ಲಿ ಈತನ ಪ್ರಾರ್ಥನೆ, ತಾಯಿ ಮಾರ್ಗದಲ್ಲಿ ಈತನಿಗೆ ಭೋಜನವನ್ನು ಸೂಚಿಸಿದುದು (ಆದಿ 28/2). ಈತನು ಕೇಳಿದಾಗ ತಾಯಿ ಈತನಿಗೆ ಬ್ರಾಹ್ಮಣರ ಮಹಿಮೆಯನ್ನು ತಿಳಿಸಿದುದು ಮತ್ತು ಅವರನ್ನು ತಿನ್ನದಂತೆ ಆದೇಶ ನೀಡಿದುದು (ಆದಿ 28/3–12). ಸ್ವರ್ಗಕ್ಕೆ ಹೋಗುವಾಗ ಈತನಿಗೆ ತಾಯಿಯ ಆಶೀರ್ವಾದ (ಆದಿ 28/14–16). ನಿಷಾದರ ಜೊತೆಯಲ್ಲಿ ಒಬ್ಬ ಸಸ್ತ್ರೀಕ ಬ್ರಾಹ್ಮಣನು ಈತನ ಬಾಯೊಳಗೆ ಬಂದುದು; ಇವನ ಕಂಠ ಸುಟ್ಟು ಹೋದದ್ದು. ಈತನಿಂದ ಅವನ ಪರಿತ್ಯಾಗ (ಆದಿ 29/2–5). ಇವನ ತಂದೆ ಕಶ್ಯಪನು ಆಮೆ ಮತ್ತು ಆನೆಗಳ ಪೂರ್ವಜನ್ಮದ ಇತಿಹಾಸ ತಿಳಿಸಿ, ಅವುಗಳನ್ನು ತಿನ್ನುವಂತೆ ಈತನಿಗೆ ಹೇಳಿದುದು (ಆದಿ 29/13–32). ಇವನು ಆನೆ, ಆಮೆ ಮತ್ತು ವಾಲಖಿಲ್ಯ ಋಷಿಗಳನ್ನು ಎತ್ತಿಕೊಂಡು ಹಾರುವ ಅದ್ಭುತ ಘಟನೆ (ಆದಿ 29/37; 30/25). ವಾಳಖಿಲ್ಯರಿಂದ ಈತನಿಗೆ ನಾಮಕರಣ (ಆದಿ 30/6–7). ಇವನ ತಂದೆ ಸ್ತುತಿಸಿದಾಗ ವಾಲಖಿಲ್ಯ ಮುನಿಗಳು ಆ ಗೆಲ್ಲನ್ನು ಪರಿತ್ಯಾಗ ಮಾಡಿದುದು (ಆದಿ 30/16). ಇವನು ಸ್ವರ್ಗದ ಸಮೀಪ ಹೋದಾಗ ಅಲ್ಲಿ ಅಶುಭಸೂಚಕಗಳಾದ ಅನೇಕ ಉತ್ಪಾತಗಳಾದುದು (ಆದಿ 30/32–38). ಭಯ ಪಟ್ಟ ಇಂದ್ರನಿಗೆ ಬೃಹಸ್ಪತಿಯು ಅಮೃತಕ್ಕಾಗಿ ಗರುಡನು ಬರುವ ಸೂಚನೆಯನ್ನು ನೀಡಿದುದು (ಆದಿ 30/40–42). ಅಮೃತಹರಣಕ್ಕಾಗಿ ಈತ ಸ್ವರ್ಗಕ್ಕೆ ಬರುತ್ತಿರುವುದನ್ನು ನೋಡಿ, ಇಂದ್ರನು ದೇವತೆಗಳನ್ನು ಎಚ್ಚರಿಸಿದುದು (ಆದಿ 30/42–44). ಇವನ ಜನ್ಮಕಥೆ ಮತ್ತು ಪಕ್ಷಿಗಳ ಇಂದ್ರ ಪದವಿಯಲ್ಲಿ ಈತನಿಗೆ ಅಭಿಷೇಕ (ಆದಿ 31/34–35; 32/1–25). ತನ್ನ ರೂಪವನ್ನು ಚಿಕ್ಕದಾಗಿಸಿ ಕೊಂಡು, ಈತ ಚಕ್ರದೊಳಗೆ ನುಗ್ಗಿದುದು ಮತ್ತು ಅಮೃತದ ಸ್ಥಾನಕ್ಕೆ ಪ್ರವೇಶಿಸಿದುದು. ಅಲ್ಲಿ ಅಮೃತ ರಕ್ಷಕ ಅದ್ಭುತ ಪರಾಕ್ರಮಿಗಳಾದ ಇಬ್ಬರು ಸರ್ಪಗಳನ್ನು ಕೊಂದು, ಈತ ಅಮೃತ ಪಾತ್ರವನ್ನು ಎತ್ತಿಕೊಂಡು ಹಾರಿದುದು (ಆದಿ 33/1–11). ಮಾರ್ಗದಲ್ಲಿ ಭಗವಂತನಾದ ವಿಷ್ಣು ವಿನಿಂದ, ಅವನ ಧ್ವಜದ ಮೇಲೆ ನೆಲಸುವ ಮತ್ತು ಅಮೃತಪ್ರಾಶನ ಮಾಡದೆಯೇ ಅಜರಾ ಮರನಾಗಿರುವ ವರ ಪಡೆದುದು ಮತ್ತು ಅವನಿಗೆ ಸ್ವಯಂವಾಹನವಾಗಿರುವ ವರನೀಡಿದುದು (ಆದಿ 33/12–16). ಇಂದ್ರನೊಡನೆ ಈತನ ಯುದ್ಧ ಮತ್ತು ಸ್ನೇಹ (ಆದಿ 33/28–34). ಇಂದ್ರನ ಅಭಿಪ್ರಾಯ ಪ್ರಕಾರ ಗರುಡನ ಮೂಲಕ ನಾಗ ಗಳು ಅಮೃತ ಪ್ರಾಪ್ತಿಯಿಂದ ವಂಚಿತರಾದುದು, ಇಂದ್ರನ ಮನೋರಥ ಪೂರ್ತಿಯಾದುದು, ವಿನತೆಯು ದಾಸ್ಯದಿಂದ ವಿಮೋಚನೆ ಹೊಂದಿ ದುದು (ಆದಿ 33/12–16). ಈತನು ದರ್ಭೆಗಳ ಮೇಲೆ ಅಮೃತವನ್ನಿಟ್ಟದ್ದರಿಂದ ಅವುಗಳು ಪವಿತ್ರ ವಾದುದು (ಆದಿ 34/24). ಅರ್ಜುನನ ಜನ್ಮ ಸಮಯದಲ್ಲಿ ಈತ ಬಂದಿದ್ದನು (ಆದಿ 122/50). ಶ್ರೀಕೃಷ್ಣನ ಧ್ವಜದ ಮೇಲೆ ಗರುಡನ ಆವಾಸ (ಸಭಾ 24/22–24). ಈತನು ಋದ್ಧಿ ಮಾನನೆಂಬ ಸರ್ಪನನ್ನು ಹಿಡಿದುದು (ವನ 160 /15). ಇವನ ಗರ್ವಪೂರ್ಣ ಆತ್ಮಪ್ರಶಂಸೆ (ಉದ್ಯೋಗ 105/3–17). ವಿಷ್ಣುವಿನಿಂದ ಈತನ ಗರ್ವಾಪಹಾರ (ಉದ್ಯೋಗ 105/22). ಭಗವಂ ತನೊಡನೆ ಈತನ ಕ್ಷಮಾಯಾಚನೆ (ಉದ್ಯೋಗ 105/27–29). ಗುರುದಕ್ಷಿಣೆಗಾಗಿ ಯೋಚನಾ ಮಗ್ನನಾದ ಗಾಲವನಿಗೆ ಈತನಿಂದ ಧೈರ್ಯದ ಆಶ್ವಾಸನೆ (ಉದ್ಯೋಗ 107/17–19). ಗಾಲವ ನಿಗೆ ಪೂರ್ವ ದಿಕ್ಕಿನ ವರ್ಣನೆಮಾಡಿದುದು (ಉದ್ಯೋಗ 108). ಗಾಲವನಿಗೆ ದಕ್ಷಿಣದಿಕ್ಕಿನ ವರ್ಣನೆ ಮಾಡಿದುದು (ಉದ್ಯೋಗ 109). ಗಾಲವನಿಗೆ ಪಶ್ಚಿಮದಿಕ್ಕಿನ ವರ್ಣನೆ ಮಾಡಿದುದು (ಉದ್ಯೋಗ 110). ಗಾಲವನಿಗೆ ಉತ್ತರದಿಕ್ಕಿನ ವರ್ಣನೆ ಮಾಡಿದುದು (ಉದ್ಯೋಗ 111). ಋಷಭ ಪರ್ವತದಲ್ಲಿ ರೆಕ್ಕೆ ಬಿದ್ದುಹೋಗುವುದು ಮತ್ತು ಶಾಂಡಿಲಿಯೊಡನೆ ಕ್ಷಮಾಯಾಚನೆ ಮಾಡಿ ದುದು (ಉದ್ಯೋಗ 113/8–11). ಶಾಂಡಿಲಿಯ ವರದಾನದಿಂದ ರೆಕ್ಕೆಗಳ ಪ್ರಾಪ್ತಿ (ಉದ್ಯೋಗ 113/17). ಧನಕ್ಕಾಗಿ ಗಾಲವನನ್ನು ರಾಜರ್ಷಿ ಯಯಾತಿಯ ಬಳಿಗೆ ಕರಕೊಂಡುಹೋಗುವ ಯೋಚನೆ (ಉದ್ಯೋಗ 114/1–8). ಯಯಾತಿ ಯೊಡನೆ ತನ್ನ ಆಗಮನದ ಉದ್ದೇಶ ತಿಳಿಸಿದುದು (ಉದ್ಯೋಗ 114/11–20). ಯಯಾತಿಯ ಮಗಳು ದೊರಕಿದ ಮೇಲೆ ಗಾಲವನನ್ನು ಬೀಳ್ಕೊ

ಟ್ಟದ್ದು (ಉದ್ಯೋಗ 115/16). ಗುರುದಕ್ಷಿಣೆಗಾಗಿ ಆರುನೂರು ಕುದುರೆಗಳನ್ನು ಮತ್ತು ಮಾಧವಿಯನ್ನು ಗುರುಗಳ ಸೇವೆಗಾಗಿ ಸಮರ್ಪಿಸಲು ಗಾಲವನಿಗೆ ಸಮ್ಮತಿ (ಉದ್ಯೋಗ 119/9–10). ಇವನಿಂದ ಸ್ಕಂದನಿಗೆ ತನ್ನ ಪುತ್ರ ಮಯೂರನ ದಾನ (ಶಲ್ಯ 46/51). ನಾರಾಯಣನ ಆಜ್ಞೆಯಂತೆ ರಾಜಾ ಉಪರಿಚರ ವಸುವನ್ನು ಪಾತಾಳದಿಂದೆತ್ತಿ, ಆಕಾಶಚಾರಿಯಾಗಿ ಮಾಡಿದುದು (ಶಾಂತಿ 337/37). ಋಷಿಗಳ ಸಭೆಯಲ್ಲಿ ನಾರಾಯಣನ ಮಹಿಮೆಯ ವಿಷಯವಾಗಿ, ತನ್ನ ಅನುಭವ ತಿಳಿಸಿದುದು (ಅನು 13). ಕಾರ್ತೀಕೇಯನಿಗೆ ಈತ ಮಯೂರನನ್ನು ಕಾಣಿಕೆಯಾಗಿ ಅರ್ಪಿಸಿದುದು (ಅನು 86/21). ಮಹಾಭಾರತದಲ್ಲಿ ಬಂದಿರುವ ಗರುಡನ ಹೆಸರುಗಳು– ಅರುಣಾನುಜ, ಭುಜಗಾರಿ, ಗರುತ್ಮಂತ, ಕಾಶ್ಯಪೇಯ, ಖಗರಾಟ್, ಪಕ್ಷಿರಾಟ್, ಪಕ್ಷಿರಾಜ, ಪತಗಪತಿ, ಪತಗೇಶ್ವರ, ಸುಪರ್ಣ, ತಾರ್ಕ್ಷ್ಯ, ವೈನತೇಯ, ವಿನತಾನಂದ, ವರ್ಧನ, ವಿನತಾಸೂನು, ವಿನತಾಸುತ, ವಿನತಾತ್ಮಜ – ಇತ್ಯಾದಿ.

**ಗರುಡವ್ಯೂಹ** – ಸೇನೆಯಿಂದಲೇ ದುರ್ಗವನ್ನು ಕಟ್ಟುವ ಒಂದು ಕ್ರಮ. ಅದರ ಪ್ರಕಾರ ಸೈನಿಕರನ್ನು ಗರುಡನ ಆಕೃತಿಯಲ್ಲಿ ನಿಲ್ಲಿಸಲಾಗುತ್ತದೆ (ಭೀಷ್ಮ 56/2).

**ಗರ್ಗ** – ಒಬ್ಬ ಪ್ರಾಚೀನ ಮಹರ್ಷಿ. ಈತ ದ್ರೋಣಾಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸಲು ಹೇಳಿದುದು (ದ್ರೋಣ 190/35–40). ಪೃಥು ಮಹಾರಾಜನ ಆಸ್ಥಾನದಲ್ಲಿ ಜ್ಯೋತಿಷಿಯಾದುದು (ಶಾಂತಿ 59/111). ಮಹಾತ್ಮಾ ಗರ್ಗನು ವಿಶ್ವಾವಸುವೆಂಬ ಗಂಧರ್ವ ರಾಜನಿಗೆ ವೇದ್ಯತತ್ತ್ವದ ನಿತ್ಯತೆಯನ್ನು ಉಪದೇಶ ಮಾಡಿದುದು (ಶಾಂತಿ 318/59–63). ಶಿವಮಹಿಮೆಯ ಕುರಿತು ತನ್ನ ಅನುಭವವನ್ನು ಯುಧಿಷ್ಠಿರನಿಗೆ ಹೇಳಿದುದು (ಅನು 18/38–39).

**ಗರ್ಗಸ್ರೋತ** – ಸರಸ್ವತಿ ತಟದಲ್ಲಿರುವ ಒಂದು ತೀರ್ಥ. ಅಲ್ಲಿ ಪವಿತ್ರ ಅಂತಃಕರಣನಾದ ವೃದ್ಧ ಗರ್ಗನು ಕಾಲದ ಜ್ಞಾನ, ಕಾಲದ ಗತಿ, ಗ್ರಹ ನಕ್ಷತ್ರಗಳ ಪರಿವರ್ತನ ಇತ್ಯಾದಿ ವಿಷಯಗಳ ಜ್ಞಾನ ಮಾಡಿಕೊಂಡನು (ಶಲ್ಯ 37/14–18).

**ಗವಯ** – ಒಬ್ಬ ಮಹಾಪರಾಕ್ರಮ ವಾನರರಾಜ. ಅವನು ಒಂದು ನೂರುಕೋಟಿ ಸೇನಾಸಮೇತನಾಗಿ ಶ್ರೀರಾಮನ ಬಳಿಗೆ ಬಂದಿದ್ದನು (ವನ 283/3).

**ಗವಲ್ಗಣ** – ಮುನಿಗಳಿಗೆ ಸಮಾನನಾದ ಜ್ಞಾನಿಯೂ, ಧರ್ಮಾತ್ಮನೂ ಆಗಿದ್ದನು. ಈತ ಸಂಜಯನ ತಂದೆ (ಆದಿ 63/97).

**ಗವಾಕ್ಷ** – (1) ಉದ್ದಬಾಲದ ಜಾತಿಯ ಒಬ್ಬ ಮಂಗ. ಅವನು ನೋಡಲು ಭಯಂಕರನಾಗಿದ್ದನು. ತನ್ನ ಜೊತೆಯಲ್ಲಿ ಅರುವತ್ತು ಸಾವಿರ ಕೋಟಿ ವಾನರಸೇನೆ ತೆಗೆದುಕೊಂಡು ಶ್ರೀರಾಮನ ಮುಂದೆ ಉಪಸ್ಥಿತನಾಗಿದ್ದನು (ವನ 283/4).

(2) ಸುಬಲಪುತ್ರ ಶಕುನಿಯ ತಮ್ಮ. ಅವನು ತನ್ನ ಇತರ ಸಹೋದರರೊಂದಿಗೆ ಪಾಂಡವ ಸೈನ್ಯದ ದುರ್ಜಯವಾದ ವ್ಯೂಹವನ್ನು ಪ್ರವೇಶಿಸಿದ್ದನು (ಭೀಷ್ಮ 90/27–30). ಇರಾವಂತನಿಂದ ಈತನ ವಧೆ (ಭೀಷ್ಮ 90/45–46).

**ಗವಾಯನ** – ಒಂದು ಯಜ್ಞದ ಹೆಸರು (ವನ 84/102).

**ಗವಿಷ್ಠ** – ಹತ್ತುಮಂದಿ ಪ್ರಖ್ಯಾತ ದಾನವರಲ್ಲಿ ಒಬ್ಬ (ಆದಿ 65/30). ಈತನೇ ರಾಜ ದ್ರುಮಸೇನನಾಗಿ ಪ್ರಕಟಗೊಂಡಿದ್ದನು (ಆದಿ 67/34–35).

**ಗವ್ಯೂತಿ** – ನಾಲ್ಕು ಮೊಳಗಳಷ್ಟು ಪ್ರಮಾಣ ಒಂದು ಧನುಸ್ಸು. ಒಂದು ಸಾವಿರ ಧನುಸ್ಸುಗಳಷ್ಟು ದೂರ ಒಂದು ಕ್ರೋಶ. ಎರಡು ಕ್ರೋಶಗಳು ಒಂದು ಗವ್ಯೂತಿ ಅಥವಾ ಗಾವುದಕ್ಕೆ ಸರಿ (ದ್ರೋಣ ಅಧ್ಯಾಯ 87).

**ಗಾಙ್ಗೇಯ** – (1) ಗಂಗಾಪುತ್ರನಾದ ದೇವವ್ರತ ಭೀಷ್ಮ (ಆದಿ 99/47). ಗಂಗಾನಂದನ ದೇವವ್ರತ ಭೀಷ್ಮ (ಅನು 26/2).

(2) ಗಂಗಾಪುತ್ರಭಗವಾನ್ ಸ್ಕಂಧ (ಶಲ್ಯ 44/16).

(3) ಗಂಗೆಯ ನೀರು (ವನ 3/35).

**ಗಾಣ್ಡೀವ** – ವರುಣನ ಒಂದು ದಿವ್ಯ ಧನುಸ್ಸು. ಅದು ಅರ್ಜುನನಿಗೆ ಅಗ್ನಿದೇವನ ಮೂಲಕ, ಎರಡು ಅಕ್ಷಯ ಬತ್ತಳಿಕೆಗಳೊಂದಿಗೆ ಪ್ರಾಪ್ತವಾಗಿತ್ತು (ಆದಿ 61/47–48; ಉದ್ಯೋಗ 158/6). ಅಗ್ನಿಯು ವರುಣನೊಡನೆ ಅರ್ಜುನನಿಗಾಗಿ ಗಾಂಡೀವ ಧನುಸ್ಸು, ಎರಡು ಅಕ್ಷಯ ಬತ್ತಳಿಕೆ ಮತ್ತು ಕಪಿಧ್ವಜವುಳ್ಳ ರಥವನ್ನು ಬೇಡಿ

ದುದು, ವರುಣನು ಅವನ ಪ್ರಾರ್ಥನೆ ಸ್ವೀಕರಿಸಿದುದು ಮತ್ತು ಆ ಎಲ್ಲಾ ವಸ್ತುಗಳನ್ನು ಪ್ರಸ್ತುತಪಡಿಸಿದುದು (ಆದಿ 224/3–17). ಅರ್ಜುನನಿಂದ ಗಾಂಡೀವಗ್ರಹಣ (ಆದಿ 224/20). ಗಾಂಡೀವ ಶತ್ರುಸೇನೆಗೆ ಮೃತ್ಯು ಸ್ವರೂಪವಾಗಿದೆ. ಇದು ಎಲ್ಲಾ ಆಯುಧಗಳಿಗಿಂತ ವಿಶಾಲವಾದುದು. ಇದು ಒಂದು ಲಕ್ಷ ಬಿಲ್ಲುಗಳಿಗೆ ಸಮಾನವಾಗಿದೆ. ದೇವ, ದಾನವ, ಗಂಧರ್ವರು ಅನೇಕ ವರ್ಷಗಳವರೆಗೆ ಇದನ್ನು ಪೂಜಿಸಿದ್ದರು. ಇದರ ಮೇಲೆ ಎಂದೂ ಯಾವುದೇ ಗಾಯದ ಗುರುತು ಆಗಿಲ್ಲ. ಪೂರ್ವಕಾಲದಲ್ಲಿ ಬ್ರಹ್ಮನು ಇದನ್ನು ಒಂದು ಸಾವಿರ ವರ್ಷಗಳವರೆಗೆ ಧಾರಣೆ ಮಾಡಿದ್ದನು. ಅನಂತರ ಪ್ರಜಾಪತಿಯು ಐನೂರ ಮೂರು ವರ್ಷಗಳ ವರೆಗೆ ಇದನ್ನು ತನ್ನ ಬಳಿ ಇರಿಸಿಕೊಂಡಿದ್ದನು. ಅನಂತರ ಇಂದ್ರನು ಎಂಭತ್ತೈದು ವರ್ಷ, ಸೋಮನು ಐನೂರು ವರ್ಷ ಮತ್ತು ರಾಜಾ ವರುಣನು ನೂರು ವರ್ಷಗಳ ವರೆಗೆ ಇದನ್ನು ಧರಿಸಿದ್ದರು (ವಿರಾಟ 43/106). ವಜ್ರದ ಕಟ್ಟನ್ನು 'ಗಾಂಡೀವ'ವೆಂದು ಹೇಳಲಾಗಿದೆ. ಈ ಧನುಸ್ಸು ಇದರಿಂದಲೇ ಸಿದ್ಧವಾಗಿದೆ. ಆದುದರಿಂದ 'ಗಾಂಡೀವ'ವೆಂದು ಹೇಳಲ್ಪಡುತ್ತದೆ. ಜಗತ್ತಿನ ಸಂಹಾರ ಮಾಡಲು ಇದರ ನಿರ್ಮಾಣವಾಗಿದೆ. ದೇವತೆಗಳು ಸದಾಕಾಲ ಇದರ ರಕ್ಷಣೆ ಮಾಡುತ್ತಾರೆ (ಉದ್ಯೋಗ 98/19). 'ಗಾಂಡೀವವನ್ನು ಬೇರೆಯವರಿಗೆ ಕೊಡು' ಎಂದು ಹೇಳುವವನ ಶಿರಸ್ಸನ್ನು ಕತ್ತರಿಸುವುದು. ಅರ್ಜುನನ ಉಪಾಂಶುವ್ರತವಾಗಿತ್ತು (ಕರ್ಣ 69/9–10). ಅಗ್ನಿಯು ಹೇಳಿದ ಬಳಿಕ, ವರುಣನಿಗೆ ಹಿಂದೆ ಕೊಡಲು, ಅರ್ಜುನನು ಗಾಂಡೀವ ಮತ್ತು ಅಕ್ಷಯ ಬತ್ತಳಿಕೆಗಳನ್ನು ನೀರಿನಲ್ಲಿ ಹಾಕಿದ್ದನು (ಮಹಾಪ್ರಸ್ಥಾ 1/36–42).

**ಗಾಧಿ** – ವಿಶ್ವಾಮಿತ್ರನ ತಂದೆ. ಗಾಧಿಯ ತಂದೆಯ ಹೆಸರು ಕುಶನಾಭ (ಆದಿ 74/69). ಇವನು ಕುಶಿಕ(ಅಥವಾ ಕುಶನಾಭ)ನ ಪುತ್ರ. ಕಾನ್ಯಕುಬ್ಜ ದೇಶದ ಅಧಿಪತಿಯಾಗಿದ್ದನು (ಆದಿ 174/3). ಋಚೀಕ ಮುನಿಗೆ ಈತನಿಂದ ತನ್ನ ಪುತ್ರಿ ಸತ್ಯವತಿಯ ದಾನ (ವನ 115/28; ಶಾಂತಿ 49/7). ತೀರ್ಥಯಾತ್ರೆಯ ಸಂದರ್ಭದಲ್ಲಿ ಈತ ಋಚೀಕನ ಆಶ್ರಮಕ್ಕೆ ಹೋದುದು (ಶಾಂತಿ 49/13). ಕುಶೀಕ ಪುತ್ರ ಗಾಧಿ ದೀರ್ಘಕಾಲದ ವರೆಗೆ ಸಂತಾನಹೀನನಾಗಿದ್ದನು. ಆದುದರಿಂದ ಸಂತಾನದ ಇಚ್ಛೆಯಿಂದ ಪೂರ್ಣ ಕಾರ್ಯಗಳನ್ನು ಮಾಡಲು ಈತ ಕಾಡಿನಲ್ಲಿರತೊಡಗಿದನು. ಅಲ್ಲಿ ಸೋಮಯಾಗ ಮಾಡಿದುದರಿಂದ ಅವನಿಗೆ ಒಬ್ಬ ಮಗಳು ಹುಟ್ಟಿದಳು. ಅವಳ ಹೆಸರು ಸತ್ಯವತಿ. ಈಕೆಯನ್ನು ಋಚೀಕನು ಕೇಳಿದನು. ಶುಲ್ಕ ತೆಗೆದುಕೊಂಡು ಕನ್ಯೆಯನ್ನು ಕೊಡುವ ಇಚ್ಛೆಯನ್ನು ಗಾಧಿ ಪ್ರಕಟಿಸಿದನು. ಚಂದ್ರನಂತೆ ಕಾಂತಿಯುಕ್ತ ಮತ್ತು ಒಂದು ಕಿವಿ ಶ್ಯಾಮ ವರ್ಣವುಳ್ಳ ಒಂದು ಸಾವಿರ ಕುದುರೆಗಳನ್ನು ತೆಗೆದುಕೊಂಡು, ಇವನು ತನ್ನ ಕನ್ಯೆಯನ್ನು ಆ ಬ್ರಹ್ಮರ್ಷಿಗೆ ಕೊಟ್ಟನು (ಅನು 4/6–20). ಈತ ತನ್ನ ಮಗ ವಿಶ್ವಾಮಿತ್ರನನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ, ಸ್ವರ್ಗಕ್ಕೆ ಹೋದನು (ಶಲ್ಯ 40/16).

**ಗಾನ್ಧರ್ವ** – ಒಂದು ವಿಧದ ವಿವಾಹ (ಆದಿ 73/9). ವರನೂ ವಧುವೂ ಒಬ್ಬರನ್ನೊಬ್ಬರು ಸ್ವೇಚ್ಛೆಯಿಂದ ಸ್ವೀಕರಿಸಿದರೆ ಗಾಂಧರ್ವ ವಿವಾಹವಾಗುತ್ತದೆ. ಈ ವಿವಾಹ ಕ್ಷತ್ರಿಯರಿಗೆ ಧರ್ಮಾನುಕೂಲವಾದುದು (ಆದಿ 73/13).

**ಗಾನ್ಧಾರ** – ಒಂದು ಪ್ರಾಚೀನ ದೇಶ. ಈಗಿನ ಅಭಿಪ್ರಾಯದಂತೆ ಇದರಲ್ಲಿ ಸಿಂಧು ಮತ್ತು ಕುನರ ನದಿಯಿಂದ ತೊಡಗಿ ಕಾಬುಲ್ ನದಿಯ ತನಕದ ಪ್ರದೇಶ ಮತ್ತು ಪೇಶಾವರ ಮತ್ತು ಮುಲ್ತಾನ ಸೇರಿಕೊಂಡಿವೆ. ಗಾಂಧಾರಿಯ ತಂದೆ ಸುಬಲ ಇಲ್ಲಿ ರಾಜನಾಗಿದ್ದನು (ಆದಿ 109/11).

**ಗಾನ್ಧಾರೀ** –(1) ಪೂರುವಂಶದ ಮಹಾರಾಜ ಅಜಮೀಢನ ದ್ವಿತೀಯ ಪತ್ನಿ (ಆದಿ 95/37).

(2). ಗಾಂಧಾರ ರಾಜ ಸುಬಲನ ಮಗಳು (ಆದಿ 109/9). ಈಕೆ ಮತಿಯ ಅಂಶದಿಂದ ಹುಟ್ಟಿದ್ದಳು (ಆದಿ 67/60). ಈಕೆ ಭಗವಾನ್ ಶಂಕರನ ಆರಾಧನೆಮಾಡಿ ತನಗೆ ನೂರು ಪುತ್ರರಾಗುವಂತೆ ವರಪಡೆದಿದ್ದಳು (ಆದಿ 109/10). ತಂದೆಯಿಂದ ಧೃತರಾಷ್ಟ್ರನಿಗೆ ಈಕೆಯನ್ನು ಕೊಡಲು ವಾಗ್ದಾನ (ಆದಿ 109/12). ಗಾಂಧಾರಿ ಪತಿವ್ರತಾ ಪರಾಯಣೆಯಾಗಿದ್ದಳು. ತನ್ನ ಭಾವೀ ಪತಿ ಅಂಧನೆಂದೂ, ತಂದೆ ತಾಯಿಯರು ತನ್ನ ವಿವಾಹವನ್ನು ಅವನೊಂದಿಗೆ ಮಾಡಲು ಇಚ್ಛಿಸಿದ್ದಾ

ರೆಂದೂ ತಿಳಿದು, ರೇಶ್ಮೆಬಟ್ಟೆಯ ಅನೇಕ ಮಡಿಕೆ ಮಾಡಿ, ಅದರಿಂದಲೇ ತನ್ನ ಕಣ್ಣುಗಳನ್ನು ಮುಚ್ಚಿ ಕಟ್ಟಿಕೊಂಡಳು. ನಾನು ಸದಾ ಪತಿಗೆ ಅನುಕೂಲೆ ಯಾಗಿರುವೆನೆಂದು ಆಕೆ ನಿರ್ಧಾರ ಮಾಡಿ ಕೊಂಡಿದ್ದಳು. ಅವನಲ್ಲಿ ದೋಷ ಕಾಣುವುದಿಲ್ಲ (ಆದಿ 109/13–15). ಶಕುನಿಯ ಮೂಲಕ ಈಕೆಯ ವಿವಾಹ ಸಂಸ್ಕಾರದ ಪೂರ್ವೈಕೆ (ಆದಿ 109/15–17). ಸುಂದರಿಯಾದ ಗಾಂಧಾರಿ ತನ್ನ ಉತ್ತಮ ಸ್ವಭಾವ, ಸದಾಚಾರ ಮತ್ತು ಸದ್ವ್ಯವ ಹಾರಗಳಿಂದ ಸಮಸ್ತ ಕೌರವರನ್ನು ಪ್ರಸನ್ನ ಗೊಳಿಸಿದಳು. ತನ್ನ ಸುಂದರ ವರ್ತನೆಯಿಂದ ಎಲ್ಲಾ ಹಿರಿಯರ ಸಂತೋಷವನ್ನು ಪ್ರಾಪ್ತಿಸಿ ಕೊಂಡು, ಉತ್ತಮ ವ್ರತವನ್ನು ಪಾಲಿಸುವ ಪತಿ ಪರಾಯಣೆ ಗಾಂಧಾರಿ ಎಂದೂ ಇತರ ಪುರುಷರ ಹೆಸರನ್ನೂ ಹೇಳಿದ್ದಿಲ್ಲ (ಆದಿ 109/ 18–19). ಈಕೆಯಿಂದ ವ್ಯಾಸರ ಸತ್ಕಾರ. ಅವ ರೊಡನೆ ನೂರು ಮಂದಿ ಪುತ್ರರ ಪ್ರಾಪ್ತಿಗಾಗಿ ವರ ಬೇಡಿದುದು (ಆದಿ 114/8). ಗಾಂಧಾರಿಯ ಗರ್ಭಧಾರಣೆ. ಕುಂತಿಗೆ ಪುತ್ರನಾದ ವಾರ್ತೆಕೇಳಿ ಉಂಟಾದ ಮಹತ್ತರ ದುಃಖದಿಂದ ತನ್ನ ಹೊಟ್ಟೆಯ ಮೇಲೆ ಆಘಾತ ಮತ್ತು ಈಕೆಯ ಗರ್ಭದಿಂದ ಒಂದು ಮಾಂಸಪಿಂಡದ ಪ್ರಾದು ರ್ಭಾವ (ಆದಿ 114/9–12). ವ್ಯಾಸರ ಆದೇಶ ದಂತೆ ನೂರು ತುಂಡಾದ ಆ ಮಾಂಸ ಪಿಂಡದ ರಕ್ಷಣಾವ್ಯವಸ್ಥೆಯಾದಾಗ, ಅದರಿಂದ ನೂರು ಪುತ್ರರ ಉತ್ಪತ್ತಿ (ಆದಿ 114/17–22). ಪುತ್ರಿಗಾಗಿ ಆಕೆಯ ಅಪೇಕ್ಷೆ ಮತ್ತು ವ್ಯಾಸರಿಂದ ಅದರ ಪೂರ್ವೈಕೆ (ಆದಿ 115/9–17). ಈಕೆಯಿಂದ ಧೃತರಾಷ್ಟ್ರನಿಗೆ ಎಚ್ಚರಿಕೆ (ಸಭಾ 75/2–10). ಈಕೆ ದುರ್ಯೋಧನನಿಗೆ ಬುದ್ಧಿಹೇಳಿದುದು (ಉದ್ಯೋಗ 129/10–15). ಯುದ್ಧವಾಗುವ ವಿಷಯದಲ್ಲಿ ಈಕೆ ಧೃತರಾಷ್ಟ್ರನನ್ನೇ ದೋಷಿ ಯೆಂದು ಹೇಳಿದುದು (ಉದ್ಯೋಗ 129/19– 54). ಕರ್ಣವಧೆಯ ಸುದ್ದಿ ಕೇಳಿ ಮೂರ್ಛಿತ ಳಾಗಿ ಬಿದ್ದುದು (ಕರ್ಣ 4/5; 96/55). ಶ್ರೀಕೃಷ್ಣನು ಬುದ್ಧಿ ಹೇಳಿದಾಗ ಆತನಿಗೆ ಉತ್ತರ ವನ್ನಿತ್ತದ್ದು (ಶಲ್ಯ 63/66–68). ಪಾಂಡವರಿಗೆ ಶಾಪಕೊಡಲು ಇಚ್ಛಿಸಿದುದು (ಸ್ತ್ರೀ 14/2). ವ್ಯಾಸರು ಸಮಾಧಾನಗೊಳಿಸಿದಾಗ ಅವರಿಗೆ ಉತ್ತರ ಹೇಳಿದುದು (ಸ್ತ್ರೀ 14/14–21). ಭೀಮ ಸೇನನ ಮೇಲೆ ಕೋಪಗೊಂಡು ಅವನೊಡನೆ ಅನ್ಯಾಯದ ಕಾರಣ ಕೇಳಿದುದು (ಸ್ತ್ರೀ 15/12– 14; 15/21–23). ಯುಧಿಷ್ಠಿರನಲ್ಲಿ ಸಿಟ್ಟುಗೊಂಡು ಪ್ರಶ್ನಿಸಿದುದು. ಈಕೆಯ ಸ್ವಲ್ಪವೇ ದೃಷ್ಟಿಯಿಂದ ಯುಧಿಷ್ಠಿರನ ಕಾಲುಗಳ ಉಗುರುಗಳು ಕಪ್ಪಾ ದುದು (ಸ್ತ್ರೀ 15/24–30). ಕುಂತಿ ಮತ್ತು ದ್ರೌಪದಿಗೆ ಧೈರ್ಯ ತುಂಬಿದುದು (ಸ್ತ್ರೀ 15/41– 44). ಯುದ್ಧ ಸ್ಥಳದಲ್ಲಿ ಕೊಲ್ಲಲ್ಪಟ್ಟ ಸ್ವಜನರನ್ನು ನೋಡಿ ಶ್ರೀಕೃಷ್ಣನ ಮುಂದೆ ವಿಲಪಿಸಿದುದು (ಸ್ತ್ರೀ 16/18–60). ಮೃತನಾದ ದುರ್ಯೋಧನ ನನ್ನು ಕಂಡು, ಶ್ರೀಕೃಷ್ಣನ ಸಮ್ಮುಖದಲ್ಲಿ ವಿಲಪಿಸಿ ದುದು (ಸ್ತ್ರೀ 17/5–32). ತನ್ನ ಇತರ ಪುತ್ರರು, ದುಃಶಾಸನನನ್ನು ನೋಡಿ ಕೃಷ್ಣನ ಮುಂದೆ ಈಕೆಯ ಕರುಣಾಪೂರ್ಣ ರೋದನ (ಸ್ತ್ರೀ 18). ವಿಕರ್ಣ, ದುರ್ಮುಖ, ಚಿತ್ರಸೇನ, ವಿವಿಂಶತಿ ಮತ್ತು ದುಸ್ಸಹರನ್ನು ನೋಡಿ, ಶ್ರೀಕೃಷ್ಣನ ಮುಂದೆ ಈಕೆಯ ವಿಲಾಪ (ಸ್ತ್ರೀ 19). ಶ್ರೀಕೃಷ್ಣನೊಡನೆ ಈಕೆಯಿಂದ ಉತ್ತರೆ ಮತ್ತು ವಿರಾಟಕುಲದ ಸ್ತ್ರೀಯರ ಶೋಕ ಮತ್ತು ವಿಲಾ ಪದ ವರ್ಣನೆ (ಸ್ತ್ರೀ 20). ಕರ್ಣನ ಶವವನ್ನು ನೋಡಿ ಅವನ ಶೌರ್ಯ ಮತ್ತು ಅವನ ಪತ್ನಿಯ ವಿಲಾಪವನ್ನು ಕೃಷ್ಣನ ಮುಂದೆ ವರ್ಣಿಸಿದುದು (ಸ್ತ್ರೀ 21). ಅವಂತಿ ನರೇಶ, ಜಯದ್ರಥ ಮತ್ತು ದುಃಶಲೆಯನ್ನು ನೋಡಿ, ಈಕೆ ಶ್ರೀಕೃಷ್ಣನ ಸಮ್ಮುಖದಲ್ಲಿ ಶೋಕಿಸಿದುದು (ಸ್ತ್ರೀ 22). ಶಲ್ಯ, ಭಗದತ್ತ, ಭೀಷ್ಮ, ದ್ರೋಣರನ್ನು ನೋಡಿ ಶ್ರೀಕೃಷ್ಣನ ಸಮ್ಮುಖದಲ್ಲಿ ಈಕೆಯ ವಿಲಾಪ (ಸ್ತ್ರೀ 23). ಭೂರಿಶ್ರವನ ಪತ್ನಿಯರ ವಿಲಾಪ ಮತ್ತು ಶಕುನಿ ಯನ್ನು ನೋಡಿ ಈಕೆಯ ಶೋಕೋದ್ಗಾರ (ಸ್ತ್ರೀ 24). ಬೇರೆ ಬೇರೆ ವೀರರು ಮೃತರಾದುದನ್ನು ನೋಡಿ ವಿಲಪಿಸಿದುದು ಮತ್ತು ಕುಪಿತಳಾಗಿ ಶ್ರೀಕೃಷ್ಣನಿಗೆ ಶಾಪವನ್ನಿತ್ತದ್ದು (ಸ್ತ್ರೀ 25/1–36; 25/43–46). ಧೃತರಾಷ್ಟ್ರನೊಂದಿಗೆ ಈಕೆಯ ವನಗಮನ (ಆಶ್ರಮ 15/8–9). ಕಾಡಿನಲ್ಲಿ ವ್ಯಾಸರ ಮುಂದೆ ನಿಂತು, ಧೃತರಾಷ್ಟ್ರ ಮತ್ತು ಕುರುಕುಲದ ಸ್ತ್ರೀಯರಾದ ದ್ರೌಪದಿ, ಸುಭದ್ರೆ, ಕುಂತಿ ಮೊದಲಾದವರಿಗೆ, ಸ್ವಜನರಿಗಾಗಿ ಆಗುವ ಶೋಕದ ವರ್ಣನೆ. ಎಲ್ಲರಿಗೂ ಮೃತ

ಸಂಬಂಧಿಗಳ ದರ್ಶನ ಮಾಡಿಸುವಂತೆ ಕೋರಿಕೆ (ಆಶ್ರಮ 29/37–49). ವ್ಯಾಸರ ಕೃಪೆಯಿಂದ ಈಕೆ ಧೃತರಾಷ್ಟ್ರ ಮತ್ತು ಕುರುಕುಲದ ಸ್ತ್ರೀಯರೊಂದಿಗೆ ಗಂಗೆಯಿಂದ ಪ್ರಕಟಗೊಂಡ ತಮ್ಮ ಪರಲೋಕವಾಸಿ ಸ್ವಜನರ ದರ್ಶನ ಮಾಡಿದುದು (ಆಶ್ರಮ 32). ಧೃತರಾಷ್ಟ್ರ ಮತ್ತು ಕುಂತಿಯ ಜೊತೆಯಲ್ಲಿ ಈಕೆ ಗಂಗಾದ್ವಾರದ ಕಾಡಿನಲ್ಲಿ ದಾವಾನಲಕ್ಕೆ ಸಿಕ್ಕಿ ದಗ್ಧಳಾದುದು (ಆಶ್ರಮ 37/31–32). ಯುಧಿಷ್ಠಿರನು ಇವಳಿಗಾಗಿ ಜಲಾಂಜಲಿ ಹಾಗೂ ನಾನಾ ಪ್ರಕಾರದ ವಸ್ತುಗಳ ದಾನಮಾಡಿದುದು ಮತ್ತು ಶ್ರಾದ್ಧಕರ್ಮ ಪೂರೈಸಿದುದು (ಆಶ್ರಮ 39/11). ಗಾಂಧಾರಿಯ ಶಾಪ ಫಲಿಸುವ ಸಂದರ್ಭ ಬಂದಿದೆ" ಹೀಗೆಂದು ಶ್ರೀಕೃಷ್ಣನ ಮನ್ನಣೆ (ಮೌಸಲ 2/21). ಧೃತ ರಾಷ್ಟ್ರನ ಸಂಗಡ ಈಕೆಗೆ ಕುಬೇರನ ದುರ್ಲಭ ಲೋಕಗಳ ಪ್ರಾಪ್ತಿ (ಸ್ವರ್ಗ 5/14). ಮಹಾ ಭಾರತದಲ್ಲಿ ಗಾಂಧಾರಿಗೆ ಬಂದಿರುವ ಹೆಸರುಗಳು – ಸೌಬಲೇಯಿ, ಗಾಂಧಾರರಾಜ ದುಹಿತಾ, ಸೌಬಲೀ, ಸುಬಲಜಾ, ಸುಬಲಪುತ್ರಿ, ಸುಬಲಾ ತ್ಮಜಾ – ಇತ್ಯಾದಿ.

(3). ಉಮಾದೇವಿಯ ಅನುಗಾಮಿನಿ ಸಹಚರಿ (ವನ 231/48).

**ಗಾಯತ್ರೀ** – ಇಪ್ಪತ್ತನಾಲ್ಕು ಅಕ್ಷರಗಳ ಒಂದು ವೈದಿಕ ಮಂತ್ರ. ಸ್ಥಾವರ ಜಂಗಮ ಹತ್ತೊಂಬತ್ತು ಪ್ರಾಣಿಗಳಿವೆ. ಇವುಗಳ ಜೊತೆ ಐದು ಮಹಾ ಭೂತಗಳನ್ನು ಲೆಕ್ಕಹಾಕಿದಾಗ ಒಟ್ಟು ಇಪ್ಪತ್ತನಾಲ್ಕು ಆಗುತ್ತವೆ. ಗಾಯತ್ರಿಯಲ್ಲೂ ಇಷ್ಟೇ ಅಕ್ಷರಗಳಿವೆ. ಆದುದರಿಂದ ಈ ಇಪತ್ತನಾಲ್ಕು ಭೂತಗಳನ್ನು ಕೂಡಾ ಲೋಕಸಮ್ಮತ ಗಾಯತ್ರಿ ಎನ್ನುತ್ತಾರೆ. ಈ ಸರ್ವಗುಣ ಸಂಪನ್ನ ಪುಣ್ಯಮಯ ಗಾಯತ್ರಿ ಯನ್ನು ಯಾವಾತನು ಯಥಾರ್ಥ ರೂಪದಿಂದ ತಿಳಿದಿರುತ್ತಾನೋ ಅವನು ಎಂದೂ ನಾಶ ಹೊಂದುವುದಿಲ್ಲ (ಭೀಷ್ಮ 4/15–16). ತ್ರಿಪುರ ವಿಜಯಕಾಲದಲ್ಲಿ, ಗಾಯತ್ರಿ ಮಹಾದೇವನ ರಥದ ಮೇಲಿನಭಾಗದ ಬಂಧನ ರಜ್ಜುವಾಗಿತ್ತು (ಕರ್ಣ 34/35). ಗಾಯತ್ರಿ ಕನ್ಯೆ ಕಾರ್ತ ವೀರ್ಯಾರ್ಜುನನಿಗೆ ಬ್ರಾಹ್ಮಣರ ಶ್ರೇಷ್ಠತೆಯ ಕುರಿತು ಎಚ್ಚರಿಕೆ ಕೊಡುತ್ತಾ ಆಕಾಶವಾಣಿಯ ಮೂಲಕ ತನ್ನ ವಿಚಾರವನ್ನು ಪ್ರಕಟಿಸಿದ್ದಳು (ಅನು 152/14–20).

**ಗಾಯತ್ರೀಸ್ಥಾನ** – ಒಂದು ತೀರ್ಥಸ್ಥಾನ. ಅಲ್ಲಿ ಮೂರು ರಾತ್ರಿ ವಾಸಿಸುವವನು ಸಾವಿರ ಗೋದಾನದ ಫಲಪಡೆಯುತ್ತಾನೆ (ವನ 85/28).

**ಗಾಯನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ಗಾರ್ಗ್ಯ** – (1) ಒಬ್ಬ ಪ್ರಾಚೀನ ಋಷಿ. ಈತ ದೇವರಾಜ ಇಂದ್ರನ ಸಭೆಯಲ್ಲಿರುತ್ತಾನೆ (ಸಭಾ 7/18). ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/55). ಈತನಿಂದ ಧರ್ಮರಹಸ್ಯದ ವರ್ಣನೆ (ಅನು 127/9–14).

(2) ಒಂದು ಭಾರತೀಯ ಜನಪದ. ಅದನ್ನು ಶ್ರೀಕೃಷ್ಣನು ಜಯಿಸಿದ್ದನು (ದ್ರೋಣ 11/15).

**ಗಾರ್ದಭಿ** – ವಿಶ್ವಾಮಿತ್ರನ ಒಬ್ಬ ಬ್ರಹ್ಮವಾದಿ ಪುತ್ರ (ಅನು 4/59).

**ಗಾರ್ಹಪತ್ಯ** –(1) ಸಪ್ತ ಪಿತೃಗಳಲ್ಲಿ ಒಬ್ಬ (ಸಭಾ 11/46).

(2). ಒಬ್ಬ ಅಗ್ನಿ (ವನ 224/35).

**ಗಾಲವ** – ಯುಧಿಷ್ಠಿರನ ಸಭೆಯಲ್ಲಿದ್ದ ಒಬ್ಬ ಋಷಿ (ಸಭಾ 4/15). ಈತ ಇಂದ್ರನ ಸಭೆ ಯಲ್ಲೂ ಆಸೀನನಾಗಿರುತ್ತಾನೆ (ಸಭಾ 7/10). ಗುರುದಕ್ಷಿಣೆ ಕೇಳುವಂತೆ ಈತ ತನ್ನ ಗುರು ವಿಶ್ವಾಮಿತ್ರನೊಡನೆ ಹಟಹಿಡಿದುದು (ಉದ್ಯೋಗ 106/25). ಗುರುದಕ್ಷಿಣೆಗಾಗಿ ಎಂಟು ನೂರು ಕುದುರೆಗಳನ್ನು ಸಂಪಾದಿಸುವ ಕಾಳಜಿ (ಉದ್ಯೋಗ 107/3–15). ಗರುಡನ ಬೆನ್ನ ಮೇಲೆ ಕುಳಿತು ಪೂರ್ವದಿಕ್ಕಿನ ಕಡೆಗೆ ಹೋಗುತ್ತಿರುವಾಗ, ಗರುಡನ ವೇಗದಿಂದ ಈತ ವ್ಯಾಕುಲಗೊಂಡದ್ದು (ಉದ್ಯೋಗ 112/5–18). ಧನಕ್ಕಾಗಿ ಗರುಡನ ಜೊತೆಯಲ್ಲಿ ಯಯಾತಿಯ ಬಳಿಗೆ ಹೋದುದು (ಉದ್ಯೋಗ 114/9). ಯಯಾತಿಯ ಮಗಳು ಮಾಧವಿಯನ್ನು ಕರಕೊಂಡು ಅಯೋಧ್ಯಾ ನರೇಶ ಹರ್ಯಶ್ವನ ಬಳಿಗೆ ಹೋದುದು (ಉದ್ಯೋಗ 115/18). ರಾಜಾ ಹರ್ಯಶ್ವನಿಂದ ಶುಲ್ಕರೂಪದಲ್ಲಿ ಇನ್ನೂರು ಕುದುರೆಗಳನ್ನು ತೆಗೆದುಕೊಂಡು, ಒಬ್ಬ ಪುತ್ರನನ್ನು ಪಡೆಯುವ ಸಲುವಾಗಿ ಮಾಧವಿ ಯನ್ನು ಅವನಿಗೆ ಒಪ್ಪಿಸಿದುದು (ಉದ್ಯೋಗ 116/15). ಪುತ್ರೋತ್ಪತ್ತಿಯಾದ ಬಳಿಕ ಪುನಃ ಮಾಧವಿಯನ್ನು ಕರಕೊಂಡು ಈತ ದಿವೋ ದಾಸನ ಬಳಿಗೆ ಹೋದುದು (ಉದ್ಯೋಗ 116/

22). ಇನ್ನೂರು ಕುದುರೆಗಳನ್ನು ಶುಲ್ಕ ರೂಪದಲ್ಲಿ ಪಡೆದು, ಪುತ್ರನನ್ನು ಪಡೆಯಲು ಮಾಧವಿಯನ್ನು ದಿವೋದಾಸನ ಕೈಗೆ ಒಪ್ಪಿಸಿದುದು (ಉದ್ಯೋಗ 117/17). ಪುತ್ರೋತ್ಪತ್ತಿಯಾದ ಬಳಿಕ ಮಾಧವಿಯನ್ನು ಕರಕೊಂಡು ಗಾಲವನು ಉಶೀನರನ ಬಳಿಗೆ ಹೋದುದು ಮತ್ತು ಮಾಧವಿಯ ಗರ್ಭದಿಂದ ಇಬ್ಬರು ಮಕ್ಕಳನ್ನು ಪಡೆಯುವಂತೆ ಪ್ರೇರಿಸುತ್ತಾ ನಾನ್ನೂರು ಕುದುರೆಗಳನ್ನೂ ಕೇಳಿದುದು (ಉದ್ಯೋಗ 118/3–8). ಗರುಡನ ಸಲಹೆಯಂತೆ ಈತ ಮಾಧವಿಯನ್ನೂ ಆರುನೂರು ಕುದುರೆಗಳನ್ನು ವಿಶ್ವಾಮಿತ್ರನಿಗೆ ಕೊಟ್ಟು ಗುರುದಕ್ಷಿಣೆಯನ್ನು ಪೂರೈಸಿದುದು (ಉದ್ಯೋಗ 118/14). ಅಲ್ಲಿ ಒಬ್ಬ ಪುತ್ರನ ಜನನವಾದ ಬಳಿಕ ಮಾಧವಿಯನ್ನು ಯಯಾತಿಗೆ ಹಿಂತಿರುಗಿಸಿ, ಈತ ಕಾಡಿಗೆ ನಡೆದುದು (ಉದ್ಯೋಗ 118/24). ಸ್ವರ್ಗದಿಂದ ಬಿದ್ದ ಯಯಾತಿಗೆ ಈತ ತನ್ನ ತಪಸ್ಸಿನ ಎಂಟನೇ ಒಂದು ಭಾಗವನ್ನು ಕೊಟ್ಟದ್ದು (ಉದ್ಯೋಗ 121/28). ನಾರದನೊಡನೆ ಶ್ರೇಯದ ಕುರಿತಾಗಿ ಪ್ರಶ್ನೆ ಮಾಡಿದುದು (ಶಾಂತಿ 287/5–11). ಶಿವಮಹಿಮೆಯ ಕುರಿತು ಯುಧಿಷ್ಠಿರನಿಗೆ ತನ್ನ ಅನುಭವ ತಿಳಿಸಿದುದು (ಅನು 18/52–58). ಅಗಸ್ತ್ಯರ ಕಮಲಗಳ ಅಪಹಾರವಾದಾಗ ಈತ ಪ್ರತಿಜ್ಞೆ ಮಾಡಿದುದು (ಅನು 94/37). ಮಹರ್ಷಿ ಗಾಲವ ವಿಶ್ವಾಮಿತ್ರರ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬನಾಗಿದ್ದ (ಅನು 4/52). ಇವನ ಪುತ್ರನ ಹೆಸರು ಶೃಂಗವಂತ. ಅವನು ಮಹರ್ಷಿಯಾಗಿದ್ದನು. ಅವನು ವೃದ್ಧಕನ್ಯೆಯನ್ನು ವಿವಾಹವಾಗಿದ್ದನು (ಶಲ್ಯ 52/14–15).

(2) ಬಾಭ್ರವ್ಯಗೋತ್ರದ ಒಬ್ಬ ಋಷಿ. ಅವನು ವೇದಗಳ ಕ್ರಮವಿಭಾಗಗಳ ಕುರಿತು ಪಾರಂಗತನಾಗಿದ್ದನು (ಶಾಂತಿ 342/104).

**ಗಿರಿಕಾ** – ಶುಕ್ತಿಮತಿ ನದಿಯ ಪುತ್ರಿ. ಈಕೆಯ ಜನ್ಮ ಕೋಲಾಹಲನೆಂಬ ಪರ್ವತನ ಮೂಲಕ ಶುಕ್ತಿಮತಿ ನದಿಯ ಗರ್ಭದಿಂದಾಗಿತ್ತು (ಆದಿ 63/37). ಈಕೆಯೇ ರಾಜಾ ಉಪರಿಚರ ವಸುವಿನ ಪತ್ನಿಯಾಗಿದ್ದಳು (ಆದಿ 63/39).

**ಗಿರಿಗಹ್ವರ** – ಈಶಾನ್ಯ ಭಾರತದ ಒಂದು ದೇಶ (ಭೀಷ್ಮ 9/42).

**ಗಿರಿಪ್ರಸ್ಥ** – ನಿಷಧ ದೇಶದ ಒಂದು ಪರ್ವತ. ಅದರ ಆಶ್ರಯದಲ್ಲಿ ಅಡಗಿ ಕುಳಿತು, ಇಂದ್ರನು ತನ್ನ ಕಾರ್ಯಸಿದ್ಧಗೊಳಿಸಿದ್ದನು (ವನ 315/13).

**ಗಿರಿವ್ರಜ** – ಮಗಧ ದೇಶದ ಪ್ರಾಚೀನ ರಾಜಧಾನಿ. ಜರಾಸಂಧನು ಗಿರಿವ್ರಜದಲ್ಲಿಯೇ ಇರುತ್ತಿದ್ದನು. ಇವನ ಕಾಲದಲ್ಲಿದ್ದ ಗಿರಿವ್ರಜದ ಪ್ರಾಕೃತಿಕ ವರ್ಣನೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ಈ ರೀತಿಯಾಗಿ ಮಾಡಿದ್ದನು – 'ಇಲ್ಲಿ ಪಶುಗಳ ಆಧಿಕ್ಯವಿದೆ. ಸದಾ ನೀರಿನ ಪೂರ್ಣ ಸೌಲಭ್ಯವಿದೆ. ರೋಗವ್ಯಾಧಿಗಳ ಪ್ರಕೋಪವಿರುವುದಿಲ್ಲ. ಸುಂದರವಾದ ಸೌಧಗಳಿಂದ ತುಂಬಿತುಳುಕುತ್ತಿರುವ ಈ ನಗರ ತುಂಬಾ ಮನೋಹರವಾಗಿದೆ. ಇಲ್ಲಿ ವಿಹಾರೋಪಯೋಗಿಯಾದ ವಿಪುಲ, ವರಾಹ, ವೃಷಭ (ಋಷಭ), ಋಷಿಗಿರಿ (ಮಾತಂಗ). ಮತ್ತು ಚೈತ್ಯಕ ಎಂಬ ಪರ್ವತಗಳಿವೆ. ದೊಡ್ಡ ದೊಡ್ಡ ಶಿಖರಗಳಿರುವ ಈ ಐದು ಸುಂದರ ಪರ್ವತಗಳು ಶೀತಲ ನೆರಳನ್ನು ಕೊಡುವ ವೃಕ್ಷಗಳಿಂದ ಸುಶೋಭಿತವಾಗಿವೆ. ಇವು ಗಿರಿವ್ರಜ ನಗರವನ್ನು ರಕ್ಷಿಸುತ್ತವೆಯೋ ಎಂಬಂತೆ ಒಟ್ಟಾಗಿ ಒಂದು ಇನ್ನೊಂದನ್ನು ಸ್ಪರ್ಶಿಸುತ್ತಾ ಇವೆ. ಇಲ್ಲಿ ಅರ್ಬುದ ಮತ್ತು ಶಕ್ರವಾಸಿ ಎಂಬ ಹೆಸರಿನ ಎರಡು ನಾಗಗಳಿವೆ. ಸ್ವಸ್ತಿಕ ಮತ್ತು ಮಣಿ ಎಂಬ ಹೆಸರಿನ ನಾಗಗಳಿಗೂ ಇಲ್ಲಿ ಉತ್ತಮ ಭವನಗಳಿವೆ. ಇಲ್ಲಿ ಸಮಯಕ್ಕೆ ಸರಿಯಾಗಿ ಮೋಡಗಳು ಮಳೆ ಸುರಿಸುತ್ತವೆ (ಸಭಾ 21/1–10). ಇಲ್ಲಿ ಜರಾಸಂಧನು ತಾನು ಗೆದ್ದ ರಾಜರನ್ನು ಬಂಧಿಸಿ ಇಟ್ಟಿದ್ದನು (ಸಭಾ 14/63). ಗಿರಿವ್ರಜದಿಂದ ಮಥುರೆಯ ಕಡೆಗೆ ಜರಾಸಂಧನು ತನ್ನ ಗದೆಯನ್ನು ಎಸೆದಿದ್ದನು (ಸಭಾ 19/23–24). ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನ ಗಿರಿವ್ರಜಕ್ಕೆ ಹೋದರು. ಭೀಮನು ಅಲ್ಲಿ ಜರಾಸಂಧನನ್ನು ಕೊಂದನು ಮತ್ತು ಶ್ರೀಕೃಷ್ಣನು ಸೆರೆಯಲ್ಲಿದ್ದ ರಾಜರನ್ನು ಬಿಡಿಸಿದನು. ಭಯಭೀತನಾಗಿ ಶರಣು ಹೊಕ್ಕ ಜರಾಸಂಧಪುತ್ರನನ್ನು ರಾಜಗದ್ದುಗೆಗೆ ಏರಿಸಿದನು (ಸಭಾ 24). ಪೂರ್ವ ದಿಗ್ವಿಜಯದ ಸಂದರ್ಭದಲ್ಲಿ ಭೀಮಸೇನನು ಕಪ್ಪಕೊಡುವ ಶರತ್ತಿನ ಮೇಲೆ ಜರಾಸಂಧಪುತ್ರನನ್ನು ರಾಜ್ಯದಲ್ಲಿ ಪ್ರತಿಷ್ಠೆಗೊಳಿಸಿದನು (ಸಭಾ 30/17–18). ಗಿರಿವ್ರಜದಲ್ಲಿಯೇ ರಾಜರ್ಷಿ

ದುಂಧುಮಾರನು ದೇವತೆಗಳ ವರ ವನ್ನು ತ್ಯಜಿಸಿ ನಿದ್ರಿಸಿದ್ದನು (ಅನು 6/39).

**ಗೀತಪ್ರಿಯಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/7).

**ಗೀತಾ** – ಕುರುಕ್ಷೇತ್ರದಲ್ಲಿ ಯುದ್ಧದ ಸಂದರ್ಭದಲ್ಲಿ, ಸ್ವಜನರ ವಧೆಯ ಅಂಜಿಕೆಯಿಂದ ಮೋಹ ಗ್ರಸ್ತನಾದ ಅರ್ಜುನನ ಶೋಕ, ಚಿಂತೆ ಮತ್ತು ದೈನ್ಯದ ನಿವಾರಣೆ ಮಾಡಿ, ಅವನನ್ನು ಕರ್ತವ್ಯ ಕರ್ಮದಲ್ಲಿ ನಿಷ್ಕಾಮಭಾವದಿಂದ ತೊಡಗಿರು ವಂತೆ ಮಾಡಲು, ಭಗವಂತನಾದ ಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವೇ 'ಗೀತೆ' (ಅಥವಾ ಭಗವದ್ಗೀತೆ) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ವೇದವ್ಯಾಸರು ಗೀತೆಯ ಈ ಸಂದರ್ಭವನ್ನು ಭೀಷ್ಮ ಪರ್ವದ ಶ್ರೀಮದ್ಭಗವ ದ್ಗೀತಾ ಪರ್ವದಲ್ಲಿ ಇಪ್ಪತ್ತೈದನೇ ಅಧ್ಯಾಯ ದಿಂದ ನಲುವತ್ತೆರಡನೇ ಅಧ್ಯಾಯದ ತನಕ ಲಿಪಿ ಬದ್ಧಗೊಳಿಸಿದ್ದಾರೆ. ಇದರಲ್ಲಿ ಒಟ್ಟು ಏಳು ನೂರು ಶ್ಲೋಕಗಳಿವೆ. ಶ್ರೀಮದ್ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದ ವಿಷಯಗಳ ಸಂಕ್ಷಿಪ್ತ ದಿಗ್ದರ್ಶನ ಈ ರೀತಿಯಿದೆ: – ಎರಡೂ ಸೇನೆಗಳ ಪ್ರಧಾನ ವೀರರ ಮತ್ತು ಶಂಖಧ್ವನಿಯ ವರ್ಣನೆ ಮತ್ತು ಸ್ವಜನವಧೆಯ ಪಾಪದಿಂದ ಭಯ ಭೀತನಾದ ಅರ್ಜುನನ ವಿಷಾದ (ಭೀಷ್ಮ 25). ಅರ್ಜುನನನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸುತ್ತಾ, ಭಗವಂತನು ನಿತ್ಯಾನಿತ್ಯ ವಸ್ತುಗಳ ವಿವೇಚನಾ ಪೂರ್ವಕವಾಗಿ ಸಾಂಖ್ಯಯೋಗ, ಕರ್ಮಯೋಗ, ಸ್ಥಿತಪ್ರಜ್ಞನ ಸ್ಥಿತಿ ಮತ್ತು ಮಹಿಮೆಯ ಪ್ರತಿ ಪಾದನೆ ಮಾಡಿದುದು (ಭೀಷ್ಮ 26). ಜ್ಞಾನ ಯೋಗ ಮತ್ತು ಕರ್ಮಯೋಗ ಇತ್ಯಾದಿ ಸಮಸ್ತ ಸಾಧನಗಳ ಅನುಸಾರವಾಗಿ ಕರ್ತವ್ಯ ಕರ್ಮ ಮಾಡುವ ಆವಶ್ಯಕತೆಯ ಪ್ರತಿಪಾದನೆ ಮತ್ತು ಸ್ವಧರ್ಮ ಪಾಲನೆಯ ಮಹಿಮೆ ಮತ್ತು ಕಾಮ ನಿರೋಧದ ಉಪಾಯದ ವರ್ಣನೆ (ಭೀಷ್ಮ 27). ಸಗುಣ ಭಗವಂತನ ಪ್ರಭಾವ, ನಿಷ್ಕಾಮ ಕರ್ಮಯೋಗ, ಯೋಗಿಗಳಾದ ಮಹಾತ್ಮರ ಆಚರಣೆ ಮತ್ತು ಅವರ ಮಹಿಮೆಯ ವರ್ಣನೆ ಮಾಡುತ್ತಾ, ವಿವಿಧ ಯಜ್ಞಗಳ ಮತ್ತು ಜ್ಞಾನದ ಮಹಿಮೆಯ ವರ್ಣನೆ (ಭೀಷ್ಮ 28). ಸಾಂಖ್ಯ ಯೋಗ, ನಿಷ್ಕಾಮ ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಸಹಿತ ಧ್ಯಾನಯೋಗದ ವರ್ಣನೆ (ಭೀಷ್ಮ 29). ನಿಷ್ಕಾಮಕರ್ಮಯೋಗದ ಪ್ರತಿ ಪಾದನೆ ಮಾಡುತ್ತಾ ಆತ್ಮೋದ್ಧಾರಕ್ಕೆ ಪ್ರೇರಣೆ, ಮನೋನಿಗ್ರಹಪೂರ್ವಕ ಧ್ಯಾನಯೋಗ, ಯೋಗ ಭ್ರಷ್ಟನ ಗತಿಯ ವರ್ಣನೆ (ಭೀಷ್ಮ 30). ಜ್ಞಾನ– ವಿಜ್ಞಾನ, ಭಗವಂತನ ವ್ಯಾಪಕತೆ, ಇತರ ದೇವತೆಗಳ ಪೂಜೆ, ಭಗವಂತನನ್ನು ಪ್ರಭಾವ ಸಹಿತ ತಿಳಿಯದಿರುವವನ ನಿಂದೆ ಮತ್ತು ತಿಳಿದಿ ರುವವರ ಮಹಿಮಾವರ್ಣನೆ (ಭೀಷ್ಮ 31). ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಾದಿಗಳ ಕುರಿತು ಅರ್ಜುನನ ಏಳು ಪ್ರಶ್ನೆಗಳು, ಅವುಗಳ ಉತ್ತರ, ಭಕ್ತಿಯೋಗ, ಶುಕ್ಲ ಮತ್ತು ಕೃಷ್ಣಮಾರ್ಗಗಳ ಪ್ರತಿಪಾದನೆ (ಭೀಷ್ಮ 32). ಜ್ಞಾನ ವಿಜ್ಞಾನಗಳ, ಜಗತ್ತಿನ ಉತ್ಪತ್ತಿಯ, ಆಸುರೀ ಮತ್ತು ದೈವೀ ಸಂಪದ್ಭರಿತರ, ಪ್ರಭಾವ ಸಹಿತ ಭಗವಂತನ ಸ್ವರೂಪದ, ಸಕಾಮನಿಷ್ಕಾಮ ಉಪಾಸನೆಯ ಮತ್ತು ಭಗವದ್ಭಕ್ತಿಯ ಮಹಿಮೆಯ ವರ್ಣನೆ (ಭೀಷ್ಮ 33). ಭಗವಂತನ ವಿಭೂತಿ ಮತ್ತು ಯೋಗಶಕ್ತಿಯ, ಪ್ರಭಾವ ಸಮೇತ ಭಕ್ತಿಯೋಗದ ವರ್ಣನೆ, ಅರ್ಜುನನು ಕೇಳಿದಾಗ, ಭಗವಂತ ನಿಂದ ತನ್ನ ವಿಭೂತಿಗಳ ಮತ್ತು ಯೋಗಶಕ್ತಿಯ ಮರುವರ್ಣನೆ (ಭೀಷ್ಮ 34). ವಿಶ್ವರೂಪ ದರ್ಶನ ಮಾಡಿಸಲು ಅರ್ಜುನನ ಪ್ರಾರ್ಥನೆ. ಭಗವಂತ ಹಾಗೂ ಸಂಜಯನಿಂದ ವಿಶ್ವರೂಪದ ವರ್ಣನೆ. ವಿಶ್ವರೂಪವನ್ನು ಅರ್ಜುನನು ನೋಡಿ ದುದು, ಭಯಭೀತನಾದ ಅರ್ಜುನನಿಂದ ಭಗ ವಂತನ ಸ್ತುತಿ–ಪ್ರಾರ್ಥನೆ. ಭಗವಂತನಿಂದ ವಿಶ್ವ ರೂಪ ಮತ್ತು ಚತುರ್ಭುಜ ರೂಪದರ್ಶನದ ಮಹಿಮೆ ಮತ್ತು ಕೇವಲ ಅನನ್ಯ ಭಕ್ತಿಯಿಂದಲೇ ಭಗವತ್ಪ್ರಾಪ್ತಿಯ ವರ್ಣನೆ (ಭೀಷ್ಮ 35). ಸಾಕಾರ ಮತ್ತು ನಿರಾಕಾರ ಉಪಾಸಕರ ಶ್ರೇಷ್ಠತ್ವದ ನಿರ್ಣಯ ಮತ್ತು ಭಗವತ್ಪ್ರಾಪ್ತಿಯ ಉಪಾಯ ಹಾಗೂ ಭಗವತ್ಪ್ರಾಪ್ತ ಪುರುಷರ ಲಕ್ಷಣಗಳ ವರ್ಣನೆ (ಭೀಷ್ಮ 36). ಜ್ಞಾನಸಹಿತ ಕ್ಷೇತ್ರ– ಕ್ಷೇತ್ರಜ್ಞ ಮತ್ತು ಪ್ರಕೃತಿ–ಪುರುಷನ ವರ್ಣನೆ (ಭೀಷ್ಮ 37). ಜ್ಞಾನದ ಮಹಿಮೆ ಮತ್ತು ಪ್ರಕೃತಿ– ಪುರುಷನಿಂದ ಜಗತ್ತಿನ ಉತ್ಪತ್ತಿಯ, ಸತ್ವ, ರಜ, ತಮ – ಈ ಮೂರು ಗುಣಗಳ, ಭಗವತ್ಪ್ರಾಪ್ತಿಯ ಉಪಾಯದ ಮತ್ತು ಗುಣಾತೀತ ಪುರುಷನ

ಲಕ್ಷಣಗಳ, ವರ್ಣನೆ (ಭೀಷ್ಮ 38). ಸಂಸಾರ ವಿಷವೃಕ್ಷದ, ಭಗವತ್ಪ್ರಾಪ್ತಿಯ ಉಪಾಯದ, ಜೀವಾತ್ಮನ ಪ್ರಭಾವಸಹಿತ ಪರಮೇಶ್ವರನ ಸ್ವರೂಪದ, ಕ್ಷರ-ಅಕ್ಷರ ಮತ್ತು ಪುರುಷೋತ್ತಮನ ತತ್ತ್ವದ ವರ್ಣನೆ (ಭೀಷ್ಮ 39). ಫಲಸಹಿತ ದೈವೀ ಮತ್ತು ಆಸುರೀ ಸಂಪತ್ತಿನ ವರ್ಣನೆ, ಶಾಸ್ತ್ರ ವಿರುದ್ಧ, ಆಚರಣೆಗಳನ್ನು ತ್ಯಾಗಮಾಡಲು ಮತ್ತು ಶಾಸ್ತ್ರಾನುಕೂಲ ಆಚರಣೆಗಳನ್ನು ಮಾಡಲು ಪ್ರೇರಣೆ (ಭೀಷ್ಮ 40). ಶ್ರದ್ಧೆಯ ಮತ್ತು ಶಾಸ್ತ್ರ ವಿರುದ್ಧ ಘೋರ ತಪಸ್ಸುಮಾಡುವವರ ವರ್ಣನೆ. ಆಹಾರ, ಯಜ್ಞ, ತಪ ಮತ್ತು ದಾನದ ಬೇರೆ ಬೇರೆ ಭೇದಗಳು ಮತ್ತು ಓಂ, ತತ್, ಸತ್‌ಗಳ ಪ್ರಯೋಗದ ವ್ಯಾಖ್ಯಾನ (ಭೀಷ್ಮ 41). ತ್ಯಾಗದ, ಸಾಂಖ್ಯಸಿದ್ಧಾಂತದ, ಫಲಸಹಿತ ವರ್ಣಧರ್ಮದ, ಉಪಾಸನೆಯಸಹಿತ ಜ್ಞಾನನಿಷ್ಠೆಯ, ಭಕ್ತಿಸಹಿತ ನಿಷ್ಕಾಮ ಕರ್ಮಯೋಗದ ಮತ್ತು ಗೀತಾ ಮಾಹಾತ್ಮೆಯ ವರ್ಣನೆ (ಭೀಷ್ಮ 42).

**ಗುಡಾಕೇಶ** – ಅರ್ಜುನನ ಒಂದು ಹೆಸರು (ಆದಿ 138/8). (ನಿದ್ರೆಯನ್ನು ಜಯಿಸಿದ ಕಾರಣ ಅರ್ಜುನನ ಹೆಸರು ಗುಡಾಕೇಶ). (ನೋಡಿರಿ- ಅರ್ಜುನ).

**ಗುಣಕೇಶಿ** – ಇಂದ್ರನ ಪ್ರಿಯಸಾರಥಿಯಾದ ಮಾತಲಿಯ ಮಗಳು (ಉದ್ಯೋಗ 97/13). ನಾಗಕುಮಾರ ಸುಮುಖನೊಂದಿಗೆ ಈಕೆಯ ವಿವಾಹವಾಯಿತು (ಉದ್ಯೋಗ 104/29).

**ಗುಣಮುಖ್ಯಾ** – ಸ್ವರ್ಗದ ಒಬ್ಬ ಅಪ್ಸರೆ. ಆಕೆ ಇತರ ಅಪ್ಸರೆಯರೊಂದಿಗೆ ಅರ್ಜುನನ ಜನ್ಮ ಕಾಲದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/61).

**ಗುಣಾವತಿ** – ಒಂದು ನದಿ. ಅದರ ಉತ್ತರ ಪ್ರಾಂತ್ಯದಲ್ಲಿ ಪರಶುರಾಮನು ಕ್ಷತ್ರಿಯರ ಸಂಹಾರ ಮಾಡಿದ್ದನು (ದ್ರೋಣ 70/8).

**ಗುಣಾವರಾ** – ಸ್ವರ್ಗದ ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮಕಾಲದಲ್ಲಿ ಇತರ ಅಪ್ಸರೆಯ ರೊಂದಿಗೆ ನೃತ್ಯಮಾಡಲು ಬಂದಿದ್ದಳು (ಆದಿ 122/61).

**ಗುಪ್ತಕ** – ಸೌವೀರ ದೇಶದ ರಾಜಕುಮಾರ. ಅವನು ಜಯದ್ರಥನ ಒಡನಾಡಿಯಾಗಿದ್ದನು. ಅರ್ಜುನನಿಂದ ಈತನ ವಧೆ (ವನ 271/20).

**ಗುರುಭಾರ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/13).

**ಗುರುಸ್ಕಂದ** – ಒಬ್ಬ ಪರ್ವತ ರಾಜ (ಆಶ್ವ 43/5).

**ಗುಲ್ಮ** – ಸೇನಾಗಣನೆಯಲ್ಲಿ ಒಂದು ಪಾರಿಭಾಷಿಕ ಶಬ್ದ. ಮೂರು ಸೇನಾಮುಖಗಳಿಗೆ ಒಂದು ಗುಲ್ಮವಾಗತ್ತದೆ (ಆದಿ 2/20).

**ಗುಹ** – ದಕ್ಷಿಣ ಭಾರತದ ಒಂದು ಮ್ಲೇಚ್ಛ ಜಾತಿಯ ಹೆಸರು (ಶಾಂತಿ 207/42).

**ಗುಹ್ಯಕ** – (1) ದೇವಯೋನಿಯ ಅಂತರ್ಗತ ವಾದ ಒಂದು ಜಾತಿ. ಈ ಜಾತಿಯ ಜನರು ದ್ರೌಪದಿಯ ಸ್ವಯಂವರ ನೋಡಲು ಬಂದಿದ್ದರು (ಆದಿ 186/7). ಇವರು ಕುಬೇರನ ಸಭೆಯನ್ನು ಹೊತ್ತು ನಿಂತಿದ್ದಾರೆ (ಸಭಾ 10/3). ಗಂಧ ಮಾದನದಲ್ಲಿ ಭೀಮನು ತನ್ನ ಗದೆಯಿಂದ ಗುಹ್ಯಕರನ್ನು ಹೊಡೆದಿದ್ದನು (ಶಲ್ಯ 11/55-57). ಮಹಾಭಾರತ ಯುದ್ಧದಲ್ಲಿ ಕೊಲ್ಲಲ್ಪಟ್ಟ ಕೆಲವರು ಯೋಧರು ಗುಹ್ಯಕ ಲೋಕವನ್ನು ಪಡೆದಿದ್ದರು (ಸ್ವರ್ಗಾ 4/23).

(2) ಒಬ್ಬ ಯಕ್ಷ. ಅವನು ಕುಬೇರನ ಸಭೆಯಲ್ಲಿ ಉಪಸ್ಥಿತನಾಗಿದ್ದು ಸೇವೆ ಮಾಡುತ್ತಾನೆ (ಸಭಾ 10/15). ಅವನು ಬ್ರಹ್ಮಸಭೆಯಲ್ಲೂ ಉಪಸ್ಥಿತ ನಾಗಿದ್ದಾನೆ (ಸಭಾ 11/49).

**ಗೃತ್ಸಮದ** – ಇಂದ್ರನ ಪ್ರಿಯಸಖ ಮತ್ತು ಬೃಹಸ್ಪತಿಗೆ ಸಮಾನನಾದ ಒಬ್ಬ ಶ್ರೇಷ್ಠ ಮುನಿ. ಶಿವಮಹಿಮೆಯ ಕುರಿತು ಈತ ಯುಧಿಷ್ಠಿರ ನೊಡನೆ ತನ್ನ ಅನುಭವ ಹೇಳಿದುದು (ಅನು 18/19-29). ಇವನು ವೀತಹವ್ಯನ ಮಗನಾಗಿ ದ್ದನು. ರೂಪದಲ್ಲಿ ಇಂದ್ರ ಸಮಾನನಾಗಿದ್ದನು. ದೈತ್ಯರು ಒಮ್ಮೆ ಇವನನ್ನೇ ಇಂದ್ರನೆಂದು ತಿಳಿದು ಹಿಡಿದುಕೊಂಡಿದ್ದರು. ಇವನ ಪುತ್ರನ ಹೆಸರು ಸುಚೇತ (ಅನು 30/58-59). ಋಗ್ವೇದದಲ್ಲಿ ಮಹಾತ್ಮಾ ಗೃತ್ಸಮದನ ಶ್ರೇಷ್ಠ ಶ್ರುತಿ ಗೌರವ ಪಡೆದಿದೆ. ಬ್ರಾಹ್ಮಣರು ಇವನನ್ನು ಅತಿ ಹೆಚ್ಚು ಗೌರವಿಸುತ್ತಾರೆ. ಆ ಬ್ರಹ್ಮರ್ಷಿ ಗೃತ್ಸಮದ ದೊಡ್ಡ ತೇಜಸ್ವಿ ಮತ್ತು ಬ್ರಹ್ಮಚಾರಿ ಆಗಿದ್ದನು (ಅನು 30/60-61).

**ಗೃಧ್ರಕೂಟ** – ಒಂದು ಪರ್ವತ. ಅಲ್ಲಿ ಒಂದು ಜಾತಿಯ ಕಪಿಗಳು ಮಗಧರಾಜ ಜಯದ್ರಥನನ್ನು

ಬದುಕಿಸಿದ್ದವು (ಶಾಂತಿ 49/82).

**ಗೃಧ್ರಪತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಗೃಧ್ರವಟ** – ಮಹಾದೇವನ ಸ್ಥಾನ. ಅಲ್ಲಿ ಭಸ್ಮ ಸ್ನಾನವು ಕರ್ತವ್ಯವಾಗಿದೆ. ಅಲ್ಲಿ ಯಾತ್ರೆ ಮಾಡುವುದರಿಂದ ಬ್ರಾಹ್ಮಣನಿಗೆ ವ್ರತಪಾಲನೆಯ ಪುಣ್ಯ ಫಲ ಪ್ರಾಪ್ತವಾಗುತ್ತದೆ. ಮತ್ತು ಇತರ ವರ್ಣದವರ ಎಲ್ಲಾ ಪಾಪಗಳು ನಷ್ಟವಾಗುತ್ತವೆ (ವನ 84/91–92).

**ಗೃಹದೇವಿ** – ಜರಾ ರಾಕ್ಷಸಿ. ಆಕೆಯನ್ನು ಬ್ರಹ್ಮನು 'ಗೃಹದೇವಿ' ಎಂಬ ಹೆಸರಿನಿಂದ ಸೃಷ್ಟಿಸಿದ್ದನು (ಸಭಾ 18/1–2). ದಾನವರ ವಿನಾಶಕ್ಕಾಗಿ ಆಕೆಯ ಸೃಷ್ಟಿಯಾಗಿದೆ. ಈಕೆ ದಿವ್ಯರೂಪಧಾರಣ ಮಾಡಬಲ್ಲವಳಾಗಿದ್ದಾಳೆ. ಯಾರು ತನ್ನ ಮನೆಯ ಗೋಡೆಯ ಮೇಲೆ, ಅನೇಕ ಪುತ್ರರಿಂದ ಸುತ್ತುವರಿಯಲ್ಪಟ್ಟ ಯುವತಿಯ ರೂಪದಲ್ಲಿ ಈಕೆಯ ಚಿತ್ರ ಬರೆಯುತ್ತಾರೋ, ಆಕೆಯ ಮನೆಯಲ್ಲಿ ಸದಾ ವೃದ್ಧಿಯುಂಟಾಗುತ್ತದೆ (ಸಭಾ 18/3–4).

**ಗೇರು** – ಪರ್ವತದಲ್ಲಿರುವ ಒಂದು ಧಾತು (ವನ 18/95).

**ಗೋ** (ಗೌ). – ಪುಲಸ್ತ್ಯ ಮಹರ್ಷಿಯ ಪತ್ನಿಯ ಹೆಸರು 'ಗೋ' ಅಥವಾ 'ಗೌ' ಎಂದಾಗಿತ್ತು. ಈಕೆಯ ಗರ್ಭದಿಂದ ವೈಶ್ರವಣನೆಂಬ ಪುತ್ರನು ಜನಿಸಿದನು. ಆತ ತಂದೆಯನ್ನು ಬಿಟ್ಟು ಪಿತಾಮಹನಾದ ಬ್ರಹ್ಮನ ಸೇವೆ ಮಾಡುತ್ತಿದ್ದನು (ವನ 274/12).

**ಗೋಕರ್ಣ** – (1) ಒಂದು ಪ್ರಾಚೀನ ತೀರ್ಥ. ಅಲ್ಲಿ ಪೂರ್ವಕಾಲದಲ್ಲಿ ಭಗವಾನ್ ಶೇಷನು ತಪಸ್ಸು ಮಾಡಿದ್ದನು ಮತ್ತು ಏಕಾಂತವಾಸ ಮಾಡಿದ್ದನು (ಆದಿ 36/3). ಇದು ಭಗವಂತನಾದ ಶಿವನ ಸ್ಥಾನ. ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನನು ಇಲ್ಲಿಗೆ ಬಂದಿದ್ದನು (ಆದಿ 213/34). ಇದು ಸಮುದ್ರ ಮಧ್ಯದಲ್ಲಿರುವ ತ್ರಿಭುವನ ವಿಖ್ಯಾತವಾದ. ಎಲ್ಲಾ ಲೋಕವಂದಿತ ತೀರ್ಥವಾಗಿದೆ. ಇಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು, ತಪೋಧನ ಮಹರ್ಷಿಗಳು ಮತ್ತು ಭೂತ–ಯಕ್ಷಾದಿಗಳು ಶಂಕರನ ಪೂಜೆ ಮಾಡುತ್ತಾರೆ. ಇಲ್ಲಿ ಶಿವನ ಪೂಜೆಮಾಡಿ ಮೂರು ರಾತ್ರಿ ಉಪವಾಸ ಮಾಡುವವನು ಅಶ್ವಮೇಧ ಯಜ್ಞ ಫಲವನ್ನು ಪಡೆಯುತ್ತಾನೆ; ಮತ್ತು ಗಣಪತಿ ಪದವನ್ನು ಪಡೆಯುತ್ತಾನೆ (ವನ 85/24–27). ಗೋಕರ್ಣ ತೀರ್ಥ ಮೂರು ಲೋಕಗಳಲ್ಲೂ ವಿಖ್ಯಾತವಾಗಿದೆ. ಅದು ಪವಿತ್ರವೂ, ಕಲ್ಯಾಣಮಯವೂ, ಶುಭಪ್ರದವೂ ಆಗಿದೆ. ಅಶುದ್ಧ ಅಂತಃಕರಣವುಳ್ಳವರಿಗೆ ಈ ತೀರ್ಥವು ಅತ್ಯಂತ ದುರ್ಲಭ (ವನ 88/15–16).

(2) ಇದು ಒಂದು ತಪೋವನವಾಗಿದೆ (ಭೀಷ್ಮ 6/51).

**ಗೋಕರ್ಣಾ** – ಕರ್ಣನ ಸರ್ಪಮುಖ ಬಾಣದಲ್ಲಿ ಪ್ರವೇಶಮಾಡಿದ ಅಶ್ವಸೇನ ಸರ್ಪನ ತಾಯಿ (ಕರ್ಣ 90/42).

**ಗೋಕರ್ಣೀ** – ಸ್ಕಂದನ ಅನುಚರಿಯಾದ ಮಾತೃಕೆ (ಶಲ್ಯ 46/25).

**ಗೋಕುಲ** – ತುಂಬಾ ಗೋವುಗಳು ವಾಸಿಸುವ ಸ್ಥಳ ಮತ್ತು ನಂದನ ಗೋಕುಲ. ಅಲ್ಲಿ ವಾಸಿಸುತ್ತಿರುವ ಗೋಪಾಲ ಸೈನಿಕರನ್ನು ಸವ್ಯಸಾಚಿ ಅರ್ಜುನನು ಕೊಂದಿದ್ದನು (ಸಭಾ 38; ಕರ್ಣ 5/38).

**ಗೋತೀರ್ಥ** – ಒಂದು ತೀರ್ಥ. ಪಾಂಡವರು ತೀರ್ಥಯಾತ್ರೆ ಮಾಡುತ್ತಾ ಅಲ್ಲಿಗೆ ಹೋಗಿದ್ದರು (ವನ 95/3).

**ಗೋದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಗೋದಾವರೀ** – ಒಂದು ನದಿ. ಈಕೆ ವರುಣ ಸಭೆಯಲ್ಲಿ ಉಪಸ್ಥಿತಳು (ಸಭಾ 9/20). ಇದು ದಕ್ಷಿಣಭಾರತದ ನಾಸಿಕ ಜಿಲ್ಲೆಯಲ್ಲಿರುವ ತ್ರ್ಯಂಬಕ ಜ್ಯೋತಿರ್ಲಿಂಗದ ಸಮೀಪ ಬ್ರಹ್ಮಗಿರಿಯಿಂದ ಹುಟ್ಟುತ್ತದೆ ಮತ್ತು ಸಮುದ್ರವನ್ನು ಸೇರುತ್ತದೆ. ಇದರಲ್ಲಿ ಅಪಾರ ಜಲ ತುಂಬಿದೆ. ಅನೇಕ ತಪಸ್ವಿಗಳು ಇದರ ಸೇವೆ ಮಾಡುತ್ತಾರೆ. ಇದು ಎಲ್ಲರಿಗೂ ಕಲ್ಯಾಣಕಾರಕವಾಗಿದೆ (ವನ 88/2). ಸಿದ್ಧಪುರುಷರಿಂದ ಸೇವಿಸಲ್ಪಡುವ ಗೋದಾವರಿಯ ದಡದಲ್ಲಿ ಹೋಗಿ ಸ್ನಾನ ಮಾಡುವುದರಿಂದ ಗೋಮೇಧ ಯಜ್ಞದ ಫಲ ಸಿಗುತ್ತದೆ. ಮತ್ತು ವಾಸುಕಿಯ ಲೋಕಪ್ರಾಪ್ತವಾಗುತ್ತದೆ (ವನ 85/33; 88/2). ಯುಧಿಷ್ಠಿರನು ತೀರ್ಥಯಾತ್ರೆ ಮಾಡುತ್ತಾ ಇಲ್ಲಿಗೂ ಬಂದಿದ್ದನು. ಇದು ಸಮುದ್ರಗಾಮಿನಿ ನದಿಯಾಗಿದೆ (ವನ 118/3). ಇದು ಅಗ್ನಿಯ ಉತ್ಪತ್ತಿ ಸ್ಥಾನವಾಗಿದೆ (ವನ

222/24). ದಶರಥ ಪುತ್ರ ಶ್ರೀರಾಮನು (ಪಂಚವಟಿಯಲ್ಲಿ) ಗೋದಾವರಿ ತಟದಲ್ಲಿ ಸ್ವಲ್ಪಕಾಲ ವಾಸಮಾಡಿದ್ದನು (ವನ 277/41). ಭಾರತ ವರ್ಷದ ಪ್ರಧಾನ ನದಿಗಳಲ್ಲಿ ಗೋದಾವರಿ ಗಣಿಸಲ್ಪಡುತ್ತದೆ (ಭೀಷ್ಮ 9/14). ಜನಸ್ಥಾನದಲ್ಲಿ ಗೋದಾವರಿ ಜಲದಲ್ಲಿ ಸ್ನಾನಮಾಡಿ ಉಪವಾಸ ಮಾಡುವ ಪುರುಷನು ರಾಜಲಕ್ಷ್ಮಿಯಿಂದ ಸೇವಿತನಾಗುತ್ತಾನೆ (ಅನು 25/29).

**ಗೋಧಾ** – (ಗೋಧ) (1) ಈಶಾನ್ಯ ಭಾರತದ ಒಂದು ದೇಶ (ಭೀಷ್ಮ 9/42).

(2) ಧನುಸ್ಸಿನ ಹೆದೆಯ ಏಟು ತಗುಲದಿರಲು ತೋಳಿಗೆ ಕಟ್ಟುವ ಚರ್ಮದ ಪಟ್ಟಿ (ಉದ್ಯೋಗ ಅಧ್ಯಾಯ 179).

**ಗೋನಂದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 43/65).

**ಗೋಪತಿ** – (1) ಕಾಲಕೇತುವಿನ ಒಡನಾಡಿಯಾದ ಒಬ್ಬ ರಾಕ್ಷಸ. ಅವನು ಮಹೇಂದ್ರ ಶಿಖರದಲ್ಲಿ, ಇರಾವತಿಯ ದಡದಲ್ಲಿ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು. ಅಕ್ಷ ಪ್ರಪತನದೊಳಗಿರುವ ನೇಮಿಹಂಸಪಥ ಎಂಬಲ್ಲಿ ಕೊಲ್ಲಲ್ಪಟ್ಟನು (ಸಭಾ 38/29).

(2) ಒಬ್ಬ ದೇವಗಂಧರ್ವ. ಅವನು ಕಶ್ಯಪಪತ್ನಿ ಮುನಿ ಎಂಬವಳಲ್ಲಿ ಜನ್ಮಪಡೆದನು (ವನ 65/42). ಈತ ಅರ್ಜುನನ ಜನ್ಮ ಮಹೋತ್ಸವಕ್ಕೆ ಬಂದಿದ್ದನು (ಆದಿ 122/55).

(3) ಶಿಬಿಯ ಒಬ್ಬ ಮಗ. ಪರಶುರಾಮನ ಕ್ಷತ್ರಿಯ ಸಂಹಾರದ ಅನಂತರ, ಕಾಡಿನಲ್ಲಿ ಗೋವುಗಳು ಈತನನ್ನು ರಕ್ಷಿಸಿದ್ದವು. ಕಶ್ಯಪನಿಗೆ ಪೃಥ್ವಿಯು ಈತನ ಪರಿಚಯ ಕೊಟ್ಟಳು (ಶಾಂತಿ 49/87–89).

(4) ಶಿವನ ಒಂದು ಹೆಸರು (ಅನು 17/115).

(5) ವಿಷ್ಣುವಿನ ಒಂದು ಹೆಸರು (ಅನು 149/66).

**ಗೋಪರಾಷ್ಟ್ರ** – ಈಶಾನ್ಯ ಭಾರತದ ಒಂದು ದೇಶ (ಭೀಷ್ಮ 9/44).

**ಗೋಪಾಯನ** – ಗೋಪರ ಸೇನೆಯ ಹೆಸರು (ಭೀಷ್ಮ 71/13).

**ಗೋಪಾಲಕಕ್ಷ** – ಪೂರ್ವದ ಒಂದು ದೇಶ. ಅದನ್ನು ದಿಗ್ವಿಜಯ ಸಮಯದಲ್ಲಿ ಭೀಮನು ಗೆದ್ದಿದ್ದನು (ಸಭಾ 30/13; ಭೀಷ್ಮ 9/56).

**ಗೋಪಾಲೀ** – (1) ಒಬ್ಬ ಅಪ್ಸರೆ. ಈಕೆ ಅರ್ಜುನನ ಸಮ್ಮಾನಾರ್ಥವಾಗಿ ಇಂದ್ರಸಭೆಯಲ್ಲಿ ನೃತ್ಯಮಾಡಿದ್ದಳು (ವನ 43/30).

(2) ಸ್ಕಂದನ ಅನುಚರಿಯಾದ ಮಾತೃಕೆ (ಶಲ್ಯ 46/4).

**ಗೋಪ್ರತಾರ** – ಸರಯೂನದಿಯ ಉತ್ತಮ ತೀರ್ಥ. ಅಲ್ಲಿ ತನ್ನ ಸೇವಕರು, ಸೇನೆ ಮತ್ತು ವಾಹನಗಳ ಸಹಿತ ಶ್ರೀರಾಮನು ಪರಮಧಾಮಕ್ಕೆ ತೆರಳಿದನು (ವನ 84/70–73).

**ಗೋಭವನ** – ಕುರುಕ್ಷೇತ್ರದ ಅಂಚಿನಲ್ಲಿರುವ ಒಂದು ಪವಿತ್ರ ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಸಾವಿರ ಗೋದಾನದ ಫಲ ಪ್ರಾಪ್ತವಾಗುತ್ತದೆ (ವನ 83/50).

**ಗೋಮತಿ** – ಒಂದು ಪ್ರಸಿದ್ಧನದಿ. ಗಂಗೆಯ ಏಳು ಧಾರೆಗಳಲ್ಲಿ ಒಂದು. ಇದರ ನೀರನ್ನು ಕುಡಿಯುವ ಮನುಷ್ಯರ ಪಾಪ ತಕ್ಷಣ ನಷ್ಟವಾಗುತ್ತದೆ (ಆದಿ 169/20–21). ಈಕೆ ವರುಣಸಭೆಯಲ್ಲಿ ಉಪಸ್ಥಿತಳಾಗಿರುತ್ತಾಳೆ (ಸಭಾ 9/23). ಯುಧಿಷ್ಠಿರನು ತೀರ್ಥಯಾತ್ರೆಯ ಪ್ರಸಂಗದಲ್ಲಿ ಇಲ್ಲಿಗೆ ಬಂದಿದ್ದನು (ವನ 95/2). ಈಕೆ ವಿಶ್ವಭುಕ್ ಎಂಬ ಅಗ್ನಿಯ ಪತ್ನಿ (ವನ 219/9). ಜಾರೂಥಿಯಲ್ಲಿ ಗೋಮತಿಯ ತಟದ ಮೇಲೆ ದಶರಥಪುತ್ರ ಶ್ರೀರಾಮನು ಹತ್ತು ಅಶ್ವಮೇಧಯಜ್ಞ ಮಾಡಿದ್ದನು (ವನ 251/70). ಇದು ಭಾರತವರ್ಷದ ಪ್ರಸಿದ್ಧ ನದಿಗಳಲ್ಲಿ ಒಂದಾಗಿದೆ (ಭೀಷ್ಮ 9/18). ದಿವೋದಾಸನ ಪಟ್ಟಣದ ಒಂದು ಬದಿ ಗಂಗೆಯ ಉತ್ತರ ತಟದ ಮೇಲಿತ್ತು. ಮತ್ತೊಂದು ಬದಿ ಗೋಮತಿಯ ದಕ್ಷಿಣ ತಟದ ವರೆಗೆ ಹರಡಿತ್ತು (ಅನು 30/18).

**ಗೋಮತೀಮಂತ್ರ** – ಒಂದು ಮಂತ್ರ. ಅದು ಗೋವುಗಳ ಮಧ್ಯದಲ್ಲಿ ನಿಂತು, ಮನಸ್ಸಿನಲ್ಲಿಯೇ ಜಪಿಸಲ್ಪಡುತ್ತದೆ. ಹೀಗೆ ಮಾಡುವ ಪುರುಷ ಶುದ್ಧನೂ, ನಿರ್ಮಲನೂ (ಪಾಪರಹಿತ) ಆಗುತ್ತಾನೆ. ಮೂರು ರಾತ್ರಿ ಉಪವಾಸ ಮಾಡಿ ಗೋಮತೀಮಂತ್ರ ಜಪಿಸುವವನಿಗೆ ಗೋವುಗಳಿಂದ ವರದಾನ ಪ್ರಾಪ್ತವಾಗುತ್ತದೆ. ಈ ಮಂತ್ರ ಜಪದಿಂದ ಪುತ್ರಾರ್ಥಿಗೆ ಪುತ್ರ, ಧನಾರ್ಥಿಗೆ ಧನ ಮತ್ತು ಪತಿಯನ್ನು ಪಡೆಯುವ ಇಚ್ಛೆಯುಳ್ಳ

ವಳಿಗೆ ತನ್ನ ಮನಕ್ಕೊಪ್ಪುವ ಪತಿಯ ಪ್ರಾಪ್ತಿಯಾಗುತ್ತದೆ (ಅನು 81/42–45).

**ಗೋಮಂತ** – (1) ದ್ವಾರಕೆಯ ಸಮೀಪದ ಒಂದು ಶ್ರೇಷ್ಠ ಪರ್ವತ (ಗೋಮಂತ, ಗೋಮಾನ್ ಅಥವಾ ರೈವತಕ). ಅಲ್ಲಿ ಬಲರಾಮನು ಜರಾಸಂಧನನ್ನು ಯುದ್ಧದಲ್ಲಿ ಕೆಡವಿ, ಜೀವಂತ ಬಿಟ್ಟಿದ್ದನು. ಯಾಕೆಂದರೆ ಅವನ ಮೃತ್ಯು ಭೀಮನ ಕೈಯಿಂದ ಆಗಬೇಕಾದುದು (ಸಭಾ 24/4).

(2) ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/43).

(3) ಕುಶದ್ವೀಪದ ಒಂದು ಪರ್ವತ (ಭೀಷ್ಮ 12/8).

**ಗೋಮುಖ** – (1) ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ರಾಜ (ಆದಿ 67/63–66).

(2) ಇಂದ್ರ ಸಾರಥಿ ಮಾತಲಿಯ ಮಗ (ಉದ್ಯೋಗ 100/8).

**ಗೋರಥ** – ಮಗಧದ ರಾಜಧಾನಿ ಗಿರಿವ್ರಜದ ಸಮೀಪವುಳ್ಳ ಒಂದು ಪರ್ವತ (ಸಭಾ 20/30).

**ಗೋಲೋಕ** – ದಿವ್ಯವೂ, ಸಚ್ಚಿದಾನಂದಮಯವೂ ಆದ ಒಂದು ಲೋಕ. ಅದು ಎಲ್ಲಾ ಲೋಕ ಪಾಲಕರ ಲೋಕಕ್ಕಿಂತ ಎತ್ತರದಲ್ಲಿದೆ. ಅಲ್ಲಿ ಪ್ರಧಾನವಾಗಿ ದಿವ್ಯ ಗೋವುಗಳ ನಿವಾಸವಿದೆ. ಎಲ್ಲ ಲೋಕಗಳಿಗಿಂತ ಎತ್ತರದಲ್ಲಿ ಇದು ಏಕಿದೆ? ಬ್ರಹ್ಮನಿಂದ ಇದರ ಕಾರಣದ ಪ್ರತಿಪಾದನೆ (ಅನು 83). ಗೋಲೋಕವು ಭಗವಂತ ನಾರಾಯಣನ ಮೇಲಿನ ತುಟಿ ಮತ್ತು ಬ್ರಹ್ಮಲೋಕವು ಕೆಳಗಿನ ತುಟಿಯಾಗಿದೆ (ಶಾಂತಿ 347/52).

**ಗೋವರ್ಧನ** – (1) ವ್ರಜಮಂಡಲದ ಸುಪ್ರಸಿದ್ಧ ಪರ್ವತ. ಅದು ಶ್ರೀಕೃಷ್ಣನ ಸ್ವರೂಪವೆಂದು ಮನ್ನಿಸಲ್ಪಟ್ಟಿದೆ. ಇದನ್ನು ಗಿರಿರಾಜನೆನ್ನುತ್ತಾರೆ. ತನ್ನ ಪೂಜೆಮಾಡದ ವ್ರಜವಾಸಿಗಳನ್ನು ನಾಶ ಮಾಡಲು, ಇಂದ್ರನು ವ್ರಜಭೂಮಿಯ ಮೇಲೆ ಘೋರತರ ಮಳೆಯನ್ನು ಸುರಿಸತೊಡಗಿದನು. ಆಗ ಶ್ರೀಕೃಷ್ಣನು, ಬಾಲ್ಯಾವಸ್ಥೆಯಲ್ಲಿಯೇ ಗೋವುಗಳ ರಕ್ಷಣೆಗಾಗಿ, ಏಳು ದಿನಗಳ ತನಕ ಗೋವರ್ಧನ ಪರ್ವತವನ್ನು ತನ್ನ ಕೈಯಿಂದ ಎತ್ತಿಹಿಡಿದಿದ್ದನು (ಸಭಾ 38; 41/9; ಉದ್ಯೋಗ 130/46).

(2) ವಾಹೀಕ ದೇಶದ ರಾಜಭವನದ ದ್ವಾರದಲ್ಲಿರುವ ಒಂದು ವಟವೃಕ್ಷ. ಅದು ಗೋವರ್ಧನವೆಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು (ಕರ್ಣ 44/8).

**ಗೋವಾಸನ** – (1) ಶಿಬಿದೇಶದ ರಾಜ. ಅವನ ಪುತ್ರಿ ದೇವಿಕಾ ಸ್ವಯಂವರದಲ್ಲಿ ಯುಧಿಷ್ಠಿರನನ್ನು ತನ್ನ ಪತಿಯಾಗಿ ಆರಿಸಿಕೊಂಡಿದ್ದಳು (ಆದಿ 99/76). ಈತ ಒಂದು ಸಾವಿರ ಯೋಧರನ್ನು ಕೂಡಿಕೊಂಡು, ಕಾಶೀರಾಜ ಅಭಿಭೂ ಎಂಬವನ ಪರಾಕ್ರಮಿಯಾದ ಪುತ್ರನನ್ನು ಇದಿರಿಸಿದ್ದನು (ದ್ರೋಣ 95/38; 96/11).

(2) ಒಂದು ದೇಶ. ಆದೇಶದ ನಿವಾಸಿಗಳು ಯುಧಿಷ್ಠಿರನಿಗೆ ಮೂವತ್ತು ಸಾವಿರ ಕೋಟಿ ಸಂಪತ್ತನ್ನು ಕಾಣಿಕೆಕೊಡಲು ಬಂದಿದ್ದರು (ಸಭಾ 51/5).

**ಗೋವಿಕರ್ತಾ** – ಮಹಾಬಲಿಷ್ಠ ಎತ್ತುಗಳ ಮೂಗುದಾರ ಹಾಕುವವ ಅಥವಾ ವಶಪಡಿಸಿಕೊಳ್ಳುವವ (ವಿರಾಟ 2/9).

**ಗೋವಿತತ** – ಅಶ್ವಮೇಧ ಯಜ್ಞದ ಒಂದು ಭೇದ. ಇದೇ ಯಜ್ಞವನ್ನು ಕಣ್ವನು ತನ್ನ ದೌಹಿತ್ರನಾದ ಭರತನಿಂದ ಮಾಡಿಸಿದ್ದನು (ಆದಿ 74/130).

**ಗೋವಿಂದ** – ಭಗವಂತನಾದ ಶ್ರೀಕೃಷ್ಣನ ಒಂದು ಹೆಸರು. ಗಿರಿರಾಜ ಗೋವರ್ಧನವನ್ನು ಧರಿಸಿ, ಗೋವುಗಳನ್ನೂ, ವ್ರಜವಾಸಿಗಳನ್ನೂ ರಕ್ಷಣೆ ಮಾಡಿದ ಕಾರಣ, ಇಂದ್ರನು ಶ್ರೀಕೃಷ್ಣನಿಗೆ ಗೋವಿಂದನೆಂಬ ಹೆಸರನ್ನಿಟ್ಟನು. 'ಗವೇಂದ್ರ' (ಗೌವುಗಳ ಇಂದ್ರ). ಪದದಲ್ಲಿ ಇವನ ಅಭಿಷೇಕ ಮಾಡಿದನು (ಸಭಾ 38/29).

**ಗೋವಿಂದಗಿರಿ** – ಕ್ರೌಂಚದ್ವೀಪದ ಒಂದು ಪರ್ವತ (ಭೀಷ್ಮ 12/19).

**ಗೋವ್ರಜ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಗೋವ್ರತ** – ಗೋವ್ರತಧಾರಿ ಪುರುಷ. ಅವನು ಎಲ್ಲೆಲ್ಲಿಯೂ ನಿದ್ರಿಸುತ್ತಾನೆ. ಯಾವುದಾದರೂ ಹಣ್ಣು ಬೇರುಗಳಿಂದ ಭೋಜನಕಾರ್ಯ ಪೂರೈಸಿಕೊಳ್ಳುತ್ತಾನೆ. ತೊಗಟೆ ಇತ್ಯಾದಿ ಯಾವುದಾದರೂ ವಸ್ತುವಿನಿಂದ ಶರೀರವನ್ನು ಮುಚ್ಚಿಕೊಳ್ಳುತ್ತಾನೆ. ಅವನೇ ಗೋವ್ರತಧಾರಿ ಎಂದು ಹೇಳಲ್ಪಡುತ್ತಾನೆ (ಉದ್ಯೋಗ 99/14).

**ಗೋಶೃಂಗ** – ದಕ್ಷಿಣದ ಒಂದು ಶ್ರೇಷ್ಠ ಪರ್ವತ.

ಸಹದೇವನು ಅದರ ಮೇಲೆ ಜಯಪಡೆದಿದ್ದನು (ಸಭಾ 31/5).

**ಗೋಸವ** – ಒಂದು ಮಹಾಯಜ್ಞ (ವನ 30/17).

**ಗೋಸ್ತನಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

**ಗೋಹರಣ ಪರ್ವ** – ವಿರಾಟ ಪರ್ವದ ಒಂದು ಅವಾಂತರಪರ್ವ (ಅಧ್ಯಾಯ 25 ರಿಂದ 69 ವರೆಗೆ).

**ಗೌತಮ** – (1) ಸಪ್ತರ್ಷಿಗಳಲ್ಲಿ ಒಬ್ಬ. ಅವನು ಇತರ ಋಷಿಗಳೊಡನೆ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/50–51). ಇವನ ಒಬ್ಬ ಮಗನ ಹೆಸರು ಶರದ್ವಂತ ಗೌತಮ ನೆಂದಾಗಿತ್ತು. ಅವನು ನೊದೆಯ ಹುಲ್ಲಿನ ಜೊತೆಯಲ್ಲಿ ಜನಿಸಿದ್ದನು (ಆದಿ 129/2). ಇವನ ಇನ್ನೊಬ್ಬ ಪುತ್ರನ ಹೆಸರು ಚಿರಕಾರಿ ಎಂದಾಗಿತ್ತು (ಶಾಂತಿ 266/4). ಈತ ಬ್ರಹ್ಮ ಸಭೆಯಲ್ಲಿ ಸೇವೆಗಾಗಿ ಉಪಸ್ಥಿತನಾಗಿದ್ದಾನೆ (ಸಭಾ 11/19). ಅತ್ರಿ ಮುನಿಯೊಂದಿಗೆ ಈತನ ಸಂವಾದ (ವನ 185/15–18). ಈತನು ದ್ಯುಮತ್ಸೇನನಿಗೆ, ಸತ್ಯವಾನನು ಬದುಕುವನೆಂದು ಧೈರ್ಯ ತುಂಬಿದುದು (ವನ 298/11–13). ಸಾವಿತ್ರಿಯೊಡನೆ ವನದ ವೃತ್ತಾಂತವನ್ನು ಕೇಳಿದುದು (ವನ 298/33–35). ದ್ರೋಣಾಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸುವಂತೆ ಹೇಳಿದುದು (ದ್ರೋಣ 190/36–40). ಶರಶಯ್ಯೆಯಲ್ಲಿ ಬಿದ್ದಿರುವ ಭೀಷ್ಮರನ್ನು ನೋಡಲು, ಅನ್ಯ ಮುನಿಗಳೊಂದಿಗೆ ಈತನೂ ಬಂದಿದ್ದನು (ಶಾಂತಿ 47/10). ಪಾರಿಯಾತ್ರ ಪರ್ವತದ ಮೇಲೆ ಈತ ತನ್ನ ಆಶ್ರಮದಲ್ಲಿ ಅರುವತ್ತು ಸಾವಿರ ವರ್ಷಗಳ ವರೆಗೆ ತಪಸ್ಸು ಮಾಡಿದ್ದನು. ಇವನಲ್ಲಿಗೆ ಲೋಕಪಾಲಕ ಯಮನ ಆಗಮನ. ಈತನಿಂದ ಯಮನ ಸತ್ಕಾರ (ಶಾಂತಿ 129/4–8). ಯಮನೊಂದಿಗೆ ಈತನ ಧರ್ಮ ಚರ್ಚೆ (ಶಾಂತಿ 129/9). ಈತ ಉತ್ತರ ದಿಕ್ಕಿನ ಆಶ್ರಯ ಹೊಂದಿ ವಾಸಿಸುತ್ತಾನೆ (ಶಾಂತಿ 208/33). ತನ್ನ ತಾಯಿ ಅಹಲ್ಯೆಯನ್ನು ವಧಿಸುವಂತೆ ಪುತ್ರ ಚಿರಕಾರಿಗೆ ಈತನ ಆಜ್ಞೆ (ಶಾಂತಿ 266/7). ವನದಲ್ಲಿ ಪತ್ನಿವಧೆಯ ಕುರಿತು ಚಿಂತಿಸಿದುದು (ಶಾಂತಿ 266/47–58). ಕಾಡಿನಿಂದ ಹಿಂತಿರುಗಿದಾಗ, ಪತ್ನಿ ಜೀವಂತಳಾಗಿರುವುದನ್ನು ಕಂಡು, ಈತ ಮಗನನ್ನು ಅಭಿನಂದಿಸಿದುದು (ಶಾಂತಿ 266/67–71). ಈತನ ಶಾಪದಿಂದ ಇಂದ್ರನು ಹಸುರು ಗಡ್ಡ ಮೀಸೆಗಳವನಾದುದು (ಶಾಂತಿ 342/23). ಅಂಗೀರಸ್ಸಿನೊಡನೆ ತೀರ್ಥಗಳ ಕುರಿತು ಈತನ ಪ್ರಶ್ನೆ (ಅನು 25/5–6). ರಾಜಾ ವೃಷಾದರ್ಭಿಯೊಡನೆ ಪ್ರತಿಗ್ರಹದ ದೋಷವನ್ನು ಹೇಳಿದುದು (ಅನು 93/42). ತನ್ನ ಶರೀರ ದಪ್ಪವಾಗದಿರುವ ಕಾರಣವನ್ನು ಅರುಂಧತಿಗೆ ಹೇಳಿದುದು (ಅನು 93/67). ಯಾತುಧಾನಿಯ ಮುಂದೆ ತನ್ನ ಹೆಸರಿನ ವ್ಯಾಖ್ಯಾನ ಮಾಡಿದುದು (ಅನು 93/90). ಕಮಲದಂಟಿನ ಅಪಹಾರವಾದಾಗ ಶಪಥ ಮಾಡಿದುದು (ಅನು 93/122–123). ಅಗಸ್ತ್ಯರ ಕಮಲಗಳು ಕದಿಯಲ್ಪಟ್ಟಾಗ ಶಪಥಮಾಡಿದುದು (ಅನು 94/19). ಅಹಲ್ಯೆಯ ಮೇಲೆ ಬಲಾತ್ಕಾರ ಮಾಡಿದುದರಿಂದ ಈತನಿಂದ ಇಂದ್ರನಿಗೆ ಶಾಪ (ಅನು 153/6). ತನ್ನ ಎಲ್ಲಾ ಶಿಷ್ಯರಲ್ಲಿ ಉತ್ತಂಕನ ಮೇಲೆಯೇ ಈತನ ಅಧಿಕ ಪ್ರೀತಿ ಮತ್ತು ಸ್ನೇಹ. ಉತ್ತಂಕನ ಇಂದ್ರಿಯಸಂಯಮ, ಶೌಚ, ಪುರುಷಾರ್ಥ, ಕ್ರಿಯಾಶೀಲತೆ ಮತ್ತು ಉತ್ತಮೋತ್ತಮ ಸೇವೆಯಿಂದ ಈತ ಹೆಚ್ಚು ಸಂತುಷ್ಟನಾದುದು. ಅಧಿಕ ಪ್ರೇಮದ ಕಾರಣದಿಂದಲೇ ಈತ ಉತ್ತಂಕನನ್ನು ಮನೆಗೆ ಹೋಗಲು ಆಜ್ಞೆ ಕೊಡದಿರುವುದು (ಆಶ್ವ 56/4–6). ಅಳುತ್ತಿರುವ ಉತ್ತಂಕನ ಕಣ್ಣೀರನ್ನು ಈತನ ಆದೇಶ ಪ್ರಕಾರ, ಈತನ ಮಗಳು ಕೈಗಳಲ್ಲಿ ತುಂಬಿಕೊಳ್ಳುವುದು, ಈತ ಉತ್ತಂಕನೊಡನೆ ಮಾನಸಿಕ ಶೋಕದ ಕಾರಣ ವಿಚಾರಿಸುವುದು, ಅವನಿಗೆ ಮನೆಗೆ ಹೋಗುವ ಇಚ್ಛೆಯಾದುದನ್ನು ತಿಳಿದು ಸಂತೋಷದಿಂದ ಆಜ್ಞೆನೀಡಿದುದು. ಆತ ಗುರುದಕ್ಷಿಣೆ ಕೊಡುವ ಅಪೇಕ್ಷೆ ವ್ಯಕ್ತಪಡಿಸಿದಾಗ, ಅವನ ಸೇವೆಯಿಂದಲೇ ತಾನು ಸಂತುಷ್ಟನಾದುದಾಗಿ ತಿಳಿಸಿದುದು ಮತ್ತು ಗುರುದಕ್ಷಿಣೆ ಸ್ವೀಕರಿಸಲು ಅಪೇಕ್ಷಿಸದಿರುವುದು, ಉತ್ತಂಕನು ಹದಿನಾರು ವರ್ಷದ ಯುವಕನಾದುದರಿಂದ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟದ್ದು (ಆಶ್ವ 56/11–24). ಈತ ತನ್ನ ಪತ್ನಿಯೊಡನೆ ಉತ್ತಂಕನ ಕುರಿತು ಕೇಳಿದುದು. ಉತ್ತಂಕ ರಾಕ್ಷಸನಾದ ಸೌದಾಸ

ನಲ್ಲಿಗೆ ಕುಂಡಲಗಳನ್ನು ಕೇಳಿ ತರಲು ಹೋಗಿದ್ದಾನೆಂದು ತಿಳಿದು, ಅವನ ವಧೆಯಾಗಿರಬಹುದೆಂಬ ಸಂದೇಹದಿಂದ ಈ ರೀತಿಯ ಅನುಚಿತ ಆಜ್ಞೆಯನ್ನಿತ್ತುದಕ್ಕಾಗಿ ಪತ್ನಿಯನ್ನು ನಿಂದಿಸಿದುದು. ಉತ್ತಂಕನ ರಕ್ಷಣೆಗೋಸ್ಕರ ತನ್ನ ಪತ್ನಿ ಅಹಲ್ಯೆಯ ಇಚ್ಛೆಯನ್ನು ಅನುಮೋದಿಸಿದುದು (ಆಶ್ವ 56/32–35). ಗೌತಮನ ಪುತ್ರ ಶರದ್ವತನನ್ನೂ 'ಗೌತಮ'ನೆಂದು ಕರೆಯಲಾಗುತ್ತದೆ (ಆದಿ 129/2). ಶರದ್ವಂತನ ಪುತ್ರ ಕೃಪ ಮತ್ತು ಪುತ್ರಿ ಕೃಪೆಯನ್ನು 'ಗೌತಮ' ಮತ್ತು 'ಗೌತಮಿ' ಎಂಬ ಹೆಸರಿನಿಂದ ಕರೆದುದು ಕಂಡುಬರುತ್ತದೆ (ಆದಿ 130/14).

(2) ಒಬ್ಬ ಋಷಿ. ಈತ ಅನ್ಯ ಋಷಿಗಳೊಡನೆ ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/17). ಈತ ಇಂದ್ರನ ಸಭೆಯಲ್ಲೂ ಉಪಸ್ಥಿತನಾಗಿರುತ್ತಾ, ಇಂದ್ರನ ಉಪಾಸನೆ ಮಾಡುತ್ತಿದ್ದನು (ಸಭಾ 7/18). ಇವನೇ ಗಿರಿವ್ರಜದಲ್ಲಿ ವಾಸವಾಗಿದ್ದು, ಉಶೀನರ ದೇಶದ ಶೂದ್ರಸ್ತ್ರೀಯಲ್ಲಿ ಕಾಕ್ಷಿವಂತನೆಂಬ ಪುತ್ರನನ್ನು ಪಡೆದಿದ್ದನು (ಸಭಾ 21/3–5).

(3) ಒಬ್ಬ ತಪಸ್ವಿ ಮತ್ತು ವಿದ್ವಾಂಸನಾದ ಬ್ರಾಹ್ಮಣ ಮುನಿ. ಅವನು ಏಕತ, ದ್ವಿತ ಅಥವಾ ತ್ರಿತ ಎಂಬವರ ತಂದೆ (ಶಲ್ಯ 36/79).

(4) ಒಬ್ಬ ತಪಸ್ವಿ ಬ್ರಾಹ್ಮಣ. ಈತ ತನ್ನ ಆನೆಯ ಅಪಹರಣವಾದಾಗ ಧೃತರಾಷ್ಟ್ರ ರೂಪಧಾರಿ ಇಂದ್ರನೊಂದಿಗೆ ಸಂವಾದಮಾಡಿದ್ದನು (ಅನು 102).

(5) ಮಧ್ಯದೇಶದಲ್ಲಿ ವಾಸಿಸುವ ಒಬ್ಬ ಕೃತಘ್ನ ಬ್ರಾಹ್ಮಣ. ಅವನ ಹೆಸರು ಗೌತಮ. ಈತ ಕಳ್ಳರ ಹಳ್ಳಿಯಲ್ಲಿ ವಾಸಿಸುತ್ತಿದ್ದನು (ಶಾಂತಿ 168/36). ತನ್ನ ಹಳ್ಳಿಯ ಒಬ್ಬ ಸದಾಚಾರಿ ಬ್ರಾಹ್ಮಣನಿಂದ ನಿಂದಿಸಲ್ಪಟ್ಟ ಬಳಿಕ, ಅವನ ಮೂಲಕ ಸಮುದ್ರಯಾತ್ರೆ ಮಾಡಿದನು (ಶಾಂತಿ 169/1). ಕಾಡಿನಲ್ಲಿ ಈತ ರಾಜಧರ್ಮಾ ಎಂಬ ಹೆಸರಿನ ಬಕನ ಅತಿಥಿಯಾದುದು. ರಾಜಧರ್ಮನ ಆತಿಥ್ಯ ಸ್ವೀಕರಿಸಿದ, ಹಣಕ್ಕಾಗಿ ರಾಕ್ಷಸರಾಜ ವಿರೂಪಾಕ್ಷನ ಬಳಿಗೆ ಹೋದುದು (ಶಾಂತಿ 170/26). ವಿರೂಪಾಕ್ಷನೊಂದಿಗೆ ವಾರ್ತಾಲಾಪ ಮತ್ತು ಧನವನ್ನು ಪಡೆದು ಹಿಂತಿರುಗಿದುದು (ಶಾಂತಿ 171/2–28). ರಾಜಧರ್ಮಾನನ್ನು ಕೊಲ್ಲುವ ವಿಚಾರ (ಶಾಂತಿ 171/34–35). ಉರಿಯುತ್ತಿರುವ ಕೊಳ್ಳಿಗಳಿಂದ ರಾಜಧರ್ಮಾನ ವಧೆ (ಶಾಂತಿ 172/3). ರಾಕ್ಷಸರಿಂದ ಈತನ ವಧೆ (ಶಾಂತಿ 172/23–24). ಇಂದ್ರನಿಂದ ಜೀವದಾನ (ಶಾಂತಿ 173/12–13). ಇವನಿಗೆ ದೇವತೆಗಳ ಶಾಪ (ಶಾಂತಿ 173/17–18).

**ಗೌತಮೀ** – (1) ದ್ರೋಣಾಚಾರ್ಯನ ಪತ್ನಿ (ಆದಿ 129/47). (ನೋಡಿರಿ–ಕೃಪಿ).

(2) ಗೌತಮಗೋತ್ರದ ಒಬ್ಬ ಕನ್ಯೆ ಜಟಿಲಾ. ಆಕೆ ಏಳುಮಂದಿ ಋಷಿಗಳನ್ನು ಮದುವೆಯಾಗಿದ್ದಳು (ಆದಿ 195/14). ಈಕೆ ಬ್ರಹ್ಮಸಭೆಯಲ್ಲಿದ್ದಾಳೆ (ಸಭಾ 11/40). ದ್ರೌಪದಿಯ ಪತಿಸೇವಾ ವಿಚಾರದಲ್ಲಿ ಗೌತಮೀ ಜಟಿಲೆಯ ದೃಷ್ಟಾಂತ (ಶಾಂತಿ 38/5).

(3) ಒಬ್ಬ ಬ್ರಾಹ್ಮಣಿ. ತನ್ನ ಪುತ್ರನ ಮರಣವಾದಾಗ ಈಕೆ ವ್ಯಾಧ, ಸರ್ಪ, ಮೃತ್ಯು ಮತ್ತು ಕಾಲನೊಂದಿಗೆ ಸಂವಾದ ಮಾಡಿದುದು (ಅನು 1/21–32).

(4) ಒಂದು ನದಿ (ಅನು 165/21).

**ಗೌರ** – ಕುಶದ್ವೀಪದ ಒಂದು ಪರ್ವತ (ಭೀಷ್ಮ 12/4).

**ಗೌರಪೃಷ್ಠ** – ಒಬ್ಬ ರಾಜರ್ಷಿ. ಈತ ಯಮ ಸಭೆಯಲ್ಲಿ ಉಪಸ್ಥಿತನಾಗಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/21).

**ಗೌರಮುಖ** – ಶಮೀಕ ಮುನಿಯ ಒಬ್ಬ ಶಿಷ್ಯ. ಈತ ಗುರುವಿನ ಆಜ್ಞೆಯಂತೆ, ಪರೀಕ್ಷಿತನಿಗೆ ಶೃಂಗಿಯ ಶಾಪ ಸಮಾಚಾರವನ್ನು ತಿಳಿಸಿದನು (ಆದಿ 42/14–22).

**ಗೌರವಾಹನ** – ಒಬ್ಬ ರಾಜ. ಅವನು ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಆಗಮಿಸಿದ್ದನು (ಸಭಾ 34/12).

**ಗೌರಶಿರಾ** – ಒಬ್ಬ ಮುನಿ. ಈತ ಇಂದ್ರಸಭೆಯಲ್ಲಿದ್ದುಕೊಂಡು ವಜ್ರಧಾರಿ ಇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/11).

**ಗೌರಾಶ್ವ** – ಒಬ್ಬ ರಾಜರ್ಷಿ. ಅವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/8).

**ಗೌರೀ** – (1) ಮಹಾದೇವಿ ಪಾರ್ವತಿಯ ಒಂದು

ಹೆಸರು (ವನ 84/151).

(2) ಉಮಾದೇವಿಯ ಅನುಗಾಮಿನಿ ಸಹಚರಿ (ವನ 231/48).

(3) ವರುಣನ ಪ್ರಿಯ ಪತ್ನಿ (ಉದ್ಯೋಗ 117/9).

(4) ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಜನತೆ ಕುಡಿಯುತ್ತದೆ (ಭೀಷ್ಮ 9/25).

**ಗೌರೀಶಿಖರ** – ಒಂದು ತ್ರಿಭುವನ ವಿಖ್ಯಾತ ತೀರ್ಥ. ಅಲ್ಲಿ ಸ್ನಾನಮಾಡಿದರೆ ವಾಜಪೇಯ ಯಜ್ಞದ ಮತ್ತು ದೇವ-ಪಿತೃಗಳ ಪೂಜೆ ಮಾಡುವುದರಿಂದ ಅಶ್ವಮೇಧ ಯಜ್ಞದ, ಫಲ ದೊರಕುತ್ತದೆ (ವನ 84/151–154).

**ಗ್ರಂಥಿಕ** – ವಿರಾಟ ನಗರದಲ್ಲಿ ಅಜ್ಞಾತವಾಸದ ಸಮಯದಲ್ಲಿ ನಕುಲನ ಹೆಸರು (ವಿರಾಟ 3/4).

**ಗ್ರಾಮಣಿ** – ಶಿವನ ಒಬ್ಬ ಗಣ. ಅವನ ಹೆಸರನ್ನು ಶುದ್ಧಭಾವದಿಂದ ಕೀರ್ತನೆ ಮಾಡುವ ಮನುಷ್ಯರ ಎಲ್ಲಾ ಪಾಪಗಳು ನಷ್ಟವಾಗುತ್ತವೆ (ಅನು 150/25).

**ಗ್ರಾಮಣೀಯ** – ಗ್ರಾಮ ಶಾಸಕ ಕ್ಷತ್ರಿಯರ ವಂಶಜರು. ಅವರನ್ನು ದಿಗ್ವಿಜಯದ ಸಮಯದಲ್ಲಿ ನಕುಲನು ಜೈಸಿದ್ದನು (ಸಭಾ 32/9).

## ಘ

**ಘಟ** – ಒಂದು ಭಾರತೀಯ ಜನಪದ (ಭೀಷ್ಮ 9/63).

**ಘಟಜಾನುಕ** – ಒಬ್ಬ ಪ್ರಾಚೀನ ಋಷಿ. ಅವನು ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/13). ಹಸ್ತಿನಾಪುರಕ್ಕೆ ಹೋಗುತ್ತಿದ್ದಾಗ ಮಾರ್ಗದಲ್ಲಿ ಶ್ರೀಕೃಷ್ಣನೊಂದಿಗೆ ಈತನ ಭೇಟಿ (ಉದ್ಯೋಗ 83/64).

**ಘಟೋತ್ಕಚ** – ಹಿಡಿಂಬೆಯ ಗರ್ಭದಲ್ಲಿ ಭೀಮನಿಂದ ಹುಟ್ಟಿದ ಒಬ್ಬ ರಾಕ್ಷಸ (ಆದಿ 154/31). 'ಘಟೋತ್ಕಚ'ನೆಂದು ಈತನಿಗೆ ಹೆಸರಾಗಲು ಕಾರಣ (ಆದಿ 154/38). ಆವಶ್ಯಕತೆ ಬಿದ್ದಾಗ ತನ್ನ ಪಿತೃವರ್ಗಕ್ಕೆ (ಪಾಂಡವರಿಗೆ). ಸೇವೆಮಾಡುವೆನೆಂದು ಕುಂತಿಗೆ ಈತನಿಂದ ಆಶ್ವಾಸನೆ (ಆದಿ 154/45). ಇಂದ್ರನ ಶಕ್ತಿಯ ಆಘಾತವನ್ನು ಸಹಿಸಲು, ಇಂದ್ರನ ಮೂಲಕ ಈತನ ಸೃಷ್ಟಿ (ಆದಿ 154/46). ಸಹದೇವನ ಆಜ್ಞೆಯಿಂದ ಈತನ ಲಂಕಾಯಾತ್ರೆ (ಸಭಾ 31/72). ಇವನ ಮೂಲಕ ವಿಭೀಷಣನಿಗೆ ಪಾಂಡವರ ಪರಿಚಯ (ಸಭಾ 31). ವಿಭೀಷಣನಿಂದ ಕಪ್ಪವನ್ನು ತಂದು ಈತ ಸಹದೇವನಿಗೆ ಕೊಟ್ಟದ್ದು (ಸಭಾ 38). ಭೀಮಸೇನನ ಆಜ್ಞೆಯಂತೆ, ದ್ರೌಪದಿಯನ್ನು ಹೆಗಲ ಮೇಲೆ ಏರಿಸಿ, ಈತ ಗಂಧಮಾದನದ ಯಾತ್ರೆಮಾಡಿದುದು (ವನ 145/4–8). ದುರ್ಗಮ ಮಾರ್ಗದಲ್ಲಿ ಈತ ಪಾಂಡವರನ್ನು ಬೆನ್ನಮೇಲೆ ಏರಿಸಿ ತೆಗೆದುಕೊಂಡು ಹೋದುದು ಮತ್ತು ಅವರನ್ನು ಸಂಕಟದಿಂದ ಪಾರುಮಾಡಿದುದು (ವನ 176/21). ಪ್ರಥಮ ದಿನದ ಯುದ್ಧದಲ್ಲಿ ಅಲಂಬುಷನೊಡನೆ ಈತನ ದ್ವಂದ್ವಯುದ್ಧ (ಭೀಷ್ಮ 45/42–45). ದುರ್ಯೋಧನನೊಂದಿಗೆ ಯುದ್ಧ (ಭೀಷ್ಮ 58/14–15). ಭಗದತ್ತನೊಂದಿಗೆ ಮಾಯಾಯುದ್ಧ ತೊಡಗಿದುದು. ಈತನ ಅದ್ಭುತ ಪರಾಕ್ರಮದಿಂದ ಪರಾಜಿತರಾಗಿ ಕೌರವಪಕ್ಷದವರು ಆ ದಿನದ ಯುದ್ಧವನ್ನು ನಿಲ್ಲಿಸಿದುದು (ಭೀಷ್ಮ 64/57–72). ಭಗದತ್ತನಿಂದ ಈತ ಪರಾಜಿತನಾದುದು (ಭೀಷ್ಮ 83/30–40). ದುರ್ಯೋಧನನೊಂದಿಗೆ ಯುದ್ಧ ಮಾಡಿ, ಅವನನ್ನು ಪ್ರಾಣಸಂಕಟದಲ್ಲಿ ಹಾಕಿದುದು (ಭೀಷ್ಮ 91/19 ರಿಂದ 92/7). ವಂಗ ನರೇಶನ ಗಜರಾಜನನ್ನು ಕೊಂದು, ಅವನನ್ನು ಪರಾಜಯಗೊಳಿಸಿದುದು (ಭೀಷ್ಮ 92/12). ಇವನಿಂದ ವಿಕರ್ಣನ ಪರಾಜಯ (ಭೀಷ್ಮ 92/36). ಇವನಿಂದ ಬೃಹದ್ಬಲನ ಪರಾಜಯ (ಭೀಷ್ಮ 92/41). ಕೌರವ ಮಹಾರಥಿಗಳ ಪ್ರಹಾರದಿಂದ ವ್ಯಾಕುಲನಾಗಿ, ಈತ ಆಕಾಶದಲ್ಲಿ ಹಾರಿದುದು (ಭೀಷ್ಮ 93/6). ಈತನ ಆಸುರೀ ಮಾಯೆಯಿಂದ ಕೌರವ ಸೇನೆಯ ಪಲಾಯನ (ಭೀಷ್ಮ 94/41–47). ದುರ್ಮುಖನೊಂದಿಗೆ ಈತನ ದ್ವಂದ್ವ ಯುದ್ಧ (ಭೀಷ್ಮ 110/13–14). ಧೃತರಾಷ್ಟ್ರನಿಂದ ಈತನ ಶೌರ್ಯದ ವರ್ಣನೆ (ದ್ರೋಣ 10/72–73). ಅಲಂಬುಷನೊಂದಿಗೆ ಈತನ ಯುದ್ಧ (ದ್ರೋಣ 14/46–47). ಇವನ ಕುದುರೆಗಳ ವರ್ಣನೆ (ದ್ರೋಣ 23/75). ಅಲಂಬುಷನೊಂದಿಗೆ

ಯುದ್ಧ (ದ್ರೋಣ 25/61–62). ಅಲಾಯುಧ ನೊಂದಿಗೆ ಯುದ್ಧ (ದ್ರೋಣ 96/27–28). ಇವನಿಂದ ಅಲಂಬುಷನ ವಧೆ. ಅಶ್ವತ್ಥಾಮ ನೊಂದಿಗೆ ನಡೆದ ಯುದ್ಧದಲ್ಲಿ ಇವನ ಮಗ ಅಂಜನಪರ್ವಾನ ವಧೆ ಮತ್ತು ಈತನೂ ಪರಾಜಿತನಾದುದು (ದ್ರೋಣ 156/56–186). ಅಶ್ವತ್ಥಾಮನಿಂದ ಈತನ ಪರಾಜಯ (ದ್ರೋಣ 166/15–38). ಶ್ರೀಕೃಷ್ಣ ಮತ್ತು ಅರ್ಜುನರ ಆಜ್ಞೆಯಂತೆ ಈತ ಕರ್ಣನೊಂದಿಗೆ ಯುದ್ಧಕ್ಕೆ ಹೋದುದು (ದ್ರೋಣ 173/63–65). ಘಟೋತ್ಕಚ ಮತ್ತು ಜಟಾಸುರನ ಮಗ ಅಲಂಬುಷನ ಘೋರಯುದ್ಧ ಮತ್ತು ಅಲಂಬುಷನ ವಧೆ (ದ್ರೋಣ 174). ಇವನ ರೂಪ ಮತ್ತು ರಥಾದಿಗಳ ವರ್ಣನೆ ಮತ್ತು ಕರ್ಣನೊಂದಿಗೆ ಈತನ ಮಾಯಾಮಯ ಘೋರಯುದ್ಧ (ದ್ರೋಣ 175). ಇವನಿಂದ ಅಲಾಯುಧನ ವಧೆ (ದ್ರೋಣ 178/31). ಈತ ಮಾಯಾಮಯ ಘೋರ ಯುದ್ಧ ಮಾಡಿ ಕೌರವಸೇನೆಯ ಸಂಹಾರ ಮಾಡಿದುದು (ದ್ರೋಣ 179/25–47). ಕರ್ಣನಿಂದ ಬಿಡಲ್ಪಟ್ಟ ಇಂದ್ರದತ್ತ ಶಕ್ತಿಯ ಪ್ರಹಾರದಿಂದ ಘಟೋತ್ಕಚನ ವಧೆ (ದ್ರೋಣ 179/58). ಈತ ಯಜ್ಞಗಳನ್ನು, ಬ್ರಾಹ್ಮಣರನ್ನು ದ್ವೇಷಿಸುತ್ತಿದ್ದನು ಮತ್ತು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದನು (ದ್ರೋಣ 181/26–27). ವ್ಯಾಸರು ಆವಾಹನೆ ಮಾಡಿದಾಗ ಈತನು ಗಂಗೆಯ ಜಲದಿಂದ ಪ್ರಕಟನಾದನು (ಆಶ್ರಮ 32/8). ಇವನು ಮರಣಾನಂತರ ಯಕ್ಷ ದೇವತೆಗಳಲ್ಲಿ ಸೇರಿಹೋದನು (ಸ್ವರ್ಗ 5/37). ಮಹಾಭಾರತದಲ್ಲಿ ಬಂದಿರುವ ಘಟೋತ್ಕಚನ ಹೆಸರುಗಳು – ಭೈಮಸೇನಿ, ಭೈಮಿ, ಭೀಮಸೇನಸುತ, ಭೀಮಸೇನಾತ್ಮಜ, ಭೀಮಸೂನು,ಭೀಮಸುತ, ಹೈಡಿಂಬ, ಹೈಡಿಂಬಿ, ರಾಕ್ಷಸ, ರಾಕ್ಷಸಾಧಿಪ, ರಾಕ್ಷಸ ಪುಂಗವ, ರಾಕ್ಷಸೇಶ್ವರ, ರಾಕ್ಷಸೇಂದ್ರ ಇತ್ಯಾದಿ.

**ಘಟೋತ್ಕಚವಧಪರ್ವ** – ದ್ರೋಣಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 153 ರಿಂದ 183 ವರೆಗೆ)

**ಘಣ್ಟೋದರ** – ಒಬ್ಬ ದೈತ್ಯ ಅಥವಾ ದಾನವ. ಈತ ವರುಣನ ಸಭೆಯಲ್ಲಿ ಅವನ ಸೇವೆಗಾಗಿ ಉಪಸ್ಥಿತನಾಗಿರುತ್ತಾನೆ (ಸಭಾ 91/34).

**ಘಣ್ಟಾಕರ್ಣ** – ಬ್ರಹ್ಮನಿಂದ ಸ್ಕಂದನಿಗೆ ಕೊಡಲ್ಪಟ್ಟ ನಾಲ್ಕು ಪಾರ್ಷದರಲ್ಲಿ ಮೂರನೆಯವನು. ಮೊದಲನೆಯವ ನಂದಿಸೇನ, ಎರಡನೆಯವ ಲೋಹಿತಾಕ್ಷ ಮತ್ತು ನಾಲ್ಕನೆಯ ಕುಮುದಮಾಲಿ (ಶಲ್ಯ 45/23–24).

**ಘೂರ್ಣಿಕಾ** – ಶುಕ್ರಾಚಾರ್ಯನ ಪುತ್ರಿ ದೇವಯಾನಿಯ ದಾದಿ (ಆದಿ 78/25).

**ಘೃತಪಾ** – ತುಪ್ಪ ಕುಡಿದು ವಾಸಿಸುವ ಋಷಿ. ಇವನು ಬ್ರಹ್ಮನ ಆಜ್ಞೆಯ ಅಧೀನದಲ್ಲಿದ್ದು, ಸನಾತನ ಧರ್ಮದ ಪಾಲನೆ ಮಾಡುತ್ತಾನೆ (ಶಾಂತಿ 166/24).

**ಘೃತವತಿ** – ಭಾರತದ ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/23; 9/31).

**ಘೃತತೋಯ**(ಅಥವಾ ಘೃತೋದ)**ಸಮುದ್ರ** – ತುಪ್ಪದ ಸಮುದ್ರ (ಭೀಷ್ಮ 12/2).

**ಘೃತಾಚೀ** – ಒಬ್ಬ ಶ್ರೇಷ್ಠ ಅಪ್ಸರೆ. ಆಕೆಯ ಗರ್ಭದಿಂದ ಮಹರ್ಷಿ ಪ್ರಮತಿಯ ಮೂಲಕ 'ರುರು'ವಿನ ಜನನವಾಗಿತ್ತು (ಆದಿ 5/9). ಈಕೆ ಆರು ಪ್ರಧಾನ ಅಪ್ಸರೆಯರಲ್ಲಿ ಒಬ್ಬಳು (ಆದಿ 74/68). ಈಕೆ ಅರ್ಜುನನ ಜನ್ಮೋತ್ಸವದಲ್ಲಿ ಹಾಡಲು–ಕುಣಿಯಲು ಬಂದ ಹನ್ನೊಂದು ಅಪ್ಸರೆಯರಲ್ಲಿ ಒಬ್ಬಳಾಗಿದ್ದಳು (ಆದಿ 125/65). ಈಕೆಯನ್ನು ನೋಡಿ ಸ್ಖಲಿಸಿದ ಭರದ್ವಾಜರ ವೀರ್ಯದಿಂದ ದ್ರೋಣನ ಜನನವಾಯಿತು (ಆದಿ 129/35–38; ವನ 43/29). ಈಕೆ ಕುಬೇರ ಸಭೆಯ ಪ್ರಮುಖ ಅಪ್ಸರೆಯಾಗಿದ್ದಾಳೆ (ಸಭಾ 10/10). ಇವಳನ್ನು ನೋಡಿ ಭರಧ್ವಾಜನ ವೀರ್ಯಸ್ಖಲನ ಮತ್ತು ಶ್ರುತಾವತಿ ಹೆಸರಿನ ಕನ್ಯೆಯ ಜನನ (ಶಲ್ಯ 348/64–66). ಇವಳನ್ನು ನೋಡಿ ವ್ಯಾಸರ ವೀರ್ಯಸ್ಖಲನ ಮತ್ತು ಶುಕನ ಜನನ (ಶಾಂತಿ 324/2–9). ಈಕೆ ಅಷ್ಟಾವಕ್ರನ ಸ್ವಾಗತ ಸತ್ಕಾರದ ನಿಮಿತ್ತ, ಕುಬೇರನ ಸಭೆಯಲ್ಲಿ ನೃತ್ಯ ಮಾಡಿದ್ದಳು (ಅನು 19/44).

**ಘೃತಾರ್ಚಿ** – ಶ್ರೀಕೃಷ್ಣನ ಒಂದು ಹೆಸರು. ಅದರ ವ್ಯಾಖ್ಯಾನ ಅವನಿಂದಲೇ ಆಗಿದೆ (ಶಾಂತಿ 342/85).

**ಘೋರ** – ಮಹರ್ಷಿ ಅಂಗೀರಸ್ಸಿನ ವಾರುಣರೆಂಬ ಪುತ್ರರಲ್ಲಿ ಒಬ್ಬ (ಅನು 85/13).

**ಘೋರಕ** – ವಾಯುವ್ಯ ಭಾರತದ ಒಂದು ಜನಪದ. ಅಲ್ಲಿರುವ ಜನರು ಯುಧಿಷ್ಠಿರನಿಗೆ ತುಂಬಾ ಧನವನ್ನು ಅರ್ಪಿಸಿದ್ದರು (ಸಭಾ 52/14).

**ಘೋಷಯಾತ್ರಾಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 236 ರಿಂದ 257ರ ವರೆಗೆ).

**ಘ್ರಾಣಶ್ರವಾ** – ಸ್ಕಂದನ ಒಬ್ಬ ಸೈನಿಕ ಮತ್ತು ಪಾರ್ಷದ. ಅವನು ಸದಾಯೋಗಯುಕ್ತನಾಗಿದ್ದು ಬ್ರಾಹ್ಮಣರೊಂದಿಗೆ ಪ್ರೇಮದಿಂದಿರುತ್ತಾನೆ (ಶಲ್ಯ 45/57).

## ಚ

**ಚಕ್ರ** – (1) ನಾಗರಾಜ ವಾಸುಕಿಯಿಂದ ಹುಟ್ಟಿದ ಒಬ್ಬ ನಾಗ. ಅವನು ಸರ್ಪಯಾಗದಲ್ಲಿ ಸುಟ್ಟು ಹೋದನು (ಆದಿ 57/6).

(2) ಶ್ರೀ ಕೃಷ್ಣನ ಸುಪ್ರಸಿದ್ಧ ಅಸ್ತ್ರ ಸುದರ್ಶನ ಚಕ್ರ. ಅದನ್ನು ಅಗ್ನಿದೇವನು ಪ್ರದಾನಮಾಡಿದನು (ಆದಿ 224/23).

(3) ಒಂದು ಭಾರತೀಯ ಜನಪದ (ಭೀಷ್ಮ 9/45).

(4) ಭಗವಂತನಾದ ವಿಷ್ಣುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಮೂರು ಪಾರ್ಷದರಲ್ಲಿ ಒಬ್ಬ (ಶಲ್ಯ 45/37).

(5) ತ್ವಷ್ಟಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಅನುಚರರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಅನುಚಕ್ರನೆಂದಾಗಿತ್ತು (ಶಲ್ಯ 45/40).

**ಚಕ್ರಕ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/54).

**ಚಕ್ರದೇವ** – ವೃಷ್ಣಿವಂಶದ ಒಬ್ಬ ಅತಿರಥೀ ವೀರ (ಸಭಾ 14/57–58).

**ಚಕ್ರದ್ವಾರ** – ಒಂದು ಪರ್ವತ. ಅದು ಸುಲಭಾ ಎಂಬವಳ ಪೂರ್ವಜರು ಇಂದ್ರನ ಸಹಯೋಗ ದೊಂದಿಗೆ ಮಾಡಿದ ಯಜ್ಞಗಳಲ್ಲಿ ಯಜ್ಞವೇದಿಯ ಇಟ್ಟಿಗೆಯಾಗಿತ್ತು (ಶಾಂತಿ 320/185).

**ಚಕ್ರಧನು** – ಕರ್ದಮ ಮಹರ್ಷಿಯಿಂದ ಹುಟ್ಟಿದ ಕಪಿಲಮುನಿಯೇ ಚಕ್ರಧನುವೆಂದು ಕರೆಯಲ್ಪಡು ತ್ತಾನೆ. ಈತ ದಕ್ಷಿಣ ದಿಕ್ಕಿನಲ್ಲಿ ವಾಸಿಸುತ್ತಾನೆ. ಈತನೇ ಸಗರಪುತ್ರರನ್ನು ಭಸ್ಮ ಮಾಡಿದ್ದನು (ಉದ್ಯೋಗ 109/17–18).

**ಚಕ್ರಧರ್ಮಾ**– ವಿದ್ಯಾಧರರ ಅಧಿಪತಿ. ಈತ ತನ್ನ ತಮ್ಮನೊಂದಿಗೆ ಕುಬೇರನ ಸಭೆಯಲ್ಲಿ ಉಪಸ್ಥಿತ ನಾಗಿದ್ದು, ಕುಬೇರನ ಉಪಾಸನೆ ಮಾಡುತ್ತಾನೆ (ಸಭಾ 10/27).

**ಚಕ್ರನೇಮಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/5).

**ಚಕ್ರಮಂದ** – ಒಬ್ಬ ನಾಗ. ಈತ ಬಲರಾಮನು ಪರಮಧಾಮಕ್ಕೆ ಹೋಗುವ ಸಮಯದಲ್ಲಿ ಅವನ ಸ್ವಾಗತಕ್ಕಾಗಿ ಬಂದಿದ್ದನು (ಮೌಸಲ 4/16).

**ಚಕ್ರವ್ಯೂಹ** – ದ್ರೋಣ ನಿರ್ಮಿತ ಒಂದು ಸೇನಾ ವ್ಯೂಹ. ಅದನ್ನು ಭೇದಿಸಲು ಪಾಂಡವ ಬಲದಲ್ಲಿ ಅರ್ಜುನನಿಗೆ ಮಾತ್ರ ತಿಳಿದಿತ್ತು. ಅಭಿಮನ್ಯು ಇದರೊಳಗೆ ಪ್ರವೇಶಮಾಡಿ ಹೊರಗೆ ಬರಲು ತಿಳಿದಿರಲಿಲ್ಲ. ಆದಕಾರಣ, ಹೊರಗಿನಿಂದ ಅವ ನಿಗೆ ಸಹಾಯ ದೊರಕದ ಕಾರಣದಿಂದಾಗಿ ಕೊಲ್ಲ ಲ್ಪಟ್ಟನು. ಈ ವ್ಯೂಹದ ನಿರ್ಮಾಣ ಗಾಡಿಯ ಚಕ್ರದ ಆಕೃತಿಯಲ್ಲಿರುತ್ತದೆ. ಇದರ ವರ್ಣನೆ (ದ್ರೋಣ 34/13–24).

**ಚಕ್ರಾತಿ** – ಒಂದು ಭಾರತೀಯ ಜನಪದ (ಭೀಷ್ಮ 9/45).

**ಚಕ್ಷು** – ವಿವಸ್ವಂತ(ಸೂರ್ಯ)ನಂತೆಯೇ ಕಾಣಿ ಸುವ ದಿವಃಪುತ್ರನೇ ಮೊದಲಾದ ಹನ್ನೆರಡು ಸೂರ್ಯರಲ್ಲಿ ಒಬ್ಬ (ಆದಿ 1/42).

**ಚಕ್ಷುರ್ವರ್ಧನಿಕಾ** – ಶಾಕದ್ವೀಪದ ಒಂದು ನದಿ (ಭೀಷ್ಮ 11/33).

**ಚಂಡಕೌಶಿಕ** (ಚನ್ಡಕೌಶಿಕ). – ಗೌತಮಪುತ್ರನಾದ ಕಾಕ್ಷಿವಂತನ ಮಗ (ಸಭಾ 17/22). ಇವನ ಕೃಪೆಯಿಂದ ಮಗಧ ನರೇಶ ಬೃಹದ್ರಥನಿಗೆ ಪುತ್ರ ಪ್ರಾಪ್ತಿಯಾಯಿತು. ಅವನೇ ಜರಾಸಂಧನೆಂಬ ಹೆಸರಿನಿಂದ ಪ್ರಸಿದ್ಧನಾದನು (ಆದಿ 17/28–41). ಇವನಿಂದ ಜರಾಸಂಧನ ಭವಿಷ್ಯ ಕಥನ (ಆದಿ 19).

**ಚಣ್ಡತುಣ್ಡಕ** – ಗರುಡನ ಪ್ರಮುಖ ಸಂತಾನ ಗಳಲ್ಲಿ ಒಬ (ಉದ್ಯೋಗ 101/9).

**ಚಣ್ಡಬಲ** – ಇದೇ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ವಾನರ. ಅವನು ಕುಂಭಕರ್ಣನ ಮುಖಕ್ಕೆ ಗ್ರಾಸವಾಗಿದ್ದನು (ವನ 287/6).

**ಚಣ್ಡಭಾರ್ಗವ** – ವೇದವಿದರಲ್ಲಿ ಶ್ರೇಷ್ಠನಾದ ಒಬ್ಬ ವಿದ್ವಾಂಸ ಬ್ರಾಹ್ಮಣ. ಈತ ಚ್ಯವನ ಮುನಿಯ ವಂಶದಲ್ಲಿ ಹುಟ್ಟಿದ್ದನು. ಈತ ಆ ಕಾಲದಲ್ಲಿ ಸುಪ್ರಸಿದ್ಧ ಕರ್ಮಕಾಂಡ ಪ್ರತಿಪಾದಕನಾಗಿದ್ದನು. ರಾಜಾ ಜನಮೇಜಯನ ಸರ್ಪಯಜ್ಞದ ಹೋತೃ ವಾಗಿ ಮಾಡಲ್ಪಟ್ಟಿದ್ದನು (ಆದಿ 53/4–5).

**ಚತುರಶ್ವ** – ಒಬ್ಬ ರಾಜರ್ಷಿ. ಈತ ಯಮ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/11).

**ಚತುರ್ದೇಷ್ಟ್ರ** – ಸ್ಕಂದನ ಒಬ್ಬ ಸೈನಿಕ ಅಥವಾ ಪಾರ್ಷದ. ಈತ ಬ್ರಾಹ್ಮಣಪ್ರಿಯನಾಗಿದ್ದನು (ಶಲ್ಯ 45/62).

**ಚತುರ್ವೇದ** – ಏಳು ಮಂದಿ ಪಿತೃಗಳಲ್ಲಿ ಒಬ್ಬ (ಸಭಾ 11/47).

**ಚತುಷ್ಕರ್ಣೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/25).

**ಚತುಷ್ಪಥರತಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/27).

**ಚತ್ವರವಾಸಿನಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/12).

**ಚನ್ದ್ರ** – (1) ಒಬ್ಬ ಶ್ರೇಷ್ಠ ದೈತ್ಯ. ಈತ ಚಂದ್ರನಂತೆ ಸುಂದರ ಮತ್ತು ಚಂದ್ರವರ್ಮಾ ಎಂಬ ಹೆಸರಿನಿಂದ, ಪ್ರಖ್ಯಾತವಾದ ಕಾಂಬೋಜ ದೇಶದ ರಾಜನಾದನು (ಆದಿ 67/31–32).

(2) ಚಂದ್ರಮಾ (ಆದಿ 209/26). (ವನ 118/12). (ನೋಡಿರಿ – ಚಂದ್ರಮಾ).

**ಚನ್ದ್ರಕ** – ಬಿಡಾಲೋಪಾಖ್ಯಾನದಲ್ಲಿ ವರ್ಣಿಸಲ್ಪಟ್ಟ ಗೂಗೆಯ ಹೆಸರು (ಶಾಂತಿ 138/33).

**ಚನ್ದ್ರಕುಂಡ** (ಚಂದ್ರಹ್ರದ) – ಒಂದು ಹ್ರದ ಅಥವಾ ಕುಂಡ. ಇಲ್ಲಿ ಮೇರುಪರ್ವತದಿಂದ ಭಾಗೀರಥಿ ಗಂಗೆ ಬೀಳುತ್ತಾಳೆ (ಭೀಷ್ಮ 6/29).

**ಚನ್ದ್ರಕೇತು** – ಕೌರವ ಪಕ್ಷದ ಒಬ್ಬ ಯೋಧ. ಅಭಿಮನ್ಯುವಿನಿಂದ ಇವನ ವಧೆ (ದ್ರೋಣ 48/15–16).

**ಚನ್ದ್ರತೀರ್ಥ** – ಒಂದು ಪ್ರಾಚೀನ ತೀರ್ಥ. ಅನೇಕ ಋಷಿಗಳು ಇದರ ಪೂಜೆ ಮಾಡುತ್ತಾರೆ. ಇಲ್ಲಿ ವಾಲಖಿಲ್ಯರೆಂಬ ವೈಖಾನಸ ಮುನಿಗಳು ವಾಸಿಸುತ್ತಾರೆ. ಇಲ್ಲಿ ಮೂರು ಪವಿತ್ರ ಶಿಖರಗಳೂ ಮೂರು ನೀರಿನ ಝುರಿಗಳೂ ಇವೆ (ವನ 125/17).

**ಚನ್ದ್ರದೇವ** – (1) ತ್ರಿಗರ್ತರಾಜ ಸುಶರ್ಮಾನ ಸಹೋದರ. ಅರ್ಜುನನಿಂದ ಈತನ ವಧೆ (ಕರ್ಣ 27/3–13).

(2) ಪಾಂಡವ ಪಕ್ಷದ ಪಾಂಚಾಲಯೋಧ. ಯುಧಿಷ್ಠಿರನ ಚಕ್ರರಕ್ಷಕ. ಕರ್ಣನಿಂದ ಈತನ ವಧೆ (ಕರ್ಣ 49/27).

**ಚನ್ದ್ರಪ್ರಮರ್ದನ** – ದಕ್ಷಕನ್ಯೆ ಸಿಂಹಿಕೆಯ ಪುತ್ರ. ತಂದೆಯ ಹೆಸರು ಕಶ್ಯಪ (ಆದಿ 65/31).

**ಚನ್ದ್ರಭ** – ಸ್ಕಂದನ ಒಬ್ಬ ಸೈನಿಕ ಅಥವಾ ಪಾರ್ಷದ. ಈತ ಬ್ರಾಹ್ಮಣಪ್ರೇಮಿ (ಶಲ್ಯ 45/75).

**ಚನ್ದ್ರಭಾಗಾ** – ಪಂಚನದ ಪ್ರದೇಶ(ಪಂಜಾಬ)ದ ಒಂದು ನದಿ. ಇದನ್ನು ಈಗ ಚೇನಾಬ್ ಎಂದು ಕರೆಯುತ್ತಾರೆ (ಸಭಾ 9/19). ಇದರಲ್ಲಿ ಏಳು ದಿನ ಸ್ನಾನಮಾಡುವುದರಿಂದ ಮನುಷ್ಯನು ಮುನಿ ಯಂತೆ ನಿರ್ಮಲನಾಗುತ್ತಾನೆ (ಅನು 25/7).

**ಚನ್ದ್ರಮಾ** –(1) ಶೀತಲ ಕಿರಣಗಳ ಸೋಮ. ಈತ ಕ್ಷೀರಸಾಗರ ಮಥನಕಾಲದಲ್ಲಿ ಅದರಿಂದ ಪ್ರಕಟಗೊಂಡನು (ಆದಿ 18/34). ಈತ ಅತ್ರಿಯ ಮಗ. ಬುಧನ ತಂದೆ (ದ್ರೋಣ 144/4). ಇವನಿಗೆ ದಕ್ಷ ಪ್ರಜಾಪತಿಯು ತನ್ನ ಇಪ್ಪತ್ತೇಳು ಕನ್ಯೆಯರನ್ನು ಪತ್ನಿಯರಾಗಿ ಕೊಟ್ಟಿದ್ದನು (ಆದಿ 66/13; 75/9; ಶಲ್ಯ 35/45). ಸೋಮನಿಗೆ ಇಪ್ಪತ್ತೇಳು ಪತ್ನಿಯರಿದ್ದಾರೆ. ಈತ ಎಲ್ಲಾ ಲೋಕಗಳಲ್ಲಿ ಪ್ರಖ್ಯಾತನು. ಪವಿತ್ರ ವ್ರತಪಾಲನೆ ಮಾಡುತ್ತಿರುವ ಸೋಮಪತ್ನಿಯರು, ಕಾಲ ವಿಭಾಗದ ನೆನಪು ಮಾಡಿಸಲು ನಿಯುಕ್ತರಾಗಿ ದ್ದಾರೆ. ಲೋಕವ್ಯವಹಾರವನ್ನು ನಿರ್ವಹಿಸುವುದ ಕ್ಕಾಗಿ, ಅವರು ಎಲ್ಲರೂ ನಕ್ಷತ್ರವಾಚಕ ಹೆಸರು ಗಳಿಂದ ಯುಕ್ತರಾಗಿದ್ದಾರೆ (ಆದಿ 66/16–17). ಈತ ನಕ್ಷತ್ರಗಳ ಜೊತೆಯಲ್ಲಿ ಮೇರು ಪರ್ವತ ವನ್ನು ಸುತ್ತುತ್ತಾನೆ ಮತ್ತು ಪರ್ವಸಂಧಿಯ ಸಮಯದಲ್ಲಿ ಬೇರೆ ಬೇರೆ ತಿಂಗಳುಗಳ ವಿಭಾಗ ಮಾಡುತ್ತಿರುತ್ತಾನೆ. ಈ ರೀತಿ ಮಹಾಮೇರುವಿನ ಉಲ್ಲಂಘನೆಮಾಡಿ, ಸಮಸ್ತ ಪ್ರಾಣಿಗಳ ಪೋಷಣೆ ಮಾಡುತ್ತಾ, ಆತ ಪುನಃ ಮಂದರಾಚಲಕ್ಕೆ ಹೋಗು ತ್ತಾನೆ (ವನ 163/32–33). ಚಂದ್ರಮಂಡಲದ ವ್ಯಾಸ ಹನ್ನೊಂದು ಸಾವಿರ ಯೋಜನ, ಅದರ ಪರಿಧಿಯ ವಿಸ್ತಾರ ಮೂವತ್ತಮೂರು ಸಾವಿರ

ಯೋಜನ ಮತ್ತು ಅದರ ದಪ್ಪ ಐವತ್ತೊಂಭತ್ತು ನೂರು ಯೋಜನವಾಗಿದೆ (ಭೀಷ್ಮ 12/42–43). ಇವನ ಎಲ್ಲಾ ಪತ್ನಿಯರೂ ಅನುಪಮ ರೂಪ ವತಿಯರಾಗಿದ್ದರು. ಆದರೆ ರೋಹಿಣಿಯ ಸೌಂದರ್ಯ ಅವರೆಲ್ಲರಿಗಿಂತ ಹೆಚ್ಚಾಗಿತ್ತು. ಆದು ದರಿಂದ ಈತ ಇತರ ಪತ್ನಿಯರನ್ನು ಉಪೇಕ್ಷಿಸಿ, ಸದಾ ರೋಹಿಣಿಯ ಬಳಿಯಲ್ಲಿರತೊಡಗಿದನು. ಇದನ್ನು ನೋಡಿ ಇತರ ಪತ್ನಿಯರು ತಂದೆ ಯಾದ ದಕ್ಷನಲ್ಲಿ ಅವನ ಮೇಲೆ ಚಾಡಿ ಹೇಳಿದರು. ದಕ್ಷನು ಈತನೊಡನೆ 'ನೀನು ಎಲ್ಲರ ಮೇಲೂ ಸಮಾನ ಭಾವವನ್ನಿರಿಸಬೇಕು' ಎಂದು ನೀತಿ ಹೇಳಿದನು. ಅವನ ಈ ಆದೇಶದ ಅವಹೇಳನ ಮಾಡಿ, ಸೋಮನು ಹಿಂದಿನಂತೆ ರೋಹಿಣಿಯಲ್ಲಿ ಆಸಕ್ತನಾಗಿರತೊಡಗಿದನು. ಇದ ರಿಂದಾಗಿ ಸಿಟ್ಟುಗೊಂಡ ದಕ್ಷ ಚಂದ್ರನ ಮೇಲೆ ರಾಜಕ್ಷಯವನ್ನು ಸೃಷ್ಟಿಸಿದನು. ಆ ರೋಗ ಈತನ ಶರೀರವನ್ನು ವ್ಯಾಪಿಸಿತು. ಸೋಮನು ಕ್ಷೀಣನಾದನು. ಅವನು ಕ್ಷೀಣನಾದುದರಿಂದ, ಔಷಧಿಗಳೂ, ಪ್ರಜೆಗಳೂ ಕ್ಷಯಿಸತೊಡಗಿದರು. ಆಗ ದೇವತೆಗಳ ಒತ್ತಾಯಕ್ಕಾಗಿ, ದಕ್ಷನು ಚಂದ್ರನ ರೋಗ ನಿವೃತ್ತಿಯ ಉಪಾಯವನ್ನು ತಿಳಿಸುತ್ತಾ ಹೀಗೆ ಹೇಳಿದನು. 'ಸೋಮನು ತನ್ನ ಎಲ್ಲಾ ಪತ್ನಿಯರೊಂದಿಗೆ ಸಮಾನವಾಗಿ ವರ್ತಿಸ ಬೇಕು. ಆತ ಸರಸ್ವತಿ ನದಿ ಸಂಗಮವಾಗುವ ಪಶ್ಚಿಮ ಸಮುದ್ರದ ಸ್ಥಳದಲ್ಲಿ ಸ್ನಾನಮಾಡಬೇಕು. ಆ ತೀರ್ಥದಲ್ಲಿ ಮಹಾದೇವನ ಆರಾಧನೆಯಿಂದ ಇವನಿಗೆ ತನ್ನ ಪೂರ್ವಕಾಂತಿ ಪ್ರಾಪ್ತವಾದೀತು. ಈತ ಹದಿನೈದು ದಿನ ಕ್ಷೀಣವಾಗಿರುವನು ಮತ್ತು ಹದಿನೈದು ದಿನ ವೃದ್ಧಿಸುತ್ತಾ ಇರುವನು'. ಸೋಮನು ಅಮಾವಾಸ್ಯೆಯಂದು ಆ ತೀರ್ಥ ದಲ್ಲಿ ಮುಳುಗು ಹಾಕಿದನು. ಇದರಿಂದಾಗಿ ಆತನಿಗೆ ತನ್ನ ಶೀತಲಕಿರಣಗಳು ಪ್ರಾಪ್ತವಾದವು ಮತ್ತು ಈತ ಸಂಪೂರ್ಣ ಜಗತ್ತಿಗೆ ಪ್ರಕಾಶ ಮಾನನಾದನು. ಈತ ಪ್ರತಿ ಅಮಾವಾಸ್ಯೆಯಂದು ಇಲ್ಲಿ ಸ್ನಾನ ಮಾಡುತ್ತಾನೆ (ಶಲ್ಯ 35/45–86). ಇವನಿಂದ ಸ್ಕಂದನಿಗೆ ಮಣಿ ಮತ್ತು ಸುಮಣಿ ಯೆಂಬ ಪಾರ್ಷದರ ದಾನ (ಶಲ್ಯ 45/32). ಶಂಬರಾಸುರನಿಗೆ ಬ್ರಾಹ್ಮಣರ ಮಹಿಮೆಯ ವರ್ಣನೆ (ಅನು 36/13–17). ಈತ ಕಾರ್ತಿ ಕೇಯನಿಗೆ ಟಗರನ್ನು ಕೊಟ್ಟದ್ದು (ಅನು 86/ 23). ಅಜೀರ್ಣನಿವಾರಣೆಗಾಗಿ ಪಿತೃಗಳೂ, ದೇವತೆಗಳೂ ಬ್ರಹ್ಮನ ಶರಣಾಗತರಾಗುವಂತೆ ಈತ ಸಲಹೆ ನೀಡಿದುದು (ಅನು 92/6). ಪೂರ್ಣಿಮೆಯ ತಿಥಿಯಂದು ಚಂದ್ರೋದಯದ ಸಮಯದಲ್ಲಿ ತಾಮ್ರದ ಪಾತ್ರೆಯಲ್ಲಿ, ಮಧು ಮಿಶ್ರಿತ ಪಕ್ವಾನ್ನ ತೆಗೆದುಕೊಂಡು ಚಂದ್ರನಿಗೆ ಬಲಿ ಅರ್ಪಿಸುವವನ, ಆ ಬಲಿಯನ್ನು, ಸಾಧ್ಯರು, ರುದ್ರರು, ಆದಿತ್ಯರು, ವಿಶ್ವೇದೇವರು, ಅಶ್ವಿನೀ ಕುಮಾರರು, ಮರುದ್ಗಣಗಳು ಮತ್ತು ವಸುದೇವತೆಗಳು ಕೂಡ ಗ್ರಹಣ ಮಾಡುತ್ತಾರೆ. ಅದರಿಂದಾಗಿ ಚಂದ್ರ ಮತ್ತು ಸಮುದ್ರದ ವೃದ್ಧಿಯಾಗುತ್ತದೆ (ಅನು 134/3–6).

(2) ಈ ಸೋಮ ಅಥವಾ ಚಂದ್ರಮನು ಅಷ್ಟ ವಸುಗಳಲ್ಲಿ ಒಬ್ಬ. ಧರ್ಮನಪತ್ನಿ ಮನಸ್ವಿನಿಯ ಪುತ್ರ. ಈತನ ಮನೋಹರಾ ಎಂಬ ಪತ್ನಿಯಲ್ಲಿ ವರ್ಚಾ, ಶಿಶಿರ, ಪ್ರಾಣ ಮತ್ತು ರಮಣರೆಂಬ ನಾಲ್ಕು ಪುತ್ರರು ಹುಟ್ಟಿದರು (ಆದಿ). ಸೋಮನು ತನ್ನ ಪುತ್ರ ವರ್ಚಾನನ್ನು, ಕೆಲವು ಶರ್ತಗ ಳೊಂದಿಗೆ, ಕೇವಲ ಹದಿನಾರು ವರ್ಷಗಳ ಕಾಲ, ದೇವಕಾರ್ಯಗಳ ಸಿದ್ಧಿಯ ನಿಮಿತ್ತವಾಗಿ, ಭೂಮಿಗೆ ಕಳುಹಿಸಿದ್ದನು. ಆತನೇ 'ಅಭಿಮನ್ಯು' ಎಂಬ ಹೆಸರಿನಿಂದ ಅವತೀರ್ಣನಾಗಿದ್ದನು (ಆದಿ 67/13–124).

(3) ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯು ತ್ತಾರೆ (ಭೀಷ್ಮ 9/29).

**ಚನ್ದ್ರವತ್ಸ** – ಒಂದು ಕ್ಷತ್ರಿಯ ಕುಲ. ಅದು ಚಂದ್ರವತ್ಸನಿಂದ ಆರಂಭವಾಗಿತ್ತು. ಇದರಲ್ಲಿ 'ಧಾರಣ' ಎಂಬ ಹೆಸರಿನ 'ಕುಲಪಾಂಸುಲ' ರಾಜಕುಮಾರ ಹುಟ್ಟಿದ್ದನು (ಉದ್ಯೋಗ 74/16).

**ಚನ್ದ್ರವರ್ಮಾ** – ಕಾಂಬೋಜ ದೇಶದ ಒಬ್ಬ ರಾಜ. ಅವನು ಚಂದ್ರನಂತೆ ಸುಂದರನಾಗಿದ್ದನು. ಇವನು ಚಂದ್ರನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/31–32). ಧೃಷ್ಟದ್ಯುಮ್ನನಿಂದ ಈತನ ವಧೆ (ದ್ರೋಣ 32/65).

**ಚನ್ದ್ರವಿನಾಶನ** – ಒಬ್ಬ ದೊಡ್ಡ ಅಸುರ. ಅವನು ಭೂಮಿಯಲ್ಲಿ 'ಜಾನಕಿ' ಎಂಬ ಹೆಸರಿನಿಂದ ಪ್ರಸಿದ್ಧ ರಾಜನಾಗಿದ್ದನು (ಆದಿ 67/37–38).

**ಚನ್ದ್ರಸೀತಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/11).

**ಚನ್ದ್ರಸೇನ** –(1) ಒಬ್ಬ ರಾಜಕುಮಾರ. ಅವನು ಬಂಗಾಲದ ರಾಜಾ ಸಮುದ್ರಸೇನನ ಪುತ್ರ. ಅವನು ದ್ರೌಪದಿಯ ಸ್ವಯಂವರಕ್ಕೆ ಹೋಗಿದ್ದನು (ಆದಿ 185/11). ಈತ ತನ್ನ ತಂದೆಯೊಂದಿಗೇ ಭೀಮನಿಂದ ಪರಾಜಿತನಾದನು (ಸಭಾ 30/24). ಇವನು ಪಾಂಡವ ಸೇನೆಯ ಶ್ರೇಷ್ಠ ರಥಿ ಮತ್ತು ಯುಧಿಷ್ಠಿರನ ಸಹಾಯಕನಾಗಿದ್ದನು (ಉದ್ಯೋಗ 171/19). ಚಂದ್ರ ಸಮಾನವಾದ ಬಿಳಿ ಬಣ್ಣವುಳ್ಳ ಸಮುದ್ರದ ಕುದುರೆಗಳು ಇವನ ರಥಕ್ಕೆ ಹೂಡಲ್ಪಟ್ಟಿದ್ದವು (ದ್ರೋಣ 23/60). ಅಶ್ವತ್ಥಾಮನಿಂದ ಈತನ ವಧೆ (ದ್ರೋಣ 156/183).
(2) ಕೌರವ ಪಕ್ಷದ ಯೋಧ. ಶಲ್ಯನ ಚಕ್ರರಕ್ಷಕ. ಯುಧಿಷ್ಠಿರನಿಂದ ಈತನ ವಧೆ (ಶಲ್ಯ 12/52).

**ಚನ್ದ್ರಹನ್ತಾ** – ಒಬ್ಬ ದೈತ್ಯ. ಅವನು ರಾಜರ್ಷಿ ಶುನಕನ ರೂಪದಲ್ಲಿ ಈ ಭೂಮಿಯಲ್ಲಿ ಜನ್ಮವೆತ್ತಿದ್ದನು (ಆದಿ 67/37–38).

**ಚನ್ದ್ರಹರ್ತಾ** – ದಕ್ಷಕನ್ಯೆ ಸಿಂಹಿಕೆಯ ಮಗ. ತಂದೆಯ ಹೆಸರು ಕಶ್ಯಪ (ಆದಿ 65/31).

**ಚನ್ದ್ರಾಶ್ವ** – ಇಕ್ಷ್ವಾಕುವಂಶದ ಮಹಾರಾಜ ಕುವಲಾಶ್ವನ ಮಗ. ಈತ ದುಂಧುವಿನ ಕ್ರೋಧಾಗ್ನಿಯಲ್ಲಿ ದಗ್ಧನಾಗದೆ ಬದುಕಿದ್ದನು (ವನ 204 /40–42).

**ಚನ್ದ್ರೋದಯ** – ವಿರಾಟ ರಾಜನ ಒಬ್ಬ ಸಹೋದರ (ದ್ರೋಣ 1158/42).

**ಚಪಲ** – ಒಬ್ಬ ಪ್ರಾಚೀನ ರಾಜ (ಆದಿ 1/238).

**ಚಮಸೋದ್ಭೇದ** – ಸುರಾಷ್ಟ್ರ ದೇಶದ ವಿನಶನ ತೀರ್ಥದ ಅಂತರ್ಗತವಾದ ಒಂದು ತೀರ್ಥ. ಅಲ್ಲಿ ಅದೃಶ್ಯವಾದ ಸರಸ್ವತಿಯ ದರ್ಶನವಾಗುತ್ತದೆ. ಇಲ್ಲಿ ಸ್ನಾನ ಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲಸಿಗುತ್ತದೆ (ವನ 82/112; 88/20; ಶಲ್ಯ 35/87).

**ಚಮೂ** – ಸೈನ್ಯಗಣನೆಗಿರುವ ಒಂದು ಪಾರಿಭಾಷಿಕ ಶಬ್ದ. ಮೂರು ಪೃತನೆಗೆ ಒಂದು ಚಮೂ ಆಗುತ್ತದೆ (ಆದಿ 2/21).

**ಚಮೂಹರ** – ಒಬ್ಬ ವಿಶ್ವೇದೇವ (ಅನು 91/35).

**ಚಮ್ಪಕಾರಣ್ಯ** (ಚಂಪಾರನ್) – ಒಂದು ತೀರ್ಥ. ಅಲ್ಲಿ ಒಂದು ರಾತ್ರಿ ನಿವಾಸಮಾಡಿದರೆ ಸಹಸ್ರ ಗೋದಾನದ ಫಲ ದೊರಕುತ್ತದೆ (ವನ 84/133).

**ಚಮ್ಪಾ** – ಭಾಗೀರಥಿ ತಟದ ಮೇಲೆ ಇರುವ ಒಂದು ಪ್ರಾಚೀನ ನಗರ. ಇಲ್ಲಿ ಭಾಗೀರಥಿಯಲ್ಲಿ ತರ್ಪಣ ನೀಡುವುದು ಮಹತ್ತರವಾದುದು (ವನ 85/14–15). ಅಲ್ಲಿ ತ್ರೇತಾಯುಗದಲ್ಲಿ ರಾಜಾ ಲೋಮಪಾದನು ವಾಸವಾಗಿದ್ದನು (ವನ 113/ 15). ದ್ವಾಪರದಲ್ಲಿ ಇಲ್ಲಿ ಸೂತನಾದ ಅಧಿರಥನ ರಾಜಧಾನಿ ಇತ್ತು. ಇಲ್ಲಿಯೇ ರಾಧೆಗೆ ಗಂಗೆಯ ಜಲದಲ್ಲಿ ಪೆಟ್ಟಿಗೆ ಸಿಕ್ಕಿತ್ತು. ಅದರಲ್ಲಿ ಶಿಶು 'ಕರ್ಣ' ಮುಚ್ಚಿಡಲ್ಪಟ್ಟಿದ್ದನು (ವನ 308/26 ರಿಂದ 309/5). ಇದರ ಮೇಲೆ ಕರ್ಣ ಅಧಿಕಾರ ಮಾಡುತ್ತಾ ಪಾಲಿಸುತ್ತಿದ್ದನು (ಶಾಂತಿ 5/7). ವಿಪುಲನು ಚಂಪಾನಗರಿಗೆ ಹೋದುದು (ಅನು 42/16).

**ಚರ್ಮಮಂಡಲ** – ಒಂದು ಭಾರತೀಯ ಜನಪದ (ಭೀಷ್ಮ 9/47).

**ಚರ್ಮಣ್ವತಿ** – ಒಂದು ನದಿ. ಈಗ ಅದನ್ನು ಚಂಬಲ್ ಎನ್ನುತ್ತಾರೆ. ಈಕೆ ವರುಣ ಸಭೆಯಲ್ಲಿ ಉಪಸ್ಥಿತಳಾಗಿರುತ್ತಾಳೆ (ಸಭಾ 9/21). ಇದರ ದಡದಲ್ಲಿ ಸಹದೇವನು ಜಂಭಕನ ಪುತ್ರನನ್ನು ಪರಾಜಯಗೊಳಿಸಿದ್ದನು (ಸಭಾ 31/7). ಧರ್ಮಣ್ವತಿ ನದಿಯಲ್ಲಿ ಸ್ನಾನಮಾಡುವುದರಿಂದ, ರಾಜಾ ರಂತೀದೇವನ ಮೂಲಕ ಅನುಮೋದಿಸಲ್ಪಟ್ಟ 'ಅಗ್ನಿಷ್ಟೋಮ' ಯಜ್ಞದ ಫಲಸಿಗುತ್ತದೆ (ವನ 82/54). ಅಗ್ನಿಯ ಉತ್ಪತ್ತಿಗೆ ಸ್ಥಾನಭೂತವಾದ ನದಿಗಳಲ್ಲಿ ಇದೂ ಗಣಿಸಲ್ಪಡುತ್ತದೆ (ವನ 222/23).

**ಚರ್ಮವಾನ್** – ಸುಬಲನ ಒಬ್ಬ ಮಗ. ಶಕುನಿಯ ಸೋದರ ಇರಾವಂತನಿಂದ ಈತನ ವಧೆ (ಭೀಷ್ಮ 90/27–46).

**ಚಾಕ್ಷುಷೀ** – ಒಂದು ವಿಧದ ವಿದ್ಯೆ. ಅದನ್ನು ಮನುವು ಸೋಮನಿಗೂ, ಸೋಮನು ವಿಶ್ವಾವಸುವಿಗೂ, ವಿಶ್ವಾವಸುವು ಚಿತ್ರರಥನಿಗೂ, ಅವನು ಅರ್ಜುನನಿಗೂ ಕೊಟ್ಟನು. ಮೂರೂ ಲೋಕಗಳಲ್ಲಿ ಯಾವ ವಸ್ತುಗಳೇ ಇರಲಿ; ಅವುಗಳಲ್ಲಿ ಯಾವ ವಸ್ತುವನ್ನಾದರೂ, ಕಣ್ಣಿನಿಂದ ನೋಡುವ ಇಚ್ಛೆಯಾದರೆ, ಅದನ್ನು ಈ ವಿದ್ಯೆಯ ಪ್ರಭಾವ

ದಿಂದ ಯಾರೂ ನೋಡಬಹುದಾಗಿದೆ. ಮತ್ತು ಯಾವ ರೂಪದಲ್ಲಿ ನೋಡಲು ಬಯಸುವನೋ, ಅದೇ ರೂಪದಲ್ಲಿ ನೋಡಲು ಸಾಧ್ಯವಿದೆ (ಆದಿ 169/43–45).

**ಚಾಣೂರ** –(1) ಒಬ್ಬ ಕ್ಷತ್ರಿಯ ರಾಜ. ಈತ ಮಯನಿರ್ಮಿತ ಸಭೆಯಲ್ಲಿ ಯುಧಿಷ್ಠಿರನ ಸೇವೆಗೆ ಸಿದ್ಧನಾಗಿರುತ್ತಿದ್ದನು (ಸಭಾ 4/26).

(2). ಆಂಧ್ರದೇಶದ ಒಬ್ಬ ಮಲ್ಲ (ಜಟ್ಟಿ). ಅವನು ಒಬ್ಬ ಮಹಾ ಅಸುರನಾಗಿದ್ದನು. ಈತ ಕಂಸನ ಆಸ್ಥಾನದಲ್ಲಿರುತ್ತಿದ್ದನು. ಶ್ರೀಕೃಷ್ಣನು ಇವನ ವಧೆ ಮಾಡಿದನು (ಸಭಾ 38; ಉದ್ಯೋಗ 130/47).

**ಚಾತುರ್ಮಾಸ್ಯ** – ಒಂದು ವ್ರತ. ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಪ್ರಯತ್ನಪೂರ್ವಕ ಅದನ್ನು ಆಚರಿಸುವುದು ಆವಶ್ಯಕವೆಂದು ನಂಬಲಾಗಿದೆ. ವೀರಪಾಂಡವರು ಗಯೆಯಲ್ಲಿ ಚಾತುರ್ಮಾಸ್ಯ ವ್ರತ ಸ್ವೀಕರಿಸಿ, ವೇದಾದಿ ಶಾಸ್ತ್ರಗಳ ಸ್ವಾಧ್ಯಾಯದ ಮೂಲಕ ಭಗವಂತನ ಆರಾಧನೆ ಮಾಡಿದರು (ವನ 95/13–14).

**ಚಾತುರ್ವರ್ಣ್ಯ** – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಈ ನಾಲ್ಕು ವರ್ಣಗಳನ್ನು ಚಾತುರ್ವರ್ಣ್ಯ ವೆನ್ನುತ್ತಾರೆ. ಸಾಕ್ಷಾತ್ ಭಗವಂತನು ಗುಣ ಕರ್ಮವಿಭಾಗ ಪೂರ್ವಕ ಚಾತುರ್ವರ್ಣ್ಯದ ಸೃಷ್ಟಿಮಾಡಿದ್ದಾನೆ (ಭೀಷ್ಮ 28/13). (ಶಾಂತಿ 209/30–33).

**ಚಾನ್ದ್ರಮಸೀ** – ಬೃಹಸ್ಪತಿಯ ಕೀರ್ತಿಶಾಲಿ ಪತ್ನಿ ತಾರೆ. ಅವಳು ಒಮ್ಮೆ ಚಂದ್ರನ ಸಂಪರ್ಕಕ್ಕೆ ಬಂದ ಕಾರಣ 'ಚಾಂದ್ರಮಸೀ' ಎಂದು ಕರೆಯಲ್ಪಡು ತ್ತಿದ್ದಳು. ಇವಳು ಆರು ಮಂದಿ ಅಗ್ನಿಸ್ವರೂಪ ಪುತ್ರರಿಗೂ, ಒಬ್ಬ 'ಸ್ವಾಹಾ' ಎಂಬ ಮಗಳಿಗೂ ಜನ್ಮವಿತ್ತಿದ್ದಳು (ವನ 219/1).

**ಚಾನ್ದ್ರವ್ರತ** – ರೂಪಸೌಂದರ್ಯ, ಸೌಭಾಗ್ಯ ಮತ್ತು ಲೋಕಪ್ರಿಯತೆಯನ್ನು ಪ್ರಾಪ್ತಿಸಿಕೊಡುವ ಒಂದು ವ್ರತ. ಇದು ಮಾರ್ಗಶೀರ್ಷ ತಿಂಗಳಿನ ಶುದ್ಧ ಪ್ರತಿಪದೆಯಂದು, ಮೂಲಾನಕ್ಷತ್ರದೊಂದಿಗೆ ಚಂದ್ರನ ಯೋಗವಿದ್ದರೆ ಆರಂಭಿಸಲ್ಪಡುತ್ತದೆ. ಇದರ ವಿಶೇಷ ವಿಧಾನ (ಅನು 110).

**ಚಾಂಪೇಯ** – ವಿಶ್ವಾಮಿತ್ರನ ಬ್ರಹ್ಮವಿದ ಪುತ್ರರಲ್ಲಿ ಒಬ್ಬ (ಅನು 4/58).

**ಚಾರು** (ಚಾರುಚಿತ್ರ). – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/95; 116/4). ಭೀಮನ ಮೂಲಕ ವಧೆ (ದ್ರೋಣ 136/20–22).

**ಚಾರುಧೇಷ್ಣ** – ಶ್ರೀಕೃಷ್ಣನಿಂದ ರುಕ್ಮಿಣಿಯ ಗರ್ಭದಲ್ಲಿ ಪ್ರಕಟಗೊಂಡವನು (ಅನು 14/29). ದ್ರೌಪದಿಯ ಸ್ವಯಂವರಕ್ಕೆ ಈತನ ಆಗಮನ (ಆದಿ 185/17). ಈತನಿಂದ ವಿವಿಂಧ್ಯನ ವಧೆ (ವನ 16/26).

**ಚಾರುನೇತ್ರಾ** – ಕುಬೇರನ ಸಭೆಯಲ್ಲಿರುತ್ತಾ ಧನದನ ಸೇವೆ ಮಾಡುವ ಒಬ್ಬ ಅಪ್ಸರೆ (ಸಭಾ 10/10).

**ಚಾರುಮತ್ಸ್ಯ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/59).

**ಚಾರುಯಶಾ** – ಶ್ರೀಕೃಷ್ಣ ಮತ್ತು ರುಕ್ಮಿಣಿಯರ ಪುತ್ರ (ಅನು 14/33–34).

**ಚಾರುವಕ್ತ್ರ** – ಸ್ಕಂದನ ಸೈನಿಕ ಅಥವಾ ಪಾರ್ಷದ. ಈತ ಬ್ರಾಹ್ಮಣಪ್ರೇಮಿಯಾಗಿದ್ದನು (ಶಲ್ಯ 45/71).

**ಚಾರುವೇಷ** – ಶ್ರೀಕೃಷ್ಣ ಮತ್ತು ರುಕ್ಮಿಣಿಯರ ಮಗ (ಅನು 14/33–34).

**ಚಾರುಶೀರ್ಷ** – ಆಲಂಬ ಗೋತ್ರದ ಒಬ್ಬ ಋಷಿ. ಈತ ಇಂದ್ರನ ಪ್ರಿಯಸಖನಾಗಿದ್ದನು. ಶಿವಮಹಿಮೆಯ ಕುರಿತು ಯುಧಿಷ್ಠಿರನಿಗೆ ಈತ ತನ್ನ ಅನುಭವ ತಿಳಿಸಿದುದು (ಅನು 18/5–7).

**ಚಾರುಶ್ರವಾ** – ಶ್ರೀಕೃಷ್ಣ ಮತ್ತು ರುಕ್ಮಿಣಿಯರ ಪುತ್ರ (ಅನು 14/33–34).

**ಚಾರ್ವಾಕ** – ದುರ್ಯೋಧನನ ಮಿತ್ರನಾದ ಒಬ್ಬ ರಾಕ್ಷಸ. ಈತ ಯುಧಿಷ್ಠಿರನು ನಗರ ಪ್ರವೇಶ ಮಾಡುವ ಸಮಯದಲ್ಲಿ, ಸನ್ಯಾಸಿ ವೇಷದಲ್ಲಿ ಬಂದು, ಅವನ ಕುರಿತು ದುರ್ವಚನಗಳನ್ನಾ ಡಿದ್ದನು (ಶಾಂತಿ 38/22–27). ಬದರಿಕಾಶ್ರಮ ದಲ್ಲಿ ಈತನ ತಪೋವರ್ಣನೆ (ಶಾಂತಿ 39/13). ಬ್ರಹ್ಮನೊಡನೆ ಈತ ಯಾವುದೇ ಪ್ರಾಣಿಯಿಂದ ತನಗೆ ಭಯವಾಗದಂಥ ವರ ಬೇಡಿದುದು ಮತ್ತು ಬ್ರಹ್ಮನು ಒಂದು ನಿಬಂಧನೆಯೊಡನೆ ವರನೀಡಿದುದು (ಶಾಂತಿ 39/4–5). ಬ್ರಾಹ್ಮಣ ರಿಂದ ಈತನ ವಧೆ (ಶಾಂತಿ 38/35).

**ಚಾಷವಕ್ತ್ರ** – ಸ್ಕಂದನ ಒಬ್ಬ ಸೈನಿಕ ಅಥವಾ ಪಾರ್ಷದ. ಈತ ಬ್ರಾಹ್ಮಣಪ್ರಿಯ (ಶಲ್ಯ 45/76).

**ಚಿಕುರ** – ನಾಗರಾಜ ಆರ್ಯಕನ ಪುತ್ರ ಮತ್ತು ಸುಮುಖನ ತಂದೆ. ಈತನನ್ನು ಗರುಡನು ತನ್ನ

ಆಹಾರವಾಗಿ ಮಾಡಿಕೊಂಡಿದ್ದನು (ಉದ್ಯೋಗ 103/24).

**ಚಿತ್ರ** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/95). ಭೀಮಸೇನನಿಂದ ಈತನ ವಧೆ (ದ್ರೋಣ 136/20–22).

(2) ಒಬ್ಬ ಗಜರಾಜ. ಈತನೊಂದಿಗೆ ಸ್ಕಂದನು ಶೈಶವ ಕಾಲದಲ್ಲಿ ಆಟವಾಡಿದ್ದನು (ವನ 225/23).

(3) ಕೌರವಪಕ್ಷದ ಒಬ್ಬ ಯೋಧ. ಪ್ರತಿವಿಂಧ್ಯನಿಂದ ಈತನ ವಧೆ (ಕರ್ಣ 14/32–33).

(4) ಚೇದಿ ದೇಶದ ಪಾಂಡವ ಪಕ್ಷದ ಯೋಧ. ಕರ್ಣನಿಂದ ಈತನ ವಧೆ (ಕರ್ಣ 56/49).

**ಚಿತ್ರಕ** – (ನಾಮಾಂತರ ಚಿತ್ರ ಮತ್ತು ಚಿತ್ರಬಾಣ) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/105). ಚಿತ್ರನೆಂಬ ಹೆಸರಿನಲ್ಲಿ ಭೀಮನಿಂದ ಈತನ ವಧೆ (ದ್ರೋಣ 137/30).

**ಚಿತ್ರಕುಂಡಲ** (ದೀರ್ಘಲೋಚನ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/6). ಭೀಮಸೇನನಿಂದ ಈತನ ವಧೆ (ಭೀಷ್ಮ 96/27). (ಚಿತ್ರಕುಂಡಲನ ಸ್ಥಳದಲ್ಲಿ ದೀರ್ಘಲೋಚನನೆಂಬ ಪಾಠಭೇದ ಸಿಗುತ್ತದೆ.).

**ಚಿತ್ರಕೂಟ** – ಸರ್ವಪಾಪನಾಶಿನಿ ಮಂದಾಕಿನಿಯ ತಟದಲ್ಲಿ ಇರುವ ಒಂದು ಶ್ರೇಷ್ಠ ಪರ್ವತ. ಅಲ್ಲಿ ಮಂದಾಕಿನಿಯಲ್ಲಿ ಸ್ನಾನ ಮತ್ತು ದೇವಪಿತೃಗಳ ಪೂಜೆ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲಸಿಗುತ್ತದೆ (ವನ 85/58). ವನವಾಸದ ಸಮಯದಲ್ಲಿ ಶ್ರೀರಾಮನು ಚಿತ್ರಕೂಟ ಪರ್ವತದ ಮೇಲೆ ವಾಸಮಾಡಿದ್ದನು (ವನ 277/38). ಚಿತ್ರಕೂಟ ಪರ್ವತದ ಮೇಲೆ ಮಂದಾಕಿನಿ ಜಲದಲ್ಲಿ ಸ್ನಾನ ಮಾಡಿ ಉಪವಾಸ ಮಾಡುವ ಪುರುಷನು ರಾಜ್ಯಲಕ್ಷ್ಮಿಯಿಂದ ಸೇವ್ಯನಾಗುತ್ತಾನೆ (ಅನು 25/29). (ಈ ಸ್ಥಾನವು ಉತ್ತರಪ್ರದೇಶದ ಬಾಂದಾ ಜಿಲ್ಲೆಯಲ್ಲಿದೆ.).

**ಚಿತ್ರಕೇತು** – (1) ಗರುಡನ ಪ್ರಮುಖ ಮಕ್ಕಳಲ್ಲಿ ಒಬ್ಬ (ಉದ್ಯೋಗ 101/12).

(2) ಪಾಂಡವ ಪಕ್ಷದ ಒಬ್ಬ ಯೋಧ. ಪಾಂಚಾಲ ರಾಜಕುಮಾರ (ಭೀಷ್ಮ 95/41).

**ಚಿತ್ರಗುಪ್ತ** – ಧರ್ಮರಾಜನ ಮಂತ್ರಿ. ಈತನಿಂದ ಧರ್ಮರಹಸ್ಯದ ವರ್ಣನೆ (ಅನು 130/18–33).

**ಚಿತ್ರಚಾಪ** – (ಚಿತ್ರ ಶರಾಸನ ಅಥವಾ ಶರಾಸನ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. (ಆದಿ 67/98; 116/6).

**ಚಿತ್ರದೇವ** – ಸ್ಕಂದನ ಸೈನಿಕ ಅಥವಾ ಪಾರ್ಷದ. ಅವನು ಬ್ರಾಹ್ಮಣಪ್ರೇಮಿಯಾಗಿದ್ದನು (ಶಲ್ಯ 45/71).

**ಚಿತ್ರಧರ್ಮಾ** – ಭೂಮಂಡಲದ ಒಬ್ಬ ರಾಜ. ವಿರೂಪಾಕ್ಷನೆಂಬ ದೈತ್ಯನೇ ಈ ರೂಪದಿಂದ ಹುಟ್ಟಿದ್ದನು (ಆದಿ 67/22–23). ಪಾಂಡವರ ಕಡೆಯಿಂದ ಈತನಿಗೆ ಯುದ್ಧದ ಆಹ್ವಾನ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/13).

**ಚಿತ್ರಪುಷ್ಪ** – ವಿಚಿತ್ರ ಪುಷ್ಪಗಳಿಂದ ತುಂಬಿದ ಒಂದು ವನ. ಅದು ದ್ವಾರಕೆಯ ಪಶ್ಚಿಮದ ಸುಕಕ್ಷವೆಂಬ ಬೆಳ್ಳಿಯ ಬೆಟ್ಟದ ಮೇಲೆ ಶೋಭಾಯಮಾನವಾಗಿತ್ತು (ಸಭಾ 38).

**ಚಿತ್ರಬರ್ಹ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಂದು (ಉದ್ಯೋಗ 101).

**ಚಿತ್ರಬಾಣ** – (ನಾಮಾಂತರ – ಚಿತ್ರ ಅಥವಾ ಚಿತ್ರಕ) ಧೃತರಾಷ್ಟ್ರನ ಒಂದು ನೂರು ಪುತ್ರರಲ್ಲಿ ಒಬ್ಬ (ಆದಿ 116/4). ಭೀಮಸೇನನಿಂದ ವಧೆ (ದ್ರೋಣ 137/29).

**ಚಿತ್ರಬಾಹು** – (ಚಿತ್ರಾಯುಧ). – ಧೃತರಾಷ್ಟ್ರನ ಒಂದು ನೂರು ಮಕ್ಕಳಲ್ಲಿ ಒಬ್ಬ (ಆದಿ 67/97; 116/8). ಚಿತ್ರಾಯುಧನೆಂಬ ಹೆಸರಿನಲ್ಲಿ ಭೀಮಸೇನನಿಂದ ಈತನ ವಧೆ (ದ್ರೋಣ 136/20–22).

**ಚಿತ್ರರಥ** – (1) ಒಬ್ಬ ದೇವಗಂಧರ್ವ. ಅವನ ತಂದೆ ಕಶ್ಯಪ. ತಾಯಿ ಮುನಿ (ಆದಿ 65/43). ಈತ ಅರ್ಜುನನ ಜನ್ಮೋತ್ಸವಕ್ಕೆ ಹೋಗಿದ್ದನು (ಆದಿ 122/56). ಇದೇ ಗಂಧರ್ವರಾಜನು ಅಂಗಾರಪರ್ಣನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು (ಆದಿ 169/5). ಪ್ರದೋಷ ಕಾಲದಲ್ಲಿ ಗಂಗೆಯ ನೀರಿನಲ್ಲಿ, ತನ್ನ ಸ್ತ್ರೀಯರ ಸಂಗಡ ಕ್ರೀಡಿಸುತ್ತಿದ್ದಾಗ, ಪಾಂಡವರು ಅಲ್ಲಿಗೆ ಬಂದುದರಿಂದ, ಈತ ಅವರ ಮೇಲೆ ಕೋಪಗೊಂಡದ್ದು ಮತ್ತು ನಿಂದಿಸಿದುದು (ಆದಿ 169/5–15). ಗಂಧರ್ವನಿಗೆ ಅರ್ಜುನನಿಂದ ಮುಖ ಮುರಿಯುವ ಉತ್ತರ (ಆದಿ 169/16–24). ಅರ್ಜುನನೊಂದಿಗೆ ಈತನ ಯುದ್ಧ (ಆದಿ

169/25). ಅರ್ಜುನನ ಆಗ್ನೇಯಾಸ್ತ್ರದಿಂದ ಇವನ ರಥ ದಗ್ಧವಾದುದು ಮತ್ತು ಈತನ ಮೂರ್ಛೆ. ಇವನನ್ನು ಅರ್ಜುನನು ಧರ್ಮರಾಯನ ಬಳಿಗೆ ಎಳೆದು ತಂದದ್ದು (ಆದಿ 169/31–32). ಇವನ ಜೀವರಕ್ಷಣೆ ಮಾಡುವಂತೆ ಯುಧಿಷ್ಠಿರನೊಡನೆ ಕುಂಭೀನಸಿಯ ಪ್ರಾರ್ಥನೆ (ಆದಿ 169/35). ಅರ್ಜುನನಿಂದ ಇವನಿಗೆ ಜೀವದಾನ (ಆದಿ 169/37). ಈತನ ಹೆಸರು ಚಿತ್ರರಥನೆಂದಾಗಲು ಕಾರಣ. ಅರ್ಜುನನಿಂದಾಗಿ ಇವನಿಗೆ ದಗ್ಧರಥನೆಂದು ಹೆಸರಾದುದು (ಆದಿ 169/40). ವಿಶ್ವಾವಸುವಿನಿಂದ ತನಗೆ ಚಾಕ್ಷುಷೀ ವಿದ್ಯೆ ಪ್ರಾಪ್ತವಾದ ವರ್ಣನೆಯನ್ನು ಈತ ಮಾಡಿದುದು ಮತ್ತು ಚಾಕ್ಷುಷೀ ವಿದ್ಯೆಯ ಮಹತ್ತ್ವದ ವರ್ಣನೆ (ಆದಿ 169/43–46). ಇವನಿಂದ ಪಾಂಡವರಿಗೆ ಗಂಧರ್ವದೇಶದ ದಿವ್ಯಾಶ್ವಗಳ ದಾನ ಮತ್ತು ಅವುಗಳ ಪ್ರಶಂಸೆ (ಆದಿ 169/48–54). ಅರ್ಜುನನಿಗೆ ಚಾಕ್ಷುಷೀ ವಿದ್ಯಾಪ್ರದಾನ ಮಾಡಿದುದು (ಆದಿ 169/56). ಅರ್ಜುನನೊಂದಿಗೆ ಇವನ ಸ್ನೇಹ (ಆದಿ 169/58). ಪಾಂಡವರ ಮೇಲೆ ತನ್ನ ಆಕ್ರಮಣ ಮತ್ತು ಪರಾಜಯದ ಕಾರಣವನ್ನು ಈತ ಹೇಳಿದುದು (ಆದಿ 169/60–72). ಯಾರಾದರೂ ಕ್ಷೇತ್ರೀಯ ಬ್ರಾಹ್ಮಣನನ್ನು ಪುರೋಹಿತನಾಗಿ ವರಣಮಾಡಲು ಅರ್ಜುನನಿಗೆ ಈತನಿಂದ ಪ್ರೇರಣೆ (ಆದಿ 169/73–80). ಅರ್ಜುನನಿಗೆ ಸಂವರಣ ಮತ್ತು ತಪತಿಯರ ಕಥೆಯನ್ನು ಹೇಳಿದುದು (ಆದಿ 170 ರಿಂದ 172). ವಶಿಷ್ಠನೊಡನೆ ವಿಶ್ವಾಮಿತ್ರನ ವೈರದ ಕಾರಣ ತಿಳಿಸಿ, ಈತ ವಶಿಷ್ಠನ ಅದ್ಭುತ ಕ್ಷಮಾಬಲವನ್ನು ವರ್ಣಿಸಿದುದು (ಆದಿ 173ರಿಂದ 174). ಶಕ್ತಿಯ ಶಾಪದಿಂದ ರಾಕ್ಷಸಸ್ವಭಾವ ಪಡೆದ ರಾಜಾ ಕಲ್ಮಾಷಪಾದನು ವಿಶ್ವಾಮಿತ್ರನ ಪ್ರೇರಣೆಯಿಂದ ವಶಿಷ್ಠನ ಪುತ್ರರನ್ನು ಭಕ್ಷಿಸಿದ ಮತ್ತು ವಶಿಷ್ಠನ ಶೋಕದ ಕಥೆಯನ್ನು ಈತ ತಿಳಿಸಿದುದು (ಆದಿ 175). ಕಲ್ಮಾಷಪಾದನ ಉದ್ಧಾರ ಮತ್ತು ವಶಿಷ್ಠರಿಂದ ಅವನಿಗೆ ಅಶ್ಮಕನೆಂಬ ಮಗನು ಪ್ರಾಪ್ತವಾದ ವರ್ಣನೆ (ಆದಿ 176). ಶಕ್ತಿಪುತ್ರ ಪರಾಶರನ ಜನ್ಮ ಮತ್ತು ತಂದೆಯ ಮೃತ್ಯುವಿನ ವಿಷಯ ತಿಳಿದು ಕುಪಿತನಾದ ಪರಾಶರನನ್ನು ಶಾಂತಗೊಳಿಸಲು ವಶಿಷ್ಠರು ಔರ್ವೋಪಾಖ್ಯಾನವನ್ನು ತಿಳಿಸಿದ ಕಥೆಯ ವರ್ಣನೆ (ಆದಿ 177 ರಿಂದ 179). ಪರಾಶರನಿಂದ ರಾಕ್ಷಸಸತ್ರದ ಆರಂಭ ಮತ್ತು ಸಮಾಪ್ತಿ ಮತ್ತು ಕಲ್ಮಾಷಪಾದನಿಗೆ ಅಂಗೀರಸಿ ಎಂಬ ಬ್ರಾಹ್ಮಣಿಯ ಶಾಪಬಂದ ಕಥೆಯನ್ನು ಹೇಳಿದುದು (ಆದಿ 180 ರಿಂದ 181). ಅರ್ಜುನನು ಕೇಳಿದಾಗ ಧೌಮ್ಯನನ್ನು ಪುರೋಹಿತನಾಗಿ ಮಾಡಿಕೊಳ್ಳಲು ಈತನ ಸಲಹೆ (ಆದಿ 182/1–2). ಚಿತ್ರರಥನು ಅರ್ಜುನನಿಂದ ಆಗ್ನೇಯಾಸ್ತ್ರ ಸ್ವೀಕರಿಸಿದುದು (ಆದಿ 182/3). ಈತ ಕುಬೇರನ ಸಭೆಯಲ್ಲಿದ್ದುಕೊಂಡು, ಧನಾಧ್ಯಕ್ಷನ ಉಪಾಸನೆ ಮಾಡುತ್ತಾನೆ (ಸಭಾ 10/26). ಇವನು ಯುಧಿಷ್ಠಿರನಿಗೆ ನಾನ್ನೂರು ದಿವ್ಯ ಅಶ್ವಗಳನ್ನು ಕೊಟ್ಟಿದ್ದನು. ಅವು ವಾಯುವಿನಂತೆ ವೇಗವುಳ್ಳವುಗಳಾಗಿದ್ದವು (ಸಭಾ 52/23). ಗಂಧರ್ವರಿಂದ ಪೃಥ್ವಿಯು ಕರೆಯಲ್ಪಟ್ಟಾಗ (ಹಾಲು ಹಿಂಡಿದಾಗ). ಈತ ಕರುವಾಗಿದ್ದನು (ದ್ರೋಣ 69/25). ಮಹಾಭಾರತದಲ್ಲಿ ಬಂದಿರುವ ಚಿತ್ರರಥನ ಹೆಸರುಗಳು– ಅಂಗಾರಪರ್ಣ, ದಗ್ಧರಥ, ಗಂಧರ್ವ ಮತ್ತು ಗಂಧರ್ವರಾಜ ಇತ್ಯಾದಿ.

(2) ಮಾರ್ತಿಕಾವತ ದೇಶದ ರಾಜ. ಈತ ತನ್ನ ಪತ್ನಿಯೊಡನೆ ಮಾಡಿದ ಜಲಕ್ರೀಡೆಯನ್ನು ರೇಣುಕೆ ನೋಡಿದ್ದಳು (ವನ 116/7).

(3) ಒಬ್ಬ ಪಾಂಚಾಲ ರಾಜಕುಮಾರ. ದ್ರೋಣಾಚಾರ್ಯನೊಂದಿಗೆ ಈತನ ಯುದ್ಧ (ದ್ರೋಣ 122/43–49).

(4) ಅಂಗದೇಶದ ಒಬ್ಬ ರಾಜ. ಈತ ದೇವಶರ್ಮನ ಪತ್ನಿ ರುಚಿಯ ಸಹೋದರಿ ಪ್ರಭಾವತಿ ಎಂಬವಳ ಪತಿ (ಅನು 42/8).

(5) ಯದುವಂಶದ ಉಷಂಗನ ಮಗ ಮತ್ತು ಶೂರನ ತಂದೆ (ಅನು 147/29).

**ಚಿತ್ರರಥಾ** – ಒಂದು ಪ್ರಮುಖ ನದಿ. ಭಾರತದ ಪ್ರಜೆಗಳು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/34).

**ಚಿತ್ರಲೇಖಾ** – ಒಬ್ಬ ಅಪ್ಸರೆ. ಅರ್ಜುನನ ಸ್ವಾಗತ ಸಮಾರಂಭದಲ್ಲಿ ಈಕೆ ಇಂದ್ರಸಭೆಯಲ್ಲಿ ನೃತ್ಯ ಮಾಡಿದ್ದಳು (ವನ 9/34).

**ಚಿತ್ರವರ್ಮಾ** – (1) ಧೃತರಾಷ್ಟ್ರನ ನೂರು

ಮಂದಿ ಮಕ್ಕಳಲ್ಲಿ ಒಬ್ಬ (ಆದಿ 67/97). ಭೀಮಸೇನನಿಂದ ಈತನ ವಧೆ (ದ್ರೋಣ 136/20–22).

(2) ಒಬ್ಬ ಪಾಂಚಾಲ ರಾಜಕುಮಾರ. ಇವನನ್ನು ಯುದ್ಧಕ್ಕೆ ಆಹ್ವಾನಿಸಲು ರಾಜಾ ದ್ರುಪದನು ಪ್ರೇರಿಸಿದ್ದನು (ಉದ್ಯೋಗ 4/13). ಚಿತ್ರಕೇತು, ಸುಧನ್ವಾ, ಚಿತ್ರರಥ ಮತ್ತು ವೀರಕೇತು ಎಂಬ ನಾಲ್ವರು ಇವನ ಸಹೋದರರಾಗಿದ್ದರು. ಅಣ್ಣನಾದ ವೀರಕೇತು ಕೊಲ್ಲಲ್ಪಟ್ಟಾಗ ಉಳಿದ ಎಲ್ಲಾ ಸಹೋದರರು ದ್ರೋಣಾಚಾರ್ಯನ ಮೇಲೆ ಆಕ್ರಮಣ ಮಾಡಿದರು ಮತ್ತು ಆತನಿಂದ ಕೊಲ್ಲಲ್ಪಟ್ಟರು (ದ್ರೋಣ 122/43–49). ಈತ ಸುಚಿತ್ರನ ಮಗ (ಕರ್ಣ 6/27–28).

**ಚಿತ್ರವಾಹನ** – ಮಣಿಪುರದ ರಾಜ. ಚಿತ್ರಾಂಗದೆಯ ತಂದೆ (ಆದಿ 214/15). ಪುತ್ರಿಕಾ ಧರ್ಮದ ಶರ್ತದೊಂದಿಗೆ ಈತ ಅರ್ಜುನನಿಗೆ ಕನ್ಯಾದಾನ ಮಾಡಿದುದು (ಆದಿ 214/25).

**ಚಿತ್ರವಾಹಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತದ ಜನತೆ ಕುಡಿಯುತ್ತದೆ (ಭೀಷ್ಮ 9/17).

**ಚಿತ್ರವೇಗಿಕ** – ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಸರ್ಪಸತ್ರದಲ್ಲಿ ದಗ್ಧನಾದ (ಆದಿ 57/18).

**ಚಿತ್ರಶರಾಸನ** (ಶರಾಸನ ಅಥವಾ ಚಿತ್ರಚಾಪ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/4). ಭೀಮಸೇನನ ಮೂಲಕ ಈತನ ವಧೆ (ದ್ರೋಣ 136/20–22).

**ಚಿತ್ರಶಿಖಂಡೀ** – ಪಾಂಚರಾತ್ರಶಾಸ್ತ್ರದ ರಚನಾಕರ್ತೃಗಳಾದ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಶಿಷ್ಠ – ಈ ಏಳು ಮಂದಿ ಋಷಿಗಳ ನಾಮ ಸಂಕೇತ (ಶಾಂತಿ 335/27).

**ಚಿತ್ರಶಿಲಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/30).

**ಚಿತ್ರಸೇನ** – (ಉಗ್ರಸೇನ). (1) ಧೃತರಾಷ್ಟ್ರನ ಹನ್ನೊಂದು ಮಂದಿ ಮಹಾರಥಿ ಪುತ್ರರಲ್ಲಿ ಒಬ್ಬ. ಈತ ದ್ರೌಪದಿಸ್ವಯಂವರಕ್ಕೆ ಹೋಗಿದ್ದನು (ಆದಿ 185/3). ಯುಧಿಷ್ಠಿರನೊಂದಿಗೆ ಜೂಜಾಡಲು ಸಿದ್ಧರಾದ ಜನರಲ್ಲಿ ಈತನೂ ಒಬ್ಬ (ಸಭಾ 58/13). ಚೇಕಿತಾನನೊಂದಿಗೆ ಈತನ ಯುದ್ಧ (ಭೀಷ್ಮ 110/8). ಭೀಮನೊಂದಿಗೆ ಯುದ್ಧ (ಭೀಷ್ಮ 113/2). ಸುಶರ್ಮನೊಂದಿಗೆ ಸಂಗ್ರಾಮ (ಭೀಷ್ಮ 116/27–29). ಭೀಮನೊಂದಿಗೆ ಯುದ್ಧ (ಭೀಷ್ಮ 96/31). ಸಾತ್ಯಕಿಯೊಂದಿಗೆ ಯುದ್ಧ (ದ್ರೋಣ 116/4). ಭೀಮಸೇನನಿಂದ ಕೊಲ್ಲಲ್ಪಟ್ಟದ್ದು (ದ್ರೋಣ 137/29–30). ಶತಾನೀಕನೊಂದಿಗೆ ಈತನ ಯುದ್ಧ ಮತ್ತು ಈತನ ಪರಾಜಯದ ವರ್ಣನೆ (ದ್ರೋಣ 168/1–12). (ಈ ಯುದ್ಧ ಚಿತ್ರಸೇನನ ಜೀವನ ಕಾಲದ್ದಾಗಿದೆ. ಅಧ್ಯಾಯ 137ರಲ್ಲಿ ಇವನ ವಧೆಯ ವರ್ಣನೆ ಬಂದಿದೆ. ಇದರ ಮೊದಲೇ ಈತ ಶತಾನೀಕನೊಂದಿಗೆ ಮಾಡಿದ ಯುದ್ಧದ ವರ್ಣನೆ ಅನಂತರ ಮಾಡಲ್ಪಟ್ಟದೆ.).

(2) ಪೂರು ವಂಶದ ರಾಜಾ ಅವೀಕ್ಷಿತನ ಮೊಮ್ಮಗ ಮತ್ತು ಪರೀಕ್ಷಿತನ ತೃತೀಯ ಪುತ್ರ (ಆದಿ 94/54).

(3) ಒಬ್ಬ ಗಂಧರ್ವ. ಈತ ಇಪ್ಪತ್ತೇಳು ಮಂದಿ ಸಹಾಯಕ ಗಂಧರ್ವರು ಮತ್ತು ಅಪ್ಸರೆಯರೊಂದಿಗೆ ಯುಧಿಷ್ಠಿರನ ಸಭೆಯಲ್ಲಿ ಉಪಸ್ಥಿತನಾಗಿದ್ದು, ಅವನ ಮನರಂಜನೆ ಮಾಡುತ್ತಿದ್ದರು (ಸಭಾ 4/37). ಈತ ಕುಬೇರನ ಸಭೆಯಲ್ಲೂ ಉಪಸ್ಥಿತನಾಗಿರುತ್ತಾನೆ (ಸಭಾ 10/26). ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/22). ಈತ ಅರ್ಜುನನಿಗೆ ಸಂಗೀತ ವಿದ್ಯೆಯನ್ನು ಕಲಿಸಿದುದು (ವನ 44/8–9). ಇಂದ್ರನ ಆದೇಶ ಪ್ರಕಾರ ಈತ ಊರ್ವಶಿಯ ಬಳಿಗೆಹೋಗಿ ಆಕೆ ಅರ್ಜುನನನ್ನು ಪ್ರಸನ್ನಗೊಳಿಸುವಂತೆ ಹೇಳಿದುದು (ವನ 45/6–13). ದ್ವೈತವನದಲ್ಲಿ ಕೌರವರೊಡನೆ ಈತನ ಯುದ್ಧ ಮತ್ತು ಕರ್ಣನನ್ನು ಸೋಲಿಸಿದುದು (ವನ 241). ದುರ್ಯೋಧನನನ್ನು ಸೆರೆಹಿಡಿದುದು (ವನ 42/6). ಅರ್ಜುನನಿಂದ ಪರಾಜಿತನಾಗಿ, ಈತ ತನ್ನನ್ನು ಪ್ರಕಟಗೊಳಿಸಿದುದು (ವನ 245/27). ಇಂದ್ರನಲ್ಲಿ ಅರ್ಜುನನ ಯುದ್ಧಕಲೆಯ ವರ್ಣನೆ ಮಾಡಿದುದು (ವಿರಾಟ 64/38–43). ಯುಧಿಷ್ಠಿರನ ಅಶ್ವಮೇಧ ಯಜ್ಞಕ್ಕೆ ಈತನೂ ಬಂದಿದ್ದನು ಮತ್ತು ಸಂದರ್ಭಕ್ಕೆ ಸರಿಯಾಗಿ ತನ್ನ ನೃತ್ಯಗೀತಾದಿ ಕಲೆಗಳ ಮೂಲಕ ಬ್ರಾಹ್ಮಣರ

ಮನರಂಜನೆ ಮಾಡುತ್ತಿದ್ದನು (ಆಶ್ವ 88/39–40). ಧೃತರಾಷ್ಟ್ರನ ಆಶ್ರಮಕ್ಕೆ ನಾರದರೊಂದಿಗೆ ಈತನೂ ಹೋಗಿದ್ದನು (ಆಶ್ರಮ 29/9).

(4) ಜರಾಸಂಧನ ಮಂತ್ರಿ, ಡಿಂಭಕ (ಸಭಾ 22/32–33). (ನೋಡಿ–ಡಿಂಭಕ).

(5) ಅಭಿಸಾರದೇಶದ ರಾಜ ಮತ್ತು ಕೌರವ ಪಕ್ಷದ ಒಬ್ಬ ಯೋಧ. ಶ್ರುತಕರ್ಮನಿಂದ ಈತನ ವಧೆ (ಕರ್ಣ 14/14).

(6) (ಶ್ರುತಸೇನ) – ತ್ರಿಗರ್ತರಾಜ ಸುಶರ್ಮನ ಸಹೋದರ (ಕರ್ಣ 27/3–11).

(7) ಒಬ್ಬ ಪಾಂಚಾಲ ಯೋಧ. ಕರ್ಣನಿಂದ ವಧೆ (ಕರ್ಣ 48/15).

(8) ಕರ್ಣನ ಪುತ್ರ, ಕರ್ಣನ ಚಕ್ರರಕ್ಷಕ (ಕರ್ಣ). ನಕುಲನಿಂದ ಈತನ ವಧೆ (ಶಲ್ಯ 10/19–20).

(9) ಕರ್ಣನ ಸಹೋದರ. ಯುಧಾ ಮನ್ಯುವಿನಿಂದ ಈತನ ವಧೆ (ಕರ್ಣ 83/39–40).

(10) ಸಮುದ್ರದಡದಲ್ಲಿರುವ ರಾಜ್ಯದ ಅಧಿಪತಿ ಯಾದ ಪಾಂಡವ ಪಕ್ಷದ ಒಬ್ಬ ಯೋಧ. ಅವನು ತನ್ನ ಪುತ್ರನ ಜೊತೆಯಲ್ಲಿ, ಸಮುದ್ರ ಸೇನನಿಂದ, ಯುದ್ಧಭೂಮಿಯಲ್ಲಿ ಹತನಾದನು (ಕರ್ಣ 6/15–16).

(11) ಒಬ್ಬ ನಾಗ. ಅವನು ಕರ್ಣಾರ್ಜುನರ ಯುದ್ಧದಲ್ಲಿ ಅರ್ಜುನನ ವಿಜಯದ ಸಮರ್ಥಕನಾಗಿದ್ದನು (ಕರ್ಣ 87/43).

**ಚಿತ್ರಸೇನಾ** – (1) ಕುಬೇರನ ಸಭೆಯಲ್ಲಿರುತ್ತಾ, ಧನಪತಿಯ ಉಪಾಸನೆ ಮಾಡುವ ಒಬ್ಬ ಅಪ್ಸರೆ (ಸಭಾ 10/10). ಅರ್ಜುನನು ಇಂದ್ರಲೋಕಕ್ಕೆ ಹೋದಾಗ ಈಕೆ ನರ್ತನ ಮಾಡಿದ್ದಳು (ವನ 43/30).

(2) ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/17).

(3) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/14).

**ಚಿತ್ರಾ** – ಒಬ್ಬ ಅಪ್ಸರೆ. ಈಕೆ ಅಷ್ಟಾವಕ್ರನ ಸಮ್ಮಾನಾರ್ಥವಾಗಿ ಕುಬೇರನ ಸಭೆಯಲ್ಲಿ ನೃತ್ಯ ಮಾಡಿದ್ದಳು (ಅನು 19/44).

**ಚಿತ್ರಾಕ್ಷ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/95; 116/8). ಭೀಮಸೇನನಿಂದ ಈತನ ವಧೆ (ದ್ರೋಣ 136/20–22).

**ಚಿತ್ರಾಂಗದ** (ಚಿತ್ರಾಂಗ) – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ. 'ಶ್ರುತಾಂತಕ'ನೆಂಬ ಹೆಸರಿನಲ್ಲಿ ಭೀಮನಿಂದ ಈತನ ವಧೆ (ಶಲ್ಯ 26/10).

(2) ಮಹಾರಾಜ ಶಾಂತನುಗೆ ಸತ್ಯವತಿಯ ಗರ್ಭ ದಲ್ಲಿ ಹುಟ್ಟಿದವ; ವಿಚಿತ್ರವೀರ್ಯನ ಅಣ್ಣ (ಆದಿ 95/49–50;101/2). ತಂದೆಯ ಮರಣಾನಂತರ ಭೀಷ್ಮನ ಮೂಲಕ ಈತನಿಗೆ ರಾಜ್ಯಾಭಿಷೇಕ (ಆದಿ 101/5). ಚಿತ್ರಾಂಗದನೆಂಬ ಗಂಧರ್ವ ನೊಡನೆ ಈತನ ಭೀಷಣ ಯುದ್ಧ ಮತ್ತು ಆತ ನಿಂದ ಇವನ ಮರಣ (ಆದಿ 101/9). ಭೀಷ್ಮ ನಿಂದ ಈತನ ಅಂತ್ಯಸಂಸ್ಕಾರ (ಆದಿ 101/11).

(3) ಒಬ್ಬ ಗಂಧರ್ವ. ಈತನಿಂದ ಶಾಂತನು ಪುತ್ರ ಚಿತ್ರಾಂಗದನ ವಧೆಯಾಯಿತು (ಆದಿ 101/9).

(4) ದ್ರೌಪದೀಸ್ವಯಂವರಕ್ಕೆ ಬಂದ ಒಬ್ಬ ರಾಜ (ಈತ ಕಲಿಂಗರಾಜ ಅಥವಾ ದಶಾರ್ಣರಾಜದಲ್ಲಿ ಯಾರೋ ಒಬ್ಬನಾಗಿರುವ ಸಂಭವವಿದೆ). (ಆದಿ 185/22).

(5) ಕಲಿಂಗ ದೇಶದ ಒಬ್ಬ ರಾಜ. ಒಂದು ಸನ್ನಿವೇಶದಲ್ಲಿ ಸ್ವಯಂವರ ಮಹೋತ್ಸವಕ್ಕಾಗಿ ದೇಶವಿದೇಶದ ರಾಜರು ಈತನಲ್ಲಿ ಒಟ್ಟಾಗಿದ್ದರು (ಶಾಂತಿ 4/2).

(6) ಮಹಾಬಲವಂತ, ಶತ್ರುಮರ್ದನ ದಶಾರ್ಣ ನರೇಶ. ಅಶ್ವಮೇಧ ಸಂಬಂಧದ ಕುದುರೆಯ ರಕ್ಷಣೆಯ ಸಮಯದಲ್ಲಿ ಅರ್ಜುನನಿಗೆ ಈತ ನೊಡನೆ ಭಯಂಕರ ಯುದ್ಧವಾಗಿತ್ತು (ಆಶ್ವ 83/5–7).

**ಚಿತ್ರಾಂಗದಾ** – (1) ಮಣಿಪೂರನರೇಶ ಚಿತ್ರ ವಾಹನನ ಪುತ್ರಿ (ಆದಿ 214/15). ನಗರದಲ್ಲಿ ವಿಹರಿಸುತ್ತಿದ್ದ ಈ ರಾಜಕುಮಾರಿಯ ಮೇಲೆ ಅರ್ಜುನನ ದೃಷ್ಟಿಬಿತ್ತು ಮತ್ತು ಆತ ಈಕೆಯನ್ನು ಬಯಸಿದನು (ಆದಿ 214/16). ಚಿತ್ರಾಂಗದೆಯ ತಂದೆಯೊಡನೆ ಅರ್ಜುನನು ಈಕೆಯನ್ನು ಪತ್ನಿ ಯಾಗಿ ಕೊಡುವಂತೆ ಕೇಳಿಕೊಂಡನು (ಆದಿ 214/17). ಅರ್ಜುನನಿಂದ ಈಕೆಯ ಪಾಣಿಗ್ರಹಣ (ಆದಿ 214/26). ಈಕೆಯ ಗರ್ಭದಿಂದ

ಅರ್ಜುನನ ಮೂಲಕ ಪುತ್ರನ ಜನನ. ಅರ್ಜುನನು ಈಕೆಯನ್ನಪ್ಪಿ, ವಿದಾಯ ಹೊಂದಿದುದು (ಆದಿ 214/27). ಈಕೆಯ ಮಿಲನಕ್ಕಾಗಿ ಅರ್ಜುನನು ಪುನಃ ಮಣಿಪೂರಕ್ಕೆ ಆಗಮಿಸಿದುದು (ಆದಿ 214/23). ಮಣಿಪೂರದಿಂದ ನಿರ್ಗಮಿಸುವಾಗ ಈಕೆಗೆ ಅರ್ಜುನನ ಆಶ್ವಾಸನೆ ಮತ್ತು ರಾಜಸೂಯಯಜ್ಞಕ್ಕೆ ಬರುವಂತೆ ಆದೇಶ (ಆದಿ 216 /26–34). ಬಭ್ರುವಾಹನ ಮತ್ತು ಅರ್ಜುನರ ಯುದ್ಧದಲ್ಲಿ ಇಬ್ಬರೂ ಧರೆಗೊರಗಿದಾಗ, ಈಕೆ ಸಂತಪ್ತ ಹೃದಯದಿಂದ ಸಮರಾಂಗಣಕ್ಕೆ ಬಂದುದು ಮತ್ತು ಪತಿದೇವನ ಪರಿಸ್ಥಿತಿಯನ್ನು ನೋಡಿದುದು (ಆಶ್ವ 79/37–39). ಪತಿ ವಿಯೋಗದ ದುಃಖದಿಂದ ಮೂರ್ಚ್ಛಿತಳಾಗಿ ಬಿದ್ದುದು. ಸ್ವಲ್ಪ ಹೊತ್ತಿನ ಅನಂತರ ಸ್ಮೃತಿ ಬಂದಾಗ, ತನ್ನ ಮುಂದೆ ನಿಂತಿರುವ ಉಲೂಪಿಯನ್ನು ನೋಡಿದುದು; ಆಕೆಯನ್ನು ನಿಂದಿಸಿ, ಅರ್ಜುನನ ಪ್ರಾಣ ಉಳಿಸುವಂತೆ ಒತ್ತಾಯಿಸಿದುದು (ಆಶ್ವ 80/2–7). ಪತಿಯ ಸಮೀಪ ಹೋಗಿ ಈಕೆ ವಿಲಪಿಸಿದುದು (ಆಶ್ವ 80/8–11). ಪತಿಯನ್ನು ಬದುಕಿಸುವಂತೆ ಪುನಃ ಉಲೂಪಿಯೊಡನೆ ಒತ್ತಾಯ (ಆಶ್ವ 80/12–17). ಆಮರಣ ಉಪವಾಸ ಮಾಡುವ ನಿಶ್ಚಯಮಾಡಿ ಕುಳಿತದ್ದು (ಆಶ್ವ 80/18). ಚಿತ್ರಾಂಗದೆ, ಉಲೂಪಿ ಮತ್ತು ಬಭ್ರುವಾಹನರ ಜೊತೆಯಲ್ಲಿ ಹಸ್ತಿನಾಪುರಕ್ಕೆ ಹೋದುದು (ಆಶ್ವ 87/26). ಈಕೆ ಕುಂತಿ ಮತ್ತು ದ್ರೌಪದಿಯರ ಪಾದಕ್ಕೆರಗಿದುದು. ಸುಭದ್ರೆಯೇ ಮೊದಲಾದವರ ಭೇಟಿ ಮಾಡಿ–ದುದು (ಆಶ್ವ 87/26). ಕುಂತಿ, ದ್ರೌಪದಿ ಮತ್ತು ಸುಭದ್ರೆಯೇ ಮೊದಲಾದವರು ಚಿತ್ರಾಂಗದೆಗೆ ವಿವಿಧ ರತ್ನಗಳ ಉಡುಗೊರೆಯನ್ನಿತ್ತದ್ದು (ಆಶ್ವ 80/3–4). ಈಕೆ ದಾಸಿಯಂತೆ ಗಾಂಧಾರಿಯ ಸೇವೆಯಲ್ಲಿ ಮಗ್ನಳಾದುದು (ಆಶ್ರಮ 1/23–24). ಕಾಡಿಗೆ ಹೋಗುತ್ತಿರುವ ಧೃತರಾಷ್ಟ್ರ ಮತ್ತು ಗಾಂಧಾರಿಯ ಜೊತೆಯಲ್ಲಿ, ಕುರುಕುಲದ ಇತರ ಸ್ತ್ರೀಯರ ಸಂಗಡ, ಚಿತ್ರಾಂಗದೆಯೂ ಮನೆಯಿಂದ ಹೊರಗೆ ಬಂದು ರೋದಿಸಿದುದು (ಆಶ್ರಮ 15/10). ಆಶ್ರಮವಾಸಿ ಮುನಿಗಳಿಗೆ ಕುರುಕುಲದ ಸ್ತ್ರೀಯರ ಪರಿಚಯಮಾಡುವಾಗ ಸಂಜಯನು ಚಿತ್ರಾಂಗದೆಯ ಅಂಗಕಾಂತಿಯನ್ನು ನೂತನ ಮಧೂಕಪುಷ್ಪದಂತೆ ಬಿಳಿಯೆಂದು ತಿಳಿಸಿದುದು (ಆಶ್ರಮ 25/11). ಪಾಂಡವರ ಮಹಾಪ್ರಸ್ಥಾನದ ಅನಂತರ ಈಕೆ 'ಮಣಿಪೂರ'ವೆಂಬ ನಗರಕ್ಕೆ ಹೋದುದು (ಮಹಾಪ್ರಸ್ಥಾನ 1/8)

(2) ಒಬ್ಬ ಅಪ್ಸರೆ. ಈಕೆ ಅಷ್ಟಾವಕ್ರನ ಸಮ್ಮಾನಾರ್ಥವಾಗಿ ಕುಬೇರನ ಸಭೆಯಲ್ಲಿ ನರ್ತನ ಮಾಡಿದ್ದಳು (ಅನು 19/44).

**ಚಿತ್ರಾಯುಧ** (ಅಥವಾ ಚಿತ್ರಬಾಹು) – (1) ಧೃತರಾಷ್ಟ್ರನ ನೂರುಮಕ್ಕಳಲ್ಲಿ ಒಬ್ಬ (ಆದಿ 67/97). ಭೀಮಸೇನನಿಂದ ಈತನ ವಧೆ (ದ್ರೋಣ 136/20–22).

(2) (ದೃಢಾಯುಧ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/8). ಭೀಮಸೇನನಿಂದ ಈತನ ವಧೆ (ದ್ರೋಣ 137/29).

(3) ಸಿಂಹಪುರದ ರಾಜ. ದಿಗ್ವಿಜಯ ಕಾಲದಲ್ಲಿ ಈತನ ರಾಜಧಾನಿಯಾದ ಸಿಂಹಪುರದ ಮೇಲೆ, ಅರ್ಜುನನು ಆಕ್ರಮಣಮಾಡಿ ಗೆದ್ದಿದ್ದನು (ಸಭಾ 27/20).

(4) ಚೇದಿ ದೇಶದ ಒಬ್ಬ ಮಹಾರಥಿ ಯೋಧ. ಈತ ಪಾಂಡವ ಪಕ್ಷದಲ್ಲಿದ್ದನು. ಅವನ ಕುದುರೆಗಳು ಕೆಂಪಾಗಿಯೂ ಆಯುಧಗಳು ವಿಚಿತ್ರವಾಗಿಯೂ ಇದ್ದವು (ದ್ರೋಣ 23/56). ಕರ್ಣನಿಂದ ಈತನ ವಧೆ (ಕರ್ಣ 56/49).

**ಚಿತ್ರಾಶ್ವ** – ಸತ್ಯವಾನನ ಇನ್ನೊಂದು ಹೆಸರು. ಈತನಿಗೆ ಕುದುರೆಗಳು ಅತ್ಯಂತ ಪ್ರಿಯವಾಗಿದ್ದವು. ಈತ ಮಣ್ಣಿನ ಕುದುರೆಗಳನ್ನು ತಯಾರಿಸುತ್ತಿದ್ದನು. ಮತ್ತು ಚಿತ್ರದಲ್ಲಿ ಅಶ್ವಗಳನ್ನೇ ಬರೆಯುತ್ತಿದ್ದನು. ಆದುದರಿಂದ ಜನರು ಈತನನ್ನು 'ಚಿತ್ರಾಶ್ವ'ನೆಂದೂ ಹೇಳುತ್ತಿದ್ದರು (ವನ 294/13).

**ಚಿತ್ರೋಪಲಾ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/34).

**ಚಿಬುಕ** – ನಂದಿನಿ ಗೋವಿನಿಂದ ಸೃಷ್ಟಿಸಲ್ಪಟ್ಟ ಒಂದು ಮ್ಲೇಚ್ಛ ಜಾತಿ (ಆದಿ 174/3–8).

**ಚಿರಕಾರಿ** – ಗೌತಮ ಮಹರ್ಷಿಯ ಒಬ್ಬ ಮಗ. ಈತ ಪ್ರತಿಯೊಂದು ಕಾರ್ಯದಲ್ಲೂ ಬಹಳ ಹೊತ್ತು ವಿಚಾರ ಮಾಡುತ್ತಾ ಇರುವುದರಿಂದ, ಬಹಳ ತಡವಾಗಿ ಅದನ್ನು ಪೂರೈಸುತ್ತಿದ್ದನು. ಆದುದರಿಂದಲೇ ಚಿರಕಾರಿ ಎಂದು ಕರೆಯಲ್ಪ

ಡುತ್ತಿದ್ದನು. ತಂದೆಯಿಂದ ತಾಯಿಯ ವಧೆ ಮಾಡಲು ಬಂದ ಆದೇಶದ ಕುರಿತು ಈತ ವಿಚಾರ ಮಾಡಿದುದು (ಶಾಂತಿ 266/3–43). ತಂದೆಯ ಪಾದಗಳಲ್ಲಿ ನತಮಸ್ತಕನಾದುದು (ಶಾಂತಿ 266/60). ತಂದೆಯಿಂದ ಈತನ ಅಭಿನಂದನೆ (ಶಾಂತಿ 266/67). ತಂದೆಯೊಂದಿಗೆ ಸ್ವರ್ಗಗಮನ (ಶಾಂತಿ 266/78).

**ಚಿರಾಂತಕ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/13).

**ಚೀನ** – (1) ನಂದಿನಿ ಗೋವಿನಿಂದ ಉತ್ಪಾದಿಸಲ್ಪಟ್ಟ ಒಂದು ಮ್ಲೇಚ್ಛಜಾತಿ (ಆದಿ 174/38).

(2) ಒಂದು ದೇಶ. ಅಲ್ಲಿಯ ಜನರು ಯುಧಿಷ್ಠಿರನಿಗೆ ಕಾಣಿಕೆಕೊಡಲು ಬಂದಿದ್ದರು (ಸಭಾ 51/23).

**ಚೀರಕ** – ಒಂದು ದೇಶ ಅಥವಾ ಜನಪದ. ಅದನ್ನು ಕರ್ಣನು ಗೆದ್ದು ದುರ್ಯೋಧನನಿಗೆ ಕಪ್ಪಕೊಡುವಂತೆ ಮಾಡಿದ್ದನು (ಕರ್ಣ 8/19).

**ಚೀರವಾಸಾ** – (1) ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧವಶನೆಂಬ ದೈತ್ಯನ ಅಂಶದಿಂದ ಜನಿಸಿದ್ದನು (ಆದಿ 67/61).

(2) ಒಬ್ಬ ಯಕ್ಷ. ಈತ ಕುಬೇರ ಸಭೆಯಲ್ಲಿರುತ್ತಾ, ಧನಾಧ್ಯಕ್ಷನ ಸೇವೆಮಾಡುತ್ತಾನೆ (ಸಭಾ 10/18).

**ಚೀರಿಣಿ** – ಒಂದು ನದಿ. ಅದರ ತಟದಲ್ಲಿ ವೈವಸ್ವತ ಮನು ಒದ್ದೆ ಬಟ್ಟೆ ಮತ್ತು ಜಟೆಯನ್ನು ಧರಿಸಿ ತಪಸ್ಸು ಮಾಡಿದ್ದನು (ವನ 187/6).

**ಚುಲುಕಾ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/20).

**ಚೂಚುಕ** – ದಕ್ಷಿಣ ಭಾರತದ ಒಂದು ಮ್ಲೇಚ್ಛ ಜಾತಿ (ಶಾಂತಿ 207/42).

**ಚೂಚುಪ** – ದಕ್ಷಿಣ ಭಾರತದ ಒಂದು ಜನಪದ (ಉದ್ಯೋಗ 140/26).

**ಚೇಕಿತಾನ** – ಪಾಂಡವಪಕ್ಷದ ಒಬ್ಬ ಮಹಾರಥಿ. ಅವನು ವೃಷ್ಣಿವಂಶದ ಯಾದವನಾಗಿದ್ದನು. ಅವನು ದ್ರೌಪದಿಸ್ವಯಂವರಕ್ಕೆ ಹೋಗಿದ್ದನು (ಆದಿ 185/11; ಉದ್ಯೋಗ 171/18; ಭೀಷ್ಮ 84/20). ರಾಜಾ ಯುಧಿಷ್ಠಿರನು ಮಯನಿರ್ಮಿತ ಸಭಾ ಪ್ರವೇಶಮಾಡುವಾಗ, ಈತನು ಅವನ ಸೇವೆಗಾಗಿ ಉಪಸ್ಥಿತನಾಗಿದ್ದನು (ಸಭಾ 4/27). ಈತ ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಉಪಸ್ಥಿತನಾಗಿದ್ದು, ಅಭಿಷೇಕದ ಸಮಯದಲ್ಲಿ ಅವನಿಗೆ ಬತ್ತಳಿಕೆಯನ್ನು ಉಡುಗೊರೆಯಾಗಿ ಕೊಟ್ಟಿದ್ದನು (ಸಭಾ 53/9). ಪ್ರಥಮದಿನದ ಯುದ್ಧದಲ್ಲಿ ಸುಶರ್ಮನೊಡನೆ ಇವನ ದ್ವಂದ್ವ ಯುದ್ಧ (ಭೀಷ್ಮ 45/60–62). ಕೃಪಾಚಾರ್ಯನನ್ನು ಮೂರ್ಛೆಗೊಳಿಸಿ, ತಾನೂ ಕೃಪಾಚಾರ್ಯನಿಂದ ಮೂರ್ಛೆಗೊಂಡದ್ದು (ಭೀಷ್ಮ 84/31). ಚಿತ್ರಸೇನನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/8–9; 111/53–55). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/54). ಅನುವಿಂದನೊಂದಿಗೆ ಯುದ್ಧ (ದ್ರೋಣ 14/48). ಈತನ ಕುದುರೆಗಳ ವರ್ಣನೆ (ದ್ರೋಣ 23/45). ದ್ರೋಣಾಚಾರ್ಯನಿಂದ ಈತನ ಪರಾಜಯ (ದ್ರೋಣ 125/68–71). ದುರ್ಯೋಧನನಿಂದ ಇವನ ವಧೆ (ಶಲ್ಯ 12/31–33). ವ್ಯಾಸರು ಆವಾಹನ ಮಾಡಿದಾಗ ಗಂಗೆಯ ಜಲದಿಂದ ಈತನೂ ಪ್ರಕಟಗೊಂಡಿದ್ದನು (ಆಶ್ರಮ 31/12). ಈತನಿಗೆ ಇನ್ನೆರಡು ಹೆಸರುಗಳಿವೆ – ಸಾತ್ವತ ಮತ್ತು ವಾರ್ಷ್ಣೇಯ.

**ಚೇದಿ** – ಒಂದು ಪ್ರಾಚೀನ ದೇಶ. ಅದನ್ನು ಉಪರಿಚರವಸು ಗೆದ್ದಿದ್ದನು ಮತ್ತು ಇದರ ಮೇಲೆ ಶಾಸನಮಾಡಿದ್ದನು (ಆದಿ 63/1–2). ಚೇದಿ ದೇಶದ ವಿಶೇಷತೆ (ಆದಿ 63/8). ಶಿಶುಪಾಲನು ಇಲ್ಲಿಯೇ ರಾಜನಾಗಿದ್ದನು. ನಕುಲನ ಪತ್ನಿ ಕರೇಣುಮತಿ ಇದೇ ದೇಶದ ರಾಜಕುಮಾರಿಯಾಗಿದ್ದಳು (ಆದಿ 95/75). ಶಿಶುಪಾಲನ ಮರಣಾ ನಂತರ ಅವನ ಮಗ ದೃಷ್ಟಕೇತು ಚೇದಿಯ ರಾಜನಾದನು (ಸಭಾ 45/36). ನಳನ ಕಾಲದಲ್ಲಿ ಸುಬಾಹು ಈ ದೇಶದ ರಾಜನಾಗಿದ್ದನು. ಅವನಲ್ಲಿ ದಮಯಂತಿ ಸುಖವಾಗಿ ವಾಸಿಸಿದ್ದಳು (ವನ 65/44–76). ಚೇದಿ ದೇಶದ ರಾಜ ದೃಷ್ಟಕೇತು ಒಂದು ಅಕ್ಷೌಹಿಣೀ ಸೇನೆಯೊಂದಿಗೆ ಪಾಂಡವರ ಸಹಾಯಕ್ಕೆ ಬಂದಿದ್ದನು (ಉದ್ಯೋಗ 19/7). ಈ ದೇಶದ ಕ್ಷತ್ರಿಯ ವೀರರು ಶ್ರೀಕೃಷ್ಣನ ಸಲಹೆಯಂತೆ ಶತ್ರುಗಳನ್ನು ಸೆರೆಮನೆಗೆ ಹಾಕುತ್ತಿದ್ದರು; ಮಿತ್ರರನ್ನು ಆನಂದಗೊಳಿಸುತ್ತಿದ್ದರು (ಉದ್ಯೋಗ 28/71). ಭಾರತದ ಪ್ರಮುಖ ಜನಪದಗಳಲ್ಲಿ ಚೇದಿಯೂ

ಗಣಿಸಲ್ಪಟ್ಟಿದೆ (ಭೀಷ್ಮ 9/40).

**ಚೈತ್ಯ** – ದೇವವೃಕ್ಷ (ಆದಿ 150/33).

**ಚೈತ್ಯಕ** – ಮಗಧದ ರಾಜಧಾನಿ ಗಿರಿವ್ರಜದ ಸಮೀಪವಿರುವ ಒಂದು ಪರ್ವತ. ಅದು ಮಗಧ ವಾಸಿಗಳಿಗೆ ಅತ್ಯಂತ ಪ್ರಿಯವಾಗಿತ್ತು. ಬೃಹದ್ರಥ ರಾಜನ ಪರಿವಾರದವರು ಇದನ್ನು ದೇವತೆಯೋ ಪಾದಿಯಲ್ಲಿ ಪೂಜಿಸುತ್ತಿದ್ದರು (ಸಭಾ 21/1–5).

**ಚೈತ್ರರಥ** – (1) ಒಂದು ವನ. ಅಲ್ಲಿ ಯಯಾತಿ 'ವಿಶ್ವಾಚಿ' ಎಂಬ ಅಪ್ಸರೆಯೊಂದಿಗೆ ವಿಹರಿಸಿದ್ದನು (ಆದಿ 75/48). ತಪಸ್ಸಿಗೆ ಹೋಗುವಾಗ ಪಾಂಡು ರಾಜನು ತನ್ನ ಇಬ್ಬರೂ ಪತ್ನಿಯರೊಂದಿಗೆ ಇಲ್ಲಿಗೆ ಬಂದಿದ್ದನು (ಆದಿ 118/48). ದ್ವಾರಕಾಪುರದ ಒಂದು ವನ. ಅದು ಇದೇ (ಚೈತ್ರರಥ). ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಬ್ರಹ್ಮನ ಅಲೌಕಿಕ ಉದ್ಯಾನದಂತೆ ಶೋಭಾಯಮಾನವಾಗಿತ್ತು (ಸಭಾ 38).

(2) ಭರತವಂಶದ ಮಹಾರಾಜ ಕುರುವಿನಿಂದ ವಾಹಿನಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ರಾಜಕುಮಾರ (ಆದಿ 94/50).

**ಚೈತ್ರರಥಪರ್ವ** – ಆದಿಪರ್ವದ ಒಂದು ಅವಾಂತರಪರ್ವ (ಅಧ್ಯಾಯ 164ರಿಂದ 182ರ ವರೆಗೆ).

**ಚೈದ್ಯ** – ಚೇದಿರಾಜ ಶಿಶುಪಾಲ (ಆದಿ 1/31). ಚೇದಿರಾಜ ದೃಷ್ಟಕೇತು. ಈತ ಧೃಷ್ಟದ್ಯುಮ್ನ ನಿರ್ಮಿತ ಕ್ರೌಂಚವ್ಯೂಹದ ನೇತ್ರಸ್ಥಾನದಲ್ಲಿ ನಿಂತಿದ್ದನು (ಭೀಷ್ಮ 50/47).

**ಚೋಲ** – ಒಂದು ದೇಶ. ಅದನ್ನು ಅರ್ಜುನ ಜಯಿಸಿದ್ದನು (ಸಭಾ 27/21). ಚೋಲದೇಶದ ರಾಜನನ್ನು ಚೋಲನೆಂದು ಹೇಳಲಾಗಿದೆ. ಈತ ಯುಧಿಷ್ಠಿರನಿಗೆ ಕಾಣಿಕೆ ಒಪ್ಪಿಸಲು ಹೋಗಿದ್ದನು (ಸಭಾ 52/35). ದಕ್ಷಿಣ ಭಾರತದ ಒಂದು ಜನಪದ. ಅಲ್ಲಿರುವ ವೀರಯೋಧರು ಧೃಷ್ಟದ್ಯುಮ್ನ ನಿರ್ಮಿತ ಕ್ರೌಂಚವ್ಯೂಹದ ಬಲ ರೆಕ್ಕೆಯ ಆಶ್ರಯದಲ್ಲಿ ನಿಂತಿದ್ದರು (ಭೀಷ್ಮ 9/60; 50/51). ಶ್ರೀಕೃಷ್ಣನು ಈ ದೇಶವನ್ನು ಗೆದ್ದಿದ್ದನು (ದ್ರೋಣ 11/17). ಪಾಂಡವರ ಪಕ್ಷದಿಂದ ಇವರು ಯುದ್ಧ ಮಾಡಿದರು (ಕರ್ಣ 12/15).

**ಚೌರ** – ಕ್ಷತ್ರಿಯರ ಒಂದು ಪ್ರಾಚೀನ ಜಾತಿ. ಅದು ಬ್ರಾಹ್ಮಣರ ರೋಷದಿಂದ ಶೂದ್ರತ್ವವನ್ನು ಹೊಂದಿತು (ಅನು 35/17).

**ಚ್ಯವನ** –(1) ಒಬ್ಬ ಸುಪ್ರಸಿದ್ಧ ತಪಸ್ವಿ ಮುನಿ. ಅವನು ಭೃಗು ಮಹರ್ಷಿಯ ಪುತ್ರ (ಆದಿ 5/8). ಇವನ ಹುಟ್ಟಿನ ಕಥೆ (ಆದಿ 5/13 ರಿಂದ 6/3). ಈತನಿಗೆ ಚ್ಯವನನೆಂದು ಹೆಸರಾಗಲು ಕಾರಣ ಮತ್ತು ಈತನನ್ನು ನೋಡುತ್ತಲೇ ಪುಲೋಮ ರಕ್ಕಸನು ಸುಟ್ಟು ಭಸ್ಮವಾದುದು (ಆದಿ 6/3). ಈತನಿಂದ ಸುಕನ್ಯೆ ಎಂಬ ಪತ್ನಿಯಲ್ಲಿ ಪ್ರಮತಿಯ ಜನನ (ಆದಿ 5/9; 8/1). ಆಸ್ತೀಕನು ಈತನಿಂದ ಸಂಪೂರ್ಣ ಸಾಂಗ ವೇದಾಧ್ಯಯನ ಮಾಡಿದ್ದನು (ಆದಿ 48/18). ಈತನ ಪತ್ನಿ ಮನುಪುತ್ರಿ ಆರುಷಿ ಆಗಿದ್ದಳು. ಆಕೆಯಿಂದ ಔರ್ವಮುನಿಯ ಜನನವಾಯಿತು (ಆದಿ 66/46). ಈತ ಬ್ರಹ್ಮ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತಾನೆ (ಸಭಾ 11/22). ಸುಕನ್ಯೆಯಿಂದ ಈತನ ಕಣ್ಣುಗಳು ಚುಚ್ಚಲ್ಪಟ್ಟಿದ್ದರಿಂದ, ಈತ ಶರ್ಯಾತಿಯ ಸೈನಿಕರ ಮಲಾವರೋಧ ಮಾಡಿದುದು (ವನ 122/15–17). ಈತನಿಗೆ ಶರ್ಯಾತಿಯಿಂದ ಸುಕನ್ಯೆ ಪ್ರಾಪ್ತವಾದಾಗ ಈತನ ಸಂತೃಪ್ತಿ (ವನ 122/26–27). ರೂಪ, ಯೌವನ ಮತ್ತು ಪತ್ನಿಯ ಪ್ರಾಪ್ತಿಯಿಂದ ಪ್ರಸನ್ನನಾಗಿ, ಈತ ಅಶ್ವಿನೀ ಕುಮಾರರಿಗೆ ಸೋಮಪಾನಕ್ಕೆ ಅಧಿಕಾರಿಗಳಾಗಿ ಮಾಡಿಸುವ ಪ್ರತಿಜ್ಞೆ ಮಾಡಿದುದು (ವನ 123/22–23). ಇವನಿಂದ ಇಂದ್ರನ ಬಾಹುಗಳ ಸ್ತಂಭನ (ವನ 124/19). (ಶಾಂತಿ 242/24). ಈತ ಅಶ್ವಿನೀಕುಮಾರರಿಗೆ ಸೋಮಪಾನ ಮಾಡಿಸಿದುದು (ವನ 125/10). ಅಭಿಮಂತ್ರಿತ ಜಲ ಕುಡಿದ ಬಳಿಕ ರಾಜಾಯೌವನಾಶ್ವನಿಗೆ ಈತನ ಆಶ್ವಾಸನೆ (ವನ 126/10–28). ದೇವವ್ರತ ಭೀಷ್ಮ ಈತನಿಂದ ವೇದ ವೇದಾಂಗಗಳ ಅಧ್ಯಯನಮಾಡಿದುದು (ಶಾಂತಿ 37/11).

(2) ಅಂಗೀರಸ್ಸಿನ ವಂಶದ ಚ್ಯವನವೆಂಬ ಹೆಸರಿನ ಅಗ್ನಿ (ವನ 220/1).

**ಚ್ಯವನಾಶ್ರಮ** – ಒಂದು ತೀರ್ಥ. ಅದರಲ್ಲಿ ಕಾಶೀರಾಜಕುಮಾರಿ ಅಂಬೆ ಸ್ನಾನಮಾಡಿದಳು (ಉದ್ಯೋಗ 186/26).

**ಚ್ಯವನ ಸರೋವರ** – ಒಂದು ತೀರ್ಥ. ಅಲ್ಲಿ ಪಿತೃಗಳಿಗೆ ತರ್ಪಣ ಕೊಡಲ್ಪಡುತ್ತದೆ (ವನ 125/11–12).

## ಛ

**ಛತ್ರವತಿ** – ಅಹಿಚ್ಛತ್ರದೇಶದ ರಾಜಧಾನಿ. ಅಹಿಚ್ಛತ್ರಾ ನಗರಿಯ ಇನ್ನೊಂದು ಹೆಸರು (ಆದಿ 165/21).

**ಛನ್ದೋದೇವ** – ಮತಂಗನಿಗೆ ಇಂದ್ರನ ವರ ದಾನದಿಂದ ಜನ್ಮಾಂತರದಲ್ಲಿ ಸಿಗುವ ಹೆಸರು (ಅನು 29/24).

**ಛಾಗಮುಖ** – ಆಡಿನಂಥ ಮುಖವನ್ನು ಧರಿಸುವ ಭಗವಾನ್ ಸ್ಕಂದ. ಈತ ತನ್ನ ಪುತ್ರ ಪುತ್ರಿಯರಿಂದ ಸುತ್ತುವರಿಯಲ್ಪಟ್ಟು ಮಾತೃಕೆಯರು ನೋಡುತ್ತಿರುವಂತೆ ಯುದ್ಧದಲ್ಲಿ ತನ್ನ ಪಕ್ಷದ ರಕ್ಷಣೆ ಮಾಡುತ್ತಾನೆ (ವನ 228/3–4).

## ಜ

**ಜಜಾಗ್ಗರಿ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/57).

**ಜಜ್ಞಾಬಂಧು** – ಒಬ್ಬ ಪ್ರಾಚೀನ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/16).

**ಜಟಾಧರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

**ಜಟಾಯು** – ಒಬ್ಬ ಗೃಧ್ರ, ವಿನತಾಪುತ್ರ ಅರುಣನ ಎರಡನೇ ಮಗ. ಈತನ ತಾಯಿಯ ಹೆಸರು ಶ್ಯೇನಿ; ಅಣ್ಣನ ಹೆಸರು ಸಂಪಾತಿ ಎಂದಾಗಿತ್ತು (ಆದಿ 66/69–70). ಸೀತಾಪಹರಣ ಸಂದರ್ಭದಲ್ಲಿ ರಾವಣನೊಡನೆ ಈತನ ಯುದ್ಧ (ವನ 289/6). ರಾವಣನಿಂದ ಈತನ ರೆಕ್ಕೆಗಳು ಕಡಿಯಲ್ಪಟ್ಟದ್ದು (ವನ 279/23). ಶ್ರೀರಾಮನಿಗೆ ಸೀತೆಯ ಇರುವಿಕೆಯನ್ನು ತಿಳಿಸಿ, ಈತ ಪ್ರಾಣತ್ಯಾಗ ಮಾಡಿದುದು (ವನ 289/23). ಜಟಾಯು ತನ್ನ ಸಹೋದರ ಸಂಪಾತಿಯೊಂದಿಗೆ ಸೂರ್ಯಮಂಡಲದ ಕಡೆಗೆ ಹಾರಿದ್ದನು. ಸಂಪಾತಿಯ ರೆಕ್ಕೆಗಳು ಸುಟ್ಟು ಹೋದವು; ಇವನ ರೆಕ್ಕೆಗಳು ಉಳಿದವು. ಈ ಸನ್ನಿವೇಶದ ವರ್ಣನೆ (ವನ 285/49–50).

**ಜಟಾಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/23)

**ಜಟಾಸುರ** – (1) ಒಬ್ಬ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/24).
(2) ಒಬ್ಬ ರಾಕ್ಷಸ. ಅವನು ಪಾಂಡವರ ಅಸ್ತ್ರಶಸ್ತ್ರ ಮತ್ತು ದ್ರೌಪದಿ, ಯುಧಿಷ್ಠಿರ, ನಕುಲ, ಸಹದೇವರನ್ನು ತೆಗೆದುಕೊಂಡು ಓಡತೊಡಗಿದ್ದನು (ವನ 157/7–11). ಭೀಮನೊಂದಿಗೆ ಈತನ ಯುದ್ಧ ಮತ್ತು ಪ್ರಾಣತ್ಯಾಗ (ವನ 157/48–70). ಇವನ ಮಗನ ಹೆಸರು ಅಲಂಬುಷನೆಂದಾಗಿತ್ತು. ಈತ ಘಟೋತ್ಕಚನಿಂದ ಮಡಿದನು (ದ್ರೋಣ 174/7–37).

**ಜಟಾಸುರವಧಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 157).

**ಜಟಿಲಾ** – ಗೌತಮ ಗೋತ್ರದ ಕನ್ಯೆ. ಏಳು ಋಷಿಗಳ ಪತ್ನಿ (ಆದಿ 195/14). ದ್ರೌಪದಿಯ ಪತಿಸೇವೆಯ ಕುರಿತಾಗಿ ಹಸ್ತಿನಾಪುರದ ಸ್ತ್ರೀಯರಿಂದ ಈಕೆಯ ದೃಷ್ಟಾಂತ (ಶಾಂತಿ 38/5).

**ಜಟೀ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

**ಜಠರ** – (1) ವೇದವಿದ್ಯಾ ಪಾರಂಗತನಾದ ಒಬ್ಬ ಬ್ರಾಹ್ಮಣ. ಅವನು ಜನಮೇಜಯನ ಸರ್ಪಸತ್ರದ ಸದಸ್ಯನಾಗಿದ್ದನು (ಆದಿ 53/8).
(2) ಒಂದು ಭಾರತೀಯ ಜನಪದ (ಭೀಷ್ಮ 9/43).

**ಜತುಗೃಹ** – ಲಾಕ್ಷಾಗೃಹ. ಪಾಂಡವರ ನಾಶಕ್ಕಾಗಿ ದುರ್ಯೋಧನನು ಅದನ್ನು ವಾರಣಾವತದಲ್ಲಿ ಮಾಡಿಸಿದ್ದನು (ಆದಿ 61/17). ಪಾಂಡವರು ಈ ಭವನದಲ್ಲಿ ವರ್ಷವಿಡೀ ವಾಸವಾಗಿದ್ದು, ಇದಕ್ಕೆ ಬೆಂಕಿಕೊಟ್ಟರು (ಆದಿ 61/21–23). ದುಷ್ಟ ದುರ್ಯೋಧನನ ಪ್ರೇರಣೆಯಿಂದ, ಪುರೋಚನನ ಮೂಲಕ ಪಾಂಡವರ ವಿನಾಶಕ್ಕಾಗಿ, ಅರಗಿನ ಮನೆ ಮಾಡಲ್ಪಟ್ಟಿತ್ತು (ಆದಿ 143/8). ವಿದುರನಿಂದ ಕಳುಹಿಸಲ್ಪಟ್ಟ ಖನಕನ ಮೂಲಕ ಪಾಂಡವರು ಇದರೊಳಗೆ ಸುರಂಗದ ನಿರ್ಮಾಣ ಮಾಡಿಸಿದ್ದರು (ಆದಿ 146/16). ಕುಡುಕರಾದ ತನ್ನ ಐದು ಮಂದಿ ಪುತ್ರರೊಂದಿಗೆ ಮದಿರೆಯನ್ನು ಸೇವಿಸಿ ಮತ್ತಳಾಗಿದ್ದ ಒಬ್ಬ ಬೇಡತಿ ಈ ಭವನಕ್ಕೆ ಬಂದು ನಿದ್ರಿಸಿದುದು (ಆದಿ 147/7). ಭೀಮನು ಈ ಮನೆಗೆ ಬೆಂಕಿಕೊಟ್ಟದ್ದು (ಆದಿ 147/10). ಇದರಲ್ಲಿ ಉರಿದು ಪುರೋಚನನ ಮೃತ್ಯು (ಆದಿ 147/16).

**ಜತುಗೃಹಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 140ರಿಂದ 150ರ ವರೆಗೆ).

**ಜನಕ** – (ಕ) ಮಿಥಿಲೆಯ ಹಿಂದಿನ ಒಬ್ಬ ರಾಜ. ಅವನು ಈಗ ಯಮನ ಸಭೆಯಲ್ಲಿದ್ದಾನೆ (ಸಭಾ 8/19).

(ಖ) ಯುಧಿಷ್ಠಿರನ ಸಮಕಾಲೀನನಾದ ಮಿಥಿಲೆಯ ಒಬ್ಬ ರಾಜ. ದಿಗ್ವಿಜಯಕಾಲದಲ್ಲಿ ಭೀಮಸೇನನು ಅವನನ್ನು ಪರಾಜಯಗೊಳಿಸಿದ್ದನು (ಸಭಾ 30/13).

(ಗ) ಒಬ್ಬ ವಿದೇಹರಾಜ ಜನಕ. ಅವನ ಆಸ್ಥಾನದಲ್ಲಿ ವಂದಿಯಿಂದ ಶಾಸ್ತ್ರಾರ್ಥದಲ್ಲಿ ಸೋತ ಕಹೋಳ ಸಮುದ್ರದಲ್ಲಿ ಹಾಕಲ್ಪಟ್ಟಿದ್ದನು (ವನ 132/15). ಈತ ತನ್ನ ಯಜ್ಞಶಾಲೆಗೆ ಬಂದ ಅಷ್ಟಾವಕ್ರನೊಡನೆ ಸಂಭಾಷಣೆ ನಡೆಸಿದುದು (ವನ 133/20–30). ಈತ ವಂದಿಯೊಡನೆ ಶಾಸ್ತ್ರಾರ್ಥಮಾಡಲು ಅಷ್ಟಾವಕ್ರನಿಗೆ ಅವಕಾಶ ನೀಡಿದುದು (ವನ 133/30). ಸೋತ ವಂದಿಯನ್ನು ಅಷ್ಟಾವಕ್ರನ ಇಚ್ಛಾನುಸಾರ ನೀರಲ್ಲಿ ಮುಳುಗಿಸುವ ಮಾತನ್ನು ಒಪ್ಪಿದುದು (ವನ 134/29). ಕಹೋಳನು ಜನಕನ ಮುಂದೆ ಪ್ರಕಟಗೊಂಡು ತನ್ನ ಪುತ್ರನನ್ನು ಹೊಗಳಿದುದು (ವನ 134/32–36). ರಾಜನ ಆಜ್ಞೆಯಂತೆ ವಂದಿ ಸಮುದ್ರ ಜಲದೊಳಗೆ ಪ್ರವೇಶಿಸಿದುದು (ವನ 134/37). ಧರ್ಮವ್ಯಾಧನಿಂದ ಕೌಶಿಕ ಬ್ರಾಹ್ಮಣನಿಗೆ ಜನಕನ ಗುಣಗಳ ವರ್ಣನೆ (ವನ 207/37–39). ವಿದೇಹರಾಜ ಜನಕ ಸೀತೆಯ ತಂದೆಯಾಗಿದ್ದನು (ವನ 274/9). ಈತ ರಾಜ್ಯತ್ಯಜಿಸಿ ಸನ್ಯಾಸ ಗ್ರಹಣಮಾಡಲು ಉಪಕ್ರಮಿಸಿದುದು (ಶಾಂತಿ 18/4–5). ಕುಟುಂಬದ ಜನ ಮತ್ತು ಧನ ನಾಶವಾದಾಗ ಏನು ಮಾಡಬೇಕೆಂದು ಈತ ಅಶ್ಮಾಮುನಿಯೊಡನೆ ಪ್ರಶ್ನಿಸಿದುದು (ಶಾಂತಿ 28/4). ಜನಕನು ಸ್ವರ್ಗ ಮತ್ತು ನರಕದ ಪ್ರತ್ಯಕ್ಷ ದರ್ಶನ ಮಾಡಿಸಿ, ತನ್ನ ಸೈನಿಕರನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸಿದುದು (ಶಾಂತಿ 99/4–7). ಕಾಲಕವೃಕ್ಷೀಯ ಮುನಿಯು ಬೋಧಿಸಿಹೇಳಿದ ಮೇಲೆ ಜನಕನು ಕ್ಷೇಮದರ್ಶಿಯೊಡನೆ ಸಂಧಿಮಾಡಿದುದು ಮತ್ತು ಅವನನ್ನು ಸತ್ಕರಿಸಿ, ಅವನೊಂದಿಗೆ ತನ್ನ ಮಗಳ ವಿವಾಹ ಮಾಡಿದುದು (ಶಾಂತಿ 106/21–28). ಈತನ ವಿರಕ್ತಿ (ಶಾಂತಿ 178/2). ಮಾಂಡವ್ಯನು ಆಶೆಯ ಕುರಿತು ಮಾಡಿದ ಪ್ರಶ್ನೆಗೆ ಜನಕನಿಂದ ಉತ್ತರ (ಶಾಂತಿ 276). ಸುಖಪ್ರಾಪ್ತಿಯ ವಿಷಯದಲ್ಲಿ ಪರಾಶರನಲ್ಲಿ ಜನಕನ ಪ್ರಶ್ನೆ (ಶಾಂತಿ 290/4). ಪರಾಶರನೊಂದಿಗೆ ಈತನಿಂದ ವಿವಿಧ ರೀತಿಯ ಪ್ರಶ್ನೆಗಳು (ಶಾಂತಿ 296/1–2 ಶಾಂತಿ 298/2). ಕರಾಲಜನಕನಿಗೆ ವಸಿಷ್ಠನ ಉಪದೇಶ (ಶಾಂತಿ 302ನೇ ಅಧ್ಯಾಯದಿಂದ 308ನೇ ಅಧ್ಯಾಯದವರೆಗೆ). ವಸುಮಂತ ಜನಕನಿಗೆ ಒಬ್ಬ ಮುನಿಯಿಂದ ಧರ್ಮವಿಷಯಕವಾದ ಉಪದೇಶ (ಶಾಂತಿ 309). ಯಾಜ್ಞವಲ್ಕ್ಯನೊಡನೆ ದೇವರಾತ ಪುತ್ರ ಜನಕನು ಪ್ರಶ್ನೆ ಮಾಡಿದುದು ಮತ್ತು ಆತನಿಂದ ಜನಕನ ಪ್ರಶ್ನೆಗಳಿಗೆ ಸಮಾಧಾನ (ಶಾಂತಿ 310ನೇ ಅಧ್ಯಾಯದಿಂದ 318ನೇ ಅಧ್ಯಾಯದವರೆಗೆ). ಜರೆಮೃತ್ಯುಗಳ ಉಲ್ಲಂಘನೆಯ ವಿಷಯವಾಗಿ ಮಹರ್ಷಿ ಪಂಚಶಿಖನೊಂದಿಗೆ ಜನದೇವ ಜನಕನ ಪ್ರಶ್ನೆ (ಶಾಂತಿ 319/5). ಧರ್ಮಧ್ವಜ ಜನಕನ ಪರೀಕ್ಷೆಗಾಗಿ ಬಂದು ಅವನ ಶರೀರದಲ್ಲಿ ಪ್ರವಿಷ್ಟಳಾದ ಸುಲಭಾಳ ಮೇಲೆ ದೋಷಾರೋಪಣೆ ಮಾಡುತ್ತಾ ಈತನ ಪ್ರಶ್ನೆ (ಶಾಂತಿ 320/75). ರಾಜಾ ಜನಕನಿಂದ ಶುಕದೇವನ ಪೂಜೆ (ಶಾಂತಿ 326/3–5). ಶುಕದೇವನಿಗೆ ಆತನ ಜ್ಞಾನೋಪದೇಶ (ಶಾಂತಿ 326/22–51). ಜನಕನು ಜೀವಮಾನವಿಡೀ ಮಾಂಸ ತಿಂದಿರಲಿಲ್ಲ (ಅನು 115/65). ಮಮತ್ವ ತ್ಯಾಗದ ವಿಷಯವಾಗಿ ಬ್ರಾಹ್ಮಣ ರೂಪಧಾರಿ ಧರ್ಮ ಮತ್ತು ಜನಕನ ಸಂವಾದ (ಆಶ್ವ 32). ಮಹಾಭಾರತದಲ್ಲಿ ಬಂದಿರುವ ಜನಕನ ಹೆಸರುಗಳು – ಐಂದ್ರದ್ಯುಮ್ನಿ, ದೈವರಾತಿ, ಧರ್ಮಧ್ವಜ, ಕರಾಲ, ಕರಾಲಜನಕ, ಮೈಥಿಲ, ಮಿಥಿಲಾಧಿಪ, ಮಿಥಿಲಾಧಿಪತಿ, ಮಿಥಿಲೇಶ್ವರ, ವೈದೇಹ, ವಿದೇಹರಾಜ– ಇತ್ಯಾದಿ (ಮಿಥಿಲೆಯ ಎಲ್ಲಾ ರಾಜರು ಪ್ರಾಯಶಃ ಜನಕನೆಂದು ಹೇಳಲ್ಪಡುತ್ತಿದ್ದರು. ಈಗ ವರ್ಣನೆಯಲ್ಲಿ ಅನೇಕ ಜನಕರ ಜೀವನದ ವಿಷಯಗಳು ಒಟ್ಟಾಗಿವೆ. ಹೆಸರುಗಳಲ್ಲೂ ಬೇರೆ ಬೇರೆ ಜನಕರ ಹೆಸರುಗಳಿವೆ. ಇದು ಕೇವಲ ಒಬ್ಬನೇ ಜನಕನ ಪರಿಚಯವಲ್ಲ.)

**ಜನದೇವ** – ಮಿಥಿಲಾ ನರೇಶನಾದ ಜನಕ

(ಶಾಂತಿ 218/3). ಈತನಿಗೆ ಪಂಚಶಿಖನ ಉಪದೇಶ (ಶಾಂತಿ 218/22 ರಿಂದ 219/52). ಬ್ರಾಹ್ಮಣ ರೂಪದಲ್ಲಿ ವಿಷ್ಣುವಿನಿಂದ ಈತನ ಪರೀಕ್ಷೆ (ಶಾಂತಿ 219/52ರ ಅನಂತರ ದಾಕ್ಷಿಣಾತ್ಯ ಪಾಠ). ಈತನಿಗೆ ಭಗವಂತನಾದ ವಿಷ್ಣುವಿನ ದರ್ಶನ ಮತ್ತು ವರಪ್ರಾಪ್ತಿ (ಶಾಂತಿ 219 ಅಧ್ಯಾಯದ ಸಮಾಪ್ತಿ ವರೆಗೆ)

**ಜನಮೇಜಯ** – (1) ಒಬ್ಬ ರಾಜರ್ಷಿ. ಈತ ಮಹಾರಾಜ ಪರೀಕ್ಷಿತನ ಪುತ್ರ. ಇವನ ತಾಯಿಯ ಹೆಸರು ಮದ್ರವತಿ ಎಂದಾಗಿತ್ತು. ಇವನ ಪತ್ನಿ ವಪುಷ್ಟಮಾಳಲ್ಲಿ ಶತಾನೀಕ ಮತ್ತು ಶಂಕುಕರ್ಣ ಎಂಬ ಇಬ್ಬರು ಪುತ್ರರು ಹುಟ್ಟಿದ್ದರು (ಆದಿ 1/9, ಆದಿ 95/85–86). ಈತ ಕುರುಕ್ಷೇತ್ರದಲ್ಲಿ ದೀರ್ಘಕಾಲದ ವರೆಗೆ ಯಜ್ಞಮಾಡಿದ್ದನು (ಆದಿ 3/1). ಈತನಿಗೆ ಮೂವರು ಸಹೋದರರಿದ್ದರು– ಶ್ರುತಸೇನ, ಉಗ್ರಸೇನ ಮತ್ತು ಭೀಮಸೇನ (ಆದಿ 3/1). ಸರಮೆಯ ಶಾಪದಿಂದ ಈತ ಚಿಂತಿತ ನಾದುದು (ಆದಿ 3/11). ಈತ ಸೋಮಶ್ರವ ನನ್ನು ಪುರೋಹಿತನಾಗಿ ಮಾಡಿಕೊಂಡನು ಮತ್ತು ಆತನ ಪ್ರತಿಯೊಂದು ಆಜ್ಞೆಯನ್ನು ತನ್ನ ಸಹೋ ದರರು ಪಾಲಿಸುವಂತೆ ಆದೇಶ ನೀಡಿ ದುದು (ಆದಿ 3/12–20). ಈತನಿಂದ ತಕ್ಷ ಶಿಲೆಯ ಮೇಲೆ ವಿಜಯ (ಆದಿ 3/20). ಈತ ವೇದವನ್ನು ತನ್ನ ಉಪಾಧ್ಯಾಯನಾಗಿ ಮಾಡಿಕೊಂಡದ್ದು (ಆದಿ 3/82). ಸರ್ಪಯಜ್ಞ ಮಾಡುವಂತೆ ಈತನಿಗೆ ಉತ್ತಂಕನ ಸಲಹೆ (ಆದಿ 3/ 183–184). ಕಾಶೀರಾಜ ಸುವರ್ಣವರ್ಮನ ಪುತ್ರಿ ಯಾದ ವಪುಷ್ಟಮಾಳೊಡನೆ ಈತನ ವಿವಾಹ (ಆದಿ 44/8–9). ಮಂತ್ರಿಗಳಿಂದ ತನ್ನ ತಂದೆಯ ಮರಣದ ವಿಸ್ತಾರವಾದ ಸಮಾಚಾರ ಕೇಳಿ, ತಕ್ಷಕನಿಗೆ ಪ್ರತೀಕಾರ ಮಾಡಲು ಈತನ ನಿಶ್ಚಯ (ಆದಿ 50/33–54). ಋತ್ವಿಜರಿಂದ ಈತನಿಗೆ ಸರ್ಪಸತ್ರ ಮಾಡುವ ಕುರಿತು ನಿರ್ಧಾರ (ಆದಿ 51/6–7). ತನಗೆ ಸೂಚನೆ ನೀಡದೆ ಯಾವನೇ ಅಪರಿಚಿತನನ್ನು ಯಜ್ಞಮಂಟಪದೊಳಗೆ ಬರಲು ಬಿಡಬಾರದೆಂದು, ಯಜ್ಞದೀಕ್ಷೆ ಸ್ವೀಕರಿಸುವ ಮೊದಲೇ ಈತ ಸೇವಕನಿಗೆ ಆದೇಶ ಕೊಟ್ಟಿದ್ದನು. ತಕ್ಷಕನನ್ನು ಅಗ್ನಿಕುಂಡದಲ್ಲಿ ಬೀಳಿಸುವಂತೆ ಋತ್ವಿಜರಿಗೆ ಈತನಿಂದ ಪುನಃ ಪುನಃ ಪ್ರೇರಣೆ (ಆದಿ 56/4–11). ಈತ ಆಸ್ತಿಕನಿಗೆ ವರ ನೀಡಿ ದುದು. ಆತ ಯಜ್ಞಸಮಾಪ್ತಿಯ ವರ ಕೇಳಿ ದಾಗ, ಬೇರೆ ವರ ಕೇಳುವಂತೆ ಈತ ಆಗ್ರಹ ಮಾಡಿದುದು (ಆದಿ 56/17–26). ಇವನಿಂದ ಯಜ್ಞ ನಿಲ್ಲಿಸಲು ಆಜ್ಞೆ. ಋತ್ವಿಜರೇ ಮೊದಲಾದ ಸದಸ್ಯರಿಗೂ, ಲೋಹಿತಾಕ್ಷ ಸೂತ ಮತ್ತು ಶಿಲ್ಪಿಗೂ ಪುರಸ್ಕಾರ (ಆದಿ 58). ಸರ್ಪಸತ್ರಕ್ಕೆ ಆಗಮಿಸಿದ ವ್ಯಾಸರೊಡನೆ ಮಹಾಭಾರತದ ಯುದ್ಧ ಸಂಬಂಧಿಯಾದ ವೃತ್ತಾಂತವನ್ನು ತಿಳಿಸುವಂತೆ ಈತನ ಪ್ರಾರ್ಥನೆ (ಆದಿ 60/18–19). ಈತನ ಪ್ರಾರ್ಥನೆಗಾಗಿ, ವ್ಯಾಸರ ಆಜ್ಞೆಯಿಂದ ವೈಶಂ ಪಾಯನನು ಇವನಿಗೆ ಪೂರುವಂಶ, ಭರತವಂಶ ಮತ್ತು ಕುರುವಂಶದ ಪರಿಚಯದೊಂದಿಗೆ ಸಂಪೂರ್ಣ ಪುರಾತನ ಇತಿಹಾಸ ಮತ್ತು ಮಹಾ ಭಾರತ ಯುದ್ಧದ ಕಥೆಯನ್ನು ಹೇಳಿದ್ದನು (ಆದಿ 60/18–24). ತನ್ನ ತಂದೆಯ ದರ್ಶನ ಮಾಡಿಸು ವಂತೆ ವ್ಯಾಸರೊಡನೆ ಈತನ ಪ್ರಾರ್ಥನೆ. ವ್ಯಾಸರು ಪರಲೋಕದಿಂದ ಅವನ ಆವಾಹನೆ ಮಾಡಿ, ಅದೇ ರೂಪ ಮತ್ತು ವಯಸ್ಸಿನಲ್ಲಿ ಜನಮೇ ಜಯನಿಗೆ ದರ್ಶನ ಮಾಡಿಸಿದುದು. ಜನಮೇ ಜಯನು ಮೊದಲು ತಂದೆಗೆ ಅವಭೃತ ಸ್ನಾನ ಮಾಡಿಸಿ, ತಾನು ಸ್ನಾನ ಮಾಡಿದುದು, ಆಸ್ತೀಕ ನೊಡನೆ ತನ್ನ ಯಜ್ಞ ವಿವಿಧ ಆಶ್ಚರ್ಯಗಳ ಕೇಂದ್ರವೆಂದು ಹೇಳಿದುದು. ಆಸ್ತೀಕನು ಹೇಳಿದ ಪ್ರಕಾರ ಮತ್ತೆ ಮತ್ತೆ ವ್ಯಾಸರ ಪೂಜೆ ಮಾಡಿದುದು. ಅನಂತರ ವೈಶಂಪಾಯನರೊಡನೆ ಉಳಿದ ಕಥೆ ಹೇಳುವಂತೆ ಕೇಳಿದುದು (ಆಶ್ರಮ 35/4–18). ಕಥೆಯನ್ನು ಕೇಳಿ ಯಜ್ಞವನ್ನು ಸಮಾಪ್ತಗೊಳಿಸಿ, ರಾಜನು ಸಮಸ್ತ ಬ್ರಾಹ್ಮಣರಿಗೆ ಸಾಕಷ್ಟು ದಕ್ಷಿಣೆಕೊಟ್ಟು ಸಂತೋಷಗೊಳಿಸಿದನು. ಎಲ್ಲರನ್ನು ಬೀಳ್ಕೊಟ್ಟು ತಕ್ಷಶಿಲೆಯಿಂದ ಹಸ್ತಿನಾ ಪುರಕ್ಕೆ ಬಂದನು (ಸ್ವರ್ಗ 5/33–34). ಮಹಾಭಾರತದಲ್ಲಿ ಬಂದಿರುವ ಜನಮೇಜಯನ ಹೆಸರುಗಳು – ಭಾರತ, ಭರತಶಾರ್ದೂಲ, ಭರತಶ್ರೇಷ್ಠ, ಭಾರತಾಗ್ರ, ಭರತರ್ಷಭ, ಭರತ ಸತ್ತಮ, ಕೌರವ, ಕೌರವಶಾರ್ದೂಲ, ಕೌರವ ನಂದನ, ಕೌರವೇಂದ್ರ, ಕೌರವ್ಯ, ಕುರುಶಾರ್ದೂಲ, ಕುರುಶ್ರೇಷ್ಠ, ಕುರೂದ್ವಹ, ಕುರುಕುಲಶ್ರೇಷ್ಠ, ಕುರು ಕುಲೋದ್ವಹ, ಕುರುನಂದನ, ಕುರುಪ್ರವೀರ,

ಕುರುಪುಂಗವಾಗ್ರಜ, ಕುರುಸತ್ತಮ, ಪಾಂಡವ, ಪಾಂಡವನಂದನ, ಪಾಂಡವೇಯ, ಪಾರಿಕ್ಷಿತ್, ಪೌರವ ಇತ್ಯಾದಿ.

(2) ಒಬ್ಬ ಪರಲೋಕವಾಸಿ ರಾಜ (ಆದಿ 1/228). ಈತ ಯಮರಾಜನ ಸಭೆಯಲ್ಲಿದ್ದಾನೆ (ಸಭಾ 8/19). ಮಾಂಧಾತನು ಈತನನ್ನು ಪರಾಜಯಗೊಳಿಸಿದ್ದನು (ದ್ರೋಣ 62/10). ಈತ ಮೂರೇ ದಿನಗಳಲ್ಲಿ ವಿಜಯಹೊಂದಿ ಈ ಭೂಮಂಡಲದ ರಾಜ್ಯಪ್ರಾಪ್ತಿ ಮಾಡಿಕೊಂಡಿದ್ದನು (ಶಾಂತಿ 124/16). ಬ್ರಾಹ್ಮಣರಿಗಾಗಿ ತನ್ನ ಶರೀರ ಮತ್ತು ಗೋವನ್ನು ತ್ಯಾಗಮಾಡಿ ಈತ ಉತ್ತಮಲೋಕವನ್ನು ಪಡೆದಿದ್ದನು (ಶಾಂತಿ 234/24; ಅನು 137/9).

(3) ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧವಶ ರೆಂಬ ದೈತ್ಯರ ಅಂಶದಿಂದ ಹುಟ್ಟಿದ್ದನು (ಆದಿ 68/63). ಪಾಂಡವರ ಕಡೆಯಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/16). ಈತ ಗದಾಯುದ್ಧದಲ್ಲಿ ಕುಶಲನಾದ ಪರ್ವತೀಯ ರಾಜನಾಗಿದ್ದನು. ಇವನನ್ನು ಧೃತರಾಷ್ಟ್ರಪುತ್ರನಾದ ದುರ್ಮುಖನು ಕೊಂದಿದ್ದನು (ಕರ್ಣ 6/19–20).

(4) ಒಬ್ಬ ರಾಜ. ಈತ ಭರತವಂಶದ ಮಹಾ ರಾಜ ಕುರುವಿನಿಂದ ವಾಹಿನಿಯೆಂಬವಳಲ್ಲಿ ಹುಟ್ಟಿದನು (ಆದಿ 94/51).

(5) ಅಶ್ವವಂತಕುಮಾರ ಪರೀಕ್ಷಿತನ ವಂಶದಲ್ಲಿ ಹುಟ್ಟಿದ ಒಬ್ಬ ರಾಜ. ಅವನ ಮಗನ ಹೆಸರು ಧೃತರಾಷ್ಟ್ರನೆಂದಾಗಿತ್ತು (ಆದಿ 94/53–56). ಈತ ಪರೀಕ್ಷಿತ ವಂಶದ ರಾಜ, ಅರ್ಜುನನ ಮರಿಮಗ, ಅಭಿಮನ್ಯುವಿನ ಮೊಮ್ಮಗ ಅಲ್ಲ (ಶಾಂತಿ 150/3). ಈತ ಪ್ರಮಾದದಿಂದ ಬ್ರಹ್ಮಹತ್ಯೆ ಮಾಡಿದುದರಿಂದ, ಪ್ರಜೆಗಳಿಂದಲೂ, ಬ್ರಾಹ್ಮಣರಿಂದಲೂ, ಪುರೋಹಿತರಿಂದಲೂ ತ್ಯಜಿಸಲ್ಪಟ್ಟನು. ಈತ ದುಃಖಿತನಾಗಿ ಕಾಡಿಗೆ ಹೋಗಿ, ಪುಣ್ಯಕಾರ್ಯಗಳನ್ನೂ, ತಪಸ್ಸನ್ನೂ ಮಾಡತೊಡಗಿದನು. ಈತ ಭೂಮಂಡಲದಲ್ಲಿ ಸುತ್ತಿ, ಸುತ್ತಿ ಬ್ರಹ್ಮಹತ್ಯಾದೋಷ ನಿವಾರಣೆಯ ಉಪಾಯವನ್ನು ಕೇಳಿದನು; ಕೊನೆಗೆ ಶೌನಕ ವಂಶದ ಇಂದ್ರೋತಮುನಿಗೆ ಶರಣಾದನು (ಶಾಂತಿ 150/4–8). ಇಂದ್ರೋತಮುನಿ ಧಿಕ್ಕರಿಸಿದರೂ, ಈತ ಅವನಿಗೇ ಶರಣಾದನು (ಶಾಂತಿ 151/1–9). ಇಂದ್ರೋತನು ಅಶ್ವಮೇಧ ಯಜ್ಞ ಮಾಡಿಸಿ, ಈತನನ್ನು ಪಾಪಮುಕ್ತಗೊಳಿಸಿದನು (ಶಾಂತಿ 152/39).

(6) ಮಹಾರಾಜ ಪೂರುವಿನ ಮಗ. ಇವನ ತಾಯಿಯ ಹೆಸರು ಕೌಸಲ್ಯೆ. ಇವನ ಇನ್ನೊಂದು ಹೆಸರು ಪ್ರವೀರ. ಈತನಿಂದ ಮಧುವಂಶದ ಕನ್ಯೆ ಅನಂತೆಯ ಗರ್ಭದಲ್ಲಿ ಪ್ರಾಚಿನ್ವಂತನ ಜನನ ವಾಯಿತು (ಆದಿ 95/11–12)

(7) ವರುಣನ ಸಭೆಯಲ್ಲಿರುವ ಒಬ್ಬ ನಾಗ (ಸಭಾ 9/10).

(8) ನೀಪವಂಶದ ಒಬ್ಬ ಕುಲಕಳಂಕ ನರೇಶ (ಉದ್ಯೋಗ 174/13).

(9). ಪಾಂಡವಪಕ್ಷದ ಪಾಂಚಾಲದೇಶದ ಯೋಧ. ಈತ ದುರ್ಮುಖನ ಪುತ್ರ. ಈತ ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕನಾಗಿದ್ದನು. ಈತನ ಕುದುರೆಗಳ ವರ್ಣನೆ (ದ್ರೋಣ 23/51, ದ್ರೋಣ 158/39). ಕರ್ಣನೊಂದಿಗೆ ಈತನ ಯುದ್ಧ (ಕರ್ಣ 49/35–37).

**ಜನಸ್ಥಾನ** – ದಂಡಕಾರಣ್ಯದ ಒಂದು ಭಾಗ. ಅದು ಗೋದಾವರಿಯ ತಟದಲ್ಲಿದೆ. ತ್ರೇತಾ ಯುಗದಲ್ಲಿ ರಾಕ್ಷಸ ಸಮುದಾಯವು ಅಲ್ಲಿ ವಾಸಿಸುತ್ತಿತ್ತು. ಇಲ್ಲಿ ವಾಸಿಸುತ್ತಾ, ದೇವತೆಗಳ ಕಾರ್ಯಸಿದ್ಧಿ ಮಾಡುತ್ತಾ, ಶ್ರೀರಾಮನು ಪ್ರಜಾ ಜನರ ಹಿತಕಾಮನೆಯಿಂದ, ಭಯಾನಕ ಕರ್ಮ ಮಾಡುತ್ತಿದ್ದ ಮಾರೀಚ, ಖರ, ದೂಷಣ, ತ್ರಿಶಿರಾ ಮೊದಲಾದ ಹದಿನಾಲ್ಕು ಸಾವಿರ ರಾಕ್ಷಸರ ವಧೆ ಮಾಡಿದ್ದನು (ಸಭಾ 38, ದಾ. ಪಾಠ ಪುಟ 794). ಇಲ್ಲಿಯೇ ರಾಕ್ಷಸರಾಜ ರಾವಣನು, ಮಾಯೆಯಿಂದ ಸ್ವರ್ಣಮಯ ಜಿಂಕೆಯ ರೂಪಧಾರಣೆ ಮಾಡಿದ ಮಾರೀಚ ನೆಂಬ ಹೆಸರಿನ ರಾಕ್ಷಸನ ಮೂಲಕ ಶ್ರೀರಾಮ ನನ್ನು ಮೋಸಕ್ಕೆ ಸಿಲುಕಿಸಿ, ಅವನ ಧರ್ಮಪತ್ನಿ ಸೀತೆಯ ಅಪಹಾರ ಮಾಡಿದ್ದನು (ವನ 147/33–34). ಇಲ್ಲಿರುವಾಗ ಶೂರ್ಪಣಖೆಯ ಕಿವಿಮೂಗುಗಳನ್ನು ಕೊಯಿಸಿದ ಕಾರಣ, ಶ್ರೀರಾಮನಿಗೆ ಜನಸ್ಥಾನವಾಸಿಯಾದ ರಾಕ್ಷಸ ಖರನೊಂದಿಗೆ ಮಹಾವೈರವುಂಟಾಗಿತ್ತು (ವನ 277/42). ಮಾನವಶ್ರೇಷ್ಠ ಶ್ರೀರಾಮನು ಜನ

ಸ್ಥಾನದಲ್ಲಿ ತಪಸ್ವಿಗಳಾದ ಮುನಿಗಳ ರಕ್ಷಣೆ ಗೋಸ್ಕರ ಹದಿನಾಲ್ಕು ಸಾವಿರ ರಾಕ್ಷಸರ ವಧೆ ಮಾಡಿದ್ದನು (ದ್ರೋಣ 59/3). ಜನಸ್ಥಾನದಲ್ಲಿ ಶ್ರೀರಾಮನು ರಾಕ್ಷಸರ ಸಂಹಾರ ಮಾಡಲು ಯೋಚಿಸಿದಾಗ, ಒಬ್ಬ ರಾಕ್ಷಸನ ತಲೆಕಡಿದು ದೂರಕ್ಕೆಸೆದನು. ಅದು ಮಹೋದರ ಮುನಿಯ ತೊಡೆಯನ್ನು ತಾಗಿತು ಮತ್ತು ಅವರ ಎಲುಬು ಮುನಿಯ ತೊಡೆಯೊಳಗೆ ನುಗ್ಗಿತು (ಶಲ್ಯ 39/9–11). ಜನಸ್ಥಾನದಲ್ಲಿ ಗೋದಾವರಿ ಜಲದಲ್ಲಿ ಸ್ನಾನಮಾಡಿ ಉಪವಾಸ ಮಾಡುವ ಪುರುಷನು ರಾಜಲಕ್ಷ್ಮಿಯಿಂದ ಸೇವ್ಯನಾಗುತ್ತಾನೆ (ಅನು 25 /29).

**ಜನಾರ್ದನ** – ಶ್ರೀಕೃಷ್ಣನ ಒಂದು ಹೆಸರು (ವನ 12/24). ದಸ್ಯು ಜನರಿಗೆ ಕಷ್ಟಕೊಟ್ಟದ್ದರಿಂದ ಶ್ರೀಕೃಷ್ಣನ ಹೆಸರು ಜನಾರ್ದನನೆಂದಾಗಿದೆ (ಉದ್ಯೋಗ 70/6). ಮಹಾಭಾರತದ ಅನೇಕ ಸ್ಥಳಗಳಲ್ಲಿ 'ಜನಾರ್ದನ' ಎಂಬ ಹೆಸರಿನ ಬಳಕೆ ಯಾಗಿದೆ (ಭೀಷ್ಮ 25/36, 37, 44; ಭೀಷ್ಮ 27/1, ಭೀಷ್ಮ 34/18; ಭೀಷ್ಮ 35/41). ಇತ್ಯಾದಿ.

**ಜನ್ತು** – ಪ್ರಸಿದ್ಧ ರಾಜ ಸೋಮಕನ ಪುತ್ರ. ಅವನ ಬಗ್ಗೆ ರಾಜಪರಿವಾರದಲ್ಲಿ ಅತೀವ ಆಸಕ್ತಿ ಇತ್ತು (ವನ 127/4–15). ನೂರು ಮಂದಿ ಪುತ್ರರ ಪ್ರಾಪ್ತಿಗಾಗಿ ಜಂತುವನ್ನು ಆಹುತಿಕೊಟ್ಟು ಯಜ್ಞಮಾಡಲು ಋತ್ವಿಜರ ಸಲಹೆ (ವನ 127 /16–27). ಜಂತುವಿಗಾಗಿ ತಾಯಂದಿರ ದುಃಖ. ಋತ್ವಿಜರು ಈತನನ್ನು ತುಂಡರಿಸಿ, ಇವನ ಮೇದಸ್ಸನ್ನು ಆಹುತಿ ನೀಡಿದುದು (ವನ 128/2–6). ಈತ ಪುನಃ ತನ್ನ ತಾಯಿಯ ಗರ್ಭದಿಂದ ಜನ್ಮವೆತ್ತಿದುದು (ವನ 128/8).

**ಜಮದಗ್ನಿ** – ಒಬ್ಬ ಮಹರ್ಷಿ. ಈತ ಸತ್ಯವತಿ ಮತ್ತು ಋಚೀಕ ಮಹರ್ಷಿಯ ಪುತ್ರ. ಔರ್ವನ ಮೊಮ್ಮಗ ಮತ್ತು ಮಹರ್ಷಿ ಚ್ಯವನನಮರಿ ಮಗನಾಗಿದ್ದನು. ಈತ ಋಚೀಕ ನೂರು ಮಕ್ಕಳಲ್ಲಿ ಹಿರಿಯವನಾಗಿದ್ದನು. ಇವನಿಗೂ ನಾಲ್ಕು ಮಕ್ಕಳಿ ದ್ದರು. ಅವರಲ್ಲಿ ಎಲ್ಲರಿಗಿಂತ ಕಿರಿಯವ ಪರಶು ರಾಮನಾಗಿದ್ದನು (ಆದಿ 66/45–49). ಜಮದಗ್ನಿ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/51). ಈತ ಬ್ರಹ್ಮಸಭೆಯಲ್ಲಿರುತ್ತಾನೆ (ಸಭಾ 11/22). ಸತ್ಯವತಿಯ ಗರ್ಭದಿಂದ ಈತನ ಜನ್ಮ (ವನ 115/43). ಈತ ರಾಜಾ ಪ್ರಸೇನಜಿತ ನೊಡನೆ ರೇಣುಕೆಯನ್ನು ಯಾಚಿಸಿದುದು ಮತ್ತು ಆಕೆಯೊಡನೆ ವಿವಾಹವಾದುದು (ವನ 116/2). ಈತನಿಗೆ ರೇಣುಕೆಯ ಗರ್ಭದಿಂದ ಐದು ಪುತ್ರರ ಪ್ರಾಪ್ತಿ (ವನ 116/4). ರೇಣುಕೆಯನ್ನು ವಧಿಸು ವಂತೆ ಈತನಿಂದ ಪುತ್ರರಿಗೆ ಆದೇಶ (ವನ 116/11). ತಾಯಿಯ ವಧೆ ಮಾಡಿದ ಮೇಲೆ ಪರಶುರಾಮನಿಗೆ ಈತನಿಂದ ವರದಾನ (ವನ 116/18). ಕಾರ್ತವೀರ್ಯನ ಪುತ್ರರಿಂದ ಈತನ ವಧೆ (ವನ 116/28; ಶಾಂತಿ 49/50). ದ್ರೋಣಾಚಾರ್ಯನ ಬಳಿಗೆ ಬಂದು, ಯುದ್ಧ ನಿಲ್ಲಿಸುವಂತೆ ಈತನು ಹೇಳಿದುದು (ದ್ರೋಣ 190/35–40). ಇವನ ಜನ್ಮವೃತ್ತಾಂತ (ಶಾಂತಿ 49/29). ಈತನಿಂದ ಪರಶುರಾಮನ ಜನನ (ಶಾಂತಿ 49/31–32). ವೃಷಾದರ್ಭಿಯೊಡನೆ ಈತ ಪ್ರತಿಗ್ರಹದ ದೋಷವನ್ನು ಹೇಳಿದುದು (ಅನು 93/44). ಅರುಂಧತಿಯೊಡನೆ ತಾನು ಸ್ಥೂಲಕಾಯನಾಗದಿರುವ ಕಾರಣ ತಿಳಿಸಿದುದು (ಅನು 93/94). ಕಮಲದಂಟಿನ ಅಪಹರಣದ ವಿಷಯದಲ್ಲಿ ಪ್ರತಿಜ್ಞೆ ಮಾಡಿದುದು (ಅನು 93/120–121). ಅಗಸ್ತ್ಯರ ಕಮಲಗಳ ಕಳ್ಳತನ ವಾದಾಗ ಪ್ರತಿಜ್ಞೆ ಮಾಡಿದುದು (ಅನು 94/25). ರೇಣುಕೆಯ ಕಾಲು ಮತ್ತು ತಲೆ ಸಂತಪ್ತ ವಾದಾಗ ಸೂರ್ಯನ ಮೇಲೆ ಕೋಪಿಸಿದುದು (ಅನು 95/18). ಶರಣಾಗತನಾದ ಸೂರ್ಯನಿಗೆ ಈತ ಅಭಯದಾನ ಮಾಡಿದುದು (ಅನು 96/8–12). ಈತನಿಂದ ಧರ್ಮರಹಸ್ಯದ ವರ್ಣನೆ (ಅನು 127/17–19). ಈತ ಉತ್ತರದಿಕ್ಕಿನ ಋಷಿ (ಅನು 165/44). ಜಮದಗ್ನಿ ಕ್ರೋಧವನ್ನು ಜಯಿಸಿದುದು (ಆಶ್ವ 92/41–46). ಮಹಾ ಭಾರತದಲ್ಲಿ ಬಂದಿರುವ ಜಮದಗ್ನಿಯ ಹೆಸರು ಗಳು – ಆರ್ಚಿಕಭಾರ್ಗವ, ಭಾರ್ಗವನಂದನ, ಭೃಗುಶಾರ್ದೂಲ, ಭೃಗುಶ್ರೇಷ್ಠ, ಭೃಗೂತ್ತಮ, ಋಚೀಕಪುತ್ರ, ಋಚೀಕತನಯ ಇತ್ಯಾದಿ.

**ಜಮ್ಬುಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಜಮ್ಬೂ** – ಮೇರುಪರ್ವತದ ದಕ್ಷಿಣ ಭಾಗ ದಲ್ಲಿರುವ ಒಂದು ಜಾತಿಯ ವೃಕ್ಷ. ಅದು ಯಾವಾಗಲೂ ಹೂಹಣ್ಣುಗಳಿಂದ ತುಂಬಿರುತ್ತದೆ. ಸಿದ್ಧರೂ ಚಾರಣರೂ ಅದರ ಸೇವೆ ಮಾಡುತ್ತಾರೆ.

ಅದರ ಶಾಖೆ ಸ್ವರ್ಗಲೋಕದ ಎತ್ತರಕ್ಕೆ ಹರಡಿದೆ. ಅದರ ಹೆಸರಿನಿಂದಲೇ ಈ ದ್ವೀಪವನ್ನು ಜಂಬೂ ದ್ವೀಪವೆನ್ನುತ್ತಾರೆ (ಸಭಾ 28/6ರ ಅನಂತರ. ದಾಕ್ಷಿಣ್ಯಾತ್ಯ ಪಾಠ ಪುಟ 747).

**ಜಮ್ಬೂಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಜಮ್ಬೂಖಂಡ ವಿನಿರ್ಮಾಣಪರ್ವ** – ಭೀಷ್ಮ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1 ರಿಂದ 10ರ ತನಕ).

**ಜಮ್ಬೂದ್ವೀಪ** – ಏಳು ದ್ವೀಪಗಳಲ್ಲಿ ಒಂದು (ಸಭಾ 28/6ರ ಅನಂತರ ದಾಕ್ಷಿಣಾತ್ಯ ಪಾಠ. ಪುಟ 747). (ಈ ದ್ವೀಪ ಸಮಸ್ತ ಭೂಮಂಡಲದ ಮಧ್ಯದಲ್ಲಿದೆ.). ಇದರ ವಿಸ್ತಾರ ಮೊದಲಾದ ವರ್ಣನೆ (ಭೀಷ್ಮ 11/5–7).

**ಜಮ್ಬೂನದಿ**– ಗಂಗೆಯ 7 ಧಾರೆಗಳಲ್ಲಿ ಒಂದರ ಹೆಸರು (ಭೀಷ್ಮ 6/48).

**ಜಮ್ಬೂಮಾರ್ಗ** – ಪ್ರಾಚೀನ ತೀರ್ಥ. ಅದು ದೇವತೆಗಳಿಂದಲೂ, ಪಿತೃಗಳಿಂದಲೂ, ಋಷಿ ಗಳಿಂದಲೂ ಸೇವ್ಯವಾಗಿದೆ. ಅಲ್ಲಿಗೆ ಹೋದರೆ ಅಶ್ವಮೇಧದ ಫಲವಿದೆ (ವನ 82/40–41). ಸಾಧಾರಣ ಭಾವದಿಂದ ಮೂರು ತಿಂಗಳುಗಳ ವರೆಗೆ, ಮತ್ತು ಇಂದ್ರಿಯ ಸಂಯಮ ಮೂಲಕ ಏಕಾಗ್ರಚಿತ್ತನಾಗಿ, ಒಂದೇ ದಿನ ಜಂಬೂ ಮಾರ್ಗದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಸಿದ್ಧಿಯನ್ನು ಪಡೆಯುತ್ತಾನೆ (ಅನು 25/51)

**ಜಮ್ಭ** –(1) ಒಬ್ಬ ಅಸುರ. ಶ್ರೀಕೃಷ್ಣನು ಅವನನ್ನು ಕೊಂದಿದ್ದನು (ಸಭಾ 38, ದಾಕ್ಷಿಣಾತ್ಯ ಪಾಠ, ಪುಟ 825; ದ್ರೋಣ 11/5).

(2). ಒಬ್ಬ ದೈತ್ಯ. ಶುಕ್ರಾಚಾರ್ಯನು ಈತನನ್ನು ತ್ಯಜಿಸಿದ್ದನು (ಸಭಾ 62/62). ಇಂದ್ರನು ಈತನ ವಧೆ ಮಾಡಿದ್ದನು (ಶಾಂತಿ 98/49).

(3). ಒಬ್ಬ ಅಸುರ. ಈತ ವಿಷ್ಣುವಿನಿಂದ ವಧಿಸ ಲ್ಪಟ್ಟನು (ವನ 102/24).

(4). ರಾಕ್ಷಸರ ಒಂದು ದಳ. ಅದು ರಾವಣನ ಅಧೀನವಿತ್ತು. ಇದು ವಾನರ ಸೈನ್ಯದ ಮೇಲೆ ಆಕ್ರಮಣ ಮಾಡಿತ್ತು (ವನ 285/2).

(5). ಪೌಲೋಮ ಮತ್ತು ಕಾಲಖಂಜವೆಂಬ ದಾನವರಲ್ಲಿ ಸೇರಿದ ಒಬ್ಬ ದಾನವ. ಈತ ನರಾವತಾರನಾದ ಅರ್ಜುನನಿಂದ ಕೊಲ್ಲಲ್ಪಟ್ಟನು (ಉದ್ಯೋಗ 49/14–15).

**ಜಮ್ಭಕ** – ಒಬ್ಬ ಕ್ಷತ್ರಿಯ ರಾಜ. ಈತ ವಸುದೇವ ಪುತ್ರ ಶ್ರೀಕೃಷ್ಣನಿಂದ ತನ್ನ ಕೂಟ ಮತ್ತು ಸೈನಿಕರ ಸಮೇತ ಕೊಲ್ಲಲ್ಪಟ್ಟನು. ಅವನ ಪುತ್ರನು ಮಾತ್ರ ಬದುಕಿದ್ದನು. ಅವನನ್ನು ಸಹದೇವನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ 31/7–8).

**ಜಯ** – (1) ಮಹಾಭಾರತದ ಹೆಸರು (ಆದಿ 1/1 ಮಂಗಲಾಚರಣೆ. ಪ್ರತಿ ಪರ್ವದ ಮಂಗಲಾಚರಣೆ ಆದಿ 62/20)

(2) ಧೃತರಾಷ್ಟ್ರನ ಒಬ್ಬ ಮಹಾರಥಿ ಪುತ್ರ (ಆದಿ 63/119). ಗೋಹರಣದ ಸಂದರ್ಭದಲ್ಲಿ ಈತ ವಿರಾಟನಗರದಲ್ಲಿ ಅರ್ಜುನನ ಮೇಲೆ ಆಕ್ರಮಣ ಮಾಡಿದ್ದನು (ವಿರಾಟ 54/7). ನೀಲನೊಂದಿಗೆ ಈತನ ಯುದ್ಧ (ದ್ರೋಣ 25/45). ಭೀಮ ಸೇನನಿಂದ ಈತನ ವಧೆ (ದ್ರೋಣ 135/36).

(3) ಒಬ್ಬ ದೇವತೆ. ಈತ ಮುಸಲಾಯುಧ ಧರಿಸಿ, ಖಾಂಡವವನ ದಹನಕಾಲದಲ್ಲಿ ಅರ್ಜುನ ಮತ್ತು ಶ್ರೀಕೃಷ್ಣನ ವಿರೋಧ ಪಕ್ಷದಲ್ಲಿನಿಂತಿದ್ದನು (ಆದಿ 226/34)

(4) ಒಬ್ಬ ಪ್ರಾಚೀನ ರಾಜ. ಈತ ಯಮಸಭೆ ಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15).

(5) ಭಗವಂತನಾದ ಸೂರ್ಯನ ಒಂದು ಹೆಸರು (ವನ 3/24).

(6) ವಿರಾಟನಗರದಲ್ಲಿ ವಾಸಿಸುತ್ತಿದ್ದಾಗ ಯುಧಿ ಷ್ಠಿರನ ಗುಪ್ತ ಹೆಸರು (ಇತರ ಸಹೋದರರ ಹೆಸರು ಕ್ರಮವಾಗಿ ಜಯಂತ, ವಿಜಯ, ಜಯ ತ್ಸೇನ ಮತ್ತು ಜಯದ್ಬಲ ಎಂದಾಗಿತ್ತು.). (ವಿರಾಟ 5/35). ಸೂತಪುತ್ರರು ದ್ರೌಪದಿಯನ್ನು ಶ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಿದ್ದಾಗ, ದ್ರೌಪದಿ 'ಜಯ'ನೇ ಮೊದಲಾದ ಗುಪ್ತಹೆಸರುಗಳಿಂದ ಪಾಂಡವರನ್ನು ತನ್ನ ರಕ್ಷಣೆಗೋಸ್ಕರ ಕರೆದಿದ್ದಳು (ವಿರಾಟ 23/12).

(7) ಒಂದು ಮುಹೂರ್ತದ ಹೆಸರು (ಉದ್ಯೋಗ 6/17).

(8) ಕಶ್ಯಪವಂಶದ ಒಂದು ನಾಗ (ಉದ್ಯೋಗ 103/16)

(9) ವಿದುಲೋಪಾಖ್ಯಾನದ ಹೆಸರು (ಉದ್ಯೋಗ

136/18).

(10) ಕೌರವದಳದ ಒಬ್ಬ ಯೋಧ. ಈತ ಶಕುನಿಯ ಜೊತೆಯಲ್ಲಿದ್ದು ಅರ್ಜುನನ ಮೇಲೆ ಆಕ್ರಮಣ ಮಾಡಲು ದುರ್ಯೋಧನನಿಂದ ಕಳುಹಿಸಲ್ಪಟ್ಟಿದ್ದನು (ದ್ರೋಣ 156/119-123).

(11) ಪಾಂಡವಪಕ್ಷದ ಒಬ್ಬ ಪಾಂಚಾಲ ಯೋಧ. ಈತ ಕರ್ಣನಿಂದ ಗಾಯಗೊಂಡಿದ್ದನು (ಕರ್ಣ 56/44).

(12) ನಾಗರಾಜ ವಾಸುಕಿಯಿಂದ ಸ್ಕಂದನಿಗೆ ಕೊಡಲ್ಪಟ್ಟು ಇಬ್ಬರು ಪಾರ್ಷದರಲ್ಲಿ ಒಬ್ಬ ನಾಗ, ಇನ್ನೊಬ್ಬನ ಹೆಸರು ಮಹಾಜಯನೆಂದಾಗಿತ್ತು (ಶಲ್ಯ 45/52).

(13) ವಿಜಯ ಅಥವಾ ಗೆಲುವು (ಶಲ್ಯ 46/64).

(14) ಭಗವಂತನಾದ ವಿಷ್ಣುವಿನ ಹೆಸರು (ಅನು 149/67).

**ಜಯತ್ಸೇನ** – (1) ಮಗಧ ದೇಶದ ಒಬ್ಬ ರಾಜ. ಈತ ಜರಾಸಂಧನ ಮಗ. ಇವನು ಕಾಲೇಯ ಎಂಬ ಹೆಸರಿನ ದೈತ್ಯರಲ್ಲಿ ಸರ್ವಶ್ರೇಷ್ಠ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/48). ಈತ ದ್ರೌಪದೀಸ್ವಯಂವರಕ್ಕೆ ಹೋಗಿದ್ದನು (ಆದಿ 185/8). ಪಾಂಡವರ ಕಡೆಯಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/19). ಒಂದು ಅಕ್ಷೌಹಿಣೀ ಸೇನೆಯೊಂದಿಗೆ ಪಾಂಡವರಲ್ಲಿಗೆ ಇವನು ಆಗಮಿಸಿದ್ದನು (ಉದ್ಯೋಗ 19/8). ಧೃತರಾಷ್ಟ್ರಪುತ್ರ ವಿಜಯನೊಂದಿಗೆ ಈತ ಯುದ್ಧ ಮಾಡಿದನು (ದ್ರೋಣ 25/45).

(2) ಪೂರುವಂಶದ ಸಾರ್ವಭೌಮನಿಂದ ಕೇಕಯ ಕುಮಾರಿ ಸುನಂದೆಯ ಗರ್ಭದಿಂದ ಹುಟ್ಟಿದ ಒಬ್ಬ ರಾಜ. ಈತನ ಪತ್ನಿ ವಿದರ್ಭ ರಾಜ ಕುಮಾರಿ ಸುಶ್ರವೆಯೆಂಬವಳು. ಇವನ ಪುತ್ರನ ಹೆಸರು ಅವಾಚೀನ (ಆದಿ 95/16-17)

(3) ವಿರಾಟನಗರದಲ್ಲಿರುವಾಗ ನಕುಲನ ಗುಪ್ತ ಹೆಸರು (ವಿರಾಟ 5/35; ವಿರಾಟ 23/12).

(4) ಕೌರವ ಪಕ್ಷದ ಒಬ್ಬ ರಾಜ. ಈತ ಮಗಧದ ಜರಾಸಂಧನ ಪುತ್ರ. ಈತ ಒಂದು ಅಕ್ಷೌಹಿಣೀ ಸೇನೆಯೊಂದಿಗೆ ದುರ್ಯೋಧನನ ಸಹಾಯಕ್ಕಾಗಿ ಬಂದಿದ್ದನು (ಭೀಷ್ಮ 16/16). ಈತ ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ಕರ್ಣ 5/30). ('ಜಯತ್ಸೇನ' ಎಂಬ ಹೆಸರಿನ ಇಬ್ಬರು ರಾಜ ಅಥವಾ ರಾಜಕುಮಾರರಿದ್ದಾರೆ. ಇಬ್ಬರೂ ಮಾಗಧರು. ಇಬ್ಬರ ತಂದೆಯ ಹೆಸರೂ ಜರಾಸಂಧ. ಆದರೆ ಸುಪ್ರಸಿದ್ಧ ರಾಜ ಜರಾಸಂಧನ ಪುತ್ರ ಸಹದೇವನೇ ತಂದೆಯ ಅನಂತರ ಮಗಧದ ರಾಜನಾದನು. ಅವನು ತನ್ನ ಸಹೋದರ ಜಯತ್ಸೇನನೊಂದಿಗೆ ಪಾಂಡವ ಪಕ್ಷವನ್ನೇ ಸೇರಿಕೊಂಡಿದ್ದನು. ಆದುದರಿಂದ ಈ ಎರಡನೇ ಜಯತ್ಸೇನ ಮಗಧ ದೇಶವಾಸಿ ಯಾರೋ ಇನ್ನೊಬ್ಬ ಜರಾಸಂಧನ ಪುತ್ರನಾಗಿದ್ದನು ಎಂದೇ ನಿರ್ಧರಿಸಬೇಕಾಗುತ್ತದೆ.)

(5) ಧೃತರಾಷ್ಟ್ರನ ಒಬ್ಬ ಮಗ. ಶತಾನೀಕನಿಂದ ಈತನ ಪರಾಜಯ (ಭೀಷ್ಮ 79/44-45). ಭೀಮಸೇನನಿಂದ ಈತನ ವಧೆ (ಶಲ್ಯ 26/11-12).

**ಜಯತ್ಸೇನಾ** – ಸ್ಕಂದನ ಅನುಚರೀ ಮಾತೃಕೆ (ಶಲ್ಯ 46/6).

**ಜಯದ್ಬಲ** – ವಿರಾಟನಗರದಲ್ಲಿರುವಾಗ ಸಹದೇವನ ಗುಪ್ತಹೆಸರು (ವಿರಾಟ 5/35; ವಿರಾಟ 23/12).

**ಜಯದ್ರಥ** – (1) ಸಿಂಧು ನರೇಶ ವೃದ್ಧಕ್ಷತ್ರನ ಪುತ್ರ. ಇವನ ಪತ್ನಿಯ ಹೆಸರು ದುಃಶಲಾ ಎಂದಾಗಿತ್ತು (ಆದಿ 67/109-110). ದುಃಶಲೆಯೊಂದಿಗೆ ಈತನ ವಿವಾಹ (ಆದಿ 116/17-18). ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/21). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಭಾಗವಹಿಸಿದ್ದನು (ಸಭಾ 34/8). ಕೌರವಸಭೆಯಲ್ಲಿ ಯುಧಿಷ್ಠಿರನು ಜೂಜಾಡುವಾಗ ಈತನೂ ಅಲ್ಲಿದ್ದನು (ಸಭಾ 58/26). ಜಯದ್ರಥನು ವಿವಾಹೇಚ್ಛೆಯಿಂದ ಶಾಲ್ವದೇಶದ ಕಡೆಗೆ ಹೋಗುತ್ತಿರುವಾಗ, ತನ್ನ ಒಡನಾಡಿಗಳೊಂದಿಗೆ ಕಾಮ್ಯಕವನಕ್ಕೆ ತಲುಪಿದುದು ಮತ್ತು ದ್ರೌಪದಿಯನ್ನು ನೋಡಿ ಚಕಿತನಾದುದು; ನಿಂದಾರ್ಹ ಭಾವನೆಯು ಹುಟ್ಟಿದ್ದರಿಂದ ಆಕೆಯ ಪರಿಚಯ ತಿಳಿಯಲು ಕೋಟಿಕಾಸ್ಯನನ್ನು ಆಕೆಯ ಬಳಿ ಕಳುಹಿಸಿದುದು (ವನ 264/6-16). ದ್ರೌಪದಿಯೊಂದಿಗೆ ಈತನ ಅನುಚಿತ ಚರ್ಚೆ (ವನ 267/13-17). ದ್ರೌಪದಿಯಿಂದ ಈತನಿಗೆ

ಕಟುವಾದ ನಿಂದನೆ (ವನ 267/19–20 ಮತ್ತು ದಾಕ್ಷಿಣಾತ್ಯ ಪಾಠದ ಶ್ಲೋಕಗಳು). ದ್ರೌಪದಿಯು ಈತನನ್ನು ಧಿಕ್ಕರಿಸಿದುದು ಮತ್ತು ನಿಂದಿಸಿದುದು (ವನ 268/2–9). ಈತ ದ್ರೌಪದಿಯನ್ನು ಒಪ್ಪಿಸಲು ಪ್ರಯತ್ನಸಿದುದು (268/10–12). ಪುನಃ ದ್ರೌಪದಿಯಿಂದ ಈತನಿಗೆ ಕಠಿನವಾದ ನಿಂದನೆ (ವನ 268/13–22). ದ್ರೌಪದಿಯನ್ನು ಹಿಡಿಯಲು ಆತನ ಪ್ರಯತ್ನ. ಆಕೆಯ ಢಿಕ್ಕಿ ಯಿಂದ ಈತ ತುಂಡಾದ ಮರದಂತೆ ಬಿದ್ದುದು; ಎರಡನೇ ಬಾರಿ ಎದ್ದು ಆಕೆಯನ್ನು ಹಿಡಿದುದು ಮತ್ತು ರಥದಲ್ಲಿ ಕುಳ್ಳಿರಲು ಬಲಾತ್ಕಾರ ಮಾಡಿ ದುದು (ವನ 268/23–25). ಧೌಮ್ಯಮುನಿ ಜಯದ್ರಥನನ್ನು ನಿಂದಿಸಿದುದು (ವನ 268/ 26–27). ಜಯದ್ರಥನಿಂದ ಅಪಹೃತಳಾದ ದ್ರೌಪದಿಯ ಹಿಂದಿನಿಂದ ಧೌಮ್ಯಮುನಿ ಹೋದುದು (ವನ 268/28). ಯುಧಿಷ್ಠಿರನ ಮುಂದೆ ಧಾತ್ರೇಯಿಕೆಯಿಂದ ಜಯದ್ರಥನ ಅತ್ಯಾ ಚಾರದ ವರ್ಣನೆ (ವನ 269/17–22). ಪಾಂಡ ವರು ಜಯದ್ರಥನನ್ನು ಆಹ್ವಾನಿಸಿದುದು (ವನ 269/28). ದ್ರೌಪದಿಯನ್ನು ಬಿಟ್ಟು ಜಯದ್ರಥನ ಪಲಾಯನ (ವನ 271/1–33). ಭೀಮಾ ರ್ಜುನರು ಜಯದ್ರಥನನ್ನು ಹಿಂಬಾಲಿಸಿದುದು ಮತ್ತು ಅವನನ್ನು ನಿಂದಿಸಿದುದು (ವನ 271 /53–59). ಭೀಮಸೇನನು ಜಯದ್ರಥನನ್ನು ಹಿಡಿದು ಹೊಡೆದುದು ಮತ್ತು ಅರೆಜೀವಮಾಡಿ ದುದು. ಅವನ ತಲೆಬೋಳಿಸಿ ಐದು ಜುಟ್ಟು ಇರಿಸಿದುದು. ರಾಜರ ಸಭೆಯಲ್ಲಿ ತನ್ನ ಪರಿಚಯ ಹೇಳುವಾಗ ಯುಧಿಷ್ಠಿರನ ದಾಸನೆನ್ನಲು ಒತ್ತಾ ಯಿಸಿ, ರಥದಲ್ಲಿ ಹಾಕಿದುದು, ಅದೇ ಸ್ಥಿತಿಯಲ್ಲಿ ತಂದು ಯುಧಿಷ್ಠಿರನ ಮುಂದೆ ನಿಲ್ಲಿಸಿದುದು (ವನ 262/2–15). ಈತನನ್ನು ಬಿಟ್ಟುಬಿಡಲು ಯುಧಿಷ್ಠಿರನ ಆದೇಶ ಮತ್ತು ಯುಧಿಷ್ಠಿರನ ದಾಸ್ಯಸ್ವೀಕಾರ ಮಾಡಿದ ಕಾರಣ, ಈತನನ್ನು ಬಿಟ್ಟುಬಿಡಲು ಭೀಮಸೇನನೊಡನೆ ದ್ರೌಪದಿಯಿಂ ದಲೂ ಒತ್ತಾಯ (ವನ 272/17–18). ಜಯ ದ್ರಥನ ಬಿಡುಗಡೆ, ಯುಧಿಷ್ಠಿರನು ಈತನ ಪಾಪ ಕಾರ್ಯಕ್ಕಾಗಿ ಧಿಕ್ಕರಿಸಿ, ದಾಸ್ಯದಿಂದ ಮುಕ್ತ ಗೊಳಿಸಿದುದು ಮತ್ತು ಈತ ಸಂತೋಷದಿಂದ ಹಿಂತಿರುಗಲು ಆಜ್ಞೆಯನ್ನಿತ್ತದ್ದು (ವನ 272/21– 24). ಜಯದ್ರಥನು ಲಜ್ಜಿತನಾಗಿ, ನೇರಾಗಿ ಗಂಗಾದ್ವಾರಕ್ಕೆ ಹೋದುದು ಮತ್ತು ತಪಸ್ಸಿನಿಂದ ಭಗವಂತನಾದ ಶಂಕರನನ್ನು ಪ್ರಸನ್ನಗೊಳಿಸಿ, ಒಂದು ದಿನದ ಅವಧಿಯಲ್ಲಿ ಅರ್ಜುನನ ಹೊರತು ಇತರ ಪಾಂಡವರನ್ನು ಜಯಿಸಲು ವರದಾನ ಪಡೆದುದು (ವನ 272/25–29). ಈತ ಸೇನಾಸಮೇತನಾಗಿ ದುರ್ಯೋಧನನ ಸಹಾಯಕ್ಕೆ ಬಂದುದು (ಉದ್ಯೋಗ 19/19). ಪ್ರಥಮ ದಿನದ ಯುದ್ಧದಲ್ಲಿ ದ್ರುಪದನೊಡನೆ ದ್ವಂದ್ವಯುದ್ಧ (ಭೀಷ್ಮ 45/55–57). ಭೀಮ ಸೇನನಿಂದ ದುರ್ಯೋಧನನನ್ನು ರಕ್ಷಿಸಿ, ಭೀಮ ಸೇನನನ್ನು ಆಕ್ರಮಿಸಿದುದು (ಭೀಷ್ಮ 79/17– 20). ಭೀಮಸೇನನ ಪೌರುಷದಿಂದ ಈತ ಕಿಂಕರ್ತವ್ಯ ವಿಮೂಢನಾದುದು (ಭೀಷ್ಮ 85/ 35ರ ಅನಂತರ). ಭೀಮಸೇನ ಮತ್ತು ಅರ್ಜುನ ನೊಂದಿಗೆ ಯುದ್ಧ (ಭೀಷ್ಮ 113ನೇ ಅಧ್ಯಾಯ ದಿಂದ 114ನೇ ಅಧ್ಯಾಯದವರೆಗೆ). ವಿರಾಟ ನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 116/42–44). ಅಭಿಮನ್ಯುವಿನೊಂದಿಗೆ ಯುದ್ಧ (ದ್ರೋಣ 14/64–74). ಕ್ಷತ್ರವರ್ಮನೊಂದಿಗೆ ಯುದ್ಧ (ದ್ರೋಣ 25/10–12). ವ್ಯೂಹದ್ವಾರ ದಲ್ಲಿ ಪಾಂಡವರನ್ನು ತಡೆದುದು (ದ್ರೋಣ 42/7). ಧೃತರಾಷ್ಟ್ರನು ಕೇಳಿದಾಗ ಸಂಜಯ ನಿಂದ ಈತನಿಗೆ ವರ ಪ್ರಾಪ್ತವಾದ ವರ್ಣನೆ (ದ್ರೋಣ 42/12–22). ಪಾಂಡವರೊಂದಿಗೆ ಯುದ್ಧ ಮತ್ತು ವ್ಯೂಹದ್ವಾರವನ್ನು ಬಿಡದೆ ತಡೆದುದು (ದ್ರೋಣ 43ನೇ ಅಧ್ಯಾಯ). ಈತ ತನ್ನ ವಧೆಗಾಗಿ ಅರ್ಜುನನು ಮಾಡಿದ ಪ್ರತಿಜ್ಞೆ ಯನ್ನು ತಿಳಿದು, ಕೌರವರ ಮುಂದೆ ತನ್ನ ಭಯ ಪ್ರಕಟಪಡಿಸಿ, ಅಲ್ಲಿಂದ ಹೊರಟುಹೋಗಲು ಆಜ್ಞೆಯಾಚಿಸಿದುದು (ದ್ರೋಣ 74/4–12). ಇವನ ಧ್ವಜದ ವರ್ಣನೆ (ದ್ರೋಣ 105/20– 22). ಅರ್ಜುನನೊಂದಿಗೆ ಈತನ ಯುದ್ಧ (ದ್ರೋಣ 145ನೇ ಅಧ್ಯಾಯ). ಶ್ರೀಕೃಷ್ಣನ ಪ್ರೇರಣೆಯಿಂದ ಅರ್ಜುನನು ಜಯದ್ರಥನ ತುಂಡಾದ ತಲೆಯನ್ನು ಸಮಂತಪಂಚಕದಲ್ಲಿ ತಪಸ್ಸಿನಲ್ಲಿದ್ದ ಈತನ ತಂದೆಯ ತೊಡೆಯ ಮೇಲೆ ಬೀಳಿಸಿದುದು; ಆತನಿಂದಾಗಿ ಆ ತಲೆ ನೆಲದ ಮೇಲೆ ಬಿದ್ದುದರಿಂದ, ಆತನ ಶಿರಸ್ಸು

ನೂರು ಹೋಳಾದುದು (ದ್ರೋಣ 146/104–130). ಮಹಾಭಾರತದಲ್ಲಿ ಬಂದಿರುವ ಜಯದ್ರಥನ ಹೆಸರುಗಳು– ಸೈಂಧವ, ಸೈಂಧವಕ, ಸೌವೀರ, ಸೌವೀರಜ, ಸೌವೀರರಾಜ, ಸಿಂಧುಪತಿ, ಸಿಂಧುರಾಜ, ಸಿಂಧುರಾಟ್, ಸಿಂಧುಸೌವೀರಭರ್ತಾ, ಸುವೀರ, ಸುವೀರರಾಷ್ಟ್ರಪ, ವಾರ್ಧಕ್ಷತ್ರಿ ಇತ್ಯಾದಿ.

(2) ಒಬ್ಬ ರಾಜ. ಈತ ಯಮಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/36)

**ಜಯದ್ರಥವಧಪರ್ವ** – ದ್ರೋಣಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 85 ರಿಂದ 152ರ ವರೆಗೆ).

**ಜಯದ್ರಥ ವಿಮೋಕ್ಷಣಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 272).

**ಜಯಂತ** – (1) ಇಂದ್ರನ ಮಗ. ಇವನ ತಾಯಿಯ ಹೆಸರು ಶಚಿ (ಆದಿ 112/3–4).

(2) ವಿರಾಟ ನಗರದಲ್ಲಿರುವಾಗ ಭೀಮಸೇನನ ಗುಪ್ತ ಹೆಸರು (ವಿರಾಟ 5/35, ವಿರಾಟ 23/12).

(3) ಒಬ್ಬ ಪಾಂಚಾಲ ಶಿರೋಮಣಿ ಮಹಾಮನಸ್ವೀ ವೀರ. ಅವನು ಮಹಾರಥಿಯೆಂದು ಗಣಿಸಲ್ಪಟ್ಟಿದ್ದನು (ಉದ್ಯೋಗ 171/11).

(4) ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/20).

(5) ವಿಷ್ಣುವಿನ ಒಂದು ಹೆಸರು (ಅನು 149/98).

(6) ದ್ವಾದಶಾದಿತ್ಯರಲ್ಲಿ ಒಬ್ಬ (ಅನು 150/15).

**ಜಯಂತೀ** – ಸರಸ್ವತಿ ತಟದಲ್ಲಿರುವ ಒಂದು ತೀರ್ಥಸ್ಥಾನ. ಅಲ್ಲಿ ಸೋಮತೀರ್ಥದಲ್ಲಿ ಸ್ನಾನ ಮಾಡಿದ ಮನುಷ್ಯನಿಗೆ ರಾಜಸೂಯ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 83/19).

**ಜಯಪ್ರಿಯಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/12).

**ಜಯರಾತ** – ಕೌರವ ಪಕ್ಷದ ಯೋಧ. ಅವನು ಕಲಿಂಗ ದೇಶದ ರಾಜಕುಮಾರನಾಗಿದ್ದನು. ಭೀಮಸೇನನಿಂದ ಈತನ ವಧೆ (ದ್ರೋಣ 155/28).

**ಜಯಸೇನ** – ಮಗಧ ದೇಶದ ಒಬ್ಬ ರಾಜಕುಮಾರ. ಈತ ಯುಧಿಷ್ಠಿರನ ಸಭೆಯಲ್ಲಿ ಕುಳ್ಳಿರುತ್ತಿದ್ದನು (ಸಭಾ 4/26).

**ಜಯಾ** – ದುರ್ಗಾದೇವಿಯ ಒಂದು ಹೆಸರು (ವಿರಾಟ 6/16).

**ಜಯಾನೀಕ** – (1) ದ್ರುಪದ ಪುತ್ರನ ಒಬ್ಬ ಪುತ್ರ. ಅವನು ಅಶ್ವತ್ಥಾಮನಿಂದ ಹತನಾದನು (ದ್ರೋಣ 156/181).

(2) ವಿರಾಟನ ಸಹೋದರ (ದ್ರೋಣ 158/42).

**ಜಯಾವತೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/4).

**ಜಯಾಶ್ವ** – (1) ದ್ರುಪದನ ಒಬ್ಬ ಮಗ. ಈತ ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟ (ದ್ರೋಣ 156/181).

(2) ವಿರಾಟನ ಸಹೋದರ (ದ್ರೋಣ 158/42).

**ಜರತ್ಕಾರು** – (1) ಯಾಯಾವರವೆಂಬ ಹೆಸರಿನ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದ ಊರ್ಧ್ವರೇತಸ್ಕನಾದ ಒಬ್ಬ ಮಹಾನ್ ಋಷಿ. ಈತ ಆಸ್ತೀಕನ ತಂದೆ (ಆದಿ 13/11; ಆದಿ 15/2–3). (ಯಾಯಾವರ ಶಬ್ದ ಅರ್ಥವನ್ನು ಇದೇ ಅಧ್ಯಾಯದ ಟಿಪ್ಪಣಿಯಲ್ಲಿ ನೋಡಬೇಕು. ಈತನಿಂದ ಕಂದಕದಲ್ಲಿ ನೇತಾಡುತ್ತಿದ್ದ ತನ್ನ ಪಿತೃಗಳ ದರ್ಶನ. ಅವರ ಆದೇಶ ಪ್ರಕಾರ ವಿವಾಹವಾಗಲು ಈತನ ನಿಶ್ಚಯ (ಆದಿ 13/15–27). ಈತನ ವಿವಾಹದ ನಿಬಂಧನೆಗಳು (ಆದಿ 13/28–31). ನಾಗರಾಜ ವಾಸುಕಿಯಿಂದ ಭಿಕ್ಷಾರೂಪದಲ್ಲಿ ಸಿಕ್ಕಿದ, ತನ್ನ ಸಮಾನವಾದ ಹೆಸರುಳ್ಳ ಕನ್ಯೆಯೊಂದಿಗೆ ಈತನ ವಿವಾಹದ ಕಥೆ (ಆದಿ 14/2–7). ಈತನಿಗೆ ಜರತ್ಕಾರುವೆಂದು ಹೆಸರಾಗಲು ಕಾರಣ (ಆದಿ 40/3–4). ಈತನ ತಪಸ್ಸಿನ ವರ್ಣನೆ (ಆದಿ 40/9). ಹಳ್ಳದಲ್ಲಿ ತೂಗಾಡುತ್ತಿದ್ದ ಪಿತೃಗಳು ತಮ್ಮ ದುಃಖದ ಕಥೆ ತಿಳಿಸಿದುದು ಮತ್ತು ಈತನ ಪರಿಚಯ ಕೇಳಿದುದು (ಆದಿ 45/3–32). ಪಿತೃಗಳಿಗೆ ತನ್ನ ಪರಿಚಯ ಹೇಳಿ, ಕೆಲವು ನಿಬಂಧನೆಗಳಿಗೆ ಒಳಪಟ್ಟು ವಿವಾಹವಾಗಲು ಈತ ಅವರಿಗೆ ವಚನಕೊಟ್ಟದ್ದು (ಆದಿ 46/2–10). ಪತ್ನಿಗಾಗಿ ಸಂಚರಿಸುತ್ತಾ, ಎಲ್ಲಿಯೂ ಪತ್ನಿ ದೊರಕದೆ, ಉದಾಸೀನನಾಗಿ, ಕಾಡಿನಲ್ಲಿ ಜೋರು ಜೋರಾಗಿ ಕರೆದುದು ಮತ್ತು ಮೆಲ್ಲ ಮೆಲ್ಲಗೆ ಕನ್ಯಾಭಿಕ್ಷೆ

ಯಾಚಿಸಿದುದು (ಆದಿ 46/12–13). ದೂತರ ಮೂಲಕ ಈತನ ಉದ್ದೇಶ ತಿಳಿದು, ನಾಗರಾಜ ವಾಸುಕಿ ಈತನ ಎಲ್ಲಾ ಶರ್ತಗಳನ್ನು ಒಪ್ಪಿ, ಇವನೊಂದಿಗೆ ತನ್ನ ಸೋದರಿಯ ವಿವಾಹ ಮಾಡಿದುದು (ಆದಿ 46/19–23; ಆದಿ 47/5). ಪತ್ನಿಯೊಂದಿಗೆ ಈತನ ನಿಬಂಧನೆ. ಋತುಕಾಲ ಬಂದಾಗ ಆಕೆಯಲ್ಲಿ ಗರ್ಭಾಧಾನ (ಆದಿ 47/8–13). ಧರ್ಮಲೋಪದ ಭಯದಿಂದ, ಪತ್ನಿಯು ತನ್ನನ್ನು ನಿದ್ರೆಯಿಂದ ಎಬ್ಬಿಸಿದ ಕಾರಣ, ಈತ ನಿಂದ ಪತ್ನಿಯ ಪರಿತ್ಯಾಗ (ಆದಿ 47/15–43). ಪುತ್ರನಿಗಾಗಿ ಪತ್ನಿಯು ಪ್ರಾರ್ಥಿಸಿದಾಗ, 'ನಿನ್ನ ಉದರದಲ್ಲಿ ಗರ್ಭವಿದೆ' ಎಂದು ಪತ್ನಿಗೆ ಈತನ ಆಶ್ವಾಸನೆ (ಆದಿ 47/42).

(2) ನಾಗರಾಜ ವಾಸುಕಿಯ ಸಹೋದರಿ. ಜರತ್ಕಾರುವೆಂಬ ಹೆಸರಿನ ಋಷಿಯ ಪತ್ನಿ ಮತ್ತು ಆಸ್ತೀಕನ ತಾಯಿ (ಆದಿ 14/6–7). ಧರ್ಮಲೋಪದ ಭಯದಿಂದ ಪತಿಯನ್ನು ಎಬ್ಬಿಸಿದ ಕಾರಣ, ಆತನಿಂದ ಈಕೆಯ ಪರಿತ್ಯಾಗ (ಆದಿ 47/16–43). ಪುತ್ರನಿಗಾಗಿ ಪ್ರಾರ್ಥಿಸಿದಾಗ ಜರತ್ಕಾರು ಋಷಿಯಿಂದ ಈಕೆಗೆ ಆಶ್ವಾಸನೆ (ಆದಿ 47/43). ಜರತ್ಕಾರು ಋಷಿ ಹೊರಟು ಹೋದಾಗ, ಮಾತೃಶಾಪದಿಂದ ವ್ಯಾಕುಲನಾದ ವಾಸುಕಿಗೆ ಈಕೆಯ ಆಶ್ವಾಸನೆ (ಆದಿ 48/1–13). ತನ್ನ ಪುತ್ರ ಆಸ್ತೀಕನನ್ನು ಸರ್ಪಗಳ ರಕ್ಷಣೆಗಾಗಿ ಪ್ರೇರಿಸಿದುದು (ಆದಿ 54/5–16).

**ಜರಾ** – (1) ಒಬ್ಬ ರಾಕ್ಷಸಿ. ಈಕೆ ಜರಾಸಂಧನ ಶರೀರದ ಎರಡೂ ಹೋಳುಗಳನ್ನು ಜೋಡಿಸಿದ್ದಳು (ಸಭಾ 17/40). ಪೂರ್ವಕಾಲದಲ್ಲಿ ಬ್ರಹ್ಮನು ಗೃಹದೇವಿ ಎಂಬ ಹೆಸರಿನಿಂದ ಈಕೆಯ ಸೃಷ್ಟಿ ಮಾಡಿದ್ದನು. ಈಕೆಯನ್ನು ದಾನವರ ವಿನಾಶಕ್ಕಾಗಿ ನಿಯುಕ್ತಗೊಳಿಸಿದ್ದನು. ತನ್ನ ಗೋಡೆಯ ಮೇಲೆ ಅನೇಕ ಪುತ್ರರಿಂದೊಡಗೂಡಿದ ಯುವತಿ ಸ್ತ್ರೀಯ ರೂಪದಲ್ಲಿ ಈಕೆಯನ್ನು ಬರೆಯುವವರ, ಈಕೆಯ ಚಿತ್ರವನ್ನು ಅಂಕಿಸುವವರ ಮನೆಯಲ್ಲಿ, ಸದಾ ವೃದ್ಧಿ ಆಗುತ್ತದೆ. ಅದಲ್ಲವಾದರೆ ಅವರು ಹಾನಿಗೊಳಗಾಗುತ್ತಾರೆ. ಮಗಧರಾಜ ಬೃಹದ್ರಥನ ಮನೆಯಲ್ಲಿ ಬಹಳ ಚೆನ್ನಾಗಿ ಈಕೆಯ ಪೂಜೆ ನಡೆಯುತ್ತಿತ್ತು. ಆದುದರಿಂದ ಆಕೆ ಪ್ರಸನ್ನಳಾಗಿ, ಎರಡು ಭಾಗವಾಗಿ ಹುಟ್ಟಿದ ಶಿಶು ಜರಾಸಂಧನನ್ನು ಜೋಡಿಸಿ ಬೃಹದ್ರಥನಿಗೆ ಸುರಕ್ಷಿತರೂಪದಲ್ಲಿ ಕೊಟ್ಟಿದ್ದಳು (ಸಭಾ 18/1–7). ಈಕೆ ರಾಜಾ ಬೃಹದ್ರಥನಿಗೆ ತನ್ನ ಪರಿಚಯ ಹೇಳಿದುದು (ಸಭಾ 18/1–8). ಈಕೆಯ ಮರಣ ಕಾರಣವನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದುದು (ದ್ರೋಣ 181/12–14).

(2) ಜರಾ ಎಂಬ ಹೆಸರಿನ ವ್ಯಾಧ. ಈತ ಮೃಗವೆಂಬ ಭ್ರಮೆಯಿಂದ ನಿದ್ರಿಸುತ್ತಿದ್ದ ಶ್ರೀಕೃಷ್ಣನ ಒಂದು ಕಾಲಿಗೆ ಬಾಣ ಹೊಡೆದಿದ್ದನು (ಮೌಸಲ 4/22–23).

**ಜರಾಯು** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಜರಾಸಂಧ** – (1) (ನಾಮಾಂತರ ಶತ್ರುಸಹ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/100). ಶತ್ರುಸಹನೆಂಬ ಹೆಸರಿನಲ್ಲಿ ಭೀಮಸೇನನಿಂದ ಈತನ ವಧೆ (ದ್ರೋಣ 137/30).

(2). ವಿಪ್ರಚಿತ್ತಿಯೆಂಬ ದಾನವನ ಅಂಶದಿಂದ ಹುಟ್ಟಿದವ. ಮಗಧರಾಜ ಬೃಹದ್ರಥನ ಪುತ್ರ (ಸಭಾ 17/12). ಶ್ರೀಕೃಷ್ಣನಿಂದ ಈತನ ಉತ್ಪತ್ತಿಯ ವರ್ಣನೆ (ಸಭಾ 17/12–51). ಚಂಡಕೌಶಿಕ ಮುನಿಯಿಂದ ಕೃಪಾಪೂರ್ವಕ ದೊರಕಿದ ಹಣ್ಣನ್ನು ತಾಯಂದಿರು ತಿಂದುದರಿಂದ, ಅವರ ಗರ್ಭದಿಂದ ಈತನ ಜನನ (ಸಭಾ 17/29). ಇವನಿಗೆ ಜರಾಸಂಧನೆಂದು ಹೆಸರಾಗಲು ಕಾರಣ (ಸಭಾ 18/11). ಚಂಡಕೌಶಿಕನಿಂದ ಈತನ ಭವಿಷ್ಯ ಕಥನ (ಸಭಾ 19/4–15). ದ್ರೌಪದೀಸ್ವಯಂವರಕ್ಕೆ ಈತನ ಆಗಮನ (ಆದಿ 185/23). ಸ್ವಯಂವರದಲ್ಲಿ ಧನುಸ್ಸನ್ನು ಎತ್ತುತ್ತಿದ್ದಾಗ, ಮೊಣಕಾಲೂರಿ ಬಿದ್ದುದು ಮತ್ತು ಲಜ್ಜಿತನಾಗಿ ಸ್ವದೇಶಕ್ಕೆ ಹಿಂತಿರುಗಿದುದು (ಆದಿ 185/27). ಶ್ರೀಕೃಷ್ಣನಿಂದ ಧರ್ಮರಾಯನಿಗೆ ಈತನ ಪರಾಕ್ರಮದ ವರ್ಣನೆ (ಸಭಾ 14/62–70). ಶ್ರೀಕೃಷ್ಣನೊಂದಿಗೆ ಈತನ ವೈರದ ಕಾರಣ (ಸಭಾ 19/22). ಶ್ರೀ ಕೃಷ್ಣನನ್ನು ಕೊಲ್ಲಲು ಈತ ಮಗಧದಿಂದ ಮಥುರೆಗೆ ಗದಾಪ್ರಹಾರ ಮಾಡಿದುದು (ಸಭಾ 19/23). ಶ್ರೀಕೃಷ್ಣನೊಂದಿಗೆ ಈತನ ಸಂವಾದ (ಸಭಾ 21/42–47). ಈತ ಶಿವನನ್ನು ಪ್ರಸನ್ನಗೊಳಿಸುವುದಕ್ಕಾಗಿ ನರಬಲಿ ಕೊಡಲು ರಾಜರನ್ನು ನಿಗ್ರಹಿಸಿದುದು (ಸಭಾ 22/8). ಭೀಮಸೇನನೊಂದಿಗೆ ಈತನ

ಯುದ್ಧ (ಸಭಾ 23/10 ರಿಂದ ಸಭಾ 24/6ರ ವರೆಗೆ). ಭೀಮಸೇನನಿಂದ ಈತನ ಮರಣ (ಸಭಾ 24/7). ಶ್ರೀಕೃಷ್ಣನು ಈತನ ವಧಾಕಾರಣ ವನ್ನು ಅರ್ಜುನನಿಗೆ ಹೇಳಿದುದು (ದ್ರೋಣ 181/8–16). ಕರ್ಣನಿಂದ ಪರಾಜಿತನಾಗಿ, ಆತನಿಗೆ ಮಾಲಿನಿ ಎಂಬ ನಗರವನ್ನು ಕೊಟ್ಟು, ಅವನೊಂದಿಗೆ ಈತ ಸಂಧಿ ಮಾಡಿದುದರ ವರ್ಣನೆ (ಶಾಂತಿ 5/6). ಮಹಾಭಾರತದಲ್ಲಿ ಬಂದಿರುವ ಜರಾಸಂಧನ ಹೆಸರುಗಳು – ಬಾರ್ಹದ್ರಥ, ಮಗಧ, ಮಗಧಾಧಿಪ, ಮಗಧಾಧಿ ಪತಿ, ಮಗಧೇಶ್ವರ ಇತ್ಯಾದಿ.

(3) ಮಗಧ ದೇಶದ ಇನ್ನೊಬ್ಬ ಕ್ಷತ್ರಿಯ. ಅವನ ಮಗ ಜಯತ್ಸೇನ ಕೌರವಪಕ್ಷದ ಯೋಧ ನಾಗಿದ್ದನು. ಈತ ಅಭಿಮನ್ಯುವಿನಿಂದ ಕೊಲ್ಲಲ್ಪ ಟ್ಟನು (ಕರ್ಣ 5/30).

**ಜರಾಸಂಧವಧಪರ್ವ** – ಸಭಾ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 20 ರಿಂದ 24ರ ವರೆಗೆ).

**ಜರಿತಾ** – ಮಂದಪಾಲ ಋಷಿಯ ಪಕ್ಷಿಣೀ ಪತ್ನಿ (228/16). ಮಂದಪಾಲನಿಂದ ಈಕೆಯ ಗರ್ಭದಲ್ಲಿ ಹುಟ್ಟಿದ ಪುತ್ರರು – ಜರಿತಾರಿ, ಸಾರಿಸೃಕ್ಕ, ಸ್ತಂಬಮಿತ್ರ ಮತ್ತು ದ್ರೋಣ (ಆದಿ 229/9). ಖಾಂಡವವನ ದಹನ ಸಮಯದಲ್ಲಿ ಪುತ್ರರ ಕುರಿತು ಈಕೆಯ ಚಿಂತೆ ಮತ್ತು ಪುತ್ರರ ಮೂಲಕ, ಆತ್ಮರಕ್ಷಣೆಗಾಗಿ ಬೇರೆಲ್ಲಾದರೂ ಹೋಗಲು ಈಕೆಗೆ ಆದೇಶ (ಆದಿ 229/12). ಈಕೆ ತನ್ನ ಮಕ್ಕಳೊಂದಿಗೆ ಚರ್ಚಿಸಿದುದು (ಆದಿ 230 ಅಧ್ಯಾಯ). ಅಗ್ನಿದೇವನ ಕೃಪೆಯಿಂದ ಈಕೆಯ ಮಕ್ಕಳ ರಕ್ಷಣೆ (ಆದಿ 231 ಅಧ್ಯಾಯ).

**ಜರಿತಾರಿ** – ಪಕ್ಷಿರೂಪಧಾರಿ ಮಂದಪಾಲ ಋಷಿ ಯಿಂದ ಜರಿತೆಯ ಗರ್ಭದಿಂದ ಹುಟ್ಟಿದ ಒಬ್ಬ ಪಕ್ಷಿಮುನಿ. ಈತನಿಂದ ಅಗ್ನಿಯ ಸ್ತುತಿ. ಖಾಂಡವವನದಲ್ಲಿ ಅಗ್ನಿಯ ಮೂಲಕ ಈತನಿಗೆ ಅಭಯದಾನ (ಆದಿ 231 ಅಧ್ಯಾಯ).

**ಜರ್ಜರಾನನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಜರ್ತಿಕ** – ವಾಹೀಕರ ಒಂದು ಜಾತಿ. ಅವರ ನಡತೆ ಅತ್ಯಂತ ನಿಂದಿತವಾಗಿದೆ (ಕರ್ಣ 44/10).

**ಜಲ** – ಜಲ ತತ್ತ್ವದ ಅಭಿಮಾನಿ ದೇವತೆ. ಈತ ಬ್ರಹ್ಮನ ಸಭೆಯಲ್ಲಿರುತ್ತಾನೆ (ಸಭಾ 11/20)

**ಜಲದ** – ಶಾಕದ್ವೀಪದ ಒಂದು ಪರ್ವತ. ಅದರ ಬಳಿ ಕುಮುದೋತ್ತರವರ್ಷವಿದೆ (ಭೀಷ್ಮ 11/25).

**ಜಲಧಾರ** – ಶಾಕದ್ವೀಪದ ಒಂದು ಪರ್ವತ (ಭೀಷ್ಮ 11/16).

**ಜಲಂಧಮ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45 /57).

**ಜಲಪ್ರದಾನಿಕಪರ್ವ** – ಸ್ತ್ರೀ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1ರಿಂದ 15ರ ತನಕ)

**ಜಲಸಂಧಿ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/94). ಭೀಮಸೇನನಿಂದ ಈತನ ವಧೆ (ಭೀಷ್ಮ 64/33).

(2) ಕೌರವ ಪಕ್ಷದ ಒಬ್ಬ ಮಹಾರಥಿ ಯೋಧ (ಉದ್ಯೋಗ 66/7). ಈತ ದ್ರೌಪದಿಯ ವಿವಾಹಕ್ಕೂ ಹೋಗಿದ್ದನು (ಆದಿ 185/12). ಸಾತ್ಯಕಿಯಿಂದ ಈತನ ವಧೆ (ದ್ರೋಣ 115/52–53).

**ಜಲಾ** – ಯಮುನೆಯ ಪಕ್ಕದಲ್ಲಿರುವ ಒಂದು ನದಿ. ಅಲ್ಲಿ ಉಶೀನರನು ಯಜ್ಞಮಾಡಿ ಇಂದ್ರನಿ ಗಿಂತಲೂ ಮೇಲಿನ ಸ್ಥಾನ ಪಡಕೊಂಡಿದ್ದನು (ವನ 130/21).

**ಜಲೇಯು** – ಪೂರುಪುತ್ರ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯಲ್ಲಿ ಹುಟ್ಟಿದವನು (ಆದಿ 94/10).

**ಜಲೇಲಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/16).

**ಜಲೇಶ್ವರಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/13).

**ಜಲ್ಪ** – ಒಂದು ರೀತಿಯ ವಾದ. ಅದರಲ್ಲಿ ವಾದಿ ಮೋಸ, ಜಾತಿ ಮತ್ತು ನಿಗ್ರಹಸ್ಥಾನವನ್ನು ತೆಗೆದುಕೊಂಡು, ತನ್ನ ಪಕ್ಷದ ಮಂಡನೆ ಮತ್ತು ಪ್ರತಿಪಕ್ಷದವನ ಪಕ್ಷವನ್ನು ಖಂಡಿಸುತ್ತಾನೆ. ಇದ ರಲ್ಲಿ ವಾದಿಯ ಉದ್ದೇಶಿತ ತತ್ತ್ವನಿರ್ಣಯ ಆಗುವುದಿಲ್ಲ. ಆದರೆ ಸ್ವಪಕ್ಷಸ್ಥಾಪನೆ ಮತ್ತು ಪರಪಕ್ಷ ಖಂಡನೆ ಮಾತ್ರ ಆಗುತ್ತದೆ. ವಾದದಂತೆ ಇದರಲ್ಲಿಯೂ ಕೂಡಾ ಪ್ರತಿಜ್ಞಾ, ಹೇತು ಇತ್ಯಾದಿ

ಐದು ಅವಯವಗಳಿರುತ್ತವೆ (ಸಭಾ 36/3).

**ಜವನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಜಹ್ನು** – ಮಹಾರಾಜ ಅಜಮೀಢನಿಂದ ಕೇಶಿನಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ರಾಜ. ಅವನ ವಂಶಜರು ಕುಶಿಕರೆಂದು ಪ್ರಸಿದ್ಧರಾದರು (ಆದಿ 94/32–33). ಈತನ ವಂಶಪರಂಪರೆಯ ವರ್ಣನೆ (ಶಾಂತಿ 49/3–6). ಗಂಗೆಯು ಈತನ ಪುತ್ರಿ ಭಾವವನ್ನು ಪ್ರಾಪ್ತಿಸಿಕೊಂಡಳು (ಅನು 4/3)

**ಜಾಗುಡ** – ಒಂದು ದೇಶ. ಭಾರತದ ಒಂದು ಜನಪದ. ಅಲ್ಲಿರುವ ರಾಜ ಯುಧಿಷ್ಠಿರನ ರಾಜ ಸೂಯ ಯಜ್ಞಕ್ಕೆ ಬಂದಿದ್ದನು (ವನ 51/25).

**ಜಾಙ್ಗಲ** – ಒಂದು ಭಾರತೀಯ ಜನಪದ (ಭೀಷ್ಮ 9/56).

**ಜಾಜಲಿ** – ಒಬ್ಬ ಪ್ರಾಚೀನ ಋಷಿ. ಈತ ಘೋರತಪಸ್ಸು ಮಾಡಿದ್ದನು (ಶಾಂತಿ 261/33–37). ಇವನ ತಲೆಯ ಮೇಲೆ ಪಕ್ಷಿಗಳು ಮೊಟ್ಟೆ ಇಟ್ಟದ್ದು (ಶಾಂತಿ 261/23–24). ಮನಸ್ಸಿನಲ್ಲಿ ಸಿದ್ಧನಾದೆನೆಂಬ ಅಹಂಕಾರ ಬಂದಾಗ ಆಕಾಶ ವಾಣಿಯ ಮೂಲಕ, ಈತ ತುಲಾಧಾರನ ಬಳಿಗೆ ಹೋಗುವಂತೆ ಆದೇಶ (ಶಾಂತಿ 261/42–43). ಈತ ತುಲಾಧಾರನ ಬಳಿಗೆ ಹೋದುದು ಮತ್ತು ಧರ್ಮೋಪದೇಶ ಕೇಳಿದುದು (ಶಾಂತಿ ಅಧ್ಯಾಯ 262 ರಿಂದ 263ರ ವರೆಗೆ). ಈತನಿಗೆ ಪಕ್ಷಿಗಳ ಉಪದೇಶ (ಶಾಂತಿ 264/6–19). ತುಲಾಧಾರ ನೊಂದಿಗೆ ಈತನ ಪರಮಧಾಮಗಮನ (ಶಾಂತಿ 264/20–21).

**ಜಾಠರ**– ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

**ಜಾತಿಸ್ಮರ** – ಒಂದು ತೀರ್ಥ. ಅಲ್ಲಿ ಸ್ನಾನಮಾಡಿದರೆ ಮನುಷ್ಯನ ಶರೀರ ಮತ್ತು ಮನಸ್ಸು ಶುದ್ಧವಾಗುತ್ತದೆ (ವನ 84/128)

**ಜಾತಿಸ್ಮರ ಕೀಟ** – ಒಂದು ಹುಳ. ಅದಕ್ಕೆ ತನ್ನ ಶುಭ ಕರ್ಮಗಳ ಪ್ರಭಾವದಿಂದ, ಪೂರ್ವಜನ್ಮ ವಿಚಾರಗಳ ಸ್ಮರಣೆ ಇತ್ತು. ವ್ಯಾಸರ ಕೃಪೆಯಿಂದ ಕ್ರಮಾಗತವಾಗಿ ಅದರ ಉನ್ನತಿ ಮತ್ತು ಉದ್ಧಾರ (ಅನು 117 ಅಧ್ಯಾಯದಿಂದ 119 ಅಧ್ಯಾಯದ ವರೆಗೆ).

**ಜಾತಿಸ್ಮರಹ್ರದ** – ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಪೂರ್ವಜನ್ಮ ವಿಚಾರಗಳನ್ನು ಸ್ಮರಿಸಿಕೊಳ್ಳುವಶಕ್ತಿ ಪಡೆಯುತ್ತಾನೆ (ವನ 85/3).

**ಜಾತೂಕರ್ಣ್ಯ** – ಒಬ್ಬ ಜಿತೇಂದ್ರಿಯ ಮುನಿ. ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/14).

**ಜಾನಕಿ** – ಒಬ್ಬ ಕ್ಷತ್ರಿಯ ರಾಜ. ಈತ ಚಂದ್ರವಿನಾಶನ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/39). ಪಾಂಡವರ ಕಡೆಯಿಂದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/20)

**ಜಾನಪದೀ** – ಒಬ್ಬ ಅಪ್ಸರೆ. ಈಕೆ ಇಂದ್ರನ ಆಜ್ಞೆಯಂತೆ ಶರದ್ವಂತನ ತಪಸ್ಸಿಗೆ ವಿಘ್ನ ತರಲು ಬಂದಿದ್ದಳು (ಆದಿ 129/6). ಈಕೆಯ ದರ್ಶನದಿಂದ ಸ್ಖಲಿತವಾದ ಶರದ್ವಂತನ ವೀರ್ಯದಿಂದ ಕೃಪ ಮತ್ತು ಕೃಪಿಯ ಜನ್ಮ (ಆದಿ 129/11–20).

**ಜಾನುಜಂಘ** – ಸಾಯಂಪ್ರಾತಃಕಾಲಗಳಲ್ಲಿ ಸ್ಮರಣೆಮಾಡಲು ಯೋಗ್ಯನಾದ ಒಬ್ಬ ಪುಣ್ಯಾತ್ಮನಾದ ರಾಜ (ಅನು 165/59).

**ಜಾಪಕ** – ಗಾಯತ್ರಿಜಪ ಪರಾಯಣನಾದ ಒಬ್ಬ ಬ್ರಾಹ್ಮಣ. ಜಾಪಕನಲ್ಲಿ ದೋಷ ಬಂದುದರಿಂದ, ಆತನಿಗೆ ನರಕಪ್ರಾಪ್ತಿ (ಶಾಂತಿ 197 ಅಧ್ಯಾಯ). ಪರಮಧಾಮದ ಅಧಿಕಾರಿಯಾದ ಜಾಪಕನಿಗೆ ದೇವಲೋಕ ಕೂಡಾ ನರಕಸಮಾನವಾದುದು (ಶಾಂತಿ 198 ಅಧ್ಯಾಯ). ಜಾಪಕನಿಗೆ ಸಾವಿತ್ರಿಯ ವರದಾನ. ಅವನ ಬಳಿಗೆ ಧರ್ಮ, ಯಮ ಮತ್ತು ಕಾಲ ಮೊದಲಾದವರ ಆಗಮನ ರಾಜಾ ಇಕ್ಷ್ವಾಕು ಮತ್ತು ಜಾಪಕ ಬ್ರಾಹ್ಮಣನ ಸಂವಾದ. ಸತ್ಯದ ಮಹಿಮೆ ಮತ್ತು ಜಾಪಕನಿಂದ ಪರಮಗತಿಯ ವರ್ಣನೆ (ಶಾಂತಿ 199 ಅಧ್ಯಾಯ). ಜಾಪಕ ಬ್ರಾಹ್ಮಣ ಮತ್ತು ಇಕ್ಷ್ವಾಕು ವಿನ ಉತ್ತಮ ಗತಿಯ ವರ್ಣನೆ ಮತ್ತು ಜಾಪಕನಿಗೆ ಸಿಗುವ ಫಲದ ಉತ್ಕೃಷ್ಟತೆ (ಶಾಂತಿ 200 ಅಧ್ಯಾಯ).

**ಜಾಬಾಲಿ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/55).

**ಜಾಮ್ಬವತೀ** – ಋಕ್ಷರಾಜ ಜಾಂಬವಂತನ ಮಗಳು. ಮತ್ತು ಶ್ರೀಕೃಷ್ಣನ ಪತ್ನಿ (ಸಭಾ 38 ದಾ. ಪಾಠ. ಪುಟ 815). ಶ್ರೀಕೃಷ್ಣನೊಡನೆ ಪುತ್ರ

ಪ್ರಾಪ್ತಿಗಾಗಿ ಈಕೆಯ ಪ್ರಾರ್ಥನೆ (ಅನು 14/30–34). ಶ್ರೀಕೃಷ್ಣನ ತಪೋಯಾತ್ರೆಗೆ ಈಕೆಯ ಮಂಗಲಕಾಮನೆ (ಅನು 14/36–40). ಶ್ರೀಕೃಷ್ಣನು ಪರಮಧಾಮಕ್ಕೆ ಹೋದಮೇಲೆ, ಈಕೆ ಪತಿಲೋಕ ಪ್ರಾಪ್ತಿಗಾಗಿ ಅಗ್ನಿಪ್ರವೇಶ ಮಾಡಿದ್ದಳು (ಮೌಸಲ 7/73).

**ಜಾಮ್ಬವಂತ** – ಋಕ್ಷರಾಜ. ಸುಗ್ರೀವನ ಮಂತ್ರಿ (ವನ 280/23). ಈತ ಒಂದು ಲಕ್ಷ ಕೋಟಿ ಕಪ್ಪಾದ ಕರಡಿಗಳ ಸೇನೆಯನ್ನು ಕರೆದುಕೊಂಡು ಶ್ರೀರಾಮನ ಬಳಿಗೆ ಬಂದಿದ್ದನು (ವನ 283/8).

**ಜಾಮ್ಬೂನದ** –(1) ಪೂರುವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು ಜನಮೇಜಯನ ಐದನೇ ಮಗ (ಆದಿ 94/56).

(2). ಒಂದು ಸುವರ್ಣಮಯ ಪರ್ವತ (ಮೇರು). ಇಲ್ಲಿಂದ ಗಂಗೆಯ ಕಲಕಲ ನಾದ ಲೋಮಶರಿಗೆ ಕೇಳಿಸಿತ್ತು (ವನ 139/16).

(3). ಉಶೀರಬೀಜವೆಂಬ ಸ್ಥಾನದಲ್ಲಿರುವ ಒಂದು ಪವಿತ್ರ ಸುವರ್ಣಮಯ ಪರ್ವತ. ಇಲ್ಲಿ ಮರುತ್ತರಾಜ ಯಜ್ಞ ಮಾಡಿದ್ದನು (ಉದ್ಯೋಗ 111/23).

(4). ಜಂಬೂದ್ವೀಪದ ಜಂಬೂನದಿಯಿಂದ ಹುಟ್ಟಿದ ಸುವರ್ಣ (ಭೀಷ್ಮ 7/26).

**ಜಾಮ್ಬೂನದಿ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/30).

**ಜಾಯಾ ಶಬ್ದದ ನಿರುಕ್ತಿ** – ಪುರುಷನ ಆತ್ಮವೇ ಸಂತಾನರೂಪದಲ್ಲಿ ಸ್ತ್ರೀಯ ಗರ್ಭದಿಂದ ಜನ್ಮ ಪಡೆಯುತ್ತದೆ (ವನ 12/70)

**ಜಾರುಧಿ** – ಒಂದು ಪ್ರಾಚೀನ ದೇಶ (ಸಭಾ 38/39ರ ಅನಂತರ ದಾ. ಪಾಠ).

**ಜಾರೂಥೀ** – ಒಂದು ಸ್ಥಳ ಅಥವಾ ನಗರ. ಇಲ್ಲಿ ಶ್ರೀಕೃಷ್ಣನು ಆಹುತಿ, ಕ್ರಾಥ, ಒಡನಾಡಿಗಳ ಸಮೇತ ಶಿಶುಪಾಲ, ಜರಾಸಂಧ, ಶೈಬ್ಯ ಮತ್ತು ಶತಧನ್ವರನ್ನು ಸೋಲಿಸಿದ್ದನು (ವನ 12/30).

**ಜಾಹ್ನವೀ** – ಗಂಗೆಯ ಒಂದು ಹೆಸರು. ಅದು ಜಹ್ನುವಿನ ಪುತ್ರಿಯಾದುದರಿಂದ ಪ್ರಸಿದ್ಧವಾಗಿತ್ತು (ಆದಿ 99/4).

**ಜಿತವತೀ** – ಸುಂದರರೂಪ ಮತ್ತು ಯುವಾವಸ್ಥೆಯಿಂದ ಸುಶೋಭಿತಳಾದ, ರಾಜರ್ಷಿ ಉಶೀನರನ ಪುತ್ರಿ. ಈಕೆ ಮನುಷ್ಯಲೋಕದ ಸುಪ್ರಸಿದ್ಧ ಸುಂದರಿಯಾಗಿದ್ದಳು. ಈಕೆ 'ದ್ಯು' ಎಂಬ ಹೆಸರುಳ್ಳ ವಸುವಿನ ಪತ್ನಿಯ ಸಖಿಯಾಗಿದ್ದಳು (ಆದಿ 99/22–24). ಈಕೆಗಾಗಿ ವಸಿಷ್ಠನ ನಂದಿನಿ ಧೇನುವನ್ನು ಅಪಹಾರಮಾಡಲು, ವಸುಪತ್ನಿಯು ತನ್ನ ಪತಿಯನ್ನು ಪ್ರಾರ್ಥಿಸಿದುದು (ಆದಿ 99/21–25). ಇವಳಿಗಾಗಿ ನಂದಿನಿಯನ್ನು ಅಪಹಾರ ಮಾಡಿದ್ದರಿಂದ ವಸುಗಳಿಗೆ ವಸಿಷ್ಠರ ಶಾಪ (ಆದಿ 99/32).

**ಜಿತಾತ್ಮಾ** – ಒಬ್ಬ ವಿಶ್ವೇದೇವ (ಅನು 91/31).

**ಜಿತಾರಿ** – ಪೂರುವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು ಅವಿಕ್ಷಿತನ ಪುತ್ರ (ಆದಿ 94/53).

**ಜಿಷ್ಣು** – (1) ಅರ್ಜುನನ ಒಂದು ಹೆಸರು (ವನ 47/13). ಜಿಷ್ಣುವೆಂಬ ಹೆಸರಿನಿಂದ ಅರ್ಜುನನು ಪ್ರಸಿದ್ಧನಾಗಲು ಕಾರಣ (ವಿರಾಟ 44/21).

(2) ಶ್ರೀಕೃಷ್ಣನ ಒಂದು ಹೆಸರು. ಎಲ್ಲರನ್ನು ಜಯಿಸಿದ ಕಾರಣ ಈತನಿಗೆ ಜಿಷ್ಣುವೆಂಬ ಹೆಸರು (ಉದ್ಯೋಗ 70/13).

(3) ಪಾಂಡವ ಪಕ್ಷದ ಚೇದಿದೇಶದ ಒಬ್ಬ ಯೋಧ. ಕರ್ಣನಿಂದ ಈತನ ವಧೆ (ಕರ್ಣ 56/48)

**ಜಿಷ್ಣುಕರ್ಮಾ** – ಪಾಂಡವ ಪಕ್ಷದ ಚೇದಿ ದೇಶದ ಒಬ್ಬ ಯೋಧ (ಕರ್ಣ 56/48).

**ಜೀಮೂತ** – (1) ಒಬ್ಬ ಮಲ್ಲ. ವಿರಾಟ ನಗರದಲ್ಲಿ ಭೀಮಸೇನನೊಂದಿಗೆ ಈತನ ಮಲ್ಲಯುದ್ಧ ನಡೆಯಿತು. ಈತ ಕೊಲ್ಲಲ್ಪಟ್ಟನು (ವಿರಾಟ 13/24–36).

(2) ಒಬ್ಬ ಬ್ರಹ್ಮರ್ಷಿ. ಈತನ ಸಮ್ಮುಖದಲ್ಲಿ ಹಿಮಾಲಯದ ಒಂದು ಸ್ವರ್ಣನಿಧಿ ಪ್ರಕಟವಾಯಿತು. ಅದನ್ನು ಜೈಮೂತವೆನ್ನುತ್ತಾರೆ (ಉದ್ಯೋಗ 111/23).

**ಜೀವಜೀವಕ** – ಒಂದು ಪಕ್ಷಿ ವಿಶೇಷ (ಶಾಂತಿ 139/6).

**ಜೀವಲ** – ಅಯೋಧ್ಯೆಯ ರಾಜಾ. ಋತುಪರ್ಣನ ಸಾರಥಿ. ಬಾಹುಕನೆಂಬ ಹೆಸರಿನ ನಳರಾಜನು ಈತನೊಂದಿಗೆ ನಡೆಸಿದ ಮಾತುಕತೆ (ವನ 67/11).

**ಜೃಂಭಿಕಾ** – ಆಕಳಿಕೆ. ದೇವತೆಗಳು ವೃತ್ರಾಸುರನ

ಮುಖದಿಂದ ಇಂದ್ರನನ್ನು ಹೊರಡಿಸಲು ಇದನ್ನು ಸೃಷ್ಟಿಸಿದ್ದರು (ಉದ್ಯೋಗ 9/53).

**ಜೈಗೀಷವ್ಯ** – ಬ್ರಹ್ಮನ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುವ ಒಬ್ಬ ಮಹರ್ಷಿ (ಸಭಾ 11/24). ಆದಿತ್ಯ ತೀರ್ಥದ ಮಹಿಮೆಯ ಪ್ರಸಂಗದಲ್ಲಿ ಇವನ ನಡತೆಯ ವರ್ಣನೆ (ಶಲ್ಯ 50 ಅಧ್ಯಾಯ). ಈತನಿಂದ ಅಸಿತದೇವಲ ಮುನಿಗೆ ಸಮತ್ವ ಬುದ್ಧಿಯ ಉಪದೇಶ (ಶಾಂತಿ 229/7–25). ಶಿವಮಹಿಮೆಯ ಕುರಿತು ತನ್ನ ಅನುಭವವನ್ನು ಹೇಳಿದುದು (ಅನು 18/37).

**ಜೈತ್ರ** – (1) ಒಂದು ರಥ ವಿಶೇಷ. ಅದರಲ್ಲಿ ಕುಳಿತು ರಾಜಾಹರಿಶ್ಚಂದ್ರನು ಎಲ್ಲಾ ದಿಕ್ಕುಗಳಲ್ಲೂ ವಿಜಯ ಹೊಂದಿದ್ದನು (ಸಭಾ 12/12).

(2) ಧೃತರಾಷ್ಟ್ರನ ಒಬ್ಬ ಮಗ. ಭೀಮಸೇನನಿಂದ ಈತನ ವಧೆ (ಶಲ್ಯ 26/14).

(3) ಧೃಷ್ಟದ್ಯುಮ್ನನ ಶಂಖ (ಶಲ್ಯ 61/71ರ ಅನಂತರ ದಾ. ಪಾಠ).

**ಜೈಮಿನಿ** – ಒಬ್ಬ ಬ್ರಹ್ಮರ್ಷಿ ಜನಮೇಜಯನ ಸರ್ಪಯಜ್ಞದಲ್ಲಿ ಈತ ಬ್ರಹ್ಮನಾಗಿದ್ದನು (ಆದಿ 53/6). ಈತ ವ್ಯಾಸಮಹರ್ಷಿಯ ಶಿಷ್ಯ (ಆದಿ 67/89). ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/11). ಶರಶಯ್ಯೆಯಲ್ಲಿ ಮಲಗಿದ ಭೀಷ್ಮರನ್ನು ನೋಡಲು ಈತನೂ ಹೋಗಿದ್ದನು (ಶಾಂತಿ 47/6)

**ಜ್ಞಾನಪಾವನ ತೀರ್ಥ** – ಒಂದು ಪ್ರಾಚೀನ ತೀರ್ಥ. ಅಲ್ಲಿ ಹೋದ ಮನುಷ್ಯ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ ಮತ್ತು ಮುನಿ ಲೋಕಕ್ಕೆ ಹೋಗುತ್ತಾನೆ (ವನ 84/3).

**ಜ್ಯೇಷ್ಠ** – (1) ಸಾಮವೇದ ಪಾರಂಗತನಾದ ಒಬ್ಬ ಋಷಿ. ಈತನಿಗೆ ಬರ್ಹಿಷದರೆಂಬ ಋಷಿಗಳಿಂದ ಸಾತ್ವತಧರ್ಮದ ಉಪದೇಶ ಪ್ರಾಪ್ತವಾಗಿತ್ತು (ಶಾಂತಿ 348/46).

(2) ಜ್ಯೇಷ್ಠ ತಿಂಗಳು (ಅನು 109–9).

**ಜ್ಯೇಷ್ಠಪುಷ್ಕರ** – ಒಂದು ತೀರ್ಥ (ವನ 200/66; ಅನು 130/7).

**ಜ್ಯೇಷ್ಠಸಾಮ** – ಒಂದು ಸಾಮ. ಜ್ಯೇಷ್ಠ ಮುನಿಯು ಇದರ ಉಪಾಸನೆ ಮಾಡುವ ವ್ರತ ಸ್ವೀಕರಿಸಿದ್ದನು (ಶಾಂತಿ 348/46).

**ಜ್ಯೇಷ್ಠಸ್ಥಾನ** – ಒಂದು ತೀರ್ಥ. ಇಲ್ಲಿ ಮಹಾದೇವನದರ್ಶನ ಪೂಜನಗಳಿಂದ ಮನುಷ್ಯ ಚಂದ್ರನಂತೆ ಪ್ರಕಾಶಿಸಲ್ಪಡುತ್ತಾನೆ (ವನ 85/63).

**ಜ್ಯೇಷ್ಠಾ** – ಒಂದು ನಕ್ಷತ್ರ. ಈ ನಕ್ಷತ್ರದಲ್ಲಿ ಆಯಾ ಸಮಯದಲ್ಲಿ ಸಿಗುವ ಕಾಯಿಪಲ್ಲೆಗಳನ್ನು, ಗಡ್ಡೆಗೆಣಸುಗಳನ್ನು ದಾನಕೊಡುವವನಿಗೆ ಅಭೀಷ್ಟ ಸಮೃದ್ಧಿಯಾಗುತ್ತದೆ. ಮತ್ತು ಸದ್ಗತಿ ಪ್ರಾಪ್ತವಾಗುತ್ತದೆ (ಅನು 64/23). ಜ್ಯೇಷ್ಠಾ ನಕ್ಷತ್ರದಲ್ಲಿ ಇಂದ್ರಿಯ ಸಂಯಮಪೂರ್ವಕ ಪಿಂಡದಾನ ಮಾಡುವ ಮನುಷ್ಯ ಸಮೃದ್ಧಿಶಾಲಿಯಾಗುತ್ತಾನೆ ಮತ್ತು ಪ್ರಭುತ್ವವನ್ನು ಪಡೆಯುತ್ತಾನೆ. ಚಂದ್ರವ್ರತದಲ್ಲಿ, ಜ್ಯೇಷ್ಠಾನಕ್ಷತ್ರವು ಚಂದ್ರನ ಕಂಠಪ್ರದೇಶದಲ್ಲಿ ನೆಲಸಿದೆಯೆಂದು ಭಾವಿಸಿ, ಆ ಮೂಲಕ ಚಂದ್ರನ ಕಂಠಪ್ರದೇಶವನ್ನು ಧ್ಯಾನ ಮಾಡುವ ಕ್ರಮವಿದೆ (ಅನು 110/7).

**ಜ್ಯೇಷ್ಠಿಲ** – ಒಂದು ತೀರ್ಥ. ಇಲ್ಲಿ ಒಂದು ರಾತ್ರಿ ವಾಸಿಸುವುದರಿಂದ ಮನುಷ್ಯ ಸಹಸ್ರ ಗೋದಾನದ ಫಲಪಡೆಯುತ್ತಾನೆ (ವನ 84/134).

**ಜ್ಯೇಷ್ಠಿಲಾ** – ಒಂದು ನದಿ. ಅದು ವರುಣ ಸಭೆಯಲ್ಲಿ ಉಪಸ್ಥಿತವಾಗಿರುತ್ತದೆ (ಸಭಾ 9/21).

**ಜ್ಯೋತಿ** – (1) 'ಅಹಃ' ಎಂಬ ಹೆಸರಿನ ವಸುವಿನ ಮಗ (ಆದಿ 66/23).

(2) ಅಗ್ನಿಯಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಜ್ವಾಲಾಜಿಹ್ವನೆಂದಾಗಿತ್ತು (ಶಲ್ಯ 45/33).

**ಜ್ಯೋತಿಕ** – ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/13).

**ಜ್ಯೋತಿರಥಾ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತ ವಾಸಿಗಳು ಕುಡಿಯುತ್ತಾರೆ (ಭೀಷ್ಮ 9/26).

**ಜ್ಯೋತಿರಥ್ಯಾ** – ಒಂದು ನದಿ. ಇದು ಶೋಣಭದ್ರದೊಂದಿಗೆ ಸಂಗಮವಾಗುತ್ತದೆ. ಈ ಸಂಗಮದಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲ ಪ್ರಾಪ್ತಿ (ವನ 85/8).

**ಜ್ಯೋತಿಷ್ಕ** – (1) ಕಶ್ಯಪ ವಂಶದ ನಾಗ (ಉದ್ಯೋಗ 103/15).

(2) ಸುಮೇರು ಪರ್ವತದ ಒಂದು ಶಿಖರ (ಶಾಂತಿ 283/5).

**ಜ್ಯೋತ್ಸ್ನಾಕಾಲೀ** – ಸೋಮನ ಎರಡನೇ ಮಗಳು. ಸೂರ್ಯನ ಪತ್ನಿ. ಈಕೆ ರೂಪದಲ್ಲಿ

ಸಾಕ್ಷಾತ್ ಲಕ್ಷ್ಮಿಗೆ ಸಮಾನಳು (ಉದ್ಯೋಗ 98/13).

**ಜ್ವರ** – ರೋಗ ವಿಶೇಷ. ಭಗವಾನ್ ಶಂಕರನ ಬೆವರಿನಿಂದ ಇದರ ಹುಟ್ಟಿನ ರೀತಿ (ಶಾಂತಿ 283/37–55).

**ಜ್ವಾಲಾ** – ತಕ್ಷಕ ನಾಗನ ಪುತ್ರಿ. ಈಕೆ ಮಹಾರಾಜ ಋಕ್ಷನ ಪತ್ನಿ ಮತ್ತು ಮತಿನಾರನ ತಾಯಿಯಾಗಿದ್ದಳು (ಆದಿ 95/25).

**ಜ್ವಾಲಾಜಿಹ್ವ** – (1) ಅಗ್ನಿಯಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಜ್ಯೋತಿ ಎಂದಾಗಿತ್ತು (ಶಲ್ಯ 45/33).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

## ಝ

**ಝಲ್ಲಿ** – ವೃಷ್ಣಿವಂಶದ ಒಬ್ಬ ಯಾದವ. ಈತ ದ್ವಾರಕೆಯ ಏಳು ಮುಖ್ಯ ಮಂತ್ರಿಗಳಲ್ಲಿ ಒಬ್ಬ (ಸಭಾ 14/60ರ ಅನಂತರ ದಾಕ್ಷಿಣಾತ್ಯ ಪಾಠ).

**ಝಿಲ್ಲಿಕ** – ದಕ್ಷಿಣಭಾರತದ ಒಂದು ಜನಪದ (ಭೀಷ್ಮ 9/59).

**ಝಿಲ್ಲೀ** (ಅಥವಾ ಝಿಲ್ಲೀ ಪಿಂಡಾರಕ) – (1) ವೃಷ್ಣಿ ವಂಶದ ಒಬ್ಬ ಯೋಧ. ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/20). ಅವನು ಸುಭದ್ರೆಗೋಸ್ಕರ ವರದಕ್ಷಿಣೆ ತೆಗೆದು ಕೊಂಡು ಖಾಂಡವಪ್ರಸ್ಥಕ್ಕೆ ಹೋಗಿದ್ದನು (ಆದಿ 220/32). ಧೃತರಾಷ್ಟ್ರನಿಂದ ಈತನ ಪರಾಕ್ರಮದ ವರ್ಣನೆ (ದ್ರೋಣ 11/28).

(2) (ಅಥವಾ ಝಿಲ್ಲಿಕಾ). ಝೀಂಗುರವೆಂಬ ಹೆಸರಿನ ಒಂದು ಕೀಟ (ವನ 64/1).

## ಟ

**ಟಿಟ್ಟಿಭ** – ಒಬ್ಬ ದೈತ್ಯ ಅಥವಾ ದಾನವ. ಈತ ವರುಣ ಸಭೆಯಲ್ಲಿ ಉಪಸ್ಥಿತನಾಗಿರುತ್ತಾನೆ (ಸಭಾ 9/15).

## ಡ

**ಡಮ್ಬರ** – ಧಾತಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಆಡಂಬರ (ಶಲ್ಯ 45/39).

**ಡಿಂಡಿಕ** – ಬಿಡಾಲೋಪಾಖ್ಯಾನದಲ್ಲಿ ಬಂದ ಒಂದು ಇಲಿಯ ಹೆಸರು (ಉದ್ಯೋಗ 160/34).

**ಡಿಮ್ಭಕ** – ಜರಾಸಂಧನ ನೀತಿಶಾಸ್ತ್ರ ವಿಶಾರದ ನಾದ ಮಂತ್ರಿ, ಹಂಸನ ಸಹೋದರ (ಸಭಾ 19/26). ಯಾವುದೇ ಅಸ್ತ್ರ ಶಸ್ತ್ರಗಳಿಂದ ಮರಣ ವಿಲ್ಲದಂತೆ ಈತನಿಗೆ ದೇವತೆಗಳಿಂದ ವರದಾನ (ಸಭಾ 14/37). ಶ್ರೀಕೃಷ್ಣನೊಡನೆ ಜರಾಸಂಧನ ಹದಿನೇಳನೇ ಬಾರಿಯ ಯುದ್ಧದಲ್ಲಿ ಹಂಸನೆಂಬ ಹೆಸರಿನ ಒಬ್ಬ ರಾಜ ಬಲರಾಮನಿಂದ ಕೊಲ್ಲಲ್ಪ ಟ್ಟನು. ಅವನು ಸತ್ತಾಗ ಜರಾಸಂಧನ ಸೈನಿಕರು 'ಹಂಸ ಸತ್ತ'ನೆಂದು ಬೊಬ್ಬಿಟ್ಟರು. ಅದನ್ನು ಕೇಳಿ ಈತನಿಗೆ ತನ್ನ ಅಣ್ಣ ಸತ್ತನೆಂದು ಭ್ರಮೆಯಾಯಿತು. ಈತ ಅಣ್ಣನ ವಿಯೋಗ ದುಃಖದಿಂದ ಯಮುನೆಗೆ ಹಾರಿ ಸತ್ತುಹೋದನು (ಸಭಾ 14/41–42).

**ಡುಂಡುಭ** – ಒಂದು ಸರ್ಪ. ಇವನೊಂದಿಗೆ ರುರುವಿಗೆ ಸಂವಾದವಾಗಿತ್ತು. ಈತ ಶಾಪಗ್ರಸ್ತ ಸಹಸ್ರಪಾದ ಋಷಿಯಾಗಿದ್ದನು (ಆದಿ 9/2ರಿಂದ ಆದಿ 10/7ರ ತನಕ). ಬ್ರಾಹ್ಮಣಮಿತ್ರನ ಶಾಪ ದಿಂದ ಈತ ಸರ್ಪನಾದ ಕಥೆ (ಆದಿ 11/1–9). ಮಹರ್ಷಿರುರುವಿನ ದರ್ಶನದಿಂದ ಈತ ಸರ್ಪ ಯೋನಿಯಿಂದ ಮುಕ್ತನಾದುದು (ಆದಿ 11/12). ಅಹಿಂಸಾಧರ್ಮದ ಶ್ರೇಷ್ಠತೆಯ ಕುರಿತು ಈತ ನಿಂದ ರುರುವಿಗೆ ಉಪದೇಶ (ಆದಿ 11/13–19).

## ತ

**ತಂಸು** – ಪೂರುವಂಶದ ರಾಜಾ ಮತಿನಾರನ ಪುತ್ರ (ಆದಿ 94/14). ಈತನ ಮಗನ ಹೆಸರು ಈಲಿನನೆಂದಾಗಿತ್ತು (ಆದಿ 94/16).

**ತಕ್ಷಕ** – ಒಬ್ಬ ಶ್ರೇಷ್ಠ ನಾಗ. ಈತ ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಜನ್ಮವೆತ್ತಿದನು (ಆದಿ 35/

5). ಕ್ಷಪಣಕನ ರೂಪಧರಿಸಿ, ಈತ ಉತ್ತಂಕ ಮುನಿಯ ಕುಂಡಲಗಳನ್ನು ಅಪಹರಿಸಿದುದು (ಆದಿ 3/127; ಆಶ್ವ 58/25–26). ರಾಜಾ ಪರೀಕ್ಷಿತನನ್ನು ಕಡಿಯಲು ಹೋಗುತ್ತಿದ್ದ ಈತನ ಮಾರ್ಗದಲ್ಲಿ ಕಶ್ಯಪನೆಂಬ ಬ್ರಾಹ್ಮಣನ ಭೇಟಿ ಮತ್ತು ಧನವನ್ನಿತ್ತು ಆತನನ್ನು ಹಿಂತಿರುಗಿಸಿದುದು (ಆದಿ 42/36 ರಿಂದ 43/20; ಆದಿ 50/18–20). ತಪಸ್ವಿ ನಾಗಗಳ ಮೂಲಕ ಫಲ ಇತ್ಯಾದಿಗಳನ್ನು ಕಳುಹಿಸಿ, ಆ ಫಲದ ಜೊತೆಯಲ್ಲಿಯೇ ಈತ ಮೋಸದಿಂದ ಪರೀಕ್ಷಿತನ ಬಳಿಗೆ ತಲುಪಿದುದು ಮತ್ತು ಆತನನ್ನು ಕಚ್ಚಿದುದು (ಆದಿ 43/22–36; ಆದಿ 50 /29). ಈತ ಇಂದ್ರನ ಮರೆಹೊಕ್ಕದ್ದು ಮತ್ತು ಇಂದ್ರನಿಂದ ಈತನಿಗೆ ರಕ್ಷಣೆಯ ಆಶ್ವಾಸನೆ ದೊರೆತುದು (ಆದಿ 53/14–17). ಆಸ್ತೀಕನ ಕೃಪೆಯಿಂದ ಜನಮೇಜಯನ ಯಜ್ಞದಲ್ಲಿ ಈತನ ರಕ್ಷಣೆ (ಆದಿ 58/3–7). ಈತ ಇಂದ್ರನ ಮಿತ್ರನಾಗಿದ್ದನು. ಮತ್ತು ಪರಿವಾರ ಸಹಿತ ಖಾಂಡವವನದಲ್ಲಿ ವಾಸಿಸುತ್ತಿದ್ದನು. ಆದುದರಿಂದ ಇವನಿಗಾಗಿಯೇ ಇಂದ್ರ ಯಾವಾಗಲೂ ಖಾಂಡವವನದ ರಕ್ಷಣೆ ಮಾಡುತ್ತಿದ್ದನು. ಆತ ಮಳೆ ಸುರಿಸುವ ಕಾರಣ ಅಗ್ನಿಗೆ ಆ ವನವನ್ನು ಸುಡಲು ಸಾಧ್ಯವಾಗುತ್ತಿರಲಿಲ್ಲ (ಆದಿ 222/7). ಖಾಂಡವವನ ದಹನ ಕಾಲದಲ್ಲಿ ಈತ ಕುರುಕ್ಷೇತ್ರದಲ್ಲಿದ್ದುದು ಮತ್ತು ಅರ್ಜುನನಿಂದ ಈತನ ಪತ್ನಿಯ ವಧೆ (ಆದಿ 226/4–8). ಈತ ವರುಣಸಭೆಯ ಸದಸ್ಯ (ಸಭಾ 9/8). ನಾಗಗಳ ಮೂಲಕ ಪೃಥ್ವಿಯನ್ನು ಕರೆಯುವಾಗ (ಹಾಲು) ಈತ ಕರುವಾಗಿದ್ದನು (ದ್ರೋಣ 69/22). ಬಲರಾಮನು ಶೇಷರೂಪದಿಂದ ತನ್ನ ಲೋಕಕ್ಕೆ ಆಗಮಿಸುವಾಗ, ಈತ ಪ್ರಭಾಸಕ್ಷೇತ್ರದ ಸಮುದ್ರಕ್ಕೆ ಆತನನ್ನು ಸ್ವಾಗತಿಸಲು ಬಂದಿದ್ದನು (ಮೌಸಲ 4/15).

**ತಕ್ಷಶಿಲಾ** – ಒಂದು ನಗರ. ಅದನ್ನು ಜನಮೇಜಯನು ಗೆದ್ದಿದ್ದನು (ಮತ್ತು ಇಲ್ಲಿ ಸರ್ಪಸತ್ರದ ಅನುಷ್ಠಾನ ಮತ್ತು ಮಹಾಭಾರತ ಕಥೆಯ ಶ್ರವಣ ಮಾಡಿದ್ದನು). (ಆದಿ 3/20). ಸರ್ಪಸತ್ರ ಮತ್ತು ಮಹಾಭಾರತ ಕಥೆಯ ಸಮಾಪ್ತಿಯಾದಾಗ, ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು, ವಿದಾಯಹೇಳಿ, ಜನಮೇಜಯನು ತಕ್ಷಶಿಲೆಯಿಂದ ಹಸ್ತಿನಾಪುರಕ್ಕೆ ಬಂದನು (ಸ್ವರ್ಗ 5/31–35).

**ತಙ್ಗಣ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ತಡಿತ್ಪ್ರಭಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ತಣ್ಡಿ** – ವಾನಪ್ರಸ್ಥ ಧರ್ಮವನ್ನು ಪಾಲಿಸುತ್ತಿರುವ ಒಬ್ಬ ಬ್ರಹ್ಮರ್ಷಿ (ಶಾಂತಿ 244/17). ಈತ ಬ್ರಹ್ಮನ ಮುಂದೆ ಶಿವಸಹಸ್ರನಾಮವನ್ನು ಹೇಳಿದ್ದನು (ಅನು 14/19). ಈತನಿಂದ ಶಿವನ ಸ್ತುತಿ (ಅನು 16/12–65).

**ತನಯ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ತನು** – ಒಬ್ಬ ಪ್ರಾಚೀನ ಮಹರ್ಷಿ. ಈತ ರಾಜಾ ವೀರದ್ಯುಮ್ನನಿಗೆ ಆತನ ಪುತ್ರನ ಕುರಿತು ಹೇಳಿದ್ದನು (ಶಾಂತಿ 127/18–22). ರಾಜಾ ವೀರದ್ಯುಮ್ನನಿಗೆ ಉಪದೇಶ (ಶಾಂತಿ 128/9–23).

**ತನ್ತಿಪಾಲ** – ವಿರಾಟನಗರದಲ್ಲಿರುವಾಗ ಸಹದೇವನ ಹೆಸರು (ವಿರಾಟ 3/9).

**ತನ್ತು** – ವಿಶ್ವಾಮಿತ್ರನ ಒಬ್ಬ ಬ್ರಹ್ಮಜ್ಞಾನಿ ಪುತ್ರ (ಅನು 4/55).

**ತನ್ದುಲಿಕಾಶ್ರಮ** – ಒಂದು ಪ್ರಾಚೀನ ತೀರ್ಥ. ಇಲ್ಲಿಗೆ ಹೋಗುವುದರಿಂದ ಮನುಷ್ಯನು ಎಂದೂ ದುರ್ಗತಿ ಹೊಂದುವುದಿಲ್ಲ ಮತ್ತು ಬ್ರಹ್ಮಲೋಕಕ್ಕೆ ಹೋಗುತ್ತಾನೆ (ವನ 82/43).

**ತಪ** – ಕಾಶ್ಯಪ, ವಾಸಿಷ್ಠ, ಪ್ರಾಣಕ, ಚ್ಯವನ ಮತ್ತು ತ್ರಿವರ್ಚಾ ಎಂಬ ಈ ಐದು ಮುನಿಗಳ ತಪಸ್ಸಿನಿಂದ ಪ್ರಕಟಗೊಂಡ ಒಬ್ಬ ತೇಜಸ್ವಿ ಪುತ್ರ. ಈತ ಐದು ಬಣ್ಣಗಳಿಂದ ಕೂಡಿದವನಾದುದರಿಂದ ಪಾಂಚಜನ್ಯನೆಂಬ ಹೆಸರಿನಿಂದ ಪ್ರಖ್ಯಾತನಾದನು. ಈತ ಮೇಲೆ ಹೇಳಿದ ಐದೂ ಋಷಿಗಳ ವಂಶ ಪ್ರವರ್ತಕನಾದನು. ಈ ಪಾಂಚಜನ್ಯವೆಂಬ ಹೆಸರಿನ ಅಗ್ನಿಯೇ ಘೋರತಪಸ್ಸಿನ ಕಾರಣದಿಂದ ತಪನೆಂದು ಕರೆಯಲ್ಪಟ್ಟನು. ಅನಂತರ ಈತ ಅನೇಕ ಮಕ್ಕಳನ್ನು ಸೃಷ್ಟಿಸಿದನು (ವನ 220 ಅಧ್ಯಾಯ).

**ತಪತೀ** – ಸೂರ್ಯನ ಮಗಳು ಮತ್ತು ಸಂವರಣನ ಪತ್ನಿ. ಈಕೆಯ ಗರ್ಭದಿಂದ ಅಜಮೀಢವಂಶದ ಸಂವರಣನ ಮೂಲಕ

ಕುರುವಿನ ಜನನವಾಯಿತು (ಆದಿ 94/48). ಸೂರ್ಯಕನ್ಯೆ ತಪತೀ ಸಾವಿತ್ರೀದೇವಿಯ ತಂಗಿಯಾಗಿದ್ದಳು. ತಪಸ್ಸಿನಲ್ಲಿ ನಿಮಗ್ನಳಾಗಿಯೇ ಇದ್ದುದರಿಂದ ಈಕೆ ಮೂರೂ ಲೋಕಗಳಲ್ಲಿ ತಪತೀ ಎಂಬ ಹೆಸರಿನಿಂದಲೇ ಪ್ರಖ್ಯಾತಳಾದಳು (ಆದಿ 170/6–7). ಈಕೆಯ ಅನುಪಮ ಸೌಂದರ್ಯದ ವರ್ಣನೆ (ಆದಿ 170/8–10). "ಈಕೆಯ ವಿವಾಹ ಯಾರೊಂದಿಗೆ ಮಾಡಲಿ"– ತಂದೆಯ ಚಿಂತೆ (ಆದಿ 170/11). ಸಂವಹರಣ ನೊಂದಿಗೆ ತಪತಿಯ ವಿವಾಹದ ಕುರಿತು ಸೂರ್ಯದೇವನ ಆಲೋಚನೆ (ಆದಿ 170/15–20). ಸಂವರಣನಿಗೆ ತಪತಿಯ ಪ್ರಥಮ ದರ್ಶನ ಮತ್ತು ಈಕೆಯ ಅಪ್ರತಿಮ ಸೌಂದರ್ಯದಿಂದ ಆತ ಮೋಹಿತನಾದುದು (ಆದಿ 170/23–24). ರಾಜನು ತಪತಿಯೊಡನೆ ಕೆಲವು ಪ್ರಶ್ನೆಗಳನ್ನು ಕೇಳಿದುದು. ತಪತಿ ಅವುಗಳಿಗೆ ಉತ್ತರ ಹೇಳದೆಯೇ ಅದೃಶ್ಯಳಾದುದು (ಆದಿ 170/35–43). ರಾಜನು ಮೂರ್ಚ್ಛಿತನಾದುದನ್ನು ಕಂಡು ತಪತಿ ಪುನಃ ಕಾಣಿಸಿಕೊಂಡು ಧೈರ್ಯ ತುಂಬಿದುದು. ರಾಜನು ಆಕೆಯೊಡನೆ ಪ್ರಣಯಯಾಚನೆ ಮಾಡಿದುದು, ತಪತಿ ತಾನು ತನ್ನ ತಂದೆಯ ವಶದಲ್ಲಿರುವವಳೆಂದು ಹೇಳಿ, ಆತನೊಡನೆಯೇ ವಿಚಾರಿಸಿ ತನ್ನನ್ನು ವರಿಸುವ ಸೂಚನೆಯನ್ನಿತ್ತುದ್ದು (ಆದಿ 171 ಅಧ್ಯಾಯ). ವಸಿಷ್ಠನು ಸಂವರಣನಿಗಾಗಿ ಸೂರ್ಯನೊಡನೆ ತಪತಿಯನ್ನು ಕೋರಿದುದು. ಸೂರ್ಯನು ತನ್ನ ಕನ್ಯೆಯನ್ನು ಆತನಿಗಾಗಿ ಕೊಟ್ಟದ್ದು ಮತ್ತು ತಪತಿ ವಶಿಷ್ಠನೊಂದಿಗೆ ಸಂವರಣನ ಬಳಿಗೆ ಬಂದುದು (ಆದಿ 172/22–30). ಒಂದು ಪರ್ವತಶಿಖರದ ಮೇಲೆ ಸಂವರಣನಿಂದ ತಪತಿಯ ವಿಧಿವತ್ ಪಾಣಿಗ್ರಹಣ ನಡೆದುದು (ಆದಿ 172/33). ಹನ್ನೆರಡು ವರ್ಷಗಳ ತನಕ ಸಂವರಣ ಮತ್ತು ತಪತಿಯರ ವಿಹಾರ. ತಪತಿಯ ಗರ್ಭದಿಂದ ಕುರುವಿನ ಜನ್ಮ (ಆದಿ 172/34–50).

**ತಪನ** – ಒಬ್ಬ ಪಾಂಚಾಲಯೋಧ. ಕರ್ಣನಿಂದ ಈತನ ವಧೆ (ಕರ್ಣ 48/15).

**ತಮ** – ಗೃತ್ಸಮದ ವಂಶದ ಶ್ರವಾನ ಪುತ್ರ (ಅನು 30/63).

**ತಮಸಾ** – ಒಂದು ಶ್ರೇಷ್ಠ ನದಿ. ಅದರ ನೀರನ್ನು ಭಾರತವರ್ಷದ ಜನರು ಕುಡಿಯುತ್ತಾರೆ (ಭೀಷ್ಮ 9/31).

**ತಮೋಽಂತಕೃತ್** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ತರಂತುಕ** – ಕುರುಕ್ಷೇತ್ರದ ಗಡಿಯನ್ನು ನಿರ್ಧರಿಸುವ ತರಂತುಕನೆಂಬ ಹೆಸರಿನ ಯಕ್ಷ ಮತ್ತು ಆತನ ಸ್ಥಾನ. ಇಲ್ಲಿ ಒಂದು ರಾತ್ರಿ ವಾಸಿಸುವುದರಿಂದ ಸಹಸ್ರ ಗೋದಾನದ ಫಲ ಪ್ರಾಪ್ತವಾಗುತ್ತದೆ (ವನ 83/15–16; ಶಲ್ಯ 53/24).

**ತರಲ** – ಒಂದು ಭಾರತೀಯ ಜನಪದ. ಇದನ್ನು ಕರ್ಣನು ಜಯಿಸಿದ್ದನು (ಕರ್ಣ 8/20).

**ತರುಣಕ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಸರ್ಪಸತ್ರದ ಅಗ್ನಿಯಲ್ಲಿ ಭಸ್ಮವಾಗಿದ್ದನು (ಆದಿ 57/19).

**ತಾಡಕಾಯನ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/56).

**ತಾಣ್ಡ್ಯ** – ಒಬ್ಬ ಮಹರ್ಷಿ. ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/12). ಈತನಿಂದ ವಾನಪ್ರಸ್ಥ ಧರ್ಮದ ಪಾಲನೆಯಾಗಿತ್ತು. ಇದರಿಂದಾಗಿ ಈತನಿಗೆ ಸ್ವರ್ಗಪ್ರಾಪ್ತಿಯಾಯಿತು (ಶಾಂತಿ 244/17). ಈತ ಉಪರಿಚರ ವಸುವಿನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/7).

**ತಾಪತ್ಯ** – ತಪತಿ ಮತ್ತು ಸಂವರಣದಿಂದ ಹುಟ್ಟಿದ ರಾಜಾಕುರುವಿನ ವಂಶದಲ್ಲಿ ಜನ್ಮಗ್ರಹಣ ಮಾಡಿದ ಎಲ್ಲಾ ಕೌರವರು 'ತಾಪತ್ಯ'ರೆಂದು ಕರೆಯಲ್ಪಡುತ್ತಾರೆ. ಇದೇ ಅಭಿಪ್ರಾಯದಿಂದ ಚಿತ್ರರಥ ಗಂಧರ್ವನು ಅರ್ಜುನನ್ನು ತಾಪತ್ಯನೆಂದು ಹೇಳಿದ್ದನು (ಆದಿ 169/79). ಅರ್ಜುನನು ವಿಚಾರಿಸಿದಾಗ ಆತ ತಾಪತ್ಯನೆಂಬ ಹೆಸರಿನ ಸಮರ್ಥನೆಗಾಗಿ, ತಪತಿ ಮತ್ತು ಸಂವರಣರ ವಿವಾಹಪ್ರಸಂಗವನ್ನು ಹೇಳಿದ್ದನು (ಆದಿ 170 ಅಧ್ಯಾಯದಿಂದ 172 ಅಧ್ಯಾಯ ದವರೆಗೆ).

**ತಾಪಸಾರಣ್ಯ** – ತಪಸ್ವೀಜನರಿಂದ ಸುಶೋಭಿತವಾದ ಒಂದು ತೀರ್ಥ ಅಥವಾ ವನ (ವನ 87/20).

**ತಾಮ್ರಚೂಡಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/18).

**ತಾಮ್ರದ್ವೀಪ** – ದಕ್ಷಿಣ ಭಾರತದ ಒಂದು

ಜನಪದ. ಅದನ್ನು ಸಹದೇವನು ಜಯಿಸಿ, ತನ್ನ ಅಧೀನ ಮಾಡಿಕೊಂಡಿದ್ದನು (ಸಭಾ 31/68).

**ತಾಮ್ರಪರ್ಣೀ** – ಪಾಂಡ್ಯದೇಶ(ದಕ್ಷಿಣ ಭಾರತ)ದ ಒಂದು ಪವಿತ್ರನದಿ. ಮೋಕ್ಷ ಪಡೆಯುವ ಉದ್ದೇಶ ದಿಂದ ದೇವತೆಗಳು ಇಲ್ಲಿ ಆಶ್ರಮದಲ್ಲಿರುತ್ತಾ ಬಹಳ ದೊಡ್ಡ ತಪಸ್ಸು ಮಾಡಿದ್ದರು (ವನ 88 /14).

**ತಾಮ್ರಲಿಪ್ತ** – ಒಬ್ಬ ಪ್ರಾಚೀನ ರಾಜ. ಈತನನ್ನು ಪೂರ್ವದಿಗ್ವಿಜಯ ಕಾಲದಲ್ಲಿ, ಸಹದೇವನು ಪರಾಜಯಗೊಳಿಸಿದ್ದನು (ಸಭಾ 30/24).

**ತಾಮ್ರಲಿಪ್ತಕ** – ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/57).

**ತಾಮ್ರವತೀ** – ಅಗ್ನಿಗಳ ಉತ್ಪತ್ತಿ ಸ್ಥಾನಭೂತೆ ಯಾದ ಒಂದು ನದಿ (ವನ 222/23).

**ತಾಮ್ರಾ** –(1) ಕಾಕೀ, ಶ್ಯೇನೀ, ಭಾಸೀ, ಧೃತ ರಾಷ್ಟ್ರೀ ಮತ್ತು ಶುಕೀ – ಈ ಐದು ಕನ್ಯೆಯರ ಜನನಿ ತಾಮ್ರಾದೇವಿ (ಆದಿ 66/56).

(2). ಒಂದು ಶ್ರೇಷ್ಠ ನದಿ. ಅದರ ನೀರನ್ನು ಭಾರತದ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/28).

**ತಾಮ್ರಾರುಣತೀರ್ಥ** – ಒಂದು ತೀರ್ಥ. ಇಲ್ಲಿ ಯಾತ್ರೆ ಮಾಡುವುದರಿಂದ ಮನುಷ್ಯ ಅಶ್ವಮೇಧ ಯಜ್ಞದ ಫಲಪಡೆಯುತ್ತಾನೆ ಮತ್ತು ಬ್ರಹ್ಮಲೋಕಕ್ಕೆ ಹೋಗುತ್ತಾನೆ (ವನ 84/154).

**ತಾಮ್ರೋಷ್ಠ** – ಕುಬೇರನ ಸಭೆಯಲ್ಲಿದ್ದುಕೊಂಡು ಅವನ ಸೇವೆಯಲ್ಲಿರುವ ಒಬ್ಬ ಯಕ್ಷ (ಸಭಾ 10/16).

**ತಾರ** – ಶ್ರೀರಾಮನ ಸೇನೆಯ ಒಬ್ಬ ವಾನರ ಯೋಧ. ಈತ ನಿಖರ್ವಟನೆಂಬ ರಾಕ್ಷಸ ನೊಂದಿಗೆ ಯುದ್ಧ ಮಾಡಿದನು (ವನ 285/9).

**ತಾರಕಾಸುರ** – ಒಬ್ಬ ರಾಕ್ಷಸ. ಈತ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಯ ತಂದೆಯಾಗಿ ದ್ದನು (ಕರ್ಣ 33/5). ಸ್ಕಂದನಿಂದ ಈತನ ವಧೆ (ಶಲ್ಯ 46/73). ಈತನ ಮಹಾನ್ ಪರಾಕ್ರಮದ ವರ್ಣನೆ (ಅನು 84/79–81).

**ತಾರಾ** – (1) ವಾನರರಾಜ ವಾಲಿಯ ಹೆಂಡತಿ (ವನ 280/18–20). ಸುಗ್ರೀವನೊಂದಿಗೆ ಯುದ್ಧಕ್ಕೆ ಸಿದ್ಧನಾದ ಪತಿಯನ್ನು ಈಕೆ ಸಮಾ ಧಾನಗೊಳಿಸಿದುದು (ವನ 280/21–24). ಸುಗ್ರೀವನನ್ನು ಪತಿಯಾಗಿ ಮಾಡಿದುದು (ವನ 280/39).

(2) ಬೃಹಸ್ಪತಿಯ ಪತ್ನಿ (ಉದ್ಯೋಗ 118/13)

**ತಾರಾಕ್ಷ** – (ಅಥವಾ ತಾರಕಾಕ್ಷ) ತಾರಕನ ಒಬ್ಬ ಮಗ. ಈತ ತ್ರಿಪುರಗಳಲ್ಲಿ ಸುವರ್ಣಮಯ ಪುರದ ಅಧಿಪತಿಯಾಗಿದ್ದನು (ಕರ್ಣ 33/5; ಕರ್ಣ 15/21). ಭಗವಂತನಾದ ಶಿವನಿಂದ ಈತನ ವಧೆ (ಕರ್ಣ 34/114).

**ತಾರ್ಕ್ಷ್ಯ** – (1) ಕಶ್ಯಪ ಪತ್ನಿ ವಿನತೆಯ ಒಬ್ಬ ಮಗ (ಆದಿ 65/40).

(2) ಒಬ್ಬ ಋಷಿ. ಈತ ಇಂದ್ರನ ಸಭೆಯಲ್ಲಿರು ತ್ತಾನೆ (ಸಭಾ 7/18). ಈತ ತಾರ್ಕ್ಷ್ಯಅರಿಷ್ಟನೇಮಿ ಎಂದು ಹೇಳಲ್ಪಟ್ಟಿದ್ದಾನೆ. ಈತ ಕ್ಷತ್ರಿಯರಿಗೆ ಹೀಗೆ ಹೇಳಿದ್ದನು. 'ನಮಗೆ ಮೃತ್ಯುವಿನ ಭಯವಿಲ್ಲ' (ವನ 184/8–21). ಸರಸ್ವತಿ ದೇವಿಯೊಡನೆ ಈತ ಧರ್ಮವಿಷಯವಾಗಿ ಸಂವಾದ ಮಾಡಿದ್ದನು (ವನ 186 ಅಧ್ಯಾಯ).

(3) ತಾರ್ಕ್ಷ್ಯದೇಶದ ಒಬ್ಬ ಕ್ಷತ್ರಿಯ ರಾಜ ಕುಮಾರ. ಈತ ರಾಜಸೂಯದ ಸಮಯದಲ್ಲಿ ಯುಧಿಷ್ಠಿರನಿಗೆ ಉಡುಗೊರೆಯ ರೂಪದಲ್ಲಿ ತುಂಬಾ ಧನವನ್ನು ಅರ್ಪಿಸಿದ್ದನು (ಸಭಾ 52/15).

(4) ಶಿವನ ಒಂದು ಹೆಸರು (ಅನು 17/98).

**ತಾಲಕೇತು** – ಒಬ್ಬ ಅಸುರ. ಈತ ಶ್ರೀಕೃಷ್ಣನಿಂದ ಮಹೇಂದ್ರ ಪರ್ವತದ ಶಿಖರದ ಮೇಲೆ, ಇರಾವತಿಯ ದಡದಲ್ಲಿ ಹಿಡಿಯಲ್ಪಟ್ಟನು ಮತ್ತು ಅಕ್ಷ ಪ್ರಪತನದ ಸಮೀಪವಿರುವ ಹಂಸನೇಮಿ ಪಥವೆಂಬ ಸ್ಥಾನದಲ್ಲಿ ಕೊಲ್ಲಲ್ಪಟ್ಟನು (ಸಭಾ 38/ ದಾ. ಪಾಠ ಪುಟ 824, ವನ 12/34).

**ತಾಲಚರ** – ಭಾರತ ವರ್ಷದ ಒಂದು ಜನಪದ (ಉದ್ಯೋಗ 140/26).

**ತಾಲಜಂಘ** (1) ಒಂದು ಪ್ರಸಿದ್ಧ ಕ್ಷತ್ರಿಯ ಕುಲ. ಅದನ್ನು ಸಗರರಾಜನು ಗೆದ್ದಿದ್ದನು (ವನ 106/8). ಈ ವಂಶ ಶರ್ಯಾತಿ ವಂಶದ ವತ್ಸನ ಮಗ, ಸುಪ್ರಸಿದ್ಧ ರಾಜಾ ತಾಲಜಂಘನಿಂದ ಪ್ರಚಲಿತವಾಗಿತ್ತು (ಅನು 30/7).

(2) ಒಬ್ಬ ಮಹಾನ್ ಅಸುರ. ಈತ ಬ್ರಾಹ್ಮಣರನ್ನು ಗೌರವಿಸದ ಕಾರಣ ಬ್ರಹ್ಮದಂಡದಿಂದಲೇ ಕೊಲ್ಲಲ್ಪಟ್ಟನು (ವನ 303/17; ಅನು 30/7).

**ತಾಲವನ** – (1) ದಕ್ಷಿಣ ಭಾರತದ ಒಂದು ಜನಪದ. ಅದನ್ನು ಸಹದೇವನು ಗೆದ್ದು, ಯುಧಿಷ್ಠಿರನಿಗೆ ಕಪ್ಪಕೊಡುವಂತೆ ಬಲಾತ್ಕರಿಸಿದನು (ಸಭಾ 31/71).

(2) ದ್ವಾರಕೆಯ ಸಮೀಪವಿರುವ ಲತಾವೇಷ್ಟ ಪರ್ವತದ ನಾಲ್ಕು ಕಡೆ ಸುಶೋಭಿತವಾಗಿರುವ ಮೂರು ವನಗಳಲ್ಲಿ ಒಂದು (ಸಭಾ 38 ದಾ. ಪಾಠ ಪುಟ 813).

**ತಾಲಾಕಟ** – ದಕ್ಷಿಣ ಭಾರತದ ಒಂದು ಜನಪದ. ಅದನ್ನು ಸಹದೇವನು ಗೆದ್ದಿದ್ದನು (ಸಭಾ 31/65).

**ತಿತ್ತಿರ** – (1) ಒಂದು ರೀತಿಯ ಪಕ್ಷಿ. ಇವು ಸತ್ತುಹೋದ ತ್ರಿಶಿರನ ಭಯಾನಕ ಮುಖದಿಂದ ಹುಟ್ಟಿದ್ದವು (ಉದ್ಯೋಗ 9/41).

(2) ಒಂದು ಭಾರತೀಯ ಜನಪದ (ಭೀಷ್ಮ 50/51).

**ತಿತ್ತಿರಿ** – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/15).

(2) ಯುಧಿಷ್ಠಿರನ ಸಭೆಯಲ್ಲಿರುವ ಒಬ್ಬ ಋಷಿ (ಸಭಾ 4/12).

(3) ಅಶ್ವಗಳ ಒಂದು ಜಾತಿ. ಇದು ಪಾತರಗಿತ್ತಿಯಂತೆ ನಾನಾ ವರ್ಣದ್ದಾಗಿದೆ (ಈ ಕುದುರೆಗಳನ್ನು ಅರ್ಜುನನು ದಿಗ್ವಿಜಯ ಕಾಲದಲ್ಲಿ ಗಂಧರ್ವನಗರದಿಂದ ಪಡೆದಿದ್ದನು.). (ಸಭಾ 28/6)

**ತಿಮಿ** – ಒಂದು ಜಲಜಂತು. ಅದು ಸಮುದ್ರದಲ್ಲಿಯೇ ಇರುತ್ತದೆ (ಸಭಾ 38/29ರ ಅನಂತರ ದಾಕ್ಷಿಣಾತ್ಯ ಪಾಠ).

**ತಿಮಿಂಗಿಲ** – ಒಬ್ಬ ರಾಜ. ಈತನನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ತನ್ನ ಅಧೀನನಾಗಿ ಮಾಡಿಕೊಂಡಿದ್ದನು (ಸಭಾ 31/69).

**ತಿಲಭಾರ** – ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/53).

**ತಿಲೋತ್ತಮಾ** – ಒಬ್ಬ ಅಪ್ಸರೆ. ಈಕೆ ಕಶ್ಯಪನ ಪ್ರಾಧಾ ಎಂಬ ಹೆಂಡತಿಯಿಂದ ಹುಟ್ಟಿದ್ದಳು (ಆದಿ 65/49). ಅರ್ಜುನನ ಜನ್ಮಸಮಯದಲ್ಲಿ ಆಗಮಿಸಿ ಈಕೆ ನೃತ್ಯಮಾಡಿದ್ದಳು (ಆದಿ 122/62). ಬ್ರಹ್ಮನ ಆದೇಶದಿಂದ, ವಿಶ್ವಕರ್ಮನ ಮೂಲಕ, ಮೂರೂ ಲೋಕಗಳ ದರ್ಶನೀಯ ಪದಾರ್ಥಗಳ ಸಾರತತ್ತ್ವ ಮತ್ತು ರತ್ನರಾಶಿಯಿಂದ ಈಕೆಯ ನಿರ್ಮಾಣ (ಆದಿ 210/11–14). ಈಕೆಗೆ ತಿಲೋತ್ತಮಾ ಎಂಬ ಹೆಸರಾಗಲು ಕಾರಣ (ಆದಿ 210/18). ಈಕೆಯ ರೂಪಕ್ಕೆ ಮೋಹಿತನಾಗಿ ಭಗವಾನ್ ಶಿವನಿಗೆ ಚತುರ್ಮುಖ ಮತ್ತು ಇಂದ್ರನಿಗೆ ಸಾವಿರ ಕಣ್ಣುಗಳಾದುದು (ಆದಿ 210/28). ಈಕೆಯನ್ನು ತಮ್ಮ ಪತ್ನಿಯಾಗಿ ಮಾಡಿಕೊಳ್ಳಲು, ಸುಂದ ಮತ್ತು ಉಪಸುಂದರು ಪರಸ್ಪರ ಗದಾಯುದ್ಧಮಾಡಿ, ಒಬ್ಬ ಇನ್ನೊಬ್ಬನಿಂದ ಕೊಲ್ಲಲ್ಪಡುವುದು (ಆದಿ 211/19). ಬ್ರಹ್ಮನಿಂದ ಈಕೆಗೆ ಮೂರುಲೋಕಗಳಲ್ಲೂ ಅವ್ಯಾಹತ ಗತಿಯ ವರದಾನ (ಆದಿ 211/23). ಈಕೆಯ ಹೆಸರಿನ ಅರ್ಥ (ಅನು 141/1).

**ತೀರಗ್ರಹ** – ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/52).

**ತೀರ್ಥಕೋಟಿ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವ ಯಾತ್ರಿಗೆ ಪುಂಡರೀಕ ಯಜ್ಞದ ಫಲ ಸಿಗುತ್ತದೆ ಮತ್ತು ಆತ ವಿಷ್ಣುಲೋಕಕ್ಕೆ ಹೋಗುತ್ತಾನೆ (ವನ 84/121).

**ತೀರ್ಥನೇಮಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/7).

**ತೀರ್ಥಯಾತ್ರಾ ಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 80ರಿಂದ 156ರ ವರೆಗೆ).

**ತುಙ್ಗಕಾರಣ್ಯ** – ಒಂದು ತೀರ್ಥ. ಇಲ್ಲಿ ಸಾರಸ್ವತ ಮುನಿಯು ಇತರ ಋಷಿಗಳಿಗೆ ವೇದಾಧ್ಯಯನ ಮಾಡಿಸಿದ್ದನು (ವನ 85/46).

**ತುಙ್ಗವೇಣಾ** – ಒಂದು ಶ್ರೇಷ್ಠನದಿ. ಅದರ ನೀರನ್ನು ಭಾರತದ ಜನ ಕುಡಿಯುತ್ತಾರೆ (ಭೀಷ್ಮ 9/27).

**ತುಣ್ಡ** – (1) ಒಬ್ಬ ರಾಕ್ಷಸ. ಈತ ವಾನರ ಸೇನಾಪತಿ ನಳನೊಂದಿಗೆ ಯುದ್ಧಮಾಡಿದ್ದನು (ವನ 285/9).

(2) ಒಬ್ಬ ರಾಜ. ಈತನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/21).

**ತುಣ್ಡಿಕೇರ** – ಒಂದು ಭಾರತೀಯ ಜನಪದ (ದ್ರೋಣ 17/20).

**ತುಮ್ಬುರು** – (1) ಒಬ್ಬ ದೇವಗಂಧರ್ವ. ಈತ

ಕಶ್ಯಪ ಮತ್ತು ಪ್ರಾಧಾರ ಪುತ್ರ (ಆದಿ 65/51). ಅರ್ಜುನನ ಜನ್ಮೋತ್ಸವದಲ್ಲಿ ಈತನಿಂದ ಗಾಯನ ನಡೆದಿತ್ತು (ಆದಿ 122/54). ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/14). ಕುಬೇರ ಸಭೆಯಲ್ಲೂ ಪ್ರಧಾನ ಗಂಧರ್ವನಾಗಿದ್ದಾನೆ (ಸಭಾ 10/26). ಈತ ಯುಧಿಷ್ಠಿರನಿಗೆ ನೂರು ಕುದುರೆಗಳ ಕಾಣಿಕೆ ಕೊಟ್ಟಿದ್ದನು (ಸಭಾ 52/24). ಇಂದ್ರಲೋಕದಲ್ಲಿ ಅರ್ಜುನನ ಸ್ವಾಗತ ಸಮಯದಲ್ಲಿ ಈತನೂ ಇದ್ದನು (ವನ 43/14). ಪರ್ವಸಂಧಿಯ ಕಾಲದಲ್ಲಿ ಗಂಧಮಾದನ ಪರ್ವತದ ಮೇಲೆ ಕುಬೇರನ ಸೇವೆಯಲ್ಲಿ ನಿರತನಾದ ತುಂಬುರುವಿನ ಸಾಮಗಾನ ಸ್ವರ ಸ್ಪಷ್ಟವಾಗಿ ಕೇಳಿಸುತ್ತದೆ (ವನ 159/29). ಗೋಗ್ರಹಣ ಸಂದರ್ಭದಲ್ಲಿ, ಕೌರವರೊಡನೆ ಅರ್ಜುನನ ಯುದ್ಧನೋಡಲು ಈತ ಸ್ವತಃ ಬಂದಿದ್ದನು (ವಿರಾಟ 56/12). ಯುಧಿಷ್ಠಿರನ ಅಶ್ವಮೇಧಕ್ಕೂ ಈತ ಬಂದಿದ್ದನು (ಆಶ್ವ 88/39).

(2) ಒಬ್ಬ ಪ್ರಾಚೀನ ಋಷಿ. ಈತ ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರನ್ನು ನೋಡಲು ಹೋಗಿದ್ದನು (ಶಾಂತಿ 47/8).

**ತುರ್ವಸು** – ಯಯಾತಿಯಿಂದ ದೇವಯಾನಿಯ ಗರ್ಭದಲ್ಲಿ ಹುಟ್ಟಿದವನು (ಆದಿ 75/35; ಆದಿ 83/9). ಯಯಾತಿಯು ತುರ್ವಸುವಿನ ಯೌವನವನ್ನು ಯಾಚಿಸಿದುದು (ಆದಿ 84/10–11). ತುರ್ವಸು ಆತನಿಗೆ ತನ್ನ ಯೌವನವನ್ನು ಕೊಡಲು ನಿರಾಕರಿಸಿದುದು (ಆದಿ 75/43; ಆದಿ 84/12). ಯಯಾತಿಯಿಂದ ತುರ್ವಸುವಿಗೆ ಶಾಪ "ನಿನ್ನ ಸಂತತಿ ನಾಶವಾಗುವುದು. ಯಾರ ಆಚಾರ ಮತ್ತು ಧರ್ಮ ವರ್ಣಸಂಕರರಿಗೆ ಸಮಾನವಾಗಿರುತ್ತದೋ, ಯಾರು ಪ್ರತಿಲೋಮ ಸಂಕರ ಜಾತಿಯಲ್ಲಿ ಗಣಿಸಲ್ಪಡುತ್ತಾರೋ ಮತ್ತು ಯಾರು ಹಸಿಮಾಂಸ ತಿನ್ನುವ ಚಾಂಡಾಲರ ಮಟ್ಟದಲ್ಲಿದ್ದಾರೋ, ಅಂತಹ ಜನರಿಗೆ ನೀನು ರಾಜನಾಗು. ಪಶುಗಳಂತೆ ಆಚರಣೆಮಾಡುವ, ಪಾಪಾತ್ಮಜರಾದ ಮ್ಲೇಚ್ಛರಲ್ಲಿ ನೀನು ವಾಸಿಸುವವನಾಗು' (ಆದಿ 84/13–15).

**ತುಲಾಧಾರ** – ಕಾಶಿಯಲ್ಲಿ ವಾಸಿಸುವ ಒಬ್ಬ ಧರ್ಮಾತ್ಮ ವೈಶ್ಯ (ಶಾಂತಿ 261/ 42–43). ಈತ ತನ್ನ ಬಳಿಗೆ ಬಂದ ಜಾಜಲಿ ಮುನಿಯ ಸತ್ಕಾರಮಾಡಿ, ಆತನ ಆಗಮನದ ಕಾರಣವನ್ನು ತಾನೇ ಹೇಳಿದುದು (ಶಾಂತಿ 261/46–51). ಜಾಜಲಿಗೆ ಧರ್ಮೋಪದೇಶ ಮಾಡಿದುದು (ಶಾಂತಿ 262/ 5–55). ಈತನಿಂದ ಜಾಜಲಿಗೆ ಆತ್ಮಯಜ್ಞ ವಿಷಯದ ಧರ್ಮೋಪದೇಶ (ಶಾಂತಿ 263/4–43). ಈತನಿಗೆ ಜಾಜಲಿಯೊಂದಿಗೆ ಸ್ವರ್ಗಪ್ರಾಪ್ತಿ (ಶಾಂತಿ 264/20–21).

**ತುಷಾರ** – (1) ಉತ್ತರದಿಕ್ಕಿನ ಒಂದು ಜನಪದ (ಕೆಲವರ ಅಭಿಪ್ರಾಯ ಪ್ರಕಾರ ಆಧುನಿಕ ತುಖಾರಿಸ್ಥಾನ – ಆಕ್ಸಸ್ ನದಿಯ ಆಸುಪಾಸಿನ ಪ್ರದೇಶವೇ ತುಷಾರ.) ಈ ದೇಶದ ರಾಜನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕರೆಸಲ್ಪಟ್ಟಿದ್ದನು. ಈತ ಅಡುಗೆಪದಾರ್ಥಗಳನ್ನು ಬಡಿಸುವ ಕಾರ್ಯ ಮಾಡುತ್ತಿದ್ದನು (ವನ 51/25–26). ಗಂಧಮಾದನದಿಂದ ದ್ವೈತವನದ ಕಡೆಗೆ ಹಿಂತಿರುಗಿದ ಪಾಂಡವರು ತುಷಾರ ದೇಶವನ್ನು ದಾಟಿ ರಾಜಾ ಸುಬಾಹುವಿನ ಪಟ್ಟಣವನ್ನು ತಲುಪಿದ್ದರು (ವನ 177/12).

(2) ತುಷಾರ ಜನಪದದ ನಿವಾಸಿಗಳು. ಇವರು ಭೀಷ್ಮನಿರ್ಮಿತ ಕ್ರೌಂಚವ್ಯೂಹದ ಬಲರೆಕ್ಕೆಯ ಆಶ್ರಯದಲ್ಲಿ ನಿಂತಿದ್ದರು (ಭೀಷ್ಮ 75/21). ತುಷಾರವಾಸಿ ಮ್ಲೇಚ್ಛರು ಮಾಂಧಾತಾನ ರಾಜ್ಯದಲ್ಲಿ ವಾಸಮಾಡುತ್ತಿದ್ದರು (ಶಾಂತಿ 65/13).

**ತುಹರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/71).

**ತುಹುಣ್ಡ** – ಒಬ್ಬ ದಾನವ. ಈತ ಕಶ್ಯಪನಿಂದ ದನುವಿನಲ್ಲಿ ಹುಟ್ಟಿದವನು (ಆದಿ 65/25). ಈತನೇ ಭೂಮಿಯಲ್ಲಿ ಸೇನಾಬಿಂದು ಎಂಬ ರಾಜನಾಗಿದ್ದನು (ಆದಿ 67/19–20).

**ತೃಣಕ** – ಒಬ್ಬ ರಾಜರ್ಷಿ. ಈತ ಯಮಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/17).

**ತೃಣಪ** – ಒಬ್ಬ ದೇವಗಂಧರ್ವ. ಈತ ಅರ್ಜುನನ ಜನ್ಮಸಮಯದಲ್ಲಿ ಅಲ್ಲಿಗೆ ಬಂದಿದ್ದನು (ಆದಿ 122/56).

**ತೃಣಬಿಂದು** – (1) ಕಾಮ್ಯಕವನದ ಒಂದು ಸರೋವರ. ಪಾಂಡವರು ದ್ವೈತವನದಿಂದ ಅದರ ಬಳಿಗೆ ಹೋಗಿದ್ದರು (ವನ 258/13).

(2) ಕಾಮ್ಯಕವನದಲ್ಲಿ ವಾಸಿಸುವ ಒಬ್ಬ ಋಷಿ. ಈತನ ಆಜ್ಞೆಯಂತೆ ಪಾಂಡವರು ದ್ರೌಪದಿಯನ್ನು

ಆಶ್ರಮದಲ್ಲಿಬಿಟ್ಟು ಬೇಟೆಯಾಡಲು ಹೋಗಿದ್ದರು (ವನ 264/5). ಈತ ಶರಶಯ್ಯೆಯಲ್ಲಿದ್ದ ಭೀಷ್ಮ ರನ್ನು ನೋಡಲು ಕುರುಕ್ಷೇತ್ರಕ್ಕೆ ಹೋಗಿದ್ದನು (ಶಾಂತಿ 47/9).

**ತೃಣಸೋಮಾಂಗಿರಸ್** – ದಕ್ಷಿಣ ದಿಕ್ಕಿನ ಆಶ್ರಯ ದಲ್ಲಿರುವ ಒಬ್ಬ ಋಷಿ (ಅನು 150/34).

**ತೃತೀಯಾ** – ಒಂದು ನದಿ. ಈಕೆ ವರುಣ ಸಭೆ ಯಲ್ಲಿ ಉಪಸ್ಥಿತಳಾಗಿದ್ದು ವರುಣನ ಉಪಾಸನೆ ಮಾಡುತ್ತಾಳೆ (ಸಭಾ 9/21)

**ತೇಜಸ್ವೀ** – ಐವರು ಇಂದ್ರರಲ್ಲಿ ಒಬ್ಬ (ಆದಿ 196/28–29).

**ತೇಜೇಯು** – ಪೂರುಪುತ್ರ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಜನಿಸಿ ದವನು (ಆದಿ 94/11).

**ತೈಜಸ** – ಕುರುಕ್ಷೇತ್ರದ ಒಳಗೆ ವರುಣದೇವತಾ ಸಂಬಂಧಿಯಾದ ಒಂದು ತೀರ್ಥ. ಇಲ್ಲಿ ಸ್ಕಂದ ನಿಗೆ ದೇವಸೇನಾಪತಿ ಪದದ ಅಭಿಷೇಕವಾಗಿತ್ತು (ವನ 83/164).

**ತೈತ್ತಿರಿ** – ರಾಜಾಉಪರಿಚರವಸುವಿನ ಯಜ್ಞದಲ್ಲಿ ಸಮ್ಮಿಲಿತರಾಗಿದ್ದ ಹದಿನಾರು ಮಂದಿಯಲ್ಲಿ ಒಬ್ಬ (ಶಾಂತಿ 336/9).

**ತೋಮರ** – ಈಶಾನ್ಯ ಭಾರತದ ಒಂದು ಜನಪದ (ಭೀಷ್ಮ 9/69).

**ತೋರಣಸ್ಫಾಟಿಕ** – ಧೃತರಾಷ್ಟ್ರನು ಮಾಡಿಸಿದ ಸಭಾಭವನದ ಹೆಸರು (ದ್ಯೂತಕ್ರೀಡೆಯ ಸಮಯದಲ್ಲಿ ಧೃತರಾಷ್ಟ್ರನ ಆಜ್ಞೆಯಿಂದ ಈ ಸಭೆಯ ನಿರ್ಮಾಣವಾಗಿತ್ತು. ಇದರಲ್ಲಿ ಸ್ವರ್ಣ ಮತ್ತು ವೈಡೂರ್ಯಖಚಿತ ಒಂದು ಸಾವಿರ ಕಂಭಗಳು ಮತ್ತು ನೂರು ಬಾಗಿಲುಗಳಿದ್ದವು. ಇದರ ಉದ್ದಗಲಗಳು ಎರಡೆರಡು ಮೈಲುಗಳ ಷ್ಟಿತ್ತು (ಸಭಾ 56/18).

**ತ್ರಸದಸ್ಯು** – ಒಬ್ಬ ರಾಜರ್ಷಿ. ಈತ ಯಮಸಭೆ ಯಲ್ಲಿದ್ದುಕೊಂಡು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/9). ಈತ ಭೂಪಾಲರಲ್ಲಿ ಶ್ರೇಷ್ಠ, ಇಕ್ಷ್ವಾಕು ವಂಶದವ ಮತ್ತು ಮಹಾಮನಸ್ವಿಯಾಗಿದ್ದನು. ಈತನ ತಂದೆಯ ಹೆಸರು ಪುರುಕುತ್ಸ. ಇವನಲ್ಲಿಗೆ ಅಗಸ್ತ್ಯ ಮುನಿ, ಶ್ರುತರ್ವಾ ಮತ್ತು ಬ್ರಧ್ನಶ್ವರ ಆಗಮನ ಮತ್ತು ಈತ ರಾಜ್ಯದ ಗಡಿಗೆ ಹೋಗಿ, ಅವರೆ ಲ್ಲರಿಗೂ ವಿಧಿಪ್ರಕಾರ ಆದರ ಸತ್ಕಾರ ಮಾಡಿ, ಅವರ ಆಗಮನದ ಕಾರಣ ಕೇಳಿದುದು (ವನ 98/12–14). ಅಗಸ್ತ್ಯರು ಧನವನ್ನು ಯಾಚಿಸಿ ದಾಗ, ಈತ ಅವರ ಮುಂದೆ ತನ್ನ ಆಯವ್ಯಯದ ಲೆಕ್ಕವನ್ನು ತೆರೆದಿಟ್ಟದ್ದು (ವನ 98/16). ಈತ ಪ್ರಾತಃ ಸಂಧ್ಯೆಗಳಲ್ಲಿ ಸ್ಮರಣೀಯರಾದ ರಾಜರಲ್ಲಿ ಒಬ್ಬ (ಅನು 165/55).

**ತ್ರಿಕಕುಬ್ಧಾಮ** – ವಿಷ್ಣುವಿನ ಒಂದು ಹೆಸರು (ಅನು 149/20).

**ತ್ರಿಕೂಟ** – ಲಂಕೆಯ ಸಮೀಪದ ಒಂದು ಪರ್ವತ (ವನ 277/54).

**ತ್ರಿಗಂಗ** – ಒಂದು ತೀರ್ಥ. ಇಲ್ಲಿ ದೇವತೆಗಳಿಗೆ ಮತ್ತು ಪಿತೃಗಳಿಗೆ ತರ್ಪಣ ಕೊಡುವುದರಿಂದ ಮನುಷ್ಯ ಪುಣ್ಯಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/29).

**ತ್ರಿಗರ್ತ** – (1) ಒಂದು ಜನಪದ (ಭೀಷ್ಮ 51/7). ಅಲ್ಲಿರುವ ನಿವಾಸಿಗಳು ಮತ್ತು ರಾಜ. ಏಕಚಕ್ರನಗರದ ಕಡೆಗೆ ಹೋಗುತ್ತಿದ್ದ ಪಾಂಡವರು ಈ ದೇಶದ ಮೂಲಕ ಹೋಗಿದ್ದರು (ಆದಿ 155 /2). ಅರ್ಜುನನು ಉತ್ತರದಿಗ್ವಿಜಯದ ಸಮಯ ದಲ್ಲಿ ಈ ದೇಶವನ್ನು ಗೆದ್ದಿದ್ದನು. ಇಲ್ಲಿರುವ ರಾಜ ಕುಂತೀಪುತ್ರ ಅರ್ಜುನನಿಗೆ ಶರಣಾಗಿದ್ದನು (ಸಭಾ 27/18). ನಕುಲನೂ ತನ್ನ ದಿಗ್ವಿಜಯ ಯಾತ್ರೆಯಲ್ಲಿ ಈ ದೇಶವನ್ನು ಗೆದ್ದಿದ್ದನು (ಸಭಾ 32/7). ಇಲ್ಲಿರುವವರು ಯುಧಿಷ್ಠಿರನಿಗೆ ಉಡು ಗೊರೆ ತಂದಿದ್ದರು (ಸಭಾ 52/14). ತ್ರಿಗರ್ತ ದೇಶದ ಒಬ್ಬ ವೀರ ರಾಜಾ ಯುಧಿಷ್ಠಿರನ ರಥದ ಕುದುರೆಗಳನ್ನು ಕೊಂದುಹಾಕಿದನು. ಅನಂತರ ಯುಧಿಷ್ಠಿರನಿಂದ ಆತ ಕೊಲ್ಲಲ್ಪಟ್ಟನು (ವನ 271/12–14). ತ್ರಿಗರ್ತರಾಜ ಸುರಥನು ತನ್ನ ಆನೆಯ ಸಹಿತ ನಕುಲನಿಂದ ಕೊಲ್ಲಲ್ಪಟ್ಟನು (ವನ 271/18–22). ಅರ್ಜುನನು ತ್ರಿಗರ್ತರ ಸಂಹಾರ ಮಾಡಿದನು (ವನ 271/28). ತ್ರಿಗರ್ತದೇಶದ ಯೋಧರು ಮತ್ತು ತ್ರಿಗರ್ತರಾಜ ಸುಶರ್ಮನಿಂದ ವಿರಾಟನ ರಾಜ್ಯದ ಮೇಲೆ ಆಕ್ರಮಣ ಮತ್ತು ಆತನ ಗೋವುಗಳ ಅಪಹರಣ (ವಿರಾಟ 30 ಅಧ್ಯಾಯ). ತ್ರಿಗರ್ತರೊಂದಿಗೆ ಮತ್ಸ್ಯದೇಶದ ವೀರರ ಯುದ್ಧ (ವಿರಾಟ 32 ಅಧ್ಯಾಯ). ತ್ರಿಗರ್ತರಾಜ ಸುಶರ್ಮ ವಿರಾಟ

ನನ್ನು ಹಿಡಕೊಂಡು ಹೋದುದು; ಭೀಮನಿಂದ ಸುಶರ್ಮನ ನಿಗ್ರಹ ಮತ್ತು ಯುಧಿಷ್ಠಿರನು ಅನುಗ್ರಹಿಸಿ, ಬಿಡುಗಡೆಗೊಳಿಸಿದ್ದು (ವಿರಾಟ 33 ಅಧ್ಯಾಯ). ಐದು ಮಂದಿ ತ್ರಿಗರ್ತರೊಂದಿಗೆ ಯುದ್ಧ ಮಾಡುವ ಕೆಲಸವನ್ನು ದ್ರೌಪದಿಯ ಐದು ಪುತ್ರರಿಗೆ ಒಪ್ಪಿಸಲಾಯಿತು (ಉದ್ಯೋಗ 164/8). ತ್ರಿಗರ್ತರಾಜರು ಐದು ಮಂದಿ ಸಹೋದರರಾಗಿದ್ದರು. ಐವರೂ ಉದಾರ ರಥಿಗಳಾಗಿದ್ದರು. ಇವರಲ್ಲಿ ಸತ್ಯರಥನು ಪ್ರಧಾನನಾಗಿದ್ದನು (ಉದ್ಯೋಗ 166/9–11). ಭೀಷ್ಮ ನಿರ್ಮಿತ ಗರುಡವ್ಯೂಹದಲ್ಲಿ ಈತ ತಲೆಯ ಸ್ಥಾನದಲ್ಲಿ ನಿಲ್ಲಿಸಲ್ಪಟ್ಟಿದ್ದನು (ಭೀಷ್ಮ 56 ಅಧ್ಯಾಯ). ಅರ್ಜುನ ಮತ್ತು ಅಭಿಮನ್ಯುವಿನ ಮೇಲೆ ತ್ರಿಗರ್ತರು ಆಕ್ರಮಣ ಮಾಡಿದ್ದರು (ಭೀಷ್ಮ 61 ಅಧ್ಯಾಯ). ನಕುಲನೊಂದಿಗೆ ಈತನ ಯುದ್ಧ (ಭೀಷ್ಮ 72 ಅಧ್ಯಾಯ). ಅರ್ಜುನನು ಇವರ ಮೇಲೆ ವಾಯುವ್ಯಾಸ್ತ್ರ ಬಿಟ್ಟಿದ್ದನು (ಭೀಷ್ಮ 102 ಅಧ್ಯಾಯ). ಮೊದಲು ಕರ್ಣ ಇವರನ್ನು ಸೋಲಿಸಿದ್ದನು (ದ್ರೋಣ 4 ಅಧ್ಯಾಯ; ಕರ್ಣ 8 ಅಧ್ಯಾಯ). ಶ್ರೀಕೃಷ್ಣನೂ ಇವರ ಮೇಲೆ ಜಯಗಳಿಸಿದ್ದನು (ದ್ರೋಣ 11 ಅಧ್ಯಾಯ). ಸತ್ಯರಥನೇ ಮೊದಲಾದ ಐದೂ ಸಹೋದರರು ಹೀಗೆ ಪ್ರತಿಜ್ಞೆ ಮಾಡಿದ್ದರು, 'ಒಂದೋ ಅರ್ಜುನನನ್ನು ಕೊಲ್ಲುವೆವು; ಇಲ್ಲವೇ ನಾವೇ ಸಾಯುವೆವು' ಆದುದರಿಂದಲೇ ಇವರು ಸಂಶಪ್ತಕರೆಂದು ಕರೆಯಲ್ಪಟ್ಟರು (ದ್ರೋಣ 17 ಅಧ್ಯಾಯ; ದ್ರೋಣ 19 ಅಧ್ಯಾಯ). ಪರಶುರಾಮನೂ ಒಮ್ಮೆ ತ್ರಿಗರ್ತರ ಸಂಹಾರ ಮಾಡಿದ್ದನು (ದ್ರೋಣ 70 ಅಧ್ಯಾಯ). ಸಾತ್ಯಕಿಯೊಂದಿಗೆ ತ್ರಿಗರ್ತರ ಯುದ್ಧ (ದ್ರೋಣ 141 ಅಧ್ಯಾಯ). ಯುಧಿಷ್ಠಿರನಿಂದ ತ್ರಿಗರ್ತರ ವಧೆ (ದ್ರೋಣ 157 ಅಧ್ಯಾಯ). ತ್ರಿಗರ್ತರು ಅರ್ಜುನ ಮತ್ತು ಶ್ರೀಕೃಷ್ಣನ ಮೇಲೆ ಆಕ್ರಮಣ ಮಾಡಿದ್ದರು (ಶಲ್ಯ 27 ಅಧ್ಯಾಯ). ಅಶ್ವಮೇಧ ಯಜ್ಞದ ಅಶ್ವರಕ್ಷಣೆಗೆ ಹೋದ ಅರ್ಜುನನಿಂದ ಇವರೆಲ್ಲರ ಪರಾಜಯ (ಆಶ್ವ 74 ಅಧ್ಯಾಯ).

(2) ತ್ರಿಗರ್ತ ಎಂಬ ಹೆಸರಿನ ಒಬ್ಬ ರಾಜ. ಈತ ಯಮನಸಭೆಯಲ್ಲಿರುತ್ತಾನೆ (ಸಭಾ 8/20).

**ತ್ರಿಜಟಾ** – ಒಬ್ಬ ರಾಕ್ಷಸಿ. ಈಕೆ ಅಶೋಕ ವನದಲ್ಲಿ ಸೀತೆಗೆ ಧೈರ್ಯದ ಆಶ್ವಾಸನೆ ಕೊಡುತ್ತಿದ್ದಳು. ಈಕೆ ಅವಿಂಧ್ಯನ ಸಂದೇಶ ಮತ್ತು ತನ್ನ ಸ್ವಪ್ನವನ್ನು ಸೀತೆಗೆ ತಿಳಿಸಿದ್ದಳು (ವನ 280/54–72). ಶ್ರೀರಾಮನು ತ್ರಿಜಟೆಗೆ ಧನವನ್ನಿತ್ತು ಸಂತೋಷಗೊಳಿಸಿದುದು (ವನ 291/41).

**ತ್ರಿತ** – ಧರ್ಮಪರಾಯಣನಾದ ಪ್ರಜಾಪತಿ ಗೌತಮನ ಮೂವರು ಪುತ್ರರಲ್ಲಿ ಒಬ್ಬ. ಈತನ ಇತರ ಇಬ್ಬರು ಸಹೋದರರು ಏಕತ ಮತ್ತು ದ್ವಿತ ಆಗಿದ್ದರು. ಮೂವರೂ ಮುನಿಗಳೂ ಬ್ರಹ್ಮವಾದಿಗಳೂ ಆಗಿದ್ದರು. ಇವರೆಲ್ಲರೂ ತಪಸ್ಸಿನ ಮೂಲಕ ಬ್ರಹ್ಮಲೋಕವನ್ನು ಜಯಿಸಿದ್ದರು (ಶಲ್ಯ 36/7–9). ತ್ರಿತನು ಬಾವಿಗೆ ಬಿದ್ದ, ಅಲ್ಲಿ ಯಜ್ಞ ಮಾಡಿದ ಮತ್ತು ತನ್ನ ಸಹೋದರರಿಗೆ ಶಾಪ ಕೊಟ್ಟ ಕಥೆ (ಶಲ್ಯ 36 ಅಧ್ಯಾಯ). ಈತ ಉಪರಿಚರವಸುವಿನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/6). ಭೀಷ್ಮನ ಮಹಾಪ್ರಯಾಣದ ಸಮಯದಲ್ಲಿ, ಅವನನ್ನು ನೋಡಲು ಬಂದಿದ್ದ ಮಹರ್ಷಿಗಳಲ್ಲಿ ಈತನೂ ಇದ್ದ (ಅನು 26/6). ವರುಣನ ಏಳು ಮಂದಿ ಋತ್ವಿಜರಲ್ಲಿ ಇತನೂ ಒಬ್ಬನಾಗಿದ್ದನು. ಈತ ಪಶ್ಚಿಮ ದಿಕ್ಕಿನಲ್ಲಿ ವಾಸಿಸುವ ಋಷಿಯಾಗಿದ್ದನು (ಅನು 150/36–37).

**ತ್ರಿದಿವಾ** – (1) ಒಂದು ಪ್ರಮುಖ ನದಿ. ಅದರ ನೀರನ್ನು ಭಾರತ ವರ್ಷದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/17)

(2) ಒಂದು ಪ್ರಮುಖ ನದಿ. ಅದರ ನೀರನ್ನು ಭಾರತವರ್ಷದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/18).

**ತ್ರಿಪಾದ** – ಸ್ಕಂದನಿಂದ ವಧಿಸಲ್ಪಟ್ಟ ಒಬ್ಬ ರಾಕ್ಷಸ (ಶಲ್ಯ 46/75).

**ತ್ರಿಪುರ** – ಮಯಾಸುರನಿಂದ ನಿರ್ಮಿಸಲ್ಪಟ್ಟ, ಅಸುರರ ಮೂರು ನಗರಗಳು ಅಥವಾ ಪುರಗಳು. ಇವು ಚಿನ್ನ ಬೆಳ್ಳಿ ಮತ್ತು ಕಬ್ಬಿಣದಿಂದ ರಚಿಸಲ್ಪಟ್ಟಿದ್ದವು. ಕಮಲಾಕ್ಷ, ತಾರಾಕ್ಷ ಮತ್ತು ವಿದ್ಯುನ್ಮಾಲಿ ಎಂಬವರು ಇವುಗಳ ಒಡೆಯರಾಗಿದ್ದರು. ಭಗವಾನ್ ಶಿವನು ಈ ಮೂರೂ ಪುರಗಳನ್ನು ಮತ್ತು ಅಲ್ಲಿರುವ ಅಸುರರನ್ನು ನಾಶಮಾಡಿದ್ದನು (ಕರ್ಣ 33 ಅಧ್ಯಾಯದಿಂದ 34 ಅಧ್ಯಾಯದ ವರೆಗೆ).

**ತ್ರಿಪುರಾ** – ಒಂದು ಭಾರತೀಯ ಜನಪದ. ಇದನ್ನು ಕರ್ಣ ಜಯಿಸಿದ್ದನು (ವನ 254 ಅಧ್ಯಾಯ). ಕೋಸಲ ರಾಜ ಬೃಹದ್ಬಲ ತ್ರಿಪುರಾದ ಸೈನಿಕರೊಂದಿಗಿದ್ದನು (ಭೀಷ್ಮ 87/9).

**ತ್ರಿಪುರೀ** – ದಕ್ಷಿಣ ಭಾರತದ ಒಂದು ಜನಪದ. ಅದರ ರಾಜನನ್ನು ದಿಗ್ವಿಜಯ ಕಾಲದಲ್ಲಿ ಸಹದೇವನು ಗೆದ್ದಿದ್ದನು (ಸಭಾ 31/60).

**ತ್ರಿರಾಬ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ತ್ರಿವರ್ಚಾ** (ತ್ರಿವರ್ಚಕ). – ಅಂಗೀರಸನ ಪುತ್ರ, ಒಬ್ಬ ಋಷಿ. ಈತ ಇತರ ನಾಲ್ಕು ಋಷಿಗಳೊಂದಿಗೆ ತಪಸ್ಸು ಮಾಡಿ, ಅಗ್ನಿಸ್ವರೂಪನಾದ ಪಾಂಚಜನ್ಯನೆಂಬ ಪುತ್ರನಿಗೆ ಜನ್ಮಕೊಟ್ಟನು (ವನ 220/1–5).

**ತ್ರಿವಿಷ್ಟಪ** – ಕುರುಕ್ಷೇತ್ರದ ಒಳಗಿರುವ ಒಂದು ತೀರ್ಥ. ಇಲ್ಲಿ ಪಾಪನಾಶಿನಿಯಾದ ವೈತರಣಿಯಲ್ಲಿ ಸ್ನಾನಮಾಡಿ, ಶಿವನ ಪೂಜೆ ಮಾಡುವುದರಿಂದ ಮನುಷ್ಯನು ಎಲ್ಲಾ ಪಾಪಗಳಿಂದ ಮುಕ್ತನಾಗಿ ಪರಮಗತಿಯನ್ನು ಪಡೆಯುತ್ತಾನೆ (ವನ 83/84–85).

**ತ್ರಿಶಂಕು** – ಒಬ್ಬ ರಾಜ. ಗುರುಶಾಪದಿಂದ ಹೀನಾವಸ್ಥೆಯಲ್ಲಿ ಬಿದ್ದಿದ್ದರೂ, ಮಹಾತಪಸ್ವಿಯಾದ ವಿಶ್ವಾಮಿತ್ರನು ಈತನನ್ನು ಸ್ವರ್ಗಕ್ಕೇರಿಸಿದ್ದನು (ಆದಿ 71/34 ಮತ್ತು ಅನಂತರ 2 ಶ್ಲೋಕ ದಾಕ್ಷಿಣಾತ್ಯ ಪಾಠ). ಈತ ಇಕ್ಷ್ವಾಕು ಕುಲದಲ್ಲಿ ಹುಟ್ಟಿದ್ದನು. ಅಯೋಧ್ಯೆಯ ರಾಜನಾಗಿದ್ದನು ಮತ್ತು ವಿಶ್ವಾಮಿತ್ರನೊಂದಿಗೆ ಸೌಹಾರ್ದವನ್ನಿಟ್ಟುಕೊಂಡಿದ್ದನು. ಇವನ ಪತ್ನಿ ಕೇಕಯ ರಾಜಕುಮಾರಿ ಸತ್ಯವತಿ ಆಗಿದ್ದಳು. ಇವರ ಮಗನೇ ಸತ್ಯಪ್ರತಿಜ್ಞನಾದ ಹರಿಶ್ಚಂದ್ರನಾಗಿದ್ದನು (ಸಭಾ 12/10ರ ನಂತರ ದಾ.ಪಾಠ.).

**ತ್ರಿಶಿರಾ** – ಈತ ತ್ವಷ್ಟಾನ ಮಗ. ಇವನ ಇನ್ನೊಂದು ಹೆಸರು ವಿಶ್ವರೂಪನೆಂದಾಗಿತ್ತು (ಉದ್ಯೋಗ 9/3). ಅಪ್ಸರೆಯರು ಪ್ರಲೋಭನಗೊಳಿಸಿದರೂ ಈತ ಶಾಂತನಾಗಿದ್ದುದು (ಉದ್ಯೋಗ 9/15–16). ಇಂದ್ರನ ವಜ್ರಪ್ರಹಾರದಿಂದ ಈತನ ಮೃತ್ಯು (ಉದ್ಯೋಗ 9/24).

**ತ್ರಿಶೂಲಖಾತ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿ ದೇವತೆಗಳ ಮತ್ತು ಪಿತೃಗಳ ಪೂಜೆ ಮಾಡುವುದರಿಂದ, ಮನುಷ್ಯ ದೇಹತ್ಯಾಗದ ಅನಂತರ ಗಣಪತಿ ಪದವನ್ನು ಪಡೆಯುತ್ತಾನೆ (ವನ 84/11–12).

**ತ್ರಿಷವಣ** – ಒಬ್ಬ ದಿವ್ಯ ಮಹರ್ಷಿ. ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನ ಮಾರ್ಗಮಧ್ಯದಲ್ಲಿ ಈತ ಭೇಟಿಯಾಗಿದ್ದನು (ಉದ್ಯೋಗ 83/64ರ ಅನಂತರ ದಾ. ಪಾಠ).

**ತ್ರಿಸ್ಥಾನ** – ಒಂದು ತೀರ್ಥ. ಇಲ್ಲಿ ಒಂದು ತಿಂಗಳು ನಿರಾಹಾರನಾಗಿದ್ದು ಸ್ನಾನ ಮಾಡಿದರೆ ದೇವತೆಗಳ ದರ್ಶನವಾಗುತ್ತದೆ (ಅನು 25/15).

**ತ್ರಿಸ್ರೋತಸೀ** – ಒಂದು ನದಿ. ಈಕೆ ವರುಣ ಸಭೆಯಲ್ಲಿದ್ದು, ವರುಣನ ಉಪಾಸನೆ ಮಾಡುತ್ತಾಳೆ (ಸಭಾ 9/23).

**ತ್ರುಟಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ತ್ರೇತಾ** – ಕೃತಯುಗ ಅಥವಾ ಸತ್ಯಯುಗದ ಅನಂತರ ದ್ವಿತೀಯ ಯುಗ. ಹನುಮಂತನಿಂದ ಇದರ ಧರ್ಮದ ವರ್ಣನೆ – ತ್ರೇತೆಯಲ್ಲಿ ಯಜ್ಞಕರ್ಮದ ಆರಂಭವಾಗುತ್ತದೆ. ಧರ್ಮದ ಒಂದು ಪಾದದ ಹ್ರಾಸವಾಗುತ್ತದೆ ಮತ್ತು ಭಗವಂತನಾದ ವಿಷ್ಣುವಿನ ಬಣ್ಣ ಕೆಂಪಾಗುತ್ತದೆ (ವನ 149/23–26). ಮಾರ್ಕಂಡೇಯರಿಂದ ತ್ರೇತೆಯವರ್ಣನೆ. ತ್ರೇತಾಯುಗ ಮೂರುಸಾವಿರ ದಿವ್ಯ ವರ್ಷಗಳದ್ದಾಗಿದೆ. ಇದರ ಸಂಧ್ಯಾ ಮತ್ತು ಸಂಧ್ಯಾಂಶಗಳಿಗೂ ಅಷ್ಟೇ ನೂರು ದಿವ್ಯವರ್ಷಗಳಿರುತ್ತವೆ. ಈ ಪ್ರಕಾರ ಈ ಯುಗ ಮೂವತ್ತಾರು ನೂರು ದಿವ್ಯವರ್ಷಗಳದ್ದಾಗಿರುತ್ತದೆ (ವನ 188/23).

**ತ್ರೈವಲಿ** – ಒಬ್ಬ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/13).

**ತ್ರ್ಯಕ್ಷ** – ಒಂದು ಜನಪದ. ಈ ದೇಶದ ರಾಜ ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನ ಬಳಿಗೆ ಬಂದಿದ್ದನು. ದ್ವಾರದಲ್ಲಿ ತಡೆಯಲ್ಪಟ್ಟುದರಿಂದ ನಿಂತಿದ್ದನು (ಸಭಾ 51/17).

**ತ್ರ್ಯಂಬಕ** – ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/19).

**ತ್ವಷ್ಟಾ** – ದ್ವಾದಶ ಆದಿತ್ಯರಲ್ಲಿ ಒಬ್ಬ. ಕಶ್ಯಪನಿಂದ ಅದಿತಿಯಲ್ಲಿ ಹುಟ್ಟಿದವ (ಆದಿ 65/16). ಖಾಂಡವವನ ದಹನ ಕಾಲದಲ್ಲಿ ಇಂದ್ರನ

ಪಕ್ಷದಿಂದ ಈತ ಯುದ್ಧಕ್ಕೆ ಬಂದುದು ಮತ್ತು ಅಸ್ತ್ರದ ರೂಪದಲ್ಲಿ ಪರ್ವತವನ್ನೆತ್ತಿದುದು (ಆದಿ 226/34). ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/14). ಈತನ ಪುತ್ರಿ ಕಶೇರುವನ್ನು ನರಕಾಸುರ ಅಪಹರಿಸಿದ್ದು (ಸಭಾ 38/29). ಪ್ರಜಾಪತಿ ತ್ವಷ್ಟಾನಿಂದ (ವಿಶ್ವಕರ್ಮ). ವಜ್ರದ ನಿರ್ಮಾಣ (ವನ 100/24). ನಳನೆಂಬ ವಾನರ ಈತನ ಮಗನಾಗಿದ್ದನು (ವನ 283/41). ಇಂದ್ರನಿಂದ ತನ್ನ ಮಗ ತ್ರಿಶಿರನು ಕೊಲ್ಲಲ್ಪಟ್ಟಾಗ, ಈತ ಇಂದ್ರನ ಮೇಲೆ ಕೋಪಗೊಂಡದ್ದು ಮತ್ತು ವೃತ್ರಾಸುರನನ್ನು ಪ್ರಕಟಗೊಳಿಸಿದುದು (ಉದ್ಯೋಗ 9/48). ತ್ವಷ್ಟಾನು ತನ್ನ ತಪಸ್ಸಿನಿಂದ ಸಂತುಷ್ಟನಾದ ಶಿವನ ಕೃಪೆಯಿಂದ ವೃತ್ರಾಸುರನೆಂಬ ಪುತ್ರನನ್ನು ಹುಟ್ಟಿಸಿದನು (ದ್ರೋಣ 94/54). ಈತನಿಂದ ಸ್ಕಂದನಿಗೆ ಚಕ್ರ ಮತ್ತು ಅನುಚಕ್ರರೆಂಬ ಇಬ್ಬರು ಪಾರ್ಷದರ ಕೊಡುಗೆ (ಶಲ್ಯ 45/40).

**ತ್ವಷ್ಟಾಧರ** – ರೌದ್ರಕರ್ಮ ಮಾಡುವ ಮಾಡಿಸುವ ಶುಕ್ರಾಚಾರ್ಯರ ಮಕ್ಕಳಲ್ಲಿ ಒಬ್ಬ (ಆದಿ 65/37).

**ತ್ವಾಷ್ಟ್ರಶರ** – ಅರ್ಜುನನು ಸಂಶಪ್ತಕರ ಮೇಲೆ ಪ್ರಯೋಗಿಸಿದ ಮಹಾಸ್ತ್ರ. ಇದರಿಂದಾಗಿ ಸಾವಿರಾರು ರೂಪಗಳು ಹೊರಬಂದವು. ಅರ್ಜುನನ ರೂಪದಂತೆಯೇ ಇದ್ದ ಸಾವಿರಾರು ಆಕೃತಿಗಳು ಬಂದಾಗ, ಸಂಶಪ್ತಕರು ಭ್ರಾಂತರಾಗಿ, ಪರಸ್ಪರ ಬಡಿದಾಡತೊಡಗಿದರು (ದ್ರೋಣ 19 ಅಧ್ಯಾಯ).

## ದ

**ದಂಶ** – ಅಲರ್ಕವೆಂಬ ಕೀಟಯೋನಿಯಲ್ಲಿ ಬಿದ್ದಿದ್ದ ಒಬ್ಬ ರಾಕ್ಷಸ. ಈತ ಪರಶುರಾಮನ ದೃಷ್ಟಿಬೀಳುತ್ತಲೇ ಕೀಟ ಯೋನಿಯಿಂದ ಮುಕ್ತನಾಗಿದ್ದನು. ಪರಶುರಾಮನು ಕೇಳಿದಾಗ ತನ್ನ ದುರ್ಗತಿಯ ಕಾರಣವನ್ನು ಈತ ಹೇಳಿದುದು (ಶಾಂತಿ 3/14–15; 19–23).

**ದಕ್ಷ** – (1) ಬ್ರಹ್ಮನ ಬಲ ಹೆಬ್ಬೆರಳಿನಿಂದ ಹುಟ್ಟಿದ ಒಬ್ಬ ಮಹರ್ಷಿ. ಈತ ಮಹಾ ತಪಸ್ವಿಯೂ ಪ್ರಜಾಪತಿಯೂ ಆಗಿದ್ದನು. ಈತನ ಪತ್ನಿ ಬ್ರಹ್ಮನ ಎಡ ಹೆಬ್ಬೆರಳಿನಿಂದ ಹುಟ್ಟಿದ್ದಳು. ಈಕೆಯ ಗರ್ಭದಿಂದ ದಕ್ಷನು ಐವತ್ತು ಕನ್ಯೆಯರ ಉತ್ಪತ್ತಿಮಾಡಿದ್ದನು (ಆದಿ 66/10–11). ಕಲ್ಪಾಂತರದಲ್ಲಿ ಈತನೇ ಹತ್ತುಮಂದಿ ಪ್ರಚೇತಸರಿಂದ ಮಾರಿಷೆಯ ಗರ್ಭದಲ್ಲಿ ಹುಟ್ಟಿದ್ದನು; ಆದುದರಿಂದ ಪ್ರಾಚೇತಸ ದಕ್ಷನೆಂದು ಕರೆಯಲ್ಪಡುತ್ತಾನೆ. ಈತನಿಂದ ಸಮಸ್ತ ಪ್ರಜೆಗಳೂ ಜನ್ಮವೆತ್ತಿವೆ. ಆದುದರಿಂದ ಈತ ಎಲ್ಲಾ ಲೋಕಗಳ ಪಿತಾಮಹನಾಗಿದ್ದಾನೆ (ಆದಿ 75/5). ಗುಣಶೀಲಗಳಲ್ಲಿ ಈತನಿಗೆ ಸಮಾನರಾದ ಒಂದು ಸಾವಿರ ಮಂದಿ ಪುತ್ರರು ಹುಟ್ಟಿದರು. ಅವರಿಗೆ ನಾರದ ಮೋಕ್ಷಶಾಸ್ತ್ರ ಮತ್ತು ಸಾಂಖ್ಯಜ್ಞಾನದ ಉಪದೇಶವನ್ನಿತ್ತನು. ಇದರಿಂದಾಗಿ ಅವರು ವಿರಕ್ತರಾಗಿ, ಮನೆಯಿಂದ ಹೊರಟುಹೋದರು. ಆಗ ಈತ ಪುತ್ರಿಕಾಧರ್ಮಕ್ಕೆ ಅನುಸಾರವಾಗಿ, ದೌಹಿತ್ರರನ್ನು ತನ್ನ ಪುತ್ರರೆಂದು ತಿಳಿಯುವ ಸಂಕಲ್ಪ ಮಾಡಿ, ಐವತ್ತು ಕನ್ಯೆಯರನ್ನು ಪಡೆದನು (ಆದಿ 75/6–8). ಇವರಲ್ಲಿ ಹತ್ತು ಕನ್ಯೆಯರನ್ನು ಧರ್ಮನಿಗೆ, ಹದಿಮೂರು ಕಶ್ಯಪನಿಗೆ ಮತ್ತು ಕಾಲದ ಸಂಚಾಲನೆ ಮಾಡಲು ನಿಯುಕ್ತರಾದ ನಕ್ಷತ್ರ ಸ್ವರೂಪದ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ಮದುವೆ ಮಾಡಿಕೊಟ್ಟನು (ಆದಿ 75/8). ಈತ ಅರ್ಜುನನ ಜನ್ಮಕಾಲದಲ್ಲಿ ಕುಂತಿ ಇರುವ ಸ್ಥಳಕ್ಕೆ ಬಂದಿದ್ದನು (ಆದಿ 122/52). ಈತ ಬ್ರಹ್ಮಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 11/18). ಇವನು ಸರಸ್ವತಿಯ ದಡದಲ್ಲಿ ಯಜ್ಞಮಾಡಿದನು. ಇಲ್ಲಿ ಸಾಯುವವರಿಗೆ ಸ್ವರ್ಗ ಸಿಗುತ್ತದೆಂದು ಆ ಸ್ಥಾನಕ್ಕೆ ಈತ ಒಂದು ವರವನ್ನಿತ್ತನು. ಅದೇ ವಿನಶನ ತೀರ್ಥ (ವನ 130/2). ಈತ ಬ್ರಹ್ಮನ ಮಾನಸಪುತ್ರರಲ್ಲಿ ಏಳನೆಯವನು. ಈತ ಮೇರುಪರ್ವತದಲ್ಲಿ ವಾಸಿಸುತ್ತಾನೆ (ವನ 163/14). ಇವನು ಇಪ್ಪತ್ತೇಳು ಕನ್ಯೆಯರನ್ನು ಸೋಮನಿಗೆ ವಿವಾಹ ಮಾಡಿದ್ದನು. ಅವರ ಪತಿ ಚಂದ್ರ ಕೇವಲ 'ರೋಹಿಣಿ'ಯನ್ನೇ ಪ್ರೀತಿಸುತ್ತಿದ್ದನು. ಆದುದರಿಂದ ಇತರ ಪತ್ನಿಯರು ತಂದೆಯಾದ ದಕ್ಷನ ಬಳಿಗೆ ಹೋಗಿ ದೂರನ್ನಿತ್ತರು. ಆಗ ದಕ್ಷನು ಚಂದ್ರನಿಗೆ ಹೇಳಿದನು "ಸೋಮ ನೀನು ತನ್ನ ಎಲ್ಲಾ ಪತ್ನಿಯರಲ್ಲೂ ಸಮಾನ ವರ್ತನೆಯಿಂದ ನಡೆದುಕೊ. ಅದರಿಂದಾಗಿ

ನಿನಗೆ ಮಹಾಪಾಪವು ತಟ್ಟದಿರಲಿ" ಅನಂತರ ಈತ ಎಲ್ಲ ಮಗಳಂದಿರನ್ನು ಸಮಾಧಾನಪಡಿಸಿ ಚಂದ್ರನಲ್ಲಿಗೆ ಕಳುಹಿಸಿದನು. ಆದರೆ ಸೋಮನು ದಕ್ಷನ ಮಾತನ್ನು ಒಪ್ಪಲಿಲ್ಲ. ಪುತ್ರಿಯರಿಂದ ಪುನಃ ಬಂದ ದೂರನ್ನು ಕೇಳಿ, ಈತನು ಅವನಿಗೆ ಶಾಪಕೊಡುವ ಬೆದರಿಕೆ ಹಾಕಿದನು. ಚಂದ್ರನು ಪುನಃ ಈತನ ಮಾತನ್ನು ಅವಹೇಳನ ಮಾಡಿದನು. ಆಗ ಈತ ಸಿಟ್ಟಿನಿಂದ ರಾಜ ಕ್ಷಯದ ಸೃಷ್ಟಿ ಮಾಡಿದನು. ಅದು ಸೋಮನ ಶರೀರವನ್ನು ಪ್ರವೇಶಮಾಡಿತು (ಶಲ್ಯ 35/45-62). ದೇವತೆಗಳು ಆಗ್ರಹಮಾಡಿದಾಗ ಇವನು, 'ಸೋಮ ತನ್ನ ಪತ್ನಿಯರೊಂದಿಗೆ ಸಮಾನ ರೀತಿಯಾಗಿ ನಡಕೊಳ್ಳಲಿ, ಸರಸ್ವತೀ-ಸಮುದ್ರ ಸಂಗಮದಲ್ಲಿ ಸ್ನಾನಮಾಡಿ, ಮಹಾದೇವನ ಆರಾಧನೆ ಮಾಡಲಿ; ಆಗ ಈ ರೋಗದಿಂದ ಮುಕ್ತನಾಗುವನು' ಎಂದನು ಪ್ರತಿತಿಂಗಳಲ್ಲಿ ಹದಿನೈದು ದಿನಗಳವರೆಗೆ ಈತ ಪ್ರತಿದಿನ ಕ್ಷೀಣ ವಾಗುವನು ಮತ್ತು ಅರ್ಧ ತಿಂಗಳು ನಿರಂತರ ವೃದ್ಧಿಯಾಗುವನು (ಶಲ್ಯ 35/73-77). ಗಂಗಾ ದ್ವಾರದಲ್ಲಿ ಆವಾಹನೆ ಮಾಡಿದಾಗ ಸರಸ್ವತಿ ಅಲ್ಲಿಗೆ ಬಂದಳು ಮತ್ತು 'ಸುರೇಣು' ಎಂಬ ಹೆಸರಿನಿಂದ ಪ್ರಖ್ಯಾತಳಾದಳು (ಶಲ್ಯ 38/28-29). ಬಾಣಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡು ವುದಕ್ಕಾಗಿ ಈತನೂ ಹೋಗಿದ್ದನು (ಶಾಂತಿ 47/10). ಇವನ ಎಂಟು ಕನ್ಯೆಯರನ್ನು ಬ್ರಹ್ಮರ್ಷಿ ಗಳಿಗೆ ವಿವಾಹಮಾಡಲಾಗಿತ್ತು. ಅವರಿಂದ ಅನೇಕ ರೀತಿಯ ಜೀವಜಂತು ಮತ್ತು ದೇವತೆ-ಮನುಷ್ಯರೇ ಮೊದಲಾದವರ ಉತ್ಪತ್ತಿಯಾಯಿತು (ಶಾಂತಿ 166/17). ಇವನ ಒಂದು ಹೆಸರು 'ಕ' ವೆಂದೂ ಇದೆ (ಶಾಂತಿ 208/7). ಶಿವನಿಂದ ಇವನ ಯಜ್ಞಧ್ವಂಸ (ಶಾಂತಿ 283/32-37). ಯಜ್ಞದ ಸಮಯದಲ್ಲಿ ದಧೀಚಿಯೊಂದಿಗೆ ಈತನ ಸಂವಾದ (ಶಾಂತಿ 284/20-22). ಯಜ್ಞ ವಿಧ್ವಂಸದ ಅನಂತರ ಈತ ಶಿವನಿಗೆ ಶರಣಾ ದುದು (ಶಾಂತಿ 287/57). ಶಿವನಲ್ಲಿ ಕ್ಷಮಾ ಪ್ರಾರ್ಥನೆ ಮಾಡಿದುದು (ಶಾಂತಿ 284/61-64). ಸಹಸ್ರನಾಮದ ಮೂಲಕ ಶಿವನ ಸ್ತುತಿ ಮಾಡಿ ದುದು (ಶಾಂತಿ 284/69-180). ಇವನಿಂದ ರುದ್ರನಿಗೆ ಶಾಪ (ಶಾಂತಿ 342/25). ಇವನಿಂದ ಚಂದ್ರನಿಗೆ ಶಾಪ. ಇವನ ಅರುವತ್ತು ಕನ್ಯೆಯರಲ್ಲಿ ಕೊನೆಯ ಹತ್ತು ಮಂದಿ ಮನುವಿಗೆ ವಿವಾಹ ಮಾಡಲ್ಪಟ್ಟಿದ್ದರು (ಶಾಂತಿ 342/57).

(2) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/12).

(3) ಒಬ್ಬ ವಿಶ್ವೇದೇವ (ಅನು 91/35).

**ದಕ್ಷಿಣದಿಶಾ** – ಇದರ ವರ್ಣನೆ (ಉದ್ಯೋಗ 109 ಅಧ್ಯಾಯ).

**ದಕ್ಷಿಣಪಾಂಚಾಲ** – ಈ ದಕ್ಷಿಣಪಾಂಚಾಲ ದೇಶ ಗಂಗೆಯ ದಕ್ಷಿಣ ದಡದಿಂದ ಚಂಬಲ್ ನದಿಯ ವರೆಗೆ ಹರಡಿತ್ತು. ಅಲ್ಲಿರುವ ಕ್ಷತ್ರಿಯರು ಜರಾ ಸಂಧನ ಭಯದಿಂದ ದಕ್ಷಿಣಕ್ಕೆ ಓಡಿ ಹೋಗಿದ್ದರು (ಸಭಾ 14/27). ಪಾಂಚಾಲ ಒಂದೇ ಜನಪದ ವಾಗಿತ್ತು. ಅದು ಗಂಗೆಯ ಎರಡೂ ದಡಗಳಲ್ಲಿ ವ್ಯಾಪಿಸಿತ್ತು. ದ್ರೋಣನು ತನ್ನ ಶಿಷ್ಯರ ಮೂಲಕ ದ್ರುಪದನ ಮೇಲೆ ಆಕ್ರಮಣ ಮಾಡಿಸಿ, ಅದನ್ನು ಸ್ವಾಧೀನ ಮಾಡಿ, ಅರ್ಧಾಂಶವನ್ನು ದ್ರುಪದನಿಗೆ ಕೊಟ್ಟನು; ಉಳಿದ ಅರ್ಧವನ್ನು ತನ್ನ ಅಧಿಕಾರ ದಲ್ಲಿಟ್ಟುಕೊಂಡನು. ದ್ರೋಣನ ಅಧಿಕಾರದಲ್ಲಿದ್ದ ಭಾಗ 'ಉತ್ತರ ಪಾಂಚಾಲ' ಮತ್ತು ದ್ರುಪದನು ರಾಜನಾಗಿದ್ದ ಭಾಗ 'ದಕ್ಷಿಣ ಪಾಂಚಾಲ'ವೆಂಬ ಹೆಸರಿನಿಂದ ಪ್ರಸಿದ್ಧವಾದವು (ಆದಿ 137 ಅಧ್ಯಾಯ).

**ದಕ್ಷಿಣಮಲ್ಲ** – ಮಲ್ಲರಾಷ್ಟ್ರ (ಇದರ ರಾಜಧಾನಿ ಕುಶೀನಗರ ಅಥವಾ ಕುಶೀನಾರಾವಾಗಿತ್ತು)ದ ದಕ್ಷಿಣಭಾಗ. ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನನು ಇದನ್ನು ಗೆದ್ದಿದ್ದನು (ಸಭಾ 30/12).

**ದಕ್ಷಿಣಸಿಂಧು** – ಒಂದು ತೀರ್ಥ. ಇದು ದಕ್ಷಿಣ ದಿಕ್ಕಿನ ಸಮುದ್ರರೂಪವೇ ಆಗಿದೆ. ಇಲ್ಲಿ ಹೋಗಿ ಸ್ನಾನಮಾಡುವುದರಿಂದ ಮನುಷ್ಯ ಅಗ್ನಿಷ್ಟೋಮ ಯಜ್ಞದ ಫಲಪಡೆಯುತ್ತಾನೆ ಮತ್ತು ದೇವ ವಿಮಾನದ ಮೇಲೆ ಕುಳಿತುಕೊಳ್ಳುವ ಸೌಭಾಗ್ಯ ಪ್ರಾಪ್ತಿಸಿಕೊಳ್ಳುತ್ತಾನೆ (ವನ 82/53-54).

**ದಕ್ಷಿಣಾಗ್ನಿ** – ಪಾಂಚಜನ್ಯನಿಂದ ಹುಟ್ಟಿದ ಒಂದು ಘೋರ ಅಗ್ನಿ (ಆಚಾರ್ಯ ನೀಲಕಂಠರು ಇದರ ಹೆಸರನ್ನು 'ದಕ್ಷಿಣಾಗ್ನಿ' ಎಂದು ಬರೆದಿ ದ್ದಾರೆ.) (ವನ 220/6).

**ದಕ್ಷಿಣಾಪಥ** – ದಕ್ಷಿಣ ಭಾರತದ ನಾಮಾಂತರ

ಇದರ ಪರಿಚಯವನ್ನು ನಳನು ದಮಯಂತಿಗೆ ತಿಳಿಸಿದ್ದನು (ವನ 61/23).

**ದಣ್ಡ** – (1) ಒಬ್ಬ ಕ್ಷತ್ರಿಯ ರಾಜ. ಈತ 'ಕ್ರೋಧಹಂತಾ' ಎಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/45). ಈತ ತನ್ನ ತಂದೆ ವಿದಂಡನೊಂದಿಗೆ ದ್ರೌಪದಿಯ ಸ್ವಯಂವರಕ್ಕೆ ಬಂದಿದ್ದನು (ಆದಿ 185/12). ದಿಗ್ವಿಜಯ ಕಾಲದಲ್ಲಿ ಭೀಮಸೇನನು ಈತನನ್ನು ದಂಡ ಧಾರನ ಸಹಿತ ಪರಾಜಯಗೊಳಿಸಿದ್ದನು (ಸಭಾ 30/17). ಈತ ಮಗಧ ದೇಶದ ಕ್ಷತ್ರಿಯ ರಾಜ ದಂಡಧಾರನ ಸಹೋದರನಾಗಿದ್ದನು. ಅರ್ಜುನ ನಿಂದ ಸಹೋದರನು ಕೊಲ್ಲಲ್ಪಟ್ಟಾಗ, ಈತ ಶ್ರೀಕೃಷ್ಣ ಮತ್ತು ಅರ್ಜುನನ ಮೇಲೆ ಆಕ್ರಮಣ ಮಾಡಿದ್ದನು. ಈ ಯುದ್ಧದಲ್ಲಿ ಅರ್ಜುನನು ಈತನ ತಲೆಯನ್ನು ತುಂಡರಿಸಿದನು (ಕರ್ಣ 18 /16–19).

(2) ಸೂರ್ಯನ ಒಬ್ಬ ಅನುಚರ (ವನ 3/68).

(3) ಯಮರಾಜನ ದಿವ್ಯಾಸ್ತ್ರ. ಇದರ ವೇಗ ಎಲ್ಲಿಯೂ ಕುಂಠಿತವಾಗುವುದಿಲ್ಲ. ಇದನ್ನು ಯಮನು ಅರ್ಜುನನಿಗೆ ಕೊಟ್ಟಿದ್ದನು (ವನ 41/ 26).

(4) ಚಂಪಾದ ಸಮೀಪವಿರುವ ಒಂದು ತೀರ್ಥ. ಇಲ್ಲಿ ಗಂಗಾಸ್ನಾನ ಮಾಡಿದರೆ ಮನುಷ್ಯ ಸಹಸ್ರ ಗೋದಾನದ ಫಲ ಪಡೆಯುತ್ತಾನೆ (ವನ 85/ 15).

(5) ಚೇದಿ ದೇಶದ ಪಾಂಡವಪಕ್ಷದ ಒಬ್ಬ ಯೋಧ. ಈತ ಕರ್ಣನಿಂದ ಹತನಾದನು (ಕರ್ಣ 56/49).

(6) ವಿಷ್ಣುವಿನ ಒಂದು ಹೆಸರು (ಅನು 149/ 105).

**ದಣ್ಡಕ** (ದಂಡಕ). – ದಕ್ಷಿಣ ಭಾರತದ ಒಂದು ದೇಶ. ಇದು ದಂಡಕಾರಣ್ಯದ ಭೂಭಾಗವಾಗಿದೆ. ದಿಗ್ವಿಜಯ ಕಾಲದಲ್ಲಿ ಸಹದೇವನು ಇದನ್ನು ಗೆದ್ದಿದ್ದನು (ಸಭಾ 31/66). ದಂಡಕದ ವಿಶಾಲ ರಾಜ್ಯವನ್ನು ಒಬ್ಬ ಬ್ರಾಹ್ಮಣನು ನಾಶಮಾಡಿದ್ದನು (ಅನು 153/11).

**ದಣ್ಡಕಾರಣ್ಯ** – ಒಂದು ತೀರ್ಥ ಮತ್ತು ವನ. ಇಲ್ಲಿ ಸ್ನಾನ ಮಾಡಿದರೆ ಸಹಸ್ರ ಗೋದಾನದ ಫಲಸಿಗುತ್ತದೆ (ವನ 85/41). ಇಲ್ಲಿಯೇ ಗೋದಾವರಿ ದಡದ ಪಂಚವಟಿಯಲ್ಲಿ ವನವಾಸ ಕಾಲದಲ್ಲಿ ಶ್ರೀರಾಮನಿದ್ದನು. ಇಲ್ಲಿಯೇ ಶೂರ್ಪ ಣಖಿ ವಿರೋಪಗೊಳಿಸಲ್ಪಟ್ಟಳು ಮತ್ತು ಖರ, ದೂಷಣ, ತ್ರಿಶಿರಾ ಮೊದಲಾದ ಹದಿನಾಲ್ಕು ಸಾವಿರ ರಾಕ್ಷಸರ ವಧೆ, ಮಾರೀಚನ ವಧೆ, ಸೀತಾಹರಣ, ಜಟಾಯುವಧೆ ಇತ್ಯಾದಿ ಘಟನೆ ಗಳು ಘಟಿಸಿದವು (ವನ 277 ಅಧ್ಯಾಯದಿಂದ 279 ಅಧ್ಯಾಯವರೆಗೆ).

**ದಣ್ಡಕೇತು** – ಪಾಂಡವಪಕ್ಷದ ಒಬ್ಬ ಯೋಧ. ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/68).

**ದಣ್ಡಗೌರೀ** – ಸ್ವರ್ಗದ ಒಬ್ಬ ಅಪ್ಸರೆ. ಈಕೆ ಇಂದ್ರಸಭೆಯಲ್ಲಿ ಅರ್ಜುನನ ಸ್ವಾಗತಾರ್ಥ ನೃತ್ಯ ಮಾಡಿದ್ದಳು (ವನ 43/29).

**ದಣ್ಡಧಾರ** – (1) ಮಗಧದ ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧವರ್ಧನನೆಂಬ ದೈತ್ಯನ ಅಂಶ ದಿಂದ ಹುಟ್ಟಿದ್ದನು (ಆದಿ 67/46). ಭೀಮ ಸೇನನು ದಿಗ್ವಿಜಯ ಕಾಲದಲ್ಲಿ ಇವನ ಸಹೋ ದರ ದಂಡನೆಂಬವನ ಸಹಿತ ಇವನನ್ನು ಗೆದ್ದಿ ದ್ದನು (ಸಭಾ 30/17). ಇವನು ಕೌರವ ಪಕ್ಷದ ಯೋಧನಾಗಿದ್ದನು. ಆನೆಯ ಮೇಲೇರಿ ಯುದ್ಧ ಮಾಡುತ್ತಿದ್ದನು. ಈತ ಭಗದತ್ತನಿಗೆ ಸರಿಯಾದ ಪರಾಕ್ರಮಿಯಾಗಿದ್ದನು. ಈತ ಪಾಂಡವಸೇನೆಯ ಸಂಹಾರ ಪ್ರಾರಂಭಿಸಿದಾಗ, ಶ್ರೀಕೃಷ್ಣನ ಪ್ರೇರಣೆ ಯಂತೆ ಅರ್ಜುನನು ಇವನೊಂದಿಗೆ ಹೋರಾಡಿ ಕೊಂದು ಹಾಕಿದನು (ಕರ್ಣ 8/1–13).

(2) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/103). ಭೀಮಸೇನನಿಂದ ಇವನ ವಧೆ (ಕರ್ಣ 84/5–6).

(3) ಒಬ್ಬ ರಾಜ. ಈತ ಪಾಂಡವರ ಸಹಾಯಕ ನಾಗಿದ್ದನು. ಇವನ ಹೆಸರಿನ ಜೊತೆಯಲ್ಲಿ ಮಣಿ ಮಂತ ಎಂಬ ಹೆಸರೂ ಬರುತ್ತದೆ. ಆದುದರಿಂದ ಇವರಿಬ್ಬರಲ್ಲಿ ಯಾವುದಾದರೂ ಸಂಬಂಧವಿರ ಬಹುದು ಎಂದು ಅನುಮಾನಿಸಬಹುದಾಗಿದೆ (ಬಹುಶಃ ಇವರಿಬ್ಬರೂ ಪರಸ್ಪರ ತಂದೆ–ಮಗ, ಅಣ್ಣ–ತಮ್ಮ ಅಥವಾ ಮಿತ್ರರಾಗಿರಬಹುದು). ದ್ರೌಪದೀಸ್ವಯಂವರದಲ್ಲೂ ಇಬ್ಬರ ಹೆಸರು ಒಟ್ಟಾಗಿ ಉಲ್ಲೇಖಿಸಲ್ಪಟ್ಟಿದೆ (ಆದಿ 186/7). ಪಾಂಡವರ ಕಡೆಯಿಂದ ಇವನಿಗೂ ಮಣಿಮಂತ

ನಿಗೂ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/20–21). ಇವರಿಬ್ಬರೂ ದ್ರೋಣಾಚಾರ್ಯನಿಂದ ಕೊಲ್ಲಲ್ಪಟ್ಟರು. ಮರಣಕಾಲದಲ್ಲೂ ಇಬ್ಬರ ಹೆಸರು ಒಟ್ಟಾಗಿಯೇ ಉಲ್ಲೇಖಿಸಲ್ಪಟ್ಟಿದೆ (ಕರ್ಣ 6/13–14).

(4) ಒಬ್ಬ ಪಾಂಚಾಲ ಯೋಧ. ಈತ ಪಾಂಡವ ಪಕ್ಷದ ವೀರ. ಇವನ ಕುದುರೆಗಳ ವರ್ಣನೆ (ದ್ರೋಣ 23/53). ಇವನು ಯುಧಿಷ್ಠಿರನ ಚಕ್ರ ರಕ್ಷಕನಾಗಿದ್ದನು ಮತ್ತು ಕರ್ಣನಿಂದ ಕೊಲ್ಲಲ್ಪಟ್ಟನು (ಕರ್ಣ 49/27).

**ದಣ್ಡನೀತಿ** – ಬ್ರಹ್ಮನಿಂದ ನಿರ್ಮಿತವಾದ ನೀತಿಶಾಸ್ತ್ರದಲ್ಲಿ ವರ್ಣಿಸಲ್ಪಟ್ಟ ದಂಡವಿಧಾನ - ವಿಷಯವುಳ್ಳ ನೀತಿ ವಿದ್ಯೆ (ಶಾಂತಿ 59/76–79). ದಂಡನೀತಿಯ ಗುಣಗಳ ವರ್ಣನೆ (ಶಾಂತಿ 69/75–105).

**ದಣ್ಡಬಾಹು** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ದಣ್ಡೀ** – ಧೃತರಾಷ್ಟ್ರನ ಒಬ್ಬ ಮಗ (67/103).

**ದತ್ತ** (ಅಥವಾ ದತ್ತಕ) – ಒಂದು ವಿಧದ ಪುತ್ರ. ಈತನನ್ನು ಜನ್ಮಕೊಟ್ಟ ತಾಯಿತಂದೆ ಸ್ವತಃ ಸಮರ್ಪಣೆ ಮಾಡಿರುತ್ತಾರೆ. ಆರು ರೀತಿಯ ಅಬಂಧುದಾಯಾದರಲ್ಲಿ ಇದೂ ಒಂದು ಪ್ರಕಾರವಾಗಿದೆ (ಆದಿ 119/34).

**ದತ್ತಾತ್ಮಾ** – ಒಬ್ಬ ವಿಶ್ವೇದೇವ (ಅನು 91/34).

**ದತ್ತಾತ್ರೇಯ** – ವಿಷ್ಣುಭಗವಂತನ ಅವತಾರ (ಅತ್ರಿಪತ್ನಿ ಅನಸೂಯೆಯ ಗರ್ಭದಿಂದ ಇವನ ಜನನ.). ಸಹಸ್ರಬಾಹುಅರ್ಜುನನಿಂದ ಈತನ ಆರಾಧನೆ ಮತ್ತು ಈತನಿಂದ ಅವನಿಗೆ ನಾಲ್ಕು ದುರ್ಲಭ ವರಗಳ ಪ್ರಾಪ್ತಿ (ಸಭಾ 38/29). ಈತನಿಂದ ಸಾಧ್ಯರಿಗೆ ಉಪದೇಶ (ಉದ್ಯೋಗ 36/4–21).

**ದತ್ತಾಮಿತ್ರ** – ಸೌವೀರ ದೇಶದ ಸುಮಿತ್ರರಾಜ. ಅರ್ಜುನನು ಈತನನ್ನು ದಮನ ಮಾಡಿದ್ದನು (ಆದಿ 138/23).

**ದಧಿಮಂಡೋದಕ** – ಒಂದು ಸಮುದ್ರ. ಇದು ಘೃತೋದ ಸಮುದ್ರದ ಅನಂತರ ಬರುತ್ತದೆ (ಭೀಷ್ಮ 12/2).

**ದಧಿಮುಖ** – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/8).

(2) ವೃದ್ಧನೂ ಪರಾಕ್ರಮಿಯೂ ಆದ ಒಬ್ಬ ವಾನರ. ಈತ ಭಯಂಕರ ವಾನರರ ವಿಶಾಲ ಸೇನೆಯೊಡಗೂಡಿ, ಶ್ರೀರಾಮನ ಬಳಿಗೆ ಬಂದಿದ್ದನು (ವನ 283/7)

**ದಧಿವಾಹನ** – ಒಬ್ಬ ಪ್ರಾಚೀನ ರಾಜ. ಇವನ ಮೊಮ್ಮಗ ಗೌತಮಮಹರ್ಷಿಯ ಮೂಲಕ ಗಂಗಾದಡದಲ್ಲಿ, ಪರಶುರಾಮನ ಕ್ಷತ್ರಿಯ ಸಂಹಾರದಿಂದ ಬದುಕಿಸಲ್ಪಟ್ಟನು ಮತ್ತು ಸುರಕ್ಷಿತವಾಗಿ ಇರಿಸಲ್ಪಟ್ಟಿದ್ದನು (ಶಾಂತಿ 49/80).

**ದಧೀಚ** – (1) ಕುರುಕ್ಷೇತ್ರದ ಒಳಗಿರುವ ಒಂದು ಪರಮಪುಣ್ಯಮಯವಾದ ಪಾವನತೀರ್ಥ. ಇಲ್ಲಿ ಸರಸ್ವತಿ ಪುತ್ರ ಅಂಗೀರಸನ ಜನನವಾಗಿತ್ತು. ಇಲ್ಲಿ ಸ್ನಾನಮಾಡಿದರೆ ಅಶ್ವಮೇಧಯಜ್ಞದ ಫಲ ದೊರಕುತ್ತದೆ ಮತ್ತು ಸರಸ್ವತಿ ಲೋಕದ ಪ್ರಾಪ್ತಿಯಾಗುತ್ತದೆ (ವನ 83/186–188).

(2) ಮಹರ್ಷಿ ಭೃಗುವಿನ ಪುತ್ರ. ಇವನಿಂದ ವಜ್ರ ನಿರ್ಮಾಣಕ್ಕಾಗಿ ದೇವತೆಗಳಿಗೆ ಅಸ್ಥಿದಾನ (ವನ 100/21). ಸರಸ್ವತಿ ನದಿಯ ಮೂಲಕ ಈತನಿಗೆ ಸಾರಸ್ವತನೆಂಬ ಪುತ್ರನ ಪ್ರಾಪ್ತಿ (ಶಲ್ಯ 51/13–14). ಈತನಿಂದ ಸರಸ್ವತಿಗೆ ವರದಾನ (ಶಲ್ಯ 51/17–24). ದೇವತೆಗಳು ಅಸ್ಥಿಗಾಗಿ ಯಾಚನೆಮಾಡಿದಾಗ ಈತ ಪ್ರಾಣತ್ಯಾಗ ಮಾಡಿದುದು (ಶಲ್ಯ 51/29–30). ಈತನ ಎಲುಬುಗಳಿಂದ ವಜ್ರ ಇತ್ಯಾದಿ ಅಸ್ತ್ರಗಳ ನಿರ್ಮಾಣ (ಶಲ್ಯ 51/31–32). ಬ್ರಹ್ಮನ ಮಗ ಭೃಗು, ತೀವ್ರ ತಪಸ್ಸಿನಿಂದ ತುಂಬಿದ, ಲೋಕಮಂಗಲಕರನಾದ, ವಿಶಾಲಕಾಯನೂ, ತೇಜಸ್ವಿಯೂ ಆದ ದಧೀಚನನ್ನು ಸೃಷ್ಟಿಸಿದನು. ಸಂಪೂರ್ಣ ಜಗತ್ತಿನ ಸಾರತತ್ತ್ವದಿಂದಲೇ ಈತನ ನಿರ್ಮಾಣವಾಗಿದೆಯೋ ಎಂಬಂತೆ ಕಾಣಿಸುತ್ತಿತ್ತು. ಈತ ಪರ್ವತದಂತೆ ಭಾರವತ್ತಾಗಿ ಎತ್ತರವಾಗಿದ್ದನು. ಇಂದ್ರ ಯಾವಾಗಲೂ ಇವನ ತೇಜಸ್ಸಿನಿಂದ ಉದ್ವಿಗ್ನನಾಗಿದ್ದನು (ಶಲ್ಯ 51/32–34). ದಕ್ಷಯಜ್ಞದಲ್ಲಿ ಶಿವನ ಭಾಗವನ್ನು ಕಾಣದೆ ಕುಪಿತನಾಗಿ ಈತ ದಕ್ಷನೇ ಮೊದಲಾದವರಿಗೆ ಎಚ್ಚರಿಕೆ ಕೊಟ್ಟಿದ್ದನು (ಶಾಂತಿ 284/12–21). ದೇವತೆಗಳು ಹೇಳಿದುದರಿಂದ ಪ್ರಾಣತ್ಯಾಗ ಮಾಡಿದುದು (ಶಾಂತಿ 342/40).

**ದನಾಯು** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಮಹರ್ಷಿ ಕಶ್ಯಪನ ಪತ್ನಿ (ಆದಿ 65/12).

ಇವಳಿಗೆ ನಾಲ್ವರು ಪುತ್ರರಾದರು – ವಿಕ್ಷರ, ಬಲ, ವೀರ ಮತ್ತು ಮಹಾ ಅಸುರ ವೃತ್ರ (ಆದಿ 65/33).

**ದನು** – ದಕ್ಷ ಪ್ರಜಾಪತಿಯ ಪುತ್ರಿ, ಮಹರ್ಷಿ ಕಶ್ಯಪನ ಪತ್ನಿ ಮತ್ತು ದಾನವನ ತಾಯಿ (ಆದಿ 65/12). ದನುವಿಗೆ ಮೂವತ್ತನಾಲ್ಕು ಪುತ್ರ ರಾದರು. ಅವರಲ್ಲಿ ಎಲ್ಲರಿಗಿಂತ ಹಿರಿಯವ ವಿಪ್ರಚಿತ್ತಿಯಾಗಿದ್ದನು (ಆದಿ 65/21–36). ಈಕೆ ಬ್ರಹ್ಮನ ಸಭೆಯಲ್ಲಿರುತ್ತಾಳೆ (ಸಭಾ 11/39).

**ದನ್ತವಕ್ತ್ರ** (ಅಥವಾ ದನ್ತವಕ್ರ) – ಒಬ್ಬ ಕ್ಷತ್ರಿಯ ರಾಜ. ಕ್ರೋಧವಶನೆಂಬ ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದವನು (ಆದಿ 67/62). ಈತ ಕರೂಷ ದೇಶದ ಅಧಿಪತಿಯಾಗಿದ್ದನು (ಸಭಾ 14/12). ದಕ್ಷಿಣ ದಿಕ್ಕಿನ ವಿಜಯಕಾಲದಲ್ಲಿ ಸಹದೇವನು ಈತನನ್ನು ಪರಾಜಯಗೊಳಿಸಿದ್ದನು (ಸಭಾ 31/3). ಇವನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸಲ್ಪಟ್ಟಿತ್ತು (ಉದ್ಯೋಗ 4/16)

**ದಮ** – (1) ವಿದರ್ಭರಾಜ ಭೀಮನ ಪುತ್ರ ಮತ್ತು ದಮಯಂತಿಯ ಸಹೋದರ (ವನ 53/9).

(2) ಒಬ್ಬ ಮಹರ್ಷಿ. ಈತ ಇತರ ಮಹರ್ಷಿ ಗಳೊಂದಿಗೆ, ಭೀಷ್ಮನನ್ನು ನೋಡಲು ಬಂದನು ಮತ್ತು ಕಥೆ–ವಾರ್ತೆಗಳನ್ನು ಹೇಳಿ ಅಂತ ರ್ಧಾನನಾದನು (ಅನು 26/4–13).

**ದಮಘೋಷ** – ಚೇದಿದೇಶದ ಒಬ್ಬ ರಾಜ. ಈತನ ಪುತ್ರ ಶಿಶುಪಾಲನಾಗಿದ್ದನು (ಆದಿ 186/85).

**ದಮನ** – (1) ಒಬ್ಬ ಪ್ರಾಚೀನ ಬ್ರಹ್ಮರ್ಷಿ (ವನ 53/6). ಪತ್ನಿ ಸಹಿತ ವಿದರ್ಭರಾಜ ಭೀಮನಿಂದ ಈತನ ಸತ್ಕಾರ. ಪ್ರಸನ್ನನಾದ ಮುನಿಯಿಂದ ರಾಜನಿಗೆ ಒಬ್ಬ ಕನ್ಯೆ ಮತ್ತು ಮೂವರು ಪುತ್ರರ ಪ್ರದಾನ (ವನ 53/6–8).

(2) ವಿದರ್ಭರಾಜ ಭೀಮನ ಪುತ್ರ ಮತ್ತು ದಮಯಂತಿಯ ಸಹೋದರ (ವನ 53/9).

(3) ಪೌರವನ ಪುತ್ರ, ಧೃಷ್ಟದ್ಯುಮ್ನನಿಂದ ಈತನ ವಧೆ (ಭೀಷ್ಮ 61/20).

**ದಮಯಂತೀ** – ವಿದರ್ಭರಾಜ ಭೀಮನ ಪುತ್ರಿ. ಈಕೆ ಮಹರ್ಷಿ ದಮನನ ಆಶೀರ್ವಾದದಿಂದ ಹುಟ್ಟಿದ್ದಳು. ಈಕೆಗೆ ಮೂವರು ಸಹೋದರ ರಿದ್ದರು. ದಮ, ದಾಂತ ಮತ್ತು ದಮನ (ವನ 53/9). ಪ್ರಮದಾವನದಲ್ಲಿ ಹಂಸನ ಮೂಲಕ ಈಕೆಗೆ ನಳನ ಗುಣಗಳ ವರ್ಣನೆ (ವನ 53/27–30). ದೇವದೂತನಾಗಿ ಬಂದ ನಳ ನೊಂದಿಗೆ ಈಕೆಯ ಮಾತುಕತೆ, ಆತನ ಪರಿಚಯ ಕೇಳಿದುದು, ಅರಮನೆಯ ಒಳಗೆ ಬರಲು ಆತ ನಿಗೆ ಹೇಗೆ ಸಾಧ್ಯವಾಯಿತೆಂಬ ಜಿಜ್ಞಾಸೆಯನ್ನು ಪ್ರಕಟಪಡಿಸಿದುದು (ವನ 55/20–21). ನಳನ ಮುಖದಿಂದ, ದೇವತೆಗಳು ವರಿಸುವರೆಂಬ ವಿಚಾರಕೇಳಿ, ದಮಯಂತಿ ನಗುತ್ತಾ, ನಳನು ತನ್ನ ಪಾಣಿಗ್ರಹಣ ಮಾಡಲು ಪ್ರೇರಿಸಿದುದು; ಆತ ಅಸ್ವೀಕಾರ ಮಾಡುವ ಪರಿಸ್ಥಿತಿ ಬಂದಾಗ ಪ್ರಾಣತ್ಯಾಗ ಮಾಡುವ ನಿಶ್ಚಯ ಪ್ರಕಟಿಸಿದುದು (ವನ 56/1–4). ನಳನು ಪುನಃ ದೇವತೆಗಳನ್ನೇ ವರಣ ಮಾಡುವಂತೆ ಈಕೆಯನ್ನು ಆಗ್ರಹಿಸಿದಾಗ, ದಮಯಂತಿ ಶೋಕಾಶ್ರು ಸುರಿಸುತ್ತಾ, ದೇವತೆ ಗಳಿಗೆ ನಮಸ್ಕಾರ ಮಾಡಿ, ನಳನನ್ನೆ ತಾನು ವರಿಸುವ ಘೋಷಣೆ ಮಾಡಿದುದು; ಸ್ವಯಂವರ ಸಭೆಯಲ್ಲಿ ದೇವತೆಗಳ ಸಮ್ಮುಖದಲ್ಲಿ ಆತನನ್ನೇ ತನ್ನ ಪತಿಯಾಗಿ ಆರಿಸುವ ನಿಶ್ಚಯವನ್ನು ಹೇಳಿ ದುದು (ವನ 56/14–21). ದಮಯಂತಿ ಸ್ವಯಂವರ ಸಭೆಗೆ ಆಗಮಿಸಿದುದು (ವನ 57/8). ಸ್ವಯಂವರ ಸಭೆಯಲ್ಲಿ ನಳನ ರೂಪದಲ್ಲಿ ಐದು ವ್ಯಕ್ತಿಗಳನ್ನು ನೋಡಿ, ನಿಷಧನರೇಶ ನಳನ ಪರಿಚಯವಾಗದ ಕಾರಣ, ದಮಯಂತಿ ದೇವತೆ ಗಳಿಗೆ ಶರಣಾದುದು; ರಾಜಾನಳನನ್ನು ದೊರಕಿಸಿ ಕೊಡುವಂತೆ ಅವರನ್ನು ಪ್ರಾರ್ಥಿಸಿದುದು (ವನ 57/8–21). ದೇವತೆಗಳ ಕೃಪೆಯಿಂದ, ದೇವ ಸೂಚಕ ಲಕ್ಷಣಗಳ ನಿಶ್ಚಯಮಾಡುವ ಶಕ್ತಿಯು ದಮಯಂತಿಯಲ್ಲಿ ಉಂಟಾದುದು ಮತ್ತು ದೇವತೆಗಳು ಮತ್ತು ಮನುಷ್ಯರ ಲಕ್ಷಣಗಳನ್ನು ಪರಿಶೀಲಿಸಿ, ನಳನನ್ನು ಈಕೆ ಗುರುತಿಸಿದುದು (ವನ 57/24–25). ಈಕೆ ಪತಿರೂಪದಿಂದ ನಳನನ್ನು ಸ್ವೀಕರಿಸಿದುದು (ವನ 57/27–28). ನಳನು ಈಕೆಯಲ್ಲಿ ಅನನ್ಯ ಅನುರಾಗವನ್ನು ಸದಾ ಉಳಿಸುತ್ತೇನೆ ಎಂಬ ಆಶ್ವಾಸನೆಯನ್ನಿತ್ತದ್ದು ಮತ್ತು ದಮಯಂತಿ ನಳನನ್ನು ಅಭಿನಂದಿಸಿ ದುದು (ವನ 57/31–33). ನಳನೊಂದಿಗೆ ದಮ

ಯಂತಿ ವಿವಾಹ, ನವದಂಪತಿಗಳ ವಿಹಾರ, ಈಕೆಯ ಗರ್ಭದಿಂದ ಇಂದ್ರಸೇನ ಮತ್ತು ಇಂದ್ರ ಸೇನೆಯರ ಜನನ (ವನ 57/40–46). ನಳನನ್ನು ಜೂಜಿನಿಂದ ತಡೆಯಲು ಈಕೆಯ ಪ್ರಯತ್ನ (ವನ 60/5–7). ಪರಾಜಯದ ಪೂರ್ವ ಸೂಚನೆಯುಂಟಾದಾಗ ಈಕೆ ಕುಮಾರ, ಕುಮಾರಿಯರನ್ನು ವಾರ್ಷ್ಣೇಯನ ಮೂಲಕ ತಂದೆಯ ಮನೆಗೆ ಕಳುಹಿಸಿದುದು (ವನ 60/19–20). ದಮಯಂತಿ ಪತಿಯೊಂದಿಗೆ ಮೂರು ದಿನಗಳ ತನಕ ನಗರದ ಸಮೀಪ ಕೇವಲ ಜಲಕುಡಿದು ವಾಸಿದುದು ಮತ್ತು ಹಣ್ಣುಗಡ್ಡೆಗಳ ಆಹಾರ ಸೇವಿಸುತ್ತಾ ಕಾಡಿಗೆ ಹೋದುದು. ಗಂಡನು ವಿದರ್ಭದ ದಾರಿ ಹೇಳಿದಾಗ ಸಂಶಯಪಟ್ಟದ್ದು ಮತ್ತು ಆತನೂ ತನ್ನ ಜೊತೆಯಲ್ಲಿ ವಿದರ್ಭರಾಜನಲ್ಲಿಗೆ ಬರುವಂತೆ ಹೇಳಿದುದು (ವನ 61/5–36). ಒಂದು ಧರ್ಮ ಶಾಲೆಯಲ್ಲಿ ದಮಯಂತಿ ಪತಿಯೊಂದಿಗೆ ನಿದ್ರಿಸಿದುದು; ಎದ್ದಾಗ ಆತನನ್ನು ಕಾಣದೆ ವಿಲಾಪಿಸಿದುದು (ವನ ಅಧ್ಯಾಯ 62 ರಿಂದ 63/12). ಈಕೆಯನ್ನು ಹೆಬ್ಬಾವು ನುಂಗಿದುದು (ವನ 63/21). ಈಕೆಯ ಶಾಪದಿಂದ ವ್ಯಾಧನು ಭಸ್ಮವಾದುದು (ವನ 63/39). ಈಕೆಗೆ ತಪಸ್ವಿಗಳ ಆಶ್ವಾಸನೆ (ವನ 64/92–95). ವ್ಯಾಪಾರಿದಳದೊಂದಿಗೆ ಈಕೆಯ ಭೇಟಿ ಮತ್ತು ಅವರೆಲ್ಲರೊಡನೆ ಮಾತುಕತೆ (ವನ 64/114–132). ಕಾಡಾನೆಗಳ ಉಪದ್ರವದಿಂದ ಕಷ್ಟಕ್ಕೊಳಗಾದ ವ್ಯಾಪಾರಿಗಳು ದಮಯಂತಿಯನ್ನು ರಾಕ್ಷಸಿಯೆಂದು ತಿಳಿದು ಈಕೆಯನ್ನು ಕೊಲ್ಲುವ ಸಂಕಲ್ಪ ಮಾಡಿದುದು ಮತ್ತು ದಮಯಂತಿ ಗೊಂಡಾರಣ್ಯದಲ್ಲಿ ಓಡಿ, ತನ್ನ ಅವಸ್ಥೆಗಾಗಿ ವಿಲಪಿಸಿದುದು (ವನ 65/27–35). ದಮಯಂತಿಯ ಚಿಂತೆ, ಈಕೆ ಚೇದಿರಾಜನ ಪಟ್ಟಣಕ್ಕೆ ತಲುಪಿ, ಉನ್ಮತ್ತಳಂತೆ ತಿರುಗಿದುದು ಮತ್ತು ರಾಜಮಾತೆಯ ಮೂಲಕ ಅರಮನೆಗೆ ಕರೆಸಲ್ಪಡುವುದು (ವನ 65/45–52). ರಾಜಮಾತೆ ಮತ್ತು ದಮಯಂತಿಯ ಮಾತುಕತೆ (ವನ 65/53–66). ರಾಜಮಾತೆಯ ಮುಂದೆ ನಿಯಮವನ್ನಿಟ್ಟು ದಮಯಂತಿ ಅಲ್ಲಿ ಉದ್ವೇಗರಹಿತಳಾಗಿ ವಾಸಿಸಿದುದು (ವನ 65/67–76). ಸುದೇವ ಬ್ರಾಹ್ಮಣನು ಚೇದಿಪಟ್ಟಣದಲ್ಲಿ ರಾಜನ ಪುಣ್ಯಾಹವಾಚನದ ಸಮಯದಲ್ಲಿ ಸುನಂದೆಯೊಂದಿಗೆ ನಿಂತಿರುವ ದಮಯಂತಿಯನ್ನು ನೋಡಿದುದು; ಈಕೆಯ ಅನುಪಮ ಸೌಂದರ್ಯ ಮತ್ತು ಅನ್ಯ ಲಕ್ಷಣಗಳ ಮೂಲಕ ಈಕೆಯನ್ನು ಗುರುತಿಸಿದುದು; ಈಕೆಯ ದಯನೀಯ ಅವಸ್ಥೆಯನ್ನು ನೋಡಿ ವ್ಯಥಿತನಾದುದು. ಈಕೆಗೆ ಸಮಾಧಾನ ಕೊಡುವ ಆಲೋಚನೆಯಿಂದ, ಈಕೆಯ ಬಳಿಗೆ ಹೋಗಿ, ತಾನು ಈಕೆಯ ಸಹೋದರನ ಮಿತ್ರನೆಂದು ಹೇಳಿದುದು ಮತ್ತು ಈಕೆಯ ತಾಯಿತಂದೆ ಮತ್ತು ಮಕ್ಕಳ ಕುಶಲ ಸಮಾಚಾರ ಹೇಳಿದುದು. ಸುದೇವನನ್ನು ಗುರುತಿಸಿ ದಮಯಂತಿ ತನ್ನ ಸುಹೃದರ ಸಮಾಚಾರ ಕೇಳಿದುದು ಮತ್ತು ಬಿಕ್ಕಿ ಬಿಕ್ಕಿ ಅತ್ತದ್ದು. ದಮಯಂತಿಯ ಈ ಪರಿಸ್ಥಿತಿಯ ಕುರಿತು ಸುನಂದೆ ರಾಜಮಾತೆಗೆ ಸೂಚನೆ ನೀಡಿದುದು; ರಾಜಮಾತೆ ಸುದೇವನನ್ನು ಕರೆಸಿ, ಆತನೊಡನೆ ದಮಯಂತಿಯ ಪರಿಚಯ ಕೇಳಿದುದು (ವನ 68 ಅಧ್ಯಾಯ). ಸುದೇವನು ದಮಯಂತಿಯ ಕುರಿತು ವಿಸ್ತಾರಪೂರ್ವಕವಾಗಿ ಎಲ್ಲಾ ವಿಷಯ ಹೇಳಿದುದು. ಆಕೆಯ ಹಣೆಯಲ್ಲಿರುವ ಕಮಲದ ಚಿಹ್ನೆಯ ಕಡೆಗೆ ಸಂಕೇತ ಮಾಡಿದುದು; ರಾಜಮಾತೆ ಆ ಚಿಹ್ನೆಯಿಂದ ದಮಯಂತಿ ತನ್ನ ಸಹೋದರಿಯ ಪುತ್ರಿಯೆಂದು ಗುರುತಿಸಿ, ಅಳುತ್ತಾ ಅಳುತ್ತಾ ತಬ್ಬಿಕೊಂಡದ್ದು. ದಮಯಂತಿಯು ತಾಯಿಯ ಸೋದರಿಯೊಂದಿಗೆ, ವಿದರ್ಭಕ್ಕೆ ಹೋಗಲು ಆಜ್ಞೆ ಬೇಡಿದುದು ಮತ್ತು ಅವರಿಂದ ಕೊಡಲ್ಪಟ್ಟ ವಾಹನದಲ್ಲಿ ಕುಳಿತು, ರಕ್ಷಕಸೇನೆಯೊಂದಿಗೆ ವಿದರ್ಭಕ್ಕೆ ಹೋದುದು. ತಂದೆಯ ಮನೆಗೆ ತಲುಪಿ, ತಾಯಿಯೊಡನೆ ನಳನ ಅನ್ವೇಷಣೆಯ ಪ್ರಯಾಸ ಕೈಗೊಳ್ಳಲು ಹೇಳಿದುದು. ತಂದೆಯ ಆಜ್ಞೆಯಿಂದ ನಳನನ್ನು ಹುಡುಕಲು ಹೋಗುವ ಬ್ರಾಹ್ಮಣರಿಗೆ ನಳನೊಡನೆ ಹೇಳುವುದಕ್ಕಾಗಿ ತನ್ನ ಸಂದೇಶ ತಿಳಿಸಿದುದು; ಆ ಸಂದೇಶಕ್ಕೆ ಉತ್ತರ ಕೊಡುವವನ ಎಲ್ಲಾ ಪರಿಸ್ಥಿತಿಯನ್ನು ತಿಳಿದು, ಆತನ ಕುರಿತು ಶೀಘ್ರವಾಗಿ ಸೂಚನೆಯನ್ನೀಯಲು ಹೇಳಿದುದು (ವನ 69 ಅಧ್ಯಾಯ). ಪರ್ಣಾದನು ದಮಯಂತಿಗೆ ಬಾಹುಕರೂಪ ಧರಿಸಿದ ನಳನ ಸಮಾಚಾರ ಹೇಳಿದುದು. ದಮಯಂತಿ ತಾಯಿ

ಯೊಂದಿಗೆ ವಿಚಾರಮಾಡಿ, ತಂದೆಗೆ ಹೇಳದೆಯೇ, ಗುಟ್ಟಾಗಿ ಸುದೇವನೆಂಬ ಬ್ರಾಹ್ಮಣನನ್ನು ನಾಳೆ ಸೂರ್ಯೋದಯಾನಂತರ ಜರಗುವ ತನ್ನ ಸ್ವಯಂವರದ ಸಂದೇಶದೊಂದಿಗೆ, ರಾಜ ಋತು ಪರ್ಣನಲ್ಲಿಗೆ ಕಳುಹಿಸಿದುದು (ವನ 70 ಅಧ್ಯಾಯ). ನಳನ ಕುರಿತು ದಮಯಂತಿಯ ವಿಚಾರ (ವನ 73/8–15). ಈಕೆ ಬಾಹುಕನ ಪರೀಕ್ಷೆಗಾಗಿ ಕೇಶಿನಿಯನ್ನು ಕಳುಹಿಸಿದುದು (ವನ 75/2). ತಂದೆತಾಯಿಯ ಆಜ್ಞೆ ಪಡೆದು ದಮ ಯಂತಿ ಬಾಹುಕನನ್ನು ತನ್ನ ಅರಮನೆಗೆ ಕರೆಸಿ ದುದು ಮತ್ತು 'ಮಹಾರಾಜ ನಳ ನನ್ನನ್ನು ಬಿಟ್ಟು ಯಾಕೆ ಹೊರಟುಹೋದನು? ನೀನು ಅವನನ್ನು ಎಲ್ಲಿಯಾದರೂ ನೋಡಿರುವೆಯಾ?' ಇತ್ಯಾದಿ ಪ್ರಶ್ನೆಮಾಡಿ ತನ್ನ ದುಃಖವನ್ನು ನಿವೇದಿಸಿದುದು. ಬಾಹುಕರೂಪದ ನಳನ ಕಣ್ಣುಗಳಿಂದ ಕಣ್ಣೀರು ಸುರಿದುದು ಮತ್ತು ಆತ 'ಕಲಿಯಿಂದ ಪ್ರೇರಿತ ನಾಗಿ ಎಲ್ಲವನ್ನೂ ಮಾಡಬೇಕಾಗಿ ಬಂತು' ಎಂದು ಹೇಳಿ ದಮಯಂತಿ ಪುನರ್ವಿವಾಹ ವಾಗುವ ಕುರಿತು ಆಕ್ಷೇಪಿಸಿದುದು; ದಮಯಂತಿ ಶಪಥಪೂರ್ವಕವಾಗಿ ತನ್ನ ನಿರ್ದೋಷತ್ವವನ್ನು ಹೇಳಿದುದು. ವಾಯುದೇವನು ಆಕಾಶವಾಣಿಯ ಮೂಲಕ ದಮಯಂತಿಯ ಶುದ್ಧತೆಯನ್ನು ಸಮರ್ಥಿಸಿದುದು ಸ್ವಯಂವರವೆಂಬುದು ನಳನ ಪ್ರಾಪ್ತಿಗಾಗಿ ಮಾಡಿದ ಒಂದು ಉಪಾಯ ಮಾತ್ರ ವೆಂದು ಹೇಳಿದುದು. ಅನಂತರ ನಳನು ತನ್ನ ರೂಪವನ್ನು ಪ್ರಕಟಿಸಿದುದು ಮತ್ತು ದಮಯಂತಿ ಯೊಡನೆ ಮಿಲನ (ವನ 76 ಅಧ್ಯಾಯ). ಪುಷ್ಕರನಿಂದ ತನ್ನ ರಾಜ್ಯವನ್ನು ಹಿಂತೆಗೆದು ಕೊಂಡು, ನಳನು ದಮಯಂತಿಯನ್ನು ರಾಜ ಧಾನಿಗೆ ಕರೆಸಿಕೊಂಡದ್ದು (ವನ 79/1).

**ದಮಿ** – ಒಂದು ತ್ರಿಭುವನ ವಿಖ್ಯಾತ ತೀರ್ಥ. ಇದು ಎಲ್ಲಾ ಪಾಪಗಳ ನಾಶಮಾಡುತ್ತದೆ. ಇಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಮಹೇಶ್ವರನ ಉಪಾಸನೆ ಮಾಡುತ್ತಾರೆ (ವನ 82/72).

**ದಮ್ಭೋದ್ಭವ** – ಒಬ್ಬ ಸಾರ್ವಭೌಮ ಸಮ್ರಾಟ (ಆದಿ 1/234). ಈತ ಮಹಾರಥಿಯೂ ಮಹಾ ಪರಾಕ್ರಮಿಯೂ ಆಗಿದ್ದನು. ನರನಾರಾಯಣ ರೊಂದಿಗೆ ಈತನ ಯುದ್ಧ. ಅವರಿಂದ ಪರಾಜಿತ ನಾಗಿ, ಅವರ ಪಾದಗಳ ಮೇಲೆ ಬಿದ್ದು, ಈತ ಪುನಃ ತನ್ನ ರಾಜಧಾನಿಗೆ ಹಿಂತಿರುಗಿದುದು (ಉದ್ಯೋಗ 96/5–39).

**ದರದ** – (1) ವಾಹೀಕದೇಶದ ಒಬ್ಬ ರಾಜ. ಈತ ಸೂರ್ಯನೆಂಬ ಹೆಸರಿನ ಮಹಾ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/58). ಈತ ಹುಟ್ಟುತ್ತಲೇ ತನ್ನ ಶರೀರದ ಭಾರದಿಂದ ಈ ಪೃಥ್ವಿಯನ್ನು ವಿದೀರ್ಣಗೊಳಿಸಿದ್ದನು (ಸಭಾ 44/8).

(2) ಒಂದು ಪ್ರಾಚೀನ ದೇಶ ಮತ್ತು ಅಲ್ಲಿರುವ ನಿವಾಸಿಗಳು. ಇದನ್ನು ಉತ್ತರ ದಿಗ್ವಿಜಯ ಕಾಲ ದಲ್ಲಿ ಅರ್ಜುನನು ಗೆದ್ದಿದ್ದನು (ಸಭಾ 27/23). ದರದ ದೇಶದ ಜನರು ರಾಜಾ ಯುಧಿಷ್ಠಿರ ನಿಗಾಗಿ ಕಾಣಿಕೆ ಕೊಂಡುಹೋಗಿದ್ದರು (ಸಭಾ 52/13). ವನವಾಸದ ಸಮಯದಲ್ಲಿ ಸುಬಾಹು ವಿನ ರಾಜಧಾನಿಗೆ ಹೋಗುವಾಗ, ಪಾಂಡವರು ದರದ ದೇಶದ ಮೂಲಕ ಹೋಗಿದ್ದರು (ವನ 177/12). ಪಾಂಡವರ ಪಕ್ಷದಿಂದ ಯಾರಿಗೆ ಯುದ್ಧದ ಆಮಂತ್ರಣ ಕಳುಹಿಸುವುದು ಆವಶ್ಯಕ ವೆಂದು ತಿಳಿಯಲ್ಪಟ್ಟಿತ್ತೋ, ಅಂಥವರಲ್ಲಿ ದರದ ರಾಜನ ಹೆಸರೂ ಇದೆ (ಉದ್ಯೋಗ 4/15). ಇದು ಈಶಾನ್ಯ ದಿಕ್ಕಿನಲ್ಲಿರುವ ದೇಶವಾಗಿದೆ (ಭೀಷ್ಮ 9/67). ದರದ ದೇಶದ ಯೋಧರು ದುರ್ಯೋಧನನ ಸೇನೆಯಲ್ಲಿ ಸಮ್ಮಿಲಿತರಾಗಿ ದ್ದರು (ಭೀಷ್ಮ 51/16). ಶ್ರೀಕೃಷ್ಣನೂ ಒಮ್ಮೆ ಈ ದೇಶವನ್ನು ಗೆದ್ದಿದ್ದನು (ದ್ರೋಣ 70/11). ದರದ ದೇಶದ ಯೋಧರು ಸಾತ್ಯಕಿಯ ಮೇಲೆ ಆಕ್ರಮಣ ಮಾಡಿದ್ದರು. ಸಾತ್ಯಕಿಯಿಂದ ಇವರ ಸಂಹಾರ (ದ್ರೋಣ 121/42–43).

(3) ಒಂದು ಜಾತಿ. ದರದ ಜನರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರೊಂದಿಗೆ ಮತ್ಸರ ಮಾಡಿದ್ದರಿಂದ, ಶೂದ್ರರಾದರು (ಅನು 35/17–18).

**ದರಿ** – ಧೃತರಾಷ್ಟ್ರನ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ನಾಗಯಜ್ಞದಲ್ಲಿ ಸುಟ್ಟು ಭಸ್ಮವಾಗಿದ್ದನು (ಆದಿ 57/16).

**ದರ್ದುರ** – ಒಂದು ಪರ್ವತ. ಇದರ ಅಧಿಷ್ಠಾತೃ ದೇವತೆ ಕುಬೇರನ ಸಭೆಯಲ್ಲಿರುತ್ತಾ, ಭಗವಾನ್ ಧನಾಧ್ಯಕ್ಷನ ಉಪಾಸನೆ ಮಾಡುತ್ತಾನೆ (ಸಭಾ 10/32).

**ದರ್ಭೀ** – ಒಬ್ಬ ಪ್ರಾಚೀನ ಋಷಿ. ಈ ಕುರು ಕ್ಷೇತ್ರದ ಸೀಮೆಯೊಳಗೆ ಅರ್ಧಕೀಲ ತೀರ್ಥವನ್ನು ಪ್ರಕಟಗೊಳಿಸಿದ್ದನು. ಇಲ್ಲಿ ಉಪನಯನ ಮತ್ತು ಉಪವಾಸ ಮಾಡುವುದರಿಂದ ಮನುಷ್ಯನು ಕರ್ಮಕಾಂಡ ಮತ್ತು ಮಂತ್ರಗಳ ಜ್ಞಾನಿಯಾದ ಬ್ರಾಹ್ಮಣನಾಗುತ್ತಾನೆ. ದರ್ಭೀಮುನಿ ಇಲ್ಲಿಗೆ ನಾಲ್ಕು ಸಮುದ್ರಗಳನ್ನು ತರಿಸಿದ್ದನು. ಇವುಗಳಲ್ಲಿ ಸ್ನಾನಮಾಡುವುದರಿಂದ ನಾಲ್ಕು ಸಾವಿರ ಗೋದಾನದ ಫಲ ಸಿಗುತ್ತದೆ (ವನ 83/154–157).

**ದರ್ವ** –(1) ಒಂದು ಕ್ಷತ್ರಿಯ ಜಾತಿ. ಈ ವಂಶದ ಶ್ರೇಷ್ಠ ಕ್ಷತ್ರಿಯ ರಾಜಕುಮಾರರು ಅಜಾತಶತ್ರು ಯುಧಿಷ್ಠಿರನಿಗೆ ತುಂಬಾ ಧನವನ್ನು ಕಾಣಿಕೆಕೊಟ್ಟಿದ್ದರು (ಸಭಾ 52/13).

(2). ಒಂದು ಭಾರತೀಯ ಜನಪದ (ಭೀಷ್ಮ 9/54).

**ದರ್ವೀಸಂಕ್ರಮಣ** – ಒಂದು ತೀರ್ಥ. ಇಲ್ಲಿ ಯಾತ್ರೆ ಮಾಡಿದರೆ ಅಶ್ವಮೇಧಯಜ್ಞದ ಫಲ ಸಿಗುತ್ತದೆ. ಮತ್ತು ಯಜ್ಞಮಾಡಿದವನು ಸ್ವರ್ಗಕ್ಕೆ ಹೋಗುತ್ತಾನೆ (ವನ 84/45).

**ದರ್ಶಕ** –ಒಂದು ಭಾರತೀಯ ಜನಪದ (ಭೀಷ್ಮ 9/53).

**ದಲ** – ಇಕ್ಷ್ವಾಕುವಂಶದ ರಾಜಾ ಪರೀಕ್ಷಿತನ ಮಗ. ಈತನ ತಾಯಿ ಮಂಡೂಕ ರಾಜಕನ್ಯೆ ಸುಶೋಭನಾ ಎಂಬವಳು (ವನ 192/38). ತನ್ನ ಸಹೋದರ ಶಲನು ಕೊಲ್ಲಲ್ಪಟ್ಟಾಗ, ಈತನ ರಾಜ್ಯಾಭಿಷೇಕ (ವನ 192/59). ಮಹರ್ಷಿ ವಾಮದೇವನೊಡನೆ ಈತನ ಮಾತುಕತೆ ಮತ್ತು ವಾಮ್ಯ ಅಶ್ವಗಳನ್ನು ಹಿಂತಿರುಗಿಸಿದುದು (ವನ 192/60–72).

**ದಲ್ಭ** – ಒಬ್ಬ ಪ್ರಾಚೀನ ಋಷಿ. ಇವನ ಪುತ್ರ ದಾಲ್ಭ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು (ವನ 26/5).

**ದಶ** – ಒಂದು ಭಾರತೀಯ ಜನಪದ (ಭೀಷ್ಮ 9/56).

**ದಶಗ್ರೀವ** – ರಾಕ್ಷಸರಾಜ ದಶಮುಖ ರಾವಣ. ಈತ ವಿಶ್ರವಸು ಮುನಿಯಿಂದ ಪುಷ್ಪೋತ್ಕಟೆಯ ಗರ್ಭದಲ್ಲಿ ಹುಟ್ಟಿದನು. ಇವನ ಸಹೋದರನ ಹೆಸರು ಕುಂಭಕರ್ಣ (ವನ 275/7, 10). ಈತ ವರುಣನ ಸಭೆಯಲ್ಲಿದ್ದು, ಅವನ ಸಮೀಪ ಕುಳಿತಿರುತ್ತಾನೆ (ಸಭಾ 9/14).

**ದಶಜ್ಯೋತಿ** – ಸುಭ್ರಾಟನ ಮೂವರು ಪುತ್ರರಲ್ಲಿ ಒಬ್ಬ (ಆದಿ 1/44).

**ದಶಮಾಲಿಕ** – ಒಂದು ಭಾರತೀಯ ಜನಪದ (ಭೀಷ್ಮ 9/66).

**ದಶರಥ** – ಇಕ್ಷ್ವಾಕುವಂಶದ ರಾಜಾ ಅಜನ ಪುತ್ರ. ಈತ ಸದಾ ಸ್ವಾಧ್ವಾಯದಲ್ಲಿ ತತ್ಪರನಾಗಿದ್ದನು. ಮತ್ತು ಪವಿತ್ರನಾಗಿದ್ದನು. ಇವನ ತಾಯಿಯ ಹೆಸರು ಇಲಬಿಲೆ ಎಂದಾಗಿತ್ತು (ವನ 274/6). ಇವನಿಗೆ ನಾಲ್ಕು ಮಕ್ಕಳಿದ್ದರು. ಶ್ರೀರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನ (ವನ 274/7). ಇವನಿಗೆ ಮೂವರು ಪತ್ನಿಯರಿದ್ದರು. ಶ್ರೀರಾಮನ ತಾಯಿ ಕೌಸಲ್ಯೆ, ಭರತನ ತಾಯಿ ಕೈಕೇಯಿ, ಲಕ್ಷ್ಮಣ ಮತ್ತು ಶತ್ರುಘ್ನನ ತಾಯಿ ಸುಮಿತ್ರೆ (ವನ 274/8). ಶ್ರೀರಾಮನಿಗೆ ರಾಜ್ಯಾಭಿಷೇಕ ಮಾಡಲು, ಸಾಮಗ್ರಿಗಳನ್ನು ಕ್ರೋಢೀಕರಿಸುವಂತೆ ಈತನಿಂದ ಪುರೋಹಿತರಿಗೆ ಆದೇಶ (ವನ 277/15). ಕೈಕೇಯಿಯು ಈತನನ್ನು ವಚನಬದ್ಧನಾಗಿ ಮಾಡಿ, ಶ್ರೀರಾಮನಿಗೆ ವನವಾಸ ಮತ್ತು ಭರತನಿಗೆ ರಾಜ್ಯಾಭಿಷೇಕದ ವರವನ್ನು ಯಾಚಿಸಿದುದು; ಇವನು ದುಃಖಿತನಾಗಿ ಮೌನವಾದುದು (ವನ 277/21–27). ಶ್ರೀರಾಮನು ಕಾಡಿಗೆ ಹೋದಾಗ ಈತನ ದೇಹತ್ಯಾಗ (ವನ 277/30). ರಾವಣನನ್ನು ಜಯಿಸಿದ ಬಳಿಕ ಈತ ಶ್ರೀರಾಮನ ಬಳಿಗೆ ಬಂದುದು ಮತ್ತು ರಾಜನಾಗಲು ಆದೇಶ ನೀಡಿದುದು (ವನ 291/36). ದಶರಥನ ಮನೆಯಲ್ಲಿ ಶ್ರೀರಾಮ ರೂಪದಿಂದ ಅವತರಿಸಿದ ವಿಷ್ಣು ದಶಗ್ರೀವ ರಾವಣನ ವಧೆ ಮಾಡಿದ್ದನು (ವನ 315/20)

**ದಶಾರ್ಣ** – ಒಂದು ಪ್ರಾಚೀನ ಜನಪದ (ಕೆಲವರ ಅಭಿಪ್ರಾಯ ಪ್ರಕಾರ ಇದರ ಎರಡು ಭಾಗಗಳಿದ್ದವು – ಪೂರ್ವ ಮತ್ತು ಪಶ್ಚಿಮ. ಪೂರ್ವಭಾಗದಲ್ಲಿ ಛತ್ತೀಸಗಢದ ಸ್ವಲ್ಪಭಾಗ ಮತ್ತು ಪಾಟನ ರಾಜ್ಯವಿತ್ತು. ಪಶ್ಚಿಮಭಾಗದಲ್ಲಿ ಪೂರ್ವದ ಮಾಳವ ಮತ್ತು ಭೂಪಾಲದ ಪ್ರಾಂತ ಸಮ್ಮಿಲಿತವಾಗಿದ್ದವು. ಹಿಂದೀ ಶಬ್ದಸಾಗರ ಪ್ರಕಾರ ವಿಂಧ್ಯಪರ್ವತದ ಆಗ್ನೇಯ ದಿಕ್ಕಿನಲ್ಲಿರುವ ಆ ಪ್ರದೇಶದ ಪ್ರಾಚೀನ ಹೆಸರು 'ದಶಾರ್ಣ'ವಾಗಿತ್ತು.

ಇದರ ಸಮೀಪ 'ಧಸಾನ' ನದಿ ಹರಿಯುತ್ತದೆ. 'ಮೇಘದೂತ' ಪ್ರಕಾರ ವಿದಿಶಾ – ಆಧುನಿಕ 'ಭಿಲಿಸಾ' – ಇದೇ ಪ್ರದೇಶದ ರಾಜಧಾನಿ ಯಾಗಿತ್ತು.) ಈ ದೇಶದ ಮೇಲೆ ಪಾಂಡು ರಾಜನ ಆಕ್ರಮಣ ಮತ್ತು ವಿಜಯ (ಆದಿ 112/25). ಭೀಮಸೇನನೂ ಈ ದೇಶವನ್ನು ಗೆದ್ದಿದ್ದನು (ಸಭಾ 29/5). ನಕುಲನೂ ಇದರ ಮೇಲೆ ಆಕ್ರಮಣ ಮಾಡಿ ವಿಜಯಹೊಂದಿದ್ದನು (ಸಭಾ 32/7). ಪ್ರಾಚೀನ ಕಾಲದಲ್ಲಿ ಸುದಾಮಾ ದಶಾರ್ಣದೇಶದ ರಾಜನಾಗಿದ್ದನು. ಇವನಿಗೆ ಇಬ್ಬರು ಪುತ್ರಿಯರಿದ್ದರು. ಇವರಲ್ಲಿ ಒಬ್ಬಳು ವಿದರ್ಭರಾಜ ಭೀಮನನ್ನೂ ಇನ್ನೊಬ್ಬಳು ಚೇದಿ ರಾಜ ವೀರಬಾಹುವನ್ನೂ ವಿವಾಹವಾಗಿದ್ದರು. ಭೀಮನ ಮಗಳೂ ದಮಯಂತಿಯಾಗಿದ್ದಳು. ವೀರಬಾಹುವಿನ ಮಗಳು ಸುನಂದೆ. ಇವರಿಬ್ಬರಿಗೂ ಅಜ್ಜನ ಮನೆ ದಶಾರ್ಣ ದೇಶವಾಗಿತ್ತು. ದಮಯಂತಿ ದಶಾರ್ಣರಾಜನ ಮನೆಯಲ್ಲೇ ಹುಟ್ಟಿದವಳಾಗಿದ್ದಳು (ವನ 69/13–16). ಮಹಾಭಾರತ ಯುದ್ಧಕ್ಕೆ ಮೊದಲು ದಶಾರ್ಣದೇಶದ ರಾಜ ಹಿರಣ್ಯವರ್ಮನಾಗಿದ್ದನು. ಈತನ ಮಗಳ ಮದುವೆ ಪುರುಷವೇಷದಲ್ಲಿರುವ ದ್ರುಪದನ ಕನ್ಯೆ ಶಿಖಂಡಿಯೊಂದಿಗೆ ಆಗಿತ್ತು. ಈ ಗುಟ್ಟು ಬಹಿರಂಗವಾದಾಗ, ದಶಾರ್ಣರಾಜನು ದ್ರುಪದನ ಮೇಲೆ ಆಕ್ರಮಣ ಮಾಡಲು ಸಿದ್ಧತೆಮಾಡಿದನು. ಆದರೆ ದೈವಯೋಗದಿಂದ ಶಿಖಂಡಿನಿ ಕಾಡಿಗೆ ಹೋಗಿ ಶಿಖಂಡೀ ರೂಪಕ್ಕೆ ಪರಿವರ್ತಿತಳಾದಳು. ಆಕೆಯ ಪುರುಷತ್ವದ ಪರಿಚಯ ಪಡೆದು ದಶಾರ್ಣ ರಾಜ ಸಂತುಷ್ಟನಾದನು (ಉದ್ಯೋಗ 189ನೇ ಅಧ್ಯಾಯದಿಂದ 192ನೇ ಅಧ್ಯಾಯದ ವರೆಗೆ). ದಶಾರ್ಣದೇಶ ಎರಡಿದ್ದವು ಅಥವಾ ಒಂದೇ ದೇಶದ ಎರಡು ಭಾಗಗಳಿದ್ದವು ಎಂದು ತಿಳಿದುಬರುತ್ತದೆ. ಯಾಕೆಂದರೆ ಭೀಷ್ಮಪರ್ವದಲ್ಲಿ ಭಾರತೀಯ ಜನಪದಗಳ ಲೆಕ್ಕ ಹಾಕಲ್ಪಡುವಾಗ ಎರಡು ದಶಾರ್ಣದೇಶಗಳ ಉಲ್ಲೇಖ ಮಾಡಲ್ಪಟ್ಟಿದೆ (ಭೀಷ್ಮ 9/41–42). ದಶಾರ್ಣ ದೇಶದ ಸೈನಿಕರು ದುರ್ಯೋಧನನ ಪಕ್ಷದಲ್ಲಿದ್ದರು ಮತ್ತು ದ್ರೋಣಾಚಾರ್ಯನ ಅನುಗಾಮಿಯಾಗಿ ಯುದ್ಧಮಾಡುತ್ತಿದ್ದರು (ಭೀಷ್ಮ 51/12). ಯುಧಿಷ್ಠಿರನ ಅಶ್ವಮೇಧದ ಸಮಯದಲ್ಲಿ ದಶಾರ್ಣದೇಶ ಚಿತ್ರಾಂಗದನ ಅಧಿಕಾರದಲ್ಲಿತ್ತು. ಅರ್ಜುನನು ಅವನನ್ನು ಸೋಲಿಸಿದ್ದನು (ಆಶ್ವ 83/5–7).

**ದಶಾರ್ಹ** – ಯದುಕುಲದಲ್ಲಿ ಹುಟ್ಟಿದ ಒಬ್ಬ ಶ್ರೇಷ್ಠ ಕ್ಷತ್ರಿಯ. ಈತನ ವಂಶದಲ್ಲಿ ಹುಟ್ಟುವ ಕ್ಷತ್ರಿಯರನ್ನು ದಾಶಾರ್ಹರೆನ್ನುತ್ತಾರೆ. ಆದುದರಿಂದಲೇ ಶ್ರೀಕೃಷ್ಣನನ್ನು ಕೂಡಾ ದಾಶಾರ್ಹ ಅಥವಾ ದಾಶಾರ್ಹಪತಿ ಎನ್ನುತ್ತಾರೆ (ಸಭಾ 38).

**ದಶಾವರ** – ಒಬ್ಬ ದೈತ್ಯ. ಈತ ವರುಣ ಸಭೆಯಲ್ಲಿದ್ದು, ಆತನ ಉಪಾಸನೆ ಮಾಡುತ್ತಾನೆ (ಸಭಾ 9/14).

**ದಶಾಶ್ವ** – ಇಕ್ಷ್ವಾಕುವಿನ ಹತ್ತನೇ ಮಗ. ಈತ ಮಾಹಿಷ್ಮತೀಪುರದಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಇವನ ಪುತ್ರನ ಹೆಸರು ಮದಿರಾಶ್ವ (ಅನು 2/6).

**ದಶಾಶ್ವಮೇಧ** – ಕುರುಕ್ಷೇತ್ರದೊಳಗಿರುವ ಒಂದು ತೀರ್ಥ. ಅಲ್ಲಿ ಸ್ನಾನ ಮಾಡಿದ ಮನುಷ್ಯ ಸಹಸ್ರ ಗೋದಾನದ ಫಲಪಡೆಯುತ್ತಾನೆ (ವನ 83/14).

**ದಶಾಶ್ವಮೇಧಿಕ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯನು ಸದ್ಗತಿ ಪಡೆಯುತ್ತಾನೆ (ವನ 83/64).

**ದಸ್ರ** – ನಾಸತ್ಯ ಮತ್ತು ದಸ್ರ ಎರಡೂ ಅಶ್ವಿನೀ ಕುಮಾರರ ಹೆಸರುಗಳಾಗಿವೆ (ಶಾಂತಿ 208/17).

**ದಹತಿ** – ಅಂಶನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಪಾರ್ಷದರಲ್ಲಿ ಒಬ್ಬ (ಶಲ್ಯ 45/34).

**ದಹದಹಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

**ದಹನ** – (1) ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಮೊಮ್ಮಗ ಮತ್ತು ಸ್ಥಾಣುವಿನ ಪುತ್ರ (ಆದಿ 66/3).

(2) ಅಂಶನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಪಾರ್ಷದರಲ್ಲಿ ಒಬ್ಬ (ಶಲ್ಯ 45/34).

**ದಾಕ್ಷಾಯಣೀ** – ದಕ್ಷನ ಕನ್ಯೆ. ರಾಜಧರ್ಮನು ತನ್ನ ತಾಯಿ ಸುರಭಿಯನ್ನು ದಾಕ್ಷಾಯಣಿ ಎಂದಿದ್ದಾನೆ (ಶಾಂತಿ 170/2). ದಾಕ್ಷಾಯಣಿ ಸುರಭಿಯು ತನ್ನ ಮುಖದ ಜೊಲ್ಲು ನೊರೆಯನ್ನು ರಾಜಧರ್ಮನ ಚಿತೆಯ ಮೇಲೆ ಸುರಿಸಿದಳು. ಅದರಿಂದ ಆತ ಬದುಕಿದನು (ಶಾಂತಿ 173/3). (ಇದೇ ರೀತಿ ಅದಿತಿ, ದಿತಿ,

ದನು ಇತ್ಯಾದಿ ಎಲ್ಲಾ ದಕ್ಷ ಕನ್ಯೆಯರನ್ನು ದಾಕ್ಷಾಯಣಿಯರೆಂದು ತಿಳಿಯಬೇಕು.).

**ದಾಕ್ಷಿಣಾತ್ಯ** – ದಕ್ಷಿಣ ಭಾರತದ ನಿವಾಸಿಗಳು ದಾಕ್ಷಿಣಾತ್ಯರೆಂದು ಕರೆಯಲ್ಪಡುತ್ತಾರೆ. ಭೀಷ್ಮಕ ರಾಜನು ದಾಕ್ಷಿಣಾತ್ಯರ ಅಧಿಪತಿಯಾಗಿದ್ದನು (ಉದ್ಯೋಗ 158/2).

**ದಾನಭಾರಿ** – ಒಂದು ಭಾರತೀಯ ಜನಪದ (ಭೀಷ್ಮ 50/52).

**ದಾನ್ತ** – ವಿದರ್ಭರಾಜ ಭೀಮನ ಮಗ ಮತ್ತು ದಮಯಂತಿಯ ಸಹೋದರ (ವನ 53/9).

**ದಾನ್ತಾ** – ಅಲಕಾಪುರದ ಒಬ್ಬ ಅಪ್ಸರೆ. ಈಕೆ ಇತರ ಅಪ್ಸರೆಯರ ಜೊತೆಯಲ್ಲಿ ಅಷ್ಟಾವಕ್ರನ ಸ್ವಾಗತಕ್ಕಾಗಿ ನೃತ್ಯ ಮಾಡಿದ್ದಳು (ಅನು 19/45).

**ದಾಮಚಂದ್ರ** – ಯುಧಿಷ್ಠಿರನಲ್ಲಿ ಅನುರಾಗವುಳ್ಳ ಆತನ ಒಬ್ಬ ಸಂಬಂಧಿ ಮತ್ತು ಸಹಾಯಕ ರಾಜ. ಈತ ದೊಡ್ಡ ಪರಾಕ್ರಮಿಯಾಗಿದ್ದನು (ದ್ರೋಣ 158/40).

**ದಾಮಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/5).

**ದಾಮೋದರ** – ಶ್ರೀಕೃಷ್ಣನ ಒಂದು ಹೆಸರು. ಈ ಹೆಸರಿನ ವ್ಯುತ್ಪತ್ತಿ (ಉದ್ಯೋಗ 70/8).

**ದಾಮೋಷ್ಣೀ** – ಯುಧಿಷ್ಠಿರನ ಸಭೆಯಲ್ಲಿದ್ದ ಒಬ್ಬ ಮಹರ್ಷಿ (ಸಭಾ 4/13). ಈತ ಹಸ್ತಿನಾ ಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನ ಭೇಟಿಮಾಡಿದ್ದನು (ಉದ್ಯೋಗ 83/64).

**ದಾರದ** – ಒಂದು ಭಾರತೀಯ ಜನಪದ (ಶಲ್ಯ 50/50).

**ದಾರುಕ** – ಶ್ರೀಕೃಷ್ಣನ ಸಾರಥಿ. ಶ್ರೀಕೃಷ್ಣನು ದ್ವಾರಕೆಗೆ ಹೋಗುವಾಗ, ಯುಧಿಷ್ಠಿರನು, ದಾರುಕನನ್ನು ದೂರಸರಿಸಿ, ಸ್ವಲ್ಪ ಹೊತ್ತು ತಾನೇ ಸಾರಥ್ಯ ಮಾಡಿದ್ದನು (ಸಭಾ 2/16). ಆತ ದಾರುಕನೊಂದಿಗೆ ದ್ವಾರಕೆಗೆ ತಲುಪಿದನು (ಸಭಾ 2/30). ಇವನು ತಂದ ಗರುಡಧ್ವಜ ರಥದ ಮೇಲೆ ಕುಳಿತು ಶ್ರೀಕೃಷ್ಣನು ದ್ವಾರಕಾಪುರದ ಕಡೆಗೆ ಪ್ರಸ್ಥಾನ ಮಾಡಿದನು (ಸಭಾ 45/60). ದಾರುಕನ ಪುತ್ರನು ಪ್ರದ್ಯುಮ್ನನ ರಥ ಸಂಚಾಲನೆ ಮಾಡಿದನು (ವನ 18/3, 12, 15, 30, 33, ವನ 19/6,10, 13). ಶಾಲ್ವನ ಬಾಣಗಳಿಂದ ದಾರುಕನು ಪೀಡಿತನಾದುದು (ವನ 21/5). ಶಾಲ್ವನನ್ನು ವಧಿಸಲು ಈತ ಶ್ರೀಕೃಷ್ಣನನ್ನು ಪ್ರೋತ್ಸಾಹಿಸಿದುದು (ವನ 22/21–26). ಉತ್ತರನು ಸಾರಥ್ಯದ ಕೆಲಸದಲ್ಲಿ ತನ್ನನ್ನು ಶ್ರೀಕೃಷ್ಣನ ಸಾರಥಿ ದಾರುಕನೊಂದಿಗೆ ಹೋಲಿಸಿದುದು (ವಿರಾಟ 45/16). ಮಾತ್ರವಲ್ಲದೆ, ಉದ್ಯೋಗಪರ್ವದ 83, 84, 131, 137 ಅಧ್ಯಾಯಗಳಲ್ಲಿ, ದ್ರೋಣ ಪರ್ವದ 82, 112 ಅಧ್ಯಾಯಗಳಲ್ಲಿ, ಕರ್ಣಪರ್ವದ 72 ಅಧ್ಯಾಯದಲ್ಲಿ, ಶಾಂತಿ ಪರ್ವದ 46, 53 ಅಧ್ಯಾಯಗಳಲ್ಲಿ ಮತ್ತು ಆಶ್ವಮೇಧಿಕ ಪರ್ವದ 52 ಅಧ್ಯಾಯದಲ್ಲಿ ಕೂಡಾ ದಾರುಕನ ಹೆಸರು ಬಂದಿದೆ. ಸಮಯಕ್ಕೆ ಸರಿಯಾಗಿ ರಥ ತರುವಂತೆ ಶ್ರೀಕೃಷ್ಣನಿಂದ ಆದೇಶ ಬಂದಾಗ, ಈತ ಒಪ್ಪಿದುದು (ದ್ರೋಣ 79/43–44). ಭಗವಂತನ ಶಂಖಧ್ವನಿಕೇಳಿ, ಆತನ ಸಂದೇಶವನ್ನು ಸ್ಮರಣೆ ಮಾಡಿ, ಜಯದ್ರಥ ವಧೆಯ ಅನಂತರ, ದಾರುಕ ರಥವನ್ನು ತೆಗೆದುಕೊಂಡು ಶ್ರೀಕೃಷ್ಣನ ಬಳಿಗೆ ಹೋದುದು (ದ್ರೋಣ 147/45–46). ಸಾತ್ಯಕಿ ಆ ರಥದ ಮೇಲೆ ಏರಿ ಕರ್ಣನೊಂದಿಗೆ ಯುದ್ಧ ಮಾಡುವಾಗ, ಈತನ ರಥ ಸಂಚಾಲನೆಯ ಕೌಶಲ್ಯ (ದ್ರೋಣ 147/54–55). ಭಗವಂತನ ರಥವನ್ನು ದಾರುಕನು ನೋಡುತ್ತಿದ್ದಂತೆ, ದಿವ್ಯಾಶ್ವಗಳು ಆಕಾಶದಲ್ಲಿ ಹಾರಿಸಿಕೊಂಡು ಹೋದುವು (ಮೌಸಲ 3/5). ದಾರುಕನಿಗೆ ಶ್ರೀಕೃಷ್ಣನು, ಅರ್ಜುನನಿಗೆ ಯಾದವ ಸಂಹಾರದ ವಿಷಯ ತಿಳಿಸಲು ಮತ್ತು ಆತನನ್ನು ಕರೆಸಲು ಹೋಗುವಂತೆ ಆದೇಶನೀಡಿದುದು. ಆಗ ದಾರುಕನು ಪ್ರಸ್ಥಾನ ಮಾಡಿದುದು (ಮೌಸಲ 4/2–3). ದಾರುಕನು ಕುಂತೀಪುತ್ರರನ್ನು ಭೇಟಿ ಮಾಡಿ, ಅವರೊಂದಿಗೆ ಯದುವಂಶ ವಿನಾಶದ ಸಮಾಚಾರ ತಿಳಿಸಿದುದು ಮತ್ತು ಅರ್ಜುನನ್ನು ಸಂಗಡ ಕರೆದುಕೊಂಡು ದ್ವಾರಕೆಗೆ ಹಿಂತಿರುಗಿದುದು (ಮೌಸಲ 5/1–5). ಅರ್ಜುನನು ದಾರುಕನೊಂದಿಗೆ ವೃಷ್ಣಿವಂಶದ ವೀರರ ಮಂತ್ರಿಗಳೊಡನೆ ಭೇಟಿಮಾಡುವ ಇಚ್ಛೆ ಪ್ರಕಟಿಸಿದುದು (ಮೌಸಲ 7/6).

**ದಾರುಣ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/9).

**ದಾರ್ವ** – ದರ್ವದೇಶದ ಅಥವಾ ದರ್ವ

ಜಾತಿಯಲ್ಲಿ ಹುಟ್ಟಿದ ಕ್ಷತ್ರಿಯ ರಾಜ (ಸಭಾ 27/18).

**ದಾರ್ವಾತಿಸಾರ** – ಒಬ್ಬ ಮ್ಲೇಚ್ಛ ಜಾತಿ (ದ್ರೋಣ 93/44).

**ದಾರ್ವೀ** – ಒಂದು ಭಾರತೀಯ ಜನಪದ (ಭೀಷ್ಮ 9/54).

**ದಾಲ್ಭ್ಯ** – (1) ಒಬ್ಬ ಮಹರ್ಷಿ. ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/11).

(2) ಉತ್ತರಾಖಂಡದ ಒಂದು ತೀರ್ಥಭೂತ ಆಶ್ರಮ (ವನ 90/12).

(3) ಒಬ್ಬ ಋಷಿ. ಈತ ಸತ್ಯವಾನ ಜೀವಿಸುವ ನೆಂಬ ಭರವಸೆ ಹುಟ್ಟಿಸಿ, ದ್ಯುಮತ್ಸೇನನಿಗೆ ಆಶ್ವಾಸನೆ ನೀಡಿದ್ದನು (ವನ 298/17).

**ದಾಲ್ಭ್ಯಘೋಷ** – ಉತ್ತರಾಖಂಡದ ಒಂದು ತೀರ್ಥಭೂತ ಆಶ್ರಮ (ವನ 90/12).

**ದಾಶರಾಜ** – ಸತ್ಯವತಿಯ ಪಾಲಕ ತಂದೆ; ನಿಷಾದರಾಜ (ಉಚ್ಚೈಃಶ್ರವಾ). ಈತನ ಆಜ್ಞೆ ಯಿಂದ ಸತ್ಯವತಿ ಧರ್ಮಾರ್ಥವಾಗಿ ದೋಣಿ ನಡೆಸುತ್ತಿದ್ದಳು (ಆದಿ 100/48). ಸತ್ಯವತಿಯ ವಿವಾಹಕ್ಕೋಸ್ಕರ ಶಾಂತನುವಿನೊಂದಿಗೆ ಈತನ ಶರ್ತ (ಆದಿ 100/56). ತನ್ನ ಪುತ್ರಿಯ ವಿವಾಹ ಸಂಬಂಧವಾಗಿ ಭೀಷ್ಮನೊಡನೆ ಈತನ ಹೇಳಿಕೆ (ಆದಿ 100/77–84).

**ದಾಶಾರ್ಣಕ** – ದಶಾರ್ಣ ದೇಶದ ನಿವಾಸಿ (ಭೀಷ್ಮ 50/47).

**ದಾಶಾರ್ಹೀ** – ದಶಾರ್ಹಕುಲದಲ್ಲಿ ಹುಟ್ಟಿದ ವೃಷ್ಣಿ ವಂಶೀಯರ ಸಭೆ ಮತ್ತು ದಶಾರ್ಹಕುಲದ ಕನ್ಯೆ (ಸಭಾ 38/29). (ದಶಾರ್ಹ ಕುಲದ ಕನ್ಯೆಯರಾದುದರಿಂದಲೇ ಭುಮನ್ಯುವಿನ ಪತ್ನಿ ವಿಜಯಾ, ವಿಕುಂಠನ ಪತ್ನಿ ಸುದೇವಾ, ಕುರುಪತ್ನಿ ಶುಭಾಂಗಿ, ಪಾಂಡುಪತ್ನಿ ಕುಂತಿ, ಅರ್ಜುನನ ಪತ್ನಿ ಸುಭದ್ರೆ ಮೊದಲಾದವರು ದಾಶಾರ್ಹೀ ಎಂದು ಕರೆಯಲ್ಪಟ್ಟಿದ್ದಾರೆ.).

**ದಾಶೇರಕ** – ಕ್ಷತ್ರಿಯರ ಒಂದು ವರ್ಗ (ಭೀಷ್ಮ 50/47).

**ದಾಸೀ** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/31).

**ದಿಕ್** – ಒಂದು ಪ್ರಮುಖ ನದಿ. ಅದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/19).

**ದಿಗ್ವಿಜಯ ಪರ್ವ** – ಸಭಾಪರ್ವದ ಒಂದು ಅವಾಂತರಪರ್ವ (ಅಧ್ಯಾಯ 25 ರಿಂದ 32ರ ವರೆಗೆ).

**ದಿತಿ** – ದಕ್ಷ ಪ್ರಜಾಪತಿಯ ಪುತ್ರಿ, ಮಹರ್ಷಿ ಕಶ್ಯಪನ ಪತ್ನಿ ಮತ್ತು ದೈತ್ಯರ ತಾಯಿ (ಆದಿ 65/12). ದಿತಿಯ ಒಬ್ಬನೇ ಮಗನ ಹೆಸರು ಹಿರಣ್ಯಕಶಿಪುವೆಂದು ಪ್ರಖ್ಯಾತವಾಗಿತ್ತು (ಆದಿ 65/17). ಈಕೆ ಬ್ರಹ್ಮಸಭೆಯಲ್ಲಿದ್ದಾಳೆ (ಸಭಾ 11/39).

**ದಿಲೀಪ** – (1) ಸಗರನ ಮರಿಮಗ. ಅಂಶು ಮಂತನ ಮಗ ಮತ್ತು ಭಗೀರಥನ ತಂದೆ. ಈತನ ರಾಜ್ಯಾಭಿಷೇಕ ಮತ್ತು ಈತ ತನ್ನ ಪುತ್ರನಿಗೆ ರಾಜ್ಯವನ್ನಿತ್ತು ಕಾಡಿಗೆ ಹೋದುದು (ವನ 107/63–69). ಶ್ರೀಕೃಷ್ಣನಿಂದ ಯುಧಿಷ್ಠಿರನ ಮುಂದೆ ಈತನ ನಡವಳಿಕೆಯ ವರ್ಣನೆ (ದ್ರೋಣ 61 ಅಧ್ಯಾಯ; ಶಾಂತಿ 29/71–80). ಈತ ಅನೇಕ ಬಾರಿ ಗೋದಾನ ಮಾಡಿ, ಅದರ ಪ್ರಭಾವದಿಂದ ಸ್ವರ್ಗವನ್ನು ಪಡೆದನು (ಅನು 76/26). ಅಗಸ್ತ್ಯರ ಕಮಲಗಳ ಅಪಹಾರ ವಾದಾಗ ಈತನು ಶಪಥ ಮಾಡಿದುದು (ಅನು 94/23). ಈತ ಮಾಂಸ ಭಕ್ಷಣೆಯ ನಿಷೇಧ ಮಾಡಿದ್ದರಿಂದ ಎಲ್ಲಾ ಭೂತಗಳ ಆತ್ಮಸ್ವರೂಪ ನಾದನು; ಈತನಿಗೆ ಪರಾವರತತ್ತ್ವದ ಜ್ಞಾನ ವಾಗಿತ್ತು (ಅನು 115/58–59). ಈತ ಯಮ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/14).

(2) ಒಬ್ಬ ಕಾಶ್ಯಪವಂಶದ ನಾಗ (ಉದ್ಯೋಗ 103/15).

**ದಿಲೀಪಾಶ್ರಮ** – ಒಂದು ತೀರ್ಥ. ಇಲ್ಲಿ ಕಾಶೀ ರಾಜಕನ್ಯೆ ಅಂಬಾ ಕಠೋರ ವ್ರತವನ್ನಾಶ್ರಯಿಸಿ ತಪಸ್ಸುಮಾಡಿದ್ದಳು (ಉದ್ಯೋಗ 186/28).

**ದಿವಃಪುತ್ರ** – ವಿವಸ್ವಂತನ ಬೋಧಕ ಅಥವಾ ಸ್ವರೂಪಭೂತರಾದ ಹನ್ನೆರಡು ಸೂರ್ಯರಲ್ಲಿ ಒಬ್ಬ (ಆದಿ 1/42).

**ದಿವಾಕರ** –(1) ಭಗವಾನ್ ಸೂರ್ಯನ ಒಂದು ಹೆಸರು (ವನ 118/12).

(2). ಗರುಡನ ಪ್ರಮುಖ ಸಂತಾನಗಳಲ್ಲಿ ಒಂದು (ಉದ್ಯೋಗ 101/14).

**ದಿವಿರಥ** – (1) ಸಮ್ರಾಟನಾದ ಭರತನ ಮೊಮ್ಮಗ ಮತ್ತು ಭುಮನ್ಯುವಿನ ಪುತ್ರ (ಆದಿ 94/24)
(2) ಒಬ್ಬ ರಾಜ. ಈತ ದಧಿವಾಹನನ ಪುತ್ರ. ಇವನ ಮಗ ಮಹರ್ಷಿ ಗೌತಮನ ಮೂಲಕ ಪರಶುರಾಮನ ಕ್ಷತ್ರಿಯಸಂಹಾರದಿಂದ ರಕ್ಷಿಸಲ್ಪಟ್ಟನು ಮತ್ತು ಸುರಕ್ಷಿತವಾಗಿ ಇಡಲ್ಪಟ್ಟಿದ್ದನು (ಶಾಂತಿ 49/80).

**ದಿವೋದಾಸ** – ಈತ ಕಾಶೀದೇಶದ ರಾಜ. ಸುದೇವ ಅಥವಾ ಭೀಮಸೇನನ ಪುತ್ರನಾಗಿದ್ದನು. ಈತ ಗಾಲವನಿಗೆ ಕಿವಿಕಪ್ಪಾದ ಇನ್ನೂರು ಕುದುರೆಗಳನ್ನು ಶುಲ್ಕರೂಪದಲ್ಲಿ ಕೊಟ್ಟು, ಯಯಾತಿ ಕನ್ಯೆ ಮಾಧವಿಯನ್ನು ಒಬ್ಬ ಪುತ್ರನ ಉತ್ಪತ್ತಿಗಾಗಿ, ಪತ್ನಿಯಾಗಿ ಮಾಡಿಕೊಂಡದ್ದು (ಉದ್ಯೋಗ 117/1–7). ಪುತ್ರೋತ್ಪತ್ತಿಯ ಅನಂತರ ಗಾಲವನಿಗೆ ಮಾಧವಿಯನ್ನು ಹಿಂತಿರುಗಿಸಿದುದು (ಉದ್ಯೋಗ 117/8–21). ಈತ ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12). ಈತ ಶತ್ರುಗಳಲ್ಲಿಂದ ಅಗ್ನಿಹೋತ್ರ ಮತ್ತು ಅದರ ಸಾಮಗ್ರಿಗಳನ್ನು ಅಪಹಾರ ಮಾಡಿದುದರಿಂದ ತಿರಸ್ಕಾರಕ್ಕೆ ಒಳಗಾದನು (ಶಾಂತಿ 96/21). ಇಂದ್ರನ ಆಜ್ಞೆಯಿಂದ ಈತ ವಾರಣಾಸಿ ನಗರ ಸ್ಥಾಪನೆ ಮಾಡಿದ್ದನು (ಅನು 30/16). ಈತ ತನ್ನ ಶತ್ರುಗಳಾದ ಹೈಹಯ ರಾಜಕುಮಾರರೊಂದಿಗೆ ಒಂದು ಸಾವಿರ ದಿನಗಳ ತನಕ ಯುದ್ಧಮಾಡಿ, ಸೇನೆ ಮತ್ತು ವಾಹನಗಳ ನಾಶವಾದಾಗ ಓಡಿಹೋದನು; ಮತ್ತು ಭರದ್ವಾಜರಿಗೆ ಶರಣಾದನು. ಅಲ್ಲಿ ಆ ಮುನಿ ಪುತ್ರೇಷ್ಟಿ ಯಜ್ಞಮಾಡಿಸಿದನು. ಇದರಿಂದ ಈತನಿಗೆ ಪ್ರತರ್ದನ ಎಂಬ ಹೆಸರಿನ ಪುತ್ರ ಪ್ರಾಪ್ತಿಯಾಯಿತು (ಅನು 30/20–30). ದಿವೋದಾಸನು ತನ್ನ ಪುತ್ರ ಪ್ರತರ್ದನನಿಗೆ ಯುವರಾಜ ಪಟ್ಟವನ್ನಿತ್ತು, ಆತನನ್ನು ವೀತಿಹವ್ಯನ ಪುತ್ರರ ವಧೆಮಾಡಲು ಕಳುಹಿಸಿದ್ದನು (ಅನು 30/36–37). ಮಹಾಭಾರತದಲ್ಲಿ ಬಂದಿರುವ ದಿವೋದಾಸನ ಹೆಸರುಗಳು: ಭೈಮಸೇನಿ, ಕಾಶೀಶ, ಸೌದೇವ, ಸುದೇವತನಯ ಇತ್ಯಾದಿ.

**ದಿವ್ಯಕಟ** – ಪಶ್ಚಿಮ ದಿಕ್ಕಿನ ಕಡೆಗಿರುವ ಒಂದು ನಗರ. ಇದನ್ನು ನಕುಲನು ದಿಗ್ವಿಜಯ ಕಾಲದಲ್ಲಿ, ತನ್ನ ಅಧಿಕಾರದೊಳಗೆ ಮಾಡಿಕೊಂಡಿದ್ದನು (ಸಭಾ 32/11).

**ದಿವ್ಯಕರ್ಮಕೃತ್** – ಒಬ್ಬ ವಿಶ್ವೇದೇವ (ಅನು 91/35).

**ದಿವ್ಯಸಾನು** – ಒಬ್ಬ ವಿಶ್ವೇದೇವ (ಅನು 91/30).

**ದಿಶಾಚಕ್ಷು** – ಗರುಡನ ಪ್ರಮುಖ ಸಂತಾನಗಳಲ್ಲಿ ಒಂದು (ಉದ್ಯೋಗ 101/10).

**ದೀಪಕೇತು** – ಒಬ್ಬ ಪ್ರಾಚೀನ ರಾಜ (ಆದಿ 1/237).

**ದೀಪರೋಮಾ** – ಒಬ್ಬ ವಿಶ್ವೇದೇವ (ಅನು 91/31).

**ದೀಪ್ತಾಕ್ಷ** – ಒಂದು ಕ್ಷತ್ರಿಯ ಕುಲ. ಇದರಲ್ಲಿ ಪುರೂರವಾ ಎಂಬ ಕುಲಕಳಂಕನಾದ ರಾಜನು ಹುಟ್ಟಿದ್ದನು (ಉದ್ಯೋಗ 74/15).

**ದೀಪ್ತಿ** – ಒಬ್ಬ ವಿಶ್ವೇದೇವ (ಅನು 91/34).

**ದೀಪ್ತೋದಕ** – ಒಂದು ತೀರ್ಥ. ಇಲ್ಲಿ ದೇವಯುಗದಲ್ಲಿ ಭೃಗುವು ತಪಸ್ಸು ಮಾಡಿದ್ದನು (ವನ 99/69).

**ದೀರ್ಘ** – ಮಗಧದ ಒಬ್ಬ ರಾಜ. ಈತ ರಾಜಗೃಹದಲ್ಲಿ ಪಾಂಡುವಿನ ಮೂಲಕ ಕೊಲ್ಲಲ್ಪಟ್ಟನು (ಆದಿ 112/27).

**ದೀರ್ಘಜಿಹ್ವಾ** – ಮಹರ್ಷಿ ಕಶ್ಯಪನಿಂದ ದನುವಿನ ಗರ್ಭದಲ್ಲಿ ಜನ್ಮವೆತ್ತಿದ ಒಬ್ಬ ದಾನವ (ಆದಿ 65/30).

**ದೀರ್ಘತಮಾ** – ಒಬ್ಬ ಮುನಿ. ಈತ ದೇವರಾಜ ಇಂದ್ರನ ಸಭೆಯಲ್ಲಿದ್ದು, ಆ ವಜ್ರಧಾರಿ ಇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/11). ಈತ ಪಶ್ಚಿಮ ದಿಕ್ಕಿನ ಆಶ್ರಯದಲ್ಲಿ ವಾಸಿಸುವ ಋಷಿ (ಅನು 165/42).

**ದೀರ್ಘಪ್ರಜ್ಞ** – ಒಬ್ಬ ಕ್ಷತ್ರಿಯ ರಾಜ. ಈತ ವೃಷಪರ್ವನೆಂಬ ಪ್ರಸಿದ್ಧ ದೈತ್ಯನ ಅಂಶದಿಂದ ಪ್ರಕಟಗೊಂಡವನಾಗಿದ್ದನು (ಆದಿ 67/16). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವುದು ನಿಶ್ಚಿತವಾಗಿತ್ತು (ಉದ್ಯೋಗ 4/12).

**ದೀರ್ಘಬಾಹು** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/105). ಭೀಮಸೇನನಿಂದ ಈತನ ವಧೆ (ಭೀಷ್ಮ 96/26).

**ದೀರ್ಘಯಜ್ಞ** – ಅಯೋಧ್ಯೆಯ ಒಬ್ಬ ರಾಜ. ಇವನನ್ನು ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನನು ಸೌಹಾರ್ದವರ್ತನೆಯಿಂದಲೇ ತನ್ನ ವಶಮಾಡಿಕೊಂಡನು (ಸಭಾ 30/2).

**ದೀರ್ಘರೋಮಾ** – (ದೀರ್ಘಲೋಚನ) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/13). ಭೀಮಸೇನನಿಂದ ಇವನ ವಧೆ (ದ್ರೋಣ 127/60).

**ದೀರ್ಘಲೋಚನ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/104). ಭೀಮಸೇನನಿಂದ ಇವನ ವಧೆ (ಭೀಷ್ಮ 96/26–27).
(2) (ದೀರ್ಘರೋಮಾ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/13). ಭೀಮಸೇನನಿಂದ ಇವನ ವಧೆ (ದ್ರೋಣ 127/60).

**ದೀರ್ಘಸತ್ರ** – ಒಂದು ತೀರ್ಥ. ಇಲ್ಲಿಗೆ ಯಾತ್ರೆ ಮಾಡುವುದರಿಂದಲೇ ಮನುಷ್ಯ ರಾಜಸೂಯ ಮತ್ತು ಅಶ್ವಮೇಧ ಯಜ್ಞಗಳಿಗೆ ಸಮಾನ ಫಲವನ್ನು ಪಡೆಯುತ್ತಾನೆ (ವನ 82/108–110).

**ದೀರ್ಘಾಯು** – ಕಲಿಂಗ ರಾಜ ಶ್ರುತಾಯುವಿನ ಸಹೋದರ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ದ್ರೋಣ 94/29).

**ದುಃಶಲ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/93). ಭೀಮಸೇನನಿಂದ ಇವನ ಮರಣ (ದ್ರೋಣ 129/39).

**ದುಃಶಲಾ** – ದೃತರಾಷ್ಟ್ರ ಮತ್ತು ಗಾಂಧಾರಿಯ ಪುತ್ರಿ, ದುರ್ಯೋಧನಾದಿ ನೂರು ಸಹೋದರರ ಸಹೋದರಿ (ಆದಿ 67/109). ಇವಳ ಜನ್ಮದ ಕಥೆ (ಆದಿ 115 ಅಧ್ಯಾಯ). ತಂದೆಯ ಮೂಲಕ ಜಯದ್ರಥನೊಂದಿಗೆ ಈಕೆಯ ವಿವಾಹ (ಆದಿ 116/18). ದುಃಶಲೆಯನ್ನು ಗಮನಿಸಿ, ಯುಧಿಷ್ಠಿರನು ದ್ರೌಪದಿ ಅಪಹಾರದ ಸನ್ನಿವೇಶದಲ್ಲಿ, ಜಯದ್ರಥನನ್ನು ವಧಿಸದಂತೆ ಸಹೋದರರಿಗೆ ಆಜ್ಞೆ ಕೊಟ್ಟಿದ್ದನು (ವನ 271/43). ಅಶ್ವಮೇಧದ ಕುದುರೆಯ ರಕ್ಷಣೆಗಾಗಿ, ತ್ರಿಗರ್ತದೇಶಕ್ಕೆ ಹೋಗಿದ್ದ ಅರ್ಜುನನ ಮೂಲಕ, ತ್ರಿಗರ್ತವೀರರು ಕಷ್ಟಕ್ಕೊಳಗಾದುದನ್ನು ನೋಡಿ, ಯುದ್ಧವನ್ನು ನಿಲ್ಲಿಸುವಂತೆ ಮಾಡಲು, ದುಃಶಲೆ ತನ್ನ ಪೌತ್ರ ಶಿಶು ಸುರಥಕುಮಾರನನ್ನು ತೆಗೆದುಕೊಂಡು, ರಣಭೂಮಿಗೆ ಬಂದುದು ಮತ್ತು ಅರ್ಜುನನು ವಿಚಾರಿಸಿದಾಗ ಆಕೆ ಸುರಥನ ಮರಣದ ಪರಿಸ್ಥಿತಿಯನ್ನು ಹೇಳಿದುದು; ವಿಲಪಿಸಿದುದು, ಅರ್ಜುನನೊಡನೆ ಶಾಂತಿ ಮತ್ತು ಕೃಪಾಯಾಚನೆ ಮಾಡಿದುದು (ಆಶ್ವ 78/22–41). ಯುಧಿಷ್ಠಿರನು ದುಃಶಲೆಯ ಸಂತೋಷಕ್ಕಾಗಿ ಆಕೆಯ ಬಾಲಕ ಪೌತ್ರನನ್ನು ಸಿಂಧು ರಾಜ್ಯಕ್ಕೆ ಅಭಿಷಿಕ್ತನಾಗಿ ಮಾಡಿದುದು (ಆಶ್ವ 89/35).

**ದುಃಶಾಸನ** – ಧೃತರಾಷ್ಟ್ರನ ಒಬ್ಬ ಮಹಾರಥಿ ಪುತ್ರ (ಆದಿ 63/119). ಇವನು ಪುಲಸ್ತ್ಯಕುಲದ ರಾಕ್ಷಸನ ಅಂಶದಿಂದ ಹುಟ್ಟಿದ್ದನು (ಆದಿ 67/89–90, 93, ಆದಿ 116/2). ಧೃತರಾಷ್ಟ್ರನ ಪ್ರಧಾನ ನಾಲ್ಕು ಪುತ್ರರಲ್ಲಿ ಈತನಿಗೆ ದ್ವಿತೀಯ ಸ್ಥಾನ ಪ್ರಾಪ್ತವಾಗಿತ್ತು (ಆದಿ 95/57). ಈತ ಸಹೋದರರೊಂದಿಗೆ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/1). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಇವನು ಭೋಜನದ ಮೇಲ್ವಿಚಾರಣೆ ಮತ್ತು ಬಡಿಸುವ ವ್ಯವಸ್ಥೆಗೆ ನಿಯುಕ್ತನಾಗಿದ್ದನು (ಸಭಾ 35/5). ಇವನು ದ್ರೌಪದಿಯ ಕೇಶವನ್ನು ಹಿಡಿದು, ಬಲಾತ್ಕಾರವಾಗಿ ಆಕೆಯನ್ನು ಸಭಾಭವನಕ್ಕೆ ತಂದುದ್ದು (ಸಭಾ 67/31). ಇವನಿಂದ ದ್ರೌಪದಿಯ ವಸ್ತ್ರಾಪಹಾರ (ಸಭಾ 68/40). ದ್ರೌಪದಿಯ ವಸ್ತ್ರವನ್ನೆಳೆಯುತ್ತಿರುವಾಗ ರಾಜರೆಲ್ಲರಿಂದ ಈತನ ಮೇಲೆ ಧಿಕ್ಕಾರದ ಸುರಿಮಳೆ (ಸಭಾ 68/56). ಇವನಿಂದ ಪಾಂಡವರ ಪರಿಹಾಸ (77/3–14). ದ್ವೈತವನದಲ್ಲಿ ಗಂಧರ್ವರಿಂದ ಸೆರೆಹಿಡಿಯಲ್ಪಟ್ಟದ್ದು (ವನ 242/7). ದುರ್ಯೋಧನನು ಇವನಿಗೆ ರಾಜನಾಗುವಂತೆ ಆದೇಶಿಸಿದಾಗ, ಈತ ಅಸ್ವೀಕಾರ ಮಾಡುತ್ತಾ ಸೋದರನ ಎರಡೂ ಕಾಲುಗಳನ್ನು ಹಿಡಕೊಂಡು ಅತ್ತದ್ದು (ವನ 249/29–35). ದುರ್ಯೋಧನನ ವೈಷ್ಣವ ಯಜ್ಞಕ್ಕೆ ಬರುವಂತೆ ಪಾಂಡವರಿಗೆ ಆಮಂತ್ರಣ ಕಳುಹಿಸಿದುದು (ವನ 256/8). ಗುಪ್ತಚರರನ್ನು ಕಳುಹಿಸಿ, ಪುನಃ ಪಾಂಡವರನ್ನು ಹುಡುಕಿ ಹಿಡಿಯಲು ಸಲಹೆ ನೀಡಿದುದು (ವಿರಾಟ 26/14–18). ವಿರಾಟನಗರದ ಸಮೀಪ ಅರ್ಜುನನೊಂದಿಗೆ ಯುದ್ಧ ಮತ್ತು ಪರಾಜಿತನಾಗಿ ಓಡಿದುದು (ವಿರಾಟ 61/36–40). ಕೌರವ ಸಭೆಯಲ್ಲಿ ತಾನು, ಕೌರವ, ಕರ್ಣ ಬಂಧಿಸಲ್ಪಡುವ

ಸಂಭಾವನೆಯನ್ನು ಈತ ದುರ್ಯೋಧನನೊಡನೆ ಹೇಳಿದುದು (ಉದ್ಯೋಗ 128/23–24). ಪ್ರಥಮ ದಿನದ ಸಂಗ್ರಾಮದಲ್ಲಿ ನಕುಲನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/22–24). ಅರ್ಜುನನೊಂದಿಗೆ ದ್ವಂದ್ವಯುದ್ಧ ಮತ್ತು ಆತನಿಂದ ಪರಾಜಿತನಾದುದು (ಭೀಷ್ಮ 110/28–46, ಭೀಷ್ಮ 111/57–58). ಅರ್ಜುನನೊಂದಿಗೆ ಯುದ್ಧದಲ್ಲಿ ತನ್ನ ಘೋರ ಪರಾಕ್ರಮ ತೋರಿಸಿದುದು (ಭೀಷ್ಮ 117/12–19). ದುರ್ಯೋಧನನೊಡನೆ ಅಭಿಮನ್ಯುವನ್ನು ಕೊಲ್ಲುವ ಪ್ರತಿಜ್ಞೆ ಮಾಡಿ, ಯುದ್ಧ ಪ್ರಾರಂಭಿಸಿದುದು (ದ್ರೋಣ 39/24–31). ಅಭಿಮನ್ಯುವಿನಿಂದ ಈತ ಮೂರ್ಛಿತನಾದುದು (ದ್ರೋಣ 40/13–14). ಅರ್ಜುನನೊಂದಿಗೆ ಯುದ್ಧಮಾಡಿ, ಅವನಿಂದ ಪರಾಜಿತನಾಗಿ ಓಡಿದುದು (ದ್ರೋಣ 90 ಅಧ್ಯಾಯ). ಸಾತ್ಯಕಿಯೊಂದಿಗೆ ಈತನ ಯುದ್ಧ (ದ್ರೋಣ 96/14–17). ಸಾತ್ಯಕಿಯಿಂದ ಪರಾಜಿತನಾಗಿ ಸೇನೆಯೊಂದಿಗೆ ಈತನ ಪಲಾಯನ (ದ್ರೋಣ 121/29–46). ಸಾತ್ಯಕಿಯಿಂದ ಇವನ ಪರಾಜಯ (ದ್ರೋಣ 123/31–34). ಇವನಿಂದ ಪ್ರತಿವಿಂಧ್ಯನ ಪರಾಜಯ (ದ್ರೋಣ 168/43). ಸಹದೇವನೊಂದಿಗೆ ಈತನ ಯುದ್ಧ ಮತ್ತು ಆತನಿಂದ ಪರಾಜಯ (ದ್ರೋಣ 188/2–9). ಧೃಷ್ಟದ್ಯುಮ್ನನಿಂದ ಈತನ ಪರಾಜಯ (ದ್ರೋಣ 189/5). ದ್ರೋಣಾಚಾರ್ಯನು ಕೊಲ್ಲಲ್ಪಟ್ಟಾಗ ಇವನು ಯುದ್ಧರಂಗದಿಂದ ಓಡಿದುದು (ದ್ರೋಣ 193/15). ಸಹದೇವನಿಂದ ಪರಾಜಿತನಾದುದು (ಕರ್ಣ 23/18–20). ಧೃಷ್ಟದ್ಯುಮ್ನನನ್ನು ವಶಕ್ಕೆ ತೆಗೆದುಕೊಂಡದ್ದು (ಕರ್ಣ 61/33). ಭೀಮಸೇನನೊಂದಿಗೆ ಈತನ ಯುದ್ಧ ಮತ್ತು ಪಾಂಡವರ ಮೇಲೆ ಆಕ್ಷೇಪ (ಕರ್ಣ 82/32). ಕ್ರೋಧೋದ್ದೀಪಿತನಾದ ಭೀಮಸೇನ ಮತ್ತು ದುಃಶಾಸನರ ಘೋರ ಯುದ್ಧ (ಕರ್ಣ 82/33 ರಿಂದ ಕರ್ಣ 83/7ರ ವರೆಗೆ). ಭೀಮಸೇನನ ಗದಾಪ್ರಹಾರದಿಂದ ನೆಲದ ಮೇಲೆ ಬಿದ್ದು ದುಃಶಾಸನನು ಚಡಪಡಿಸಿದುದು; ಭೀಮಸೇನನು ಇವನ ಎದೆಯ ಮೇಲೆ ಹತ್ತಿ ಹೀಗೆ ಕೇಳಿದುದು. 'ನೀನು ಯಾವ ಕೈಯಿಂದ ದ್ರೌಪದಿಯ ಕೇಶಗಳನ್ನು ಎಳೆದದ್ದು?' ದುಃಶಾಸನನು ರೋಷ ಮತ್ತು ಅಭಿಮಾನದಿಂದ, ತನ್ನ ಆನೆಯ ಸೊಂಡಿಲು–ದಂಡಗಳಿಗೆ ಸಮಾನವಾದ, ಕೊಬ್ಬಿದ ಬಲಭುಜವನ್ನು ತೋರಿಸಿ ಹೀಗೆ ಉತ್ತರಿಸಿದುದು 'ನಾನು ಇದೇ ಕೈಯಿಂದ ದ್ರೌಪದಿಯ ಕೇಶವನ್ನೆಳೆದಿದ್ದೆ' ಭೀಮಸೇನನು ಈತನ ಆ ಭುಜವನ್ನು ಕಿತ್ತು, ಅದರಿಂದಲೇ ಈತನನ್ನು ಹೊಡೆದದ್ದು, ಮತ್ತು ಈತನ ಎದೆಯನ್ನು ಸೀಳಿ, ಇವನ ಬಿಸಿ ರಕ್ತವನ್ನು ಕುಡಿದದ್ದು (ಕರ್ಣ 83/8–29). ದುಃಶಾಸನನು ಇರುತ್ತಿದ್ದ ಸುಂದರ ಅರಮನೆ ವೀರವರ ಅರ್ಜುನನಿಗೆ ವಾಸಕ್ಕಾಗಿ ಕೊಡಲ್ಪಟ್ಟಿತ್ತು (ಶಾಂತಿ 44/8–9). ವ್ಯಾಸರು ಆವಾಹಿಸಿದಾಗ ಈತನೂ ಗಂಗಾಜಲದಲ್ಲಿ ಪ್ರಕಟನಾದುದು (ಆಶ್ರಮ 32/9). ಮರಣಾನಂತರ ಇವನಿಗೆ ಸ್ವರ್ಗಲೋಕ ಪ್ರಾಪ್ತವಾಯಿತು (ಸ್ವರ್ಗಾ 5/21–22). ಮಹಾಭಾರತದಲ್ಲಿ ಬಂದಿರುವ ದುಃಶಾಸನ ಹೆಸರುಗಳು – ಭಾರತ, ಭರತಶ್ರೇಷ್ಠ, ಭಾರತಾಪಸದ, ಧೃತರಾಷ್ಟ್ರಜ, ಕೌರವ, ಕೌರವ್ಯ ಮತ್ತು ಕುರುಶಾರ್ದೂಲ ಇತ್ಯಾದಿ.

**ದುಃಸಹ** – ಧೃತರಾಷ್ಟ್ರನ ಒಬ್ಬ ಮಹಾರಥಿ ಪುತ್ರ (ಆದಿ 63/119, ಆದಿ 67/93, ಆದಿ 116/2). ಇವನು ಪುಲಸ್ತ್ಯಕುಲದ ರಾಕ್ಷಸನ ಅಂಶದಿಂದ ಹುಟ್ಟಿದ್ದನು (ಆದಿ 67/89). ಅರ್ಜುನನೊಂದಿಗೆ ಈತನ ಯುದ್ಧ ಮತ್ತು ಸೋತು ಓಡಿದುದು (ವಿರಾಟ 61/43–45). ಈತ ಸಾತ್ಯಕಿಯೊಂದಿಗೆ ಯುದ್ಧಮಾಡಿ ಗಾಯಗೊಂಡದ್ದು (ದ್ರೋಣ 116/2–7). ಭೀಮಸೇನನಿಂದ ಇವನ ವಧೆ (ದ್ರೋಣ 135/36).

**ದುನ್ದುಭಿ** – ಒಬ್ಬ ರಾಕ್ಷಸ. ಇವನಿಗೆ ಭಗವಾನ್ ಶಂಕರನು ವರಕೊಟ್ಟನು ಮತ್ತು ಆತನೇ ಇವನ ವಿನಾಶಕ್ಕೂ ಸಮರ್ಥನಾದನು (ಅನು 14/214).

**ದುನ್ದುಭಿಸ್ವನ** – ಕುಶದ್ವೀಪದಲ್ಲಿ ಮುನಿ ದೇಶದ ಅನಂತರದ ದೇಶ (ಭೀಷ್ಮ 2/13).

**ದುನ್ದುಭೀ** – ಒಬ್ಬ ಗಂಧರ್ವ ಸ್ತ್ರೀ. ಈಕೆ ಮಂಥರೆ ಎಂಬ ಕುಬ್ಜದಾಸಿಯಾಗಿ ಪ್ರಸಿದ್ಧಳು. ಬ್ರಹ್ಮನು ಇವಳನ್ನು ದೇವತೆಗಳ ಕಾರ್ಯಸಿದ್ಧಿಗಾಗಿ ಭೂಲೋಕಕ್ಕೆ ಹೋಗಲು ಆದೇಶವಿತ್ತಿದ್ದನು (ವನ 276/9–10).

**ದುರಾಧನ** – (ದುರಾಧರ ಅಥವಾ ದುರ್ಧರ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ

67/101). ಭೀಮಸೇನನಿಂದ ಈತನ ವಧೆ. (ದ್ರೋಣ 135/36).

**ದುರಾಧರ** (ದುರ್ಧರ ಅಥವಾ ದುರಾಧನ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/10). ಭೀಮಸೇನನಿಂದ ಇವನ ವಧೆ (ದ್ರೋಣ 135/36).

**ದುರ್ಗ** – ಕೋಟೆ. ಆರು ರೀತಿಯ ದುರ್ಗ ಗಳಿವೆ. ಮರುದುರ್ಗ, ಜಲದುರ್ಗ, ಪೃಥ್ವೀ ದುರ್ಗ, ವನದುರ್ಗ, ಪರ್ವತದುರ್ಗ ಮತ್ತು ಮನುಷ್ಯದುರ್ಗ (ಸೈನಿಕ ಶಕ್ತಿಯಿಂದ ಕಟ್ಟಲ್ಪಡು ವುದು). ಇವುಗಳಲ್ಲಿ ಮನುಷ್ಯದುರ್ಗ ಪ್ರಧಾನ ವಾದುದು (ಶಾಂತಿ 56/35).

**ದುರ್ಗಶೈಲ** – ಶಾಕ ದ್ವೀಪದ ಒಂದು ಪರ್ವತ (ಭೀಷ್ಮ 11/23).

**ದುರ್ಗಾ** – (1) ತ್ರಿಭುವನದ ಅಧೀಶ್ವರೀ ದೇವಿ ದುರ್ಗೆ. ಮಹಾರಾಜ ಯುಧಿಷ್ಠಿರನು ವಿರಾಟ ನಗರವನ್ನು ಪ್ರವೇಶಿಸುವಾಗ ಜಗಜ್ಜನನಿಯಾದ ದುರ್ಗೆಯ ಸ್ತುತಿ ಮಾಡಿದನು ಮತ್ತು ದೇವಿ ಪ್ರತ್ಯಕ್ಷದರ್ಶನವನ್ನಿತ್ತು ಆತನಿಗೆ ವರವನ್ನಿತ್ತಳು (ವಿರಾಟ 6 ಅಧ್ಯಾಯ). ಶ್ರೀಕೃಷ್ಣನ ಪ್ರೇರಣೆ ಯಿಂದ ಅರ್ಜುನನು ಮಹಾಭಾರತ ಯುದ್ಧದ ಪ್ರಾರಂಭದಲ್ಲಿ ದುರ್ಗಾದೇವಿಯ ಸ್ತುತಿ ಮಾಡಿ ದನು. ದೇವಿ ಅಂತರಿಕ್ಷದಲ್ಲಿದ್ದುಕೊಂಡು ಅವನು ವಿಜಯಿಯಾಗುವಂತೆ ವರ ಕೊಟ್ಟಳು (ಭೀಷ್ಮ 23/4–19). ಅರ್ಜುನ ಮಾಡಿದ ದುರ್ಗಾ ಸ್ತೋತ್ರದ ಮಹಿಮೆ (ಭೀಷ್ಮ 23/22–25).

(2) ಒಂದು ಪ್ರಮುಖ ನದಿ. ಅದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/33).

**ದುರ್ಗಾಲ** – ಒಂದು ಭಾರತೀಯ ಜನಪದ (ಭೀಷ್ಮ 9/52).

**ದುರ್ಜಯ** – (1) ಮಹರ್ಷಿ ಕಶ್ಯಪನಿಂದ ದನುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ದಾನವ (ಆದಿ 65/23).

(2) (ದುಷ್ಪರಾಜಯ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/9). (ನೋಡಿರಿ– ದುಷ್ಪರಾಜಯ).

(3) ಒಬ್ಬ ರಾಜ. ಇವನಿಗೆ ಪಾಂಡವಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸಲು ದ್ರುಪದನು ಸಲಹೆ ನೀಡಿದ್ದನು (ಉದ್ಯೋಗ 4/16).

(4) ಇಕ್ಷ್ವಾಕುವಂಶದ ಸುವೀರನ ಮಗ (ಅನು 2/11).

(5) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/96).

**ದುರ್ಜಯಾ** – ದುರ್ಜಯವಾದ ಮಣಿಮತಿ ನಗರ. ಇದನ್ನು ದುರ್ಜಯಾ ಎಂದೂ ಹೇಳು ತ್ತಾರೆ (ವನ 9/1). (ಕೆಲವು ಆಧುನಿಕ ಸಮೀ ಕ್ಷಕರು 'ಇಲೋರಾಗುಹೆ'(ಎಲ್ಲೋರ ಗುಹೆ?) ಯನ್ನು ದುರ್ಜಯಾ ಎನ್ನುತ್ತಾರೆ. ಈ ಸ್ಥಳ ನಿಜಾಮ ರಾಜ್ಯದಲ್ಲಿ ದೌಲತಾಬಾದಿನಿಂದ ಏಳು ಮೈಲು ಮತ್ತು ನಂದಗ್ರಾಮದಿಂದ ನಲುವತ್ತು ಮೈಲು ದೂರದಲ್ಲಿದೆ.).

**ದುರ್ಧರ್ಷ** (ದುರ್ಮದ). – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/94; ಆದಿ 116/3). ಭೀಮಸೇನನಿಂದ ಈತನ ವಧೆ (ದ್ರೋಣ 155/40).

**ದುರ್ಮದ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/96; ಆದಿ 116/5). ಭೀಮ ಸೇನನಿಂದ ಇವನ ಮರಣ (ದ್ರೋಣ 135/36).

**ದುರ್ಮರ್ಷಣ** – ಧೃತರಾಷ್ಟ್ರನ ಒಬ್ಬ ಮಹಾರಥಿ ಪುತ್ರ (ಆದಿ 63/119; ಆದಿ 67/95; ಆದಿ 116/3). ಭೀಮಸೇನನೊಂದಿಗೆ ಈತನ ಯುದ್ಧ (ಭೀಷ್ಮ 113 ಅಧ್ಯಾಯ; ದ್ರೋಣ 25/5–7). ಅರ್ಜುನನೊಂದಿಗೆ ಯುದ್ಧಮಾಡುವ ಉತ್ಸಾಹ ಪ್ರಕಟಿಸಿದುದು (ದ್ರೋಣ 88/11–13). ಅರ್ಜುನ ನಿಂದ ಇವನ ಗಜಸೇನೆಯ ಸಂಹಾರ ಮತ್ತು ಪಲಾಯನ (ದ್ರೋಣ 89 ಅಧ್ಯಾಯ). ಸಾತ್ಯಕಿಯೊಂದಿಗೆ ಈತನ ಯುದ್ಧ ಮತ್ತು ಆತ ನಿಂದ ಗಾಯಗೊಂಡದ್ದು (ದ್ರೋಣ 116/6–8). ಭೀಮಸೇನನಿಂದ ಇವನ ವಧೆ (ದ್ರೋಣ 135/36). ದುರ್ಮರ್ಷಣನ ಸುಂದರವಾದ ಅರಮನೆ ಮಾದ್ರೀಕುಮಾರ ನಕುಲನ ವಾಸಕ್ಕೆ ಕೊಡಲ್ಪಟ್ಟಿತು (ಶಾಂತಿ 44/10–11).

**ದುರ್ಮುಖ** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/93; ಆದಿ 116/3). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/1). ಇವನು ದ್ವೈತವನದಲ್ಲಿ ಗಂಧರ್ವರಿಂದ ಸೆರೆಹಿಡಿಯಲ್ಪಟ್ಟನು (ವನ

242/12). ಪ್ರಥಮ ದಿನದ ಸಂಗ್ರಾಮದಲ್ಲಿ ಸಹ ದೇವನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/25-27). ಅಭಿಮನ್ಯುವಿನಿಂದ ಇವನ ಸಾರಥಿಯ ವಧೆ (ಭೀಷ್ಮ 47/12). ಈತನಿಂದ ಶ್ರುತಕರ್ಮಾನ ಪರಾಜಯ (ಭೀಷ್ಮ 79/35-38). ಅಭಿಮನ್ಯುವಿನಿಂದ ಪರಾಜಿತನಾದುದು (ಭೀಷ್ಮ 84/42). ಘಟೋತ್ಕಚನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 110/13-14; ಭೀಷ್ಮ 111/37-39). ಧೃಷ್ಟದ್ಯುಮ್ನನೊಂದಿಗೆ ಯುದ್ಧ (ದ್ರೋಣ 20/26-29). ಪುರುಜಿತನೊಂದಿಗೆ ಯುದ್ಧ (ದ್ರೋಣ 25/40-41). ಸಹದೇವನೊಂದಿಗೆ ಯುದ್ಧ (ದ್ರೋಣ 106/13). ಸಹದೇವನಿಂದ ಪರಾಜಿತನಾದುದು (ದ್ರೋಣ 107/25). ಭೀಮ ಸೇನನಿಂದ ಇವನ ವಧೆ (ದ್ರೋಣ 134/20-21). ಇವನಿಂದ ಪರ್ವತೀಯ ರಾಜ ಜನ ಮೇಜಯನ ವಧೆಯ ವರ್ಣನೆ (ಕರ್ಣ 6/19-20). ಇವನ ಸುಂದರ ಭವನ ಸಹದೇವನಿಗೆ ವಾಸಕ್ಕೆ ಕೊಡಲ್ಪಟ್ಟಿತ್ತು (ಶಾಂತಿ 44/12-13).

(2) (ದುರ್ಮರ್ಷಣ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/95). ದುರ್ಮರ್ಷಣ ನೆಂಬ ಹೆಸರಿನಲ್ಲಿ ಭೀಮಸೇನನಿಂದ ಇವನ ವಧೆ (ಶಲ್ಯ 26/9-10).

(3) ಒಬ್ಬ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/21).

(4) ಒಬ್ಬ ಅಸುರ. ಇವನು ವರುಣ ಸಭೆ ಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತಾನೆ (ಸಭಾ 9/13).

(5) ಪಾಂಡವ ಪಕ್ಷದ ಒಬ್ಬ ಯೋಧ. ಈತ ಕರ್ಣನ ಕೈಗೆ ಸಿಕ್ಕಿಬಿದ್ದನು (ಕರ್ಣ 73/104)

(6) ಒಬ್ಬ ಸರ್ಪ. ಸ್ವಧಾಮಕ್ಕೆ ಹೋಗುತ್ತಿದ್ದಾಗ ಬಲರಾಮನ ಸ್ವಾಗತಕ್ಕಾಗಿ ಈತ ಪ್ರಭಾಸಕ್ಷೇತ್ರಕ್ಕೆ ಬಂದಿದ್ದನು (ಮೌಸಲ 4/16).

**ದುರ್ಯೋಧನ** - (1) ಧೃತರಾಷ್ಟ್ರ ಮತ್ತು ಗಾಂಧಾರಿಯ ನೂರು ಪುತ್ರರಲ್ಲಿ ಒಬ್ಬ . ಇವನು ಎಲ್ಲರಿಗಿಂತ ದೊಡ್ಡವನು. ಇವನು ತನ್ನ ಹನ್ನೊಂದು ಮಹಾರಥಿ ಸಹೋದರರಲ್ಲಿ ಪ್ರಧಾನ ನಾಗಿದ್ದನು (ಆದಿ 63/118-120). ಈತ ಕುರು ಕುಲವನ್ನು ಕಲಂಕಗೊಳಿಸಿದವನು, ದುರ್ಬುದ್ಧಿ ಮತ್ತು ಧೂರ್ತವಿಚಾರವುಳ್ಳವನಾಗಿದ್ದನು. ಇವನು ಕಲಿಯ ಅಂಶದಿಂದ ಹುಟ್ಟಿದ್ದನು (ಆದಿ 67/87). ದುರ್ಯೋಧನನಿಂದ ಪ್ರಜ್ವಲಿತವಾದ ವೈರದ ಭಯಂಕರ ಬೆಂಕಿ, ಅಸಂಖ್ಯ ಪ್ರಾಣಿಗಳ ವಿನಾಶಕಾರಣವಾಯಿತು. ಈತನ ನೂರು ಸಹೋದರರ ಜನನ ಪುಲಸ್ತ್ಯಕುಲದ ರಾಕ್ಷಸರ ಅಂಶದಿಂದಾಗಿತ್ತು (ಆದಿ 67/88-89). ಇವನ ಹುಟ್ಟಿನ ಕಥೆ (ಆದಿ 114/27-29). ಇವನ ಜನ್ಮಕಾಲದಲ್ಲಿ ಕಾಣಿಸಿದ ಅಮಂಗಳಕರವಾದ ಅಪಶಕುನ (ಆದಿ 114/9-25). ಇವನ ಜನ್ಮ ಕಾಲದ ಅಮಂಗಲಕರವಾದ ಉಪದ್ರವಗಳನ್ನು ನೋಡಿ, ಈತ ಕುಲಸಂಹಾರಕನೆಂದು ಹೇಳುತ್ತಾ, ಇವನನ್ನು ತ್ಯಾಗಮಾಡಲು ಧೃತರಾಷ್ಟ್ರನಿಗೆ ವಿದುರನ ಸಲಹೆ (ಆದಿ 114/34-39). ಭೀಮ ಸೇನನ ಜನ್ಮವಾದ ದಿನವೇ ದುರ್ಯೋಧನನ ಜನ್ಮವೂ ಆಯಿತು (ಆದಿ 122/19). ಇವನಿಂದ ಗಂಗಾ ತಟದಲ್ಲಿರುವ ಪ್ರಮಾಣ ಕೋಟಿ ತೀರ್ಥದಲ್ಲಿ ಜಲಕ್ರೀಡೆಯ ಏರ್ಪಾಡು, ವಿಷ ತಿನ್ನಿಸಿ, ಸ್ಮೃತಿ ತಪ್ಪಿದ ಭೀಮಸೇನನನ್ನು ನೀರಿಗೆ ನೂಕಿದುದು (ಆದಿ 127/27-54). ಭೀಮಸೇನನ ಸಾರಥಿಯ ಗಂಟಲನ್ನೊತ್ತಿ ಈತ ಕೊಂದು ಹಾಕಿದುದು (ಆದಿ 128/36). ಭೀಮಸೇನನ ಭೋಜನದಲ್ಲಿ ಪುನಃ ಕಾಲಕೂಟವಿಷ ಹಾಕಿಸುವ ನೀಚಕೆಲಸ (ಆದಿ 128/37). ಗದಾಯುದ್ಧದಲ್ಲಿ ಇವನ ಪ್ರಾವೀಣ್ಯ (ಆದಿ 131/61). ಯುದ್ಧ ರಂಗದಲ್ಲಿ ಇವನು ಅಸ್ತ್ರಕೌಶಲ ತೋರಿಸಿದುದು (ಆದಿ 133/32-35). ಭೀಮಸೇನನೊಂದಿಗೆ ಗದಾ ಯುದ್ಧ ಮಾಡುತ್ತಿದ್ದ ಇವನನ್ನು ಅಶ್ವತ್ಥಾಮನು ತಡೆದುದು (ಆದಿ 134/5). ಇವನಿಂದ ಕರ್ಣನಿಗೆ ರಾಜ್ಯಾಭಿಷೇಕ (ಆದಿ 135/38). ಕರ್ಣನೊಂದಿಗೆ ಅಚಲ ಸ್ನೇಹಕ್ಕೆ ಈತನ ಕೋರಿಕೆ (ಆದಿ 135/40). ಕರ್ಣನ ಪಕ್ಷವಹಿಸಿ, ಭೀಮಸೇನ ಮತ್ತು ಪಾಂಡವರ ಮೇಲೆ ಈತನ ಆಕ್ಷೇಪ (ಆದಿ 136/10-18). ದ್ರುಪದನಿಂದ ಈತನ ಪರಾಜಯ (ಆದಿ 137/22). ಯುಧಿಷ್ಠಿರನ ಮೇಲೆ ಪ್ರಜಾನು ರಾಗ ನೋಡಿ ಈತನ ಚಿಂತೆ (ಆದಿ 140/29). ಪಾಂಡವರನ್ನು ವಾರಣಾವತಕ್ಕೆ ಕಳುಹಿಸುವ ಕುರಿತು ದುರ್ಯೋಧನ ಮತ್ತು ಧೃತರಾಷ್ಟ್ರರ ಸಂವಾದ (ಆದಿ 141/3-24). ವಾರಣಾವತದಲ್ಲಿ ಲಾಕ್ಷಾಗೃಹ ಮಾಡಿಸಲು ಮತ್ತು ಪಾಂಡವರನ್ನು

ಸುಡಲು ಈತ ಪುರೋಚನನಿಗೆ ಆದೇಶ ನೀಡಿದುದು (ಆದಿ 143/2–17). ದ್ರೌಪದಿಯ ಸ್ವಯಂವರದಲ್ಲಿ ಇವನು ಕರ್ಣ ಮತ್ತು ಸಹೋದರರ ಸಂಗಡ ಉಪಸ್ಥಿತನಾದುದು (ಆದಿ 185/104). ಲಕ್ಷ್ಯವೇಧಕ್ಕಾಗಿ ಧನುಸ್ಸಿಗೆ ಸಿಂಜಿನಿಯನ್ನು ಏರಿಸುವಾಗ, ಇವನು ಆಘಾತದಿಂದ ಅಂಗಾತ ಬಿದ್ದುದು ಮತ್ತು ಲಜ್ಜಿತನಾಗಿ ತನ್ನ ಸ್ಥಾನಕ್ಕೆ ಹಿಂತಿರುಗಿದುದು (ಆದಿ 186/28ರ ಅನಂತರ). ಪಾಂಡವರ ನಾಶಕ್ಕಾಗಿ ಈತನಿಂದ ಧೃತರಾಷ್ಟ್ರನೊಡನೆ ವಿವಿಧ ಉಪಾಯಗಳ ವಿವರಣೆ (ಆದಿ 199/28–31; ಆದಿ 200/4–20). ಪಾಂಡವರಿಗೆ ಅರ್ಧರಾಜ್ಯ ಕೊಡಲು ಈತನಿಗೆ ಭೀಷ್ಮರ ಸಲಹೆ (ಆದಿ 202/5–19). ಈತ ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಸಹೋದರರ ಸಮೇತ ಬಂದದ್ದು (ಸಭಾ 34/6). ಯುಧಿಷ್ಠಿರನಿಗಾಗಿ ಬಂದ ಕಾಣಿಕೆ ಸಾಮಗ್ರಿಗಳನ್ನು ಸ್ವೀಕರಿಸಿದುದು ಮತ್ತು ಎಚ್ಚರಿಕೆಯಿಂದ ಇರಿಸಿದುದು (ಸಭಾ 35/9). ಎಲ್ಲರೂ ವಿದಾಯಹೊಂದಿದ ಮೇಲೂ ಯುಧಿಷ್ಠಿರನ ದಿವ್ಯಸಭೆಯಲ್ಲಿ ದುರ್ಯೋಧನ ಮತ್ತು ಶಕುನಿ ಸ್ವಲ್ಪ ಹೊತ್ತಿನವರೆಗೆ ಉಳಕೊಂಡದ್ದು (ಸಭಾ 45/38). ದುರ್ಯೋಧನನು ಮಯನಿರ್ಮಿತ ಸಭಾಭವನವನ್ನು ನೋಡಿದುದು ಮತ್ತು ಹೆಜ್ಜೆಹೆಜ್ಜೆಗೂ ಭ್ರಮಾಧೀನನಾಗಿ ಪರಿಹಾಸಕ್ಕೆ ಪಾತ್ರನಾದುದು. ಯುಧಿಷ್ಠಿರನ ವೈಭವ ನೋಡಿ ಇವನು ಯೋಚನಾಮಗ್ನನಾದುದು (ಸಭಾ 47 ಅಧ್ಯಾಯ). ಪಾಂಡವರ ಮೇಲೆ ಜಯಸಂಪಾದಿಸಲು ಶಕುನಿಯೊಡನೆ ಈತನ ಮಾತುಕತೆ (ಸಭಾ 48 ಅಧ್ಯಾಯ). ಈತ ಧೃತರಾಷ್ಟ್ರನೊಂದಿಗೆ ತನ್ನ ಚಿಂತೆಯ ಕಾರಣ ಹೇಳಿದುದು ಮತ್ತು ಜೂಜಾಡಲು ಆಗ್ರಹಪಡಿಸಿದುದು (ಸಭಾ 49/12–36, 42 ಸಭಾ 50 ಅಧ್ಯಾಯ). ರಾಜಸೂಯಾಧ್ವರದಲ್ಲಿ ಯುಧಿಷ್ಠಿರನಿಗೆ ವಿಭಿನ್ನ ದೇಶಗಳಿಂದ ಬಂದ ಕಪ್ಪಕಾಣಿಕೆಗಳನ್ನು ಇವನು ಧೃತರಾಷ್ಟ್ರನಿಗೆ ವರ್ಣಿಸಿದುದು (ಸಭಾ ಅಧ್ಯಾಯ 51 ರಿಂದ 52ರ ತನಕ). ಈತನಿಂದ ಯುಧಿಷ್ಠಿರನ ಅಭಿಷೇಕದ ಕುರಿತು ತಂದೆಗೆ ವರ್ಣನೆ (ಸಭಾ 53 ಅಧ್ಯಾಯ). ಇವನು ಧೃತರಾಷ್ಟ್ರನನ್ನು ಹುರಿದುಂಬಿಸಿದುದು (ಸಭಾ ಅಧ್ಯಾಯ 55ರಿಂದ 56ರ ತನಕ). ಜೂಜಿನ ಸಂದರ್ಭದಲ್ಲಿ ವಿದುರನಿಗೆ ಈತನಿಂದ ನಿಂದನೆ ಮತ್ತು ವಿದುರನು ಇವನಿಗೆ ಎಚ್ಚರಿಕೆ ನೀಡಿದುದು (ಸಭಾ 64 ಅಧ್ಯಾಯ). ದ್ರೌಪದಿಯನ್ನು ಹಿಡಿದು ಸಭಾಭವನಕ್ಕೆ ತರುವಂತೆ ಇವನು ವಿದುರನಿಗೆ ಆದೇಶಿಸಿದುದು (ಸಭಾ 66/1). ಇವನು ವಿದುರನನ್ನು ಪುನಃ ನಿಂದಿಸಿದುದು (ಸಭಾ 66/2–12). ದ್ರೌಪದಿಯನ್ನು ಸಭಾಭವಕ್ಕೆ ತರಲು ಪ್ರಾತಿಕಾಮಿಗೆ ಈತನ ಆದೇಶ (ಸಭಾ 67/2). ದ್ರೌಪದಿಯ ಕುರಿತು ಈತನಿಂದ ಮೋಸಕಪಟಯುಕ್ತ ಮಾತು (ಸಭಾ 70/3–6; ಸಭಾ 71/20). ಇವನಿಂದ ಅರ್ಜುನನ ಪರಾಕ್ರಮದ ವರ್ಣನೆ (ಸಭಾ 74/64 ನಂತರ). ಧೃತರಾಷ್ಟ್ರನೊಡನೆ ಮರುದ್ಯೂತಕ್ಕೆ ಇವನ ಆಗ್ರಹ (ಸಭಾ 74/6ರ ನಂತರ). ಧೃತರಾಷ್ಟ್ರನೊಡನೆ ಮರುದ್ಯೂತಕ್ಕೆ ಇವನ ಆಗ್ರಹ (ಸಭಾ 74/7–23). ಪುರವಾಸಿಗಳಿಂದ ಈತನ ನಿಂದೆ (ವನ 1/13–17). ವಿದುರ ಕಾಮ್ಯಕವನದಿಂದ ಹಿಂತಿರುಗಿ ಬಂದ ಮೇಲೆ ಇವನ ಚಿಂತೆ (ವನ 7/2–6). ಇವನಿಗೆ ಮೈತ್ರೇಯ ಋಷಿಯ ಶಾಪ (ವನ 10/34). ಇವನು ದ್ವೈತವನದ ಯಾತ್ರಾ ವಿಷಯವಾಗಿ ಕರ್ಣ ಶಕುನಿಗಳ ಆಲೋಚನೆಯನ್ನು ಸ್ವೀಕರಿಸಿದುದು (ವನ 238/2–16). ಘೋಷಯಾತ್ರೆಗೆ ಹೋದುದು (ವನ 239/23). ಗೋವುಗಳ ಆರೈಕೆ ಮಾಡಿದುದು. ಈತನ ಸೈನಿಕರಿಗೆ ಗಂಧರ್ವರೊಡನೆ ಸಂವಾದ (ವನ 240 ಅಧ್ಯಾಯ). ದುರ್ಯೋಧನಾದಿ ಕೌರವರಿಗೆ ಗಂಧರ್ವರೊಡನೆ ಯುದ್ಧ (ವನ 241 ಅಧ್ಯಾಯ). ಚಿತ್ರಸೇನಾದಿ ಗಂಧರ್ವರಿಂದ ದುರ್ಯೋಧನಾದಿಗಳ ಪರಾಜಯ ಮತ್ತು ಚಿತ್ರಸೇನನು ದುರ್ಯೋಧನನನ್ನು ಸೆರೆಹಿಡಿದುದು (ವನ 242/6). ಗಂಧರ್ವರ ಕೈಯಿಂದ ಬಿಡಿಸಲು ಪಾಂಡವರಿಗೆ ಈತನ ಕರೆ (ವನ 243/11). ಈತ ಕರ್ಣನಿಗೆ ತನ್ನ ಪರಾಜಯದ ಸುದ್ದಿ ತಿಳಿಸಿದುದು (ವನ 247 ಅಧ್ಯಾಯ). ಕರ್ಣನೊಡನೆ ತನ್ನ ಗ್ಲಾನಿಯ ವರ್ಣನೆ ಮಾಡುತ್ತಾ, ದುಃಶಾಸನನಿಗೆ ರಾಜನಾಗುವಂತೆ ಆದೇಶ (ವನ 249/1–27). ಇವನು ಆಮರಣ ಉಪವಾಸಕ್ಕಾಗಿ ಕುಳಿತುದು (ವನ 251/19–20). ಕೃತ್ಯೆಯ ಮೂಲಕ ಇವನು ರಸಾತಲಕ್ಕೆ

ತಲುಪಿಸಲ್ಪಟ್ಟ ಮೇಲೆ ಇವನು ಉಪವಾಸ ತ್ಯಜಿಸಿ, ಹಸ್ತಿನಾಪುರಕ್ಕೆ ಹೋದುದು (ವನ 252 ಅಧ್ಯಾಯ). ಇವನಿಂದ ವೈಷ್ಣವ ಯಜ್ಞದ ಪ್ರಾರಂಭ ಮತ್ತು ಸಮಾಪ್ತಿ (ವನ ಅಧ್ಯಾಯ 255 ರಿಂದ 256ರ ವರೆಗೆ). ಇವನು ಮಹರ್ಷಿ ದುರ್ವಾಸನನ್ನು ಸಂತೋಷಗೊಳಿಸಿ, ಯುಧಿಷ್ಠಿರನ ಆಶ್ರಮಕ್ಕೆ ಹೋಗುವಂತೆ ವರ ಕೇಳಿದುದು (ವನ 262/19–23). ಗುಪ್ತಚರರಿಂದ ಪಾಂಡವರ ಸುಳಿವು ದೊರಕದ ಕಾರಣ, ಮಂತ್ರಿಗಳೊಡನೆ ಇವನ ಸಮಾಲೋಚನೆ (ವಿರಾಟ 26/2–7). ಮತ್ಸ್ಯದೇಶದ ಮೇಲೆ ಆಕ್ರಮಣ ಮಾಡುವ ನಿಶ್ಚಯ (ವಿರಾಟ 29/14). ಮತ್ಸ್ಯ ದೇಶದ ಮೇಲೆ ಆಕ್ರಮಣ ಮಾಡಲು ದುಃಶಾಸನನಿಗೆ ಆದೇಶ ನೀಡಿದುದು (ವಿರಾಟ 30/20–24). ತನ್ನ ಸೈನಿಕರನ್ನು ಹುರಿದುಂಬಿಸುತ್ತಾ ಅರ್ಜುನ ನೊಡನೆ ಯುದ್ಧಮಾಡಲು ಈತನ ನಿಶ್ಚಯ (ವಿರಾಟ 47/2–19). ಕರ್ಣನ ಮಾತಿನಿಂದ ಕುಪಿತರಾದ ಆಚಾರ್ಯ ವರ್ಗದೊಡನೆ ಇವನು ಕ್ಷಮೆ ಯಾಚಿಸಿದುದು (ವಿರಾಟ 51/16). ಅರ್ಜುನನೊಂದಿಗೆ ಯುದ್ಧ ಮತ್ತು ಆತನಿಂದ ಸೋತು ಓಡುವುದು (ವಿರಾಟ 65 ಅಧ್ಯಾಯ). ಶ್ರೀಕೃಷ್ಣನಿಂದ ಸಹಾಯರೂಪದಲ್ಲಿ ನಾರಾಯಣೀ ಸೇನೆಯನ್ನು ಪಡೆದುದು (ಉದ್ಯೋಗ 7/ 23–25). ಇವನು ಬಲರಾಮನ ಬಳಿಗೆ ಸಹಾಯ ಕೇಳಲು ಹೋದುದು (ಉದ್ಯೋಗ 7/25). ಕೃತವರ್ಮನ ಬಳಿಗೆ ಸಹಾಯ ಕೇಳಲು ಹೋದುದು (ಉದ್ಯೋಗ 7/32). ಮಾರ್ಗದಲ್ಲಿ ಶಲ್ಯನ ಸತ್ಕಾರ ಮಾಡಿ, ಆತ ಪ್ರಸನ್ನನಾದಾಗ, ಆತ ತನ್ನ ಪಕ್ಷಕ್ಕೆ ಬರುವಂತೆ ಕೋರಿಕೆ (ಉದ್ಯೋಗ 8/18). ಇವನ ಬಳಿ ಹನ್ನೊಂದು ಅಕ್ಷೌಹಿಣೀ ಸೇನೆಯ ಸಂಗ್ರಹ (ಉದ್ಯೋಗ 19/27). ಧೃತರಾಷ್ಟ್ರನೊಡನೆ ತನ್ನ ಪಕ್ಷದ ವೀರರ ವರ್ಣನೆ ಮಾಡುತ್ತಾ ತನ್ನ ಉತ್ಕರ್ಷ ಮತ್ತು ಪಾಂಡವರ ರಥ ಮತ್ತು ಕುದುರೆಗಳ ವಿಷಯವಾಗಿ ಪ್ರಶ್ನೆ (ಉದ್ಯೋಗ 56/6). ಧೃತರಾಷ್ಟ್ರನೊಡನೆ ತನ್ನ ಪ್ರಾಬಲ್ಯದ ಪ್ರತಿಪಾದನೆ (ಉದ್ಯೋಗ 57/36–42). ಯುದ್ಧಕ್ಕೆ ಯಜ್ಞದ ರೂಪವನ್ನಿತ್ತು ಯುದ್ಧ ಮಾಡುವ ನಿಶ್ಚಯ ಮಾಡಿದುದು (ಉದ್ಯೋಗ 58/10–18). ಧೃತರಾಷ್ಟ್ರನಿಗೆ ಧೈರ್ಯತುಂಬಲು ಆತ್ಮಪ್ರಶಂಸೆ ಮಾಡಿದುದು (ಉದ್ಯೋಗ 61 ಅಧ್ಯಾಯ). ಭೀಷ್ಮರೊಡನೆ ತನ್ನ ಪಕ್ಷದ ಪ್ರಾಬಲ್ಯ ಹೇಳಿದುದು (ಉದ್ಯೋಗ 63/1–8). ಶ್ರೀಕೃಷ್ಣನ ಸತ್ಕಾರಕ್ಕೆ ಮಾರ್ಗದಲ್ಲಿ ವಿಶ್ರಾಮಸ್ಥಾನ ಮಾಡಿಸಿದುದು (ಉದ್ಯೋಗ 85/12–17). ಶ್ರೀಕೃಷ್ಣನನ್ನು ಸೆರೆಯಲ್ಲಿಡುವ ವಿಚಾರ ಪ್ರಕಟಿಸಿದುದು (ಉದ್ಯೋಗ 88/13). ತನ್ನ ಆಮಂತ್ರಣವನ್ನು ಅಸ್ವೀಕಾರಮಾಡಿದಾಗ ಶ್ರೀಕೃಷ್ಣನೊಡನೆ ಅದರ ಕಾರಣ ಕೇಳಿದುದು (ಉದ್ಯೋಗ 91/ 13–15). ಕಣ್ವನು ದುರ್ಯೋಧನನಿಗೆ ಮಾತಲಿ ಉಪಾಖ್ಯಾನ ಹೇಳಿ ಸಂಧಿಗಾಗಿ ಪಯತ್ನಿಸಿದುದು ಇವನು ಕಣ್ವಮುನಿಯ ಉಪದೇಶದ ಅವಹೇಳನ ಮಾಡಿದುದು (ಉದ್ಯೋಗ 97 ಅಧ್ಯಾಯದಿಂದ 105 ಅಧ್ಯಾಯವರೆಗೆ). ಕೌರವ ಸಭೆಯಲ್ಲಿ ಶ್ರೀಕೃಷ್ಣನಿಗೆ ಉತ್ತರಕೊಡುತ್ತಾ, ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿ ಕೂಡಾ ಕೊಡದಿರಲು ನಿಶ್ಚಯ ಮಾಡಿದುದು (ಉದ್ಯೋಗ 127 ಅಧ್ಯಾಯ). ಬಂಧಿಸಲ್ಪಡುವ ಸಂಶಯದಿಂದ ಈತ ಕೌರವಸಭೆಯಿಂದ ಹೊರಟುಹೋಗುವುದು (ಉದ್ಯೋಗ 128/25–27). ಶ್ರೀಕೃಷ್ಣನನ್ನು ಬಂಧಿಸುವ ಒಳಸಂಚು (ಉದ್ಯೋಗ 130/4–8). ರಣಯಾತ್ರೆ ಮಾಡಲು ಸೇನೆಗೆ ಆಜ್ಞೆ ನೀಡಿದುದು (ಉದ್ಯೋಗ 153/8–17). ಇವನಿಂದ ತನ್ನ ಸೇನಾಪತಿಗಳ ಆಯ್ಕೆ ಮತ್ತು ಅಭಿಷೇಕ (ಉದ್ಯೋಗ 155/31–33). ಇವನು ಭೀಷ್ಮನನ್ನು ಪ್ರಧಾನ ಸೇನಾಪತಿ ಸ್ಥಾನದಲ್ಲಿ ಅಭಿಷೇಕ ಮಾಡಿದುದು (ಉದ್ಯೋಗ 156/26). ರುಕ್ಮಿಯಿಂದ ಸಹಾಯ ತೆಗೆದು ಕೊಳ್ಳಲು ತಿರಸ್ಕಾರ ಮಾಡಿದುದು (ಉದ್ಯೋಗ 158/37). ಉಲೂಕನನ್ನು ದೂತನಾಗಿ ಮಾಡಿ ಪಾಂಡವರ ಬಳಿಗೆ ಕಳುಹಿಸಿದುದು. ಶ್ರೀಕೃಷ್ಣ, ಪಾಂಡವರು, ದ್ರುಪದ, ವಿರಾಟ, ಶಿಖಂಡಿ ಮತ್ತು ಧೃಷ್ಟದ್ಯುಮ್ನ ಮೊದಲಾದವರಿಗೆ ಕಠಿನ ವಾಕ್ಯಗಳ ಸಂದೇಶ ಹೇಳಿಸಿದುದು (ಉದ್ಯೋಗ 160 ಅಧ್ಯಾಯ). ಭೀಷ್ಮನೊಡನೆ ಕೌರವಪಕ್ಷದ ಅತಿರಥರ ಹೆಸರು ಕೇಳಿದುದು (ಉದ್ಯೋಗ 165/12–16). ಭೀಷ್ಮರಿಂದ ಪಾಂಡವಪಕ್ಷದ ಅತಿ ರಥರ ತಿಳುವಳಿಕೆ ಪಡಕೊಂಡದ್ದು (ಉದ್ಯೋಗ

168/39–42). ಶಿಖಂಡಿಯನ್ನು ಕೊಲ್ಲದಿರುವ ವಿಷಯದಲ್ಲಿ ಭೀಷ್ಮರೊಡನೆ ಈತನ ಪ್ರಶ್ನೆ (ಉದ್ಯೋಗ 188/1). ತನ್ನ ಪಕ್ಷದ ವೀರ ರೊಂದಿಗೆ ಅವರ ಶಕ್ತಿಯ ಕುರಿತು ಪ್ರಶ್ನಿಸಿದುದು (ಉದ್ಯೋಗ 193/2–7). ಕುರುಕ್ಷೇತ್ರದ ಬಯಲಿಗೆ ನಡೆಯಲು ಸೇನೆಗೆ ಆಜ್ಞೆಯನ್ನಿತ್ತದ್ದು (ಉದ್ಯೋಗ 195 ಅಧ್ಯಾಯ). ಭೀಷ್ಮನ ರಕ್ಷಣೆಗಾಗಿ ದುಃಶಾ ಸನನಿಗೆ ಆದೇಶ (ಭೀಷ್ಮ 15/12–20). ಇವನ ಮಣಿಮಯವಾದ ಮಹಾಧ್ವಜ ನಾಗಚಿಹ್ನೆಯಿಂದ ವಿಭೂಷಿತವಾಗಿತ್ತು (ಭೀಷ್ಮ 17/25–26). ಯುದ್ಧಕ್ಕೆ ಹೋಗುವಾಗ ಗಜಾರೂಢನಾದ ದುರ್ಯೋಧನ ಮತ್ತು ಅವನ ಆನೆಯ ಶೋಭೆಯ ವರ್ಣನೆ (ಭೀಷ್ಮ 20/7–8). ದ್ರೋಣಾಚಾರ್ಯನೊಡನೆ ಎರಡೂ ಪಕ್ಷಗಳ ಪ್ರಧಾನ ವೀರರ ವರ್ಣನೆ ಮಾಡಿದುದು (ಭೀಷ್ಮ 25/7–11). ಪ್ರಥಮ ದಿನದ ಸಂಗ್ರಾಮದಲ್ಲಿ ಭೀಮಸೇನನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/19–21). ಭೀಮಸೇನನ ಬಾಣಗಳಿಂದ ಹೊಡೆಯಲ್ಪಟ್ಟು ಈತ ಮೂರ್ಛಿತನಾದುದು (ಭೀಷ್ಮ 58/17). ಭೀಷ್ಮನಿಗೆ ತುಚ್ಛೀಕಾರ ಹಾಕಿ ದುದು (ಭೀಷ್ಮ 58/34–40). ಗಜಸೇನೆ ಯೊಂದಿಗೆ ಭೀಮಸೇನನ ಮೇಲೆ ಆಕ್ರಮಣ (ಭೀಷ್ಮ 62/35). ಭೀಮಸೇನನೊಂದಿಗೆ ಯುದ ಮಾಡಿ, ಈತ ಮೂರ್ಛಿತನಾದುದು (ಭೀಷ್ಮ 64/16–23). ಪಾಂಡವರ ವಿಶಿಷ್ಟ ಪರಾಕ್ರಮದ ಕುರಿತು ಭೀಷ್ಮನೊಡನೆ ಪ್ರಶ್ನೆ (ಭೀಷ್ಮ 65/31–34). ಭೀಮಸೇನನೊಂದಿಗೆ ಯುದ್ಧ (ಭೀಷ್ಮ 73/17–23). ಭೀಮಸೇನನಿಂದ ಈತ ಪರಾಜಿತ ನಾಗಿ ಮೂರ್ಛಿತನಾದುದು (ಭೀಷ್ಮ 79/11–16). ಭೀಮಸೇನನ ಪರಾಕ್ರಮದಿಂದ ಭಯಭೀತ ನಾಗಿ ಈತ ಭೀಷ್ಮನೊಡನೆ ಪ್ರಾರ್ಥಿಸಿದುದು (80/4–6). ಧೃಷ್ಟದ್ಯುಮ್ನನಿಂದ ಈತ ಪರಾಜಿತ ನಾದುದು (ಭೀಷ್ಮ 82/53). ಭೀಮಸೇನನಿಂದ ಒಮ್ಮೆಯೇ ಎಂಟು ಮಂದಿ ಸಹೋದರರು ಕೊಲ್ಲಲ್ಪಟ್ಟುದರಿಂದ, ಭೀಷ್ಮನ ಬಳಿಗೆ ಹೋಗಿ ಈತನ ವಿಲಾಪ (ಭೀಷ್ಮ 88/37–38). ಘಟೋತ್ಕಚನೊಂದಿಗೆ ಈತನ ಯುದ್ಧ ಮತ್ತು ಆತನ ಸಂಗಡಿಗರಾದ ನಾಲ್ಕು ಮಂದಿ ರಾಕ್ಷಸರು ಇವನಿಂದ ಹತರಾದರು (ಭೀಷ್ಮ 91/20–21). ಘಟೋತ್ಕಚನ ಪ್ರಹಾರದಿಂದ ಇವನು ಪ್ರಾಣ ಸಂಕಟದ ಸ್ಥಿತಿಯಲ್ಲಿ ಬಿದ್ದದ್ದು (ಭೀಷ್ಮ 92/14). ಇವನ ಪ್ರಹಾರದಿಂದ ಭೀಮಸೇನ ಮೂರ್ಛಿತ ನಾದುದು (ಭೀಷ್ಮ 94/5–6). ಘಟೋತ್ಕಚ ನಿಂದ ಪರಾಜಿತನಾಗಿ ಭೀಷ್ಮನೊಡನೆ ದುಃಖವನ್ನು ಪ್ರಕಟಿಸಿದುದು (ಭೀಷ್ಮ 95/3–15). ಭೀಷ್ಮ ನೊಡನೆ ಪಾಂಡವರನ್ನು ಕೊಲ್ಲಲು ಅಥವಾ ಕರ್ಣನಿಗೆ ಯುದ್ಧಮಾಡಲು ಆಜ್ಞೆ ಕೊಡುವಂತೆ ಆಗ್ರಹಮಾಡಿದುದು (ಭೀಷ್ಮ 97/36–42). ಭೀಷ್ಮನ ರಕ್ಷಣೆಯ ವ್ಯವಸ್ಥೆಗಾಗಿ ದುಃಶಾಸನನಿಗೆ ಆದೇಶ (ಭೀಷ್ಮ 98/31–42; ಭೀಷ್ಮ 105/2–6). ಯುಧಿಷ್ಠಿರನನ್ನು ತಡೆಯಲು ಶಲ್ಯನಿಗೆ ಆದೇಶವನ್ನಿತ್ತದ್ದು (ಭೀಷ್ಮ 105/26–28). ತನ್ನ ಸೈನ್ಯ ಕೊಲ್ಲಲ್ಪಡುತ್ತಿರುವುದನ್ನು ಕಂಡು ಭೀಷ್ಮ ನೊಂದಿಗೆ ಇವನ ಪ್ರಾರ್ಥನೆ (ಭೀಷ್ಮ 109/16–23). ಸಾತ್ಯಕಿಯೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 110/14; ಭೀಷ್ಮ 111/14–18). ಅಭಿಮನ್ಯುವಿನೊಂದಿಗೆ ಯುದ್ಧ (ಭೀಷ್ಮ 116/1–8). ಈತನಿಂದ ತನ್ನ ಸೈನಿಕರಿಗೆ ಪ್ರೋತ್ಸಾಹ (ಭೀಷ್ಮ 117/26–30). ಸೇನಾಪತಿಯ ಆವಶ್ಯ ಕತೆಯ ವರ್ಣನೆ ಮಾಡುತ್ತಾ ಕರ್ಣನಿಂದ ಅನುಮತಿ ಪಡೆದುದು (ದ್ರೋಣ 5/5–12). ಸೇನಾಪತಿಯಾಗಲು ದ್ರೋಣಾಚಾರ್ಯರೊಡನೆ ಪ್ರಾರ್ಥಿಸಿದುದು (ದ್ರೋಣ 6/2–11). ಇವನಿಂದ ದ್ರೋಣಾಚಾರ್ಯರಿಗೆ ಸೇನಾಪತಿ ಪಟ್ಟಾಭಿಷೇಕ (ದ್ರೋಣ 7/5). ಯುಧಿಷ್ಠಿರನನ್ನು ಜೀವಂತ ಹಿಡಿದುತರಲು ದ್ರೋಣಾಚಾರ್ಯರಿಂದ ವರ ಕೇಳಿದುದು (ದ್ರೋಣ 12/6). ಪಾಂಡವರ ಸೈನ್ಯ ದ್ರೋಣಾಚಾರ್ಯರಿಂದ ವಿಚಲಿತವಾದುದನ್ನು ಕಂಡು, ಕರ್ಣನೊಡನೆ ಸಂತೋಷಪೂರ್ವಕ ಮಾತುಕತೆ (ದ್ರೋಣ 22/11–17). ದ್ರೋಣಾ ಚಾರ್ಯನನ್ನು ನಿಂದಿಸಿದುದು (ದ್ರೋಣ 33/7–9). ಅಭಿಮನ್ಯುವನ್ನು ಕೊಲ್ಲಲು ತನ್ನ ಮಹಾ ರಥಿಗಳಿಗೆ ಆದೇಶ ನೀಡಿದುದು (ದ್ರೋಣ 39/16–19). ಅಭಿಮನ್ಯುವಿನೊಂದಿಗೆ ಯುದ್ಧ ಮಾಡಲು ಕರ್ಣನನ್ನು ಪ್ರೇರಿಸಿದುದು (ದ್ರೋಣ 40/23–25). ಅಭಿಮನ್ಯುವಿನ ಪ್ರಹಾರ ದಿಂದ ಪೀಡಿತನಾಗಿ ಓಡಿದುದು (ದ್ರೋಣ 45/30). ಅರ್ಜುನನ ಭಯದಿಂದ ಭೀತನಾದ ಜಯ

ದ್ರಥನಿಗೆ ಈತನ ಆಶ್ವಾಸನೆ (ದ್ರೋಣ 74/14-20). ದ್ರೋಣಾಚಾರ್ಯನಿಗೆ ನಿಂದೆ (ದ್ರೋಣ 94/4-18). ಅರ್ಜುನನೊಂದಿಗೆ ಯುದ್ಧ ಮಾಡಲು ತನ್ನ ಅಸಾಮರ್ಥ್ಯವನ್ನು ಪ್ರಕಟಿಸಿದುದು (ದ್ರೋಣ 94/27-32). ದ್ರೋಣಾಚಾರ್ಯನಿಂದ ತೊಡಿಸಲ್ಪಟ್ಟ ದಿವ್ಯಕವಚದಿಂದ ಯುಕ್ತನಾಗಿ ಯುದ್ಧಕ್ಕೆ ಹೋದುದು (ದ್ರೋಣ 94/73-75). ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿದುದು (ದ್ರೋಣ 102/36-38). ಅರ್ಜುನನಿಂದ ಯುದ್ಧದಲ್ಲಿ ಪರಾಜಿತನಾಗಿ ಓಡಿದುದು (ದ್ರೋಣ 103/32). ಇವನ ಧ್ವಜದ ವರ್ಣನೆ (ದ್ರೋಣ 105/26-28). ಸಾತ್ಯಕಿಯಿಂದ ಈತನ ಪರಾಜಯ (ದ್ರೋಣ 116/24-25). ಸಾತ್ಯಕಿಯಿಂದ ಸೋತು ಸಹೋದರರ ಸಹಿತ ಓಡಿದುದು (ದ್ರೋಣ 120/43-44). ಪಾಂಡವರೊಂದಿಗೆ ಸಂಗ್ರಾಮ (ದ್ರೋಣ 124/32-42). ದ್ರೋಣಾಚಾರ್ಯನಿಗೆ ನಿಂದನೆ (ದ್ರೋಣ 130/4-12). ಯುಧಾಮನ್ಯು ಮತ್ತು ಉತ್ತಮೌಜರೊಂದಿಗೆ ಯುದ್ಧ (ದ್ರೋಣ 130/ 30-43). ಅರ್ಜುನನ ವಧೆಗೆ ಕರ್ಣನನ್ನು ಪ್ರೋತ್ಸಾಹಿಸಿದುದು (ದ್ರೋಣ 145/12-33). ಅರ್ಜುನನೊಂದಿಗೆ ಯುದ್ಧ (ದ್ರೋಣ 145 ಅಧ್ಯಾಯ). ಜಯದ್ರಥ ವಧೆಯ ಅನಂತರ ಖೇದವನ್ನು ತೋರಿಸುತ್ತಾ ದ್ರೋಣಾಚಾರ್ಯನನ್ನು ನಿಂದಿಸಿದುದು (ದ್ರೋಣ 150 ಅಧ್ಯಾಯ). ಕರ್ಣನೊಡನೆ ಮಾತುಕತೆಯ ಸಂದರ್ಭದಲ್ಲಿ ದ್ರೋಣಾಚಾರ್ಯನ ಮೇಲೆ ದೋಷಾರೋಪಣೆ (ದ್ರೋಣ 152/2-14). ಯುಧಿಷ್ಠಿರನೊಂದಿಗೆ ಯುದ್ಧ ಮತ್ತು ಪರಾಜಯ (ದ್ರೋಣ 153/29-39). ಕರ್ಣನೊಡನೆ ತನ್ನ ಸೇನೆಯ ರಕ್ಷಣೆಗೆ ಆಗ್ರಹ (ದ್ರೋಣ 158/2-4). ಕರ್ಣನನ್ನು ಕೊಲ್ಲಲು ಸಿದ್ಧನಾದ ಅಶ್ವತ್ಥಾಮನನ್ನು ಸಮಾಧಾನಪಡಿಸಿದುದು (ದ್ರೋಣ 159/13-15). ಅಶ್ವತ್ಥಾಮನೊಡನೆ ಪಾಂಚಾಲರನ್ನು ಕೊಲ್ಲಲು ಆಗ್ರಹ (ದ್ರೋಣ 159/86-100). ಪದಾತಿಗಳು ಪಂಜನ್ನು ಉರಿಸುವಂತೆ ಆದೇಶ (ದ್ರೋಣ 163/12). ದ್ರೋಣಾಚಾರ್ಯರನ್ನು ರಕ್ಷಿಸುವಂತೆ ಸೈನಿಕರಿಗೆ ಆದೇಶ (ದ್ರೋಣ 164/21-30). ಭೀಮಸೇನನೊಂದಿಗೆ ಯುದ್ಧ ಮತ್ತು ಪರಾಜಿತನಾಗಿ ಓಡಿದುದು (ದ್ರೋಣ 166/43-58). ಕರ್ಣನ ಸಲಹೆಯಂತೆ ಶಕುನಿಯನ್ನು ಪಾಂಡವರ ವಧೆಗಾಗಿ ಕಳುಹಿಸುವುದು (ದ್ರೋಣ 170/62-65). ಸಾತ್ಯಕಿಯಿಂದ ಪರಾಜಯ (ದ್ರೋಣ 171/23). ದ್ರೋಣಾಚಾರ್ಯ ಮತ್ತು ಕರ್ಣನಿಗೆ ನಿಂದನೆ (ದ್ರೋಣ 172/3-7). ಜಟಾಸುರನ ಪುತ್ರ ಅಲಂಬುಷನು ಘಟೋತ್ಕಚನೊಂದಿಗೆ ಯುದ್ಧ ಮಾಡಲು ಆಜ್ಞೆ ನೀಡಿದುದು (ದ್ರೋಣ 174/9-11). ಕರ್ಣನನ್ನು ಘಟೋತ್ಕಚನ ಮುಷ್ಟಿಯಿಂದ ಬಿಡಿಸಿಕೊಳ್ಳಲು ಅಲಾಯುಧನನ್ನು ಪ್ರೇರಿಸಿದುದು (ದ್ರೋಣ 177/9-13). ಅಲಾಯುಧನ ವಧೆಯಿಂದ ಪಶ್ಚಾತ್ತಾಪಪಟ್ಟದ್ದು (ದ್ರೋಣ 178/36-40). ದ್ರೋಣಾಚಾರ್ಯನನ್ನು ನಿಂದಿಸಿದುದು (ದ್ರೋಣ 185/2-8, ದ್ರೋಣ 185/22-23). ನಕುಲನೊಂದಿಗೆ ಯುದ್ಧ ಮತ್ತು ಆತನಿಂದ ಪರಾಜಿತನಾದುದು (ದ್ರೋಣ 187/50-55). ಸಾತ್ಯಕಿಯೊಂದಿಗೆ ಸಂವಾದ ಮತ್ತು ಯುದ್ಧ (ದ್ರೋಣ 189/23-48). ದ್ರೋಣಾಚಾರ್ಯನು ಕೊಲ್ಲಲ್ಪಟ್ಟಾಗ ಯುದ್ಧಕ್ಷೇತ್ರದಿಂದ ಓಡಿಹೋದುದು (ದ್ರೋಣ 193/17). ದ್ರೋಣವಧೆಯ ಸಮಾಚಾರವನ್ನು ಅಶ್ವತ್ಥಾಮನಿಗೆ ತಿಳಿಸುವಂತೆ ಕೃಪಾಚಾರ್ಯನಿಗೆ ಆದೇಶ ನೀಡಿದುದು (ದ್ರೋಣ 193/35). ಅಶ್ವತ್ಥಾಮನೊಡನೆ ಪುನಃ ನಾರಾಯಣಾಸ್ತ್ರ ಪ್ರಕಟಿಸುವಂತೆ ಹೇಳಿದುದು (ದ್ರೋಣ 200/25). ಸಾತ್ಯಕಿಯಿಂದ ಇವನ ಪರಾಜಯ (ದ್ರೋಣ 200/153). ತನ್ನ ಸೇನೆಗೆ ಧೈರ್ಯ ತುಂಬಿದುದು (ಕರ್ಣ 3/7-17). ಸೇನಾಪತಿಯಾಗುವಂತೆ ಕರ್ಣನನ್ನು ಪ್ರಾರ್ಥಿಸಿದುದು (ಕರ್ಣ 10/28-37). ಕರ್ಣನನ್ನು ಸೇನಾಪತಿ ಪಟ್ಟದಲ್ಲಿ ಅಭಿಷೇಕಮಾಡಿದುದು (ಕರ್ಣ 10/43). ಯುಧಿಷ್ಠಿರನೊಂದಿಗೆ ಯುದ್ಧದಲ್ಲಿ ಇವನ ಪರಾಜಯ (ಕರ್ಣ 28/7-8; ಕರ್ಣ 29/32). ಕರ್ಣನ ಕಥನಾನುಸಾರವಾಗಿ ವ್ಯವಸ್ಥೆಗೊಳಿಸಲು ಸಿದ್ಧನಾದುದು (ಕರ್ಣ 31/71-72). ಕರ್ಣನ ಸಾರಥ್ಯಮಾಡುವಂತೆ ಶಲ್ಯನೊಂದಿಗೆ ಪ್ರಾರ್ಥನೆ (ಕರ್ಣ 32/2-29). ಶಲ್ಯನು ಸಿಟ್ಟುಗೊಂಡು ಎದ್ದುಹೋದಾಗ, ಅವನ ಪ್ರಶಂಸೆ ಮಾಡಿ, ಅವನನ್ನು ಸಂತೋಷಗೊಳಿಸಿದುದು (ಕರ್ಣ 32/54-62) ಶಲ್ಯನಿಗೆ ತ್ರಿಪುರೋ

ಪಾಖ್ಯಾನದ ವರ್ಣನೆ (ಕರ್ಣ 33 ಅಧ್ಯಾಯ ದಿಂದ 34/121ವರೆಗೆ). ಕರ್ಣನಿಗೆ ಪರಶುರಾಮ ರಿಂದ ದಿವ್ಯಾಸ್ತ್ರ ಪ್ರಾಪ್ತಿಯಾದುದನ್ನು ಇವನು ವರ್ಣಿಸಿದುದು (ಕರ್ಣ 34/123–162). ಶಲ್ಯನು ಕರ್ಣನಿಗೆ ಸಾರಥಿಯಾಗುವಂತೆ ಒಪ್ಪಿಸಿದುದು (ಕರ್ಣ 35 ಅಧ್ಯಾಯ). ನಕುಲಸಹದೇವರನ್ನು ತನ್ನ ಪರಾಕ್ರಮದಿಂದ ಕಿಂಕರ್ತವ್ಯವಿಮೂಢರ ನ್ನಾಗಿ ಮಾಡಿದುದು (ಕರ್ಣ 56/7–18). ಧೃಷ್ಟದ್ಯುಮ್ನನೊಂದಿಗೆ ಯುದ್ಧದಲ್ಲಿ ಪರಾಜಯ ಹೊಂದಿದುದು (ಕರ್ಣ 56/7–18). ತನ್ನ ಸೈನಿಕ ರನ್ನು ಪ್ರೋತ್ಸಾಹಿಸಿದುದು (ಕರ್ಣ 57/2–4). ಭೀಮಸೇನನಿಂದ ಪರಾಜಿತನಾದುದು (ಕರ್ಣ 61/53–62). ಕರ್ಣನೊಂದಿಗೆ ತನ್ನ ಸೇನೆಯನ್ನು ರಕ್ಷಿಸುವಂತೆ ಹೇಳಿದುದು (ಕರ್ಣ 64/40–42). ಇವನಿಂದ ಕುಲಿಂದ ರಾಜಕುಮಾರನ ವಧೆ (ಕರ್ಣ 85/14). ಅಶ್ವತ್ಥಾಮನು ಹೇಳಿದ ಸಂಧಿ ಪ್ರಸ್ತಾವವನ್ನು ಒಪ್ಪದಿರುವುದು (ಕರ್ಣ 88/30–33). ಕರ್ಣನ ಮರಣದಿಂದ ದುಃಖಿತನಾದುದು (ಕರ್ಣ 92/15). ತನ್ನ ಸೈನಿಕರಿಗೆ ಧೈರ್ಯ ಹೇಳಿದುದು (93/52–59). ಸಂಧಿಗಾಗಿ ಒಡಂ ಬಡಿಸುತ್ತಿದ್ದ ಕೃಪಾಚಾರ್ಯನಿಗೆ ಉತ್ತರ ಹೇಳಿ ದುದು ಮತ್ತು ಯುದ್ಧವನ್ನೇ ನಿರ್ಧರಿಸಿದುದು (ಶಲ್ಯ 5 ಅಧ್ಯಾಯ). ಅಶ್ವತ್ಥಾಮನ ಬಳಿಗೆ ಹೋಗಿ ಸೇನಾಪತಿಯಾಗುವಂತೆ ಕೇಳಿದುದು (ಶಲ್ಯ 6/17–18). ಶಲ್ಯನೊಂದಿಗೆ ಸೇನಾಪತಿ ಯಾಗುವಂತೆ ಪ್ರಾರ್ಥನೆ (ಶಲ್ಯ 6/25–26). ಶಲ್ಯನನ್ನು ಸೇನಾಪತಿಪಟ್ಟದಲ್ಲಿ ಅಭಿಷೇಕ ಮಾಡಿ ದುದು (ಶಲ್ಯ 7/6–7). ಇವನಿಂದ ಚೇಕಿತಾನನ ವಧೆ (ಶಲ್ಯ 12/31–32). ಭೀಮಸೇನನಿಂದ ಪರಾಜಿತನಾದುದು (ಶಲ್ಯ 16/42–44). ತನ್ನ ಸೇನೆಯನ್ನು ಉತ್ಸಾಹಿಸಿದುದು (ಶಲ್ಯ 19/48–66). ಇವನ ಅದ್ಭುತ ಪರಾಕ್ರಮ (ಶಲ್ಯ 22 ಅಧ್ಯಾಯ). ಧೃಷ್ಟದ್ಯುಮ್ನನಿಂದ ಪರಾಜಿತನಾ ದುದು (ಶಲ್ಯ 25/23). ಏಕಾಂಗಿಯಾಗಿ, ಓಡಿ, ಸರೋವರ ಪ್ರವೇಶ ಮಾಡಿದುದು ಮತ್ತು ಮಾಯೆಯಿಂದ ಜಲಸ್ತಂಭನ ಮಾಡಿದುದು (ಶಲ್ಯ 29/54). ಕೃಪಾಚಾರ್ಯ, ಅಶ್ವತ್ಥಾಮಾ ಮತ್ತು ಕೃತವರ್ಮಾ ಹೇಳಿದರೂ ಕೂಡ ಯುದ್ಧ ದಲ್ಲಿ ಔದಾಸೀನ್ಯ ತೋರಿದುದು (ಶಲ್ಯ 30/14–18). ನೀರಿನೊಳಗೆ ಅಡಗಿಕೊಂಡಿದ್ದೇ ಯುಧಿಷ್ಠಿರ ನೊಂದಿಗೆ ವಾರ್ತಾಲಾಪ ಮಾಡಿದುದು (ಶಲ್ಯ 31/38–53). ಯುಧಿಷ್ಠಿರನು ಆಹ್ವಾನಿಸಿದಾಗ ಈತ ನೀರಿನಿಂದ ಹೊರಗೆ ಬಂದದ್ದು (ಶಲ್ಯ 32/33–39). ಕವಚಾದಿಗಳಿಂದ ಸುಸಜ್ಜಿತನಾಗಿ ಈತ ಪಾಂಡವರಲ್ಲಿ ಯಾರಾದರೊಬ್ಬನೊಡನೆ ಯುದ್ಧಕ್ಕೆ ಸಿದ್ಧನಾಗುವುದು (ಶಲ್ಯ 32/66–71). ಭೀಮಸೇನನೊಂದಿಗೆ ಗದಾಯುದ್ಧಕ್ಕೆ ಸಿದ್ಧನಾ ದುದು (ಶಲ್ಯ 33/52–55). ಭೀಮಸೇನನೊಂದಿಗೆ ಗದಾಯುದ್ಧಕ್ಕೆ ಸಿದ್ಧನಾದಾಗ ಅಪಶಕುನ (ಶಲ್ಯ 56/8–14). ಭೀಮಸೇನನ ಕಟುವಚನಗಳ ಉತ್ತರ (ಶಲ್ಯ 56/38–41). ಭೀಮಸೇನನೊಂದಿಗೆ ಭಯಂಕರ ಗದಾಯುದ್ಧ (ಶಲ್ಯ 57 ಅಧ್ಯಾಯ). ಭೀಮಸೇನನೊಂದಿಗೆ ಭಯಂಕರ ಗದಾಯುದ್ಧ (ಶಲ್ಯ 57 ಅಧ್ಯಾಯ). ಭೀಮಸೇನನ ಗದಾಘಾತ ದಿಂದ ತೊಡೆ ಮುರಿದಾಗ ಈತ ಪೃಥ್ವಿಯ ಮೇಲೆ ಬಿದ್ದದ್ದು (ಶಲ್ಯ 58/47–48). ಶ್ರೀ ಕೃಷ್ಣನಿಂದ ಮಾಡಲ್ಪಟ್ಟ ಆಕ್ಷೇಪಗಳಿಗೆ ಉತ್ತರ ಕೊಟ್ಟದ್ದು (ಶಲ್ಯ 61/27–39). ತನ್ನ ಕಾರ್ಯದ ಕುರಿತು ಸಂತೋಷವನ್ನು ತೋರಿಸಿದುದು (ಶಲ್ಯ 61/50–54). ಸಂಜಯನ ಮುಂದೆ ವಿಲಾಪ ಮಾಡಿದುದು (ಶಲ್ಯ 64/7–29). ಸಂದೇಶ ವಾಹಕರಿಗೆ ಸಂದೇಶವನ್ನಿತ್ತದ್ದು (ಶಲ್ಯ 64/30–40). ಅಶ್ವತ್ಥಾಮಾ, ಕೃಪಾಚಾರ್ಯ ಮತ್ತು ಕೃತ ವರ್ಮಾನ ಮುಂದೆ ತನ್ನ ಕಾರ್ಯಗಳ ಬಗ್ಗೆ ಸಂತೋಷ ಪ್ರಕಟಿಸಿದುದು (ಶಲ್ಯ 65/23–31). ಅಶ್ವತ್ಥಾಮನನ್ನು ಸೇನಾಪತಿಯಾಗಿ ಮಾಡಿದುದು (ಶಲ್ಯ 65/41). ಅಶ್ವತ್ಥಾಮನ ಕೆಲಸವನ್ನು ಹೊಗಳಿ ಪ್ರಾಣತ್ಯಾಗ ಮಾಡಿದುದು (ಸೌಪ್ತಿಕ 9/56–57). ಕರ್ಣನ ಸಹಾಯದಿಂದ ಈತ ಕಲಿಂಗರಾಜಕನ್ಯೆಯನ್ನು ಅಪಹರಿಸಿದ ಕುರಿತು ವರ್ಣನೆ (ಶಾಂತಿ 4/13). ರಾಜಾ ದುರ್ಯೋ ಧನನ ಅಲಂಕೃತ ಅರಮನೆ ವೀರವರ ಭೀಮ ಸೇನನ ವಾಸಕ್ಕೆ ಕೊಡಲ್ಪಟ್ಟಿತು (ಶಾಂತಿ 44/6–7). ಧೃತರಾಷ್ಟ್ರನೊಂದಿಗೆ ಶೀಲದ ಸಂಬಂಧ ವಾಗಿ ಈತನ ಪ್ರಶ್ನೆಯ ವಿವಾದ (ಶಾಂತಿ 124/18–64). ವ್ಯಾಸರು, ಆವಾಹನೆ ಮಾಡಿದಾಗ ಗಂಗಾಜಲದಿಂದ ಸಹೋದರರ ಸಹಿತ ಕಾಣಿಸಿ ಕೊಂಡು, ಈತ ಧೃತರಾಷ್ಟ್ರನೇ ಮೊದಲಾದ

15

ಸ್ವಜನರೊಂದಿಗೆ ಭೇಟಿಯಾದುದು (ಆಶ್ರಮ 32/9). ಸ್ವರ್ಗದಲ್ಲಿ ರಾಜಾ ದುರ್ಯೋಧನನು ಸೂರ್ಯನಂತೆ ತೇಜಸ್ವಿ ಮತ್ತು ವಿರೋಚಿತ ಶೋಭೆಯಿಂದ ಸಂಪನ್ನನಾಗಿ ಪುಣ್ಯಕರ್ಮರಾದ ದೇವತೆಗಳೊಂದಿಗೆ ಕುಳಿತಿದ್ದನು; ಇದನ್ನು ಯುಧಿಷ್ಠಿರನು ಪ್ರತ್ಯಕ್ಷ ನೋಡಿದನು (ಸ್ವರ್ಗಾ 1/4–5). ಮಹಾಭಾರತದಲ್ಲಿ ಬಂದಿರುವ ದುರ್ಯೋಧನನ ಹೆಸರುಗಳು: ಆಜಮೀಢ, ಭಾರತ, ಭರತಶಾರ್ದೂಲ, ಭರತಶ್ರೇಷ್ಠ, ಭಾರ ತಾಗ್ರ್ಯ, ಭರತರ್ಷಭ, ಭರತಸತ್ತಮ, ಭಾರತ ಸತ್ತಮ, ಧಾರ್ತರಾಷ್ಟ್ರ, ಧೃತರಾಷ್ಟ್ರಜ, ಧೃತರಾಷ್ಟ್ರ ಪುತ್ರ, ಧೃತರಾಷ್ಟ್ರಸೂನು, ಧೃತರಾಷ್ಟ್ರಸುತ, ಧೃತ ರಾಷ್ಟ್ರಾತ್ಮಜ, ಗಾಂಧಾರಿ, ಗಾಂಧಾರೀಪುತ್ರ, ಕೌರವ, ಕೌರವೇಯ, ಕುರು, ಕುರುಶ್ರೇಷ್ಠ, ಕುರೂದ್ವಹ, ಕುರುಕುಲಶ್ರೇಷ್ಠ, ಕುರುಕುಲಾಧಮ, ಕುರುಮುಖ್ಯ, ಕುರುನಂದನ, ಕುರುಪತಿ, ಕುರು ಪ್ರವೀರ, ಕುರುಪುಂಗವ, ಕುರುರಾಜ, ಕುರು ಸತ್ತಮ, ಕುರುಸಿಂಹ, ಕುರೂತ್ತಮ, ಕುರು ವರ್ಧನ, ಸುಯೋಧನ ಇತ್ಯಾದಿ.

(2) ಮನುವಂಶದ ಸುವೀರಕುಮಾರ ದುರ್ಜಯನ ಪುತ್ರ (ಅನು 2/13). ಈತನಿಂದ ನರ್ಮದಾನದಿಯ ಗರ್ಭದಲ್ಲಿ ಸುದರ್ಶನಾ ಎಂಬ ಪರಮ ಸುಂದರಿ ಕನ್ಯೆಯ ಜನನ (ಅನು 2/19). ಈತ ತನ್ನ ಪುತ್ರಿ ಸುದರ್ಶನಾಳನ್ನು ಅಗ್ನಿದೇವನ ಕೈಗೆ ಒಪ್ಪಿಸಿದುದು (ಅನು 2/34).

**ದುರ್ವಾರಣ** – ಕಾಂಬೋಜ ಸೈನಿಕರ ಹೆಸರು. ಸಾತ್ಯಕಿಯಿಂದ ಇವರ ವರ್ಣನೆ (ದ್ರೋಣ 112/42–43).

**ದುರ್ವಾಸಾ** – ಕಠೋರವ್ರತದ ಪಾಲನೆ ಮಾಡುವ ಮತ್ತು ಧರ್ಮದ ವಿಷಯದಲ್ಲಿ ತನ್ನ ನಿಶ್ಚಯ ವನ್ನು ಸದಾ ಗುಪ್ತವಾಗಿಡುವ ಒಬ್ಬ ಬ್ರಾಹ್ಮಣ ಮಹರ್ಷಿ. ಈತ ದೊಡ್ಡ ಉಗ್ರಸ್ವಭಾವದವ ನಾಗಿದ್ದನು (ಆದಿ 110/4–5). ಕುಂತಿಯಿಂದ ಈತನ ಪರಿಚರ್ಯೆ (ಆದಿ 110/4). ಈತನಿಂದ ಕುಂತಿಗೆ ದೇವತೆಗಳ ವಶೀಕರಣ ಮಂತ್ರದ ಉಪದೇಶ (ಆದಿ 110/6). ಈತ ಭಗವಂತನಾದ ಶಂಕರನ ಅಂಶದಿಂದ ಹುಟ್ಟಿದ ಶ್ರೇಷ್ಠ ಬ್ರಾಹ್ಮಣ (ಆದಿ 222/52). ರಾಜಾಶ್ವೇತಕಿಯ ನೂರು ವರ್ಷದ ಯಜ್ಞ ಪೂರ್ತಿ ಮಾಡಲು ಭಗವಾನ್ ಶಂಕರನ ಆದೇಶ: ಇವನು ಆ ಆಜ್ಞೆಯನ್ನು ಶಿರಸಾವಹಿಸಿದುದು (ಆದಿ 222/55–58). ಇವ ನಿಂದ ಶ್ವೇತಕಿಯ ಯಜ್ಞದ ಪೂರೈಸುವಿಕೆ (ಆದಿ 222/59). ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/11). ಬ್ರಹ್ಮನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 11/23). ಶ್ರೀಕೃಷ್ಣನಿಗೆ ಈತ ವರವನ್ನಿತ್ತ ಸ್ಥಳ ವರದಾನ ತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾಯಿತು (ವನ 82/63–64). ಆರುಬಾರಿ ಈತನಿಂದ ಮಹರ್ಷಿ ಮುದ್ಗಲನ ದಾನಧರ್ಮಾದಿಗಳ ಪರೀಕ್ಷೆ (ವನ 260/12–21). ಇವನಿಂದ ದುರ್ಯೋಧನನಿಗೆ ವರಪ್ರದಾನ (ವನ 262/23). ಈತ ಪಾಂಡವರ ಆಶ್ರಮಕ್ಕೆ ಹೋದುದು (ವನ 263/1–2). ಸ್ನಾನಕ್ಕೆ ಹೋದ ಈತನಿಗೆ ಪೂರ್ಣ ತೃಪ್ತಿಯ ಅನುಭವವಾದುದರಿಂದ ಪಾಂಡವ ರಲ್ಲಿಗೆ ಹೋಗದೆ, ಶಿಷ್ಯರ ಸಹಿತ ಅಲ್ಲಿಂದಲೇ ಪಲಾಯನ ಮಾಡಿದುದು (ವನ 23/29). ರಾಜಾ ಕುಂತೀಭೋಜನಲ್ಲಿಗೆ ಬಂದುದು ಮತ್ತು ನಿಯಮಕ್ಕೊಳಪಟ್ಟು ವಾಸಿಸಿದುದು (ವನ 303/7–8). ಈತನಿಂದ ಕುಂತಿಗೆ ಅಥರ್ವವೇದದ ಉಪನಿಷತ್ತುಗಳಲ್ಲಿ ಪ್ರಸಿದ್ಧವಾದ ಮಂತ್ರದಾನ (ವನ 305/20). ಪತ್ನಿ ಸಹಿತ ಶ್ರೀಕೃಷ್ಣನು ದುರ್ವಾಸನ ಆರಾಧನೆ ಮಾಡಿದುದು, ಇವನು ಆತನಿಗೆ ವರವನ್ನಿತ್ತದ್ದು (ದ್ರೋಣ 11/9). ಇವನು ಶ್ರೀಕೃಷ್ಣನ ಆತಿಥ್ಯ ಸ್ವೀಕಾರ ಮಾಡಿ, ಅವನ ಕ್ರೋಧವನ್ನು ಪರೀಕ್ಷಿಸಿದುದು (ಅನು 159/18–36). ಶ್ರೀಕೃಷ್ಣನ ಸೇವೆಯಿಂದ ಪ್ರಸನ್ನ ನಾಗಿ, ರುಕ್ಮಿಣಿ ಸಹಿತನಾದ ಆತನಿಗೆ ವರವ ನ್ನಿತ್ತುದು. ಶ್ರೀಕೃಷ್ಣನು ಇವನ ಎಂಜಲನ್ನು ತನ್ನ ಕಾಲುಗಳಿಗೆ ಹಚ್ಚದಿದ್ದುದು ಅಪ್ರಿಯಕಾರ್ಯ ವೆಂದು ಹೇಳಿದುದು (ಅನು 159/37–48). ಮಹಾಪರಾಕ್ರಮಿ ಭಗವಾನ್ ಶಿವನೇ ದುರ್ವಾಸ ನೆಂಬ ಹೆಸರಿನ ಬ್ರಾಹ್ಮಣನಾಗಿ ದ್ವಾರಕಾಪುರದಲ್ಲಿ ಶ್ರೀಕೃಷ್ಣನ ಅರಮನೆಯಲ್ಲಿ ತಂಗಿದ್ದನು (ಅನು 160/137). ಕುಂತಿಯಿಂದ ಕೋಪಿಷ್ಠನೂ ತಪಸ್ವಿಯೂ ಆದ ದುರ್ವಾಸನ ಆರಾಧನೆ, ಇವನಿಂದ ಕುಂತಿಗೆ ವರಪ್ರಾಪ್ತಿಯಾದ ಸಂದರ್ಭದ ವರ್ಣನೆ (ಆಶ್ರಮ 30/2–6). ಮೌಸಲ ಕಾಂಡದಲ್ಲಿ, ಯದುವಂಶವಿನಾಶದ

ಅನಂತರ, ಒಂದು ಸ್ಥಳದಲ್ಲಿ ಕುಳಿತಿದ್ದ ಶ್ರೀಕೃಷ್ಣನು, ತಾನು ಎಂಜಲು ಪಾಯಸವನ್ನು ಕಾಲುಗಳಿಗೆ ಹಚ್ಚದಿದ್ದುದರಿಂದ, ಈತ ಹೇಳಿದ ಮಾತುಗಳ ಸನ್ನಿವೇಶವನ್ನು ಸ್ಮರಿಸಿಕೊಂಡನು (ಮೌಸಲ 4/19).

**ದುರ್ವಿಗಾಹ** – (ದುರ್ವಿಷಹ) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/5). ಭೀಮ ಸೇನನಿಂದ ಈತನ ವಧೆ (ಶಲ್ಯ 26/20). (ನೋಡಿರಿ – ದುರ್ವಿಷಹ).

**ದುರ್ವಿಭಾಗ** – ಒಂದು ದೇಶ. ಇಲ್ಲಿ ಉತ್ತಮ ಕುಲದಲ್ಲಿ ಹುಟ್ಟಿದ ಕ್ಷತ್ರಿಯ ರಾಜಕುಮಾರರು ರಾಜಸೂಯ ಯಜ್ಞದ ಸಂದರ್ಭದಲ್ಲಿ ಯುಧಿಷ್ಠಿರ ನಿಗೆ ತುಂಬಾ ಧನವನ್ನರ್ಪಿಸಿದ್ದರು (ಸಭಾ 52/ 11–17).

**ದುರ್ವಿಮೋಚನ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ. ಭೀಮಸೇನನಿಂದ ಇವನ ವಧೆ (ಶಲ್ಯ 26/16).

**ದುರ್ವಿರೋಚನ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/97). ಭೀಮಸೇನ ನಿಂದ ಇವನ ವಧೆ (ದ್ರೋಣ 127/62).

**ದುರ್ವಿಷಹ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ. ಇವನ ಇನ್ನೊಂದು ಹೆಸರು ದುರ್ವಿಗಾಹ (ಆದಿ 116/5). ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/1). ಈತ ದ್ವೈತವನ ದಲ್ಲಿ ಗಂಧರ್ವರಿಂದ ಸೆರೆಹಿಡಿಯಲ್ಪಟ್ಟಿದ್ದನು (ವನ 242/12). ಭೀಮಸೇನನಿಂದ ಇವನ ವಧೆ (ಶಲ್ಯ 26/20).

**ದುಲಿದುಹ** – ಒಬ್ಬ ಪ್ರಾಚೀನ ರಾಜ (ಆದಿ 1/233).

**ದುಷ್ಕರ್ಣ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/95; ಆದಿ 116/3). ಶತಾನೀಕ ನಿಂದ ಈತ ಪರಾಜಿತನಾದುದು (ಭೀಷ್ಮ 79/46 –52). ಭೀಮಸೇನನಿಂದ ವಧೆ (ದ್ರೋಣ 155/ 40).

**ದುಷ್ಪರಾಜಯ** (ದುರ್ಜಯ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/9). ದ್ವೈತ ವನದಲ್ಲಿ ಗಂಧರ್ವರಿಂದ ಈತ ಸೆರೆಹಿಡಿಯ ಲ್ಪಟ್ಟನು (ವನ 242/12). ನೀಲನೊಂದಿಗೆ ಯುದ್ಧ (ದ್ರೋಣ 25/45). ಭೀಮಸೇನನಿಂದ ಇವನ ವಧೆ (ದ್ರೋಣ 133/41–42).

**ದುಷ್ಪ್ರಧರ್ಷ** (ದುಷ್ಪ್ರಹರ್ಷ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/96). ಭೀಮ ಸೇನನಿಂದ ಇವನ ವಧೆ (ಶಲ್ಯ 26/18–19).

**ದುಷ್ಪ್ರದರ್ಷಣ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/94). ಈತ ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/1).

**ದುಷ್ಯಂತ** –(1) ಪೂರು ವಂಶದ ಒಬ್ಬ ಸುಪ್ರಸಿದ್ಧ ರಾಜ, ಚಕ್ರವರ್ತಿ, ಸಮ್ರಾಟ (ಆದಿ 68/3). ಇವನ ರಾಜ್ಯಭಾರ ಕಾಲದಲ್ಲಿ ಪ್ರಜಾಜನರ ಧಾರ್ಮಿಕತೆಯ ವರ್ಣನೆ (ಆದಿ 68/6–11). ಭಗವಾನ್ ವಿಷ್ಣುವಿಗೆ ಸಮಾನವಾದ ಈತನ ಶಾರೀರಕ ಶಕ್ತಿ, ಸೂರ್ಯನಿಗೆ ಸಮಾನವಾದ ತೇಜಸ್ಸು ಮತ್ತು ಗದಾಯುದ್ಧದ ಕೌಶಲ್ಯ (ಆದಿ 68/11–13). ಇವನ ಬೇಟೆಯ ವರ್ಣನೆ (ಆದಿ 69/1–31). ಕಣ್ವನ ಮನೋಹರ ಆಶ್ರಮಕ್ಕೆ ಈತನ ಪ್ರವೇಶ ಮತ್ತು ಅಲ್ಲಿರುವ ಸೌಂದರ್ಯ ವನ್ನು ನೋಡಿದುದು (ಆದಿ 70/24–51). ಕಣ್ವರ ಆಶ್ರಮದಲ್ಲಿ ಶಕುಂತಲೆಯೊಂದಿಗೆ ಈತನ ಭೇಟಿ. ಆಕೆಗೆ ತನ್ನ ಪರಿಚಯ ಹೇಳಿ, ಆಕೆಯ ಪ್ರತಿಯಾಗಿ ತನ್ನ ಪ್ರೇಮವನ್ನು ಪ್ರಕಟಿಸಿದುದು ಮತ್ತು ಆಕೆಯ ಪರಿಚಯ ಕೇಳಿದುದು (ಆದಿ 71/3–13). ಶಕುಂತಲೆ ಕಣ್ವಪುತ್ರಿಯೆಂದು ಪರಿ ಚಯ ಹೇಳಿದಾಗ, ಮುನಿಯು ಊರ್ಧ್ವರೇತಸ್ಕ ನಾದುದರಿಂದ ಹೇಗೆ ಸಾಧ್ಯವೆಂದು ಸಂಶಯ ವ್ಯಕ್ತಪಡಿಸಿದುದು (ಆದಿ 71/14–17). ಶಕುಂತಲೆ ಈತನೊಡನೆ ತನ್ನ ಜನ್ಮದ ವಿಸ್ತಾರವಾದ ಪರಿಚಯವನ್ನಿತ್ತುದ್ದು (ಆದಿ 71/18 ರಿಂದ 72 ಅಧ್ಯಾಯದ ವರೆಗೆ). ಶಕುಂತಲೆಯು ತನ್ನ ಭಾರ್ಯೆಯಾಗುವಂತೆ ಇವನು ಪ್ರೇರಿಸಿದುದು; ವಿವಾಹದ ಎಂಟು ಪ್ರಭೇದಗಳನ್ನು ತಿಳಿಸಿ, ಆಕೆ ಯೊಂದಿಗೆ ಗಾಂಧರ್ವ ವಿವಾಹ ಮಾಡಿ ಕೊಳ್ಳುವುದನ್ನು ಸಮರ್ಥಿಸಿದುದು (ಆದಿ 73/1– 14). ಶಕುಂತಲೆಯೊಂದಿಗೆ ಇವನ ಗಾಂಧರ್ವ ವಿವಾಹ ಮತ್ತು ಸಮಾಗಮ; ಮಾತ್ರವಲ್ಲದೆ ಆಕೆ ಯನ್ನು ಶೀಘ್ರವಾಗಿ ರಾಜಧಾನಿಗೆ ಕರೆಸಿಕೊಳ್ಳುವ ಆಶ್ವಾಸನೆ (ಆದಿ 73/19–21). ಈತನಿಂದ ಶಕುಂತಳೆಯ ಗರ್ಭದಲ್ಲಿ ಭರತನ ಜನನ (ಆದಿ 74/1–2). ಇವನು ಶಕುಂತಲೆಯನ್ನು ಅಸ್ವೀಕಾರ

ಮಾಡಿದುದು (ಆದಿ 74/19–20). ಶಕುಂತಲೆ ಇವನೊಡನೆ ಧರ್ಮವನ್ನು ಮರೆಯದಂತೆ ಎಚ್ಚರಿಸಿದುದು, ಅಸತ್ಯಭಾಷಣ ಮತ್ತು ಅಧರ್ಮ ದಿಂದಾಗುವ ಭಯವನ್ನು ತಿಳಿಸಿದುದು, ಪತ್ನಿ ಮತ್ತು ಪುತ್ರರ ಮಹಿಮೆಯನ್ನು ಹೇಳುತ್ತಾ, ಪುತ್ರನನ್ನು ಅಂಗೀಕರಿಸಲು ಕ್ರೋಧಪೂರ್ಣ ಆಗ್ರಹ ಮಾಡಿದುದು (ಆದಿ 74/25–72). ಇವನಿಂದ ಶಕುಂತಲೆಯ ಅವಹೇಳನ (ಆದಿ 74/73–81). ಶಕುಂತಲೆಯಿಂದ ಈತನೊಡನೆ ಸತ್ಯಧರ್ಮದ ಶ್ರೇಷ್ಠತ್ವದ ಪ್ರತಿಪಾದನೆ (ಆದಿ 74/101–107). ಈತನ ಸಮ್ಮುಖದಲ್ಲಿ ಆಕಾಶವಾಣಿಯ ಮೂಲಕ ಶಕುಂತಲೆಯ ಮಾತಿನ ಸಮರ್ಥನೆಯಾದಾಗ, ಇವನು ಆಕೆಯನ್ನು ಅಂಗೀಕರಿಸಿದುದು, (ಆದಿ 74/109–126). ನೂರು ವರ್ಷಗಳ ವರೆಗೆ ರಾಜ್ಯಸುಖ ಅನುಭವಿಸಿದ ಅನಂತರ ಇವನ ಸ್ವರ್ಗಗಮನ (ಆದಿ 74/126). ಇವನು ಈಲಿನನ ಪುತ್ರನಾಗಿದ್ದನು. ಇವನ ತಾಯಿಯ ಹೆಸರು ರಥಂತರಿಯಾಗಿತ್ತು (ಆದಿ 94/17). ಇವನು ಯಮನ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15). ಇವನು ಜೀವಮಾನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/64).

(2) ಪೂರುವಂಶದ ಮಹಾರಾಜ ಅಜಮೀಢನಿಂದ 'ನೀಲಿ'ಯ ಗರ್ಭದಲ್ಲಿ ಹುಟ್ಟಿದವನು. ಇವನ ಸಹೋದರನ ಹೆಸರು 'ಪರಮೇಷ್ಠಿ' ಎಂದಾಗಿತ್ತು (ಆದಿ 94/32). ದುಷ್ಯಂತ ಮತ್ತು ಪರಮೇಷ್ಠಿಯ ಎಲ್ಲಾ ಪುತ್ರರು 'ಪಾಂಚಾಲ'ರೆಂದು ಕರೆಯಲ್ಪಟ್ಟರು (ಆದಿ 94/33).

**ದೂಷಣ** – ಜನಸ್ಥಾನ ನಿವಾಸಿ. ಒಬ್ಬ ರಾಕ್ಷಸ. ಈತ ಶ್ರೀರಾಮನಿಂದ ಕೊಲ್ಲಲ್ಪಟ್ಟನು (ಸಭಾ 38/29; ವನ 277/44).

**ದೃಢ** – (1) (ದೃಢವರ್ಮಾ) ಧೃತರಾಷ್ಟ್ರನ ಒಬ್ಬ ಮಗ (ನೋಡಿರಿ–ದೃಢವರ್ಮಾ).

**ದೃಢ** – (2) (ದೃಢಕ್ಷತ್ರ) ಧೃತರಾಷ್ಟ್ರನ ಒಬ್ಬ ಪುತ್ರ (ನೋಡಿರಿ– ದೃಢಕ್ಷತ್ರ).

**ದೃಢಕ್ಷತ್ರ** – (ದೃಢ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/99; ಆದಿ 116/8). ಭೀಮಸೇನನಿಂದ ಇವನ ವಧೆ (ದ್ರೋಣ 157/17–19).

**ದೃಢಧನ್ವಾ** – ಪೂರುವಂಶದ ಒಬ್ಬ ಕ್ಷತ್ರಿಯ. ಇವನು ದ್ರೌಪದಿ ಸ್ವಯಂವರದಲ್ಲಿ ಉಪಸ್ಥಿತ ನಾಗಿದ್ದನು (ಆದಿ 185/15).

**ದೃಢರಥ** – (ದೃಢರಥಾಶ್ರಯ) – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/104). ಭೀಮಸೇನನಿಂದ ಇವನ ವಧೆ (ದ್ರೋಣ 157/17–19).

(2) ಪ್ರಾತಃಸಂಧ್ಯಾಕಾಲಗಳಲ್ಲಿ ಸ್ಮರಣೆ ಮಾಡಲು ಯೋಗ್ಯನಾದ ಒಬ್ಬ ರಾಜ (ಅನು 165/52).

**ದೃಢರಥಾಶ್ರಯ** (ದೃಢರಥ) – ಧೃತರಾಷ್ಟ್ರನ ಒಬ್ಬ ಪುತ್ರ (ಆದಿ 116/12). (ನೋಡಿರಿ – ದೃಢರಥ).

**ದೃಢವರ್ಮಾ** – (ದೃಢ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/99; ಆದಿ 116/8). ಭೀಮಸೇನನಿಂದ ಇವನ ವಧೆ (ದ್ರೋಣ 137/20–30).

**ದೃಢವ್ಯ** – ಒಬ್ಬ ಮಹರ್ಷಿ. ಧರ್ಮರಾಜನ ಏಳುಮಂದಿ ಋತ್ವಿಜರಲ್ಲಿ ಈತನೂ ಒಬ್ಬ. ಇವನು ಸದಾ ದಕ್ಷಿಣ ದಿಕ್ಕನ್ನಾಶ್ರಯಿಸಿ ವಾಸಿಸುತ್ತಾನೆ (ಅನು 150/34–35).

**ದೃಢವ್ರತ** – ಒಬ್ಬ ಮಹರ್ಷಿ. ಇವನು ಸದಾ ದಕ್ಷಿಣ ದಿಕ್ಕನ್ನಾಶ್ರಯಿಸಿ ವಾಸಿಸುತ್ತಾನೆ (ಶಾಂತಿ 208/28–29).

**ದೃಢಸಂಧ** – (ಶತ್ರುಂಜಯ) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/100; ಆದಿ 116/9). ಭೀಮನಿಂದ ಶತ್ರುಂಜಯನೆಂಬ ಹೆಸರಿನಲ್ಲಿ ಈತನ ಮರಣ (ದ್ರೋಣ 137/20–30)

**ದೃಢಸೇನ** – ಪಾಂಡವ ಪಕ್ಷದ ಒಬ್ಬ ಯೋಧ. ದ್ರೋಣಾಚಾರ್ಯನಿಂದ ಇವನ ವಧೆ (ದ್ರೋಣ 21/52).

**ದೃಢಸ್ಯು** – ಮಹರ್ಷಿ ಅಗಸ್ತ್ಯರಿಂದ ಲೋಪಾಮುದ್ರೆಯಲ್ಲಿ ಹುಟ್ಟಿದವನು ಇವನು ತನ್ನ ತಾಯಿಯ ಗರ್ಭದಲ್ಲಿ ಏಳು ವರ್ಷಗಳ ತನಕ ಬೆಳೆದನು. ಏಳು ವರ್ಷಗಳ ಅನಂತರ ತನ್ನ ತೇಜಸ್ಸು ಮತ್ತು ಪ್ರಭಾವದಿಂದ ಪ್ರಜ್ವಲಿತನಾದ ಇವನು ಗರ್ಭದಿಂದ ಹೊರಗೆ ಬಂದನು. ದೃಢಸ್ಯು ಮಹಾವಿದ್ವಾಂಸನೂ ಮಹಾತೇಜಸ್ವಿಯೂ ಮಹಾತಪಸ್ವಿಯೂ ಆಗಿದ್ದನು. ಇವನು ಜನ್ಮಕಾಲ ದಿಂದಲೇ ಉಪನಿಷತ್ತುಗಳ ಸಮೇತ ಸಮಸ್ತ

ವೇದಗಳ ಸ್ವಾಧ್ಯಾಯ ಮಾಡುವಂತೆ ಕಾಣಿಸಿಕೊಂಡನು. ಬಾಲ್ಯಾವಸ್ಥೆಯಲ್ಲಿ ಇಧ್ಮ(ಸಮಿಧೆ)ದ ಭಾರವನ್ನು ಹೊತ್ತದ್ದರಿಂದ ಇವನ ಹೆಸರು 'ಇಧ್ಮವಾಹ'ನೆಂದಾಗಿತ್ತು (ವನ 99/25–27).

**ದೃಢಹಸ್ತ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/102, ಆದಿ 116/10).

**ದೃಢಾಯು** – (1) ಪುರೂರವನಿಂದ ಊರ್ವಶಿಯಲ್ಲಿ ಹುಟ್ಟಿದವನು (ಆದಿ 75/25).

(2) ಒಬ್ಬ ರಾಜ. ಇವನಿಗೆ ಪಾಂಡವಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ಅಭಿಪ್ರಾಯವಿತ್ತು (ಉದ್ಯೋಗ 4/23).

(3) ಒಬ್ಬ ಬ್ರಹ್ಮರ್ಷಿ. ಈತ ಸದಾ ದಕ್ಷಿಣ ದಿಕ್ಕಿನಲ್ಲಿ ವಾಸವಾಗಿರುತ್ತಾನೆ (ಅನು 165/40). (ದಕ್ಷಿಣ ದಿಕ್ಕಿನಲ್ಲಿ ವಾಸಿಸುವ ಋಷಿಗಳ ವರ್ಣನೆ ಮೂರು ಕಡೆ ಬರುತ್ತದೆ. ಎಲ್ಲಾ ಸ್ಥಳಗಳ ಹೆಸರು ಸ್ವಲ್ಪವೇ ಅಂತರದಲ್ಲಿ ಪ್ರಾಯಶಃ ಸಿಗುತ್ತವೆ. ಇವುಗಳನ್ನು ನೋಡುವಾಗ ದೃಢವ್ಯ, ದೃಢವ್ರತ ಮತ್ತು ದೃಢಾಯು ಎಂಬ ಮೂರೂ ಹೆಸರುಗಳು ಒಬ್ಬನದೇ ಎಂದು ಕಾಣುತ್ತವೆ).

**ದೃಢಾಯುಧ** (ಚಿತ್ರಾಯುಧ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/99; ಆದಿ 116/8). ಚಿತ್ರಾಯುಧನೆಂಬ ಹೆಸರಿನಲ್ಲಿ ಈತನ ವಧೆ (ದ್ರೋಣ 136/20–22).

**ದೃಢಾಶ್ವ** – ಇಕ್ಷ್ವಾಕುವಂಶದ ರಾಜ ಕುವಲಯಾಶ್ವನ ಪುತ್ರ. ಇವನು ದುಂಧುರಾಕ್ಷಸನ ಕ್ರೋಧಾಗ್ನಿಯಿಂದ ದಗ್ಧನಾಗದೆ ಬದುಕಿದ್ದನು (ವನ 204/40).

**ದೃಢೇಯು** – ಪಶ್ಚಿಮ ದಿಕ್ಕಿನಲ್ಲಿ ವಾಸಿಸುವ ಒಬ್ಬ ಋಷಿ (ಅನು 150/36).

**ದೃಢೇಷುಧಿ** – ಒಬ್ಬ ಪ್ರಾಚೀನ ರಾಜ (ಆದಿ 1/238).

**ದೃಷದ್ವತೀ** – ಕುರುಕ್ಷೇತ್ರದ ದಕ್ಷಿಣ ಎಲ್ಲೆಯಲ್ಲಿರುವ ಒಂದು ನದಿ. ವನವಾಸಿ ಪಾಂಡವರು ಇದರ ಜಲವನ್ನು ಕುಡಿದಿದ್ದರು (ವನ 5/2). ಇದರ ದಡದಲ್ಲಿ ಭಗವಾನ್ ಶಂಕರನು ಯುಧಿಷ್ಠಿರನಿಗೆ ಉಪದೇಶ ಮಾಡಿದ್ದನು (ಸಭಾ 78/15). ದೃಷದ್ವತಿಯ ಉತ್ತರಕುರುಕ್ಷೇತ್ರದಲ್ಲಿ ವಾಸಿಸುವುದು ಸ್ವರ್ಗವಾಸಕ್ಕೆ ಸಮಾನವಾಗಿದೆ (ವನ 83/4, 204). ದೃಷದ್ವತಿಯಲ್ಲಿ ಸ್ನಾನಮಾಡಿ, ದೇವತೆಗಳಿಗೂ ಪಿತೃಗಳಿಗೂ ತರ್ಪಣ ಕೊಡುವುದರಿಂದ, ಮನುಷ್ಯನು ಅತಿರಾತ್ರ ಮತ್ತು ಅಗ್ನಿಷ್ಟೋಮ ಯಜ್ಞದ ಫಲಪಡೆಯುತ್ತಾನೆ (ವನ 83/87–88).

**ದೃಷದ್ವಾನ್** (ದೃಷದ್ವತ) – ಪೂರುವಂಶದ ರಾಜಾ ಸಂಯಾತಿಯ ಮಾವ ಇವನ ಮಗಳ ಹೆಸರು ವರಾಂಗಿ (ಆದಿ 95/14).

**ದೇವಕ** – (1) ಇಂದ್ರಸಮಾನವಾದ ಕಾಂತಿಯುಳ್ಳ ಒಬ್ಬ ರಾಜ. ಈತ ಯಾವನೋ ಒಬ್ಬ ಗಂಧರ್ವರಾಜನ ಅಂಶದಿಂದ ಹುಟ್ಟಿದ್ದನು (ಆದಿ 67/68). ಇವನು ಉಗ್ರಸೇನನ ಸಹೋದರ, ದೇವಕಿಯ ತಂದೆ ಮತ್ತು ವಸುದೇವನ ಮಾವನಾಗಿದ್ದನು (ಸಭಾ 22/36). ಇವನ ಪುತ್ರಿ ದೇವಕಿಯ ಸ್ವಯಂವರದಲ್ಲಿ ಎಲ್ಲಾ ಕ್ಷತ್ರಿಯರು ಸಮ್ಮಿಲಿತರಾಗಿದ್ದರು (ದ್ರೋಣ 144/9).

(2) ಒಬ್ಬ ರಾಜ. ಇವನಲ್ಲಿ ಬ್ರಾಹ್ಮಣನಿಂದ ಶೂದ್ರಜಾತಿಯಲ್ಲಿ ಹುಟ್ಟಿದ ಒಬ್ಬ ಕನ್ನಿಕೆಯಿದ್ದಳು. ವಿದುರನೊಂದಿಗೆ ಆಕೆಯ ವಿವಾಹವಾಗಿತ್ತು (ಆದಿ 113/12–13).

(3) ಒಬ್ಬ ರಾಜ. ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕೊಡುವ ಅಭಿಪ್ರಾಯವಿತ್ತು (ಉದ್ಯೋಗ 4/17).

**ದೇವಕೀ** – ಉಗ್ರಸೇನನ ಸಹೋದರ ದೇವಕನ ಮಗಳು. ವಸುದೇವನ ಪತ್ನಿ ಮತ್ತು ಶ್ರೀಕೃಷ್ಣನ ತಾಯಿ (ಸಭಾ 22/364). ಈಕೆಯ ಸ್ವಯಂವರದಲ್ಲಿ ಎಲ್ಲಾ ಕ್ಷತ್ರಿಯರು ಏಕತ್ರರಾಗಿದ್ದರು (ದ್ರೋಣ 144/9).

**ದೇವಕುಂಡ** (ದೇವಹ್ರದ) – (1) ಒಂದು ತೀರ್ಥ. ಇಲ್ಲಿ ಸ್ನಾನಮಾಡಿದರೆ ಮನುಷ್ಯನು ಅಶ್ವಮೇಧ ಯಜ್ಞದ ಫಲ ಮತ್ತು ಪರಮಸಿದ್ಧಿ ಪಡೆಯುತ್ತಾನೆ (ವನ 75/20).

(2) ಕೃಷ್ಣವೇಣಾ ಜಲದಿಂದ ಉತ್ಪನ್ನವಾದ ರಮಣೀಯ ದೇವಕುಂಡವು 'ಜಾತಿಸ್ಮರಹ್ರದ' ವೆಂದು ಕರೆಯಲ್ಪಡುತ್ತದೆ ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಜಾತಿಸ್ಮರ(ಪೂರ್ವಜನ್ಮದ ವಿಚಾರಗಳನ್ನು ಜ್ಞಾಪಿಸಿಕೊಳ್ಳುವವ)ನಾಗುತ್ತಾನೆ (ವನ 75/37–38).

**ದೇವಕೂಟ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವ ಮನುಷ್ಯ ಅಶ್ವಮೇಧ ಯಜ್ಞದ ಫಲ

ಪಡೆಯುತ್ತಾನೆ ಮತ್ತು ತನ್ನ ಕುಲವನ್ನು ಉದ್ಧರಿಸುತ್ತಾನೆ (ವನ 84/141).

**ದೇವಗ್ರಹ** – ಕಷ್ಟಕೊಡುವ, ದೇವಸಂಬಂಧಿಯಾದ ಒಂದು ಗ್ರಹ. ಇದನ್ನು ಎಚ್ಚರದಲ್ಲಿ ಅಥವಾ ನಿದ್ರೆಯಲ್ಲಿ ನೋಡುವುದರಿಂದ ಮನುಷ್ಯ ಹುಚ್ಚನಾಗುತ್ತಾನೆ (ವನ 230/47).

**ದೇವದತ್ತ** – ಅರ್ಜುನನ ದಿವ್ಯ ಶಂಖ (ಸಭಾ 3/8). ಈ ಶಂಖವನ್ನು ಮಯಾಸುರನು ಬಿಂದು ಸರೋವರದಿಂದ ತಂದು ಅರ್ಜುನನಿಗೆ ಕೊಟ್ಟಿದ್ದನು (ಸಭಾ 3/10–21). ಶ್ವೇತ ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತ ಅರ್ಜುನ ತನ್ನ ದೇವದತ್ತವೆಂಬ ಹೆಸರಿನ ಶಂಖವನ್ನು ಊದಿದನು (ಭೀಷ್ಮ 25/14–15).

**ದೇವದಾರುವನ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರ ವಿಶೇಷ ಫಲ (ಅನು 25/27).

**ದೇವದೂತ** – ದೇವತೆಗಳ ಪ್ರಸಿದ್ಧ ದೂತ. ಸಾಯಂಕಾಲ ಮತ್ತು ಪ್ರಾತಃಕಾಲ ಇವನ ಸ್ಮರಣೆ ಮಾಡುವುದರಿಂದ ಪಾಪ ದೂರವಾಗುತ್ತದೆ (ಅನು 165/14). ನೀನು ಯುಧಿಷ್ಠಿರನಿಗೆ ತನ್ನ ಸುಹೃತ್ತುಗಳ ದರ್ಶನಮಾಡಿಸೆಂದು ದೇವತೆಗಳು ಈತನಿಗೆ ಆಜ್ಞೆ ಮಾಡಿದರು (ಸ್ವರ್ಗಾ 2/14). ರಾಜನೂ ದೇವದೂತನೂ ಜೊತೆಯಾಗಿ ಹೋದರು ದೇವದೂತನು ಮುಂದೆ ಮುಂದೆ; ರಾಜನು ಅವನ ಹಿಂದೆ ಹಿಂದೆ (ಸ್ವರ್ಗಾ 2/15–16). ಇನ್ನೂ ಎಷ್ಟು ದೂರವಿದೆಯೆಂದು ಯುಧಿಷ್ಠಿರನು ಕೇಳಿದಾಕ್ಷಣ ದೇವದೂತನು ತಿರುಗಿ ನಿಂತನು ಮತ್ತು 'ಸರಿ, ಇಲ್ಲಿವರೆಗೆ ತಾವು ಬರಬೇಕಾಗಿತ್ತು' ಎಂದನು (ಸ್ವರ್ಗಾ 2/28). ಹಿಂತಿರುಗಿ ಹೋಗಲು ಯುಧಿಷ್ಠಿರನು ಆಜ್ಞೆಯನ್ನಿತ್ತಾಗ ಈತ ದೇವರಾಜ ಇಂದ್ರನ ಬಳಿಗೆ ಹೋದನು (ಸ್ವರ್ಗಾ 2/51–53).

**ದೇವನದೀ** – ಒಂದು ನದಿ. ಈಕೆ ವರುಣ ಸಭೆಯಲ್ಲಿದ್ದುಕೊಂಡು ವರುಣನ ಉಪಾಸನೆ ಮಾಡುತ್ತಾಳೆ (ಸಭಾ 9/19).

**ದೇವಪಥ** – ಒಂದು ತೀರ್ಥ. ಇಲ್ಲಿಗೆ ಹೋಗುವುದರಿಂದ ದೇವಸತ್ರದ ಪುಣ್ಯ ಪ್ರಾಪ್ತವಾಗುತ್ತದೆ (ವನ 85/45).

**ದೇವಪುಷ್ಕರಿಣೀ** – ಒಂದು ಪ್ರಾಚೀನ ತೀರ್ಥ. ಇಲ್ಲಿಗೆ ಹೋದ ಮನುಷ್ಯ ಎಂದೂ ದುರ್ಗತಿಗೆ ಬೀಳುವುದಿಲ್ಲ ಮತ್ತು ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ (ವನ 84/118).

**ದೇವಪ್ರಸ್ಥ** – ಉತ್ತರ ದಿಕ್ಕಿನ ಪರ್ವತ ಪ್ರದೇಶದ ಒಂದು ಪ್ರಾಚೀನ ನಗರ. ಇಲ್ಲಿ ಸೇನಾಬಿಂದುವಿನ ರಾಜಧಾನಿ ಇತ್ತು (ಸಭಾ 27/13).

**ದೇವಭ್ರಾಟ್** – ಒಬ್ಬ ತೇಜಸ್ವಿ ದೇವತೆ. ಈತ ರವಿಯ ಪುತ್ರ ಮತ್ತು ಸುಭ್ರಾಟನ ತಂದೆಯಾಗಿದ್ದನು (ಆದಿ 1/42–43).

**ದೇವಮತ** – ಒಬ್ಬ ಪ್ರಾಚೀನ ಮಹರ್ಷಿ. ನಾರದನೊಂದಿಗೆ ಈತನಿಗೆ ಪ್ರಾಣದ ಕುರಿತು ಸಂವಾದ ನಡೆಯಿತು (ಆದಿ 24 ಅಧ್ಯಾಯ).

**ದೇವಮಿತ್ರಾ** – ಸ್ಕಂದನ ಅನುಚರೀ ಮಾತೃಕೆ (ಶಲ್ಯ 46/14).

**ದೇವಮೀಢ** – ಯಯಾತಿ ಪುತ್ರ. ಯದುವಿನ ವಂಶದಲ್ಲಿ ಪ್ರಸಿದ್ಧನಾದ ಒಬ್ಬ ಯಾದವ. ಈತ ಶೂರನ ತಂದೆ ಮತ್ತು ವಸುದೇವನ ಅಜ್ಜನಾಗಿದ್ದನು (ದ್ರೋಣ 144/6).

**ದೇವಯಜನ** – ದೇವತೆಗಳ ಯಜ್ಞಸ್ಥಾನ ಪ್ರಯಾಗ. ಇಲ್ಲಿ ಕಾಶೀರಾಜ ಕುಮಾರಿ ಅಂಬೆ ಕಠೋರವ್ರತ ಕೈಗೊಂಡು ಸ್ನಾನ ಮಾಡಿದ್ದಳು (ಉದ್ಯೋಗ 186/27).

**ದೇವಯಾಜಿ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

**ದೇವಯಾನೀ** – ಶುಕ್ರಾಚಾರ್ಯನ ಪ್ರೀತಿಯ ಪುತ್ರಿ (ಆದಿ 76/15). ಕಚನನ್ನು ಬಿಟ್ಟು ಗೋವುಗಳು ಹಿಂತಿರುಗಿದುದನ್ನು ಕಂಡು, ಈಕೆಯ ಮನಸ್ಸಿನಲ್ಲಿ ಆತ ಕೊಲ್ಲಲ್ಪಟ್ಟ ಸಂಶಯ ಉಂಟಾದುದು, 'ಕಚನ ಹೊರತಾಗಿ ತಾನು ಜೀವಂತವಾಗಿರಲಾರೆನೆಂದು' ಹೇಳುತ್ತಾ, ಆಕೆ ತಂದೆಯೊಡನೆ ಕಚನನ್ನು ಕರೆಸುವಂತೆ ಆಗ್ರಹಿಸಿದುದು (ಆದಿ 76/20–32). ಎರಡನೇ ಬಾರಿಯೂ ದೇವಿಯಾನಿಯ ಒತ್ತಾಯದಿಂದ ಶುಕ್ರಾಚಾರ್ಯರ ಮೂಲಕ ಕಚನಿಗೆ ಜೀವದಾನ (ಆದಿ 76/42). ಮೂರನೇ ಬಾರಿ ಪುನಃ ಕಚನನ್ನು ಬದುಕಿಸಲು ದೇವಯಾನಿಯ ಆಗ್ರಹ (ಆದಿ 76/45–50). ಕಚನೊಂದಿಗೆ ಪಾಣಿಗ್ರಹಣ ಮಾಡಲು ಈಕೆಯ ಒತ್ತಾಯ (ಆದಿ 77/2–11). ಪ್ರಾರ್ಥನೆಯು ಅಸ್ವೀಕೃತವಾದಾಗ ಈಕೆಯಿಂದ ಕಚನಿಗೆ ಶಾಪ (ಆದಿ 77/17). ಕಚನಿಂದ ಈಕೆಗೆ ಶಾಪ (ಆದಿ

77/12–20). ತನ್ನ ಬಟ್ಟೆಯನ್ನು ಉಟ್ಟುಕೊಂಡದ್ದಕ್ಕಾಗಿ, ಶರ್ಮಿಷ್ಠೆಗೆ ಈಕೆಯ ಧಿಕ್ಕಾರ (ಆದಿ 78/8). ಶರ್ಮಿಷ್ಠೆಯಿಂದ ನಿಂದಿಸಲ್ಪಟ್ಟು, ಈಕೆ ಬಾವಿಗೆ ಬೀಳಿಸಲ್ಪಟ್ಟದ್ದು (ಆದಿ 78/9–13). ರಾಜಾ ಯಯಾತಿಯೊಂದಿಗೆ ಈಕೆಯ ಭೇಟಿ, ಮಾತುಕತೆ ಮತ್ತು ಆತನ ಮೂಲಕ ಬಾವಿಯಿಂದ ಈಕೆಯ ಉದ್ಧಾರ. ಬಾವಿಯಿಂದ ಹೊರಬಂದ ಮೇಲೆ, ಈಕೆ ರಾಜಾ ಯಯಾತಿಯೊಂದಿಗೆ, ತನ್ನ ಪಾಣಿಗ್ರಹಣ ಮಾಡಿಕೊಳ್ಳುವಂತೆ ಪ್ರಾರ್ಥಿಸಿದುದು, ಆದರೆ ಬ್ರಾಹ್ಮಣ ಕನ್ಯೆಯಾದುದರಿಂದ ಯಯಾತಿಯು ಈಕೆಯ ಪ್ರಾರ್ಥನೆಯನ್ನು ಅಸ್ವೀಕಾರ ಮಾಡಿದುದು (ಆದಿ 78/14–24). ಘೂರ್ಣಿಕೆಯೆಂಬ ದಾಸಿಯ ಮೂಲಕ, ಈಕೆ ವೃಷಪರ್ವನ ನಗರಕ್ಕೆ ಬರಲಾರೆನೆಂಬ ಸಂದೇಶವನ್ನು ತನ್ನ ತಂದೆಗೆ ಕಳುಹಿಸಿದುದು (ಆದಿ 78/25–27). ಶರ್ಮಿಷ್ಠೆಯು ತನ್ನ ಪುತ್ರಿಗೆ ಹೊಡೆದಿದ್ದಾಳೆಂದು ಕೇಳಿ, ತಂದೆ ಹುಡುಕುತ್ತಾ ಕಾಡಿಗೆ ಹೋದುದು ಮತ್ತು ಆಕೆಯನ್ನು ಸಮಾಧಾನಗೊಳಿಸಿದುದು (ಆದಿ 78/28–31). ಶರ್ಮಿಷ್ಠೆಯು ಮಾಡಿದ ಅಪಮಾನದ ಘಟನೆಯನ್ನು ಈಕೆ ತಂದೆಯ ಮುಂದೆ ವರ್ಣಿಸಿದುದು (ಆದಿ 78/31–36). ಶುಕ್ರಾಚಾರ್ಯನು ಈಕೆಯ ಮುಂದೆ ತನ್ನ ಶಕ್ತಿಯ ವಿವರಣೆ ಮಾಡಿ, ಈಕೆಗೆ ಸಮಾಧಾನ ನೀಡಿದುದು (ಆದಿ 78/37–41). ಶುಕ್ರಾಚಾರ್ಯನು ಸಹನಶೀಲತೆಯನ್ನು ಪ್ರಶಂಸಿಸುತ್ತಾ, ಈಕೆಗೆ ಧೈರ್ಯವನ್ನಿತ್ತದ್ದು (ಆದಿ 79/1–7). ದಾನವರ ಮಧ್ಯ ವಾಸಿಸುವುದರಲ್ಲಿ ಈತನಿಂದ ತನಗಾದ ಅಸಂತೋಷ, ವಿದ್ವಾಂಸರು ಧನಲೋಭದಿಂದ ಕಟುವಚನಗಳನ್ನು ಸಹಿಸುವ ಕುರಿತು ನಿಂದನೆ ಇತ್ಯಾದಿ (ಆದಿ 79/8–13). ಶುಕ್ರಾಚಾರ್ಯನು ತನ್ನ ಪ್ರಿಯಪುತ್ರಿ ದೇವಯಾನಿಗೆ ಪ್ರತಿಯಾಗಿ ಮಾಡಲ್ಪಟ್ಟ, ಅನುಚಿತ ವರ್ತನೆಯನ್ನು ಅಸಹ್ಯವೆಂದು ಹೇಳಿದುದು ಮತ್ತು ದೇವಯಾನಿಯನ್ನು ಸಂತುಷ್ಟಗೊಳಿಸುವಂತೆ ವೃಷಪರ್ವನನ್ನು ಪ್ರೇರಿಸಿದುದು (ಆದಿ 80/9–12). ವೃಷಪರ್ವನು ಕೇಳಿದ್ದನ್ನು ಕೊಡುತ್ತೇನೆಂದು ಪ್ರತಿಜ್ಞೆ ಮಾಡಿದ ಮೇಲೆ, ಒಂದು ಸಾವಿರ ಕನ್ಯೆಯರೊಂದಿಗೆ ಶರ್ಮಿಷ್ಠೆ ಜೀವನಪರ್ಯಂತ ತನ್ನ ದಾಸಿಯಾಗಿರುವಂತೆ ಈಕೆಯ ಕೋರಿಕೆ (ಆದಿ 80/16). ಶರ್ಮಿಷ್ಠೆಯು ದಾಸ್ಯ ಸ್ವೀಕರಿಸಿದ ಮೇಲೆ ನಗರಕ್ಕೆ ಹೋಗಲು ಈಕೆ ಒಪ್ಪಿದುದು (ಆದಿ 80/26). ಸಖಿಯರೊಂದಿಗೆ ಕಾಡಿನಲ್ಲಿ ಕ್ರೀಡಿಸುತ್ತಾ, ಶರ್ಮಿಷ್ಠೆಯಿಂದ ಸೇವ್ಯಳಾಗಿದ್ದ ದೇವಯಾನಿ ಯಯಾತಿಗೆ ಕಾಣಿಸಿದುದು (ಆದಿ 81/1–7). ಯಯಾತಿಯು ವಿಚಾರಿಸಿದಾಗ ದೇವಯಾನಿಯು ಶರ್ಮಿಷ್ಠೆಯ ಸಹಿತ ತನ್ನ ಪರಿಚಯ ನೀಡಿದುದು ಮತ್ತು ಆತ ತನ್ನ ಪತಿಯಾಗುವಂತೆ ಪ್ರಾರ್ಥಿಸಿದುದು (ಆದಿ 81/8–17). ಯಯಾತಿಯು ಬ್ರಾಹ್ಮಣರ ಮಹಿಮೆಯನ್ನು ಹೇಳುತ್ತಾ, ತಾನು ಬ್ರಾಹ್ಮಣಕನ್ಯೆಯನ್ನು ವರಿಸಲು ಅನಧಿಕಾರಿಯೆಂದು ಹೇಳಿದುದು ಮತ್ತು ದೇವಯಾನಿಯ ತಂದೆಯ ಆಜ್ಞೆಯಾಗದೆ, ಈಕೆಯನ್ನು ಸ್ವೀಕರಿಸಲು ಅಸಾಧ್ಯವೆಂಬ ನಿಶ್ಚಯವನ್ನು ತಿಳಿಸಿದುದು (ಆದಿ 81/18–26). ಯಯಾತಿಯೊಂದಿಗೆ ತನ್ನ ವಿವಾಹವಾಗುವಂತೆ ತಂದೆಯೊಂದಿಗೆ ಈಕೆಯ ಪ್ರಾರ್ಥನೆ (ಆದಿ 81/30). ತಂದೆಯಿಂದ ಯಯಾತಿಗೆ ಈಕೆಯ ಸಮರ್ಪಣೆ (ಆದಿ 81/34). ಯಯಾತಿಯೊಂದಿಗೆ ವಿಧಿಪೂರ್ವಕ ಈಕೆಯ ವಿವಾಹ ಮತ್ತು ಪತಿಗೃಹಗಮನ (ಆದಿ 81/36–38). ದೇವಯಾನಿಯ ವಿಹಾರ ಮತ್ತು ದೀರ್ಘಕಾಲದ ವರೆಗೆ ಸುಖೋಪಭೋಗ (ಆದಿ 82/1–4). ಈಕೆಯ ಗರ್ಭಧಾರಣೆ ಮತ್ತು ಪ್ರಥಮ ಪುತ್ರನ ಜನ್ಮ (ಆದಿ 82/5). ಶರ್ಮಿಷ್ಠೆಯ ಪುತ್ರಪ್ರಾಪ್ತಿಯಿಂದ ದೇವಯಾನಿಗೆ ಚಿಂತೆ. ಯಾರೋ ಶ್ರೇಷ್ಠ ಋಷಿಯಿಂದ ಆಕೆಗೆ ಸಂತಾನ ಪ್ರಾಪ್ತಿಯಾಯಿತೆಂದು ತಿಳಿದು, ಈಕೆ ಕ್ರೋಧರಹಿತಳಾಗಿ ಅರಮನೆಯೊಳಗೆ ಹಿಂತಿರುಗಿದುದು (ಆದಿ 83/1–7). ಯಯಾತಿಯಿಂದ ದೇವಯಾನಿಯಲ್ಲಿ ಯದು ಮತ್ತು ತುರ್ವಸು ಎಂಬ ಇಬ್ಬರು ಪುತ್ರರ ಜನನ (ಆದಿ 83/9; 75/35). ಯಯಾತಿಯಿಂದ ಶರ್ಮಿಷ್ಠೆಗೆ ಪುತ್ರರಾದರೆಂಬ ಗುಟ್ಟು ಬಾಲಕರಿಂದಲೇ ಬಯಲಾದಾಗ, ದೇವಯಾನಿ ಶರ್ಮಿಷ್ಠೆಯನ್ನು ನಿಂದಿಸಿದುದು ಮತ್ತು ಯಯಾತಿಯ ಮೇಲೆ ಸಿಟ್ಟುಗೊಂಡು, ತನ್ನ ತಂದೆಯ ಮನೆಗೆ ಹೋದುದು (ಆದಿ 83/11–26). ಈಕೆಯಿಂದ ತಂದೆಯೊಡನೆ ಯಯಾತಿಯ ಅಸದ್ವರ್ತನೆಯ ನಿವೇದನೆ, ಈಕೆಯ ತಂದೆಯಿಂದ ರಾಜನಿಗೆ

ವೃದ್ಧನಾಗಲು ಶಾಪ (ಆದಿ 83/28-31). ಮಹಾಭಾರತದಲ್ಲಿ ಬಂದಿರುವ ದೇವಯಾನಿಯ ಹೆಸರು – ಔಶನಸೀ, ಭಾರ್ಗವೀ, ಶುಕ್ರತನಯಾ ಇತ್ಯಾದಿ

**ದೇವರಾಜ** – ಒಬ್ಬ ರಾಜ. ಈತ ಯಮಸಭೆಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/26).

**ದೇವರಾತ** – (1) ಯುಧಿಷ್ಠಿರನ ಸಭೆಯಲ್ಲಿ ಉಪಸ್ಥಿತನಾಗಿರುವ ಒಬ್ಬ ರಾಜ (ಸಭಾ 4/26). (2) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/50). ನಿಜವಾಗಿ ಈತ ಋಚೀಕ(ಅಜೀಗರ್ತ)ನ ಮಹಾತಪಸ್ವೀ ಪುತ್ರ ಶುನಃಶೇಪನಾಗಿದ್ದಾನೆ. ಈತ ಒಂದು ಯಜ್ಞದಲ್ಲಿ ಪಶುವಿನ ಸ್ಥಾನಕ್ಕೆ ತರಲ್ಪಟ್ಟಿದ್ದನು. ವಿಶ್ವಾಮಿತ್ರನು ದೇವತೆಗಳನ್ನು ಸಂತುಷ್ಟಗೊಳಿಸಿ ಇವನನ್ನು ಬಿಡಿಸಿದ್ದನು. ಆದುದರಿಂದ ಈತ ವಿಶ್ವಾಮಿತ್ರನ ಪುತ್ರಭಾವಕ್ಕೆ ಒಳಗಾದನು. ದೇವತೆಗಳು ಕೊಟ್ಟದ್ದರಿಂದ ಈತನ ಹೆಸರು ದೇವರಾತನಾಯಿತು (ಅನು 3/6-8).

**ದೇವಲ** – (1) ಒಬ್ಬ ಸುಪ್ರಸಿದ್ಧ ಋಷಿ ಈತ ಪ್ರತ್ಯೂಷನೆಂಬ ವಸುವಿನ ಮಗ (ಆದಿ 66/26). (2) ಒಬ್ಬ ದೇವವಿದ್ಯಾಪಾರಂಗತ ಋಷಿ ಈತ ಮಹರ್ಷಿ ಧೌಮ್ಯನ ಅಣ್ಣನಾಗಿದ್ದನು ಮತ್ತು ಜನಮೇಜಯನ ಸರ್ಪಸತ್ರದ ಸದಸ್ಯನಾಗಿ ಮಾಡಲ್ಪಟ್ಟಿದ್ದನು (ಆದಿ 53/8; ಆದಿ 182/2). ಹಸ್ತಿನಾವತಿಗೆ ಹೋಗುವಾಗ ಶ್ರೀಕೃಷ್ಣನು ಈತನೊಡನೆ ಭೇಟಿಯಾದುದು (ಉದ್ಯೋಗ 83/64). ಯುದ್ಧದ ಬಳಿಕ ಯುಧಿಷ್ಠಿರನ ಹತ್ತಿರ ಬಂದುದು (ಶಾಂತಿ 1/4). ತನ್ನ ಕನ್ಯೆ ಸುವರ್ಚಲಾಳ ವಿವಾಹದ ಕುರಿತು ಈತನ ಆಲೋಚನೆ; ತನ್ನ ಕನ್ಯೆಯ ಸ್ವಯಂವರಕ್ಕಾಗಿ ಮುನಿಕುಮಾರರನ್ನು ಕರೆಸಿದುದು ಮತ್ತು ಆಕೆಯನ್ನು ಶ್ವೇತಕೇತುವಿನ ಕೈಗೊಪ್ಪಿಸಿದುದು (ಶಾಂತಿ 220).

**ದೇವವನ** – ಒಂದು ಪುಣ್ಯಕ್ಷೇತ್ರ. ಇಲ್ಲಿ ಬಾಹುದಾ ಮತ್ತು ನಂದಾ ನದಿಗಳು ಹರಿಯುತ್ತವೆ (ವನ 87/26).

**ದೇವವ್ರತ** – ಗಂಗೆಯ ಗರ್ಭದಿಂದ ಶಾಂತನುವಿನ ಮೂಲಕ ಜನಿಸಿದವನು (ಆದಿ 100/21). (ನೋಡಿರಿ – 'ಭೀಷ್ಮ').

**ದೇವಶರ್ಮಾ** – ಒಬ್ಬ ಋಷಿ. ಈತ ಜನಮೇಜಯನ ಸರ್ಪಸತ್ರದ ಸದಸ್ಯನಾಗಿ ಮಾಡಲ್ಪಟ್ಟಿದ್ದನು (ಆದಿ 53/9). ಈತ ಮಹಾಭಾಗ್ಯಶಾಲಿಯಾದ ಋಷಿ. ಇವನ ಪತ್ನಿಯ ಹೆಸರು ರುಚಿ. ಆಕೆ ಈ ಭೂಮಿಯಲ್ಲಿ ಅದ್ವಿತೀಯ ಸುಂದರಿಯಾಗಿದ್ದಳು (ಅನು 40/16). ಈತ ತನ್ನ ಶಿಷ್ಯ ವಿಪುಲನಿಗೆ ತನ್ನ ಪತ್ನಿಯ ರಕ್ಷಣೆಯ ಭಾರವನ್ನು ವಹಿಸಿಕೊಟ್ಟು, ಯಜ್ಞಕ್ಕೆ ಹೋಗಲು ಸಿದ್ಧನಾದುದು (ಅನು 40/22-23). ವಿಪುಲನು ಕೇಳಿದಾಗ ಆತ ಇಂದ್ರನ ಸ್ವರೂಪವೆಂದು ಹೇಳಿದುದು (ಅನು 40/28-38). ಈತ ತನ್ನ ಆಶ್ರಮಕ್ಕೆ ಹಿಂತಿರುಗಿದುದು ಮತ್ತು ವಿಪುಲನಿಗೆ ವರವನ್ನಿತ್ತದ್ದು (ಅನು 41/28-34). ದಿವ್ಯ ಪುಷ್ಪವನ್ನು ತರಲು ವಿಪುಲನನ್ನು ಕಳುಹಿಸಿದುದು (ಅನು 42/12). ವಿಪುಲನನ್ನು ನಿರ್ದೋಷಿಯೆಂದು ಹೇಳಿ ಸಮಾಧಾನಗೊಳಿಸಿದುದು (ಅನು 43/4-16). ಈತ ಉತ್ತರ ದಿಕ್ಕನ್ನಾಶ್ರಯಿಸಿ ವಾಸಿಸುವ ಋಷಿ (ಅನು 165/46).

**ದೇವಸತ್ರ** – ಒಂದು ಯಜ್ಞದ ಹೆಸರು (ವನ 84/68).

**ದೇವಸಮ** – ಒಂದು ಪರ್ವತ. ಇಲ್ಲಿ ಅಗಸ್ತ್ಯನ ಶಿಷ್ಯನ ಆಶ್ರಮವಿದೆ (ವನ 88/17).

**ದೇವಸೇನಾ** – ದಕ್ಷಪ್ರಜಾಪತಿಯ ಮಗಳು. ದೈತ್ಯಸೇನೆಯ ಸೋದರಿ. ಕೇಶಿಯೆಂಬ ರಾಕ್ಷಸನಿಂದ ಈಕೆಯ ಅಪಹಾರವಾದಾಗ ಇಂದ್ರನಿಂದ ಬಿಡುಗಡೆಯಾಗಿತ್ತು (ವನ 223/7-15). ಈಕೆ ತನ್ನ ಮತ್ತು ತನ್ನ ಸಹೋದರಿಯ ಪರಿಚಯವನ್ನಿತ್ತು; ತನ್ನ ಭಾವೀ ಪತಿಯ ಲಕ್ಷಣಗಳನ್ನು ಇಂದ್ರನಲ್ಲಿ ವರ್ಣಿಸಿದುದು (ವನ 224/1-9). ಸ್ಕಂದನೊಂದಿಗೆ ಈಕೆಯ ವಿವಾಹ (ವನ 229/48).

**ದೇವಸ್ಥಾನ** – ಒಬ್ಬ ಪ್ರಾಚೀನ ಋಷಿ. ಈತ ಯುದ್ಧದ ಅನಂತರ ಯುಧಿಷ್ಠಿರನ ಬಳಿಗೆ ಬಂದಿದ್ದನು (ಶಾಂತಿ 1/4). ಇವನು ಯುಧಿಷ್ಠಿರನನ್ನು ಯಜ್ಞಾನುಷ್ಠಾನಕ್ಕೆ ಪ್ರೇರಿಸಿದನು (ಶಾಂತಿ 20/2-14). ಇವನು ಯುಧಿಷ್ಠಿರನಿಗೆ ಉತ್ತಮಧರ್ಮ ಮತ್ತು ಯಜ್ಞಾನುಷ್ಠಾನದ ಉಪದೇಶ ನೀಡಿದನು (ಶಾಂತಿ 21 ಅಧ್ಯಾಯ). ಇವನೂ ಇತರ ಮುನಿಗಳೂ ಸಮಾಧಾನಗೊಳಿಸಿದ ಮೇಲೆ ಯುಧಿಷ್ಠಿರನು ಮಾನಸಿಕ

ದುಃಖವನ್ನು ತ್ಯಾಗ ಮಾಡಿದನು (ಶಾಂತಿ 37/27). ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಈತನೂ ಹೋಗಿದ್ದನು (ಶಾಂತಿ 47/5). ಭೀಷ್ಮನಿಂದ ರಾಜಧರ್ಮ ವಿಷಯದ ಭಾಷಣ ಕೇಳಿ, ಇವನಿಗೆ ಸಂತೋಷವಾಯಿತು (ಶಾಂತಿ 58/25). ಇವನು ಸಮಾಧಾನಗೊಳಿಸಿದುದರಿಂದ ಯುಧಿಷ್ಠಿರನ ಮನಸ್ಸು ಶಾಂತವಾಯಿತು ಮತ್ತು ಆತ ಮಾನಸಿಕ ಶೋಕದಿಂದ ಹುಟ್ಟಿದ ದುಃಖವನ್ನು ಬಿಟ್ಟುಬಿಟ್ಟನು (ಆಶ್ವ 14/2).

**ದೇವಹವ್ಯ** – ಒಬ್ಬ ಪ್ರಾಚೀನ ಋಷಿ. ಈತ ಇಂದ್ರಸಭೆಯಲ್ಲಿದ್ದುಕೊಂಡು ದೇವೇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/18).

**ದೇವಹೋತ್ರ** – ಒಬ್ಬ ಋಷಿ. ಇವನು ಉಪರಿಚರನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/9).

**ದೇವಹ್ರದ** – ಕಾಲಂಜರ ಪರ್ವತದಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಸಹಸ್ರ ಗೋದಾನದ ಫಲ ಸಿಗುತ್ತದೆ (ವನ 85/56). ಇಲ್ಲಿ ಸ್ನಾನ ಮಾಡಿದರೆ ವಿಶೇಷ ಫಲ (ಅನು 25/40).

**ದೇವಾತಿಥಿ** – ಪೂರುವಂಶದ ರಾಜಾ ಅಕ್ರೋಧನನಿಗೆ ಕಲಿಂಗದೇಶದ ರಾಜಕುಮಾರಿ ಕರಂಭಾಳ ಗರ್ಭದಲ್ಲಿ ಹುಟ್ಟಿದವನು (ಆದಿ 95/22). ಇವನ ಪತ್ನಿಯ ಹೆಸರು ಮರ್ಯಾದಾ, ಈಕೆ ವಿದೇಹರಾಜನ ಮಗಳಾಗಿದ್ದಳು. ಇವನ ಪುತ್ರನ ಹೆಸರು ಅರಿಹನೆಂದಾಗಿತ್ತು (ಆದಿ 95/23).

**ದೇವಾಧಿಪ** – ಒಬ್ಬ ಕ್ಷತ್ರಿಯ ರಾಜ. ಇವನು ಅಜೇಯ ದೈತ್ಯನಾದ ನಿಶುಂಭನ ಅಂಶದಿಂದ ಹುಟ್ಟಿದ್ದನು (ಆದಿ 67/26–27).

**ದೇವಾಪಿ** – (1) ಮಹಾರಾಜ ಪ್ರತೀಪನ ಪ್ರಥಮ ಪುತ್ರ, ಶಾಂತನುವಿನ ಅಣ್ಣ. ಈತ ಧರ್ಮಾಚರಣೆಯ ಮೂಲಕ ಕಲ್ಯಾಣಪ್ರಾಪ್ತಿಯ ಇಚ್ಛೆಯಿಂದ ಕಾಡಿಗೆ ಹೋದನು. ಆದುದರಿಂದ ಶಾಂತನು ಮತ್ತು ಬಾಹ್ಲೀಕರೇ ರಾಜ್ಯವನ್ನು ಪಡೆದರು (ಆದಿ 94/61–62). ಧಾರ್ಮಿಕವಾಗಿ ಈ ಪೃಥ್ವಿಯ ಶಾಸನ ಮಾಡುತ್ತಿದ್ದ ಮಹಾರಾಜ ಪ್ರತೀಪನಿಗೆ ದೇವತೆಗಳಂತಿರುವ ಮೂವರು ಪುತ್ರರಾದರು – ದೇವಾಪಿ, ಬಾಹ್ಲೀಕ, ಶಾಂತನು. ದೇವಾಪಿ ಎಲ್ಲರಿಗಿಂತ ಹಿರಿಯವನು. ಈತ ಮಹಾತೇಜಸ್ವಿಯೂ ಧಾರ್ಮಿಕನೂ ಸತ್ಯವಾದಿಯೂ ಪಿತೃಸೇವಾತತ್ಪರನೂ ಸಾಧುಗಳಿಂದ ಸಮ್ಮಾನಿತನೂ ನಗರ ಮತ್ತು ಜನಪದ ನಿವಾಸಿಗಳಿಗೆ ಆದರಣೀಯನೂ ಆಗಿದ್ದನು. ದೇವಾಪಿ ಆಬಾಲವೃದ್ಧರ ಹೃದಯದಲ್ಲಿ ಸ್ಥಾನಪಡೆದಿದ್ದನು. ಈತ ತನ್ನ ಇಬ್ಬರೂ ಸಹೋದರರಿಗೆ ಪ್ರೀತಿಪಾತ್ರನಾಗಿದ್ದನು. ಈ ಮೂವರೂ ಸಹೋದರರಲ್ಲಿ ಉತ್ತಮ ಸಾಹೋದರ್ಯದ ಸ್ನೇಹಪೂರ್ಣ ವರ್ತನೆ ಇತ್ತು. ದೇವಾಪಿ ಉದಾರನೂ ಸತ್ಯಪ್ರತಿಜ್ಞನೂ ಸಮಸ್ತ ಪ್ರಾಣಿಗಳ ಹಿತೈಷಿಯೂ ಆಗಿದ್ದನು; ಆದರೆ ಚರ್ಮರೋಗದಿಂದ ಪೀಡಿತನಾಗಿದ್ದನು. ತಂದೆಯಾದ ಪ್ರತೀಪ ಇವನ ಪಟ್ಟಾಭಿಷೇಕಕ್ಕೆ ಸಿದ್ಧತೆ ಮಾಡಿದನು. ಆದರೆ ನಗರ ಮತ್ತು ಜನಪದದ ಜನರೂ ಬ್ರಾಹ್ಮಣರೂ ಬಂದು ಅದನ್ನು ತಡೆದರು. ಹೀನಾಂಗನಾದ ರಾಜನನ್ನು ದೇವತೆಗಳು ಅಭಿನಂದಿಸುವುದಿಲ್ಲ. ಆದುದರಿಂದ ಚರ್ಮರೋಗ ದೋಷದಿಂದಲೇ ಈತ ರಾಜ್ಯಕ್ಕೆ ಅನಧಿಕಾರಿಯೆಂದು ಹೇಳಲ್ಪಟ್ಟನು. ಇದರಿಂದಾಗಿ ತಂದೆಯ ಕಣ್ಣುಗಳಲ್ಲಿ ನೀರೂರಿತು. ಆತ ದೇವಾಪಿಗಾಗಿ ದುಃಖಿತನಾದನು. ದೇವಾಪಿ ಮೌನವಾಗಿ ಕಾಡಿಗೆ ತೆರಳಿದನು. ಬಾಹ್ಲೀಕನು ಮಾವನ ಮನೆಗೆ ಹೋಗಿ ವಾಸಿಸತೊಡಗಿದನು. ಆದುದರಿಂದ ಬಾಹ್ಲೀಕನ ಒಪ್ಪಿಗೆಯಿಂದ ಆ ರಾಜ್ಯ ಶಾಂತನುವಿನ ಅಧಿಕಾರಕ್ಕೆ ಬಂತು (ಉದ್ಯೋಗ 149/15–28). ದೇವಾಪಿ ಕುರುಕ್ಷೇತ್ರದೊಳಗಿರುವ ಪೃಥೂದಕ ತೀರ್ಥದಲ್ಲಿ ತಪಸ್ಸು ಮಾಡಿ ಬ್ರಾಹ್ಮಣ್ಯವನ್ನು ಪಡೆಕೊಂಡನು (ಶಲ್ಯ 39/37).

(2) ಪಾಂಡವ ಪಕ್ಷದ, ಚೇದಿದೇಶದ ಒಬ್ಬ ಯೋಧ. ಇವನು ಕರ್ಣನಿಂದ ಹತನಾದನು (ಕರ್ಣ 56/48).

**ದೇವಾರಣ್ಯ** – ಒಂದು ತೀರ್ಥ. ಇಲ್ಲಿ ಕಾಶೀ ರಾಜಕುಮಾರಿ ಅಂಬೆ ಕಠೋರವ್ರತವನ್ನು ಕೈಗೊಂಡು ತಪಸ್ಸು ಮಾಡಿದ್ದಳು (ಉದ್ಯೋಗ 186/27).

**ದೇವಾವೃಂದ** – (1) ಕೌರವಪಕ್ಷದ ಒಬ್ಬ ಮಹಾರಥಿ ಯೋಧ (ಕರ್ಣ 85/3).

(2) ಒಬ್ಬ ಪ್ರಾಚೀನ ರಾಜ. ಇವನು ಚಿನ್ನದ

ಕೊಡೆಯನ್ನು ದಾನಮಾಡಿ; ತನ್ನ ದೇಶದ ಪ್ರಜೆಗಳೊಂದಿಗೆ ಸ್ವರ್ಗಲೋಕವನ್ನು ಪಡೆದಿದ್ದನು (ಶಾಂತಿ 234/21; ಅನು 137/7).

**ದೇವಾಹ್ವಯ** – ಒಬ್ಬ ಪ್ರಾಚೀನ ರಾಜ (ಆದಿ 1/235).

**ದೇವಿಕಾ** – (1) ಶಿಬಿರಾಜ ಗೋವಾಸನನ ಪುತ್ರಿ. ಈಕೆಯನ್ನು ಯುಧಿಷ್ಠಿರನು ಸ್ವಯಂವರದಲ್ಲಿ ಪಡೆದಿದ್ದನು. ಈಕೆಯ ಗರ್ಭದಿಂದ ಆತನಿಗೆ ಯೌಧೇಯನೆಂಬ ಮಗನು ಹುಟ್ಟಿದನು (ಆದಿ 95/76).

(2) ಒಂದು ತೀರ್ಥ. ಇಲ್ಲಿ ಬ್ರಾಹ್ಮಣರ ಉತ್ಪತ್ತಿಯಾಯಿತೆಂದು ಹೇಳಲ್ಪಡುತ್ತದೆ. ದೇವಿಕೆಯಲ್ಲಿ ಸ್ನಾನಮಾಡಿ, ಭಗವಾನ್ ಮಹೇಶ್ವರನ ಪೂಜೆ ಮತ್ತು ಅವನಿಗೆ ಯಥಾಶಕ್ತಿ ಚರು ನಿವೇದನೆ ಮಾಡುವುದರಿಂದ, ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 82/102). ಇಲ್ಲಿ ಸ್ನಾನ ಮಾಡಿದರೆ ಸಿಗುವ ವಿಶೇಷಫಲ (ಅನು 25/9).

**ದೇವೀ** – (1) ವರುಣನ ಜ್ಯೇಷ್ಠಪತ್ನಿ. ಈಕೆ ಬಲನೆಂಬ ಪುತ್ರನಿಗೂ, ಸುರಾ ಎಂಬ ಕನ್ಯೆಗೂ ಜನ್ಮವಿತ್ತಳು (ಆದಿ 66/52).

(2) ಸ್ವರ್ಗದ ಅಪ್ಸರೆ. ಇವಳು ಅರ್ಜುನನ ಜನ್ಮಮಹೋತ್ಸವದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/62).

**ದೇವೀತೀರ್ಥ** – ಕುರುಕ್ಷೇತ್ರದ ಎಲ್ಲೆಯಲ್ಲಿ ಈ ಹೆಸರಿನ ಮೂರು ತೀರ್ಥಗಳಿವೆ. ಮೊದಲನೆಯದು ಶಂಖಿನಿ ತೀರ್ಥದೊಳಗಿದೆ. ಅದರಲ್ಲಿ ಸ್ನಾನಮಾಡಿದರೆ ಉತ್ತಮ ರೂಪಪ್ರಾಪ್ತವಾಗುತ್ತದೆ (ವನ 83/51). ಎರಡನೆಯದು ಮಧುವಟಿಯೊಳಗಿದೆ. ಅಲ್ಲಿ ದೇವತೆ ಮತ್ತು ಪಿತೃಗಳ ಪೂಜೆಮಾಡಿದ ಮನುಷ್ಯ, ದೇವಿಯ ಆಜ್ಞೆಯಿಂದ ಸಹಸ್ರ ಗೋದಾನದ ಫಲ ಪಡೆಯುತ್ತಾನೆ (ವನ 83/94). ಮೂರನೆಯದು ಮೃಗಧೂಮ ತೀರ್ಥದ ಅನಂತರ ಬರುತ್ತದೆ. ಅಲ್ಲಿ ಸ್ನಾನ ಮಾಡುವುದರಿಂದ ಸಹಸ್ರ ಗೋದಾನದ ಫಲ ಸಿಗುತ್ತದೆ (ವನ 83/102).

**ದೇವೀಸ್ಥಾನ** – ಒಂದು ತೀರ್ಥ. ಇದು ಶಾಕಂಭರೀದೇವಿಯ ನಿವಾಸ ಸ್ಥಾನವಾಗಿದೆ. ಇಲ್ಲಿ ಮೂರುದಿನ ಶಾಕಾಹಾರ ಸೇವಿಸುವುದರಿಂದ, ಹನ್ನೆರಡು ವರ್ಷ ಶಾಕಾಹಾರ ಸೇವಿಸಿದುದರ ಪುಣ್ಯಫಲ ಪ್ರಾಪ್ತವಾಗುತ್ತದೆ (ವನ 84/13).

**ದೈತ್ಯದ್ವೀಪ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ದೈತ್ಯಸೇನಾ** – ದಕ್ಷ ಪ್ರಜಾಪತಿಯ ಪುತ್ರಿ. ದೇವಸೇನೆಯ ಸಹೋದರಿ. ಈಕೆಯನ್ನು ಕೇಶಿ ಎಂಬ ರಾಕ್ಷಸನು ಅಪಹರಿಸಿದ್ದನು (ವನ 224/1).

**ದೈವ** – ವಿವಾಹದ ಒಂದು ರೀತಿ (ತನ್ನ ಮನೆಯಲ್ಲಿ ದೇವಯಜ್ಞ ಮಾಡಿ, ಯಜ್ಞಾಂತ್ಯದಲ್ಲಿ ಋತ್ವಿಜನಿಗೆ ತನ್ನ ಕನ್ಯೆಯನ್ನು ದಾನ ಮಾಡುವುದು ದೈವವಿವಾಹವೆಂದು ಹೇಳಲ್ಪಡುವುದು). ಈ ವಿವಾಹವು ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯ ಈ ಮೂರು ವರ್ಣಗಳಲ್ಲಿ ಗ್ರಾಹ್ಯವೆಂದು ಪರಿಗಣಿತವಾಗಿದೆ (ಆದಿ 73/8–10).

**ದೈವೀಸಂಪತ್ತಿ** – ಅಭಯ ಇತ್ಯಾದಿ ದಿವ್ಯ ಗುಣಗಳ ಹೆಸರು (ಭೀಷ್ಮ 40/1–3). ದೈವೀ ಸಂಪತ್ತಿ ಸಂಸಾರದಿಂದ ಮೋಕ್ಷ ಕೊಡಿಸುವಂಥಾದ್ದೆಂದು ತಿಳಿಯಲ್ಪಟ್ಟಿದೆ (ಭೀಷ್ಮ 40/5).

**ದೌವಾಲಿಕ** – ಒಂದು ದೇಶ. ಇಲ್ಲಿನ ರಾಜನೂ, ಪ್ರಜೆಗಳೂ ರಾಜಸೂಯಾಧ್ವರದಲ್ಲಿ ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದರು (ಸಭಾ 52/18).

**ದ್ಯು** – (ನೋಡಿರಿ 'ದ್ಯೌ').

**ದ್ಯುತಿ** – ಒಬ್ಬಳು ದೇವಿ. ಈಕೆಯಿಂದ ಅರ್ಜುನನ ಸಂರಕ್ಷಣೆಯಾಗಲೆಂಬ ಶುಭಕಾಮನೆಯನ್ನು ದ್ರೌಪದಿ ಮಾಡಿದ್ದಳು (ವನ 37/33).

**ದ್ಯುತಿಮಂತ** – (1) ಮಗಧದೇಶದ ಒಬ್ಬ ರಾಜ. ಈತನ ಪುತ್ರಿ ವಿಜಯಾ ಎಂಬವಳನ್ನು ಸಹದೇವನು ಸ್ವಯಂವರದಲ್ಲಿ ಪಡೆದಿದ್ದನು (ಆದಿ 95/80).

(2) ಶಾಲ್ವ ದೇಶದ ಒಬ್ಬ ರಾಜ. ಇವನು ಋಚೀಕನಿಗೆ ರಾಜ್ಯವನ್ನಿತ್ತು ಉತ್ತಮ ಲೋಕವನ್ನು ಪಡೆದಿದ್ದನು (ಶಾಂತಿ 234/33; ಅನು 137/23).

(3) ಇಕ್ಷ್ವಾಕುವಂಶದ ಮದಿರಾಶ್ವನ, ಮಹಾಭಾಗ್ಯವಂತನೂ, ಮಹಾತೇಜಸ್ವಿಯೂ, ಮಹಾನ್ ಧೈರ್ಯಶಾಲಿಯೂ, ಮಹಾಬಲವಂತನೂ ಆದ ಪುತ್ರ. ಇವನ ಮಗನ ಹೆಸರು ಸುವೀರನೆಂದಾಗಿತ್ತು (ಅನು 2/9).

**ದ್ಯುಮತ್ಸೇನ** – (1) ಒಬ್ಬ ಪ್ರಾಚೀನ ರಾಜ. ಈತ ಬಲವಂತರಲ್ಲಿ ಆದರ್ಶನೆಂದು ತಿಳಿಯಲ್ಪಡುತ್ತಿದ್ದನು (ಆದಿ 138/5). ಇವನೇ ಶಾಲ್ವದೇಶದ ಧರ್ಮಾತ್ಮರಾಜನೂ, ಸತ್ಯವಾನನ ತಂದೆಯೂ ಆಗಿದ್ದನು (294/7). ಈತ ಮಹಾರಾಜ ಅಶ್ವಪತಿಯೊಡನೆ ಸತ್ಯವಾನನ ವಿವಾಹಕ್ಕೆ ಒಪ್ಪಿದುದು (ವನ 295/14). ಸತ್ಯವಾನನೊಂದಿಗೆ ಕಾಡಿಗೆ ಹೋಗಲು ಸಾವಿತ್ರಿಯ ಪ್ರಾರ್ಥನೆಯನ್ನು ಒಪ್ಪಿದುದು (ವನ 296/27). ಇವನ ಕುರುಡಾಗಿದ್ದ ಕಣ್ಣುಗಳಿಗೆ ನೋಡುವ ಶಕ್ತಿ ಬಂದುದು; ಈತ ತನ್ನ ಪತ್ನಿ ಶೈವ್ಯೆಯೊಂದಿಗೆ ಋಷಿಗಳ ಆಶ್ರಮಕ್ಕೆ ಹೋಗಿ ಸತ್ಯವಾನನನ್ನು ಹುಡುಕಿದುದು (ವನ 298/2). ಸತ್ಯವಾನನು ಕಾಡಿನಿಂದ ಹಿಂತಿರುಗದಿದ್ದಾಗ ಈತನ ಚಿಂತೆ (ವನ 297/8). ಶಾಲ್ವದೇಶದ ಪ್ರಜೆಗಳ ಒತ್ತಾಯದಿಂದ ಇವನ ಪಟ್ಟಾಭಿಷೇಕ (ವನ 299/11). ಸತ್ಯವಾನನೊಂದಿಗೆ ಮಾತುಕತೆ (ಶಾಂತಿ 267 ಅಧ್ಯಾಯ). (2) ಪರ್ವತ ಪ್ರದೇಶದ ಒಬ್ಬ ರಾಜ. ಇವನೊಂದಿಗೆ ಶ್ರೀಕೃಷ್ಣನು ಸಹಸ್ರಾರು ಪರ್ವತಗಳನ್ನು ಹುಡಿಗುಟ್ಟಿ ಯುದ್ಧಮಾಡಿದ್ದನು (ಸಭಾ 38/29). ಇವನು ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/31).

**ದ್ಯೂತಪರ್ವ** – ಸಭಾಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 46 ರಿಂದ 73ರ ತನಕ).

**ದ್ಯೋ** (ದ್ಯು) – ಅಷ್ಟವಸುಗಳಲ್ಲಿ ಒಬ್ಬ (ಆದಿ 99/15). ಇವನಿಂದ ನಂದಿನಿಯ ಗುಣಗಳ ವರ್ಣನೆ (ಆದಿ 99/19–20). ನಂದಿನಿ (ಗೋವು)ಯ ಅಪಹರಣ ಮಾಡುವಂತೆ ಇವನೊಡನೆ ಈತನ ಪತ್ನಿಯ ಪ್ರಾರ್ಥನೆ (ಆದಿ 99/24). ಇವನಿಂದ ನಂದಿನಿಯ ಅಪಹಾರ (ಆದಿ 99/28). ವಸಿಷ್ಠನಿಂದ ಈತನಿಗೆ ದೀರ್ಘ ಕಾಲದ ವರೆಗೆ ಮನುಷ್ಯ ಲೋಕದಲ್ಲಿರಲು ಶಾಪ (ಆದಿ 99/32–39).

**ದ್ರವಿಡ** (ಅಥವಾ ದ್ರಾವಿಡ) – ದಕ್ಷಿಣಭಾರತದ ಒಂದು ಜನಪದ ಇಲ್ಲಿಗೆ ದೂತರ ಮೂಲಕ ಸಂದೇಶ ಕಳುಹಿಸಿ, ಸಹದೇವನು ಕಪ್ಪಕೊಡುವಂತೆ ಬಲವಂತಪಡಿಸಿದನು (ಸಭಾ 31/71).

**ದ್ರವಿಣ** – ಧರನೆಂಬ ವಸುವಿನ ಮಗ (ಆದಿ 66/21).

**ದ್ರಾವಿಡ** – ಮೊದಲು ಕ್ಷತ್ರಿಯರಾಗಿದ್ದು ಬ್ರಾಹ್ಮಣರ ಕೃಪಾದೃಷ್ಟಿಯಿಂದ ವಂಚಿತರಾದ ಕಾರಣ (ಸ್ವಧರ್ಮಜ್ಞಾನ ಶೂನ್ಯರಾಗಿ) ಶೂದ್ರತ್ವವನ್ನು ಪಡೆದ ಒಂದು ಜಾತಿ (ಅನು 33/22–23).

**ದ್ರುಪದ** – ಪಾಂಚಾಲ ದೇಶದ ರಾಜಾ ಯಜ್ಞಸೇನ. ಈತ ಮರುದ್ಗಣಗಳ ಅಂಶದಿಂದ ಹುಟ್ಟಿದ್ದನು (ಆದಿ 67/68). ಇವನು ಮಹಾರಾಜ ಪೃಷತ್‌ನ ಮಗ (ಆದಿ 129/41). ಭರದ್ವಾಜ ಮುನಿಯ ಆಶ್ರಮದಲ್ಲಿ ದ್ರೋಣನೊಂದಿಗೆ ಈತನ ಆಟಪಾಠಗಳು (ಆದಿ 129/142). ಪೃಷದನ ಮರಣಾನಂತರ ಉತ್ತರ ಪಾಂಚಾಲದಲ್ಲಿ ಈತನಿಗೆ ಪಟ್ಟಾಭಿಷೇಕವಾಯಿತು (ಆದಿ 129/42). ಇವನಲ್ಲಿಗೆ ದ್ರೋಣನು ಆಗಮಿಸಿದುದು ಮತ್ತು ಈತನನ್ನು ತನ್ನ ಮಿತ್ರನೆಂದು ಹೇಳಿದುದು. ಆ ಕಾರಣದಿಂದ ಈತ ದ್ರೋಣನನ್ನು ನಿಂದಿಸಿದುದು (ಆದಿ 130/1–11). ಅಗ್ನಿವೇಶರ ಬಳಿ ದ್ರುಪದನ ಧನುರ್ವೇದಾಧ್ಯಯನಕ್ಕೆ ಸಂಬಂಧಿಸಿದ ವರ್ಣನೆಯನ್ನು ದ್ರೋಣನು ಭೀಷ್ಮರ ಸಮ್ಮುಖದಲ್ಲಿ ಮಾಡಿದುದು (ಆದಿ 130/43). ಅಧ್ಯಯನ ಕಾಲದಲ್ಲಿ ಇವನು ದ್ರೋಣರಿಗೆ ಕೊಟ್ಟ ಆಶ್ವಾಸನೆಯ ವಿವರಣೆ (ಆದಿ 130/46–47). ಕೌರವರ ಆಕ್ರಮಣ ವಾರ್ತೆ ಕೇಳಿ, ಅವರ ವಿಶಾಲಸೇನೆಯನ್ನು ತಾನು ಕಣ್ಣಾರೆ ಕಂಡು, ಪಾಂಚಾಲರಾಜ ದ್ರುಪದನು ಸಹೋದರರ ಸಹಿತ ಹೊರಟು ಶತ್ರುಗಳ ಮೇಲೆ ಬಾಣಗಳ ಸುರಿಮಳೆಗರೆದುದು (ಆದಿ 137/10–11). ಇವನು ಭಯಂಕರ ಯುದ್ಧಮಾಡಿ ಕೌರವ ಸೇನೆಯನ್ನು ಪರಾಜಯಗೊಳಿಸಿದುದು (ಆದಿ 137/12–25). ಭೀಮಸೇನ ಮತ್ತು ಅರ್ಜುನನೊಂದಿಗೆ ಇವನು ಯುದ್ಧಮಾಡಿ ಪರಾಜಯ ಹೊಂದಿದುದು. ಅರ್ಜುನನು ಈತನನ್ನು ಬಂಧಿಸಿ, ದ್ರೋಣನಿಗೆ ಒಪ್ಪಿಸಿದುದು (ಆದಿ 137/28–63). ದ್ರೋಣನು ಇವನಿಗೆ ಅರ್ಧರಾಜ್ಯ ಕೊಟ್ಟು, ಮಿತ್ರನಾಗಿರಲು ಹೇಳಿ ಬಿಡುಗಡೆ ಮಾಡಿದುದು ಮತ್ತು ಈತನೊಂದಿಗೆ ಅಚಲ ಮಿತ್ರತ್ವದ ಇಚ್ಛೆಯನ್ನು ಪ್ರಕಟಿಸಿದುದು (ಆದಿ 137/70–74). ಈತನಿಂದ ದ್ರೋಣನಿಗಾದ ಅಗೌರವದ ಕುರಿತು,

ಒಬ್ಬ ಬ್ರಾಹ್ಮಣನಿಂದ ಏಕಚಕ್ರದಲ್ಲಿ ಪಾಂಡವರಿಗೆ ವಿವರಣೆ (ಆದಿ 165/7–15). ದ್ರೋಣನ ವಿನಾಶಕನಾದ ಪುತ್ರನೊಬ್ಬನ ಪ್ರಾಪ್ತಿಗಾಗಿ, ದ್ರುಪದನು ಋಷಿಗಳ ಮತ್ತು ಬ್ರಾಹ್ಮಣರ ಆಶ್ರಮ ಗಳಲ್ಲಿ ಸುತ್ತಿದುದು; ಬ್ರಹ್ಮರ್ಷಿಗಳಾದ ಯಾಜ–ಉಪಯಾಜರಲ್ಲಿಗೆ ಹೋಗಿ, ಉಪಯಾಜನಲ್ಲಿ ತನ್ನ ಉದ್ದೇಶಸಿದ್ಧಿಗಾಗಿ ಪ್ರಾರ್ಥನೆಮಾಡಿ, ಆತನಿಗೆ ಹತ್ತು ಕೋಟಿ ಧೇನುಗಳನ್ನು ಕೊಡುವ ಪ್ರಲೋಭನೆ ನೀಡಿದುದು (ಆದಿ 166/1–12). ಉಪಯಾಜನು ಅವನ ಪ್ರಾರ್ಥನೆಯನ್ನು ಅಸ್ವೀಕಾರ ಮಾಡಿದುದು (ಆದಿ 166/13). ಇವನು ದ್ರೋಣನ ಮಹಿಮೆಯನ್ನು ಹೇಳಿ ದ್ರೋಣಾಂತಕ ಪುತ್ರನಿಗಾಗಿ ಮಹರ್ಷಿ ಯಾಜ ನನ್ನು ಪ್ರಾರ್ಥಿಸಿದುದು ಮತ್ತು ಅವನಿಗೆ ಒಂದು ಅರ್ಬುದ ಧೇನುಗಳ ಆಶೆ ತೋರಿಸಿದುದು (ಆದಿ 166/23–31). ಇವನಿಗೆ ಯಜ್ಞಕುಂಡ ದಿಂದ 'ಧೃಷ್ಟದ್ಯುಮ್ನ'ನೆಂಬ ಪುತ್ರ ಮತ್ತು 'ಕೃಷ್ಣಾ' ಎಂಬ ಹೆಸರಿನ ಕನ್ಯೆಯ ಪ್ರಾಪ್ತಿ (ಆದಿ 166/39–44). ಲಾಕ್ಷಾಗೃಹದಲ್ಲಿ ಪಾಂಡವರ ಮೃತ್ಯು ವಾದ ಸಮಾಚಾರ ಕೇಳಿ ಈತನ ಶೋಕ. ಅರ್ಜುನನಿಗಾಗಿ ಈತನ ಚಿಂತೆ ಮತ್ತು ಆತ ನೊಂದಿಗೆ ದ್ರೌಪದಿಯ ವಿವಾಹ ಮಾಡುವ ಈತನ ಸಂಕಲ್ಪ (ಆದಿ 166/56). ತನ್ನ ಪುರೋಹಿತರಿಂದ ಪಾಂಡವರು ಜೀವಂತರಾಗಿ ರುವ ಆಶ್ವಾಸನೆ ಮತ್ತು ದ್ರೌಪದಿಯ ಸ್ವಯಂವರಕ್ಕೆ ಒತ್ತಾಯ (ಆದಿ 166). ದ್ರುಪದನು ಅರ್ಜುನ ನನ್ನು ಕಂಡುಹಿಡಿಯುವುದಕ್ಕಾಗಿ, ಇತರರಿಂದ ಬಗ್ಗಿಸಲೂ ಸಾಧ್ಯವಿಲ್ಲದಂತಹ, ಒಂದು ಗಟ್ಟಿ ಯಾದ ಧನುಸ್ಸನ್ನು ಮಾಡಿಸಿದ್ದನು (ಆದಿ 184/8–9). ಸ್ವಯಂವರದ ಸಮಯದಲ್ಲಿ ಲಕ್ಷ್ಯವೇಧ ಮಾಡಲು ಈತನ ಘೋಷಣೆ (ಆದಿ 184/11). ಸ್ವಯಂವರಕ್ಕೆ ಬಂದಿರುವ ರಾಜರಿಂದ ಇವನ ಮೇಲೆ ಆಕ್ರಮಣ ಮತ್ತು ಪಾಂಡವರಿಂದ ಇವನ ರಕ್ಷಣೆ (ಆದಿ 188/12–14; ಆದಿ 189 ಅಧ್ಯಾಯ). ಅರ್ಜುನನೊಂದಿಗೆ ದ್ರೌಪದಿ ಕುಂಬಾರನ ಮನೆಗೆ ತೆರಳಿದಾಗ ಆಕೆಯ ಕುರಿತು ಈತನ ಚಿಂತೆ (ಆದಿ 191/14–18). ದುಃಖಿತನಾದ ದ್ರುಪದನಿಗೆ ಧೃಷ್ಟದ್ಯುಮ್ನನ ಧೈರ್ಯ (ಆದಿ 192/3–13). ಪಾಂಡವರ ಪರಿಚಯ ತಿಳಿಯಲು ಪುರೋಹಿತನಿಗೆ ಇವನ ಆದೇಶ (ಆದಿ 192/14). ಪಾಂಡವರ ಪರಿಚಯ ಮಾಡಿಕೊಳ್ಳಲು ಯುಧಿ ಷ್ಠಿರನಿಗೆ ಈತನ ಪ್ರಶ್ನೆ (ಆದಿ 195/2–7). ಯುಧಿಷ್ಠಿರನು ದ್ರುಪದನಿಗೆ ಆಶ್ವಾಸನೆಯನ್ನಿತ್ತದ್ದು. "ದ್ರೌಪದಿಯ ವಿವಾಹ ಯಾರೊಡನೆ ಆಗಬೇಕು" –ಈ ಪ್ರಶ್ನೆಯನ್ನೆತ್ತಿಕೊಂಡು ಯುಧಿಷ್ಠಿರನೊಂದಿಗೆ ಈತನ ಮಾತುಕತೆ, ಒಬ್ಬಳು ಸ್ತ್ರೀಯೊಂದಿಗೆ ಅನೇಕ ಪುರುಷರ ವಿವಾಹಕ್ಕೆ ವಿರೋಧ (ಆದಿ 194/8–32). ವ್ಯಾಸರು ವಿವರಿಸಿ ಬೋಧಿಸಿದ ಬಳಿಕ, ದ್ರೌಪದಿ ವಿವಾಹ ಸಂಬಂಧವಾಗಿ ಇವನ ಸಮ್ಮತಿ (ಆದಿ 195/7–9). ಪಾಂಡವರ ಮತ್ತು ದ್ರೌಪದಿಯ ಪೂರ್ವಜನ್ಮದ ಕಥೆಯನ್ನು ತಿಳಿಸಿ, ವ್ಯಾಸರಿಂದ ಇವನಿಗೆ ದಿವ್ಯದೃಷ್ಟಿಯ ದಾನ (ಆದಿ 196 ಅಧ್ಯಾಯ). ಇವನಿಂದ ಪಾಂಡವ ರಿಗೆ ಅಪಾರ ಧನರಾಶಿ ವರದಕ್ಷಿಣೆಯಾಗಿ ಉಡು ಗೊರೆ (ಆದಿ 206/9). ದಿಗ್ವಿಜಯ ಕಾಲದಲ್ಲಿ ಕರ್ಣನಿಂದ ಇವನ ಪರಾಜಯ (ವನ 254/3). ಧೌಮ್ಯ ಋಷಿ ಪಾಂಡವರಿಂದ ಸ್ಥಾಪಿಸಲ್ಪಟ್ಟ ಅಗ್ನಿಯನ್ನು ತೆಗೆದುಕೊಂಡು, ಅದರ ರಕ್ಷಣೆಗಾಗಿ ದ್ರುಪದನಲ್ಲಿಗೆ ಕಳುಹಿಸಲ್ಪಟ್ಟಿದ್ದನು (ವಿರಾಟ 4/2–3). ಉಪಪ್ಲವ್ಯನಗರದಲ್ಲಿ ಅಭಿಮನ್ಯುವಿನ ವಿವಾಹಕ್ಕೆ ಇವನ ಆಗಮನ (ವಿರಾಟ 72/17). ರಾಜರ ಬಳಿಗೆ ಯುದ್ಧದ ಆಮಂತ್ರಣ ಕಳುಹಿ ಸಲು ಈತನ ಸಲಹೆ (ಉದ್ಯೋಗ 4/8–24). ತನ್ನ ಪುರೋಹಿತನನ್ನು ದೂತನಾಗಿ ಮಾಡಿ, ಕೌರವಸಭೆಗೆ ಕಳುಹಿಸುವ ಸಲಹೆ (ಉದ್ಯೋಗ 4/25). ಪುರೋಹಿತನು ದೌತ್ಯಕರ್ಮ ಮಾಡಲು ಈತನ ಅನುಮತಿ (ಉದ್ಯೋಗ 6/17). ಒಂದು ಅಕ್ಷೌಹಿಣೀ ಸೇನೆ ತೆಗೆದುಕೊಂಡು ಈತ ಪಾಂಡ ವರ ಬಳಿಗೆ ಬಂದುದು (ಉದ್ಯೋಗ 47/4–5). ಇವನು ಪಾಂಡವಸೇನೆಯ ಏಳುಮಂದಿ ಸೇನಾ ಪತಿಗಳಲ್ಲಿ ಮೊದಲನೆಯವನಾಗಿ ಅಭಿಷಿಕ್ತನಾಗಿ ದ್ದನು (ಉದ್ಯೋಗ 157/11–12). ಉಲೂಕ ನೊಂದಿಗೆ ದುರ್ಯೋಧನನ ಸಂದೇಶಕ್ಕೆ ಉತ್ತರ ವನ್ನಿತ್ತದ್ದು (ಉದ್ಯೋಗ 163/41). ಸಂತಾನ ಪ್ರಾಪ್ತಿಗೋಸ್ಕರ ಈತನಿಗೆ ಮಹಾದೇವನಿಂದ ವರ ಪ್ರಾಪ್ತಿ (ಉದ್ಯೋಗ 187/5–6). ಹಿರಣ್ಯವರ್ಮಾ ನಿಂದ ಆಕ್ರಮಣದ ವಾರ್ತೆ ತಿಳಿದು, ಇವನು ಸಂಕಟನಿವಾರಣೆಯ ಉಪಾಯವನ್ನು ಹೆಂಡತಿ

ಯೊಡನೆ ಕೇಳಿದುದು (ಉದ್ಯೋಗ 190/14-21). ರಾಣಿಯ ಸಮ್ಮತಿಯಂತೆ ದೇವಾರಾಧನೆ ಮಾಡಿದುದು (ಉದ್ಯೋಗ 191/9). ಶಿಖಂಡಿಯನ್ನು ದ್ರೋಣಾಚಾರ್ಯರ ಬಳಿಗೆ ಕಳುಹಿಸಿ ಧನುರ್ವೇದದ ಶಿಕ್ಷಣ ಕೊಡಿಸಿದುದು (ಉದ್ಯೋಗ 192/60). ಪ್ರಥಮ ದಿನ ಸಂಗ್ರಾಮದಲ್ಲಿ ಜಯದ್ರಥನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/55-57). ದ್ರೋಣಾಚಾರ್ಯನಿಂದ ಪರಾಜಿತನಾದುದು (ಭೀಷ್ಮ 77/48; ಭೀಷ್ಮ 104/24-25). ಅಶ್ವತ್ಥಾಮನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/16; ಭೀಷ್ಮ 111/22-27). ದ್ರೋಣಾಚಾರ್ಯನೊಂದಿಗೆ ಯುದ್ಧ (ದ್ರೋಣ 14/26). ಭಗದತ್ತನೊಂದಿಗೆ ಯುದ್ಧ (ದ್ರೋಣ 14/40-42). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/12). ಬಾಹ್ಲೀಕನೊಂದಿಗೆ ಇವನ ಯುದ್ಧ (ದ್ರೋಣ 25/18-19). ವೃಷಸೇನನಿಂದ ಇವನ ಪರಾಜಯ (ದ್ರೋಣ 168/24). ದ್ರೋಣಾಚಾರ್ಯನಿಂದ ಇವನ ವಧೆ (ದ್ರೋಣ 186/43). ಇವನ ಶ್ರಾದ್ಧ ಕರ್ಮ (ಶಾಂತಿ 42/5). ವ್ಯಾಸರು ಆವಾಹನ ಮಾಡಿದಾಗ ಇತರ ಪರಲೋಕವಾಸಿ ವೀರರ ಜೊತೆಯಲ್ಲಿ ಈತನೂ ಗಂಗಾಜಲದಿಂದ ಪ್ರಕಟನಾಗಿದ್ದನು (ಆಶ್ರಮ 32/8). ಈತ ಸ್ವರ್ಗಕ್ಕೆ ಹೋಗಿ ವಿಶ್ವೇದೇವರಲ್ಲಿ ಸೇರಿಕೊಂಡನು (ಸ್ವರ್ಗಾ 5/15). ಮಹಾಭಾರತದಲ್ಲಿ ಬಂದಿರುವ ದ್ರುಪದನ ಹೆಸರುಗಳು - ಧೃಷ್ಟದ್ಯುಮ್ನಪಿತಾ, ಪಾಂಚಾಲ, ಪಾಂಚಾಲನೃಪ, ಪಾಂಚಾಲಪತಿ, ಪಾಂಚಾಲರಾಜ, ಪಾಂಚಾಲ್ಯ, ಪಾರ್ಷತ, ಪೃಷದಾತ್ಮಜ, ಸೌಮಕಿ, ಯಜ್ಞಸೇನ ಇತ್ಯಾದಿ.

**ದ್ರುಮ** - (1) ಒಬ್ಬ ಪ್ರಾಚೀನ ರಾಜ (ಆದಿ 1/233).

(2) ಮಹಾಭಾರತ ಕಾಲದ ಒಬ್ಬ ರಾಜ. ಈತ ಶಿಬಿಯೆಂಬ ದೈತ್ಯನ ಅಂಶದಿಂದ ಪ್ರಕಟವಾಗಿದ್ದನು (ಆದಿ 67/8).

(3) ಒಬ್ಬ ಕಿನ್ನರರ ಸ್ವಾಮಿ. ಈತ ಕುಬೇರ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 10/29). ಈತ ಭೀಷ್ಮನ ಪುತ್ರ ರುಕ್ಮಿಯ ಗುರುವಾಗಿದ್ದನು (ಉದ್ಯೋಗ 158/3). ಇವನು ರುಕ್ಮಿಗೆ ವಿಜಯವೆಂಬ ಹೆಸರಿನ ಧನುಸ್ಸನ್ನು ಕೊಟ್ಟಿದ್ದನು (ಉದ್ಯೋಗ 158/8).

**ದ್ರುಮಸೇನ** - (1) ಒಬ್ಬ ಕ್ಷತ್ರಿಯ ರಾಜ. ಈತ ಗವಿಷ್ಠನೆಂಬ ದೈತ್ಯನ ಅಂಶದಿಂದ ಜನಿಸಿದ್ದನು (ಆದಿ 66/35). ಇವನು ಶಲ್ಯನ ಚಕ್ರರಕ್ಷಕನಾಗಿದ್ದನು. ಯುಧಿಷ್ಠಿರನಿಂದ ಇವನ ವಧೆಯಾಯಿತು (ಶಲ್ಯ 12/53).

(2) ಕೌರವ ಪಕ್ಷದ ಯೋಧ. ಧೃಷ್ಟದ್ಯುಮ್ನನಿಂದ ಇವನ ವಧೆ (ದ್ರೋಣ 170/22).

**ದ್ರುಹ್ಯು** - (1) ಯಯಾತಿಯ ಮಗ. ಇವನ ತಾಯಿಯ ಹೆಸರು ಶರ್ಮಿಷ್ಠಾ (ಆದಿ 75/35; ಆದಿ 83/10). ತಂದೆಯು ಇವನ ಯೌವನವನ್ನು ಯಾಚಿಸಿದುದು; ಈತ ನಿರಾಕರಿಸಿದುದು. ಕುಪಿತನಾದ ತಂದೆಯಿಂದ ಈತನಿಗೆ ತನ್ನ ಪ್ರಿಯ ಮನೋರಥವು ಎಂದೂ ಸಿದ್ಧಿಯಾಗದಿರಲು, ಅತಿದುರ್ಗಮ ಪ್ರದೇಶದಲ್ಲಿ ವಾಸಿಸುವಂತಾಗಲು ಮತ್ತು ರಾಜ್ಯಾಧಿಕಾರದಿಂದ ವಂಚಿತನಾಗಿ 'ಭೋಜ'ನೆಂದು ಕರೆಯಲ್ಪಡುವಂತೆ ಶಾಪ (ಆದಿ 84/20-22).

(2) ಪೂರುವಂಶದ ರಾಜಾಮತಿನಾರನ ನಾಲ್ವರು ಪುತ್ರರಲ್ಲಿ ಒಬ್ಬ (ಆದಿ 94/14).

**ದ್ರೋಣ** - (1) ಗಂಗಾದ್ವಾರ ನಿವಾಸಿ ಮಹರ್ಷಿ ಭರದ್ವಾಜನ ಪುತ್ರ. ಈತ ಬೃಹಸ್ಪತಿಯ ಅಂಶದಿಂದ ಹುಟ್ಟಿದ್ದನು (ಆದಿ 67/69). ಒಂದು ದಿನ ಭರದ್ವಾಜನು ಗಂಗೆಯಲ್ಲಿ ಸ್ನಾನಮಾಡಲು ಹೋದನು. ಅಲ್ಲಿ ಘೃತಾಚಿ ಎಂಬ ಅಪ್ಸರೆ ಮೊದಲೇ ಸ್ನಾನಮಾಡಿ ಬಟ್ಟೆ ಬದಲಾಯಿಸುತ್ತಿದ್ದಳು. ಅವಳ ಬಟ್ಟೆ ಜಾರಿತು. ಆ ಸ್ಥಿತಿಯಲ್ಲಿ ಆಕೆಯನ್ನು ನೋಡಿ ಮುನಿಯ ವೀರ್ಯಸ್ಖಲಿಸಿತು. ಮುನಿಯು ಅದನ್ನೆತ್ತಿ ಒಂದು ದ್ರೋಣ (ಯಜ್ಞಕಲಶ)ದಲ್ಲಿಟ್ಟಿದ್ದನು. ಆ ದ್ರೋಣದಿಂದ ಹುಟ್ಟಿದವನಾದುದರಿಂದಲೇ ಆ ಬಾಲಕನ ಹೆಸರು 'ದ್ರೋಣ'ನೆಂದಾಯಿತು. ಇವನು ಸಂಪೂರ್ಣ ವೇದ ವೇದಾಂಗಗಳ ಅಧ್ಯಯನ ಮಾಡಿದ್ದನು (ಆದಿ 129/33-38). ಪರಶುರಾಮನಿಂದ ಈತ ಸಮಸ್ತ ಅಸ್ತ್ರವಿದ್ಯೆಯನ್ನು ಅಧ್ಯಯನ ಮಾಡಿದನು (ಆದಿ 129/66). ಮಹರ್ಷಿ ಅಗ್ನಿವೇಶರ ಆಶ್ರಮದಲ್ಲಿ ದ್ರುಪದನ ಜೊತೆಯಲ್ಲಿ ಈತನ ಅಧ್ಯಯನ (ಆದಿ 130/40-42). ವಿದ್ಯಾರ್ಥಿ ದೆಶೆಯಲ್ಲಿ ದ್ರುಪದನಿಂದ ಇವನಿಗೆ ಆಶ್ವಾಸನೆ (ಆದಿ 130/46). ಶರದ್ವಂತನ ಪುತ್ರಿ ಕೃಪಿ

ಯೊಂದಿಗೆ ಇವನ ವಿವಾಹ (ಆದಿ 130/49). ಕೃಪಿಯ ಗರ್ಭದಲ್ಲಿ ಈತನಿಂದ ಅಶ್ವತ್ಥಾಮನ ಜನನ (ಆದಿ 130/50). ಧನಯಾಚನೆಗಾಗಿ ಈತ ದ್ರುಪದನ ಬಳಿಗೆ ಹೋದುದು (ಆದಿ 130/62). ದ್ರುಪದನಿಂದ ಇವನಿಗೆ ತಿರಸ್ಕಾರ (ಆದಿ 130/64–73). ದ್ರುಪದನಿಂದ ತಿರಸ್ಕೃತ ನಾಗಿ ಇವನು ಹಸ್ತಿನಾಪುರಕ್ಕೆ ಬಂದು, ಕೃಪಾ ಚಾರ್ಯನ ಮನೆಯಲ್ಲಿ ಗುಪ್ತವಾಗಿ ವಾಸಿಸಿ ದುದು (ಆದಿ 130/14). ಇವನು ಕೌರವ ಕುಮಾರರ ಗೋಲಿಯನ್ನು, ತನ್ನ ಉಂಗುರ ವನ್ನೂ, ಬಾವಿಯಿಂದ ಹೊರತೆಗೆದುದು (ಆದಿ 130/29). ಕೌರವಕುಮಾರರಿಂದ ಭೀಷ್ಮರ ಮುಂದೆ ಈತನ ಪರಾಕ್ರಮದ ಪ್ರಶಂಸೆ (ಆದಿ 130/36). ಭೀಷ್ಮನಿಂದ ಇವನ ಸತ್ಕಾರ ಮತ್ತು ಕೌರವಕುಮಾರರಿಗೆ ಕಲಿಸುವಂತೆ ಈತನಲ್ಲಿ ಆಗ್ರಹ (ಆದಿ 130/39–79). ಅರ್ಜುನನ ಪರವಾಗಿ ಇವನ ಅಧಿಕ ವಾತ್ಸಲ್ಯ (ಆದಿ 131/7–8). ಇವನಿಂದ ಕೌರವ ಪಾಂಡವರಿಗೆ ಶಿಕ್ಷಣ (ಆದಿ 131/9). ಅಧ್ಯಯನ ಮಾಡಲು ಇವನ ಬಳಿಗೆ ಕರ್ಣನ ಆಗಮನ (ಆದಿ 131/11). ಇವನು ರಾಜಕುಮಾರರೊಡನೆ ಕಮಂಡಲುವನ್ನು ತುಂಬಿಸಿ ತರಲು ಹೇಳುತ್ತಿದ್ದನು ಮತ್ತು ಅಶ್ವತ್ಥಾಮನಿಗೆ ಗಡಿಗೆಯನ್ನು ತುಂಬಲು ಹೇಳು ತ್ತಿದ್ದನು. ಅವನು ಬೇಗನೆ ಗಡಿಗೆಯನ್ನು ತುಂಬಿಸಿ ಬರುತ್ತಿದ್ದನು. ಆಗ ಅವನಿಗೆ ಏಕಾಂತದಲ್ಲಿ ಯಾವುದಾದರೂ ಅಸ್ತ್ರ ಸಂಚಾಲನೆಯ ಉತ್ತಮ ವಿಧಿಯನ್ನು ಹೇಳುತ್ತಿದ್ದನು (ಆದಿ 131/16–17). ಈತನಿಂದ ಅರ್ಜುನನನ್ನು ಅದ್ವಿತೀಯ ಧನು ರ್ಧರನಾಗಿ ಮಾಡುವ ಆಶ್ವಾಸನೆ (ಆದಿ 131/27). ಇವನಿಂದ ಕೌರವರಿಗೆ ವಿವಿಧ ಅಸ್ತ್ರಗಳ ಶಿಕ್ಷಣ (ಆದಿ 131/29). ಇವನ ಅನುಪಮ ಅಸ್ತ್ರ ವಿದ್ಯೆಯ ಕುರಿತು ಕೇಳಿ, ಸಾವಿರಾರು ರಾಜರೂ, ರಾಜಕುಮಾರರೂ ಇವನ ಬಳಿಗೆ ಅಧ್ಯಯನ ಕ್ಕಾಗಿ ಬಂದುದು (ಆದಿ 131/30). ಧನರ್ವೇದದ ಅಧ್ಯಯನಕ್ಕಾಗಿ ಬಂದ ನಿಷಾದಪುತ್ರ ಏಕಲವ್ಯನಿಗೆ ಹೇಳಿಕೊಡಲು ನಿರಾಕರಿಸಿದುದು (ಆದಿ 131/32). ಅರ್ಜುನನನ್ನು ಸಂತೋಷಗೊಳಿಸುವುದಕ್ಕಾಗಿ, ಇವನು ಏಕಲವ್ಯನೊಡನೆ ತನ್ನ ಹೆಬ್ಬೆರಳನ್ನು ತುಂಡುಮಾಡಿ ಗುರುದಕ್ಷಿಣೆ ಕೊಡುವಂತೆ ಹೇಳಿದುದು (ಆದಿ 131/56). ಇವನಿಂದ ಕೌರವನೇ ಮೊದಲಾದ ಎಲ್ಲಾ ವಿದ್ಯಾರ್ಥಿಗಳ ಪರೀಕ್ಷೆ (ಆದಿ 131/69). ಇವನ ಮೇಲೆ ಮೊಸಳೆಯ ಆಕ್ರಮಣ; ಅರ್ಜುನನು ಅದನ್ನು ಕೊಂದು ಇವನನ್ನು ವಿಮೋಚನೆಗೊಳಿಸಿದುದು. ಇದರಿಂದ ಸಂತುಷ್ಟನಾದ ದ್ರೋಣನಿಂದ ಅರ್ಜುನನಿಗೆ ಬ್ರಹ್ಮಶಿರಅಸ್ತ್ರದ ದಾನ (ಆದಿ 132/12–18). ರಾಜಕುಮಾರರ ಮೂಲಕ ಅಸ್ತ್ರ ಕಲೆಯ ಪ್ರದರ್ಶನಕ್ಕೆ ಈತ ಧೃತರಾಷ್ಟ್ರನೊಡನೆ ಅನುಮತಿ ಯಾಚಿಸಿದುದು (ಆದಿ 133/3). ಇವನಿಂದ ರಾಜಕುಮಾರರ ಅಸ್ತ್ರಕೌಶಲ ಪ್ರದ ರ್ಶನಕ್ಕಾಗಿ ವಿಶಾಲಪ್ರೇಕ್ಷಕಗೃಹ(ರಂಗಭವನ)ದ ನಿರ್ಮಾಣ (ಆದಿ 133/8–14). ಸಮಸ್ತ ಪ್ರೇಕ್ಷಕರು ಸಮ್ಮಿಲಿತರಾದ ಮೇಲೆ ಆಚಾರ್ಯ ದ್ರೋಣ ತನ್ನ ಮಗನೊಂದಿಗೆ ಪ್ರೇಕ್ಷಕಗೃಹ ಪ್ರವೇಶ ಮಾಡಿದುದು (ಆದಿ 133/15–20). ದ್ರೋಣ ನಿಂದ ದೇವರ ಪೂಜೆ ಮತ್ತು ಬ್ರಾಹ್ಮಣರಿಂದ ಮಂಗಲಕಾರ್ಯ (ಆದಿ 133/21). ಇವನಿಗೆ ದಕ್ಷಿಣೆಯ ರೂಪದಲ್ಲಿ ಚಿನ್ನ, ಮಣಿ, ರತ್ನ ಮತ್ತು ನಾನಾ ಪ್ರಕಾರದ ವಸ್ತ್ರಗಳ ಪ್ರಾಪ್ತಿ (ಆದಿ 133/21). ರಾಜಕುಮಾರರಿಂದ ಆಚಾರ್ಯ ದ್ರೋಣರ ಯಥೋಚಿತ ಪೂಜೆ (ಆದಿ 133/23). ಇವನ ಆಜ್ಞೆಯಿಂದ ರಾಜಕುಮಾರರ ಅಸ್ತ್ರಕೌಶಲ ಪ್ರದರ್ಶನ (ಆದಿ 133/23). ಭೀಮ ಮತ್ತು ದುರ್ಯೋಧನರ ಗದಾಯುದ್ಧವನ್ನು ತಡೆಯು ವಂತೆ ಈತ ಅಶ್ವತ್ಥಾಮನಿಗೆ ಆದೇಶಿಸಿದುದು (ಆದಿ 134/4). ರಂಗಭೂಮಿಯಲ್ಲಿ ಇವನಿಂದ ಅರ್ಜುನನ ಪ್ರಶಂಸೆ ಮತ್ತು ಆತನ ಕಡೆಗೆ ದರ್ಶಕರ ದೃಷ್ಟಿಯನ್ನು ಆಕರ್ಷಿಸಿದುದು (ಆದಿ 134/7). ಆಚಾರ್ಯನಿಗೆ ಪ್ರಣಾಮಮಾಡಿ, ಇವನ ಅನುಜ್ಞೆ ಪಡೆದು, ಕರ್ಣನಿಂದಲೂ ಅಸ್ತ್ರಕೌಶಲ ಪ್ರದರ್ಶನ (ಆದಿ 135/12). ದ್ರುಪದನನ್ನು ಬಂಧಿಸಿ ತರುವಂತೆ ಇವನು ಶಿಷ್ಯರಿಗೆ ಆದೇಶ ನೀಡಿದುದು ಮತ್ತು ಅರ್ಜುನನಿಂದ ಸೆರೆಹಿಡಿದು ತರಲ್ಪಟ್ಟ ದ್ರುಪದನಿಗೆ ಅರ್ಧರಾಜ್ಯವನ್ನು ಕೊಟ್ಟು, ಬಿಡುಗಡೆಗೊಳಿಸಿದುದು (ಆದಿ 137 ಅಧ್ಯಾಯ). ಬ್ರಹ್ಮಶಿರವೆಂಬ ಹೆಸರಿನ ಅಸ್ತ್ರದ ಪರಂಪರೆ ಮತ್ತು ಅದರ ಉಪಯೋಗದ ನಿಯಮ ಹೇಳಿ, ಇವನು ಆ ಅಸ್ತ್ರವನ್ನು ಅರ್ಜುನನಿಗೆ ಕೊಟ್ಟದ್ದು

ಯುದ್ಧಭೂಮಿಯಲ್ಲಿ ವಿರೋಧಿಯಾದಾಗ, ತನ್ನೊಡನೆ ಕೂಡಾ ಯುದ್ಧಮಾಡಬೇಕೆಂದು ಆತನಿಂದ ಪ್ರತಿಜ್ಞೆ ಮಾಡಿಸಿದುದು (ಆದಿ 138/9–14). ಇವನ ಜನ್ಮ, ಅಧ್ಯಯನ ಮತ್ತು ದ್ರುಪದನಿಂದಾದ ತಿರಸ್ಕಾರದ ಕುರಿತು ಏಕಚಕ್ರ ನಗರದಲ್ಲಿ ಬ್ರಾಹ್ಮಣನ ಮೂಲಕ ಪಾಂಡವರಿಗೆ ವಿವರಣೆ (ಆದಿ 165/1–15). ಧೃಷ್ಟದ್ಯುಮ್ನನಿಗೆ ಅಸ್ತ್ರ ಶಿಕ್ಷಣ ಕೊಡುವರೆ ಈತನ ಔದಾರ್ಯ (ಆದಿ 165/55). ದ್ರೌಪದಿ ಮತ್ತು ಪಾಂಡವರಿಗೆ ಉಡುಗೊರೆ ಕಳುಹಿಸಲು, ದ್ರೌಪದಿ ಸಹಿತ ಅವರನ್ನು ಆದರಪೂರ್ವಕ ದ್ರುಪದ ನಗರದಿಂದ ಕರೆಸಲು ಮತ್ತು ಅವರ ಅರ್ಧರಾಜ್ಯ ಅವರಿಗೆ ಕೊಟ್ಟುಬಿಡಲು ಇವನು ಧೃತರಾಷ್ಟ್ರನನ್ನು ಒತ್ತಾಯಿಸಿದುದು (ಆದಿ 203/1–12). ಕರ್ಣನಿಗೆ ಇವನ ಧಿಕ್ಕಾರ (ಆದಿ 203/26–28). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಬಂದಿದ್ದನು (ಸಭಾ 34/8). ಯುಧಿಷ್ಠಿರನು ಆಚಾರ್ಯನ ಚರಣಗಳಿಗೆ ಪ್ರಣಾಮ ಮಾಡಿದುದು, ಮತ್ತು ತನ್ನ ಯಜ್ಞದಲ್ಲಿ ದ್ರೋಣ ಅನುಗ್ರಹಿಸುವಂತೆ ಕೇಳಿದುದು (ಸಭಾ 35/1–2). ರಾಜಸೂಯ ಯಜ್ಞದಲ್ಲಿ 'ಯಾವ ಕೆಲಸ ಆಯಿತು, ಇನ್ನು ಯಾವುದು ಆಗಿಲ್ಲ" ಎಂಬ ಮೇಲ್ವಿಚಾರಣೆಯ ಕಾರ್ಯ ದ್ರೋಣ ಮತ್ತು ಭೀಷ್ಮರಿಗೆ ಒಪ್ಪಿಸಲ್ಪಟ್ಟಿತ್ತು (ಸಭಾ 35/6). ಯುಧಿಷ್ಠಿರ ಮತ್ತು ಶಕುನಿಯರ ಜೂಜು ಪ್ರಾರಂಭವಾದಾಗ, ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು, ದ್ರೋಣಾಚಾರ್ಯನೂ ಅಲ್ಲಿಗೆ ಬಂದಿದ್ದನು (ಸಭಾ 60/2). ಆಚಾರ್ಯ ದ್ರೋಣ ಜೂಜಾಟವನ್ನು ಮೆಚ್ಚುತ್ತಿರಲಿಲ್ಲ (ವನ 9/2). ಇವರಲ್ಲಿ ನಾಲ್ಕೂ ಅಂಗಗಳಿಂದ ಕೂಡಿದ ಧನುರ್ವೇದವು ನೆಲಸಿತ್ತು (ವನ 37/4). ಪಾಂಡವರನ್ನು ಹುಡುಕುವ ವಿಷಯದಲ್ಲಿ ದುರ್ಯೋಧನನಿಗೆ ಇವನ ಸಮ್ಮತಿ (ವಿರಾಟ 27 ಅಧ್ಯಾಯ). ಬೃಹನ್ನಲಾ ವೇಷದಲ್ಲಿ ಯುದ್ಧಕ್ಕೆ ಬರುತ್ತಿರುವ ಅರ್ಜುನನ ಪರಾಕ್ರಮದ ಕುರಿತು ಈತನ ವರ್ಣನೆ (ವಿರಾಟ 39 ಅಧ್ಯಾಯ). ಅರ್ಜುನನ ಶಂಖನಾದ ಕೇಳಿ ಆತ ಅರ್ಜುನನೆಂದೇ ತಿಳಿದು, ಕೌರವರೊಡನೆ ಅಪ ಶಕುನಗಳನ್ನು ವರ್ಣಿಸಿದುದು (ವಿರಾಟ 46/ 24–33). ಇವನಿಂದ ದುರ್ಯೋಧನನ ರಕ್ಷಣೆಯ ಪ್ರಯತ್ನ (ವಿರಾಟ 51/8–21). ಅರ್ಜುನ ನೊಂದಿಗೆ ಈತನ ಯುದ್ಧ ಮತ್ತು ಗಾಯ ಗೊಂಡು ಪಲಾಯನ (ವಿರಾಟ 57 ಅಧ್ಯಾಯ). ಇವನಿಂದ ಭೀಷ್ಮನ ಮಾತುಗಳಿಗೆ ಅನು ಮೋದನೆ (ಉದ್ಯೋಗ 49/44–46). ಶ್ರೀಕೃಷ್ಣನ ಹೇಳಿಕೆಯನ್ನು ಸಮರ್ಥಿಸುತ್ತಾ, ದುರ್ಯೋಧನ ನಿಗೆ ತಿಳಿಯಹೇಳಿದುದು (ಉದ್ಯೋಗ 125/10–17). ದುರ್ಯೋಧನನಿಗೆ ಪುನಃ ಬುದ್ಧಿ ಹೇಳಿ ದುದು (ಉದ್ಯೋಗ 126 ಅಧ್ಯಾಯ). ಯುದ್ಧ ಮಾಡದಿರಲು ದುರ್ಯೋಧನನಿಗೆ ತಿಳಿಸಿದುದು (ಉದ್ಯೋಗ ಅಧ್ಯಾಯ 138ರಿಂದ 139 ವರೆಗೆ). ಕರ್ಣನನ್ನು ನಿಂದಿಸಿ, ಭೀಷ್ಮರು ಹೇಳಿದ ಮಾತಿಗೆ ಈತನ ಸಮರ್ಥನೆ (ಉದ್ಯೋಗ 168/8–9). ದುರ್ಯೋಧನನು ಕೇಳಿದಾಗ, ಒಂದು ತಿಂಗಳಲ್ಲಿ ಪಾಂಡವ ಸೇನೆಯನ್ನು ನಾಶ ಮಾಡಬಹುದಾದ ತನ್ನ ಶಕ್ತಿಯನ್ನು ಹೇಳಿದುದು (ಉದ್ಯೋಗ 193/18). ಆಚಾರ್ಯ ದ್ರೋಣನ ರಥ ಮತ್ತು ಕುದುರೆಗಳ ವರ್ಣನೆ (ಭೀಷ್ಮ 20/11). ಯುಧಿ ಷ್ಠಿರನಿಗೆ ಯುದ್ಧದ ಆಜ್ಞೆಯನ್ನಿತ್ತು, ಆತನಿಗೆ ಶುಭವನ್ನು ಬಯಸಿದುದು. ಅವನಿಗೆ ತನ್ನ ಮೃತ್ಯುವಿನ ಉಪಾಯವನ್ನು ಹೇಳಿದುದು (ಭೀಷ್ಮ 43/53–66). ಪ್ರಥಮ ದಿನದ ಯುದ್ಧದಲ್ಲಿ ಧೃಷ್ಟದ್ಯುಮ್ನನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/31–34). ಧೃಷ್ಟದ್ಯುಮ್ನನೊಂದಿಗೆ ಯುದ್ಧದಲ್ಲಿ ಇವನ ಅದ್ಭುತ ಪರಾಕ್ರಮ (ಭೀಷ್ಮ 53 ಅಧ್ಯಾಯ). ದ್ರುಪದನ ಮೇಲೆ ವಿಜಯ ಮತ್ತು ಅದ್ಭುತ ಪರಾಕ್ರಮ ಪ್ರಕಟಿಸಿದುದು (ಭೀಷ್ಮ 77/48–67). ಇವನಿಂದ ಧೃಷ್ಟದ್ಯುಮ್ನನ ಪರಾಜಯ (ಭೀಷ್ಮ 77/69–70). ಇವನಿಂದ ವಿರಾಟಪುತ್ರ ಶಂಖನ ವಧೆ ಮತ್ತು ವಿರಾಟನ ಪರಾಜಯ (ಭೀಷ್ಮ 82/23–24). ಭೀಮ ಸೇನನ ಪ್ರಹಾರದಿಂದ ಈತ ಮೂರ್ಛಿತನಾದುದು (ಭೀಷ್ಮ 94/19). ಅರ್ಜುನನೊಂದಿಗೆ ಇವನ ಯುದ್ಧ (ಭೀಷ್ಮ 102/6–22). ಇವನಿಂದ ದ್ರುಪದನ ಪರಾಜಯ (ಭೀಷ್ಮ 104/24–25). ಯುಧಿಷ್ಠಿರನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/17; ಭೀಷ್ಮ 111/50–52). ಅಶ್ವತ್ಥಾಮ ನೊಂದಿಗೆ ಅಶುಭ ಉತ್ಪಾತಗಳ ವರ್ಣನೆ ಮತ್ತು ಅವನು ಭೀಷ್ಮರ ರಕ್ಷಣೆಗಾಗಿ ಧೃಷ್ಟದ್ಯುಮ್ನ

ನೊಂದಿಗೆ ಯುದ್ಧಮಾಡಲು ಆದೇಶ (ಭೀಷ್ಮ 112 ಅಧ್ಯಾಯ). ಧೃಷ್ಟದ್ಯುಮ್ನನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 116/45–54). ಭೀಷ್ಮನು ಬಿದ್ದು ಹೋದ ಮೇಲೆ ಪ್ರಧಾನ ಸೇನಾಪತಿಯ ಸ್ಥಾನ ದಲ್ಲಿ ಈತನ ಅಭಿಷೇಕ (ದ್ರೋಣ 7/5). ಧೃಷ್ಟದ್ಯುಮ್ನನೊಂದಿಗೆ ಯುದ್ಧ (ದ್ರೋಣ 7/ 48–54). ಇವನ ಅದ್ಭುತ ಪರಾಕ್ರಮ ಮತ್ತು ಮರಣದ ವರ್ಣನೆ (ದ್ರೋಣ 8/8–32). ಯುಧಿಷ್ಠಿರನನ್ನು ಜೀವಂತ ಹಿಡಿಯುವ ಕುರಿತು ದುರ್ಯೋಧನನಿಗೆ ವರವನ್ನಿತ್ತದ್ದು (ದ್ರೋಣ 12/20–28). ಇವನ ಅದ್ಭುತ ಪರಾಕ್ರಮ (ದ್ರೋಣ 13/19–29; ದ್ರೋಣ 14/1–19). ದ್ರುಪದನ ಮೇಲೆ ಆಕ್ರಮಣ (ದ್ರೋಣ 14/26). ಈತನಿಂದ ಪಾಂಚಾಲ ಕುಮಾರನ ಪರಾಜಯ (ದ್ರೋಣ 16/25). ಯುಗಂಧರಾನ ವಧೆ (ದ್ರೋಣ 16/31). ಇವನಿಂದ ವ್ಯಾಘ್ರದತ್ತ ಮತ್ತು ಸಿಂಹಸೇನರ ವಧೆ (ದ್ರೋಣ 16/37). ಅರ್ಜುನ ನೊಂದಿಗೆ ಯುದ್ಧ ಮತ್ತು ತನ್ನ ಸೈನ್ಯವನ್ನು ಹಿಂತಿರುಗಿಸಿದುದು (ದ್ರೋಣ 16/50–51). ದುರ್ಯೋಧನನೊಂದಿಗೆ ಅರ್ಜುನನನ್ನು ಯುದ್ಧ ಕ್ಷೇತ್ರದಿಂದ ದೂರ ಮಾಡುವಂತೆ ಹೇಳಿದುದು (ದ್ರೋಣ 17/3–10). ಇವನಿಂದ ವೃಕನ ವಧೆ (ದ್ರೋಣ 21/16). ಸತ್ಯಜಿತನ ವಧೆ (ದ್ರೋಣ 21/21). ಶತಾನೀಕನ ವಧೆ (ದ್ರೋಣ 21/28). ದೃಢಸೇನನ ವಧೆ (ದ್ರೋಣ 21/52). ಕ್ಷೇಮನ ವಧೆ (ದ್ರೋಣ 21/53). ಇವನಿಂದ ವಸುದಾನನ ವಧೆ (ದ್ರೋಣ 21/55). ಕ್ಷತ್ರದೇವನ ವಧೆ (ದ್ರೋಣ 21/56). ಪಾಂಡವ ಸೇನೆಯನ್ನು ಕ್ಷೋಭೆಗೊಳಿಸಿ ಧೃಷ್ಟದ್ಯುಮ್ನನೊಂದಿಗೆ ಯುದ್ಧ (ದ್ರೋಣ 31/8–18). ಇವನಿಂದ ಪಾಂಡವ ಸೇನೆಯ ಸಂಹಾರ (ದ್ರೋಣ 32/41–43). ದುರ್ಯೋಧನನೊಂದಿಗೆ ಪಾಂಡವಪಕ್ಷದ ಯಾವನಾದರೂ ಮಹಾರಥಿಯನ್ನು ಕೊಲ್ಲುವ ಪ್ರತಿಜ್ಞೆ (ದ್ರೋಣ 33/10–15). ಇವನಿಂದ ಚಕ್ರವ್ಯೂಹ ನಿರ್ಮಾಣ (ದ್ರೋಣ 34/13–25). ಅಭಿಮನ್ಯುವಿನ ಪರಾಕ್ರಮದ ಪ್ರಶಂಸೆ ಮಾಡಿ ದುದು (ದ್ರೋಣ 39/11–13). ಕರ್ಣನು ಕೇಳಿ ದಾಗ ಅಭಿಮನ್ಯುವನ್ನು ಹೊಗಳುತ್ತಾ ಅವನ ವಧೆಯ ಉಪಾಯವನ್ನು ಹೇಳಿದುದು (ದ್ರೋಣ 48/19–31). ಇವನಿಂದ ಅಭಿಮನ್ಯುವಿನ ಖಡ್ಗ ತುಂಡರಿಸಲ್ಪಟ್ಟದ್ದು (ದ್ರೋಣ 48/37–38). ಅರ್ಜುನನಿಂದ ಭಯಪಟ್ಟ ಜಯದ್ರಥನಿಗೆ ಧೈರ್ಯ ಹೇಳಿದುದು (ದ್ರೋಣ 74/25–33). ಜಯದ್ರಥನಿಗೆ ಧೈರ್ಯದ ಆಶ್ವಾಸನೆ (ದ್ರೋಣ 87/15). ಇವನಿಂದ ಚಕ್ರ, ಶಕಟವ್ಯೂಹದ ನಿರ್ಮಾಣವಾಗಿ ಜಯದ್ರಥನ ರಕ್ಷಣೆಗೆ ವ್ಯವಸ್ಥೆ (ದ್ರೋಣ 87/22). ಅರ್ಜುನನೊಂದಿಗೆ ಯುದ್ಧ (ದ್ರೋಣ 91/11–29). ದುರ್ಯೋಧನನಿಂದ ನಿಂದೆಯನ್ನು ಕೇಳಿ, ಆತನನ್ನೇ ಅರ್ಜುನ ನೊಂದಿಗೆ ಯುದ್ಧ ಮಾಡಲು ಕಳುಹಿಸಿದುದು (ದ್ರೋಣ 94/19–26). ದಿವ್ಯಕವಚದ ಉತ್ಪತ್ತಿಯ ಸನ್ನಿವೇಶವನ್ನು ಹೇಳಿ, ದುರ್ಯೋಧನನ ಶರೀರಕ್ಕೆ ಕವಚವನ್ನು ತೊಡಿಸಿದುದು (ದ್ರೋಣ 94/39–68). ಧೃಷ್ಟದ್ಯಮ್ನನೊಂದಿಗೆ ಘೋರ ಯುದ್ಧ (ದ್ರೋಣ ಅಧ್ಯಾಯ 95ರಿಂದ 97ರ ವರೆಗೆ). ಸಾತ್ಯಕಿಯೊಂದಿಗೆ ಘೋರ ಸಂಗ್ರಾಮ (ದ್ರೋಣ 98 ಅಧ್ಯಾಯ). ಯುಧಿಷ್ಠಿರನೊಂದಿಗೆ ಈತನ ಯುದ್ಧ ಮತ್ತು ಆತನನ್ನು ಸೋಲಿಸಿದುದು (ದ್ರೋಣ 106/18–47). ಇವನಿಂದ ಪಾಂಡವ ಸೇನೆಯ ಸಂಹಾರ ಮತ್ತು ಸಾತ್ಯಕಿ ಗಾಯ ಗೊಂಡದ್ದು (ದ್ರೋಣ 110/1–35). ಸಾತ್ಯಕಿ ಯೊಂದಿಗೆ ಯುದ್ಧ (ದ್ರೋಣ 113/ 21–33). ಸಾತ್ಯಕಿಯಿಂದ ಇವನ ಪರಾಜಯ (ದ್ರೋಣ 117/30). ಸಾತ್ಯಕಿಯಿಂದ ಪರಾಜಿತನಾಗಿ ಓಡಿದ ದುಃಶಾಸನನನ್ನು ನಿಂದಿಸಿದುದು (ದ್ರೋಣ 122/ 2–27). ಇವನಿಂದ ವೀರಕೇತುವಿನ ವಧೆ (ದ್ರೋಣ 122/41). ಚಿತ್ರಕೇತು, ಸುಧನ್ವಾ, ಚಿತ್ರವರ್ಮಾ ಮತ್ತು ಚಿತ್ರರಥರ ವಧೆ (ದ್ರೋಣ 122/48–49). ಧೃಷ್ಟದ್ಯುಮ್ನನ ಮೇಲೆ ಈತನ ಜಯ (ದ್ರೋಣ 122/71–72). ಇವನಿಂದ ಬೃಹತ್‌ಕ್ಷತ್ರನ ವಧೆ (ದ್ರೋಣ 125/22). ಪುತ್ರನ ಸಹಿತ ಧೃಷ್ಟಕೇತುವಿನ ವಧೆ (ದ್ರೋಣ 125/ 39–41). ಜರಾಸಂಧನ ಮಗ ಸಹದೇವನ ವಧೆ (ದ್ರೋಣ 125/45). ಧೃಷ್ಟದ್ಯುಮ್ನನ ಮಗ ಕ್ಷತ್ರಧರ್ಮಾನ ವಧೆ (ದ್ರೋಣ 125/66). ಚೇಕಿತಾನನ ಪರಾಜಯ (ದ್ರೋಣ 125/68– 71). ಭೀಮಸೇನನಿಂದ ಇವನ ಪರಾಜಯ (ದ್ರೋಣ 127/53–54). ಭೀಮಸೇನನಿಂದ

ಈತನ ರಥ ಎಂಟು ಬಾರಿ ಎಸೆಯಲ್ಪಟ್ಟದ್ದು (ದ್ರೋಣ 128/18–21). ದುರ್ಯೋಧನನಿಗೆ ದ್ಯೂತದ ಪರಿಣಾಮವನ್ನು ತೋರಿಸುತ್ತಾ, ಯುದ್ಧಕ್ಕೆ ಕಳುಹಿಸಿದುದು (ದ್ರೋಣ 130/13–24). ದುರ್ಯೋಧನನು ನಿಂದಿಸಿದಾಗ ಆತನಿಗೆ ಉತ್ತರವನ್ನಿತ್ತದ್ದು (ದ್ರೋಣ 151 ಅಧ್ಯಾಯ). ಪಾಂಡವಸೇನೆಯ ಮೇಲೆ ಆಕ್ರಮಣ ಮತ್ತು ಅದರ ಸಂಹಾರ (ದ್ರೋಣ 154 ಅಧ್ಯಾಯ). ಇವನಿಂದ ಕೇಕಯರ, ಧೃಷ್ಟದ್ಯುಮ್ನನ ಎಲ್ಲಾ ಪುತ್ರರ, ಸಾರಥಿ ಸಹಿತ ರಾಜಾಶಿಬಿಯ ವಧೆ (ದ್ರೋಣ 155/14–19). ಯುಧಿಷ್ಠಿರನೊಂದಿಗೆ ಯುದ್ಧದಲ್ಲಿ ಪರಾಜಿತನಾದುದು (ದ್ರೋಣ 157/28–43). ಅರ್ಜುನ ಮತ್ತು ಭೀಮಸೇನರೊಂದಿಗೆ ಯುದ್ಧ (ದ್ರೋಣ 161 ಅಧ್ಯಾಯ). ಯುಧಿಷ್ಠಿರನೊಂದಿಗೆ ಯುದ್ಧದಲ್ಲಿ ಮೂರ್ಚ್ಛಿತನಾದುದು (ದ್ರೋಣ 162/49). ಧೃಷ್ಟದ್ಯುಮ್ನನೊಂದಿಗೆ ಯುದ್ಧ (ದ್ರೋಣ 170/2–11). ದುಯೋಧನನಿಗೆ ಅರ್ಜುನನ ಪ್ರಶಂಸೆ ತುಂಬಿದ ಉತ್ತರ (ದ್ರೋಣ 185/10–20). ದುರ್ಯೋಧನನಿಗೆ ವ್ಯಂಗ್ಯ ಪೂರ್ಣ ಉತ್ತರ (ದ್ರೋಣ 185/24–37). ಇವನಿಂದ ದ್ರುಪದನ ಮೂವರು ಪೌತ್ರರು, ದ್ರುಪದ ಮತ್ತು ವಿರಾಟರ ವಧೆ (ದ್ರೋಣ 186/33–43). ಅರ್ಜುನನೊಂದಿಗೆ ಇವನ ಘೋರ ಯುದ್ಧ (ದ್ರೋಣ 188/24–53). ಅಶ್ವತ್ಥಾಮನ ಮರಣವಾರ್ತೆ ಕೇಳಿ ಜೀವನದಲ್ಲಿ ನಿರಾಶನಾದುದು (ದ್ರೋಣ 190/57–59). ಧೃಷ್ಟದ್ಯುಮ್ನನೊಂದಿಗೆ ಭಯಂಕರ ಯುದ್ಧ (ದ್ರೋಣ 191 ಅಧ್ಯಾಯ). ಅಸ್ತ್ರತ್ಯಾಗ ಮಾಡಿ ಯೋಗಧಾರಣೆಯ ಮೂಲಕ ಈತನಿಂದ ಬ್ರಹ್ಮಲೋಕಗಮನ (ದ್ರೋಣ 193/43–53). ಧೃಷ್ಟದ್ಯುಮ್ನನಿಂದ ಇವನ ತಲೆ ಕಡಿಯಲ್ಪಟ್ಟದ್ದು (ದ್ರೋಣ 192/62–63). ಅಶ್ವತ್ಥಾಮನ ಜನ್ಮ ಕಾಲದಲ್ಲಿ ಇವನಿಂದ ಬ್ರಾಹ್ಮಣರಿಗೆ ಒಂದು ಸಾವಿರ ಗೋದಾನ ಕೊಡಲ್ಪಡುವ ವರ್ಣನೆ (ದ್ರೋಣ 196/29–30). ಮಹಾರಾಜ ಪೃಷದಶ್ವನಿಂದ ಇವನಿಗೆ ಖಡ್ಗ ಪ್ರಾಪ್ತಿಯಾದ ಪ್ರಸಂಗ (ಶಾಂತಿ 166/81). ಇವನಿಗೆ ಶ್ರಾದ್ಧಕರ್ಮದ ಪೂರೈಕೆ (ಶಾಂತಿ 42/3). ಇವನು ಇಂದ್ರಿಯ ಸಂಯಮ ಮತ್ತು ತಪಸ್ಸಿನಿಂದ, ವೇದಗಳ ವಿದ್ವಾಂಸನಾಗಿದ್ದು ಸಮಾಜದಲ್ಲಿ ಪ್ರತಿಷ್ಠಿತನಾದನು. ತಪಸ್ಸಿನ ಮೂಲಕವೇ ಈತ ತನ್ನ ಮೂಲ ಸ್ವಭಾವವನ್ನು ಪಡಕೊಂಡನು (ಶಾಂತಿ 296/15–16). ವ್ಯಾಸರು ಆವಾಹನ ಮಾಡಿದಾಗ ಪರಲೋಕವಾಸಿಗಳಾದ ಕೌರವ ಪಾಂಡವ ವೀರರೊಂದಿಗೆ ಈತನೂ ಗಂಗಾಜಲದಿಂದ ಪ್ರಕಟಗೊಂಡನು (ಆಶ್ರಮ 32/7). ಈತ ಮರಣಾನಂತರ ಸ್ವರ್ಗಕ್ಕೆ ಹೋದನು; ಬೃಹಸ್ಪತಿಯ ಸಮೀಪ ಕಾಣಿಸಿಕೊಂಡನು; ಅಲ್ಲಿ ಸ್ವಲ್ಪ ಕಾಲಾನಂತರ ಬೃಹಸ್ಪತಿಯ ಅಂಶದಲ್ಲಿ ಸೇರಿಹೋದನು (ಸ್ವರ್ಗಾ 4/21; ಸ್ವರ್ಗಾ 5/12). ಮಹಾಭಾರತದಲ್ಲಿ ಬಂದಿರುವ ದ್ರೋಣಾಚಾರ್ಯನ ಹೆಸರುಗಳು – ಆಚಾರ್ಯ, ಆಚಾರ್ಯಮುಖ್ಯ, ಭಾರದ್ವಾಜ, ಭರದ್ವಾಜಸುತ, ಭರದ್ವಾಜಾತ್ಮಜ, ಭಾರತಾಚಾರ್ಯ, ಶೋಣಾಶ್ವ, ಶೋಣಾಶ್ವವಾಹ, ಶೋಣಹಯ, ಗುರು, ರುಕ್ಮರಥ ಇತ್ಯಾದಿ.

(2) ಮಂದಪಾಲ ಋಷಿಯಿಂದ ಜರಿತೆ (ಪಕ್ಷಿಣಿ)ಯ ಗರ್ಭದಲ್ಲಿ ಹುಟ್ಟಿದ ನಾಲ್ಕು ಪುತ್ರರಲ್ಲಿ ಒಬ್ಬ (ಆದಿ 228/17). 'ದ್ರೋಣ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗುವನು' ಎಂದು ಇವನ ವಿಷಯದಲ್ಲಿ ತಂದೆಯಿಂದ ಭವಿಷ್ಯಕಥನ (ಆದಿ 229/9–10). ಇವನಿಂದ ಅಗ್ನಿದೇವನ ಸ್ತುತಿ (ಆದಿ 231/15–19). ಅಗ್ನಿಯ ಕೃಪೆಯಿಂದ ಖಾಂಡವವನದಹನ ಕಾಲದಲ್ಲಿ ಸಹೋದರರ ಸಹಿತ ಈತನ ರಕ್ಷಣೆ (ಆದಿ 231/21–23).

**ದ್ರೋಣಪರ್ವ** – ಮಹಾಭಾರತದ ಒಂದು ಮುಖ್ಯ ಪರ್ವ.

**ದ್ರೋಣವಧಪರ್ವ** – ದ್ರೋಣಪರ್ವದ ಒಂದು ಅವಾಂತರಪರ್ವ (ಅಧ್ಯಾಯ 184ರಿಂದ 192ರ ತನಕ).

**ದ್ರೋಣಶರ್ಮಪದ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದುದರ ವಿಶೇಷ ಫಲ (ಅನು 25/28).

**ದ್ರೋಣಾಭಿಷೇಕಪರ್ವ** – ದ್ರೋಣ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1 ರಿಂದ 16 ತನಕ).

**ದ್ರೌಪದೀ** – ಮಹಾರಾಜ ದ್ರುಪದನ ಸಾಧ್ವೀ ಪುತ್ರಿ ಕೃಷ್ಣಾ. ಈಕೆ ಶಚೀದೇವಿಯ ಅಂಶದಿಂದ ಹುಟ್ಟಿದ್ದಳು (ಆದಿ 67/157). ಮಹರ್ಷಿಯಾಜ

ಅಗ್ನಿಯಲ್ಲಿ ಆಹುತಿಹಾಕಿದಾಗ, ಯಜ್ಞಕುಂಡದಲ್ಲಿ ಕುಮಾರ ಧೃಷ್ಟದ್ಯುಮ್ನನ ಅನಂತರ ಈಕೆ ಪ್ರಕಟವಾದಳು. ಆದುದರಿಂದ ಧೃಷ್ಟದ್ಯುಮ್ನನ ಸಹೋದರಿಯಾದಳು (ಆದಿ 166/39–44). ಈಕೆಯನ್ನು ಪಾಂಚಾಲಿಯೆಂದು ಹೇಳಲಾಗುತ್ತಿತ್ತು ಇವಳನ್ನು ಪಾಂಡವರು ಪತ್ನಿಯಾಗಿ ಪಡ ಕೊಂಡರು. ಈಕೆಯ ಗರ್ಭದಿಂದ ಐದು ಮಂದಿ ಮಕ್ಕಳಾದರು. ಯುಧಿಷ್ಠಿರನಿಂದ ಪ್ರತಿವಿಂಧ್ಯ, ಭೀಮಸೇನನಿಂದ ಸುತಸೋಮ, ಅರ್ಜುನನಿಂದ ಶ್ರುತಕೀರ್ತಿ, ನಕುಲನಿಂದ ಶತಾನೀಕ ಮತ್ತು ಸಹದೇವನಿಂದ ಶ್ರುತಕರ್ಮಾ ಎಂಬವರ ಜನನ ವಾಯಿತು (ಆದಿ 95/75). ಇವಳ ಅನುಪಮ ಸೌಂದರ್ಯದ ವರ್ಣನೆ (ಆದಿ 166/45–47). ಈಕೆಯ ಜನ್ಮ ಸಮಯದಲ್ಲಾದ ಆಕಾಶವಾಣಿ, "ಈ ಕನ್ಯೆಯ ಹೆಸರು ಕೃಷ್ಣಾ, ಇವಳು ಸಮಸ್ತ ಯುವತಿಯರಲ್ಲಿ ಶ್ರೇಷ್ಠಳೂ, ಸುಂದರಿಯೂ ಆಗಿದ್ದಾಳೆ. ಕ್ಷತ್ರಿಯರ ಸಂಹಾರ ಮಾಡುವುದಕ್ಕಾಗಿ ಪ್ರಕಟಗೊಂಡಿದ್ದಾಳೆ. ಇವಳು ಸಮಯಾನುಸಾರ ದೇವತೆಗಳ ಕಾರ್ಯವನ್ನು ಸಿದ್ಧಗೊಳಿಸುವಳು. ಈಕೆಯಿಂದ ದೇವತೆಗಳಿಗೆ ಮಹಾಭಯ ಪ್ರಾಪ್ತ ವಾದೀತು" (ಆದಿ 166/48–49). ಬ್ರಾಹ್ಮಣರಿಂದ ಈಕೆಯ ನಾಮಕರಣ (ಆದಿ 166/54). ವ್ಯಾಸರು ದ್ರೌಪದಿಯ ಪೂರ್ವಜನ್ಮದ ವೃತ್ತಾಂತ ಹೇಳಿದುದು – ಭಗವಾನ್ ಶಂಕರನಿಂದ ಈಕೆಗೆ ಐದುಮಂದಿ ಪತಿಗಳಾಗುವ ವರದಾನ (ಆದಿ 168 ಅಧ್ಯಾಯ). ಈಕೆಯ ಸ್ವಯಂವರದಲ್ಲಿ ವಿಭಿನ್ನ ದೇಶಗಳಿಂದ ಬಂದ ರಾಜರನ್ನು ಧೃಷ್ಟ ದ್ಯುಮ್ನ ಈಕೆಗೆ ಪರಿಚಯ ಮಾಡಿದುದು (ಆದಿ 185 ಅಧ್ಯಾಯ). ಸೂತಜಾತಿಯ ಪುರುಷನನ್ನು ವರಿಸುವುದಿಲ್ಲವೆಂಬ ವಿಷಯದಲ್ಲಿ ಈಕೆಯ ಘೋಷಣೆ (ಆದಿ 186/23). ಅರ್ಜುನನ ಕಂಠಕ್ಕೆ ಈಕೆ ಜಯಮಾಲೆಯನ್ನು ಹಾಕಿದುದು (ಆದಿ 187/25). ಅರ್ಜುನ ಮತ್ತು ಭೀಮ ಸೇನನೊಂದಿಗೆ ಈಕೆ ಕುಂಬಾರನ ಮನೆಗೆ ಹೋದುದು (ಆದಿ 189/414–7). ಮನೆಗೆ ಬಂದು ಪಾಂಡವರು ತಾಯಿಯೊಡನೆ ದ್ರೌಪದಿ ಯನ್ನು ಭಿಕ್ಷೆಯೆಂದು ಹೇಳಿದುದು. ತಾಯಿ ನೋಡದೆಯೇ ಐವರೂ ಆ ಭಿಕ್ಷೆಯನ್ನು ಉಪ ಯೋಗಿಸಲು ಆಜ್ಞೆಯನ್ನಿತ್ತದ್ದು (ಆದಿ 190/1–2). ಕುಂಬಾರನ ಮನೆಗೆ ಹೋದುದರಿಂದ ಇವರ ಕುರಿತು ದ್ರುಪದನ ಊಹಾಪೋಹ ಮತ್ತು ಚಿಂತೆ (ಆದಿ 191/14–18). ವ್ಯಾಸರು ಈಕೆಯ ಪೂರ್ವಜನ್ಮದ ವೃತ್ತಾಂತವನ್ನು ದ್ರುಪದನಿಗೆ ತಿಳಿಸಿದುದು ಮತ್ತು ಇವಳು ಸ್ವರ್ಗಲೋಕದ ಲಕ್ಷ್ಮಿಯೆಂದು ಹೇಳಿದುದು (ಆದಿ 196 ಅಧ್ಯಾಯ). ಧೌಮ್ಯರಿಂದ ಕ್ರಮವಾಗಿ ಪ್ರತಿಯೊಬ್ಬ ಪಾಂಡವನೊಂದಿಗೆ, ವಿಧಿಪೂರ್ವಕ ಈಕೆಯ ವಿವಾಹ (ಆದಿ 197 ಅಧ್ಯಾಯ). ಕುಂತಿಯಿಂದ ಈಕೆಗೆ ಆಶೀರ್ವಾದ ಮತ್ತು ಶಿಕ್ಷಣ (ಆದಿ 198/4–12). ಹಸ್ತಿನಾಪುರಕ್ಕೆ ಹೋಗುವಾಗ ಈಕೆಗೆ ದ್ರುಪದನಿಂದ ವರದಕ್ಷಿಣೆಯ ರೂಪದಲ್ಲಿ ಅಪಾರ ಧನರಾಶಿಯ ಉಡುಗೊರೆ (ಆದಿ 206/9). ಧೃತರಾಷ್ಟ್ರ ಸೊಸೆಯರಿಂದ ಈಕೆಗೆ ಸ್ವಾಗತ (ಆದಿ 206/22). ಸುಭದ್ರೆಯು ಬಂದಾಗ ಅರ್ಜುನನ ಮೇಲೆ ಈಕೆಯ ಪ್ರಣಯಕೋಪ (ಆದಿ 220/16–17). ಸುಭದ್ರೆ ಗೋಪಿಕೆಯ ವೇಷದಲ್ಲಿ ಇವಳ ಬಳಿಗೆ ಬಂದುದು (ಆದಿ 220/19). ದುಃಶಾಸನನು ಈಕೆಯ ಕೇಶವನ್ನು ಬಲಾತ್ಕಾರದಿಂದ ಹಿಡಿದು, ಈಕೆಯನ್ನು ಸಭೆಗೆ ಎಳೆದು ತಂದುದು (ಸಭಾ 67/31). ತುಂಬಿದ ಸಭೆಯಲ್ಲಿ, ತನ್ನನ್ನು ಸೋತ ವಿಷಯವಾಗಿ ಸಮಸ್ತ ಸಭಾಸದರಲ್ಲಿ ಇವಳ ಪ್ರಶ್ನೆ (ಸಭಾ 67/41–52). ದುಃಶಾಸನನಿಂದ ಸೀರೆ ಸೆಳೆಯಲ್ಪಟ್ಟಾಗ ಈಕೆ ಆರ್ತಭಾವದಿಂದ ಭಗವಂತನನ್ನು ಕರೆದುದು (ಸಭಾ 68/41–43). ಇವಳ ಮರ್ಯಾದೆಯನ್ನು ಉಳಿಸಲು ಶ್ರೀಕೃಷ್ಣನು ಸ್ವತಃ ಸೀರೆಯ ರೂಪವಾದುದು ಮತ್ತು ಹೊಸಹೊಸ ಸೀರೆಯನ್ನು ಸೃಷ್ಟಿಸಿದುದು (ಸಭಾ 68/45–48). ಕೌರವನ ಸಭೆಯಲ್ಲಿ ಈಕೆಯಿಂದ ಎಚ್ಚರಿಕೆ ಯುಕ್ತವಾದ ಪ್ರಲಾಪ (ಸಭಾ 69 ಅಧ್ಯಾಯ). ಧೃತರಾಷ್ಟ್ರನಿಂದ ಈಕೆಗೆ ವರಪ್ರಾಪ್ತಿ (ಸಭಾ 71/28–32). ಈಕೆ ವನಗಮನಕ್ಕೋಸ್ಕರ ಕುಂತಿ ಯಿಂದ ವಿದಾಯ ಪಡೆದುದು (ಸಭಾ 79/1–2). ಕಿರ್ಮೀರನ ಮಾಯೆಯಿಂದ ಶ್ರೀಕೃಷ್ಣನ ಸ್ತೋತ್ರ ಮತ್ತು ಆತನೊಂದಿಗೆ ತನಗಾದ ಅಪಮಾನ ಮತ್ತು ದುಃಖದ ವರ್ಣನೆ (ವನ 12/50–127). ಯುಧಿಷ್ಠಿರನ ಕೋಪವನ್ನು ಹೆಚ್ಚಿಸಲು ಈಕೆಯಿಂದ ಸಂತಾಪಪೂರ್ಣಮಾತು

(ವನ 27 ಅಧ್ಯಾಯ). ಪ್ರಹ್ಲಾದ ಬಲಿ ಸಂವಾದದ ವರ್ಣನೆ ಮಾಡಿ, ಈಕೆ ಯುಧಿಷ್ಠಿರನ ಕ್ರೋಧವನ್ನು ಹೆಚ್ಚಿಸಿದುದು (ವನ 28 ಅಧ್ಯಾಯ). ಯುಧಿಷ್ಠಿರನ ಬುದ್ಧಿ, ಧರ್ಮ ಮತ್ತು ಭಗವಂತನ ನ್ಯಾಯದ ಮೇಲೆ ಈಕೆಯ ಆಕ್ಷೇಪ (ವನ 30 ಅಧ್ಯಾಯ). ಪುರುಷಾರ್ಥವನ್ನು ಮಾಡುವಂತೆ ಯುಧಿಷ್ಠಿರನನ್ನು ಒತ್ತಾಯಿಸಿದುದು (ವನ 32/24–35). ಅರ್ಜುನನಿಗಾಗಿ ಈಕೆಯ ಚಿಂತೆ (ವನ 80/12–15). ಗಂಧಮಾದನ ಯಾತ್ರೆಯಲ್ಲಿ ಇವಳು ಮೂರ್ಛಿತಳಾದುದು (ವನ 144/4). ಈಕೆಯಿಂದ ಭೀಮಸೇನನೊಡನೆ ಸೌಗಂಧಿಕ ಪುಷ್ಪಗಳ ಬೇಡಿಕೆ (ವನ 146/7). ಜಟಾಸುರನಿಂದ ಇವಳ ಅಪಹರಣ ಮತ್ತು ಭೀಮಸೇನನು ಅವನನ್ನು ಕೊಂದು ಈಕೆ ಮತ್ತು ಸಹೋದರರನ್ನು ರಕ್ಷಿಸಿದುದು (ವನ 157 ಅಧ್ಯಾಯ). ಆರ್ಷ್ಟಿಷೇಣನ ಆಶ್ರಮದಲ್ಲಿ, ಆ ಪರ್ವತದ ಮೇಲೆ ವಾಸಿಸುವ ರಾಕ್ಷಸರನ್ನು ಕೊಲ್ಲಲು ಈಕೆಯಿಂದ ಭೀಮಸೇನನೊಡನೆ ಒತ್ತಾಯ (ವನ 160/12–24). ಸತ್ಯಭಾಮೆಯೊಡನೆ, ಗಂಡನನ್ನು ಅನುಕೂಲನಾಗಿರುವಂತೆ ಇಟ್ಟುಕೊಳ್ಳುವ ಉಪಾಯ ತಿಳಿಸಿದುದು (ವನ 233/10 ರಿಂದ 234 ಅಧ್ಯಾಯದ ವರೆಗೆ). ದುರ್ವಾಸನ ಆತಿಥ್ಯಮಾಡಲು, ಚಿಂತಾಕುಲಳಾಗಿ ಶ್ರೀಕೃಷ್ಣನ ಸ್ತುತಿ ಮಾಡಿದುದು (ವನ 263/8–16). ದ್ರೌಪದಿಗಾದ ಕಷ್ಟತಿಳಿದು ಭಕ್ತವತ್ಸಲ ಭಗವಂತನ ಆಗಮನ ಮತ್ತು ಆತನೊಡನೆ ದ್ರೌಪದಿಯಿಂದ ದುರ್ವಾಸನ ಆಗಮನವೇ ಮೊದಲಾದ ವೃತ್ತಾಂತದ ನಿವೇದನೆ (ವನ 263/17–19). ತಾನು ಹಸಿದವನೆಂದು ಹೇಳಿ ಶ್ರೀಕೃಷ್ಣನು ದ್ರೌಪದಿಯೊಡನೆ ಭೋಜನವನ್ನು ಕೇಳಿದುದು; ಆಗ ದ್ರೌಪದಿ ತಿನ್ನುವುದಕ್ಕೆ ಏನೂ ಇಲ್ಲವೆಂದು ಲಜ್ಜಿತಳಾಗಿ ಹೇಳಿದುದು (ವನ 263/20–21). "ಕೃಷ್ಣೇ! ನನ್ನಲ್ಲಿ ಪರಿಹಾಸಬೇಡ, ಪಾತ್ರೆಯನ್ನು ತಂದು ತೋರಿಸು" ಹೀಗೆ ಶ್ರೀಕೃಷ್ಣನು ಆಗ್ರಹ ಮಾಡಿದಾಗ ದ್ರೌಪದಿ ಪಾತ್ರೆ ತಂದು ಆತನಿಗೆ ಕೊಟ್ಟದ್ದು; ಅದರ ಕುತ್ತಿಗೆಯಲ್ಲಿ ಅಂಟಿದ ಸ್ವಲ್ಪವೇ ಸೊಪ್ಪನ್ನು ತಿಂದು ಶ್ರೀಕೃಷ್ಣನು ದ್ರೌಪದಿಯೊಡನೆ 'ಈ ಶಾಕದಿಂದ ಸಂಪೂರ್ಣ ವಿಶ್ವದ ಆತ್ಮನೂ, ಯಜ್ಞಭೋಕ್ತನೂ, ಸರ್ವೇಶ್ವರನೂ ಆದ, ಭಗವಾನ್ ಶ್ರೀಹರಿ ತೃಪ್ತನೂ ಸಂತುಷ್ಟನೂ ಆಗಲಿ' ಎಂದನು (ವನ 263/22–25). ಜಯದ್ರಥನಿಂದ ಕಳುಹಿಸಲ್ಪಟ್ಟ ಕೋಟಿಕಾಸ್ಯನಿಗೆ ಈಕೆ ಉತ್ತರವನ್ನಿತ್ತದ್ದು (ವನ 266 ಅಧ್ಯಾಯ). ಜಯದ್ರಥನನ್ನು ನಿಂದಿಸಿದುದು (ವನ 267/19; 268/2–9). ಜಯದ್ರಥನ ಮುಂದೆ ಪಾಂಡವರ ಪರಾಕ್ರಮದ ವರ್ಣನೆ (ವನ 270 ಅಧ್ಯಾಯ). ಯುಧಿಷ್ಠಿರನು ಕೇಳಿದಾಗ ವಿರಾಟನಗರದಲ್ಲಿ ತಾನು ಸೈರಂಧ್ರಿ ರೂಪದಿಂದ ಇರುವೆನೆಂದು ಹೇಳಿದುದು (ವಿರಾಟ 3/18). ಸೈರಂಧ್ರಿ ವೇಷದಲ್ಲಿ ಇವಳು ವಿರಾಟ ಪತ್ನಿ ಸುಧೇಷ್ಣೆಯೊಡನೆ ತನ್ನನ್ನು ಅರಮನೆಯಲ್ಲಿ ಇರಗೊಡಿಸಿಕೊಳ್ಳುವಂತೆ ಒತ್ತಾಯಿಸಿದುದು (ವಿರಾಟ 9/8). ಕೀಚಕನಿಗೆ ಧರ್ಮದ ವಿಷಯಗಳನ್ನು ವಿವರಿಸಿ ತಿಳಿಯಹೇಳಿದುದು (ವಿರಾಟ 14/34–37). ಕೀಚಕನನ್ನು ನಿಂದಿಸಿದುದು (ವಿರಾಟ 14/47–52). ಸುಧೇಷ್ಣೆಯು ಕಳುಹಿಸಿದ ಕಾರಣ, ಕೀಚಕನ ಮನೆಗೆ ಸುರೆಯನ್ನು ತರಲು ಹೋದುದು (ವಿರಾಟ 15/17). ಕೀಚಕನು ತುಂಬಿದ ಸಭೆಯಲ್ಲಿ ಒದೆದಾಗ, ಈಕೆ ವಿರಾಟ ರಾಜನನ್ನು ಹೀಗಳೆದುದು ಮತ್ತು ನಿಂದಿಸಿದುದು (ವಿರಾಟ 16/10–12; ವಿರಾಟ 16/21). ಸುಧೇಷ್ಣೆ ಕೇಳಿದಾಗ ಅಳುವ ಕಾರಣವನ್ನು ಹೇಳಿದುದು (ವಿರಾಟ 16/49). ರಾತ್ರಿ ಭೀಮಸೇನನ ಬಳಿಗೆ ಹೋದುದು (ವಿರಾಟ 17/7–8). ಭೀಮಸೇನನೊಡನೆ ತನ್ನ ದುಃಖ ಹೇಳಿದುದು ಮತ್ತು ಕೀಚಕನನ್ನು ಕೊಂದು ಹಾಕಲು ಆಗ್ರಹಿಸಿದುದು (ವಿರಾಟ 18 ಅಧ್ಯಾಯ). ಪಾಂಡವರ ದುಃಖದಿಂದ ದುಃಖಿತಳಾಗಿ ಭೀಮಸೇನನ ಸಮ್ಮುಖದಲ್ಲಿ ವಿಲಪಿಸಿದುದು (ವಿರಾಟ 19 ಅಧ್ಯಾಯ). ಭೀಮಸೇನನೊಡನೆ ತನ್ನ ದುಃಖವನ್ನು ನಿವೇದಿಸಿದುದು (ವಿರಾಟ 20 ಅಧ್ಯಾಯ). ಕೀಚಕನಿಂದ ತನ್ನ ಮೇಲೆ ನಡೆದ ಘಟನೆಯನ್ನು ಭೀಮಸೇನನೊಡನೆ ವರ್ಣಿಸಿದುದು ಮತ್ತು ಕೀಚಕನ ವಧೆ ಮಾಡುವಂತೆ ಆಗ್ರಹಿಸಿದುದು (ವಿರಾಟ 21/18–48). ನೃತ್ಯಶಾಲೆಯಲ್ಲಿ ಸಿಗುವಂತೆ ಕೀಚಕನಿಗೆ ಸಂಕೇತ ನೀಡಿದುದು (ವಿರಾಟ 22/16–17). ಉಪಕೀಚಕರಿಂದ

ಸ್ಮಶಾನಕ್ಕೆ ಎಳೆದೊಯ್ಯಲ್ಪಡುತ್ತಿರುವಾಗ ಪತಿಗಳನ್ನು ಕರೆದುದು (ವಿರಾಟ 23/12–14). ಬೃಹನ್ನಲಾ ರೂಪಧಾರಿ ಅರ್ಜುನನೊಂದಿಗೆ ಭೇಟಿ (ವಿರಾಟ 24/21). ಅರಮನೆಯಿಂದ ಹೊರಟುಹೋಗಲು ಹೇಳಿದಾಗ, ಇನ್ನು ಹದಿಮೂರುದಿನ ವಾಸಿಸಲು ಒಪ್ಪುವಂತೆ ಸುಧೇಷ್ಣೆಯೊಡನೆ ಪ್ರಾರ್ಥನೆ (ವಿರಾಟ 24/29). ಉತ್ತರನೊಂದಿಗೆ ಬೃಹನ್ನಲಾ ರೂಪಧಾರಿ ಅರ್ಜುನನನ್ನು ಸಾರಥಿಯಾಗಿ ಮಾಡಿಕೊಳ್ಳುವಂತೆ ಸೂಚಿಸಿದುದು (ವಿರಾಟ 36/16–19). ಶಾಂತಿದೂತನಾಗಿ ಹೋಗಲು ಸಿದ್ಧನಾದ ಶ್ರೀಕೃಷ್ಣನಲ್ಲಿ, ಕೇಶಾಕರ್ಷಣದ ನೆನಪು ಹುಟ್ಟಿಸಿ, ತನ್ನ ದುಃಖವನ್ನು ಹೇಳಿದುದು ಮತ್ತು ಯುದ್ಧಕಾರ್ಯವನ್ನೇ ಸಮ್ಮತಿಸಿದುದು (ಉದ್ಯೋಗ 82/4–41). ವಿಲಾಪ ಮಾಡುತ್ತಿರುವ ಸುಭದ್ರೆ ಮತ್ತು ಉತ್ತರೆಯ ಬಳಿಗೆ ಬಂದುದು ಮತ್ತು ಶೋಕದಿಂದ ಮೂರ್ಛಿತಳಾದುದು (ದ್ರೋಣ 78/36–37). ಪುತ್ರರವಧೆಯ ಸಮಾಚಾರ ಕೇಳಿ ವಿಲಪಿಸಿದುದು ಮತ್ತು ಅಶ್ವತ್ಥಾಮನನ್ನು ವಧಿಸುವಂತೆ ಒತ್ತಾಯಿಸಿದುದು (ಸೌಪ್ತಿಕ 11/10–15). ಅಶ್ವತ್ಥಾಮನನ್ನು ವಧಿಸುವಂತೆ ಭೀಮನನ್ನು ಪ್ರೇರಿಸಿದುದು (ಸೌಪ್ತಿಕ 11/22–27). ಭೀಮಸೇನನ ವಚನಗಳಿಂದ ಶಾಂತಳಾಗಿ, ಅಶ್ವತ್ಥಾಮನ ಮಣಿಯನ್ನು ಯುಧಿಷ್ಠಿರನು ಧರಿಸುವಂತೆ ಕೊಟ್ಟದ್ದು (ಸೌಪ್ತಿಕ 16/24). ಕುಂತಿಯ ಬಳಿಗೆ ಹೋಗಿ ವಿಲಪಿಸಿದುದು (ಸ್ತ್ರೀ 15/37–38). ರಾಜದಂಡ ಧಾರಣೆ ಮಾಡುವಂತೆ ಯುಧಿಷ್ಠಿರನನ್ನು ಒಡಂಬಡಿಸಿದುದು (ಶಾಂತಿ 14 ಅಧ್ಯಾಯ). ಪಾಂಡವರೊಂದಿಗೆ ನಗರಪ್ರವೇಶ ಮಾಡುವಾಗ, ಹಸ್ತಿನಾಪುರದ ಸ್ತ್ರೀಯರಿಂದ, ಪಾಂಚಾಲಿಯ ಪತಿಸೇವೆ, ಅಮೋಘ ಪುಣ್ಯಕರ್ಮ ಮತ್ತು ಸಕಲ ವ್ರತ ಚರ್ಯೆಗಳ ಪ್ರಶಂಸೆ (ಶಾಂತಿ 38/5–6). ಸುಭದ್ರೆ ಮತ್ತು ಬಲದೇವನೊಂದಿಗೆ ಹಸ್ತಿನಾವತಿಗೆ ಆಗಮಿಸಿದ ಶ್ರೀಕೃಷ್ಣನನ್ನು ದ್ರೌಪದಿ ಭೇಟಿ ಮಾಡಿದುದು (ಆಶ್ವ 67/4–5). ಶ್ರೀಕೃಷ್ಣನು ಸೂತಿಕಾ ಗೃಹಪ್ರವೇಶ ಮಾಡುವ ಸಮಯದಲ್ಲಿ, ದ್ರೌಪದಿ ಉತ್ತರೆಯ ಬಳಿಗೆ ಹೋಗಿ, 'ನಿನ್ನ ಮಾವ ಭಗವಾನ್ ಮಧುಸೂದನ ಬರುತ್ತಿದ್ದಾನೆ' ಂದು ಸೂಚಿಸಿದುದು (ಆಶ್ವ 68/9). ಅರ್ಜುನನ ಮೀನಗಂಡಗಳು ದಪ್ಪವಾಗಿವೆಯೆಂದು ಶ್ರೀಕೃಷ್ಣನಿಂದ ಹೇಳಲ್ಪಟ್ಟಾಗ, ದ್ರೌಪದಿ, ಭಗವಾನ್ ಶ್ರೀಕೃಷ್ಣನ ಕಡೆಗೆ ವಕ್ರದೃಷ್ಟಿಯಿಂದ ಈರ್ಷ್ಯಾಪೂರ್ವಕವಾಗಿ ನೋಡಿದಳು ಮತ್ತು ಶ್ರೀಕೃಷ್ಣನು ದ್ರೌಪದಿಯ ಆ ಪ್ರೇಮಪೂರ್ಣ ಆಕ್ಷೇಪವನ್ನು ಸಂತೋಷದಿಂದ ಸ್ವೀಕರಿಸಿದನು (ಆಶ್ವ 87/11). ಚಿತ್ರಾಂಗದೆ ಮತ್ತು ಉಲೂಪಿ ದ್ರೌಪದಿಗೆ ನಮಸ್ಕರಿಸಿದುದು ಮತ್ತು ದ್ರೌಪದಿ ತನ್ನ ಪತಿಯಿಂದ ಅವರಿಗೆ ನಾನಾ ಪ್ರಕಾರದ ಉಡುಗೊರೆಯನ್ನಿತ್ತದ್ದು (ಆಶ್ವ 88/2–4). ಶ್ರೀಕೃಷ್ಣನು ದ್ರೌಪದಿಯೇ ಮೊದಲಾದವರ ಭೆಟ್ಟಿ ಮಾಡಿ, ದ್ವಾರಕೆಗೆ ಹೋಗಲು ರಥವೇರಿದುದು (ಆಶ್ವ 92). ದ್ರೌಪದಿಯಿಂದ ಕುಂತಿ ಮತ್ತು ಗಾಂಧಾರಿಯರ ಸೇವೆ (ಆಶ್ರಮ 1/9). ಕಾಡಿಗೆ ಹೋಗುತ್ತಿದ್ದ ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿಯ ಹಿಂದಿನಿಂದ ದ್ರುಪದಕುಮಾರಿ ಕೃಷ್ಣೆಯೇ ಮೊದಲಾದವರ ಗಮನ ಮತ್ತು ವಿಲಾಪ (ಆಶ್ರಮ 15/10–11). ಸೊಸೆ ದ್ರೌಪದಿಗೆ ಪ್ರಿಯವನ್ನುಂಟು ಮಾಡುತ್ತಿರುವಂತೆ ಕುಂತಿಯಿಂದ ಯುಧಿಷ್ಠಿರನಿಗೆ ಆದೇಶ (ಆಶ್ರಮ 16/15). ಅಳುತ್ತಿರುವ ಸುಭದ್ರೆಯ ಸಹಿತ ದ್ರೌಪದಿ ತನ್ನ ಅತ್ತೆಯ ಹಿಂದೆ ಹೋದುದು (ಆಶ್ರಮ 16/30). ದ್ರೌಪದಿ ಯುಧಿಷ್ಠಿರನೊಂದಿಗೆ ತನ್ನ ಅತ್ತೆಯ ದರ್ಶನ ಮಾಡುವ ಇಚ್ಛೆಯನ್ನು ಪ್ರಕಟಿಸಿದುದು ಮತ್ತು ಅಂತಃಪುರದ ಎಲ್ಲಾ ಸ್ತ್ರೀಯರು ಕುಂತಿ ಮತ್ತು ಗಾಂಧಾರಿಯ ಸಂದರ್ಶನ ಮಾಡಲು ಉತ್ಸುಕರಾಗಿದ್ದಾರೆಂದು ಹೇಳಿದುದು (ಆಶ್ರಮ 22/14–22). ದ್ರೌಪದಿ ಮೊದಲಾದವರು ಕುಂತಿ, ಗಾಂಧಾರಿ ಮತ್ತು ಧೃತರಾಷ್ಟ್ರನಿಗೆ ಪ್ರಣಾಮ ಮಾಡಿದುದು (ಆಶ್ರಮ 24/29). ಸಂಜಯನು ಋಷಿಗಳೊಂದಿಗೆ ದ್ರೌಪದಿಯ ಪರಿಚಯ ಮಾಡುತ್ತಾ, ಈಕೆಯನ್ನು ಲಕ್ಷ್ಮಿಯ ಮೂರ್ತ ಸ್ವರೂಪವೆಂದು ಹೇಳಿದುದು (ಆಶ್ರಮ 25/9). ದ್ರೌಪದಿ ತನ್ನ ಪತಿಗಳೊಂದಿಗೆ ಮಹಾಪ್ರಸ್ಥಾನದ ಮಾರ್ಗಕ್ಕೆ ಮುಂದಾದುದು (ಮಹಾಪ್ರಸ್ಥಾ 1/19–20). ಮಾರ್ಗದಲ್ಲಿ ದ್ರೌಪದಿ ಬಿದ್ದು ಹೋದುದು; ಭೀಮಸೇನನು ಪ್ರಶ್ನಿಸಿದಾಗ, ಯುಧಿಷ್ಠಿರನು ಈಕೆಯ ಪತನದ ಕಾರಣ ಹೇಳಿದುದು (ಮಹಪ್ರಸ್ಥಾ 2/3–6). ಸ್ವರ್ಗ

ಲೋಕದಲ್ಲಿ ಯುಧಿಷ್ಠಿರನು, ದಿವ್ಯಕಾಂತಿಯಿಂದ ಸೂರ್ಯದೇವನಂತೆ ಪ್ರಕಾಶಿಸುತ್ತಿರುವ ದ್ರೌಪದಿಯ ದರ್ಶನ ಮಾಡಿದುದು ಮತ್ತು ಇಂದ್ರನು ಈಕೆ ಸ್ವರ್ಗಲೋಕದ ಲಕ್ಷ್ಮಿಯೆಂದು ಹೇಳಿ, ಈಕೆಯ ಮತ್ತು ಈಕೆಯ ಪುತ್ರರ ಪರಿಚಯ ಮಾಡಿದುದು (ಸ್ವರ್ಗಾ 4/10-14). ಮಹಾಭಾರತದಲ್ಲಿ ಬಂದಿರುವ ದ್ರೌಪದಿಯ ಹೆಸರುಗಳು- ಪಾಂಚಾಲೀ, ಕೃಷ್ಣಾ, ಯಾಜ್ಞಸೇನೀ, ದ್ರುಪದಾತ್ಮಜಾ, ದ್ರುಪದಸುತಾ, ಪಾಂಚಾಲರಾಜ ದುಹಿತಾ ಇತ್ಯಾದಿ.

**ದ್ರೌಪದೀ ಹರಣಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 262ರಿಂದ 271ರ ವರೆಗೆ).

**ದ್ವೃಕ್ಷ** – ಒಂದು ಭಾರತೀಯ ಜನಪದ. ಇಲ್ಲಿರುವ ರಾಜ, ಯುಧಿಷ್ಠಿರನಿಗೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 51/17).

**ದ್ವಾದಶಭುಜ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/57).

**ದ್ವಾದಶಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ದ್ವಾಪರಯುಗ** – ಸತ್ಯಯುಗದಿಂದ ತೃತೀಯ ಯುಗ. ಹನೂಮಂತನಿಂದ ಈ ಯುಗದ ಧರ್ಮದ ವರ್ಣನೆ (ವನ 149/27-32).

**ದ್ವಾರಕಾ** – (ದ್ವಾರವತೀ ಅಥವಾ ದ್ವಾರಾವತೀ) ರೈವತಕ ಪರ್ವತದಿಂದ ಶೋಭಾಯಮಾನವಾದ ರಮಣೀಯ ಕುಶಸ್ಥಲಿ. ಜರಾಸಂಧನಲ್ಲಿ ವೈರ ವುಂಟಾದಾಗ ಸಮಸ್ತಯಾದವರು ಶ್ರೀಕೃಷ್ಣನ ಸಮ್ಮತಿಯಂತೆ ಇಲ್ಲಿ ಏಕತ್ರಿತರಾಗಿ ವಾಸಿಸ ತೊಡಗಿದರು. ದೇವತೆಗಳಿಗೂ ದುರ್ಗಮವಾಗು ವಂತೆ ಕುಶಸ್ಥಲೀದುರ್ಗ ದುರಸ್ತಿ ಮಾಡಲ್ಪಟ್ಟಿತ್ತು. ಈ ದುರ್ಗದಲ್ಲಿದ್ದುಕೊಂಡು ಸ್ತ್ರೀಯರೂ ಯುದ್ಧ ಮಾಡಲು ಸಾಧ್ಯವಿತ್ತು. ಹೀಗಿರುವಾಗ ವೃಷ್ಣಿ ಕುಲದ ಮಹಾರಥಿಗಳ ಕುರಿತು ಕೇಳಬೇಕಾಗಿ ರಲಿಲ್ಲ. ರೈವತಕದ ದುರ್ಗಮತೆಯಿಂದಾಗಿ, ಯದುವಂಶದವರು ಇಲ್ಲಿ ನಿರ್ಭಯರಾಗಿ ಸಂತೋಷದಿಂದಿರುತ್ತಿದ್ದರು. ರೈವತಕ ಅಥವಾ ಗೋಮಂತ ದುರ್ಗದ ಉದ್ದ ಮೂರು ಯೋಜನಗಳು. ಅಲ್ಲಿ ಒಂದೊಂದು ಯೋಜನ ದಲ್ಲೂ ಸೇನೆಯ ಮೂರು-ಮೂರು ದಳಗಳ ಶಿಬಿರಗಳಿದ್ದವು. ಪ್ರತಿಯೊಂದು ಯೋಜನದ ಅಂತ್ಯದಲ್ಲಿ ನೂರು ನೂರು ದ್ವಾರಗಳಿದ್ದವು. ಅವುಗಳು ಸೇನೆಗಳಿಂದ ಸುರಕ್ಷಿತವಾಗಿದ್ದವು. ವೀರರ ಪರಾಕ್ರಮವೇ ಆ ದುರ್ಗದ ಪ್ರಧಾನ ಹೆಬ್ಬಾಗಿಲು ಆಗಿತ್ತು. ಕನಿಷ್ಠ ಹದಿನೆಂಟು ಮಂದಿ ರಣದುರ್ಮದ ಕ್ಷತ್ರಿಯ ವೀರರು ಆ ದುರ್ಗದ ಸುರಕ್ಷೆಗೆ ಸದಾ ಮಗ್ನರಾಗಿರುತ್ತಿದ್ದರು (ಸಭಾ 14/50-55). ದ್ವಾರಕೆ ಪುರುಷೋತ್ತಮ ಶ್ರೀಕೃಷ್ಣನ ಪ್ರಧಾನ ನಿವಾಸಸ್ಥಾನವಾಗಿತ್ತು. ಇದು ಅಮರಾ ವತಿಗಿಂತಲೂ ಅಧಿಕ ರಮಣೀಯವಾಗಿತ್ತು. ಇಲ್ಲಿ ವೃಷ್ಣಿವಂಶದವರು ಕುಳಿತುಕೊಳ್ಳಲು ಒಂದು ಸುಂದರ ಸಭೆ ಇತ್ತು. ಇದು ದಾಶಾರ್ಹೀ ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಅದರ ಉದ್ದಗಲ ಒಂದೊಂದು ಯೋಜನವಿತ್ತು. ಅಲ್ಲಿ ಬಲರಾಮ ಕೃಷ್ಣರೇ ಮೊದಲಾದ ಎಲ್ಲಾ ವೃಷ್ಣಿ ಮತ್ತು ಅಂಧಕವಂಶದ ಜನರು ಕುಳಿತು, ಸಂಪೂರ್ಣ ಲೋಕಜೀವನದ ರಕ್ಷಣೆಗೆ ದತ್ತಚಿತ್ತರಾಗಿರು ತ್ತಿದ್ದರು (ಸಭಾ 38). ದ್ವಾರಕೆಯ ರಮಣೀಯ ರಾಜಸದನ ಸೂರ್ಯಚಂದ್ರರಿಗೆ ಸಮಾನವಾಗಿ ಪ್ರಕಾಶಮಾನವಾಗಿದೆ ಮತ್ತು ಮೇರುಪರ್ವತದ ಶಿಖರಗಳಂತೆ ಗಗನಚುಂಬಿಯಾಗಿದೆ. ಆ ಭವನ ಗಳಿಂದ ವಿಭೂಷಿತವಾದ ದ್ವಾರಕಾಪುರದ ರಚನೆ ಯನ್ನು ಸಾಕ್ಷಾತ್ ವಿಶ್ವಕರ್ಮನೇ ಮಾಡಿದ್ದನು. ಇದರ ನಾಲ್ಕೂ ಕಡೆ ಮಾಡಿರುವ ಅಗಲವಾದ ಕಂದಕಗಳು ಇದರ ಶೋಭೆಯನ್ನು ಹೆಚ್ಚಿಸು ತ್ತಿದ್ದವು. ಈ ಪುರವು ಎತ್ತರವಾದ ಬಿಳಿಯ ಗೋಡೆಯಿಂದ ಆವೃತವಾಗಿತ್ತು. ಅಲ್ಲಿ ನಂದನ ವನ, ಮಿತ್ರಕವನ, ಚೈತ್ರರಥವನ ಮತ್ತು ವೈಭ್ರಾಜ ವೆಂಬ ವನಗಳು ಶೋಭೆಯನ್ನುಂಟುಮಾಡು ತ್ತಿದ್ದವು. ರಮಣೀಯವಾದ ದ್ವಾರಕಾಪುರದ ಪೂರ್ವದಿಕ್ಕಿನಲ್ಲಿ ಎತ್ತರವಾದ ಶಿಖರವುಳ್ಳ ರೈವತಕ ಪರ್ವತ, ಆ ಪ್ರದೇಶದ ಆಭೂಷಣ ರೂಪವಾಗಿ ಕಾಣುತ್ತಿತ್ತು ದಕ್ಷಿಣದಲ್ಲಿ ಲತಾವೇಷ್ಟ, ಪಶ್ಚಿಮದಲ್ಲಿ ಸುಕಕ್ಷ, ಉತ್ತರದಲ್ಲಿ ವೇಣುಮಂತವೆಂಬ ಹೆಸರಿನ ಪರ್ವತಗಳು ಇದರ ಸೌಂದರ್ಯವನ್ನು ಹೆಚ್ಚಿಸು ತ್ತಿದ್ದವು. ಈ ಪರ್ವತಗಳ ನಾಲ್ಕೂ ಕಡೆಗಳಲ್ಲಿ ಅನೇಕಾನೇಕ ಮನೋಹರವಾದ ವನ, ಉಪವನ ಗಳು ಈ ಸ್ಥಳದ ಶ್ರೀವೃದ್ಧಿಯನ್ನುಂಟುಮಾಡು ತ್ತಿದ್ದುವು. ಪಟ್ಟಣದ ಪೂರ್ವದಿಕ್ಕಿನಲ್ಲಿ ಒಂದು

ರಮಣೀಯ ಕೊಳವಿತ್ತು. ಅದರ ವಿಸ್ತಾರ ನೂರು ಧನುಸ್ಸು. ಮಹಾಪುರವಾದ ದ್ವಾರಕೆ, ಐವತ್ತು ಬಾಗಿಲುಗಳಿಂದ ಸುಶೋಭಿತವಾಗಿತ್ತು. ಸುಂದರವಾದ ಅರಮನೆಗಳು ಮತ್ತು ಬೃಹತ್ ಮನೆಗಳು ಅದರ ಶೋಭೆಯನ್ನು ಹೆಚ್ಚಿಸುತ್ತಿದ್ದವು. ತೀಕ್ಷ್ಣವಾದ ಯಂತ್ರಗಳು, ಶತಘ್ನಿ (ಫಿರಂಗಿ), ವಿಭಿನ್ನ ಯಂತ್ರಗಳ ಸಮುದಾಯ ಮತ್ತು ಕಬ್ಬಿಣದಿಂದ ಮಾಡಲ್ಪಟ್ಟ ದೊಡ್ಡ ದೊಡ್ಡ ಚಕ್ರಗಳೂ ಈ ಪುರದ ರಕ್ಷಣೆಗಾಗಿ ಸ್ಥಾಪಿಸಲ್ಪಟ್ಟಿದ್ದವು. ಪುರದ ವಿಸ್ತಾರ ತೊಂಭತ್ತಾರು ಯೋಜನವಾಗಿತ್ತು. ಅದರಲ್ಲಿ ಸಂಚರಿಸಲು ಎಂಟು ದೊಡ್ಡ ದೊಡ್ಡ ಮಾರ್ಗಗಳಿದ್ದವು. ಹದಿನಾರು ದೊಡ್ಡ ದೊಡ್ಡ ಚೌಕಗಳು ಶೋಭಾಯಮಾನವಾಗಿದ್ದವು. ಶುಕ್ರಾಚಾರ್ಯರ ನೀತಿಗನುಸಾರವಾಗಿ ಆ ನಗರದ ನಿರ್ಮಾಣವಾಗಿತ್ತು (ಸಭಾ 38). ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನ ಇಲ್ಲಿಗೆ ಬಂದಿದ್ದನು. ಅವನನ್ನು ಸ್ವಾಗತಿಸಲು ಬಹಳ ಸುಂದರವಾದ ಏರ್ಪಾಡು ಮಾಡಲಾಗಿತ್ತು. ಇಲ್ಲಿಂದಲೇ ಆತ ಸುಭದ್ರೆಯ ಅಪಹಾರ ಮಾಡಿದ್ದನು (ಆದಿ ಅಧ್ಯಾಯ 217 ರಿಂದ 219 ವರೆಗೆ). ದ್ವಾರಕೆಯ ಮೇಲೆ ಶಾಲ್ವನ ಆಕ್ರಮಣ ಮತ್ತು ವೃಷ್ಣಿವಂಶದ ವೀರರಿಂದ ಮತ್ತು ಶ್ರೀಕೃಷ್ಣನಿಂದ ಸೇನಾಸಹಿತ ಶಾಲ್ವನ ಸಂಹಾರ ಮತ್ತು ಪುರದ ರಕ್ಷಣೆ (ವನ ಅಧ್ಯಾಯ 15ರಿಂದ 22ವರೆಗೆ). (ಪುರಾಣಾಂತರಗಳ ವರ್ಣನೆ ಪ್ರಕಾರ ಮೋಕ್ಷದಾಯಕವಾದ ಏಳು ಪುರಗಳಲ್ಲಿ ಇದೂ ಒಂದಾಗಿದೆ. ವಿಭಿನ್ನ ಪುರಾಣಗಳಲ್ಲಿ ಇದರ ಮಹಿಮೆ ವಿಸ್ತಾರಪೂರ್ವಕವಾಗಿ ವರ್ಣಿಸಲ್ಪಟ್ಟಿದೆ) ದ್ವಾರಕೆ ಮತ್ತು ಅಲ್ಲಿರುವ ಪಿಂಡಾರಕ್ಷೇತ್ರಗಳು ಪರಮಪಾವನ ತೀರ್ಥಗಳಾಗಿವೆ ಈ ತೀರ್ಥಗಳಿಗೆ ಯಾತ್ರೆ ಮಾಡುವವರು ನಿಯಮದಿಂದಿರಬೇಕು ಮತ್ತು ನಿಯಮಿತ ಭೋಜನ ಮಾಡಬೇಕು. ಇಲ್ಲಿರುವ ಪಿಂಡಾರಕ ತೀರ್ಥದಲ್ಲಿ ಸ್ನಾನಮಾಡಿದರೆ ಮನುಷ್ಯನಿಗೆ ಅತ್ಯಧಿಕ ಸುವರ್ಣ ಪ್ರಾಪ್ತಿಯಾಗುತ್ತದೆ (ವನ 82/65). ಇಲ್ಲಿಯೇ ನೃಗರಾಜನು ಓತಿಕಾಟನ ಜನ್ಮದಿಂದ ಉದ್ಧಾರವಾದನು (ಅನು 70/7). ಇಲ್ಲಿಯೇ ಯದುವಂಶದ ವಿನಾಶಕ್ಕಾಗಿ ಸಾಂಬನ ಹೊಟ್ಟೆಯಿಂದ ಒನಕೆ ಹುಟ್ಟುವ ಶಾಪ ಋಷಿಗಳಿಂದ ಪ್ರಾಪ್ತವಾಗಿತ್ತು (ಮೌಸಲ 1/19–21). ಶ್ರೀಕೃಷ್ಣನು ಪರಮಧಾಮಕ್ಕೆ ನಿರ್ಗಮಿಸಿದ ಅನಂತರ, ದ್ವಾರಕಾವಾಸಿ ಸ್ತ್ರೀಪುರುಷರಿಂದ ಈ ಪಟ್ಟಣವು ಖಾಲಿ ಮಾಡಲ್ಪಟ್ಟಾಗ, ಸಮುದ್ರವು ಇದನ್ನು ಮುಳುಗಿಸಿಬಿಟ್ಟಿತು (ಮೌಸಲ 7/41–42).

**ದ್ವಾರಪಾಲಪುರ** – ಒಂದು ಪ್ರಾಚೀನ ನಗರ. ಇದನ್ನು ನಕುಲನು ತನ್ನ ಅಧಿಕಾರಕ್ಕೆ ಸೇರಿಸಿದ್ದನು (ಸಭಾ 32/11–12).

**ದ್ವಿತ** – ಒಬ್ಬ ಪ್ರಾಚೀನ ಮಹರ್ಷಿ. ಇವನು ಗೌತಮನ ಪುತ್ರ ಏಕತ ಮತ್ತು ತ್ರಿತರ ಸಹೋದರ. ಇವನು ಲೋಭದಿಂದ ತನ್ನ ಸೋದರ ತ್ರಿತನನ್ನು ಬಾವಿಗೆ ಬಿದ್ದಲ್ಲಿಯೇ ಬಿಟ್ಟು, ಏಕತನೊಂದಿಗೆ ಮನೆಗೆ ಹೋದುದು. ತ್ರಿತನ ಶಾಪದಿಂದ ತೋಳನಾಗಿ, ಕೋತಿ, ಕರಡಿ, ವಾನರರನ್ನು ಸೃಷ್ಟಿಸಿದುದು (ಶಲ್ಯ 37 ಅಧ್ಯಾಯ). ಇವನು ಪಶ್ಚಿಮ ದಿಕ್ಕನ್ನು ಆಶ್ರಯಿಸಿ ವಾಸಿಸುವ ಋಷಿ (ಶಾಂತಿ 208/31). ಇವನು ಪ್ರಜಾಪತಿಯ ಪುತ್ರನೆನ್ನಿಸಿದ್ದಾನೆ. ಇವನು ಉಪರಿಚರ ವಸುವಿನ ಯಜ್ಞದ ಸದಸ್ಯನಾಗಿ ಮಾಡಲ್ಪಟ್ಟಿದ್ದನು (ಶಾಂತಿ 336/6).

**ದ್ವಿಮೂರ್ಧಾ** – ಒಬ್ಬ ರಾಕ್ಷಸ. ಈತ ಅಸುರರು ಪೃಥ್ವಿಯನ್ನು ಕರೆಯುವಾಗ (ಹಾಲನ್ನು) ಕರೆಯುವವ(ದೋಗ್ಧಾ)ನಾಗಿದ್ದನು (ದ್ರೋಣ 69/20).

**ದ್ವಿವಿದ** – ಕಿಷ್ಕಿಂಧಾ ನಿವಾಸಿಯಾದ ಒಬ್ಬ ವಾನರ. ಈತನೊಂದಿಗೆ ಸಹದೇವನು ಏಳುದಿನಗಳ ಕಾಲ ಯುದ್ಧ ಮಾಡಿದ್ದನು. ಆದರೂ ಈತನನ್ನು ಸೋಲಿಸಲು ಸಾಧ್ಯವಾಗಲಿಲ್ಲ (ಸಭಾ 31/18–19). ಇವನು ಸಹದೇವನಿಗೆ ನಾನಾ ವಿಧದ ರತ್ನಗಳನ್ನು ಕಾಣಿಕೆ ಕೊಟ್ಟನು (ಸಭಾ 31/20). ಇವನು ಸುಗ್ರೀವನ ಮಂತ್ರಿಯಾಗಿದ್ದನು (ವನ 280/23). ಇವನ ಸಂರಕ್ಷಣೆಯಲ್ಲಿದ್ದುಕೊಂಡು, ಶ್ರೀರಾಮನ ಕಾರ್ಯ ಮಾಡಲು ವಾನರಸೇನೆಯು ಪ್ರಯಾಣಮಾಡಿತ್ತು (ವನ 283/19). ಇವನು ಒಮ್ಮೆ ಶ್ರೀಕೃಷ್ಣನನ್ನು ಹಿಡಿಯುವ ಇಚ್ಛೆಯಿಂದ, ಸೌಭ ವಿಮಾನದ ದ್ವಾರದಮೂಲಕ, ಅವನ ಮೇಲೆ ಕಲ್ಲುಗಳ ಸುರಿಮಳೆ ಮಾಡಿದ್ದನು (ಉದ್ಯೋಗ 130/41–42).

**ದೀಪಕ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ದ್ವೈತವನ** – ಒಂದು ವನ ಮತ್ತು ಸರೋವರ. ವನವಾಸಕಾಲದಲ್ಲಿ ಪಾಂಡವರು ಇಲ್ಲಿ ವಾಸಿಸುತ್ತಿದ್ದರು (ವನ 24/13). ಇದು ಸರಸ್ವತಿಯ ದಡದಲ್ಲಿ ನೆಲಸಿತ್ತು (ವನ 24/20). ತೀರ್ಥ ಯಾತ್ರೆಯ ಸಮಯದಲ್ಲಿ ಬಲರಾಮನು ಇಲ್ಲಿಗೆ ಬಂದಿದ್ದನು (ಶಲ್ಯ 37/27).

**ದ್ವೈಪಾಯನ** – (1) ಮಹರ್ಷಿ ಪರಾಶರನಿಂದ ಸತ್ಯವತಿಯ ಗರ್ಭದಲ್ಲಿ ಹುಟ್ಟಿದ ಮುನಿಶ್ರೇಷ್ಠ ವೇದವ್ಯಾಸ. ಇವನು ಯಮುನೆಯ ದ್ವೀಪದಲ್ಲಿ ಬಿಡಲ್ಪಟ್ಟಿದ್ದನು. ಆದುದರಿಂದ ದ್ವೈಪಾಯನ ಎಂಬ ಹೆಸರಿನಿಂದ ಪ್ರಸಿದ್ಧನಾದನು (ಆದಿ 63/83). (ನೋಡಿರಿ–ವ್ಯಾಸ).

(2) ಕುರುಕ್ಷೇತ್ರದ ಒಂದು ಸರೋವರ. ದುರ್ಯೋಧನ ಓಡಿಹೋಗಿ ಅದರಲ್ಲಿ ಅಡಗಿದ್ದನು (ಶಲ್ಯ 30/47).

## ಧ

**ಧನಂಜಯ** – (1) ಒಂದು ಪ್ರಮುಖ ನಾಗ. ಈತ ಕಶ್ಯಪ ಮತ್ತು ಕದ್ರುವಿನ ಸಂತಾನ (ಆದಿ 35/5). ಇವನು ವರುಣನ ಸಭೆಯಲ್ಲಿದ್ದು ಕೊಂಡು, ಭಗವಾನ್ ವರುಣನ ಉಪಾಸನೆ ಮಾಡುತ್ತಾನೆ (ಸಭಾ 9/9). ಇವನು ತ್ರಿಪುರ ಸಂಹಾರ ಕಾಲದಲ್ಲಿ, ಭಗವಾನ್ ಶಿವನ ರಥದ ಕುದುರೆಗಳ ಕೇಸರವನ್ನು ಕಟ್ಟಲು ಹಗ್ಗವಾಗಿ ಮಾಡಲ್ಪಟ್ಟಿದ್ದನು (ಕರ್ಣ 34/29–30).

(2) ಅರ್ಜುನನ ಒಂದು ಹೆಸರು. ಎಲ್ಲಾ ದೇಶಗಳನ್ನು ಗೆದ್ದು, ಕಪ್ಪದ ರೂಪದಲ್ಲಿ ಧನವನ್ನು ತೆಗೆದುಕೊಂಡು, ಧನದ ಮಧ್ಯದಲ್ಲಿಯೇ ಸ್ಥಿತನಾಗಿದ್ದುದರಿಂದ ಅರ್ಜುನನ ಹೆಸರು ಧನಂಜಯನೆಂದಾಗಿತ್ತು (ವಿರಾಟ 44/13). (ನೋಡಿರಿ– ಅರ್ಜುನ).

(3) ಶಿವನಿಂದ ಸ್ಕಂದನಿಗೆ ಕೊಡಲ್ಪಟ್ಟ ಅಸುರ ಸೇನೆಯ ಹೆಸರು (ಶಲ್ಯ 46/47).

**ಧನದ** – ಕುಬೇರ ಸಭೆಯ ಒಬ್ಬ ಯಕ್ಷ ಇವನು ಭಗವಾನ್ ಕುಬೇರನ ಸೇವೆಯಲ್ಲಿ ಮಗ್ನನಾಗಿರುತ್ತಾನೆ (ಸಭಾ 10/15).

**ಧನದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/13).

**ಧನೀ** – ಕಪರೆಂಬ ದಾನವರ ದೂತ ಈತನು ಬ್ರಾಹ್ಮಣರ ಬಳಿಗೆಹೋಗಿ ಕಪರ ಸದಾಚಾರವನ್ನು ವರ್ಣಿಸಿದುದು (ಅನು 157/8–14).

**ಧನುರ್ಗ್ರಹ**– (ಧನು ಗ್ರಹ ಅಥವಾ ಧನುರ್ಧರ) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/103; ಆದಿ 116/11). ಭೀಮಸೇನನಿಂದ ಇವನ ವಧೆ (ಕರ್ಣ 84/2–6).

**ಧನುರ್ವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

**ಧನುರ್ವೇದ** – ಧನುಸ್ಸು ಇತ್ಯಾದಿ ಅಸ್ತ್ರಶಸ್ತ್ರಗಳನ್ನು ಉಪಯೋಗಿಸುವ ವಿದ್ಯೆಯ ನಿರೂಪಣೆ ಇರುವ, ನಾಲ್ಕು ಪಾದಗಳಿಂದ ಕೂಡಿದ ಅಸ್ತ್ರಶಸ್ತ್ರ ವಿದ್ಯೆಯ ಶಾಸ್ತ್ರ. (ಭಾರತವರ್ಷದಲ್ಲಿ ಈ ವಿದ್ಯೆಯ ದೊಡ್ಡ ದೊಡ್ಡ ಗ್ರಂಥಗಳಿದ್ದವು. ಅವುಗಳನ್ನು ಕ್ಷತ್ರಿಯ ಕುಮಾರರು ಅಭ್ಯಾಸಪೂರ್ವಕವಾಗಿ ಓದುತ್ತಿದ್ದರು. ಮಧುಸೂದನ ಸರಸ್ವತಿಯು ತನ್ನ ಪ್ರಸ್ಥಾನ ಭೇದವೆಂಬ ಹೆಸರಿನ ಗ್ರಂಥದಲ್ಲಿ ಧನುರ್ವೇದವನ್ನು ಯಜುರ್ವೇದದ ಉಪವೇದವೆಂದು ಹೇಳಿದ್ದಾನೆ. ಇತ್ತೀಚೆಗೆ ಈ ವಿದ್ಯೆಯ ವರ್ಣನೆ ಕೆಲವು ಗ್ರಂಥಗಳಲ್ಲಿ ಅಲ್ಪಸ್ವಲ್ಪ ಸಿಗುತ್ತದೆ ಉದಾ: ಶುಕ್ರನೀತಿ, ಕಾಮಂದಕೀ ನೀತಿ, ಅಗ್ನಿಪುರಾಣ, ವೀರಚಿಂತಾಮಣಿ, ವೃದ್ಧಶಾರ್ಂಗಧರ, ಯುದ್ಧಜಯಾರ್ಣವ, ಯುಕ್ತಿಕಲ್ಪತರು, ನೀತಿಮಂಜೂಷ ಇತ್ಯಾದಿ. 'ಧನುರ್ವೇದ ಸಂಹಿತಾ' ಎಂಬ ಒಂದು ಬೇರೆಯೇ ಪುಸ್ತಕ ಕೂಡಾ ಸಿಗುತ್ತದೆ. ಆದರೆ ಅದರ ಪ್ರಾಚೀನತೆ ಮತ್ತು ಪ್ರಾಮಾಣಿಕತೆಯಲ್ಲಿ ಸಂದೇಹವಿದೆ. ಅಗ್ನಿಪುರಾಣದಲ್ಲಿ ಬ್ರಹ್ಮಾ ಮತ್ತು ಮಹೇಶ್ವರ ಈ ವೇದದ ಮೊದಲನೆಯ ಪ್ರಕಟ ಕರ್ತೃಗಳೆಂದು ಹೇಳಲ್ಪಟ್ಟಿದ್ದಾರೆ. ಆದರೆ ಮಧುಸೂದನ ಸರಸ್ವತಿ ಬರೆಯುವ ಪ್ರಕಾರ 'ವಿಶ್ವಾಮಿತ್ರನು ಯಾವ ಧನುರ್ವೇದವನ್ನು ಪ್ರಕಾಶಪಡಿಸಿದನೋ, ಅದೇ ಯಜುರ್ವೇದದ ಉಪವೇದವಾಗಿದೆ'. ಅವನು ತನ್ನ ಪ್ರಸ್ಥಾನ ಭೇದದಲ್ಲಿ, ವಿಶ್ವಾಮಿತ್ರಕೃತ ಈ ಉಪವೇದದ ಸ್ವಲ್ಪ ಸಂಕ್ಷಿಪ್ತ ವಿವರವನ್ನೂ ಕೊಟ್ಟಿದ್ದಾನೆ ಅದರಲ್ಲಿ ನಾಲ್ಕು ಪಾದಗಳಿವೆ ದೀಕ್ಷಾಪಾದ, ಸಂಗ್ರಹಪಾದ, ಸಿದ್ಧಿಪಾದ ಮತ್ತು ಪ್ರಯೋಗ ಪಾದ ಪ್ರಥಮ ದೀಕ್ಷಾಪಾದದಲ್ಲಿ

ಧನುರ್ಲಕ್ಷಣ (ಧನುಸ್ಸಿನ ಅಂತರ್ಗತ ಎಲ್ಲಾ ಆಯುಧಗಳನ್ನೂ ತೆಗೆದುಕೊಳ್ಳಲಾಗಿದೆ). ಮತ್ತು ಅಧಿಕಾರಿಗಳ ನಿರೂಪಣೆ ಇದೆ ಧನುರ್ವೇದದ ನಾಲ್ಕು ಭೇದಗಳು ಈ ರೀತಿ ಇವೆ – ಮುಕ್ತ, ಅಮುಕ್ತ, ಮುಕ್ತಾಮುಕ್ತ ಮತ್ತು ಯಂತ್ರಮುಕ್ತ. ಬಿಡಲ್ಪಡುವ ಬಾಣ ಇತ್ಯಾದಿಗಳಿಗೆ 'ಮುಕ್ತ' ವೆನ್ನುತ್ತಾರೆ. ಯಾವುದನ್ನು ಕೈಯಲ್ಲಿ ತೆಗೆದು ಕೊಂಡು ಪ್ರಹಾರ ಮಾಡಲಾಗುತ್ತದೋ, ಅಂತಹ ಖಡ್ಗ ಇತ್ಯಾದಿಗಳನ್ನು 'ಅಮುಕ್ತ'ವೆನ್ನುತ್ತಾರೆ. ಯಾವ ಅಸ್ತ್ರವನ್ನು ಪ್ರಯೋಗಿಸಲು ಮತ್ತು ಉಪ ಸಂಹರಿಸುವ ಕಲೆ ತಿಳಿದಿದೆಯೋ, ಆ ಅಸ್ತ್ರ 'ಮುಕ್ತಾಮುಕ್ತ'ವೆಂದು ಹೇಳಲ್ಪಡುತ್ತದೆ ಅಥವಾ ಯಾವುದನ್ನು ಬಿಟ್ಟ ಅನಂತರ ಪುನಃ ತೆಗೆದುಕೊಳ್ಳಲು ಸಾಧ್ಯವಾಗುವುದೋ, ಅಂತಹ ಭಲ್ಲೆ, ಭರ್ಚಿ ಇತ್ಯಾದಿ ಮುಕ್ತಾಮುಕ್ತವಾಗಿವೆ. ಯಾವುದು ಏನಾದರೂ ಯಂತ್ರದ ಸಹಾಯ ದಿಂದ ಬಿಡಲ್ಪಡುವುದೋ (ಉದಾ: ಕೋವಿ ಯಿಂದ ಗುಂಡು). ಆ ಅಸ್ತ್ರ 'ಯಂತ್ರಮುಕ್ತ' ವೆಂದು ಹೇಳಲ್ಪಡುತ್ತದೆ. ಅಧಿಕಾರಿಯ ಲಕ್ಷಣ ಹೇಳಿ, ಪುನಃ ದೀಕ್ಷೆ, ಅಭಿಷೇಕ, ಶಕುನ ಇತ್ಯಾದಿಗಳ ವರ್ಣನೆ ಇದೆ. ಸಂಗ್ರಹಪಾದದಲ್ಲಿ ಆಚಾರ್ಯನ ಲಕ್ಷಣ ಮತ್ತು ಅಸ್ತ್ರಶಸ್ತ್ರಾದಿಗಳ ಲಕ್ಷಣದ ಸಂಗ್ರಹವಿದೆ. ತೃತೀಯ ಪಾದದಲ್ಲಿ ಸಂಪ್ರದಾಯ ಸಿದ್ಧ ವಿಶೇಷ ಶಸ್ತ್ರಗಳ ಅಭ್ಯಾಸ, ಮಂತ್ರ, ದೇವತೆ ಮತ್ತು ಸಿದ್ಧಿ ಇತ್ಯಾದಿ ವಿಷಯಗಳಿವೆ. ಪ್ರಯೋಗವೆಂಬ ನಾಲ್ಕನೇ ಪಾದದಲ್ಲಿ ದೇವಾರ್ಚನೆ, ಸಿದ್ಧಿ, ಅಸ್ತ್ರಶಸ್ತ್ರಾದಿಗಳ ಪ್ರಯೋಗದ ನಿರೂಪಣೆ ಇದೆ. ಶಸ್ತ್ರ, ಅಸ್ತ್ರ, ಪ್ರತ್ಯಸ್ತ್ರ ಮತ್ತು ಪರಮಾಸ್ತ್ರ ಇವು ಕೂಡಾ ಧನುರ್ವೇದದ ನಾಲ್ಕು ಭೇದಗಳಾಗಿವೆ. ಇದೇ ರೀತಿ ಆದಾಗ, ಸಂಧಾನ, ವಿಮೋಕ್ಷ ಮತ್ತು ಸಂಹಾರ ಈ ನಾಲ್ಕು ಕ್ರಿಯೆಗಳ ಭೇದದಿಂದ ಕೂಡ ಧನುರ್ವೇದದ ನಾಲ್ಕೂ ಭೇದಗಳಾಗು ತ್ತವೆ. ವೈಶಂಪಾಯನನ ಅನುಸಾರವಾಗಿ ಶಾರ್ಙ್ಗ ಧನುಸ್ಸಿನಲ್ಲಿ ಮೂರುಕಡೆ ಬಾಗುವಿಕೆ ಇರುತ್ತದೆ; ಆದರೆ ವೈಣವ ಅಂದರೆ ಬಿದಿರಿನ ಧನುಸ್ಸಿನ ಬಾಗುವಿಕೆ ಒಂದೇ ಕ್ರಮದಲ್ಲಿರುತ್ತದೆ. ಶಾರ್ಙ್ಗ ಧನುಸ್ಸು ಆರುವರೆ ಕೈಯಷ್ಟಿರುತ್ತದೆ ಮತ್ತು ಅಶ್ವಾರೋಹಿಗಳಿಗೂ, ಗಜಾರೋಹಿಗಳಿಗೂ ಉಪಯೋಗಿಯಾಗಿರುತ್ತದೆ. ರಥಿಕರಿಗೂ, ಕಾಲಾ ಳುಗಳಿಗೂ ಬಿದಿರಿನ ಧನುಸ್ಸೇ ಸರಿಯಾದುದು. ಅಗ್ನಿಪುರಾಣದ ಪ್ರಕಾರ ನಾಲ್ಕು ಕೈಗಳ ಧನುಸ್ಸು ಉತ್ತಮ, ಮೂರೂವರೆ ಕೈಗಳದ್ದು ಮಧ್ಯಮ ಮತ್ತು ಮೂರು ಕೈಗಳದ್ದು ಅಧಮವೆಂದು ತಿಳಿಯಲ್ಪಟ್ಟಿದೆ. ಯಾವ ಧನುಸ್ಸಿನ ಬಿದಿರಿನಲ್ಲಿ ಒಂಭತ್ತು ಗಂಟುಗಳಿವೆಯೋ ಅದನ್ನು 'ಕೋದಂಡ'ವೆನ್ನಬೇಕು. ಪ್ರಾಚೀನಕಾಲದಲ್ಲಿ ಎರಡು ಹಗ್ಗಗಳ ಚಿಕ್ಕ ಬಿಲ್ಲೂ ಇರುತ್ತಿತ್ತು. ಅದನ್ನು 'ಉಪಲಕ್ಷೇಪಕ' ಎನ್ನುತ್ತಿದ್ದರು. ಹಗ್ಗ ಅಗಲವಾಗಿದ್ದು, ಕನಿಷ್ಠ ಬೆರಳುಗಳಿಗೆ ಸಮಾನ ವಿರಬೇಕು. ಬಿದಿರನ್ನು ಸಿಪ್ಪೆ ತೆಗೆದೂ ಹಗ್ಗ ಮಾಡಲ್ಪಡುತ್ತದೆ. ಜಿಂಕೆ ಅಥವಾ ಕೋಣನ ಚರ್ಮದ ಹಗ್ಗ ಕೂಡಾ ಬಹಳ ಗಟ್ಟಿಯಾಗಿರು ತ್ತದೆ (ವೃದ್ಧ ಶಾರ್ಙ್ಗಧರ). ಬಾಣ ಎರಡು ಕೈಗಳಿಂದ ಹೆಚ್ಚು ಉದ್ದ ಮತ್ತು ಕಿರುಬೆರಳಿಗಿಂತ ಹೆಚ್ಚು ದಪ್ಪವಿರಬಾರದು. ಶರಗಳು ಮೂರು ಪ್ರಕಾರವೆಂದು ಹೇಳಲ್ಪಟ್ಟಿವೆ. ಮುಂದಿನ ಭಾಗ ದಪ್ಪವಾಗಿರುವುದು ಸ್ತ್ರೀಜಾತಿ, ಹಿಂದಿನ ಭಾಗ ದಪ್ಪವಾಗಿರುವುದು. ಪುರುಷ ಜಾತಿ, ಎಲ್ಲಾ ಭಾಗ ಸಮಾನವಾಗಿರುವುದು ನಪುಂಸಕ ಜಾತಿಯ ದೆಂದು ಹೇಳಲ್ಪಡುತ್ತದೆ. ಸ್ತ್ರೀ ಜಾತಿಯ ಶರ ಬಹಳ ದೂರದವರೆಗೆ ಹೋಗುತ್ತದೆ. ಪುರುಷ ಜಾತಿಯದು ಚೆನ್ನಾಗಿ ಚುಚ್ಚುತ್ತದೆ ಮತ್ತು ನಪುಂಸಕ ಜಾತಿಯದು ಗುರಿ ಸಾಧಿಸಲು ಒಳ್ಳೆಯದಾಗುತ್ತದೆ. ಬಾಣದ ತುದಿ ಅನೇಕ ಪ್ರಕಾರವಾಗಿರುತ್ತವೆ. ಉದಾ: ಆರಾಮುಖ, ಕ್ಷುರಪ್ರ, ಗೋಪುಚ್ಛ, ಅರ್ಧಚಂದ್ರ, ಸೂಚೀಮುಖ, ಭಲ್ಲ, ವತ್ಸದಂತ, ದ್ವಿಬಲ್ಲ, ಕಾರ್ಣಿಕ, ಕಾಕತುಂಡ ಇತ್ಯಾದಿ ಬಾಣದ ಗತಿ ನೇರವಾಗಿರುವಂತೆ ಹಿಂಗಡೆ ರೆಕ್ಕೆಗಳನ್ನು ಜೋಡಿಸುವುದು ಆವಶ್ಯಕ ವೆಂದು ಹೇಳಲಾಗಿದೆ. ಯಾವ ಬಾಣದ ಎಲ್ಲಾ ಭಾಗಗಳು ಕಬ್ಬಿಣದವುಗಳಾಗಿರುತ್ತದೋ ಅದನ್ನು 'ನಾರಾಚ'ವೆಂದು ಹೇಳುತ್ತಾರೆ. ಮೇಲೆ ಹೇಳಿದ ಗ್ರಂಥದಲ್ಲಿ ಲಕ್ಷ್ಯಭೇದ, ಶರಾಕರ್ಷಣ ಇತ್ಯಾದಿಗಳ ಸಂಬಂಧದಲ್ಲಿ ಅನೇಕ ನಿಯಮ ಗಳು ಹೇಳಲ್ಪಟ್ಟಿವೆ. ರಾಮಾಯಣ, ಮಹಾಭಾರತ ಇತ್ಯಾದಿಗಳಲ್ಲಿ ಶಬ್ದಭೇದಿ ಬಾಣಪ್ರಯೋಗದ ಉಲ್ಲೇಖವೂ ಇದೆ. ಅಂತಿಮ ಹಿಂದೂ ಸಮ್ರಾಟ

ಮಹಾರಾಜ ಪೃಥ್ವೀರಾಜನ ಸಂಬಂಧವಾಗಿ, ಆತ ಶಬ್ದಭೇದಿಬಾಣ ಪ್ರಯೋಗಿಸುತ್ತಿದ್ದನೆಂದು ಪ್ರಸಿದ್ಧಿ ಇದೆ (ಹಿಂದೀ ಶಬ್ದ ಸಾಗರದಿಂದ). ಶರದ್ವಂತ ಧನುರ್ವೇದ ಪಾರಂಗತ ವಿದ್ವಾಂಸನೂ, ಶಿಕ್ಷಕನೂ ಆಗಿದ್ದನು. ಇವನಿಂದ ಕೃಪಾಚಾರ್ಯ ಧನುರ್ವೇದ ಕಲಿತನು ಮತ್ತು ತನ್ನ ಶಿಷ್ಯರಿಗೆ ಕಲಿಸಿದನು (ಆದಿ 129/3-5, 21, 22, 23). ದ್ರೋಣಾಚಾರ್ಯನು ಈ ವಿಜ್ಞಾನವನ್ನು ಪರಶುರಾಮನಿಂದ ಪಡಕೊಂಡನು ಮತ್ತು ಕೌರವ ಪಾಂಡವರಿಗೆ ಇದರ ಶಿಕ್ಷಣವನ್ನಿತ್ತನು (ಆದಿ 129/66; ಆದಿ 131/9). ಅಗ್ನಿವೇಶನು ಧನುರ್ವೇದದಲ್ಲಿ ಅಗಸ್ತ್ಯರ ಶಿಷ್ಯನಾಗಿದ್ದನು (ಆದಿ 138/9). ಯುಧಿಷ್ಠಿರನು ಇದನ್ನು ಕೌರವದಳದ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ ಮತ್ತು ಕರ್ಣನಲ್ಲಿ ಪೂರ್ಣವಾಗಿ ಪ್ರತಿಷ್ಠಿತವಾಗಿದೆ ಎಂದಿದ್ದನು (ವನ 37/4). ಧನುರ್ವೇದದ ಹತ್ತು ಅಂಗಗಳು ಮತ್ತು ನಾಲ್ಕು ಚರಣಗಳಿವೆ (ಶಲ್ಯ 6/14ರ ಟಿಪ್ಪಣಿ; 41/29). ನಾಲ್ಕೂ ಪಾದಗಳಿಂದ ಯುಕ್ತವಾದ ಧನುರ್ವೇದ ಮೂರ್ತಿಮತ್ತಾಗಿ, ಭಗವಾನ್ ಸ್ಕಂದನ ಸೇವೆಗೆ ಉಪಸ್ಥಿತವಾಗಿತ್ತು (ಶಲ್ಯ 44/22).

**ಧನುಷ** – ಒಬ್ಬ ಪ್ರಾಚೀನ ಋಷಿ. ಇವನು ಉಪರಿಚರವಸುವಿನ ಯಜ್ಞದ ಸದಸ್ಯನಾಗಿ ಮಾಡಲ್ಪಟ್ಟಿದ್ದನು (ಶಾಂತಿ 336/7).

**ಧನುಷಾಕ್ಷ** – ಒಬ್ಬ ಪ್ರಾಚೀನ ಋಷಿ. ಈತ ಬಾಲಧಿ ಋಷಿಯ ಪುತ್ರ. ಮೇಧಾವಿಯನ್ನು ಋಷಿಗಳಿಗೆ ಅಪಮಾನ ಮಾಡಿದುದಕ್ಕಾಗಿ ನಾಶ ಮಾಡಿದ್ದನು (ವನ 135/50-53).

**ಧನ್ವಂತರಿ** – ದೇವತೆಗಳ ವೈದ್ಯ. ಪುರಾಣಪ್ರಕಾರ ಇವನು ಸಮುದ್ರಮಥನ ಕಾಲದಲ್ಲಿ, ಇತರ ವಸ್ತುಗಳೊಂದಿಗೆ ಸಮುದ್ರದಿಂದ ಹುಟ್ಟಿದ್ದನು. ಹರಿವಂಶದಲ್ಲಿ ಹೇಳಿದ ಪ್ರಕಾರ ಇವನು ಸಮುದ್ರದಿಂದ ಹೊರಡುವಾಗ, ದಿಕ್ಕುಗಳು ತೇಜಸ್ಸಿನಿಂದ ದೇದೀಪ್ಯಮಾನವಾದವು. ಎದುರುಗಡೆ ವಿಷ್ಣುವನ್ನು ನೋಡಿ ಇವನು ಸ್ತಬ್ದನಾಗಿ ನಿಂತನು. ಇದರಿಂದಾಗಿ ವಿಷ್ಣು ಇವನನ್ನು 'ಅಬ್ಜ'ನೆಂದು ಕರೆದನು. ಭಗವಂತನು ಕರೆದಾಗ ಇವನು, ಯಜ್ಞದಲ್ಲಿ ತನ್ನ ಭಾಗ ಮತ್ತು ಸ್ಥಾನ ನಿಶ್ಚೈಸಲ್ಪಡಬೇಕೆಂದು ಪ್ರಾರ್ಥಿಸಿದನು. 'ಭಾಗ ಮತ್ತು ಸ್ಥಾನಗಳು ಹಂಚಲ್ಪಟ್ಟಿವೆ. ಆದರೆ ನೀನು ಮುಂದಿನ ಜನ್ಮದಲ್ಲಿ ವಿಶೇಷ ಸಿದ್ಧಿಲಾಭ ಮಾಡಲಿರುವೆ. ಅಣಿಮಾದಿ ಸಿದ್ಧಿಗಳು ನಿನಗೆ ಗರ್ಭದಿಂದಲೇ ಪ್ರಾಪ್ತವಾಗಿರುತ್ತವೆ. ನೀನು ಸಶರೀರ ದೇವತ್ವದ ಲಾಭ ಪಡೆಯುವೆ. ನೀನು ಆಯುರ್ವೇದವನ್ನು ಎಂಟು ವಿಭಾಗ ಮಾಡುವೆ' ಎಂದು ವಿಷ್ಣು ಹೇಳಿದನು. ದ್ವಾಪರಯುಗದಲ್ಲಿ ಕಾಶೀರಾಜ ಧನ್ವನು ಪುತ್ರಾಕಾಂಕ್ಷಿಯಾಗಿ ತಪಸ್ಸನ್ನೂ, ಅಬ್ಜದೇವನ ಆರಾಧನೆಯನ್ನೂ ಮಾಡಿದನು. ಅಬ್ಜದೇವನು ಧನ್ವನ ಮನೆಯಲ್ಲಿ ಸ್ವತಃ ಅವತಾರಹೊಂದಿದನು. ಭರದ್ವಾಜ ಋಷಿಯಿಂದ ಆಯುರ್ವೇದ ಶಾಸ್ತ್ರದ ಅಧ್ಯಯನ ಮಾಡಿ, ಪ್ರಜೆಗಳನ್ನು ರೋಗಮುಕ್ತರಾಗಿ ಮಾಡಿದನು. 'ಇಂದ್ರನು ಆಯುರ್ವೇದ ಶಾಸ್ತ್ರವನ್ನು ಕಲಿಸಿ ಧನ್ವಂತರಿಯನ್ನು ಲೋಕಕಲ್ಯಾಣಕ್ಕಾಗಿ ಭೂಲೋಕಕ್ಕೆ ಕಳುಹಿಸಿದ'ನೆಂದು 'ಭಾವ ಪ್ರಕಾಶ'ದಲ್ಲಿ ಬರೆಯಲ್ಪಟ್ಟಿದೆ. ಧನ್ವಂತರಿ ಕಾಶಿಯಲ್ಲಿ ಹುಟ್ಟಿದನು ಮತ್ತು ಬ್ರಹ್ಮನ ವರದಿಂದ ಕಾಶಿಯ ರಾಜನಾದನು (ಹಿಂದೀ ಶಬ್ದಸಾಗರದಿಂದ). (ಪುರಾಣಾಂತರಗಳ ವರ್ಣನೆ ಪ್ರಕಾರ ಇವನು ಭಗವಂತನ ಅವತಾರವಾಗಿದ್ದಾನೆ). ಸಮುದ್ರ ಮಂಥನದ ಕಾಲದಲ್ಲಿ ಇವನು ಅಮೃತ ಕಲಶವನ್ನು ಕೈಯಲ್ಲಿ ಹಿಡಕೊಂಡು ಪ್ರಕಟವಾಗಿದ್ದನು (ಆದಿ 18/38). ಬಲಿವೈಶ್ವದೇವದ ಸಂದರ್ಭದಲ್ಲಿ, ಈಶಾನ್ಯ ಕೋಣದಲ್ಲಿ ಇವನಿಗೆ ಬಲಿಕೊಡಬೇಕು (ಅನು 97/10-12).

**ಧಮಧಮಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

**ಧರ** – (1) ಧರ್ಮನಿಂದ ಧೂಮ್ರಾ ಎಂಬವಳ ಗರ್ಭದಲ್ಲಿ ಹುಟ್ಟಿದ ಪ್ರಥಮ ವಸು (ಆದಿ 66/19).

(2) ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕ ರಾಜ (ದ್ರೋಣ 158/39).

**ಧರ್ಮ** – ಎಲ್ಲಾ ಲೋಕಗಳಿಗೂ ಸುಖವನ್ನು ಕೊಡುವ ಒಬ್ಬ ದೇವತೆ. ಇವನು ಬ್ರಹ್ಮನ ಬಲ ಮೊಲೆಯಿಂದ ಹುಟ್ಟಿದ್ದನು (ಆದಿ 66/31). ಇವನು ಭಗವಾನ್ ಸೂರ್ಯನ ಮಗನೆಂದೂ ಹೇಳಲಾಗಿದೆ (ಆದಿ 67/86). ದಕ್ಷ ಪ್ರಜಾಪತಿಯ ಕೀರ್ತಿಯೇ ಮೊದಲಾದ ಹತ್ತು

ಪುತ್ರಿಯರು ಇವನ ಪತ್ನಿಯರಾಗಿದ್ದರು (ಆದಿ 66/13–15). ಅಷ್ಟವಸುಗಳು ಇವನ ಪುತ್ರರಾಗಿದ್ದರು (ಆದಿ 66/17). ಇವನ ಮೂವರು ಶ್ರೇಷ್ಠ ಪುತ್ರರು– ಶಮ, ಕಾಮ ಮತ್ತು ಹರ್ಷ (ಆದಿ 66/32). ಶೂದ್ರಯೋನಿಯಲ್ಲಿ ಜನ್ಮವೆತ್ತುವಂತೆ ಇವನಿಗೆ ಅಣಿಮಾಂಡವ್ಯನ ಶಾಪ (ಆದಿ 63/95–96). ವಿದುರ ಮತ್ತು ಯುಧಿಷ್ಠಿರ ಇವನ ಅಂಶವೇ ಆಗಿದ್ದರು (ಆದಿ 67/86, 110). ಇವನ ಮೂಲಕ ಕುಂತಿಯ ಗರ್ಭದಿಂದ ಯುಧಿಷ್ಠಿರನ ಜನ್ಮ (ಆದಿ 122/7). ದ್ರೌಪದಿಯ ವಸ್ತ್ರ ಎಳೆಯಲ್ಪಡುತ್ತಿದ್ದಾಗ ಧರ್ಮಸ್ವರೂಪನಾದ ಶ್ರೀಕೃಷ್ಣನು ಅವ್ಯಕ್ತರೂಪದಿಂದ ಆಕೆಯ ವಸ್ತ್ರದಲ್ಲಿ ಪ್ರವೇಶಮಾಡಿ ವಿವಿಧ ಸುಂದರ ವಸ್ತ್ರಗಳ ಮೂಲಕ ದ್ರೌಪದಿಯನ್ನು ಮುಚ್ಚಿದ್ದನು (ಸಭಾ 68/46). ಧರ್ಮತೀರ್ಥದಲ್ಲಿ ಇವನು ತಪಸ್ಸು ಮಾಡಿದ್ದನು (ವನ 84/1). ಇವನು ಸದಾ ಧರ್ಮಪ್ರಸ್ಥದಲ್ಲಿ ವಾಸಿಸುತ್ತಾನೆ (ವನ 84/99). ವೈತರಣಿಯ ದಡದಲ್ಲಿ ಇವನು ಯಜ್ಞ ಮಾಡಿದ್ದನು (ವನ 114/4). ಇವನು ಮೃಗರೂಪದಲ್ಲಿ ಬ್ರಾಹ್ಮಣನ ಅರಣಿಕಾಷ್ಠವನ್ನು ತೆಗೆದುಕೊಂಡು ಓಡಿದನು (ವನ 311/9). ಯಕ್ಷರೂಪದಿಂದ ನಕುಲ, ಸಹದೇವ, ಅರ್ಜುನ ಮತ್ತು ಭೀಮಸೇನರನ್ನು ಮೂರ್ಛೆಗೊಳಿಸಿದನು (ವನ 312 ಅಧ್ಯಾಯ). ಯುಧಿಷ್ಠಿರನೊಂದಿಗೆ ಪ್ರಶ್ನೋತ್ತರ (ವನ 313/45–132). ಯುಧಿಷ್ಠಿರನ ಉತ್ತರದಿಂದ ಪ್ರಸನ್ನನಾಗಿ, ನಾಲ್ಕು ಮಂದಿ ಪಾಂಡವರಿಗೂ ಜೀವನದಾನ (ವನ 313/133). ಧರ್ಮನ ಬಳಿಗೆ ತಲಪುವ ದ್ವಾರಗಳು– ಅಹಿಂಸೆ, ಸಮತೆ, ಶಾಂತಿ, ದಯೆ ಮತ್ತು ಅನಸೂಯೆ (ಅಮತ್ಸರ). (ವನ 314/8). ಧರ್ಮನ ರೂಪಧರಿಸಿ ವಿಶ್ವಾಮಿತ್ರನ ಪರೀಕ್ಷೆ ಮಾಡಿದುದು (ಉದ್ಯೋಗ 106/8–17). ಬ್ರಹ್ಮನ ಅಜ್ಞೆಯಂತೆ ಧರ್ಮನು ದೈತ್ಯದಾನವರನ್ನು ತನ್ನ ಪಾಶದಿಂದ ಬಂಧಿಸಿ, ವರುಣನ ಅಧಿಕಾರಕ್ಕೆ ಒಪ್ಪಿಸಿದನು (ಉದ್ಯೋಗ 128/45–46). ಭಗವಂತನಾದ ನಾರಾಯಣನು ಧರ್ಮನ ಪುತ್ರರೂಪದಲ್ಲಿ ಅವತಾರವೆತ್ತಿದ್ದನು (ದ್ರೋಣ 201/57). ಇವನು ತನ್ನ ಪತ್ನಿ ಶ್ರೀ ಎಂಬವಳ ಗರ್ಭದಿಂದ ಅರ್ಥವೆಂಬ ಹೆಸರಿನ ಪುತ್ರನನ್ನು ಪಡೆದನು (ಶಾಂತಿ 59/132–133). ಇವನು ತನುವೆಂಬ ಹೆಸರಿನ ಮುನಿಯ ರೂಪದಲ್ಲಿ ಹುಟ್ಟಿದ್ದನು (ಶಾಂತಿ 28/22–23). ಜಾಪಕ ಬ್ರಾಹ್ಮಣನೊಂದಿಗೆ ಇವನ ಸಂವಾದ (ಶಾಂತಿ 199/20–28). ಮೃಗರೂಪದಿಂದ ಸತ್ಯನೆಂಬ ಬ್ರಾಹ್ಮಣನನ್ನು ಪರೀಕ್ಷಿಸಿದನು (ಶಾಂತಿ 272/17). ಬ್ರಾಹ್ಮಣ ರೂಪಧರಿಸಿ ಸುದರ್ಶನನನ್ನು ಪರೀಕ್ಷಿಸಿದನು (ಅನು 2/79). ಕೋಣನ ರೂಪದಲ್ಲಿ ಮಹರ್ಷಿ ವತ್ಸನಾಭನನ್ನು ಮಳೆಯಿಂದ ರಕ್ಷಿಸಿದನು (ಅನು 12). ಇವನಿಂದ ಧರ್ಮದ ರಹಸ್ಯದ ವರ್ಣನೆ (ಅನು 126/24–28). ಬ್ರಾಹ್ಮಣರೂಪದಲ್ಲಿ ಜನಕ ರಾಜನೊಂದಿಗೆ ಇವನ ಸಂವಾದ ಮತ್ತು ಕೊನೆಗೆ ಪ್ರಸನ್ನನಾಗಿ ಈತ ತನ್ನ ಪರಿಚಯ ಹೇಳಿದನು ಮತ್ತು ರಾಜನ ಪ್ರಶಂಸೆ ಮಾಡಿದನು (ಆಶ್ವ 32 ಅಧ್ಯಾಯ). ಬ್ರಾಹ್ಮಣ ರೂಪಧಾರಣೆ ಮಾಡಿ ಇವನು ಬ್ರಾಹ್ಮಣ ಪರಿವಾರವನ್ನು ಪರೀಕ್ಷಿಸಿದನು (ಆಶ್ವ 90 ಅಧ್ಯಾಯ). ಕ್ರೋಧರೂಪದಲ್ಲಿ ಜಮದಗ್ನಿಯನ್ನು ಪರೀಕ್ಷಿಸಿದನು (ಆಶ್ವ 91/42–52). ಮಾಂಡವ್ಯನ ಶಾಪದಿಂದ ಧರ್ಮನೇ ವಿದುರನಾಗಿದ್ದನು (ಆಶ್ರಮ 28/12). ಧರ್ಮ, ವಿದುರ ಮತ್ತು ಯುಧಿಷ್ಠಿರನ ಏಕತೆ (ಆಶ್ರಮ 28/21). ಪಾಂಡವರ ಮಹಾಪ್ರಸ್ಥಾನದ ಸಮಯದಲ್ಲಿ ನಾಯಿಯ ರೂಪಧರಿಸಿ, ಅವರ ಹಿಂದಿನಿಂದಲೇ ಹೋದನು (ಮಹಾಪ್ರಸ್ಥಾ 3/17). ವಿದುರ ಮತ್ತು ಯುಧಿಷ್ಠಿರ ಮರಣಾನಂತರ, ಧರ್ಮನಲ್ಲಿಯೇ ವಿಲೀನರಾಗಿದ್ದರು (ಸ್ವರ್ಗಾ 5/22). ಮಹಾಭಾರತದಲ್ಲಿ ಬಂದಿರುವ ಧರ್ಮನ ಹೆಸರುಗಳು – ಧರ್ಮರಾಜ, ವೃಷ, ಯಮ ಇತ್ಯಾದಿ.

**ಧರ್ಮತೀರ್ಥ** – (1) ಧರ್ಮನ ತಪಸ್ಸಿನ ಸ್ಥಾನದಿಂದ ಹುಟ್ಟಿದ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯ ಧರ್ಮಶೀಲನೂ ಏಕಾಗ್ರಚಿತ್ತನೂ ಆಗುತ್ತಾನೆ ಮತ್ತು ತನ್ನ ಕುಲದ ಏಳನೇ ತಲೆಮಾರಿನ ತನಕದ ಜನರನ್ನು ಪವಿತ್ರಗೊಳಿಸುತ್ತಾನೆ (ವನ 84/1).

(2) ಒಂದು ಪರಮ ಪವಿತ್ರ ಬ್ರಹ್ಮ ಸೇವಿತ ತೀರ್ಥ. ಇಲ್ಲಿ ಸ್ನಾನಮಾಡುವವ ವಾಜಪೇಯ ಯಜ್ಞದ ಫಲಪಡೆಯುತ್ತಾನೆ ಮತ್ತು ವಿಮಾನ

ದಲ್ಲಿ ಕುಳಿತುಪೂಜಿಸಲ್ಪಡುತ್ತಾನೆ (ವನ 84/162).

**ಧರ್ಮದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ಧರ್ಮನೇತ್ರ** – ಪೂರುವಂಶದ ರಾಜಾ ಕುರುವಿನ ಮರಿಮಗ ಮತ್ತು ಧೃತರಾಷ್ಟ್ರನ ಪುತ್ರ (ಆದಿ 94/60).

**ಧರ್ಮಪ್ರಸ್ಥ** – ಒಂದು ತೀರ್ಥ. ಇಲ್ಲಿ ಧರ್ಮ ರಾಜನ ನಿತ್ಯನಿವಾಸವಿದೆ. ಇಲ್ಲಿರುವ ಕೂಪಜಲ ದಿಂದ ದೇವತೆಗಳಿಗೂ ಪಿತೃಗಳಿಗೂ ತರ್ಪಣ ಕೊಡುವುದರಿಂದ ಮನುಷ್ಯನು ಪಾಪಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ (ವನ 84/99).

**ಧರ್ಮವ್ಯಾಧ** – ಮಿಥಿಲಾಪುರದಲ್ಲಿರುವ ಒಬ್ಬ ಧರ್ಮಪರಾಯಣ ವ್ಯಾಧ. ಇವನಿಂದ ವರ್ಣ ಧರ್ಮಗಳ ವರ್ಣನೆ (ವನ 207/20–28). ಶಿಷ್ಟಾಚಾರದ ವರ್ಣನೆ (ವನ 207/62–98). ಹಿಂಸೆ ಮತ್ತು ಅಹಿಂಸೆಯ ವಿವೇಚನೆ (ವನ 208 ಅಧ್ಯಾಯ). ಧರ್ಮಕರ್ಮವಿಷಯದ ಮೀಮಾಂಸೆ (ವನ 209 ಅಧ್ಯಾಯ). ವಿಷಯ ಸೇವನೆಯಿಂದ ಹಾನಿ ಮತ್ತು ಬ್ರಾಹ್ಮೀವಿದ್ಯೆಯ ವರ್ಣನೆ (ವನ 210 ಅಧ್ಯಾಯ). ಇಂದ್ರಿಯ ನಿಗ್ರಹದ ವರ್ಣನೆ (ವನ 211 ಅಧ್ಯಾಯ). ತ್ರಿಗುಣಗಳ ಸ್ವರೂಪ ಮತ್ತು ಫಲದ ನಿರೂಪಣೆ (ವನ 212 ಅಧ್ಯಾಯ). ಪ್ರಾಣವಾಯುವಿನ ಸ್ಥಿತಿಯ ಪ್ರತಿಪಾದನೆ (ವನ 213 ಅಧ್ಯಾಯ). ಮಾತಾಪಿತೃಗಳ ಸೇವೆಯ ದಿಗ್ದರ್ಶನ (ವನ 214 ಅಧ್ಯಾಯ). ತನ್ನ ಪೂರ್ವಜನ್ಮದ ಕಥೆ (ವನ 215 ಅಧ್ಯಾಯ). ಕೌಶಿಕ ಬ್ರಾಹ್ಮಣನಿಗೆ ಮಾತಾಪಿತರ ಸೇವೆಯ ಉಪದೇಶ ಕೊಟ್ಟು ವಿದಾಯ ಹೇಳಿದುದು (ವನ 216/32).

**ಧರ್ಮಾರಣ್ಯ** – (1) ಒಂದು ಪ್ರಾಚೀನ ತೀರ್ಥ ವುಳ್ಳ ವನ. ಅಲ್ಲಿ ಪ್ರವೇಶಮಾಡಿದ ಮಾತ್ರ ದಿಂದಲೇ ಮನುಷ್ಯ ಪಾಪಮುಕ್ತನಾಗುತ್ತಾನೆ (ವನ 82/46).

(2) ಒಬ್ಬ ಬ್ರಾಹ್ಮಣ. ಇವನು ಪದ್ಮನಾಭನೆಂಬ ನಾಗನಿಗೆ ತನ್ನ ಪರಿಚಯ ಹೇಳಿದುದು (ಶಾಂತಿ 361/5). ಪದ್ಮನಾಭನೊಡನೆ ಸೂರ್ಯಮಂಡಲದ ವಿಷಯ ಕೇಳಿದುದು (ಶಾಂತಿ 362/1). ಉಂಛ ವ್ರತದ ಪಾಲನೆ ಮಾಡುವ ನಿಶ್ಚಯಮಾಡಿ ಇವನು ನಾಗರಾಜನಿಂದ ವಿದಾಯಕೋರಿದುದು (ಶಾಂತಿ 364/7–10). ಚ್ಯವನ ಋಷಿಯಿಂದ ಉಂಛ ವ್ರತದ ದೀಕ್ಷೆ ಸ್ವೀಕರಿಸಿದುದು (ಶಾಂತಿ 365/2).

**ಧರ್ಮೇಯು** – ಪೂರು ಪುತ್ರ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯಲ್ಲಿ ಹುಟ್ಟಿದವನು (ಆದಿ 94/11).

**ಧವಲಗಿರಿ** (ಅಥವಾ ಶ್ವೇತಪರ್ವತ). – ಒಂದು ಪರ್ವತ. ಇಲ್ಲಿ ಅರ್ಜುನನು ತನ್ನ ಸೇನೆಯ ಬೀಡುಬಿಟ್ಟಿದ್ದನು (ಸಭಾ 27/29).

**ಧಾತಾ** – (1) ದ್ವಾದಶ ಆದಿತ್ಯರಲ್ಲಿ ಒಬ್ಬ. ಇವನ ತಾಯಿಯ ಹೆಸರು ಅದಿತಿ ಮತ್ತು ತಂದೆ ಕಶ್ಯಪ (ಆದಿ 65/15). ಖಾಂಡವ ವನದಹನ ಕಾಲದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ನಡೆದ ಯುದ್ಧದಲ್ಲಿ ದೇವತೆಗಳ ಪಕ್ಷದಿಂದ ಈತನೂ ಬಂದಿದ್ದನು (ಆದಿ 226/34). ಇವನಿಂದ ಸ್ಕಂದನಿಗೆ ಐದುಮಂದಿ ಪಾರ್ಷದರು ಕೊಡಲ್ಪಟ್ಟರು. ಅವರ ಹೆಸರು– ಕಂದ, ಕುಸುಮ, ಕುಮುದ, ಡಂಬರ ಮತ್ತು ಆಡಂಬರ (ಶಲ್ಯ 45/39).

(2) ಬ್ರಹ್ಮನ ಪುತ್ರ. ಇವನ ಇನ್ನೊಬ್ಬ ಸಹೋದರನ ಹೆಸರು ವಿಧಾತಾ. ಇಬ್ಬರು ಮನುವಿನೊಂದಿಗೆ ವಾಸಿಸುತ್ತಾರೆ (ಆದಿ 66/50). ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನೊಡನೆ ಇವನ ಭೇಟಿ (ಉದ್ಯೋಗ 83/64).

**ಧಾತ್ರೇಯಿಕಾ** – ದ್ರೌಪದಿಯ ದಾಸಿ. ಈಕೆ ಜಯದ್ರಥನಿಂದ ದ್ರೌಪದಿಯ ಅಪಹರಣವಾದ ಸಮಾಚಾರವನ್ನು ಪಾಂಡವರಿಗೆ ಹೇಳಿದ್ದಳು (ವನ 269/16–22).

**ಧಾಮ** – ಶ್ರೀ ಗಂಗಾಮಹಾದ್ವಾರದ ರಕ್ಷಣೆ ಮಾಡುವ ಮುನಿ. ಇವನು ಉತ್ತರ ದಿಕ್ಕಿನಲ್ಲಿರು ತ್ತಾನೆ (ಉದ್ಯೋಗ 111/17).

**ಧಾರಣ** – (1) ಚಂದ್ರವತ್ಸ ಕುಲದಲ್ಲಿ ಜನ್ಮವೆತ್ತಿದ ಒಬ್ಬ ಕುಲಕಳಂಕ ರಾಜ (ಉದ್ಯೋಗ 74/16).

(2) ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/16).

**ಧಾರಾ** – ಒಂದು ತೀರ್ಥ. ಇಲ್ಲಿಗೆ ಯಾತ್ರೆ ಮಾಡುವುದರಿಂದ ಸರ್ವಪಾಪಗಳು ಬಿಡುಗಡೆ ಯಾಗುತ್ತವೆ. ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಎಂದೂ ದುಃಖಭಾಜನನಾಗುವುದಿಲ್ಲ (ವನ 84/25).

**ಧಿಷಣಾ** – ಒಬ್ಬ ದೇವಿ. ಇವಳು ಸ್ಕಂದನ ಅಭಿಷೇಕದ ಸಮಯದಲ್ಲಿ ಆಗಮಿಸಿದ್ದಳು (ಶಲ್ಯ 45/44).

**ಧೀಮಾನ್** – (ಧೀಮಂತ). ಪುರೂರವನ ದ್ವಿತೀಯ ಪುತ್ರ (ಆದಿ 75/24).

**ಧೀರೋಷ್ಣೀ** – ಒಬ್ಬ ಸನಾತನ ವಿಶ್ವೇದೇವ (ಅನು 91/32).

**ಧುನ್ಧು** – (1) ಒಬ್ಬ ರಾಕ್ಷಸ. ಇವನು ಮಧು ಕೈಟಭರ ಮಗ (ವನ 202/18). ಇವನ ತಪಸ್ಸು ಮತ್ತು ವರಪ್ರಾಪ್ತಿ (ವನ 204/2–4). ಇವನಿಂದ ಮಹಾರಾಜ ಕುವಲಾಶ್ವನ ಪುತ್ರರು ದಗ್ಧರಾದುದು (ವನ 204/26). ರಾಜಾ ಕುವಲಾಶ್ವನಿಂದ ಇವನ ವಧೆ (ವನ 204/32).

(2) ಜೀವನದಲ್ಲಿ ಎಂದೂ ಮಾಂಸ ತಿನ್ನದ ಒಬ್ಬ ರಾಜ (ಅನು 115/66).

**ಧುನ್ಧುಮಾರ** – ಸೂರ್ಯವಂಶದ ಮಹಾರಾಜ ಬೃಹದಶ್ವನ ಪುತ್ರ ಕುವಲಾಶ್ವ (ದ್ರೋಣ 94/42). ಇವನಿಗೆ ಪಾಲವಿಲನಿಂದ ಖಡ್ಗ ಪ್ರಾಪ್ತಿಯಾಯಿತು (ಶಾಂತಿ 166/76). ಅಗಸ್ತ್ಯರ ಕಮಲಗಳ ಕಳ್ಳತನವಾದಾಗ ಈತ ಶಪಥ ಮಾಡಿದುದು (ಅನು 94/21). (ನೋಡಿರಿ–ಕುವಲಾಶ್ವ).

**ಧುರಸ್ಥರ** – ಒಂದು ಭಾರತೀಯ ಜನಪದ (ಭೀಷ್ಮ 9/41).

**ಧೂತಪಾಪಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/18).

**ಧೂಮಪಾ** – ಪಿತೃಗಳ ಮತ್ತು ಋಷಿಗಳ ಸಮುದಾಯ. ಇವರು ದಕ್ಷಯಜ್ಞಕ್ಕೆ ಬಂದಿದ್ದರು (ಶಾಂತಿ 284/8–9).

**ಧೂಮಾವತೀ** – ಒಂದು ಪವಿತ್ರ ತೀರ್ಥ. ಇಲ್ಲಿ ಮೂರು ರಾತ್ರಿ ಉಪವಾಸ ಮಾಡುವುದರಿಂದ ಮನೋವಾಂಛಿತ ಪ್ರಾಪ್ತವಾಗುತ್ತದೆ (ವನ 84/22).

**ಧೂಮಿನೀ** – ಪೂರುವಂಶದ ರಾಜ. ಅಜಮೀಢನ ರಾಣಿ. ಇವಳ ಗರ್ಭದಿಂದ ಅಜಮೀಢನ ಮೂಲಕ ಮಹಾರಾಜ ಋಕ್ಷನ ಜನನವಾಗಿತ್ತು (ಆದಿ 94/32).

**ಧೂಮೋರ್ಣಾ** – (1) ಯಮರಾಜನ ಭಾರ್ಯೆ (ವನ 117/9).

(2) ಮಹರ್ಷಿ ಮಾರ್ಕಂಡೇಯನ ಪತ್ನಿ (ಅನು 146/4).

**ಧೂಮ್ರ** – (1) ಒಬ್ಬ ಋಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/17).

(2) ಸ್ಕಂದನ ಸೈನಿಕ (ಶಲ್ಯ 45/64).

**ಧೂಮ್ರಾ** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಧರ್ಮನ ಪತ್ನಿ. ಇವಳು ಧ್ರುವ ಮತ್ತು ಧರನ ತಾಯಿ (ಆದಿ 66/19).

**ಧೂಮ್ರಾಕ್ಷ** – ಒಬ್ಬ ರಾಕ್ಷಸ. ಹನುಮಂತನಿಂದ ಇವನ ವಧೆಯಾಯಿತು (ವನ 286/14).

**ಧೂರ್ತ** – ಒಬ್ಬ ಪ್ರಾಚೀನ ರಾಜ (ಆದಿ 1/238).

**ಧೂರ್ತಕ** – ಕೌರವ್ಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/13).

**ಧೃತರಾಷ್ಟ್ರ** – (1) ರಾಜಾ ವಿಚಿತ್ರವೀರ್ಯನ ಕ್ಷೇತ್ರಜ ಪುತ್ರ, ವಿಚಿತ್ರವೀರ್ಯನ ಪತ್ನಿ ಅಂಬಿಕೆಯ ಗರ್ಭದಲ್ಲಿ ವ್ಯಾಸರಿಂದ ಜನಿಸಿದವನು. ಈತ ಜನ್ಮಾಂಧನು (ಆದಿ 1/95). (ಆದಿ 63/113, ಆದಿ 105/13). ಭೀಷ್ಮನಿಂದ ಪುತ್ರನೋಪಾದಿಯಲ್ಲಿ ಈತನ ಪಾಲನೆ ಮತ್ತು ಈತನಿಗೆ ಉಪನಯನಾದಿ ಸಂಸ್ಕಾರಗಳ ಪೂರೈಕೆ (ಆದಿ 108/17–18). ಇವನ ಶಾರೀರಿಕ ಶಕ್ತಿ ಮತ್ತು ಶಿಕ್ಷಣ (ಆದಿ 108/19–21). ಜನ್ಮಾಂಧನಾದುದರಿಂದ ಇವನು ರಾಜ್ಯಪ್ರಾಪ್ತಿಯಿಂದ ವಂಚಿತನಾದುದು (ಆದಿ 108/25). ಗಾಂಧಾರಿಯೊಂದಿಗೆ ವಿವಾಹ (ಆದಿ 109/16). ಇವನಿಂದ ನೂರು ಅಶ್ವಮೇಧಗಳ ಪರಿಪೂರ್ಣತೆ ಮತ್ತು ಪ್ರತಿ ಯಜ್ಞದಲ್ಲಿ ಲಕ್ಷಲಕ್ಷ ಸ್ವರ್ಣಮುದ್ರೆಗಳ ದಕ್ಷಿಣೆಯ ದಾನ (ಆದಿ 113/5). ಇವನಿಂದ ಗಾಂಧಾರಿಯ ಗರ್ಭದಲ್ಲಿ ನೂರು ಪುತ್ರರಾದ ವೃತ್ತಾಂತ (ಆದಿ 114/12–25). ದುರ್ಯೋಧನನ ಜನ್ಮಕಾಲದ ಅಮಂಗಲ ಸೂಚಕ ಲಕ್ಷಣಗಳನ್ನು ಅಥವಾ ಅಪಶಕುನಗಳನ್ನು ಕಂಡು, ಅವನನ್ನು ತ್ಯಾಗ ಮಾಡಲು ವಿದುರನಿಂದ ಈತನಿಗೆ ಸಲಹೆ (ಆದಿ 114/34–39). ಇವನಿಂದ ವೈಶ್ಯ ಜಾತಿಯ ಕನ್ಯೆಯಲ್ಲಿ ಯುಯುತ್ಸುವಿನ ಜನನ (ಆದಿ 114/43). ಇವನ ಪುತ್ರಿ ದುಃಶಲೆಯ ಜನ್ಮಕಥೆ (ಆದಿ 115 ಅಧ್ಯಾಯ). ತನ್ನ ಪುತ್ರಿ ದುಃಶಲೆಯ ವಿವಾಹ

ವನ್ನು ಸಿಂಧುರಾಜ ಜಯದ್ರಥನೊಂದಿಗೆ ಮಾಡಿದನು (ಆದಿ 116/18). ಪಾಂಡು ಶಾಪಗ್ರಸ್ತನಾಗಿ ವಾನಪ್ರಸ್ಥ ಸ್ವೀಕರಿಸಿದಾಗ ಇವನ ಶೋಕ (ಆದಿ 118/45). ರಾಜೋಚಿತ ರೀತಿಯಲ್ಲಿ ಪಾಂಡು ಮತ್ತು ಮಾದ್ರಿಯ ಅಂತ್ಯೇಷ್ಟಿ ಸಂಸ್ಕಾರಮಾಡಿಸಲು ಈತನಿಂದ ವಿದುರನಿಗೆ ಆದೇಶ (ಆದಿ 126/1–3). ಯುವರಾಜ ಪದದಲ್ಲಿ ಯುಧಿಷ್ಠಿರನಿಗೆ ಅಭಿಷೇಕ (ಆದಿ 138/1–2). ಪಾಂಡವರ ಉನ್ನತಿಯನ್ನು ಕಂಡು ಇವನ ಚಿಂತೆ. ಇವನಿಗೆ ಪಾಂಡವರು ಮತ್ತು ಪುರೋಚನ ಸುಟ್ಟುಹೋದ ಸಂದೇಶ ತಿಳಿಸಿದುದು (ಆದಿ 149/9). ಪಾಂಡವರಿಗಾಗಿ ಇವನ ಮಿಥ್ಯಾವಿಲಾಪ (ಆದಿ 149/10). ಈತನಿಂದ ಪಾಂಡವರಿಗೆ ಜಲಾಂಜಲಿ ದಾನ (ಆದಿ 149/15). ಪಾಂಡವರ ಕುರಿತು ಈತನ ಪ್ರೇಮದ ನಟನೆ (ಆದಿ 199/22 ರಿಂದ 25). ಅವರ ಕುರಿತು ದುರ್ಯೋಧನನೊಡನೆ ಇವನ ಮಾತುಕತೆ (ಆದಿ 200/1–20). ದ್ರುಪದ ನಗರದಿಂದ ಕರೆಸಿ, ಪಾಂಡವರಿಗೆ ಅರ್ಧರಾಜ್ಯ ಕೊಡಲು ಭೀಷ್ಮರು ಇವನನ್ನು ಒತ್ತಾಯಿಸಿದುದು (ಆದಿ 202 ಅಧ್ಯಾಯ). ದ್ರೌಪದಿ ಮತ್ತು ಪಾಂಡವರಿಗೆ ಉಡುಗೊರೆ ಕಳುಹಿಸಲು, ಅವರನ್ನು ಪ್ರೀತಿಪೂರ್ವಕ ದ್ರುಪದ ನಗರದಿಂದ ಕರೆಸಿಕೊಳ್ಳಲು ಮತ್ತು ಪಾಂಡವರ ಅರ್ಧ ರಾಜ್ಯಕೊಟ್ಟು ಬಿಡಲು, ಈತನೊಡನೆ ದ್ರೋಣಾಚಾರ್ಯರ ಒತ್ತಾಯ (ಆದಿ 203/1–12). ಪಾಂಡವರ ಪರಾಕ್ರಮ ತಿಳಿಸಿ, ಅವರನ್ನು ದ್ರುಪದ ನಗರದಿಂದ ಕರೆಸಲು, ಮತ್ತು ಅವರ ಅರ್ಧರಾಜ್ಯ ಕೊಡಲು ಈತನಿಗೆ ವಿದುರನ ಸಲಹೆ (ಆದಿ 204/15–30). ಪಾಂಡವರನ್ನು ಅವರ ತಾಯಿ ಮತ್ತು ದ್ರೌಪದಿಯೊಂದಿಗೆ ಕರೆದುತರಲು, ಇವನು ವಿದುರನಿಗೆ ಆದೇಶ ನೀಡಿದುದು (ಆದಿ 205/4). ದ್ರುಪದ ನಗರದಿಂದ ಬರುತ್ತಿರುವ ಪಾಂಡವರನ್ನು ಎದುರುಗೊಳ್ಳಲು ಇವನಿಂದ ಕೌರವರಿಗೆ ಆದೇಶ (ಆದಿ 206/12). ಇವನಿಂದ ಯುಧಿಷ್ಠಿರನಿಗೆ ಅರ್ಧ ರಾಜ್ಯಾಭಿಷೇಕ ಮತ್ತು ಅವರು ಸಹೋದರರ ಸಹಿತ ಖಾಂಡವ ಪ್ರಸ್ಥದಲ್ಲಿರಲು ಆದೇಶ (ಆದಿ 206/23). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಹೋದುದು (ಸಭಾ 34/5). ಇವನು ದುರ್ಯೋಧನನೊಡನೆ ಆತನ ಚಿಂತೆಯ ಕಾರಣ ಕೇಳಿದುದು (ಸಭಾ 49/6–11). ಯುಧಿಷ್ಠಿರನನ್ನು ಕರೆಸಲು ಇವನು ವಿದುರನನ್ನು ಕಳುಹಿಸಿದುದು (ಸಭಾ 49/55–59). ವೈರ ವಿರೋಧವಾಗುವ ಕಾರಣ ಜೂಜಾಡಬಾರದೆಂದು ಇವನು ದುರ್ಯೋಧನನಿಗೆ ಸಲಹೆ ನೀಡಿದುದು (ಸಭಾ 50/12). ಪಾಂಡವರೊಂದಿಗೆ ವಿರೋಧಮಾಡದಿರಲು ಇವನು ದುರ್ಯೋಧನನಿಗೆ ಬುದ್ಧಿ ಹೇಳಿದುದು (ಸಭಾ 54 ಅಧ್ಯಾಯ). ಇವನಿಂದ ದ್ಯೂತಕ್ರೀಡೆಯ ನಿಂದೆ (ಸಭಾ 56/12). ಪಾಂಡವರು ದ್ಯೂತಕ್ರೀಡೆಯಲ್ಲಿ ಸೇರಿಕೊಳ್ಳಲು ಕರೆಸುವಂತೆ ವಿದುರನಿಗೆ ಇವನ ಆದೇಶ (ಸಭಾ 56/21). ವಿದುರನೊಂದಿಗೆ ಇವನ ವಾರ್ತಾಲಾಪ (ಸಭಾ 57 ಅಧ್ಯಾಯ). ಇವನಿಂದ ದ್ರೌಪದಿಗೆ ವರದಾನ (ಸಭಾ 71/31–33). ಇವನು ಯುಧಿಷ್ಠಿರನಿಗೆ ಎಲ್ಲಾ ಧನವನ್ನು ಹಿಂತಿರುಗಿಸಿ, ಸಮಾಧಾನ ಹೇಳಿ, ಅವರು ಇಂದ್ರಪ್ರಸ್ಥಕ್ಕೆ ಹಿಂತಿರುಗುವಂತೆ ಆದೇಶಿಸಿದುದು (ಸಭಾ 73 ಅಧ್ಯಾಯ). ಇವನು ಪುನಃ ಜೂಜಾಟಕ್ಕೆ ಸಮ್ಮತಿಸಿದುದು (ಸಭಾ 74/24). ಇವನಿಗೆ ಗಾಂಧಾರಿಯ ಎಚ್ಚರಿಕೆ (ಸಭಾ 75 ಅಧ್ಯಾಯ). ಪ್ರಜೆಗಳ ಶೋಕದ ವಿಷಯದಲ್ಲಿ ವಿದುರನೊಂದಿಗೆ ಇವನ ಸಂವಾದ (ಸಭಾ 80/35). ಇವನ ಚಿಂತೆ ಮತ್ತು ಸಂಜಯನೊಡನೆ ಮಾತುಕತೆ (ಸಭಾ 81 ಅಧ್ಯಾಯ). ಇವನಿಂದ ವಿದುರನ ಸಲಹೆಯ ವಿರೋಧ (ವನ 4/18–21). ವಿದುರನನ್ನು ಕರೆಸಲು ಇವನಿಂದ ಸಂಜಯನಿಗೆ ಆದೇಶ (ವನ 65/10). ಇವನಿಂದ ವಿದುರನಲ್ಲಿ ಕ್ಷಮಾಯಾಚನೆ (ವನ 6/21). ಇವನು ಪಾಂಡವರ ಕುರಿತು ಮೈತ್ರೇಯರಲ್ಲಿ ಪ್ರಶ್ನೆ ಮಾಡಿದುದು (ವನ 10/9). ಇವನು ಸಂಜಯನ ಮುಂದೆ ಪುತ್ರರಿಗಾಗಿ ಚಿಂತಿಸಿದುದು (ವನ 48 ಅಧ್ಯಾಯ). ಪಾಂಡವರ ಪರಾಕ್ರಮವನ್ನು ಕೇಳಿ ಇವನು ಸಂತಪ್ತನಾದುದು (ವನ 49/14–23). ಪಾಂಡವರ ಪರಾಕ್ರಮವನ್ನು ಕೇಳಿ ಇವನು ಭಯಭೀತನಾದುದು (ವನ 51/45–46). ಪಾಂಡವರ ಸಮಾಚಾರ ಕೇಳಿ ಇವನಿಂದ ಖೇದಯುಕ್ತ, ಚಿಂತಾಪೂರ್ಣ ಉದ್ಗಾರ (ವನ 236 ಅಧ್ಯಾಯ). ಇವನು

ದುರ್ಯೋಧನನಿಗೆ ಘೋಷಯಾತ್ರೆಗೆ ಅನುಮತಿಯನ್ನಿತ್ತದ್ದು (ವನ 239/22). ದ್ರುಪದ ಪುರೋಹಿತನನ್ನು ಸತ್ಕರಿಸಿ ಬೀಳ್ಕೊಂಡದ್ದು (ಉದ್ಯೋಗ 21/21). ಸಂಜಯನಲ್ಲಿ ಪಾಂಡವ ಪಕ್ಷದ ವೀರರ ವರ್ಣನೆ ಮಾಡುತ್ತಾ, ಅವನನ್ನು ದೂತನಾಗಿ ಪಾಂಡವರ ಬಳಿಗೆ ಕಳುಹಿಸಿದುದು (ಉದ್ಯೋಗ 22 ಅಧ್ಯಾಯ). ಸಂಜಯನ ಮಾತು ಕೇಳಿ, ಚಿಂತೆಯಿಂದ ಜಾಗರಣೆ; ವಿದುರನನ್ನು ಕರೆಸಿ ಅವನಿಂದ ಕಲ್ಯಾಣಕಾರಕ ವಿಷಯ ಕೇಳಿದುದು (ಉದ್ಯೋಗ 33/9–11). ಇವನಿಂದ ಸಂಜಯನಲ್ಲಿ ಯುಧಿಷ್ಠಿರನ ಸಹಾಯಕರ ವಿಷಯದಲ್ಲಿ ಪ್ರಶ್ನೆ (ಉದ್ಯೋಗ 50/9). ಭೀಮಸೇನನ ಪರಾಕ್ರಮಕ್ಕೆ ಹೆದರಿ ಇವನು ವಿಲಾಪ ಮಾಡಿದುದು (ಉದ್ಯೋಗ 57 ಅಧ್ಯಾಯ). ಅರ್ಜುನನ ಪರಾಕ್ರಮದಿಂದ ಒದಗಬಹುದಾದ ಈತನ ಭಯದ ವರ್ಣನೆ (ಉದ್ಯೋಗ 52 ಅಧ್ಯಾಯ). ಕೌರವ ಸಭೆಯಲ್ಲಿ ಯುದ್ಧದ ಭಯ ತೋರಿಸಿ ಶಾಂತಿಯನ್ನು ಪ್ರಸ್ತಾವಿಸಿದುದು (ಉದ್ಯೋಗ 53/14–15). ಪಾಂಡವರ ಯುದ್ಧಸಿದ್ಧತೆಯನ್ನು ತಿಳಿದು ಇವನ ದುಃಖ (ಉದ್ಯೋಗ 57/26–35). ದುರ್ಯೋಧನನು ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ತಿಳಿಯ ಹೇಳಿದುದು (ಉದ್ಯೋಗ 58/2–9). ಭೀಮನ ಪರಾಕ್ರಮದ ವರ್ಣನೆ ಮಾಡಿ, ತನ್ನ ಪಕ್ಷದ ಇತರ ರಾಜರಿಗೆ ಭಯವನ್ನು ತೋರಿಸಿದುದು (ಉದ್ಯೋಗ 58/19–28). ತನ್ನ ಪಕ್ಷಕ್ಕಿಂತ ಪಾಂಡವಪಕ್ಷವನ್ನು ಅಧಿಕ ಬಲಶಾಲಿಯೆಂದು ತಿಳಿದು, ದುರ್ಯೋಧನನನ್ನು ಸಂಧಿಗೋಸ್ಕರ ಒಡಂಬಡಿಸಿದುದು (ಉದ್ಯೋಗ 60 ಅಧ್ಯಾಯ). ಸಂಜಯನಲ್ಲಿ ಎರಡೂ ಪಕ್ಷಗಳ ಬಲಾಬಲದ ಕುರಿತು ಪ್ರಶ್ನೆ (ಉದ್ಯೋಗ 67/4–5). ಇವನಿಂದ ಶ್ರೀಕೃಷ್ಣನ ಗುಣಗಾನ (ಉದ್ಯೋಗ 81 ಅಧ್ಯಾಯ). ಶ್ರೀಕೃಷ್ಣನನ್ನು ಸತ್ಕರಿಸಲು ದುರ್ಯೋಧನನಿಗೆ ಆಜ್ಞೆಯನ್ನಿತ್ತದ್ದು (ಉದ್ಯೋಗ 85/7–10). ವಿದುರನಲ್ಲಿ ಶ್ರೀಕೃಷ್ಣನನ್ನು ಎದುರುಗೊಳ್ಳುವ, ಕಾಣಿಕೆ ಉಡುಗೊರೆ ಕೊಡುವ, ಮತ್ತು ಅವನನ್ನು ದುಃಶಾಸನನ ಅರಮನೆಯಲ್ಲಿ ಇರಗೊಡಿಸುವ ವಿಚಾರವನ್ನು ಪ್ರಕಟಿಸಿದುದು (ಉದ್ಯೋಗ 86 ಅಧ್ಯಾಯ). ಶ್ರೀಕೃಷ್ಣನನ್ನು ಬಂಧಿಸುವ ವಿಚಾರ ತಿಳಿದು ದುರ್ಯೋಧನನನ್ನು ವಿರೋಧಿಸಿದುದು (ಉದ್ಯೋಗ 88/17–18). ಇವನಿಂದ ಅರಮನೆಯಲ್ಲಿ ಶ್ರೀಕೃಷ್ಣನ ಆತಿಥ್ಯ (ಉದ್ಯೋಗ 89/18–19). ದುರ್ಯೋಧನನನ್ನು ಒಪ್ಪಿಸಲು ಶ್ರೀಕೃಷ್ಣನೊಡನೆ ಆಗ್ರಹ (ಉದ್ಯೋಗ 124/2–7). ದುರ್ಯೋಧನನಿಗೆ ಬುದ್ಧಿಹೇಳಿದುದು (ಉದ್ಯೋಗ 125/23–27). ಗಾಂಧಾರಿಯೊಡನೆ ದುರ್ಯೋಧನನ ಉದ್ದಂಡತನವನ್ನು ತಿಳಿಸಿದುದು (ಉದ್ಯೋಗ 129/7–8). ಶ್ರೀಕೃಷ್ಣನನ್ನು ಬಂಧಿಸುವುದನ್ನು ತಡೆದುದು (ಉದ್ಯೋಗ 130/34–39). ಶ್ರೀಕೃಷ್ಣನ ವಿಶ್ವರೂಪದರ್ಶನಕ್ಕಾಗಿ, ಅವನೊಂದಿಗೆ ಕಣ್ಣನ್ನು ಬೇಡಿದುದು ಮತ್ತು ಕಣ್ಣುಗಳನ್ನು ಪಡೆದು ಭಗವತ್ಸ್ವರೂಪ ದರ್ಶನದಿಂದ ಕೃತಾರ್ಥನಾದುದು (ಉದ್ಯೋಗ 131/18–21). ಕುರುಕ್ಷೇತ್ರದಲ್ಲಿ ಕೌರವ ಪಾಂಡವರ ಶಿಬಿರ ಸ್ಥಾಪನೆಯಾದ ಕೂಡಲೇ, ಮುಂದಿನ ಸಮಾಚಾರದ ಕುರಿತು ಸಂಜಯನಲ್ಲಿ ಕೇಳಿದುದು (ಉದ್ಯೋಗ 159/3). ವ್ಯಾಸರಲ್ಲಿ ವಿಜಯ ಸೂಚಕ ಲಕ್ಷಣಗಳ ಕುರಿತು ಕೇಳಿದುದು (ಭೀಷ್ಮ 3/64). ಸಂಜಯನಲ್ಲಿ ಪೃಥ್ವಿಯ ಮಹಿಮೆಯನ್ನು ಕೇಳಿದುದು (ಭೀಷ್ಮ 4/3–8). ಸಂಜಯನಿಂದ ಭೀಷ್ಮರ ಮೃತ್ಯು ಸಮಾಚಾರ ಕೇಳಿ ಇವನ ವಿಲಾಪ (ಭೀಷ್ಮ 14 ಅಧ್ಯಾಯ). ಸಂಜಯನಿಂದ ಈತ ಯುದ್ಧದ ಎಲ್ಲಾ ಸುದ್ದಿ ಕೇಳಿದುದು (ಭೀಷ್ಮಪರ್ವದಿಂದ ಶಲ್ಯಪರ್ವದ ವರೆಗೆ). ತನ್ನ ಸೇನೆ ಕೊಲ್ಲಲ್ಪಡುತ್ತಿರುವುದನ್ನು ಕೇಳಿ ಇವನ ಚಿಂತೆ (ಭೀಷ್ಮ 76 ಅಧ್ಯಾಯ). ದ್ರೋಣಾಚಾರ್ಯನ ಮರಣವನ್ನು ಕೇಳಿ ಇವನು ಶೋಕದಿಂದ ವ್ಯಾಕುಲನಾದುದು (ದ್ರೋಣ ಅಧ್ಯಾಯ 9ರಿಂದ 10 ವರೆಗೆ). ಇವನಿಂದ ಶ್ರೀಕೃಷ್ಣ ಮತ್ತು ಅರ್ಜುನರ ಮಹಿಮೆಯ ವರ್ಣನೆ (ದ್ರೋಣ 11 ಅಧ್ಯಾಯ). ಅರ್ಜುನನಿಂದ ಜಯದ್ರಥ ವಧೆಯ ಪ್ರತಿಜ್ಞೆಯನ್ನು ತಿಳಿದು ಇವನು ವಿಲಪಿಸಿದುದು (ದ್ರೋಣ 85 ಅಧ್ಯಾಯ). ಸಾತ್ಯಕಿಯಿಂದ ತನ್ನ ಸೇನೆಯ ಸಂಹಾರವನ್ನು ಕೇಳಿ ವಿಷಾದಿಸಿದುದು (ದ್ರೋಣ 114/1–46). ಇವನಿಂದ ಭೀಮಸೇನನ ಬಲದ ವರ್ಣನೆ ಮತ್ತು ತನ್ನ ಪುತ್ರರ ನಿಂದನೆ (ದ್ರೋಣ

135/1–24). ಸಂಜಯನೊಡನೆ ಕರ್ಣನು ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗಿಸದಿರಲು ಕಾರಣ ಕೇಳಿದುದು (ದ್ರೋಣ 182/1–10). ಕರ್ಣನ ಮೃತ್ಯುವನ್ನು ಕೇಳಿ ಶೋಕಾಕುಲನಾದುದು (ಕರ್ಣ 4 ಅಧ್ಯಾಯ). ಕರ್ಣನ ಮರಣವನ್ನು ಕೇಳಿ ವಿಲಪಿಸಿದುದು ಮತ್ತು ಅವನ ವಧೆಯ ವಿಸ್ತೃತ ವರ್ಣನೆ ಮಾಡಲು ಸಂಜಯನಲ್ಲಿ ಹೇಳಿದುದು (ಕರ್ಣ ಅಧ್ಯಾಯ 8ರಿಂದ 9ರ ವರೆಗೆ). ಕರ್ಣವಧೆಯ ಸಮಾಚಾರ ಕೇಳಿ ಮೋಹಿತನಾದುದು (ಕರ್ಣ 96/54). ಶಲ್ಯ ಮತ್ತು ದುರ್ಯೋಧನರ ವಧೆಯ ಸಮಾಚಾರ ಕೇಳಿ ಮೂರ್ಚ್ಛಿತನಾದುದು (ಶಲ್ಯ 1/39–40). ಇವನು ವಿಲಪಿಸಿದುದು ಮತ್ತು ಯುದ್ಧದ ಸಮಾಚಾರ ಕೇಳಿದುದು (ಶಲ್ಯ 2 ಅಧ್ಯಾಯ). ಯುದ್ಧ ಮುಗಿದಾಗ ಇವನ ವಿಲಾಪ (ಸ್ತ್ರೀ 1/10–21). ವ್ಯಾಸರಲ್ಲಿ ತನ್ನ ದುಃಖ ಹೇಳಿ ವಿಲಪಿಸಿದುದು (ಸ್ತ್ರೀ 8/6–11). ಸಂಜಯನ ಮಾತು ಕೇಳಿ ಈತ ಮೂರ್ಚ್ಛಿತನಾದುದು (ಸ್ತ್ರೀ 9/8). ಸ್ತ್ರೀಯರು ಮತ್ತು ಪ್ರಜೆಗಳೊಂದಿಗೆ ರಣಭೂಮಿಗೆ ಹೋಗಲು ನಗರದಿಂದ ಹೊರಗೆ ಹೊರಟದ್ದು (ಸ್ತ್ರೀ 10/16). ಭೀಮಸೇನನ ಕಬ್ಬಿಣದ ಮೂರ್ತಿಯನ್ನು ಮುರಿದುದು (ಸ್ತ್ರೀ 12/17). ಪಾಂಡವರನ್ನು ಅಪ್ಪಿಕೊಂಡದ್ದು (ಸ್ತ್ರೀ 13/17). ಯುಧಿಷ್ಠಿರನೊಡನೆ ಸತ್ತ ಜನರ ಸಂಖ್ಯೆ ಮತ್ತು ಗತಿಯ ವಿಷಯವಾಗಿ ಪ್ರಶ್ನೆ ಮಾಡಿದುದು (ಸ್ತ್ರೀ 26/7, 11,18). ಸತ್ತವರ ದಾಹ ಸಂಸ್ಕಾರಮಾಡಲು ಯುಧಿಷ್ಠಿರನೊಡನೆ ಹೇಳಿದುದು (ಸ್ತ್ರೀ 26/21–23). ಯುದ್ಧದಲ್ಲಿ ಕೊಲ್ಲಲ್ಪಟ್ಟ ಖಾಸಾಸಂಬಂಧಿಗಳ ಶ್ರಾದ್ಧ ಮಾಡಿದುದು (ಶಾಂತಿ 42/2–3). ದುರ್ಯೋಧನನಿಗೆ ಶೀಲದ ಉಪದೇಶ (ಶಾಂತಿ 124 ಅಧ್ಯಾಯ). ಶೋಕವಿಹ್ವಲನಾದ ಯುಧಿಷ್ಠಿರನನ್ನು ಸಮಾಧಾನಪಡಿಸಿದುದು (ಆಶ್ವ 1/8–20). ಸಹೋದರ ಸಹಿತನಾದ ಯುಧಿಷ್ಠಿರ ಮತ್ತು ಕುಂತಿಯೇ ಮೊದಲಾದ ಸ್ತ್ರೀಯರಿಂದ ಗಾಂಧಾರಿ ಸಹಿತನಾದ ಧೃತರಾಷ್ಟ್ರನ ಸೇವೆ (ಆಶ್ರಮ 1 ಅಧ್ಯಾಯ). ಪಾಂಡವರಿಂದ ಗಾಂಧಾರಿ ಸಹಿತ ಧೃತರಾಷ್ಟ್ರನಿಗೆ ಅನುಕೂಲ ವರ್ತನೆ (ಆಶ್ರಮ 2 ಅಧ್ಯಾಯ). ಭೀಮನ ಮರ್ಮಭೇದಕ ಮಾತುಗಳಿಂದ ವ್ಯಥಿತನಾದ ಧೃತರಾಷ್ಟ್ರ ಗಾಂಧಾರಿಯ ಸಮೇತ ಕಾಡಿಗೆ ಹೋಗುವ ನಿಶ್ಚಯ ಮತ್ತು ಅನುಮತಿ ಕೊಡಲು ಯುಧಿಷ್ಠಿರನಲ್ಲಿ ಆಗ್ರಹ (ಆಶ್ರಮ 3/1–40). ರಾಜಾ ಧೃತರಾಷ್ಟ್ರನು ಉಪವಾಸದಿಂದ ದುರ್ಬಲನಾದ ಕಾರಣ, ಮಾತಾಡಿದುದರಿಂದಲೇ ಆಯಾಸಪಟ್ಟು ಗಾಂಧಾರಿಯ ಆಸರೆಹೊಂದಿ, ಸ್ಮೃತಿತಪ್ಪಿದವನಂತೆ ಒರಗಿದುದು; ರಾಜಾ ಯುಧಿಷ್ಠಿರನು ಹಸ್ತಸ್ಪರ್ಶ ಮಾಡಿದಾಗ, ಈತ ಸಚೇತನನಾದುದು ಮತ್ತು ಆತನಲ್ಲಿ ಪುನಃ ಕೈಯಿಂದ ಸ್ಪರ್ಶಿಸುವಂತೆ ಮತ್ತು ಅಪ್ಪಿಕೊಳ್ಳುವಂತೆ ಹೇಳಿದುದು (ಆಶ್ರಮ 3/61–73). ಇವನು ಯುಧಿಷ್ಠಿರನನ್ನು ಅಪ್ಪಿಕೊಂಡು, ಅವನ ನೆತ್ತಿಯನ್ನು ಆಘ್ರಾಣಿಸಿದುದು ಮತ್ತು ತಪಸ್ಸಿಗೆ ಹೋಗಲು ಅವನಲ್ಲಿ ಪುನಃ ಅನುಮತಿ ಕೇಳಿದುದು. ಯುಧಿಷ್ಠಿರನು ಇವನೊಡನೆ ಅನ್ನ ಸ್ವೀಕರಿಸುವಂತೆ ಹೇಳಿದುದು ಮತ್ತು ಕಾಡಿಗೆ ಹೋಗಲು ಅನುಮತಿಕೊಡುವ ಶರ್ತದೊಂದಿಗೆ ಇವನು ಭೋಜನ ಮಾಡಲು ಸಿದ್ಧನಾದುದು (ಆಶ್ರಮ 3/75–86). ವ್ಯಾಸರು ತಿಳಿಸಿದ ಮೇಲೆ ಯುಧಿಷ್ಠಿರನು ಧೃತರಾಷ್ಟ್ರನಿಗೆ ಕಾಡಿಗೆ ಹೋಗಲು ಒಪ್ಪಿಗೆಯನ್ನಿತ್ತದ್ದು ಮತ್ತು ಈತನೊಡನೆ ಭೋಜನ ಮಾಡಲು ಪ್ರಾರ್ಥಿಸಿದುದು (ಆಶ್ರಮ 4 ಅಧ್ಯಾಯ). ಧೃತರಾಷ್ಟ್ರನಿಂದ ರಾಜಾ ಯುಧಿಷ್ಠಿರನಿಗೆ ರಾಜನೀತಿಯ ಉಪದೇಶ (ಆಶ್ರಮ ಅಧ್ಯಾಯ 5ರಿಂದ 7 ರವರೆಗೆ). ಕುರುಜಾಂಗಲ ದೇಶದ ಪ್ರಜೆಗಳೊಡನೆ ಧೃತರಾಷ್ಟ್ರನು ಕಾಡಿಗೆ ಹೋಗಲು ಆಜ್ಞೆ ಕೇಳಿದುದು ಮತ್ತು ತನ್ನ ಅಪರಾಧಗಳಿಗೆ ಕ್ಷಮೆ ಯಾಚಿಸಿದುದು (ಆಶ್ರಮ ಅಧ್ಯಾಯ 8ರಿಂದ 9 ವರೆಗೆ). ಪ್ರಜೆಗಳ ವತಿಯಿಂದ ಸಾಂಬನೆಂಬ ಬ್ರಾಹ್ಮಣನು ಧೃತರಾಷ್ಟ್ರನಿಗೆ ಉತ್ತರವನ್ನಿತ್ತದ್ದು (ಆಶ್ರಮ 10 ಅಧ್ಯಾಯ). ಧೃತರಾಷ್ಟ್ರನು ಯುಧಿಷ್ಠಿರನೊಂದಿಗೆ ಶ್ರಾದ್ಧ ಮಾಡಲು ಧನವನ್ನು ಯಾಚಿಸಿದುದು (ಆಶ್ರಮ 11/1–6). ಯುಧಿಷ್ಠಿರನು ಧೃತರಾಷ್ಟ್ರನಿಗೆ ಬೇಕಾದಷ್ಟು ಧನಕೊಡಲು ಒಪ್ಪಿದುದು (ಆಶ್ರಮ 12/4–5). ಧೃತರಾಷ್ಟ್ರನಿಗೆ ಯುಧಿಷ್ಠಿರನ ಔದಾರ್ಯ ಪೂರ್ಣ ಉತ್ತರವನ್ನು ವಿದುರನು ತಿಳಿಸಿದುದು (ಆಶ್ರಮ 13 ಅಧ್ಯಾಯ). ರಾಜಾಧೃತರಾಷ್ಟ್ರನಿಂದ

ಮೃತ ವ್ಯಕ್ತಿಗಳಿಗೆ ಶ್ರಾದ್ಧ ಮತ್ತು ವಿಶಾಲ ದಾನ ಯಜ್ಞದ ಅನುಷ್ಠಾನ (ಆಶ್ರಮ 14 ಅಧ್ಯಾಯ). ಗಾಂಧಾರಿ ಸಹಿತ ಧೃತರಾಷ್ಟ್ರನ ವನಗಮನ, ಕುಂತಿ ಗಾಂಧಾರಿಯ ಕೈಯನ್ನು ತನ್ನ ಹೆಗಲ ಮೇಲಿಟ್ಟುಕೊಂಡು ಹೋದುದು, ಪಾಂಡವರು, ದ್ರೌಪದಿಯೇ ಮೊದಲಾದ ಸ್ತ್ರೀಯರು ಮತ್ತು ಪುರವಾಸಿಗಳು ಅಳುತ್ತಾ ಇವರ ಹಿಂದೆ ಹಿಂದೆ ನಡೆದುದು (ಆಶ್ರಮ 15 ಅಧ್ಯಾಯ). ರಾಜಾ ಧೃತರಾಷ್ಟ್ರನು ಪುರವಾಸಿಗಳನ್ನು ಹಿಂತಿರುಗಿಸಿದುದು ಕೃಪಾಚಾರ್ಯ ಮತ್ತು ಯುಯುತ್ಸುವನ್ನು ಯುಧಿಷ್ಠಿರನ ಕೈಗೆ ಒಪ್ಪಿಸಿದುದು (ಆಶ್ರಮ 16/2–5). ಕುಂತೀ ಸಹಿತ ಗಾಂಧಾರಿ ಮತ್ತು ಧೃತರಾಷ್ಟ್ರನೇ ಮೊದಲಾದವರು ಕಾಡಿಗೆ ಹೋಗುತ್ತಾ ಗಂಗಾತಟದಿಂದ ಕುರುಕ್ಷೇತ್ರಕ್ಕೆ ಹೋದುದು ಮತ್ತು ಶತಯೂಪನ ಆಶ್ರಮದಲ್ಲಿ ನಿವಾಸ ಮಾಡಿದುದು (ಆಶ್ರಮ 19 ಅಧ್ಯಾಯ). ನಾರದರು ಧೃತರಾಷ್ಟ್ರನಲ್ಲಿ ಹುಟ್ಟಿದ ತಪಸ್ಸಿನ ವಿಷಯಕವಾದ ಶ್ರದ್ಧೆಯನ್ನು ಹೆಚ್ಚಿಸಿದುದು ಮತ್ತು ಈತನಿಗೆ ಸಿಗುವ ಗತಿಯನ್ನು ವರ್ಣಿಸಿದುದು (ಆಶ್ರಮ 20 ಅಧ್ಯಾಯ). ಧೃತರಾಷ್ಟ್ರ ಮೊದಲಾದವರಿಗಾಗಿ ಪುರವಾಸಿಗಳ ಮತ್ತು ಪಾಂಡವರ ಚಿಂತೆ (ಆಶ್ರಮ 21 ಅಧ್ಯಾಯ). ಪಾಂಡವರು ಮತ್ತು ಪುರವಾಸಿಗಳು ಕಾಡಿಗೆ ಹೋಗಿ, ಕುಂತಿ ಮತ್ತು ಗಾಂಧಾರಿ ಸಹಿತನಾದ ಧೃತರಾಷ್ಟ್ರನ ದರ್ಶನ ಮಾಡಿದುದು (ಆಶ್ರಮ 25 ಅಧ್ಯಾಯ). ಧೃತರಾಷ್ಟ್ರ ಮತ್ತು ಯುಧಿಷ್ಠಿರನ ಮಾತುಕತೆ (ಆಶ್ರಮ 26/1–17). ಧೃತರಾಷ್ಟ್ರನ ಬಳಿಗೆ ಮಹರ್ಷಿ ವ್ಯಾಸನ ಆಗಮನ; ಈತನೊಡನೆ ಕುಶಲವಾರ್ತೆ ಕೇಳುತ್ತಾ, ಆತನಿಂದ ವಿದುರ ಮತ್ತು ಯುಧಿಷ್ಠಿರರ ಧರ್ಮಸ್ವರೂಪದ ಪ್ರತಿಪಾದನೆ ಮತ್ತು ಇವನೊಡನೆ ಅಭೀಷ್ಟ ವಸ್ತುವನ್ನು ಕೇಳಲು ಆದೇಶ ನೀಡಿದುದು (ಆಶ್ರಮ 28 ಅಧ್ಯಾಯ). ಧೃತರಾಷ್ಟ್ರನು ವ್ಯಾಸನೊಡನೆ ತನ್ನ ಮಾನಸಿಕ ಶೋಕ ಮತ್ತು ಅಶಾಂತಿಯನ್ನು ವರ್ಣಿಸಿದುದು (ಆಶ್ರಮ 29/23–24). ವ್ಯಾಸರು ಧೃತ ರಾಷ್ಟ್ರಾದಿಗಳ ಪೂರ್ವ ಜನ್ಮದ ಪರಿಚಯವನ್ನಿತ್ತದ್ದು; ಮತ್ತು ಆತನ ಆಜ್ಞೆಯಿಂದ ಇವರೆಲ್ಲರೂ ಗಂಗಾತೀರಕ್ಕೆ ಹೋದುದು (ಆಶ್ರಮ 31 ಅಧ್ಯಾಯ). ವ್ಯಾಸನ ಕೃಪೆಯಿಂದ ದಿವ್ಯದೃಷ್ಟಿ ಪಡೆದು ಧೃತರಾಷ್ಟ್ರನು ಗಂಗಾಜಲದಿಂದ ಪ್ರಕಟಗೊಂಡ ತನ್ನ ಪುತ್ರರು ಮತ್ತು ಸಮೀಪದ ಸಂಬಂಧಿಕರ ದರ್ಶನ ಮಾಡಿದುದು ಮತ್ತು ಸಂತೋಷಹೊಂದಿದುದು (ಆಶ್ರಮ 32 ಅಧ್ಯಾಯ). ವ್ಯಾಸರ ಆಜ್ಞೆಯಂತೆ ಧೃತರಾಷ್ಟ್ರಾದಿಗಳು ಪಾಂಡವರನ್ನು ಬೀಳ್ಕೊಟ್ಟದ್ದು (ಆಶ್ರಮ 36 ಅಧ್ಯಾಯ). ಕುಂತಿ, ಗಾಂಧಾರಿ ಸಹಿತ ಧೃತರಾಷ್ಟ್ರನ ತೀವ್ರ ತಪಸ್ಸು ಮತ್ತು ಗಂಗಾದ್ವಾರದ ಕಾಡಿನಲ್ಲಿ ಇವನು ದಾವಾನಲದಲ್ಲಿ ದಗ್ಧನಾದುದು (ಆಶ್ರಮ 37/10–32). ಧೃತರಾಷ್ಟ್ರಾದಿಗಳ ಎಲುಬುಗಳನ್ನು ಗಂಗಾಪ್ರವಾಹಕ್ಕೆ ಹಾಕಿದ್ದು ಮತ್ತು ಇವರ ಶ್ರಾದ್ಧಕರ್ಮ (ಆಶ್ರಮ 39 ಅಧ್ಯಾಯ). ಸ್ವರ್ಗಲೋಕಕ್ಕೆ ಹೋದ ಬಳಿಕ ಗಾಂಧಾರಿ ಸಹಿತ ಧೃತರಾಷ್ಟ್ರನು ಧನಾಧ್ಯಕ್ಷ ಕುಬೇರನ ದುರ್ಲಭಲೋಕವನ್ನು ಪ್ರಾಪ್ತಿಸಿಕೊಂಡನು (ಸ್ವರ್ಗಾ 5/14). ಮಹಾಭಾರತದಲ್ಲಿ ಬಂದಿರುವ ಧೃತರಾಷ್ಟ್ರನ ಹೆಸರುಗಳು – ಆಜಮೀಢ, ಅಂಬಿಕಾಸುತ, ಅಂಬಿಕೇಯ, ಭಾರತ, ಭರತಶಾರ್ದೂಲ, ಭರತಶ್ರೇಷ್ಠ, ಭರತರ್ಷಭ, ಭರತಸತ್ತಮ, ಕೌರವ, ಕೌರವಶ್ರೇಷ್ಠ, ಕೌರವರಾಜ, ಕೌರವೇಂದ್ರ, ಕೌರವ್ಯ, ಕುರುಶಾರ್ದೂಲ, ಕುರುಶ್ರೇಷ್ಠ, ಕುರೂದ್ವಹ, ಕುರುಕುಲಶ್ರೇಷ್ಠ, ಕುರುಕುಲೋದ್ವಹ, ಕುರುಮುಖ್ಯ, ಕುರುನಂದನ, ಕುರುಪ್ರವೀರ, ಕುರುಪುಂಗವ, ಕುರುರಾಜ, ಕುರುಸತ್ತಮ, ಕುರುವಂಶವಿವರ್ಧನ, ಕುರುವೀರ, ಕುರುವೃದ್ಧ, ಕುರುವೃದ್ಧವರ್ಯ, ವೈಚಿತ್ರ್ಯವೀರ್ಯ, ಪ್ರಜ್ಞಾಚಕ್ಷು – ಇತ್ಯಾದಿ.

(2) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ನಾಗ (ಆದಿ 35/13). ಇವನು ವರುಣ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 9/9). ನಾಗಗಳ ಮೂಲಕ ಪೃಥ್ವೀ ದೋಹನದ ಸಮಯದಲ್ಲಿ ಇವನು ಗವಳಿಗನಾಗಿ ಮಾಡಲ್ಪಟ್ಟಿದ್ದನು (ದ್ರೋಣ 69/22). ಇವನಿಗೆ ಶಿವನ ರಥದ ಈಶಾ ದಂಡದಲ್ಲಿ ಸ್ಥಾನಕೊಡಲ್ಪಟ್ಟಿತ್ತು (ಕರ್ಣ 34/28). ಬಲರಾಮನ ಶರೀರ ತ್ಯಾಗದ ಸಮಯದಲ್ಲಿ, ಆ ಭಗವಾನ್ ಅನಂತ ನಾಗನ ಸ್ವಾಗತಕ್ಕಾಗಿ ಈತ ಪ್ರಭಾಸಕ್ಷೇತ್ರದ ಸಮುದ್ರ ಬಂದಿದ್ದನು (ಮೌಸಲ 4/15).

(3) ಒಬ್ಬ ದೇವಗಂಧರ್ವ. ಇವನು ಕಶ್ಯಪಪತ್ನಿ

ಮುನಿಯ ಪುತ್ರ (ಆದಿ 65/42). ಇವನು ಅರ್ಜುನನ ಜನ್ಮ ಮಹೋತ್ಸವಕ್ಕೆ ಬಂದಿದ್ದನು (ಆದಿ 122/55). ಇವನನ್ನು ದೇವರಾಜ ಇಂದ್ರನು ತನ್ನ ದೂತನಾಗಿ ಮಾಡಿ, ಮರುತ್ತನ ಬಳಿಗೆ ಹೀಗೆ ಹೇಳಿ ಕಳುಹಿಸಿದ್ದನು – 'ರಾಜಾ! ನೀನು ಬೃಹಸ್ಪತಿಯನ್ನು ಆಚಾರ್ಯನಾಗಿ ಮಾಡಿಕೊ. (ಸಂವರ್ತನನನ್ನು ಅಲ್ಲ.) ಅದಲ್ಲ ವಾದರೆ ನಿನ್ನ ಮೇಲೆ ವಜ್ರಪ್ರಹಾರ ಮಾಡುತ್ತೇನೆ'. ಈ ಧೃತರಾಷ್ಟ್ರನು ಅಲ್ಲಿ ಹೋಗಿ ಇಂದ್ರನ ಸಂದೇಶವನ್ನು ತಿಳಿಸಿದ್ದನು (ಆಶ್ವ 10/2–8). ಗಂಧರ್ವರಾಜ ಧೃತರಾಷ್ಟ್ರನೇ ಭೂಮಿಯಲ್ಲಿ ಧೃತರಾಷ್ಟ್ರನ ರೂಪದಲ್ಲಿ ಹುಟ್ಟಿದ್ದನು (ಸ್ವರ್ಗಾ 4/15).

(4) ಭರತವಂಶದ ಮಹಾರಾಜ, ಕುರುವಿನ ಮೊಮ್ಮಗ ಮತ್ತು ಜನಮೇಜಯನ ಪ್ರಥಮ ಪುತ್ರ (ಆದಿ 94/56). ಇವನಿಗೆ ಕುಂಡಿಕನೇ ಮೊದಲಾದ ಹನ್ನೆರಡು ಪುತ್ರರಿದ್ದರು (ಆದಿ 94/58–60).

**ಧೃತರಾಷ್ಟ್ರೀ** – ತಾಮ್ರಾಳ ಪುತ್ರಿ. ಈಕೆ ಎಲ್ಲಾ ರೀತಿಯ ಹಂಸ, ಕಲಹಂಸ ಮತ್ತು ಚಕ್ರವಾಕ ಗಳಿಗೆ ಜನ್ಮಕೊಟ್ಟಿದ್ದಳು (ಉದ್ಯೋಗ 83/56, 58).

**ಧೃತವತೀ** (ಅಥವಾ ಘೃತವತೀ). – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/23, 31).

**ಧೃತವರ್ಮಾ** – ತ್ರಿಗರ್ತರಾಜ. ಸೂರ್ಯವರ್ಮಾ ಮತ್ತು ಕೇತುವರ್ಮನ ಸಹೋದರ. ಸೂರ್ಯ ವರ್ಮನು ಪರಾಜಿತನಾಗಿ, ಕೇತುವರ್ಮನು ಕೊಲ್ಲಲ್ಪಟ್ಟಾಗ, ಈತ ತಾನೇ ಮುಂದುವರಿದು, ಅಶ್ವಮೇಧದ ತುರಗ ರಕ್ಷಣೆಗೆ ಬಂದು, ಅರ್ಜುನನೊಡನೆ ಯುದ್ಧ ಮಾಡಿದ್ದನು. ಇವನಿಂದ ಅರ್ಜುನನ ಮೇಲೆ ಬಾಣಪ್ರಹಾರ, ಶರಪ್ರಯೋಗದಲ್ಲಿ ಇವನ ಕೈಚಳಕವನ್ನು ನೋಡಿ, ಅರ್ಜುನನಿಂದ ಮನಸ್ಸಿನಲ್ಲೇ ಈತನ ಪ್ರಶಂಸೆ, ಇವನ ತೇಜಸ್ವಿ ಬಾಣದಿಂದ ಅರ್ಜುನನ ಕೈಗೆ ಬಲವಾದ ಏಟು ಬಿದ್ದುದರಿಂದ ಗಾಂಡೀವ ಧನುಸ್ಸು ಬಿದ್ದು ಹೋದುದು; ಇದರಿಂದಾಗಿ ಧೃತವರ್ಮಾನು ಅಟ್ಟಹಾಸ ಮಾಡಿದುದು. ಆಗ ಕ್ರೋಧ ತುಂಬಿದ ಅರ್ಜುನನು ಬಾಣ ವರ್ಷವನ್ನು ಮಾಡಿದುದು. ಧೃತವರ್ಮಾನನ್ನು ಬದುಕಿಸುವುದಕ್ಕಾಗಿ, ತ್ರಿಗರ್ತ ಯೋಧರು ಅರ್ಜುನನ ಮೇಲೆ ಆಕ್ರಮಣ ಮಾಡಿದುದು. ಅರ್ಜುನನಿಂದ ಹದಿನೆಂಟು ಮಂದಿ ತ್ರೈಗರ್ತ ವೀರರು ಕೊಲ್ಲಲ್ಪಟ್ಟಾಗ, ಧೃತವರ್ಮನೇ ಮೊದಲಾದ ಎಲ್ಲಾ ತ್ರಿಗರ್ತರು ದಾಸರಾಗಿ ಅರ್ಜುನನಿಗೆ ಶರಣಾದುದು (ಆಶ್ವ 74/16–33).

**ಧೃತಸೇನ** – ಕೌರವ ಪಕ್ಷದ ಒಬ್ಬ ರಾಜ (ಶಲ್ಯ 6/3).

**ಧೃತಿ** – (1) ದಕ್ಷ ಪ್ರಜಾಪತಿಯ ಒಬ್ಬ ಪುತ್ರಿ. ಇವಳು ಧರ್ಮನ ಪತ್ನಿ (ಆದಿ 66/14). ನಕುಲ ಮತ್ತು ಸಹದೇವನ ತಾಯಿಯಾದ ಮಾದ್ರಿ ಈಕೆಯ ಅವತಾರವೆಂದು ಹೇಳಲಾಗಿದೆ (ಆದಿ 67/160).

(2) ಒಬ್ಬ ಸನಾತನ ವಿಶ್ವೇದೇವ (ಅನು 91/30).

**ಧೃತಿಮಾನ್** (ಧೃತಿಮಂತ) – ಕುಶದ್ವೀಪದ ಐದನೆಯ ವರ್ಷ (ಖಂಡ) (ಭೀಷ್ಮ 12/13).

**ಧೃತಿಮಾನ್** (ಅಂಗಿರಸ್) – ಒಬ್ಬ ಅಗ್ನಿ. ಇವನಿಗೆ ದರ್ಶ ಮತ್ತು ಪೌರ್ಣಮಾಸ ಯಾಗಗಳಲ್ಲಿ ಹವಿಸ್ಸನ್ನು ಸಮರ್ಪಿಸುವ ವಿಧಾನ ಕಂಡುಬರುತ್ತದೆ. ಆ ಅಗ್ನಿದೇವನ ಹೆಸರು ವಿಷ್ಣು ವೆಂದಾಗಿದೆ. ಈತ ಅಂಗೀರಸ್ ಗೋತ್ರದವ ನೆಂದು ತಿಳಿಯಲಾಗಿದೆ ಮತ್ತು ಭಾನುವಿನ ಮೂರನೇ ಪುತ್ರನಾಗಿದ್ದಾನೆ (ವನ 221/12).

**ಧೃಷ್ಟಕೇತು** – ಚೇದಿರಾಜ ಶಿಶುಪಾಲನ ಪುತ್ರ. ಇವನು ಹಿರಣ್ಯಕಶಿಪುವಿನ ಪುತ್ರ ಅನುಹ್ಲಾದನ ಅಂಶದಿಂದ ಹುಟ್ಟಿದ್ದನು (ಆದಿ 67/7). ಶಿಶುಪಾಲನು ಕೊಲ್ಲಲ್ಪಟ್ಟಾಗ, ಅವನ ಪುತ್ರ ಧೃಷ್ಟ ಕೇತು ಚೇದಿದೇಶದ ರಾಜ ಸಿಂಹಾಸನದಲ್ಲಿ ಅಭಿ ಷೀಕ್ತನಾಗಿ ಮಾಡಲ್ಪಟ್ಟನು (ಸಭಾ 45/36). ಇವನು ಕಾಡಿನಲ್ಲಿ ಪಾಂಡವರ ಭೇಟಿಗೆ ಹೋದುದು (ವನ 12/2). ಇವನು ತನ್ನ ಸೋದರಿ ಕರೇಣುಮತಿಯನ್ನು ಕರಕೊಂಡು ತನ್ನ ನಗರಕ್ಕೆ ಹೋದುದು (ವನ 22/50). ಇವನು ಪುನಃ ಕಾಡಿನಲ್ಲಿ ಪಾಂಡವರ ಭೇಟಿ ಮಾಡಿ ದುದು (ವನ 51/17). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕೊಡಲ್ಪಟ್ಟಿತು (ಉದ್ಯೋಗ 4/8; ಉದ್ಯೋಗ 4/20). ಇವನು

ಒಂದು ಅಕ್ಷೌಹಿಣಿ ಸೇನೆಯೊಂದಿಗೆ ಪಾಂಡವರ ಬಳಿಗೆ ಬಂದನು (ಉದ್ಯೋಗ 19/7). ಸಂಜಯನಿಂದ ಇವನ ಪರಾಕ್ರಮದ ವರ್ಣನೆ (ಉದ್ಯೋಗ 50/44). ಯುಧಿಷ್ಠಿರನ ಸೇನೆಯ ಏಳು ಸೇನಾಪತಿಗಳಲ್ಲಿ ಒಂದು ಸ್ಥಾನಕ್ಕೆ ಇವನೂ ಅಭಿಷಿಕ್ತನಾಗಿದ್ದನು (ಉದ್ಯೋಗ 157/11–13). ಪ್ರಥಮ ದಿನದ ಯುದ್ಧದಲ್ಲಿ ಬಾಹ್ಲೀಕನೊಂದಿಗೆ ಇವನ ಯುದ್ಧ (ಭೀಷ್ಮ 45/38–41). ಭೂರಿಶ್ರವನೊಂದಿಗೆ ಇವನ ಯುದ್ಧ ಮತ್ತು ಪರಾಜಯ (ಭೀಷ್ಮ 84/39). ಪೌರವನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ116/13–24). ಧೃತರಾಷ್ಟ್ರನಿಂದ ಇವನ ಶೌರ್ಯದ ವರ್ಣನೆ (ದ್ರೋಣ 10/43). ಕೃಪಾಚಾರ್ಯನೊಂದಿಗೆ ಯುದ್ಧ (ದ್ರೋಣ 14/33–34). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/23–24). ಅಂಬಷ್ಠನೊಂದಿಗೆ ಯುದ್ಧ (ದ್ರೋಣ 25/49–50). ವೀರಧನ್ವಾನೊಂದಿಗೆ ಇವನ ಯುದ್ಧ (ದ್ರೋಣ 106/10). ಇವನಿಂದ ವೀರಧನ್ವಾನ ವಧೆ (ದ್ರೋಣ 107/17). ದ್ರೋಣಾಚಾರ್ಯನೊಂದಿಗೆ ಇವನ ಯುದ್ಧ; ಆತನಿಂದ ಪುತ್ರಸಹಿತ ಈತನ ವಧೆ (ದ್ರೋಣ 125/23–41). ವ್ಯಾಸರು ಆವಾಹನೆ ಮಾಡಿದಾಗ ಪರಲೋಕವಾಸಿಗಳಾದ ಕೌರವ ಪಾಂಡವವೀರರ ಜೊತೆಯಲ್ಲಿ ಇವನೂ ಗಂಗಾಜಲದಿಂದ ಪ್ರಕಟವಾಗಿದ್ದನು (ಆಶ್ರಮ 32/11). ಸ್ವರ್ಗಕ್ಕೆ ಹೋಗಿ ಇವನು ವಿಶ್ವೇದೇವರಲ್ಲಿ ಸೇರಿಹೋದನು (ಸ್ವರ್ಗಾ 5/15–18). ಮಹಾಭಾರತದಲ್ಲಿ ಬಂದಿರುವ ಧೃಷ್ಟಕೇತುವಿನ ಹೆಸರುಗಳು – ಚೈದ್ಯ, ಚೇದಿಜ, ಚೇದಿಪ, ಚೇದಿಪತಿ, ಚೇದಿಪುಂಗವ, ಚೇದಿರಾಟ್, ಚೇದಿರಾಜ, ಶೈಶುಪಾಲಿ, ಶಿಶುಪಾಲಸುತ, ಶಿಶುಪಾಲಾತ್ಮಜ ಇತ್ಯಾದಿ

**ಧೃಷ್ಟದ್ಯುಮ್ನ** – ಪಾಂಚಾಲ ರಾಜ. ದ್ರುಪದನ ಅಗ್ನಿ ತುಲ್ಯ ತೇಜಸ್ವೀ ಪುತ್ರ. ಯಜ್ಞಕಾರ್ಯವು ಅನುಷ್ಠಾನದಲ್ಲಿದ್ದಾಗ, ಪ್ರಜ್ವಲಿತ ಅಗ್ನಿಯಿಂದ ಧೃಷ್ಟದ್ಯುಮ್ನನ ಪ್ರಾದುರ್ಭಾವವಾಯಿತು. ಇವನು ದ್ರೋಣಾಚಾರ್ಯರ ವಿನಾಶಕ್ಕಾಗಿ ಧನುಸ್ಸನ್ನು ಹಿಡಕೊಂಡು ಪ್ರಕಟವಾಗಿದ್ದನು. ಅನಂತರ ಅದೇ ವೇದಿಯಿಂದ ದ್ರೌಪದಿ ಪ್ರಕಟಗೊಂಡಳು. ಆದುದರಿಂದ ಇವನನ್ನು ಆಕೆಯ 'ಅಗ್ರಜ ಬಂಧು'ವೆಂದು ಹೇಳಲಾಗಿದೆ (ಆದಿ 63/108–110). ಇವನು ಅಗ್ನಿಯ ಅಂಶದಿಂದ ಹುಟ್ಟಿದ್ದನು (ಆದಿ 67/126). ಯಾಜನು ಯಜ್ಞದ ಹವಿಸ್ಸನ್ನು ಸ್ವೀಕರಿಸಲು ದ್ರುಪದನ ರಾಣಿಯನ್ನು ಕರೆಸಿದನು. ಮಹಾರಾಣಿಯು ಶುದ್ಧಮಾಡಿಕೊಂಡು ಬರುವ ಇಚ್ಛೆಯನ್ನು ಪ್ರಕಟಿಸಿದಳು ಮತ್ತು ಸ್ವಲ್ಪ ಹೊತ್ತು ಕಾಯುವಂತೆ ಮಹರ್ಷಿಗೆ ಹೇಳಿದಳು. ಆದರೆ ಯಾಜನು, "ರಾಣೀ! ಈ ಹವಿಸ್ಸನ್ನು ಯಾಜನು ಸಿದ್ಧಪಡಿಸಿದನು; ಉಪಯಾಜನು ಇದರ ಸಂಸ್ಕಾರಮಾಡಿದನು. ಹೀಗಿರುವಾಗ ಇದರಿಂದಾಗಿ ಸಂತಾನದ ಉತ್ಪತ್ತಿರೂಪದ ಅಭೀಷ್ಟ ಸಿದ್ಧಿಸದೆ ಇರುವುದಾದರೂ ಹೇಗೆ? ನೀನು ಇದನ್ನು ತೆಗೆದುಕೊಳ್ಳಲು ಬಾ; ಇಲ್ಲವೇ ಬಾರದಿರು" ಎಂದನು. ಇಷ್ಟು ಹೇಳಿ ಯಾಜನು ಆ ಸಂಸ್ಕಾರಯುಕ್ತ ಹವಿಸ್ಸನ್ನು ಅಗ್ನಿಗೆ ಆಹುತಿ ಕೊಟ್ಟ ಕೂಡಲೇ ಆ ಪ್ರಜ್ವಲಿತ ಅಗ್ನಿಯಿಂದ ಈ ಒಬ್ಬ ತೇಜಸ್ವಿ, ಕುಮಾರರೂಪದಿಂದ ಪ್ರಕಟಗೊಂಡನು (ಆದಿ 166/36–39). ಇವನ ಅಂಗಗಳ ಕಾಂತಿ ಅಗ್ನಿಯ ಜ್ವಾಲೆಗಳಿಗೆ ಸರಿಯಾಗಿ ಬೆಳಗುತ್ತಿತ್ತು. ಇವನ ತಲೆಯ ಮೇಲೆ ಕಿರೀಟ, ಅಂಗಗಳಲ್ಲಿ ಉತ್ತಮ ಕವಚ, ಕೈಯಲ್ಲಿ ಖಡ್ಗ, ಬಾಣ, ಧನುಸ್ಸುಗಳು ಶೋಭಾಯಮಾನವಾಗಿದ್ದವು. ಇವನು ಗರ್ಜಿಸುತ್ತಾ ಒಂದು ಶ್ರೇಷ್ಠ ರಥದ ಮೇಲೆ ಹತ್ತಿದ ಕ್ರಮದಿಂದ ಯುದ್ಧದ ಯಾತ್ರೆಗೆ ಹೋಗುತ್ತಿದ್ದಾನೋ ಎಂಬಂತೆ ಭಾಸವಾಗುತ್ತಿತ್ತು. ಇದರಿಂದ ಪಾಂಚಾಲರಿಗೆ ತುಂಬಾ ಸಂತೋಷವಾಯಿತು. ಅವರು 'ಸಾಧು ಸಾಧು' ಎಂದು ಹೇಳುತ್ತಾ ಇವನಿಗೆ ಉತ್ತೇಜನ ಕೊಡತೊಡಗಿದರು (ಆದಿ 166/40–41). ಇವನ ಜನ್ಮಕಾಲದಲ್ಲಿ ಆಕಾಶವಾಣಿಯಾಗಿತ್ತು 'ಈ ಕುಮಾರನು ಪಾಂಚಾಲರ ಭಯವನ್ನು ದೂರ ಮಾಡುತ್ತಾನೆ. ದ್ರೋಣವಧೆಗಾಗಿ ಇವನ ಪ್ರಾಕಟ್ಯವಾಗಿದೆ (ಆದಿ 166/42–43). ಇವನಿಗೆ ಧೃಷ್ಟದ್ಯುಮ್ನನೆಂದು ಹೆಸರಾಗಲು ಕಾರಣ (ಆದಿ 166/52). ದ್ರೋಣಾಚಾರ್ಯನಿಂದ ಇವನಿಗೆ ಶಿಕ್ಷಣ (ಆದಿ 166/55). ದ್ರೌಪದಿಯ ಸ್ವಯಂವರದಲ್ಲಿ ಇವನ ಘೋಷಣೆ (ಆದಿ 184/35–36). ಇವನು ದ್ರೌಪದಿಗೆ ಸ್ವಯಂವರಕ್ಕೆ ಬಂದಿದ್ದ ರಾಜರ ಪರಿಚಯ ಮಾಡಿದುದು (ಆದಿ 185

ಅಧ್ಯಾಯ). ಇವನು ಗುಟ್ಟಾಗಿ ಪಾಂಡವರ ವ್ಯವಹಾರಗಳನ್ನು ಗಮನಿಸುತ್ತಿದ್ದುದು (ಆದಿ 191/1–12). ದ್ರೌಪದಿಯ ಸಂಬಂಧವಾಗಿ ಚಿಂತಿಸುತ್ತಿದ್ದ ದ್ರುಪದನಿಗೆ ಇವನ ಆಶ್ವಾಸನೆ (ಆದಿ 192/12). ವ್ಯಾಸರು ಕೇಳಿದಾಗ ದ್ರೌಪದಿಯ ವಿವಾಹ ಸಂಬಂಧದಲ್ಲಿ ಇವನ ಸಮ್ಮತಿ (ಆದಿ 195/10). ಯುಧಿಷ್ಠಿರನಲ್ಲಿಂದ ವಿರಾಟರಾಜನು ವಿದಾಯ ಹೊಂದಿದಾಗ, ಅವನನ್ನು ತಲುಪಿಸಲು ಧೃಷ್ಟದ್ಯುಮ್ನನು ಹೋಗಿದ್ದನು (ಸಭಾ 45/47). ದುರ್ಯೋಧನನಿಂದ ಇವನ ಸ್ಥೈರ್ಯದ ವರ್ಣನೆ (ಸಭಾ 53/19). ಇವನಿಂದ ಅಳುತ್ತಿರುವ ದ್ರೌಪದಿಗೆ ಧೈರ್ಯದ ಆಶ್ವಾಸನೆ (ವನ 12/134–135). ಇವನು ದ್ರೌಪದಿ ಕುಮಾರರನ್ನು ಕರಕೊಂಡು ರಾಜಧಾನಿಗೆ ಹೋದುದು (ವನ 22/49). ಇವನು ಕಾಮ್ಯಕ ವನಕ್ಕೆಹೋಗಿ ಪಾಂಡವರ ಭೇಟಿ ಮಾಡಿದುದು (ವನ 51/17). ಉಪಪ್ಲವ್ಯ ನಗರದಲ್ಲಿ ಅಭಿಮನ್ಯುವಿನ ವಿವಾಹಕ್ಕೆ ಇವನ ಆಗಮನ (ವಿರಾಟ 72/18). ಸಂಜಯನಿಂದ ಇವನ ಪರಾಕ್ರಮದ ವರ್ಣನೆ (ಉದ್ಯೋಗ 50/16). ಇವನು ಪಾಂಡವಸೇನೆಯ ಪ್ರಧಾನ ಸೇನಾಪತಿಯಾಗಿ ಆರಿಸಲ್ಪಟ್ಟಿದ್ದನು (ಉದ್ಯೋಗ 157/13). ಇವನು ಉಲೂಕನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರವನ್ನಿತ್ತದ್ದು (ಉದ್ಯೋಗ 163/45–47). ಸಮಾನ ಪ್ರತಿದ್ವಂದ್ವಿಗಳೊಡನೆ ಯುದ್ಧಮಾಡುವಂತೆ ಈತನಿಂದ ತನ್ನ ಪಕ್ಷದ ಮಹಾರಥಿಗಳಿಗೆ ಆದೇಶ ಮತ್ತು ಅವರ ಹೆಸರನ್ನು ನಿರ್ಧರಿಸಿದುದು (ಉದ್ಯೋಗ 164/5–10). ಪ್ರಥಮ ದಿನದ ಯುದ್ಧದಲ್ಲಿ ದ್ರೋಣಾಚಾರ್ಯನೊಂದಿಗೆ ಇವನ ದ್ವಂದ್ವ ಯುದ್ಧ (ಭೀಷ್ಮ 45/31–34). ಭೀಷ್ಮನೊಂದಿಗೆ ಯುದ್ಧ (ಭೀಷ್ಮ47/31). ಎರಡನೆಯ ದಿನದ ಯುದ್ಧಕ್ಕಾಗಿ ಇವನಿಂದ ಕ್ರೌಂಚಾರುಣವ್ಯೂಹದ ನಿರ್ಮಾಣ (ಭೀಷ್ಮ 50/42–57). ದ್ರೋಣಾಚಾರ್ಯನೊಂದಿಗೆ ಘೋರಯುದ್ಧ (ಭೀಷ್ಮ 53 ಅಧ್ಯಾಯ). ಕಳಿಂಗರೊಂದಿಗೆ ಯುದ್ಧಮಾಡುತ್ತಿರುವಾಗ ಭೀಮಸೇನನ ರಕ್ಷಣೆಗೆ ಹೋದುದು (ಭೀಷ್ಮ 54/99). ಅಶ್ವತ್ಥಾಮನೊಂದಿಗೆ ಯುದ್ಧ (ಭೀಷ್ಮ 61/19). ಪೌರವ ಪುತ್ರ ದಮನನ ವಧೆ (ಭೀಷ್ಮ 61/20). ಶಲ್ಯನ ಪುತ್ರನವಧೆ (ಭೀಷ್ಮ 61/29). ಶಲ್ಯನೊಂದಿಗೆ ಯುದ್ಧ ಮತ್ತು ಗಾಯಗೊಂಡದ್ದು (ಭೀಷ್ಮ 62/8–12). ಇವನಿಂದ ಮಕರವ್ಯೂಹದ ನಿರ್ಮಾಣ (ಭೀಷ್ಮ 75/4–12). ಪ್ರಮೋಹನಾಸ್ತ್ರದ ಮೂಲಕ ಧೃತರಾಷ್ಟ್ರಪುತ್ರರ ಮೇಲೆ ಇವನ ವಿಜಯ (ಭೀಷ್ಮ 77/45). ದ್ರೋಣಾಚಾರ್ಯನಿಂದ ಪರಾಜಿತನಾದುದು (ಭೀಷ್ಮ 77/69–70). ಇವನಿಂದ ದುರ್ಯೋಧನನ ಪರಾಜಯ (ಭೀಷ್ಮ 82/53). ವಿಂದಅನುವಿಂದರೊಡನೆ ಯುದ್ಧ (ಭೀಷ್ಮ 86/64–65). ಕೃತವರ್ಮನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 110/9–10). (ಭೀಷ್ಮ 111/40–44). ಭೀಷ್ಮವಧೆಗಾಗಿ ತನ್ನ ಸೇನೆಗೆ ಪ್ರೋತ್ಸಾಹ (ಭೀಷ್ಮ110/20–23). ಭೀಷ್ಮನೊಂದಿಗೆ ಯುದ್ಧ (ಭೀಷ್ಮ 114/39). ದ್ರೋಣಾಚಾರ್ಯನೊಂದಿಗೆ ದ್ವಂದ್ವಯುದ್ಧ (ಭೀಷ್ಮ 116/45–54). (ದ್ರೋಣ 7/48–54). ಧೃತರಾಷ್ಟ್ರನಿಂದ ಇವನ ಶೌರ್ಯದ ವರ್ಣನೆ (ದ್ರೋಣ 10/40–42, 60–62). ಸುಶರ್ಮನೊಂದಿಗೆ ಯುದ್ಧ (ದ್ರೋಣ 14/37–39). ದ್ರೋಣಾಚಾರ್ಯನಿಂದ ಭೀತನಾದ ಧರ್ಮರಾಯನಿಗೆ ಧೈರ್ಯದ ಆಶ್ವಾಸನೆ (ದ್ರೋಣ 20/22–23). ದುರ್ಮುಖನೊಂದಿಗೆ ಯುದ್ಧ (ದ್ರೋಣ 20/26–29). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/4). ದ್ರೋಣನ ಮೇಲೆ ಆಕ್ರಮಣ (ದ್ರೋಣ 31/17). ಇವನಿಂದ ಚಂದ್ರವರ್ಮ ಮತ್ತು ನಿಷಧರಾಜ ಬೃಹತ್ಕ್ಷತ್ರನ ವಧೆ (ದ್ರೋಣ 32/65–66). ದ್ರೋಣಾಚಾರ್ಯನೊಂದಿಗೆ ಘೋರಯುದ್ಧ (ದ್ರೋಣ 95 ಮತ್ತು 97 ಅಧ್ಯಾಯ). ದ್ರೋಣಾಚಾರ್ಯನನ್ನು ಮೂರ್ಛೆಗೊಳಿಸಿ, ಅವನ ರಥದ ಮೇಲೇರಿದುದು (ದ್ರೋಣ 122/56–58). ದ್ರೋಣಾಚಾರ್ಯನಿಂದ ಪರಾಜಯ (ದ್ರೋಣ 122/71–72). ಭೀಮಸೇನನು ಹೇಳಿದ ಪ್ರಕಾರ ಯುಧಿಷ್ಠಿರನ ರಕ್ಷಣೆಯ ಭಾರವನ್ನು ವಹಿಸಿದುದು (ದ್ರೋಣ 127/10–11). ಅಶ್ವತ್ಥಾಮನಿಂದ ಯುದ್ಧದಲ್ಲಿ ಪರಾಜಯಹೊಂದಿದುದು (ದ್ರೋಣ 160/41–53). ದ್ರೋಣಾಚಾರ್ಯನೊಂದಿಗೆ ಯುದ್ಧ (ದ್ರೋಣ 170/2–12). ಇವನಿಂದ ದ್ರುಮಸೇನನ ವಧೆ (ದ್ರೋಣ 170/22). ಕೌರವ ಸೇನೆಯ ಪರಾಜಯ (ದ್ರೋಣ 171/49–52).

ಕರ್ಣನಿಂದ ಪರಾಜಿತನಾದುದು (ದ್ರೋಣ 173/7). ದ್ರೋಣಾಚಾರ್ಯನ ವಧೆಗೆ ಪ್ರತಿಜ್ಞೆ (ದ್ರೋಣ 186/46). ದುಃಶಾಸನನನ್ನು ಸೋಲಿಸಿ ದ್ರೋಣಾಚಾರ್ಯನ ಮೇಲೆ ಆಕ್ರಮಣ (ದ್ರೋಣ 189/1–6). ದ್ರೋಣಾಚಾರ್ಯನೊಂದಿಗೆ ಭಯಂಕರ ಸಂಗ್ರಾಮ (ದ್ರೋಣ ಅಧ್ಯಾಯ 191 ರಿಂದ 192/26–35). ಇವನಿಂದ ದ್ರೋಣಾ ಚಾರ್ಯನ ತಲೆ ಕಡಿಯಲ್ಪಟ್ಟದ್ದು (ದ್ರೋಣ 192/62–63). ಇವನು ಅರ್ಜುನನ ಸಮಕ್ಷಮ ದಲ್ಲಿ ದ್ರೋಣವಧೆಯ ತನ್ನ ಕೃತ್ಯವನ್ನು ಸಮ ರ್ಥನೆ ಮಾಡಿದುದು (ದ್ರೋಣ 197/24–44). ಸಾತ್ಯಕಿಯ ಕಟುವಚನಗಳಿಗೆ ಉತ್ತರ ನೀಡಿದುದು (ದ್ರೋಣ 198/25–45). ಅಶ್ವತ್ಥಾಮನಿಂದ ಪರಾಜಯ (ದ್ರೋಣ 200/43). ಇವನಿಂದ ಗಜಸೇನೆಯ ಸಂಹಾರ (ಕರ್ಣ 22/2–7). ಕೃಪಾಚಾರ್ಯನಿಂದ ಭಯಭೀತನಾದುದು (ಕರ್ಣ 26/16–18). ಕೃತವರ್ಮನನ್ನು ಮೂರ್ಛೆ ಗೊಳಿಸಿದುದು (ಕರ್ಣ 54/40). ದುರ್ಯೋ ಧನನನ್ನು ಯುದ್ಧದಲ್ಲಿ ಪರಾಜಯಗೊಳಿಸಿದುದು (ಕರ್ಣ 56/34–35). ಕರ್ಣನೊಂದಿಗೆ ಯುದ್ಧ (ಕರ್ಣ 59/39–53). ದುಃಶಾಸನನ ಸ್ವಾಧೀನಕ್ಕೆ ಸಿಕ್ಕಿದುದು (ಕರ್ಣ 61/33). ಕೃಪಾಚಾರ್ಯ ನೊಂದಿಗೆ ಯುದ್ಧ (ಶಲ್ಯ 11/38). ಇವನಿಂದ ಶಾಲ್ವನ ಆನೆಯ ವಧೆ (ಶಲ್ಯ 20/25). ಇವನಿಂದ ದುರ್ಯೋಧನನ ಪರಾಜಯ (ಶಲ್ಯ 25/23). ಅಶ್ವತ್ಥಾಮನಿಂದ ರಾತ್ರಿ ಕಾಲದಲ್ಲಿ ಇವನ ವಧೆ (ಸೌಪ್ತಿಕ 8/26). ಇವನ ದಾಹ ಸಂಸ್ಕಾರ (ಸ್ತ್ರೀ 26/34). ಇವನ ಶ್ರಾದ್ಧಕರ್ಮ (ಶಾಂತಿ 42/4–5). ಸ್ವರ್ಗಕ್ಕೆ ಹೋಗಿ ಇವನು ಅಗ್ನಿಯ ಸ್ವರೂಪಕ್ಕೆ ಸೇರಿದನು (ಸ್ವರ್ಗಾ 5/21). ಮಹಾಭಾರತದಲ್ಲಿ ಬಂದಿರುವ ಧೃಷ್ಟದ್ಯುಮ್ನನ ಹೆಸರುಗಳು – ದ್ರೌಪದಿ, ದ್ರೋಣಹಂತಾ, ಪಾಂಚಾಲ, ಪಾಂಚಾಲದಯಾದ, ಪಾಂಚಾಲ ಕುಲವರ್ಧನ, ಪಾಂಚಾಲಮುಖ್ಯ, ಪಾಂಚಾಲ ಪುತ್ರ, ಪಾಂಚಾಲರಾಟ, ಪಾಂಚಾಲರಾಜ, ಪಾಂಚಾಲತನಯ, ಪಾಂಚಾಲ್ಯ, ಪಾಂಚಾಲ್ಯ ಪುತ್ರ, ಪಾರ್ಷತ, ಯಜ್ಞಸೇನಸುತ, ಯಾಜ್ಞಸೇನಿ, ಇತ್ಯಾದಿ.

**ಧೃಷ್ಣು** – (1) ವೈವಸ್ವತ ಮನುವಿನ ದ್ವಿತೀಯ ಪುತ್ರ (ಆದಿ 75/15).

(2) ಒಬ್ಬ ಪ್ರಜಾಪತಿ. ಇವನು ಕವಿಯ ಪುತ್ರ. ಇವನು ಶುಭಲಕ್ಷಣನೆಂದೂ ಬ್ರಹ್ಮಜ್ಞಾನಿಯೆಂದೂ ತಿಳಿಯಲ್ಪಟ್ಟಿದ್ದಾನೆ (ಅನು 85/133).

**ಧೇನುಕ** – (1) ಒಬ್ಬ ಭಯಂಕರ ದೈತ್ಯ. ಇವನು ತಾಲವನದಲ್ಲಿ ವಾಸಿಸುತ್ತಿದ್ದನು ಇವನು ಕತ್ತೆಯ ರೂಪಧಾರಣಮಾಡಿದ್ದನು ಇವನನ್ನು ಬಲರಾಮನು ಹೊಡೆದುರುಳಿಸಿದ್ದನು (ಸಭಾ 38/29).

(2) ಒಂದು ಭಾರತೀಯ ಜನಪದ (ಭೀಷ್ಮ 50/51).

**ಧೇನುಕಾಶ್ರಮ** – ಒಂದು ತೀರ್ಥ. ಇಲ್ಲಿ ಮೃತ್ಯು ತಪಸ್ಸು ಮಾಡಿದ್ದಳು (ದ್ರೋಣ 54/8; ಶಾಂತಿ 258/15).

**ಧೇನುತೀರ್ಥ** – ಒಂದು ತ್ರಿಭುವನ ವಿಖ್ಯಾತ ತೀರ್ಥ; ಇಲ್ಲಿ ತಿಲಮಯವಾದ ಧೇನುವನ್ನು ದಾನಮಾಡುವುದರಿಂದ ಎಲ್ಲಾ ಪಾಪಗಳ ಬಿಡುಗಡೆಯಾಗುತ್ತದೆ ಮತ್ತು ಸೋಮಲೋಕ ಪ್ರಾಪ್ತವಾಗುತ್ತದೆ (ವನ 84/87).

**ಧೌತಮೂಲಕ** – ಚೀನರ ಕುಲದಲ್ಲಿ ಹುಟ್ಟಿದ ಒಬ್ಬ ಕುಲಕಳಂಕ ರಾಜ (ಉದ್ಯೋಗ 74/14).

**ಧೌಮ್ಯ** – (1) ಉತ್ಕೋಚಕ ತೀರ್ಥದಲ್ಲಿ ತಪಸ್ಸು ಮಾಡುವ ಒಬ್ಬ ಮಹರ್ಷಿ. ದೇವಲ ಋಷಿಯ ಅನುಜ, ಪಾಂಡವರ ಪುರೋಹಿತ (ಆದಿ 182/2). ಪಾಂಡವರು ಇವನನ್ನು ಪುರೋಹಿತ ನಾಗಿ ವರಣ ಮಾಡಿದುದು (ಆದಿ 182/6). ಇವನು ವೇದಿಯಲ್ಲಿ ಪ್ರಜ್ವಲಿತ ಅಗ್ನಿಯ ಸ್ಥಾಪನೆ ಮಾಡಿ, ಅದರಲ್ಲಿ ಮಂತ್ರಪೂರ್ವಕ ಆಹುತಿಯನ್ನಿ ತ್ತನು. ಯುಧಿಷ್ಠಿರನನ್ನು ಕರೆದು, ಕೃಷ್ಣೆಯೊಂದಿಗೆ ಅವನ ಪಾಣಿಗ್ರಹಣ ಮಾಡಿಸಿದನು. ಅಗ್ನಿಯ ಪರಿಶ್ರಮವನ್ನೂ, ಇತರ ಶಾಸ್ತ್ರೋಕ್ತ ವಿಧಿಗಳನ್ನೂ ಪೂರೈಸಿ, ವಿವಾಹಕಾರ್ಯವನ್ನು ಸಂಪನ್ನ ಗೊಳಿಸಿದನು. ಇದೇ ರೀತಿ ಕ್ರಮವಾಗಿ ಎಲ್ಲಾ ಪಾಂಡವರ ವಿವಾಹವನ್ನು ದ್ರುಪದ ಕುಮಾರಿ ಕೃಷ್ಣೆಯೊಂದಿಗೆ ಪೂರೈಸಿದನು (ಆದಿ 97/11–14). ಇವನು ಪಾಂಡವರ ಪುತ್ರರ ಉಪನಯನಾ ದಿಗಳನ್ನು ಮಾಡಿಸಿದ್ದನು (ಆದಿ 220/87). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಇವನು ಹೋತೃವಾಗಿದ್ದನು (ಸಭಾ 33/35). ಇವನು

ಯುಧಿಷ್ಠಿರನ ಅಭಿಷೇಕ ಮಾಡಿದನು (ಸಭಾ 53/10). ಪಾಂಡವರ ವನಗಮನ ಸಮಯದಲ್ಲಿ ಮಹರ್ಷಿಧೌಮ್ಯ ಕೈಯಲ್ಲಿ ದರ್ಭೆ ಹಿಡಕೊಂಡು ಅವರ ಮುಂದೆ ಮುಂದೆ ಹೋಗುತ್ತಾ, ಮಾರ್ಗ ದಲ್ಲಿ ಯಮಸಾಮ ಮತ್ತು ರುದ್ರಸಾಮವನ್ನು ಹಾಡುತ್ತಿದ್ದನು (ಸಭಾ 80/8). ಇವನಿಂದ ಸೂರ್ಯೋಪಾಸನೆಗೋಸ್ಕರ ಯುಧಿಷ್ಠಿರನಿಗೆ ಪ್ರೇರಣೆ (ವನ 3/5–12). ಇವನಿಂದ ಸೂರ್ಯನ ಅಷ್ಟೋತ್ತರ ಶತನಾಮಗಳ ವರ್ಣನೆ (ವನ 3/16–18). ಕಿರ್ಮೀರನ ಮಾಯೆಯ ನಾಶ (ವನ 11/20). ಇವನಿಂದ ಯುಧಿಷ್ಠಿರನಿಗೆ ಬ್ರಹ್ಮ, ವಿಷ್ಣು ಮೊದಲಾದವರ ಸ್ಥಾನ ಮತ್ತು ಸೂರ್ಯಚಂದ್ರರ ಗತಿಯ ವರ್ಣನೆ (ವನ 163). ದ್ರೌಪದಿಯ ಅಪಹರಣ ಮಾಡಿದಾಗ ಜಯದ್ರಥನನ್ನು ನಿಂದಿಸಿದುದು ಮತ್ತು ದ್ರೌಪದಿಯ ರಕ್ಷಣೆ ಮಾಡಲು ಪ್ರಯತ್ನಿಸಿದುದು (ವನ 268/26–27). ಅಜ್ಞಾತವಾಸದ ಬಗ್ಗೆ ಚಿಂತಿತನಾದ ಯುಧಿಷ್ಠಿರನನ್ನು ಸಮಾಧಾನ ಗೊಳಿಸಿದುದು (ವನ 315/11–21). ಪಾಂಡವ ರಿಗೆ ರಾಜನಲ್ಲಿ ವಾಸಿಸುವ ರೀತಿಯನ್ನು ಹೇಳಿ ದುದು (ವಿರಾಟ 4/7–51). ಅಜ್ಞಾತವಾಸಕ್ಕಾಗಿ ಯಾತ್ರೆ ಮಾಡುವಾಗ, ಪಾಂಡವರ ಅಗ್ನಿಹೋತ್ರಕ್ಕೆ ಸಂಬಂಧಿಸಿದ ಅಗ್ನಿಯನ್ನು ಪ್ರಜ್ವಲಗೊಳಿಸಿ, ಧೌಮ್ಯನು ಅವರ ಸಮೃದ್ಧಿವೃದ್ಧಿ, ರಾಜ್ಯಲಾಭ ಮತ್ತು ಭೂಲೋಕ ವಿಜಯಕ್ಕೋಸ್ಕರ ವೇದ ಮಂತ್ರ ಹೇಳಿ, ಹವನಮಾಡಿದನು ಪಾಂಡವರು ಹೊರಟುಹೋದಾಗ, ಜಪಯಜ್ಞ ಮಾಡುವವರಲ್ಲಿ ಶ್ರೇಷ್ಠನಾದ ಧೌಮ್ಯನು, ಆ ಅಗ್ನಿಹೋತ್ರಕ್ಕೆ ಸಂಬಂಧಿಸಿದ ಅಗ್ನಿಯನ್ನು ತೆಗೆದುಕೊಂಡು ಪಾಂಚಾಲದೇಶಕ್ಕೆ ಹೋದನು (ವಿರಾಟ 4/54–57). ಇವನು ಯುದ್ಧದಲ್ಲಿ ಕೊಲ್ಲಲ್ಪಟ್ಟ ಸಮೀಪ ಸಂಬಂಧಿಕರ ದಾಹ ಕರ್ಮ ಮಾಡಿಸಿದ್ದನು (ಸ್ತ್ರೀ 26/24–30). ಯುಧಿಷ್ಠಿರನಿಂದ ಧಾರ್ಮಿಕ ಕಾರ್ಯಗಳಿಗೆ ನೇಮಕ (ಶಾಂತಿ 41/14). ಇವನಿಂದ ಧರ್ಮರಹಸ್ಯದ ವರ್ಣನೆ (ಅನು 127/15–16).

(2) ಒಬ್ಬ ಋಷಿ. ಈತ ರಾತ್ರಿಯಲ್ಲಿ ಸತ್ಯವಾನನು ಹಿಂತಿರುಗದಿದ್ದಾಗ, ಅವನ ತಂದೆ ರಾಜಾ ದ್ಯುಮತ್ಸೇನನಿಗೆ, ಸತ್ಯವಾನನು ಜೀವಿಸಿದ್ದಾನೆಂಬ ವಿಶ್ವಾಸ ಮೂಡಿಸಿದ್ದನು (ವನ 298/19). ಹಸ್ತಿನಾಪುರದ ದಾರಿಯಲ್ಲಿ ಶ್ರೀಕೃಷ್ಣನೊಡನೆ ಈತನ ಭೇಟಿ (ಉದ್ಯೋಗ 83/64). ಇವನು ಶಿವಭಕ್ತ ಉಪಮನ್ಯು ಋಷಿಯ ತಮ್ಮ (ಅನು 14/112).

**ಧೌಮ್ರ** – ಒಬ್ಬ ಪ್ರಾಚೀನ ಋಷಿ. ಇವನು ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಬಂದಿದ್ದನು (ಶಾಂತಿ 47/11).

**ಧ್ರುವ** – (1) ಧರ್ಮನಿಂದ ಧೂಮ್ರಾಳ ಗರ್ಭದಲ್ಲಿ ಹುಟ್ಟಿದ ಎರಡನೆಯ ವಸು (ಆದಿ 66/19).

(2) ನಹುಷನ ಪುತ್ರ. ಯಯಾತಿಯ ಸಹೋದರ (ಆದಿ 75/30).

(3) ಒಬ್ಬ ರಾಜ. ಇವನು ಯಮಸಭೆ ಯಲ್ಲಿರುತ್ತಾ ಸೂರ್ಯಪುತ್ರ. ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10).

(4). ಕೌರವಪಕ್ಷದ ಒಬ್ಬ ಯೋಧ. ಭೀಮಸೇನ ನಿಂದ ಇವನ ವಧೆ (ದ್ರೋಣ 155/27).

(5). ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕ ನಾದ ರಾಜ (ದ್ರೋಣ 158/39).

(6). ಪ್ರಾತಃ ಸಾಯಂಕಾಲಗಳಲ್ಲಿ ಸ್ಮರಿಸಲು ಯೋಗ್ಯನಾದ ಒಬ್ಬ ರಾಜ. ಇವನು ಮಹಾರಾಜ ಉತ್ತಾನಪಾದನ ಪುತ್ರನಾಗಿದ್ದನು (ಅನು 150/78).

**ಧ್ರುವಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

**ಧ್ರುವರತ್ನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/4).

**ಧ್ವಜ** – ಪತಾಕಾ – ಧ್ವಜ ಮತ್ತು ಪತಾಕೆ ಪರ್ಯಾಯ ಪದಗಳಾಗಿ ಬಳಕೆಯಾಗುತ್ತವೆ. ಆದರೆ ಪತಾಕಾ ಎಂಬುದಕ್ಕೆ ರಾಷ್ಟ್ರದ ಚಿಹ್ನೆ ಯಿರುವ ಪಟವೆಂದೂ, ಧ್ವಜ ಎಂಬುದಕ್ಕೆ ಪ್ರತ್ಯೇಕವ್ಯಕ್ತಿಯ ರಥದ ಚಿಹ್ನೆಯೆಂದೂ ಅಭಿಪ್ರಾಯವಿದೆ. ಪತಾಕೆಯೆಂದರೆ ಗಾಳಿಯನ್ನು ಹತೋಟಿಯಲ್ಲಿಡಲು ಗಾಳಿಬೀಸುವ ದಿಕ್ಕನ್ನನು ಸರಿಸಿ, ನೀಳವಾಗಿ ಕಟ್ಟುವ ಬಟ್ಟೆಯೆಂದೂ ಇತರ ಗ್ರಂಥಗಳಲ್ಲಿ ಟಿಪ್ಪಣಿಮಾಡಲಾಗಿದೆ (ಉದ್ಯೋಗ 155 ಅಧ್ಯಾಯ).

**ಧ್ವಜವತೀ** – ಸೂರ್ಯದೇವನ ಆಜ್ಞೆಯಿಂದ ಆಕಾಶದಲ್ಲಿ ನಿಲ್ಲುವ ಹರಿಮೇಧಾ ಮುನಿಯ

ಕನ್ಯೆ (ಉದ್ಯೋಗ 110/13).

**ಧ್ವಜಿನೀ** – ಒಂದು ಭಾರತೀಯ ಜನಪದ (ಭೀಷ್ಮ 9/61).

## ನ

**ನಕುಲ** – (1) ಪಾಂಡುವಿನ ಕ್ಷೇತ್ರಜ ಪುತ್ರ, ಅಶ್ವಿನೀಕುಮಾರರಿಂದ ಮಾದ್ರಿಯ ಗರ್ಭದಲ್ಲಿ ಹುಟ್ಟಿದ ಇಬ್ಬರು ಪುತ್ರರಲ್ಲಿ ಒಬ್ಬ. ಈ ಇಬ್ಬರೂ ಪುತ್ರರು ಜೋಡಾಗಿ ಹುಟ್ಟಿದ್ದರು. ಇಬ್ಬರೂ ಸುಂದರರು ಮತ್ತು, ಗುರುಜನರ ಸೇವಾತತ್ಪರ ರಾಗಿದ್ದರು (ಆದಿ 1/114; ಆದಿ 63/117; ಆದಿ 95/63). ಅನುಪಮ ರೂಪವಂತ ಮತ್ತು ಪರಮಮನೋಹರನಾದ ನಕುಲ ಮತ್ತು ಸಹ ದೇವ ಅಶ್ವಿನೀಕುಮಾರರ ಅಂಶದಿಂದ ಹುಟ್ಟಿದ್ದರು (ಆದಿ 67/111–112). ಇವರ ಹುಟ್ಟು ಮತ್ತು ಶತಶೃಂಗ ನಿವಾಸಿಗಳಾದ ಋಷಿಗಳಿಂದ ಇವರ ನಾಮಕರಣ ಸಂಸ್ಕಾರ (ಆದಿ 123/17–21). ವಸುದೇವನ ಪುರೋಹಿತ ಕಾಶ್ಯಪನ ಮೂಲಕ ಇವನ ಉಪನಯನಾದಿ ಸಂಸ್ಕಾರ ಮತ್ತು ರಾಜರ್ಷಿ ಶುಕನಿಂದ ಇವನ ಅಸ್ತ್ರವಿದ್ಯಾ ಅಧ್ಯಯನ ಮತ್ತು ಕತ್ತಿಗುರಾಣಿ ನಡೆಸುವ ಕಲೆಯಲ್ಲಿ ನೈಪುಣ್ಯ ಪ್ರಾಪ್ತಿಸಿದುದು (ಆದಿ 123/31). ಪಾಂಡುವಿನ ಮರಣಾನಂತರ ಮಾದ್ರಿ ತನ್ನ ಪುತ್ರರಾದ ನಕುಲ ಸಹದೇವರನ್ನು ಕುಂತಿಯ ಕೈಗೊಪ್ಪಿಸಿ, ಪತಿಯೊಂದಿಗೆ ಚಿತೆಯ ನ್ನೇರಿದುದು (ಆದಿ 124 ಅಧ್ಯಾಯ). ಶತಶೃಂಗ ನಿವಾಸಿಗಳಾದ ಋಷಿಗಳು ಐದೂ ಮಂದಿ ಪಾಂಡವರನ್ನು ಕುಂತಿಯ ಸಹಿತ ಹಸ್ತಿನಾಪುರಕ್ಕೆ ಕರಕೊಂಡು ಹೋದುದು, ಮತ್ತು ಅವರನ್ನು ಭೀಷ್ಮನೇ ಮೊದಲಾದವರ ಕೈಗೊಪ್ಪಿಸಿದುದು (ಆದಿ 125 ಅಧ್ಯಾಯ). ದ್ರೋಣಾಚಾರ್ಯರು ಪಾಂಡವರಿಗೆ ನಾನಾ ಪ್ರಕಾರದ ದಿವ್ಯಮಾನವ ಅಸ್ತ್ರ ಶಸ್ತ್ರಗಳ ಶಿಕ್ಷಣ ನೀಡಿದುದು (ಆದಿ 131/9). ದ್ರುಪದನ ಮೇಲೆ ಆಕ್ರಮಣ ಮಾಡು ತ್ತಿದ್ದಾಗ, ಅರ್ಜುನನು ಮಾದ್ರಿ ಕುಮಾರರಾದ ನಕುಲ ಸಹದೇವರನ್ನು ತನ್ನ ಚಕ್ರ ರಕ್ಷಕರಾಗಿ ಮಾಡಿಕೊಂಡದ್ದು (ಆದಿ 137/27). ದ್ರೋಣ ರಿಂದ ಸುಶಿಕ್ಷಿತನಾದ ನಕುಲ, ವಿಚಿತ್ರ ರೀತಿಯಲ್ಲಿ ಯುದ್ಧ ಮಾಡುವುದರಲ್ಲಿ ಕುಶಲನಾದುದರಿಂದ, ತನ್ನ ಸಹೋದರರಿಗೆ ಅತಿ ಪ್ರಿಯನಾಗಿದ್ದನು ಮತ್ತು ಅತಿರಥನೆಂದು ಹೇಳಲ್ಪಡುತ್ತಿದ್ದನು (ಆದಿ 138/30). ಧೃತರಾಷ್ಟ್ರನ ಆದೇಶದಿಂದ ಕುಂತಿ ಸಹಿತ ಪಾಂಡವರಿಂದ ವಾರಣಾವತ ಯಾತ್ರೆ, ಅಲ್ಲಿ ಅವರ ಸ್ವಾಗತ ಮತ್ತು ಲಾಕ್ಷಾಗೃಹದಲ್ಲಿ ನಿವಾಸ (ಆದಿ ಅಧ್ಯಾಯ 142ರಿಂದ 145ರ ವರೆಗೆ). ಲಾಕ್ಷಾಗೃಹ ದಹನ ಮತ್ತು ಪಾಂಡವರು ಸುರಂಗ ಮಾರ್ಗದಿಂದ ಹೊರಟು ಹೋದುದು, ಭೀಮನು ನಕುಲಸಹದೇವರನ್ನು ತೊಡೆ ಯಲ್ಲಿರಿಸಿ ನಡೆದುದು (ಆದಿ 147 ಅಧ್ಯಾಯ). ಪಾಂಡವರಿಗೆ ವ್ಯಾಸರ ದರ್ಶನ ಮತ್ತು ಅವರು ಏಕಚಕ್ರಾ ನಗರವನ್ನು ಪ್ರವೇಶಿಸಿದುದು (ಆದಿ 155 ಅಧ್ಯಾಯ). ಪಾಂಡವರ ಪಾಂಚಾಲಯಾತ್ರೆ (ಆದಿ 169 ಅಧ್ಯಾಯ). ಇವನು ದ್ರುಪದನ ರಾಜಧಾನಿಯ ಕುಂಬಾರನಲ್ಲಿ ವಾಸಿಸಿದುದು (ಆದಿ 184 ಅಧ್ಯಾಯ). ದ್ರೌಪದಿಯೊಂದಿಗೆ ಐದೂ ಮಂದಿ ಪಾಂಡವರ ವಿವಾಹದ ವಿಚಾರ (ಆದಿ 190 ಅಧ್ಯಾಯ). ಪಾಂಡವರು ಕುಂತಿ ಸಹಿತ ದ್ರುಪದನ ಮನೆಗೆ ಹೋಗಿ ಸಮ್ಮಾನಿತ ರಾದುದು (ಆದಿ 193 ಅಧ್ಯಾಯ). ಐದು ಮಂದಿ ಸಹೋದರರೊಂದಿಗೆ ದ್ರೌಪದಿಯ ವಿವಾಹ (ಆದಿ 197 ಅಧ್ಯಾಯ). ವಿದುರ ನೊಂದಿಗೆ ಪಾಂಡವರು ಹಸ್ತಿನಾಪುರಕ್ಕೆ ಬಂದುದು ಮತ್ತು ಅರ್ಧರಾಜ್ಯ ಪಡೆದು ಇಂದ್ರಪ್ರಸ್ಥ ನಗರದ ನಿರ್ಮಾಣ ಮಾಡಿದುದು (ಆದಿ 206). ಐದು ಮಂದಿ ಸಹೋದರರು ದ್ರೌಪದಿಯ ಕುರಿತು ನಿಯಮ ನಿರ್ಧಾರ ಮಾಡಿದುದು (ಆದಿ 211). ನಕುಲನಿಂದ ದ್ರೌಪದಿಯ ಗರ್ಭದಲ್ಲಿ ಶತಾನೀತನ ಜನ್ಮ (ಆದಿ 220/79; ಆದಿ 95/75). ಚೇದಿ ರಾಜನ ಮಗಳು ಕರೇಣುಮತಿಯೊಂದಿಗೆ ಇವನ ವಿವಾಹ ಮತ್ತು ಇವನಿಂದ ಆಕೆಯಲ್ಲಿ ನಿರಮಿತ್ರನ ಜನ್ಮ (ಆದಿ 95/79). ಇವನಿಂದ ಪಶ್ಚಿಮ ದಿಕ್ಕಿನ ದೇಶಗಳ ಮೇಲೆ ವಿಜಯ ನಕುಲನು ಗೆದ್ದು ತಂದ ದ್ರವ್ಯಗಳ ಹೊರೆಯನ್ನು ಹತ್ತುಸಾವಿರ ಒಂಟೆಗಳು ಬಹಳ ಕಷ್ಟದಿಂದ ಹೊತ್ತು ತರಲು ಸಾಧ್ಯವಾಗಿತ್ತು (ಸಭಾ 32). ರಾಜಸೂಯ ಯಜ್ಞದ ಅನಂತರ ಇವನು

ಗಾಂಧಾರ ರಾಜ ಸುಬಲ ಮತ್ತು ಅವನ ಪುತ್ರರನ್ನು ತಲುಪಿಸಲು ಹೋಗಿದ್ದನು (ಸಭಾ 45/49). ಯುಧಿಷ್ಠಿರನಿಂದ ಇವನು ಜೂಜಿನ ಪಣಕ್ಕೆ ಇಡಲ್ಪಟ್ಟು, ಸೋಲಲ್ಪಟ್ಟಿದ್ದನು (ಸಭಾ 65/12). ಇವನು ತನ್ನ ಮೈಮೇಲೆ ಧೂಳನ್ನು ಮುಚ್ಚಿಕೊಂಡು ಕಾಡಿನ ಕಡೆಗೆ ಹೋದನು (ಸಭಾ 80/18). ಅರ್ಜುನನಿಗಾಗಿ ಇವನ ಚಿಂತೆ (ವನ 80/23–26). ಜಟಾಸುರನು ಇವನ ಅಪಹರಣ ಮಾಡಿದ್ದನು (ವನ 157/10). ಇವನಿಂದ ಕ್ಷೇಮಂಕರ, ಮಹಾಮುಖ ಮತ್ತು ಸುರಥರ ವಧೆ (ವನ 271/16–23). ದ್ವೈತವನದಲ್ಲಿ ನೀರು ತರಲುಹೋದುದು ಮತ್ತು ಸರೋವರದ ಬಳಿ ಬಿದ್ದದ್ದು (ವನ 312/13). ಇವನು ವಿರಾಟನಗರದಲ್ಲಿ ಗ್ರಂಥಿಕನೆಂಬ ಹೆಸರಿನಿಂದ ವಾಸಿಸುವ ವಿಚಾರ ಹೇಳಿದುದು (ವಿರಾಟ 3/4). ಇವನ 'ನಕುಲ'ನೆಂಬ ಹೆಸರಿನ ಅರ್ಥ (ವಿರಾಟ 5/25). ರಾಜಾ ವಿರಾಟನಲ್ಲಿ ವಾಸಿಸಲು ಆತನೊಡನೆ ಪ್ರಾರ್ಥಿಸಿದುದು (ವಿರಾಟ 12/8). ತ್ರಿಗರ್ತರೊಂದಿಗೆ ಇವನ ಯುದ್ಧ (ವಿರಾಟ 33/34). ದೂತನಾಗಿ ಹೋಗಲು ಸಿದ್ಧನಾದ ಶ್ರೀಕೃಷ್ಣನಲ್ಲಿ ಸಮಯೋಚಿತ ಕರ್ತವ್ಯ ಮಾಡುವಂತೆ ಇವನ ನಿವೇದನೆ (ಉದ್ಯೋಗ 80). ದ್ರುಪದನನ್ನು ಪ್ರಧಾನ ಸೇನಾಪತಿಯಾಗಿ ಮಾಡುವಂತೆ ಇವನ ಸೂಚನೆ (ಉದ್ಯೋಗ 151/16). ಉಲೂಕನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರ (ಉದ್ಯೋಗ 163/38). ಕವಚವನ್ನು ಕಳಚಿ, ಕೌರವ ಸೇನೆಯ ಕಡೆಗೆ ಕಾಲ್ನಡೆಯಿಂದ ಹೋಗುತ್ತಿರುವ ಯುಧಿಷ್ಠಿರನಲ್ಲಿ ಇವನು ಪ್ರಶ್ನೆ ಮಾಡಿದುದು (ಭೀಷ್ಮ 43/18). ಪ್ರಥಮ ದಿನದ ಸಂಗ್ರಾಮದಲ್ಲಿ ದುಃಶಾಸನನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/22–24). ಶಲ್ಯನೊಂದಿಗೆ ಯುದ್ಧದಲ್ಲಿ ಈತ ಗಾಯಗೊಂಡದ್ದು (ಭೀಷ್ಮ 83/45). ಇವನಿಂದ ಅಶ್ವಸೇನನ ಸಂಹಾರ (ಭೀಷ್ಮ 89/32–34). ಶಕುನಿಯೊಂದಿಗೆ ಇವನ ಯುದ್ಧ (ಭೀಷ್ಮ 105/11–12). ವಿಕರ್ಣನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/11–12, ಭೀಷ್ಮ 111/34–36). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/29–30). ಶಲ್ಯನೊಂದಿಗೆ ಯುದ್ಧ (ದ್ರೋಣ 14/31–22). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/7). ಶಕುನಿಯೊಂದಿಗೆ ಇವನ ಯುದ್ಧ (ಭೀಷ್ಮ 96/21–25). ವಿಕರ್ಣನೊಂದಿಗೆ ಇವನ ಯುದ್ಧ (ದ್ರೋಣ 106/12). ಇವನಿಂದ ವಿಕರ್ಣನ ಪರಾಜಯ (ದ್ರೋಣ 107/30). ಇವನಿಂದ ಶಕುನಿಯ ಪರಾಜಯ (ದ್ರೋಣ 169/16). ದುರ್ಯೋಧನನನ್ನು ಯುದ್ಧದಲ್ಲಿ ಪರಾಜಯಗೊಳಿಸಿದುದು (ದ್ರೋಣ 187/50–55). ಧೃಷ್ಟದ್ಯುಮ್ನನ ರಕ್ಷಣೆಗೆ ಹೋದುದು (ದ್ರೋಣ 189/7). ಇವನಿಂದ ಭಗದತ್ತ ಪುತ್ರನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/28). ಇವನಿಂದ ಅಂಗರಾಜನವಧೆ (ಕರ್ಣ 22/18). ಕರ್ಣನಿಂದ ಪರಾಜಿತನಾಗಿ ಓಡಿದುದು ಮತ್ತು ಆತನಿಂದ ಜೀವಂತನಾಗಿ ಬಿಡಲ್ಪಟ್ಟಿದ್ದು (ಕರ್ಣ 24/45–51). ಸುಷೇಣನೊಂದಿಗೆ ಯುದ್ಧ (ಕರ್ಣ 48/34–40). ದುರ್ಯೋಧನನೊಂದಿಗೆ ಯುದ್ಧದಲ್ಲಿ ಗಾಯಗೊಂಡದ್ದು (ಕರ್ಣ 56/7–18). ವೃಷಸೇನನೊಂದಿಗೆ ಯುದ್ಧ (ಕರ್ಣ 84/19–35). ಇವನಿಂದ ಕರ್ಣನ ಮೂವರು ಪುತ್ರರ ವಧೆ (ಚಿತ್ರಸೇನ, ಸತ್ಯಸೇನ ಮತ್ತು ಸುಷೇಣ). (ಶಲ್ಯ 10/19–50). ಶಲ್ಯನೊಂದಿಗೆ ಯುದ್ಧ (ಶಲ್ಯ ಅಧ್ಯಾಯ 13 ಮತ್ತು 15). ಯುಧಿಷ್ಠಿರನ ಆಜ್ಞೆಯಂತೆ ದ್ರೌಪದಿಯನ್ನು ಕರೆಸಲು ಹೋದುದು (ಸೌಪ್ತಿಕ 10/28). ಗೃಹಸ್ಥಧರ್ಮದ ಪ್ರಶಂಸೆ ಮಾಡುತ್ತಾ, ರಾಜಾ ಯುಧಿಷ್ಠಿರನಿಗೆ ತಿಳಿಯ ಹೇಳಿದುದು (ಶಾಂತಿ 12). ಯುಧಿಷ್ಠಿರನಿಂದ ಸೇನಾಧ್ಯಕ್ಷ ಪದದಲ್ಲಿ ನೇಮಕ (ಶಾಂತಿ 41/12). ಯುಧಿಷ್ಠಿರನಿಂದ ಇವನಿಗೆ ದುರ್ಮರ್ಷಣನ ಅರಮನೆಯ ಪ್ರಾಪ್ತಿ (ಶಾಂತಿ 44/10–11). ಭೀಷ್ಮನೊಂದಿಗೆ ಖಡ್ಗದ ಉತ್ಪತ್ತಿ ಇತ್ಯಾದಿ ವಿಷಯದಲ್ಲಿ ಈತನ ಪ್ರಶ್ನೆ (ಶಾಂತಿ 166/2–6). ಯುಧಿಷ್ಠಿರನು ಕೇಳಿದಾಗ ಇವನು ತ್ರಿವರ್ಗದಲ್ಲಿ ಅರ್ಥದ ಪ್ರಧಾನತೆಯನ್ನು ಹೇಳಿದುದು (ಶಾಂತಿ 167/22–29). ಅಶ್ವಮೇಧ ಯಜ್ಞಕಾಲದಲ್ಲಿ ಇವನು ಭೀಮಸೇನನೊಂದಿಗೆ ನಗರದ ರಕ್ಷಣೆಯ ಕಾರ್ಯಕ್ಕೆ ನಿಯುಕ್ತನಾಗಿದ್ದನು (ಆಶ್ವ 72/19). ಕುಂತಿಯು ಕಾಡಿಗೆ ಹೋಗುವಾಗ ಇವನನ್ನು ಯುಧಿಷ್ಠಿರನಿಗೆ

ಒಪ್ಪಿಸಿದುದು (ಆಶ್ರಮ 16/15). ವನದಲ್ಲಿ ಭೇಟಿಯಾಗಲು ಬಂದ ನಕುಲನನ್ನು ನೋಡಿ ಕುಂತಿ ತುಂಬಾ ಆತುರದಿಂದ ಮುಂದೆ ಬಂದಿದ್ದಳು (ಆಶ್ರಮ 24/11). ಸಂಜಯನು ಋಷಿಗಳೊಡನೆ ಇವನ ಪರಿಚಯ ಹೇಳಿದುದು (ಆಶ್ರಮ 25/8). ಇವನ ಪತ್ನಿಯ ಪರಿಚಯ ಮಾಡಿದುದು (ಆಶ್ರಮ 25/14). ಮಹಾ ಪ್ರಸ್ಥಾನದ ದಾರಿಯಲ್ಲಿ ಇವನು ಬಿದ್ದುದು; ಭೀಮಸೇನನು ಕೇಳಿದಾಗ ಯುಧಿಷ್ಠಿರನು ಇವನ ಪತನಕಾರಣವನ್ನು ಹೇಳಿದುದು (ಮಹಾಪ್ರಸ್ಥ 2/12–17). ಸ್ವರ್ಗಕ್ಕೆ ಹೋದಾಗ ಯುಧಿಷ್ಠಿರನು ಇವನನ್ನು ನೋಡುವ ಅಪೇಕ್ಷೆ ವ್ಯಕ್ತಪಡಿಸಿದುದು (ಸ್ವರ್ಗಾ 2/10). ಯುಧಿಷ್ಠಿರನು ನಕುಲ ಸಹದೇವರನ್ನು ತೇಜಸ್ವೀ ರೂಪದಲ್ಲಿ ಅಶ್ವಿನೀ ಕುಮಾರರ ಸ್ಥಾನದಲ್ಲಿ ವಿರಾಜಮಾನರಾಗಿರು ವುದನ್ನು ನೋಡಿದುದು (ಸ್ವರ್ಗಾ 4/9).

(2) ಯುಧಿಷ್ಠಿರನ ಅಶ್ವಮೇಧ ಯಜ್ಞವನ್ನು ತುಚ್ಛವೆಂದು ಹೇಳಿದ ಒಂದು ಮುಂಗುಸಿ (ಆಶ್ವ 90 ಅಧ್ಯಾಯ).

**ನಗ್ನಜಿತ್** – (1) ಒಬ್ಬ ಕ್ಷತ್ರಿಯ ರಾಜ. ಇವನು ಇಷುಪಾದನೆಂಬ ದೈತ್ಯನ ಅಂಶದಿಂದ ಜನ್ಮವೆತ್ತಿ ದನು (ಆದಿ 67/21). ದಿಗ್ವಿಜಯ ಕಾಲದಲ್ಲಿ ಇವನು ಕರ್ಣನಿಂದ ಪರಾಜಿತನಾಗಿದ್ದನು (ವನ 254/21). ಇವನು ಗಾಂಧಾರ ದೇಶದವನೇ ಆದ ರಾಜನಾಗಿದ್ದನು. ಭಗವಾನ್ ಶ್ರೀಕೃಷ್ಣನು ಇವನ ಎಲ್ಲ ಪುತ್ರರನ್ನು ಪರಾಜಯಗೊಳಿಸಿದ್ದನು (ಉದ್ಯೋಗ 48/75).

(2) ಒಬ್ಬ ದೈತ್ಯ. ಇವನು ಪ್ರಹ್ಲಾದನ ಶಿಷ್ಯನಾಗಿದ್ದನು ಮತ್ತು ಭೂಲೋಕದಲ್ಲಿ ರಾಜಾ ಸುಬಲನ ರೂಪದಲ್ಲಿ ಉತ್ಪನ್ನನಾಗಿದ್ದನು (ಆದಿ 63/11).

**ನಗ್ನಿಕಾ** – ಋತುಧರ್ಮ (ರಜೋಧರ್ಮ) ಪ್ರಕಟವಾಗದಿರುವ ಕುಮಾರಿ ಕನ್ಯೆ (ಸಭಾ 38/29).

**ನದೀಜ** – ಒಬ್ಬ ಪ್ರಾಚೀನ ರಾಜ. ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯವಾಗಿತ್ತು (ಉದ್ಯೋಗ 4/15).

**ನನ್ದ** (ನನ್ದಕ). – (1) ಧೃತರಾಷ್ಟ್ರನ ಪುತ್ರ (ಆದಿ 67/96; ಆದಿ 116/5). ಭೀಮಸೇನನಿಂದ ಇವನ ವಧೆ (ಕರ್ಣ 51/19).

(2) ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/12).

(3) ಗೋಕುಲ ಹಾಗೂ ನಂದಗ್ರಾಮದಲ್ಲಿ ವಾಸಿಸುವ ಗೋಪರ ರಾಜ. ಈತ ಭಗವಾನ್ ಶ್ರೀ ಕೃಷ್ಣನ ಪಾಲಕ ತಂದೆಯಾಗಿದ್ದನು (ಸಭಾ 38/29). ವಸುದೇವನು ತನ್ನ ನವಜಾತ ಬಾಲಕ ಶ್ರೀಹರಿಯನ್ನು ನಂದಗೋಪನ ಮನೆಯಲ್ಲಿ ಅಡಗಿಸಿಟ್ಟನು. ಶ್ರೀ ಕೃಷ್ಣನು ಬಹಳ ವರ್ಷಗಳ ವರೆಗೆ ನಂದಗೋಪನ ಮನೆಯಲ್ಲೇ ಇದ್ದನು (ಸಭಾ 38). ನಂದಗೋಪನ ಕುಲದಲ್ಲಿ ಯಶೋದೆಯ ಗರ್ಭದಿಂದ ಒಬ್ಬ ಕನ್ಯೆ ಹುಟ್ಟಿ ದ್ದಳು. ಅವಳು ಸಾಕ್ಷಾತ್ ಜಗಜ್ಜನನಿ ದುರ್ಗೆಯ ಸ್ವರೂಪವೆಂದು ತಿಳಿಯಲ್ಪಡುತ್ತಾಳೆ. ಯುಧಿಷ್ಠಿರನು ವಿರಾಟ ನಗರಕ್ಕೆ ಹೋಗುವಾಗ ಆಕೆಯ ಧ್ಯಾನ ಮಾಡಿದನು; ದೇವಿಯು ಪ್ರತ್ಯಕ್ಷ ದರ್ಶನಕೊಟ್ಟು ಅವನಿಗೆ ವರಕೊಟ್ಟಳು (ವಿರಾಟ 6). ಅರ್ಜುನನು ದುರ್ಗೆಯ ಸ್ತುತಿ ಮಾಡುವಾಗ, ನಂದಗೋಪನ ಕುಲದಲ್ಲಿ ಹುಟ್ಟಿದ ಆ ದುರ್ಗೆಯ ಸ್ವರೂಪದ, ಆ ಕನ್ಯೆಯ ಸ್ತುತಿ ಮಾಡಿದನು ಮತ್ತು ದೇವಿಯಿಂದ ಆತನಿಗೆ ವಿಜಯಸೂಚಕ ಆಶೀರ್ವಾದ ದೊರಕಿತು (ಭೀಷ್ಮ 23 ಅಧ್ಯಾಯ).

(4) ಯುಧಿಷ್ಠಿರನ ಧ್ವಜದ ಮೇಲೆ ಬಾರಿಸುವ ಎರಡು ಮೃದಂಗಗಳಲ್ಲಿ ಒಂದರ ಹೆಸರು. ಇನ್ನೊಂದು ಮೃದಂಗದ ಹೆಸರು ಉಪನಂದಕ ವೆಂದಾಗಿತ್ತು (ವನ 270/7).

(5) ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

(6) ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

(7) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/69).

**ನನ್ದಕ** – (1) ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/11).

(2) (ನನ್ದ) ಧೃತರಾಷ್ಟ್ರನ ಒಬ್ಬ ಪುತ್ರ, ಇವನು ದ್ರೌಪದೀಸ್ವಯಂವರಕ್ಕೆ ಹೋಗಿದ್ದನು (ಆದಿ 185/3). ಇವನಿಗೆ ಭೀಮಸೇನನು ದೊಡ್ಡ ಗಾಯವನ್ನುಂಟುಮಾಡಿದ್ದನು (ಭೀಷ್ಮ 64/15). (ನೋಡಿ ನಂದ ನಂ1).

(3) ಭಗವಾನ್ ಶ್ರೀಕೃಷ್ಣನ ಖಡ್ಗ (ಅನು

147/15).

**ನನ್ದನ** – (1) ಸ್ವರ್ಗದ ಒಂದು ದಿವ್ಯ ವನ. ಇದು ಅಪ್ಸರೆಯರಿಂದ ಸೇವಿತವಾಗಿದೆ (ವನ 43/3). ನಂದನವನಕ್ಕೆ ಹೋಗುವ ಅಧಿಕಾರಿ ಯಾವನು ಎಲ್ಲಾ ರೀತಿಯ ಹಿಂಸೆಯನ್ನು ತ್ಯಾಗ ಮಾಡಿ, ಜಿತೇಂದ್ರಿಯ ಭಾವದಿಂದ ಆವರ್ತ ನಂದಾ ಮತ್ತು ಮಹಾನಂದಾ ತೀರ್ಥದ ಸೇವನೆ ಮಾಡುತ್ತಾನೋ, ಅವನ ಸೇವೆಯನ್ನು ಸ್ವರ್ಗದ ನಂದನವನದಲ್ಲಿ ಅಪ್ಸರೆಯರು ಮಾಡುತ್ತಾರೆ (ಅನು 25/45). ಯಾರು ನೃತ್ಯಗೀತಗಳಲ್ಲಿ ನಿಪುಣರಾಗಿರುತ್ತಾರೋ, ಎಂದೂ ಯಾರಲ್ಲಿಯೂ ಯಾಚಿಸದಿರುತ್ತಾರೋ ಮತ್ತು ಸಜ್ಜನರೊಂದಿಗೆ ಸಂಚರಿಸುತ್ತಿರುತ್ತಾರೆಯೋ, ಅಂತಹರಿಗಾಗಿಯೇ ಈ ನಂದನವನವಿದೆ (ಅನು 102/24).

(2) ಅಶ್ವಿನಿಕುಮಾರರಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ವರ್ಧನನೆಂದಾಗಿತ್ತು (ಶಲ್ಯ 45/38).

(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

(4) ಭಗವಾನ್ ಶಿವನ ಒಂದು ಹೆಸರು (ಅನು 17/76).

(5) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/69).

**ನನ್ದಾ** – (1) ಧರ್ಮನ ಮೂರನೇ ಪುತ್ರ ಹರ್ಷನ ಪತ್ನಿ (ಆದಿ 66/33).

(2) (ಅನುಮಾನತಃ). ನೈಮಿಷಾರಣ್ಯದ ಹತ್ತಿರ, ಅಲ್ಲಿಂದ ಪೂರ್ವದಿಕ್ಕಿನಲ್ಲಿರುವ ಒಂದು ನದಿ, ಇದರ ಬಳಿಯೇ ಅಪರನಂದಾ ಕೂಡ ಇದೆ. ಅರ್ಜುನನು ಪೂರ್ವದಿಕ್ಕಿನ ತೀರ್ಥಗಳನ್ನು ಸುತ್ತುತ್ತಿದ್ದಾಗ ನಂದಾ ಮತ್ತು ಅಪರನಂದಾದ ತಟಕ್ಕೆ ಬಂದಿದ್ದನು (ಆದಿ 214/6–7). ಧೌಮ್ಯನು ಪೂರ್ವದಿಕ್ಕಿನ ತೀರ್ಥಗಳ ವರ್ಣನೆ ಮಾಡುವ ಸಂದರ್ಭದಲ್ಲಿ, ಯುಧಿಷ್ಠಿರನ ಮುಂದೆ ಈ ನದಿಯ ಉಲ್ಲೇಖವನ್ನು ಈ ರೀತಿ ಮಾಡಿದ್ದಾನೆ – ಕುಂಡೋದವೆಂಬ ಹೆಸರಿನ ರಮಣೀಯ ಪರ್ವತ ತುಂಬಾ ಫಲ–ಮೂಲ ಮತ್ತು ಜಲದಿಂದ ಸಂಪನ್ನವಾಗಿದೆ. ಬಾಯಾರಿದ ನಿಷಧರಾಜ ನಲನಿಗೆ ಜಲ ಮತ್ತು ಶಾಂತಿ ಎಲ್ಲಿ ದೊರಕಿತೋ ಅಲ್ಲಿಯೇ ತಪಸ್ವೀ ಜನರಿಂದ ಸುಶೋಭಿತವಾದ ಪವಿತ್ರ ದೇವವನ ಎಂಬ ಹೆಸರಿನ ಕ್ಷೇತ್ರವಿದೆ. ಇಲ್ಲಿ ಪರ್ವತದ ಶಿಖರದ ಮೇಲೆ ಬಾಹುದಾ ಮತ್ತು ನಂದಾ ನದಿಗಳು ಹರಿಯುತ್ತವೆ (ವನ 87/25–27). ಸಹೋದರರ ಸಹಿತ ಯುಧಿಷ್ಠಿರನು ಲೋಮಶರೊಂದಿಗೆ ನಂದಾ ಮತ್ತು ಅಪರನಂದಾಗಳಿಗೆ ಯಾತ್ರೆ ಮಾಡಿದ್ದನು. ಅವನು ಹೇಮಕೂಟ ಪರ್ವತದ ಮೇಲೆ ಬಂದನು ಮತ್ತು ಅಲ್ಲಿ ಅದ್ಭುತ ವಿಷಯ ಗಳನ್ನು ನೋಡಿದನು. ಅಲ್ಲಿ ಗಾಳಿಯಿಲ್ಲದೆಯೇ ಮುಗಿಲು ಕಾಣಿಸಿಕೊಳ್ಳುತ್ತಿತ್ತು ಮತ್ತು ತಾನೇ ತಾನಾಗಿ ಸಾವಿರಾರು ಆಲಿಕಲ್ಲುಗಳು ಬೀಳ ತೊಡಗುತ್ತಿದ್ದವು. ಖಿನ್ನವಾದ ಮನುಷ್ಯ ಆ ಪರ್ವತದ ಮೇಲೆ ಹತ್ತಲಾರನು. ಬಹುಶಃ ಪ್ರತಿದಿನ ಅಲ್ಲಿ ವೇಗವಾದ ಗಾಳಿ ಬೀಸುತ್ತಿತ್ತು. ಮತ್ತು ಪ್ರತಿದಿನ ಮೋಡ ಮಳೆ ಸುರಿಸುತ್ತಿತ್ತು. ಬೆಳಗ್ಗೆ ಮತ್ತು ಸಂಜೆ ಆ ಪರ್ವತದ ಮೇಲೆ ಅಗ್ನಿದೇವನು ಪ್ರಜ್ವಲಿತನಾದಂತೆ ಕಾಣಿಸುತ್ತಿದ್ದನು. ಅಲ್ಲಿ ನೊಣಗಳು ಜನರನ್ನು ಚುಚ್ಚುತ್ತಿದ್ದವು. ಇದೆಲ್ಲಾ ಋಷಭನೆಂಬ ಪ್ರಾಚೀನ ತಪಸ್ವೀ ಋಷಿಯ ಆದೇಶದಿಂದ ಆಗುತ್ತದೆ – ಹೀಗೆ ಲೋಮಶರು ಹೇಳಿದರು. ನಂದಾನದಿಯ ದಡಕ್ಕೆ ಮೊದಲು ದೇವತೆಗಳು ಬಂದಿದ್ದರು. ಆ ಸಮಯದಲ್ಲಿ ಅವರ ದರ್ಶನದ ಅಪೇಕ್ಷೆಯಿಂದ ಮನುಷ್ಯರು ಕೂಡಲೇ ಅಲ್ಲಿಗೆ ಬಂದರು. ದೇವತೆಗಳಿಗೆ ಅದು ಇಷ್ಟವಾಗಲಿಲ್ಲ. ಆದುದ ರಿಂದ ಅವರು ಆ ಪರ್ವತ ಪ್ರದೇಶವನ್ನು ಸಾಧಾರಣ ಮನುಷ್ಯರಿಗೆ ದುರ್ಗಮ ಮಾಡಿದರು. ಅಂದಿನಿಂದ ಈ ಋಷಭಕೂಟ ಅಥವಾ ಹೇಮ ಕೂಟಪರ್ವತವನ್ನು ಏರುವುದಂತೂ ಇಲ್ಲವೇ ಇಲ್ಲ! ಇದನ್ನು ನೋಡುವುದೂ ಕಷ್ಟವಾಯಿತು. ತಪಸ್ಸು ಮಾಡದವನು ಈ ಮಹಾಪರ್ವತವನ್ನು ದರ್ಶನ ಮಾಡಲು ಸಾಧ್ಯವಿಲ್ಲ. ಇಲ್ಲಿ ಈಗಲೂ ದೇವತೆಗಳೂ ಋಷಿಗಳೂ ವಾಸವಾಗಿದ್ದಾರೆ ಆದುದರಿಂದಲೇ ಸಾಯಂ ಪ್ರಾತಃಕಾಲಗಳಲ್ಲಿ ಅಗ್ನಿ ಪ್ರಜ್ವಲಿತವಾಗಿರುತ್ತದೆ. ಇಲ್ಲಿ ನಂದಾದಲ್ಲಿ ಮುಳುಗುಹಾಕುವುದರಿಂದ ಮನುಷ್ಯನ ಸಕಲ ಪಾಪಗಳು ತಕ್ಷಣ ನಷ್ಟವಾಗುತ್ತವೆ. ಯುಧಿಷ್ಠಿರನು ಇಲ್ಲಿ ಸ್ನಾನ ಮಾಡಿ ಕೌಶಿಕೀ (ಕೋಸೀ) ತೀರ್ಥದ ತಪಸ್ಸು ಮಾಡಿದ್ದನು (ವನ 110/1–21). ಈ ತೀರ್ಥದಲ್ಲಿ ಮೃತ್ಯುವು ಯಾತ್ರೆ

ಮಾಡಿದ್ದಳು (ದ್ರೋಣ 45/20–21).

**ನನ್ನಾಶ್ರಮ** – ಒಂದು ತೀರ್ಥ. ಇಲ್ಲಿ ಕಾಶೀರಾಜ ಕನ್ಯೆ ಅಂಬೆ ಕಠೋರ ವ್ರತವನ್ನಾಂತು ಸ್ನಾನ ಮಾಡಿದ್ದಳು (ಉದ್ಯೋಗ 186/26).

**ನನ್ದಿ** – ಒಬ್ಬ ದೇವಗಂಧರ್ವ. ಇವನು ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ಭಾಗವಹಿಸಿದ್ದನು (ಆದಿ 122/56).

**ನನ್ದಿಕುಂಡ** – ಇಲ್ಲಿ ಸ್ನಾನಮಾಡಿದರೆ ಭ್ರೂಣ ಹತ್ಯೆಯಂತಹ ಪಾಪ ಕೂಡ ನಿವೃತ್ತವಾಗುತ್ತದೆ (ಅನು 25/60).

**ನನ್ದಿಗ್ರಾಮ** – ಅಯೋಧ್ಯೆಯಿಂದ (ಫೈಜಾಬಾದ್) ಸಾಧಾರಣ ಹದಿನಾಲ್ಕು ಮೈಲು ದಕ್ಷಿಣಕ್ಕಿರುವ ಒಂದು ಗ್ರಾಮ. ಇದು ಭರತಕುಂಡದ ಸಮೀಪ ವಿದೆ. ಭರತನು ಇಲ್ಲಿಯೇ ಚರಣ ಪಾದುಕೆಯ ಸೇವೆಮಾಡುತ್ತಾ ಹದಿನಾಲ್ಕು ವರ್ಷಗಳ ತನಕ ವಾಸವಾಗಿದ್ದನು (ವನ 277/39).

**ನನ್ದಿನೀ** – (1) ಕಶ್ಯಪನಿಂದ ದೇವೀ ಸುರಭಿಯಲ್ಲಿ ಹುಟ್ಟಿದ ಒಂದು ಗೋವು. ಈಕೆ ನಂದಿನಿಯೆಂಬ ಹೆಸರಿನಿಂದ ಖ್ಯಾತಳಾಗಿದ್ದಳು (ಆದಿ 99/8). ಈ ಗೋವು ಸಮಸ್ತ ಜಗತ್ತನ್ನು ಅನುಗ್ರಹಿಸುವುದಕ್ಕಾಗಿ ಪ್ರಕಟಗೊಂಡಿದ್ದಳು ಮತ್ತು ಕಾಮನೆಗಳನ್ನು ಕೊಡುವವರಲ್ಲಿ ಶ್ರೇಷ್ಠಳಾಗಿದ್ದಳು. ವರುಣಪುತ್ರ ಧರ್ಮಾತ್ಮಾ ವಸಿಷ್ಠನು ತನ್ನ ಹೋಮಧೇನುವಿನ ರೂಪದಲ್ಲಿ ಈಕೆಯನ್ನು ಪಡೆದಿದ್ದನು (ಆದಿ 99/9). ಮುನಿಗಳಿಂದ ಸೇವಿತವಾದ ಪವಿತ್ರವೂ ರಮಣೀಯವೂ ಆದ ತಾಪಸವನದಲ್ಲಿ ಈ ಗೋವು ನಿರ್ಭಯವಾಗಿ ಮೇಯುತ್ತಾ ತಿರುಗುತಿತ್ತು. ಈ ನಂದಿನಿ ಎಂಬ ದನದ ಶೀಲಸಂಪತ್ತನ್ನು ನೋಡಿ ಒಬ್ಬ ವಸು ಪತ್ನಿ ಆಶ್ಚರ್ಯಚಕಿತಳಾದಳು (ಆದಿ 99/10–14). ವಸುಪತ್ನಿಯು ತನ್ನ ಪತಿಗೆ ಆ ಗೋವನ್ನು ತೋರಿಸಿದಳು. ವಸುವು ತನ್ನ ಪತ್ನಿಗೆ ಇದರ ಗುಣವನ್ನು ವರ್ಣಿಸುತ್ತಾ ಹೀಗೆ ಹೇಳಿದನು – "ಈ ಉತ್ತಮ ಗೋವು ದಿವ್ಯವಾದುದು. ಈ ಗೋವು ಈ ತಪೋವನದ ಮಹರ್ಷಿ ವಸಿಷ್ಠರ ಧೇನುವಾಗಿದೆ. ಈ ಧೇನುವಿನ ಹಾಲು ಕುಡಿದ ವನು ಹತ್ತುಸಾವಿರ ವರ್ಷಗಳ ವರೆಗೆ ಯುವಾ ವಸ್ಥೆಯಲ್ಲಿ ಜೀವಂತನಾಗಿರುವನು" (ಆದಿ 99/15–20). ದ್ಯೋ ಎಂಬ ವಸುವಿನಿಂದ ನಂದಿನಿಯ ಅಪಹರಣ (ಆದಿ 99/28). ಇವಳ ಅಪಹರಣ ಮಾಡಿದುದರಿಂದ ವಸು ಗಳಿಗೆ ವಶಿಷ್ಠನಿಂದ ಶಾಪ (ಆದಿ 99/32). ಈಕೆಯನ್ನು ಕೊಡಲು ವಿಶ್ವಾಮಿತ್ರನಿಂದ ವಸಿಷ್ಠ ನಲ್ಲಿ ಕೋರಿಕೆ (ಆದಿ 174/16–17). ವಿಶ್ವಾಮಿತ್ರ ನಿಂದ ಇವಳ ಅಪಹರಣ (ಆದಿ 174/22). ತನ್ನ ವಿಭಿನ್ನ ಅಂಗಗಳಿಂದ ಹೂಣ, ಯವನ, ಕಿರಾತರೇ ಮೊದಲಾದ ಮ್ಲೇಚ್ಛರ ಸೃಷ್ಟಿಮಾಡಿ, ವಿಶ್ವಾಮಿತ್ರನ ಸೇನೆಯನ್ನು ಈಕೆ ಪರಾಜಯ ಗೊಳಿಸಿದುದು (ಆದಿ 174/32–43). ಇವಳಿಂದ ವಿಶ್ವಾಮಿತ್ರನ ಸೇನೆ ನಷ್ಟವಾದುದರ ವರ್ಣನೆ (ಶಲ್ಯ 40/21–22).

(2) ಒಂದು ತೀರ್ಥ. ಇಲ್ಲಿ ದೇವಸೇವಿತ ಒಂದು ಕೂಪವಿದೆ. ಇಲ್ಲಿ ಸ್ನಾನ ಮಾಡಿದರೆ ನರಮೇಧ ಯಜ್ಞದ ಪೂರ್ಣಫಲ ಪ್ರಾಪ್ತವಾಗುತ್ತದೆ (ವನ 84/155).

**ನನ್ದಿವರ್ಧನ** – ಸಾತ್ಯಕಿಯ ಶಂಖದ ಹೆಸರು (ಶಲ್ಯ 61/71).

**ನನ್ದಿವೇಗ** – ಒಂದು ಕ್ಷತ್ರಿಯ ವಂಶ. ಇದರಲ್ಲಿ 'ಶಮ'ನೆಂಬ ಕುಲಕಲಂಕ ರಾಜನು ಹುಟ್ಟಿದ್ದನು (ಉದ್ಯೋಗ 74/17).

**ನನ್ದಿಸೇನ** – ಬ್ರಹ್ಮನಿಂದ ಸ್ಕಂದನಿಗೆ ಕೊಡಲ್ಪಟ್ಟ ನಾಲ್ಕು ಪಾರ್ಷದರಲ್ಲಿ ಒಬ್ಬ. ಉಳಿದ ಮೂವರು ಪಾರ್ಷದರು– ಲೋಹಿತಾಕ್ಷ, ಘಂಟಾಕರ್ಣ ಮತ್ತು ಕುಮುದಮಾಲಿ (ಶಲ್ಯ 45/24).

**ನಂದೀಶ್ವರ** – ಭಗವಾನ್ ಶಿವನ ಒಬ್ಬ ದಿವ್ಯ ಪಾರ್ಷದ. ಈತ ಕುಬೇರನ ಸಭೆಯಲ್ಲಿ ಉಪಸ್ಥಿತನಾಗಿರುವ ಶಿವನ ವಾಹನವಾಗಿದ್ದಾನೆ (ಸಭಾ 10/34).

**ನಪ್ತಾ** – ಒಬ್ಬ ಸನಾತನ ವಿಶ್ವೇದೇವ (ಅನು 91/37).

**ನಭಕಾನನ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/59).

**ನಭೋದ** – ಒಬ್ಬ ಸನಾತನ ವಿಶ್ವೇದೇವ (ಅನು 91/34).

**ನಮುಚಿ** – ಕಶ್ಯಪನಿಂದ ದನುವಿನಲ್ಲಿ ಹುಟ್ಟಿದ ಒಬ್ಬ ದಾನವ (ಆದಿ 65/22). ಇಂದ್ರನಿಂದ ಇವನ ವಧೆ (ವನ 25/10; ವನ 292/4). ರಥಾರೂಢ ಇಂದ್ರನಿಂದ ನಮುಚಿಯ ಪರಾ

ಜಯದ ವರ್ಣನೆ (ವನ 168/81). ಪ್ರತಿಜ್ಞಾ ಭಂಗಮಾಡಿ ಇಂದ್ರನಿಂದ ಇವನು ಕೊಲ್ಲಲ್ಪಟ್ಟ ಕಾರಣ, ಇವನ ತಲೆ ಆತನನ್ನು ಹಿಂಬಾಲಿಸಿ ದುದು (ಶಲ್ಯ 43/37–38). ಅರುಣಾ ಸಂಗಮದಲ್ಲಿ ಮುಳುಗಿದುದರಿಂದ ಆ ಮಸ್ತಕದ ಸದ್ಗತಿ (ಶಲ್ಯ 43/45). ಇಂದ್ರನ ಪ್ರಶ್ನೆಗಳ ಉತ್ತರ (ಶಾಂತಿ 226/1–23).

**ನರ** – (1) ಭಗವತ್ಸ್ವರೂಪನಾದ ಒಬ್ಬ ದೇವತೆ. ಇವನು ಭಗವಂತನಾದ ನಾರಾಯಣನ ಸಖ. ಪಾಂಡುಪುತ್ರ ಅರ್ಜುನ ಇವನ ಭಗವತ್ಸ್ವರೂಪ ನಾದ ಅವತಾರವೆಂದು ಹೇಳಲಾಗಿದೆ (ಆದಿ 1, ಪ್ರಥಮ ಶ್ಲೋಕ ಮಂಗಲಾಚರಣೆ). ದೈತ್ಯರನ್ನು ವಂಚಿಸಿ, ದೇವತೆಗಳಿಗೆ ಅಮೃತವು ಕುಡಿಸ ಲ್ಪಟ್ಟಾಗ, ಪ್ರಾರಂಭವಾದ ದೇವಾಸುರ ಸಂಗ್ರಾಮ ದಲ್ಲಿ ನಾರಾಯಣನ ಸಹಿತ ಭಗವಾನ್ ನರನು ರಾಕ್ಷಸ ಸಂಹಾರ ಮಾಡಿದ್ದನು. ಆ ಮಹಾ ಭಯಂಕರ ಸಂಗ್ರಾಮದಲ್ಲಿ ನರನು ಉತ್ತಮ ಸುವರ್ಣಭೂಷಿತ ಅಗ್ರಭಾಗವುಳ್ಳ, ರೆಕ್ಕೆಯಿಂದ ಕೂಡಿದ ಬಾಣಗಳ ಮೂಲಕ, ಪರ್ವತ ಶಿಖರಗಳನ್ನು ವಿದೀರ್ಣ ಮಾಡುತ್ತಾ, ಸಮಸ್ತ ಆಕಾಶಮಾರ್ಗವನ್ನು ಆಚ್ಛಾದನೆ ಮಾಡಿದ್ದನು. ಕೊನೆಗೆ ಆ ಅಮೃತದ ನಿಧಿ, ಕಿರೀಟಧಾರಿಯಾದ ಭಗವಾನ್ ನರನ ರಕ್ಷಣೆಗೆ ಒಪ್ಪಿಸಲ್ಪಟ್ಟಿತು (ಆದಿ 19/19–31). ದ್ರೌಪದಿ ತನ್ನ ಮಾನಕಾಪಾಡಲು ಕೌರವಸಭೆಯಲ್ಲಿ ಭಗವಾನ್ ಶ್ರೀಕೃಷ್ಣ ಮತ್ತು ನರನನ್ನು ಕರೆದಿದ್ದಳು (ಸಭಾ 68/46). ಇವನು ಒಬ್ಬ ಪ್ರಾಚೀನ ಋಷಿ. ಇವನು ಬದರಿಕಾಶ್ರಮ ದಲ್ಲಿ ಅನೇಕ ಸಹಸ್ರ ವರ್ಷಗಳವರೆಗೆ ತಪಸ್ಸು ಮಾಡಿದ್ದಾನೆ (ವನ 40/1). ಇಂದ್ರನಿಂದ ಇವನ ಅವತಾರದ ವರ್ಣನೆ (ವನ 47/10). ಬದರಿಕಾಶ್ರಮದಲ್ಲಿ ಭಗವಾನ್ ನಾರಾಯಣ ನೊಂದಿಗೆ ಇರುತ್ತಾ ತಪಸ್ಸು ಮಾಡುತ್ತಿರುವ ದೇವೇಶ್ವರ ನರನೇ ಅರ್ಜುನನಾಗಿದ್ದಾನೆ (ವನ 272/29). ಇವನಿಂದ ದಂಭೋದ್ಭವನ ಪರಾಜಯ; ಪರಾಜಿತನಾದ ದಂಭೋದ್ಭವನಿಗೆ ಇವನ ಉಪದೇಶ (ಉದ್ಯೋಗ 96/34–38). ಕುತ್ತಿಗೆಯಿಂದ ಪ್ರಾಣ ಹೊರಟಾಗ, ಮನುಷ್ಯ, ಮುನಿಗಳಲ್ಲಿ ಶ್ರೇಷ್ಠನಾದ ನರನ ಸಾನ್ನಿಧ್ಯ ಪಡೆಯುತ್ತಾನೆ (ಶಾಂತಿ 317/5). ಸ್ವಾಯಂಭುವ ಮನ್ವಂತರದ ಸತ್ಯಯುಗದಲ್ಲಿ ಪ್ರಕಟನಾದ ಭಗವಂತ ವಾಸುದೇವನ ನಾಲ್ಕು ಅವತಾರಗಳಲ್ಲಿ ಒಬ್ಬ ಭಗವಾನ್ ನರನೇ ಆಗಿದ್ದಾನೆ. ಇವನು ಒಂದು ಸುವರ್ಣಮಯ ರಥದಲ್ಲಿ ಆಸೀನನಾಗಿ ತಪಸ್ಸು ಮಾಡುತ್ತಾನೆ (ಶಾಂತಿ 334/9–10). ನಾರದ ಮತ್ತು ನರ ನಾರಾಯಣರ ಸಂವಾದ (ಶಾಂತಿ 334/13–45). ಭಗವಾನ್ ಶಂಕರನಿಂದ ಪ್ರಯೋಗಿಸಲ್ಪಟ್ಟ ಪ್ರಜ್ವಲಿತ ತ್ರಿಶೂಲ, ದಕ್ಷಯಜ್ಞ ವನ್ನು ಧ್ವಂಸಮಾಡಿ, ಭಗವಾನ್ ನಾರಾಯಣನ ಎದೆಗೆ ಬಂದು ತಗುಲಿತು. ಆಗ ನಾರಾಯಣನು ಹುಂಕಾರ ಮಾಡಿದನು. ಆಗ ಆ ತ್ರಿಶೂಲ ಹಿಂತಿರುಗಿ ರುದ್ರನ ಕೈಗೆ ತಲುಪಿತು. ಆಗ ರುದ್ರನು ನರನಾರಾಯಣರ ಮೇಲೆ ಆಕ್ರಮಣ ಮಾಡಿದನು. ನಾರಾಯಣನು ತನ್ನ ಕೈಯಿಂದ ರುದ್ರನ ಗಂಟಲನ್ನು ಒತ್ತಿದನು. ಆದುದರಿಂದ ಅವನು ನೀಲಕಂಠನಾದನು. ಇದಾದ ಬಳಿಕ ನರನು ಅವನ ಮೇಲೆ ಕಡ್ಡಿಯನ್ನು ಪ್ರಯೋಗಿಸಿ ದನು. ಅದು ಪರಶುವಾಗಿ ಚಲಿಸಿತು. ರುದ್ರನು ಅದನ್ನು ತುಂಡು ಮಾಡಿದನು. ಆದುದರಿಂದ ಅವನು ಖಂಡ ಪರಶುವಾದನು (ಶಾಂತಿ 342/110–117). ಶ್ವೇತದ್ವೀಪದಿಂದ ಹಿಂತಿರುಗಿದ ನಾರದನೊಂದಿಗೆ ಶ್ರೀನರನಾರಾಯಣರ ಮಾತು ಕತೆ (ಶಾಂತಿ 343 ಅಧ್ಯಾಯ).

(2) ಒಬ್ಬ ಗಂಧರ್ವ. ಇವನು ಕುಬೇರನ ಸಭೆಯಲ್ಲಿರುತ್ತಾ ಧನಾಧ್ಯಕ್ಷನ ಉಪಾಸನೆ ಮಾಡುತ್ತಾನೆ (ಸಭಾ 10/14).

(3) ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/60).

(4). ಒಬ್ಬ ಪ್ರಾಚೀನ ರಾಜ. ಇವನು ಜೀವನ ದಲ್ಲಿ ಎಂದೂ ಮಾಂಸತಿಂದಿರಲಿಲ್ಲ (ಅನು 115/ 64).

**ನರಕ** – (1) ದನುವಿನ ಒಬ್ಬ ಮಗ. ಇವನು ಪ್ರಸಿದ್ಧ ದಾನವಕುಲದ ಪ್ರವರ್ತಕನಾದನು (ಆದಿ 65/28). ಇವನು ವರುಣಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 9/12). ಇಂದ್ರನು ಇವನನ್ನು ಪರಾಜಯಗೊಳಿಸಿದ್ದನು (ವನ 168/81).

(2) ಒಂದು ಜನಪದ. ಇಲ್ಲಿ ರಾಜಾ ಭಗದತ್ತನು ಶಾಸಕನಾಗಿದ್ದನು (ಸಭಾ 14/14).

(3) (ನರಕಾಸುರ) ಒಬ್ಬ ಅಸುರ. ಇವನು ಪೃಥ್ವಿಯ ಮಗನಾದುದರಿಂದ ಭೌಮ ಅಥವಾ ಭೌಮಾಸುರನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ಇವನು ಪ್ರಾಗ್ಜ್ಯೋತಿಷಪುರದ ರಾಜನಾಗಿದ್ದನು. ಪೃಥ್ವಿಯ ಒಳಗೆ ಮೂರ್ತಿ ಲಿಂಗಮಯ ಇವನ ನಿವಾಸವಾಗಿತ್ತು (ಸಭಾ 38/29). ಇವನು ತ್ವಷ್ಟಾಪುತ್ರಿ ಕಶೇರುವನ್ನು ಮೂರ್ಛೆಗೊಳಿಸಿ ಅಪಹರಿಸಿದನು (ಸಭಾ 38). ಗಂಧರ್ವ ದೇವತೆ ಮತ್ತು ಮನುಷ್ಯ ಕನ್ಯೆಯರಲ್ಲದೆ ಏಳು ಮಂದಿ ಅಪ್ಸರೆಯರ ಅಪಹಾರ (ಸಭಾ 38). ಈ ರೀತಿ ಹದಿನಾರು ಸಾವಿರ ಕುಮಾರಿಯರನ್ನು ಒಟ್ಟುಗೂಡಿಸಿ, ಮಣಿಪರ್ವತದ ಮೇಲೆ ಔದಕಾ ಎಂಬ ಸ್ಥಳದಲ್ಲಿ ಭೌಮಾಸುರನು ಸೆರೆಯಲ್ಲಿಟ್ಟಿದ್ದನು. ಮುರನ ಹತ್ತು ಪುತ್ರರು ಮತ್ತು ಪ್ರಧಾನ ರಾಕ್ಷಸರು ಆ ಅಂತಃಪುರವನ್ನು ರಕ್ಷಿಸುತ್ತಿದ್ದರು. ನರಕಾಸುರನಿಗೆ ನಾಲ್ಕು ಮಂದಿ ರಾಜ್ಯಪಾಲರಿದ್ದರು. ಹಯಗ್ರೀವ, ನಿಶುಂಭ, ಪಂಚಜನ ಮತ್ತು ಮುರ (ಸಭಾ 38). ಇವನು ದೇವಮಾತೆ ಅದಿತಿಯ ಕುಂಡಲಗಳನ್ನು ಅಪಹರಿಸಿದ್ದನು. ಇವನ ರಾಜ್ಯದ ಸುತ್ತಲೂ ಮುರನೆಂಬ ದೈತ್ಯನಿಂದ ಮಾಡಲ್ಪಟ್ಟ ಆರು ಸಾವಿರ ಪಾಶಗಳು ಸ್ಥಾಪಿಸಲ್ಪಟ್ಟಿದ್ದವು. ಅವುಗಳ ಬದಿಯ ಭಾಗಗಳಲ್ಲಿ ಕತ್ತಿಗಳು ಜೋಡಿಸಲ್ಪಟ್ಟಿದ್ದವು. ಶ್ರೀಕೃಷ್ಣನು ಈ ಪಾಶಗಳನ್ನು ಕತ್ತರಿಸಿ, ಮುರನನ್ನು ಕೊಂದು ರಾಜ್ಯದ ಎಲ್ಲೆಯನ್ನು ಪ್ರವೇಶಿಸಿದ್ದನು. ಇದರ ಅನಂತರ ದೊಡ್ಡ ದೊಡ್ಡ ಪರ್ವತಗಳ ಬಂಡೆಕಲ್ಲುಗಳ ರಾಶಿಯಿಂದ ಬೇಲಿಯಂತೆ ರಚಿಸಲ್ಪಟ್ಟಿತ್ತು ಈ ಆವರಣಕ್ಕೆ ನಿಶುಂಭನು ರಕ್ಷಕನಾಗಿದ್ದನು. ಅವನನ್ನೂ ಕೊಂದು ಕೃಷ್ಣನು ಮುಂದುವರಿದನು. ಔದಕಾದ ಒಳಗೆ ಲೋಹಿತ ಗಂಗೆಯ ಮಧ್ಯದಲ್ಲಿ, ವಿರೂಪಾಕ್ಷ ಮತ್ತು ಪಂಚಜನ ಎಂಬ ಹೆಸರಿನಿಂದ ಪ್ರಸಿದ್ಧರಾದ ಐದು ಮಂದಿ ಭಯಂಕರ ರಾಕ್ಷಸರು ಆ ರಾಜ್ಯದ ರಕ್ಷಕರಾಗಿದ್ದರು. ಅವರನ್ನು ಕೊಂದು ಶ್ರೀಕೃಷ್ಣನು ಮುಂದೆ ಹೋಗಬೇಕಾಯಿತು. ಅದರ ನಂತರ ಪ್ರಾಗ್ಜೋತಿಷಪುರವೆಂಬ ನಗರ ಕಂಡುಬಂತು. ಅಲ್ಲಿ ಶ್ರೀಕೃಷ್ಣನಿಗೆ ದೈತ್ಯರೊಡನೆ ವಿಕಟ ಯುದ್ಧಮಾಡಬೇಕಾಗಿ ಬಂತು. ದೇವಾಸುರ ಸಂಗ್ರಾಮದ ದೃಶ್ಯ ಹರಡಿತು. ಈ ರೀತಿ ಎಂಟು ಲಕ್ಷ ದಾನವರನ್ನು ಕೊಂದು, ಭಗವಂತ ಪಾತಾಳಗುಹೆಗೆ ಹೋದನು. ಅಲ್ಲಿಯೇ ನರಕಾಸುರನು ವಾಸಿಸುತ್ತಿದ್ದನು. ಅಲ್ಲಿ ಹೋಗಿ ಸ್ವಲ್ಪ ಹೊತ್ತು ಯುದ್ಧಮಾಡಿದ ಬಳಿಕ ಶ್ರೀಕೃಷ್ಣನು ಚಕ್ರದಿಂದ ಆ ರಾಕ್ಷಸನ ತಲೆಯನ್ನು ಕಡಿದು ಹಾಕಿದನು. ಭಗವಾನ್ ಶ್ರೀಕೃಷ್ಣನು ಭೂಮಿಯ ಆ ಪುತ್ರನನ್ನು ಬ್ರಹ್ಮದ್ರೋಹಿ, ಲೋಕಕಂಟಕ ಮತ್ತು ನರಾಧಮನೆಂದು ಹೇಳಿದನು (ಸಭಾ 38). ಭಗವಾನ್ ವಿಷ್ಣುವಿನಿಂದ ಇವನ ವಧೆಯ ವರ್ಣನೆ (ವನ 142/27). ಉದ್ಯೋಗ ಪರ್ವದಲ್ಲಿ ಪುನಃ ಈ ಪ್ರಸಂಗದ ವರ್ಣನೆ ಹೀಗಿದೆ – ಅಸುರರ ಪ್ರಾಗ್ಜೋತಿಷಪುರವೆಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಭಯಂಕರ ಕೋಟೆ ಇತ್ತು. ಅದು ಶತ್ರುಗಳಿಗೆ ಅಜೇಯವಾಗಿತ್ತು ಅಲ್ಲಿ ಭೂಮಿಪುತ್ರ ಮಹಾಬಲವಂತನಾದ ನರಕಾಸುರ ವಾಸಿಸುತ್ತಿದ್ದನು. ಅವನು ದೇವಮಾತೆ ಅದಿತಿಯ ಸುಂದರ ಮಣಿಮಯ ಕುಂಡಲವನ್ನು ಅಪಹರಿಸಿದ್ದನು. ದೇವತೆಗಳು ಯುದ್ಧದಲ್ಲಿ ಅವನನ್ನು ಸೋಲಿಸದಾದರು. ದೇವತೆಗಳು ಶ್ರೀಕೃಷ್ಣನೊಡನೆ ಅವನ ವಧೆಗಾಗಿ ಪ್ರಾರ್ಥಿಸಿದರು. ಶ್ರೀಕೃಷ್ಣನು ನಿರ್ಮೋಚನ ನಗರದ ಗಡಿಯನ್ನು ಸೇರಿ ಒಮ್ಮಿಂದೊಮ್ಮೆಗೆ ಮುರನ ಆರುಸಾವಿರ ಲೋಹಮಯ ಪಾಶಗಳನ್ನು ಕಡಿದುಹಾಕಿದನು. ಅನಂತರ ಮುರನ ವಧೆ. ರಾಕ್ಷಸ ಸಮುದಾಯದ ನಾಶಮಾಡಿ ಅವನು ನಿರ್ಮೋಚನನಗರ ಪ್ರವೇಶ ಮಾಡಿದನು. ಅಲ್ಲಿಯೇ ನರಕಾಸುರನೊಂದಿಗೆ ಅವನ ಯುದ್ಧವಾಯಿತು. ಶ್ರೀಕೃಷ್ಣನಿಂದ ಆ ಅಸುರ ಕೊಲ್ಲಲ್ಪಟ್ಟನು (ಉದ್ಯೋಗ 48/80–84). ಪೃಥ್ವೀದೇವಿಯ ಒತ್ತಾಯದಿಂದ ಶ್ರೀ ಕೃಷ್ಣನು ಅವಳ ಮಗ ನರಕಾಸುರನಿಗೆ ವೈಷ್ಣವಾಸ್ತ್ರವನ್ನು ಕೊಟ್ಟಿದ್ದನು. ಆ ಅಸ್ತ್ರ ತಂದೆಯಿಂದ ನರಕಾಸುರನ ಪುತ್ರ ಭಗದತ್ತನಿಗೂ ಪ್ರಾಪ್ತವಾಗಿತ್ತು (ದ್ರೋಣ 29/30–36).

**ನರರಾಷ್ಟ್ರ** – ಒಂದು ದೇಶ ಅಥವಾ ರಾಜ್ಯ. ಇದನ್ನು ಸಹದೇವನು ಜಯಿಸಿದ್ದನು (ಸಭಾ 31/6).

**ನರಿಷ್ಯಂತ** – ವೈವಸ್ವತ ಮನುವಿನ ಪುತ್ರ (ಆದಿ 75/15).

**ನರ್ಮದಾ** – ದಕ್ಷಿಣ ಭಾರತದ (ಮಧ್ಯಪ್ರದೇಶ). ಒಂದು ಪ್ರಸಿದ್ಧ ನದಿ. ಇದು ಅಮರಕಂಟಕದಲ್ಲಿ ಹುಟ್ಟಿ ಭಡೌಚದ ಬಳಿ ಖಂಭಾತದ ಖಾರಿಯಲ್ಲಿ ಬೀಳುತ್ತದೆ. ಇವಳು ವರುಣ ಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾಳೆ (ಸಭಾ 9/18). ಸಹೋದರರಸಹಿತ ಯುಧಿಷ್ಠಿರನು ನರ್ಮದೆಯ ಯಾತ್ರೆ ಮಾಡಿದ್ದನು (ವನ 21/16). ಲೋಮಶನು ಯುಧಿಷ್ಠಿರನಿಗೆ ಹೀಗೆ ಹೇಳಿದನು "ವೈದೂರ್ಯ ಪರ್ವತದ ದರ್ಶನ ಮಾಡಿ ನರ್ಮದೆಯಲ್ಲಿ ಇಳಿದರೆ, ಮನುಷ್ಯ ದೇವತೆಗಳಂತೆ ಪವಿತ್ರ ಲೋಕಗಳನ್ನು ಪಡೆಯುತ್ತಾನೆ. ನರ್ಮದಾ ತಟದ ವೈದೂರ್ಯ ಪರ್ವತದ ಮೇಲೆ ಯಾವಾಗಲೂ ತ್ರೇತಾ ಮತ್ತು ದ್ವಾಪರದ ಸಂಧಿಗೆ ಸಮಾನವಾದ ಸಮಯವಿರುತ್ತದೆ. ಇದರ ಬಳಿಗೆಹೋಗಿ ಮನುಷ್ಯ ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ. ಇದು ಶರ್ಯಾತಿಯ ಯಜ್ಞದಸ್ಥಾನವಾಗಿದೆ. ಇಲ್ಲಿಯೇ ಇಂದ್ರನು ಅಶ್ವಿನೀಕುಮಾರರೊಂದಿಗೆ ಕುಳಿತು ಸೋಮಪಾನ ಮಾಡಿದ್ದನು (ವನ 121/19–21). ಇದು ಅಗ್ನಿಯ ಉತ್ಪತ್ತಿಸ್ಥಾನವಾಗಿದೆ (ವನ 222/24). ಇವಳು ಮಾಹಿಷ್ಮತಿಯ ರಾಜಾ ದುರ್ಯೋಧನನ ಪತ್ನಿಯಾಗಿದ್ದಳು. ರಾಜನು ಇವಳ ಗರ್ಭದಿಂದ ಪರಮಸುಂದರಿಯಾದ ಒಬ್ಬ ಮಗಳನ್ನು ಪಡೆದಿದ್ದನು. ಅವಳು ಹೆಸರು ಮತ್ತು ರೂಪಗಳಲ್ಲಿ ಸುದರ್ಶನಾ ಆಗಿದ್ದಳು (ಅನು 2/18–19). ಈಕೆಯ ಜಲದಲ್ಲಿ ಸ್ನಾನ ಮಾಡಿ ಒಂದು ಪಕ್ಷದ ತನಕ ನಿರಾಹಾರನಾಗಿರುವ ಮನುಷ್ಯ ಜನ್ಮಾಂತರದಲ್ಲಿ ರಾಜಕುಮಾರನಾಗುತ್ತಾನೆ (ಅನು 25/50). ಒಂದು ಕಾಲದಲ್ಲಿ ನರ್ಮದೆ ಮಾಂಧಾತನ ಪುತ್ರ ಪುರುಕುತ್ಸನನ್ನು ತನ್ನ ಪತಿಯಾಗಿ ಮಾಡಿಕೊಂಡಿದ್ದಳು (ಆಶ್ರಮ 20/12–13).

**ನಲ** – (1) ಒಬ್ಬ ಪ್ರಾಚೀನ ಋಷಿ. ಇವನು ಇಂದ್ರಸಭೆಯಲ್ಲಿ ವಿರಾಜಮಾನನಾಗಿರುತ್ತಾನೆ (ಸಭಾ 7/17).

(2) ಒಬ್ಬ ಪ್ರಾಚೀನ ರಾಜ. ಇವನು ಯುದ್ಧದಲ್ಲಿ ಪರಾಜಿತನಾಗುತ್ತಿರಲಿಲ್ಲ (ಆದಿ 1/226–235). ಇವನು ನಿಷಧದ ರಾಜಾ ವೃಷಸೇನನ ಮಗ (ವನ 52/56). ಬೃಹದಶ್ವನಿಂದ ಇವನ ಗುಣಗಳ ವರ್ಣನೆ (ವನ 53/2–4). ಇವನು ಸುವರ್ಣಮಯ ರೆಕ್ಕೆಗಳಿಂದ ವಿಭೂಷಿತ ಅನೇಕ ಹಂಸಗಳನ್ನು ನೋಡಿ, ಅವುಗಳಲ್ಲಿ ಒಂದನ್ನು ಹಿಡಿದುದು (ವನ 53/19). 'ತಾವು ನನ್ನನ್ನು ಬಿಟ್ಟುಬಿಡಿ ನಾನು ನಿಮಗೆ ಪ್ರಿಯವನ್ನುಂಟು ಮಾಡುತ್ತೇನೆ. ದಮಯಂತಿಯ ಮುಂದೆ ತಮ್ಮ ಗುಣಗಳನ್ನು ಹೇಳುತ್ತೇನೆ. ಅದರಿಂದಾಗಿ ಅವಳು ತಮ್ಮನ್ನು ಬಿಟ್ಟು ಬೇರೆಯವರನ್ನು ವರಿಸಲಾರಳು'. ಹಂಸ ಹೀಗೆ ಹೇಳಿದಾಗ ನಳನು ಅದನ್ನು ಬಿಟ್ಟು ಬಿಟ್ಟದ್ದು (ವನ 53/20–22). ದಮಯಂತಿಯ ಮುಂದೆ ಹಂಸನಿಂದ ನಳನ ಗುಣಗಳ ವರ್ಣನೆ. ಆಕೆಗೆ ನಳನ ಬಗ್ಗೆ ಅನುರಾಗ (ವನ 53/27–32; ವನ 54/1–4). ಸ್ವಯಂವರದ ಸಮಾಚಾರ ಕೇಳಿ ದಮಯಂತಿಯಲ್ಲಿ ಅನುರಕ್ತನಾದ ರಾಜಾನಲನು ವಿದರ್ಭ ದೇಶಕ್ಕೆ ಹೊರಟದ್ದು (ವನ 54/27). ಇಂದ್ರಾದಿ ಲೋಕಪಾಲರಿಂದ ದೂತನಾಗುವಂತೆ ಈತನೊಡನೆ ಆಗ್ರಹ (ವನ 54/31). ಇವನು ದೂತನಾಗಿ ದಮಯಂತಿಯ ಮನೆಗೆ ಹೋದುದು ಮತ್ತು ದಮಯಂತಿಯು ದೇವತೆಗಳನ್ನು ವರಿಸುವಂತೆ ತಿಳಿಯಪಡಿಸಿದುದು (ವನ 55/11–25; ವನ 56/1–12). ದಮಯಂತಿ ನಲನನ್ನೇ ವರಿಸುವ ನಿಶ್ಚಯವನ್ನು ಪ್ರಕಟಿಸಿದುದು. ನಳನು ದೌತ್ಯಮಾಡಿ ಹಿಂತಿರುಗಿ ದಮಯಂತಿಯ ಸಂದೇಶವನ್ನು ಲೋಕಪಾಲರಿಗೆ ತಿಳಿಸಿದುದು (ವನ 56/15–30). ಸ್ವಯಂವರದಲ್ಲಿ ದಮಯಂತಿ ನಲನನ್ನು ಪತಿಯಾಗಿ ವರಿಸಿದುದು ಮತ್ತು ಲೋಕಪಾಲರಿಂದ ನಲನಿಗೆ ವರಗಳ ಪ್ರಾಪ್ತಿ (ವನ 57/1–38). ದಮಯಂತಿಯೊಂದಿಗೆ ವಿವಾಹ ಸಂಸ್ಕಾರ (ವನ 57/41). ನಳನು ನಗರಕ್ಕೆ ಹಿಂತಿರುಗಿದುದು. ಪ್ರಜಾಪಾಲನೆ, ಯಜ್ಞ ಮತ್ತು ದಮಯಂತಿಯೊಂದಿಗೆ ವಿಹಾರ ಮಾಡಿದುದು, ದಮಯಂತಿಯ ಗರ್ಭದಿಂದ ಇವನಿಗೆ ಇಂದ್ರಸೇನನೆಂಬ ಪುತ್ರ ಮತ್ತು ಇಂದ್ರಸೇನಾ ಎಂಬ ಪುತ್ರಿಯ ಪ್ರಾಪ್ತಿ (ವನ 57/42–46). ದೇವತೆಗಳಿಂದ ನಳನ ಗುಣಗಾನ ಮತ್ತು ಇವನ ಮೇಲೆ ಕಲಿಯ ಕೋಪ (ವನ 58 ಅಧ್ಯಾಯ). ನಳನಲ್ಲಿ ಕಲಿಯ ಪ್ರವೇಶ ಮತ್ತು ಇವನು ಪುಷ್ಕರನೊಂದಿಗೆ ಜೂಜಾಡುವುದು (ವನ 59). ಇವನು ಜೂಜಿನಲ್ಲಿ ಸೋತು ದಮಯಂತಿ

ಯೊಂದಿಗೆ ಕಾಡಿಗೆ ಹೋದುದು (ವನ 61/6). ಇವನು ಪಕ್ಷಿಗಳನ್ನು ಹಿಡಿಯಲು ಅವುಗಳ ಮೇಲೆ ವಸ್ತ್ರವನ್ನೆಸೆದುದು (ವನ 61/14). ಇವನು ನಿದ್ರಿಸುತ್ತಿರುವ ದಮಯಂತಿಯ ಅರ್ಧ ವಸ್ತ್ರ ಹರಿದು ಉಟ್ಟುಕೊಂಡದ್ದು, ಅವಳನ್ನು ಕಾಡಿನಲ್ಲಿ ಏಕಾಂಗಿಯಾಗಿ ಬಿಟ್ಟು ಹೋದುದು, ಮತ್ತು ಪುನಃ ಹಿಂತಿರುಗಿ ವಿಲಪಿಸಿದುದು (ವನ 62/18–24). ನಲನು ದಮಯಂತಿಯನ್ನು ನಿದ್ರಿಸುತ್ತಿದ್ದಾಗ ಬಿಟ್ಟು ಆಗಾಗ ಹೋದುದು ಮತ್ತು ಹಿಂತಿರುಗಿದುದು ಮತ್ತು ಕಲಿಯಿಂದ ಆಕರ್ಷಿತನಾಗಿ ಕರುಣಾಜನಕ ವಿಲಾಪಮಾಡಿ ನಡೆದುಹೋದುದು (ವನ 62/26–29). ಇವನು ಕರ್ಕೋಟಕ ಸರ್ಪವನ್ನು ದಾವಾನಲ ನಿಂದ ರಕ್ಷಿಸಿದುದು (ವನ 69/9). ಕರ್ಕೋಟಕನು ನಳನನ್ನು ಕಚ್ಚಿ, ಅವನ ರೂಪವನ್ನು ಬದಲಿಸಿದುದು ಮತ್ತು ಇವನಿಗೆ ಧೈರ್ಯವನ್ನಿತ್ತು ಹಿಂದಿನ ರೂಪ ಪ್ರಾಪ್ತಿಗಾಗಿ ಒಂದು ವಸ್ತ್ರವನ್ನು ಕೊಟ್ಟದ್ದು (ವನ 66/11–26). ಇವನು ಅಯೋಧ್ಯಾರಾಜ ಋತುಪರ್ಣನಲ್ಲಿ ಬಾಹುಕ ನೆಂಬ ಹೆಸರಿನಲ್ಲಿ ಅಶ್ವಾಧ್ಯಕ್ಷ ಪದದಲ್ಲಿ ನೇಮಕ ವಾದುದು; ದಮಯಂತಿಗಾಗಿ ಇವನ ಚಿಂತೆ ಮತ್ತು ಜೀವಲನೊಂದಿಗೆ ಮಾತುಕತೆ (ವನ 67). ಇವನು ಋತುಪರ್ಣನಿಗೆ ಒಳ್ಳೆಯ ಅಶ್ವದ ಪರಿಚಯ ಮಾಡಿದುದು (ವನ 71/16). ಇವನ ಅಶ್ವಸಂಚಾಲನ ಕಲೆ (ವನ 71/23). ಇವನಿಗೆ ಋತುಪರ್ಣನಿಂದ ದ್ಯೂತವಿದ್ಯೆಯ ಪ್ರಾಪ್ತಿ (ವನ 72/29). ಇವನ ಶರೀರದಿಂದ ಕಲಿಯ ನಿಷ್ಕ್ರಮಣ (ವನ 72/30). ದಮಯಂತಿಯ ದಾಸಿ ಕೇಶಿನಿಯೊಂದಿಗೆ ಇವನ ವಾರ್ತಾಲಾಪ (ವನ 74). ದಮಯಂತಿಯ ಆದೇಶದಿಂದ ಕೇಶಿನಿಯ ಮೂಲಕ ಬಾಹುಕನ ಪರೀಕ್ಷೆ ಇವನು ತನ್ನ ಪುತ್ರ ಪುತ್ರಿಯೊಂದಿಗೆ ಭೇಟಿ ಮಾಡಿದುದು ಮತ್ತು ಅವರ ಬಗ್ಗೆ ವಾತ್ಸಲ್ಯ (ವನ 75). ಇವನು ಬಾಹುಕ ರೂಪದಲ್ಲಿ ದಮಯಂತಿಯ ಮನೆಗೆ ಹೋಗಿ ಆಕೆಯೊಂದಿಗೆ ವಾರ್ತಾಲಾಪ ಮಾಡಿದುದು ಮತ್ತು ಪುನಃ ನಲನಾಗಿ ಪ್ರಕಟ ನಾದುದು (ವನ 76/6–43). ದಮಯಂತಿ ಯೊಂದಿಗೆ ಇವನ ಮಿಲನ (ವನ 76/46). ಋತುಪರ್ಣನೊಂದಿಗೆ ಇವನ ಮಾತುಕತೆ ಮತ್ತು ಅವನಿಗೆ ಅಶ್ವವಿದ್ಯಾದಾನ (ವನ 77/10–17). ಇವನು ಪುಷ್ಕರನನ್ನು ಜೂಜಿನಲ್ಲಿ ಸೋಲಿಸಿದುದು (ವನ 78/19). ಇವನಿಂದ ಪುಷ್ಕರನಿಗೆ ಸಮಾಧಾನ (ವನ 78/20–26). ಇವನ ಆಖ್ಯಾನದ ಕೀರ್ತನೆಯ ಮಹತ್ವ (ವನ 79/10, 15–17). ಇವನು ಯಮಸಭೆಯಲ್ಲಿ ಉಪಸ್ಥಿತನಾಗಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/11). ಇವನು ದೇವರಾಜ ಇಂದ್ರನ ವಿಮಾನದಲ್ಲಿ ಕುಳಿತು, ಅರ್ಜುನ ಮತ್ತು ಕೌರವರಲ್ಲಿ ನಡೆಯುವ ಯುದ್ಧವನ್ನು ನೋಡಲು ಬಂದಿದ್ದನು (ವಿರಾಟ 56/10). ಗೋದಾನ ಮಹಿಮೆಯ ವಿಷಯದಲ್ಲಿ ಇವನ ನಾಮ ನಿರ್ದೇಶನ (ಅನು 76/25). ಮಹಾಭಾರತದಲ್ಲಿ ಬಂದಿರುವ ನಲನ ಹೆಸರುಗಳು – ನೈಷಧ, ನಿಷಧಾಧಿಪ, ನಿಷಧಾಧಿಪತಿ, ನಿಷಧರಾಜೇಂದ್ರ, ನಿಷಧೇಶ್ವರ, ಪುಣ್ಯಶ್ಲೋಕ, ವೀರಸೇನಸುತ ಇತ್ಯಾದಿ.

(3) ಒಬ್ಬ ವಾನರ ಸೇನಾಪತಿ. ಇವನ ಮೂಲಕ ಸಮುದ್ರದ ಮೇಲೆ ನೂರು ಯೋಜನ ಉದ್ದ ಮತ್ತು ಹತ್ತುಯೋಜನ ಅಗಲವಾದ ಸೇತುವೆಯ ನಿರ್ಮಾಣ (ವನ 282/43–44). ತುಂಡನೆಂಬ ರಾಕ್ಷಸನೊಂದಿಗೆ ಇವನ ಯುದ್ಧ (ವನ 285/9).

**ನಲಕೂಬರ** – ಧನಾಧ್ಯಕ್ಷ ಕುಬೇರನ ಪುತ್ರ, ಇವನು ಕುಬೇರನ ಸಭೆಯಲ್ಲಿರುತ್ತಾನೆ (ಸಭಾ 10/19). (ಇವನ ಸಹೋದರನ ಹೆಸರು ಮಣಿಗ್ರೀವನೆಂದಾಗಿತ್ತು.) ಇವನು ತನ್ನ ಪ್ರೇಯಸಿ ರಂಭೆಯ ಮೇಲೆ ಬಲಾತ್ಕಾರ ಮಾಡಿದ ರಾವಣ ನನ್ನು ಹೀಗೆ ಶಪಿಸಿದನು. "ನೀನು ಇಷ್ಟಪಡದ ಯಾವ ಸ್ತ್ರೀಯನ್ನೂ ಸ್ಪರ್ಶ ಮಾಡಲು ಸಾಧ್ಯ ವಿಲ್ಲ" (ವನ 280/59–60).

**ನಲಸೇತು** – ನಲನಿಂದ ಮಾಡಲ್ಪಟ್ಟ ಸೇತು (ವನ 283/45).

**ನಲಿನಿ** – ಗಂಗೆಯ ಏಳು ಧಾರೆಗಳಲ್ಲಿ ಒಂದು ಧಾರೆ (ಭೀಷ್ಮ 6/48).

**ನಲೋಪಾಖ್ಯಾನಪರ್ವ** – ವನಪರ್ವದ ಒಂದು ಅವಾಂತರಪರ್ವ (ಅಧ್ಯಾಯ 52ರಿಂದ 79 ವರೆಗೆ).

**ನವತಂತು** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ನವರಾಷ್ಟ್ರ** – ಒಂದು ದೇಶ. ಅರ್ಜುನನು ಅಜ್ಞಾತವಾಸಕ್ಕೆ ಈ ದೇಶವನ್ನು ಆರಿಸಿದ್ದನು (ವಿರಾಟ 1/3). ಮುಂಬಯಿ ಪ್ರದೇಶದೊಳಗಿರುವ ಭಡೌಂಚವೆಂಬ ಹೆಸರಿನ ಜಿಲ್ಲೆಯಲ್ಲಿರುವ 'ನವಸಾರಿ' ಎಂಬ ಸ್ಥಾನವೇ ನವರಾಷ್ಟ್ರವೆಂದು ಕೆಲವರ ಅಭಿಮತವಾಗಿದೆ.).

**ನಹುಷ** – (1) ಕಶ್ಯಪ ಮತ್ತು ಕದ್ರು ಎಂಬವರಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/9).

(2) ಆಯುವಿನಿಂದ ಸ್ವರ್ಭಾನು ಕುಮಾರಿಯ ಗರ್ಭದಲ್ಲಿ ಹುಟ್ಟಿದ ಐದು ಮಂದಿ ಪುತ್ರರಲ್ಲಿ ಒಬ್ಬ (ಆದಿ 75/25). ಇವನ ಪರಾಕ್ರಮ ಮತ್ತು ಗುಣಗಳ ವರ್ಣನೆ (ಆದಿ 75/27–28). ತನ್ನ ಇಂದ್ರತ್ವಕಾಲದಲ್ಲಿ ಇವನು ಋಷಿಗಳನ್ನು ವಾಹನವಾಗಿ ಮಾಡಿಸಿಕೊಂಡ ವರ್ಣನೆ (ಆದಿ 75/29). ಇವನು ತೇಜಸ್ಸು, ತಪಸ್ಸು ಓಜಸ್ಸು ಮತ್ತು ಪರಾಕ್ರಮಗಳಿಂದ ದೇವತೆಗಳನ್ನು ತಿರಸ್ಕರಿಸಿ, ಇಂದ್ರಪಟ್ಟವನ್ನು ಉಪಭೋಗಿಸಿದ್ದನು (ಆದಿ 75/29–30). ಇವನ ಮಕ್ಕಳ ಹೆಸರು ಯತಿ, ಯಯಾತಿ, ಸಂಯಾತಿ, ಆಯಾತಿ, ಅಯತಿ ಮತ್ತು ಧ್ರುವ (ಆದಿ 75/30–31). ಇವನು ಯಮರಾಜನ ಸಭೆಯಲ್ಲಿತ್ತಾನೆ (ಸಭಾ 8/8). ಅಜಗರ ರೂಪದಲ್ಲಿ ಬಿದ್ದಿದ್ದ ಇವನಿಂದ ಭೀಮಸೇನನು ಹಿಡಿಯಲ್ಪಟ್ಟದ್ದು (ವನ 178/28). ಭೀಮಸೇನನು ಕೇಳಿದಾಗ ತನ್ನ ಪರಿಚಯ ಹೇಳಿದುದು (ವನ 189/10–24). ಯುಧಿಷ್ಠಿರನೊಂದಿಗೆ ಇವನ ಪ್ರಶ್ನೋತ್ತರ (ವನ 180/6 ರಿಂದ 181/43 ವರೆಗೆ). ಶಾಪಮುಕ್ತನಾಗಿ ಪುನಃ ಇವನ ಸ್ವರ್ಗಗಮನ (ವನ 181/44). ಇವನು ಒಮ್ಮೆ ವೈಷ್ಣವ ಯಾಗ ಮಾಡಿದ್ದನು. ಅದರಿಂದ ಪವಿತ್ರನಾಗಿ ಸ್ವರ್ಗಲೋಕದ ಯಾತ್ರೆ ಮಾಡಿದ್ದನು (ವನ 257/5). ಇವನು ಇಂದ್ರನ ವಿಮಾನದಲ್ಲಿ ಕುಳಿತು ಅರ್ಜುನನ ಯುದ್ಧ ನೋಡಲು ಬಂದಿದ್ದನು (ವಿರಾಟ 56/9). ದೇವತೆಗಳ ಒತ್ತಾಯದಿಂದ ಇಂದ್ರಪದವಿಯಲ್ಲಿ ಇವನ ಅಭಿಷೇಕ (ಉದ್ಯೋಗ 11/9). ಶಚಿಯನ್ನು ನೋಡಿ ಕಾಮಾಸಕ್ತನಾದುದು (ಉದ್ಯೋಗ 11/18–19). ಶಚಿಯ ಕುರಿತು ದೇವತೆಗಳಿಗೆ ಇವನ ಉತ್ತರ (ಉದ್ಯೋಗ 12/6–8). ಶಚಿಗೆ ಸ್ವಲ್ಪ ಕಾಲದ ಅವಧಿಯನ್ನಿತ್ತದ್ದು (ಉದ್ಯೋಗ 13/7). ಸಪ್ತರ್ಷಿಗಳ ವಾಹನ ಮಾಡಿಸಿದುದು (ಉದ್ಯೋಗ 15/22). ಮಹರ್ಷಿ ಅಗಸ್ತ್ಯನಿಂದ ಇವನಿಗೆ ಶಾಪ ಮತ್ತು ಸ್ವರ್ಗದಿಂದ ಇವನ ಪತನ (ಉದ್ಯೋಗ 17/14–18). ಆಯುವಿನಿಂದ ಖಡ್ಗಪ್ರಾಪ್ತಿ (ಶಾಂತಿ 166/74). ಇವನಿಗೆ ಪಾಪ ಪ್ರಾಪ್ತವಾದುದು ಮತ್ತು ಋಷಿಗಳಿಂದ ಇವನ ಉದ್ಧಾರ (ಶಾಂತಿ 262/48–50). ಇಂದ್ರಪದ ಪ್ರಾಪ್ತಿಯಿಂದ ತೊಡಗಿ ಅಂತ್ಯದ ವರೆಗೆ ಇವನ ಕಥೆ (ಶಾಂತಿ 342/44–52). ಚ್ಯವನ ಋಷಿಯೊಂದಿಗೆ ಆತನ ಮೌಲ್ಯದ ಕುರಿತು ಸಂವಾದ, ಇವನು ಗೋವಿನ ಮೌಲ್ಯದಲ್ಲಿ ಸಂತುಷ್ಟಗೊಳಿಸಿದುದು (ಅನು 51/4–25). ಚ್ಯವನನಿಂದ ಇವನಿಗೆ ವರಪ್ರಾಪ್ತಿ (ಅನು 51/44). ಇವನು ಲಕ್ಷಗಟ್ಟಲೆ ಗೋದಾನಮಾಡಿದ್ದನು (ಇದರಿಂದಾಗಿ ಈತನಿಗೆ ದೇವದುರ್ಲಭ ಸ್ಥಾನ ಪ್ರಾಪ್ತವಾಯಿತು (ಅನು 81/5–6). ಅಗಸ್ತ್ಯರ ಕಮಲಗಳು ಕದಿಯಲ್ಪಟ್ಟಾಗ ಇವನು ಶಪಥ ಮಾಡಿದುದು (ಅನು 94/28). ಋಷಿಗಳ ಮೇಲೆ ಇವನ ಅತ್ಯಾಚಾರ (ಅನು 99/10–13). ಭೃಗುವಿನ ಶಾಪದಿಂದಾಗಿ, ಸ್ವರ್ಗದಿಂದ ಇವನ ಪತನ (ಅನು 100/25). ಮಾಂಸಭಕ್ಷಣ ನಿಷೇಧದಿಂದ ಇವನಿಗೆ ಪರಾವರ ತತ್ವದಜ್ಞಾನ (ಅನು 115/60). ಮಹಾಭಾರತದಲ್ಲಿ ಬಂದಿರುವ ನಹುಷನ ಹೆಸರುಗಳು – ದೇವರಾಜ, ದೇವರಾಟ್, ದೇವೇಂದ್ರ, ಜಗತ್ಪತಿ, ನಾಗ, ನಾಗೇಂದ್ರ, ಸುರಾಧಿಪತಿ, ಸುರಪತಿ, ಸುರೇಶ್ವರ, ಸುರೇಂದ್ರ ಇತ್ಯಾದಿ.

**ನಾಕುಲ** – ಭಾರತವರ್ಷದ ಒಂದು ಜನಪದ (ಭೀಷ್ಮ 50/53).

**ನಾಗತೀರ್ಥ** – (1) ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇದರ ಸೇವನೆ ಮಾಡಿದರೆ ಮನುಷ್ಯ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ ಮತ್ತು ನಾಗಲೋಕಕ್ಕೆ ಹೋಗುತ್ತಾನೆ (ವನ 83/14).

(2) ಗಂಗಾದ್ವಾರ ಮತ್ತು ಕನಖಲದ ಸಮೀಪ ನಾಗರಾಜ ಕಪಿಲನ ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗೆ ಸಹಸ್ರ ಕಪಿಲೆಗಳ ದಾನಮಾಡಿದ ಫಲ ಪ್ರಾಪ್ತವಾಗುತ್ತದೆ

(ವನ 84/33).

**ನಾಗದತ್ತ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/102). ಭೀಮಸೇನನಿಂದ ಇವನ ವಧೆ (ದ್ರೋಣ 157/19).

**ನಾಗದ್ವೀಪ** – ಸುದರ್ಶನ ದ್ವೀಪದ ಒಳಗಿನ ಒಂದು ದ್ವೀಪ. ಇದು ಚಂದ್ರಮಂಡಲದ ಮೊಲದ ಆಕೃತಿಯ ಕಿವಿಯ ರೂಪದಲ್ಲಿ ಕಾಣಿಸುತ್ತದೆ (ಭೀಷ್ಮ 6/55).

**ನಾಗಧನ್ವಾತೀರ್ಥ**– ಸರಸ್ವತೀ ತಟದ ಒಂದು ಪ್ರಾಚೀನ ತೀರ್ಥ. ಇಲ್ಲಿ ವಾಸುಕಿಯ ನಿವಾಸ ಸ್ಥಾನವಿದೆ. ಇಲ್ಲಿಯೇ ಆತನಿಗೆ ನಾಗರಾಜ ಪದವಿಯ ಅಭಿಷೇಕವಾಗಿತ್ತು. ಈ ತೀರ್ಥದ ವಿಶೇಷ ವರ್ಣನೆ (ಶಲ್ಯ 37/30–33).

**ನಾಗಪುರ** – ನೈಮಿಷಾರಣ್ಯದ ಗೋಮತೀ ತಟದಲ್ಲಿರುವ ಒಂದು ನಗರ. ಇದು ಪದ್ಮನಾಭ ನೆಂಬ ನಾಗನ ನಿವಾಸ ಸ್ಥಾನವಾಗಿತ್ತು (ಶಾಂತಿ 355/3).

**ನಾಗಲೋಕ** – ನಾಗಗಳ ಲೋಕ (ಉದ್ಯೋಗ 99/1). ಈ ಲೋಕದ ರಾಜ ವಾಸುಕಿಯಾಗಿದ್ದಾನೆ (ಆದಿ 127/60). ಇಲ್ಲಿ ಒಂದು ಕುಂಡವಿದೆ. ಅದರ ರಸ ಕುಡಿದರೆ ಒಬ್ಬ ವ್ಯಕ್ತಿಗೆ ಒಂದು ಸಾವಿರ ಆನೆಗಳ ಬಲ ಬರುತ್ತದೆ (ಆದಿ 127/68). ಈ ಲೋಕ ಭೂತಲದಿಂದ ಸಾವಿರಾರು ಯೋಜನ ದೂರವಿದೆ (ಆಶ್ವ 58/32–33). ಈ ಲೋಕ ಸಹಸ್ರಾರು ಯೋಜನ ವಿಸ್ತಾರವಾಗಿದೆ. ಇದರ ನಾಲ್ಕು ಕಡೆಗಳಲ್ಲಿ ದಿವ್ಯ ಪ್ರಾಕಾರವಿದೆ. ಇದು ನಾಲ್ಕೂ ಕಡೆ ಚಿನ್ನದ ಇಟ್ಟಿಗೆ ಮತ್ತು ಮಣಿ ಮುತ್ತುಗಳಿಂದ ಅಲಂಕೃತವಾಗಿದೆ. ಇಲ್ಲಿ ಸ್ಫಟಿಕಮಣಿಯಿಂದ ಸುಶೋಭಿತವಾಗಿ ಮಾಡಿದ ಮೆಟ್ಟಿಲುಗಳಿಂದ ಕೂಡಿದ ಕೊಳಗಳು, ನಿರ್ಮಲ ಜಲದಿಂದ ಕೂಡಿದ ಅನೇಕಾನೇಕ ನದಿಗಳು, ನಾನಾ ಪ್ರಕಾರದ ಪಕ್ಷಿಗಳಿಂದ ಸುಶೋಭಿತ ಮನೋಹರ ವೃಕ್ಷಗಳು ಕಂಡುಬರುತ್ತವೆ. ನಾಗಲೋಕದ ಹೊರಗಿನ ಬಾಗಿಲು ನೂರುಯೋಜನ ಉದ್ದ ಮತ್ತು ಐದು ಯೋಜನ ಅಗಲವಿದೆ (ಆಶ್ವ 58/37–40).

**ನಾಗಶತ** – ಒಂದು ಪರ್ವತ. ತಪಸ್ಸಿಗೆ ಹೋಗುವಾಗ ತನ್ನ ಇಬ್ಬರೂ ಪತ್ನಿಯರೊಂದಿಗೆ ಪಾಂಡು ಇಲ್ಲಿಗೆ ಆಗಮಿಸಿದ್ದನು (ಆದಿ 118/47).

**ನಾಗಾಶೀ** – ಗರುಡನ ಒಂದು ಪ್ರಮುಖ ಸಂತಾನ (ಉದ್ಯೋಗ 101/9).

**ನಾಗೋದ್ಭೇದ** – ಇಲ್ಲಿ ಸರಸ್ವತಿ ಅದೃಶ್ಯಳಾಗಿರುತ್ತಾಳೆ. ವಿನಶನ ತೀರ್ಥದ ಒಳಗಿರುವ ಒಂದು ತೀರ್ಥ. ಇಲ್ಲಿ ಸರಸ್ವತಿಯ ಜಲದ ಪ್ರತ್ಯಕ್ಷ ದರ್ಶನವಾಗುತ್ತದೆ. ಇಲ್ಲಿ ಸ್ನಾನಮಾಡುವುದರಿಂದ ನಾಗಲೋಕ ಪ್ರಾಪ್ತವಾಗುತ್ತದೆ (ವನ 82/112).

**ನಾಚಿಕ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ನಾಚಿಕೇತ** – ಒಬ್ಬ ಪ್ರಾಚೀನ ಋಷಿ. ಇವನು ಉದ್ದಾಲಕಿಯ ಪುತ್ರ (ಅನು 81/2). ಯಜ್ಞ ಪರಾಯಣನಾದ ತಂದೆ ನಾಚಿಕೇತನನ್ನು ತನ್ನ ಸೇವೆಗಿರುವಂತೆ ಆಜ್ಞೆ ಮಾಡಿದುದು. ಯಜ್ಞದ ನಿಯಮ ಪೂರ್ಣವಾದಾಗ ತಂದೆ ನಾಚಿಕೇತನಿಗೆ ನದಿ ದಡದಲ್ಲಿಟ್ಟಿರುವ ಹೂ, ಹಣ್ಣು ಮತ್ತು ಸಮಿತ್ತು ಇತ್ಯಾದಿಗಳನ್ನು ತರಲು ಆದೇಶ ನೀಡಿದುದು. ನದಿ ತಟದಲ್ಲಿ ಆ ವಸ್ತುಗಳು ಸಿಗದೆ ನಾಚಿಕೇತನು ನಿರಾಶನಾಗಿ ಹಿಂತಿರುಗಿದುದು. ಹಸಿವೆಯಿಂದ ಪೀಡಿತನಾದ ತಂದೆ ಕ್ರೋಧವಶನಾಗಿ, ಮಗನನ್ನು ಯಮರಾಜನಲ್ಲಿಗೆ ಹೋಗಲು ಹೇಳಿದುದು; ತಂದೆಯ ಈ ಶಾಪದಿಂದ ನಚಿಕೇತನಿಗೆ ಮೃತ್ಯು ಪ್ರಾಪ್ತವಾದುದು (ಅನು 71/2–8). ತಂದೆಯು ಪುತ್ರನಿಗಾಗಿ ದುಃಖದಿಂದ ವಿಲಪಿಸಿದುದು; ಯಮರಾಜನಲ್ಲಿಂದ ಹಿಂತಿರುಗಿ ನಾಚಿಕೇತನು ಯಮನಿಂದ ಪ್ರಾಪ್ತವಾದ ಸ್ವಾಗತ ಸತ್ಕಾರ ಮತ್ತು ಅಲ್ಲಿರುವ ಪುಣ್ಯಲೋಕದರ್ಶನದ ಸಮಾಚಾರ ಹೇಳಿದುದು (ಅನು 71/13–56).

**ನಾಚೀನ** – ಒಂದು ದೇಶ (ಸಭಾ 38/29).

**ನಾಟಕೇಯ** – ಒಂದು ದೇಶ (ಸಭಾ 38/29).

**ನಾಡೀಜಂಘಃ** – (1) ಇಂದ್ರದ್ಯುಮ್ನ ಸರೋವರದಲ್ಲಿ ವಾಸಿಸುವ ಒಬ್ಬ ಚಿರಂಜೀವಿ ಬಕ (199/7).

(2) ಒಬ್ಬ ಬಕರಾಜ. ಇವನು ಕಶ್ಯಪನ ಪುತ್ರ ಮತ್ತು ಬ್ರಹ್ಮನ ಮಿತ್ರನಾಗಿದ್ದನು. ಇವನ ಇನ್ನೊಂದು ಹೆಸರು ರಾಜಧರ್ಮಾ ಎಂದಾಗಿತ್ತು. ದೇವಕನ್ಯೆಯ ಗರ್ಭದಿಂದ ಜನ್ಮವೆತ್ತಿದ ಕಾರಣ ಇವನ ಶರೀರದ ಕಾಂತಿ ದೇವತೆಗಳಂತೆ ಕಾಣುತ್ತಿತ್ತು. ಇವನು ದೊಡ್ಡ ವಿದ್ವಾಂಸನೂ,

ದಿವ್ಯ ತೇಜಸ್ವಿಯೂ ಆಗಿದ್ದನು (ಶಾಂತಿ 169/19–20). (ನೋಡಿರಿ – ರಾಜಧರ್ಮ್ರಾ).

**ನಾಭಾಗ** – ವೈವಸ್ವತ ಮನುವಿನ ಒಬ್ಬ ಪುತ್ರ (ಆದಿ 75/15). ಇವನು ಯಮನ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/19). ಇವನು ಸಮುದ್ರ ಪರ್ಯಂತ ಪೃಥ್ವಿಯನ್ನು ಗೆದ್ದು, ಸತ್ಯದ ಮೂಲಕ ಉತ್ತಮ ಲೋಕಗಳ ಮೇಲೂ ವಿಜಯ ಹೊಂದಿದ್ದನು (ವನ 25/12). ಇವನು ದಕ್ಷಿಣೆಯ ರೂಪದಲ್ಲಿ ಪೂರ್ಣರಾಷ್ಟ್ರವನ್ನು ಬ್ರಾಹ್ಮಣರಿಗೆ ಕೊಟ್ಟಿದ್ದನು (ಶಾಂತಿ 96/22). ಇವನು ಏಳುದಿನಗಳಲ್ಲಿ ಪ್ರಪಂಚವನ್ನು ಗೆದ್ದಿದ್ದನು. ಇವನು ಶೀಲವಂತನೂ ದಯಾಳುವೂ ಆಗಿದ್ದನು. ಇವನ ಗುಣಗಳ ಮೌಲ್ಯದಿಂದ ಕ್ರಯಿಸಲ್ಪಟ್ಟ ಭೂಮಿ ತಾನಾಗಿಯೇ ಇವನ ಬಳಿಗೆ ಬಂದಿದ್ದಳು. ಅಗಸ್ತ್ಯರ ಕಮಲಗಳ ಅಪಹಾರವಾದಾಗ ಈತ ಪ್ರತಿಜ್ಞೆ ಮಾಡಿದನು (ಅನು 94/31). (ಶಾಂತಿ 124/16–17). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ. ಮಾಂಸಭಕ್ಷಣ ನಿಷೇಧದ ಕಾರಣದಿಂದ ಇವನಿಗೆ ಪರಾವರ ತತ್ವದ ಜ್ಞಾನವಾಗಿತ್ತು ಮತ್ತು ಈಗ ಈತ ಬ್ರಹ್ಮಲೋಕದಲ್ಲಿ ವಿರಾಜಿಸುತ್ತಿದ್ದಾನೆ (ಅನು 115/58–68).

**ನಾಭಾಗಾರಿಷ್ಟ** – ವೈವಸ್ವತ ಮನುವಿನ ಪುತ್ರ (ಆದಿ 75/17).

**ನಾರದ** – (1) ಒಬ್ಬ ದೇವರ್ಷಿ. ಇವನು ಬ್ರಹ್ಮನ ಮಾನಸಪುತ್ರ. ಇವನು ಜನಮೇಜಯನ ಸದಸ್ಯನಾಗಿದ್ದನು (ಆದಿ 53/8). ಇವನೇ ಕಾಲಾಂತರದಲ್ಲಿ ದೇವಗಂಧರ್ವನಾಗಿ, ಕಶ್ಯಪನಿಂದ 'ಮುನಿ'ಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/44). ಇವನು ಮೂವತ್ತು ಲಕ್ಷ ಶ್ಲೋಕಗಳ ಮಹಾಭಾರತವನ್ನು ದೇವತೆಗಳಿಗೆ ಹೇಳಿದ್ದನು (ಆದಿ 1/106–107; ಸ್ವರ್ಗ 5/56). ಇವನು ದಕ್ಷನ ಪುತ್ರರಿಗೆ ಸಾಂಖ್ಯ ಜ್ಞಾನದ ಉಪದೇಶ ಕೊಟ್ಟಿದ್ದನು. ಅದರಿಂದಾಗಿ ಅವರೆಲ್ಲರೂ ವಿರಕ್ತರಾಗಿ, ಮನೆಬಿಟ್ಟು ಹೋಗಿದ್ದರು (ಆದಿ 75/7–8). ಇವನು ಅರ್ಜುನನ ಜನ್ಮಕಾಲಕ್ಕೆ ಆಗಮಿಸಿದ್ದನು (ಆದಿ 122/57). ದ್ರೌಪದಿಯ ಸ್ವಯಂವರಕ್ಕೆ ಇತರ ಗಂಧರ್ವ ಮತ್ತು ಅಪ್ಸರೆಯರೊಂದಿಗೆ ಹೋಗಿದ್ದನು (ಆದಿ 186/7). ದ್ರೌಪದಿಯ ನಿಮಿತ್ತ ಪಾಂಡವರಿಗೆ ಪರಸ್ಪರ ಮತಭೇದ ಬಾರದಿರಲಿ ಎಂಬ ಉದ್ದೇಶದಿಂದ ಇಂದ್ರಪ್ರಸ್ಥಕ್ಕೆ ಇವನ ಆಗಮನ (ಆದಿ 207/9). ಇವನ ಗುಣ, ಪ್ರಭಾವ ಮತ್ತು ರಹಸ್ಯದ ವಿಶದ ವರ್ಣನೆ (ಆದಿ 207/9). ಇವನು ಪಾಂಡವರಿಗೆ ಸುಂದ ಮತ್ತು ಉಪಸುಂದರ ಕಥೆಯ ವರ್ಣನೆ ಮಾಡಿ, ದ್ರೌಪದಿಯ ವಿಷಯದಲ್ಲಿ ಪರಸ್ಪರ ಜಗಳದಿಂದ ಪಾರಾಗಲು ಯಾವುದಾದರೂ ನಿಯಮ ಮಾಡಿಕೊಳ್ಳಲು ಪ್ರೇರಣೆ ನೀಡಿದುದು (ಆದಿ 208 ರಿಂದ 221ರ ವರೆಗೆ). ಇವನಿಂದ ವರ್ಗಾ ಮೊದಲಾದ ಶಾಪಗ್ರಸ್ತ ಅಪ್ಸರೆಯರಿಗೆ ಆಶ್ವಾಸನೆ ಮತ್ತು ದಕ್ಷಿಣದ ಸಮುದ್ರ ಸಮೀಪದ ತೀರ್ಥಗಳಲ್ಲಿರಲು ಆದೇಶ (ಆದಿ 216/17). ಇವನಿಂದ ಯುಧಿಷ್ಠಿರನಿಗೆ ಪ್ರಶ್ನೆಗಳ ರೂಪದಲ್ಲಿ ವಿವಿಧ ಮಂಗಲಮಯ ಉಪದೇಶ (ಸಭಾ 5). ಇವನ ಮೂಲಕ ಇಂದ್ರ, ಯಮ, ವರುಣ ಕುಬೇರ ಮತ್ತು ಬ್ರಹ್ಮಸಭೆಯ ವರ್ಣನೆ (ಸಭಾ 5 ರಿಂದ 11ರ ವರೆಗೆ). ಇವನು ಹರಿಶ್ಚಂದ್ರನ ಸಂಕ್ಷಿಪ್ತ ಕಥೆಯನ್ನು ಹೇಳಿ, ಯುಧಿಷ್ಠಿರನು ರಾಜಸೂಯ ಯಜ್ಞ ಮಾಡುವಂತೆ ಪಾಂಡುವಿನ ಸಂದೇಶ ತಿಳಿಸಿದುದು (ಸಭಾ 12/23–34). ಬಾಣಾಸುರನು ಅನಿರುದ್ಧನನ್ನು ಸೆರೆಹಿಡಿದ ಕುರಿತು ಶ್ರೀಕೃಷ್ಣನಿಗೆ ಸೂಚನೆಯನ್ನಿತ್ತದ್ದು (ಸಭಾ 38/29). ರಾಜಸೂಯ ಯಜ್ಞದ ಅವಭೃಥ ಸ್ನಾನದ ಸಮಯದಲ್ಲಿ ಇವನು ಯುಧಿಷ್ಠಿರನಿಗೆ ಅಭಿಷೇಕ ಮಾಡಿದ್ದನು (ಸಭಾ 53/10). ಕೌರವರ ವಿನಾಶದ ಕುರಿತು ನಾರದನ ಭವಿಷ್ಯವಾಣಿ (ಸಭಾ 80/ 33–35). ಇವನಿಗೆ ಧೌಮ್ಯನಿಗೆ ಸೂರ್ಯನ ಅಷ್ಟೋತ್ತರ ಶತನಾಮದ ಉಪದೇಶ ಕೊಟ್ಟಿದ್ದನು (ವನ 3/78). ಇವನು ಶಾಲ್ವವನ್ನು ಕೊಲ್ಲಲು ಸಿದ್ಧನಾದ ಪ್ರದ್ಯುಮ್ನನ ಬಳಿಗೆ ಬಂದು, ದೇವತೆಗಳ ಸಂದೇಶ ತಿಳಿಸಿದುದು (ವನ 19/22–24). ಇಂದ್ರಲೋಕದಲ್ಲಿ ಅರ್ಜುನನ ಸ್ವಾಗತಕ್ಕೆ ಇತರ ಗಂಧರ್ವರ ಜೊತೆಯಲ್ಲಿ ಇವನೂ ಆಗಮಿಸಿದ್ದನು (ವನ 43/14). ಇವನು ಇಂದ್ರನಲ್ಲಿ ದಮಯಂತಿ ಸ್ವಯಂವರದ ಕುರಿತು ಸೂಚಿಸಿದುದು (ವನ 54/20–24). ಇವನು ಯುಧಿಷ್ಠಿರನಿಗೆ ತೀರ್ಥಯಾತ್ರೆಯ ಸಂದರ್ಭ ತಿಳಿಸಿ ಅಂತರ್ಧಾನ

ನಾದುದು (ವನ 81/12ರಿಂದ 85 ಅಧ್ಯಾಯ). ರಾಜಾ ಸಗರನಿಗೆ ಅವನ ಪುತ್ರರ ಮೃತ್ಯು ಸಮಾಚಾರವನ್ನು ಹೇಳಿದುದು (ವನ 107/33). ಅರ್ಜುನನು ದಿವ್ಯಾಸ್ತ್ರ ಪ್ರದರ್ಶನ ಮಾಡದಂತೆ ತಡೆದುದು (ವನ 175/18–23). ಕಾಮ್ಯಕ ವನದಲ್ಲಿ ಪಾಂಡವರ ಬಳಿಗೆ ಇವನ ಆಗಮನ ಮತ್ತು ಮಾರ್ಕಂಡೇಯ ಮುನಿಗಳಿಂದ ಕಥೆ ಕೇಳಲು ಅನುಮೋದಿಸಿದುದು (ವನ 183/47–49). ಸುಹೋತ್ರ ಮತ್ತು ಶಿಬಿ ಇವರಲ್ಲಿ ಶಿಬಿಯೇ ಹೆಚ್ಚಿನವನೆಂದು ಈತ ಹೇಳಿದುದು (194/3–7). ರಾಜಾ ಅಶ್ವಪತಿಯೊಡನೆ ಸತ್ಯ ವಾನನ ಗುಣ ದೋಷಗಳ ವರ್ಣನೆ ಮಾಡಿ, ಆತನೊಂದಿಗೆ ಸಾವಿತ್ರಿಯ ವಿವಾಹವಾಗುವಂತೆ ಸಮ್ಮತಿಯನ್ನಿತ್ತು ಬೀಳ್ಕೊಂಡದ್ದು (ವನ 294/11–32). ಶಾಂತಿದೂತನಾಗಿ ಹಸ್ತಿನಾವತಿಗೆ ತೆರಳು ತ್ತಿದ್ದ ಶ್ರೀಕೃಷ್ಣನ ಪ್ರದಕ್ಷಿಣೆ ಮಾಡಿದುದು (ಉದ್ಯೋಗ 83/27). ಪುತ್ರಿಗೆ ವರಾನ್ವೇಷಣೆಗಾಗಿ ಹೋಗುತ್ತಿದ್ದ ಮಾತಲಿಯನ್ನು ವರುಣಲೋಕಕ್ಕೆ ಕರಕೊಂಡು ಹೋದುದು, ಮತ್ತು ಅಲ್ಲಿ ಆಶ್ಚರ್ಯಜನಕ ವಸ್ತುಗಳನ್ನು ತೋರಿಸಿದುದು (ಉದ್ಯೋಗ 98). ಮಾತಲಿಯನ್ನು ಪಾತಾಳಕ್ಕೆ ಕರಕೊಂಡು ಹೋದುದು (ಉದ್ಯೋಗ 99). ಮಾತಲಿಗೆ ಹಿರಣ್ಯಪುರದ ವರ್ಣನೆ ಮತ್ತು ದಿಗ್ದರ್ಶನ (ಉದ್ಯೋಗ 100). ಮಾತಲಿಯನ್ನು ಗರುಡಲೋಕಕ್ಕೆ ಕರಕೊಂಡು ಹೋದುದು (ಉದ್ಯೋಗ 101). ಮಾತಲಿಗೆ ಸಂತಾನ ಸಹಿತ ವಾದ ಸುರಭಿಯ ಮತ್ತು ರಸಾತಲದ ವರ್ಣನೆ (ಉದ್ಯೋಗ 102). ಮಾತಲಿಗೆ ನಾಗಲೋಕದ ವರ್ಣನೆ (ಉದ್ಯೋಗ 103). ಆರ್ಯಕನ ಸಮ್ಮುಖದಲ್ಲಿ ಮಾತಲಿಯ ಕನ್ಯೆಯ ವಿವಾಹ ಪ್ರಸ್ತಾವನೆ (ಉದ್ಯೋಗ 104/1–7). ದುರ್ಯೋಧನನಿಗೆ ನೀತಿಹೇಳುತ್ತಾ, ಧರ್ಮರಾಜನಿಂದ ವಿಶ್ವಾಮಿತ್ರನ ಪರೀಕ್ಷೆ ಮತ್ತು ವಿಶ್ವಾಮಿತ್ರನಿಗೆ ಗುರುದಕ್ಷಿಣೆ ಕೊಡಲು ಗಾಲವನ ಹಠದ ವರ್ಣನೆ (ಉದ್ಯೋಗ 106ರಿಂದ 123/22). ಪರಶುರಾಮನ ಮೇಲೆ ಭೀಷ್ಮ ಪಸ್ವಾಪನಾಸ್ತ್ರ ಪ್ರಯೋಗಿಸದಂತೆ ತಡೆದುದು (ಉದ್ಯೋಗ 185/3–4). ಪುತ್ರಶೋಕದಿಂದ ದುಃಖಿತನಾದ ಅಕಂಪನನಿಗೆ ಇವನಿಂದ ಸಮಾಧಾನ (ದ್ರೋಣ 52/37ರಿಂದ ದ್ರೋಣ 54/44–50 ವರೆಗೆ). ರಾಜಾಸೃಂಜಯನಲ್ಲಿ ಅವನ ಕನ್ಯೆಯನ್ನು ಯಾಚಿಸಿದುದು (ದ್ರೋಣ 55/12). ಮಹರ್ಷಿ ಪರ್ವತನ ಶಾಪಕ್ಕೆ ಪ್ರತಿಯಾಗಿ ಆತನಿಗೆ ಶಾಪ ಕೊಟ್ಟದ್ದು (ದ್ರೋಣ 55/17). ರಾಜಾ ಸೃಂಜಯ ನಿಗೆ ಪುತ್ರಪ್ರಾಪ್ತಿಯ ವರ ಕೊಟ್ಟದ್ದು (ದ್ರೋಣ 55/23). ಪುತ್ರಶೋಕದಿಂದ ದುಃಖಿತನಾದ ಸೃಂಜಯನಿಗೆ ಮರುತ್ತನ ಚರಿತ್ರೆಯನ್ನು ಹೇಳಿ ಸಮಾಧಾನ ಪಡಿಸಿದುದು (ದ್ರೋಣ 55/36–50). ರಾಜಾ ಸುಹೋತ್ರನ ದಾನಶೀಲತೆಯನ್ನು ವರ್ಣಿಸಿದುದು (ದ್ರೋಣ 56). ಪೌರವನ ದಾನಶೀಲತೆಯ ವರ್ಣನೆ (ದ್ರೋಣ 57). ಶಿಬಿಯ ಯಜ್ಞ ಮತ್ತು ದಾನದ ಮಹತ್ವದ ವರ್ಣನೆ (ದ್ರೋಣ 58). ಶ್ರೀರಾಮನ ಚರಿತ್ರೆಯ ವರ್ಣನೆ (ದ್ರೋಣ 59). ರಾಜಾ ಭಗೀರಥನ ಚರಿತ್ರೆಯ ವರ್ಣನೆ (ದ್ರೋಣ 60). ಮಹಾರಾಜ ದಿಲೀಪನ ಉತ್ಕರ್ಷೆಯ ವರ್ಣನೆ (ದ್ರೋಣ 61). ಮಾಂಧಾತನ ಮಹತ್ವದ ವರ್ಣನೆ (ದ್ರೋಣ 62). ಮಹಾರಾಜ ಯಯಾತಿಯ ವರ್ಣನೆ (ದ್ರೋಣ 63). ರಾಜಾ ಅಂಬರೀಷನ ಚರಿತ್ರೆಯ ವರ್ಣನೆ (ದ್ರೋಣ 64). ರಾಜಾ ಶಶಬಿಂದು ವಿನ ದಾನದ ವರ್ಣನೆ (ದ್ರೋಣ 65). ರಾಜಾಗಯನ ಚರಿತ್ರೆಯ ವರ್ಣನೆ (ದ್ರೋಣ 66). ರಾಜಾರಂತಿದೇವನ ಅತಿಥಿಸತ್ಕಾರದ ವರ್ಣನೆ (ದ್ರೋಣ 67). ರಾಜಾಭರತನ ಚರಿತ್ರೆಯ ವರ್ಣನೆ (ದ್ರೋಣ 68). ರಾಜಾ ಪೃಥುವಿನ ಚರಿತ್ರೆಯ ವರ್ಣನೆ (ದ್ರೋಣ 69). ಪರಶುರಾಮರ ಚರಿತ್ರೆ ಹೇಳಿದುದು (ದ್ರೋಣ 70). ಸೃಂಜಯನ ಮೃತ ಪುತ್ರನನ್ನು ಬದುಕಿಸಿ, ಅವನಿಗೆ ಕೊಟ್ಟದ್ದು (ದ್ರೋಣ 71/8). ರಣ ಕ್ಷೇತ್ರದಲ್ಲಿ ಅರ್ಜುನನ ಬಾಣಪ್ರಹಾರದಿಂದ ಪ್ರಕಟಗೊಂಡ ಸರೋವರವನ್ನು ನೋಡಲು ನಾರದ ಬಂದಿದ್ದನು (ದ್ರೋಣ 99/61). ರಾತ್ರಿ ಯುದ್ಧದಲ್ಲಿ ಕೌರವ ಪಾಂಡವ ಸೇನೆಯಲ್ಲಿ ದೀಪವನ್ನು ಬೆಳಗಿದುದು (ದ್ರೋಣ 163/15). ವೃದ್ಧ ಕನ್ಯೆಯನ್ನು ವಿವಾಹವಾಗುವಂತೆ ಪ್ರೇರಿಸಿ ದುದು (ಶಲ್ಯ 52/12–13). ಬಲರಾಮನೊಡನೆ ಕೌರವರ ವಿನಾಶದ ಸಮಾಚಾರ ಹೇಳಿದುದು (ಶಲ್ಯ 54/25–34). ಅಶ್ವತ್ಥಾಮ ಮತ್ತು

ಅರ್ಜುನರ ಬ್ರಹ್ಮಾಸ್ತ್ರವನ್ನು ಶಾಂತಗೊಳಿಸಲು ಪ್ರತ್ಯಕ್ಷನಾದುದು (ಸೌಪ್ತಿಕ 14/11). ಯುದ್ಧದ ಅನಂತರ ಯುಧಿಷ್ಠಿರನ ಬಳಿಗೆ ಬಂದು, ಅವನೊಡನೆ ಕುಶಲಸಮಾಚಾರ ಕೇಳಿದುದು (ಶಾಂತಿ 1/10–12). ಯುಧಿಷ್ಠಿರನಲ್ಲಿ ಕರ್ಣನಿಗೆ ಶಾಪ ಪ್ರಾಪ್ತವಾದ ಸನ್ನಿವೇಶವನ್ನು ಹೇಳಿದುದು (ಶಾಂತಿ ಅಧ್ಯಾಯ 2 ರಿಂದ 3). ಕರ್ಣನ ಪರಾಕ್ರಮದ ವರ್ಣನೆ (ಶಾಂತಿ ಅಧ್ಯಾಯ 4 ರಿಂದ 5). ಇವನಿಂದ ಸೃಂಜಯನಿಗೆ ಹೇಳಲ್ಪಟ್ಟ ಷೋಡಶ ರಾಜಕೀಯೋಪಾಖ್ಯಾನ, ಶ್ರೀಕೃಷ್ಣ ನಿಂದ ಯುಧಿಷ್ಠಿರನ ಮುಂದೆ ವರ್ಣನೆ (ಶಾಂತಿ 29). ಶ್ರೀಕೃಷ್ಣನಿಂದ, ಈತ ಪರ್ವತ ಋಷಿ ಯೊಂದಿಗೆ ಸಂಚರಿಸುತ್ತಿದ್ದುದು ಮತ್ತು ಪರಸ್ಪರ ಶಾಪ ಇತ್ಯಾದಿಗಳ ವರ್ಣನೆ (ಶಾಂತಿ 30). ಇವನು ಯುಧಿಷ್ಠಿರನಿಗೆ ಸೃಂಜಯಪುತ್ರ ಸುವರ್ಣ ಸ್ಥೀವಿಯ ವೃತ್ತಾಂತ ಹೇಳಿದುದು (ಶಾಂತಿ 31). ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೋಡಲು ಇತರ ಋಷಿಗಳೊಂದಿಗೆ ಈತನೂ ಹೋದುದು (ಶಾಂತಿ 47/5). ಭೀಷ್ಮನಲ್ಲಿ ಧರ್ಮವಿಷಯದ ಪ್ರಶ್ನೆ ಮಾಡಲು ಯುಧಿಷ್ಠಿರಾದಿಗಳಿಗೆ ಪ್ರೇರಣೆ ನೀಡಿದುದು (ಶಾಂತಿ 54/8–10). ಜಾತಿ–ಸೋದರರಲ್ಲಿ ಜಗಳ ಬಾರದಿರುವ ವಿಷಯದಲ್ಲಿ ಶ್ರೀಕೃಷ್ಣನ ಪ್ರಶ್ನೆಗಳಿಗೆ ಉತ್ತರ (ಶಾಂತಿ 81). ಬೂರುಗ ವೃಕ್ಷದ ಪ್ರಶಂಸೆ (ಶಾಂತಿ 154/10–31). ಬೂರುಗ ವೃಕ್ಷದ ಅಹಂಕಾರ ನೋಡಿ ಅದನ್ನು ನಿಂದಿಸಿದುದು (ಶಾಂತಿ 155/9–18). ವಾಯುದೇವನ ಬಳಿಗೆ ಹೋಗಿ ಶಾಲ್ಮಲಿ ವೃಕ್ಷದ ವಿಷಯ ಹೇಳಿದುದು (ಶಾಂತಿ 156/2–4). ಭಗವಾನ್ ವಿಷ್ಣುವಿನಲ್ಲಿ ಕೃಪಾಯಾಚನೆ (ಶಾಂತಿ 207/46ರ ನಂತರ). ಭಗವಂತ ವಿಷ್ಣುವಿನ ಸ್ತೋತ್ರ (ಶಾಂತಿ 209 ದಾ. ಪಾಠ). ಇಂದ್ರ ನೊಂದಿಗೆ ಲಕ್ಷ್ಮಿಯ ದರ್ಶನ (ಶಾಂತಿ 228/116). ಪುತ್ರಶೋಕದಿಂದ ದುಃಖಿತನಾದ ಅಕಂಪನ ನನ್ನು ಸಮಾಧಾನಪಡಿಸಿದುದು (ಶಾಂತಿ 256 ರಿಂದ 258ರ ವರೆಗೆ). ಮಹರ್ಷಿ ಅಸಿತ ದೇವಲನೊಂದಿಗೆ ಸೃಷ್ಟಿಯ ವಿಷಯದಲ್ಲಿ ಪ್ರಶ್ನೆ (ಶಾಂತಿ 275/3). ಮಹರ್ಷಿ ಸಮಂಗನೊಡನೆ, ಅವನ ಶೋಕ ಹೀನತೆಯ ಕಾರಣ ಕೇಳಿದುದು (ಶಾಂತಿ 286/3–4). ಗಾಲವ ಮುನಿಗೆ ಶ್ರೇಯದ ಉಪದೇಶ ಕೊಟ್ಟದ್ದು (ಶಾಂತಿ 287/12–59). ವ್ಯಾಸರ ಬಳಿಗೆ ಬಂದುದು ಮತ್ತು ಅವರ ದುಃಖದ ಕಾರಣ ಕೇಳಿದುದು (ಶಾಂತಿ 328/12–15). ವ್ಯಾಸರು ಪುತ್ರನೊಂದಿಗೆ ವೇದ ಪಾಠ ಮಾಡುವಂತೆ ಹೇಳಿದುದು (ಶಾಂತಿ 328/20–21). ಶುಕದೇವನಿಗೆ ವೈರಾಗ್ಯ, ಜ್ಞಾನ ಇತ್ಯಾದಿ ವಿವಿಧ ವಿಷಯಗಳ ಉಪದೇಶ (ಶಾಂತಿ ಅಧ್ಯಾಯ 329ರಿಂದ 331 ವರೆಗೆ). ನರನಾರಾಯಣರ ಸಮಕ್ಷಮದಲ್ಲಿ 'ಎಲ್ಲರಿಂದ ಶ್ರೇಷ್ಠನು ಯಾರು' ಎಂಬ ವಿಷಯದ ಜಿಜ್ಞಾಸೆ (ಶಾಂತಿ 334/25–27). ಶ್ವೇತದ್ವೀಪದ ದರ್ಶನ ಮತ್ತು ಅಲ್ಲಿರುವ ನಿವಾಸಿಗಳ ವರ್ಣನೆ (ಶಾಂತಿ 335/9–12). ಇನ್ನೂರು ಹೆಸರುಗಳಿಂದ ಭಗವಂತನ ಸ್ತುತಿ (ಶಾಂತಿ 338 ಅಧ್ಯಾಯ). ಶ್ವೇತ ದ್ವೀಪದಲ್ಲಿ ಭಗವಂತನ ದರ್ಶನ (ಶಾಂತಿ 339/1–10). ಶ್ವೇತದ್ವೀಪದಿಂದ ಹಿಂತಿರುಗಿ ನರನಾರಾಯಣರ ಬಳಿಗೆ ಹೋದುದು ಮತ್ತು ಅವರ ಮುಂದೆ ಅಲ್ಲಿರುವ ದೃಶ್ಯದ ವರ್ಣನೆ ಮಾಡಿದುದು (ಶಾಂತಿ 343/47–66). ಮಾರ್ಕಂಡೇಯರ ವಿವಿಧ ಪ್ರಶ್ನೆಗಳಿಗೆ ಉತ್ತರ ನೀಡಿದುದು (ಅನು 22). ಶ್ರೀಕೃಷ್ಣನು ಕೇಳಿದಾಗ ಪೂಜನೀಯ ಪುರುಷರ ಲಕ್ಷಣ ಮತ್ತು ಅವರ ಆದರ ಸತ್ಕಾರದಿಂದ ಆಗುವ ಲಾಭದ ವರ್ಣನೆ ಮಾಡಿದುದು (ಅನು 31/5–35). ಪಂಚಚೂಡಾ ಅಪ್ಸರೆಯೊಡನೆ ಸ್ತ್ರೀಯರ ಸ್ವಭಾವದ ಕುರಿತು ಪ್ರಶ್ನೆ (ಅನು 38/6). ಭೀಷ್ಮನೊಡನೆ ಅನ್ನದಾನದ ಮಹಿಮೆಯನ್ನು ವರ್ಣಿಸಿದುದು (ಅನು 63/5–42). ದೇವಕೀ ದೇವಿಗೆ ಬೇರೆ ಬೇರೆ ನಕ್ಷತ್ರಗಳಲ್ಲಿ ಬೇರೆ ಬೇರೆ ವಸ್ತುಗಳ ದಾನದ ಮಹತ್ವವನ್ನು ಹೇಳಿದುದು (ಅನು 64/5–35). ಅಗಸ್ತ್ಯರ ಕಮಲಗಳ ಅಪಹಾರ ವಾದಾಗ ಪ್ರತಿಜ್ಞೆ ಮಾಡಿದುದು (ಅನು 94/30). ಪುಂಡರೀಕನಿಗೆ ಶ್ರೇಯಕ್ಕಾಗಿ ಭಗವಾನ್ ನಾರಾಯಣನ ಆರಾಧನೆ ಮಾಡಲು ಉಪದೇಶ ನೀಡಿದುದು (ಅನು 124). ಇವನಿಂದ ಹಿಮಾಲಯ ಪರ್ವತದ ಮೇಲೆ ಭೂತಗಣಗಳ ಸಹಿತ ಶಿವನ ಶೋಭೆಯ ವರ್ಣನೆ (ಅನು 140). ಸಂವರ್ತನನ್ನು ಪುರೋಹಿತನಾಗಿ ಮಾಡಿ ಕೊಳ್ಳಲು ಮರುತ್ತನಿಗೆ ಸಲಹೆ ನೀಡಿದುದು (ಆಶ್ವ

6/18–19). ಮರುತ್ತನಿಗೆ ಸಂವರ್ತನ ನಿವಾಸ ಸ್ಥಾನವನ್ನು ಹೇಳಿದುದು (ಆಶ್ವ 6/20–26). ಮಹರ್ಷಿ ದೇವಮತನ ಪ್ರಶ್ನೆಗಳಿಗೆ ಉತ್ತರ ನೀಡಿದುದು (ಆಶ್ವ 24). ಯುಧಿಷ್ಠಿರನ ಅಶ್ವ ಮೇಧ ಯಜ್ಞದಲ್ಲಿ ಇವನ ಉಪಸ್ಥಿತಿ (ಆಶ್ವ 88/39). ನಾರದನು ಪ್ರಾಚೀನ ಋಷಿಗಳ ತಪಃ ಸಿದ್ಧಿಯ ದೃಷ್ಟಾಂತ ಕೊಟ್ಟು ಧೃತರಾಷ್ಟ್ರನ ತಪಸ್ಸಿಗೆ ಸಂಬಂಧಿಸಿದ ಶ್ರದ್ಧೆಯನ್ನು ಹೆಚ್ಚಿಸಿ ದುದು ಮತ್ತು ಶತಯೂಪನು ಕೇಳಿದಾಗ ಧೃತ ರಾಷ್ಟ್ರನಿಗೆ ಸಿಗುವ ಗತಿಯನ್ನು ವರ್ಣಿಸಿದುದು (ಆಶ್ರಮ 20 ಅಧ್ಯಾಯ). ಇವನು ಯುಧಿ ಷ್ಠಿರನಲ್ಲಿ ಕುಂತಿ, ಗಾಂಧಾರಿ ಮತ್ತು ಧೃತ ರಾಷ್ಟ್ರರು ದಾವಾಲನಲನಿಂದ ದಗ್ಧರಾದ ಸಮಾ ಚಾರ ಹೇಳಿದುದು (ಆಶ್ರಮ 37/1–38). ಧೃತರಾಷ್ಟ್ರ ಲೌಕಿಕ ಅಗ್ನಿಯಿಂದಲ್ಲ; ತನ್ನದೇ ಅಗ್ನಿಯಿಂದ ದಗ್ಧನಾಗಿದ್ದಾನೆ. ಈ ವಿಚಾರವನ್ನು ಯುಧಿಷ್ಠಿರನಿಗೆ ಹೇಳಿ, ಅವರಿಗೆ ಜಲಾಂಜಲಿ ಕೊಡಲು ಆಜ್ಞೆ ನೀಡಿದುದು (ಆಶ್ರಮ 39/1–9). ಸಾಂಬನ ಹೊಟ್ಟೆಯಿಂದ ಒನಕೆ ಹುಟ್ಟುವಂತೆ ಶಾಪಕೊಟ್ಟ ಋಷಿಗಳಲ್ಲಿ ಈತನೂ ಇದ್ದನು (ಮೌಸಲ 1/15–22). ಇವನಿಂದ ಯುಧಿಷ್ಠಿರನ ಪ್ರಶಂಸೆ (ಮಹಾಪ್ರ 3/26–29). ಮಹಾಭಾರತ ದಲ್ಲಿ ಬಂದಿರುವ ನಾರದನ ಹೆಸರುಗಳು– ಬ್ರಹ್ಮರ್ಷಿ, ದೇವರ್ಷಿ, ಪರಮೇಷ್ಠಿಜ, ಪರಮೇಷ್ಠೀ, ಪರಮೇಷ್ಠಿಪುತ್ರ, ಸುರರ್ಷಿ –ಇತ್ಯಾದಿ.

(2) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/53).

**ನಾರದಾಗಮನ ಪರ್ವ** – ಆಶ್ರಮ ವಾಸಿಕ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 37ರಿಂದ 39ರ ವರೆಗೆ).

**ನಾರದೀ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/59).

**ನಾರಾಚ** – ಬಾಣವಿಶೇಷ (ಆದಿ 138/6). (ನೇರಾದ ಬಾಣವನ್ನು ನಾರಾಚವೆಂದು ಕರೆಯು ತ್ತಾರೆ. ಅದರ ತುದಿ ಹರಿತವಾಗಿರುತ್ತದೆ.

**ನಾರಾಯಣ** – (1) ಭಗವಂತನಾದ ವಿಷ್ಣು ಮತ್ತು ಅವನ ಅವತಾರಭೂತ ಧರ್ಮಪುತ್ರ ನಾರಾಯಣ. ಇವನು ತನ್ನ ಸಹೋದರ ನರ ನೊಂದಿಗೆ ಬದರಿಕಾಶ್ರಮದಲ್ಲಿ, ಸುವರ್ಣಮಯ ರಥದ ಮೇಲೆ ಕುಳಿತು ತಪಸ್ಸು ಮಾಡುತ್ತಾನೆ. ಇವನು ಸ್ವಾಯಂಭುವ ಮನ್ವಂತರದಲ್ಲಿ ಧರ್ಮನಲ್ಲಿ ನಾಲ್ಕು ಸ್ವರೂಪದಿಂದ ಅವತಾರ ಹೊಂದಿದನು. ನರ, ನಾರಾಯಣ, ಹರಿ ಮತ್ತು ಕೃಷ್ಣ (ಶಾಂತಿ 334/9–12). ಇವನಿಂದ ದೇವತೆಗಳಿಗೆ ಸಮುದ್ರ ಮಥನದ ಆದೇಶ (ಆದಿ 17/11–13). ಮೋಹಿನೀರೂಪ ಧಾರಣಮಾಡಿ ದೇವತೆಗಳಿಗೆ ಅಮೃತ ಕುಡಿಸಿದುದು (ಆದಿ 18/45–46). ಇವನಿಂದ ರಾಹುವಿನ ಶಿರಚ್ಛೇದ ಮತ್ತು ದೇವಾಸುರ ಸಂಗ್ರಾಮದಲ್ಲಿ ಅಸುರರ ಸಂಹಾರ (ಆದಿ 19/5–10; 19–24). ಇವನು ಗರುಡನನ್ನು ತನ್ನ ವಾಹನವಾಗಿ ಮಾಡಿ ಕೊಂಡನು ಮತ್ತು ಧ್ವಜದಲ್ಲಿ ಸ್ಥಾನ ನೀಡಿದನು (ಆದಿ 33/13–17). ಇವನ ಕೃಷ್ಣ ಮತ್ತು ಶ್ವೇತ ಕೇಶಗಳು ಶ್ರೀಕೃಷ್ಣ ಮತ್ತು ಬಲರಾಮ ರೂಪದಿಂದ ಪ್ರಕಟವಾಗಿದ್ದವು (ಆದಿ 196/32–33). ಇವನು ಬ್ರಹ್ಮಸಭೆಯಲ್ಲಿ ವಿರಾಜಮಾನ ನಾಗಿರುತ್ತಾನೆ (ಸಭಾ 11/52–53). ಭೀಷ್ಮನಿಂದ ಇವನ ಸ್ವರೂಪ ಮತ್ತು ಮಹಿಮೆಯ ವರ್ಣನೆ ಮತ್ತು ಇವನಿಂದ ಮಧುಕೈಟಭ ದೈತ್ಯರ ವಧಾ ಪ್ರಸಂಗದ ವರ್ಣನೆ (ಸಭಾ 38/29). ಇವನ ವರಾಹ, ನರಸಿಂಹ ಇತ್ಯಾದಿ ಅವತಾರಗಳನ್ನು ಸಂಕ್ಷೇಪವಾಗಿ ಮತ್ತು ಶ್ರೀಕೃಷ್ಣಾವತಾರವನ್ನು ಸ್ವಲ್ಪ ವಿಸ್ತಾರವಾಗಿ ವರ್ಣಿಸಿದುದು (ಸಭಾ 38). ಇಂದ್ರನಿಂದ ಇವನ ಅವತಾರದ ವರ್ಣನೆ (ವನ 47/10). ಇವನಿಂದ ಇಂದ್ರನಿಗೆ ಸಮಾಧಾನ ಮತ್ತು ನರಕಾಸುರನ ವಧೆ (ವನ 142/25–27). ಇವನ ವರಾಹಾವತಾರ ಮತ್ತು ಪೃಥ್ವಿಯ ಉದ್ಧಾರ (ವನ 145/ 45–47). ಪ್ರಳಯಕಾಲ ದಲ್ಲಿ ಬಾಲಮುಕುಂದ ರೂಪದಲ್ಲಿ ಮಾರ್ಕಂ ಡೇಯನಿಗೆ ತನ್ನ ಸ್ವರೂಪದ ಪರಿಚಯವನ್ನಿತ್ತದ್ದು (ವನ 189/1–49). ಇವನು ಕುವಲಾಶ್ವನಲ್ಲಿ ತನ್ನ ತೇಜಸ್ಸನ್ನು ಸ್ಥಾಪಿಸಿದ್ದು (ವನ 204/13). ಇವನಿಂದ ಸ್ಕಂದನಿಗೆ ಪಾರ್ಷದ ಪ್ರದಾನ (ಶಲ್ಯ 45/37). ಇಂದ್ರ ರೂಪದಿಂದ ಮಾಂಧಾತಾನಿಗೆ ದರ್ಶನ ಕೊಟ್ಟದ್ದು (ಶಾಂತಿ 64/14). ಇಂದ್ರ ರೂಪ ಧರಿಸಿ ರಾಜಾ ಮಾಂಧಾತನೊಂದಿಗೆ ಇವನ ಸಂವಾದ (ಶಾಂತಿ 64/16–30; ಶಾಂತಿ 65). ನಾರದನು ಕೇಳಿದಾಗ ಇವನು ತನ್ನ

ಆರಾಧ್ಯ ತ್ರಿಗುಣಾತೀತ ಪುರುಷ ಸನಾತನ ಪರಮಾತ್ಮನನ್ನೇ ಸರ್ವಶ್ರೇಷ್ಠನೆಂದು ಹೇಳಿದುದು (ಶಾಂತಿ 334/28–45). ರಾಜಾ ಉಪರಿಚರನ ಮೇಲೆ ಕೃಪೆ (ಶಾಂತಿ 337/33–35). ನಾರದ ನಿಗೆ ತನ್ನ ಚತುರ್ವ್ಯೂಹ ಸ್ವರೂಪದ ಪರಿಚಯ ಮಾಡಿದುದು (ಶಾಂತಿ 339/19–76). ತನ್ನ ಭಾವೀ ಅವತಾರಗಳ ವರ್ಣನೆ ಮಾಡಿದುದು (ಶಾಂತಿ 339/77–108). ಬ್ರಹ್ಮಾದಿ ದೇವತೆಗಳಿಗೆ ಪ್ರವೃತ್ತಿ–ನಿವೃತ್ತಿ ಇತ್ಯಾದಿ ಧರ್ಮಗಳ ಉಪದೇಶ ಮಾಡಿದುದು (ಶಾಂತಿ 340/49–89). ಶಿವನೊಂದಿಗೆ ಯುದ್ಧ ಮತ್ತು ವಿಜಯ (ಶಾಂತಿ 342/110–116). ನಾರದನೊಡನೆ ವಾಸುದೇವನ ಮಾಹಾತ್ಮ್ಯ ಹೇಳಿದುದು (ಶಾಂತಿ 344). ನಾರದನೊಂದಿಗೆ ಭಗವಾನ್ ವಾರಾಹಕೃತ ಪಿತೃ ಪೂಜೆಯ ಮರ್ಯಾದೆಯನ್ನು ವರ್ಣಿಸಿದುದು (ಶಾಂತಿ 345/12–28). ಇವನಿಂದ ಮಧು ಮತ್ತು ಕೈಟಭರ ಜನನ (ಶಾಂತಿ 347/ 24–26). ಬ್ರಹ್ಮನಿಂದ ನಾರಾಯಣನ ಸ್ತುತಿ. ಇವನು ಹಯಗ್ರೀವ ರೂಪದಿಂದ ಪ್ರಕಟನಾಗಿ ಮಧು–ಕೈಟಭರಿಂದ ಅಪಹೃತವಾದ ವೇದಗಳನ್ನು ಹುಡುಕಿತಂದದ್ದು ಮತ್ತು ಮಧು ಕೈಟಭ ರೊಂದಿಗೆ ಯುದ್ಧಮಾಡಿ, ಅವರಿಬ್ಬರ ವಧೆಯ ಮೂಲಕ ಬ್ರಹ್ಮನ ಶೋಕವನ್ನು ದೂರ ಮಾಡಿದುದು (ಶಾಂತಿ 347/69–71). ಇವನ ಮಹಿಮೆಯ ವರ್ಣನೆ (ಶಾಂತಿ 347/80–96). ಪೌಷ ಮಾಸದಲ್ಲಿ ನಾರಾಯಣನ ಪೂಜೆಯಿಂದ ಪ್ರಾಪ್ತವಾಗುವ ಪುಣ್ಯಫಲದ ವರ್ಣನೆ (ಅನು 109/4). ಇವನ ಸಹಸ್ರನಾಮಗಳ ವರ್ಣನೆ (ಅನು 149). ಶ್ರೀಕೃಷ್ಣ ಈ ಲೋಕದಿಂದ ಅದೃಶ್ಯನಾದ ಅನಂತರ ತನ್ನ ನಾರಾಯಣ ಸ್ವರೂಪದಲ್ಲಿ ಪ್ರತಿಷ್ಠಿತನಾದನು (ಸ್ವರ್ಗಾ 5/24). ಮಹಾಭಾರತದಲ್ಲಿ ಬಂದಿರುವ ನಾರಾಯಣನ ಹೆಸರುಗಳು – ಕೃಷ್ಣ, ವಾಸುದೇವ, ಮಹಾ ಪುರುಷ, ವಿಷ್ಣು ಇತ್ಯಾದಿ.

2) ಸಂಶಪ್ತಕರ ಸೈನ್ಯಕ್ಕೆ ನಾರಾಯಣ ಎಂಬ ಹೆಸರಿದೆ (ದ್ರೋಣ 19).

3) ದ್ರೋಣರು ನಾರಾಯಣನನ್ನು ಮೆಚ್ಚಿಸಿ ಪಡೆದ ಅಸ್ತ್ರ (ದ್ರೋಣ 165). ಇದನ್ನು ದ್ರೋಣ ವಧೆಯಾದಾಗ ಅಶ್ವತ್ಥಾಮ ಪ್ರಯೋಗಿಸಿದನು.

4) ಗೋಪಾಲ ಸೈನ್ಯದ ಒಂದು ಹೆಸರು. ಕೌರವ ಮತ್ತು ಅರ್ಜುನ ಸಹಾಯ ಯಾಚಿಸಿ ಬಂದಾಗ, ಶ್ರೀಕೃಷ್ಣನು, "ಹತ್ತುಕೋಟಿ ನಾರಾಯಣರೆಂಬ ಗೋಪಾಲ ಸೈನಿಕರು ಒಂದು ಪಕ್ಷಕ್ಕೆ ಇರುತ್ತಾರೆ" ಎಂದನು (ಉದ್ಯೋಗ 7).

**ನಾರಾಯಣಸ್ಥಾನ** – (ಅಥವಾ ಶಾಲಿಗ್ರಾಮ ತೀರ್ಥ) ಒಂದು ಪರಮ ಪವಿತ್ರ ತೀರ್ಥ. ಇಲ್ಲಿ ಭಗವಾನ್ ವಿಷ್ಣು ಸದಾ ವಾಸಿಸುತ್ತಾನೆ. ಬ್ರಹ್ಮನೇ ಮೊದಲಾದ ದೇವತೆಗಳು, ತಪೋಧನ ಋಷಿ ಗಳು, ಆದಿತ್ಯರು, ವಸುಗಳು ಮತ್ತು ರುದ್ರರು ಕೂಡಾ ಅಲ್ಲಿದ್ದುಕೊಂಡು ಜನಾರ್ದನನ ಉಪಾಸನೆ ಮಾಡುತ್ತಾರೆ. ಇಲ್ಲಿ ವಿಷ್ಣು ಶಾಲಗ್ರಾಮವೆಂಬ ಹೆಸರಿನಲ್ಲಿ ಪ್ರಸಿದ್ಧನಾಗಿದ್ದಾನೆ. (ಬಹುಶಃ ಈ ಸ್ಥಾನ ನೇಪಾಲ ರಾಜ್ಯಕ್ಕೆ ಸೇರಿದ ಶಾಲಗ್ರಾಮೀ ಅಥವಾ ಗಂಡಕಿಯ ಉಗಮದ ಬಳಿಇದೆ. ಇಲ್ಲಿ ಶಾಲಗ್ರಾಮ ಶಿಲೆ ಕಾಣಿಸುತ್ತದೆ.). ಇಲ್ಲಿ ಭಗವಾನ್ ವಿಷ್ಣುವಿನ ಸಮೀಪಕ್ಕೆ ಯಾತ್ರೆ ಮಾಡಿ, ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ ಮತ್ತು ವಿಷ್ಣುಧಾಮಕ್ಕೆ ಹೋಗುತ್ತಾನೆ (ವನ 84/125).

**ನಾರಾಯಣಾಶ್ರಮ** – ಒಂದು ತೀರ್ಥ (ವನ 129/6).

**ನಾರಾಯಣಾಸ್ತ್ರಮೋಕ್ಷಪರ್ವ** – ದ್ರೋಣಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 193 ರಿಂದ 220ರ ವರೆಗೆ).

**ನಾರೀತೀರ್ಥ** – ಪ್ರಾಚೀನ ಕಾಲದ ಐದು ತೀರ್ಥಗಳು. ಇವುಗಳನ್ನು ಸ್ವಲ್ಪಕಾಲದ ವರೆಗೆ ತಾಪಸರು ಬಿಟ್ಟುಬಿಟ್ಟಿದ್ದರು. ಅವುಗಳ ಹೆಸರು– ಅಗಸ್ತ್ಯತೀರ್ಥ, ಸೌಭದ್ರತೀರ್ಥ, ಪೌಲೋಮ ತೀರ್ಥ, ಕಾರಂಧಮ ತೀರ್ಥ ಮತ್ತು ಭರದ್ವಾಜ ತೀರ್ಥ. ಈ ತೀರ್ಥಗಳ ಬಳಿಗೆ ಅರ್ಜುನನ ಆಗಮನ. ಅವನು ಸೌಭದ್ರತೀರ್ಥದಲ್ಲಿ ಮುಳುಗು ಹಾಕಿದುದು ಮತ್ತು ಅಲ್ಲಿ ಶಾಪವಶಳಾಗಿದ್ದ ವರ್ಗಾ ಎಂಬ ಹೆಸರಿನ ಅಪ್ಸರೆಯ ಉದ್ಧಾರ ಮಾಡಿದುದು. ವರ್ಗಾ ಅರ್ಜುನನಿಗೆ ಐದು ಅಪ್ಸರೆಯರಿಗೆ ಸಿಕ್ಕಿದ ಶಾಪದ ವಿಸ್ತಾರವಾದ ಕಥೆ ಹೇಳಿದುದು (ಆದಿ 215). ವರ್ಗಾಳ ಪ್ರಾರ್ಥನೆ ಯಂತೆ ಅರ್ಜುನನಿಂದ ಉಳಿದ ನಾಲ್ಕು ಅಪ್ಸರೆ ಯರ ಉದ್ಧಾರ ಮತ್ತು ಈ ಐದು ತೀರ್ಥಗಳಿಗೆ

ನಾರೀತೀರ್ಥವೆಂಬ ಪ್ರಸಿದ್ಧಿ (ಆದಿ 216/1–22). ಈ ತೀರ್ಥಕ್ಕೆ ಸಹೋದರರ ಸಹಿತ ಯುಧಿಷ್ಠಿರನ ಆಗಮನ, ಸ್ನಾನ ಮತ್ತು ಗೋದಾನ (ವನ 118/4–7).

**ನಾವ್ಯಾಶ್ರಮ** – ರಾಜಾ ಲೋಮಪಾದನಿಂದ ನಿರ್ಮಿತ ಆಶ್ರಮ. ಯಾವ ನೌಕೆಯಿಂದ ಅವನ ರಾಜ್ಯಕ್ಕೆ ಋಷ್ಯಶೃಂಗರು ಬಂದಿದ್ದರೋ, ಅದೇ ಹೆಸರಿನಿಂದ ಇದರ ನಾಮಕರಣವಾಯಿತು (ವನ 113/9).

**ನಾಸತ್ಯ** – ಅಶ್ವಿನೀ ಕುಮಾರರಲ್ಲಿ ಒಬ್ಬನ ಹೆಸರು (ಶಾಂತಿ 208/17).

**ನಿಕುಂಭ** – (1) ಪ್ರಹ್ಲಾದನ ಮೂರನೇ ಮಗ (ಆದಿ 65/19).

(2) ಒಬ್ಬ ವಿಖ್ಯಾತ ದಾನವ (ಆದಿ 65/26).

(3). ಹಿರಣ್ಯಕಶಿಪುವಿನ ಕುಲದಲ್ಲಿ ಹುಟ್ಟಿದ ಒಬ್ಬ ದೈತ್ಯ. ಸುಂದ ಉಪಸುಂದರ ತಂದೆ (ಆದಿ 208/2–3).

(4). ಸ್ಕಂದನ ಒಬ್ಬ ಸೈನಿಕ (ಶಲ್ಯ 45/56).

**ನಿಖರ್ವಟ** – ಒಬ್ಬ ರಾಕ್ಷಸ. ಇವನು ತಾರನೆಂಬ ವಾನರನೊಡನೆ ಯುದ್ಧ ಮಾಡಿದ್ದನು (ವನ 285/9).

**ನಿಚಂದ್ರ** – ಒಬ್ಬ ದಾನವ (ಆದಿ 65/26).

**ನಿಚಿತಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/18).

**ನಿತಂಭೂ** – ಒಬ್ಬ ದಿವ್ಯ ಮಹರ್ಷಿ. ಈತ ಶರಶಯ್ಯೆಯಲ್ಲಿದ್ದು ಕಾಲನಿರೀಕ್ಷೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/8).

**ನಿಧಿ** – 'ಶಂಖ' ಎಂಬ ಹೆಸರಿನ ನಿಧಿ. ಇದರ ದಾನಮಾಡಿ ರಾಜಾಬೃಹ್ಮದತ್ತನು ಪರಮಗತಿಯನ್ನು ಪ್ರಾಪ್ತಿಸಿಕೊಂಡಿದ್ದನು (ಅನು 137/17).

**ನಿಬಿಡ** – ಕ್ರೌಂಚದ್ವೀಪದ ಒಂದು ಪರ್ವತ (ಭೀಷ್ಮ 12/19).

**ನಿಮಿ** – (1) ಒಬ್ಬ ಪ್ರಾಚೀನ ರಾಜ. ವಿದೇಹದ ಅಧಿಪತಿ (ಆದಿ 1/234). ಇವನು ಯಮರಾಜನಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/9). ಇವನಿಂದ ಬ್ರಾಹ್ಮಣರಿಗೆ ರಾಜ್ಯದಾನ (ವನ 234/26). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/65).

(2) ಅತ್ರಿಕುಲದಲ್ಲಿ ಹುಟ್ಟಿದ ಒಬ್ಬ ಋಷಿ. ಇವನು ದತ್ತಾತ್ರೇಯನ ಪುತ್ರನಾಗಿದ್ದನು (ಅನು 91/5). ಇವನು ತನ್ನ ಪುತ್ರ ಶ್ರೀಮಂತನಿಗೆ ಪಿಂಡದಾನ ಮಾಡಿದ್ದನು (ಅನು 91/14–15). ಇವನು ಸ್ಮರಣೆಮಾಡಿದಾಗ ವಂಶಪ್ರವರ್ತಕನಾದ ಅತ್ರಿಮುನಿ ಇವನ ಮುಂದೆ ಪ್ರತ್ಯಕ್ಷನಾದುದು (ಅನು 91/18).

(3) ವಿದರ್ಭರಾಜನ ಪುತ್ರ. ಇವನು ಮಹಾತ್ಮನಾದ ಅಗಸ್ತ್ಯನಿಗೆ ತನ್ನ ಕನ್ಯೆಯನ್ನು ದಾನಮಾಡಿ ಸ್ವರ್ಗಲೋಕ ಪಡೆದಿದ್ದನು (ಅನು 137/11).

**ನಿಮೇಷ** – ಗರುಡನ ಒಂದು ಪ್ರಮುಖ ಸಂತಾನ (ಉದ್ಯೋಗ 101/10).

**ನಿಯತಿ** – ಬ್ರಹ್ಮನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುವ ಒಬ್ಬ ದೇವಿ (ಸಭಾ 11/43).

**ನಿಯತಾಯು** – ಶ್ರುತಾಯುವಿನ ಪುತ್ರ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ದ್ರೋಣ 94/29).

**ನಿಯೋಧಕ** – ಕುಸ್ತಿಯಾಟದ ಒಬ್ಬ ಮಲ್ಲನ ಹೆಸರು (ವಿರಾಟ 2/9).

ನಿರಮಿತ್ರ – (1) ನಕುಲನ ಮಗ. ಇವನ ತಾಯಿ ಕರೇಣುಮತಿ (ಆದಿ 95/79).

(2) ಒಬ್ಬ ತ್ರಿಗರ್ತರಾಜಕುಮಾರ. ಇವನು ಸಹದೇವನಿಂದ ಕೊಲ್ಲಲ್ಪಟ್ಟನು (ದ್ರೋಣ 107/26).

**ನಿರವಿಂದ** – ಒಂದು ಪರ್ವತ. ಇಲ್ಲಿ ಸ್ನಾನ ಮತ್ತು ಪಿಂಡದಾನದ ಫಲ (ಅನು 25/42).

**ನಿರಾಮಯ** – ಒಬ್ಬ ಪ್ರಾಚೀನ ರಾಜ (ಆದಿ 1/237).

**ನಿರಾಮಯಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/33).

**ನಿರಾಮರ್ದ** – ಒಬ್ಬ ಪ್ರಾಚೀನ ರಾಜ (ಆದಿ 1/237).

**ನಿರ್ಋತಿ** – (1) ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಮೊಮ್ಮಗ ಮತ್ತು ಸ್ಥಾಣುವಿನ ಪುತ್ರ (ಆದಿ 66/2). ಇವನು ಅರ್ಜುನನ ಜನ್ಮ

ಮಹೋತ್ಸವಕ್ಕೆ ಬಂದಿದ್ದನು (ಆದಿ 122/68).

(2) ಅಧರ್ಮನ ಪತ್ನಿ. ಇವಳಿಂದ ನೈರ್ಋತರೆಂಬ ಮೂವರು ಭಯಂಕರ ರಾಕ್ಷಸರು ಹುಟ್ಟಿದರು. ಇವರ ಹೆಸರು – ಭಯ, ಮಹಾ ಭಯ ಮತ್ತು ಮೃತ್ಯು (ಆದಿ 66/54–55).

**ನಿರ್ಮೋಚನ** – ಒಂದು ನಗರ. ಅದು ಮುರಾಸುರನ ರಾಜಧಾನಿಯಾಗಿತ್ತು (ಉದ್ಯೋಗ 48/83).

**ನಿವಾತಕವಚ** – ದೈತ್ಯರ ಒಂದು ಗುಂಪು. ಇಂದ್ರನಿಂದ ಇವರ ವರ್ಣನೆ (ವನ 47/15). ಅರ್ಜುನನೊಂದಿಗೆ ಇವರ ಯುದ್ಧ ಮತ್ತು ಸಂಹಾರ (ವನ ಅಧ್ಯಾಯ 169ರಿಂದ 172ರ ವರೆಗೆ).

**ನಿವಾತ ಕವಚಯುದ್ಧಪರ್ವ**– ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 165 ರಿಂದ 175ರ ವರೆಗೆ).

**ನಿಶಠ** – (1) ವೃಷ್ಣಿವಂಶದ ಒಬ್ಬ ರಾಜಕುಮಾರ. ಇವನು ರೈವತಕ ಪರ್ವತದ ಉತ್ಸವದಲ್ಲಿ ಭಾಗವಹಿಸಿದ್ದನು (ಆದಿ 378/10). (ಹರಿವಂಶ ಪ್ರಕಾರ ಇವನು ಬಲರಾಮ ಮತ್ತು ರೇವತಿಯ ಮಗ). ಇವನು ಸುಭದ್ರೆಗಾಗಿ ವರದಕ್ಷಿಣೆ ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಬಂದಿದ್ದನು (ಆದಿ 20/31). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಭಾಗಿಯಾಗಿದ್ದನು (ಸಭಾ 34/16). ಉಪಪ್ಲವ್ಯನಗರದಲ್ಲಾದ ಅಭಿಮನ್ಯು ವಿವಾಹದಲ್ಲಿ ಉಪಸ್ಥಿತನಾಗಿದ್ದನು (ವಿರಾಟ 72/22). ಅಶ್ವಮೇಧ ಯಜ್ಞಕ್ಕೆ ಶ್ರೀಕೃಷ್ಣನೊಂದಿಗೆ ನಿಶಠನು ಆಗಮಿಸಿದ್ದನು (ಆಶ್ವ 66/4). ಇವನು ಮರಣಾನಂತರ ವಿಶ್ವೇದೇವರಲ್ಲಿ ಸೇರಿಕೊಂಡನು (ಸ್ವರ್ಗಾ 5/16–18).

(2) ಒಬ್ಬ ಪ್ರಾಚೀನ ರಾಜ. ಇವನು ಯಮ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/11).

**ನಿಶಾ** – ಭಾನು (ಮನು). ಎಂಬ ಹೆಸರಿನ ಅಗ್ನಿಯ ಮೂರನೇ ಭಾರ್ಯೆ. ಈಕೆ ರೋಹಿಣಿ ಎಂಬ ಕನ್ಯೆ ಮತ್ತು ಅಗ್ನಿ ಮತ್ತು ಸೋಮ ಎಂಬ ಪುತ್ರನಿಗೆ ಜನ್ಮವಿತ್ತಿದ್ದಳು (ಇವಳು ಮತ್ತೂ ಐದು ಮಂದಿ ಅಗ್ನಿಸ್ವರೂಪರಾದ ಪುತ್ರರನ್ನು ಪಡೆದಿದ್ದಳು. ವೈಶ್ವಾನರ, ವಿಶ್ವಪತಿ, ಸಂನಿಹತ, ಕಪಿಲ ಮತ್ತು ಅಗ್ರಣೀ).

**ನಿಶಾಕರ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/14).

**ನಿಶುಂಭ** – ನರಕಾಸುರನ ನಾಲ್ಕು ಮಂದಿ ರಾಜ್ಯಪಾಲರಲ್ಲಿ ಒಬ್ಬ. ಇವನು ಭೂತಲದಿಂದ ದೇವಯಾನದ ತನಕದ ಮಾರ್ಗವನ್ನು ತಡೆದು ನಿಂತಿದ್ದನು. ಶ್ರೀಕೃಷ್ಣನಿಂದ ಇವನ ವಧೆ (ಸಭಾ 38/29).

**ನಿಶ್ಚೀರಾ** – ಒಂದು ತ್ರಿಲೋಕವಿಖ್ಯಾತ ನದಿ. ಅಲ್ಲಿಗೆ ಯಾತ್ರೆ ಮಾಡಿದರೆ ಅಶ್ವಮೇಧ ಯಜ್ಞದ ಫಲದೊರಕುತ್ತದೆ ಮತ್ತು ಆ ಯಾತ್ರಿಕ ಭಗವಾನ್ ವಿಷ್ಣುವಿನ ಲೋಕಕ್ಕೆ ಹೋಗುತ್ತಾನೆ. ನಿಶ್ಚೀರಾಸಂಗಮದಲ್ಲಿ ಮಾಡುವ ದಾನದ ಫಲ ಇಂದ್ರಲೋಕ ಪ್ರಾಪ್ತಿಯಾಗಿದೆ (ವನ 84/138–139).

**ನಿಶ್ಚ್ಯವನ** – ಬೃಹಸ್ಪತಿಯ ದ್ವಿತೀಯ ಪುತ್ರ. ಇವನು ಯಶಸ್ಸು, ವರ್ಚಸ್ಸು ಮತ್ತು ಕಾಂತಿಯಿಂದ ಎಂದೂ ಚ್ಯುತನಾಗುವುದಿಲ್ಲ. ಇವನು ಕೇವಲ ಪೃಥ್ವಿಯ ಸ್ತುತಿ ಮಾಡುತ್ತಾನೆ. ನಿಷ್ಪಾಪ, ನಿರ್ಮಲ, ವಿಶುದ್ಧ ಮತ್ತು ತೇಜಃಪುಂಜದಿಂದ ಪ್ರಕಾಶಿಸುತ್ತಾನೆ. ಇವನ ಪುತ್ರನ ಹೆಸರು ಸತ್ಯ (ವನ 219/12–13).

**ನಿಷಂಗೀ** – ಧೃತರಾಷ್ಟ್ರನ ಒಬ್ಬ ಮಗ (ಆದಿ 67/103). ಭೀಮಸೇನನಿಂದ ಇವನ ವಧೆ (ಕರ್ಣ 84/4–6).

**ನಿಷಧ** – (1) ಭರತ ವಂಶದ ಮಹಾರಾಜ. ಕುರುವಿನ ಪೌತ್ರ ಮತ್ತು ಜನಮೇಜಯನ ಚತುರ್ಥಪುತ್ರ. ಇವನು ಧರ್ಮ ಮತ್ತು ಅರ್ಥದಲ್ಲಿ ಕುಶಲನೂ, ಸಮಸ್ತ ಪ್ರಾಣಿಗಳ ಹಿತದಲ್ಲಿ ಮಗ್ನನೂ ಆಗಿದ್ದನು (ಆದಿ 94/56).

(2) ಒಂದು ಪರ್ವತ. ಇದು ಹರಿವರ್ಷ ಮತ್ತು ಇಲಾವೃತವರ್ಷದ ಮಧ್ಯದಲ್ಲಿದೆ. ಅರ್ಜುನನು ದಿಗ್ವಿಜಯಕಾಲದಲ್ಲಿ ಇಲ್ಲಿರುವವರನ್ನು ಗೆದ್ದು ತನ್ನ ಅಧೀನಮಾಡಿಕೊಂಡಿದ್ದನು (ಸಭಾ 28/6). ಒಂದು ಪರ್ವತ. ಇದು ಹಿಮವಂತ ಮತ್ತು ಹೇಮಕೂಟದಿಂದ ಮುಂದೆ ಇದೆ. ಮಾರ್ಕಂಡೇಯನು ಬಾಲಮುಕುಂದನ ಉದರಪ್ರದೇಶದಲ್ಲಿ ಇದರ ದರ್ಶನ ಮಾಡಿದ್ದನು (ವನ 188/ 112). (ಆಧುನಿಕ ಅಭಿಪ್ರಾಯ ಪ್ರಕಾರ ಗಂಧಮಾದನದ

ಪಶ್ಚಿಮ ಮತ್ತು ಕಾಬುಲ್ ನದಿಯ ಉತ್ತರಕ್ಕಿರುವ ಹಿಂದುಕುಶ ಪರ್ವತವೇ 'ನಿಷಧ'ವಾಗಿದೆ.).

(3). ಪ್ರಾಚೀನ ದೇಶ. ಇಲ್ಲಿ ವೀರಸೇನನೆಂಬ ಪ್ರಸಿದ್ಧ ರಾಜ ರಾಜ್ಯವಾಳುತ್ತಿದ್ದನು. ಇವನ ಮಗನೇ ನಳನು (ವನ 52/55).

**ನಿಷಾದ** – (1) ಒಂದು ಭಾರತೀಯ ಜನಪದ (ಭೀಷ್ಮ 9/51).

(2) ವೇನನ ಬಲ ತೊಡೆಯಿಂದ ಹುಟ್ಟಿದ ಒಬ್ಬ ಪುರುಷ. ಇವನನ್ನು ಋಷಿಗಳು ನಿಷೀದ (ಕುಳಿತುಕೋ). ಎಂದು ಹೇಳಿದುದರಿಂದ, 'ನಿಷಾದ'ನೆಂದು ಕರೆಯಲ್ಪಟ್ಟನು. ಇವನಿಂದ ಕಾಡಿನಲ್ಲಿರುವ ನಿಷಾದರ ಜನನವಾಯಿತು (ಶಾಂತಿ 59/97).

**ನಿಷಾದ ನರೇಶ** – ಒಬ್ಬ ರಾಜ. ಇವನು ಕಾಲೇಯ ಮತ್ತು ಕ್ರೋಧಹಂತಾ ಎಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/50).

**ನಿಷ್ಕುಟ** – ಒಂದು ಪ್ರಾಚೀನ ದೇಶ. ಇದರ ಅಧಿಪತಿಗಳನ್ನು ಅರ್ಜುನ ಗೆದ್ದಿದ್ದನು (ಸಭಾ 27/29).

**ನಿಷ್ಕುಟಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/12).

**ನಿಷ್ಕೃತಿ** – ಒಬ್ಬ ಅಗ್ನಿ. ಇವನು ಬೃಹಸ್ಪತಿ ಪುತ್ರ. ಇವನು ಜನರಿಗೆ ಸಂಕಟದಿಂದ ನಿಷ್ಕೃತಿ (ಬಿಡುಗಡೆ). ಕೊಡುವ ಕಾರಣ. 'ನಿಷ್ಕೃತಿ' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ (ವನ 229/14).

**ನಿಷ್ಠಾನಕ** – ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗನ ಹೆಸರು (ಆದಿ 35/9).

**ನಿಷ್ಠೂರಿಕ** – ಕಶ್ಯಪ ವಂಶದ ಒಂದು ನಾಗ (ಉದ್ಯೋಗ 103/12).

**ನಿಸುಂದ** – ಒಬ್ಬ ದೈತ್ಯ. ಇವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟಿದ್ದನು (ವನ 12/29).

**ನೀಥ** – ವೃಷ್ಣವಂಶದ ಒಬ್ಬ ರಾಜಕುಮಾರ (ವನ 120/19).

**ನೀಫ** – (1) ಒಂದು ಪ್ರಾಚೀನ ಜನಪದ. ಇಲ್ಲಿರುವ ರಾಜ ರಾಜಸೂಯಾದ್ವರಕ್ಕೆ, ಯುಧಿಷ್ಠಿರನಿಗೆ ಕಾಣಿಕೆ ಕೊಡಲು ಬಂದಿದ್ದನು (ಸಭಾ 51/24).

(2) ಒಂದು ಕ್ಷತ್ರಿಯ ವಂಶ. ಇದರಲ್ಲಿ ಜನಮೇಜಯನೆಂಬ ಕುಲಕಳಂಕ ರಾಜನು ಹುಟ್ಟಿದ್ದನು (ಉದ್ಯೋಗ 74/13).

**ನೀಲ** – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಪ್ರಮುಖ ನಾಗ (ಆದಿ 35/7).

(2) (ದುರ್ಯೋಧನ). ಮಾಹಿಷ್ಮತಿ ನಗರದ ಒಬ್ಬ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/61). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/10). ಸಹದೇವನೊಂದಿಗೆ ಇವನ ಭೀಷಣ ಯುದ್ಧ (ಸಭಾ 31/21). ಅಗ್ನಿಯಿಂದ ರಾಜಾ ನೀಲನಿಗೆ ಸಹಾಯ (ಸಭಾ 31/23). ಇವನಿಂದ ಅಗ್ನಿದೇವನಿಗೆ ತನ್ನ ಕನ್ಯೆಯ ದಾನ (ಸಭಾ 31/33). ಅಗ್ನಿದೇವನಿಂದ ರಾಜಾನೀಲನ ಸೇನೆಗೆ ಅಭಯದಾನ (ಸಭಾ 31/35). ಪರಾಜಿತನಾದ ನೀಲನಿಂದ ಸಹದೇವನ ಪೂಜೆ (ಸಭಾ 31/58–59). ಕರ್ಣನು ದಿಗ್ವಿಜಯ ಕಾಲ ದಲ್ಲಿ ಇವನನ್ನು ಸೋಲಿಸಿದ್ದನು (ವನ 254/15). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/16). ದುರ್ಯೋಧನನ ಸಹಾಯಕ್ಕೆ ಇವನು ಸೇನಾಸಮೇತನಾಗಿ ಆಗಮಿಸಿದನು (ಉದ್ಯೋಗ 19/23–24). ದುರ್ಯೋಧನ ಸೇನೆಯಲ್ಲಿ ಏಕರಥಿಗಳ ಗಣನೆಯಲ್ಲಿ ಇವನ ಹೆಸರೂ ಇತ್ತು (ಉದ್ಯೋಗ 166/4). ಇವನು ನರ್ಮದೆಯನ್ನು ಭಾರ್ಯೆಯಾಗಿ ಪಡೆದು, ಅವಳ ಗರ್ಭದಲ್ಲಿ ಸುದರ್ಶನಾ ಎಂಬ ಕನ್ಯೆಯನ್ನು ಪಡೆದನು. ಅವಳನ್ನು ಅಗ್ನಿ ಪ್ರೀತಿಸ ತೊಡಗಿದನು. ರಾಜನು ಇದನ್ನು ತಿಳಿದು ಈಕೆಯನ್ನು ಅವನೊಂದಿಗೆ ವಿವಾಹಮಾಡಿದನು. ಅವಳಿಂದ ಸುದರ್ಶನನೆಂಬ ಮಗ ಹುಟ್ಟಿದನು (ಅನು 2).

(3) ಒಂದು ಪರ್ವತ. ಇದು ಉತ್ತರದಲ್ಲಿ ಗಂಧಮಾದನ ಮತ್ತು ಮಂದರಾಚಲದ ಅನಂತರ ಬರುತ್ತದೆ (ವನ 188/113). ಗಂಗಾ ದ್ವಾರದಲ್ಲೂ ಒಂದು ನೀಲ ಪರ್ವತವಿದೆ. ಇಲ್ಲಿ ಸ್ನಾನ ಮಾಡಿ ಪಾಪರಹಿತನಾದವನು ಸ್ವರ್ಗಕ್ಕೆ ಹೋಗುತ್ತಾನೆ (ಅನು 25/13).

(4) ಒಬ್ಬ ವಾನರ ಸೇನಾಪತಿ. ಇವನ ಮೂಲಕ

ದೂಷಣನ ತಮ್ಮ ಪ್ರಮಾಥಿಯ ವಧೆ (ವನ 287/27).

(5) ಪಾಂಡವ ಪಕ್ಷದ ಒಬ್ಬ ಯೋಧ. ಇವನು ಉದಾರ ರಥಿಕ, ಸಂಪೂರ್ಣ ಅಸ್ತ್ರ ಜ್ಞಾನಿ ಮತ್ತು ಮಹಾಮನಸ್ವಿಯಾಗಿದ್ದನು (ಉದ್ಯೋಗ 171/5). ಅನೂಪ ದೇಶದ ರಾಜ. ಇವನನ್ನು ಅಶ್ವತ್ಥಾಮ ಮೂರ್ಛೆಗೊಳಿಸಿದ್ದನು (ಭೀಷ್ಮ 94/36). ಇವರ ರಥದ ಕುದುರೆಗಳ ವರ್ಣನೆ (ದ್ರೋಣ 23/65). ದುರ್ಜಯನೊಂದಿಗೆ ಯುದ್ಧ (ದ್ರೋಣ 25/45). ಅಶ್ವತ್ಥಾಮನಿಂದ ವಧೆ (ದ್ರೋಣ 31/25). ಇವನು ಕಳಿಂಗ ರಾಜ ಚಿತ್ರಾಂಗದನ ಮಗಳ ಸ್ವಯಂವರಕ್ಕೆ ಹೋದ ವರ್ಣನೆ (ಶಾಂತಿ 4/6).

**ನೀಲಗಿರಿ** – ಭದ್ರಾಶ್ವ ವರ್ಷದ ಗಡಿಯಲ್ಲಿರುವ ಒಂದು ಪರ್ವತ. ಅದನ್ನು ದಾಟಿದರೆ ರಮ್ಯಕ ವರ್ಷ ಬರುತ್ತದೆ (ಸಭಾ 28/6).

**ನೀಲಾ** – ಒಂದು ಮುಖ್ಯ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/31).

**ನೀಲೀ** – ಮಹಾರಾಜ ಅಜಮೀಢನ ದ್ವಿತೀಯ ಪತ್ನಿ. ಇವಳ ಗರ್ಭದಿಂದ ದುಷ್ಯಂತ ಮತ್ತು ಪರಮೇಷ್ಠಿಯ ಜನ್ಮವಾಯಿತು (ಆದಿ 94/32).

**ನೀವಾರಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತೀಯ ಜನತೆ ಕುಡಿಯುತ್ತದೆ (ಭೀಷ್ಮ 9/18).

**ನೃಗ** – ಪ್ರಸಿದ್ಧನೂ, ದಾನಿಯೂ ಆದ ಒಬ್ಬ ಪ್ರಾಚೀನ ರಾಜ. ಇವನು ಯಮರಾಜನ ಸಭೆಯಲ್ಲಿರುತ್ತಾನೆ (ಸಭಾ 8/8). ನೃಗನು ವಾರಾಹ ತೀರ್ಥದಲ್ಲಿ ಪಯೋಷ್ಣೀ ನದಿಯ ದಡದಲ್ಲಿ ಯಜ್ಞಮಾಡಿದ್ದನು. ಅದರಲ್ಲಿ ಇಂದ್ರನು ಸೋಮಪಾನ ಮಾಡಿ ಉನ್ಮತ್ತನಾಗಿದ್ದನು ಮತ್ತು ಹೆಚ್ಚು ದಕ್ಷಿಣೆ ಪಡೆದು ಬ್ರಾಹ್ಮಣರು ಕೂಡಾ ಹರ್ಷೋಲ್ಲಾಸದಿಂದ ಪರಿಪೂರ್ಣರಾಗಿದ್ದರು (ವನ 88/5–6) (ವನ 121/1–2). ಇವನಿಗೆ ಭಾರತವರ್ಷ ಅತ್ಯಂತ ಪ್ರಿಯವಾಗಿತ್ತು (ಭೀಷ್ಮ 9/7–9). ಇವನು ಶೌರ್ಯದಿಂದ ಯಶಸ್ಸು ಮತ್ತು ಸಮ್ಮಾನಕ್ಕೆ ಭಾಗಿಯಾಗಿ ಉತ್ತಮ ಲೋಕಗಳನ್ನು ಪಡೆದಿದ್ದನು (ಭೀಷ್ಮ 17/9–10). ಶ್ರೀಕೃಷ್ಣನ ಮೂಲಕ ಓತಿಕಾಟ ಜನ್ಮದಿಂದ ಉದ್ಧಾರ (ಅನು 70/7). ಶ್ರೀಕೃಷ್ಣನು ಕೇಳಿದಾಗ ಇವನು ತನ್ನ ಆತ್ಮಕಥೆ ಹೇಳಿದುದು (ಅನು 70/10–28). ಶ್ರೀಕೃಷ್ಣನ ಆಜ್ಞೆಯಿಂದ ಈತನ ಸ್ವರ್ಗಲೋಕಗಮನ (ಅನು 70/29). ಗೋದಾನ ಮಹಿಮೆಯ ಸಂದರ್ಭದಲ್ಲಿ ಇವನ ನಾಮ ನಿರ್ದೇಶನ (ಅನು 76/25). ಮಾಂಸಭಕ್ಷಣದ ನಿಷೇಧ ಮಾಡಿದ ಕಾರಣ ಇವನಿಗೆ ಪರಾವರ ತತ್ವದ ಜ್ಞಾನ (ಅನು 115/60).

**ನೃತ್ಯಪ್ರಿಯಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/10).

**ನೃಸಿಂಹ** – ಭಗವಾನ್ ವಿಷ್ಣುವಿನ ಅವತಾರ. ಇವನಿಂದ ಹಿರಣ್ಯಕಶಿಪುವಿನ ವಧೆಯ ಕಥೆ (ಸಭಾ 38/294).

**ನೇಪಾಲ** – ಹಿಮಾಲಯದ ಕಂದರದಲ್ಲಿರುವ ಒಂದು ಜನಪದ. ಕರ್ಣನು ದಿಗ್ವಿಜಯ ಕಾಲ ದಲ್ಲಿ ಇಲ್ಲಿರುವ ರಾಜನನ್ನು ಗೆದ್ದಿದ್ದನು (ವನ 254/7).

**ನೇಮಿಹಂಸಪಥ** – ಒಂದು ಸ್ಥಾನ. ಇದು ಶ್ರೀಕೃಷ್ಣನದೇ ರಾಷ್ಟ್ರದಲ್ಲಿರುವ ಆನರ್ತ ದೇಶ ದೊಳಗೆ ಅಕ್ಷಪ್ರಪತನದ ಹತ್ತಿರವಿತ್ತು. ಇಲ್ಲಿಯೇ ಭಗವಾನ್ ಶ್ರೀಕೃಷ್ಣನು ಗೋಪತಿ ಮತ್ತು ತಾಲ ಕೇತುವಿನ ವಧೆಮಾಡಿದ್ದನು (ಸಭಾ 38/29).

**ನೈಕಪೃಷ್ಠ** – ಒಂದು ಭಾರತೀಯ ಜನಪದ (ಭೀಷ್ಮ 9/41).

**ನೈಗಮೇಯ** – (1) ಕುಮಾರ ಕಾರ್ತಿಕೇಯನ ಮೂರನೇ ಸಹೋದರ. ತಂದೆಯ ಹೆಸರು ಅನಲ (ಆದಿ 66/24).

(2) ಕುಮಾರ ಕಾರ್ತಿಕೇಯನ ನಾಲ್ಕು ಮೂರ್ತಿಗಳಲ್ಲಿ ಒಂದು ಮೂರ್ತಿ. ಎರಡರ ಹೆಸರು – ಶಾಖ ಮತ್ತು ವಿಶಾಖ (ಶಲ್ಯ 44/37).

**ನೈಮಿಷ** – (ಇದು ನೈಭಿಷ ಮತ್ತು ನೈಮಿಷಾ ರಣ್ಯವೆಂದೂ ಹೇಳಲ್ಪಡುತ್ತದೆ. ಇತ್ತೀಚೆಗೆ ಜನರು ಇದನ್ನು 'ನೀಮಸಾರ'ವೆನ್ನುತ್ತಾರೆ. ಈ ಸ್ಥಾನ ಸೀತಾಪುರ ಜಿಲ್ಲೆಯಲ್ಲಿದೆ.). ನೈಮಿಷಾರಣ್ಯ ತೀರ್ಥದಲ್ಲಿ ಶೌನಕನು ತನ್ನ ದ್ವಾದಶ ವಾರ್ಷಿಕ ಯಜ್ಞ ಮಾಡಿದ್ದನು (ಆದಿ 1/1; ಆದಿ 4/1). ಋಷಿಗಳ ಪ್ರೇರಣೆಯಿಂದ ಸೌತಿಯು ಇಲ್ಲಿ ಮಹಾಭಾರತದ ಸಂಪೂರ್ಣ ಕಥೆಯನ್ನು

ಹೇಳಿದ್ದನು (ಆದಿ 1/1–25). ಈ ತೀರ್ಥದಲ್ಲಿ ದೇವತೆಗಳು ಯಜ್ಞಮಾಡಿದ್ದರು (ಆದಿ 196/1). ನೈಮಿಷಾರಣ್ಯಕ್ಕೆ ಬಂದು ಅರ್ಜುನನು ಉತ್ಪಲಿನಿ (ಕಮಲದಿಂದ ಕೂಡಿದ ಗೋಮತಿ). ನದಿಯ ದರ್ಶನ ಮಾಡಿದನು (ಆದಿ 214/6). ಈ ಸಿದ್ಧಸೇವಿತ ಪುಣ್ಯಮಯತೀರ್ಥದಲ್ಲಿ ದೇವತೆಗಳೊಂದಿಗೆ ಬ್ರಹ್ಮನಿತ್ಯ ನಿವಾಸ ಮಾಡುತ್ತಾನೆ. ನೈಮಿಷವನ್ನು ಹುಡುಕುತ್ತಿರುವ ಪುರುಷನ ಅರ್ಧ ಪಾಪ ಅದೇ ಕ್ಷಣದಲ್ಲಿ ನಷ್ಟವಾಗುತ್ತದೆ ಮತ್ತು ಆ ತೀರ್ಥದಲ್ಲಿ ಪ್ರವೇಶ ಮಾಡುತ್ತಲೇ ಅವನು ಎಲ್ಲಾ ಪಾಪಗಳಿಂದ ಮೋಕ್ಷ ಪಡೆಯುತ್ತಾನೆ. ಇಲ್ಲಿ ತೀರ್ಥಸೇವನೆಯಲ್ಲಿ ತತ್ಪರನಾಗಿ ಒಂದು ತಿಂಗಳ ತನಕ ವಾಸಿಸಬೇಕು. ಪೃಥ್ವಿಯಲ್ಲಿರುವ ಎಲ್ಲಾ ತೀರ್ಥಗಳು ನೈಮಿಷದಲ್ಲಿ ನೆಲಸಿವೆ. ಇಲ್ಲಿ ಸ್ನಾನಮಾಡಿ ನಿಯಮಪಾಲನೆ ಪೂರ್ವಕವಾಗಿ, ನಿಯಮಿತ ಭೋಜನ ಮಾಡುವವನಿಗೆ ಗೋಮೇಧ ಯಜ್ಞದ ಫಲ ಸಿಗುತ್ತದೆ ಮತ್ತು ತನ್ನ ಏಳು ತಲೆಮಾರಿನವರನ್ನು ಉದ್ಧಾರ ಮಾಡುತ್ತಾನೆ. ನೈಮಿಷದಲ್ಲಿ ಉಪವಾಸದಿಂದ ಪ್ರಾಣತ್ಯಾಗ ಮಾಡುವವನು ಸಮಸ್ತ ಪುಣ್ಯ ಲೋಕಗಳಲ್ಲಿ ಆನಂದದ ಅನುಭವ ಪಡೆಯುತ್ತಾನೆ. ನೈಮಿಷ ತೀರ್ಥ ನಿತ್ಯ ಪವಿತ್ರ ಮತ್ತು ಪುಣ್ಯಜನಕವಾಗಿದೆ (ವನ 84/59–64). ದೇವರ್ಷಿ ಸೇವಿತ ಪೂರ್ವದಿಕ್ಕಿನಲ್ಲಿ ನೈಮಿಷ ವೆಂಬ ಹೆಸರಿನ ತೀರ್ಥವಿದೆ. ಇಲ್ಲಿ ಬೇರೆ ಬೇರೆ ದೇವತೆಗಳ ಪ್ರತ್ಯೇಕ ಪ್ರತ್ಯೇಕ ಪುಣ್ಯತೀರ್ಥಗಳಿವೆ. ಇಲ್ಲಿ ದೇವರ್ಷಿಸೇವಿತ ಪರಮ ರಮಣೀಯ ಪುಣ್ಯಮಯೀ ಗೋಮತಿ ನದಿ ಇದೆ. ದೇವತೆಗಳ ಯಜ್ಞಭೂಮಿ ಮತ್ತು ಸೂರ್ಯನ ಯಜ್ಞಪಾತ್ರೆ ನೆಲಸಿದೆ (ವನ 87/6–7). ಸಹೋದರರ ಸಮೇತ ರಾಜಾ ಯುಧಿಷ್ಠಿರನು ನೈಮಿಷಾರಣ್ಯ ತೀರ್ಥಕ್ಕೆ ಬಂದು ಗೋಮತಿಯ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡಿ ಗೋದಾನ ಮತ್ತು ಧನದಾನ ಮಾಡಿದನು (ವನ 15/1–2).

**ನೈಮಿಷಕುಂಜ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ಪ್ರಾಚೀನ ತೀರ್ಥ. ಇದರ ನಿರ್ಮಾಣ ವನ್ನು ನೈಮಿಷಾರಣ್ಯ ನಿವಾಸಿಗಳಾದ ಮುನಿಗಳು ಮಾಡಿದ್ದರು. ಇಲ್ಲಿ ಸ್ನಾನ ಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 83/109).

**ನೈಮಿಷೇಯ** – ಒಂದು ತೀರ್ಥ. ಇಲ್ಲಿ ನೈಮಿಷಾರಣ್ಯವಾಸಿಗಳಾದ ಮುನಿಗಳ ದರ್ಶನಾರ್ಥವಾಗಿ, ಸರಸ್ವತಿಯ ಧಾರೆ ಪಶ್ಚಿಮದಿಂದ ಪೂರ್ವಕ್ಕೆ ಹಿಂತಿರುಗಿ ಬಂದಿತ್ತು. ಇಲ್ಲಿ ಸರಸ್ವತಿ ಧಾರೆ ಹಿಂತಿರುಗಿದ ವಿಶೇಷ ವಿವರಣೆ (ಶಲ್ಯ 37/35–57).

**ನೈರ್ಋತ** – ಒಂದು ಭಾರತೀಯ ಜನಪದ (ಭೀಷ್ಮ 9/51).

**ನೈರ್ಋತಿ** – ಒಬ್ಬ ರಾಕ್ಷಸ. ಭೂಮಿಯ ಪ್ರಾಚೀನ ಶಾಸಕರಲ್ಲಿ ಇವನ ಹೆಸರಿದೆ (ಶಾಂತಿ 227/52).

**ನೌಕರ್ಣೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/29).

**ನೌಬಂಧನ** – ಹಿಮಾಲಯದ ಒಂದು ಶಿಖರ. ಮತ್ಸ್ಯ ಭಗವಂತನ ಕೊಂಬಿನಿಂದ ಬಿಡಿಸಿದ, ನೌಕೆಯನ್ನು ಸಪ್ತರ್ಷಿಗಳು ಇಲ್ಲಿ ಬಂಧಿಸಿದ್ದರು (ವನ 187/50).

**ನ್ಯಗ್ರೋಧ ತೀರ್ಥ**– ಉತ್ತರಾಖಂಡದ ದೃಷದ್ವತೀ ತಟದ ಒಂದು ಆಶ್ರಮ (ವನ 90/11).

## ಪ

**ಪಕ್ಷಾಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಪಞ್ಚಜಿತ್** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/10).

**ಪಞ್ಚದಿಗ್ಧಾಂಗ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ಪಞ್ಚಕ** – ಇಂದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಉತ್ಕ್ರೋಶನೆಂದಾಗಿತ್ತು (ಶಲ್ಯ 45/35).

**ಪಞ್ಚಕರ್ಪಟ** – ಪಶ್ಚಿಮಭಾರತದ ಒಂದು ಜನಪದ. ಇದನ್ನು ನಕುಲನು ಗೆದ್ದಿದ್ದನು (ಸಭಾ 32/7).

**ಪಞ್ಚಗಂಗಾ** – ಒಂದು ತೀರ್ಥ. ಇಲ್ಲಿ ಮೃತ್ಯು ತಪಸ್ಸು ಮಾಡಿದ್ದಳು (ದ್ರೋಣ 54/23).

**ಪಞ್ಚಗಣ** – ಉತ್ತರ ದಿಕ್ಕಿನ ಒಂದು ಜನಪದ.

ಇದನ್ನು ಅರ್ಜುನನು ಗೆದ್ದಿದ್ದನು (ಸಭಾ 27/12).

**ಪಞ್ಚಚೂಡಾ** – ಐದು ಜಡೆಯ ಒಬ್ಬ ಅಪ್ಸರೆ (ವನ 134/12). ಈಕೆ ಶುಕದೇವನು ಪರಮ ಪದದ ಪ್ರಾಪ್ತಿಗಾಗಿ ಮೇಲೆ ಹೋಗುತ್ತಿರುವುದನ್ನು ನೋಡಿ ಆಶ್ಚರ್ಯಚಕಿತಳಾಗಿದ್ದಳು (ಶಾಂತಿ 332/19–20). ಇವಳು ನಾರದನ ಮುಂದೆ ನಾರೀಸ್ವಭಾವದ ವರ್ಣನೆ ಮಾಡಿದ್ದಳು (ಅನು 38/11–30).

**ಪಞ್ಚಜನ** – ಪಂಚಜನರೆಂಬ ಹೆಸರಿನ ಐದು ಅಸುರರು ನರಕಾಸುರನ ಅನುಯಾಯಿಗಳಾಗಿದ್ದರು. ಶ್ರೀಕೃಷ್ಣನು ಇವರ ವಧೆಮಾಡಿದನು (ಸಭಾ 38/294).

**ಪಞ್ಚನದ** – ವಾಯುವ್ಯ ಭಾರತದ ಒಂದು ಪ್ರದೇಶ. ಇದನ್ನು ಈಗ ಪಂಜಾಬ ಎನ್ನುತ್ತಾರೆ. ಪಶ್ಚಿಮ ದಿಗ್ವಿಜಯಕಾಲದಲ್ಲಿ ನಕುಲನು ಇದನ್ನು ಗೆದ್ದಿದ್ದನು (ಸಭಾ 32/11). ಈ ಪ್ರಾಂತ್ಯದಲ್ಲಿ ಐದು ಪ್ರಸಿದ್ಧ ನದಿಗಳಾದ ವಿಪಾಶಾ (ಬಿಯಾಸ್) ಶತದ್ರೂ (ಸತಲಜ) ಇರಾವತಿ (ರಾವಿ) ಚಂದ್ರಭಾಗಾ (ಚೇನಾಬ್) ಮತ್ತು ವಿತಸ್ತಾ (ಝೇಲಂ) ಹರಿಯುತ್ತವೆ. ಆದುದರಿಂದ ಇದನ್ನು ಪಂಚನದ ಅಥವಾ ಪಂಜಾಬ ಎಂದು ಕರೆಯುತ್ತಾರೆ.

**ಪಞ್ಚನದ** – (1) ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯ ಪಂಚಮಹಾಯಜ್ಞಗಳ ಫಲ ಪಡೆಯುತ್ತಾನೆ (ವನ 82/83).

(2) ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇಲ್ಲಿ ಕೋಟಿತೀರ್ಥದಲ್ಲಿ ಸ್ನಾನ ಮಾಡಿದರೆ ಅಶ್ವಮೇಧ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 83/16–17).

**ಪಞ್ಚಮೀ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/26).

**ಪಞ್ಚಯಜ್ಞಾ** – ಒಂದು ಪ್ರಾಚೀನ ತೀರ್ಥ. ಇಲ್ಲಿ ಯಾತ್ರೆ ಮಾಡುವುದರಿಂದ ಮನುಷ್ಯಸ್ವರ್ಗ ಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/10–11).

**ಪಞ್ಚರಾತ್ರ** – ಒಂದು ಆಗಮ ಅಥವಾ ಶಾಸ್ತ್ರ. ಇದರ ವಿಶೇಷಜ್ಞ ಪಂಚಶಿಖ ಮುನಿಯೆಂದು ಹೇಳಲ್ಪಟ್ಟಿದೆ (ಶಾಂತಿ 218/11–12).

**ಪಞ್ಚವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಪಞ್ಚವಟೀ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇದರ ಯಾತ್ರೆಮಾಡಿ, ಮಹಾ ಪುಣ್ಯಯುಕ್ತನಾಗಿ, ಮನುಷ್ಯ ಸತ್ಪುರುಷರ ಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/162).

**ಪಞ್ಚವೀರ್ಯ** – ಒಬ್ಬ ಸನಾತನ ವಿಶ್ವೇದೇವ (ಅನು 91/36).

**ಪಞ್ಚಶಿಖ** – ಒಬ್ಬ ಪ್ರಾಚೀನ ಋಷಿ. ಇವನು ಕಪಿಲಾಳ ಪುತ್ರ ಮತ್ತು ಆಸುರಿಯ ಶಿಷ್ಯನಾಗಿದ್ದನು (ಶಾಂತಿ 218/6). ಪಂಚಶಿಖನೆಂದು ಇವನ ಹೆಸರಾಗಲು ಕಾರಣ (ಶಾಂತಿ 218/11–12). ಮಿಥಿಲಾ ನರೇಶ ಜನದೇವನಿಗೆ ಇವನ ಉಪದೇಶ (ಶಾಂತಿ 218/22ರಿಂದ 219/52 ವರೆಗೆ). ಜರಾಮೃತ್ಯುವಿನ ವಿಷಯದಲ್ಲಿ ಜನಕನಿಗೆ ಇವನ ಉಪದೇಶ (ಶಾಂತಿ 319/6–15).

**ಪಞ್ಚಾಲ** – ಒಂದು ಭಾರತೀಯ ಜನಪದ (ಭೀಷ್ಮ 9/41; ಭೀಷ್ಮ 9/47).

**ಪಟಚ್ಚರ** – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ರಾಜ ಮತ್ತು ರಾಜಕುಮಾರ ಇತ್ಯಾದಿ. ಜರಾಸಂಧನ ಭಯದಿಂದ ಈ ದೇಶದ ಜನರು ದಕ್ಷಿಣ ಭಾಗಕ್ಕೆ ಓಡಿ ಹೋಗಿದ್ದರು (ಸಭಾ 14/26). ಸಹದೇವನು ಇವರನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ 31/4). ಇವನು ಯುಧಿಷ್ಠಿರನ ಪಕ್ಷದಿಂದ ಯುದ್ಧ ಮಾಡಲು ಬಂದಿದ್ದನು ಮತ್ತು ಅವನೊಂದಿಗೆ ಕ್ರೌಂಚವ್ಯೂಹದ ಬೆನ್ನಿನ ಭಾಗದಲ್ಲಿ ನಿಂತಿದ್ದನು (ಭೀಷ್ಮ 50/48). ಭಾರತ ದರ್ಶನದ ಪ್ರಕಾಶನದವರ ಅಭಿಪ್ರಾಯ ಪ್ರಕಾರ ಇವರು ಅಸುರರು (ದ್ರೋಣ 23).

**ಪಟವಾಸಕ** – ಧೃತರಾಷ್ಟ್ರಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಸತ್ರದಲ್ಲಿ ಸುಟ್ಟುಹೋಗಿದ್ದನು (ಆದಿ 57/18).

**ಪಟುಶ** – ಒಬ್ಬ ರಾಕ್ಷಸ. ಇವನು ಶ್ರೀರಾಮಸೇನೆಯ ವಿನಸನೆಂಬ ವಾನರನೊಡನೆ ಯುದ್ಧ ಮಾಡಿದ್ದನು (ವನ 285/9).

**ಪಣ್ಡಿತಕ** (ಅಥವಾ ಪಣ್ಡಿತ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/101). ಭೀಮಸೇನನಿಂದ ಇವನ ವಧೆ (ಭೀಷ್ಮ 88/24–

25).

**ಪತತ್ರಿ** – ಕೌರವಪಕ್ಷದ ಒಬ್ಬ ಯೋಧ. ಭೀಮಸೇನನಿಂದ ಇವನು ರಥಹೀನನಾದನು (ಕರ್ಣ 48/30).

**ಪತನ** – ರಾಕ್ಷಸ ಮತ್ತು ಪಿಶಾಚರ ದಳ (ವನ 285/1–2).

**ಪತಾಕಿ** – ಕೌರವ ದಳದ ಒಬ್ಬ ಯೋಧ. ಇವನನ್ನು ಜೊತೆಗಿಟ್ಟುಕೊಂಡು ಅರ್ಜುನನ ಮೇಲೆ ಆಕ್ರಮಣ ಮಾಡಲು ದುರ್ಯೋಧನನು ಶಕುನಿಗೆ ಆದೇಶ ನೀಡಿದುದು (ದ್ರೋಣ 156/122).

**ಪತಿವ್ರತಾಮಾಹಾತ್ಮ್ಯ ಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 293ರಿಂದ 299ರ ವರೆಗೆ).

**ಪತ್ತಿ** – ಸೇನೆಯ ಪರಿಮಾಣವಿಶೇಷ (ಆದಿ 2/19). ಒಂದು ಪತ್ತಿಗೆ ಐವತ್ತೈದು ಕಾಲಾಳುಗಳು. ಮೂರು ಪತ್ತಿಗಳಿಗೆ ಒಂದು ಸೇನಾಮುಖ. ಮೂರು ಸೇನಾಮುಖಗಳಿಗೆ ಒಂದು ಗುಲ್ಮ.

**ಪತ್ರೋರ್ಣ** – ಒಬ್ಬ ಕ್ಷತ್ರಿಯ ರಾಜ. ಇವನು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 52/18).

**ಪಥಿಕೃತ** – ಒಬ್ಬ ಅಗ್ನಿ. ದರ್ಶ ಮತ್ತು ಪೂರ್ಣ ಮಾಸಯಾಗ, ಮಧ್ಯದಲ್ಲಿ ನಿಂತುಹೋದರೆ ಇವನಿಗೆ ಅಷ್ಟಾಕಪಾಲ ಪುರೋಡಾಶ ಕೊಡುವ ವಿಧಾನವಿದೆ (ವನ 221/30).

**ಪದಾತಿ** – ಕುರುಕುಮಾರ ಜನಮೇಜಯನ ಏಳನೇ ಮಗ (ಆದಿ 94/57).

**ಪದ್ಮ** (ಪ್ರಥಮ) – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಪದ್ಮನೆಂಬ ಒಬ್ಬ ಪ್ರಮುಖ ನಾಗ (ಆದಿ 35/10).

(2) (ದ್ವಿತೀಯ) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಪದ್ಮನೆಂಬ ಇನ್ನೊಬ್ಬ ನಾಗ (ಆದಿ 34/10). ಈ ಇಬ್ಬರು ಪದ್ಮರು ವರುಣನ ಸಭೆಯಲ್ಲಿ ಉಪಸ್ಥಿತರಾಗಿರುತ್ತಾರೆ (ಸಭಾ 9/8).

(3) ಒಬ್ಬ ರಾಜ. ಈತ ಯಮಸಭೆಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/21).

(4) ಒಂದು ನಿಧಿ. ಇದು ಕುಬೇರನ ಸಭೆಯಲ್ಲಿರುತ್ತದೆ (ಸಭಾ 10/39).

(5) ಸ್ಕಂದನ ಒಬ್ಬ ಸೈನಿಕ (ಶಲ್ಯ 45/56).

**ಪದ್ಮಕೂಟ** – ಶ್ರೀಕೃಷ್ಣನ ಒಂದು ಪ್ರಾಸಾದದ ಹೆಸರು (ಸಭಾ 38/29). (ಈ ಭವನದಲ್ಲಿ ಭಗವಂತನ ಪ್ರೇಯಸಿ ಸುಪ್ರಭಾ ಇರುತ್ತಿದ್ದಳು.).

**ಪದ್ಮಕೇತನ** – ಗರುಡನ ಪ್ರಮುಖ ಸಂತಾನ ಗಳಲ್ಲಿ ಒಬ್ಬ (ಉದ್ಯೋಗ 101/11).

**ಪದ್ಮನಾಭ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/96).

(2) ನೈಮಿಷಾರಣ್ಯದಲ್ಲಿ ಗೋಮತೀ ತಟದ ನಾಗಪುರದಲ್ಲಿ ವಾಸಿಸುವ ಒಬ್ಬ ನಾಗ (ಶಾಂತಿ 355/4). ಇವನ ಗುಣಗಳ ವರ್ಣನೆ (ಶಾಂತಿ 355/5–11). ತನ್ನ ಪತ್ನಿಯೊಡನೆ ಧರ್ಮ ವಿಷಯದಲ್ಲಿ ಈತನ ವಾರ್ತಾಲಾಪ (ಶಾಂತಿ 359). ಅಭಿಮಾನ ಮತ್ತು ರೋಷವನ್ನು ಬಿಟ್ಟು ಬ್ರಾಹ್ಮಣನಿಗೆ ದರ್ಶನಕೊಡಲು ಸಿದ್ಧನಾದುದು (ಶಾಂತಿ 36/8–12). ಬ್ರಾಹ್ಮಣನು ಕೇಳಿದಾಗ ಸೂರ್ಯಮಂಡಲದ ಕಥೆ ಹೇಳಿದುದು (ಶಾಂತಿ 362).

**ಪದ್ಮಸರ** – ಒಂದು ಸರೋವರ. ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನ ಇಂದ್ರಪ್ರಸ್ಥದಿಂದ ಗಿರಿವ್ರಜಕ್ಕೆ ಹೋಗುವಾಗ ಇಲ್ಲಿಗೆ ತಲುಪಿದ್ದರು (ಸಭಾ 20/26).

**ಪದ್ಮಸೌಂಗಧಿಕ** – ಚೇದಿ ದೇಶದ ಕಾಡು ಪ್ರದೇಶದಲ್ಲಿರುವ ಕಮಲಗಳಿಂದ ಕೂಡಿದ ಒಂದು ಸರೋವರ. ಇಲ್ಲಿ ವ್ಯಾಪಾರಿಗಳ ಗುಂಪಿನ ಮೇಲೆ ಕಾಡಾನೆಗಳು ಆಕ್ರಮಣ ಮಾಡಿದ್ದವು (ವನ 65/2–8).

**ಪದ್ಮಾವತೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/9).

**ಪನಸ** – ಒಬ್ಬ ವಾನರ ಸೇನಾಪತಿ. ಇವನು ಐವತ್ತೇಳು ಕೋಟಿ ಸೇನೆಯೊಂದಿಗೆ ಶ್ರೀರಾಮನ ಬಳಿಗೆ ಬಂದಿದ್ದನು (ವನ 283/6). ಇವನು ಪಟುಶನೆಂಬ ರಾಕ್ಷಸನೊಂದಿಗೆ ಯುದ್ಧ ಮಾಡಿದ್ದನು (ವನ 285/9).

**ಪಂಪಾಸರೋವರ** – ಋಷ್ಯಮೂಕ ಪರ್ವತದ ಸಮೀಪದಲ್ಲಿರುವ ಒಂದು ಸರೋವರ. ಇದರ ಬಳಿ ತನ್ನ ನಾಲ್ಕು ಮಂತ್ರಿಗಳೊಂದಿಗೆ, ಸುವರ್ಣ ಮಾಲೆ ಧರಿಸಿದ ವಾನರರಾಜ ವಾಲಿಯ ತಮ್ಮ, ಸುಗ್ರೀವ ವಾಸಿಸುತ್ತಿದ್ದನು (ವನ 279/44).

**ಪಯಸ್ಯ** – ಮಹರ್ಷಿ ಅಂಗೀರಸನ ವಾರುಣ ರೆಂಬ ಎಂಟು ಪುತ್ರರಲ್ಲಿ ಒಬ್ಬ (ಅನು 85/130).

**ಪಯೋದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಪಯೋಷ್ಣೀ** – ಒಂದು ಪರಮ ಪವಿತ್ರ ನದಿ. ಇದು ವಿಂಧ್ಯಪರ್ವತದಿಂದ ಹುಟ್ಟಿ ದಕ್ಷಿಣ ದಿಕ್ಕಿನ ಕಡೆಗೆ ಹರಿಯುತ್ತದೆ. ರಾಜಾ ನಳನು ಇದನ್ನು ಸಮುದ್ರಗಾಮನಿಯೆಂದು ಹೇಳಿ, ದಮಯಂತಿಗೆ ಇದರ ಮತ್ತು ವಿಂಧ್ಯಪರ್ವತದ ದರ್ಶನ ಮಾಡಿಸಿದ್ದನು (ವನ 61/22). ನದಿಗಳಲ್ಲಿ ಶ್ರೇಷ್ಠ ವಾದ ಪಯೋಷ್ಣಿಯಲ್ಲಿ ಸ್ನಾನಮಾಡಿ, ದೇವತೆಗಳ ಮತ್ತು ಪಿತೃಗಳ ಪೂಜೆ ಮಾಡುವುದರಿಂದ, ಆ ತೀರ್ಥಸೇವೆ ಮಾಡಿದವನಿಗೆ ಸಹಸ್ರ ಗೋದಾನದ ಫಲಸಿಗುತ್ತದೆ (ವನ 75/40). ರಾಜಾ ನೃಗನು ಪಯೋಷ್ಣಿಯ ದಡದಲ್ಲಿ ಉತ್ತಮವಾದ ವಾರಾಹ ತೀರ್ಥದಲ್ಲಿ ಯಜ್ಞಮಾಡಿದ್ದನು. ಇದರಲ್ಲಿ ಸೋಮಪಾನ ಮಾಡಿ ಇಂದ್ರನೂ, ದಕ್ಷಿಣೆ ಪಡೆದು ಬ್ರಾಹ್ಮಣರೂ ಉನ್ಮತ್ತರಾಗಿದ್ದರು (ವನ 88/4–6; ವನ 121/1–2). ಪಯೋಷ್ಣಿಯ ನೀರು ಕೈಯಿಂದ ಎತ್ತಲ್ಪಟ್ಟಿರಲಿ, ಭೂಮಿಯ ಮೇಲೆ ಬಿದ್ದಿರಲಿ ಅಥವಾ ವಾಯುವಿನ ವೇಗ ದಿಂದ ಹಾರಿ ಶರೀರದ ಮೇಲೆ ಬೀಳಲಿ, ಅದು ಮನುಷ್ಯರ ಜನ್ಮದಿಂದ ಮೃತ್ಯುಪರ್ಯಂತ ಮಾಡಿದ ಸಮಸ್ತ ಪಾಪಗಳನ್ನೂ ನಾಶಮಾಡು ತ್ತದೆ. ಇದರಲ್ಲಿ ಭಗವಂತನಾದ ಶಂಕರನ ಶೃಂಗ ವೆಂಬ ವಾದ್ಯವಿಶೇಷವಿದೆ. ಅದರ ದರ್ಶನದಿಂದ ಮನುಷ್ಯನಿಗೆ ಶಿವಧಾಮದ ಪ್ರಾಪ್ತಿಯಾಗುತ್ತದೆ. ಇದರ ಮಹಾತ್ಮೆ ಇತರ ಎಲ್ಲಾ ನದಿಗಳಿಗಿಂತ ಹೆಚ್ಚಿಗಿದೆ (ವನ 88/7–9). ಧರ್ಮರಾಜ ಯುಧಿಷ್ಠಿರನು ಲೋಮಶ, ಸಹೋದರರು ಮತ್ತು ಸೇವಕರೊಂದಿಗೆ, ವಿದರ್ಭ ನರೇಶನಿಂದ ಪೂಜಿಸಲ್ಪಡುವ ಉತ್ತಮ ತೀರ್ಥವೂ, ಪುಣ್ಯ ಸಲಿಲವೂ ಆದ ಪಯೋಷ್ಣಿಯ ದಡಕ್ಕೆ ಬಂದಿದ್ದನು. ಇದರ ನೀರಿನಲ್ಲಿ ಯಜ್ಞಸಂಬಂಧಿ ಸೋಮರಸವು ಸಮ್ಮಿಶ್ರವಾಗಿತ್ತು. ಧರ್ಮರಾಜನು ಪಯೋಷ್ಣಿಯ ತಟಕ್ಕೆ ಹೋಗಿ ಅದರ ನೀರನ್ನು ಕುಡಿದನು ಮತ್ತು ಅಲ್ಲಿ ವಾಸಿಸಿದನು (ವನ 120/31–32). ಅಮೂರ್ತರಯಾನ ಪುತ್ರ ರಾಜಾ ಗಯನು ಇದರ ದಡದಲ್ಲಿ ಏಳು ಅಶ್ವಮೇಧಯಜ್ಞಮಾಡಿ ಸೋಮರಸದ ಮೂಲಕ ವಜ್ರಧಾರಿ ಇಂದ್ರನನ್ನು ಸಂತುಷ್ಟಗೊಳಿಸಿದ್ದನು (ವನ 121/3). ಭಾರತವಾಸಿಗಳು ನೀರು ಕುಡಿ ಯುವ ಪ್ರಮುಖ ನದಿಗಳಲ್ಲಿ ಇದೂ ಒಂದಾಗಿದೆ (ಭೀಷ್ಮ 9/20).

**ಪರ** – (1) ಒಬ್ಬ ಪ್ರಾಚೀನ ರಾಜ (ಆದಿ 1/234).

(2) ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/55).

**ಪರತಂಗಣ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ಪರಪುರಂಜಯ** – ಹೈಹಯವಂಶದ ಒಬ್ಬ ರಾಜಕುಮಾರ. ಹಿಂಸ್ರಪಶುವೆಂದು ಮೋಸಹೋಗಿ ಈತನಿಂದ ಋಷಿಯ ಹತ್ಯೆ (ವನ 184/5). ಅರಿಷ್ಟನೇಮಿಯಿಂದ ಈತನ ಬ್ರಹ್ಮಹತ್ಯೆಯ ಭ್ರಮೆಯ ನಿವಾರಣೆ (ವನ 184/14).

**ಪರಮಕಾಂಬೋಜ** – ವಾಯುವ್ಯ ಭಾರತದ ಒಂದು ಜನಪದ. ಇದನ್ನು ಅರ್ಜುನನು ಗೆದ್ದಿದ್ದನು (ಸಭಾ 27/25).

**ಪರಮಕ್ರೋಧಿ** – ಒಬ್ಬ ವಿಶ್ವೇದೇವ (ಅನು 91/32).

**ಪರಮೇಷ್ಠೀ** – ಮಹಾರಾಜ ಅಜಮೀಢನಿಂದ ನೀಲಿಯ ಗರ್ಭದಲ್ಲಿ ಹುಟ್ಟಿದ ದ್ವಿತೀಯ ಪುತ್ರ. ಇವನ ಎಲ್ಲಾ ಪುತ್ರರು ಪಾಂಚಾಲರೆಂದು ಕರೆಯಲ್ಪಟ್ಟರು (ಆದಿ 94/32–33).

**ಪರಶುರಾಮ** – ಜಮದಗ್ನಿ ಮಹರ್ಷಿಯ ಪುತ್ರ. ತಾಯಿಯ ಹೆಸರು ರೇಣುಕೆ. ಇವನಿಂದ ಸಮಂತಪಂಚಕ ಕ್ಷೇತ್ರದ ನಿರ್ಮಾಣ (ಆದಿ 2/4). ಕ್ಷತ್ರಿಯರ ರಕ್ತದಿಂದ ಪಿತೃಗಳಿಗೆ ತರ್ಪಣ ಮತ್ತು ಪಿತೃಗಳಿಂದ ಇವನಿಗೆ ವರದಾನ (ಆದಿ 2/5–7). ಇವನು ಇಪ್ಪತ್ತೊಂದು ಬಾರಿ ಈ ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದನು ಮತ್ತು ಕೊನೆಗೆ ಮಹೇಂದ್ರ ಪರ್ವತದಲ್ಲಿ ಉತ್ತಮ ತಪಸ್ಸುಮಾಡಿದನು (ಆದಿ 64/4). ಇವನಿಂದ ಕಶ್ಯಪ ಮಹರ್ಷಿಗೆ ಸಮಸ್ತ ಪೃಥ್ವಿಯ ದಾನ (ಆದಿ 129/62). ದ್ರೋಣನಿಗೆ ಸಂಪೂರ್ಣ ಅಸ್ತ್ರಗಳ ಶಿಕ್ಷಣ (ಆದಿ 129/66). ದ್ರೋಣನಿಗೆ ಬ್ರಹ್ಮಾಸ್ತ್ರ ದಾನ (ಆದಿ 165/3). ಇವನು ಯಮಸಭೆಯಲ್ಲಿರುತ್ತಾನೆ (ಸಭಾ 8/19).

ಇವನಿಂದ ಜಂಭಾಸುರನ ಮಸ್ತಕ ಭೇದನ ಮತ್ತು ಶತದುಂದುಭಿಯೆಂಬ ದೈತ್ಯನ ವಿನಾಶ, ಇವನಿಂದ ಇಪ್ಪತ್ತೊಂದು ಬಾರಿ ಕ್ಷತ್ರಿಯರ ವಿನಾಶವಾಯಿತು. ಮತ್ತು ಸಹಸ್ರಬಾಹು ಅರ್ಜುನ ಕೊಲ್ಲಲ್ಪಟ್ಟನು. ಶಾಲ್ವನೊಂದಿಗೆ ಇವನ ಭಯಾನಕ ಯುದ್ಧ. ಸಾಲ್ವನ ಸೌಭವಿಮಾನವನ್ನು ನಾಶ ಮಾಡಲು ಅಸಾಧ್ಯವಾದ ವಿಷಯದಲ್ಲಿ ನಗ್ನಿಕಾ ಕುಮಾರಿಕೆಯರ ವಚನ (ಸಭಾ 38/29). ಈತ ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಹೋಗಿದ್ದನು ಮತ್ತು ಇವನ ಸಹಿತ ಋಷಿಗಳು ಯುಧಿಷ್ಠಿರನಿಗೆ ಅಭಿಷೇಕ ಮಾಡಿದ್ದರು (ಸಭಾ 53/11). ಪರಶು ರಾಮನು ಭೃಗುತುಂಗ ಪರ್ವತದ ಮೇಲೆ ಯುಧಿಷ್ಠಿರನಿಗೆ ಉಪದೇಶ ಮಾಡಿದ್ದನು. ಲೋಮಶರಿಂದ ಇವನ ಚರಿತ್ರೆಯ ವರ್ಣನೆ (ವನ 99/40–91). ತಂದೆಯ ಆಜ್ಞೆಯಿಂದ ಇವನು ತನ್ನ ತಾಯಿಯ ವಧೆ ಮಾಡಿದುದು (ವನ 116/14). ಇವನಿಗೆ ತಂದೆಯ ವರದಾನ (ವನ 116/18). ಇವನಿಂದ ಕಾರ್ತವೀರ್ಯ ಅರ್ಜುನನ ವಧೆ (ವನ 116/25). ಕುಪಿತನಾದ ಇವನು ಇಪ್ಪತ್ತೊಂದು ಭೂರಿ ಭೂಮಂಡಲ ವನ್ನು ಕ್ಷತ್ರಿಯಶೂನ್ಯವಾಗಿ ಮಾಡಿದುದು (ವನ 117/9). ಇವನ ಯಜ್ಞ, ಕಶ್ಯಪಾದಿ ಋಷಿಗಳಿಗೆ ಭೂಮಿದಾನ (ವನ 117/11). ಇವನು ಕರ್ಣನ ಗುರುವಾಗಿದ್ದನು (ವನ 302/9). ಹಸ್ತಿನಾಪುರಕ್ಕೆ ಹೋಗುವಾಗ ಮಾರ್ಗದಲ್ಲಿ ಈತ ಶ್ರೀಕೃಷ್ಣನನ್ನು ಭೇಟಿಮಾಡಿದುದು ಮತ್ತು ಮಾತುಕತೆ (ಉದ್ಯೋಗ 83/64). ಕೌರವಸಭೆಯಲ್ಲಿ ದಂಭೋದ್ಭವನ ಉದಾಹರಣೆ ಕೊಡುತ್ತಾ, ನರ ನಾರಾಯಣಸ್ವರೂಪರಾದ ಶ್ರೀಕೃಷ್ಣ ಮತ್ತು ಅರ್ಜುನನ ಮಹಿಮೆಯ ವರ್ಣನೆ (ಉದ್ಯೋಗ 96). ಅಂಬೆಯ ಕಾರ್ಯಮಾಡುವ ಬಗ್ಗೆ ಸಮಾಧಾನಹೇಳಿದುದು (ಉದ್ಯೋಗ 177/32–34). ಅಂಬೆಯೊಂದಿಗೆ ಹಸ್ತಿನಾವತಿಗೆ ಹೋಗಿ ಭೀಷ್ಮನೊಂದಿಗೆ ಆಕೆಯನ್ನು ಗ್ರಹಣಮಾಡಲು ಹೇಳಿದುದು (ಉದ್ಯೋಗ 178/30). ಭೀಷ್ಮನು ಅಸ್ವೀಕಾರ ಮಾಡಿದಾಗ, ಅವನನ್ನು ಕೊಲ್ಲುವ ಬೆದರಿಕೆ ಹಾಕಿದುದು (ಉದ್ಯೋಗ 178/35–36). ಭೀಷ್ಮನೊಂದಿಗೆ ಯುದ್ಧಕ್ಕಾಗಿ ಕುರುಕ್ಷೇತ್ರಕ್ಕೆ ಹೋದುದು (ಉದ್ಯೋಗ 178/66). ಇವನ ಸಂಕಲ್ಪಮಯ ರಥದ ವರ್ಣನೆ (ಉದ್ಯೋಗ 179/3–4). ಭೀಷ್ಮನೊಂದಿಗೆ ಯುದ್ಧಾರಂಭ (ಉದ್ಯೋಗ 179/19). ದೇವತೆಗಳು, ಪಿತೃಗಳು ಮತ್ತು ಗಂಗೆಯ ಆಗ್ರಹದಿಂದ ಈತ ಯುದ್ಧ ನಿಲ್ಲಿಸಿ, ಭೀಷ್ಮನಲ್ಲಿ ಸಂತುಷ್ಟನಾದುದು (ಉದ್ಯೋಗ 185/36). ಅಂಬೆಯೊಂದಿಗೆ ತನ್ನ ಅಸಮರ್ಥತೆ ಯನ್ನು ಪ್ರಕಟಿಸಿ, ಹೋಗಲು ಹೇಳಿದುದು (ಉದ್ಯೋಗ 186/3). ಸಂಜಯನಿಗೆ ತಿಳಿಯ ಪಡಿಸುತ್ತಾ ನಾರದನಿಂದ ಇವನ ಚರಿತ್ರೆಯ ವರ್ಣನೆ (ದ್ರೋಣ 70). ಶಿವನಿಂದ ವರಪಡೆ ದುದು ಮತ್ತು ದಾನವರ ವಧೆ ಮಾಡಿದುದು (ಕರ್ಣ 34/149–155). ಬ್ರಾಹ್ಮಣ ರೂಪಧರಿಸಿದ ಕರ್ಣನ ರಹಸ್ಯ ಬಯಲಾದಾಗ, ಇವನಿಂದ ಆತನಿಗೆ ಶಾಪ (ಕರ್ಣ 4/9). ಇವನ ನೋಟ ದಿಂದಲೇ ದಂಶನೆಂಬ ಹೆಸರಿನ ರಾಕ್ಷಸನು ಕೀಟ ಜನ್ಮದಿಂದ ಉದ್ಧಾರವಾದುದು (ಶಾಂತಿ 13/14). ಕರ್ಣನಿಗೆ ಶಾಪ (ಶಾಂತಿ 3/30–32). ಇವನ ಜನ್ಮಪ್ರಸಂಗ (ಶಾಂತಿ 49/31–32). ತಪಸ್ಸಿನ ಮೂಲಕ ಮಹಾದೇವನಿಂದ ಪರಶುವನ್ನು ಪಡೆದುದು (ಶಾಂತಿ 49/33). ಹೈಹಯರಾಜ ಅರ್ಜುನನ ಭುಜಗಳ ಛೇದನ (ಶಾಂತಿ 49/48). ಕಾರ್ಯವೀರ್ಯನ ವಂಶದ ಸಂಹಾರ (ಶಾಂತಿ 49/52–53). ಯಜ್ಞಾಂತ್ಯದಲ್ಲಿ ಪೂರ್ಣಭೂಮಿ ಯನ್ನು ದಕ್ಷಿಣೆಯ ರೂಪದಲ್ಲಿ ಈತ ಕಶ್ಯಪನಿಗೆ ದಾನಮಾಡಿದುದು (ಶಾಂತಿ 49/63–64). ಶೂರ್ಪಾರಕ ಕ್ಷೇತ್ರದಲ್ಲಿ ನಿವಾಸ (49/66–67). ಮುಚುಕುಂದನಿಗೆ ಪಾರಿವಾಳ ಮತ್ತು ಬೇಟೆ ಗಾರನ ಕಥೆ ಹೇಳಿದುದು (ಶಾಂತಿ ಅಧ್ಯಾಯ 143 ರಿಂದ 149ರ ವರೆಗೆ). ಇವನಿಂದ ಬ್ರಾಹ್ಮಣ ನಿಗೆ ಪೃಥ್ವಿದಾನ (ಶಾಂತಿ 234/26). ಶಿವ ಮಹಿಮೆಯ ಕುರಿತು ಯುಧಿಷ್ಠಿರನಿಗೆ ತನ್ನ ಅನು ಭವ ಹೇಳಿದುದು (ಅನು 18/12–15). ವಶಿಷ್ಠನೇ ಮೊದಲಾದ ಋಷಿಗಳೊಡನೆ ತನ್ನ ಶುದ್ಧಿಯ ಉಪಾಯವನ್ನು ಕೇಳಿದುದು (ಅನು 84/39–40). ಇವನಿಂದ ಭೂಮಿದಾನ (ಅನು 137/12). ಕಾರ್ತವೀರ್ಯ ಅರ್ಜುನನ ವಧೆ (ಆಶ್ವ 29/11). ಇಪ್ಪತ್ತೊಂದು ಬಾರಿ ಕ್ಷತ್ರಿಯ ಸಂಹಾರ (ಆಶ್ವ 29/18). ಪಿತೃಗಳು ತಿಳಿವು ನೀಡಿದಾಗ ಯುದ್ಧ ವಿರತನಾದುದು ಮತ್ತು ತಪಸ್ಸಿನಿಂದ ಪರಮ

ಸಿದ್ಧಿಯನ್ನು ಪಡೆದುದು (ಆಶ್ವ 30).

**ಪರಶುರಾಮಕುಂಡ** – ಕುರುಕ್ಷೇತ್ರದ ಗಡಿಯಲ್ಲಿರುವ ಮತ್ತು ಪರಶುರಾಮನಿಂದ ಸ್ಥಾಪಿಸಲ್ಪಟ್ಟ ಐದು ಕೆರೆಗಳು. ಇವು ಸುಪ್ರಸಿದ್ಧ ತೀರ್ಥಗಳು. ಇವುಗಳ ಉತ್ಪತ್ತಿ ಮತ್ತು ಮಹತ್ವ (ವನ 83/26–38).

**ಪರಶುವನ** – ಒಂದು ನರಕ (ಶಾಂತಿ 321/32).

**ಪರಹಾ** – ಒಂದು ಪ್ರಾಚೀನ ರಾಜ (ಆದಿ 1/238).

**ಪರಾಂತ** – ಒಂದು ಭಾರತೀಯ ಜನಪದ (ಭೀಷ್ಮ 9/47).

**ಪರಾನೀಕವಿನಾಶಿನೀ** – ಭೀಷ್ಮನು ಪರಶುರಾಮನಿಂದ ಕಲಿತ ಅಸ್ತ್ರವಿದ್ಯೆ. ಅದರ ಸಹಾಯದಿಂದ ಭೀಷ್ಮನು ಪ್ರತಿದಿನ ಹತ್ತುಸಾವಿರ ಯೋಧರನ್ನು ಸಂಹರಿಸುತ್ತಿದ್ದನು (ಭೀಷ್ಮ 119).

**ಪರಾವಸು** – ಒಬ್ಬ ಋಷಿ. ಇವನು ರೈಭ್ಯ ಮುನಿಯ ಪುತ್ರ ಮತ್ತು ಅರ್ವಾವಸುವಿನ ಅಣ್ಣ. ಹಿಂಸ್ರಪಶುವೆಂದು ಮೋಸಹೋಗಿ, ಇವನಿಂದ ತಂದೆಯ ವಧೆ ಮತ್ತು ಆತನ ಅಂತ್ಯ ಸಂಸ್ಕಾರ (ವನ 138/2–7). ಇವನು ತನ್ನ ತಮ್ಮ ಅರ್ವಾವಸುವಿಗೆ, ತಾನು ಮಾಡಿದ ಬ್ರಹ್ಮಹತ್ಯೆಯ ನಿವಾರಣೆಗಾಗಿ ವ್ರತಮಾಡಲು ಆಜ್ಞೆ ನೀಡಿದುದು ಮತ್ತು ಅವನು ಸಹೋದರನ ಆಜ್ಞೆಯನ್ನು ಸ್ವೀಕರಿಸಿದುದು (ವನ 138/8–10). ಬೃಹದ್ಯುಮ್ನ ಯಜ್ಞದಿಂದ ಈತ ಹೊರಹಾಕಲ್ಪಟ್ಟದ್ದು (ವನ 138/20). ಅರ್ವಾವಸುವಿನ ಪ್ರಯತ್ನದಿಂದ ಈತ ನಿರ್ದೋಷನೆಂದು ಸಿದ್ಧನಾದುದು (ವನ 138/21). ಇವನಿಂದ ಪರಶುರಾಮನ ಮೇಲೆ ಆಕ್ಷೇಪ (ಶಾಂತಿ 49/57–59). ಇವನು ಅಂಗೀರಸನ ವಂಶಜನೆಂದು ತಿಳಿಯಲ್ಪಟ್ಟಿದ್ದಾನೆ (ಶಾಂತಿ 208/26). ಇವನು ಉಪರಿಚರನ ಯಜ್ಞದ ಸದಸ್ಯತ್ವ ಸ್ವೀಕರಿಸಿದನು (ಶಾಂತಿ 336/7). ಇವನು ಇಂದ್ರಸಭೆಯ ಸದಸ್ಯನಾಗಿದ್ದಾನೆ (ಸಭಾ 7/17).

**ಪರಾವಹ** – ವಾಯುವಿನ ಏಳು ಭೇದಗಳಲ್ಲಿ ಒಂದು. ಇದು ಸಪ್ತಮ ವಾಯು. ಇದರ ಸ್ವರೂಪ ಮತ್ತು ಶಕ್ತಿಯ ವರ್ಣನೆ (ಶಾಂತಿ 328/52).

**ಪರಾಶರ**– (1) ಧೃತರಾಷ್ಟ್ರನ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ನಾಗಯಜ್ಞದಲ್ಲಿ ಹೋಮಿಸಲ್ಪಟ್ಟನು (ಆದಿ 57/19).

(2) ಮಹರ್ಷಿ ಶಕ್ತಿಯಿಂದ ಅದೃಶ್ಯಂತಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ಋಷಿ. ಇವನು ವಸಿಷ್ಠನ ಪೌತ್ರ (ಆದಿ 177/1). ರಾಕ್ಷಸಭಾವದಿಂದಿದ್ದ ಕಲ್ಮಾಷಪಾದನಿಂದ ಇವನ ತಂದೆಯ ಶಕ್ತಿಯ ವಧೆ (ಆದಿ 175/40). ಹನ್ನೆರಡು ವರ್ಷಗಳ ವರೆಗೆ ತಾಯಿಯ ಗರ್ಭದಲ್ಲಿ ಇವನ ವೇದಾಭ್ಯಾಸ (ಆದಿ 176/15). 'ಪರಾಶರ'ನೆಂದು ಇವನ ಹೆಸರಾಗಲು ಕಾರಣ (ಆದಿ 177/3). ತನ್ನ ತಾಯಿಯ ಮುಖದಿಂದ, ರಾಕ್ಷಸನಿಂದ ತನ್ನ ತಂದೆಯ ಮೃತ್ಯುವಾದ ಸಮಾಚಾರ ಕೇಳಿ, ಸಂಪೂರ್ಣ ಜಗತ್ತಿನ ವಿನಾಶಕ್ಕಾಗಿ ಇವನ ಸಂಕಲ್ಪ (ಆದಿ 177/5–9). ಭೃಗುವಂಶದ ಔರ್ವನ ಕಥೆ ತಿಳಿಸಿ, ವಸಿಷ್ಠನಿಂದ ಈತನ ಜಗದ್ವಿನಾಶಕ ಸಂಕಲ್ಪದ ನಿವಾರಣೆ (ಆದಿ 177/11ರಿಂದ ಅಧ್ಯಾಯ 180/1ರ ತನಕ). ಇವನಿಂದ ರಾಕ್ಷಸಸತ್ರದ ಅನುಷ್ಠಾನ, ಪುಲಸ್ತ್ಯನೇ ಮೊದಲಾದ ಮಹರ್ಷಿಗಳಿಂದ ಇವನ ರಾಕ್ಷಸ ಯಜ್ಞದ ನಿವಾರಣೆ (ಆದಿ 180/8–11). ಸತ್ಯವತಿಯ ರೂಪದ ಕಡೆಗೆ ಇವನ ಆಕರ್ಷಣೆ (ಆದಿ 63/70–71). ಇವನು ಸತ್ಯವತಿಗೆ ಯೋಜನಗಂಧಾ ಆಗುವಂತೆ ವರದಾನ ಮಾಡಿದುದು (ಆದಿ 63/80–82). ಇವನಿಂದ ಸತ್ಯವತಿಯ ಗರ್ಭದಲ್ಲಿ ವ್ಯಾಸರ ಜನ್ಮ (ಆದಿ 63/84). ಇವನು ಶರಶಯ್ಯೆಯಲ್ಲಿ ಬಿದ್ದಿರುವ ಭೀಷ್ಮರನ್ನು ನೋಡಲು ಅವನ ಬಳಿಗೆ ಹೋಗಿದ್ದನು (ಶಾಂತಿ 47/10). ಇವನು ದಯಾರ್ದ್ರನಾಗಿ, ಸೌದಾಸನ ಪುತ್ರನ ರಕ್ಷಣೆ ಮಾಡಿದ್ದನು (ಶಾಂತಿ 49/77). ಇವನಿಂದ ಜನಕನಿಗೆ ಕಲ್ಯಾಣ ಪ್ರಾಪ್ತಿಯ ಸಾಧನದ ಉಪದೇಶ (ಶಾಂತಿ 290). ಶಿವಮಹಿಮೆಯ ಕುರಿತು ಯುಧಿಷ್ಠಿರನಿಗೆ ತನ್ನ ಅನುಭವ ಹೇಳಿದುದು (ಅನು 18/40–45). ಇವನಿಂದ ತನ್ನ ಶಿಷ್ಯರಿಗೆ ವಿವಿಧ ಜ್ಞಾನಪೂರ್ಣ ಉಪದೇಶ (ಅನು 96/21). ಪರಾಶರ ಮತಾನುಸಾರ ಸಾವಿತ್ರಿ ಮಂತ್ರದ ವರ್ಣನೆ (ಅನು 150).

**ಪರಿಕ್ಷಿತ್** (ಪರೀಕ್ಷಿತ್) – (1) ಕುರುಕುಮಾರ ಅವಿಕ್ಷಿತನ ಪ್ರಥಮ ಪುತ್ರ. ಇವನಿಗೆ ಕಕ್ಷಸೇನ, ಉಗ್ರಸೇನ, ಚಿತ್ರಸೇನ, ಇಂದ್ರಸೇನ, ಸುಷೇಣ ಮತ್ತು ಭೀಮಸೇನ ಎಂಬ ಆರು ಪುತ್ರರಿದ್ದರು.

ಇವರೆಲ್ಲರೂ ಧರ್ಮ ಮತ್ತು ಅರ್ಥದ ಜ್ಞಾನಿಗಳಾಗಿದ್ದರು (ಆದಿ 94/52–54).

(2) ಕುರುಕುಮಾರ ಅನಶ್ವಾನ ಪುತ್ರ, ಇವನ ತಾಯಿಯ ಹೆಸರು 'ಅಮೃತಾ' ಎಂದಾಗಿತ್ತು. ಇವನಿಂದ ಸುಯಶಾಳ ಗರ್ಭದಲ್ಲಿ ಭೀಮಸೇನನ ಜನನವಾಗಿತ್ತು (ಆದಿ 95/41–42).

(3) ಪಾಂಡುವಂಶದ ಒಬ್ಬ ಸಮ್ರಾಟ. ಇವನು ಸುಭದ್ರಾಕುಮಾರ ಅಭಿಮನ್ಯು ಮತ್ತು ಉತ್ತರೆಯ ಪುತ್ರನಾಗಿದ್ದನು (ಆಶ್ವ 66). ಇವನ ಜನ್ಮ ಕಾಲದಲ್ಲಿ ಶ್ರೀಕೃಷ್ಣನು ಹಸ್ತಿನಾವತಿಯಲ್ಲಿದ್ದನು (ಆಶ್ವ 66/8). ಇವನು ಬ್ರಹ್ಮಾಸ್ತ್ರದಿಂದ ಪೀಡಿತನಾಗಿದ್ದ ಕಾರಣ, ಅಂಗಾಗಚಲನೆ ಇಲ್ಲದ ಶವದ ರೂಪದಲ್ಲಿ ಹುಟ್ಟಿದನು; ಆದುದರಿಂದ ಸ್ವಜನರ ಹರ್ಷ ಮತ್ತು ಶೋಕವನ್ನು ಹೆಚ್ಚಿಸುವವನಾಗಿದ್ದನು (ಆಶ್ವ 66/9). ಇವನನ್ನು ಜೀವಂತಗೊಳಿಸಲು ಶ್ರೀಕೃಷ್ಣನೊಡನೆ ಕುಂತಿಯ ಪ್ರಾರ್ಥನೆ (ಆಶ್ವ 66/15–28). ಇವನನ್ನು ಬದುಕಿಸಲು ಅಳುತ್ತಿದ್ದ ಸುಭದ್ರೆಯಿಂದ ಶ್ರೀಕೃಷ್ಣನಲ್ಲಿ ಪ್ರಾರ್ಥನೆ (ಆಶ್ವ 67). ಶ್ರೀಕೃಷ್ಣನು ಪ್ರಸೂತಿಕಾ ಗೃಹಪ್ರವೇಶ ಮಾಡಿದುದು, ಉತ್ತರೆಯ ವಿಲಾಪ ಮತ್ತು ತನ್ನ ಪುತ್ರನನ್ನು ಜೀವಂತನಾಗಿ ಮಾಡಲು ಅವನಲ್ಲಿ ಪ್ರಾರ್ಥನೆ (ಆಶ್ವ 68). ಉತ್ತರೆಯ ವಿಲಾಪ ಮತ್ತು ಶ್ರೀಕೃಷ್ಣನು ಆಕೆಯ ಮೃತ ಬಾಲಕನಿಗೆ ಜೀವದಾನವಿತ್ತದ್ದು (ಆಶ್ವ 69). ಶ್ರೀಕೃಷ್ಣನಿಂದ ಪರೀಕ್ಷಿತನ ನಾಮಕರಣ. ಉತ್ತರೆಯು ಇವನನ್ನು ಮಡಿಲಲ್ಲಿಟ್ಟುಕೊಂಡು ಶ್ರೀಕೃಷ್ಣನಿಗೆ ಪ್ರಣಾಮ ಮಾಡಿದುದು ಮತ್ತು ಶ್ರೀಕೃಷ್ಣನು ಶಿಶು ಪರೀಕ್ಷಿತನಿಗೆ ತುಂಬಾ ರತ್ನಗಳನ್ನು ಉಡುಗೊರೆ ಕೊಟ್ಟದ್ದು (ಆಶ್ವ 70/9–12). ಇವನ ಪ್ರಾಯ ಒಂದು ತಿಂಗಳಾದಾಗ ಪಾಂಡವರು ಹಿಮಾಲಯದಿಂದ ಧನವನ್ನು ತಂದದ್ದು (ಆಶ್ವ 70/13–14). ಯುಧಿಷ್ಠಿರನಿಂದ ಪರೀಕ್ಷಿತನಿಗೆ ಕುರು ರಾಜ್ಯಾಭಿಷೇಕ (ಮಹಾಪ್ರಸ್ಥಾನ 1/7–8). ಕೃಪಾಚಾರ್ಯರ ಪೂಜೆ ಮಾಡಿ, ಯುಧಿಷ್ಠಿರನು ಪುರವಾಸಿಗಳ ಸಹಿತ ಪರೀಕ್ಷಿತನನ್ನು ಶಿಷ್ಯರೂಪದಿಂದ, ಅವರ ಸೇವೆಗೆ ಒಪ್ಪಿಸಿದುದು (ಮಹಾಪ್ರಸ್ಥಾನ 1/14–15). ಮಾದ್ರವತಿಯೊಂದಿಗೆ ಇವನ ವಿವಾಹ ಮತ್ತು ಆಕೆಯ ಗರ್ಭದಿಂದ ಜನಮೇಜಯಾದಿಗಳ ಜನನ (ಆದಿ 95/85). ಇವನಿಗೆ ಇನ್ನೂ ಮೂರು ಮಂದಿ ಪುತ್ರರಿದ್ದರು – ಶ್ರುತಸೇನ, ಉಗ್ರಸೇನ ಮತ್ತು ಭೀಮಸೇನ (ಆದಿ 3/17). ಇವನು ತನ್ನ ಪ್ರಪಿತಾಮಹ ಪಾಂಡುವಿನಂತೆ ಬೇಟೆಯಾಡುವ ಉತ್ಸಾಹಿಯಾಗಿದ್ದನು (ಆದಿ 40/10–11). ಒಂದು ದಿನ ಇವನು ಬೇಟೆಯಾಡಲು ಒಂದು ಗೊಂಡಾರಣ್ಯಕ್ಕೆ ಹೋಗಿ ಒಂದು ಹಿಂಸ್ರಪಶುವನ್ನು ಹೊಡೆದುದು ಮತ್ತು ಆ ಪಶು ಅದೃಶ್ಯವಾದುದು (ಆದಿ 40/13–16). ಆಯಾಸಗೊಂಡ ಮತ್ತು ಬಾಯಾರಿದ ರಾಜ ಶಮೀಕ ಮುನಿಯ ಆಶ್ರಮಕ್ಕೆ ಹೋದುದು. ತನ್ನ ಬಾಣಕ್ಕೆ ಗುರಿಯಾದ ಪಶುವಿನ ಇರವನ್ನು ಕೇಳಿದುದು; ಧ್ಯಾನಸ್ಥನಾದ ಮುನಿ ಉತ್ತರ ಕೊಡಲಿಲ್ಲವೆಂದು ಕುಪಿತನಾದ ರಾಜ, ಆತನ ಕುತ್ತಿಗೆಯ ಮೇಲೆ ಒಂದು ಸತ್ತ ಸರ್ಪವನ್ನು ಹಾಕಿದುದು (ಆದಿ 40/17–21). ರಾಜನ ದುರ್ವ್ಯವಹಾರದಿಂದ ದುಃಖಿತನಾದ ಋಷಿ ಕುಮಾರ ಕೃಶ, ಶಮೀಕಪುತ್ರ ಶೃಂಗಿಯನ್ನು, ಈತನ ವಿರುದ್ಧವಾಗಿ ಉತ್ತೇಜಿಸಿದುದು (ಆದಿ 40/27–32). ಶೃಂಗೀ ಋಷಿ, ಕೃಶನಿಂದ ರಾಜಾಪರೀಕ್ಷಿತನ ದುರ್ವ್ಯವಹಾರದ ವಿಷಯ ತಿಳಿದು ಈತನಿಗೆ ಶಾಪಕೊಟ್ಟದ್ದು ಮತ್ತು ಶಮೀಕನು ತನ್ನ ಪುತ್ರನನ್ನು ಶಾಂತಗೊಳಿಸುತ್ತಾ, ಶಾಪವು ಅನುಚಿತವಾದುದೆಂದು ಹೇಳಿದುದು (ಆದಿ 41). ಶಮೀಕನಿಂದ ಕಳುಹಿಸಲ್ಪಟ್ಟ ಗೌರಮುಖನು ರಾಜಾಪರೀಕ್ಷಿತನಲ್ಲಿಗೆ ಬಂದುದು ಮತ್ತು ಶೃಂಗಿಋಷಿ ಕೊಟ್ಟ ಶಾಪದ ವಿಚಾರ ತಿಳಿಸಿ, ಈತನೊಡನೆ ಆತ್ಮರಕ್ಷಣೆಗಾಗಿ ಪ್ರಯತ್ನಿಸುವಂತೆ ಹೇಳಿದುದು (ಆದಿ 42/13–22). ರಾಜಾ ಪರೀಕ್ಷಿತನು ಪಶ್ಚಾತ್ತಾಪ ಪಟ್ಟದ್ದು, ಮಂತ್ರಿಗಳ ಸಲಹೆಯಂತೆ ಒಂದೇ ಕಂಬದ ಎತ್ತರವಾದ ಅರಮನೆ ಕಟ್ಟಿಸಿದುದು ಮತ್ತು ರಕ್ಷಣೆಗಾಗಿ ಮಂತ್ರ, ಔಷಧಿ ಇತ್ಯಾದಿಗಳ ಆವಶ್ಯಕ ವ್ಯವಸ್ಥೆ ಮಾಡಿದುದು (ಆದಿ 42/23–32). ಪರೀಕ್ಷಿತನ ರಕ್ಷಣೆಗಾಗಿ ಬರುತ್ತಿದ್ದ ಕಾಶ್ಯಪನನ್ನು ಹಿಂತಿರುಗಿಸಿ, ತಕ್ಷಕನು ಮೋಸದಿಂದ ಪರೀಕ್ಷಿತನ ಬಳಿಗೆ ಹೋಗಿ, ಈತನನ್ನು ಕಡಿದುದು (ಆದಿ 43). ಇವನ ಮೃತ್ಯುವಿನಿಂದ ದುಃಖಿತರಾದ ಮಂತ್ರಿಗಳ ರೋದನ. ಇವನ ಅಲ್ಪ ವಯಸ್ಕಪುತ್ರ ಜನಮೇ

ಜಯನ ರಾಜ್ಯಾಭಿಷೇಕ (ಆದಿ 44/1–6). ಜನಮೇಜಯನು ಕೇಳಿದಾಗ, ಮಂತ್ರಿಗಳಿಂದ ಇವನ ಧರ್ಮಮಯ ಆಚಾರ ಮತ್ತು ಉತ್ತಮ ಗುಣಗಳ ವರ್ಣನೆ (ಆದಿ 49/3–18). ತಕ್ಷಕನಿಂದ ಇವನ ಮೃತ್ಯುವಾದುದರ ಮರುವರ್ಣನೆ (ಆದಿ ಅಧ್ಯಾಯ 49ರಿಂದ 50 ರ ವರೆಗೆ). ವ್ಯಾಸರ ಕೃಪೆಯಿಂದ ಜನಮೇಜಯನಿಗೆ ಪರಲೋಕವಾಸಿಯಾದ ತನ್ನ ತಂದೆ ಪರೀಕ್ಷಿತನ ದರ್ಶನ. ಅವನು ತನ್ನ ತಂದೆಗೆ ಅವಭೃಥ ಸ್ನಾನ ಮಾಡಿಸಿದುದು. ಅನಂತರ ಪರೀಕ್ಷಿತನು ಅದೃಶ್ಯವಾದುದು (ಆಶ್ರಮ 35/6–9). ಮಹಾಭಾರತದಲ್ಲಿ ಬಂದಿರುವ ಪರೀಕ್ಷಿತನ ಹೆಸರುಗಳು: ಅಭಿಮನ್ಯುಸುತ, ಅಭಿಮನ್ಯುಜ, ಭರತಶ್ರೇಷ್ಠ, ಕಿರೀಟಿತನಯಾತ್ಮಜ, ಕುರುಶ್ರೇಷ್ಠ, ಕುರುನಂದನ, ಕುರುರಾಜ, ಕುರುವರ್ಧನ, ಪಾಂಡವೇಯ ಇತ್ಯಾದಿ.

(4) ಅಯೋಧ್ಯೆಯ ಇಕ್ಷ್ವಾಕುವಂಶದ ಒಬ್ಬ ರಾಜ (ವನ 192/3). ಮಂಡೂಕರಾಜ ಕನ್ಯೆ ಸುಶೋಭನೆಯೊಂದಿಗೆ ಇವನ ವಿವಾಹ (ವನ 192/12). ಸುಶೋಭನಾ ಮೆಟ್ಟಲುಗಳಿರುವ ಬಾವಿಯಲ್ಲಿ ಬಿದ್ದು ಮುಳುಗಿದಾಗ, ಕಪ್ಪೆಗಳನ್ನು ಕೊಲ್ಲಲು ಇವನ ಆದೇಶ (ವನ 192/22–24). ಮಂಡೂಕರಾಜನಿಂದ ಪುನಃ ಇವನಿಗೆ ಸುಶೋಭನಾಳ ಪ್ರಾಪ್ತಿ (ವನ 192/35). ಸುಶೋಭನೆಯ ಗರ್ಭದಿಂದ ಇವನಿಗೆ ಪುತ್ರ ಪ್ರಾಪ್ತಿ ಮತ್ತು ಇವನ ವನಗಮನ (ವನ 192/38).

(5) ಒಬ್ಬ ಪ್ರಾಚೀನ ರಾಜ. ಇವನು ಕುರುವಂಶದ ಅಭಿಮನ್ಯು ಪುತ್ರ ಪರೀಕ್ಷಿತನಿಗಿಂತ ಬೇರೆಯವನು. ಇಂದ್ರೋತ ಮುನಿಯ ಮೂಲಕ ಇವನ ಮಗ ಜನಮೇಜಯನ ಬ್ರಹ್ಮ ಹತ್ಯಾ ನಿವಾರಣೆ (ಶಾಂತಿ ಅಧ್ಯಾಯ 150ರಿಂದ 151ರ ವರೆಗೆ).

**ಪರಿಘ** – (1) ಅಂಶನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಪಾರ್ಷದರಲ್ಲಿ ಒಬ್ಬ. ನಾಲ್ಕು ಮಂದಿಯ ಹೆಸರು ಹೀಗಿದೆ. ವಟ, ಭೀಮ, ದಹತಿ ಮತ್ತು ದಹನ.

(2) ವಿಡಾಲೋಪಾಖ್ಯಾನದಲ್ಲಿ ವರ್ಣಿಸಲ್ಪಟ್ಟ ವ್ಯಾಧನ ಹೆಸರು (ಶಾಂತಿ 138/117).

**ಪರಿಬರ್ಹ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/13).

**ಪರಿವಹ** – ಆರನೆಯ ವಾಯುತತ್ವ. ಇದರ ಸ್ವರೂಪ ಮತ್ತು ಶಕ್ತಿಯ ವರ್ಣನೆ (ಶಾಂತಿ 328/48).

**ಪರಿವ್ಯಾಧ** – ಪಶ್ಚಿಮ ದಿಕ್ಕಿನಲ್ಲಿ ವಾಸಿಸುವ ಒಬ್ಬ ಮಹರ್ಷಿ (ಶಾಂತಿ 208/30).

**ಪರಿಶ್ರುತ** – (1) ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

**ಪರ್ಜನ್ಯ** – ಒಬ್ಬ ದೇವ ಗಂಧರ್ವ. ಇವನು ಕಶ್ಯಪನಿಂದ ಮುನಿಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/44). ಇವನು ಅರ್ಜುನನ ಜನ್ಮೋತ್ಸವಕ್ಕೆ ಬಂದಿದ್ದನು (ಆದಿ 122/56).

**ಪರ್ಣಶಾಲಾ** – ಯಮುನ ಪರ್ವತದ ಕೆಳಗಿನ ಭೂಭಾಗದಲ್ಲಿ ನೆಲಸಿರುವ ಬ್ರಾಹ್ಮಣರ ಒಂದು ಹಳ್ಳಿ ಇಲ್ಲಿ. ಶರ್ಮೀ ಎಂಬ ವಿದ್ವಾಂಸರಾದ ಬ್ರಾಹ್ಮಣರು ವಾಸಿಸುತ್ತಿದ್ದರು (ಅನು 68/4–6).

**ಪರ್ಣಾದ** – (1) ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿ ಕುಳ್ಳಿರುತ್ತಿದ್ದನು (ಸಭಾ 4/13). ಹಸ್ತಿನಾಪುರಕ್ಕೆ ಹೋಗುವಾಗ, ದಾರಿಯಲ್ಲಿ ಶ್ರೀಕೃಷ್ಣನಿಗೆ ಇವನ ಭೇಟಿ (ಉದ್ಯೋಗ 83/64).

(2) ವಿದರ್ಭನಿವಾಸಿ ಒಬ್ಬ ಬ್ರಾಹ್ಮಣ. ಇವನು ಬಾಹುಕನಾಗಿದ್ದ ರಾಜಾ ನಳನ ಸಮಾಚಾರವನ್ನು ದಮಯಂತಿಯೊಡನೆ ಹೇಳಿದುದು (ವನ 70/2–13). ಇವನಿಗೆ ದಮಯಂತಿಯಿಂದ ಪಾರಿತೋಷಕದ ಕೊಡುಗೆ (ವನ 70/19).

(3) ವಿದರ್ಭನಿವಾಸಿ ಸತ್ಯನೆಂಬ ಹೆಸರಿನ ಬ್ರಾಹ್ಮಣನ ಯಜ್ಞದಲ್ಲಿ ಹೋತೃವಿನ ಕಾರ್ಯ ಮಾಡಿದ ಋಷಿ (ಶಾಂತಿ 273/8).

**ಪರ್ಣಾಶಾ** – ವಾಯುವ್ಯ ಭಾರತದ ಒಂದು ನದಿ. ಈಕೆ ವರುಣ ಸಭೆಯಲ್ಲಿರುತ್ತಾಳೆ (ಸಭಾ 9/21). (ಕೆಲವರು ಇದು ರಾಜಪುತಾನದ ಒಳಗಿರುವ 'ಬನಾಸನದಿ' ಎನ್ನುತ್ತಾರೆ. ಇದು ಚರ್ಮಣ್ವತಿ ಅಥವಾ ಚಂಬಲ ನದಿಯ ಸಹಾಯಕವಾಗಿದೆ.) ಭಾರತವಾಸಿಗಳು ಜಲಪಾನ ಮಾಡುವ ಪ್ರಮುಖ ನದಿಗಳಲ್ಲಿ ಇದೂ ಒಂದಾಗಿದೆ (ಭೀಷ್ಮ 9/31). ಈಕೆ ವರುಣನಿಂದ ಶ್ರುತಾಯುಧನೆಂಬ ಪುತ್ರನಿಗೆ ಜನ್ಮವಿತ್ತಳು ಮತ್ತು 'ನನ್ನ ಈ ಪುತ್ರ ಶತ್ರುಗಳಿಂದ ಅವಧ್ಯನಾಗಿರ

19

ಬೇಕೆಂದು' ಈಕೆ ವರುಣನನ್ನು ಪ್ರಾರ್ಥಿಸಿದಳು. ಆಗ ವರುಣನು "ನಾನು ಇವನ ಹಿತಕಾರಕ ವರದರೂಪದಲ್ಲಿ ಈ ದಿವ್ಯಾಸ್ತ್ರವನ್ನು ಕೊಡುತ್ತೇನೆ. ಇದರಿಂದ ನಿನ್ನ ಪುತ್ರ ಅವಧ್ಯನಾಗುವನು" ಎಂದನು (ದ್ರೋಣ 92/44–46).

**ಪರ್ವಣ** – ರಾಕ್ಷಸ ಮತ್ತು ಪಿಶಾಚರ ಗುಂಪು (ವನ 285/1–2).

**ಪರ್ವತ** – ಪ್ರಾಚೀನ ಋಷಿ ಅಥವಾ ದೇವರ್ಷಿ. ಇವನು ಜನಮೇಜಯನ ಸರ್ಪಸತ್ರದಲ್ಲಿ ಸದಸ್ಯನಾಗಿದ್ದನು (ಆದಿ 53/8). (ಇವನು ಮತ್ತು ನಾರದ ಅನೇಕ ಸ್ಥಳಗಳಲ್ಲಿ ಜೊತೆ ಜೊತೆಯಾಗಿ ವರ್ಣಿಸಲ್ಪಟ್ಟಿದ್ದಾರೆ. ಇವರಿಬ್ಬರನ್ನು ಗಂಧರ್ವರೆಂದೂ ದೇವರ್ಷಿಗಳೆಂದೂ ತಿಳಿಯಲಾಗಿದೆ.) ಪರ್ವತ ಮತ್ತು ನಾರದ ದ್ರೌಪದೀ ಸ್ವಯಂವರದ ಸಂದರ್ಭದಲ್ಲಿ, ಆಕಾಶದಲ್ಲಿ ನೋಟಕರಾಗಿ ನಿಂತಿದ್ದಾರೆ (ಆದಿ 183/7). ಇವನು ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/15). ಇವನು ಇಂದ್ರಸಭೆಯಲ್ಲಿ ಇರುತ್ತಾನೆ (ಸಭಾ 7/10). ಗಂಧರ್ವ ರೂಪದಿಂದ ಕುಬೇರ ಸಭೆಯಲ್ಲೂ ಕುಳ್ಳಿರುತ್ತಾನೆ (ಸಭಾ 10/26). ಇವನು ನಾರದನೊಂದಿಗೆ ಇಂದ್ರಲೋಕಕ್ಕೆ ಹೋಗಿದ್ದನು (ವನ 54/14). ಕಾಮ್ಯಕವನದಲ್ಲಿ ಪಾಂಡವರ ಬಳಿಗೆ ಹೋಗಿ, ಅವರು ಶುದ್ಧ ಭಾವದಿಂದ ತೀರ್ಥಯಾತ್ರೆ ಮಾಡುವಂತೆ ಈತ ಆಜ್ಞೆ ಕೊಟ್ಟಿದ್ದನು (ವನ 93/18–20). ರಾಜಾ ಸೃಂಜಯನ ಕನ್ನಿಕೆಯನ್ನು ನೋಡಿ, ಅವಳನ್ನು ಪಡೆಯಲು ಇಚ್ಛಿಸಿದ್ದನು (ದ್ರೋಣ 55/9–10). ಆ ಕನ್ಯೆ ನಾರದನನ್ನು ವರಿಸಿದುದರಿಂದ ಕುಪಿತನಾದ ಈತನಿಂದ ನಾರದನಿಗೆ ಶಾಪ (ದ್ರೋಣ 55/14). ಇವನು ರಾತ್ರಿಯುದ್ಧದಲ್ಲಿ ಕೌರವ ಪಾಂಡವಸೇನೆಯಲ್ಲಿ ದೀಪದ ಪ್ರಕಾಶಮಾಡಿದನು (ದ್ರೋಣ 163/15). ಇವನು ನಾರದನ ಸೋದರಿಯ ಮಗ. ಈ ಇಬ್ಬರು ಮುನಿಗಳ ಉಪಾಖ್ಯಾನವನ್ನು ಶ್ರೀಕೃಷ್ಣನು ವರ್ಣಿಸಿದುದು (ಶಾಂತಿ 30). ಇವನು ರಾಜಾ ಸೃಂಜಯನಿಗೆ ಪುತ್ರಪ್ರಾಪ್ತಿಯ ವರವನ್ನಿತ್ತದ್ದು (ಶಾಂತಿ 31/16–19). ಅಗಸ್ತ್ಯರ ಕಮಲಗಳ ಅಪಹಾರವಾದಾಗ ಶಪಥ ಮಾಡಿದುದು (ಅನು 94/34).

**ಪರ್ವಸಂಗ್ರಹಪರ್ವ** – ಆದಿ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ2).

**ಪಲಾಲಾ** – ಏಳು ಶಿಶುಮಾತೆಯರಲ್ಲಿ ಒಬ್ಬಳು (ವನ 228/10).

**ಪಲಾಶವನ** – ಒಂದು ತೀರ್ಥಮೂಲವಾಗಿರುವ ಕಾಡು. ಇಲ್ಲಿ ಜಮದಗ್ನಿ ಯಜ್ಞ ಮಾಡಿದ್ದನು. ಆ ಯಜ್ಞದಲ್ಲಿ ಶ್ರೇಷ್ಠನದಿಗಳು ಮೂರ್ತಿಮತ್ತಾಗಿ, ತಮ್ಮ ತಮ್ಮ ಜಲವನ್ನು ತೆಗೆದುಕೊಂಡು ಆ ಮುನಿಶ್ರೇಷ್ಠನ ಬಳಿಗೆ ಬಂದಿದ್ದರು. ಅವರು ಅಲ್ಲಿ ಮಧುವಿನಿಂದ ಬ್ರಾಹ್ಮಣರನ್ನು ತೃಪ್ತಗೊಳಿಸಿದ್ದರು (ವನ 94/16–17).

**ಪಲಿತ** – ಬಿಡಾಲೋಪಾಖ್ಯಾನದಲ್ಲಿ ವರ್ಣಿಸಲ್ಪಟ್ಟ ಒಂದು ಇಲಿಯ ಹೆಸರು (ಶಾಂತಿ 138/21). ಲೋಮಶನೆಂಬ ಗಂಡುಬೆಕ್ಕಿನೊಂದಿಗೆ ಇದರ ಸಂವಾದ (ಶಾಂತಿ 138/34–198).

**ಪವನಹ್ರದ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ಮರುದ್ಗಣ ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯ ವಿಷ್ಣುಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/105).

**ಪವಿತ್ರಪಾಣಿ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿ ಕುಳ್ಳಿರುತ್ತಿದ್ದನು (ಸಭಾ 4/15). ಇವನು ಇಂದ್ರಸಭೆಯಲ್ಲೂ ಸಭಾ ಸದನಾಗಿದ್ದನು (ಸಭಾ 7/12).

**ಪವಿತ್ರಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವವರು ಕುಡಿಯುತ್ತಾರೆ (ಭೀಷ್ಮ 9/21).

**ಪಶು** – ಒಂದು ಭಾರತೀಯ ಜನಪದ (ಭೀಷ್ಮ 9/67).

**ಪಶುದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಪಶುಭೂಮಿ** – ಪಶುಪತಿನಾಥನ ಸಮೀಪದ ಸ್ಥಾನ (ನೇಪಾಲ). ಈ ದೇಶದ ಮೇಲೆ ಭೀಮಸೇನನ ವಿಜಯ (ಸಭಾ 30/9).

**ಪಶುಸಖ** – ಸಪ್ತರ್ಷಿಗಳ ಸೇವಕನಾದ ಒಬ್ಬ ಶೂದ್ರ. ಇವನ ಪತ್ನಿಯ ಹೆಸರು ಗಂಡಾ ಎಂದಾಗಿತ್ತು (ಅನು 93/22). ಇವನು ವೃಷಾದರ್ಭಿಯೊಡನೆ ಪ್ರತಿಗ್ರಹ ದೋಷ ಹೇಳಿದುದು (ಅನು 93/47). ಯಾತುಧಾನಿಯೊಡನೆ ತನ್ನ ಹೆಸರಿನ ವ್ಯಾಖ್ಯಾನ ಮಾಡಿದುದು (ಅನು 93/100). ಕಮಲದಂಟಿನ ಅಪಹಾರದ ಕುರಿತು ಶಪಥ

ಮಾಡಿದುದು (ಅನು 93/131).

**ಪಶ್ಚಿಮ ದಿಕ್ಕು** – ನಾಲ್ಕು ದಿಕ್ಕುಗಳಲ್ಲಿ ಒಂದು. ಇದರ ವಿಶೇಷ ವರ್ಣನೆ (ಉದ್ಯೋಗ 110).

**ಪಹ್ಲವ** – (1) ಒಂದು ಪಶ್ಚಿಮ ಭಾರತೀಯ ಜನಪದ (ಭೀಷ್ಮ 9/68).

(2) ಒಂದು ಮ್ಲೇಚ್ಛಜಾತಿ. ಇದು ನಂದಿನಿಧೇನುವಿನ ಬಾಲದಿಂದ ಹುಟ್ಟಿತ್ತು (ಆದಿ 174/36). ನಕುಲನು ಈ ದೇಶವನ್ನೂ, ಈ ಜಾತಿಯ ಜನರನ್ನೂ ಗೆದ್ದಿದ್ದನು (ಸಭಾ 32/17). ಈ ಜನರು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಾಣಿಕೆತಂದಿದ್ದರು (ಸಭಾ 52/15). ಇವರು ಮಾಂಧಾತನ ರಾಜ್ಯದಲ್ಲಿ ವಾಸಿಸುತ್ತಿದ್ದರು (ಶಾಂತಿ 65/13–14).

**ಪಾಂಶು** – ಒಂದು ಪ್ರಾಚೀನ ದೇಶ. ಇಲ್ಲಿಂದ ರಾಜಾ ವಸುದಾನನು ಇಪ್ಪತ್ತಾರು ಆನೆ, ಎರಡು ಸಾವಿರ ಕುದುರೆ ಮತ್ತು ಇತರ ಉಡುಗೊರೆ ಸಾಮಗ್ರಿಗಳನ್ನು ಪಾಂಡವರಿಗೆ ಸಮರ್ಪಿಸಿದನು (ಸಭಾ 52/27–28).

**ಪಾಕ** – ಒಬ್ಬ ಅಸುರ. ಇವನನ್ನು ಇಂದ್ರನು ಕೊಂದಿದ್ದನು (ಶಾಂತಿ 98/50).

**ಪಾಖಂಡ** – ದಕ್ಷಿಣ ಭಾರತದ ಒಂದು ಜನಪದ. ಇದನ್ನು ಸಹದೇವನು ದೂತರ ಮೂಲಕ ಸ್ವಾಧೀನಮಾಡಿದನು (ಸಭಾ 31/70).

**ಪಾಞ್ಚಜನ್ಯ** – (1) ರೈವತಕ ಪರ್ವತದ ಹತ್ತಿರದ ವನ. ಇದು ತುಂಬಾ ಸುಂದರವಾಗಿದೆ (ಸಭಾ 38/29).

(2) ಭಗವಾನ್ ಶ್ರೀಕೃಷ್ಣನ ಶಂಖ (ಸಭಾ 38/29). ಶಾಲ್ವನೊಂದಿಗೆ ಯುದ್ಧಮಾಡುವಾಗ ಶ್ರೀಕೃಷ್ಣನಿಂದ ಪಾಂಚಜನ್ಯ ಊದಲ್ಪಟ್ಟದ್ದು (ವನ 20/13). ಕುರುಕ್ಷೇತ್ರದ ಯುದ್ಧಾಂಗಣದಲ್ಲಿ ಶ್ರೀಕೃಷ್ಣನು ತನ್ನ ಪಾಂಚಜನ್ಯವೆಂಬ ಶಂಖವನ್ನು ಊದಿದುದು (ಭೀಷ್ಮ 25/15). ಈ ಪಾಂಚಜನ್ಯದ ಧ್ವನಿ ಋಷಭಸ್ವರದಿಂದಲೇ ಕೂಡಿರುತ್ತದೆ (ದ್ರೋಣ 79).

(3). ಐದು ಋಷಿಗಳ ಅಂಶದಿಂದ ಹುಟ್ಟಿದ ಒಬ್ಬ ಅಗ್ನಿ. ಇವನ ಇನ್ನೊಂದು ಹೆಸರು ತಪ (ವನ 220/5, 11).

**ಪಾಞ್ಚರಾತ್ರ** – ಒಂದು ಉತ್ತಮ ಶಾಸ್ತ್ರ. ಇದನ್ನು ತಿಳಿದ ಮಹರ್ಷಿಗಳು ರಾಜಾ ಉಪರಿಚರ ವಸುವಿನಲ್ಲಿದ್ದರು. ಇದರ ಉತ್ಪತ್ತಿಯ ಸನ್ನಿವೇಶ (ಶಾಂತಿ 335/25–55).

**ಪಾಞ್ಚಾಲ** – (1) ಒಂದು ಪ್ರಾಚೀನ ದೇಶ. ದ್ರುಪದ ಇಲ್ಲಿಯೇ ರಾಜನಾಗಿದ್ದನು. ದ್ರೌಪದಿಯನ್ನು ಪಡೆದ ಮೇಲೆ ಪಾಂಡವರು ಇಲ್ಲಿ ವರ್ಷವಿಡೀ ವಾಸವಾಗಿದ್ದರು (ಆದಿ 61/31). (ನೋಡಿರಿ– ಪಞ್ಚಾಲ).

(2) ಒಬ್ಬ ಪ್ರಾಚೀನಋಷಿ. ಇವನು ವಾಮದೇವನು ಹೇಳಿದ ಧ್ಯಾನಮಾರ್ಗದಿಂದ, ಭಗವಂತನ ಆರಾಧನೆಮಾಡಿ, ಅವನ ಕೃಪಾಪ್ರಸಾದದಿಂದಲೇ ವೇದಗಳ ಕ್ರಮವಿಭಾಗವನ್ನು ಪಡೆದನು (ಶಾಂತಿ 342/102–103).

**ಪಾಞ್ಚಾಲೀ** – ರಾಜಾ ದ್ರುಪದನ ಪುತ್ರಿ. ಈಕೆ ಅಗ್ನಿಕುಂಡದಿಂದ ಹುಟ್ಟಿದ್ದಳು (ಆದಿ 166/44). (ನೋಡಿರಿ–ದ್ರೌಪದಿ).

**ಪಾಞ್ಚಾಲ್ಯ** – ಉತ್ತರಾಖಂಡದಲ್ಲಿ ತೀರ್ಥಮೂಲವಾದ ಒಂದು ಆಶ್ರಮ (ವನ 90/11–12).

**ಪಾಟಲಾವತಿ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತದ ಜನರು ಕುಡಿಯುತ್ತಾರೆ (ಭೀಷ್ಮ 9/22).

**ಪಾಣಿಕೂರ್ಚ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಪಾಣಿಖಾತ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡಿ, ದೇವತೆಗಳಿಗೂ ಪಿತೃಗಳಿಗೂ ತರ್ಪಣ ಕೊಡುವುದರಿಂದ, ಅಗ್ನಿಷ್ಟೋಮ, ಅತಿರಾತ್ರ ಮತ್ತು ರಾಜಸೂಯ ಯಜ್ಞಗಳ ಫಲಸಿಗುತ್ತದೆ (ವನ 83/89).

**ಪಾಣಿಮಂತ** – ಒಬ್ಬ ನಾಗ. ಇವನು ವರುಣ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 9/10).

**ಪಾಣೀತಕ** – ಪೂಷಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಕಾಲಿಕ (ಶಲ್ಯ 45/43).

**ಪಾಣ್ಡರ** – ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟುಹೋದನು (ಆದಿ 57/11).

**ಪಾಣ್ಡವ** – ಪಾಂಡುವಿನ ಪುತ್ರರು. ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವ

ಇವರೈದು ಮಂದಿ ಪಾಂಡವರೆಂದು ಕರೆಯಲ್ಪಡುತ್ತಿದ್ದರು. ಶತಶೃಂಗನಿವಾಸಿಗಳಾದ ಋಷಿಗಳಿಂದ ಪಾಂಡವರ ನಾಮಕರಣ ಸಂಸ್ಕಾರ (ಆದಿ 123/19-22). ವಸುದೇವನ ಪುರೋಹಿತ ಕಾಶ್ಯಪನಿಂದ ಇವರ ಉಪನಯನಾದಿ ಸಂಸ್ಕಾರ ಮತ್ತು ರಾಜರ್ಷಿ ಶುಕನಿಂದ ಇವರು ವಿವಿಧ ವಿದ್ಯೆಯಲ್ಲಿ ಪಾರಂಗತರಾದುದು (ಆದಿ 123/31). ಪಾಂಡುವಿನ ನಿಧನಾನಂತರ ಇವರ ವಿಲಾಪ (ಆದಿ 124/17). ಶತಶೃಂಗ ನಿವಾಸಿಗಳಾದ ಋಷಿಗಳು ಇವರನ್ನು ಹಸ್ತಿನಾಪುರಕ್ಕೆ ತಲುಪಿಸಿ, ಭೀಷ್ಮನೇ ಮೊದಲಾದ ಕೌರವರಿಗೆ ಇವರ ಜನ್ಮವೃತ್ತಾಂತ ಹೇಳಿದುದು (ಆದಿ 125/22-28). ಕೃಪಾಚಾರ್ಯನಿಂದ ಇವರ ಅಧ್ಯಯನ (ಆದಿ 129/23). ದ್ರೋಣಾಚಾರ್ಯನಿಂದ ಇವನ ಅಧ್ಯಯನ. (ಆದಿ 131/9). ಏಕಲವ್ಯನ ಧನುರ್ವಿದ್ಯೆಯಿಂದ ಇವರು ವಿಸ್ಮಿತರಾದುದು (ಆದಿ 131/41). ದ್ರುಪದನ ಮೇಲೆ ಇವರ ಆಕ್ರಮಣ ಮತ್ತು ವಿಜಯ (ಆದಿ 137/36-63). ಧೃತರಾಷ್ಟ್ರನ ಆದೇಶದಿಂದ ಪಾಂಡವರು ವಾರಣಾವತಕ್ಕೆ ಹೋದುದು (ಆದಿ 142/6-19). ವಿದುರನ ಮೂಲಕ ಇವರಿಗೆ ಕೌರವನ ಮೋಸ ಜಾಲದಿಂದ ಬದುಕಿಕೊಳ್ಳುವಂತೆ ಸೂಚನೆ (ಆದಿ 144/19-26). ವಾರಣಾವತ ನಿವಾಸಿಗಳಿಂದ ಇವರಿಗೆ ಸ್ವಾಗತ (ಆದಿ 145/1-5). ಸುರಂಗದ ಮೂಲಕ ಲಾಕ್ಷಾಗೃಹದಿಂದ ಹೊರಟು ಇವರ ಪಲಾಯನ (ಆದಿ 147/11-18). ವಿದುರನು ಕಳುಹಿಸಿದ ನಾವಿಕನ ಮೂಲಕ ಇವರು ಗಂಗೆಯನ್ನು ದಾಟಿದುದು (ಆದಿ 148/13). ಇವರಿಗೆ ವ್ಯಾಸರ ಆಶ್ವಾಸನೆ ಮತ್ತು ಒಂದು ತಿಂಗಳವರೆಗೆ ಏಕಚಕ್ರನಗರದಲ್ಲಿ ಇವರು ಬ್ರಾಹ್ಮಣನ ಮನೆಯಲ್ಲಿ ವಾಸಿಸಿದುದು (ಆದಿ 156/2). ಆ ನಗರದಲ್ಲಿ ಇವರ ಭಿಕ್ಷಾವೃತ್ತಿ (ಆದಿ 156/4). ಇವರಿಗೆ ಒಬ್ಬ ಬ್ರಾಹ್ಮಣನಿಂದ, ದ್ರೋಣ ಮತ್ತು ದ್ರುಪದನ ಪರಸ್ಪರ ವೈರದ, ಧೃಷ್ಟದ್ಯುಮ್ನ ಮತ್ತು ದ್ರೌಪದಿಯ ಜನನದ, ಮತ್ತು ಆಕೆಯ ಸ್ವಯಂವರದ ವರ್ಣನೆ (ಆದಿ ಅಧ್ಯಾಯ 164ರಿಂದ 166ರ ವರೆಗೆ). ಇವರ ವಿಷಯವಾಗಿ ದ್ರುಪದನ ಶೋಕ (ಆದಿ 166/46). ದ್ರೌಪದಿಯ ಪೂರ್ವಜನ್ಮ ವೃತ್ತಾಂತ ಹೇಳಿ, ಇವರು ಪಾಂಚಾಲ ದೇಶಕ್ಕೆ ಹೋಗುವಂತೆ ವ್ಯಾಸರ ಆಜ್ಞೆ (ಆದಿ 168/6-15). ಚಿತ್ರರಥ ಗಂಧರ್ವನಿಂದ ಇವರಿಗೆ ದಿವ್ಯಾಶ್ವಗಳ ಪ್ರಾಪ್ತಿ (ಆದಿ 169/48). ಇವರು ಧೌಮ್ಯನ ಆಶ್ರಮಕ್ಕೆ ಹೋದುದು, ಮತ್ತು ಅವನನ್ನು ಪುರೋಹಿತನಾಗಿ ಇವರು ಆರಿಸಿದುದು (ಆದಿ 182/6). ಇವರ ಪಾಂಚಾಲಯಾತ್ರೆ (ಆದಿ 183). ದ್ರುಪದ ನಗರದ ಕುಂಭಕಾರನ ಮನೆಯಲ್ಲಿ ಇವರ ವಾಸ (ಅದಿ 184/6). ಬ್ರಾಹ್ಮಣ ವೇಷದಲ್ಲಿ ದ್ರೌಪದೀ ಸ್ವಯಂವರಕ್ಕೆ ಇವರ ಪ್ರವೇಶ (ಆದಿ 184/27). ಸ್ವಯಂವರದಲ್ಲಿ ಶ್ರೀಕೃಷ್ಣ ಇವರನ್ನು ಗುರುತಿಸಿದುದು (ಆದಿ 185/9). ದ್ರೌಪದೀ ರೂಪದ ಭಿಕ್ಷೆಯನ್ನು ಎಲ್ಲರನ್ನೂ ಒಟ್ಟಾಗಿ ಉಪಭೋಗಿಸುವಂತೆ ಇವರಿಗೆ ತಾಯಿಯ ಆದೇಶ (ಆದಿ 190/2). ಇವರನ್ನು ಭೇಟಿಯಾಗಲು ಬಲರಾಮ ಸಹಿತ ಶ್ರೀಕೃಷ್ಣ ಕುಂಬಾರನ ಮನೆಗೆ ಆಗಮಿಸಿದುದು (ಆದಿ 190/18). ಧೃಷ್ಟದ್ಯುಮ್ನನಿಂದ ಗುಟ್ಟಾಗಿ ಇವರ ವ್ಯವಹಾರದ ಪರೀಕ್ಷೆ. (ಆದಿ 191/1-2). ದ್ರುಪದನಿಂದ ಇವರ ಶೀಲಸ್ವಭಾವದ ಪರೀಕ್ಷೆ (ಆದಿ 193/4-10). ವ್ಯಾಸರು ಇವರ ಪೂರ್ವಜನ್ಮದ ದಿವ್ಯವೃತ್ತಾಂತ ದ್ರುಪದನಿಗೆ ವರ್ಣಿಸಿದುದು (ಆದಿ 196). ಧೌಮ್ಯರ ಮೂಲಕ, ದ್ರೌಪದಿಯೊಂದಿಗೆ ಕ್ರಮವಾಗಿ, ವಿಧಿವತ್ತಾಗಿ ಇವರ ವಿವಾಹ (ಆದಿ 197). ದ್ರೌಪದಿಯ ವಿವಾಹ ನಿಮಿತ್ತವಾಗಿ ಇವರಿಗೆ ಶ್ರೀಕೃಷ್ಣನಿಂದ ಅತ್ಯಮೂಲ್ಯ ವಸ್ತುಗಳ ಉಡುಗೊರೆ (ಆದಿ 198/13). ಪಾಂಡವರ ವಿವಾಹದಿಂದ ದುರ್ಯೋಧನಾದಿಗಳ ಚಿಂತೆ, ಧೃತರಾಷ್ಟ್ರನಿಂದ ಪಾಂಡವರಿಗೆ ತೋರಿಕೆಯ ಪ್ರೇಮ ಮತ್ತು ದುರ್ಯೋಧನನ ದುರಾಲೋಚನೆ (ಆದಿ 199). ಪಾಂಡವರನ್ನು ಪರಾಕ್ರಮದಿಂದ ಮರ್ದಿಸಲು ಕರ್ಣನ ಸಮ್ಮತಿ (ಆದಿ 201). ಪಾಂಡವರಿಗೆ ಅರ್ಧರಾಜ್ಯ ಕೊಡಲು ಭೀಷ್ಮನಿಂದ ದುರ್ಯೋಧನನಿಗೆ ಸಲಹೆ (ಆದಿ 202). ಪಾಂಡವರಿಗೆ ಉಡುಗೊರೆ ಕಳುಹಿಸಲು ಮತ್ತು ಅವರನ್ನು ಕರೆಸಲು ದ್ರೋಣಾಚಾರ್ಯರಿಂದ ಸೂಚನೆ (ಆದಿ 203/1-12). ಧೃತರಾಷ್ಟ್ರನ ಆಜ್ಞೆ ಪ್ರಕಾರ, ವಿದುರ ದ್ರುಪದನಲ್ಲಿಗೆ ಹೋಗಿ ಪಾಂಡವರಿಗೆ ಉಡುಗೊರೆಯನ್ನಿತ್ತು, ಅವರನ್ನು ಹಸ್ತಿನಾಪುರಕ್ಕೆ ಕಳುಹಿಸುವಂತೆ ದ್ರುಪದನಲ್ಲಿ ಪ್ರಸ್ತಾಪಿಸಿ

ದುದು (ಆದಿ 205). ಪಾಂಡವರು ಹಸ್ತಿನಾಪುರಕ್ಕೆ ಬಂದುದು ಮತ್ತು ಅರ್ಧರಾಜ್ಯ ಪಡೆದು ಇಂದ್ರಪ್ರಸ್ಥ ನಗರ ನಿರ್ಮಾಣ ಮಾಡಿದುದು (ಆದಿ 206/1–51). ಪಾಂಡವರಲ್ಲಿಗೆ ನಾರದರ ಆಗಮನ, ದ್ರೌಪದಿಗಾಗಿ ಇವರೊಳಗೆ ಕಲಹ ವುಂಟಾಗದಂತೆ ಕೆಲವು ನಿಯಮ ಮಾಡಿಕೊಳ್ಳು ವಂತೆ ಪ್ರೇರಣೆ ಕೊಟ್ಟು, ಸುಂದ ಮತ್ತು ಉಪ ಸುಂದರ ಕಥೆಯನ್ನು ಹೇಳಿದುದು. ದ್ರೌಪದಿಯ ವಿಷಯದಲ್ಲಿ ನಿಯಮ ನಿರ್ಧಾರಣೆ (ಆದಿ ಅಧ್ಯಾಯ 207 ರಿಂದ 211). ಶ್ರೀಕೃಷ್ಣನ ದ್ವಾರಕಾಯಾತ್ರೆ (ಸಭಾ 2). ಪಾಂಡವರಿಂದ ಮಯನಿರ್ಮಿತ ಸಭಾಭವನ ಪ್ರವೇಶ ಮತ್ತು ನಿವಾಸ (ಸಭಾ 4). ನಾರದ ಪಾಂಡವರನ್ನು ಭೇಟಿಯಾಗಲು ಬಂದದ್ದು ಮತ್ತು ಪಾಂಡವ ರಿಂದ ಅವನ ಪೂಜೆ (ಸಭಾ 5/12–16). ಪಾಂಡವರ ಮೇಲೆ ವಿಜಯ ಸಂಪಾದಿಸಲು ಶಕುನಿ ಮತ್ತು ದುರ್ಯೋಧನನ ಮಾತುಕತೆ (ಸಭಾ 48). ಪಾಂಡವರಿಂದ ಹಸ್ತಿನಾಪುರಕ್ಕೆ ಯಾತ್ರೆ (ಸಭಾ 58/19–38). ಜೂಜಿನಲ್ಲಿ ಪಾಂಡ ವರ ಪರಾಜಯ (ಸಭಾ 65). ದ್ರೌಪದಿಯ ಮೂಲಕ ಪಾಂಡವರಿಗೆ ದಾಸ್ಯದಿಂದ ಮುಕ್ತಿ (ಸಭಾ 71/28–33). ಧೃತರಾಷ್ಟ್ರನು ಪಾಂಡವರ ಎಲ್ಲಾ ಧನ ಹಿಂತಿರುಗಿಸಿ ಬೀಳ್ಕೊಂಡದ್ದು (ಸಭಾ 73). ಪಾಂಡವರನ್ನು ಪುನಃ ದ್ಯೂತಕ್ರೀಡೆಗೆ ಆಹ್ವಾನಿಸಲು ದುರ್ಯೋಧನನ ಆಗ್ರಹ ಮತ್ತು ಧೃತರಾಷ್ಟ್ರನಿಂದ ಒಪ್ಪಿಗೆ (ಸಭಾ 74). ದುಃಶಾಸನ ನಿಂದ ಪಾಂಡವರ ಕುಚೋದ್ಯ (ಸಭಾ 77/2–14). ವನಗಮನ ಸಂದರ್ಭದಲ್ಲಿ ಪಾಂಡವರ ಅಂಗಾಂಗ ಚೇಷ್ಟೆಗಳ ವಿಷಯದಲ್ಲಿ ಧೃತರಾಷ್ಟ್ರ ಮತ್ತು ವಿದುರನ ಸಂವಾದ (ಸಭಾ 80/1–18). ಪಾಂಡವರ ವನಗಮನ, ಪುರವಾಸಿಗಳು ಹಿಂಬಾ ಲಿಸಿದುದು, ಪ್ರಮಾಣಕೋಟಿತೀರ್ಥದಲ್ಲಿ ಪಾಂಡ ವರ ರಾತ್ರಿವಾಸ (ವನ 1). ಕಾಮ್ಯಕವನಕ್ಕೆ ಪಾಂಡವರ ಪ್ರವೇಶ. ವಿದುರನು ಅಲ್ಲಿಗೆ ಹೋಗಿ ಅವರ ಭೇಟಿ ಮಾಡಿದುದು ಮತ್ತು ಮಾತುಕತೆ (ವನ 5). ಪಾಂಡವರ ವಧೆ ಮಾಡಲು ದುರ್ಯೋಧನಾದಿಗಳು ಕಾಡಿಗೆ ಹೋಗುವ ಸಿದ್ಧತೆ ಮಾಡಿದಾಗ, ವ್ಯಾಸರು ಬಂದು ಅವರನ್ನು ತಡೆದುದು (ವನ 7 ಮತ್ತು 8). ವ್ಯಾಸರಿಗೆ ಪಾಂಡವರ ಮೇಲೆ ದಯೆಗೆ ಕಾರಣ (ವನ 9/20–23). ಮೈತ್ರೇಯಿ, ಧೃತರಾಷ್ಟ್ರ ಮತ್ತು ದುರ್ಯೋಧನನೊಡನೆ ಪಾಂಡವರಲ್ಲಿ ಸದ್ಭಾವದಿಂದಿರಲು ಆಗ್ರಹ (ವನ 10/11–28). ಭೋಜ, ವೃಷ್ಣಿ ಮತ್ತು ಅಂಧಕ ವಂಶದ ವೀರರ ಸಹಿತ ಶ್ರೀಕೃಷ್ಣ, ಪಾಂಚಾಲ ರಾಜಕುಮಾರ ಧೃಷ್ಟದ್ಯುಮ್ನ, ಚೇದಿರಾಜ ಧೃಷ್ಟಕೇತು ಮತ್ತು ಕೇಕಯ ರಾಜಕುಮಾರರು ಪಾಂಡವರನ್ನು ಭೇಟಿಯಾಗಲು ಕಾಡಿಗೆ ಬಂದುದು ಮತ್ತು ಇವರೆಲ್ಲರ ಮಾತುಕತೆ (ವನ ಅಧ್ಯಾ 12ರಿಂದ 22). ಪಾಂಡವರು ದ್ವೈತವನಕ್ಕೆ ಹೋಗಲು ಸಿದ್ಧರಾದುದು ಮತ್ತು ಪ್ರಜಾವರ್ಗದವರು ಅವರಿ ಗಾಗಿ ವ್ಯಾಕುಲರಾದುದು (ವನ 23). ಪಾಂಡ ವರು ದ್ವೈತವನಕ್ಕೆ ಹೋದುದು (ವನ 24). ಮಹರ್ಷಿ ಮಾರ್ಕಂಡೇಯರು ಪಾಂಡವರಿಗೆ ಧರ್ಮಾಚರಣೆಯ ಆದೇಶ ನೀಡಿದುದು (ವನ 25). ದಲ್ಭ್ಯಪುತ್ರ ಬಕ ಪಾಂಡವರಿಗೆ ಬ್ರಾಹ್ಮಣರ ಮಹಿಮೆಯನ್ನು ಹೇಳಿದುದು (ವನ 26). ದ್ರೌಪದಿ ಸಹಿತ ಪಾಂಡವರ ಪರಸ್ಪರ ಸಂವಾದ ಮತ್ತು ಅವರು ಪುನಃ ಕಾಮ್ಯಕವನಕ್ಕೆ ಹೋದುದು (ವನ 27 ರಿಂದ 36). ಬೃಹದಶ್ವನು ಪಾಂಡವರಿಗೆ ನಲೋಪಾಖ್ಯಾನ ಹೇಳಿ, ಯುಧಿಷ್ಠಿರನಿಗೆ ದ್ಯೂತವಿದ್ಯೆ ಮತ್ತು ಅಶ್ವವಿದ್ಯೆಯ ರಹಸ್ಯ ಹೇಳಿದುದು (ವನ 52 ರಿಂದ 79). ಅರ್ಜುನನಿಗಾಗಿ ದ್ರೌಪದಿ ಸಹಿತ ಪಾಂಡವರ ಚಿಂತೆ (ವನ 80). ನಾರದರು ಪಾಂಡವರಿಗೆ ತೀರ್ಥಯಾತ್ರೆಯ ಮಹಿಮೆ ಹೇಳಿದುದು ಮತ್ತು ಪುಲಸ್ತ್ಯ ವರ್ಣಿತ ತೀರ್ಥಯಾತ್ರೆಯ ಪ್ರಸಂಗ ತಿಳಿಸಿದುದು (ವನ 81ರಿಂದ 85). ಧೌಮ್ಯರಿಂದ ಪಾಂಡವರಿಗೆ ಬೇರೆ ಬೇರೆ ದಿಕ್ಕುಗಳಲ್ಲಿರುವ ತೀರ್ಥಗಳ ವರ್ಣನೆ (ವನ 86ರಿಂದ 90). ಮಹರ್ಷಿ ಲೋಮಶನು ಸ್ವರ್ಗದಿಂದ ಬಂದು ಪಾಂಡವರಿಗೆ ಅರ್ಜುನನ ಸಮಾಚಾರ ತಿಳಿಸಿ ದುದು ಮತ್ತು ಇಂದ್ರನ ಸಂದೇಶ ತಿಳಿಸಿದುದು (ವನ 91). ಪಾಂಡವರು ತಮ್ಮ ಹೆಚ್ಚಿನ ಸಂಗಡಿಗರನ್ನು ಬೀಳ್ಕೊಟ್ಟು, ಲೋಮಶನೊಂದಿಗೆ ತೀರ್ಥಯಾತ್ರೆಗೆ ಹೊರಟದ್ದು (ವನ 92 ರಿಂದ 93). ಪಾಂಡವರು ವಿಭಿನ್ನ ತೀರ್ಥಗಳಿಗೆ ಹೋದುದು ಮತ್ತು ಲೋಮಶರಿಂದ ಅವುಗಳ

ಮಹಾತ್ಮೆಯನ್ನು ಕೇಳಿದುದು (ವನ 94 ರಿಂದ 138). ಪಾಂಡವರಿಂದ ಉತ್ತರಾಖಂಡ ಯಾತ್ರೆ (ವನ 139 ರಿಂದ 142). ಗಂಧಮಾದನ ಯಾತ್ರೆಯ ಸಮಯದಲ್ಲಿ ಪಾಂಡವರಿಗೆ ಬಿರು ಗಾಳಿ ನೀರಿನ ಪ್ರತಿಭಟನೆ ಮತ್ತು ಘಟೋತ್ಕಚನ ಸಹಾಯದಿಂದ ಇವರು ಗಂಧಮಾದನಕ್ಕೆ ತಲುಪಿದುದು (ವನ 143 ರಿಂದ 145). ಗಂಧ ಮಾದನದಲ್ಲಿ ಪಾಂಡವರ ನಿವಾಸ, ಸೌಗಂಧಿಕ ಸರೋವರ ಮತ್ತು ಕದಲೀವನದ ದರ್ಶನ, ಭೀಮನಿಂದ ಹನುಮಂತನ ಭೇಟಿ, ಜಟಾಸುರ ವಧೆ, ವೃಷಪರ್ವಾನಲ್ಲಿಂದ, ಇವರು ರಾಜರ್ಷಿ ಆರ್ಷ್ಟಿಷೇಣನ ಆಶ್ರಮಕ್ಕೆ ಹೋದುದು, ಕುಬೇರ ನೊಂದಿಗೆ ಇವರ ಭೇಟಿ, ಧೌಮ್ಯರು ಇವರಿಗೆ ಮೇರುಪರ್ವತ ಶಿಖರದಲ್ಲಿರುವ ಬ್ರಹ್ಮಾ, ವಿಷ್ಣು ಮೊದಲಾದವರ ಸ್ಥಾನಗಳನ್ನು ನಿರ್ದೇಶಿಸಿ ವಿವರಿಸಿದುದು (ವನ 146ರಿಂದ 163). ಅರ್ಜುನನ ಕುರಿತು ಪಾಂಡವರ ಕಾತರ ಮತ್ತು ಅರ್ಜುನನು ಗಂಧಮಾದನದಲ್ಲಿ ಬಂದು, ತನ್ನ ಸಹೋದರರನ್ನು ಕೂಡಿಕೊಂಡದ್ದು (ವನ 164 ರಿಂದ 165). ಇಂದ್ರನು ಪಾಂಡವರ ಬಳಿಗೆ ಬಂದುದು ಮತ್ತು ಯುಧಿಷ್ಠಿರನಿಗೆ ಧೈರ್ಯಹೇಳಿ ಹಿಂತಿರುಗಿದುದು (ವನ 166). ಪಾಂಡವರು ಅರ್ಜುನನ ಯಾತ್ರೆಯ ವೃತ್ತಾಂತವನ್ನು ಆತ ನಿಂದಲೇ ಕೇಳಿ ತಿಳಿದುದು (ವನ 167 ರಿಂದ 173). ಗಂಧಮಾದನದಿಂದ ಪಾಂಡವರ ಪ್ರಸ್ಥಾನ ಮತ್ತು ದ್ವೈತವನ ಪ್ರವೇಶ (ವನ 174ರಿಂದ 177 ವರೆಗೆ). ಪುನಃ ದ್ವೈತವನದಿಂದ ಕಾಮ್ಯಕ ವನಕ್ಕೆ ಪಾಂಡವರ ಪ್ರವೇಶ; ಅಲ್ಲಿಗೆ ಶ್ರೀಕೃಷ್ಣ, ಮುನಿವರ ಮಾರ್ಕಂಡೇಯ ಮತ್ತು ನಾರದನ ಆಗಮನ (ವನ 182 ರಿಂದ 183 ವರೆಗೆ). ಪಾಂಡವರು ಮಾರ್ಕಂಡೇಯರಿಂದ ನಾನಾಪ್ರಕಾರದ ಆಖ್ಯಾನ ಗಳನ್ನೂ, ಉಪದೇಶವನ್ನೂ ಕೇಳಿದುದು (ವನ 184 ರಿಂದ 232). ಗಂಧರ್ವರನ್ನು ಸೋಲಿಸಿ, ಪಾಂಡವರು ದುರ್ಯೋಧನಾದಿಗಳನ್ನು, ಅವರ ಸೆರೆಯಿಂದ ಬಿಡಿಸಿದುದು (ವನ 244 ರಿಂದ 245). ಪಾಂಡವರು ಆಶ್ರಮಕ್ಕೆ ಬಂದು, ದ್ರೌಪದಿ ಹರಣದ ಸಮಾಚಾರಕೇಳಿ, ಜಯದ್ರಥನ ಬೆನ್ನಟ್ಟಿ ದುದು (ವನ 269). ದ್ರೌಪದಿಯು ಪಾಂಡವರ ಪರಾಕ್ರಮದ ವರ್ಣನೆ ಮಾಡಿದುದು (ವನ 270). ಪಾಂಡವರಿಂದ ಜಯದ್ರಥನ ಸೇನೆಯ ಸಂಹಾರ (ವನ 271). ಮಾರ್ಕಂಡೇಯರು ಪಾಂಡವರಿಗೆ ಶ್ರೀರಾಮ ಮತ್ತು ಸಾವಿತ್ರಿಯ ಉಪಾಖ್ಯಾನ ಹೇಳಿದುದು (ವನ 274ರಿಂದ 299). ಬ್ರಾಹ್ಮಣನ ಅರಣಿ ಮತ್ತು ಮಂಥನ ಕಾಷ್ಠದ ಸುಳಿವನ್ನು ಹುಡುಕಲು ಪಾಂಡವರು ಮೃಗದ ಹಿಂದೆ ಓಡಿದುದು ಮತ್ತು ದುಃಖಿತ ರಾದುದು (ವನ 311). ನೀರು ತರಲು ಹೋದ ನಾಲ್ಕು ಮಂದಿ ಪಾಂಡವರು ಸರೋವರ ತಟ ದಲ್ಲಿ ಅಚೇತನರಾಗಿ ಬಿದ್ದುದು (ವನ 312). ಯುಧಿಷ್ಠರನ ಉತ್ತರದಿಂದ ಸಂತುಷ್ಟನಾದ ಯಕ್ಷ, ನಾಲ್ಕುಮಂದಿ ಪಾಂಡವರೂ ಜೀವಿಸುವಂತೆ ವರದಾನಮಾಡಿದುದು ಮತ್ತು ಅವರೆಲ್ಲರನ್ನೂ ಜೀವಂತಗೊಳಿಸಿ, ತಾನು ಧರ್ಮನ ರೂಪದಿಂದ ಪ್ರಕಟನಾಗಿ ಯುಧಿಷ್ಠಿರನಿಗೆ ವರವನ್ನಿತ್ತದ್ದು (ವನ 313 ರಿಂದ 314). ಅಜ್ಞಾತವಾಸದ ಕುರಿತು ಪರಸ್ಪರ ವಿಮರ್ಶೆಗಾಗಿ ಪಾಂಡವರು ಕುಳಿತ್ತದ್ದು (ವನ 315). ವಿರಾಟನಗರದಲ್ಲಿ ದ್ರೌಪದಿ ಸಹಿತ ಪಾಂಡವರ ಅಜ್ಞಾತವಾಸ ಮತ್ತು ತ್ರೈಗರ್ತರನ್ನೂ, ಕೌರವರನ್ನೂ ಪರಾಜಯಗೊಳಿಸಿ, ಅವರಿಂದ ವಿರಾಟನ ಗೋವುಗಳ ರಕ್ಷಣೆ (ವಿರಾಟ 1 ರಿಂದ 68). ತನ್ನ ಮನೆಯಲ್ಲಿ ಪಾಂಡವರ ಪರಿಚಯ ಹೊಂದಿದ, ರಾಜಾ ವಿರಾಟನಿಂದ ಇವರ ಸತ್ಕಾರ ಮತ್ತು ಇವರಿಗೆ ತನ್ನ ರಾಜ್ಯವನ್ನು ಸಮ ರ್ಪಿಸಿ, ಇವರ ಅಭಿಪ್ರಾಯ ಪ್ರಕಾರ, ಅವನು ಅರ್ಜುನಕುಮಾರ ಅಭಿಮನ್ಯುವಿನೊಂದಿಗೆ ಉತ್ತರೆಯ ವಿವಾಹ ಮಾಡಿದುದು (ವಿರಾಟ 69ರಿಂದ 72). ದ್ರುಪದನ ಸಂದೇಶದಿಂದ ರಾಜರು ಯುದ್ಧಕ್ಕಾಗಿ ಪಾಂಡವಪಕ್ಷಕ್ಕೆ ಬಂದುದು (ಉದ್ಯೋಗ 5). ಪಾಂಡವಪಕ್ಷಕ್ಕೆ ಬಂದ ಸೇನೆಯ ಸಂಕ್ಷಿಪ್ತ ವಿವರಣೆ (ಉದ್ಯೋಗ 19/1–14). ದುರ್ಯೋಧನನಿಂದ ಪಾಂಡವರ ಅಪ ಕರ್ಷದ ವರ್ಣನೆ (ಉದ್ಯೋಗ 55). ಸಂಜಯ ನಿಂದ ಪಾಂಡವರ ಯುದ್ಧಸಿದ್ಧತೆಯ ವರ್ಣನೆ (ಉದ್ಯೋಗ 57/2–25). ಕುಂತಿಯು ವಿದು ಲೋಪಾಖ್ಯಾನ ಹೇಳಿ ಪಾಂಡವರಿಗೆ ಶೌರ್ಯದ ಸಂದೇಶ ಹೇಳಿದುದು (ಉದ್ಯೋಗ 132 ರಿಂದ 137). ಪಾಂಡವ ಪಕ್ಷದ ಸೇನಾಪತಿಯ ಆಯ್ಕೆ, ಕುರುಕ್ಷೇತ್ರಕ್ಕೆ ಪಾಂಡವ ಸೈನ್ಯದ ಪ್ರವೇಶ,

ತಂಗುವಿಕೆ ಮತ್ತು ಶಿಬಿರ ನಿರ್ಮಾಣ (ಉದ್ಯೋಗ 151 ರಿಂದ 152). ಬಲರಾಮನು ಪಾಂಡವರನ್ನು ಬೀಳ್ಕೊಟ್ಟು ತೀರ್ಥಯಾತ್ರೆಗೆ ಹೋದುದು (ಉದ್ಯೋಗ 157). ದುರ್ಯೋಧನನು ಉಲೂಕನನ್ನು ದೂತರೂಪದಿಂದ ಸಂದೇಶ ಕೊಟ್ಟು ಪಾಂಡವರ ಬಳಿಗೆ ಕಳುಹಿಸಿದುದು (ಉದ್ಯೋಗ 160). ಪಾಂಡವರ ಶಿಬಿರಕ್ಕೆ ಹೋಗಿ ಉಲೂಕನು ದುರ್ಯೋಧನನ ಸಂದೇಶ ತಿಳಿಸಿದುದು (ಉದ್ಯೋಗ 161). ಪಾಂಡವಪಕ್ಷದಿಂದ ದುರ್ಯೋಧನನ ಸಂದೇಶಕ್ಕೆ ಉತ್ತರ. ಪಾಂಡವರೈವರ ಸಂದೇಶ ಪಡಕೊಂಡು ಉಲೂಕನ ಹಿಂದಿರುಗುವಿಕೆ (ಉದ್ಯೋಗ 163). ಪಾಂಡವಸೇನೆ ರಣರಂಗಕ್ಕೆ ಹೋದುದು (ಉದ್ಯೋಗ 164). ಪಾಂಡವಪಕ್ಷದ ರಥಿ ಅತಿರಥಿಗಳ ವರ್ಣನೆ (ಉದ್ಯೋಗ ಅಧ್ಯಾಯ 169 ರಿಂದ 172). ಪಾಂಡವಸೇನೆ ಯುದ್ಧಕ್ಕಾಗಿ ಹೊರಟದ್ದು (ಉದ್ಯೋಗ 196). ಕೌರವರೊಂದಿಗೆ ಪಾಂಡವರ ಯುದ್ಧ (ಭೀಷ್ಮ ಪರ್ವದಿಂದ ಶಲ್ಯಪರ್ವದ ವರೆಗೆ). ಪಾಂಡವರು ಮಣಿಯನ್ನು ಕೊಟ್ಟು ದ್ರೌಪದಿಯನ್ನು ಶಾಂತಗೊಳಿಸಿದುದು (ಸೌಪ್ತಿಕ 16). ಪಾಂಡವರು ಧೃತರಾಷ್ಟ್ರನನ್ನು ಭೇಟಿಯಾದುದು, ಧೃತರಾಷ್ಟ್ರನಿಂದ ಭೀಮನ ಲೋಹಪ್ರತಿಮೆ ಭಂಗವಾದುದು, ಶ್ರೀಕೃಷ್ಣನ ನಿಂದೆಯಿಂದ ಶಾಂತನಾದ ಧೃತರಾಷ್ಟ್ರ ಪಾಂಡವರನ್ನು ಅಪ್ಪಿಕೊಂಡದ್ದು (ಸ್ತ್ರೀ 12ರಿಂದ 13). ಪಾಂಡವರಿಗೆ ಶಾಪಕೊಡಲು ಸಿದ್ಧಳಾದ ಗಾಂಧಾರಿಯನ್ನು ವ್ಯಾಸರು ಸಮಾಧಾನಗೊಳಿಸಿದುದು (ಸ್ತ್ರೀ 14). ಗಾಂಧಾರಿಯಿಂದ ಆಜ್ಞೆ ಪಡೆದು, ಪಾಂಡವರು ತಮ್ಮ ತಾಯಿಯನ್ನು ಭೇಟಿಯಾದುದು (ಸ್ತ್ರೀ 15/32–35). ವ್ಯಾಸ ಮತ್ತು ಶ್ರೀಕೃಷ್ಣನ ಆಜ್ಞೆಯಂತೆ ಪಾಂಡವರ ನಗರ ಪ್ರವೇಶ ಮತ್ತು ಪುರವಾಸಿಗಳಿಂದ ಇವರಿಗೆ ಸತ್ಕಾರ (ಶಾಂತಿ 37ರಿಂದ 38). ಪಾಂಡವರಿಗೆ ವಾಸಿಸಲು ವಿಭಿನ್ನ ಭವನಗಳ ವಿಭಜನೆ (ಶಾಂತಿ 44). ಯುಧಿಷ್ಠಿರಾದಿ ಪಾಂಡವರು ಭೀಷ್ಮರ ಉಪದೇಶ ಕೇಳಿದುದು (ಶಾಂತಿ 56ರಿಂದ ಅನು 165). ಪಾಂಡವರು ಭೀಷ್ಮರಿಗೆ ಜಲಾಂಜಲಿಯನ್ನಿತ್ತದ್ದು (ಅನು 168). ಪಾಂಡವರು ಹಿಮಾಲಯದಿಂದ ಧನವನ್ನು ತಂದದ್ದು (ಆಶ್ವ 63ರಿಂದ 65). ಪಾಂಡವರು ಹಸ್ತಿನಾಪುರದ ಸಮೀಪಕ್ಕೆ ಆಗಮಿಸಿದುದು. ಶ್ರೀಕೃಷ್ಣನೇ ಮೊದಲಾದವರಿಂದ ಇವರ ಸ್ವಾಗತ ಮತ್ತು ಇವರು ನಗರಕ್ಕೆ ಬಂದು ಎಲ್ಲರನ್ನು ಭೇಟಿಯಾದುದು (ಆಶ್ವ 70ರಿಂದ 71). ಧೃತರಾಷ್ಟ್ರ ಮತ್ತು ಗಾಂಧಾರಿಗೆ ಅನುಕೂಲವಾಗಿ ಪಾಂಡವರ ವರ್ತನೆ (ಆಶ್ರಮ 1 ರಿಂದ 2). ಗಾಂಧಾರಿ ಮತ್ತು ಧೃತರಾಷ್ಟ್ರನೊಂದಿಗೆ ಕಾಡಿಗೆ ಹೋಗುತ್ತಿರುವ ಕುಂತಿಯೊಡನೆ ಮನೆಗೆ ಹಿಂತಿರುಗುವಂತೆ ಪಾಂಡವರ ಒತ್ತಾಯ ಮತ್ತು ಕುಂತಿಯಿಂದ ಇವರ ಆಗ್ರಹಕ್ಕೆ ಉತ್ತರ (ಆಶ್ರಮ 16ರಿಂದ 17). ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿಗಾಗಿ ಪಾಂಡವರ ಚಿಂತೆ, ಇವರು ಕುರುಕ್ಷೇತ್ರಕ್ಕೆ ಹೋದುದು, ಮತ್ತು ಕುಂತಿ, ಗಾಂಧಾರಿ ಮತ್ತು ಧೃತರಾಷ್ಟ್ರರ ದರ್ಶನ ಮಾಡಿದುದು (ಆಶ್ರಮ 21ರಿಂದ 24). ಸಂಜಯನು ಋಷಿಗಳೊಡನೆ ಪಾಂಡವರ ಪರಿಚಯ ಹೇಳಿದುದು (ಆಶ್ರಮ 25). ದ್ರೌಪದಿಯೊಂದಿಗೆ ಪಾಂಡವರ ಮಹಾಪ್ರಸ್ಥಾನ (ಮಹಾಪ್ರ 1). ದಾರಿಯಲ್ಲಿ ದ್ರೌಪದಿ, ಸಹದೇವ, ನಕುಲ, ಅರ್ಜುನ ಮತ್ತು ಭೀಮಸೇನ ಬಿದ್ದುದು ಮತ್ತು ಪ್ರತಿಯೊಬ್ಬನೂ ಬಿದ್ದ ಕಾರಣವನ್ನು ಯುಧಿಷ್ಠಿರ ಹೇಳಿದುದು (ಮಹಾಪ್ರ. 2). ಪಾಂಡವರು ಸ್ವರ್ಗಕ್ಕೆ ಹೋಗಿ ಧರ್ಮನೇ ಮೊದಲಾದ ತಮ್ಮ ಮೂಲ ಸ್ವರೂಪದಲ್ಲಿ ಐಕ್ಯವಾದುದು (ಸ್ವರ್ಗಾ 4/2–13; 5–22).

**ಪಾಂಡವ ಪ್ರವೇಶಪರ್ವ** – ವಿರಾಟಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1 ರಿಂದ 12).

**ಪಾಣ್ಡು** (ಪಾಂಡು) – (1) ವಿಚಿತ್ರವೀರ್ಯನ ಕ್ಷೇತ್ರಜ ಪುತ್ರ. ಮಹರ್ಷಿ ವ್ಯಾಸರ ಮೂಲಕ ವಿಚಿತ್ರವೀರ್ಯನ ಪತ್ನಿ ಅಂಬಾಲಿಕೆಯ ಗರ್ಭದಿಂದ ಹುಟ್ಟಿದವನು (ಆದಿ 63/113; ಆದಿ 105/21). ಪಾಂಡುವಿನ ವಂಶಪರಂಪರೆಯ ವರ್ಣನೆ (ಆದಿ 95/58–87). ಇವನ ಬಣ್ಣ ರೂಪ ಮತ್ತು ಪಾಂಡುವೆಂಬ ಹೆಸರಾಗಲು ಕಾರಣ (ಆದಿ 105/17–18). ಇವನು ಪಾಂಡವರ ತಂದೆ (ಆದಿ 105/22). ಭೀಷ್ಮನಿಂದ ಇವನ ಪಾಲನೆ ಪೋಷಣೆ ಮತ್ತು ಉಪ

ನಯನಾದಿ ಸಂಸ್ಕಾರ (ಆದಿ 108/17–18). ಇವನ ವಿದ್ಯಾಭ್ಯಾಸ ಮತ್ತು ಈತನ ಅದ್ವಿತೀಯ ಧನುರ್ವಿದ್ಯೆ (ಆದಿ 108/19–21). ಧೃತರಾಷ್ಟ್ರನು ಜನ್ಮಾಂಧನಾದುದರಿಂದ, ರಾಜಪಟ್ಟದಲ್ಲಿ ಇವನಿಗೆ ಅಭಿಷೇಕ (ಆದಿ 108/25). ಕುಂತಿಯನ್ನು ಸ್ವಯಂವರದಲ್ಲಿ ಈತನು ವರಿಸಿದುದು ಮತ್ತು ಆಕೆಯೊಂದಿಗೆ ವಿಧಿಪೂರ್ವಕ ಇವನ ವಿವಾಹ (ಆದಿ 111/8–9). ಭೀಷ್ಮನ ಪ್ರಯತ್ನದಿಂದ ಮಾದ್ರಿಯೊಂದಿಗೆ ಇವನ ವಿವಾಹ (ಆದಿ 112/18). ಇವನ ದಿಗ್ವಿಜಯಯಾತ್ರೆ (ಆದಿ 112/21). ದಶಾರ್ಣರ ಮೇಲೆ ಇವನ ಮೊದಲನೆಯ ಆಕ್ರಮಣ ಮತ್ತು ವಿಜಯ (ಆದಿ 112/25). ಇವನಿಂದ ಮಗಧರಾಜ ದೀರ್ಘನವಧೆ (ಆದಿ 112/27). ವಿದೇಹವಂಶದ ಕ್ಷತ್ರಿಯರ ಪರಾಜಯ (ಆದಿ 112/28). ಕಾಶಿ, ಸುಹ್ಮ ಮತ್ತು ಪುಂಡ್ರ ದೇಶಗಳ ಮೇಲೆ ಇವನ ವಿಜಯ (ಆದಿ 112/29). ವಿಭಿನ್ನ ದೇಶಗಳಿಂದ ಗೆದ್ದುತಂದ ಧನವನ್ನು ಈತ ತನ್ನ ಬಂಧುಬಾಂಧವರಿಗೆ ವಿತರಣೆ ಮಾಡಿದುದು (ಆದಿ 113/1–2). ಇವನ ಪರಾಕ್ರಮದಿಂದ ಧೃತರಾಷ್ಟ್ರನ ಮೂಲಕ ನೂರು ಅಶ್ವಮೇಧಗಳ ಅನುಷ್ಠಾನ ಮತ್ತು ಪ್ರತಿಯಜ್ಞದಲ್ಲಿ ಲಕ್ಷ ಲಕ್ಷ ಸ್ವರ್ಣ ಮುದ್ರೆಗಳ ದಕ್ಷಿಣೆದಾನ (ಆದಿ 113/5). ಇವನ ವನವಿಹಾರ (ಆದಿ 113/7–11). ಮೃಗರೂಪ ಧರಿಸಿದ ತನ್ನ ಪತ್ನಿಯೊಡನೆ ಮೃಗರೂಪಧಾರಣೆ ಮಾಡಿ ಸಂಭೋಗಿಸುತ್ತಿದ್ದ ಕಿಂದಮ ಋಷಿಗೆ ಈತನಿಂದ ಮರಣ (ಆದಿ 117/34). ಮೃಗರೂಪಧಾರಿ ಕಿಂದಮನಿಂದ ಇವನಿಗೆ ಶಾಪ (ಆದಿ 117/27). ಮಹರ್ಷಿ ಕಿಂದಮನ ಮರಣದಿಂದ ಇವನ ಪಶ್ಚಾತ್ತಾಪ ಮತ್ತು ಸನ್ಯಾಸ ಸ್ವೀಕರಿಸಿ ಅವಧೂತ ನಂತೆ ಜೀವಿಸಲು ತನ್ನ ನಿರ್ಧಾರ (ಆದಿ 118/2–22). ವಾನಪ್ರಸ್ಥಾಶ್ರಮದಲ್ಲಿದ್ದುಕೊಂಡು ತಪಸ್ಸು ಮಾಡುವಂತೆ ಕುಂತಿಯಿಂದ ಇವನಲ್ಲಿ ಒತ್ತಾಯ (ಆದಿ 118/30). ವಾನಪ್ರಸ್ಥಾಶ್ರಮ ಪಾಲಿಸಲು ಇವನ ಕಠೋರ ನಿಯಮ (ಆದಿ 118/32–37). ಇವನಿಂದ ಬ್ರಾಹ್ಮಣರಿಗೆ ತನ್ನ ಮತ್ತು ತನ್ನ ಪತ್ನಿಯರ ಆಭೂಷಣಗಳ ದಾನ (ಆದಿ 118/39). ವಾನಪ್ರಸ್ಥ ಸ್ವೀಕರಿಸುವ ಕುರಿತು ಧೃತರಾಷ್ಟ್ರನಿಗೆ ಸೇವಕರ ಮೂಲಕ ಇವನ ಸಂದೇಶ (ಆದಿ 118/40). ಕಾಲಕೂಟ, ಹಿಮಾಲಯ, ಗಂಧಮಾದನ ಮೊದಲಾದ ಪರ್ವತಗಳನ್ನು ದಾಟಿ, ತಪಸ್ಸಿಗಾಗಿ ಈತ ಪತ್ನಿಯರೊಂದಿಗೆ ಶತಶೃಂಗ ಪರ್ವತಕ್ಕೆ ಹೋದುದು (ಆದಿ 118/50). ಈತ ಬ್ರಹ್ಮಲೋಕಕ್ಕೆ ಹೋಗುವುದಕ್ಕೆ ಋಷಿಗಳ ನಿಷೇಧ (ಆದಿ 119/14–15). ಪಿತೃಋಣದಿಂದ ಉದ್ಧಾರವಾಗಲು ಶತಶೃಂಗ ನಿವಾಸಿಗಳಲ್ಲಿ ಇವನ ಪ್ರಾರ್ಥನೆ (ಆದಿ 119/15–23). ಋಷಿಗಳಿಂದ ಇವನಿಗೆ ಪುತ್ರಪ್ರಾಪ್ತಿಯ ಆಶ್ವಾಸನೆ (ಆದಿ 119/23–26). ಇವನಿಂದ ದತ್ತಕ ಮೊದಲಾದ ಪುತ್ರ ಭೇದಗಳ ವಿಶ್ಲೇಷಣೆ ಮತ್ತು ಯಾರಾದರೂ ಶ್ರೇಷ್ಠ ಪುರುಷನಿಂದ ಸಂತಾನೋತ್ಪಾದನೆ ಮಾಡಲು ಕುಂತಿಗೆ ಆದೇಶ (ಆದಿ 119/27–37). ಮಾನಸಿಕ ಸಂಕಲ್ಪದಿಂದ ಪುತ್ರೋತ್ಪಾದನೆ ಮಾಡಲು ಈತನಲ್ಲಿ ಕುಂತಿಯ ಪ್ರಾರ್ಥನೆ (ಆದಿ 120/37). ಬ್ರಾಹ್ಮಣನಿಂದ ಸಂತಾನ ಪ್ರಾಪ್ತಿಮಾಡಿಕೊಳ್ಳುವಂತೆ ಕುಂತಿಯೊಂದಿಗೆ ಪುನಃ ಇವನ ಆಗ್ರಹ. ಕುಂತಿಯು ದುರ್ವಾಸನಿಂದ ಪ್ರಾಪ್ತವಾದ ಮಂತ್ರದ ಮಹಿಮೆ ಹೇಳಿ, ಯಾವನಾದರೂ ಶ್ರೇಷ್ಠ ದೇವತೆಯ ಆವಾಹನೆ ಮಾಡಿಕೊಳ್ಳಲು ಇವನಲ್ಲಿ ಅನುಮತಿ ಬೇಡಿದುದು (ಆದಿ 121/10–16). ಧರ್ಮರಾಜನನ್ನು ಆವಾಹನ ಮಾಡುವಂತೆ ಈತನಿಂದ ಕುಂತಿಗೆ ಆದೇಶ (ಆದಿ 121/17–20). ಬಲವಂತನಾದ ಮಗನ ಅಪೇಕ್ಷೆಯಿಂದ, ವಾಯುದೇವನನ್ನು ಆವಾಹನೆ ಮಾಡುವಂತೆ ಕುಂತಿಗೆ ಇವನ ಆಜ್ಞೆ (ಆದಿ 122/10ರ ಅನಂತರ). ಇವನಿಂದ ಸರ್ವೋತ್ತಮ ಪುತ್ರ ಪ್ರಾಪ್ತಿಗಾಗಿ ಇಂದ್ರನ ಆರಾಧನೆ ಮತ್ತು ಇಂದ್ರನಿಂದ ಇವನಿಗೆ ಆಶ್ವಾಸನೆ (ಆದಿ 122/26–28). ಸರ್ವಶ್ರೇಷ್ಠ ಪುತ್ರನಿಗಾಗಿ ಇಂದ್ರನನ್ನು ಆವಾಹನೆಮಾಡಲು ಇವನಿಂದ ಕುಂತಿಗೆ ಪ್ರೇರಣೆ (ಆದಿ 122/34). ಕುಂತಿಯ ಮೂಲಕ ತನಗೂ ಪುತ್ರ ಪ್ರಾಪ್ತಿಯಾಗುವಂತೆ ಈತನೊಡನೆ ಮಾದ್ರಿಯ ಪ್ರಾರ್ಥನೆ (ಆದಿ 123/6). ಮಾದ್ರಿಗೆ ಪುತ್ರಲಾಭ ಮಾಡಿಸುವಂತೆ ಈತ ಕುಂತಿಯನ್ನು ಒತ್ತಾಯಿಸಿದುದು (ಆದಿ 123/9–14). ಮಾದ್ರಿಯೊಂದಿಗೆ ಸಮಾಗಮ ಮಾಡಿ ಈತನ ಅಕಾಲಮೃತ್ಯು (ಆದಿ 124/12). ಈತ ಪರಲೋಕವಾಸಿಯಾದಾಗ

ಕುಂತಿ, ಮಾದ್ರಿ ಮತ್ತು ಪಾಂಡವರ ವಿಲಾಪ (ಆದಿ 124/17–22). ಇವನ ಆಕಸ್ಮಿಕ ನಿಧನ ದಿಂದಾಗಿ ಶತಶೃಂಗ ನಿವಾಸಿಗಳಾದ ಋಷಿಗಳಿಗೆ ಶೋಕದ ಅನುಭವ (ಆದಿ 124/22). ಕಾಶ್ಯಪ ಋಷಿಯಿಂದ ಇವನ ಅಂತ್ಯೇಷ್ಟಿ ಸಂಸ್ಕಾರ (ಆದಿ 124/31). ಕೌರವರಿಂದ ರಾಜೋಚಿತ ರೀತಿಯಲ್ಲಿ ಇವನ ಅಸ್ಥಿದಾಹ (ಆದಿ 126/5–23). ಕೌರವ ರಿಂದ ಇವನಿಗೆ ಜಲಾಂಜಲಿದಾನ (ಆದಿ 126/ 28–29). ಇವನ ದೇಹಾವಸಾನದಿಂದ ಹಸ್ತಿನಾ ಪುರದ ನಾಗರಿಕರ ಶೋಕ (ಆದಿ 227/4). ಈತ ಯಮಸಭೆಯಲ್ಲಿ ಉಪಸ್ಥಿತನಾಗಿರುತ್ತಾನೆ (ಸಭಾ 8/25). ಇವನು ದೇವರ್ಷಿ ನಾರದನ ಮೂಲಕ ರಾಜಸೂಯ ಯಜ್ಞ ಮಾಡುವಂತೆ ಯುಧಿಷ್ಠಿರನಿಗೆ ಸಂದೇಶ ಕಳುಹಿಸಿದ್ದನು (ಸಭಾ 12/24–26). ಇಂದ್ರಲೋಕದಲ್ಲಿ ಇವನ ನಿವಾಸ (ಆಶ್ರಮ 20/17). ತನ್ನ ಇಬ್ಬರು ಪತ್ನಿಯರಾದ ಕುಂತಿ ಮತ್ತು ಮಾದ್ರಿಯ ಜೊತೆಯಲ್ಲಿ ಈತ ಇಂದ್ರಭವನಕ್ಕೆ ಹೋದುದು (ಸ್ವರ್ಗಾರೋಹಣ 5/15). ಮಹಾಭಾರತದಲ್ಲಿ ಬಂದಿರುವ ಪಾಂಡು ವಿನ ಹೆಸರುಗಳು– ಭಾರತ, ಭರತರ್ಷಭ, ಭರತಸತ್ತಮ, ಕೌರವ, ಕೌರವನಂದನ, ಕೌರವ ರ್ಷಭ, ಕೌರವ್ಯ, ಕೌರವ್ಯದಾಯಾದ, ಕೌಸಲ್ಯಾ ನಂದವರ್ಧನ, ಕುರೂದ್ವಹ, ಕುರುಕುಲೋದ್ವಹ, ಕುರುನಂದನ, ಕುರುಪತಿ, ಕುರುಪ್ರವೀರ, ನಾಗ ಪುರಾಧಿಪ, ನಾಗಪುರಸಿಂಹ – ಇತ್ಯಾದಿ.

(2) ಕುರುಕುಮಾರ ಜನಮೇಜಯನ ದ್ವಿತೀಯ ಪುತ್ರ (ಆದಿ 94/56).

**ಪಾಣ್ಡುರ** (ಪಾಂಡುರ) – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ಪಾಣ್ಡುರಾಷ್ಟ್ರ** (ಪಾಂಡುರಾಷ್ಟ್ರ) – ಒಂದು ಭಾರತೀಯ ಜನಪದ (ಭೀಷ್ಮ 9/44).

**ಪಾಣ್ಡ್ಯ** – ದಕ್ಷಿಣ ಭಾರತದ ಒಂದು ಜನಪದ ಮತ್ತು ಅಲ್ಲಿರುವ ಒಬ್ಬ ರಾಜ. ಈತ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟಿದ್ದನು (ದ್ರೋಣ 23/69). ಇವನ ಪುತ್ರನ ಹೆಸರು ಮಲಯಧ್ವಜ. ಮಲಯದ್ವಜ ಅಸ್ತ್ರವಿದ್ಯೆಯಲ್ಲಿ ಪಾರಂಗತನಾಗಿ, ತನ್ನ ತಂದೆಯ ವಧೆಯ ಪ್ರತೀಕಾರಕ್ಕಾಗಿ, ದ್ವಾರಕಾಪುರವನ್ನು ಧ್ವಂಸಗೊಳಿಸಲು ಬಯಸಿದ್ದನು. ಆದರೆ ಇವನ ಹಿತೈಷಿಗಳು ಇವನನ್ನು ಈ ರೀತಿಯ ದುಸ್ಸಾಹಸ ಮಾಡದಂತೆ ತಡೆದರು. ಅಂದಿನಿಂದ ವೈರಬಿಟ್ಟು ಈತ ತನ್ನ ರಾಜ್ಯಭಾರಮಾಡುತ್ತಿದ್ದನು. ಮಹಾ ಭಾರತ ಕಾಲದಲ್ಲಿ ಈತನೇ ಪಾಂಡ್ಯದೇಶದ ಶಾಸಕನಾಗಿದ್ದನು (ದ್ರೋಣ 23/70–72). ಇವನು ದ್ರೌಪದೀಸ್ವಯಂವರಕ್ಕೆ ಹೋಗಿದ್ದನು (ಆದಿ 186/16). ಇವನು ಯುಧಿಷ್ಠಿರನ ಸಭೆ ಯಲ್ಲಿ ಇರುತ್ತಿದ್ದನು (ಸಭಾ 4/24). ಇವನು ರಾಜಸೂಯ ಯಜ್ಞದಲ್ಲಿ ಕಾಣಿಕೆ ಒಪ್ಪಿಸಿದ್ದನು (ಸಭಾ 52/35). ಇವನು ತನ್ನ ಸೇನೆಯೊಂದಿಗೆ ಯುಧಿಷ್ಠಿರನ ಸೇವೆಗೆ ಬಂದಿದ್ದನು (ಉದ್ಯೋಗ 19/9). ಇವನ ರಥದ ಮೇಲೆ ಸಾಗರದ ಚಿಹ್ನೆ ಯಿಂದ ಕೂಡಿದ ಧ್ವಜ ಹಾರಾಡುತ್ತಿತ್ತು. ಬಲ ವಂತನಾದ ರಾಜಾ ಪಾಂಡ್ಯನು ತನ್ನ ದಿವ್ಯ ಧನುಸ್ಸನ್ನು ಟಂಕಾರ ಮಾಡುತ್ತಾ, ವೈಡೂರ್ಯ ಮಣಿಯ ಜಾಲರಿಯಿಂದ ಹೊದಿಸಲ್ಪಟ್ಟ ಚಂದ್ರ ಕಿರಣಕ್ಕೆ ಸಮಾನವಾದ ಬಿಳಿಯ ಕುದುರೆಗಳ ಮೂಲಕ ದ್ರೋಣಾಚಾರ್ಯನ ಮೇಲೆ ಆಕ್ರಮಣ ಮಾಡಿದ್ದನು (ದ್ರೋಣ 23/72–73). ವೃಷಸೇನ ನೊಂದಿಗೆ ಈತನ ಯುದ್ಧ (ದ್ರೋಣ 25/57). ಇವನ ಮಹಾಪರಾಕ್ರಮ ಮತ್ತು ಅಶ್ವತ್ಥಾಮ ನಿಂದ ವಧೆ (ಕರ್ಣ 20/46).

**ಪಾತಾಲ** – ನಾಗಲೋಕದ ನಾಭಿಸ್ಥಾನದಲ್ಲಿರುವ ಒಂದು ಪ್ರದೇಶ ಅಥವಾ ನಗರ; ನಾರದನಿಂದ ಇದರ ವಿಶೇಷ ವರ್ಣನೆ (ಉದ್ಯೋಗ ಅಧ್ಯಾಯ 99 ರಿಂದ 100).

**ಪಾದಬಂಧಾಸ್ತ್ರ** – ಕೃಷ್ಣಾರ್ಜುನರ ರಥವನ್ನು ಸಂಶಪ್ತಕ ಯೋಧರು ಆಕ್ರಮಿಸಿದರು. ಆಗ ಅರ್ಜುನನು ದೇವದತ್ತವನ್ನೂ, ಕೃಷ್ಣನು ಪಾಂಚ ಜನ್ಯವನ್ನೂ ಊದಿದರು. ಭಯಗೊಂಡು ಓಡು ತ್ತಿದ್ದ, ಸಂಶಪ್ತಕರ ಪಾದಗಳನ್ನು ಅರ್ಜುನನು ನಾಗಾಸ್ತ್ರದ ಮೂಲಕ ಬಂಧಿಸಿದನು. ಅದೇ ಪಾದ ಬಂಧಾಸ್ತ್ರ (ಕರ್ಣ 53).

**ಪಾಪಹರಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/22).

**ಪಾರದ** – (1) ಒಂದು ಪ್ರಾಚೀನ ಜಾತಿಯ ಹೆಸರು (ಆಧುನಿಕ ಅಭಿಪ್ರಾಯ ಪ್ರಕಾರ ಇದು ಉತ್ತರ ಬಲೂಚೀಸ್ಥಾನದ ಒಂದು ಜಾತಿ ಯಾಗಿತ್ತು.) ಈ ಜಾತಿಯ ಜನರು ತರತರದ

20

ಕಾಣಿಕೆಗಳನ್ನು ತೆಗೆದುಕೊಂಡು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಬಂದಿದ್ದರು (ಸಭಾ 51/52).

(2) ಒಂದು ದೇಶ. ಇಲ್ಲಿರುವ ಜನರು ದ್ರೋಣಾಚಾರ್ಯರೊಂದಿಗೆ ಭೀಷ್ಮನ ಹಿಂದೆ ಹಿಂದೆ ಹೋಗುತ್ತಿದ್ದರು (ಭೀಷ್ಮ 87/7).

**ಪಾರಶವ** – ಶೂದ್ರ ಸ್ತ್ರೀಯಗರ್ಭದಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಬಾಲಕ. ಆದುದರಿಂದಲೇ ವಿದುರನೂ ಪಾರಶವನೆಂದು ಹೇಳಲ್ಪಡುತ್ತಿದ್ದನು (ಆದಿ 108/25; ಅನು 118/5).

**ಪಾರಸಿಕ** – ಒಂದು ಭಾರತೀಯ ಜನಪದ (ಭೀಷ್ಮ 9/66).

**ಪಾರಾ** – ಕೌಶಿಕೀನದಿಯ ನಾಮಾಂತರ (ಆದಿ 71/32).

**ಪಾರಾವತ** – ಐರಾವತನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಯಜ್ಞ ದಲ್ಲಿ ಬಿದ್ದು ಸುಟ್ಟುಹೋಗಿದ್ದನು (ಆದಿ 57/11).

**ಪಾರಾವತ ಸವರ್ಣ** – ಕಪೋತದ ಬಣ್ಣ, ಬಿಳಿ ಮತ್ತು ನೀಲಿಬಣ್ಣ ಮಿಶ್ರಿತವಾದುದು. ಆ ವರ್ಣದ ಕುದುರೆಯ ಹೆಸರು – ಪಾರಾವತ ಸುವರ್ಣ (ದ್ರೋಣ 23).

**ಪಾರಾಶರ್ಯ** – ಒಬ್ಬ ಮುನಿ. ಈತ ವ್ಯಾಸನಲ್ಲ; ಬೇರೆಯವನು. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/13). ಈತನೇ ಇಂದ್ರಸಭೆಯ ಸದಸ್ಯನೂ ಆಗಿದ್ದಾನೆ (ಸಭಾ 7/13). ಹಸ್ತಿನಾಪುರಕ್ಕೆ ಹೋಗುವಾಗ ದಾರಿಯಲ್ಲಿ ಶ್ರೀಕೃಷ್ಣನೊಂದಿಗೆ ಭೇಟಿ (ಉದ್ಯೋಗ 83/64).

**ಪಾರಿಜಾತ** – (1) ಸಮಸ್ತ ಕಾಮನೆಗಳನ್ನು ಕೊಡುವ ಒಂದು ದಿವ್ಯ ವೃಕ್ಷ. ಇದು ಸಮುದ್ರ ಮಥನದಿಂದ ಪ್ರಕಟವಾಗಿತ್ತು (ಆದಿ 18/36).

(2) ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟು ಹೋಗಿದ್ದನು (ಆದಿ 57/11).

**ಪಾರಿಜಾತಕ** – ಒಬ್ಬ ಜಿತಾತ್ಮನಾದ ಮುನಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/14).

**ಪಾರಿಪ್ಲವ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇದರ ಸೇವನೆಯಿಂದ ಅಗ್ನಿಷ್ಟೋಮ ಮತ್ತು ಅತಿರಾತ್ರ ಯಜ್ಞಗಳ ಫಲ ಸಿಗುತ್ತದೆ (ವನ 83/12).

**ಪಾರಿಭದ್ರಕ** – ಕೌರವಪಕ್ಷದ ವೀರಯೋಧರ ಒಂದು ದಳ. ಇವರು ಬಹುಶಃ ಪರಿಭದ್ರ ದೇಶದ ನಿವಾಸಿಗಳಾಗಿದ್ದರು (ಭೀಷ್ಮ 51/9).

**ಪಾರಿಯಾತ್ರ** – ಒಂದು ಪರ್ವತ. ಇದರ ಅಧಿಷ್ಠಾತೃವಾದ ಚೇತನ ಕುಬೇರನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 10/31). ಮಾರ್ಕಂಡೇಯನು ಭಗವಂತನಾದ ಬಾಲಮುಕುಂದನ ಉದರದಲ್ಲಿ ಈ ಪರ್ವತವನ್ನು ಕಂಡಿದ್ದನು (ವನ 188/115). ಇಲ್ಲಿ ಗೌತಮಮಹರ್ಷಿಯ ಮಹಾನ್ ಆಶ್ರಮವಿತ್ತು (ಶಾಂತಿ 129/4).

**ಪಾರ್ಥ** – ಕುಂತಿಯ ಪುತ್ರರ ಹೆಸರು (ಇವರನ್ನು ಕೌಂತೇಯರೆಂದೂ ಹೇಳುತ್ತಾರೆ). ಇವರ ಹುಟ್ಟಿನ ಕಥೆಯ ದಿಗ್ದರ್ಶನ (ಆದಿ 1/114). (ಈ ಶಬ್ದ ಕುಂತಿಯ ಮೂವರು ಪುತ್ರರಿಗೆ ಮುಖ್ಯವಾಗಿ ಅನ್ವಯಿಸುವುದಾದರೂ ಅಲ್ಲಲ್ಲಿ ಮಾದ್ರೀಕುಮಾರರಾದ ನಕುಲ ಸಹದೇವರಿಗೂ ಪ್ರಯೋಗಿಸಲ್ಪಟ್ಟಿದೆ. ಪ್ರಾಯಶಃ ಇದು ಯುಧಿಷ್ಠಿರ ಮತ್ತು ಅರ್ಜುನನಿಗೆ ಮಾತ್ರ ಪ್ರಯೋಗವಾಗಿದೆ (ಉದ್ಯೋಗ 145/3ರಲ್ಲಿ ಪಾರ್ಥ ಎಂಬ ಹೆಸರು ಕರ್ಣನಿಗೂ ಪ್ರಯೋಗಿಸಲ್ಪಟ್ಟಿದೆ).

**ಪಾರ್ವತಿ** – ಪರ್ವತ ರಾಜ ಹಿಮವಂತನ ಪುತ್ರಿ ಮತ್ತು ಭಗವಾನ್ ಶಿವನ ಧರ್ಮಪತ್ನಿ (ಆದಿ 186/4). ಈಕೆ ಬ್ರಹ್ಮಸಭೆಯಲ್ಲೂ ವಿರಾಜಿಸುತ್ತಾಳೆ (ಸಭಾ 11/41). ಅರ್ಜುನನ ರಕ್ಷಣೆಗೋಸ್ಕರ ದ್ರೌಪದಿಯಿಂದ ಉಮಾದೇವಿಯ ಕೀರ್ತನೆ ಮತ್ತು ಸ್ಮರಣೆ (ವನ 37/33). ಯುಧಿಷ್ಠಿರನಿಂದ ಈಕೆಯ ದುರ್ಗಾರೂಪದ ಸ್ತವನ ಮತ್ತು ಈಕೆ ದರ್ಶನವನ್ನಿತ್ತು ಅವನನ್ನು ಅನುಗ್ರಹಿಸಿದುದು (ವಿರಾಟ 6). ಅರ್ಜುನನಿಂದ ಈಕೆಯ ದುರ್ಗಾರೂಪದ ಸ್ಮರಣೆ ಮತ್ತು ಸ್ತವನ. ಈಕೆ ಪ್ರತ್ಯಕ್ಷ ದರ್ಶನವನ್ನಿತ್ತು ಅವನಿಗೆ ವರವನ್ನಿತ್ತದ್ದು (ಭೀಷ್ಮ 23/4–16). ಒಂದು ಬಾರಿ ಐದು ಶಿಖೆಗಳುಳ್ಳ ಬಾಲಕನರೂಪದಲ್ಲಿ ಶಂಕರನು ಪ್ರಕಟಗೊಂಡಾಗ ಈಕೆ ಅವನನ್ನು ಮಡಿಲಲ್ಲಿಟ್ಟುಕೊಂಡು ಬಂದಳು ಮತ್ತು ಹೇಳಿದಳು. 'ಇವನು ಯಾರೆಂದು ಗುರುತಿಸಿರಿ' (ದ್ರೋಣ 202/84). ಇವಳಿಂದ

ಸ್ಕಂದನಿಗೆ ಪಾರ್ಷದರ ಕೊಡುಗೆ (ಶಲ್ಯ 45/51–52). ದಕ್ಷಯಜ್ಞದ ವಿಷಯದಲ್ಲಿ ಶಿವನೊಂದಿಗೆ ಈಕೆಯ ಮಾತುಕತೆ (ಶಾಂತಿ 283/23–29). ದಕ್ಷಯಜ್ಞದಲ್ಲಿ ಶಿವನ ಭಾಗವನ್ನು ಕಾಣದೆ ಈಕೆಯ ಚಿಂತೆ (ಶಾಂತಿ 284/23). ಉಶನನ ಮೇಲೆ ಕುಪಿತನಾದ ಶಿವನನ್ನು ಶಾಂತಗೊಳಿಸಿದುದು (ಶಾಂತಿ 289/35). ಶ್ರೀಕೃಷ್ಣನಿಗೆ ಎಂಟು ವರಗಳನ್ನಿತ್ತದ್ದು (ಅನು 15/7–8). ದೇವತೆಗಳು ಸಂತಾನಹೀನರಾಗುವಂತೆ ಶಾಪಕೊಟ್ಟದ್ದು (ಅನು 84/74–75). ಶಿವನ ಎರಡೂ ಕಣ್ಣುಗಳನ್ನು ಪರಿಹಾಸಕ್ಕಾಗಿ ಕೈಗಳಿಂದ ಮುಚ್ಚಿದುದು (ಅನು 140/26). ಶಂಕರನೊಂದಿಗೆ ಸಂವಾದ (ಅನು 140/40ರಿಂದ 145). ಗಂಗೆಯೇ ಮೊದಲಾದ ನದಿಗಳಿಂದ ಸ್ತ್ರೀಧರ್ಮದ ಕುರಿತು ಸಲಹೆಯನ್ನು ಸ್ವೀಕರಿಸಿದುದು (ಅನು 146/22–26). ಈಕೆಯಿಂದ ಸ್ತ್ರೀಧರ್ಮದ ವರ್ಣನೆ (ಅನು 146/33–59). ಈಕೆ ಮುಂಜವಾನ್‌ಪರ್ವತದ ಮೇಲೆ ಭಗವಂತನಾದ ಶಿವನೊಂದಿಗೆ ಇರುತ್ತಾಳೆ (ಆಶ್ವ 8/1–3). ಮಹಾಭಾರತದಲ್ಲಿ ಬಂದಿರುವ ಪಾರ್ವತಿಯ ಹೆಸರುಗಳು : ಅಂಬಿಕಾ, ಆರ್ಯಾ, ಉಮಾ, ಭೀಮಾ, ಶೈಲಪುತ್ರಿ, ಶೈಲರಾಜಸುತಾ, ಶಾಕಂಭರೀ, ಶರ್ವಾಣೀ, ದೇವೇಶೀ, ದೇವೀ, ದುರ್ಗಾ, ಗೌರೀ, ಗಿರಿಸುತಾ, ಗಿರಿರಾಜಾತ್ಮಜಾ, ಕಾಲೀ, ಮಹಾಭೀಮಾ, ಮಹಾದೇವೀ, ಮಹಾಕಾಲೀ, ಮಹೇಶ್ವರೀ, ಮಾಹೇಶ್ವರೀ, ಪರ್ವತರಾಜಕನ್ಯಾ, ರುದ್ರಾಣೀ, ರುದ್ರಪತ್ನಿ, ತ್ರಿಭುವನೇಶ್ವರೀ ಇತ್ಯಾದಿ.

**ಪಾರ್ವತೀಯ** (ಪರ್ವತೀಯ) – (1) ಮಹಾಭಾರತ ಕಾಲದ ಒಬ್ಬ ರಾಜ. ಇವನು ಕುಕ್ಷಿ ಎಂಬ ದಾನವನ ಅಂಶದಿಂದ ಹುಟ್ಟಿದ್ದನು (ಆದಿ 67/56).

(2) ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ನಿವಾಸಿಗಳು. ಇವರು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಉಡುಗೊರೆಗಳನ್ನು ತಂದಿದ್ದರು (ಸಭಾ 52/7). ಜಯದ್ರಥನ ಸೇನೆಯಲ್ಲಿ ಬಂದಿದ್ದ ಪಾರ್ವತೀಯರು ಅರ್ಜುನನಿಂದ ವಧಿಸಲ್ಪಟ್ಟದ್ದು (ವನ 27/8). ಪಾರ್ವತೀಯರು ಅರ್ಜುನನಿಂದ ವಧಿಸಲ್ಪಟ್ಟದ್ದು (ವನ 271/8). ಪಾರ್ವತೀಯ ಯೋಧರು ದುರ್ಯೋಧನನ ಸೇನೆಯಲ್ಲೂ ಇದ್ದರು (ಉದ್ಯೋಗ 30/24). ಭಾರತೀಯ ಜನಪದಗಳಲ್ಲಿ ಪಾರ್ವತೀಯದ ಗಣನೆ (ಭೀಷ್ಮ 9/56). ಶ್ರೀಕೃಷ್ಣನು ಪಾರ್ವತೀಯ ದೇಶದ ಮೇಲೆ ವಿಜಯ ಪಡೆದಿದ್ದನು (ದ್ರೋಣ 11/16). ಪಾರ್ವತೀಯ ಯೋಧರು ಕೌರವ ದಳದಲ್ಲಿ ಶಕುನಿ ಮತ್ತು ಉಲೂಕನೊಂದಿಗೆ ಇರುತ್ತಿದ್ದರು (ಕರ್ಣ 46/13). ಪಾಂಡವ ವೀರರಿಂದ ಯುದ್ಧದಲ್ಲಿ ಇವರ ಸಂಹಾರ (ಶಲ್ಯ 1/27).

**ಪಾರ್ವತೇಯ**– ಒಬ್ಬ ರಾಜರ್ಷಿ. ಇವನು ಕಪಟನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/30).

**ಪಾರ್ಶ್ವರೋಮ** – ಒಂದು ಭಾರತೀಯ ಜನಪದ (ಭೀಷ್ಮ 9/56).

**ಪಾರ್ಷ್ಣಿಕ್ಷೇಮಾ** – ಒಬ್ಬ ವಿಶ್ವೇದೇವ (ಅನು 91/30).

**ಪಾಲ** – ವಾಸುಕಿಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಅದಿ 57/5).

**ಪಾಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

**ಪಾವಕ** – ಭರತನೆಂಬ ಅಗ್ನಿಯ ಪುತ್ರ. ಇವನ ಇನ್ನೊಂದು ಹೆಸರು 'ಮಹಾನ್' ಎಂದಾಗಿತ್ತು (ವನ 219/8).

**ಪಾವನ** – (1) ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇಲ್ಲಿ ದೇವತೆಗಳಿಗೆ ಪಿತೃಗಳಿಗೆ ತರ್ಪಣಕೊಡುವುದರಿಂದ ಅಶ್ವಮೇಧಯಜ್ಞದ ಫಲಸಿಗುತ್ತದೆ (ವನ 83/175).

(2) ಒಬ್ಬ ವಿಶ್ವೇದೇವ.

**ಪಾಶ** – ವರುಣನ ದಿವ್ಯಅಸ್ತ್ರ. ಅದರ ವೇಗವನ್ನು ಯಾರೂ ತಡೆಯಲಾರರು (ವನ 41/29).

**ಪಾಶಾಶಿನೀ** – ಭಾರತದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/22).

**ಪಾಶಿವಾಟ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ಪಾಶೀ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/8). ಭೀಮಸೇನನಿಂದ ಇವನ ವಧೆ (ಕರ್ಣ 84/5–6).

**ಪಾಶುಪತ** – ಭಗವಂತನಾದ ಶಂಕರನ ಅತ್ಯಂತ ಪ್ರಿಯ, ಸರ್ವಶ್ರೇಷ್ಠ ಮತ್ತು ಅನುಪಮ ಪ್ರಭಾವ ಶಾಲಿ ದಿವ್ಯಾಸ್ತ್ರ (ವನ 40/15). ಶಿವನಿಂದ ಅರ್ಜುನನಿಗೆ ಇದರ ಉಪದೇಶ (ವನ 40/20). ಇದರ ಉಗ್ರಸ್ವರೂಪ ಮತ್ತು ಪ್ರಭಾವದ ವರ್ಣನೆ (ಅನು 14/258–275).

**ಪಾಷಾಣತೀರ್ಥ** – ಒಂದು ತೀರ್ಥ. ಇದು ಶೂರ್ಪಾರಕ ಕ್ಷೇತ್ರದಲ್ಲಿ ಜಮದಗ್ನಿಯ ವೇದಿ ಯಲ್ಲಿದೆ (ವನ 88/12).

**ಪಿಙ್ಗತೀರ್ಥ** – ಒಂದು ಪ್ರಾಚೀನ ತೀರ್ಥ. ಇಲ್ಲಿ ಆಚಮನಮಾಡಿ ಬ್ರಹ್ಮಚಾರಿಯೂ, ಜಿತೇಂ ದ್ರಿಯನೂ ಆದ ಮನುಷ್ಯ ನೂರು ಕಪಿಲೆಗಳ ದಾನದಫಲವನ್ನು ಪಡೆಯುತ್ತಾನೆ (ವನ 82/57).

**ಪಿಙ್ಗಲ** – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/9).

(2) ಒಬ್ಬ ಋಷಿ. ಈತ ಜನಮೇಜಯನ ಸರ್ಪಸತ್ರದಲ್ಲಿ ಅಧ್ವರ್ಯುವಾಗಿದ್ದನು (ಆದಿ 53/6).

(3) ಈ ಹೆಸರಿನಿಂದ ಇನ್ನೊಬ್ಬ ಋಷಿ. ಈತ ಜನಮೇಜಯನ ಸರ್ಪಸತ್ರದಲ್ಲಿ ಸದಸ್ಯನಾಗಿ ದ್ದನು (ಆದಿ 53/7).

(4) ಒಬ್ಬ ಯಕ್ಷರಾಜ. ಇವನು ಭಗವಂತನಾದ ಶಿವನ ಸಖ. ಇವನು ಸ್ಮಶಾನದಲ್ಲೇ (ಅದರ ರಕ್ಷಣೆಗಾಗಿ) ವಾಸಿಸುತ್ತಾನೆ. ಇವನು ಜಗತ್ತಿಗೆಲ್ಲಾ ಆನಂದ ಕೊಡುವವನಾಗಿದ್ದಾನೆ (ವನ 231/51).

**ಪಿಙ್ಗಲಕ** – ಒಬ್ಬ ಯಕ್ಷ. ಇವನು ಕುಬೇರನ ಸಭೆಯಲ್ಲಿರುತ್ತಾ ಅವನ ಸೇವೆ ಮಾಡುತ್ತಾನೆ (ಸಭಾ 10/17).

**ಪಿಙ್ಗಲರಾಜ** – ಶ್ಮಶಾನದಲ್ಲಿ ವಾಸಿಸುವ ಒಬ್ಬ ಯಕ್ಷರಾಜ. ಇವನು ಶಿವನಸಖ (ವನ 231/51).

**ಪಿಙಾಕ್ಷೀ** – (1) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/18).

(2) ಸ್ಕಂದನ ಅನುಚರಿಮಾತೃಕೆ (ಶಲ್ಯ 46/21).

**ಪಿಚ್ಛಲ** – ವಾಸುಕಿ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/6).

**ಪಿಚ್ಛಿಲಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/29).

**ಪಿಞ್ಜರಕ** – ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ನಾಗ (ಆದಿ 35/6; ಉದ್ಯೋಗ 103/11).

**ಪಿಞ್ಜಲಾ** – ಭಾರತದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ಪ್ರಜೆಗಳು ಕುಡಿಯು ತ್ತಾರೆ (ಭೀಷ್ಮ 9/27).

**ಪಿಠರ** – ಒಬ್ಬ ದೈತ್ಯ. ಇವನು ವರುಣ ಸಭೆಯ ಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 9/13).

**ಪಿಠರಕ** – (ಪೀಠರಕ). ಕಶ್ಯಪವಂಶದ ಪ್ರಮುಖ ನಾಗ (ಆದಿ 35/14; ಉದ್ಯೋಗ 103/14). ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/15).

**ಪಿಣ್ಡಸೇಕ್ತಾ** – ತಕ್ಷಕಕುಲದ ಒಬ್ಬ ನಾಗ. ಇವನು ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/8).

**ಪಿಣ್ಡಾರಕ** (ಪಿಣ್ಡಾರ). – (1) ಕಶ್ಯಪ ವಂಶದ ಒಬ್ಬ ಪ್ರಮುಖ ನಾಗ (ಆದಿ 35/11; ಉದ್ಯೋಗ 103/14). ಇವನು ಧೃತರಾಷ್ಟ್ರ ಕುಲದಲ್ಲಿ ಹುಟ್ಟಿ ದನು ಮತ್ತು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/17).

(2) ಸುರಾಷ್ಟ್ರ ದೇಶದಲ್ಲಿ ದ್ವಾರಕೆಯ ಸಮೀಪದ ಒಂದು ತೀರ್ಥ, ಇದರಲ್ಲಿ ಸ್ನಾನ ಮಾಡಿದರೆ ಅತ್ಯಧಿಕ ಸುವರ್ಣಪ್ರಾಪ್ತಿಯಾಗುತ್ತದೆ (ವನ 82/65). ಈ ತೀರ್ಥ ತಪಸ್ವಿಗಳಿಂದ ಸೇವಿಸಲ್ಪಟ್ಟಿದೆ ಮತ್ತು ಕಲ್ಯಾಣ ಸ್ವರೂಪದ್ದಾಗಿದೆ (ವನ 88/21). ಪಿಂಡಾರಕ ತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿ ಒಂದು ರಾತ್ರಿ ವಾಸಿಸುವ ಮನುಷ್ಯ, ಪ್ರಾತಃಕಾಲ ವಾಗುತ್ತಲೇ ಪವಿತ್ರನಾಗಿ ಅಗ್ನಿಷ್ಟೋಮ ಯಜ್ಞದ ಫಲವನ್ನು ಪಡೆಯುತ್ತಾನೆ (ಅನು 25/57).

**ಪಿತಾಮಹಸರ** – ಒಂದು ಸರೋವರ. ಇದು ಗಿರಿರಾಜ ಹಿಮಾಲಯಕ್ಕೆ ಹತ್ತಿರವಿದೆ. ಇದರಲ್ಲಿ ಸ್ನಾನಮಾಡಿದರೆ ಅಗ್ನಿಷ್ಟೋಮ ಯಜ್ಞದ ಫಲ ಸಿಗುತ್ತದೆ (ವನ 84/148).

**ಪಿತೃಗ್ರಹ** – ಪಿತೃಸಂಬಂಧಿ ಗ್ರಹ (ವನ 230/48).

**ಪಿತೃಯಾಣ**– ಮರಣಾನಂತರ ಅಧೋಲೋಕಕ್ಕೆ ಹೋಗುವವರಿಗೆ ದೊರಕುವ ತಾಮಸವಾದ ಮಾರ್ಗ (ಶಾಂತಿ 326).

**ಪಿನಾಕ** – ಶಿವನ ಧನುಸ್ಸು (ಸಭಾ 38/29).

ಇದರ ಉತ್ಪತ್ತಿಯ ವರ್ಣನೆ (ಅನು 141). ಭಗವಾನ್ ಶಂಕರನ ಪಾಣಿ(ಕೈ)ಯಿಂದ ಆನತ ಗೊಂಡು (ಬಾಗಿ), ಅವನ ತ್ರಿಶೂಲ ಧನುಸ್ಸಿನ ಆಕಾರವಾಯಿತು. ಆದುದರಿಂದ ಅದರ ಹೆಸರು ಪಿನಾಕವಾಯಿತು (ಶಾಂತಿ 289/18).

**ಪಿನಾಕಿ** – ಏಕಾದಶ ರುದ್ರರಲ್ಲಿ ಒಬ್ಬ. ಇವನು ಬ್ರಹ್ಮನ ಪುತ್ರ ಮತ್ತು ಸ್ಥಾಣುವಿನ ಪುತ್ರ (ಆದಿ 66/1–2; ಶಾಂತಿ 208/20). ಅರ್ಜುನನ ಜನ್ಮಕಾಲಕ್ಕೆ ಇವನು ಅಲ್ಲಿಗೆ ಆಗಮಿಸಿದ್ದನು (ಆದಿ 122/68).

**ಪಿಪ್ಪಲಸ್ಥಾನ** – ಜಂಬೂದ್ವೀಪದೊಳಗಿರುವ ಒಂದು ಭೂಭಾಗ ವಿಶೇಷ (ಭೀಷ್ಮ 6/2).

**ಪಿಪ್ಪಲಾದ** – ಒಬ್ಬ ಪ್ರಾಚೀನ ಋಷಿ. ಶರಶಯ್ಯೆಯಲ್ಲಿದ್ದ ಭೀಷ್ಮರನ್ನು ಕಾಣಲು ಬಂದ ಋಷಿಗಳಲ್ಲಿ ಇವನೂ ಒಬ್ಬ (ಶಾಂತಿ 47/9).

**ಪಿಶಂಗ** – ಧೃತರಾಷ್ಟ್ರನ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಯಜ್ಞದಲ್ಲಿ ದಗ್ಧನಾದನು (ಆದಿ 57/17).

**ಪಿಶಾಚ** – (1) ಭೂತಶರೀರ ವಿಶೇಷ. ಅಂಡ ದಿಂದ ಇವನು ಪ್ರಕಟಗೊಂಡನು (ಆದಿ 1/35). ಈತ ಕುಬೇರನ ಸಭೆಯಲ್ಲಿದ್ದುಕೊಂಡು ಅವನ ಸೇವೆಮಾಡುತ್ತಾನೆ (ಸಭಾ 10/16). ಬ್ರಹ್ಮನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 11/49). ಗೋಕರ್ಣ ತೀರ್ಥದಲ್ಲಿರುತ್ತಾ ಶಿವನ ಆರಾಧನೆ ಮಾಡುತ್ತಾನೆ (ವನ 85/25). ಮರೀಚಿಯೇ ಮೊದಲಾದ ಮಹರ್ಷಿಗಳು ಪಿಶಾಚಾದಿ ಸಮಸ್ತ ಭೂತಗಳ ಸೃಷ್ಟಿ ಮಾಡಿದರು (ವನ 272/46). ಇವರು ರಾವಣನನ್ನು ತಮ್ಮ ರಾಜನಾಗಿ ಮಾಡಿಕೊಂಡರು (ವನ 275/38). ಪಿಶಾಚರು ರಕ್ತ ಕುಡಿಯು ವವರು ಮತ್ತು ಹಸಿಮಾಂಸ ತಿನ್ನುವವರಾಗಿ ದ್ದಾರೆ (ದ್ರೋಣ 50/9–13). ಅಲಂಬುಷನ ರಥದಲ್ಲಿ ಕುದುರೆಗಳ ಸ್ಥಳದಲ್ಲಿ ಪಿಶಾಚಗಳು ಕಟ್ಟಲ್ಪಟ್ಟಿದ್ದವು (ದ್ರೋಣ 167/38). ಇವರು ಘಟೋತ್ಕಚನೊಂದಿಗಿದ್ದು ಅವನಿಗೆ ಸಹಾಯ ಮಾಡಿದ್ದರು ಮತ್ತು ಕರ್ಣನ ಮೇಲೆ ಆಕ್ರಮಣ ಮಾಡಿದ್ದರು (ದ್ರೋಣ 175/109). ಖಾಂಡವ ವನದಹನ ಕಾಲದಲ್ಲಿ ಅರ್ಜುನನು ಇವರನ್ನು ಗೆದ್ದಿದ್ದನು (ಕರ್ಣ 37/37). ಕರ್ಣಾರ್ಜುನ ಯುದ್ಧಕಾಲದಲ್ಲಿ ಇವರು ಉಪಸ್ಥಿತರಿದ್ದರು (ಕರ್ಣ 87/50). ಮುಂಜವಾನ್ ಪರ್ವತದ ಮೇಲೆ ತಪಸ್ಸುಮಾಡುತ್ತಿರುವ ಪಾರ್ವತೀಸಹಿತ ಶಿವನನ್ನು ಪಿಶಾಚಾದಿಗಳು ಆರಾಧನೆ ಮಾಡು ತ್ತಾರೆ (ಅಶ್ವ 8/5–6). ಮಹಾಭಾರತ ಕಾಲದಲ್ಲಿ ಪಿಶಾಚರು ಪೃಥ್ವಿಯಲ್ಲಿ ರಾಜರಾಗಿ ಹುಟ್ಟಿದ್ದರು (ಆಶ್ರಮ 31).

(2) ಒಬ್ಬ ಯಕ್ಷನ ಹೆಸರು (ಸಭಾ 10/16).

(3) ಒಂದು ಭಾರತೀಯ ಜನಪದ. ಈ ಜನಪದದ ಯೋಧರು ಯುಧಿಷ್ಠಿರನ ಸೇನೆಯಲ್ಲಿ, ಕ್ರೌಂಚವ್ಯೂಹದ ಬಲರೆಕ್ಕೆಯ ಸ್ಥಳದಲ್ಲಿ ನಿಲ್ಲಿಸ ಲ್ಪಟ್ಟಿದ್ದರು (ಭೀಷ್ಮ 50/50). ದುರ್ಯೋಧನನ ಸೇನೆಯಲ್ಲಿ ರಾಜಾಭಗದತ್ತನೊಂದಿಗೆ ಪಿಶಾಚ ದೇಶದ ಸೈನಿಕರಿದ್ದರು (ಭೀಷ್ಮ 87/8). ಶ್ರೀಕೃಷ್ಣನು ಒಂದು ಸಂದರ್ಭದಲ್ಲಿ ಪಿಶಾಚದೇಶದ ಯೋಧ ರನ್ನು ಪರಾಜಯಗೊಳಿಸಿದ್ದನು (ದ್ರೋಣ 11/16).

**ಪಿಶಾಚಗ್ರಹ** – ಪಿಶಾಚ ಸಂಬಂಧಿ ಗ್ರಹ (ವನ 230/52).

**ಪೀಠ** – ಒಬ್ಬ ಅಸುರ. ಇವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು (ಸಭಾ 38).

**ಪುಚ್ಛಾಂಡಕ** – ತಕ್ಷಕ ಕುಲದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/8).

**ಪುಞ್ಜಿಕಸ್ಥಲಾ** – ಹತ್ತು ಮಂದಿ ಪ್ರಧಾನ ಅಪ್ಸರೆಯರಲ್ಲಿ ಒಬ್ಬಳು. ಇವಳು ಅರ್ಜುನನ ಜನ್ಮಮಹೋತ್ಸವದಲ್ಲಿ ಹಾಡಿದ್ದಳು (ಆದಿ 122/64). ಈಕೆ ಕುಬೇರ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾಳೆ (ಸಭಾ 10/10).

**ಪುಣ್ಡರೀಕ** – (1) ಒಂದು ಮಹಾಯಜ್ಞ (ಸಭಾ 5/100; ವನ 30/17).

(2) ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಪುಂಡ ರೀಕ ಯಜ್ಞದ ಫಲ ಸಿಗುತ್ತದೆ (ವನ 83/83).

(3) ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/13).

(4) ಒಂದು ದಿಗ್ಗಜ (ದ್ರೋಣ 121/25).

(5) ತೀರ್ಥಸೇವೆಯ ಒಬ್ಬ ಬ್ರಾಹ್ಮಣ. ಈತ ನಾರದನೊಂದಿಗೆ ಶ್ರೇಯಸ್ಸಿನ ಕುರಿತಾಗಿ ಪ್ರಶ್ನೆ ಮಾಡಿದ್ದನು. ಇವನಿಗೆ ನಾರಾಯಣನ ಪ್ರತ್ಯಕ್ಷ

ದರ್ಶನ ಮತ್ತು ಆತನೊಂದಿಗೆ ಪರಮಧಾಮದ ಪ್ರಾಪ್ತಿ (ಅನು 124).

**ಪುಣ್ಡರೀಕಾ** – ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮೋತ್ಸವಕ್ಕೆ ಬಂದು ನೃತ್ಯ ಮಾಡಿದ್ದಳು (ಆದಿ 122/63).

**ಪುಣ್ಡರೀಕಾಕ್ಷ** – ಶ್ರೀ ಕೃಷ್ಣನ ಒಂದು ಹೆಸರು. **ಪುಂಡರೀಕ** – ಅವಿನಾಶಿಯಾದ ಪರಮಧಾಮ ದಲ್ಲಿದ್ದು, ಅಕ್ಷತಭಾವದಿಂದ ವಿರಾಜಮಾನನಾಗಿ ರುವುದರಿಂದ ಭಗವಂತನನ್ನು 'ಪುಂಡರೀಕಾಕ್ಷ' ಎನ್ನುತ್ತಾರೆ (ಅಥವಾ ಪುಂಡರೀಕ–ಕಮಲಸದೃಶ ವಾದ ಅಕ್ಷಿ(ನೇತ್ರ)ಯನ್ನು ಧರಿಸಿದುದರಿಂದ ಅವನು ಪುಂಡರೀಕಾಕ್ಷನೆಂದು ಹೇಳಲ್ಪಟ್ಟನು (ಉದ್ಯೋಗ 70/6).

**ಪುಣ್ಡರೀಯಕ** – ಒಬ್ಬ ವಿಶ್ವೇದೇವ (ಅನು 91/34).

**ಪುಣ್ಡ್ರ** – (1) ಒಬ್ಬ ಪ್ರಾಚೀನ ರಾಜ (ಆದಿ 1/ 234).

(2) ಒಂದು ಪ್ರಾಚೀನದೇಶ. ಇದನ್ನು ಮಹಾ ರಾಜ ಪಾಂಡು ಗೆದ್ದಿದ್ದನು (ಆದಿ 112/29). (ಆಧುನಿಕ ಮಾನ್ಯತೆಗೆ ಸರಿಯಾಗಿ ಮಾಲದಾ ಜಿಲ್ಲೆ, ಕೋಸೀನದಿಯ ಪೂರ್ವಕ್ಕೆ ಪೂರ್ಣಿಯಾದ ಸ್ವಲ್ಪ ಅಂಶ ಮತ್ತು ದೀನಾಜ್‌ಪುರದ ಸ್ವಲ್ಪ ಭಾಗ ಮತ್ತು ರಾಜಶಾಹಿಯ ಸಮ್ಮಿಲಿತ ಭೂಭಾಗ 'ಪುಂಡ್ರ' ಜನಪದದ ಅಂತರ್ಗತವಾಗಿದೆ). ಪುಂಡ್ರದೇಶದ ನಿವಾಸಿಗಳು ರಾಜಾ ಯುಧಿಷ್ಠಿರ ನಿಗಾಗಿ ಕಾಣಿಕೆ ತಂದಿದ್ದರು (ಸಭಾ 52/16). ದಿಗ್ವಿಜಯ ಕಾಲದಲ್ಲಿ ಕರ್ಣನೂ ಈ ದೇಶವನ್ನು ಗೆದ್ದಿದ್ದನು (ಕರ್ಣ 8/19). (ಪೌಂಡ್ರಕ ವಾಸು ದೇವ ಇದೇ ದೇಶದವನೆಂದು ಹೇಳಲಾಗಿದೆ.) ಅಶ್ವಮೇಧದ ಕುದುರೆಯ ರಕ್ಷಣೆಯ ಸಂದರ್ಭ ದಲ್ಲಿ ಅರ್ಜುನನೂ ಈ ದೇಶವನ್ನು ಗೆದ್ದಿದ್ದನು (ಆಶ್ವ 82/29–30).

**ಪುಣ್ಡ್ರಕ** – ಒಬ್ಬ ಪ್ರಾಚೀನ ಕ್ಷತ್ರಿಯ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/ 24). ಇವನು ರಾಜಸೂಯಯಜ್ಞದಲ್ಲಿ ಯುಧಿ ಷ್ಠಿರನಿಗೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 52/18).

**ಪುಣ್ಯ** – ಮಹರ್ಷಿ ವಿಭಾಂಡಕನ ಆಶ್ರಮದ ಹೆಸರು (ವನ 110/23).

**ಪುಣ್ಯಕೃತ್** – ಒಬ್ಬ ವಿಶ್ವೇದೇವ (ಅನು 91/30).

**ಪುಣ್ಯತೋಯಾ** – ಒಂದು ನದಿ. ಇದನ್ನು ಭಗವಾನ್ ಬಾಲ ಮುಕುಂದನ ಉದರದಲ್ಲಿ ಭ್ರಮಣಮಾಡುತ್ತಿದ್ದಾಗ ಮಾರ್ಕಂಡೇಯನು ನೋಡಿದನು (ವನ 188/104).

**ಪುಣ್ಯನಾಮಾ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/59).

**ಪುತ್** – ಒಂದು ನರಕ. ತಂದೆಯನ್ನು ಈ ನರಕದಿಂದ ಉದ್ಧಾರ ಮಾಡುವವನಾದ್ದರಿಂದ ಮಗನನ್ನು ಪುತ್ರನೆಂದು ಹೇಳುತ್ತಾರೆ (ಆದಿ 74/39).

**ಪುತ್ರದರ್ಶನಪರ್ವ** – ಆಶ್ರಮವಾಸಿಕ ಪರ್ವದ ಒಂದು ಅವಾಂತರ ಪರ್ವ (29ರಿಂದ 36).

**ಪುತ್ರಿಕಾಸುತ** – ಪುತ್ರಿಯ ಪುತ್ರ. ಇವನೂ 'ಪ್ರಣೀತ'ನಿಗೆ ಸಮಾನವೆಂದು ತಿಳಿಯಲ್ಪಡುತ್ತಾನೆ (ಆರುಮಂದಿ ಬಂಧು ದಾಯಾದರಲ್ಲಿ ಇವನೂ ಒಬ್ಬನೆಂದು ತಿಳಿಯಬೇಕು (ಆದಿ 119/33).

**ಪುನಶ್ಚಂದ್ರಾ** – ಒಂದು ತೀರ್ಥ. ಇದು ಶೂರ್ಪಾರಕ ಕ್ಷೇತ್ರದಲ್ಲಿ ಜಮದಗ್ನಿ ವೇದಿಯಲ್ಲಿದೆ (ವನ 88/12).

**ಪುರಂದರ** – (1) ದೇವರಾಜ ಇಂದ್ರನ ಒಂದು ಹೆಸರು (ನೋಡಿ–ಇಂದ್ರ).

(2) ತಪ ಅಥವಾ ಪಾಂಚಜನ್ಯನೆಂಬ ಅಗ್ನಿಯ ಒಬ್ಬ ಪುತ್ರ. ತಪನು ತಪಸ್ಸಿನಿಂದ ಮಹಾನ್ ಫಲವನ್ನು ಪ್ರಾಪ್ತಿಸಿದನೋ ಎಂಬಂತೆ ಇಂದ್ರನೇ 'ಪುರಂದರ' ಹೆಸರಿನಿಂದ ಅವನ ಪುತ್ರನಾಗಿ ಪ್ರಕಟಗೊಂಡನು (ವನ 221/3).

**ಪುರಮಾಲಿನಿ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/21).

**ಪುರಾವತೀ** – ಭಾರತವರ್ಷದ ಒಂದು ಪ್ರಮುಖ ನದಿ ಇದರ ನೀರನ್ನು ಇಲ್ಲಿರುವವರು ಕುಡಿಯುತ್ತಾರೆ (ಭೀಷ್ಮ 9/24).

**ಪುರಿಕಾ** – ಒಂದು ಪ್ರಾಚೀನ ನಗರ. ಇಲ್ಲಿ ಪೌರಿಕನೆಂಬ ರಾಜ ಪೂರ್ವಕಾಲದಲ್ಲಿ ರಾಜ್ಯ ಭಾರ ಮಾಡುತ್ತಿದ್ದನು (ಶಾಂತಿ 111/3).

**ಪುರು** – (1) ಒಂದು ಪ್ರಾಚೀನ ಕ್ಷತ್ರಿಯ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/27).

(2) ಒಂದು ಪರ್ವತ. ಇಲ್ಲಿಗೆ ಪೂರ್ವಕಾಲದಲ್ಲಿ ಪುರೂರವನು ಯಾತ್ರೆಮಾಡಿದ್ದನು (ವನ 90/2).

**ಪುರುಕುತ್ಸ** – ಒಬ್ಬ ರಾಜ. ಈತ ಯಮನ ಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/13). ಈತ ಮಾಂಧಾತನ ಪುತ್ರ ಮತ್ತು ನರ್ಮದೆಯ ಪತಿಯಾಗಿದ್ದನು. ಈತ ಕುರುಕ್ಷೇತ್ರದ ವನದಲ್ಲಿ ತಪಸ್ಸುಮಾಡಿ ಸಿದ್ಧಿಪಡೆದು ಸ್ವರ್ಗಕ್ಕೆ ಹೋಗಿದ್ದನು (ಆಶ್ರಮ 20/12–13).

**ಪುರುಜಿತ್** – ಒಬ್ಬ ಕ್ಷತ್ರಿಯ ರಾಜ. ಇವನು ಕುಂತಿಭೋಜನ ಪುತ್ರ ಮತ್ತು ಕುಂತಿಯ ಸಹೋದರನಾಗಿದ್ದನು. ಇವನ ಇನ್ನೊಬ್ಬ ಸಹೋದರನ ಹೆಸರು ಕುಂತಿಭೋಜನೆಂದಾಗಿತ್ತು (ಸಭಾ 14/16–17; ಕರ್ಣ 6/22). ಇವನ ಕುದುರೆಗಳ ವರ್ಣನೆ (ದ್ರೋಣ 23/46). ದುರ್ಮುಖ ನೊಂದಿಗೆ ಇವನ ಯುದ್ಧ (ದ್ರೋಣ 25/40–41). ದ್ರೋಣಾಚಾರ್ಯನಿಂದ ಈತ ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/22–23). ಈತ ಯಮ ರಾಜನ ಸಭೆಯಲ್ಲಿ ಅವನ ಉಪಾಸನೆ ಮಾಡುತ್ತಿದ್ದನು (ಸಭಾ 8/20).

**ಪುರುಮಿತ್ರ** – ಧೃತರಾಷ್ಟ್ರನ ಹನ್ನೊಂದು ಮಹಾರಥಿ ಪುತ್ರರಲ್ಲಿ ಒಬ್ಬ (ಆದಿ 63/119). ಜೂಜಾಡುವಾಗ ಇವನೂ ಉಪಸ್ಥಿತನಾಗಿದ್ದನು (ಸಭಾ 58/13). ಅಭಿಮನ್ಯುವಿನಿಂದ ಗಾಯ ಗೊಂಡನು (ಭೀಷ್ಮ 73/24). ಸಂಜಯನಿಂದ ಜೀವಂತವಿರುವ ಯೋಧರ ಗಣನೆಯಾಗುತ್ತಿದ್ದಾಗ ಇವನ ಹೆಸರೂ ಇತ್ತು (ಕರ್ಣ 7/14).

**ಪುರುಮೀಢ** – ಸಮ್ರಾಟ ಸುಹೋತ್ರನ ತೃತೀಯ ಪುತ್ರ, ತಾಯಿಯ ಹೆಸರು ಐಕ್ಷ್ವಾಕೀ. ಇವನಿಗೆ ಅಜಮೀಢ ಮತ್ತು ಸುಮೀಢರೆಂಬ ಇಬ್ಬರು ಸಹೋದರರಿದ್ದರು (ಆದಿ 94/30).

**ಪುರುಷಾದಕ** – ಒಂದು ಪ್ರಾಚೀನ ದೇಶ (ಸಭಾ 51/17).

**ಪುರುಷೋತ್ತಮ** – ಶ್ರೀಕೃಷ್ಣನ ಒಂದು ಹೆಸರು. ಇವನು ಸರ್ವತ್ರ ಪರಿಪೂರ್ಣನು ಮತ್ತು ಎಲ್ಲರ ನಿವಾಸಸ್ಥಾನವಾಗಿದ್ದಾನೆ; ಆದುದರಿಂದ ಪುರುಷನು ಎಲ್ಲ ಪುರುಷರಲ್ಲಿ ಉತ್ತಮನಾದ ಕಾರಣ ಪುರುಷೋತ್ತಮನೆಂದು ಹೇಳಲ್ಪಡುತ್ತಾನೆ (ಉದ್ಯೋಗ 70/11–12).

**ಪುರೂರವಾ** – (1) ಇವನು (ಚಂದ್ರನ ಮಗ). ಬುಧನ ಮೂಲಕ ಇಳಾ ಎಂಬವಳ ಗರ್ಭದಿಂದ ಹುಟ್ಟಿದ್ದನು (ಆದಿ 75/18–19; ದ್ರೋಣ 144/4). ಬ್ರಾಹ್ಮಣರ ಬಗ್ಗೆ ಇವನ ಅತ್ಯಾಚಾರ (ಆದಿ 75/20–21). ಬ್ರಾಹ್ಮಣರಿಂದ ಇವನ ವಿನಾಶ (ಆದಿ 75/22). ಊರ್ವಶಿಯ ಗರ್ಭ ದಿಂದ ಇವನ ಮೂಲಕ ಕ್ರಮವಾಗಿ ಆಯು, ಧೀಮಾನ್, ಅಮಾವಸು, ದೃಢಾಯು ವನಾಯು ಮತ್ತು ಶತಾಯು ಎಂಬ ಆರು ಪುತ್ರರ ಜನನ (ಆದಿ 75/24–25). ಇವನು ವಾಯುದೇವ ನೊಂದಿಗೆ ನಾಲ್ಕು ವರ್ಣಗಳ ಉತ್ಪತ್ತಿ ಮತ್ತು ಬ್ರಾಹ್ಮಣರ ಶ್ರೇಷ್ಠತೆಯ ಕುರಿತಾಗಿ ಪ್ರಶ್ನೆಮಾಡಿದುದು (ಶಾಂತಿ 72/3). ಪುರೋಹಿತನ ವಿಷಯದಲ್ಲಿ ಕಶ್ಯಪನೊಂದಿಗೆ ಇವನ ಸಂವಾದ (ಶಾಂತಿ 73/7–32). ಇಕ್ಷ್ವಾಕುವಿನಿಂದ ಇವನಿಗೆ ಖಡ್ಗ ಪ್ರಾಪ್ತಿಯಾಯಿತು ಮತ್ತು ಇವನು ಅದನ್ನು ಆಯುವಿಗೆ ಕೊಟ್ಟನು (ಶಾಂತಿ 166/73–74). ಬ್ರಾಹ್ಮಣರ ಆಶೀರ್ವಾದದಿಂದ ಇವನ ಸ್ವರ್ಗ ಪ್ರಾಪ್ತಿಯ ವರ್ಣನೆ (ಅನು 6/31). ಗೋದಾನ ಮಹಿಮೆಯ ಪ್ರಸಂಗದಲ್ಲಿ ಇವನ ಹೆಸರೂ ಉಲ್ಲೇಖಿಸಲ್ಪಟ್ಟಿದೆ (ಅನು 76/26). ಇವನು ತನ್ನ ಜೀವನದಲ್ಲಿ ಎಂದೂ ಮಾಂಸ ತಿನ್ನಲಿಲ್ಲ (ಅನು 115/15).

(2) ದೀಪ್ತಾಕ್ಷ ವಂಶದ ಒಬ್ಬ ಕುಲಕಂಟಕ ರಾಜ (ಉದ್ಯೋಗ 74/15).

**ಪುರೋಚನ** – ಇವನು ದುರ್ಯೋಧನನ ಮಂತ್ರಿಯಾಗಿದ್ದನು. ವಾರಣಾವತ ನಗರದಲ್ಲಿ ಲಾಕ್ಷಾಗೃಹ ಮಾಡಿಸಲು ಆದೇಶಿಸಿ, ದುರ್ಯೋಧನನು ಇವನನ್ನು ಕಳುಹಿಸಿದುದು (ಆದಿ 143/2–17). ಇವನ ಮೂಲಕ ಲಾಕ್ಷಾಗೃಹ ನಿರ್ಮಾಣ (ಆದಿ 143/19). ಇವನು ಪಾಂಡವರನ್ನು ತನ್ನ ಡೇರೆಗೆ ಕರಕೊಂಡು ಬಂದು, ಸ್ವಾಗತ ಸತ್ಕಾರಮಾಡಿ, ಆದರ ಪೂರ್ವಕವಾಗಿ ವಾಸಸ್ಥಳವನ್ನಿತ್ತದ್ದು (ಅದಿ 145/9–10). ಪಾಂಡವರೊಡನೆ ಆ ಹೊಸಗೃಹ(ಲಾಕ್ಷಾಗೃಹ)ದ ವರ್ಣನೆ ಮಾಡಿ, ಅವರನ್ನು ಸೇವಕ–ಸಾಮಗ್ರಿಗಳ ಸಹಿತ ಇಲ್ಲಿಗೆ(ಲಾಕ್ಷಾಗೃಹ)ಕರಕೊಂಡು ಬಂದು ನಿಲ್ಲಿಸಿದುದು (ಆದಿ 145/11–12). ಇವನು ಲಾಕ್ಷಾಗೃಹದಲ್ಲಿ ದಗ್ಧನಾದುದು (ಆದಿ

61/23; 149/2).

**ಪುಲಸ್ತ್ಯ** – ಇವನು ಬ್ರಹ್ಮನ ಮಾನಸ ಪುತ್ರನಾಗಿದ್ದನು (ಆದಿ 65/10; ವನ 274/12). ಆರುಮಂದಿ ಶಕ್ತಿಶಾಲಿ ಮಹರ್ಷಿಗಳಲ್ಲಿ ಇವನ ಹೆಸರೂ ಇದೆ (ಆದಿ 66/4). ಬುದ್ಧಿವಂತನಾದ ಪುಲಸ್ತ್ಯನಿಗೆ ರಾಕ್ಷಸ, ವಾನರ, ಕಿನ್ನರ ಮತ್ತು ಯಕ್ಷರು ಪುತ್ರರಾಗಿದ್ದಾರೆ (ಆದಿ 66/7). ಇವನು ಅರ್ಜುನನ ಜನ್ಮಮಹೋತ್ಸವಕ್ಕೆ ಆಗಮಿಸಿದ್ದನು (ಆದಿ 122/52). ಪರಾಶರರ ರಾಕ್ಷಸಸತ್ರಕ್ಕೆ ಮಹರ್ಷಿಗಳೊಂದಿಗೆ ಈತನ ಆಗಮನ ಮತ್ತು ಪರಾಶರರನ್ನು ಸಮಾಧಾನಪಡಿಸಿ, ಆ ಯಜ್ಞ ವನ್ನು ನಿಲ್ಲಿಸಲು ಹೇಳಿದುದು (ಆದಿ 180/9–20). ಇವನು ಇಂದ್ರಸಭೆಯಲ್ಲಿ ಇರುತ್ತಾನೆ (ಸಭಾ 7/17). ಇವನು ಬ್ರಹ್ಮಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 11/19). ಇವನು ಭೀಷ್ಮನಲ್ಲಿ ವಿಭಿನ್ನ ತೀರ್ಥಗಳ ಫಲಾ ದೇಶಪೂರ್ವಕ ವರ್ಣನೆ ಮಾಡಿದುದು (ವನ ಅಧ್ಯಾಯ 82ರಿಂದ 85/111ರ ವರೆಗೆ). ಇವನ ಪತ್ನಿಯ ಹೆಸರು ಗೌ ಎಂದಾಗಿತ್ತು. ಆಕೆಯ ಗರ್ಭದಿಂದ ಇವನ ಮೂಲಕ ವೈಶ್ರವಣನ (ಕುಬೇರ) ಜನ್ಮವಾಗಿತ್ತು (ವನ 274/12). ಇವನು ತನ್ನ ಅರ್ಧ ಶರೀರದಿಂದ ವಿಶ್ರವಾ ಎಂಬ ಹೆಸರಿನ ಪುತ್ರನನ್ನು ಉತ್ಪನ್ನಗೊಳಿಸಿದ್ದನು (ಆದಿ 274/13–14). ಸ್ಕಂದಜನ್ಮಮಹೋತ್ಸವ ಸಂದರ್ಭದಲ್ಲಿ ಈತನೂ ಆಗಮಿಸಿದ್ದನು (ಶಲ್ಯ 45/9). ಶರಶಯ್ಯೆಯಲ್ಲಿದ್ದ ಭೀಷ್ಮನ ಬಳಿಗೆ ಬಂದ ಋಷಿಗಳಲ್ಲಿ ಇವನೂ ಇದ್ದನು (ಶಾಂತಿ 47/10). ಇಪ್ಪತ್ತೊಂದು ಪ್ರಜಾಪತಿಗಳಲ್ಲಿ ಕೂಡಾ ಇವನ ಹೆಸರಿದೆ (ಶಾಂತಿ 334/35). ಚಿತ್ರ ಶಿಖಂಡಿ ಹೆಸರಿನ ಏಳುಋಷಿಗಳಲ್ಲಿ ಈತನೂ ಒಬ್ಬನಾಗಿದ್ದಾನೆ (ಶಾಂತಿ 335/29). ಈತ ಎಂಟು ಪ್ರಕೃತಿಗಳಲ್ಲಿ ಒಬ್ಬ (ಶಾಂತಿ 340/34–35). ಪ್ರಯಾಣ ಕಾಲದಲ್ಲಿ ಭೀಷ್ಮನ ಬಳಿಗೆ ಇವನೂ ಬಂದಿದ್ದನು (ಅನು 26/4). (ಮಹಾ ಭಾರತದಲ್ಲಿ ಇವನ ಬ್ರಹ್ಮರ್ಷಿ, ಬ್ರಹ್ಮಯೋನಿ ಮತ್ತು ವಿಪ್ರರ್ಷಿ ಇತ್ಯಾದಿ ಹೆಸರುಗಳ ಉಲ್ಲೇಖ ಕೂಡಾ ಸಿಗುತ್ತದೆ.).

**ಪುಲಹ** – ಇವನು ಬ್ರಹ್ಮನ ಮಾನಸ ಪುತ್ರ (ಆದಿ 65/10; ವನ 274/12). ಆರು ಶಕ್ತಿಶಾಲಿ ಮಹರ್ಷಿಗಳಲ್ಲಿ ಇವನ ಹೆಸರೂ ಇದೆ (ಆದಿ 66/4). ಪುಲಹನಿಗೆ ಶರಭ, ಸಿಂಹ, ಕಿಂಪುರುಷ, ವ್ಯಾಘ್ರ, ಕರಡಿ, ಈಹಾಮೃಗ (ತೋಳ). ಜಾತಿಯ ಪುತ್ರರಾದರು (ಆದಿ 66/8). ಇವನು ಅರ್ಜುನನ ಜನ್ಮಸಮಯಕ್ಕೆ ಆಗಮಿಸಿದ್ದನು (ಆದಿ 122/52). ಪರಾಶರನ ರಾಕ್ಷಸಸತ್ರಕ್ಕೆ ಮಹರ್ಷಿಗಳೊಂದಿಗೆ ಇವನ ಆಗಮನ (ಆದಿ 180/9). ಇವನು ಇಂದ್ರ ಸಭೆಯಲ್ಲಿರುತ್ತಾನೆ (ಸಭಾ 7/17). ಬ್ರಹ್ಮನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 11/18). ಅಲಕನಂದಾ ಗಂಗೆಯ ದಡದಲ್ಲಿ ಇವನು ಜಪ ಮತ್ತು ಸ್ವಾಧ್ಯಾಯ ಮಾಡುತ್ತಾನೆ (ವನ 142/6). ಸ್ಕಂದನ ಜನ್ಮಮಹೋತ್ಸವಕ್ಕೆ ಈತನೂ ಒಬ್ಬ (ಶಾಂತಿ 334/35). ಚಿತ್ರಶಿಖಂಡಿ ಎಂಬ ಏಳು ಋಷಿಗಳಲ್ಲಿ ಕೂಡಾ ಇವನ ಹೆಸರಿದೆ (ಶಾಂತಿ 335/29). ಎಂಟು ಪ್ರಕೃತಿಗಳಲ್ಲಿ ಇವನ ಹೆಸರಿದೆ (ಶಾಂತಿ 340/ 34–35). ಪ್ರಯಾಣದ ಸಮಯದಲ್ಲಿ ಭೀಷ್ಮರ ಬಳಿಗೆ ಬಂದ ಋಷಿಗಳಲ್ಲಿ ಈತನೂ ಒಬ್ಬ (ಅನು 26/4).

**ಪುಲಿಂದ** – (1) ಒಂದು ದೇಶ ಮತ್ತು ಅಲ್ಲಿರುವ ನಿವಾಸಿಗಳು. ಇವರು ವಸಿಷ್ಠನ ಧೇನುವಾದ ನಂದಿನಿ ಕುಪಿತಳಾದಾಗ ಅವಳ ನೊರೆಯಿಂದ ಹುಟ್ಟಿದರು (ಆದಿ 174/38). ಭೀಮಸೇನನು ಪುಲಿಂದ ದೇಶದ ಮೇಲೆ ಆಕ್ರಮಣ ಮಾಡಿ, ಅಲ್ಲಿರುವ ಮಹಾನಗರ ಮತ್ತು ಆ ದೇಶದ ರಾಜ ಸುಕುಮಾರ ಮತ್ತು ಸುಮಿತ್ರನನ್ನು ಗೆದ್ದಿದ್ದನು (ಸಭಾ 29/10). ಸಹದೇವನೂ ಈ ದೇಶದ ರಾಜ ಸುಕುಮಾರ ಮತ್ತು ಸುಮಿತ್ರನನ್ನು ಸ್ವಾಧೀನಪಡಿಸಿದ್ದನು (ಸಭಾ 31/4). ಇವರು ಕಲಿಯುಗದಲ್ಲಿ ಈ ಪೃಥ್ವಿಯ ಶಾಸಕರಾಗುವ, ಆ ಮ್ಲೇಚ್ಛ ಜಾತಿಯವರಾಗಿದ್ದಾರೆ (ವನ 188/35). ಇವರು ದುರ್ಯೋಧನನ ಸೇನೆಯಲ್ಲಿ ಬಂದಿದ್ದರು (ಉದ್ಯೋಗ 160/103 ಉದ್ಯೋಗ 161/21). ಇದು ಒಂದು ಭಾರತೀಯಜನಪದವಾಗಿದೆ (ಭೀಷ್ಮ 9/39, 62). ಪಾಂಡ್ಯ ನರೇಶನೊಂದಿಗೆ ಇವನ ಯುದ್ಧವಾಯಿತು ಮತ್ತು ಆತನ ಬಾಣ ದಿಂದ ಕೊಲ್ಲಲ್ಪಟ್ಟನು (ಕರ್ಣ 20/10–12). ಇವರು ಕ್ಷತ್ರಿಯರಲ್ಲಿ ಗಣಿಸಲ್ಪಡುತ್ತಿದ್ದರು. ಆದರೆ ಬ್ರಾಹ್ಮಣರ ಕೃಪೆಯಿಂದ ವಂಚಿತರಾದ ಕಾರಣ,

ಇವರು ಶೂದ್ರರಾದರು (ಅನು 33/22,23).

(2) ಇವನು ಕಿರಾತರ ರಾಜನಾಗಿದ್ದನು ಮತ್ತು ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/24).

**ಪುಲೋಮಾ** – (1) ಭೃಗು ಋಷಿಯ ಪತ್ನಿ (ಆದಿ 5/13). ಪುಲೋಮನೆಂಬ ರಾಕ್ಷಸನಿಂದ ಈಕೆಯ ಅಪಹರಣ (ಆದಿ 6/1). ಇವಳ ಗರ್ಭದಿಂದ ಚ್ಯವನ ಮುನಿಯ ಜನ್ಮ (ಆದಿ 6/2). ಇವನ ವಿಸ್ತೃತ ಕಥೆ (ಆದಿ 5/13ರಿಂದ 6/13).

(2) ಒಬ್ಬ ರಾಕ್ಷಸ. ಇವನಿಂದ ಭೃಗುಪತ್ನಿ ಪುಲೋಮೆಯ ಅಪಹಾರ (ಆದಿ 5/15). ಕುಪಿತನಾದ ಚ್ಯವನನ ತೇಜಸ್ಸಿನಿಂದ ಇವನು ಭಸ್ಮವಾದುದು (ಆದಿ 6/3).

(3). ಕಶ್ಯಪ ಮತ್ತು ದನುವಿನಿಂದ ಹುಟ್ಟಿದ ಒಬ್ಬ ಪ್ರಸಿದ್ಧ ದಾನವ (ಆದಿ 65/22). ಇವನು ಧನರತ್ನಗಳ ಸಮೇತ ಈ ಭೂಮಿಯ ಮಹಾನ್ ಶಾಸಕರಲ್ಲಿ ಒಬ್ಬನಾಗಿದ್ದನು (ಶಾಂತಿ 127/49–50).

(4). ದೈತ್ಯಕುಲದ ಒಬ್ಬ ಕನ್ಯೆ. ಇವಳ ಪುತ್ರರನ್ನು 'ಪೌಲೋಮ' ಎನ್ನುತ್ತಾರೆ. ಆಕೆ ಮತ್ತು ಕಾಲಕಾ ದೊಡ್ಡ ತಪಸ್ಸು ಮಾಡಿ ಬ್ರಹ್ಮನಲ್ಲಿ ಹೀಗೆ ವರ ಬೇಡಿದ್ದರು.'ನಮ್ಮ ಪುತ್ರರ ದುಃಖ ದೂರವಾಗಲಿ. ನಮ್ಮ ಪುತ್ರರು ದೇವತೆ, ರಾಕ್ಷಸ ಮತ್ತು ನಾಗಗಳಿಗೆ ಅವಧ್ಯರಾಗಿರಲಿ. ಇವರ ವಾಸಕ್ಕೆ ಒಂದು ಸುಂದರ ನಗರವಿರಬೇಕು. ಅದು ತನ್ನ ಮಹಾಪ್ರಭೆಯಿಂದ ಹೊಳೆಯುತ್ತಿರಬೇಕು. ಆ ನಗರ ವಿಮಾನದಂತೆ ಆಕಾಶದಲ್ಲಿ ಚಲಿಸುವಂತಿರಬೇಕು ಮತ್ತು ಅದರಲ್ಲಿ ನಾನಾ ಪ್ರಕಾರದ ರತ್ನಗಳ ಸಂಗ್ರಹವಿರಬೇಕು. ದೇವತೆಗಳೇ ಮೊದಲಾದವರಿಗೂ ಅದನ್ನು ವಿಧ್ವಂಸಗೊಳಿಸಲು ಸಾಧ್ಯವಾಗಬಾರದು' (ವನ 173/7–12).

**ಪುಷ್ಕರ** – (1) ಕ್ಷೇತ್ರ. ತೀರ್ಥಗುರು (ಆದಿ 220/14). ಈ ತೀರ್ಥ ಅಜಮೇರದಿಂದ ಆರು ಕ್ರೋಶಗಳ ದೂರದಲ್ಲಿ ಉತ್ತರದಿಕ್ಕಿನಲ್ಲಿದೆ. ಈ ಕುರಿತು ಪುರಾಣಗಳಲ್ಲಿ ಹೀಗೆ ಪ್ರಸಿದ್ಧಿ ಇದೆ. 'ಬ್ರಹ್ಮನು ಈ ಸ್ಥಾನದಲ್ಲಿ ಯಜ್ಞ ಮಾಡಿದ್ದನು' ಇಲ್ಲಿ ಬ್ರಹ್ಮನ ಒಂದು ಮಂದಿರವಿದೆ. ಪದ್ಮ ಮತ್ತು ನಾರದ ಪುರಾಣದಲ್ಲಿ ಈ ತೀರ್ಥ ಮಹಾತ್ಮೆ ಸ್ವಲ್ಪಮಟ್ಟಿಗೆ ದೊರಕುತ್ತದೆ. ಪದ್ಮ ಪುರಾಣದಲ್ಲಿ ಹೀಗಿದೆ. 'ಒಂದು ಬಾರಿ ಪಿತಾ ಮಹನಾದ ಬ್ರಹ್ಮ ಕೈಯಲ್ಲಿ ಕಮಲವನ್ನು ಹಿಡಕೊಂಡು, ಯಜ್ಞ ಮಾಡುವ ಇಚ್ಛೆಯಿಂದ ಈ ಸುಂದರ ಪರ್ವತ ಪ್ರದೇಶಕ್ಕೆ ಬಂದನು. ಇಲ್ಲಿ ಕಮಲ ಅವನ ಕೈಯಿಂದ ಜಾರಿ ಬಿತ್ತು. ಆಗ ಎಲ್ಲಾ ದೇವತೆಗಳು ನಡುಗುವಷ್ಟು ಶಬ್ದ ವಾಯಿತು. ದೇವತೆಗಳು ಪ್ರಶ್ನಿಸಿದಾಗ ಬ್ರಹ್ಮನು ಹೀಗೆ ಹೇಳಿದನು 'ಬಾಲಕರನ್ನು ಘಾತಿಸುವ ವಜ್ರನಾಥನೆಂಬ ಅಸುರ ರಸಾತಲದಲ್ಲಿ ತಪಸ್ಸು ಮಾಡುತ್ತಿದ್ದನು. ಅವನು ನಿಮ್ಮನ್ನು ಸಂಹಾರ ಮಾಡಲು, ಇಲ್ಲಿಗೇ ಬರಲು ಇಚ್ಛಿಸಿದ್ದನು. ಅಷ್ಟರಲ್ಲಿ ಕಮಲವನ್ನು ಬೀಳಿಸಿ ನಾನು ಅವನನ್ನು ಕೊಂದು ಹಾಕಿದೆನು. ನಿಮ್ಮ ಬಹಳ ದೊಡ್ಡ ವಿಪತ್ತು ದೂರವಾಯಿತು. ಈ ಪದ್ಮ ಇಲ್ಲಿ ಬಿದ್ದು ದರಿಂದ ಈ ಸ್ಥಳದ ಹೆಸರು ಪುಷ್ಕರವೆಂದಾಗಲಿ. ಇದು ಪರಮಪುಣ್ಯಪ್ರದ ಮಹಾ ತೀರ್ಥವಾಗು ವುದು'. ಸಾಂಚಿಯಲ್ಲಿ ಸಿಕ್ಕಿದ ಒಂದು ಶಿಲಾ ಲೇಖಪ್ರಕಾರ ಕ್ರಿಸ್ತಶಕ ಮುನ್ನೂರು ವರ್ಷಗ ಳಿಂದಲೂ ಮೊದಲು ಈ ತೀರ್ಥಸ್ನಾನ ಪ್ರಸಿದ್ಧವಾಗಿತ್ತು (ಹಿಂದಿ ಶಬ್ದ ಸಾಗರದಿಂದ). (ಇಲ್ಲಿ ಬ್ರಹ್ಮಾ, ಸಾವಿತ್ರಿ, ಬದರೀನಾರಾಯಣ ಮತ್ತು ವರಾಹನ ಮಂದಿರಗಳು ಪ್ರಸಿದ್ಧ ವಾಗಿವೆ.). ಅರ್ಜುನನು ತನ್ನ ವನವಾಸದ ಉಳಿದ ಸಮಯವನ್ನು ಇಲ್ಲಿಯೇ ಕಳೆದಿದ್ದನು (ಆದಿ 220/14). ಪುಲಸ್ತ್ಯನಿಂದ ಇದರ ವಿಶೇಷ ವರ್ಣನೆ (ವನ 82/20–40). ಧೌಮ್ಯನಿಂದ ಇದರ ಮಹಾತ್ಮೆಯ ವರ್ಣನೆ (ವನ 89/16–18). ಪುಷ್ಕರಕ್ಕೆ ಹೋಗಿ ಮೃತ್ಯು ಘೋರ ತಪಸ್ಸು ಮಾಡಿದ್ದಳು (ದ್ರೋಣ 54/26). ಇಲ್ಲಿ ಬ್ರಹ್ಮನ ಯಜ್ಞವಾಗಿತ್ತು. ಅದರಲ್ಲಿ ಸರಸ್ವತಿ ಸುಪ್ರಭೆ ಎಂಬ ಹೆಸರಿನಿಂದ ಪ್ರಕಟಗೊಂಡಿದ್ದಳು (ಶಲ್ಯ 38/5–14). ಪುಷ್ಕರದಲ್ಲಿ ಹೋಗಿ ದಾನ ಕೊಡು ವುದು, ಭೋಗಗಳ ತ್ಯಾಗ ಮಾಡುವುದು, ಶಾಂತಭಾವದಿಂದಿರುವುದು, ತಪಸ್ಸು ಮತ್ತು ತೀರ್ಥಜಲದಿಂದ ತನುಮನಗಳನ್ನು ಪವಿತ್ರ ಗೊಳಿಸುವುದು ಅತ್ಯಗತ್ಯ (ಶಾಂತಿ 297/37). ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ;

ಅಲ್ಲಿ ಅಪ್ಸರೆಯರು ಸ್ತುತಿಸುತ್ತಾ ಎಚ್ಚರಗೊಳಿಸುತ್ತಾರೆ (ಅನು 25/9).

(2) ವರುಣ ದೇವನ ಪ್ರಿಯಪುತ್ರ. ಇವನ ಕಣ್ಣುಗಳು ವಿಕಸಿತ ಕಮಲದಂತೆ ದರ್ಶನೀಯವಾಗಿವೆ. ಆದುದರಿಂದಲೇ ಸೋಮನ ಪುತ್ರಿ ಇವನನ್ನು ಪತಿಯಾಗಿ ವರಿಸಿದಳು (ಉದ್ಯೋಗ 98/12).

(3) ಇವನು ರಾಜಾ ನಳನ ತಮ್ಮನಾಗಿದ್ದನು (ವನ 52/56). ರಾಜಾನಳನೊಂದಿಗೆ ಜೂಜಾಡುವಂತೆ ಕಲಿಯು ಇವನಿಗೆ ಆದೇಶ ನೀಡಿದುದು (ವನ 59/4). ಈತ ನಳನೊಂದಿಗೆ ಜೂಜಾಡಿದುದು (ವನ 59/9). ಪುಷ್ಕರನು ನಳನ ಸರ್ವಸ್ವವನ್ನು ಗೆದ್ದಿದ್ದನು (ವನ 61/1). ಇವನು ಪುನಃ ನಳನೊಂದಿಗೆ ಜೂಜಾಡಿದುದು ಮತ್ತು ಸರ್ವಸ್ವವನ್ನು ಸೋತದ್ದು (ವನ 78/4–20). ನಳನೊಂದಿಗೆ ಕ್ಷಮಾಯಾಚನೆ ಮಾಡಿ ತನ್ನ ರಾಜಧಾನಿಗೆ ಹಿಂತಿರುಗಿದುದು (ವನ 78/27–29).

(4). ಒಂದು ದ್ವೀಪ. ಇದರ ವಿಶೇಷ ವರ್ಣನೆ (ಭೀಷ್ಮ 12/24–37).

(5). ಪುಷ್ಕರ ದ್ವೀಪದ ಒಂದು ಪರ್ವತ. ಇದು ಮಣಿಗಳಿಂದಲೂ ರತ್ನಗಳಿಂದಲೂ ತುಂಬಿ ತುಳುಕುತ್ತದೆ (ಭೀಷ್ಮ 12/24–25).

**ಪುಷ್ಕರಧಾರಿಣೀ** – ಈಕೆ ವಿದರ್ಭನಿವಾಸಿ, ಉಂಛವೃತ್ತಿಧಾರಿ ಮತ್ತು ಅಹಿಂಸಾಪರಾಯಣ ಸತ್ಯನೆಂಬ ಹೆಸರುಳ್ಳ ಬ್ರಾಹ್ಮಣನ ಧರ್ಮಚಾರಿಣಿ ಪತ್ನಿಯಾಗಿದ್ದಳು (ಶಾಂತಿ 272/3–6).

**ಪುಷ್ಕರಿಣೀ** – ಸಮ್ರಾಟನಾದ ಭರತನ ಸೊಸೆ ಮತ್ತು ಭುಮನ್ಯುವಿನ ಪತ್ನಿ ಇವಳ ಗರ್ಭದಿಂದ ಸುಹೋತ್ರ, ದಿವಿರಥ, ಸುಹೋತಾ, ಸುಹವಿ, ಸುಯಜು ಮತ್ತು ಋಚೀಕನೆಂಬ ಆರು ಪುತ್ರರಾದರು (ಆದಿ 94/23–25).

**ಪುಷ್ಟಿ** – ಈಕೆ ದಕ್ಷ ಪ್ರಜಾಪತಿಯ ಕನ್ಯೆ ಮತ್ತು ಧರ್ಮನ ಪತ್ನಿ (ಆದಿ 66/14). ಇವಳು ಬ್ರಹ್ಮಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾಳೆ (ಸಭಾ 11/42). ಇಂದ್ರಲೋಕದ ಯಾತ್ರಾ ಸಮಯದಲ್ಲಿ ಅರ್ಜುನನ ರಕ್ಷಣೆಗಾಗಿ ದ್ರೌಪದಿ ಈಕೆಯ ಸ್ಮರಣೆ ಮಾಡಿದ್ದಳು (ವನ 37/33).

**ಪುಷ್ಟಿಮತಿ** – ಭರತನೆಂಬ ಅಗ್ನಿಯ ನಾಮಾಂತರ. ಈತ ಸಂತುಷ್ಟನಾದಾಗ ಪುಷ್ಟಿಪ್ರದಾನ ಮಾಡುತ್ತಾನೆ. ಆದುದರಿಂದ ಇವನ ಹೆಸರು ಪುಷ್ಟಿಮತಿ ಎಂದಾಗಿದೆ (ವನ 221/1).

**ಪುಷ್ಪ** – ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/13).

**ಪುಷ್ಪಕ** – (1) ಕುಬೇರನ ಒಂದು ದಿವ್ಯವಿಮಾನ. ಇದು ಅವನಿಗೆ ಬ್ರಹ್ಮನಿಂದ ದೊರಕಿತ್ತು (ವನ 274/18). ಇದನ್ನು ರಾವಣನು ಅವನಿಂದ ಬಲಾತ್ಕಾರವಾಗಿ ಸೆಳಕೊಂಡಿದ್ದನು (ವನ 275/34). ಈ ವಿಮಾನ ನಿನ್ನ ಪ್ರಯಾಣಕ್ಕೆ ಬರಲಾರದು, ಯಾವನು ನಿನ್ನ ವಧೆ ಮಾಡುವನೋ ಅವನ ವಾಹನವಾಗುವುದು ಎಂದು ಕುಬೇರನು ರಾವಣನಿಗೆ ಶಾಪಕೊಟ್ಟಿದ್ದನು (ವನ 275/35). ಲಂಕಾವಿಜಯದ ಅನಂತರ ಶ್ರೀರಾಮನು ಪುಷ್ಪಕ ವಿಮಾನದ ಪೂಜೆಮಾಡಿ ಅದನ್ನು ಸಂತೋಷಪೂರ್ವಕವಾಗಿ ಕುಬೇರನಿಗೆ ಹಿಂತಿರುಗಿಸಿದನು (ವನ 291/69).

(2) ದ್ವಾರಕಾಪುರದ ದಕ್ಷಿಣಭಾಗದಲ್ಲಿರುವ ಲತಾವೇಷ್ಟವೆಂಬ ಪರ್ವತವನ್ನು ಒಂದು ಬದಿಯಿಂದ ಆವರಿಸಿ ಹರಡಿರುವ ಒಂದು ಕಾಡು (ಸಭಾ 38/29).

**ಪುಷ್ಪದಂಷ್ಟ್ರ** – ಕಶ್ಯಪವಂಶದ ಒಂದು ಪ್ರಮುಖ ನಾಗ (ಆದಿ 35/12).

**ಪುಷ್ಪದಂತ** – (1) ಒಂದು ದಿಗ್ಗಜ (ದ್ರೋಣ 121/25).

(2) ಪಾರ್ವತಿಯಿಂದ ಕುಮಾರನಿಗೆ ಕೊಡಲ್ಪಟ್ಟ ಮೂರು ಪಾರ್ಷದರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರು ಉನ್ಮಾದ ಮತ್ತು ಶಂಕುಕರ್ಣ ಎಂದಾಗಿತ್ತು (ಶಲ್ಯ 45/51).

**ಪುಷ್ಪರಥ** – ರಾಜರ್ಷಿ ವಸುಮನಾನ ರಥ, ಇದು ಆಕಾಶ, ಪರ್ವತ ಮತ್ತು ಸಮುದ್ರ ಇತ್ಯಾದಿ ದುರ್ಗಮ ಸ್ಥಾನಗಳಲ್ಲಿ ಕೂಡಾ ಬಹಳ ಸುಲಭವಾಗಿ ಹೋಗಬಲ್ಲುದಾಗಿತ್ತು (ವನ 198/12–13).

**ಪುಷ್ಪವತೀ** – ಈ ತೀರ್ಥದಲ್ಲಿ ಸ್ನಾನ ಮಾಡಿ, ಮೂರು ರಾತ್ರಿ ಉಪವಾಸ ಮಾಡುವ ಮನುಷ್ಯ ಸಹಸ್ರ ಗೋದಾನದ ಫಲ ಪಡೆಯುತ್ತಾನೆ ಮತ್ತು ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ (ವನ 85/12).

**ಪುಷ್ಪವಾನ್** – ಒಬ್ಬ ರಾಜ. ಈತ ಒಮ್ಮೆ ಸಮಸ್ತ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲಪೀಡಿತ ನಾಗಿ ಇದನ್ನು ಬಿಟ್ಟು ಪರಲೋಕ ವಾಸಿ ಯಾದನು (ಶಾಂತಿ 227/51–56).

**ಪುಷ್ಪಾನನ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 10/17).

**ಪುಷ್ಪೋತ್ಕಟಾ** – ಕುಬೇರನ ಮೂಲಕ ವಿಶ್ರವಸ್ಸಿನ ಪರಿಚರ್ಯೆಗಾಗಿ ನಿಯುಕ್ತಳಾದ ಒಬ್ಬ ಸುಂದರಿ ರಾಕ್ಷಸಕನ್ಯೆ. ಈಕೆ ನೃತ್ಯ ಗೀತದ ಕಲೆಯಲ್ಲಿ ಪ್ರವೀಣಳಾಗಿದ್ದಳು. ಇವಳ ಗರ್ಭದಿಂದಲೇ ರಾವಣ ಮತ್ತು ಕುಂಭಕರ್ಣರ ಜನನವಾಗಿತ್ತು (ವನ 275/3–7).

**ಪೂಜನೀ** – ಕಾಂಪಿಲ್ಯ ನಗರದ ರಾಜಾ ಬ್ರಹ್ಮದತ್ತನ ಅರಮನೆಯಲ್ಲಿ ವಾಸಿಸುವ ಒಂದು ಹಕ್ಕಿ (ಶಾಂತಿ 139/5). ಇದು ಎಲ್ಲಾ ಪ್ರಾಣಿಗಳ ಭಾಷೆಯನ್ನು ತಿಳಿದಿತ್ತು. ಸರ್ವಜ್ಞ ಹಾಗೂ ಸಕಲ ತತ್ತ್ವಗಳ ತಿಳುವಳಿಕೆಯುಳ್ಳದ್ದಾಗಿತ್ತು (ಶಾಂತಿ 139/6). ರಾಜಕುಮಾರನು ಇದರ ಮಗುವನ್ನು ಕೊಂದು ಹಾಕಿದ್ದನು. ಆದುದರಿಂದ ಇದೂ ಕೂಡ ರಾಜಕುಮಾರನ ಕಣ್ಣುಗಳನ್ನು ಒಡೆದು ಹಾಕಿತು (ಶಾಂತಿ 139/13–20). ರಾಜಭವನ ವನ್ನು ಬಿಟ್ಟುಹೋಗುವ ಸಮಯದಲ್ಲಿ ಪೂಜನೀ ರಾಜಾ ಬ್ರಹ್ಮದತ್ತನೊಂದಿಗೆ ಸಂವಾದ ಮಾಡಿ ದುದು (ಶಾಂತಿ 139/21–11).

**ಪೂತನಾ** – (1) ಒಬ್ಬ ರಾಕ್ಷಸಿ. ಇವಳು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟಳು (ಸಭಾ 38/29).
(2) (ಪೂತನಾಗ್ರಹ) ಪೂತನಾ ಎಂಬ ಹೆಸರಿನ ರಾಕ್ಷಸಿ. ಇವಳು ಬಾಲಕರಿಗೆ ಗ್ರಹರೂಪಳು. ಇವಳು ಸ್ಕಂದನೊಂದಿಗೆ ಇರುವವಳು (ವನ 230/27). ಇದೇ ಪೂತನಾ ಸ್ಕಂದನ ಅನುಚರಿ ಮಾತೃಕೆಯರಲ್ಲೂ ಗಣಿಸಲ್ಪಡುತ್ತಾಳೆ (ಶಲ್ಯ 46/16).

**ಪೂತಿಕಾ** – ಒಂದು ಬಳ್ಳಿ, ಇದು ಸೋಮ ಲತೆಯ ಸ್ಥಾನದಲ್ಲಿ; ಯಜ್ಞದಲ್ಲಿ ಉಪಯುಕ್ತ ವಾಗಿದೆ (ವನ 35/33).

**ಪೂರಣ** – ಒಬ್ಬ ಪ್ರಾಚೀನ ಋಷಿ. ಈತ ಶರಶಯ್ಯೆಯಲ್ಲಿರುವ ಭೀಷ್ಮನ ಬಳಿಗೆ ಬಂದಿದ್ದನು.

**ಪೂರು** – (1) ಒಬ್ಬ ಪ್ರಾಚೀನ ರಾಜ (ಆದಿ 1/232). ಈತ ಯಯಾತಿಯ ಮೂಲಕ 'ಶರ್ಮಿಷ್ಠೆ'ಯ ಗರ್ಭದಿಂದ ಹುಟ್ಟಿದವನು (ಆದಿ 75/35; ಆದಿ 83/10). (ಈತ ಪೌರವ ವಂಶ ಪ್ರವರ್ತಕ ಆದಿ ಪುರುಷನಾಗಿದ್ದನು.) ಇವನಿಂದ ತನ್ನ ತಂದೆಗೆ ಯೌವನದ ದಾನ ಮತ್ತು ಆತನ ವೃದ್ಧಾವಸ್ಥೆಯ ಗ್ರಹಣ (ಆದಿ 75/43–44; ಆದಿ 84/34). ಇವನಿಂದ ಹಿರಿಯರ ಆಜ್ಞಾ ಪಾಲನೆಯ ಮಹಿಮೆಯ ವರ್ಣನೆ (ಆದಿ 84/30–31). ಪ್ರಜೆಗಳು ಅನುಮೋದಿಸಿದ ಬಳಿಕ ಯಯಾತಿಯ ಮೂಲಕ ಇವನು ರಾಜ್ಯಾಭಿಷಿಕ್ತ ನಾದುದು (ಆದಿ 85/32). ಈತನಿಂದ ಕೌಸಲ್ಯಾ (ಪೌಷ್ಟಿ) ಎಂಬ ಪತ್ನಿಯ ಗರ್ಭದಲ್ಲಿ ಜನ ಮೇಜಯ (ಪ್ರವೀರ) ಈಶ್ವರ ಮತ್ತು ರೌದ್ರಾಶ್ವರ ಜನ್ಮವಾಯಿತು. ಇವನ ವಂಶದ ಸಂಕ್ಷಿಪ್ತ ವರ್ಣನೆ (ಆದಿ 94). ಇವನ ವಂಶದ ವಿಸ್ತಾರ ಪೂರ್ವಕ ವರ್ಣನೆ (ಆದಿ 95). ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯ ಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/8). ಇಂದ್ರನ ವಿಮಾನದಲ್ಲಿ ಕುಳಿತು ಕೌರವ ರೊಂದಿಗೆ ನಡೆಯುತ್ತಿರುವ ಅರ್ಜುನನ ಯುದ್ಧ ವನ್ನು ನೋಡಲು ಬಂದಿದ್ದನು (ವಿರಾಟ 56/10). ಮಾಂಧಾತಾನಿಂದ ಇವನ ಪರಾಜಯ (ದ್ರೋಣ 62/10). ಯಯಾತಿಯಿಂದ ಇವನಿಗೆ ಖಡ್ಗ ಪ್ರಾಪ್ತಿ (ಶಾಂತಿ 166/74). ಅಗಸ್ತ್ಯನ ಕಮಲಗಳ ಅಪಹಾರ ನಡೆದಾಗ ಶಪಥ ಮಾಡಿದುದು (ಅನು 94/22). ಇವನು ಮಾಂಸಭಕ್ಷಣೆಯನ್ನು ನಿಷೇಧಿಸಿ, ಪರಾವರತತ್ತ್ವದ ಜ್ಞಾನ ಪಡೆದಿದ್ದನು (ಅನು 115/59).
(2) ಅರ್ಜುನನ ಸಾರಥಿ. ಇವನಿಗೆ ರಾಜಸೂಯ ಯಜ್ಞದಲ್ಲಿ ಅನ್ನಸಂಗ್ರಹ ಕಾರ್ಯದಲ್ಲಿ ತತ್ಪರ ನಾಗಿರುವಂತೆ ಆದೇಶ ದೊರಕಿತ್ತು (ಸಭಾ 33/30).

**ಪೂರ್ಣ** – (1) ವಾಸುಕಿ ಕುಲೋತ್ಪನ್ನ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/5).
(2) ಕಶ್ಯಪನ ಪತ್ನಿ ಪ್ರಾಧಾ ಎಂಬವಳಲ್ಲಿ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/46).

**ಪೂರ್ಣಭದ್ರ** – ಕಶ್ಯಪವಂಶದ ಒಬ್ಬ ಪ್ರಮುಖ ನಾಗ (ಆದಿ 35/12).

**ಪೂರ್ಣಮುಖ** – ಧೃತರಾಷ್ಟ್ರನ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/16).

**ಪೂರ್ಣಾ** – ಪಂಚಮೀ, ದಶಮೀ ಮತ್ತು ಪಂಚದಶೀ ತಿಥಿಗಳ ಹೆಸರು ಪೂರ್ಣಾ ಎಂಬ ಪಂಚಮೀತಿಥಿಯಲ್ಲಿ ಯುಧಿಷ್ಠಿರನ ಜನ್ಮ (ಆದಿ 122/6).

**ಪೂರ್ಣಾಂಗದ** – ಧೃತರಾಷ್ಟ್ರ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/16).

**ಪೂರ್ಣಾಯು** – ಒಬ್ಬ ದೇವಗಂಧರ್ವ. ಇವನು ಕಶ್ಯಪನಪತ್ನಿ ಪ್ರಾಧಾ ಎಂಬವಳ ಪುತ್ರನಾಗಿದ್ದನು (ಆದಿ 65/46).

**ಪೂರ್ವಚಿತ್ತಿ** – ಒಬ್ಬ ಶ್ರೇಷ್ಠ ಅಪ್ಸರೆ. ಈಕೆ ಸರ್ವಶ್ರೇಷ್ಠ ಆರು ಅಪ್ಸರೆಯರಲ್ಲಿ ಒಬ್ಬಳು (ಆದಿ 74/68). ಅರ್ಜುನನ ಜನ್ಮೋತ್ಸವಕ್ಕೆ ಬಂದು, ನೃತ್ಯ ಮತ್ತು ಗಾಯನ ಮಾಡಿದ ಹತ್ತು ಮಂದಿ ಪ್ರಖ್ಯಾತ ಅಪ್ಸರೆಯರಲ್ಲೂ ಈಕೆ ಒಬ್ಬಳು (ಆದಿ 122/65). ಸ್ವರ್ಗದಲ್ಲಿ ಅರ್ಜುನನ ಸ್ವಾಗತ ಸಮಾರಂಭದಲ್ಲಿ ಈಕೆ ನೃತ್ಯಮಾಡಿದ್ದಳು (ವನ 43/29). ಮಲಯಪರ್ವತದ ಮೇಲೆ ಶುಕ ದೇವನ ಉತ್ತಮಗತಿಯನ್ನು ಕಂಡು ಇವಳು ಆಶ್ಚರ್ಯಚಕಿತಳಾಗಿದ್ದಳು. ಮತ್ತು ಈ ಕುರಿತು ಹಾರ್ದಿಕ ಉದ್ಗಾರವನ್ನು ಪ್ರಕಟಿಸಿದ್ದಳು (ಶಾಂತಿ 332/21–24).

**ಪೂರ್ವದಿಶಾ** – ನಾಲ್ಕು ದಿಕ್ಕುಗಳಲ್ಲಿ ಒಂದು. ಇದರ ವಿಶೇಷ ವರ್ಣನೆ (ಉದ್ಯೋಗ 108).

**ಪೂರ್ವಪಾಲೀ** – ಒಬ್ಬ ಪ್ರಾಚೀನ ರಾಜ. ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲ್ಪಟ್ಟಿತ್ತು (ಉದ್ಯೋಗ 4/17).

**ಪೂರ್ವಾಭಿರಾಮಾ** – ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/22).

**ಪೂಷಣಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

**ಪೂಷಾ** – (1) ದ್ವಾದಶಾದಿತ್ಯರಲ್ಲಿ ಒಬ್ಬ (ಆದಿ 65/15). ಇವನು ಅರ್ಜುನನ ಜನ್ಮೋತ್ಸವಕ್ಕೆ ಬಂದಿದ್ದನು (ಆದಿ 122/67). ಖಾಂಡವವನ ಯುದ್ಧಕ್ಕೆ ಇವನ ಆಗಮನ; ಶ್ರೀಕೃಷ್ಣ ಮತ್ತು ಅರ್ಜುನನ ಮೇಲೆ ಇವನ ಆಕ್ರಮಣ (ಆದಿ 226/35). ಭಗವಾನ್ ಶಂಕರನು ಇವನ ಹಲ್ಲು ಮುರಿದಿದ್ದನು (ದ್ರೋಣ 202/49; ಸೌಪ್ತಿಕ 18/16). ಇವನಿಂದ ಸ್ಕಂದನಿಗೆ ಪಾಣೀತಕ ಮತ್ತು ಕಾಲಿಕ ಎಂಬ ಇಬ್ಬರು ಪಾರ್ಷದರ ದಾನ (ಶಲ್ಯ 45/43–44). ಇವನು ಘೃತ ದಾನದಿಂದ ಸಂತುಷ್ಟನಾಗುತ್ತಾನೆ (ಅನು 65/7). (2) ಸೂರ್ಯದೇವನ ಒಂದು ಹೆಸರು (ವನ 3/16).

**ಪೃತನಾ** – ಸೇನೆಯ ಪರಿಮಾಣ ವಿಶೇಷ. ಮೂರು ವಾಹಿನಿ (ಆದಿ 2/21).

**ಪೃಥಾ** – ಶೂರಸೇನನ ಪುತ್ರಿ. ಅವಳು ಪ್ರಪಂಚದಲ್ಲಿ ಅನುಪಮ ಸುಂದರಿಯಾಗಿದ್ದಳು. ಈಕೆ ವಸುದೇವನ ಅಕ್ಕ (ಆದಿ 67/129).

**ಪೃಥಾಶ್ವ** – ಯಮರಾಜನ ಸಭೆಯಲ್ಲಿದ್ದು ಸೂರ್ಯಪುತ್ರ ಯಮನ ಉಪಾಸನೆ ಮಾಡುವ ಒಬ್ಬ ಪ್ರಾಚೀನ ರಾಜ (ಸಭಾ 8/19).

**ಪೃಥು** – (1) ಅಷ್ಟವಸುಗಳಲ್ಲಿ ಒಬ್ಬ (ಆದಿ 99/11).

(2) ವೃಷ್ಣಿವಂಶದ ಒಬ್ಬ ಕ್ಷತ್ರಿಯ. ಇವನು ದ್ರೌಪದಿ ಸ್ವಯಂವರಕ್ಕೆ ಬಂದಿದ್ದನು (ಆದಿ 185/18). ಈತ ರೈವತಕ ಪರ್ವತದ ಉತ್ಸವದಲ್ಲಿ ಸಮ್ಮಿಲಿತನಾಗಿದ್ದನು (ಆದಿ 218/10).

(3) ಮಹಾರಾಜ ವೇನನ ಪುತ್ರ, ಮೊದಲನೇ ರಾಜ. ಇವನಿಂದ ಅತ್ರಿಮುನಿಗೆ ಧನದಾನ (ವನ 185/8–35). ಸಂಜಯನಿಗೆ ಹೇಳುತ್ತಾ ನಾರದ ನಿಂದ ಇವನ ಚರಿತ್ರೆಯ ವರ್ಣನೆ (ಶಾಂತಿ 29/137–144). ಇವನ ಜನನ ಮತ್ತು ಚರಿತ್ರೆಯ ವಿಸ್ತೃತ ವರ್ಣನೆ (ಶಾಂತಿ 59/98–128). ಇವನು ಪ್ರಾಚೀನ ಕಾಲದಲ್ಲಿ ಪೃಥ್ವಿಯ ಶಾಸಕ ನಾಗಿದ್ದನು. ಆದರೆ ಕಾಲಪೀಡಿತನಾಗಿ ಪೃಥ್ವಿ ಯನ್ನು ಬಿಟ್ಟು ಪರಲೋಕವಾಸಿಯಾದನು (ಶಾಂತಿ 227/49–56). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/65).

(4). ಇಕ್ಷ್ವಾಕುವಂಶದ ಮಹಾರಾಜ ಅನೇನಸ್ಸಿನ ಪುತ್ರ, ಇವನ ಪುತ್ರನ ಹೆಸರು ವಿಷ್ಟಗಶ್ವನೆಂದಾಗಿತ್ತು (ವನ 202/2–3).

**ಪೃಥುಲಾಕ್ಷ** – ಒಬ್ಬ ರಾಜ. ಇವನು

ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10).

**ಪೃಥುಲಾಶ್ವ** – ಒಬ್ಬ ರಾಜ. ಇವನು ಯಮ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/22).

**ಪೃಥುವಸ್ತ್ರಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಪೃಥುವೇಗ** – ಒಬ್ಬ ರಾಜ. ಈತ ಯಮಸಭೆ ಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

**ಪೃಥುಶ್ರವಾ** – (1) ಮಹಾಭೌಮಕುಮಾರ ಅಯುತನಾಯೀ ಎಂಬವನ ಪತ್ನಿ ಕಾಮಾಳ ತಂದೆ (ಆದಿ 95/20–21). ಈತ ಯಮಸಭೆ ಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

(2) ಒಬ್ಬ ಪ್ರಾಚೀನ ಋಷಿ. ಇವನು ಅಜಾತ ಶತ್ರು ಯುಧಿಷ್ಠಿರನನ್ನು ಬಹಳ ಗೌರವಿಸುತ್ತಿದ್ದನು (ವನ 26/22–25).

(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

(4) ಒಬ್ಬ ನಾಗ. ಬಲರಾಮನ ಸ್ವಾಗತಕ್ಕಾಗಿ ಇವನು ಪ್ರಭಾಸಕ್ಷೇತ್ರಕ್ಕೆ ಬಂದಿದ್ದನು.

**ಪೃಥೂದರ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಕಾರ್ತಿಕೇಯ ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಎಲ್ಲಾ ಪಾಪಗಳು ನಷ್ಟವಾಗು ತ್ತವೆ. ಈ ತೀರ್ಥಸೇವೆಮಾಡಿದ ಮನುಷ್ಯನಿಗೆ ಅಶ್ವಮೇಧ ಯಜ್ಞದಫಲ ಮತ್ತು ಸ್ವರ್ಗಲೋಕದ ಪ್ರಾಪ್ತಿಯಾಗುತ್ತದೆ (ವನ 83/141–144). ಈ ತೀರ್ಥದ ಮಹಿಮೆ (ಶಲ್ಯ 39/28–33).

**ಪೃಥಿವೀ ತೀರ್ಥ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನದ ಫಲ ಸಿಗುತ್ತದೆ (ವನ 83/13).

**ಪೃಥ್ವೀ** – (ನೋಡಿರಿ ಭೂಮಿ).

**ಪ್ರಶ್ನಿ** – ಒಬ್ಬ ಪ್ರಾಚೀನ ಮಹರ್ಷಿ. ಇವನು ದ್ರೋಣಾಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸಲು ಹೇಳಿದ್ದನು (ದ್ರೋಣ 190/34–40). ಇವನು ಸ್ವಾಧ್ಯಾಯದ ಮೂಲಕ ಸ್ವರ್ಗಪ್ರಾಪ್ತಿ ಮಾಡಿಕೊಂಡನು (ಶಾಂತಿ 26/7).

**ಪ್ರಶ್ನಿಗರ್ಭ** – ಶ್ರೀಕೃಷ್ಣನ ಒಂದು ಹೆಸರು. ಅದರ ಅರ್ಥ– ಅನ್ನ, ವೇದ, ಜಲ, ಅಮೃತ ಇವುಗಳನ್ನು ಪ್ರಶ್ನಿ ಎನ್ನುತ್ತಾರೆ. ಇವು ಸದಾ ಭಗವಂತನ ಗರ್ಭದಲ್ಲಿರುತ್ತವೆ. ಆದುದರಿಂದ ಈತನ ಹೆಸರು ಪಶ್ನಿಗರ್ಭನೆಂದಾಗಿದೆ. ಈ ಹೆಸರಿನ ಉಚ್ಚಾರಣೆಯಿಂದ ತ್ರಿತನೆಂಬ ಮುನಿ ಕೂಪದಿಂದ ಹೊರಗೆ ಬಂದಿದ್ದನು (ಶಾಂತಿ 341/45–47).

**ಪೃಷತ** – ಪಾಂಚಾಲದೇಶದ ಒಬ್ಬ ರಾಜ. ಇವನು ಮಹರ್ಷಿ ಭರದ್ವಾಜನ ಮಿತ್ರ ಹಾಗೂ ದ್ರುಪದನ ತಂದೆಯಾಗಿದ್ದನು (ಆದಿ 129/41).

**ಪೃಷದಶ್ವ** – ಒಬ್ಬ ಪ್ರಾಚೀನ ರಾಜ. ಇವನಿಗೆ ರಾಜಾ ಅಷ್ಟಕನಿಂದ ಖಡ್ಗ ಪ್ರಾಪ್ತಿಯಾಗಿತ್ತು (ಶಾಂತಿ 166/80). ಈತ ಯಮರಾಜನ ಸಭೆ ಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/13).

**ಪೃಷಧ್ರ** – ವೈವಸ್ವತ ಮನುವಿನ ಒಂಭತ್ತನೇ ಮಗ (ಆದಿ 75/16). ಇವನು ಪ್ರಾಯಃ ಸಾಯಂಕಾಲಗಳಲ್ಲಿ ಕೀರ್ತಿಸಲು ಯೋಗ್ಯರಾದ ರಾಜರುಗಳಲ್ಲಿ ಒಬ್ಬ. ಇವನ ಕೀರ್ತನೆಯಿಂದ ಧರ್ಮದ ಫಲ ಪ್ರಾಪ್ತವಾಗುತ್ತದೆ (ಅನು 165/58–60). ಇವನು ಕುರುಕ್ಷೇತ್ರದಲ್ಲಿ ತಪಸ್ಸು ಮಾಡಿ ಸ್ವರ್ಗ ಪಡೆದನು (ಆಶ್ರಮ 20/11).

(2) ದ್ರುಪದನ ಒಬ್ಬ ಮಗ. ಅಶ್ವತ್ಥಾಮನಿಂದ ಈತನ ವಧೆಯಾಗಿತ್ತು (ದ್ರೋಣ 156/183).

**ಪೈಙ್ಗ್ಯ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/17).

**ಪೈಜವನ** – ಒಬ್ಬ ಶೂದ್ರ. ಇವನು ಐಂದ್ರಾಗ್ನ ಯಜ್ಞವಿಧಿಯಿಂದ ಮಂತ್ರಹೀನ ಯಜ್ಞಮಾಡಿ, ಅದರ ದಕ್ಷಿಣಾರೂಪದಲ್ಲಿ ಒಂದು ಲಕ್ಷ ಪೂರ್ಣ ಪಾತ್ರ ದಾನ ಮಾಡಿದ್ದನು (ಶಾಂತಿ 60/39).

**ಪೈಠಕ** – ಒಬ್ಬ ಅಸುರ. ಶ್ರೀಕೃಷ್ಣನಿಂದ ಅವನ ವಧೆ ಮಾಡಲ್ಪಟ್ಟಿತ್ತು (ಸಭಾ 38/29).

**ಪೈಲ** – ಒಬ್ಬ ಪ್ರಾಚೀನ ಋಷಿ. ಇವನು ವ್ಯಾಸರ ಶಿಷ್ಯ. ವ್ಯಾಸ ಇವನಿಗೆ ಎಲ್ಲಾ ವೇದಗಳ ಹಾಗೂ ಮಹಾಭಾರತದ ಅಧ್ಯಯನ ಮಾಡಿಸಿ ದ್ದನು (ಆದಿ 63/89–90). ಇವನು ವಸುವಿನ ಪುತ್ರ. ಇವನು ಧೌಮ್ಯನೊಂದಿಗೆ ಯುಧಿಷ್ಠಿರನ ರಾಜಸೂಯ ಯಜ್ಞದ ಹೋತೃವಾಗಿದ್ದನು (ಸಭಾ 33/35). ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಇತರ ಋಷಿಗಳೊಂದಿಗೆ ಮಹಾತ್ಮಾ

ಪೈಲನೂ ಆಗಮಿಸಿದ್ದನು (ಶಾಂತಿ 47/6).

**ಪೈಲಗರ್ಗ** – ಒಬ್ಬ ಮುನಿ. ಇವನ ಆಶ್ರಯದಲ್ಲಿ ಕಾಶೀರಾಜಕುಮಾರಿ ಅಂಬೆ ತಪಸ್ಸುಮಾಡಿದ್ದಳು (ಉದ್ಯೋಗ 186/28).

**ಪೈಲಗರ್ಗಾಶ್ರಮ** – ಒಂದು ತೀರ್ಥ. ಇಲ್ಲಿ ಕಾಶೀ ರಾಜಕುಮಾರಿ ಅಂಬೆ ಕಠೋರವ್ರತವನ್ನಾಶ್ರಯಿಸಿ ಸ್ನಾನಮಾಡಿದ್ದಳು.(ಉದ್ಯೋಗ 186/28).

**ಪೈಶಾಚ** – ವಿವಾಹದ ಒಂದು ಭೇದ. ಮನೆ ಯವರು ನಿದ್ರಿಸಿದ್ದಾಗ, ಅಥವಾ ಎಚ್ಚರವಿಲ್ಲದಾಗ ಕನ್ಯೆಯನ್ನು ಕದ್ದು ತೆಗೆದುಕೊಂಡು ಹೋಗುವುದು ಪೈಶಾಚ ವಿವಾಹವಾಗಿದೆ. ಇದು ಯಾವಾಗಲೂ ಎಲ್ಲಾ ವರ್ಣದವರಿಗೂ ನಿಷಿದ್ಧವಾಗಿದೆ (ಆದಿ 73/9–12).

**ಪೋತಕ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/11).

**ಪೌಣ್ಡ್ರ** – (1) ನಂದಿನಿಯ ಪಾರ್ಶ್ವಭಾಗದಿಂದ ಹುಟ್ಟಿದ ಒಂದು ಮ್ಲೇಚ್ಛಜಾತಿ (ಆದಿ 74/37).

(2) ಒಂದು ದೇಶ ಮತ್ತು ಅಲ್ಲಿರುವ ರಾಜನೇ ಮೊದಲಾದ ನಿವಾಸಿಗಳು. ಪೌಂಡ್ರದೇಶದ ರಾಜ ದ್ರೌಪದೀಸ್ವಯಂವರಕ್ಕೆ ಬಂದಿದ್ದನು (ಆದಿ 186/15). ಈ ದೇಶವನ್ನು ಶ್ರೀಕೃಷ್ಣ ಸೋಲಿಸಿದ್ದನು (ಸಭಾ 38/29). ಪೌಂಡ್ರ ದೇಶದ ಜನರು ರಾಜಸೂಯಯಜ್ಞಕ್ಕೆ ಬಂದ ವರ್ಣನೆ (ವನ 51/22). ಯುಧಿಷ್ಠಿರನ ಕಡೆಯಿಂದ ಆತನೊಂದಿಗೆ ಇವರು ಕ್ರೌಂಚವ್ಯೂಹದಲ್ಲಿ ನಿಂತಿದ್ದರು (ಭೀಷ್ಮ 50/48). ಕರ್ಣನು ಈ ದೇಶವನ್ನು ಗೆದ್ದಿದ್ದನು (ದ್ರೋಣ 4/8). ಶ್ರೀಕೃಷ್ಣನೂ ಇದರ ಮೇಲೆ ವಿಜಯ ಪಡೆದಿದ್ದನು (ದ್ರೋಣ 11/15). ಮಾಂಧಾತನ ರಾಜ್ಯದಲ್ಲಿ ಪೌಂಡ್ರ ಜಾತಿಯ ಜನರು ವಾಸಿಸುತ್ತಿದ್ದರು (ಶಾಂತಿ 65/14). ಪೌಂಡ್ರರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರ ಕೋಪದಿಂದ ಶೂದ್ರತ್ವ ಪಡೆದರು (ಅನು 35/17–18).

(3) ಭೀಮಸೇನನ ಶಂಖದ ಹೆಸರು. ಯುದ್ಧಾ ರಂಭದ ಮೊದಲು ಭೀಮನು ಈ ಶಂಖವನ್ನೂ ದಿದ್ದನು (ಭೀಷ್ಮ 25/15). ದುರ್ಯೋಧನನು ಕೊಲ್ಲಲ್ಪಟ್ಟಾಗ ಭೀಮಕರ್ಮನಾದ ಭೀಮನು ಪೌಂಡ್ರವೆಂಬ ಮಹಾಶಂಖದ ಧ್ವನಿಮಾಡಿದ್ದನು (ಶಲ್ಯ 61/71).

**ಪೌಂಡ್ರಕ** – ಪುಂಡ್ರದೇಶದ ರಾಜಾ ವಾಸುದೇವ. ಇವನು ವಂಗ, ಪುಂಡ್ರ ಮೊದಲಾದ ಅನೇಕ ದೇಶಗಳ ಶಾಸಕನಾಗಿದ್ದನು ಮತ್ತು ಜರಾಸಂಧ ನನ್ನು ಕೂಡಿಕೊಂಡಿದ್ದನು (ಸಭಾ 14/20). ರಾಜಸೂಯಯಜ್ಞಕಾಲದಲ್ಲಿ ಭೀಮಸೇನನಿಂದ ಇವನ ಪರಾಜಯ (ಸಭಾ 30/22). ಇವನು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಉಡುಗೊರೆ ತೆಗೆದುಕೊಂಡು ಬಂದಿದ್ದನು (ಸಭಾ 52/18).

**ಪೌಣ್ಡ್ರ ಮಾತ್ಸ್ಯಕ** – ಒಬ್ಬ ಕ್ಷತ್ರಿಯ ರಾಜ. ಇವನು ದನಾಯುವಿನ ಪುತ್ರ ಮತ್ತು ವೀರನೆಂಬ ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/43).

**ಪೌದನ್ಯ** – ಒಂದು ಪ್ರಾಚೀನ ನಗರ. ಇದನ್ನು ಸೌದಾಸಪುತ್ರ ಅಶ್ಮಕನು ಸ್ಥಾಪಿಸಿದ್ದನು (ಆದಿ 176/47). (ಕೆಲವು ಮಂದಿ ಆಧುನಿಕ ವಿಚಾರ ವಾದಿಗಳ ಅಭಿಪ್ರಾಯಪ್ರಕಾರ ಗೋದಾವರಿಯ ಉತ್ತರ ದಡದಲ್ಲಿರುವ 'ಪೈಥಾನ'ವೆಂಬ ನಗರವೇ ಪೌದನ್ಯವಾಗಿದೆ.).

**ಪೌನರ್ಭವ** – ಆರು ರೀತಿಯ ಬಂಧು ದಾಯಾದರಲ್ಲಿ ಒಬ್ಬ. ಎರಡನೇ ಬಾರಿ ವಿವಾಹಿತ ಮಹಿಳೆಯಿಂದ ಹುಟ್ಟಿದ ಪುತ್ರ (ಆದಿ 119/33).

**ಪೌರವ** – (1) ಒಬ್ಬ ರಾಜರ್ಷಿ. ಇವನು ಶರಭನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/27–28). ಇವನು ಪರ್ವತೀಯ ರಾಜನಾಗಿದ್ದನು. ಅರ್ಜುನನಿಂದ ಪರಾಜಿತನಾಗಿ ದ್ದನು (ಸಭಾ 27/14–15). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರಮಾಡಲ್ಪಟ್ಟಿತ್ತು (ಉದ್ಯೋಗ 4/14). ದುರ್ಯೋಧನನ ಸೇನೆಯಲ್ಲಿ ಇವನು ಒಬ್ಬ ಮಹಾರಥಿಯಾಗಿದ್ದನು (ಉದ್ಯೋಗ 168/19). ಧೃಷ್ಟಕೇತುವಿನೊಂದಿಗೆ ಇವನ ದ್ವಂದ್ವ ಯುದ್ಧ (ಭೀಷ್ಮ 116/13–14). ಇವನು ಅಭಿಮನ್ಯುವಿನೊಂದಿಗೆ ಯುದ್ಧಮಾಡಿದನು ಮತ್ತು ಅಭಿಮನ್ಯುವು ಇವನ ಜುಟ್ಟುಹಿಡಿದು ಎಳೆದಿದ್ದನು (ದ್ರೋಣ 14/50–60). ಮಹಾಭಾರತ ಯುದ್ಧ ದಲ್ಲಿ ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ಕರ್ಣ 5/35).

(2) ಪೂರುವಿನ ವಂಶದಲ್ಲಿ ಹುಟ್ಟಿದ ಕೌರವ–

ಪಾಂಡವರು ಇತ್ಯಾದಿ (ಆದಿ 172/50).
(3) ಅಂಗದೇಶದ ಒಬ್ಬ ಪ್ರಾಚೀನ ರಾಜ. ನಾರದನಿಂದ ಸೃಂಜಯನ ಸಮಕ್ಷಮದಲ್ಲಿ ಅಶ್ವಮೇಧಯಜ್ಞದಲ್ಲಿ ಇವನ ದಾನದ ವರ್ಣನೆ (ದ್ರೋಣ 57).
(4) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/55).

**ಪೌರವಕ** – ಕ್ಷತ್ರಿಯರ ಒಂದು ಜಾತಿ. ಈ ಜಾತಿಯ ಜನರು ಯುಧಿಷ್ಠಿರನೊಂದಿಗೆ ಕ್ರೌಂಚ ವ್ಯೂಹದಲ್ಲಿ ನಿಂತಿದ್ದರು (ಭೀಷ್ಮ 50/48).

**ಪೌರಿಕ** – ಪುರಿಕಾ ನಗರದ ಒಬ್ಬ ರಾಜ. ಈತ ಪಾಪದಿಂದಾಗಿ ನರಿಯ ಜನ್ಮವೆತ್ತಬೇಕಾಯಿತು (ಶಾಂತಿ 111/3–4).

**ಪೌರೋಗವ** – ಪಾಕಶಾಲೆಯ ಅಧ್ಯಕ್ಷನ ಹೆಸರು (ವಿರಾಟ 2/1).

**ಪೌಲಸ್ತ್ಯ** – ಪುಲಸ್ತ್ಯ ಕುಲದ ರಾಕ್ಷಸರು. ಇವರು ದುರ್ಯೋಧನನ ಸಹೋದರರ ರೂಪದಲ್ಲಿ ಜನ್ಮವೆತ್ತಿದ್ದರು (ಆದಿ 67/89–91).

**ಪೌಲೋಮ** – (1) ಪುಲೋಮೆಯ ಪುತ್ರ. ಹಿರಣ್ಯಪುರದ ಸ್ವಾಮಿ ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಅವನಿಂದ ಇವನ ಸಂಹಾರ (ವನ 172/16–55).
(2) ದಕ್ಷಿಣ ಸಮುದ್ರ ಸಮೀಪದ ಒಂದು ತೀರ್ಥ. ಐದು ನಾರೀ ತೀರ್ಥಗಳಲ್ಲಿ ಒಂದು (ಆದಿ 215/3). ಅರ್ಜುನನಿಂದ, ಇಲ್ಲಿ ಬ್ರಾಹ್ಮಣ ಶಾಪದಿಂದ ಮೊಸಳೆಯಾಗಿ ವಾಸಿಸುತ್ತಿದ್ದ ಅಪ್ಸರೆ (ವರ್ಗಾ ಎಂಬವಳ ಸಖಿ).ಯ ಉದ್ಧಾರವಾಯಿತು (ಆದಿ 216/21–22).

**ಪೌಲೋಮ ಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 4 ರಿಂದ 12).

**ಪೌಲೋಮೀ** – ಪುಲೋಮ ದಾನವನ ಪುತ್ರಿ. ದೇವರಾಜ ಇಂದ್ರನ ಪತ್ನಿ ಮತ್ತು ಜಯಂತನ ತಾಯಿಯಾದ ಶಚೀ (ಆದಿ 113/4). (ನೋಡಿರಿ – ಶಚೀ).

**ಪೌಷಮಾಸ** – (ಹನ್ನೆರಡು ತಿಂಗಳುಗಳಲ್ಲಿ ಒಂದು ಯಾವ ತಿಂಗಳ ಪೂರ್ಣಿಮೆಗೆ ಪುಷ್ಯ ನಕ್ಷತ್ರದ ಯೋಗವಿರುತ್ತದೋ ಅದನ್ನು 'ಪೌಷ'– ವೆನ್ನುತ್ತಾರೆ. ಇದು ಮಾರ್ಗಶೀರ್ಷದ ಅನಂತರ ಮತ್ತು ಮಾಘದ ಮೊದಲು ಬರುತ್ತದೆ.) ಪೌಷ ಮಾಸದಲ್ಲಿ ಪ್ರತಿ ದಿನ ಒಂದು ಬಾರಿ ಭೋಜನ ಮಾಡುವ ಮನುಷ್ಯ ಸೌಭಾಗ್ಯ ಶಾಲಿಯೂ, ದರ್ಶನೀಯನೂ, ಯಶಸ್ವಿಯೂ ಆಗಿರುತ್ತಾನೆ (ಅನು 106/20). ಪೌಷಮಾಸದ ದ್ವಾದಶಿ ಯಂದು ಉಪವಾಸ ಪೂರ್ವಕ ಭಗವಾನ್ ನಾರಾಯಣನ ಪೂಜೆ ಮಾಡುವುದರಿಂದ ವಾಜಪೇಯ ಯಜ್ಞದ ಫಲ ಸಿಗುತ್ತದೆ (ಅನು 109/4). ಪೌಷಮಾಸದ ಶುಕ್ಲಪಕ್ಷದ ಯಾವ ತಿಥಿಯಲ್ಲಿ ರೋಹಿಣೀ ನಕ್ಷತ್ರದ ಯೋಗ ವಿರುತ್ತದೋ, ಆ ದಿನದ ರಾತ್ರಿ ಸ್ನಾನಾದಿಗಳಿಂದ ಶುದ್ಧನಾಗಿ, ಏಕವಸ್ತ್ರಧಾರಣೆ ಮಾಡಿ ಶ್ರದ್ಧೆ ಮತ್ತು ಏಕಾಗ್ರತೆಯಿಂದ, ಆಕಾಶದ ಕೆಳಗೆ ವಿಶಾಲವಾದ ಬಯಲಿನಲ್ಲಿ ನಿದ್ದೆ ಮಾಡಬೇಕು. ಮತ್ತು ಚಂದ್ರಮನ ಕಿರಣಗಳ ಪಾನಮಾಡುತ್ತಿರಬೇಕು. ಹೀಗೆ ಮಾಡುವುದರಿಂದ ಅವನಿಗೆ ಮಹಾನ್ ಯಜ್ಞದ ಫಲಸಿಗುತ್ತದೆ (ಅನು 126/48–49).

**ಪೌಷ್ಟೀ** – ರಾಜಾ ಪೂರುವಿನ ಪತ್ನಿ. ಇವಳ ಗರ್ಭದಿಂದ ಪೂರುವಿಗೆ ಪ್ರವೀರ, ಈಶ್ವರ ಮತ್ತು ರೌದ್ರಾಶ್ವರೆಂಬ ಮೂವರು ಪುತ್ರರು ಜನಿಸಿದ್ದರು (ಆದಿ 94/5). ಈಕೆಯ ಇನ್ನೊಂದು ಹೆಸರು ಕೌಸಲ್ಯಾ ಎಂದಾಗಿತ್ತು (ಆದಿ 95/11).

**ಪೌಷ್ಯ** – ಒಬ್ಬ ಕ್ಷತ್ರಿಯ ರಾಜ. ಇವನು ಆಚಾರ್ಯ ವೇದನನ್ನು ಪುರೋಹಿತನಾಗಿ ಮಾಡಿಕೊಂಡಿದ್ದನು. ಇವನ ಕಥೆ (ಆದಿ 3/82–117). ಇವನ ರಾಣಿ ಉತ್ತಂಕಋಷಿಗೆ ಕುಂಡಲ ಗಳನ್ನು ಕೊಟ್ಟದ್ದು (ಆದಿ 3/111). ಇವನಿಂದ ಉತ್ತಂಕನಿಗೆ ಸಂತಾನಹೀನನಾಗಲು ಶಾಪ (ಆದಿ 3/117).

**ಪೌಷ್ಯಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 3).

**ಪ್ರಕಾಲನ** – ವಾಸುಕಿ ವಂಶದ ಒಬ್ಬ ನಾಗ. ಇವನು ಜನಮೇಜಯ ಸರ್ಪಯಜ್ಞದಲ್ಲಿ ದಗ್ಧ ನಾದನು (ಆದಿ 57–6).

**ಪ್ರಕಾಶ** – ಭೃಗುವಂಶದ ಒಬ್ಬ ಬ್ರಾಹ್ಮಣ. ಈತ ಗೃತ್ಸಮದ ವಂಶದ 'ತಮ'ನ ಪುತ್ರನಾಗಿದ್ದನು (ಅನು 30/63).

**ಪ್ರಗಂಡೀ** – ಪ್ರಾಕಾರದ ಮೇಲೆ ರಕ್ಷಣೆಯ ಸೈನಿಕರು ಕುಳಿತುಕೊಳ್ಳುವ ಸ್ಥಾನ (ಶಾಂತಿ 69/43).

**ಪ್ರಘಸ** – ರಾಕ್ಷಸ ಮತ್ತು ಪಿಶಾಚಿಗಳ ದಳ (ವನ 285/1–2).

**ಪ್ರಘಸಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/16).

**ಪ್ರಚೇತಾ** – ಪ್ರಾಚೀನ ಬರ್ಹಿಯ ಹತ್ತು ಪುತ್ರರು. ಇವರು ಋಷಿಗಳೂ ಪ್ರಜಾಪತಿಗಳೂ ಆಗಿದ್ದಾರೆ. ಇವರಿಂದಲೇ ಪ್ರಾಚೇತಸ ದಕ್ಷನ ಜನ್ಮವಾಯಿತು (ಅನು 147/25). ಇವರು ಕಂಡು ಮುನಿಯ ಪುತ್ರಿ ವಾರ್ಕ್ಷಿಯನ್ನು ವಿವಾಹವಾಗಿದ್ದರು (ಆದಿ 195/15). ಇವರು ಇಂದ್ರಸಭೆಯಲ್ಲಿ ಇರುತ್ತಾರೆ (ಸಭಾ 7/16). ಬ್ರಹ್ಮನ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾರೆ (ಸಭಾ 11/18). ಇವರು ಸ್ಕಂದನ ಜನ್ಮಕಾಲದಲ್ಲಿ ಅವನ ಬಳಿಗೆ ಬಂದಿದ್ದರು (ಶಲ್ಯ 45/10).

**ಪ್ರಜಾಗರ ಪರ್ವ** – ಉದ್ಯೋಗ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 33 ರಿಂದ 40).

**ಪ್ರಜಾಗರಾ** – ಒಬ್ಬ ಅಪ್ಸರೆ. ಇವಳು ಇಂದ್ರಸಭೆಯಲ್ಲಿ ಅರ್ಜುನನ ಸ್ವಾಗತ ಸಮಾರಂಭದಲ್ಲಿ ಗಾಯನನರ್ತನ ಮಾಡಿದ್ದಳು (ವನ 43/30).

**ಪ್ರಜಾಪತಿ** – (1) ಪ್ರಜೆಗಳನ್ನು ಸೃಷ್ಟಿಸುವವ ಮತ್ತು ಪಾಲಕನಾದ ದೇವಗುರು ಬ್ರಹ್ಮ (ಆದಿ 1/29–33). (ವಿಶೇಷ ನೋಡಿರಿ– 'ಬ್ರಹ್ಮಾ').

(2) ಮಹರ್ಷಿ ಕಶ್ಯಪ. ಇವನು ದೇವರಾಜ ಇಂದ್ರನ ಮೇಲೆ ಅನುಗ್ರಹಮಾಡುವಂತೆ ವಾಲಖಿಲ್ಯರೊಡನೆ ಪ್ರಾರ್ಥಿಸಿಕೊಂಡಿದ್ದನು (ಆದಿ 31/16–21). ಮಹಾಭಾರತದಲ್ಲಿ ಪ್ರಜಾಪತಿಗಳ ಇಪ್ಪತ್ತೊಂದು ಹೆಸರುಗಳು ಬಂದಿವೆ – ಬ್ರಹ್ಮಾ, ರುದ್ರ, ಮನು, ದಕ್ಷ, ಭೃಗು, ಧರ್ಮ, ತಪ, ಯಮ, ಮರೀಚಿ, ಅಂಗೀರಸ್, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಪರಮೇಷ್ಠೀ, ಸೂರ್ಯ, ಚಂದ್ರ, ಕರ್ದಮ, ಕ್ರೋಧ ಮತ್ತು ವಿಕ್ರೀತ. ಈ ಇಪ್ಪತ್ತೊಂದು ಮಂದಿ ಪ್ರಜಾಪತಿಗಳು ಆ ಪರಮಾತ್ಮನಿಂದಲೇ ಉತ್ಪನ್ನರಾದವರೆಂದು ಹೇಳಲಾಗಿದೆ ಮತ್ತು ಇವರು ಅದೇ ಪರಮಾತ್ಮನ ಸನಾತನ ಧರ್ಮಮರ್ಯಾದೆಯ ಪಾಲನೆ ಪೂಜೆಯನ್ನು ಮಾಡುತ್ತಾರೆ (ಶಾಂತಿ 334/35–37).

**ಪ್ರಜಾಪತಿಯ ಉತ್ತರವೇದೀ** – ತರಂತುಕ, ಅರಂತುಕ, ರಾಮಹ್ರದ, (ಪರಶುರಾಮಕುಂಡ). ಮತ್ತು ಮಚಕ್ರುಕ –ಇವುಗಳ ಮಧ್ಯವಿರುವ ಭೂಭಾಗ ಕುರುಕ್ಷೇತ್ರವೇ ಪ್ರಜಾಪತಿಯ ಉತ್ತರ ವೇದಿಯಾಗಿದೆ (ಶಲ್ಯ 53/24).

**ಪ್ರಜಾಪತಿವೇದೀ** – ಪ್ರತಿಷ್ಠಾನ ಪುರ (ಝೂಸೀ). ಸಹಿತವಾದ ಪ್ರಯಾಗ, ಕಂಬಲ, ಮತ್ತು ಅಶ್ವತರ ನಾಗ, ಹಾಗೂ ಭೋಗವತೀ ತೀರ್ಥ– ಇದು ಬ್ರಹ್ಮನ ವೇದಿಯಾಗಿದೆ (ವನ 85/76–77).

**ಪ್ರಣಿಧಿ** – ವಾಸಿಷ್ಠ ಬೃಹದ್ರಥನ ಅಂಶದಿಂದ ಹುಟ್ಟಿದ ಪಾಂಚಜನ್ಯನೆಂಬ ಅಗ್ನಿಯ ಪುತ್ರ (ವನ 220/9).

**ಪ್ರಣೀತ** – ಆರು ರೀತಿಯ ಬಂಧು ದಾಯಾದರಲ್ಲಿ ಒಬ್ಬ. ತನ್ನ ಪತ್ನಿಯ ಗರ್ಭದಿಂದ ಯಾವನಾದರೂ ಮಹಾಪುರುಷನ ಅನುಗ್ರಹದಿಂದ ಹುಟ್ಟಿದ ಪುತ್ರ (ಆದಿ 119/33).

**ಪ್ರತರ್ದನ** – ಕಾಶೀದೇಶದ ಒಬ್ಬ ಪ್ರಾಚೀನ ರಾಜ. ಇವನು ರಾಜಾಯಯಾತಿಯ ದೌಹಿತ್ರನಾಗಿದ್ದನು (ಆದಿ 93/13). ಯಯಾತಿ ಪುತ್ರಿ ಮಾಧವಿಯ ಗರ್ಭದಿಂದ ಕಾಶೀರಾಜ ದಿವೋದಾಸನ ಮೂಲಕ ಇವನ ಜನನವಾಗಿತ್ತು (ಉದ್ಯೋಗ 117/18; ಅನು 30/30). ಸ್ವರ್ಗದಿಂದ ಬೀಳುತ್ತಿದ್ದ ರಾಜಾ ಯಯಾತಿಯೊಂದಿಗೆ ಈತನ ಭೇಟಿ (ಆದಿ 86/5–6). ಯಯಾತಿಯೊಂದಿಗೆ ಇವನ ಮಾತುಕತೆ (ಆದಿ 92/14–18). ಇವನಿಂದ ಯಯಾತಿಗೆ ಪುಣ್ಯದಾನದ ಆಶ್ವಾಸನೆ (ಆದಿ 92/16). ಅಷ್ಟಕನೇ ಮೊದಲಾದ ರಾಜರೊಡನೆ ಈತನ ಸ್ವರ್ಗಗಮನ (ಆದಿ 93/164). ದೇವರ್ಷಿ ನಾರದನಿಂದ ಭವಿಷ್ಯದಲ್ಲಿ ಇವನು ಸ್ವರ್ಗದಿಂದ ಪತನ ಹೊಂದುವ ಕಾರಣದ ವರ್ಣನೆ (ವನ 198/5). ಇವನು ಯಯಾತಿಗೆ ತನ್ನ ಪುಣ್ಯಫಲವನ್ನಿತ್ತದ್ದು (ಉದ್ಯೋಗ 122/6–7). ಪರಾಜಿತ ರಾಜನ ಎಲ್ಲಾ ಧನವನ್ನು ತೆಗೆದುಕೊಂಡು ಹೋಗುವುದು (ಶಾಂತಿ 96/20). ಮಹಾರಾಜ ಶಿಬಿಯಿಂದ ಇವನಿಗೆ ಖಡ್ಗ ಪ್ರಾಪ್ತಿ (ಶಾಂತಿ 166/80). ಇವನಿಂದ ಬ್ರಾಹ್ಮಣನಿಗೆ ನೇತ್ರದಾನ (ಶಾಂತಿ 234/20). ಇವನಿಂದ ವೀತಹವ್ಯ ಪುತ್ರರ ವಧೆ (ಅನು 30/42–43). ವೀತಹವ್ಯನನ್ನು ಬಿಟ್ಟುಬಿಡಲು ಇವನು ಭೃಗುವನ್ನು ಪ್ರಾರ್ಥಿಸಿ

ದುದು (ಅನು 30/50–52). ಭೃಗುವಿನ ಮಾತಿನಿಂದ ಸಂತುಷ್ಟನಾಗಿ ಈತ ನಗರಕ್ಕೆ ಹಿಂತಿರುಗಿದುದು (ಅನು 30/54–56). ಇವನು ತನ್ನ ಪುತ್ರನನ್ನು ಬ್ರಾಹ್ಮಣನ ಸೇವೆಗೆ ಸಮರ್ಪಿಸಿ, ಈ ಲೋಕದಲ್ಲಿ ಅನುಪಮ ಕೀರ್ತಿಪಡೆದುದು ಮತ್ತು ಪರಲೋಕದಲ್ಲಿ ಅಕ್ಷಯ ಆನಂದವನ್ನನು ಭವಿಸಿದುದು (ಅನು 137/5).

**ಪ್ರತಾಪ** – ಸೌವೀರದೇಶದ ಒಬ್ಬ ರಾಜಕುಮಾರ. ಇವನು ಜಯದ್ರಥನ ರಥದ ಹಿಂದೆ ಕೈಯಲ್ಲಿ ಧ್ವಜಹಿಡಿದುಕೊಂಡು ಹೋಗುತ್ತಿದ್ದನು (ವನ 265/10). ಅರ್ಜುನನಿಂದ ಈತನ ವಧೆ (ವನ 271/27).

**ಪ್ರತಿಜ್ಞಾಪರ್ವ** – ದ್ರೋಣಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 72ರಿಂದ 74ರ ವರೆಗೆ).

**ಪ್ರತಿಮತ್ಸ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/52).

**ಪ್ರತಿರೂಪ** – ಒಬ್ಬ ದೈತ್ಯ. ಅವನು ಒಂದು ಕಾಲದಲ್ಲಿ ಸಮಸ್ತ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲಪೀಡಿತನಾಗಿ ಪರಲೋಕ ವಾಸಿಯಾದನು (ಶಾಂತಿ 227/53–56).

**ಪ್ರತಿವಿಂಧ್ಯ** – (1) ದ್ರೌಪದಿಯ ಗರ್ಭದಿಂದ ಯುಧಿಷ್ಠಿರನ ಮೂಲಕ ಜನ್ಮವೆತ್ತಿದವನು (ಆದಿ 63/122–123; ಆದಿ 95/75). ವಿಶ್ವೇದೇವನ ಅಂಶದಿಂದ ಇವನ ಜನ್ಮವಾಗಿತ್ತು (ಆದಿ 67/127–128). ಇವನ ಹೆಸರಿನ ಅರ್ಥ (ಆದಿ 220/79–81). ಪ್ರಥಮ ದಿನದ ಯುದ್ಧದಲ್ಲಿ ಶಕುನಿಯೊಂದಿಗೆ ಇವನ ದ್ವಂದ್ವ ಯುದ್ಧ (ಭೀಷ್ಮ 45/63–65). ಅಲಂಬುಷನೊಂದಿಗೆ ಈತನ ಯುದ್ಧ ಮತ್ತು ಆತನಿಂದ ಪರಾಜಿತನಾದುದು (ಭೀಷ್ಮ 100/39–49). ಇವನ ಕುದುರೆಗಳ ವರ್ಣನೆ (ದ್ರೋಣ 23/27). ಅಶ್ವತ್ಥಾಮ ನೊಂದಿಗೆ ಇವನ ಯುದ್ಧ (ದ್ರೋಣ 25/29–31). ದುಃಶಾಸನನೊಂದಿಗೆ ಇವನ ಯುದ್ಧ ಮತ್ತು ಪರಾಜಯ (ದ್ರೋಣ 168/34–43). ರಾಜಾ ಚಿತ್ರನೊಂದಿಗೆ ಯುದ್ಧ ಮತ್ತು ಈತ ನಿಂದ ಅವನ ವಧೆ (ಕರ್ಣ 14/20–33). ರಾತ್ರಿಯಲ್ಲಿ ಅಶ್ವತ್ಥಾಮನೊಂದಿಗೆ ಯುದ್ಧ ಮತ್ತು ಅವನಿಂದ ಕೊಲ್ಲಲ್ಪಟ್ಟದ್ದು (ಸೌಪ್ತಿಕ 8/48–54). (ಮಹಾಭಾರತದಲ್ಲಿ ಇವನಿಗೆ ಯೌಧಿಷ್ಠಿರ ಮತ್ತು ಯೌಧಿಷ್ಠಿರಿ ಶಬ್ದಗಳ ಪ್ರಯೋಗ ಕೂಡಾ ಆಗಿದೆ.).

(2) ಏಕಚಕ್ರನೆಂಬ ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ಪ್ರಸಿದ್ಧ ರಾಜ (ಆದಿ 67/21–22). ದಿಗ್ವಿಜಯ ಕಾಲದಲ್ಲಿ ಅರ್ಜುನನು ಈತನನ್ನು ಪರಾಜಯಗೊಳಿಸಿದ್ದನು (ಸಭಾ 26/5). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/13). ಇವನು ಯಮನ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 8/24).

**ಪ್ರತಿಶ್ರವಾ** – ಈತ ಪರೀಕ್ಷಿತನ ಪುತ್ರ. ಇವನು ಮಹಾರಾಜ ಭೀಮಸೇನನ ಮೂಲಕ 'ಕುಮಾರಿ'ಯ ಗರ್ಭದಿಂದ ಹುಟ್ಟಿದನು. ಇವನ ಪುತ್ರನ ಹೆಸರು ಪ್ರತೀಪನೆಂದಾಗಿತ್ತು (ಆದಿ 95/42–44).

**ಪ್ರತಿಷ್ಠಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/29).

**ಪ್ರತಿಷ್ಠಾನಪುರ** – ಪ್ರಯಾಗದ ಒಳಗಿರುವ ಒಂದು ತೀರ್ಥ (ಇದನ್ನು ಇತ್ತೀಚೆಗೆ ಝೂಸೀ ಎನ್ನುತ್ತಾರೆ). ಇದು ಪ್ರಜಾಪತಿಯ ವೇದಿಯ ಒಳಗಿದೆ (ವನ 75/76). ಪ್ರತಿಷ್ಠಾನ ಪುರವು ರಾಜಾ ಯಯಾತಿಯ ರಾಜಧಾನಿಯಾಗಿತ್ತು. ಅಲ್ಲಿಗೆ ಗಾಲವನೂ ಗರುಡನೂ ಹೋಗಿದ್ದರು (ಉದ್ಯೋಗ 114/9).

**ಪ್ರತೀಚ್ಯಾ** – ಇವಳು ಪುಲಸ್ತ್ಯ ಮಹರ್ಷಿಯ ಪತಿವ್ರತೆಪತ್ನಿಯಾಗಿದ್ದಳು (ಉದ್ಯೋಗ 117/16).

**ಪ್ರತೀತ** – ಒಬ್ಬ ವಿಶ್ವೇದೇವ (ಅನು 91/32).

**ಪ್ರತೀಪ** – ಕುರುವಂಶದ ಒಬ್ಬ ರಾಜ. ಇವನು ಧೃತರಾಷ್ಟ್ರನ ಪುತ್ರ. ಆದಿ ಪರ್ವ 94/49–60ರ ವರ್ಣನೆ ಪ್ರಕಾರ ಕುರುವಿನಿಂದ ಇವರ ಪರಂಪರೆ ಈ ರೀತಿ ಇದೆ – ಕುರು, ಕುರುವಿನ ಮಗ ಅಶ್ವವಂತ, (ಅವಿಕ್ಷಿತ) ಪರೀಕ್ಷಿತನೇ ಮೊದಲಾದ ಎಂಟು ಮಂದಿ ಸಹೋದರರು ಇವನ ಕುಲದಲ್ಲಿ ಜನಮೇಜಯ, ಜನಮೇಜಯ ನಿಂದ ಧೃತರಾಷ್ಟ್ರ ಮತ್ತು ಧೃತರಾಷ್ಟ್ರನಿಂದ ಪ್ರತೀಪನಾದನು. ಆದರೆ ಆದಿಪರ್ವ 95/39–44ರ ವರ್ಣನೆ ಪ್ರಕಾರ ಕುರುವಿನಿಂದ ವಿದೂರ,

ವಿದೂರನಿಂದ ಅನಶ್ವಾ, ಅನಶ್ವಾನಿಂದ ಪರೀಕ್ಷಿತ, ಪರೀಕ್ಷಿತನಿಂದ ಭೀಮಸೇನ ಭೀಮಸೇನನಿಂದ ಪ್ರತಿಶ್ರವ ಮತ್ತು ಪ್ರತಿಶ್ರವನಿಂದ ಪ್ರತೀಪನ ಜನ್ಮವಾಗಿತ್ತು. ಇವನ ಪತ್ನಿಯ ಹೆಸರು ಶೈವ್ಯಾ ಸುನಂದಾ ಎಂದಾಗಿತ್ತು. ಆಕೆಯಿಂದ ಇವನಿಗೆ ಮೂವರು ಪುತ್ರರಾದರು- ದೇವಾಪಿ, ಶಂತನು ಮತ್ತು ಬಾಹ್ಲೀಕ (ಆದಿ 94/61; ಆದಿ 95/44). ಇವನ ಬಳಿಗೆ ಮನಸ್ವಿನಿ ಗಂಗೆ, ಸುಂದರರೂಪ ಮತ್ತು ಉತ್ತಮ ಗುಣಗಳಿಂದ ಕೂಡಿದ ಯುವತಿಸ್ತ್ರೀಯ ರೂಪಧರಿಸಿ ಹೋದಳು ಮತ್ತು ಇವನ ಬಲ ತೊಡೆಯ ಮೇಲೆ ಏರಿಕುಳಿತಳು. ಇವನು ವಿಚಾರಿಸಿದಾಗ ಆಕೆ ಈತನ ಪತ್ನಿ ಯಾಗುವ ಕಾಮನೆಯನ್ನು ವ್ಯಕ್ತಪಡಿಸಿದಳು. ಆಗ ಇವನು ಆಕೆಯನ್ನು ಸೊಸೆಯ ರೂಪದಲ್ಲಿ ವರಿಸಿದನು (ಆದಿ 97/1–16). ಒಬ್ಬ ದಿವ್ಯನಾರಿ ಯನ್ನು ಪತ್ನಿ ರೂಪದಲ್ಲಿ ಸ್ವೀಕಾರ ಮಾಡಲು ಈತನು ತನ್ನ ಪುತ್ರ ಶಾಂತನುವಿಗೆ ಆದೇಶ ನೀಡಿದುದು (ಆದಿ 97/21–23). ಶಾಂತನುವಿಗೆ ರಾಜ್ಯವನ್ನಿತ್ತು ಈತ ವನಪ್ರವೇಶ ಮಾಡಿದುದು (ಆದಿ 97/24). ಇವನು ಪರಲೋಕವಾಸಿಯಾದ ಕುರಿತು ವರ್ಣನೆ (ಉದ್ಯೋಗ 149/28).

**ಪ್ರತ್ಯಗ್ರಹ** – ಇವನು ರಾಜಾಉಪರಿಚರ ವಸುವಿನ ದ್ವಿತೀಯ ಪುತ್ರನಾಗಿದ್ದನು (ಆದಿ 63/31).

**ಪ್ರತ್ಯಂಗ** – ಒಬ್ಬ ಪ್ರಾಚೀನ ರಾಜ (ಆದಿ 1/238).

**ಪ್ರತ್ಯೂಷ** – ಇವನು ಧರ್ಮನ ಮೂಲಕ ಪ್ರಭಾತಾಳ ಗರ್ಭದಿಂದ ಜನಿಸಿದ್ದನು. ಇವನು ವಸುಗಳಲ್ಲಿ ಗಣಿಸಲ್ಪಟ್ಟಿದ್ದಾನೆ (ಆದಿ 66/17–20).

**ಪ್ರದಾತಾ** – ಒಬ್ಬ ವಿಶ್ವೇದೇವ (ಅನು 91/32).

**ಪ್ರದ್ಯುಮ್ನ** – ಇವನು ಸನತ್ಕುಮಾರನ ಅಂಶ ದಿಂದ, ಶ್ರೀಕೃಷ್ಣನ ಮೂಲಕ, ರುಕ್ಮಿಣಿಯ ಗರ್ಭ ದಿಂದ ಪ್ರಕಟಗೊಂಡಿದ್ದನು (ಆದಿ 67/152; ಸೌಪ್ತಿಕ 12/30–32). ಅರ್ಜುನ ಮತ್ತು ಸುಭದ್ರೆ ಯರ ವಿವಾಹದ ನಿಮಿತ್ತ ವರದಕ್ಷಿಣೆ ತೆಗೆದು ಕೊಂಡು ಬಂದ ವೃಷ್ಣಿವಂಶದವರಲ್ಲಿ ಇವನೂ ಇದ್ದನು (ಆದಿ 220/31). ಇವನು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಬಂದಿದ್ದನು (ಸಭಾ 34/16). ಶಾಲ್ವನ ಪರಾಕ್ರಮದಿಂದ ಗಾಬರಿ ಗೊಂಡ ಯಾದವಸೇನೆಗೆ ಇವನಿಂದ ಆಶ್ವಾಸನೆ (ವನ 16/30–32). ಇವನ ಘೋರ ಯುದ್ಧ (ವನ 17/22). ಸಂಗ್ರಾಮ ಭೂಮಿಯಲ್ಲಿ ಇವನು ಮೂರ್ಚ್ಛಿತನಾದುದು (ವನ 17/22). ಸಾರಥಿಯ ಮೂಲಕ ಮೂರ್ಚ್ಛಾವಸ್ಥೆಯಲ್ಲಿ ಸಂಗ್ರಾಮ ಭೂಮಿಯಿಂದ ದೂರಕ್ಕೊಯ್ಯಲ್ಪಟ್ಟುದ ರಿಂದ ಇವನ ಅನುತಾಪ ಮತ್ತು ಸಾರಥಿಯನ್ನು ನಿಂದಿಸಿದುದು (ವನ 18). ಪುನಃ ಶಾಲ್ವನೊಂದಿಗೆ ಯುದ್ಧ ಮತ್ತು ಅವನನ್ನು ಕೊಲ್ಲಲು ಒಂದು ಅದ್ಭುತ ಶತ್ರುನಾಶಕ ಬಾಣವನ್ನು ಸಂಧಾನ ಮಾಡಿದುದು (ವನ 19/12–19). ನಾರದನೂ ವಾಯುದೇವನೂ ಇವನ ಬಳಿಗೆ ಬಂದು, ದೇವತೆಗಳ ಸಂದೇಶ ತಿಳಿಸಿದುದು (ವನ 19/21–24). ಇವನಿಂದ ಶಾಲ್ವನ ಪರಾಜಯ (ವನ 19/26). ಇವನಿಂದ ಅನಿರುದ್ಧ ಹುಟ್ಟಿದ್ದನು (ಭೀಷ್ಮ 65/71). ಇವನು ಮಹಾರಥಿ ವೀರನಾಗಿದ್ದನು (ದ್ರೋಣ 110/59). ಇವನ ಹೆಸರಿನ ಅರ್ಥ (ಶಾಂತಿ 339/37–38). ಇವನು ಶ್ರೀಕೃಷ್ಣನ ಮೂರನೇ ಸ್ವರೂಪವೆಂದು ತಿಳಿಯಲ್ಪಡುತ್ತಾನೆ (ಅನು 158/39). ಶ್ರೀಕೃಷ್ಣ ನೊಡನೆ ಬ್ರಾಹ್ಮಣರ ಮಹಿಮೆಯ ಕುರಿತಾಗಿ ಕೇಳಿದುದು (ಅನು 159/4–7). ಇವನು ಯುಧಿ ಷ್ಠಿರನ ಅಶ್ವಮೇಧಯಜ್ಞಕ್ಕೋಸ್ಕರ ಹಸ್ತಿನಾಪುರಕ್ಕೆ ಬಂದಿದ್ದನು (ಆಶ್ವ 66/3). ಮೌಸಲ ಯುದ್ಧದಲ್ಲಿ ಈತ ಭೋಜರೊಂದಿಗೆ ಯುದ್ಧ ಮಾಡಿದುದು ಮತ್ತು ಅವರಿಂದ ಈತನ ವಧೆ (ಮೌಸಲ 3/33–35). ಮರಣಾನಂತರ ಇವನು ಸನತ್ಕುಮಾರನ ಸ್ವರೂಪದಲ್ಲಿ ಪ್ರವೇಶಿಸಿದನು (ಸ್ವರ್ಗ 5/13).

**ಪ್ರದ್ಯೋತ** – ಒಬ್ಬ ಯಕ್ಷ. ಇವನು ಕುಬೇರನ ಸಭೆಯಲ್ಲಿರುತ್ತಾ ಅವನ ಸೇವೆ ಮಾಡುತ್ತಾನೆ (ಸಭಾ 10/15).

**ಪ್ರಧಾನ** – ಒಬ್ಬ ಪ್ರಾಚೀನ ರಾಜರ್ಷಿ. ಇವನ ಕುಲದಲ್ಲೇ ಸುಲಭಾ ಹುಟ್ಟಿದ್ದಳು. ಆಕೆಯೊಂದಿಗೆ ವಿದೇಹರಾಜ ಜನಕನ ಸಂವಾದ ನಡೆದಿತ್ತು (ಶಾಂತಿ 320–184).

**ಪ್ರಬಾಲಕ** – ಒಬ್ಬ ಯಕ್ಷ. ಇವನು ಕುಬೇರ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 10/17).

**ಪ್ರಬಾಹು** – ಕೌರವ ಪಕ್ಷದ ಒಬ್ಬ ಯೋಧ. ಇವನು ಅಭಿಮನ್ಯುವಿನ ಮೇಲೆ ಬಾಣಗಳ ಮಳೆಸುರಿಸಿದ್ದನು (ದ್ರೋಣ 37/26).

**ಪ್ರಭಂಜನ** – ಇವನು ಮಣಿಪೂರದ ರಾಜ ಚಿತ್ರವಾಹನನ ಪೂರ್ವಜನಾಗಿದ್ದನು. ಇವನಿಗೆ ಪುತ್ರನಿರಲಿಲ್ಲ. ಆದುದರಿಂದ ಉತ್ತಮ ತಪಸ್ಸು ಮಾಡಲು ಆರಂಭಿಸಿದನು. ಆ ಉಗ್ರ ತಪಸ್ಸಿನ ಮೂಲಕ ದೇವಾಧಿದೇವ ಪರಮೇಶ್ವರನು ಸಂತುಷ್ಟನಾದನು. ಅವನು ರಾಜನಿಗೆ ವರವನ್ನು ಕೊಡುತ್ತಾ 'ನಿನ್ನ ಕುಲದಲ್ಲಿ ಒಂದೊಂದು ಸಂತಾನ ಆಗುತ್ತಾ ಇರುತ್ತದೆಂ'ದು ಹೇಳಿದನು (ಆದಿ 214/19–21).

**ಪ್ರಭದ್ರಕ** – ಪಾಂಚಾಲರ ಒಂದು ಕ್ಷತ್ರಿಯ ದಳ. ಇದು ಪಾಂಡವ ಪಕ್ಷಕ್ಕೆ ಬಂದಿತ್ತು (ಉದ್ಯೋಗ 57/33). ಇವರು ಪ್ರಾಯಶಃ ಧೃಷ್ಟದ್ಯುಮ್ನ ಮತ್ತು ಶಿಖಂಡಿಯನ್ನು ಅನುಸರಿಸುತ್ತಿದ್ದರು (ಭೀಷ್ಮ 19/22; ಭೀಷ್ಮ 56/14). ಇವರಲ್ಲಿ ಹೆಚ್ಚಿನವರು ಶಲ್ಯನಿಂದ ಕೊಲ್ಲಲ್ಪಟ್ಟರು (ಶಲ್ಯ 11/24). ರಾತ್ರಿ ನಿದ್ರಿಸುತ್ತಿದ್ದಾಗ, ಅಶ್ವತ್ಥಾಮನಿಂದ ಪ್ರಭದ್ರಕರ ವಧೆಯಾಗಿತ್ತು (ಸೌಪ್ತಿಕ 8/66).

**ಪ್ರಭಾ** – (1) ಬ್ರಹ್ಮ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುವ ಒಬ್ಬಳು ದೇವಿ (ಸಭಾ 11/41).

(2) ಅಲಕಾಪುರದ ಒಬ್ಬ ಅಪ್ಸರೆ. ಈಕೆ ಅಷ್ಟಾವಕ್ರನ ಸ್ವಾಗತ ಸಮಾರಂಭದಲ್ಲಿ ನೃತ್ಯ ಮಾಡಿದ್ದಳು (ಅನು 19/45).

**ಪ್ರಭಾಕರ** – (1) ಕಶ್ಯಪವಂಶದ ಒಬ್ಬ ಪ್ರಮುಖ ನಾಗ (ಆದಿ 35/15).

(2) ಕುಶದ್ವೀಪದ ಆರನೇ ವರ್ಷಖಂಡ (ಭೀಷ್ಮ 12/13).

**ಪ್ರಭಾತಾ** – ಈಕೆ ಧರ್ಮನ ಪತ್ನಿ. ಪ್ರತ್ಯೂಷ ಮತ್ತು ಪ್ರಭಾಸ ಎಂಬ ಇಬ್ಬರು ವಸುಗಳು ಈಕೆಯ ಪುತ್ರರಾಗಿದ್ದರು (ಆದಿ 66/17–20).

**ಪ್ರಭಾವತೀ** – (1) ಮಯಾಸುರನ ನಿವಾಸ ಸ್ಥಾನದಲ್ಲಿ ತಪಸ್ಸು ಮಾಡುತ್ತಿರುವ ಒಬ್ಬ ತಪಸ್ವಿನಿ. ಈಕೆ ಸೀತೆಯನ್ನು ಹುಡುಕಲು ಹೋದ ವಾನರ ರನ್ನು ಭೇಟಿಯಾಗಿದ್ದಳು (ವನ 282/41).

(2) ಇವಳು ಸೂರ್ಯನ ಪತ್ನಿಯಾಗಿದ್ದಳು (ಉದ್ಯೋಗ 17/8).

(3). ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

(4). ಅಂಗರಾಜ ಚಿತ್ರರಥನ ಪತ್ನಿ. ಈಕೆ ದೇವಶರ್ಮನ ಪತ್ನಿ, ರುಚಿ ಎಂಬವಳ ಅಕ್ಕ (ಅನು 42/8). ಈಕೆ ತನ್ನ ಅಕ್ಕ ರುಚಿಯೊಡನೆ ದಿವ್ಯಪುಷ್ಪಗಳನ್ನು ತರಿಸಿಕೊಡುವಂತೆ ಒತ್ತಾಯಿಸಿ ದುದು (ಅನು 42/10).

**ಪ್ರಭಾಸ** – (1) ಇವನು ಧರ್ಮನಿಂದ ಪ್ರಭಾತಾ ಎಂಬವಳಲ್ಲಿ ಹುಟ್ಟಿದವನು. ಇವನು ವಸುಗಳಲ್ಲಿ ಗಣಿಸಲ್ಪಡುತ್ತಾನೆ (ಆದಿ 66/17–20).

(2) ಒಂದು ಪ್ರಾಚೀನ ತೀರ್ಥ (ಆದಿ 217/3). ಇದು ಪಶ್ಚಿಮ ಸಮುದ್ರ ದಡದಲ್ಲಿ ಸೌರಾಷ್ಟ್ರ (ಕಾಥೇವಾಡ)ದಲ್ಲಿದೆ. ಇದು ದೇವತೆಗಳ ತೀರ್ಥ ವಾಗಿದೆ (ವನ 88/20). (ಇದನ್ನು ಸೋಮ ತೀರ್ಥವೆಂದೂ ಹೇಳುತ್ತಾರೆ. ಸೋಮನಾಥವೆಂಬ ಜ್ಯೋತಿರ್ಲಿಂಗದ ಸ್ಥಾನ ಇದೇ ಆಗಿದೆ.) ಇಲ್ಲಿ ತೀರ್ಥಯಾತ್ರೆಯ ಸಂದರ್ಭದಲ್ಲಿ ಶ್ರೀಕೃಷ್ಣನೊಡನೆ ಅರ್ಜುನನ ಮಿಲನ (ಆದಿ 217/4). ಪ್ರಭಾಸ ತೀರ್ಥದಲ್ಲಿ ಶ್ರೀಕೃಷ್ಣನು ಒಂದು ಸಾವಿರ ದಿವ್ಯ ವರ್ಷಗಳ ತನಕ ಒಂದೇ ಕಾಲಿನಲ್ಲಿ ನಿಂತು ತಪಸ್ಸು ಮಾಡಿದ್ದನು (ವನ 12/15–16). ಇಲ್ಲಿ ಅಗ್ನಿದೇವನು ವಾಸಿಸುತ್ತಾನೆ. ಈ ತೀರ್ಥದಲ್ಲಿ ಸ್ನಾನಮಾಡಿ ಸಂಯಮಚಿತ್ತನಾದ ಮಾನವನು ಅತಿರಾತ್ರ ಮತ್ತು ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ (ವನ 82/58–60). ತೀರ್ಥ ಯಾತ್ರೆಯ ಸಮಯದಲ್ಲಿ ಯುಧಿಷ್ಠಿರನು ಸಹೋದರರ ಸಹಿತನಾಗಿ ಇಲ್ಲಿಗೆ ಬಂದಿದ್ದನು ಮತ್ತು ಈ ಸ್ಥಾನದಲ್ಲಿ ಆತ ತಪಸ್ಸು ಮಾಡಿದ್ದನು (ವನ 118/15–18). ಪ್ರಭಾಸತೀರ್ಥ ಇಂದ್ರನಿಗೆ ಬಹಳ ಪ್ರಿಯವಾದುದು. ಇದು ಪುಣ್ಯಮಯ ಕ್ಷೇತ್ರ ಮತ್ತು ಪಾಪಹರವಾಗಿದೆ (ವನ 130/7). ಇದರ ಪ್ರಭಾವದ ವಿಶೇಷ ವರ್ಣನೆ (ಶಲ್ಯ 35/41–82). ಇಲ್ಲಿ ಸ್ನಾನಮಾಡಿದರೆ ಮನುಷ್ಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ; ಅಲ್ಲಿ ಅಪ್ಸರೆಯರು ಸ್ತುತಿ ಮಾಡುತ್ತಾ ಅವನನ್ನು ಎಚ್ಚರಿಸುತ್ತಾರೆ (ಅನು 25/9). ಇಲ್ಲಿಯೇ ಯದುವಂಶದವರು ಪರಸ್ಪರ ಯುದ್ಧಮಾಡಿ ವಿನಾಶಹೊಂದಿದರು (ಮೌಸಲ 3/10–46). ಪ್ರಭಾಸ ತೀರ್ಥದಿಂದಲೇ ಬಲರಾಮ ಮತ್ತು

ಶ್ರೀಕೃಷ್ಣ ಪರಮಧಾಮಕ್ಕೆ ನಿರ್ಗಮಿಸಿದರು (ಮೌಸಲ 4).

(3) ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಪ್ರಭು** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ಪ್ರಮತಕ** – ಒಬ್ಬ ಋಷಿ. ಈತ ಜನಮೇಜಯನ ಸರ್ಪಸತ್ರದ ಸದಸ್ಯನಾಗಿದ್ದನು (ಆದಿ 53/7).

**ಪ್ರಮತಿ ಅಥವಾ ಪ್ರಮಿತಿ** – ಚ್ಯವನ ಋಷಿಯ ಪುತ್ರ. ಇವನ ತಾಯಿಯ ಹೆಸರು ಸುಕನ್ಯೆ (ಆದಿ 5/9; ಆದಿ 8/1). ಘೃತಾಚಿ ಎಂಬ ಅಪ್ಸರೆಯ ಗರ್ಭದಿಂದ ಈತನಿಗೆ ರುರು ಎಂಬ ಹೆಸರಿನ ಪುತ್ರ ಹುಟ್ಟಿದ್ದನು (ಆದಿ 8/2). ರುರುವಿಗೋಸ್ಕರ ಇವನು ಸ್ಥೂಲಕೇಶಮುನಿಯೊಡನೆ, ಅವನ ಪ್ರಮದ್ವರಾ ಎಂಬ ಕನ್ಯೆಯನ್ನು ಯಾಚಿಸಿದುದು (ಆದಿ 8/15). ಇವನು ರುರುವಿಗೆ ಆಸ್ತೀಕ ಪರ್ವದ ಕಥೆಯನ್ನು ತಿಳಿಸಿದುದು (ಆದಿ 58/30–31). ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಅವರ ಮೃತ್ಯುಕಾಲದಲ್ಲಿ ಇವನು ಆಗಮಿಸಿದ್ದನು (ಅನು 26/5). ಇವನನ್ನು ವೀತಹವ್ಯನ ಪುತ್ರ ಗೃತ್ಸಮದನ ಕುಲದಲ್ಲಿ ಜನ್ಮವೆತ್ತಿದ, ವಾಗೀಂದ್ರನ ಪುತ್ರನೆಂದು ಎಲ್ಲೋ ಹೇಳಲಾಗಿದೆ (ಅನು 30/58–64).

**ಪ್ರಮಥ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 116/13).

**ಪ್ರಮಥಗಣ** – ಶಿವನಗಣ. ಇವರಿಂದ ಧರ್ಮಾಧರ್ಮಸಂಬಂಧಿ ರಹಸ್ಯದ ವರ್ಣನೆ (ಅನು 131).

**ಪ್ರಮದಾವನ** – ಅರಮನೆಗಳಲ್ಲಿ ರಾಣಿಯರ ವಿಹಾರಕ್ಕಾಗಿ ನಿರ್ಮಿಸಲ್ಪಟ್ಟ ಉಪವನ (ವನ 53/25).

**ಪ್ರಮದ್ವರಾ** – ರುರುವಿನ ಪತ್ನಿ ಮತ್ತು ಶುನಕ ಋಷಿಯ ತಾಯಿ. ಈಕೆ ವಿಶ್ವಾವಸು ಮತ್ತು ಮೇನಕೆಯಿಂದ ಹುಟ್ಟಿದ್ದಳು. ಇವಳ ಜನನ, ಸ್ಥೂಲಕೇಶನಿಂದ ಇವಳ ಲಾಲನೆ–ಪಾಲನೆ, ನಾಮಕರಣ ಮತ್ತು ವಿವಾಹದ ಕಥೆ (ಆದಿ 5/10; ಆದಿ 8/5–13). ಈಕೆ ಸರ್ಪದಿಂದ ಕಡಿಯಲ್ಪಟ್ಟದ್ದು (ಆದಿ 8/18). ಮರಣಕ್ಕೆ ತುತ್ತಾದ ಪ್ರಮದ್ವರೆ ಪತಿಯ ಆಯುಸ್ಸಿನಿಂದ ಜೀವಂತಳಾದುದು (ಆದಿ 9/15).

**ಪ್ರಮಾಣಕೋಟಿ** – ಗಂಗೆಯ ದಡದಲ್ಲಿರುವ ಒಂದು ತೀರ್ಥ. ಇಲ್ಲಿ ಪ್ರಮಾಣಕೋಟಿ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ವಿಶಾಲ ವಟವೃಕ್ಷವಿತ್ತು. ಇಲ್ಲಿಯೇ ದುರ್ಯೋಧನನು ಭೀಮಸೇನನಿಗೆ ವಿಷತಿನ್ನಿಸಿ ಗಂಗೆಯ ನೀರಿನಲ್ಲಿ ಹಾಕಿಸಿದ್ದನು (ಆದಿ 61/11; ಆದಿ 127/54). ಇಲ್ಲಿ ಪಾಂಡವರ ಪ್ರಥಮದಿನದ ರಾತ್ರಿವಾಸ (ವನ 1/41–42).

**ಪ್ರಮಾಥ** – ಯಮರಾಜನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಉನ್ಮಾಥನೆಂದಾಗಿತ್ತು (ಶಲ್ಯ 45/30).

**ಪ್ರಮಾಥೀ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/13). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಅವನಿಂದ ವಧೆ (ದ್ರೋಣ 157/17–19).

(2) ಇವನು ದೂಷಣ ರಾಕ್ಷಸನ ತಮ್ಮ (ವನ 286/27). ಲಕ್ಷ್ಮಣನೊಂದಿಗೆ ಇವನು ಯುದ್ಧ ಮಾಡುತ್ತಿದ್ದಾಗ, ವಾನರ ಸೇನಾಪತಿ ನೀಲನಿಂದ ಕೊಲ್ಲಲ್ಪಟ್ಟದ್ದು (ವನ 287/22–27).

(3). ಘಟೋತ್ಕಚನ ಒಡನಾಡಿಯಾದ ಒಬ್ಬ ರಾಕ್ಷಸ. ದುರ್ಯೋಧನನಿಂದ ಇವನ ವಧೆ (ಭೀಷ್ಮ 91/20–23).

**ಪ್ರಮಾಥಿನೀ** – ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮೋತ್ಸವಕ್ಕೆ ಬಂದು ನೃತ್ಯ ಮಾಡಿದ್ದಳು (ಆದಿ 122/63).

**ಪ್ರಮುಚ** – ದಕ್ಷಿಣ ದಿಕ್ಕಿನಲ್ಲಿರುವ ಒಬ್ಬ ಮಹರ್ಷಿ (ಶಾಂತಿ 208/2).

**ಪ್ರಮೋದ** – (1) ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/11).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

**ಪ್ರಮ್ಲೋಚಾ** – ಹತ್ತು ಮಂದಿ ಪ್ರಮುಖ ಅಪ್ಸರೆಯರಲ್ಲಿ ಒಬ್ಬಳು. ಇವಳು ಅರ್ಜುನನ ಜನ್ಮ ಮಹೋತ್ಸವಕ್ಕೆ ಹೋಗಿದ್ದಳು (ಆದಿ 122/65). ಇವಳು ಕುಬೇರ ಸಭೆಯಲ್ಲಿದ್ದು ಅವನ ಉಪಾಸನೆ ಮಾಡುತ್ತಾಳೆ (ಸಭಾ 10/11).

**ಪ್ರಯಾಗ** – ಗಂಗಾ ಮತ್ತು ಯಮುನಾ ಸಂಗಮದಲ್ಲಿರುವ ಒಂದು ಪ್ರಖ್ಯಾತ ತೀರ್ಥ. ಇಲ್ಲಿ ಗಂಗಾಯಮುನಾ ಸಂಗಮದಲ್ಲಿ ಸ್ನಾನ

ಮಾಡುವ ಪುರುಷ, ಹತ್ತು ಅಶ್ವಮೇಧ ಯಜ್ಞಗಳ ಫಲಪಡೆಯುತ್ತಾನೆ ಮತ್ತು ತನ್ನ ಕುಲದ ಉದ್ಧಾರಮಾಡುತ್ತಾನೆ (ವನ 84/35). ಮಹರ್ಷಿಗಳಿಂದ ಹೊಗಳಲ್ಪಟ್ಟ ಪ್ರಯಾಗ ತೀರ್ಥದಲ್ಲಿ ಬ್ರಹ್ಮಾದಿ ದೇವತೆಗಳು, ದಿಕ್ಕುಗಳು, ದಿಕ್ಪಾಲಕರು, ಲೋಕಪಾಲರು, ಸಾಧ್ಯರು, ಲೋಕಸಮ್ಮಾನಿತ ಪಿತೃಗಳು, ಸನತ್ಕುಮಾರಾದಿ ಮಹರ್ಷಿಗಳು, ಅಂಗೀರಸಾದಿ ನಿರ್ಮಲ ಬ್ರಹ್ಮರ್ಷಿಗಳು, ನಾಗರು, ಸುಪರ್ಣರು, ಸಿದ್ಧರು, ಸೂರ್ಯ, ನದಿ, ಸಮುದ್ರ, ಗಂಧರ್ವ, ಅಪ್ಸರೆಯರು ಮತ್ತು ಬ್ರಹ್ಮ ಸಹಿತನಾದ ಭಗವಾನ್ ವಿಷ್ಣು ವಾಸಮಾಡುತ್ತಾರೆ. ಇಲ್ಲಿ ಮೂರು ಅಗ್ನಿಕುಂಡಗಳಿವೆ. ಅವುಗಳ ಮಧ್ಯದಲ್ಲಿ ಗಂಗೆ ಹರಿಯುತ್ತಾಳೆ. ಇಲ್ಲಿಯೇ ಯಮುನೆ ಗಂಗೆಯೊಂದಿಗೆ ಸೇರಿದ್ದಾಳೆ. ಗಂಗಾ ಯಮುನೆಯ ಮಧ್ಯಭಾಗ ಪೃಥ್ವಿಯ ನಿತಂಬವೆಂದು ತಿಳಿಯಲ್ಪಟ್ಟಿದೆ. ಪ್ರಯಾಗವು ಜಘನ ಸ್ಥಾನದ ಉಪಸ್ಥವಾಗಿದೆ. ಪ್ರತಿಷ್ಠಾನಪುರ(ಝೂಸಿ), ಪ್ರಯಾಗ, ಕಂಬಲ ಮತ್ತು ಅಶ್ವತರನಾಗ ಮತ್ತು ಭೋಗವತೀ ತೀರ್ಥ ಬ್ರಹ್ಮನ ವೇದಿಕೆಯಾಗಿದೆ. ಈ ತೀರ್ಥದಲ್ಲಿ ವೇದ ಮತ್ತು ಯಜ್ಞ ಮೂರ್ತಿಮತ್ತಾಗಿ ಇರುತ್ತವೆ ಮತ್ತು ಪ್ರಜಾಪತಿಯ ಉಪಾಸನೆ ಮಾಡುತ್ತವೆ. ತಪೋಧನ ಋಷಿಗಳು, ದೇವತೆಗಳು ಮತ್ತು ಚಕ್ರವರ್ತಿ ಸಮ್ರಾಟರು ಇಲ್ಲಿ ಯಜ್ಞಗಳ ಮೂಲಕ ಭಗವಂತನ ಯಜ್ಞ ಮಾಡುತ್ತಾರೆ. ಆದುದರಿಂದಲೇ ಮೂರೂ ಲೋಕಗಳಲ್ಲಿ ಪ್ರಯಾಗವನ್ನು ಎಲ್ಲಾ ತೀರ್ಥಗಳಿಗಿಂತಲೂ ಶ್ರೇಷ್ಠ ಮತ್ತು ಪುಣ್ಯತಮವೆಂದು ಹೇಳಲಾಗಿದೆ. ಈ ತೀರ್ಥಕ್ಕೆ ಹೋಗುವುದು ಅಥವಾ ನಾಮಸ್ಮರಣೆಮಾಡುವ ಮಾತ್ರದಿಂದಲೇ ಮನುಷ್ಯ, ಮೃತ್ಯುಕಾಲದ ಭಯ ಮತ್ತು ಪಾಪದಿಂದ ಮುಕ್ತನಾಗುತ್ತಾನೆ (ವನ 85/69–80). ಪ್ರಯಾಗದ ವಿಶ್ವವಿಖ್ಯಾತ ತ್ರಿವೇಣಿ ಸಂಗಮದಲ್ಲಿ ಸ್ನಾನಮಾಡುವುದರಿಂದ ರಾಜಸೂಯ ಮತ್ತು ಅಶ್ವಮೇಧ ಯಜ್ಞಗಳ ಫಲ ಪ್ರಾಪ್ತಿಯಾಗುತ್ತದೆ. ಇದು ದೇವತೆಗಳ ಮೂಲಕ ಸಂಸ್ಕರಿಸಲ್ಪಟ್ಟ ಯಜ್ಞಭೂಮಿಯಾಗಿದೆ. ಇಲ್ಲಿ ಕೊಡಲ್ಪಟ್ಟ ಚಿಕ್ಕ ದಾನವಾದರೂ ಮಹತ್ತರವಾಗುತ್ತದೆ. ಪ್ರಯೋಗದಲ್ಲಿಯೇ ಅರುವತ್ತು ಕೋಟಿ ಹತ್ತು ಸಾವಿರ ತೀರ್ಥಗಳ ನಿವಾಸವಿದೆ. ನಾಲ್ಕು ವಿದ್ಯೆಗಳ ಜ್ಞಾನದಿಂದ ಮತ್ತು ಸತ್ಯಭಾಷಣದಿಂದ ಬರುವಷ್ಟು ಪುಣ್ಯ, ಗಂಗಾ ಯಮುನಾ ಸಂಗಮದಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ಸಿಗುತ್ತದೆ. ಇಲ್ಲಿ ವಾಸುಕಿಯ ಭೋಗವತೀ ಎಂಬ ಉತ್ತಮ ತೀರ್ಥವಿದೆ. ಇದರಲ್ಲಿ ಸ್ನಾನಮಾಡುವವನಿಗೆ ಅಶ್ವಮೇಧ ಯಜ್ಞದ ಫಲಸಿಗುತ್ತದೆ. ಪ್ರಯಾಗದಲ್ಲಿಯೇ ಹಂಸಪ್ರಪತನ ಎಂಬ ತೀರ್ಥವಿದೆ ಮತ್ತು ಅಲ್ಲಿಯೇ ಗಂಗೆಯ ದಡದಲ್ಲಿ ದಶಾಶ್ವಮೇಧಿಕ ತೀರ್ಥವಿದೆ. ಪ್ರಯಾಗದಲ್ಲಿ ಗಂಗಾಸ್ನಾನದ ಮಹತ್ವ ಎಲ್ಲಕ್ಕಿಂತ ಹೆಚ್ಚಾಗಿದೆ (ವನ 85/81–88). ಗಂಗಾ ಯಮುನಾ ಪುಣ್ಯಮಯ ಸಂಗಮ ಜಗತ್ತಿನಲ್ಲೆಲ್ಲಾ ಪ್ರಖ್ಯಾತವಾಗಿದೆ. ದೊಡ್ಡ ದೊಡ್ಡ ಮಹರ್ಷಿಗಳು ಅದರ ಸೇವನೆ ಮಾಡುತ್ತಾರೆ. ಪೂರ್ವಕಾಲದಲ್ಲಿ ಇಲ್ಲಿ ಪಿತಾಮಹ ಬ್ರಹ್ಮನು ಯಜ್ಞಮಾಡಿದ್ದನು. ಅವನ ಈ ಶ್ರೇಷ್ಠ ಯಾಗದಿಂದಾಗಿಯೇ ಈ ಸ್ಥಾನದ ಹೆಸರು ಪ್ರಯಾಗವೆಂದಾಗಿದೆ (ವನ 87/18–19). ಪಾಂಡವರು ದೇವತೆಗಳ ಯಜ್ಞಭೂಮಿಯಾದ ಪ್ರಯಾಗಕ್ಕೆ ಹೋಗಿ, ಅಲ್ಲಿ ಗಂಗಾ ಯಮುನಾ ಸಂಗಮದಲ್ಲಿ ಸ್ನಾನ ಮಾಡಿದರು ಮತ್ತು ಕೆಲವು ದಿನಗಳ ವರೆಗೆ ಅವರು ಇಲ್ಲಿ ಉತ್ತಮ ತಪಸ್ಸಿನಲ್ಲಿ ಮಗ್ನರಾದರು (ವನ 95/4–5). ಪ್ರಯಾಗ ಕ್ಷೇತ್ರದಲ್ಲಿ ಮಾಘಮಾಸದ ಅಮಾವಾಸ್ಯೆಯಂದು ಮೂರು ಕೋಟಿ ಹತ್ತು ಸಾವಿರ ತೀರ್ಥಗಳ ಸಮಾಗಮವಾಗುತ್ತದೆ (ಅನು 25/35–36).

**ಪ್ರಯುತ** – ಒಬ್ಬ ದೇವಗಂಧರ್ವ. ಇವನು ಕಶ್ಯಪನಿಂದ ಮುನಿಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/43).

**ಪ್ರರುಜ** – ರಾಕ್ಷಸ ಮತ್ತು ಪಿಶಾಚರ ದಳ (ವನ 285/1–2).

**ಪ್ರಲಂಬ** – (1) ಕಶ್ಯಪ ಮತ್ತು ದನುವಿನಿಂದ ಹುಟ್ಟಿದ ಒಬ್ಬ ಪ್ರಸಿದ್ಧ ದಾನವ (ಆದಿ 65/29). (2) ಒಬ್ಬ ಅಸುರ. ಇವನನ್ನು ಶ್ರೀಕೃಷ್ಣನ ಅಭಿನ್ನ ಸ್ವರೂಪನಾದ ಬಲರಾಮನು ಕೊಂದನು (ದ್ರೋಣ 11/5; ಶಲ್ಯ 47/13).

**ಪ್ರಸುಹ್ಮ** – ಒಂದು ಪ್ರಾಚೀನ ದೇಶ. ಇದನ್ನು ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ 30/16).

**ಪ್ರಸೃತ** – ಒಬ್ಬ ದೈತ್ಯ. ಗರುಡನಿಂದ ಇವನ ವಧೆ ಆಗಿತ್ತು (ಉದ್ಯೋಗ 105/12).

**ಪ್ರಸೇನ** – ಇವನು ಕರ್ಣನ ಮಗ. ಸಾತ್ಯಕಿಯಿಂದ ಇವನ ವಧೆಯಾಗಿತ್ತು (ಕರ್ಣ 82/6).

**ಪ್ರಸೇನಜಿತ್** – (1) ಒಬ್ಬ ರಾಜ. ಇವನು ಮಹಾಭೌಮನ ಪತ್ನಿ ಸುಯಜ್ಞಾ ಎಂಬವಳ ತಂದೆ. ಇವನು ಒಂದು ಲಕ್ಷ ಕರುಸಹಿತ ಗೋವುಗಳನ್ನು ದಾನಮಾಡಿ ಉತ್ತಮ ಲೋಕ ಪ್ರಾಪ್ತಿಸಿಕೊಂಡನು (ಆದಿ 15/20; ಶಾಂತಿ 234/36). ಇವನು ಯಮರಾಜನ ಸಭೆಯಲ್ಲಿರುತ್ತಾ ಆತನ ಉಪಾಸನೆಮಾಡುತ್ತಾನೆ (ಸಭಾ 8/21).

(2) ಒಬ್ಬ ರಾಜ. ಇವನು ರೇಣುಕೆಯ ತಂದೆ. ಇವನಿಂದ ಜಮದಗ್ನಿಗೆ ತನ್ನ ಪುತ್ರಿ ರೇಣುಕೆಯ ಕನ್ಯಾದಾನ (ವ. 116/2). (ಕೆಲವರ ಅಭಿಪ್ರಾಯ ಪ್ರಕಾರ ಸುಯಜ್ಞಾ ಮತ್ತು ರೇಣುಕೆಯ ತಂದೆ ಒಬ್ಬನೇ ಆಗಿದ್ದನು.)

(3) ಒಬ್ಬ ಯಾದವ. ಇವನು ಸತ್ರಾಜಿತನ ಸಹೋದರ. ಈ ಇಬ್ಬರೂ ಸಹೋದರರು. ಅವಳಿಯಾಗಿ ಹುಟ್ಟಿದ್ದರು ಮತ್ತು ಕುಬೇರನಂತಹ ಸದ್ಗುಣಗಳಿಂದ ಕೂಡಿದ್ದರು. ಇವರ ಬಳಿ ಇದ್ದ ಸ್ಯಮಂತಕಮಣಿ ಪ್ರತಿದಿನ ಅಪಾರ ಚಿನ್ನದ ರಾಶಿಯನ್ನು ಸುರಿಸುತ್ತಿತ್ತು (ಸಭಾ 14/60).

**ಪ್ರಸ್ಥಲ** – ಅತ್ಯಂತ ನಿಂದಿತವಾದ ಒಂದು ದೇಶ. ಕರ್ಣನು ಶಲ್ಯನಲ್ಲಿ ಇದರ ವರ್ಣನೆ ಮಾಡಿದ್ದನು (ಕರ್ಣ 44/47).

**ಪ್ರಸ್ಥಲಾ** – ಸುಶರ್ಮನ ರಾಜಧಾನಿ (ಭೀಷ್ಮ 113/52).

**ಪ್ರಹಸ್ತ** – ರಾವಣನ ಪರಿವಾರದಲ್ಲಿದ್ದ ಒಬ್ಬ ರಾಕ್ಷಸ. ಇವನು ವಿಭೀಷಣನೊಂದಿಗೆ ಯುದ್ಧ ಮಾಡಿದ್ದನು (ವನ 285/14). ವಿಭೀಷಣನಿಂದ ಇವನ ವಧೆ (ವನ 286/4).

**ಪ್ರಹಾಸ** – (1) ಧೃತರಾಷ್ಟ್ರ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಸತ್ರದಲ್ಲಿ ದಗ್ಧನಾದನು (ಆದಿ 57/16).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ಪ್ರಹ್ಲಾದ** – (1) ಹಿರಣ್ಯಕಶಿಪುವಿನ ಪ್ರಥಮ ಪುತ್ರ. ಇವನ ತಾಯಿಯ ಹೆಸರು ಕಯಾಧು ಎಂದಾಗಿತ್ತು. ಇವನಿಗೆ ಮೂವರು ಪುತ್ರರಿದ್ದರು. – ವಿರೋಚನ, ಕುಂಭ ಮತ್ತು ನಿಕುಂಭ (ಆದಿ 65/17–19). ಇವನು ವರುಣ ಸಭೆಯಲ್ಲಿದ್ದು, ಅವನ ಉಪಾಸನೆ ಮಾಡುತ್ತಾನೆ (ಸಭಾ 9/12). ಬ್ರಹ್ಮನ ಸಭೆಯಲ್ಲೂ ಆತನ ಸೇವೆಗಾಗಿ ಉಪಸ್ಥಿತನಿರುತ್ತಾನೆ (ಸಭಾ 11/19). ವಿದುರನು ಇವನ ಉದಾಹರಣೆಯನ್ನು ಹೇಳಿದುದು (ಸಭಾ 68/65–66). ಇವನಿಂದ ಬಲಿಗೆ ಕ್ರೋಧ ಮತ್ತು ಕ್ಷಮೆಯ ಸಂದರ್ಭಗಳ ವರ್ಣನೆ (ವನ 28/6–33). ವಿರೋಚನ ಮತ್ತು ಸುಧನ್ವಾರ ಸಂವಾದದಲ್ಲಿ ಈತನ ನಿರ್ಣಯ (ಉದ್ಯೋಗ 65/35–36). ಬ್ರಾಹ್ಮಣವೇಷದಲ್ಲಿ ಶಿಷ್ಯರೂಪದಿಂದ ಪ್ರಾರ್ಥಿಸಿದಾಗ, ಇಂದ್ರನಿಗೆ ಇವನು ಶೀಲವನ್ನು ದಾನ ಮಾಡಿದುದು (ಶಾಂತಿ 24/28–62). ಉಶನಾನು ಇವನಿಗೆ ಎರಡು ಕಥೆಗಳನ್ನು ಹೇಳಿದನು (ಶಾಂತಿ 139/70–72). ಇವನು ಅವಧೂತನೊಬ್ಬನಿಂದ ಅಜಗರ ವೃತ್ತಿಯ ಪ್ರಶಂಸೆಯನ್ನು ಕೇಳಿದುದು (ಶಾಂತಿ 179). ಇಂದ್ರನೊಂದಿಗೆ ಇವನ ಸಂವಾದ (ಶಾಂತಿ 222/9–35). ಇವನು ಪೃಥ್ವಿಯ ಪ್ರಧಾನ ಶಾಸಕರಲ್ಲಿ ಒಬ್ಬ (ಶಾಂತಿ 227/50). ಸ್ಕಂದನು ಹೂತು ಹಾಕಿದ ಶಕ್ತಿಯನ್ನು ಕೀಳಲು ಈತ ವಿಫಲನಾದುದು (ಶಾಂತಿ 27/18–19). ಮಹಾಭಾರತದಲ್ಲಿ ಬಂದಿರುವ ಪ್ರಹ್ಲಾದನ ಹೆಸರುಗಳು– ಅಸುರಾಧಿಪ, ಅಸುರೇಂದ್ರ, ದೈತೇಯ, ದೈತ್ಯ, ದೈತ್ಯಪತಿ, ದೈತ್ಯೇಂದ್ರ, ದಾನವ ಇತ್ಯಾದಿ.

(2) ಬಾಹ್ಲೀಕ ವಂಶದ ಒಬ್ಬ ಕ್ಷತ್ರಿಯ ರಾಜ. ಇವನು ಶಲಭನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/30–31).

(3) ಒಬ್ಬ ನಾಗ. ಈತ ವರುಣ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತಾನೆ (ಸಭಾ 9/10).

(4) ಒಂದು ಭಾರತೀಯ ಜನಪದ (ಭೀಷ್ಮ 9/46).

**ಪ್ರಾಕೃತ** – ಒಂದು ಯಜ್ಞ. ಅದು ಹನ್ನೆರಡು ದಿನಗಳಲ್ಲಿ ಪೂರ್ಣವಾಗುತ್ತದೆ (ವನ 134/19).

**ಪ್ರಾಕ್ಕೋಸಲ** – ಪೂರ್ವಕೋಸಲ ದೇಶ. ಅದು ದಕ್ಷಿಣ ಭಾರತದಲ್ಲಿದೆ. ಇದನ್ನು ಸಹದೇವನು

ಗೆದ್ದಿದ್ದನು (ಸಭಾ 31/13).

**ಪ್ರಾಗ್ಜ್ಯೋತಿಷಪುರ** – ಒಂದು ಪ್ರಾಚೀನ ನಗರ. ಇದು ಭೌಮಾಸುರನ (ನರಕಾಸುರ) ರಾಜಧಾನಿಯಾಗಿತ್ತು (ಸಭಾ 38/29). ಭೌಮಾಸುರನ ಅನಂತರ ಭಗದತ್ತ ಪ್ರಧಾನ ರಾಜನಾದನು (ಸಭಾ 26/7–8). ಇದು ಅಸುರರ ಒಂದು ಅಜೇಯದುರ್ಗವಾಗಿತ್ತು. ಪೂರ್ವಕಾಲದಲ್ಲಿ ನರಕಾಸುರನು ಇಲ್ಲಿಯೇ ವಾಸವಾಗಿದ್ದನು (ಉದ್ಯೋಗ 48/80). ಭಗದತ್ತನ ಅನಂತರ ಇಲ್ಲಿ ವಜ್ರದತ್ತನು ರಾಜನಾದನು (ಆಶ್ವ 75/1).

**ಪ್ರಾಙ್‌ನದೀ** – ಇಲ್ಲಿಗೆ ಹೋದರೆ ದ್ವಿಜನು ಕೃತಾರ್ಥನಾಗಿ, ಇಂದ್ರಲೋಕಕ್ಕೆ ಹೋಗುತ್ತಾನೆ (ವನ 84/159).

**ಪ್ರಾಚೀನ್ವಂತ** (ಪ್ರಾಚಿನ್ವಾನ್) – ಮಹಾರಾಜ ಪೂರುವಿನ ಮೊಮ್ಮಗ ಮತ್ತು ಜನಮೇಜಯನ ಪುತ್ರ. ಇವನ ತಾಯಿಯ ಹೆಸರು ಅನಂತಾ ಎಂದಾಗಿತ್ತು. ಇವನು ಉದಯಾಚಲದಿಂದ ತೊಡಗಿ ಪೂರ್ವದಿಕ್ಕನ್ನೆಲ್ಲಾ ಒಂದೇ ದಿನದಲ್ಲಿ ಗೆದ್ದಿದ್ದನು. ಆದುದರಿಂದಲೇ ಇವನ ಹೆಸರು ಪ್ರಾಚೀನ್ವಂತನೆಂದಾಯಿತು. ಇವನ ಮೂಲಕ ಅಶ್ಮಕಿಯ ಗರ್ಭದಿಂದ ಸಂಯಾತಿಯ ಜನನವಾಯಿತು (ಆದಿ 95/12–13).

**ಪ್ರಾಚೀನಬರ್ಹಿ** – ಅತ್ರಿಕುಲದಲ್ಲಿ ಹುಟ್ಟಿದ ಐಶ್ವರ್ಯಶಾಲಿಯಾದ ಒಬ್ಬ ರಾಜ. ಇವನು ಹತ್ತು ಮಂದಿ ಪ್ರಚೇತಸರ ತಂದೆ (ಶಾಂತಿ 208/6). ಇವನು ಮನುವಂಶದ ಹವಿರ್ಧಾಮನ ಪುತ್ರ. ಇವನಿಂದ ಹತ್ತು ಮಂದಿ ಪ್ರಚೇತಸರಾದರು (ಅನು 147/24–25).

**ಪ್ರಾಚೇತಸ** – ದಕ್ಷ ಪ್ರಜಾಪತಿ. ಹತ್ತು ಮಂದಿ ಪ್ರಚೇತಸರ ಮೂಲಕ ವಾರ್ಕ್ಷಿ ಅಥವಾ ಮಾರಿಷೆಯ ಗರ್ಭದಿಂದ ಹುಟ್ಟಿದವನು (ಆದಿ 75/5). (ನೋಡಿರಿ – ದಕ್ಷ).

**ಪ್ರಾಚ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/58).

**ಪ್ರಾಜಾಪತ್ಯ** – ಒಂದು ರೀತಿಯ ವಿವಾಹ. ವರ ಮತ್ತು ಕನ್ಯೆ ಇಬ್ಬರೂ ಒಟ್ಟಾಗಿದ್ದು ಧರ್ಮಾಚರಣೆ ಮಾಡಲಿ ಎಂಬ ಬುದ್ಧಿಯಿಂದ ಕನ್ಯಾದಾನ ಮಾಡುವುದು ಪ್ರಾಜಾಪತ್ಯ ವಿವಾಹವೆಂದು ತಿಳಿಯಲ್ಪಡುತ್ತದೆ (ಆದಿ 73/8).

**ಪ್ರಾಂಜಲಿಕ** – ಕರ್ಣನು, ತನ್ನ ಹುಗಿದು ಹೋಗಿದ್ದ ರಥಚಕ್ರವನ್ನು ಎತ್ತಲು ವಿಫಲನಾಗಿದ್ದಾಗ, ಅರ್ಜುನನು ಪ್ರಾಂಜಲಿಕ ಅಸ್ತ್ರದಿಂದ, ಅವನ ಧ್ವಜವನ್ನು ಕತ್ತರಿಸಿದನು. ಅನಂತರ ಅಂಜಲಿಕವೆಂಬ ಅಸ್ತ್ರದಿಂದ ಆತನ ತಲೆಯನ್ನು ರುಳಿಸಿದನು (ಕರ್ಣ 91).

**ಪ್ರಾಣ** – ಸೋಮನೆಂಬ ವಸುವಿನ ಮೂಲಕ ಮನೋಹರೆಯ ಗರ್ಭದಲ್ಲಿ ಹುಟ್ಟಿದವನು. ಇವನು ವರ್ಚಾನ ತಮ್ಮ. ಇವನ ಇತರ ಇಬ್ಬರು ಸಹೋದರರಿದ್ದರು. – ಶಿಶಿರ ಮತ್ತು ರಮಣ (ಆದಿ 66/21).

**ಪ್ರಾಣವಾಯು** – ಶತ್ರುಗಳಿಗೆ ಸಂತಾಪವನ್ನುಂಟು ಮಾಡುವವನು. ಇತರರಿಂದ ವಿರೋಧಿಸಲು ಅಸಾಧ್ಯವಾದವನು. ಪ್ರಾಣಿಗಳಿಗೆ ಚೇಷ್ಟೆಗೆ ಕಾರಣನಾದವನು. ಪ್ರಾಣಿಗಳನ್ನು ಜೀವಿಸುವಂತೆ ಮಾಡುವವನು. ಅಪಾನನ ಪುತ್ರ (ಶಾಂತಿ 328).

**ಪ್ರಾಣಕ** – ಪ್ರಾಣನೆಂಬ ಅಗ್ನಿಯ ಪುತ್ರ (ವನ 220/1).

**ಪ್ರಾತರ** – ಕೌರವ್ಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/13).

**ಪ್ರಾತಿಕಾಮೀ** – ದುರ್ಯೋಧನನ ಸಾರಥಿ (ಸಭಾ 67/2–3). ಇವನು ದ್ರೌಪದಿಯನ್ನು ಕೌರವ ಸಭೆಗೆ ಕರೆಸಲು ಹೋದುದು (ಸಭಾ 67/4). ದ್ರೌಪದಿಯೊಂದಿಗೆ ಇವನ ಸಂವಾದ ಮತ್ತು ಆಕೆ ಹೇಳಿದ ಮಾತುಗಳನ್ನು ಸಭೆಯಲ್ಲಿ ಬಂದು ಹೇಳಿದುದು (ಸಭಾ 67/4–17). ಇವನು ಕೊಲ್ಲಲ್ಪಟ್ಟ ವರ್ಣನೆ (ಶಲ್ಯ 33/49).

**ಪ್ರಾಧಾ** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಕಶ್ಯಪನ ಪತ್ನಿ. ಅನವದ್ಯಾ ಮೊದಲಾದ ಎಂಟು ಕನ್ಯೆಯರು ಮತ್ತು ಹತ್ತು ದೇವಗಂಧರ್ವರು ಕೂಡಾ ಇವಳ ಸಂತಾನವಾಗಿದ್ದಾರೆ. ಈಕೆ ಹಾಹಾ, ಹೂಹೂ ತುಂಬುರು ಮತ್ತು ಅಸಿಬಾಹುವೆಂಬ ನಾಲ್ಕು ಶ್ರೇಷ್ಠ ಗಂಧರ್ವರ ಮತ್ತು ಅಲಂಬುಷಾದಿ ಹದಿಮೂರು ಕನ್ಯೆಯರ ಅಪ್ಸರೆಯರ ಜನನಿಯಾಗಿದ್ದಾಳೆ (ಆದಿ 65/12, 45–51).

**ಪ್ರಾಪ್ತಿ** – (1) ಧರ್ಮಪುತ್ರ ಶಮಾನ ಭಾರ್ಯೆ (ಆದಿ 66/33).

(2) ಜರಾಸಂಧನ ಪುತ್ರಿ. ಕಂಸನ ಪತ್ನಿ ಮತ್ತು ಸಹದೇವನ ತಂಗಿ. ಇವನ ಇನ್ನೊಬ್ಬ ಸಹೋದರಿಯ ಹೆಸರು ಅಸ್ತಿ ಎಂದಾಗಿತ್ತು. ಅವಳೂ ಕಂಸನ ಪತ್ನಿಯಾಗಿದ್ದಳು (ಸಭಾ 14/30–31).

**ಪ್ರಾವರಕ** (ಪ್ರಾವಾರ) – ಕ್ರೌಂಚದ್ವೀಪದ ಒಂದು ದೇಶ (ಭೀಷ್ಮ 12/22).

**ಪ್ರಾವಾರಕರ್ಣ** – ಹಿಮಾಲಯ ನಿವಾಸಿಯಾದ ಒಂದು ಚಿರಂಜೀವಿ ಗೂಗೆ (ವನ 199/4).

**ಪ್ರಾವೃಷೇಯ** – ಒಂದು ಭಾರತೀಯ ಜನಪದ (ಭೀಷ್ಮ 9/50).

**ಪ್ರಿಯಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

**ಪ್ರಿಯದರ್ಶನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/59).

**ಪ್ರಿಯಭೃತ್ಯ** – ಒಬ್ಬ ಪ್ರಾಚೀನ ರಾಜ (ಆದಿ 1/236).

**ಪ್ರಿಯಮಾಲ್ಯಾನುಲೇಪನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).

**ಪ್ರೇಕ್ಷಾಗೃಹ** – ಉತ್ಸವ ಅಥವಾ ನಾಟಕಾದಿಗಳನ್ನು ಅನುಕೂಲಕರವಾಗಿ ನೋಡುವುದಕ್ಕೋಸ್ಕರ ಮಾಡಲ್ಪಟ್ಟ ಭವನ. ರಾಜಕುಮಾರರ ಅಸ್ತ್ರಕೌಶಲದ ಪ್ರದರ್ಶನ ಕಾಲದಲ್ಲಿ ಇದನ್ನು ದ್ರೋಣಾಚಾರ್ಯನು ಶಿಲ್ಪಿಗಳ ಮೂಲಕ ಮಾಡಿಸಿದ್ದನು (ಆದಿ 133/11). ಈ ದಿವ್ಯ ಭವನದಲ್ಲಿ ಗಾಂಧಾರಿ, ಕುಂತಿಯೇ ಮೊದಲಾದವರು ಅಸ್ತ್ರಕೌಶಲ ನೋಡಲು ಆಗಮಿಸಿದುದು (ಆದಿ 133/15). ಅಲ್ಲಿ ರಾಜಕುಮಾರರ ಅಸ್ತ್ರ ಕೌಶಲ ಪ್ರದರ್ಶನ (ಆದಿ ಅಧ್ಯಾಯ 133ರಿಂದ 135ರ ತನಕ).

**ಪ್ರೋಷಕ** – ಒಂದು ಪಶ್ಚಿಮ ಭಾರತೀಯ ಜನಪದ (ಭೀಷ್ಮ 9/69).

**ಪ್ರೋಷ್ಠ** – ಒಂದು ಭಾರತೀಯ ಜನಪದ (ಭೀಷ್ಮ 9/61).

**ಪ್ಲಕ್ಷಜಾತಾ** – ಪ್ಲಕ್ಷ (ಅತ್ತಿಮರ)ದ ಬೇರಿನಿಂದ ಪ್ರಕಟಗೊಂಡ ಸರಸ್ವತಿ. ಗಂಗೆಯ ಏಳು ಧಾರೆಗಳಲ್ಲಿ ಒಂದು. ಇದರ ನೀರು ಕುಡಿದರೆ ಮನುಷ್ಯನ ಪಾಪ ತಕ್ಷಣ ನಾಶವಾಗುತ್ತದೆ (ಆದಿ 169/20–21).

**ಪ್ಲಕ್ಷಪ್ರಸ್ರವಣ ತೀರ್ಥ** – ಒಂದು ತೀರ್ಥ. ಇಲ್ಲಿಂದಲೇ ಸರಸ್ವತೀ ನದಿ ಪ್ರಕಟಗೊಂಡಳು (ಶಕ್ಯ 54/11).

**ಪ್ಲಕ್ಷವತೀ** – ಒಂದು ನದಿ. ಇದು ಸಾಯಂಪ್ರಾತಃಕಾಲಗಳಲ್ಲಿ ಕೀರ್ತನೆ ಮಾಡಲು ಯೋಗ್ಯವಾದುದು (ಅನು 165/25).

**ಪ್ಲಕ್ಷಾವತರಣ** – ಯಮುನೆಯ ಉಗಮದೊಂದಿಗೆ ಸಂಬಂಧವನ್ನಿಟ್ಟುಕೊಂಡಿರುವ ಒಂದು ಪುಣ್ಯ ತೀರ್ಥ. ಇದು ಸ್ವರ್ಗದ ದ್ವಾರವಾಗಿದೆ (ವನ 90/4; ವನ 129/13).

## ಫ

**ಫಲಕಕ್ಷ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿದ್ದುಕೊಂಡು ಅವನ ಸೇವೆ ಮಾಡುತ್ತಾನೆ (ಸಭಾ 10/16).

**ಫಲಕೀವನ** – ಒಂದು ತೀರ್ಥ. ಇಲ್ಲಿ ದೇವತೆಗಳು ಸದಾ ವಾಸಿಸುತ್ತಾರೆ ಮತ್ತು ಅನೇಕ ಸಹಸ್ರ ವರ್ಷಗಳ ವರೆಗೆ ದೊಡ್ಡ ತಪಸ್ಸಿನಲ್ಲಿ ಮಗ್ನರಾಗಿರುತ್ತಾರೆ (ವನ 83/86–87).

**ಫಲೋದಕ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿದ್ದುಕೊಂಡು ಅವನ ಸೇವೆ ಮಾಡುತ್ತಾನೆ (ಸಭಾ 10/16).

**ಫಲ್ಗು** – ಒಂದು ನದಿ ಮತ್ತು ತೀರ್ಥ. ಇಲ್ಲಿಗೆ ಹೋಗುವುದರಿಂದ ಅಶ್ವಮೇಧ ಯಜ್ಞದ ಫಲ ಸಿಗುತ್ತದೆ. ಮತ್ತು ಬಹಳ ದೊಡ್ಡ ಸಿದ್ಧಿ ಪ್ರಾಪ್ತವಾಗುತ್ತದೆ. ಇಲ್ಲಿ ಪಿತೃಗಳಿಗೆ ಕೊಟ್ಟ ಅನ್ನ ಅಕ್ಷಯವಾಗುತ್ತದೆ (ವನ 84/98; ವನ 87/12).

**ಫಾಲ್ಗುನ** – (1) ಅರ್ಜುನನ ಒಂದು ಹೆಸರು. ಹಿಮಾಲಯದ ಶಿಖರದ ಮೇಲೆ ಉತ್ತರಾಫಾಲ್ಗುಣಿ ನಕ್ಷತ್ರದಲ್ಲಿ ಅರ್ಜುನನ ಜನನವಾಯಿತು. ಆದುದರಿಂದ ಇವನಿಗೆ ಫಾಲ್ಗುನನೆಂದೂ ಒಂದು ಹೆಸರಿದೆ (ವಿರಾಟ 44/9, 16).

(2) ಹನ್ನೆರಡು ತಿಂಗಳುಗಳಲ್ಲಿ ಒಂದು ತಿಂಗಳು (ಯಾವ ತಿಂಗಳ ಪೂರ್ಣಿಮೆಯಂದು ಪೂರ್ವಾಫಾಲ್ಗುನಿ ಅಥವಾ ಉತ್ತರಾಫಾಲ್ಗುನಿ ನಕ್ಷತ್ರದ ಯೋಗವಿರುತ್ತದೊ, ಅದನ್ನು ಫಾಲ್ಗುಣ ಮಾಸವೆನ್ನುತ್ತಾರೆ. ಇದು ಮಾಘಮಾಸದ ಅನಂತರ ಮತ್ತು ಚೈತ್ರಮಾಸದ ಮೊದಲು ಬರುತ್ತದೆ.) ಫಾಲ್ಗುಣ ಮಾಸದಲ್ಲಿ ಒಂದು ಬಾರಿ

ಭೋಜನಮಾಡಿ ಆ ಮಾಸವನ್ನು ಕಳೆಯುವವನು ತನ್ನ ಹೆಂಡತಿಯ ಪ್ರೀತಿಪಾತ್ರನಾಗಿರುತ್ತಾನೆ ಮತ್ತು ಆಕೆ ಅವನ ಅಧೀನಳಾಗಿರುತ್ತಾಳೆ (ಅನು 106/22). ಈ ಮಾಸದ ದ್ವಾದಶಿ ತಿಥಿಯಂದು, ಉಪವಾಸಪೂರ್ವಕವಾಗಿ ಗೋವಿಂದ ನಾಮ ದಿಂದ ಭಗವಂತನ ಪೂಜೆ ಮಾಡುವವ ಅತಿರಾತ್ರ ಯಜ್ಞದ ಫಲಪಡೆಯುತ್ತಾನೆ. ಮತ್ತು ಮರಣಾನಂತರ ಸೋಮಲೋಕಕ್ಕೆ ಹೋಗುತ್ತಾನೆ (ಅನು 109/6).

## ಬ

**ಬದರಿಕಾ** (ಅಥವಾ ಬದರೀ) – ಸುಪ್ರಸಿದ್ಧ ಬದರಿಕಾಶ್ರಮ ತೀರ್ಥ. ಇಲ್ಲಿ ಪೂರ್ವಕಾಲದಲ್ಲಿ ನರನಾರಾಯಣರು ಅನೇಕ ಬಾರಿ ಹತ್ತು ಹತ್ತು ಸಾವಿರ ವರ್ಷಗಳ ವರೆಗೆ ತಪಸ್ಸು ಮಾಡಿದ್ದರು (ವನ 40/1). ಈ ತೀರ್ಥದಲ್ಲಿ ಸ್ನಾನ ಮಾಡಿ ಮನುಷ್ಯ ದೀರ್ಘಾಯುಸ್ಸನ್ನು ಪಡೆಯುತ್ತಾನೆ ಮತ್ತು ಸ್ವರ್ಗಕ್ಕೆ .ಹೋಗುತ್ತಾನೆ (ವನ 85/13). ಪಾಂಡವರು ಇಲ್ಲಿಗೆ ಯಾತ್ರೆ ಮಾಡಿದ್ದರು. ಇಲ್ಲಿ ನರನಾರಾಯಣರ ಆಶ್ರಮ ಮತ್ತು 'ಅಲಕ–ನಂದಾ' ಎಂಬ ಹೆಸರಿನ ಭಾಗೀರಥಿಯ ಧಾರೆ ಇದೆ. ಇಲ್ಲಿರುವ ಪ್ರಾಕೃತಿಕ ಶೋಭೆಯ ವರ್ಣನೆ (ವನ 145).

**ಬದರೀಪಾಚನ (ಅಥವಾ ಬದರಪಾಚನ). ತೀರ್ಥ** – ಕುರುಕ್ಷೇತ್ರದ ಒಳಗಿರುವ ಒಂದು ತೀರ್ಥ. ಇಲ್ಲಿ ಮೂರು ರಾತ್ರಿ ಉಪವಾಸಮಾಡಿ, ಬೋರೇ ಹಣ್ಣನ್ನು ತಿಂದು, ಹನ್ನೆರಡು ವರ್ಷಗಳ ತನಕ ಇದ್ದರೆ, ಮನುಷ್ಯ ವಸಿಷ್ಠನಿಗೆ ಸಮಾನನಾಗುತ್ತಾನೆ (ವನ 83/179–181).

**ಬದರೀವನ** – ಒಂದು ಪುಣ್ಯ ತೀರ್ಥ. ಇದರ ಹತ್ತಿರ ವಿಶಾಲಪುರಿ ಇದೆ. ಇವೆಲ್ಲಾ ಸೇರಿ ಬದರಿಕಾಶ್ರಮ ತೀರ್ಥವಿದೆ (ವನ 90/25). ಇದರ ವಿಸ್ತಾರಪೂರ್ವಕ ವರ್ಣನೆ (ವನ 145/13–24).

**ಬಧಿರ** – ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 74/16).

**ಬಂಧುದಾಯಾದ** – ಕುಟುಂಬದವನಾದುದರಿಂದ ಉತ್ತರಾಧಿಕಾರೀ ಪುತ್ರ (ಆದಿ 119/32–33). ಆರು ರೀತಿಯ ಪುತ್ರರು ಬಂಧು ದಾಯಾದರೆಂದು ಹೇಳಲ್ಪಡುತ್ತಾರೆ. ಅವರ ಹೆಸರು ಹೀಗಿದೆ– (1) 'ಸ್ವಯಂಜಾತ' (ತನ್ನ ವಿವಾಹಿತೆ ಪತ್ನಿಯ ಗರ್ಭದಿಂದ ತನ್ನ ಮೂಲಕವೇ ಹುಟ್ಟಿದ್ದವನು.) (2) 'ಪ್ರಣೀತ' (ತನ್ನ ಪತ್ನಿಯ ಗರ್ಭದಿಂದ ಯಾರಾದರೂ ಉತ್ತಮ ಪುರುಷನ ಅನುಗ್ರಹದ ಮೂಲಕ ಹುಟ್ಟಿದವನು). (3) 'ಪುತ್ರಿಕಾಪುತ್ರ' (ತನ್ನ ಪುತ್ರಿಯ ಪುತ್ರ). (4) 'ಪೌನರ್ಭವ' (ಎರಡನೇ ಬಾರಿ ವಿವಾಹವಾದ ಸ್ತ್ರೀಯಿಂದ ಹುಟ್ಟಿದವನು). (5) 'ಕಾನೀನ' (ಈಕೆಯ ಗರ್ಭದಿಂದ ಹುಟ್ಟುವ ಪುತ್ರ ನನ್ನ ಪುತ್ರನೆಂದೇ ತಿಳಿಯಲ್ಪಡುವನು ಎಂಬ ಶರ್ತದೊಂದಿಗೆ (ವಿವಾಹಕ್ಕೆ ಮೊದಲೇ). ಯಾವ ಕನ್ಯೆ ಕೊಡಲ್ಪಡುವಳೋ ಆ ಕನ್ಯೆಯಿಂದ ಹುಟ್ಟಿದವನು.) (6) ಸೋದರಳಿಯ (ಸಹೋದರಿಯ ಪುತ್ರ).

**ಬಭ್ರು** – (1) ವೃಷ್ಣಿವಂಶದ ಒಬ್ಬ ಯಾದವ. ಇವನು ರೈವತಕ ಪರ್ವತದ ಮಹೋತ್ಸವದಲ್ಲಿ ಭಾಗಿಯಾಗಿದ್ದನು (ಆದಿ 218/10). ಯದು ವಂಶದ ಏಳು ಮಂದಿ ಮಹಾರಥರಲ್ಲಿ ಇವನೂ ಒಬ್ಬನಾಗಿದ್ದನು (ಸಭಾ 14/60). ದ್ವಾರಕೆಗೆ ಹೋಗುತ್ತಿದ್ದಾಗ ತಪಸ್ವಿಯಾದ ಈ ಬಭ್ರುವಿನ ಪತ್ನಿಯನ್ನು ಶಿಶುಪಾಲನು ಅಪಹರಿಸಿದ್ದನು (ಸಭಾ 45/10). ಇವನೂ ಶ್ರೀಕೃಷ್ಣನ ಹತ್ತಿರದಲ್ಲೇ, ತಯಾರಿಸಲ್ಪಟ್ಟ ಪೇಯ ಪದಾರ್ಥವನ್ನು ಕುಡಿದಿದ್ದನು (ಮೌಸಲ 3/16–17). ವ್ಯಾಧನ ಬಾಣಕ್ಕೆ ತಗುಲಿಸಿದ್ದ ಒಂದು ಒನಕೆಯ ಮೂಲಕ ಇವನ ಮರಣವಾಯಿತು (ಮೌಸಲ 4/5–6). ಶಾಂತಿಪರ್ವದ 81/17ರಲ್ಲಿ ಅಕ್ರೂರನಿಗೂ ಬಭ್ರು ಶಬ್ದ ಪ್ರಯೋಗ ಬಂದಿದೆ.

(2) ಶ್ರೀಕೃಷ್ಣನ ಕೃಪೆಗೆ ಪಾತ್ರನಾದ ಕಾಶಿಯ ರಾಜ. ಇವನು ಶ್ರೀಕೃಷ್ಣನ ಕೃಪೆಯಿಂದ ರಾಜ್ಯ ಲಕ್ಷ್ಮಿಯನ್ನು ಪ್ರಾಪ್ತಿಸಿಕೊಂಡಿದ್ದನು (ಉದ್ಯೋಗ 28/13).

(3). ಇವನು ಮತ್ಸ್ಯರಾಜ ವಿರಾಟನ ಒಬ್ಬ ವೀರಪುತ್ರನಾಗಿದ್ದನು (ಉದ್ಯೋಗ 57/33).

(4). ಮಹರ್ಷಿ ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/50).

**ಬಭ್ರುಮಾಲೀ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಾನೆ (ಸಭಾ 4/16).

**ಬಭ್ರುವಾಹನ** – ರಾಜಾ ಚಿತ್ರವಾಹನನ ಪುತ್ರಿ ಚಿತ್ರಾಂಗದೆಯ ಗರ್ಭದಿಂದ ಅರ್ಜುನನ ಮೂಲಕ ಹುಟ್ಟಿದ ಒಬ್ಬ ವೀರ ರಾಜ (ಆದಿ 216/24). ಚಿತ್ರವಾಹನನು ತನ್ನ ಕನ್ಯೆಯನ್ನು ಅರ್ಜುನನಿಗೆ ಕೊಡುವ ಮೊದಲೇ ಈ ಶರ್ತ ವನ್ನಿಟ್ಟಿದ್ದನು. 'ಈಕೆಯ ಗರ್ಭದಿಂದ ಹುಟ್ಟುವ ಮಗನು ಇಲ್ಲಿಯೇ ಇದ್ದು ಈ ಕುಲ ಪರಂ ಪರೆಯ ಪ್ರವರ್ತಕನಾಗಿರಬೇಕು. ಈ ಕನ್ಯೆಯ ವಿವಾಹಾರ್ಥವಾಗಿ ನೀವು ಈ ಶುಲ್ಕ ತೆರಬೇಕಾ ಗುತ್ತದೆ.' 'ತಥಾಸ್ತು' ಎಂದು ಹೇಳಿ ಅರ್ಜುನನು ಹಾಗೆಯೇ ಮಾಡುವ ಪ್ರತಿಜ್ಞೆ ಮಾಡಿದನು. ಪುತ್ರನ ಜನನವಾದಾಗ 'ಬಭ್ರುವಾಹನ'ನೆಂದು ಅವನಿಗೆ ಹೆಸರಿಡಲಾಯಿತು. ಅವನನ್ನು ನೋಡಿ ಅರ್ಜುನನು ಚಿತ್ರವಾಹನನೊಡನೆ ಹೇಳಿದನು– 'ಮಹಾರಾಜ! ಈ ಬಭ್ರುವಾಹನನನ್ನು ತಾವು ಚಿತ್ರಾಂಗದೆಯ ಶುಲ್ಕ ರೂಪದಲ್ಲಿ ಸ್ವೀಕರಿಸಿರಿ. ಇದರಿಂದಾಗಿ ನಾನು ತಮ್ಮ ಋಣದಿಂದ ಮುಕ್ತ ನಾಗುವೆನು' ಈ ಪ್ರಕಾರ ಇವನು ಧರ್ಮಪ್ರಕಾರ ವಾಗಿ ಚಿತ್ರವಾಹನನ ಪುತ್ರನೆಂದು ತಿಳಿಯಲ್ಪಟ್ಟನು (ಆದಿ 214/24–26; ಆದಿ 216/24–25). ತನ್ನ ತಂದೆ ಅರ್ಜುನ ಮಣಿಪೂರದ ಸಮೀಪ ಬಂದನೆಂದು ತಿಳಿದು, ಈತ ಅಪಾರಧನವನ್ನು ತನ್ನೊಂದಿಗೆ ತೆಗೆದುಕೊಂಡು, ಆತನ ದರ್ಶನಕ್ಕಾಗಿ ನಗರದಿಂದ ಹೊರಗೆ ನಿರ್ಗಮಿಸಿದುದು (ಆಶ್ವ 79/1). ಕ್ಷತ್ರಿಯ ಧರ್ಮಕ್ಕೆ ಸರಿಯಾಗಿ ಯುದ್ಧ ಮಾಡದಿದ್ದುದರಿಂದ ಅರ್ಜುನನು ಈತನನ್ನು ಧಿಕ್ಕರಿಸಿದುದು (ಆಶ್ವ 79/3–7). ಉಲೂಪಿ ಪ್ರೋತ್ಸಾಹಿಸಿದುದರಿಂದ ಈತ ಅರ್ಜುನನೊಂದಿಗೆ ಯುದ್ಧಮಾಡಲು ಸಿದ್ಧನಾದುದು ಮತ್ತು ಅಶ್ವ ಮೇಧ ಸಂಬಂಧಿ ಕುದುರೆಯನ್ನು ಬಂಧಿಸಿ ದುದು (ಆಶ್ವ 79/8–17). ತಂದೆ ಮತ್ತು ಮಗನಲ್ಲಿ ಪರಸ್ಪರ ಅದ್ಭುತ ಯುದ್ಧ, ಬಭ್ರು ವಾಹನನು ಅರ್ಜುನನನ್ನು ಮೂರ್ಛೆಗೊಳಿಸಿ ತಾನೂ ಮೂರ್ಛೆಹೊಂದಿದುದು (ಆಶ್ವ 79/ 18–37). ಮೂರ್ಛೆಯಿಂದ ಎಚ್ಚತ್ತಾಗ ಬಭ್ರು ವಾಹನನ ದುಃಖ ಮತ್ತು ಆಮರಣ ಅನಶನ ಮಾಡುವ ಪ್ರತಿಜ್ಞೆ ಮಾಡಿ ಕುಳಿತದ್ದು (ಆಶ್ವ 80/21–40). ಉಲೂಪಿಯು ಬಭ್ರುವಾಹನನಿಗೆ ಸಮಾಧಾನ ಹೇಳಿ, ಅವನ ಕೈಗೆ ದಿವ್ಯಮಣಿಯ ನ್ನಿತ್ತದ್ದು ಮತ್ತು ಅದನ್ನು ತಂದೆಯ ವಕ್ಷಸ್ಥಲದ ಮೇಲೆ ಇರಿಸಲು ಆದೇಶ ನೀಡಿದುದು (ಆಶ್ವ 80/42–50). ಮಣಿಯ ಸ್ಪರ್ಶದಿಂದ ಜೀವಂತ ನಾದ ತಂದೆಗೆ ಬಭ್ರುವಾಹನನು ಪ್ರಣಾಮ ಮಾಡಿದುದು ಮತ್ತು ತಂದೆ ಮಗನನ್ನು ಅಪ್ಪಿ ಕೊಂಡದ್ದು (ಆಶ್ವ 80/51–56). ಅರ್ಜುನನು ಬ್ರಭ್ರುವಾಹನನೊಡನೆ ಯುದ್ಧಸ್ಥಳದಲ್ಲಿ ಉಲೂಪಿ ಮತ್ತು ಚಿತ್ರಾಂಗದೆಯರು ಉಪಸ್ಥಿತರಿದ್ದ ಕಾರಣ ಕೇಳಿದುದು ಮತ್ತು ಉಲೂಪಿಯೊಡನೆಯೇ ಕೇಳುವಂತೆ ಬಭ್ರುವಾಹನ ಪ್ರಾರ್ಥಿಸಿದುದು (ಆಶ್ವ 80/57–61). ಉಲೂಪಿಯಿಂದ ಎಲ್ಲಾ ಸಮಾಚಾರ ಕೇಳಿ ಪ್ರಸನ್ನನಾದ ಅರ್ಜುನ, ಬಭ್ರುವಾಹನನಿಗೆ ತನ್ನ ಇಬ್ಬರೂ ಮಾತೆಯ ರೊಂದಿಗೆ ಯುಧಿಷ್ಠಿರನ ಅಶ್ವಮೇಧ ಯಜ್ಞಕ್ಕೆ ಬರುವಂತೆ ಆಮಂತ್ರಣವನ್ನಿತ್ತದ್ದು (ಆಶ್ವ 81/1– 24). ಪಿತನ ಆಜ್ಞೆ ಶಿರೋಧಾರ್ಯವೆಂದು ಸ್ವೀಕರಿಸಿ, ಬಭ್ರುವಾಹನನು ತಂದೆಯೊಡನೆ ನಗರಕ್ಕೆ ಬರಬೇಕೆಂದು ಆಗ್ರಹ ಮಾಡಿದುದು. ಅರ್ಜುನನು 'ಎಲ್ಲಿಯೂ ನಿಲ್ಲುವ ನಿಯಮ ಇಲ್ಲ'ವೆಂದು ಹೇಳಿ ಮಗನಿಂದ ಸತ್ಕಾರಪೂರ್ವಕ ವಿದಾಯ ಹೊಂದಿ, ಅಲ್ಲಿಂದ ತೆರಳಿದುದು (ಆಶ್ವ 81/26–32). ಅರ್ಜುನನ ಸಂದೇಶವನ್ನು ಶ್ರೀಕೃಷ್ಣನು ಧರ್ಮರಾಯನಿಗೆ ತಿಳಿಸುತ್ತಾ, ರಾಜಾ ಬಭ್ರುವಾಹನನ ಭಾವೀ ಆಗಮನದ ವರ್ಣನೆ ಮಾಡಿದುದು (ಆಶ್ವ 86/18–20). ಮಾತೆಯರ ಸಹಿತ ಕುರುದೇಶಕ್ಕೆ ಬಭ್ರುವಾಹನನ ಆಗಮನ ಮತ್ತು ಹಿರಿಯರಿಗೆ ನಮಸ್ಕರಿಸಿ ಅವರು ಕುಂತಿಯ ಅರಮನೆಯನ್ನು ಪ್ರವೇಶಿಸಿದುದು (ಆಶ್ವ 87/26–28). ಮಾತೆಯರ ಸಹಿತ ಬಭ್ರುವಾಹನನು ಕುಂತಿ, ದ್ರೌಪದಿ ಮತ್ತು ಸುಭದ್ರೆಯೇ ಮೊದಲಾದವರ ಚರಣಗಳಿಗೆ ವಂದಿಸಿದುದು ಮತ್ತು ಅವರೆಲ್ಲರ ಮೂಲಕ ರತ್ನಾಭರಣಾದಿಗಳಿಂದ ಸಮ್ಮಾನಿತನಾದುದು (ಆಶ್ವ 88/1–5). ಅಂತಃಪುರದಿಂದ ಬಂದು ಬಭ್ರುವಾಹನನು ರಾಜಾ ಧೃತರಾಷ್ಟ್ರ, ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವ ಮತ್ತು ಭಗವಾನ್ ಶ್ರೀಕೃಷ್ಣನಿಗೆ ಪ್ರಣಾಮ ಮಾಡಿದುದು;

ಅವರೆಲ್ಲರ ಮೂಲಕ ಧನಾದಿಗಳಿಂದ ಸತ್ಕೃತನಾದುದು. ಶ್ರೀಕೃಷ್ಣನು ಬಭ್ರುವಾಹನನಿಗೆ ದಿವ್ಯ ಅಶ್ವಗಳಿಂದ ಜೋಡಿಸಲ್ಪಟ್ಟ ಸುವರ್ಣಮಯ ರಥವನ್ನು ಪ್ರದಾನ ಮಾಡಿದುದು (ಆಶ್ವ 88/6-11). ರಾಜಾಯುಧಿಷ್ಠಿರನು ಅಪಾರ ಧನವನ್ನಿತ್ತು, ಬಭ್ರುವಾಹನನನ್ನು ಬೀಳ್ಕೊಂಡದ್ದು (ಆಶ್ವ 89/34). ಮಹಾಭಾರತದಲ್ಲಿ ಬಂದ ಬಭ್ರುವಾಹನನ ಹೆಸರುಗಳು – ಬಭ್ರುವಾಹ, ಚಿತ್ರಾಂಗದಾಸುತ, ಚಿತ್ರಾಂಗದಾತ್ಮಜ, ಧನಂಜಯ ಸುತ, ಮಣಿಪೂರಪತಿ, ಮಣಿಪೂರೇಶ್ವರ ಇತ್ಯಾದಿ.

**ಬರ್ಬರ** – ಒಂದು ಪ್ರಾಚೀನ ದೇಶ ಮತ್ತು ಅಲ್ಲಿರುವ ಜನರು. ನಂದಿನಿಯ ಪಾರ್ಶ್ವ ಭಾಗದಿಂದ ಹುಟ್ಟಿದ ಮ್ಲೇಚ್ಛ ಜಾತಿಯಲ್ಲಿ ಸೇರಿದವರಾಗಿದ್ದಾರೆ (ಆದಿ 174/37). ಪೂರ್ವ ದಿಗ್ವಿಜಯ ಕಾಲದಲ್ಲಿ ಭೀಮಸೇನನಿಂದ ಇವರು ಸೋಲಿಸಲ್ಪಟ್ಟರು (ಸಭಾ 30/14). ನಕುಲನೂ ಪಶ್ಚಿಮ ದಿಗ್ವಿಜಯ ಕಾಲದಲ್ಲಿ ಇವರನ್ನು ಸೋಲಿಸಿ ಕಪ್ಪಕಾಣಿಕೆ ಪಡೆದಿದ್ದನು (ಸಭಾ 32/17). ಇವರು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಪ್ಪಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 51/23).

**ಬರ್ಹಿ** – ಒಬ್ಬ ದೇವ ಗಂಧರ್ವ. ಕಶ್ಯಪನ ಮೂಲಕ ಪ್ರಾಧಾ ಎಂಬವಳ ಗರ್ಭದಿಂದ ಹುಟ್ಟಿದ ಹತ್ತು ದೇವಗಂಧರ್ವರಲ್ಲಿ ಒಬ್ಬ (ಆದಿ 65/46).

**ಬರ್ಹಿಷದ** – (1) ಪಿತೃಗಳ ಒಂದು ದಳ. ಇವರು ಯಮನ ಸಭೆಯಲ್ಲಿರುತ್ತಾರೆ (ಸಭಾ 8/30). ಇವರು ಮೃತ ವ್ಯಕ್ತಿಗಾಗಿ ಮಂತ್ರಪಠನಕ್ಕೆ ಅನುಮತಿ ಕೊಡುತ್ತಾರೆ (ಶಾಂತಿ 269/15).

(2) ತ್ರಿಲೋಕವನ್ನು ಉತ್ಪನ್ನಗೊಳಿಸಲು ಸಮರ್ಥರಾದ ಪೂರ್ವದಿಕ್ಕಿನ ನಿವಾಸಿಗಳಾದ ಸರ್ಪರ್ಷಿಗಳಲ್ಲಿ ಈತನೂ ಒಬ್ಬ (ಶಾಂತಿ 208/27-28). ಬ್ರಹ್ಮನು ಈತನಿಗೆ ಸಾತ್ವತ ಧರ್ಮದ ಉಪದೇಶನೀಡಿದ್ದನು ಮತ್ತು ಇವನು ಜ್ಯೇಷ್ಠನೆಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿಗೆ ಈ ಧರ್ಮವನ್ನು ಉಪದೇಶಿಸಿದನು (ಶಾಂತಿ 348/45-46).

**ಬಲ** – (1) ಕಶ್ಯಪನ ಮೂಲಕ ದನಾಯುವಿನ ಗರ್ಭದಿಂದ ಹುಟ್ಟಿದ ಒಬ್ಬ ಅಸುರ. ಇವನಿಗೆ ಇತರ ಮೂವರು ಸಹೋದರರಿದ್ದರು. ಅವರ ಹೆಸರು– ವಿಕ್ಷರ, ವೀರ ಮತ್ತು ವೃತ್ರ (ಆದಿ 65/33). ಇವನೇ ಪಾಂಡ್ಯದೇಶದ ರಾಜನ ರೂಪದಲ್ಲಿ ಹುಟ್ಟಿದ್ದನು (ಆದಿ 67/42). ಇಂದ್ರನಿಂದ ಇವನು ಪರಾಜಿತನಾದ ವರ್ಣನೆ (ವನ 168/81).

(2) ವರುಣನ ವೀರ್ಯದಿಂದ ಅವನ ಜ್ಯೇಷ್ಠ ಪತ್ನಿ ದೇವಿಯ ಗರ್ಭದಲ್ಲಿ ಹುಟ್ಟಿದವನು (ಆದಿ 66/52).

(3) ಇಕ್ಷ್ವಾಕುವಂಶದ ರಾಜ ಪರೀಕ್ಷಿತನ ಮೂಲಕ, ಮಂಡೂಕರಾಜನ ಕನ್ಯೆ ಸುಶೋಭನಾಳ ಗರ್ಭದಿಂದ ಹುಟ್ಟಿದವನು. ಇವನಿಗೆ ಇಬ್ಬರು ಸಹೋದರರಿದ್ದರು– ಶಲ ಮತ್ತು ದಲ (ವನ 192/38).

(4) ಒಬ್ಬ ವಾನರ. ಇವನು ಕುಂಭಕರ್ಣನೊಂದಿಗೆ ಯುದ್ಧಮಾಡಿ, ಅವನಿಗೆ ತುತ್ತಾಗಿದ್ದನು (ವನ 287/6).

(5) ವಾಯುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಅತಿಬಲನೆಂದಾಗಿತ್ತು (ಶಲ್ಯ 45/44).

(6) ಒಬ್ಬ ಪ್ರಾಚೀನ ಋಷಿ. ಇವನು ಅಂಗೀರಸನ ಪುತ್ರ, ಪೂರ್ವದಿಕ್ಕಿನಲ್ಲಿ ವಾಸಿಸುತ್ತಾನೆ (ಶಾಂತಿ 208/27-28).

(7) ಒಬ್ಬ ಸನಾತನ ವಿಶ್ವೇದೇವ (ಅನು 91/30).

**ಬಲದ** – ಇವನು ಭಾನುವೆಂಬ ಅಗ್ನಿಯ ಪ್ರಥಮ ಪುತ್ರ, ಇವನು ಪ್ರಾಣಿಗಳಿಗೆ ಪ್ರಾಣ ಮತ್ತು ಬಲ ಪ್ರದಾನ ಮಾಡುತ್ತಾನೆ (ಶಾಂತಿ 221/10).

**ಬಲದೇವ** (ಬಲರಾಮ) – (1) ವಸುದೇವ ಮತ್ತು ರೋಹಿಣಿಯ ಪುತ್ರ, ಶ್ರೀಕೃಷ್ಣನ ಅಣ್ಣ, ಮಹಾಶೇಷನ ಅವತಾರ (ಆದಿ 67/152). ಭಗವಂತನಾದ ನಾರಾಯಣನ ಬಿಳಿಯ ಕೇಶದಿಂದ ಇವನ ಜನ್ಮವಾಯಿತು (ಆದಿ 196/33). ಇವನ ಮೂಲಕ ಭೀಮಸೇನನಿಗೆ ಗದಾಯುದ್ಧದ ಶಿಕ್ಷಣ (ಆದಿ 138/4). ದ್ರೌಪದೀ ಸ್ವಯಂವರಕ್ಕೆ ಶ್ರೀಕೃಷ್ಣ ಸಹಿತನಾಗಿ ಇವನ ಆಗಮನ (ಆದಿ 185/17). ದ್ರೌಪದೀ ಸ್ವಯಂವರದಲ್ಲಿ ಭೀಮಾರ್ಜುನರ ಕುರಿತಾಗಿ ಶ್ರೀಕೃಷ್ಣನೊಡನೆ ಇವನ ಮಾತುಕತೆ (ಆದಿ

188/24). ಪಾಂಡವರನ್ನು ಭೇಟಿಯಾಗಲು ಇವನು ಶ್ರೀಕೃಷ್ಣನೊಂದಿಗೆ ಕುಂಬಾರನ ಮನೆಗೆ ಹೋದುದು (ಆದಿ 190/1–8). ಸುಭದ್ರಾ ಹರಣದ ಸಂದರ್ಭದಲ್ಲಿ ಅರ್ಜುನನ ಮೇಲೆ ಇವನ ಕೋಪ (ಆದಿ 219/25–31). ಶ್ರೀ ಕೃಷ್ಣನು ಇವನನ್ನು ಶಾಂತಗೊಳಿಸಿದುದು (ಆದಿ 220/1–11). ಇವನು ದೇವಕಿಯ ಗರ್ಭದಲ್ಲಿದ್ದನು. ಆದರೆ ಯಮರಾಜನು ಯಾಮ್ಯ ಮಾಯೆಯ ಮೂಲಕ ಇವನನ್ನು ರೋಹಿಣಿಯ ಗರ್ಭದಲ್ಲಿರಿಸಿದನು. ಈ ಸಂಕರ್ಷಣ ಕಾರ್ಯದಿಂದಾಗಿ ಇವನಿಗೆ 'ಸಂಕರ್ಷಣ'ನೆಂದೂ, ಬಲಾಧಿಕ್ಯವಿದ್ದುದರಿಂದ 'ಬಲದೇವ'ನೆಂದೂ ಹೆಸರಾಯಿತು (ಸಭಾ 22/36). ಇವನಿಂದ ಧೇನುಕಾಸುರ ವಧೆ (ಸಭಾ 38/29). ಮುಷ್ಟಿಕನ ವಧೆ (ಸಭಾ 38/29). ಸಾಂದೀಪನಿ ಮುನಿಯ ಆಶ್ರಮದಲ್ಲಿ ಇವನ ಅಧ್ಯಯನ (ಸಭಾ 38/29). ಪ್ರಭಾಸ ಕ್ಷೇತ್ರದಲ್ಲಿ ಪಾಂಡವರ ಪರವಾಗಿ ಇವನಿಂದ ಸಹಾನುಭೂತಿ ಪೂರ್ಣ ದುಃಖದ ಉದ್ಗಾರ (ವನ 119/5–22). ಅಭಿಮನ್ಯುವಿನ ವಿವಾಹಕ್ಕಾಗಿ ಉಪಪ್ಲವ್ಯ ನಗರಕ್ಕೆ ಹೋದುದು (ವಿರಾಟ 72/21). ಕೌರವ ಪಾಂಡವರೊಳಗೆ ಸಂಧಿಯ ಆಶೆಯನ್ನಿಟ್ಟುಕೊಂಡು ದೂತನನ್ನು ಕಳುಹಿಸುವ ವಿಚಾರಕ್ಕೆ ಇವನ ಸಮರ್ಥನೆ (ಉದ್ಯೋಗ 2). ದುರ್ಯೋಧನನು ಸಹಾಯ ಕೇಳಿದಾಗ; ಇವನು ಆತನಿಗಾಗಲಿ, ಅರ್ಜುನನಿಗಾಗಲಿ ಸಹಾಯ ಕೊಡುವುದನ್ನು ತಿರಸ್ಕರಿಸಿದುದು (ಉದ್ಯೋಗ 7/29). ಕುರುಕ್ಷೇತ್ರದಲ್ಲಿ ಪಾಂಡವರ ಶಿಬಿರಕ್ಕೆ ಆಗಮಿಸಿದುದು (ಉದ್ಯೋಗ 157/17). ಇವನು ತೀರ್ಥಯಾತ್ರೆಗೆ ನಿರ್ಗಮಿಸಿದುದು (ಉದ್ಯೋಗ 157/35). ದುರ್ಯೋಧನ ಮತ್ತು ಭೀಮಸೇನರ ಗದಾಯುದ್ಧ ಪ್ರಾರಂಭದಲ್ಲಿ ಇವನ ಆಗಮನ. ಆಗ ಅಲ್ಲಿದ್ದ ರಾಜರಿಂದ ಸತ್ಕಾರ (ಶಲ್ಯ 34). ಇವನ ತೀರ್ಥಯಾತ್ರೆಯ ವರ್ಣನೆ (ಶಲ್ಯ 35ರಿಂದ 54ರ ವರೆಗೆ). ಇವನು ನಾರದನೊಡನೆ ಕೌರವ ನಾಶದ ಕುರಿತು ಕೇಳಿದುದು (ಶಲ್ಯ 54/24–25). ಭೀಮಸೇನ ಮತ್ತು ದುರ್ಯೋಧನರ ಗದಾಯುದ್ಧಕ್ಕಾಗಿ ಎಲ್ಲರನ್ನೂ ಸಮಂತಪಂಚಕಕ್ಕೆ ಕರಕೊಂಡು ಹೋದುದು (ಶಲ್ಯ 55/6–10). ಅನ್ಯಾಯವಾಗಿ ದುರ್ಯೋಧನನು ಹೊಡೆಯಲ್ಪಟ್ಟಾಗ ಇವನು ಕುಪಿತನಾಗಿ, ಭೀಮಸೇನನನ್ನು ಹೊಡೆಯಲು ಸಿದ್ಧನಾದುದು (ಶಲ್ಯ 60/4–10). ಭೀಮಸೇನನ ಈ ಕರ್ಮವನ್ನು ನಿಂದಿಸಿ ದ್ವಾರಕೆಗೆ ನಿರ್ಗಮಿಸಿದುದು (ಶಲ್ಯ 60/27–30). ಇವನಿಂದ ಧರ್ಮ ರಹಸ್ಯದ ವರ್ಣನೆ (ಶಲ್ಯ 126/17–19). ಶಿವನ ಮೂಲಕ, ಇವನ ರೂಪದಲ್ಲಿ ಭಗವಾನ್ ಅನಂತನ ಭಾವೀ ಅವತಾರ ಮತ್ತು ಮಹಿಮೆಯ ವರ್ಣನೆ (ಅನು 147/54–60). ಇವನ ಮೂಲಕ, ಅಭಿಮನ್ಯುವಿನ ಶ್ರಾದ್ಧ (ಆಶ್ವ 62/6). ಯುಧಿಷ್ಠಿರನ ಅಶ್ವಮೇಧಕ್ಕಾಗಿ ಈತ ಹಸ್ತಿನಾಪುರಕ್ಕೆ ಆಗಮಿಸಿದುದು (ಆಶ್ವ 66/4). ಇವನ ಆದೇಶದಂತೆ ದ್ವಾರಕಾಪುರದಲ್ಲಿ ಮದ್ಯಪಾನ ನಿಷೇಧದ ಆಜ್ಞೆ ಸಾರಲ್ಪಟ್ಟದ್ದು (ಮೌಸಲ 1/29). ಸಮಾಧಿಸ್ಥನಾಗಿ ಕುಳಿತ ಬಲರಾಮನ ಮುಖದಿಂದ ಹೊರಡುತ್ತಿದ್ದ ದೊಡ್ಡ ಗಾತ್ರದ ಬಿಳಿಯ ಸರ್ಪವನ್ನು ಶ್ರೀಕೃಷ್ಣನು ದರ್ಶನ ಮಾಡಿದುದು. ಇವನ ಸ್ವಾಗತಕ್ಕಾಗಿ ಅನೇಕಾನೇಕ ನಾಗಗಳ ಮತ್ತು ನದಿಗಳ ಆಗಮನ (ಮೌಸಲ 4/13–17).

(2) ಮಹಾಬಲವಂತನಾದ ಒಬ್ಬ ನಾಗ (ಅನು 132/8).

**ಬಲಂಧರಾ** – ಈಕೆ ಕಾಶೀರಾಜನ ಕನ್ಯೆಯಾಗಿದ್ದಳು. ಬಲವೇ ಇವಳ ವಿವಾಹ ಶುಲ್ಕವಾಗಿತ್ತು. ಅಂದರೆ 'ಯಾರು ಅಧಿಕ ಬಲವಂತನಾಗಿರುತ್ತಾನೋ ಅವನೇ ಈಕೆಯೊಂದಿಗೆ ವಿವಾಹವಾಗಬಲ್ಲನು' ಎಂಬ ಶರ್ತವಿತ್ತು. ಪಾಂಡುಪುತ್ರ ಭೀಮಸೇನ ಇವಳೊಂದಿಗೆ ವಿವಾಹವಾಗಿ ಸರ್ವಗನೆಂಬ ಪುತ್ರನನ್ನು ಪಡೆದಿದ್ದನು (ಆಶ್ವ 95/77).

**ಬಲಬಂಧು** – ಒಬ್ಬ ಪ್ರಾಚೀನ ರಾಜ (ಆದಿ 1/237).

**ಬಲಾಕ** – ಒಬ್ಬ ವ್ಯಾಧ. ಸಮಸ್ತ ಪ್ರಾಣಿಗಳ ಅಂತ್ಯಮಾಡಲು ವರವನ್ನು ಪಡಕೊಂಡಿದ್ದನು. ಅದೇ ಕಾರಣದಿಂದಾಗಿ ಬ್ರಹ್ಮನಿಂದ ಕುರುಡನಾಗಿ ಮಾಡಲ್ಪಟ್ಟ ಒಂದು ಹಿಂಸ್ರ ಜಂತುವನ್ನು ಇವನು ಕೊಂದಿದ್ದನು. ಆ ಸಮಯದಲ್ಲಿ ಈ ವ್ಯಾಧನ ಮೇಲೆ ಪುಷ್ಪವೃಷ್ಟಿಯಾಯಿತು. ಇವನು ವಿಮಾನದ ಮೇಲೆ ಕುಳಿತು ಸ್ವರ್ಗಲೋಕಕ್ಕೆ ಹೋದನು (ಕರ್ಣ 69/39–45).

**ಬಲಾಕಾತೀರ್ಥ** – ಗಂಧಮಾದನ ಪರ್ವತದ ಸಮೀಪವಿರುವ ಒಂದು ತೀರ್ಥ. ಇಲ್ಲಿ ತರ್ಪಣ ಕೊಡುವ ಮನುಷ್ಯ ದೇವತೆಗಳಲ್ಲಿ ಕೀರ್ತಿ ಪಡೆಯುತ್ತಾನೆ ಮತ್ತು ತನ್ನ ಯಶಸ್ಸಿನಿಂದ ಪ್ರಕಾಶಿಸಲ್ಪಡುತ್ತಾನೆ (ಅನು 25/19).

**ಬಲಾಕಾಶ್ವ** – ಇವನು ಜಹ್ನುವಿನ ಪೌತ್ರ ಮತ್ತು ಅಜ(ಅಥವಾ ಸಿಂಧುದ್ವೀಪ)ನ ಪುತ್ರನಾಗಿದ್ದನು. ಇವನ ಪುತ್ರನ ಹೆಸರು ಕುಶಿಕ ಎಂದಾಗಿತ್ತು (ಶಾಂತಿ 49/3 ಅನು 4/14).

**ಬಲಾಕೀ** – ಧೃತರಾಷ್ಟ್ರನ ನೂರುಪುತ್ರರಲ್ಲಿ ಒಬ್ಬ (ಆದಿ 67/98; ಆದಿ 116/7). ಇವನು ದ್ರೌಪದಿ ಸ್ವಯಂವರಕ್ಕೆ ಹೋಗಿದ್ದನು (ಆದಿ 185/2).

**ಬಲಾಕ್ಷ** – ಒಬ್ಬ ಪ್ರಾಚೀನ ರಾಜ. ಇವನು ವಿರಾಟನ ಗೋಗ್ರಹಣ ಕಾಲದಲ್ಲಿ ಅರ್ಜುನ ಮತ್ತು ಕೃಪಾಚಾರ್ಯರ ಯುದ್ಧ ನೋಡಲು ಇಂದ್ರನ ವಿಮಾನದಲ್ಲಿ ಕುಳಿತು ಬಂದಿದ್ದನು (ವಿರಾಟ 56/9–10).

**ಬಲಾನೀಕ** – (1) ಒಬ್ಬ ನಾಗ. ಇವನು ವರುಣ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 9/9).

(2) ಸಿಂಧುರಾಜ ಜಯದ್ರಥನ ಸಹೋದರ. ಇವನು ದ್ರೌಪದಿಯ ಅಪಹಾರ ಸಮಯದಲ್ಲಿ ಜಯದ್ರಥನೊಂದಿಗೆ ಬಂದಿದ್ದನು (ವನ 265/12).

(3) ಶ್ರೀ ಕೃಷ್ಣನ ರಥದ ಒಂದು ಕುದುರೆ. ಇದು ಬಲಬದಿಗೆ ಕಟ್ಟಲ್ಪಡುತ್ತಿತ್ತು (ವಿರಾಟ 45/23; ದ್ರೋಣ 147/47).

**ಬಲಿ** – (1) ಇವನು ಪ್ರಹ್ಲಾದನ ಮೊಮ್ಮಗ ಮತ್ತು ವಿರೋಚನನ ಮಗ. ಇವನ ಮಗನ ಹೆಸರು ಬಾಣ (ಆದಿ 65/20). ಇಂದ್ರಲೋಕದ ಮೇಲೆ ಇವನ ಆಕ್ರಮಣ ಮತ್ತು ವಿಜಯ (ಸಭಾ 38/29). ವಾಮನನಿಗೆ ಮೂರಡಿ ನೆಲ ಕೊಡಲು ಈತನ ಸಂಕಲ್ಪ. ವಾಮನನಿಂದ ಈತನ ಬಂಧನ. ಪಾತಾಳಲೋಕದಲ್ಲಿ ವಾಸಿಸುವಂತೆ ಇವನಿಗೆ ಭಗವಂತನ ಆಜ್ಞೆ (ಸಭಾ 38/29). ಇವನು ವರುಣ ಸಭೆಯಲ್ಲಿರುತ್ತಾನೆ (ಸಭಾ 9/12). ಇವನು ಪ್ರಹ್ಲಾದನೊಡನೆ ಕ್ಷಮೆ ಮತ್ತು ಕ್ರೋಧದ ಕುರಿತು ಪ್ರಶ್ನೆ ಮಾಡಿದುದು (ವನ 28/3–4). ಬಲಿ ಮತ್ತು ವಾಮನನಿಗೆ ಸಂಬಂಧಿಸಿದ ಕಥೆಯ ಸಂಕ್ಷಿಪ್ತ ವರ್ಣನೆ (ವನ 272/63–69). ವಿರೋಚನ ಪುತ್ರ ಬಲಿ ಬಾಲ್ಯದಿಂದಲೇ ಬ್ರಾಹ್ಮಣರ ಮೇಲೆ ದೋಷಾರೋಪಣೆ ಮಾಡುತ್ತಿದ್ದನು. ಇದರಿಂದಾಗಿ ರಾಜ್ಯಲಕ್ಷ್ಮಿ ಅವನನ್ನು ತ್ಯಾಗ ಮಾಡಿದಳು (ಶಾಂತಿ 90/24). ಇಂದ್ರನ ಆಕ್ಷೇಪಯುಕ್ತ ಮಾತುಗಳಿಗೆ ಕಠೋರ ಉತ್ತರವನ್ನಿತ್ತದ್ದು (ಶಾಂತಿ 223). ಕಾಲನ ಪ್ರಾಬಲ್ಯವನ್ನು ಹೇಳುತ್ತಾ ಇವನು ಇಂದ್ರನನ್ನು ನಿಂದಿಸಿದುದು (ಶಾಂತಿ 224). ಲಕ್ಷ್ಮಿಯು ಪರಿತ್ಯಾಗಮಾಡಿದಾಗ ಇಂದ್ರನಿಗೆ ಎಚ್ಚರಿಕೆಯನ್ನಿತ್ತದ್ದು (ಶಾಂತಿ 225/30–32). ಶೋಕಮಾಡಬಾರದೆಂಬ ವಿಷಯದಲ್ಲಿ ಇಂದ್ರನ ಪ್ರಶ್ನೆಗಳಿಗೆ ಉತ್ತರವನ್ನಿತ್ತದ್ದು (ಶಾಂತಿ 227/21–88). ವಿರೋಚನ ಪುತ್ರ ಬಲಿಯನ್ನು ದೇವತೆಗಳು ಧರ್ಮಪಾಶದಲ್ಲಿ ಕಟ್ಟಿ, ಭಗವಾನ್ ವಿಷ್ಣುವಿನ ಉದ್ದೇಶದಂತೆ, ಪಾತಾಳವಾಸಿಯಾಗಿ ಮಾಡಿದರು (ಅನು 6/35). ದೋಷದೃಷ್ಟಿಯನ್ನಿಟ್ಟುಕೊಂಡು, ಅಶ್ರದ್ಧೆಯಿಂದ ಕೊಡಲ್ಪಡುವ ಎಲ್ಲಾ ದಾನಗಳು ಅಸುರರಾಜ ಬಲಿಯಭಾಗವೆಂದು ಬ್ರಹ್ಮನು ನಿಶ್ಚೈಸಿದ್ದಾನೆ (ಅನು 90/20). ಪುಷ್ಪ, ಧೂಪ ಮತ್ತು ದೀಪದಾನದ ವಿಷಯದಲ್ಲಿ ಶುಕ್ರಾಚಾರ್ಯನೊಂದಿಗೆ ಈತ ಪ್ರಶ್ನೆ ಮಾಡಿದುದು (ಅನು 98/15).

(2) ಒಬ್ಬ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಾನೆ (ಸಭಾ 4/10). ಹಸ್ತಿನಾವತಿಗೆ ಹೋಗುವಾಗ ದಾರಿಯಲ್ಲಿ ಶ್ರೀಕೃಷ್ಣನೊಡನೆ ಇವನ ಭೇಟಿ (ಉದ್ಯೋಗ 83/64).

**ಬಲಿವಾಕ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಾನೆ (ಸಭಾ 4/14).

**ಬಲೀಹ** – ಒಂದು ಕ್ಷತ್ರಿಯ ಕುಲ. ಅರ್ಕಜನೆಂಬ ಕುಲಕಳಂಕ ರಾಜ ಈ ಕುಲದಲ್ಲಿ ಹುಟ್ಟಿದ್ದನು (ಉದ್ಯೋಗ 74/14).

**ಬಲೋತ್ಕಟಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/23).

**ಬಲ್ಲವ** – (1) ಅಜ್ಞಾತವಾಸ ಸಮಯದಲ್ಲಿ ಪಾಂಡುಪುತ್ರ ಭೀಮನ ಹೆಸರು (ವಿರಾಟ 2/1; ವಿರಾಟ 7–8).

(2) ಒಂದು ಭಾರತೀಯ ಜನಪದ (ಭೀಷ್ಮ 9/62).

**ಬಹಿರ್ಗಿರಿ** – ಒಂದು ಪರ್ವತದ ಪ್ರದೇಶ. ಉತ್ತರ ದಿಗ್ವಿಜಯ ಕಾಲದಲ್ಲಿ ಇದನ್ನು ಅರ್ಜುನ ಗೆದ್ದಿದ್ದನು (ಸಭಾ 27/3). ಭಾರತೀಯ ಜನಪದಗಳಲ್ಲಿ ಇದು ಗಣಿಸಲ್ಪಡುತ್ತದೆ (ಭೀಷ್ಮ 9/50).

**ಬಹುದಾಮಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/10).

**ಬಹುಪುತ್ರಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

**ಬಹುಮೂಲಕ** – ಕಶ್ಯಪನ ಮೂಲಕ ಕದ್ರುವಿನ ಗರ್ಭದಿಂದ ಹುಟ್ಟಿದ ಒಬ್ಬ ನಾಗ (ಆದಿ 35/16).

**ಬಹುಯೋಜನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/9).

**ಬಹುರೂಪ** – ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/19).

**ಬಹುಲ** – ತಾಲಜಂಘ ವಂಶದ ಒಬ್ಬ ಕುಲಕಳಂಕ ರಾಜ (ಉದ್ಯೋಗ 74/13).

**ಬಹುಲಾ** – (1) ಭಾರತವಾಸಿಗಳು ನೀರು ಕುಡಿಯುವ ಒಂದು ನದಿ (ಭೀಷ್ಮ 9/27).
(2) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/3).

**ಬಹುವಾದ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/55).

**ಬಹ್ವಾಶೀ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/102; ಆದಿ 116/11). ಇವನು ಭೀಮಸೇನನಿಂದ ಕೊಲ್ಲಲ್ಪಟ್ಟನು (ಭೀಷ್ಮ 28/29).

**ಬಾಣ** – (1) ಇವನು ಅಸುರರಾಜ ಬಲಿಯ ಪ್ರಖ್ಯಾತ ಪುತ್ರ. ಜನರು ಇವನನ್ನು ಭಗವಾನ್ ಶಿವನ ಪಾರ್ಷದ, ಮಹಾಕಾಲನೆಂಬ ಹೆಸರಿನಿಂದ ತಿಳಿಯುತ್ತಾರೆ (ಆದಿ 65/20–21). ಇವನ ರಾಜಧಾನಿಯ ಹೆಸರು ಶೋಣಿತಪುರವಾಗಿತ್ತು. ಇವನು ಶಿವನ ಕಠೋರ ಆರಾಧನೆ ಮಾಡಿ, ಅವನಿಂದ ವರಪಡೆದಿದ್ದನು. ಇದರಿಂದಾಗಿ ಈತ ಸದಾ ದೇವತೆಗಳಿಗೆ ಆತಂಕವನ್ನುಂಟುಮಾಡುತ್ತಿದ್ದನು. ಇವನ ಉನ್ನತಿಗಾಗಿ ಶುಕ್ರಾಚಾರ್ಯ ಎಡೆಬಿಡದೆ ಶ್ರಮಿಸುತ್ತಿದ್ದನು (ಸಭಾ 38/29). ಇವನು ಅನಿರುದ್ಧನನ್ನು ಸೆರೆಯಲ್ಲಿಟ್ಟಿದ್ದನು. ನಾರದನ ಮೂಲಕ ಅನಿರುದ್ಧನು ಸೆರೆಹಿಡಿಯಲ್ಪಟ್ಟ ಸಮಾಚಾರ ತಿಳಿದು, ಬಲರಾಮ ಮತ್ತು ಪ್ರದ್ಯುಮ್ನರೊಡಗೂಡಿ, ಶ್ರೀಕೃಷ್ಣನು ಶೋಣಿತಪುರವನ್ನು ಆಕ್ರಮಿಸಿದನು. ಇಲ್ಲಿ ಶಿವ, ಕಾರ್ತಿಕೇಯ, ಅಗ್ನಿಯೇ ಮೊದಲಾದ ದೇವತೆಗಳು ಈತನ ರಾಜಧಾನಿಯನ್ನು ರಕ್ಷಿಸುತ್ತಿದ್ದರು (ಸಭಾ 38/20). ಆಗ ಬಾಣಾಸುರನಿಗೋಸ್ಕರ ಭಗವಾನ್ ಮಹೇಶ್ವರನು ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಿದನು. ಅನಂತರ ಶಿವನನ್ನು ಸೋಲಿಸಿ ಶ್ರೀಕೃಷ್ಣನು ಬಾಣಾಸುರನ ಸಮೀಪಕ್ಕೆ ಹೋಗಿ ಯುದ್ಧವನ್ನಾರಂಭಿಸಿದನು. ಭಗವಾನ್ ಶ್ರೀ ಕೃಷ್ಣನ ಯುದ್ಧದಲ್ಲಿ ಚಕ್ರದ ಮೂಲಕ ಇವನ ಭುಜಗಳು ಕತ್ತರಿಸಲ್ಪಟ್ಟವು. ಇವನು ನೆಲದ ಮೇಲೆ ಉರುಳಿಬಿದ್ದನು (ಸಭಾ 38/29). ಬಾಣಾಸುರನು ಕ್ರೌಂಚಪರ್ವತದ ಆಶ್ರಯ ಹೊಂದಿ ದೇವತೆಗಳಿಗೆ ಕಷ್ಟ ಕೊಡುತ್ತಿದ್ದನು. ಇದನ್ನು ನೋಡಿ ಮಹಾಸೇನ (ಸ್ಕಂದ).ನು ಇವನ ಮೇಲೆ ಆಕ್ರಮಣ ಮಾಡಿದನು. ಇವನು ಓಡಿ ಹೋಗಿ ಕ್ರೌಂಚಪರ್ವತದಲ್ಲಿ ಅಡಗಿದನು. ಇದೇ ಕಾರಣದಿಂದಾಗಿ ಸ್ಕಂದನು ಕ್ರೌಂಚ ಪರ್ವತವನ್ನು ವಿದೀರ್ಣಗೊಳಿಸಿದನು (ಶಾಂತಿ 46/82–84).
(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).
(3) ಬಾಣಗಳ ವೈವಿಧ್ಯ – ಕರ್ಣೀ, ನಾರಾಚ, ಶಿಲೀಮುಖ, ನಾಲೀಕ, ದಂಡ, ಅಸನ, ವತ್ಸದಂತ, ವರಾಹಕರ್ಣ, ವಿಪಾಠ, ಶೃಂಗ – ಆಯುಧವಿಶೇಷಗಳೆಂದೂ ಹೇಳಲಾಗಿದೆ (ದ್ರೋಣ 179). ಆದರೆ ಧರ್ಮಯುದ್ಧದಲ್ಲಿ ಕರ್ಣೀ, ನಾಲೀಕ, ಲಿಪ್ತ, ವಸ್ತೀಕ, ಕ್ಲಿಷ್ಟ, ಪೂತಿ, ಜಿಹ್ಮಗ – ಎಂಬ ಬಾಣಗಳು ನಿಷಿದ್ಧವಾಗಿದ್ದವು (ದ್ರೋಣ 189).

**ಬಾದುಲಿ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/53).

**ಬಾಭ್ರವ್ಯ** – ಒಂದು ಗೋತ್ರದ ಹೆಸರು. ಗಾಲವ ಇದೇ ಗೋತ್ರದದಲ್ಲಿ ಹುಟ್ಟಿದ್ದನು (ಶಾಂತಿ 342/103).

**ಬಾರ್ಹಸ್ಪತ್ಯ** – ಬೃಹಸ್ಪತಿಯ ಮೂಲಕ ಸಂಕ್ಷಿಪ್ತಗೊಳಿಸಲ್ಪಟ್ಟ ಬ್ರಹ್ಮನ ನೀತಿಶಾಸ್ತ್ರ. ಇದರಲ್ಲಿ ಮೂರು ಸಾವಿರ ಅಧ್ಯಾಯಗಳಿವೆ (ಶಾಂತಿ 59/84).

**ಬಾಲಗ್ರಹ** – ಬಾಲಕರನ್ನು ನಾಶಮಾಡುವ

ಒಂದು ಗ್ರಹ (ಶಾಂತಿ 153/3).

**ಬಾಲಧಿ** – ಒಬ್ಬ ಪ್ರಾಚೀನ ಶಕ್ತಿಶಾಲಿ ಋಷಿ. ಪುತ್ರಪ್ರಾಪ್ತಿಗಾಗಿ ಇವನು ಘೋರ ತಪಸ್ಸು ಮಾಡಿದನು. ಇದರಿಂದ ಪ್ರಸನ್ನರಾದ ದೇವತೆಗಳು ಇವನಿಗೆ ಪುತ್ರೋತ್ಪತ್ತಿಯಾಗುವಂತೆ ವರ ನೀಡಿದರು (ವನ 135/45–47). ವರದ ಫಲ ಸ್ವರೂಪವಾಗಿ ಇವನಿಗೆ ಮೇಧಾವಿ ಎಂಬ ಪುತ್ರನ ಪ್ರಾಪ್ತಿಯಾಯಿತು (ವನ 135/49). ಮೇಧಾವಿ ಮಹರ್ಷಿ ಧನುಷಾಕ್ಷನಿಗೆ ಅಪಮಾನ ಮಾಡಿದನು. ಇದರಿಂದಾಗಿ ಅವನು ಈತನನ್ನು ನಾಶಮಾಡಿದನು (ವನ 135/50–53). ಪುತ್ರನ ಮರಣದಿಂದ ಬಾಲಧಿ ಮುನಿಯ ವಿಲಾಪ (ವನ 135/53–54).

**ಬಾಲಸ್ವಾಮೀ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಬಾಷ್ಕಲ** – ಇವನು ದಿತಿಯ ಮಗನಾದ ಹಿರಣ್ಯಕಶಿಪುವಿನ ಪುತ್ರ. ಇವನಿಗೆ ಬೇರೆ ನಾಲ್ಕು ಮಂದಿ ಸಹೋದರರಿದ್ದರು. ಪ್ರಹ್ಲಾದ, ಸಂಹ್ಲಾದ, ಅನುಹ್ಲಾದ ಮತ್ತು ಶಿಬಿ (ಆದಿ 65/17–18). ಇವನೇ ಭಗದತ್ತನ ರೂಪದಲ್ಲಿ ಭೂಮಿಯ ಮೇಲೆ ಹುಟ್ಟಿದ್ದನು (ಆದಿ 67/9).

**ಬಾಹು** – (1) ಒಬ್ಬ ಶಕ್ತಿಶಾಲಿ ರಾಜ. ಇವನಿಗೆ ಪಾಂಡವ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರಮಾಡಲ್ಪಟ್ಟಿತ್ತು (ಉದ್ಯೋಗ 4/22).

(2) ಸುಂದರ ವಂಶದಲ್ಲಿ ಹುಟ್ಟಿದ ಒಬ್ಬ ಕುಲನಾಶಕ ರಾಜ (ಉದ್ಯೋಗ 74/15).

(3) ಒಬ್ಬ ಪ್ರಾಚೀನರಾಜ. ಇವನು ಮಹಾರಾಜ ಸಗರನ ತಂದೆ (ಶಾಂತಿ 57/8). ಇವನು ಪ್ರಾಚೀನ ಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲಪೀಡಿತನಾಗಿ ಎಲ್ಲವನ್ನು ಬಿಟ್ಟು ಪರಲೋಕವಾಸಿಯಾದನು (ಶಾಂತಿ 227/51).

**ಬಾಹುಕ** – (1) ಕೌರವ್ಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪ ಸತ್ರದಲ್ಲಿ ದಗ್ಧನಾದನು (ಆದಿ 57/13).

(2) ನಲರಾಜನ ಒಂದು ಹೆಸರು. ಆಗ ಈತ ಸೂತನಾಗಿ ಅಯೋಧ್ಯಾರಾಜ ಋತುಪರ್ಣನಲ್ಲಿದ್ದನು (ವನ 66/20). (ವಿಶೇಷ ನೋಡಿರಿ– ನಲ).

(3) ಒಬ್ಬ ವೃಷ್ಣಿವಂಶದ ವೀರ. ಇವನು ಪರಾಕ್ರಮ ಪ್ರದರ್ಶಿಸುವಂತೆ, ಸಾತ್ಯಕಿಯು, ಶ್ರೀಕೃಷ್ಣ ಮತ್ತು ಪಾಂಡವರ ಸಮ್ಮುಖದಲ್ಲಿ ಹೇಳಿದುದು (ವನ 120/19).

**ಬಾಹುದಂತಕ** – ಪುರಂದರರನಿಂದ ಸಂಕ್ಷಿಪ್ತಗೊಳಿಸಲ್ಪಟ್ಟ ಬ್ರಹ್ಮನ ನೀತಿಶಾಸ್ತ್ರ. ಇದು ಹತ್ತು ಸಾವಿರ ಅಧ್ಯಾಯಗಳಿಂದ ಐದು ಸಾವಿರ ಅಧ್ಯಾಯಗಳಿಗೆ ಇಳಿದಿದೆ (ಶಾಂತಿ 59/83).

**ಬಾಹುದಾ** – ಈ ತೀರ್ಥದಲ್ಲಿ ಬ್ರಹ್ಮಚರ್ಯ ಪಾಲನೆಯ ಮೂಲಕ ಒಂದು ರಾತ್ರಿ ಉಪವಾಸ ಮಾಡುವುದರಿಂದ, ಆ ಮನುಷ್ಯ ಸ್ವರ್ಗಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ ಮತ್ತು ದೇವಸತ್ರದ ಫಲ ಪಡೆಯುತ್ತಾನೆ (ವನ 84/67–68). (ವನ 87/27; ವನ 95/4). (ಕೆಲವು ಮಂದಿ ಆಧುನಿಕ ವಿಚಾರವಂತರು, ರಾಪ್ತಿಯ ಸಹಾಯಕ ನದಿಯಾದ, ಅವಧ ಪ್ರಾಂತದ ಧವಲಾ ಅಥವಾ ಧುಮೇಲಾ ಎಂಬ ನದಿಯನ್ನು 'ಬಾಹುದಾ' ಎನ್ನುತ್ತಾರೆ). ಭಾರತವಾಸಿಗಳು ನೀರು ಕುಡಿಯುವ ನದಿಗಳಲ್ಲಿ ಇದೂ ಒಂದು (ಭೀಷ್ಮ 9/14, 29). ಇದರ ದಡದ ಮೇಲೆ ಮಹರ್ಷಿ ಶಂಖ ಮತ್ತು ಲಿಖಿತರ ಆಶ್ರಮವಿತ್ತು (ಶಾಂತಿ 23/18–19). ಈ ನದಿಯಲ್ಲಿ ಸ್ನಾನಮಾಡಿ, ಪಿತೃಗಳಿಗೆ ತರ್ಪಣ ಕೊಡುವ ಪ್ರಯತ್ನಮಾಡುವಾಗ, ಮಹರ್ಷಿ ಲಿಖಿತನ ಕಡಿಯಲ್ಪಟ್ಟ ಕೈಗಳು ಹೊಸ ರೀತಿಯಲ್ಲಿ ಪುನಃ ಹುಟ್ಟಿಕೊಂಡವು (ಶಾಂತಿ 23/39–40).

**ಬಾಹುದಾ ಸುಯಶಾ** – ಕುರುವಂಶದ ಪರೀಕ್ಷಿತನ ಪತ್ನಿ ಮತ್ತು ಭೀಮಸೇನನ ತಾಯಿ (ಆದಿ 95/42).

**ಬಾಹ್ಯಕರ್ಣ** – ಕಶ್ಯಪನ ಮೂಲಕ ಕದ್ರುವಿನ ಗರ್ಭದಿಂದ ಹುಟ್ಟಿದ ಒಬ್ಬ ನಾಗ (ಆದಿ 35/9).

**ಬಾಹ್ಯಕುಂಡ** – ಕಶ್ಯಪವಂಶದಲ್ಲಿ ಹುಟ್ಟಿದ ಒಬ್ಬ ನಾಗ (ಉದ್ಯೋಗ 103/10).

**ಬಾಹ್ಲೀಕ** (ಬಾಹ್ಲಿಕ). – (1) ಒಬ್ಬ ರಾಜ. ಇವನು ಶತ್ರುಪಕ್ಷ ವಿನಾಶಕ ಮಹಾತೇಜಸ್ವೀ 'ಅಹರ'ನ ಅಂಶದಿಂದ ಪ್ರಕಟನಾಗಿದ್ದನು (ಆದಿ 67/25).

(2) ಒಬ್ಬ ಪ್ರಾಚೀನ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು

(ಆದಿ 67/60). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/14). ಇವನು ಕೌರವಪಕ್ಷದ ಯೋಧನಾಗಿದ್ದನು. ಇವನನ್ನು 'ಬಾಹ್ಲೀಕರಾಜ'ನೆಂದು ಹೇಳಲಾಗಿದೆ. ದ್ರೌಪದಿ ಪುತ್ರರೊಂದಿಗೆ ಇವನ ಯುದ್ಧ (ದ್ರೋಣ 93/12–13).

(3) ಭರತ ವಂಶದ ಮಹಾರಾಜ ಕುರುವಿನ ಪೌತ್ರ ಮತ್ತು ಜನಮೇಜಯನ ತೃತೀಯ ಪುತ್ರ (ಆದಿ 94/56).

(4) ಕುರುವಂಶದ ಮಹಾರಾಜ ಪ್ರತೀಪನ ಪುತ್ರ, ದೇವಾಪಿ ಮತ್ತು ಶಾಂತನುವಿನ ಸಹೋದರ. ಇವನು ಮಹಾರಥಿ ವೀರನಾಗಿದ್ದನು. ಇವನ ತಾಯಿಯ ಹೆಸರು ಸುನಂದಾ. ಈಕೆ ಶಿಬಿದೇಶದ ರಾಜಕುಮಾರಿ (ಆದಿ 94/61–62; ಆದಿ 95/44). (ಶ್ರೀ ಮದ್ಭಾಗವತ 9/22/18ರ ಪ್ರಕಾರ ಬಾಹ್ಲೀಕನ ಪುತ್ರನ ಹೆಸರು ಸೋಮದತ್ತನೆಂದಾಗಿತ್ತು). ಇವನು ಕೌರವಸಭೆಯಲ್ಲಿ ಜೂಜನ್ನು ವಿರೋಧಿಸಿದ್ದನು (ಸಭಾ 74/25–26). ಸಂಜಯನ ಮೂಲಕ ಬಂದು ಯುಧಿಷ್ಠಿರನ ಸಂದೇಶವನ್ನು ಕೇಳಲು ಈತನೂ ಸಭೆಯಲ್ಲಿ ಉಪಸ್ಥಿತನಾಗಿದ್ದನು (ಉದ್ಯೋಗ 47/6–7). ಇವನು ಕೌರವ ಪಾಂಡವರೊಳಗೆ ಯುದ್ಧವಾಗುವುದನ್ನು ಬಯಸುತ್ತಿರಲಿಲ್ಲ (ಉದ್ಯೋಗ 58/6–7). ಕುಟುಂಬದೊಳಗೆ ಒಡಕಿರಬಾರದು. ಈ ಭಯದಿಂದ ಈತ ರಾಜ್ಯಭಾಗ ಕೊಡಿಸಲು ಸಹಕರಿಸಿದ್ದನು (ಉದ್ಯೋಗ 129/45). ದುರ್ಯೋಧನನ ಹನ್ನೊಂದು ಅಕ್ಷೌಹಿಣಿ ಸೇನೆಗೆ ಆಯ್ಕೆ ಮಾಡಿದ ಸೇನಾಪತಿಗಳಲ್ಲಿ ಈತನೂ ಒಬ್ಬನಾಗಿದ್ದನು (ಉದ್ಯೋಗ 155/33). ಪ್ರಥಮ ದಿನದ ಯುದ್ಧದಲ್ಲಿ ಧೃಷ್ಟಕೇತುವಿನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/38–41). ಭೀಮಸೇನನಿಂದ ಪರಾಜಿತನಾದುದು (ಭೀಷ್ಮ 104/26–27). ದ್ರುಪದನೊಂದಿಗೆ ಯುದ್ಧ (ದ್ರೋಣ 25/18–19). ಶಿಖಂಡಿಯೊಂದಿಗೆ ಯುದ್ಧ (ದ್ರೋಣ 96/7–10). ಭೀಮಸೇನನಿಂದ ವಧೆ (ದ್ರೋಣ 157/15). ಭೀಷ್ಮನು ಕೇಳಿದಾಗ ಕನ್ಯಾವಿವಾಹದ ಕುರಿತು ಈತ ತನ್ನ ನಿರ್ಣಯ ಹೇಳಿದುದು (ಅನು 44/43–56).

(5) ಯುಧಿಷ್ಠಿರನ ಸಾರಥಿಯ ಹೆಸರು (ಸಭಾ 58/20).

(6) ಒಂದು ಭಾರತೀಯ ಜನಪದ (ಭೀಷ್ಮ 9/47, 54).

(7) ಬಾಹ್ಲೀಕದೇಶದ ಕುದುರೆಗಳ ಪೃಷ್ಠಭಾಗವು ಕಾಂಬೋಜ ದೇಶದ ಕುದುರೆಗಳಿಗಿಂತಲೂ ನೀಳವಾಗಿರುತ್ತದೆ. ಕಾಂಬೋಜಾಶ್ವಗಳೆಂದರೆ ಕಾಬೂಲು ದೇಶದ ಕುದುರೆಗಳು. ಅವುಗಳ ಹಣೆ, ನಿತಂಬ, ಹೆಗಲು ಮತ್ತು ಎದೆ – ವಿಶಾಲವಾಗಿರುತ್ತವೆ. ಅವು ಹೆಚ್ಚಿನ ವೇಗವುಳ್ಳವುಗಳು. ಉದ್ದವಾದ ಮತ್ತು ಅಗಲವಾದ ಕತ್ತು. ಅವುಗಳ ಅಂಡಕೋಶ ಹ್ರಸ್ವವಾಗಿರುತ್ತದೆ (ದ್ರೋಣ 23).

**ಬಿನ್ದುಸರ** – ಒಂದು ಪ್ರಾಚೀನ ಸರೋವರ. ಇದು ಕೈಲಾಸ ಪರ್ವತದ ಉತ್ತರಕ್ಕಿದೆ (ಸಭಾ 3/2–3). ಇಲ್ಲಿಗೆ ಮಯಾಸುರನ ಆಗಮನ (ಸಭಾ 3/9–10). ಗಂಗಾವತರಣಕ್ಕಾಗಿ ಇಲ್ಲಿ ರಾಜಾಭಗೀರಥನು ಅನೇಕ ವರ್ಷಗಳ ವರೆಗೆ ಉಗ್ರ ತಪಸ್ಸು ಮಾಡಿದ್ದನು (ಸಭಾ 3/10–11). ಪ್ರಜಾಪತಿಯು ಇಲ್ಲಿ ನೂರು ಯಜ್ಞಗಳನ್ನು ಪೂರೈಸಿದನು. ಇಂದ್ರನೂ ಇಲ್ಲಿ ಯಜ್ಞಮಾಡಿ ಸಿದ್ಧಿ ಪಡೆದನು (ಸಭಾ 3/11). ಇಲ್ಲಿ ಭಗವಾನ್ ಶಂಕರನೂ ಯಜ್ಞಮಾಡಿದನು. ವಸುದೇವನಂದನ ಶ್ರೀಕೃಷ್ಣನು ಕೂಡಾ ಧರ್ಮಸಂಪಾದನೆಗಾಗಿ ಇಲ್ಲಿ ಬಹಳ ವರ್ಷಗಳ ವರೆಗೆ ಶ್ರದ್ಧಾಪೂರ್ವಕ ಯಜ್ಞಮಾಡಿದ್ದನು (ಸಭಾ 3/11–16). (ಇಲ್ಲಿಂದಲೇ ಮಯನೆಂಬ ದಾನವ ದೇವದತ್ತ ಶಂಖ ಮತ್ತು ವೃಷಪರ್ವಾನ ಗದೆಯನ್ನು ತಂದು ಅರ್ಜುನ ಮತ್ತು ಭೀಮಸೇನನಿಗೆ ಸಮರ್ಪಿಸಿದ್ದನು.)

**ಬಿಲ್ವಕ** – ಕಶ್ಯಪನ ಮೂಲಕ ಕದ್ರುವಿನಿಂದ ಹುಟ್ಟಿದ ಒಬ್ಬ ನಾಗ (ಆದಿ 35/12).

**ಬಿಲ್ವಕತೀರ್ಥ** – ನೀಲಪರ್ವತದಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದ ಮನುಷ್ಯ ಸ್ವರ್ಗಕ್ಕೆ ಭಾಗಿಯಾಗುತ್ತಾನೆ (ಅನು 25/13).

**ಬಿಲ್ವತೇಜಾ** – ತಕ್ಷಕಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/9).

**ಬಿಲ್ವಪತ್ರ** – ಕಶ್ಯಪವಂಶದ ಒಬ್ಬ ನಾಗ

(ಉದ್ಯೋಗ 103/14).

**ಬಿಲ್ವಪಾಂಡುರ** – ಕಶ್ಯಪನ ಮೂಲಕ ಕದ್ರುವಿನಿಂದ ಹುಟ್ಟಿದ ಒಬ್ಬ ನಾಗ (ಆದಿ 35/12).

**ಬೀಭತ್ಸು** – ಅರ್ಜುನನ ಒಂದು ಹೆಸರು (ವಿರಾಟ 44/9). 'ಬೀಭತ್ಸು' ಹೆಸರಿನ ಅರ್ಥ (ವಿರಾಟ 44/18).

**ಬುದ್ಧಿ** – ಈಕೆ ದಕ್ಷಪ್ರಜಾಪತಿಯ ಕನ್ಯೆ ಮತ್ತು ಧರ್ಮನ ಪತ್ನಿ. ಈಕೆ ಧರ್ಮನ ಪತ್ನಿಯರೇ ಆದ, ತನ್ನ ಒಂಭತ್ತು ಸಹೋದರಿಯರೊಂದಿಗೆ, ಬ್ರಹ್ಮನ ಮೂಲಕ, ಧರ್ಮದ ದ್ವಾರವೆಂದು ನಿಶ್ಚೈಸಲ್ಪಟ್ಟಿದ್ದಾಳೆ (ಆದಿ 66/13–15).

**ಬುದ್ಧಿಕಾಮಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/12).

**ಬುದ್'ಬುದಾ** – ಒಬ್ಬ ಅಪ್ಸರೆ. ಇವಳು ವರ್ಗಾ ಎಂಬವಳ ಸಖಿ (ಆದಿ 215/20). ಮೊಸಳೆಯಾಗಿ ನೀರಲ್ಲಿರಲು ಈಕೆಗೆ ಬ್ರಾಹ್ಮಣ ಶಾಪ (ಆದಿ 215/23). ಅರ್ಜುನನ ಮೂಲಕ ಈಕೆಗೆ ಮೊಸಳೆಯ ಜನ್ಮದಿಂದ ಉದ್ಧಾರ (ಆದಿ 216/ 21–22). ಇವಳು ಕುಬೇರ ಸಭೆಯಲ್ಲಿದ್ದುಕೊಂಡು ಅವನ ಸೇವೆ ಮಾಡುತ್ತಾಳೆ (ಸಭಾ 10/11).

**ಬುಧ** – (1) ಒಬ್ಬ ಗ್ರಹ. ಈತ ಬ್ರಹ್ಮಸಭೆಗೆ ಆತನ ಉಪಾಸನೆಗಾಗಿ ಹೋಗುತ್ತಾನೆ (ಸಭಾ 11/29). ಈತ ಚಂದ್ರನ ಪುತ್ರ, ಪುರೂರವನ ತಂದೆಯಾಗಿದ್ದಾನೆ (ದ್ರೋಣ 144/4). ಇವನು ವ್ರತಮಾಡಿ, ಅದರ ಸಮಾಪ್ತಿಯಾದಾಗ, ಅದಿತಿ ದೇವಿಯ ಬಳಿಗೆ ಹೋಗಿ ಭಿಕ್ಷೆ ಬೇಡಿದನು. 'ನನಗೆ ಭಿಕ್ಷೆ ನೀಡಿರಿ' ಭಿಕ್ಷೆ ಸಿಗದಾಗ ಈತನಿಂದ ಅದಿತಿಗೆ ಶಾಪ (ಶಾಂತಿ 342/56). ಮನುಕನ್ಯೆ ಇಳೆಯೊಂದಿಗೆ ಬುಧನ ಸಮಾಗಮವಾಯಿತು. ಇದರಿಂದ ಪುರೂರವನ ಜನ್ಮವಾಯಿತು (ಅನು 147/26–27).

(2) ವಾನಪ್ರಸ್ಥಿಯಾದ ಒಬ್ಬ ಋಷಿ. ಇವನು ವಾನಪ್ರಸ್ಥಧರ್ಮದ ಪಾಲನೆ ಮತ್ತು ಪ್ರಸಾರ ಮಾಡಿ ಸ್ವರ್ಗಲೋಕವನ್ನು ಪ್ರಾಪ್ತಿಸಿಕೊಂಡನು (ಶಾಂತಿ 244/17).

**ಬೃಂಹತಾ** – ಶಿಶು (ಸ್ಕಂದ)ವಿನ ಸಪ್ತಮಾತೃಕೆಗಳಲ್ಲಿ ಒಬ್ಬಳು (ವನ 128/10).

**ಬೃಹಕ** – ಒಬ್ಬ ದೇವಗಂಧರ್ವ. ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/57).

**ಬೃಹಜ್ಜ್ಯೋತಿ** – ಮಹರ್ಷಿ ಅಂಗೀರಸನ ಮೂಲಕ ಸುಭಾಳ ಗರ್ಭದಿಂದ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 218/2).

**ಬೃಹತ್** – (1) ಈ ಶಬ್ದ ವಿವಸ್ವಂತನನ್ನು ತಿಳಿಸುತ್ತದೆ (ಆದಿ 1/42–43).

(2) ಕಾಲೇಯರಲ್ಲಿ ಎಂಟನೆಯವನು. ಇವನ ಅಂಶದಿಂದ ಹುಟ್ಟಿದ ಒಬ್ಬರಾಜ (ಆದಿ 67/55).

(3) ಒಂದು ಸಾಮ. ಇದು ಪಾಂಚಜನ್ಯ ಋಷಿಯ ಮೂರ್ಧಾಸ್ಥಾನದಿಂದ ಪ್ರಕಟವಾಯಿತು. ಅದೇ ಋಷಿಯ ಮುಖದಿಂದ ಪ್ರಕಟವಾದ ಸಾಮವನ್ನು 'ರಥಂತರ'ವೆನ್ನುತ್ತಾರೆ. ಇವೆರಡೂ ವೇಗಪೂರ್ವಕವಾಗಿ ಆಯುಸ್ಸನ್ನು ನಾಶ ಮಾಡುತ್ತವೆ. ಆದುದರಿಂದ 'ತರಸಾಹರ'ವೆಂದು ಹೇಳಲ್ಪಡುತ್ತವೆ (ವನ 220/7).

**ಬೃಹತ್ಕೀರ್ತಿ** – ಮಹರ್ಷಿ ಅಂಗೀರಸ್ಸಿನ ಮೂಲಕ ಸುಭಾಳ ಗರ್ಭದಿಂದ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 217/2).

**ಬೃಹತ್ಕೇತು** – ಪ್ರಾಚೀನ ಕಾಲದ ಒಬ್ಬ ರಾಜ (ಆದಿ 1/237).

**ಬೃಹತ್ಕ್ಷತ್ರ** – (1) ಭಗೀರಥ ವಂಶದ ಒಬ್ಬ ರಾಜ. ಇವನು ದ್ರೌಪದೀಸ್ವಯಂವರಕ್ಕೆ ಹೋಗಿದ್ದನು (ಆದಿ 185/23).

(2) ಕೇಕಯ ರಾಜ – ಪ್ರಥಮ ದಿನದ ಯುದ್ಧದಲ್ಲಿ ಕೃಪಾಚಾರ್ಯನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/52–54). ಇವನ ಕುದುರೆಗಳ ವರ್ಣನೆ. ಅವು ಅವನ ರಥವನ್ನು ಯುದ್ಧಕ್ಷೇತ್ರಕ್ಕೆ ತಂದಿದ್ದವು (ದ್ರೋಣ 23/23–24). ಕ್ಷೇಮಧೂರ್ತಿಯೊಂದಿಗೆ ಈತ ದ್ವಂದ್ವ ಯುದ್ಧಮಾಡಿದುದು (ದ್ರೋಣ 106/7–8). ಕ್ಷೇಮಧೂರ್ತಿಯೊಂದಿಗೆ ಇವನ ಘೋರ ಯುದ್ಧ ಮತ್ತು ಈತನಿಂದ ಅವನ ವಧೆ (ದ್ರೋಣ 107/1–6). ದ್ರೋಣನೊಂದಿಗೆ ಬೃಹತ್ಕ್ಷತ್ರನ ಯುದ್ಧ ಮತ್ತು ದ್ರೋಣನಿಂದ ಈತನ ವಧೆ (ದ್ರೋಣ 125/22).

(3). ನಿಷಧ ದೇಶದ ರಾಜ. ಕೌರವ ಪಕ್ಷದ ಯೋಧ. ಧೃಷ್ಟದ್ಯುಮ್ನನಿಂದ ಇವನ ವಧೆ

22

(ದ್ರೋಣ 32/65–66).

**ಬೃಹತ್ವಾ** – ಒಬ್ಬ ದೇವ ಗಂಧರ್ವ. ಈತ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/57).

**ಬೃಹತ್ಸೇನ** – ಕ್ರೋಧವಶನೆಂಬ ಒಬ್ಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ರಾಜ (ಆದಿ 67/64). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/21).

**ಬೃಹತ್ಸೇನಾ** – ಇವಳು ದಮಯಂತಿಯ ದಾಸಿಯಾಗಿದ್ದಳು. ಇವಳು ಅತ್ಯಂತ ಯಶಸ್ವಿನಿ, ಪರಿಚರ್ಯೆಯ ಕಾರ್ಯದಲ್ಲಿ ನಿಪುಣಳು. ಸಮಸ್ತ ಕಾರ್ಯಸಾಧನೆಯಲ್ಲಿ ಕುಶಲಳು. ಹಿತೈಷಿಣಿ, ಅನುರಾಗಿಣಿ ಮತ್ತು ಮಧುರಭಾಷಿಣಿಯಾಗಿ ದ್ದಳು. ಜೂಜಿನಲ್ಲಿ ರಾಜಾ ನಳನು ಸೋಲುತ್ತಿರು ವುದನ್ನು ತಿಳಿದು, ದಮಯಂತಿ ಮಂತ್ರಿಗಳನ್ನು ಕರೆಯಲು ಈಕೆಯನ್ನು ಕಳುಹಿಸಿದ್ದಳು (ವನ 60/4–5). ದಮಯಂತಿಯ ಆದೇಶದಿಂದ ಬೃಹತ್ಸೇನೆಯು ವಿಶ್ವಾಸಾರ್ಹ ಪುರುಷರ ಮೂಲಕ ವಾರ್ಷ್ಣೇಯನೆಂಬ ಸೂತನನ್ನು ಕರೆಸಿದ್ದಳು (ವನ 60/11).

**ಬೃಹದಂಬಾಲಿಕಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/4).

**ಬೃಹದಶ್ವ** – (1) ಒಬ್ಬ ಪ್ರಾಚೀನ ಮಹರ್ಷಿ. ಇವನು ಯುಧಿಷ್ಠಿರನನ್ನು ತುಂಬಾ ಗೌರವಿಸು ತ್ತಿದ್ದನು (ವನ 26/24–25). ಕಾಮ್ಯಕವನದಲ್ಲಿ ಯುಧಿಷ್ಠಿರನ ಬಳಿಗೆ ಇವನ ಆಗಮನ (ವನ 52/40). ಯುಧಿಷ್ಠಿರನ ಮೂಲಕ ಇವನ ಸತ್ಕಾರ ಮತ್ತು ಈತನ ಬಗ್ಗೆ ತನ್ನ ದುಃಖದೈನ್ಯದ ವರ್ಣನೆ ಮಾಡಿದುದು (ವನ 52/41–50). ಯುಧಿಷ್ಠಿರನನ್ನು ಸಮಾಧಾನಿಸುತ್ತಾ ಇವನು ನಲೋಪಾಖ್ಯಾನ ಹೇಳಿದುದು (ವನ 52/54 ರಿಂದ 79ರ ವರೆಗೆ). ಇವನ ಮೂಲಕ ಯುಧಿಷ್ಠಿರನಿಗೆ ಆಶ್ವಾಸನೆ ಮತ್ತು ಆತನಿಗೆ ಅಕ್ಷಹೃದಯ ಮತ್ತು ಅಶ್ವಶಿರದ ಉಪದೇಶ ಮಾಡಿ ಸ್ನಾನಾದಿಗಳಿಗಾಗಿ ಪ್ರಸ್ಥಾನ (ವನ 79/11–21).

(2) ಇವನು ಇಕ್ಷ್ವಾಕುವಂಶದ ರಾಜಾ ಶ್ರಾವಸ್ತನ ಪುತ್ರನಾಗಿದ್ದನು. ಇವನ ಪುತ್ರನ ಹೆಸರು ಕುವಲಾಶ್ವನೆಂದಾಗಿತ್ತು (ವನ 202/4–5). ಇವನು ಸಕಾಲದಲ್ಲಿ ತನ್ನ ಪುತ್ರ ಕುವಲಾಶ್ವನನ್ನು ರಾಜ್ಯದಲ್ಲಿ ಅಭಿಷಿಕ್ತನಾಗಿಮಾಡಿ, ತಾನು ತಪಸ್ಸಿಗೋಸ್ಕರ ತಪೋವನಕ್ಕೆ ನಡೆದನು (ವನ 202/7–8).

**ಬೃಹದುಕ್ಥ** – ಇವನು ತಪ (ಪಾಂಚಜನ್ಯ).ನ ಪುತ್ರ. ಈ ಪೃಥ್ವಿಯಲ್ಲಿ ಅಗ್ನಿಹೋತ್ರವಾಗಲು ತೊಡಗಿದಾಗ, ಭೂಮಿಯಲ್ಲಿರುವ ಶ್ರೇಷ್ಠ ಪುರುಷರಿಂದ ಇವನದೇ ಪೂಜೆ ನಡೆಯುತ್ತದೆ (ವನ 220/18).

**ಬೃಹದ್ಗರ್ಭ** – ರಾಜಾ ಶಿಬಿಯ ಪುತ್ರ. ಇವನನ್ನು ಒಬ್ಬ ಬ್ರಾಹ್ಮಣನ ಆತಿಥ್ಯಕ್ಕೋಸ್ಕರ, ಆ ಬ್ರಾಹ್ಮಣನ ಕೋರಿಕೆಯಂತೆ, ರಾಜನು ತಾನೇ ಕೊಂದನು ಮತ್ತು ಅವನ ದಹನ ಸಂಸ್ಕಾರ ಮಾಡಿದನು. ಆಮೇಲೆ ವಿಧಿವತ್ತಾಗಿ ಅವನ ಅಡುಗೆಮಾಡಿ, ಅದನ್ನು ಪಾತ್ರೆಯಲ್ಲಿರಿಸಿ ತಲೆಯ ಮೇಲಿಟ್ಟು ಕೊಂಡನು ಮತ್ತು ಆ ಬ್ರಾಹ್ಮಣನನ್ನು ಹುಡುಕ ತೊಡಗಿದನು (ವನ 198/18).

**ಬೃಹದ್ಗುರು** – ಪ್ರಾಚೀನ ಕಾಲದ ಒಬ್ಬ ರಾಜ (ಆದಿ 1/233).

**ಬೃಹದ್ದ್ಯುಮ್ನ** – ಒಬ್ಬ ಮಹಾಸೌಭಾಗ್ಯಶಾಲಿ, ಪ್ರತಾಪಿರಾಜ. ಇವನು ತನ್ನ ಯಜ್ಞದಲ್ಲಿ ರೈಭ್ಯಪುತ್ರ ಅರ್ವಾವಸು ಮತ್ತು ಪರಾವಸುಗಳನ್ನು ಸಹಯೋಗಿಗಳಾಗಿ ಮಾಡಿಕೊಂಡಿದ್ದನು (ವನ 138/1–2).

**ಬೃಹದಧ್ವನಿ** – ಒಂದು ಪ್ರಧಾನ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/32).

**ಬೃಹದ್ಬಲ** – (1) ಪ್ರಾಚೀನ ಕಾಲದ ಒಬ್ಬ ರಾಜ (ಆದಿ 1/237).

(2) ಗಾಂಧಾರ ರಾಜ ಸುಬಲನ ಪುತ್ರ. ಇವನು ತನ್ನ ಸಹೋದರ ಶಕುನಿ ಮತ್ತು ವೃಷಕನೊಂದಿಗೆ ದ್ರೌಪದಿಯ ಸ್ವಯಂವರಕ್ಕೆ ಬಂದಿದ್ದನು (ಆದಿ 185/5).

(3) ಇವನು ಕೋಸಲ ದೇಶದ ರಾಜ. ಪೂರ್ವ ದಿಗ್ವಿಜಯ ಕಾಲದಲ್ಲಿ ಇವನನ್ನು ಭೀಮಸೇನನು ಸೋಲಿಸಿದ್ದನು (ಸಭಾ 30/1). ಇವನ ಮೂಲಕ ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಹದಿನಾಲ್ಕು ಸಾವಿರ ಉತ್ತಮ ಅಶ್ವಗಳ ಕಾಣಿಕೆ

ಕೊಡಲ್ಪಟ್ಟಿತ್ತು (ಸಭಾ 51/7). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರಮಾಡಲ್ಪಟ್ಟಿತ್ತು (ಉದ್ಯೋಗ 4/22). ಇವನು ಕೌರವ ಪಕ್ಷದಿಂದ ಯುದ್ಧ ಮಾಡಲು ಬಂದಿದ್ದನು. ದುರ್ಯೋಧನನು ಇವನನ್ನು ಸೈನ್ಯ ಸಮುದ್ರದ ಉಬ್ಬರಕ್ಕೆ ಹೋಲಿಸಿದ್ದಾನೆ (ಉದ್ಯೋಗ 161/39). ಪ್ರಥಮ ದಿನದ ಯುದ್ಧದಲ್ಲಿ ಅಭಿಮನ್ಯುವಿನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/14–18). ಘಟೋತ್ಕಚನಿಂದ ಇವನ ಪರಾಜಯ (ಭೀಷ್ಮ 92/41). ಅಭಿಮನ್ಯುವಿನೊಂದಿಗೆ ಇವನ ಘೋರ ಯುದ್ಧ (ಭೀಷ್ಮ 116/31–36). (ದ್ರೋಣ 37/5–6). ಅಭಿಮನ್ಯುವಿನೊಂದಿಗೆ ಯುದ್ಧ ಮತ್ತು ಅವನಿಂದ ಈತನ ವಧೆ (ದ್ರೋಣ 47/20–22). ಇವನನ್ನು ಸುತ್ತುವರಿದು ಈತನ ಸ್ತ್ರೀಯರಿಂದ ರೋದನ (ಸ್ತ್ರೀ 25/10). ಮಹಾಭಾರತದಲ್ಲಿ ಬಂದಿರುವ ಬೃಹದ್ಬಲನ ಹೆಸರು– ಕೌಸಲ್ಯ, ಕೋಸಲೇಂದ್ರ, ಕೋಸಲಕ, ಕೋಸಲಾಧಿಪ, ಕೋಸಲಭರ್ತಾ, ಕೋಸಲರಾಜ ಇತ್ಯಾದಿ.

**ಬೃಹದ್‌ಬ್ರಹ್ಮಾ** – ಮಹರ್ಷಿ ಅಂಗೀರಸನ ಮೂಲಕ ಸುಭಾಳ ಗರ್ಭದಿಂದ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 218/2).

**ಬೃಹದ್ಭಾನು** – ವೇದಗಳ ಕುರಿತು ಮೇರೆ ಮೀರಿದ ವಿದ್ವಾಂಸ, ಭಾನುವೆಂಬ ಅಗ್ನಿಯನ್ನೇ, ಬೃಹದ್ಭಾನುವೆನ್ನುತ್ತಾರೆ (ವನ 221/8).

**ಬೃಹದ್ಭಾಸ** – ಮಹರ್ಷಿ ಅಂಗೀರಸನಿಂದ ಸುಭಾಳ ಗರ್ಭದಲ್ಲಿ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 218/2).

**ಬೃಹದ್ಭಾಸಾ** – ಈಕೆ ಸೂರ್ಯನ ಕನ್ಯೆ ಮತ್ತು ಭಾನು (ಮನು) ಎಂಬ ಅಗ್ನಿಯ ಭಾರ್ಯೆಯಾಗಿದ್ದಾಳೆ (ವನ 221/9).

**ಬೃಹದ್ರಥ** – (1) ಒಬ್ಬ ಪ್ರಾಚೀನ ರಾಜ (ಆದಿ 1/235). ಇವನು ಯಮನ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10). ಇವನು ಅಂಗದೇಶದ ರಾಜನಾಗಿದ್ದನು. ಶ್ರೀಕೃಷ್ಣನ ಮೂಲಕ ಇವನ ದಾನದ ವರ್ಣನೆ (ಶಾಂತಿ 29/31–38). ಇವನು ಪರಶುರಾಮನ ಕ್ಷತ್ರಿಯ ಸಂಹಾರದಿಂದ ಬದುಕಿಕೊಂಡಿದ್ದನು. ಇವನನ್ನು ಗೃಧ್ರಕೂಟ ಪರ್ವತದಲ್ಲಿ ಕೋತಿಗಳು ಬದುಕಿಸಿದ್ದವು (ಶಾಂತಿ 49/81–82). ಇವನನ್ನು ಪೌರವನೆಂದೂ ಹೇಳಲಾಗುತ್ತಿತ್ತು. ಪೌರವನೆಂಬ ಹೆಸರಿನಲ್ಲಿ ಇವನ ಯಜ್ಞ, ದಾನ ಇತ್ಯಾದಿಗಳ ಪ್ರಶಂಸೆ (ದ್ರೋಣ 57). ಇವನನ್ನು ಮಾಂಧಾತನು ಗೆದ್ದಿದ್ದನು (ದ್ರೋಣ 62/10).

(2) ಚೇದಿರರಾಜ ಸಮ್ರಾಟ್ ಉಪರಿಚರನ ಪುತ್ರ. ಇವನ ತಂದೆ ಇವನನ್ನು ಮಗಧ ದೇಶದಲ್ಲಿ ಅಭಿಷಿಕ್ತಗೊಳಿಸಿದನು (ಆದಿ 63/30). ಇವನು ಮಗಧ ದೇಶದ ಬಲವಂತನಾದ ರಾಜ. ಮೂರು ಅಕ್ಷೌಹಿಣಿ ಸೇನೆಯ ಸ್ವಾಮಿ ಮತ್ತು ಸಮರಾಂಗಣದಲ್ಲಿ ಅಭಿಮಾನಪೂರ್ವಕ ಹೋರಾಡುವವನಾಗಿದ್ದನು (ಸಭಾ 17/13). ಇವನ ಪರಾಕ್ರಮವೇ ಮೊದಲಾದ ಗುಣಗಳ ವರ್ಣನೆ (ಸಭಾ 17/14–16). ಕಾಶೀರಾಜನ ಇಬ್ಬರು ಕನ್ಯೆಯರೊಂದಿಗೆ ಇವನ ವಿವಾಹವಾಗಿತ್ತು. ನಾನು ನಿಮ್ಮಿಬ್ಬರೊಂದಿಗೆ ಎಂದೂ ವಿಷಮವ್ಯವಹಾರ ಮಾಡುವುದಿಲ್ಲವೆಂದು ಇವನು ಏಕಾಂತದಲ್ಲಿ ತನ್ನ ಇಬ್ಬರೂ ಪತ್ನಿಯರೊಂದಿಗೆ ಪ್ರತಿಜ್ಞೆ ಮಾಡಿದ್ದನು. ವಿಷಯಾಸಕ್ತಿಯಲ್ಲಿ ಮುಳುಗಿಯೇ ಇವನ ಯೌವನ ಕಳೆದು ಹೋಯಿತು. ಆದರೆ ಇವನಿಗೆ ಪುತ್ರನಾಗಲಿಲ್ಲ (ಸಭಾ 17/17–21). ಆಗ ಈತ ಪತ್ನಿಯರ ಸಹಿತ ಚಂಡಕೌಶಿಕ ಮುನಿಯ ಬಳಿಗೆ ಹೋದನು ಮತ್ತು ಅವನನ್ನು ಎಲ್ಲಾ ವಿಧದ ರತ್ನಗಳಿಂದ ಸಂತುಷ್ಟಿಗೊಳಿಸಿದನು. ಮುನಿಯು ತನ್ನ ಬಳಿಗೆ ಬಂದ ಕಾರಣ ಕೇಳಿದಾಗ, ಇವನು ಪುತ್ರಾಭಾವಜನಿತ ಕಷ್ಟವನ್ನು ಹೇಳಿದನು ಮತ್ತು ಕಾಡಿನಲ್ಲಿ ತಪಸ್ಸು ಮಾಡುವ ವಿಚಾರ ಪ್ರಕಟಿಸಿದನು. ಮುನಿಯು ಇವನಿಗೆ ಮಾವಿನಹಣ್ಣನ್ನು ಕೊಟ್ಟನು; ಈತನಿಗೆ ಪುತ್ರನಾಗುವ ವಿಶ್ವಾಸಹುಟ್ಟಿಸಿ, ಪುತ್ರನನ್ನು ರಾಜ್ಯಪದವಿಯ ಮೇಲೆ ಅಭಿಷಿಕ್ತನಾಗಿ ಮಾಡಿದ ಬಳಿಕ, ಕಾಡಿಗೆಹೋಗಿ ತಪಸ್ಸುಮಾಡಬಹುದೆಂದು ಆದೇಶ ನೀಡಿದನು. ಮುನಿಯು ಇವನ ಭಾವೀ ಪುತ್ರನಿಗೋಸ್ಕರ ಎಂಟು ವರಗಳನ್ನಿತ್ತನು. ಇದರ ಅನಂತರ ರಾಜನು ಮುನಿಗೆ ಪ್ರಣಾಮ ಮಾಡಿ ತನ್ನ ಮನೆಗೆ ಹೋದನು (ಸಭಾ 17/22–31). ರಾಜನು ಆ ಹಣ್ಣನ್ನು ಎರಡು ಭಾಗವಾಗಿಮಾಡಿ ಒಬ್ಬೊಬ್ಬ ಪತ್ನಿಯರಿಗೆ ತಿನ್ನಿಸಿ

ದನು. ಇಬ್ಬರಿಗೂ ಗರ್ಭ ನಿಂತಿತು. ಪ್ರಸವಕಾಲ ಬಂದಾಗ ಇಬ್ಬರ ಗರ್ಭದಿಂದಲೂ ಶರೀರದ ಅರ್ಧಾರ್ಧಭಾಗ ಉತ್ಪನ್ನವಾಯಿತು. ಆ ನಿರ್ಜೀವ ತುಂಡುಗಳನ್ನು ರಾಣಿಯರು ಹೊರಗೆ ಎಸೆಯು ವಂತೆ ಮಾಡಿದರು. ಜರಾ ಎಂಬ ರಾಕ್ಷಸಿ ಆ ಎರಡೂ ತುಂಡುಗಳನ್ನು ಜೋಡಿಸಿದಳು. ಅದ ರಿಂದಾಗಿ ಬಲವಂತನಾದ ಕುಮಾರನು ಸಜೀವ ನಾಗಿ ಮೇಲೆದ್ದನು. ರಾಕ್ಷಸಿಯು ಆ ಬಾಲಕನನ್ನು ರಾಜನಿಗೆ ಅರ್ಪಿಸಿದಳು. ಆಗ ರಾಜನು ಆಕೆಯ ಪರಿಚಯ ಕೇಳಿದನು. ಅವಳು ಪರಿಚಯ ಹೇಳಿ ಮಾಯವಾದಳು. ರಾಜನು ಕುಮಾರನನ್ನು ತೆಗೆದುಕೊಂಡು ಅರಮನೆಗೆ ಬಂದನು. ಬಾಲಕ ನಿಗೆ ಜಾತಕರ್ಮಾದಿಗಳನ್ನು ಮಾಡಿದನು ಮತ್ತು ಜರಾಸಂಧನೆಂದು ಆತನಿಗೆ ಹೆಸರನ್ನಿಟ್ಟನು. ಮಗಧ ದೇಶದಲ್ಲಿ ರಾಕ್ಷಸೀ ಪೂಜೆಯ ಮಹಾ ಉತ್ಸವವನ್ನು ಆಚರಿಸುವಂತೆ ಆಜ್ಞೆ ಕೊಟ್ಟನು (ಸಭಾ 17/32 ರಿಂದ 18 ಅಧ್ಯಾಯ ವರೆಗೆ). ಇವನು ಜರಾಸಂಧನನ್ನು ತನ್ನ ರಾಜ್ಯದಲ್ಲಿ ಅಭಿ ಷೇಚನಗೊಳಿಸಿ, ಇಬ್ಬರೂ ಪತ್ನಿಯರೊಂದಿಗೆ ತಪೋವನಕ್ಕೆ ಹೋದನು (ಸಭಾ 19/17–18). ಇವನು ಋಷಭನೆಂಬ ರಾಕ್ಷಸನ ವಧೆ ಮಾಡಿ, ಅವನ ಚರ್ಮದಿಂದ ಮೂರು ಭೇರಿಗಳನ್ನು ಮಾಡಿಸಿದ್ದನು, ಅವುಗಳನ್ನು ಬಾರಿಸಿದರೆ ತಿಂಗ ಳಿಡೀ ಶಬ್ದವಿರುತ್ತಿತ್ತು (ಸಭಾ 21/16).

(3) 'ಸೂಕ್ಷ್ಮ'ನೆಂಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ರಾಜ (ಅದಿ 67/19). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/21).

(4) ಒಬ್ಬ ಅಗ್ನಿ. ಈತ ವಸಿಷ್ಠ ಪುತ್ರನಾದುದ ರಿಂದ ವಾಸಿಷ್ಠನೆಂದೂ ಹೇಳಲ್ಪಡುತ್ತಾನೆ (ವನ 220/1). ಇವನಿಗೆ ಪ್ರಣಿಧಿ ಎಂಬ ಪುತ್ರನಾದನು (ವನ 220/9).

**ಬೃಹದ್ವತೀ** – ಒಂದು ಪ್ರಧಾನ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/30).

**ಬೃಹದಂತ** – ಉಲೂಕ ದೇಶದ ರಾಜ. ಅರ್ಜುನ ನೊಂದಿಗೆ ಇವನ ಯುದ್ಧ ಮತ್ತು ಪರಾಜಯ. ಎಲ್ಲಾ ರೀತಿಯ ರತ್ನಗಳ ಕಾಣಿಕೆಯನ್ನು ತೆಗೆದುಕೊಂಡು ಇವನು ಅರ್ಜುನನ ಸನ್ನಿಧಿ ಯಲ್ಲಿ ಉಪಸ್ಥಿತನಾದುದು (ಸಭಾ 27/5–9). ಇವನು ದ್ರೌಪದೀ ಸ್ವಯಂವರಕ್ಕೂ ಹೋಗಿದ್ದನು (ಆದಿ 185/7). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ವಾಗಿತ್ತು (ಉದ್ಯೋಗ 4/13). ಯುಧಿಷ್ಠಿರನ ಪ್ರತಿಯಾಗಿ ಇವನಿಗಿರುವ ಭಕ್ತಿಭಾವದ ಕಾರಣ ದಿಂದಾಗಿ ಅವನ ಪಕ್ಷಕ್ಕೆ ಬಂದಿದ್ದನು. ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/76–77). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/12–13).

(2) ಕ್ಷೇಮಧೂರ್ತಿಯ ಸಹೋದರ. ಕೌರವ ಪಕ್ಷದ ಯೋಧ. ಸಾತ್ಯಕಿಯೊಂದಿಗೆ ಈತನ ಯುದ್ಧ (ದ್ರೋಣ 25/47–48). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/42).

**ಬೃಹನ್ನಳಾ** – ವಿರಾಟನಗರದಲ್ಲಿ ಅಜ್ಞಾತವಾಸದ ಕಾಲದಲ್ಲಿ ಇಡಲ್ಪಟ್ಟ ಅರ್ಜುನನ ಹೆಸರು (ಅರ್ಜುನ 2/27). (ವಿಶೇಷ–ನೋಡಿರಿ–ಅರ್ಜುನ).

**ಬೃಹನ್ಮನಾ** – ಮಹರ್ಷಿ ಅಂಗೀರಸನ ಮೂಲಕ ಸುಭಾಳ ಗರ್ಭದಿಂದ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 218/2).

**ಬೃಹನ್ಮಂತ್ರ** – ಮಹರ್ಷಿ ಅಂಗೀರಸನ ಮೂಲಕ ಸುಭಾಳ ಗರ್ಭದಿಂದ ಹುಟ್ಟಿದ ಏಳು ಪುತ್ರರಲ್ಲಿ ಒಬ್ಬ (ವನ 218/2).

**ಬೃಹಸ್ಪತಿ** – (1) ಮಹರ್ಷಿ ಅಂಗೀರಸನ ಪುತ್ರ. ಉತಥ್ಯ ಮತ್ತು ಸಂವರ್ತನರ ಸಹೋದರ (ಆದಿ 66/5). ಬೃಹಸ್ಪತಿಯ ಬ್ರಹ್ಮಜ್ಞಾನಿ ಸಹೋದರಿ. ಯೋಗಪರಾಯಣಳಾಗಿ, ಅನಾಸಕ್ತ ಭಾವದಿಂದ ಜಗತ್ತಿನಲ್ಲೆಲ್ಲಾ ಸಂಚರಿಸುತ್ತಾಳೆ. ಅವಳು ಪ್ರಭಾಸ ನೆಂಬ ವಸುವಿನ ಹೆಂಡತಿಯಾದಳು (ಆದಿ 66/26–27). ಇವನ ಅಂಶದಿಂದ ದ್ರೋಣಾ ಚಾರ್ಯನ ಜನನವಾಯಿತು (ಆದಿ 67/69). ದೇವತೆಗಳಿಂದ ಇವನು ಪುರೋಹಿತ ಪೀಠಕ್ಕೆ ವರಿಸಲ್ಪಟ್ಟದ್ದು (ಆದಿ 76/6). ಶುಕ್ರಾಚಾರ್ಯ ನೊಂದಿಗೆ ಇವನ ಸ್ಪರ್ಧೆ (ಆದಿ 76/7). ಇವನ ಪುತ್ರನ ಹೆಸರು ಕಚ (ಆದಿ 76/11). ಇವನು ಭರಧ್ವಾಜ ಮುನಿಗೆ ಆಗ್ನೇಯಾಸ್ತ್ರ ಪ್ರದಾನ ಮಾಡಿದ್ದನು (ಆದಿ 169/29). ಇವನು ಇಂದ್ರ ಸಭೆಯಲ್ಲಿರುತ್ತಾನೆ (ಸಭಾ 7/28). ಬ್ರಹ್ಮನ ಸಭೆಯಲ್ಲೂ ಉಪಸ್ಥಿತನಾಗಿರುತ್ತಾನೆ (ಸಭಾ

11/29). ಇವನ ಮೂಲಕ ಚಾಂದ್ರಮಸಿ (ತಾರಾ) ಎಂಬ ಪತ್ನಿಯಲ್ಲಿ ಆರು ಮಂದಿ ಅಗ್ನಿಸ್ವರೂಪರಾದ ಪುತ್ರರು ಹುಟ್ಟಿದರು. ಇವರಲ್ಲಿ ಶಂಯು ಎಲ್ಲರಿಗಿಂತ ಹಿರಿಯನಾಗಿದ್ದನು. ಇವನ ಹೊರತಾಗಿ ಒಬ್ಬ ಕನ್ಯೆಯೂ ಹುಟ್ಟಿದ್ದಳು (ವನ 219). ನಹುಷನ ಭಯದಿಂದ ಭೀತಳಾದ ಶಚಿಗೆ ಈತನ ಆಶ್ವಾಸನೆ (ಉದ್ಯೋಗ 11/23–25). ನಹುಷನೊಂದಿಗೆ ಸಮಯ ಯಾಚಿಸಲು ಶಚಿಗೆ ಸಲಹೆ ನೀಡಿದುದು (ಉದ್ಯೋಗ 12/25). ಅಗ್ನಿಯೊಂದಿಗೆ ಸಂವಾದ (ಉದ್ಯೋಗ 15/28–34). ಇವನ ಮೂಲಕ ಅಗ್ನಿಯ ಸ್ತುತಿ (ಉದ್ಯೋಗ 16/1–8). ಈತ ಇಂದ್ರನ ಸ್ತುತಿ ಮಾಡಿದುದು (ಉದ್ಯೋಗ 16/14–18). ಇಂದ್ರನೊಡನೆ ನಹುಶನ ಬಲದ ವರ್ಣನೆ (ಉದ್ಯೋಗ 16/23–24). ಪೃಥ್ವಿಯಿಂದ ಹಾಲು ಕರೆಯುವ ಸಂದರ್ಭದಲ್ಲಿ ಇವನು ಗೌಳಿಗನಾಗಿದ್ದನು (ದ್ರೋಣ 69/23). ಇವನ ಮೂಲಕ ಸ್ಕಂದನಿಗೆ ದಂಡದ ದಾನ (ಶಲ್ಯ 46/50). ಕೋಸಲರಾಜ ವಸುಮಂತ(ವಸುಮನಾ)ನೊಡನೆ ರಾಜನ ಆವಶ್ಯಕತೆಯ ಪ್ರತಿಪಾದನೆ (ಶಾಂತಿ 68/8–60). ಸಮಾಧಾನಪೂರ್ಣ ಮಧುರವಚನ ಮಾತಾಡುವಂತೆ ಇಂದ್ರನಿಗೆ ಉಪದೇಶ (ಶಾಂತಿ 84). ಇವನು ಇಂದ್ರನಿಗೆ ವಿಜಯಪ್ರಾಪ್ತಿಯ ಉಪಾಯವನ್ನೂ, ದುಷ್ಟರ ಲಕ್ಷಣವನ್ನೂ ಹೇಳಿದುದು (ಶಾಂತಿ 103/7–52). ಇಂದ್ರನನ್ನು ಶುಕ್ರಾಚಾರ್ಯರ ಬಳಿಗೆ ಶ್ರೇಯಪ್ರಾಪ್ತಿಗಾಗಿ ಕಳುಹಿಸಿದುದು (ಶಾಂತಿ 124/24). ಮನುವಿನೊಡನೆ ಜ್ಞಾನಕ್ಕೆ ಸಂಬಂಧಿಸಿದ ವಿವಿಧ ಪ್ರಶ್ನೆ ಮಾಡಿದುದು (ಶಾಂತಿ 201 ರಿಂದ 206). ಉಪರಿಚರನ ಯಜ್ಞದಲ್ಲಿ ಭಗವಂತನ ಮೇಲೆ ಕೋಪಗೊಂಡದ್ದು (ಶಾಂತಿ 336/14). ಮುನಿಗಳು ಸಮಾಧಾನಹೇಳಿದ ಮೇಲೆ, ಸಿಟ್ಟನ್ನು ಶಾಂತಗೊಳಿಸಿ ಯಜ್ಞವನ್ನು ಪೂರ್ಣಮಾಡಿದುದು (ಶಾಂತಿ 336/60–61). ಇವನಿಂದ ಜಲಾಭಿಮಾನಿ ದೇವತೆಗೆ ಶಾಪ (ಶಾಂತಿ 342/27). ಇವನ ಮೂಲಕ ಇಂದ್ರನಿಗೆ ಭೂಮಿದಾನದ ಮಹತ್ವದ ಕುರಿತು ವರ್ಣನೆ (ಅನು 62/55–92). ರಾಜಾಮಾಂಧಾತನು ಕೇಳಿದಾಗ ಅವನಿಗೆ ಗೋದಾನದ ವಿಷಯವನ್ನು ಉಪದೇಶಿಸಿದುದು (ಅನು 76/5–23). ಯುಧಿಷ್ಠಿರನೊಡನೆ, ಇವನು ಪ್ರಾಣಿಗಳ ಜನ್ಮ ಮೃತ್ಯುವಿನ ಮತ್ತು ನಾನಾವಿಧ ಪಾಪಗಳ ಫಲ ಸ್ವರೂಪವಾಗಿ ನಾನಾ ಯೋನಿಯಲ್ಲಿ ಜನ್ಮವೆತ್ತುವ ಕುರಿತು ವರ್ಣಿಸಿದುದು (ಅನು 111). ಯುಧಿಷ್ಠಿರನಿಗೆ ಅನ್ನದಾನದ ಮಹಿಮೆ ತಿಳಿಸಿದುದು (ಅನು 112). ಯುಧಿಷ್ಠಿರನಿಗೆ ಅಹಿಂಸೆ ಮತ್ತು ಧರ್ಮದ ಮಹಿಮೆಯ ಉಪದೇಶವನ್ನಿತ್ತು, ಈತನ ಸ್ವರ್ಗಗಮನ (ಅನು 113). ಇವನ ಮೂಲಕ ಇಂದ್ರನಿಗೆ ಧರ್ಮೋಪದೇಶ (ಅನು 125/60–68). ಇಂದ್ರನು ಹೇಳಿದುದರಿಂದ ಮನುಷ್ಯರ ಯಜ್ಞ ಮಾಡಿಸದಿರಲು ಪ್ರತಿಜ್ಞೆ ಮಾಡಿದುದು (ಆಶ್ವ 5/25–27). ಮರುತ್ತನೊಡನೆ ಆತನ ಯಜ್ಞ ಮಾಡಿಸಲು ತಿರಸ್ಕರಿಸಿದುದು (ಆಶ್ವ 6/8–9). ಮರುತ್ತನಿಗೆ ಧನಪ್ರಾಪ್ತಿಯಾದಾಗ ಈತ ಚಿಂತಿತನಾದುದು (ಆಶ್ವ 8/36–37). ಇಂದ್ರನು ಕೇಳಿದಾಗ, ಅವನೊಡನೆ ತನ್ನ ಚಿಂತೆಯ ಕಾರಣವನ್ನು ಹೇಳುತ್ತಾ, ಮರುತ್ತ ಮತ್ತು ಸಂವರ್ತರನ್ನು ಬಂಧಿಸಲು ಹೇಳಿದುದು (ಆಶ್ವ 9/7). ಇವನೂ ಸೋಮನೂ ಬ್ರಾಹ್ಮಣರ ರಾಜರೆಂದು ಹೇಳಲ್ಪಟ್ಟಿದ್ದಾರೆ (ಆಶ್ವ 9/8–10).

**ಬೋಧ** – (1) ಜರಾಸಂಧನ ಭಯದಿಂದ ತನ್ನ ಸೋದರರ ಹಾಗೂ ಸೇವಕರ ಸಹಿತನಾಗಿ ದಕ್ಷಿಣದಿಕ್ಕಿಗೆ ಓಡಿಹೋದ ಒಬ್ಬ ರಾಜ (ಸಭಾ 14/26).

(2) ಒಂದು ಭಾರತೀಯ ಜನಪದ (ಭೀಷ್ಮ 9/39).

**ಬೋಧ್ಯ** – ಒಬ್ಬ ಪ್ರಾಚೀನ ಋಷಿ. ಯಯಾತಿಯು ಶಾಂತಿಯ ಕುರಿತು ಪ್ರಶ್ನೆ ಮಾಡಿದಾಗ ಇವನು ಉಪದೇಶ ಮಾಡಿದ್ದನು. ಇವನ ಆ ಉಪದೇಶವು ಬೋಧ್ಯಗೀತೆಯೆಂಬ ಹೆಸರಿನಿಂದ ಪ್ರಸಿದ್ಧವಾಯಿತು (ಶಾಂತಿ 178).

**ಬ್ರಧ್ನಶ್ವ** – ಒಬ್ಬ ರಾಜ. ಮಹಾರಾಜ ಶ್ರುತರ್ವಾನನ್ನು ಕರಕೊಂಡು ಇವನ ಬಳಿಗೆ ಅಗಸ್ತ್ಯರ ಆಗಮನ. ರಾಜನಿಂದ ಅವರಿಬ್ಬರ ಸ್ವಾಗತ ಸತ್ಕಾರ. ಈತ ಅವರು ಬಂದ ಕಾರಣ ವಿಚಾರಿಸಿದುದು (ವನ 98/7–8). ಅಗಸ್ತ್ಯರು ಧನವನ್ನು ಯಾಚಿಸಿದಾಗ ಇವನು ಅವರ ಮುಂದೆ ತನ್ನ ಆಯವ್ಯಯದ ವಿವರಣೆಯನ್ನಿ

ತ್ತದ್ದು (ವನ 98/10). ಅಗಸ್ತ್ಯರೊಂದಿಗೆ ಧನದ ಯಾಚನೆಗಾಗಿ ಹೋದುದು (ವನ 98/12). ಮಹರ್ಷಿ ಅಗಸ್ತ್ಯರ ಆಜ್ಞೆಯಿಂದ ಪುನಃ ತನ್ನ ರಾಜಧಾನಿಗೆ ಹಿಂತಿರುಗಿದುದು (ವನ 99/18).

**ಬ್ರಹ್ಮಚಾರಿ** – ಕಶ್ಯಪನ ಮೂಲಕ ಪ್ರಾಧಾಳ ಗರ್ಭದಿಂದ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/47). ಇವನು ಅರ್ಜುನನ ಜನ್ಮಕಾಲದ ಮಹೋತ್ಸವಕ್ಕೆ ಆಗಮಿಸಿದ್ದನು (ಆದಿ 122/58).

**ಬ್ರಹ್ಮತೀರ್ಥ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಬ್ರಾಹ್ಮಣೇತರ ಮಾನವನು ಬ್ರಾಹ್ಮಣತ್ವದ ಲಾಭ ಪಡೆಯುತ್ತಾನೆ ಮತ್ತು ಬ್ರಾಹ್ಮಣನು ಶುದ್ಧಚಿತ್ತನಾಗಿ ಪರಮಗತಿಯನ್ನು ಪ್ರಾಪ್ತಿಸಿಕೊಳ್ಳುತ್ತಾನೆ (ವನ 83/113).

**ಬ್ರಹ್ಮತುಂಗ** – ಒಂದು ಪರ್ವತ. ಇದು ಸ್ವಪ್ನದಲ್ಲಿ ಶ್ರೀಕೃಷ್ಣನೊಂದಿಗೆ ಶಿವನ ಬಳಿಗೆ ಹೋಗುತ್ತಿದ್ದ ಅರ್ಜುನನಿಗೆ ದಾರಿಯಲ್ಲಿ ಸಿಕ್ಕಿತ್ತು (ದ್ರೋಣ 80/31).

**ಬ್ರಹ್ಮದತ್ತ** – ಪಾಂಚಾಲ ದೇಶದ ಕಾಂಪಿಲ್ಯ ನಗರದ ಒಬ್ಬ ಪ್ರಾಚೀನ ರಾಜ (ಶಾಂತಿ 139/5). ಪೂಜನೀ ಎಂಬ ಪಕ್ಷಿಯೊಂದಿಗೆ ಇವನ ಸಂವಾದ (ಶಾಂತಿ 139/24–111). ಈ ಪಾಂಚಾಲ ರಾಜನು ಬ್ರಾಹ್ಮಣರಿಗೆ ಶಂಖನಿಧಿಯನ್ನು ಕೊಟ್ಟು ಬ್ರಹ್ಮಲೋಕವನ್ನು ಪಡೆದಿದ್ದನು (ಶಾಂತಿ 234/29; ಅನು 137/17). ಇವನು ಕಂಡರೀಕ ಕುಲ ದಲ್ಲಿ ಹುಟ್ಟಿದ್ದನು. ಇವನು ಏಳು ಜನ್ಮಗಳ ಜನ್ಮ ಮೃತ್ಯು ಸಂಬಂಧವಾದ ದುಃಖಗಳನ್ನು ಬಾರಿ ಬಾರಿಗೂ ಸ್ಮರಣೆಮಾಡಿ, ಯೋಗಜನಿತ ಐಶ್ವರ್ಯ ವನ್ನು ಪ್ರಾಪ್ತಿಸಿಕೊಂಡಿದ್ದನು (ಶಾಂತಿ 342/105–106). ಇವನು ಈಗ ಯಮಸಭೆಯಲ್ಲಿದ್ದು ಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/20).

**ಬ್ರಹ್ಮದೇವ** – ಪಾಂಡವಪಕ್ಷದ ಒಬ್ಬ ವೀರ ಯೋಧ. ಇವನು ಸೇನೆಯ ರಕ್ಷಣೆಗಾಗಿ ಕ್ಷತ್ರದೇವನೊಂದಿಗೆ ಹಿಂದಿನಿಂದ ಹೋಗುತ್ತಿದ್ದನು (ಉದ್ಯೋಗ 196/25).

**ಬ್ರಹ್ಮಮೇಧ್ಯಾ** – ಭಾರತವರ್ಷದ ಒಂದು ಪ್ರಧಾನ ನದಿ. ಇದರ ನೀರನ್ನು ಇಲ್ಲಿ ವಾಸಿಸು ವವರು ಕುಡಿಯುತ್ತಾರೆ (ಭೀಷ್ಮ 9/32).

**ಬ್ರಹ್ಮಯೋನಿ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವ ಮನುಷ್ಯ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಮತ್ತು ತನ್ನ ಏಳು ತಲೆಮಾರಿನವರನ್ನು ಉದ್ಧಾರ ಮಾಡುತ್ತಾನೆ (ವನ 83/140). ಇದರ ಉತ್ಪತ್ತಿಯ ಸಂದರ್ಭ (ಶಲ್ಯ 47/22–24).

**ಬ್ರಹ್ಮವೇಧ್ಯಾ** – ಭಾರತವರ್ಷದ ಒಂದು ಪ್ರಧಾನ ನದಿ. ಇಲ್ಲಿರುವ ಜನರು ಇದರ ನೀರು ಕುಡಿಯುತ್ತಾರೆ (ಭೀಷ್ಮ 9/30).

**ಬ್ರಹ್ಮಶಾಲಾ** – ಒಂದು ಉತ್ತಮ ತೀರ್ಥ. ಗಂಗೆ ಈ ಸರೋವರದಲ್ಲಿ ಸ್ಥಿತಳಾಗಿದ್ದಳು. ಇದರ ದರ್ಶನವೇ ಪುಣ್ಯಮಯವೆಂದು ಹೇಳಲ್ಪಟ್ಟಿದೆ (ವನ 87/23).

**ಬ್ರಹ್ಮಶಿರ** – ಬ್ರಹ್ಮಾಸ್ತ್ರ. ಈ ಅಸ್ತ್ರವನ್ನು ದ್ರೋಣಾ ಚಾರ್ಯನು ಪ್ರಸನ್ನನಾಗಿ ಅರ್ಜುನನಿಗೆ ಕೊಟ್ಟಿ ದ್ದನು (ಆದಿ 132/18). ಇದರ ಪ್ರಯೋಗದ ನಿಯಮ (ಆದಿ 132/19–21). ಮಹರ್ಷಿ ಅಗಸ್ತ್ಯನಿಂದ ಅಗ್ನಿವೇಶನಿಗೆ, ಅಗ್ನಿವೇಶನಿಂದ ದ್ರೋಣನಿಗೆ ಮತ್ತು ದ್ರೋಣನಿಂದ ಅರ್ಜುನನಿಗೆ ಈ ಅಸ್ತ್ರವು ಪ್ರಾಪ್ತವಾಗಿತ್ತು (ಆದಿ 138/9–12).

**ಬ್ರಹ್ಮಸರ** – (1) ಧರ್ಮಾರಣ್ಯದಿಂದ ಶೋಭಾಯಮಾನವಾದ ಒಂದು ತೀರ್ಥ. ಇಲ್ಲಿ ಒಂದು ರಾತ್ರಿ ನಿವಾಸಮಾಡುವುದರಿಂದ ಮನುಷ್ಯ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಇಲ್ಲಿ ಬ್ರಹ್ಮನ ಮೂಲಕ ಸ್ಥಾಪಿಸಲ್ಪಟ್ಟ ಯಜ್ಞಸ್ತಂಭವನ್ನು ಸುತ್ತು ವುದರಿಂದ ವಾಜಪೇಯ ಯಜ್ಞದ ಫಲ ಸಿಗುತ್ತದೆ (ವನ 84/75). ಇದರ ಜಲದಲ್ಲಿ ಸ್ನಾನ ಮಾಡಿ ದರೆ ಪುಂಡರೀಕ ಯಜ್ಞದ ಫಲ ಪ್ರಾಪ್ತವಾಗುತ್ತದೆ (ಅನು 25/58).

(2) ಗಯೆಯ ಅಂತರ್ಗತವಾದ ಒಂದು ಕಲ್ಯಾಣಮಯ ತೀರ್ಥ. ದೇವರ್ಷಿಗಣ ಇದರ ಸೇವೆ ಮಾಡುತ್ತಾರೆ (ವನ 87/8). ಅಗಸ್ತ್ಯನು ವೈವಸ್ವತ ಯಮನನ್ನು ಭೇಟಿಯಾಗಲು ಇಲ್ಲಿಗೆ ಆಗಮಿಸಿದ್ದನು (ವನ 95/11).

(3) ಇಲ್ಲಿಗೆ ಯಾತ್ರೆ ಮಾಡಿ, ಭಾಗೀರಥಿಯಲ್ಲಿ ಸ್ನಾನ, ತರ್ಪಣ ಇತ್ಯಾದಿ ಮಾಡಿ, ಒಂದು ತಿಂಗಳ ವರೆಗೆ ನಿರಾಹಾರನಾಗಿರುವುದರಿಂದ ಮನುಷ್ಯ ಚಂದ್ರಲೋಕವನ್ನು ಪಡೆಯುತ್ತಾನೆ (ಅನು 25/39–40).

**ಬ್ರಹ್ಮಸ್ಥಾನ** – ಇಲ್ಲಿ ಬ್ರಹ್ಮನ ಸಮೀಪ ಹೋಗುವುದರಿಂದ, ಮನುಷ್ಯ ರಾಜಸೂಯ ಮತ್ತು ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ (ವನ 84/103). ಇಲ್ಲಿ ಮೂರು ರಾತ್ರಿ ಉಪವಾಸದಿಂದ ಸಹಸ್ರ ಗೋದಾನದ ಫಲಪ್ರಾಪ್ತವಾಗುತ್ತದೆ (ವನ 85/35; ಉದ್ಯೋಗ 186/26). ಇಲ್ಲಿ ಕಮಲವನ್ನು ಕಿತ್ತಾಗ, ಅಗಸ್ತ್ಯರ ಕಮಲಗಳ ಕಳ್ಳತನವಾದುದು (ಅನು 94/8).

**ಬ್ರಹ್ಮಾ** – ಸೃಷ್ಟಿಯ ಪ್ರಾರಂಭದಲ್ಲಿ ಸರ್ವತ್ರ ಅಂಧಕಾರವಿದ್ದಾಗ, ಯಾವುದೇ ವಸ್ತುವಿನ ಹೆಸರು, ರೂಪಗಳ ಜ್ಞಾನವಾಗದಿರುವಾಗ, ಒಂದು ವಿಶಾಲ ಅಂಡವು ಪ್ರಕಟವಾಯಿತು. ಅದು ಎಲ್ಲಾ ಪ್ರಜೆಗಳ ಅವಿನಾಶಿ ಬೀಜವಾಗಿತ್ತು. ಆ ದಿವ್ಯವಾದ ಮಹಾನ್ ಅಂಡದಲ್ಲಿ ಸತ್ಯಸ್ವರೂಪ, ಜ್ಯೋತಿರ್ಮಯ, ಸನಾತನ ಬ್ರಹ್ಮನು ಅಂತರ್ಯಾಮಿ ರೂಪದಿಂದ ಪ್ರವೇಶ ಮಾಡಿದನು. ಅದೇ ಅಂಡದಿಂದಲೇ ಪ್ರಥಮ ದೇಹಧಾರಿ, ಪ್ರಜಾಪಾಲಕ, ದೇವಗುರು ಪಿತಾಮಹ ಬ್ರಹ್ಮನ ಆವಿರ್ಭಾವವಾಯಿತು (ಆದಿ 1/29–32). ಮಹಾಭಾರತದ ನಿರ್ಮಾಣ ಮಾಡಿ, ಅದರ ಅಧ್ಯಯನ ಮತ್ತು ಪ್ರಚಾರದ ವಿಷಯದಲ್ಲಿ ಆಲೋಚಿಸುತ್ತಾ ಇದ್ದು, ಕೃಷ್ಣದ್ವೈಪಾಯನವ್ಯಾಸನ ಆಶ್ರಮಕ್ಕೆ ಇವನ ಆಗಮನ (ಆದಿ 1/55–57). ವ್ಯಾಸರಿಂದ ಸತ್ಕೃತನಾಗಿ ಇವನು ಆಸನದ ಮೇಲೆ ವಿರಾಜಮಾನನಾದುದು (ಆದಿ 1/58–59). ವ್ಯಾಸನು ತನ್ನ ಗ್ರಂಥದ ಪರಿಚಯವನ್ನಿತ್ತು, ಅದಕ್ಕೆ ಯೋಗ್ಯವಾದ ಲೇಖಕನಿಲ್ಲದಿರುವ ಕುರಿತು ಚಿಂತೆಯನ್ನು ಪ್ರಕಟಿಸಿದುದು (ಆದಿ 1/61–67). ಇವನು ಮಹಾಭಾರತಕ್ಕೆ 'ಕಾವ್ಯ' ಎಂಬ ಸಂಕೇತವನ್ನಿಟ್ಟದ್ದು ಮತ್ತು ಅದರ ಪ್ರಶಂಸೆ ಮಾಡುತ್ತಾ, ಅದನ್ನು ಬರೆಯಲು ಗಣೇಶನ ಸ್ಮರಣೆ ಮಾಡುವಂತೆ ಸಲಹೆಯನ್ನಿತ್ತದ್ದು (ಆದಿ 1/71–74). ಇವನು ವರುಣನ ಯಜ್ಞದಲ್ಲಿ ಮಹರ್ಷಿ ಭೃಗುವನ್ನು ಅಗ್ನಿಯಿಂದ ಉತ್ಪನ್ನಗೊಳಿಸಿದ್ದು (ಆದಿ 5/8). ಭೃಗುವಿನಿಂದ ಬಂದ ಅಗ್ನಿಯ ಶಾಪವನ್ನು ಸಂಕುಚಿತಗೊಳಿಸಿ, ಅವನನ್ನು ಪ್ರಸನ್ನಗೊಳಿಸಿದುದು (ಆದಿ 7/18–25). ಪ್ರಜೆಗಳ ಹಿತಾಕಾಂಕ್ಷೆಯಿಂದ, ಸರ್ಪಗಳಿಗೆ ಕೊಡಲ್ಪಟ್ಟ ಕದ್ರುವಿನ ಶಾಪವನ್ನು ಇವನು ಅನುಮೋದಿಸಿದುದು (ಆದಿ 20/10). ಇವನಿಂದ ಮರೀಚಿ, ಅತ್ರಿ, ಅಂಗೀರಸ್, ಪುಲಸ್ತ್ಯ, ಪುಲಹ ಮತ್ತು ಕೃತು ಈ ಆರು ಮಂದಿ ಮಾನಸಪುತ್ರರ ಉತ್ಪತ್ತಿ (ಆದಿ 65/10; ಆದಿ 66/4). ಬ್ರಹ್ಮನ ಬಲ ಹೆಬ್ಬೆರಳಿನಿಂದ ದಕ್ಷನ ಮತ್ತು ಎಡ ಹೆಬ್ಬೆರಳಿನಿಂದ ದಕ್ಷಪತ್ನಿಯ ಪ್ರಾದುರ್ಭಾವ (ಆದಿ 66/10–11). ಇವನ ಬಲಸ್ತನವನ್ನು ಭೇದಿಸಿ, ಮನುಷ್ಯರೂಪದಲ್ಲಿ ಧರ್ಮನ ಆವಿರ್ಭಾವ (ಆದಿ 66/31). ಇವನ ಹೃದಯವನ್ನು ಭೇದಿಸಿ ಭೃಗುವು ಪ್ರಕಟನಾದುದು (ಆದಿ 66/41). ಇವನ ಪ್ರೇರಣೆಯಿಂದ ಶುಕ್ರಾಚಾರ್ಯನು ಸಮಸ್ತ ಲೋಕಗಳನ್ನು ಸುತ್ತುತ್ತಿರುತ್ತಾನೆ (ಆದಿ 66/42). ಇವನಿಗೆ ಇತರ ಇಬ್ಬರು ಪುತ್ರರಿದ್ದಾರೆ. ಅವರು ಮನುವಿನೊಂದಿಗೆ ವಾಸಿಸುತ್ತಾರೆ. ಅವರ ಹೆಸರು ಧಾತಾ ಮತ್ತು ವಿಧಾತಾ (ಆದಿ 66/50). ಮನುಷ್ಯರ ಮರಣ ನಿಂತುಹೋದುದರಿಂದ ಚಿಂತಿತರಾದ ದೇವತೆಗಳಿಗೆ ಇವರ ಆಶ್ವಾಸನೆ (ಆದಿ 196/7). ಇವನಿಂದ ಸುಂದ ಮತ್ತು ಉಪಸುಂದರಿಗೆ ವರಪ್ರದಾನ (ಆದಿ 208/17–25). ಸುಂದ ಮತ್ತು ಉಪಸುಂದ ಅತ್ಯಾಚಾರದಿಂದ ದುಃಖಿತರಾದ ಮಹರ್ಷಿಗಳು, ಇವನಲ್ಲಿ ಅವರ ಅತ್ಯಾಚಾರಗಳನ್ನು ವರ್ಣಿಸಿದುದು (ಆದಿ 210/4–8). ತಿಲೋತ್ತಮೆಯ ನಿರ್ಮಾಣಮಾಡಲು ಈತನಿಂದ ವಿಶ್ವಕರ್ಮನಿಗೆ ಆದೇಶ (ಆದಿ 210/9–11). ತಿಲೋತ್ತಮೆಗೆ ಇವನ ವರದಾನ (ಆದಿ 211/23–24). ತನ್ನ ಅಜೀರ್ಣರೋಗವನ್ನು ಪರಿಹರಿಸಲು ಅಗ್ನಿಯು ಇವನಲ್ಲಿ ಪ್ರಾರ್ಥಿಸಿದುದು (ಆದಿ 222/69–71). ಅಗ್ನಿಯ ಗ್ಲಾನಿಯ ಕಾರಣವನ್ನು ತಿಳಿಸಿ, ಖಾಂಡವವನವನ್ನು ಉರಿಸಲು ಈತನಿಂದ ಆದೇಶ (ಆದಿ 222/72–77). ಖಾಂಡವವನವನ್ನು ಉರಿಸುವ ಕಾರ್ಯಕ್ಕೆ ಶ್ರೀಕೃಷ್ಣ ಮತ್ತು ಅರ್ಜುನನ ಸಹಾಯವನ್ನು ಯಾಚಿಸುವಂತೆ ಈತನಿಂದ ಅಗ್ನಿಗೆ ಪ್ರೇರಣೆ (ಆದಿ 223/5–11). ಪೂರ್ವ ಕಾಲದಲ್ಲಿ ಇವನ ಮೂಲಕ ಗಾಂಡೀವ ಧನುಸ್ಸಿನ ನಿರ್ಮಾಣ (ಆದಿ 224/19). ಒಂದು ಸಾವಿರ ಯುಗ ಕಳೆದ ಬಳಿಕ ಇವನು ಹಿರಣ್ಯಶೃಂಗ ಪರ್ವತದ ಮೇಲೆ ಬಿಂದು ಸರೋವರದ ಸಮೀಪ ಯಜ್ಞಮಾಡು

ತ್ತಾನೆ (ಸಭಾ 3/15). ನಾರದನಿಂದ ಇವನ ದಿವ್ಯಸಭೆಯ ವರ್ಣನೆ (ಸಭಾ 11). ಇವನಿಂದ ಹಿರಣ್ಯಕಶಿಪುಗೆ ಶಾಪ ಅಥವಾ ಯಾವುದೇ ಶಸ್ತ್ರದಿಂದ ಮರಣವಿಲ್ಲದ ವರದಾನ (ಸಭಾ 38/29). ಪ್ರಜಾಪತಿ ಬ್ರಹ್ಮನು ಇಂದ್ರನಿಗೋಸ್ಕರ ಒಂದು ದಿವ್ಯ ಶಂಖವನ್ನು ಧಾರಣೆಮಾಡಿ ಕೊಂಡಿದ್ದನು (ಸಭಾ 53/14-15). ಇವನಿಂದ ಧರ್ಮಾರಣ್ಯದಲ್ಲಿ, ಬ್ರಹ್ಮಸರೋವರದ ಹತ್ತಿರ ಒಂದು ಯಜ್ಞಸ್ತಂಭದ ಸ್ಥಾಪನೆ (ವನ 84/86). ಬ್ರಹ್ಮನು ಪ್ರಯಾಗದಲ್ಲಿ ಯಜ್ಞ ಮಾಡಿದ್ದನು (ವನ 87/19). ಪ್ರಜಾಪತಿ ಬ್ರಹ್ಮನು ಪುಷ್ಕರ ತೀರ್ಥಕ್ಕೋಸ್ಕರ ಒಂದು ಸ್ತುತಿಯನ್ನು ಹಾಡಿ ದ್ದಾನೆ (ವನ 89/17-18). ಇವನು ದೇವತೆ ಗಳನ್ನು ದಧೀಚಿಯ ಬಳಿಗೆ, ಅವನ ಎಲುಬು ಗಳನ್ನು ಯಾಚಿಸಲು ಕಳುಹಿಸಿದುದು (ವನ 100/7). ಪ್ರಜಾಪತಿ ಬ್ರಹ್ಮನು ಕುರುಕ್ಷೇತ್ರದಲ್ಲಿ ಇಷ್ಟೀಕೃತವೆಂಬ ಸತ್ರವನ್ನು ಒಂದು ಸಾವಿರ ವರ್ಷಗಳ ವರೆಗೆ ಅನುಷ್ಠಾನಗೊಳಿಸಿದ್ದನು (ವನ 129/1). ವರಾಹ ರೂಪಧಾರಿ ವಿಷ್ಣುವಿನ ಮೂಲಕ ಪೃಥ್ವಿಯು ಮೇಲಕ್ಕೆ ಎತ್ತಲ್ಪಟ್ಟದ್ದರಿಂದ ಕ್ಷೋಭೆಗೊಳಗಾದ ದೇವತೆಗಳಿಗೆ ಇವನಿಂದ ಸಮಾಧಾನ (ವನ 142/54-57). ಬ್ರಹ್ಮನ ಮೂಲಕ ಕಾಲಕೇಯರಿಗೆ ಹಿರಣ್ಯಪುರವೆಂಬ ನಗರದ ನಿರ್ಮಾಣ ಮತ್ತು ಮನುಷ್ಯನ ಕೈಯಿಂದ ಅವರ ವಿನಾಶವೆಂದು ಸೂಚನೆ (ವನ 173/11-15). ಭಗವಂತನಾದ ವಿಷ್ಣುವಿನ ನಾಭಿ ಕಮಲದಿಂದ ಇವನ ಹುಟ್ಟಿನ ವರ್ಣನೆ (ವನ 203/10-15). ಇವನ ಮೂಲಕ ಧುಂಧುವಿಗೆ ವರದಾನ (ವನ 204/2-4). ಇಂದ್ರನೊಡನೆ ದೇವಸೇನೆಯ ಪತಿಯನ್ನು ನಿರ್ಧರಿಸಿದುದು (ವನ 224/24). ಇವನು ಪುಲಸ್ತ್ಯನ ತಂದೆ ಮತ್ತು ರಾವಣನ ಪಿತಾಮಹನಾಗಿದ್ದನು (ವನ 274/11-12). ವಾನರ ಮತ್ತು ಕರಡಿಗಳ ಯೋನಿಯಲ್ಲಿ ತಮ್ಮ ಅಂಶದಿಂದ ಸಂತಾನೋತ್ಪತ್ತಿ ಮಾಡಲು ಈತನಿಂದ ದೇವತೆಗಳಿಗೆ ಆದೇಶ (ವನ 276/6-7). ಇವನಿಂದ ಸೀತೆಯ ಶುದ್ಧತೆಯ ಸಮರ್ಥನೆ (ವನ 291/35). ಯಯಾತಿಯೊಡನೆ ಅಭಿಮಾನವು ಅಧಃಪತನಕ್ಕೆ ಕಾರಣವೆಂದು ಹೇಳಿದುದು (ಉದ್ಯೋಗ 123/14-15). ಇವನಿಂದ ಭಗವಂತನ ಸ್ತುತಿ (ಭೀಷ್ಮ 65/47-74). ದೇವತೆಗಳಿಗೆ ನರ ನಾರಾಯಣರ ಪರಿಚಯ ಮಾಡಿದುದು (ಭೀಷ್ಮ 66/6-23). ಪ್ರಾಣಿಗಳ ಸಂಹಾರ ವಿಷಯದಲ್ಲಿ ಉಪಾಯವನ್ನು ಯೋಚಿಸುತ್ತಿರುವಾಗ ಇವನ ಕೋಪ (ದ್ರೋಣ 52/40). ರುದ್ರನೊಡನೆ ತನ್ನ ಕ್ರೋಧದ ಕಾರಣ ಹೇಳಿದುದು (ದ್ರೋಣ 53/3-5). ಇವನ ಶರೀರದಿಂದ ಮೃತ್ಯುವಿನ ಹುಟ್ಟು (ದ್ರೋಣ 53/17-18). ಮೃತ್ಯುವಿಗೆ ಜಗತ್ತಿನ ಸಂಹಾರದ ಕಾರ್ಯವನ್ನು ಒಪ್ಪಿಸಿದುದು (ದ್ರೋಣ 53/21-22). ಮೃತ್ಯುವಿನ ತಪಸ್ಸಿನಿಂದ ಪ್ರಸನ್ನನಾಗಿ ಆಕೆಗೆ ವರವನ್ನು ಕೊಟ್ಟದ್ದು (ದ್ರೋಣ 54/33-36). ಮೃತ್ಯುವಿಗೆ ಆದೇಶ (ದ್ರೋಣ 54/39-43). ವೃತ್ರಾಸುರನಿಂದ ಭೀತರಾದ ದೇವತೆಗಳನ್ನು ಕರಕೊಂಡು ಶಿವನ ಬಳಿಗೆ ಹೋದುದು (ದ್ರೋಣ 94/53-58). ತ್ರಿಪುರ ಸಂಹಾರದ ಕಾಲದಲ್ಲಿ ಇವನು ಶಿವನ ಸಾರಥಿ ಯಾಗಿದ್ದನು (ದ್ರೋಣ 202/76). ಇಂದ್ರಾದಿ ದೇವತೆಗಳೊಂದಿಗೆ ತ್ರಿಪುರ ವಧೆಗೋಸ್ಕರ ಶಿವನ ಬಳಿಗೆ ಹೋಗಿ ಅವನನ್ನು ಪ್ರಸನ್ನಗೊಳಿಸಿದುದು (ಕರ್ಣ 33/41-62). ತ್ರಿಪುರವಧೆಗಾಗಿ ಶಿವನನ್ನು ಯಾಚಿಸಿದುದು (ಕರ್ಣ 34/2-5). ದೇವತೆಗಳ ಪ್ರಾರ್ಥನೆಯಿಂದ ತ್ರಿಪುರವಧಾ ಕಾಲದಲ್ಲಿ ರುದ್ರನ ಸಾರಥಿಯಾದುದು (ಕರ್ಣ 34/75-79). ಕರ್ಣ ಮತ್ತು ಅರ್ಜುನರ ದ್ವೈರಥ ಯುದ್ಧದಲ್ಲಿ ಇಂದ್ರನು ಕೇಳಿದಾಗ, ಇವನಿಂದ ಅರ್ಜುನನ ವಿಜಯಘೋಷಣೆ (ಕರ್ಣ 87/69-85). ಇವನಿಂದ ಸ್ಕಂದನಿಗೆ ಪಾರ್ಷದರ ಪ್ರದಾನ (ಶಲ್ಯ 45/24-25). ಸ್ಕಂದನಿಗೆ ಕಪ್ಪು ಮೃಗ ಚರ್ಮದ ದಾನ (ಶಲ್ಯ 46/52). ಇವನ ಸೃಷ್ಟಿರಚನೆಯ ವರ್ಣನೆ (ಸೌಪ್ತಿಕ 17/10-20). ಇವನಿಂದ ಚಾರ್ವಾಕನಿಗೆ ವರಪ್ರದಾನ (ಶಾಂತಿ 39/5). ಚಾರ್ವಾಕನು ಮರಣ ಉಪಾಯ ಹೇಳಿದುದು (ಶಾಂತಿ 39/8-10). ಇವನ ನೀತಿ ಶಾಸ್ತ್ರದ ವರ್ಣನೆ (ಶಾಂತಿ 59/29-86). ಇವನು ಖಡ್ಗವನ್ನು ಉತ್ಪನ್ನಮಾಡಿ ರುದ್ರನಿಗೆ ಕೊಟ್ಟದ್ದು (ಶಾಂತಿ 166/45-46). ದೇವತೆಗಳಿಗೆ ಆಶ್ವಾಸನೆ (ಶಾಂತಿ 200/30-31; ಶಾಂತಿ 209/ 31-36). ಇಂದ್ರನಿಗೆ ಬಲಿಯು ಇರುವ

ಸ್ಥಳವನ್ನು ಹೇಳಿದುದು ಮತ್ತು ವಧೆ ಮಾಡದಂತೆ ತಡೆದುದು (ಶಾಂತಿ 223/8–11). ಪ್ರಜಾವೃದ್ಧಿಯ ಮೇಲೆ ಈತನ ಕೋಪ (ಶಾಂತಿ 256/16). ಶಿವನ ಪ್ರಾರ್ಥನೆಯಿಂದ ಕ್ರೋಧತ್ಯಾಗ (ಶಾಂತಿ 257/13). ಸಂಹಾರಕ್ಕೋಸ್ಕರ ಮೃತ್ಯುವಿಗೆ ಆದೇಶ (ಶಾಂತಿ 258/28–36). ವೃತ್ರಾಸುರ ವಧೆಯಿಂದ ಇಂದ್ರನಿಗೆ ತಗಲಿದ ಬ್ರಹ್ಮಹತ್ಯೆಯ ವಿಭಜನೆ (ಶಾಂತಿ 282/31–55). ದಕ್ಷಯಜ್ಞದ ಸಮಯದಲ್ಲಿ ಕುಪಿತನಾದ ಶಿವನ ಕ್ರೋಧವನ್ನು ಶಾಂತಗೊಳಿಸಿದುದು (ಶಾಂತಿ 283/45–48). ಹಂಸರೂಪದಿಂದ ಸಾಧ್ಯ ಗಣಗಳಿಗೆ ಉಪದೇಶ (ಶಾಂತಿ 299). ದೇವತೆಗಳೊಂದಿಗೆ ಭಗವಂತನಿಗೆ ಶರಣಾದುದು (ಶಾಂತಿ 340/42–48). ಇವನ ಮೂಲಕ ನಾರಾಯಣ–ರುದ್ರ–ಯುದ್ಧದ ಶಾಂತಿ (ಶಾಂತಿ 342/124–129). ಭಗವಾನ್ ಹಯಗ್ರೀವನ ಸ್ತುತಿ (ಶಾಂತಿ 347/38–45). ವೈಜಯಂತ ಪರ್ವತದ ಮೇಲೆ ಶಿವನೊಂದಿಗೆ ನಡೆದ ಮಾತುಕತೆಯಲ್ಲಿ, ಈತನಿಂದ ನಾರಾಯಣನ ಮಹಿಮಾ ವರ್ಣನೆ (ಶಾಂತಿ 350/25 ರಿಂದ 351 ಅಧ್ಯಾಯ). ದೇವತೆಗಳೊಡನೆ ಗರುಡ–ಕಶ್ಯಪ ಸಂವಾದದ ಪ್ರಸಂಗವನ್ನು ಹೇಳಿದುದು (ಅನು 13/6). ಇವನ ಮೂಲಕ ಬ್ರಾಹ್ಮಣರ ಮಹಿಮೆಯ ವರ್ಣನೆ (ಅನು 35/5–11). ಯಜ್ಞಕ್ಕೋಸ್ಕರ ದೇವತೆಗಳಿಗೆ ಭೂಮಿಯನ್ನು ಕೊಟ್ಟದ್ದು (ಅನು 66/21–22). ಇಂದ್ರನೊಡನೆ ಗೋಲೋಕ ಮತ್ತು ಗೋದಾನದ ಮಹಿಮಾ ವರ್ಣನೆ (ಅನು 73). ಗೋದಾನದ ಕುರಿತು ಇವನು ಇಂದ್ರನ ಪ್ರಶ್ನೆಗೆ ಉತ್ತರವನ್ನಿತ್ತದ್ದು (ಅನು 74/2–10). ಇಂದ್ರನಿಗೆ ಗೋಲೋಕ ಮತ್ತು ಗೋವುಗಳ ಮಹಿಮೆಯನ್ನು ಹೇಳಿದುದು (ಅನು 73/15–45). ಸುರಭಿಗೆ ವರವನ್ನಿತ್ತದ್ದು (ಅನು 83/36–39). ಇವನ ಮೂಲಕ ದೇವತೆಗಳಿಗೆ ಆಶ್ವಾಸನೆ (ಅನು 85/8–18). ವರುಣ ರೂಪಧಾರಿಯಾದ ಮಹಾದೇವನ ಯಜ್ಞದಲ್ಲಿ ಇವನು ತನ್ನ ವೀರ್ಯವನ್ನು ಆಹುತಿಯಾಗಿತ್ತದ್ದು. ಇದರಿಂದ ಪ್ರಜಾಪತಿಗಳ ಜನನವಾದುದು (ಅನು 85/99–102). ಪಿತೃಗಳ ಮತ್ತು ದೇವತೆಗಳ ಅಜೀರ್ಣ ನಿವಾರಣೆಗೋಸ್ಕರ ಅಗ್ನಿಗೆ ಉಪಾಯ ಸೂಚಿಸಿದುದು (ಅನು 92/9). ನಹುಷನ ಪತನಾನಂತರ ಶತಕ್ರತುವನ್ನು ಇಂದ್ರನಾಗಿ ಮಾಡಲು ದೇವತೆಗಳಿಗೆ ಆದೇಶ (ಅನು 100/34–36). ರಾಜಾ ಭಗೀರಥನು ಬ್ರಹ್ಮಲೋಕಕ್ಕೆ ಬಂದುದನ್ನು ನೋಡಿ, ಅವನೊಡನೆ ಅಲ್ಲಿಗೆ ಬರಲು ಸಾಧ್ಯವಾದ ಕಾರಣ ಕೇಳಿದುದು (ಅನು 103/6–8). ಇವನ ಮೂಲಕ ಧರ್ಮರಹಸ್ಯದ ವರ್ಣನೆ (ಅನು 126/46–50). ಕಪರೆಂಬ ಹೆಸರಿನ ದಾನವರಿಂದ ಪರಾಜಿತರಾದ ದೇವತೆಗಳಿಗೆ ಬ್ರಾಹ್ಮಣರನ್ನು ಆಶ್ರಯಿಸುವಂತೆ ಆದೇಶ ನೀಡಿದುದು (ಅನು 157/5). ದೇವತೆ, ಋಷಿ, ನಾಗ ಮತ್ತು ಅಸುರರಿಗೆ ಏಕಾಕ್ಷರ 'ಓಂ' (ॐ) ಉಪದೇಶ (ಆಶ್ವ 26/8). ಇವನ ಮೂಲಕ ಮಹರ್ಷಿಗಳಿಗೆ ವಿವಿಧ ಜ್ಞಾನದ ಉಪದೇಶ (ಆಶ್ವ 26/8). ಇವನ ಮೂಲಕ ಮಹರ್ಷಿಗಳಿಗೆ ವಿವಿಧ ಜ್ಞಾನದ ಉಪದೇಶ (ಆಶ್ವ 35/32ರಿಂದ ಆಶ್ವ 51/40ರ ತನಕ).

**ಬ್ರಹ್ಮಾವರ್ತ** – ಕುರುಕ್ಷೇತ್ರದ ಒಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವ ಮನುಷ್ಯ ಬ್ರಹ್ಮಲೋಕವನ್ನು ಪಡೆಯುತ್ತಾನೆ (ವನ 83/53). ಬ್ರಹ್ಮಚರ್ಯಪಾಲನೆಯೊಂದಿಗೆ ಇಲ್ಲಿಗೆ ಹೋದರೆ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ. ಮತ್ತು ಸೋಮಲೋಕಕ್ಕೆ ಹೋಗುತ್ತಾನೆ (ವನ 84/43).

**ಬ್ರಹ್ಮೋದುಂಬರ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇದು ಬ್ರಹ್ಮನ ಉತ್ತಮ ಸ್ಥಾನವಾಗಿದೆ (ವನ 83/71).

**ಬ್ರಾಹ್ಮ** – ಒಂದು ರೀತಿಯ ವಿವಾಹ. ಕನ್ಯೆಯನ್ನು ವಸ್ತ್ರ ಮತ್ತು ಆಭರಣಗಳಿಂದ ಅಲಂಕರಿಸಿ, ಸಜಾತೀಯ ಯೋಗ್ಯ ವರನ ಕೈಗೆ ಕೊಡುವುದು. 'ಬ್ರಾಹ್ಮ' ವಿವಾಹವೆಂದು ಹೇಳಲ್ಪಡುತ್ತದೆ. ಇದು ಎಲ್ಲಾ ವರ್ಣದವರಿಗೂ ವಿಹಿತವಾದುದು (ಆದಿ 73/8–14).

**ಬ್ರಾಹ್ಮಣೀ** – (1) ಒಂದು ತೀರ್ಥ. ಇಲ್ಲಿಗೆ ಹೋಗುವುದರಿಂದಾಗಿ, ಮನುಷ್ಯ ಕಮಲದಂತೆ ಕಾಂತಿಯುಕ್ತ ವಿಮಾನದ ಮೂಲಕ ಬ್ರಹ್ಮಲೋಕಕ್ಕೆ ಹೋಗುತ್ತಾನೆ (ವನ 84/58).

(2) ಭಾರತ ವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/33).

## ಭ

**ಭಗ** – (1) ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ. ಇವನ ತಾಯಿಯ ಹೆಸರು ಅದಿತಿ, ತಂದೆಯ ಹೆಸರು ಕಶ್ಯಪ (ಆದಿ 65/15). ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/66). ಖಾಂಡವವನ ದಹನ ಕಾಲದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ನಡೆದ ಯುದ್ಧದಲ್ಲಿ ಇಂದ್ರನ ಕಡೆಯಿಂದ ಇವನ ಆಗಮನ. ಕತ್ತಿ ಮತ್ತು ಧನುಸ್ಸನ್ನು ಹಿಡಿದು ಶತ್ರುಗಳ ಮೇಲೆ ಈತನ ಆಕ್ರಮಣ (ಆದಿ 226/36). ಇವನು ಇಂದ್ರಸಭೆಯಲ್ಲಿ ಇರುತ್ತಾನೆ (ಸಭಾ 7/22). ಇವನು ಸ್ಕಂದನ ಅಭಿಷೇಕದಲ್ಲಿ ಭಾಗ ವಹಿಸಿದ್ದನು (ಶಲ್ಯ 45/5). ರುದ್ರನು ಇವನ ಕಣ್ಣುಗಳನ್ನು ನಾಶಗೊಳಿಸಿದ್ದನು (ಸೌಪ್ತಿಕ 18/22).

(2) ಏಕಾದಶ ರುದ್ರರಲ್ಲಿ ಒಬ್ಬ. ಇವನೂ ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/69).

**ಭಗದತ್ತ** – ಪ್ರಾಗ್ಜ್ಯೋತಿಷಪುರದ ಅಧಿಪತಿ. ಬಾಷ್ಕಲನೆಂಬ ಅಸುರನ ಅಂಶದಿಂದ ಹುಟ್ಟಿದವನು (ಆದಿ 67/9). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/12). ಇವನು ಪಾಂಡುರಾಜನ ಮಿತ್ರನಾಗಿದ್ದನು. ಜರಾಸಂಧನನ್ನು ಕೂಡಿಕೊಂಡಿದ್ದರೂ, ಯುಧಿಷ್ಠಿರನೊಡನೆ, ತಂದೆಯಂತೆ, ಸ್ನೇಹವಿರಿಸಿಕೊಂಡಿದ್ದನು. ಇವನನ್ನು ಯವನಾಧಿಪನೆಂದು ಹೇಳಲಾಗಿದೆ (ಸಭಾ 14/14–16). ರಾಜಸೂಯದಿಗ್ವಿಜಯ ಕಾಲದಲ್ಲಿ ಅರ್ಜುನನೊಂದಿಗೆ ಈತನ ಘೋರಯುದ್ಧ ನಡೆಯಿತು. ಅರ್ಜುನನ ಪರಾಕ್ರಮದಿಂದ ಪ್ರಸನ್ನನಾಗಿ, ಇವನು ಅವನ ಇಚ್ಛಾನುಸಾರ ಕಾರ್ಯ ನಿರ್ವಹಿಸಲು ಪ್ರತಿಜ್ಞೆ ಮಾಡಿದನು. ಇವನು ಇಂದ್ರನ ಮಿತ್ರನಾಗಿದ್ದನು; ಮತ್ತು ಇಂದ್ರ ಸಮಾನ ಪರಾಕ್ರಮಿಯಾಗಿದ್ದನು. ಅರ್ಜುನನ ತಂದೆ ಪಾಂಡುವಿನೊಂದಿಗೂ ಇವನ ಮೈತ್ರಿ ಇತ್ತು. ಇವನು ಅರ್ಜುನನೊಂದಿಗೆ ವಾತ್ಸಲ್ಯ ತೋರಿಸಿದನು. ಇವನು ಕಿರಾತ, ಚೀನ ಇತ್ಯಾದಿ ಸಮುದ್ರದಡದಲ್ಲಿರುವ ಸೈನಿಕರೊಂದಿಗೆ ಯುದ್ಧಕ್ಕೆ ಹೋಗಿದ್ದನು (ಸಭಾ 26/7–16). ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಇವನು ಯವನರೊಂದಿಗೆ ಹೋಗಿದ್ದನು ಮತ್ತು ಉತ್ತಮ ಜಾತಿಯ ವೇಗಶಾಲಿ ಅಶ್ವಗಳನ್ನೂ, ಅನೇಕ ಕಾಣಿಕೆ ವಸ್ತುಗಳನ್ನೂ ತೆಗೆದುಕೊಂಡು ಬಂದಿದ್ದನು. ಮುತ್ತು ಮತ್ತು ಪದ್ಮರಾಗ ಮಣಿಯ ಅನೇಕ ಆಭೂಷಣಗಳನ್ನೂ, ವಿಶುದ್ಧ ಆನೆಯ ದಂತದಿಂದ ಮಾಡಿದ ಹಿಡಿಕೆಯುಳ್ಳ ಖಡ್ಗವನ್ನೂ ಕೊಟ್ಟು, ಇವನು ರಾಜಸಭೆಗೆ ಹೋಗಿದ್ದನು (ಸಭಾ 51/14–16). ದಿಗ್ವಿಜಯ ಕಾಲದಲ್ಲಿ ಕರ್ಣನಿಂದ ಇವನ ಪರಾಜಯ (ವನ 254/5). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/11). ದುರ್ಯೋಧನನ ಸಹಾಯಕ್ಕೆ ಈತ ಸೇನಾ ಸಮೇತನಾಗಿ ಬಂದದ್ದು (ಉದ್ಯೋಗ 19/15). ಪ್ರಥಮ ದಿನ ಯುದ್ಧದಲ್ಲಿ ವಿರಾಟನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/49–51). ಘಟೋತ್ಕಚನೊಂದಿಗೆ ಯುದ್ಧ ಮತ್ತು ಪರಾಜಯ (ಭೀಷ್ಮ 64/59–62). ಭೀಮಸೇನನನ್ನು ಮೂರ್ಛೆಗೊಳಿಸಿದುದು (ಭೀಷ್ಮ 64/53–54). ಇವನಿಂದ ಘಟೋತ್ಕಚನ ಪರಾಜಯ (ಭೀಷ್ಮ 83/40). ಇವನ ಅದ್ಭುತ ಪರಾಕ್ರಮ (ಭೀಷ್ಮ 95). ಇವನಿಂದ ದಶಾರ್ಣ ರಾಜನ ಪರಾಜಯ (ಭೀಷ್ಮ 95/48–49). ಇವನ ಮೂಲಕ ಕ್ಷತ್ರದೇವನ ಬಲಭುಜದ ಖಂಡನೆ (ಭೀಷ್ಮ 95/73). ಭೀಮಸೇನನ ಸಾರಥಿ ವಿಶೋಕನ ಮೂರ್ಛೆ (ಭೀಷ್ಮ 95/76). ಸಾತ್ಯಕಿಯೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 111/7–13). ಭೀಮಸೇನ ಮತ್ತು ಅರ್ಜುನನೊಂದಿಗೆ ಯುದ್ಧ (ಭೀಷ್ಮ 113ರಿಂದ 114). ಅರ್ಜುನನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 116/56–60). ದ್ರುಪದನೊಂದಿಗೆ ಯುದ್ಧ (ದ್ರೋಣ 14/40–42). ಆನೆಯ ಸಹಿತ ಅದ್ಭುತ ಪರಾಕ್ರಮದಿಂದ ಇವನ ಮೂಲಕ ದಶಾರ್ಣ ರಾಜನ ವಧೆ (ದ್ರೋಣ 26/38–39). ರುಚಿಪರ್ವಾನ ವಧೆ (ದ್ರೋಣ 26/52–53). ಅರ್ಜುನನೊಂದಿಗೆ ಯುದ್ಧ (ದ್ರೋಣ 28/14 ರಿಂದ 29 ಅಧ್ಯಾಯದ ವರೆಗೆ). ಅರ್ಜುನನ ಮೂಲಕ ಇವನ ವಧೆ (ದ್ರೋಣ 29/48–50). ಭಗದತ್ತನ ಅನಂತರ ಇವನ ಮಗ ವಜ್ರದತ್ತ ರಾಜನಾದನು. ಇವನೂ

ಅರ್ಜುನನಿಂದ ಗೆಲ್ಲಲ್ಪಟ್ಟನು (ಆಶ್ವ 76/1–20). ಇವನ ಪಿತಾಮಹ ಶೈಲಾಲಯ ತಪೋಬಲದಿಂದ ಇಂದ್ರಲೋಕಕ್ಕೆ ಹೋಗಿದ್ದನು (ಆಶ್ರಮ 20/10).

**ಭಗದಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/26).

**ಭಗನಂದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/11).

**ಭಗವದ್ಗೀತಾಪರ್ವ** – ಭೀಷ್ಮ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 25ರಿಂದ 42ರ ವರೆಗೆ).

**ಭಗವಧ್ಯಾನಪರ್ವ** – ಉದ್ಯೋಗ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 72 ರಿಂದ 150 ವರೆಗೆ).

**ಭಗೀರಥ** – ಒಬ್ಬ ರಾಜ. ಇವನು ದಿಲೀಪನ ಪುತ್ರ (ವನ 25/12). ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12). ಇವನ ರಾಜ್ಯಾಭಿಷೇಕ (ವನ 107/69). ಇವನು ಹಿಮಾಲಯದ ಮೇಲೆ ತಪಸ್ಸುಮಾಡಿ ಭಗವಾನ್ ಶಿವ ಮತ್ತು ಗಂಗೆಯನ್ನು ಪ್ರಸನ್ನಗೊಳಿಸಿದುದು ಮತ್ತು ಗಂಗೆಯಿಂದ ವರ ಪಡೆದುದು (ವನ 108). ಇವನಿಗೆ ಶಿವನ ವರದಾನ (ವನ 109/1–2). ಇವನು ಗಂಗೆಯನ್ನು ಕರಕೊಂಡು ಹೋಗಿ ಪಿತೃಗಳ ಉದ್ಧಾರ ಮಾಡಿದುದು (ವನ 109/18–19). ಸೃಂಜಯನನ್ನು ಸಮಾಧಾನಪಡಿಸುತ್ತಾ ನಾರದನ ಮೂಲಕ ಇವನ ಚರಿತ್ರೆಯ ವರ್ಣನೆ (ದ್ರೋಣ 60). ಶ್ರೀ ಕೃಷ್ಣನಿಂದ ಇವನ ದಾನ, ಯಜ್ಞ ಇತ್ಯಾದಿಗಳ ವರ್ಣನೆ (ಶಾಂತಿ 29/63–70). ಗೋದಾನ ಮಹಿಮೆಯ ವಿಷಯದಲ್ಲಿ ಇವನ ಹೆಸರು ಉಲ್ಲೇಖಿಸಲ್ಪಟ್ಟಿದೆ (ಅನು 76/25). ಬ್ರಹ್ಮನು ಕೇಳಿದಾಗ ತನ್ನ ಪುಣ್ಯಕರ್ಮಗಳ ವರ್ಣನೆ ಮಾಡುತ್ತಾ, ಅನಶನ ವ್ರತವೇ ಬ್ರಹ್ಮಲೋಕಕ್ಕೆ ತಲುಪಿಸುವ ಸಾಧನವೆಂದು ಈತ ಹೇಳಿದುದು (ಅನು 103/8–42). ಇವನಿಂದ ಕೌತ್ಸನಿಗೆ ತನ್ನ ಕನ್ಯೆಯ ದಾನ (ಅನು 137/26). ಕೋಹಲ ಋಷಿಗೆ ಒಂದು ಲಕ್ಷ ಕರುಸಹಿತ ಗೋವುಗಳನ್ನು ದಾನಮಾಡಿದ ಕಾರಣದಿಂದ ಇವನಿಗೆ ಉತ್ತಮ ಲೋಕಗಳ ಪ್ರಾಪ್ತಿ (ಅನು 137/27).

**ಭಙ್ಗ** – ತಕ್ಷಕಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ನಾಗಯಜ್ಞದಲ್ಲಿ ದಗ್ಧನಾದನು (ಆದಿ 57/9).

**ಭಙ್ಗಕಾರ** – (1) ಇವನು ಸೋಮವಂಶದ ಮಹಾರಾಜ ಕುರುವಿನ ಪೌತ್ರ ಮತ್ತು ಅವಿಕ್ಷಿತನ ಪುತ್ರ (ಆದಿ 94/53).

(2) ಯದು ವಂಶದ ಒಬ್ಬ ಕ್ಷತ್ರಿಯ. ಇವನು ರೈವತಕ ಪರ್ವತದ ಮಹೋತ್ಸವದಲ್ಲಿ ಸಮ್ಮಿಲಿತನಾಗಿದ್ದನು (ಆದಿ 218/11).

**ಭಙಾಶ್ವಸ್ವನ** – ಒಬ್ಬ ಪ್ರಾಚೀನ ರಾಜರ್ಷಿ. ಇಂದ್ರನೊಂದಿಗೆ ಇವನಿಗೆ ವೈರವುಂಟಾಗಿತ್ತು (ಅನು 12/2). ಇಂದ್ರನ ಪ್ರೇರಣೆಯಿಂದ ಇವನು ಸ್ತ್ರೀಭಾವಕ್ಕೆ ಒಳಗಾದುದು (ಅನು 12/10). ಕಾಡಿನಲ್ಲಿ ಹೋಗುವಾಗ ಒಬ್ಬ ತಾಪಸನಿಂದ ಇವನು ನೂರು ಪುತ್ರರನ್ನು ಪಡೆದುದು (ಅನು 12/24). ಇಂದ್ರನು ಕೇಳಿದಾಗ ಆತನೊಂದಿಗೆ ತನ್ನ ವೃತ್ತಾಂತ ಹೇಳಿದುದು (ಅನು 12/34–40). ಇವನು ವಿಷಯ ಸುಖದ ಇಚ್ಛೆಯಿಂದ ಸ್ತ್ರೀರೂಪವನ್ನೇ ಪ್ರಶಂಸೆ ಮಾಡಿದುದು (ಅನು 12/52–53).

**ಭದ್ರ** – (1) ಒಂದು ಗಣರಾಜ್ಯ. ಇಲ್ಲಿರುವ ಕ್ಷತ್ರಿಯರಾಜಕುಮಾರರು ರಾಜಸೂಯ ಯಜ್ಞದ ಸಂದರ್ಭದಲ್ಲಿ ಯುಧಿಷ್ಠಿರನಿಗೆ ತುಂಬಾ ಧನವನ್ನರ್ಪಿಸಿದ್ದರು (ಸಭಾ 52/14–17). ದಿಗ್ವಿಜಯ ಕಾಲದಲ್ಲಿ ಕರ್ಣನು ಈ ದೇಶವನ್ನು ಗೆದ್ದಿದ್ದನು (ವನ 254/20).

(2) ಚೇದಿ ದೇಶದವನಾದ ಪಾಂಡವ ಪಕ್ಷದ ಒಬ್ಬ ಯೋಧ. ಕರ್ಣನಿಂದ ಇವನ ವಧೆಯಾಗಿತ್ತು (ಕರ್ಣ 56/48–49).

**ಭದ್ರಕರ್ಣೇಶ್ವರ** – ಇದರ ಸಮೀಪ ಹೋಗಿ ವಿಧಿಪೂರ್ವಕ ಪೂಜೆ ಮಾಡುವವನು ಎಂದೂ ದುರ್ಗತಿಗೆ ಬೀಳುವುದಿಲ್ಲ (ವನ 84/39).

**ಭದ್ರಕಾರ** – ಒಬ್ಬ ರಾಜ. ಇವನು ಜರಾಸಂಧನ ಭಯದಿಂದ ತನ್ನ ಸಹೋದರರು ಮತ್ತು ಸೇವಕರಸಹಿತ ದಕ್ಷಿಣ ದಿಕ್ಕಿಗೆ ಓಡಿಹೋಗಿದ್ದನು (ಸಭಾ 14/26).

**ಭದ್ರಕಾಲೀ** – (1) ದುರ್ಗೆಯ ಒಂದು ಹೆಸರು. ಅರ್ಜುನನು ಈ ಹೆಸರಿನಲ್ಲಿ ದುರ್ಗಾದೇವಿಯ

ಸ್ತುತಿಮಾಡಿದ್ದನು (ಭೀಷ್ಮ 23/5). ದಕ್ಷಯಜ್ಞ ವಿಧ್ವಂಸದ ಸಮಯದಲ್ಲಿ ಈಕೆ ಪಾರ್ವತೀ ದೇವಿಯ ಕೋಪದಿಂದ ಪ್ರಕಟಗೊಂಡಿದ್ದಳು (ಶಾಂತಿ 284/53–54).

(2) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/11).

**ಭದ್ರತುಂಗ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ, ಒಳ್ಳೆಯ ಶೀಲವುಳ್ಳ ಮನುಷ್ಯ ಬ್ರಹ್ಮ ಲೋಕಕ್ಕೆ ಹೋಗುತ್ತಾನೆ ಮತ್ತು ಅಲ್ಲಿ ಉತ್ತಮ ಗತಿ ಪಡೆಯುತ್ತಾನೆ (ವನ 82/80).

**ಭದ್ರಮನಾ** – ಈಕೆ ಕ್ರೋಧವಶನ ಒಂಭತ್ತು ಕನ್ಯೆಯರಲ್ಲಿ ಒಬ್ಬಳು. ಇವಳು ದೇವತೆಗಳ ಆನೆಯಾದ, ಮಹಾ ಗಜರಾಜ ಐರಾವತನಿಗೆ ಜನ್ಮವಿತ್ತಳು (ಆದಿ 66/60–63).

**ಭದ್ರವಟ** – ಇದು ಉಮಾವಲ್ಲಭ ಮಹಾ ದೇವನ ನಿವಾಸಸ್ಥಾನವಾಗಿದೆ. ಇಲ್ಲಿ ಭಗವಾನ್ ಶಿವನ ದರ್ಶನ ಮಾಡುವ ಯಾತ್ರಿಕ ಒಂದು ಸಾವಿರ ಗೋದಾನದ ಫಲಪಡೆಯುತ್ತಾನೆ ಮತ್ತು ಮಹಾದೇವನ ಕೃಪೆಯಿಂದ ಗಣಗಳ ಆಧಿಪತ್ಯ ವನ್ನು ಪಡೆಯುತ್ತಾನೆ (ವನ 82/50–51).

**ಭದ್ರಶಾಖ** – ಆಡಿನಂತೆ ಮುಖ ಧರಿಸುವ ಸ್ಕಂದದೇವನ ಒಂದು ಹೆಸರು (ವನ 228/4).

**ಭದ್ರಶಾಲ** – ಮೇರುವಿನ ಪೂರ್ವಭಾಗ ದಲ್ಲಿರುವ, ಭದ್ರಾಶ್ವ ವರ್ಷದ ಶಿಖರದ ಮೇಲೆ ಇರುವ ಒಂದು ವನ. ಇದರಲ್ಲಿ ಕಾಲಾಗ್ರವೆಂಬ ಮಹಾವೃಕ್ಷವಿದೆ (ಭೀಷ್ಮ 7/14).

**ಭದ್ರಾ** – (1) ಈಕೆ ಕಕ್ಷಿವಂತನ ಪುತ್ರಿ ಮತ್ತು ಪೂರುವಂಶದ ರಾಜನಾದ ವ್ಯುಷಿತಾಶ್ವನ ಪತ್ನಿ ಯಾಗಿದ್ದಳು. ರೂಪದಲ್ಲಿ ಇವಳಿಗೆ ಸಮಾನತೆ ಯುಳ್ಳವಳು ಆ ಕಾಲದಲ್ಲಿ ಬೇರೆ ಯಾವ ಸ್ತ್ರೀಯೂ ಇರಲಿಲ್ಲ (ಆದಿ 120/17). ಪತಿಯು ಪರಲೋಕವಾಸಿಯಾದಾಗ ಇವಳ ವಿಲಾಪ (ಆದಿ 120/21–31). ಆಕಾಶವಾಣಿಯ ಮೂಲಕ ಈಕೆಗೆ ಪತಿಯ ಆಶ್ವಾಸನೆ ಮತ್ತು ಪತಿಯ ಶವದ ಮೂಲಕ ಇವಳ ಗರ್ಭದಿಂದ ಏಳು ಪುತ್ರರ ಜನನ (ಆದಿ 120/33–36).

(2) ಈಕೆ ಕುಬೇರನ ಪ್ರೀತಿಯ ಪತ್ನಿಯಾಗಿದ್ದಳು. ಕುಂತಿಯು ದ್ರೌಪದಿಯೊಡನೆ ಉದಾಹರಣೆಗಾಗಿ ಇವಳ ವರ್ಣನೆ ಮಾಡಿದ್ದಳು (ಆದಿ 198/6).

(3) ಶ್ರೀಕೃಷ್ಣನ ತಂಗಿ ಸುಭದ್ರೆಯ ಒಂದು ಹೆಸರು (ಆದಿ 218/14). (ವಿಶೇಷ–ನೋಡಿರಿ–ಸುಭದ್ರಾ).

(4) ವಿಶಾಲಾ ನರೇಶನ ಕನ್ಯೆ. ಈಕೆ ಕರೂಷ ರಾಜನ ಪ್ರಾಪ್ತಿಗಾಗಿ ತಪಸ್ಸು ಮಾಡುವವಳಾಗಿ ದ್ದಳು. ಆದರೆ ಶಿಶುಪಾಲನು ಕರೂಷರಾಜನ ವೇಷಧರಿಸಿ ಮಾಯೆಯಿಂದ ಇವಳ ಅಪಹಾರ ಮಾಡಿದ್ದನು (ಸಭಾ 45/11).

(5) ಸೋಮನ ಪುತ್ರಿ. ಇವಳು ತನ್ನ ಕಾಲದ ಸರ್ವಶ್ರೇಷ್ಠ ಸುಂದರಿಯಾಗಿದ್ದಳು. ಉತಥ್ಯನನ್ನು ಪತಿಯಾಗಿ ಪಡೆಯಲು ಈಕೆ ತಪಸ್ಸು ಮಾಡಿ ದಳು. ಆಗ ಸೋಮನ ತಂದೆ ಮಹರ್ಷಿ ಅತ್ರಿ, ಉತಥ್ಯನನ್ನು ಕರೆದು ಈಕೆಯನ್ನು ಅವನ ಕೈಗೆಕೊಟ್ಟನು. ಉತಥ್ಯನು ವಿಧಿವತ್ತಾಗಿ ಈಕೆಯ ಪಾಣಿಗ್ರಹಣ ಮಾಡಿದನು (ಅನು 154/10–12). ವರುಣನಿಂದ ಈಕೆಯ ಅಪಹರಣ (ಅನು 154/13). ಕುಪಿತನಾದ ಉತಥ್ಯ ನೀರನ್ನೆಲ್ಲಾ ಕುಡಿ ದನು. ಆಗ ವರುಣ ಆತನಿಗೆ ಶರಣಾದನು ಮತ್ತು ಆತನ ಮಡದಿ ಭದ್ರೆಯನ್ನು ಹಿಂತಿರುಗಿಸಿದನು (ಅನು 154/28).

(6) ವಸುದೇವನ ನಾಲ್ಕು ಪತ್ನಿಯರಲ್ಲಿ ಒಬ್ಬಳು (ಮೌಸಲ 7/18). ಇವಳು ವಸುದೇವನೊಂದಿಗೆ ಚಿತಾರೋಹಣ ಮಾಡಿದಳು (ಮೌಸಲ 7/24).

**ಭದ್ರಾಶ್ವ** – ಮೇರುಪರ್ವತದ ಸಮೀಪದಲ್ಲಿರುವ ಒಂದು ದ್ವೀಪ (ಭೀಷ್ಮ 6/13). ಧೃತರಾಷ್ಟ್ರ ನೊಡನೆ ಸಂಜಯನ ಮೂಲಕ ಇದರ ವಿಶೇಷ ವರ್ಣನೆ (ಭೀಷ್ಮ 7/13–18). ಈ ಭದ್ರಾಶ್ವ ವರ್ಷದ ಮೇಲೆ ಯುಧಿಷ್ಠಿರನು ಶಾಸನ ಮಾಡಿ ದ್ದನು (ಶಾಂತಿ 14/24).

**ಭಯ** – ಅಧರ್ಮನ ಮೂಲಕ ನಿರ್ಋತಿಯ ಗರ್ಭದಿಂದ ಹುಟ್ಟಿದ ಮೂವರು ಭಯಂಕರ ರಾಕ್ಷಸರಲ್ಲಿ ಒಬ್ಬ. ಇತರ ಇಬ್ಬರ ಹೆಸರು ಮಹಾ ಭಯ ಮತ್ತು ಮೃತ್ಯುವೆಂದಾಗಿತ್ತು. ಈ ರಾಕ್ಷಸರು ಸದಾ ಪಾಪಕರ್ಮದಲ್ಲಿ ತೊಡಗಿರುತ್ತಾರೆ (ಆದಿ 66/54–55).

**ಭಯಂಕರ** – (1) ಸೌವೀರ ದೇಶದ ಒಬ್ಬ ರಾಜಕುಮಾರ. ಇವನು ಜಯದ್ರಥನ ರಥದ ಹಿಂದೆ ಕೈಯಲ್ಲಿ ಧ್ವಜವನ್ನು ಹಿಡಿದುಕೊಂಡು ಹೋಗುತ್ತಿದ್ದನು. ಇವನು ದ್ರೌಪದೀ ಹರಣದ

ಸಮಯದಲ್ಲಿ ಜಯದ್ರಥನೊಂದಿಗೆ ಹೋಗಿದ್ದನು (ವನ 265/10–11). ಅರ್ಜುನನಿಂದ ಇವನ ವಧೆ (ವನ 271/27).

(2) ಒಬ್ಬ ಸನಾತನ ವಿಶ್ವೇದೇವ (ಅನು 91/31).

**ಭಯಂಕರೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/4).

**ಭರಣೀ** – (ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು) ಭರಣೀನಕ್ಷತದಲ್ಲಿ ತಿಲಮಯೀ ಧೇನುವನ್ನು ದಾನ ಕೊಡುವವನು ಈ ಲೋಕದಲ್ಲಿ ಅನೇಕ ಗೋವುಗಳನ್ನು ಮತ್ತು ಪರಲೋಕದಲ್ಲಿ ಮಹಾ ಯಶಸ್ಸನ್ನು ಪಡೆಯುತ್ತಾನೆ (ಅನು 64/35). ಈ ನಕ್ಷತ್ರದಲ್ಲಿ ಶ್ರಾದ್ಧ ಮಾಡುವುದರಿಂದ ಉತ್ತಮ ಆಯುಸ್ಸು ಪ್ರಾಪ್ತವಾಗುತ್ತದೆ (ಅನು 89/14). ಚಂದ್ರವ್ರತದಲ್ಲಿ ಭರಣೀ ನಕ್ಷತ್ರವನ್ನು ಚಂದ್ರನ ತಲೆಯೆಂದು ತಿಳಿದು ಪೂಜೆ ಇತ್ಯಾದಿ ಮಾಡುವ ವಿಧಾನವಿದೆ (ಅನು 110/9).

**ಭರತ** – ದುಷ್ಯಂತನ ಮೂಲಕ ಶಕುಂತಲೆಯ ಗರ್ಭದಿಂದ ಹುಟ್ಟಿದ ಒಬ್ಬ ರಾಜ. ಇವನಿಂದಲೇ ಭರತವಂಶದ ಬೆಳವಣಿಗೆಯಾಯಿತು. ಇವನ ಆಳ್ವಿಕೆಯಿಂದಾಗಿ ಈ ದೇಶದ ಹೆಸರು ಭಾರತ ವಾಯಿತು (ಆದಿ 2/95–96; ಆದಿ 74/131). ಇವನ ಜನನ ವೃತ್ತಾಂತ (ಆದಿ 73/15 ರಿಂದ ಆದಿ 74/2). ಬಾಲ್ಯದಲ್ಲಿ ದೊಡ್ಡ ದೊಡ್ಡ ದಾನವ, ರಾಕ್ಷಸ, ಸಿಂಹ ಇತ್ಯಾದಿಗಳ ದಮನ ಮಾಡಿದ ಕಾರಣ ಋಷಿಗಳು ಇವನಿಗೆ 'ಸರ್ವ ದಮನ'ನೆಂದು ಹೆಸರಿಟ್ಟರು (ಆದಿ 74/8).

(2) ಇವನು ಶಂಯು ಎಂಬ ಅಗ್ನಿಯ ದ್ವಿತೀಯ ಪುತ್ರ. ಸಮಸ್ತ ಪೌರ್ಣಮಾಸ ಯಾಗಗಳಲ್ಲಿ ಸ್ರುವೆಯಿಂದ ಹವಿಸ್ಸಿನೊಂದಿಗೆ ತುಪ್ಪವನ್ನೆತ್ತಿ, ಈತನಿಗೇ ಪ್ರಥಮ ಬಾರಿ ಅರ್ಪಿಸಲಾಗುತ್ತದೆ. ಇವನ ನಾಮಾಂತರ 'ಊರ್ಜ'ನೆಂದಾಗಿದೆ (ವನ 219/6).

(3) ಇವನು ಭರತನೆಂಬ ಅಗ್ನಿಯ ಪುತ್ರ ನಾಗಿದ್ದಾನೆ (ವನ 219/7). ಈತ ಸಂತುಷ್ಟ ನಾದರೆ ದೇಹ ಸೌಷ್ಠವವನ್ನು ಕೊಡುತ್ತಾನೆ. ಆದುದರಿಂದ ಇವನ ಹೆಸರು ಪುಷ್ಟಮತಿ (ವನ 221/1).

(4) ಇವನು ಅದ್ಭುತನೆಂಬ ಅಗ್ನಿಯ ಪುತ್ರ. ಇವನು ಮೃತಪ್ರಾಣಿಗಳ ಶವದಹನ ಮಾಡುತ್ತಾನೆ. ಅಗ್ನಿಷ್ಟೋಮದಲ್ಲಿ ಇವನ ನಿತ್ಯನಿವಾಸವಿದೆ. ಆದುದರಿಂದ ಇವನನ್ನು ನಿಯತನೆಂದೂ ಹೇಳು ತ್ತಾರೆ.

(5) ಮಹಾರಾಜ ದಶರಥನ ಪುತ್ರ. ಇವನು ಕೈಕೇಯಿಯ ಗರ್ಭದಿಂದ ಹುಟ್ಟಿದ್ದನು. ಶ್ರೀರಾಮ, ಲಕ್ಷ್ಮಣ ಮತ್ತು ಶತ್ರುಘ್ನ ಇವನ ಸಹೋದರ ರಾಗಿದ್ದರು (ವನ 274/7–8). ಶ್ರೀರಾಮನು ಕಾಡಿಗೆ ಹೋದಾಗ, ಕೈಕೇಯಿ ಇವನನ್ನು ಅಜ್ಜನ ಮನೆಯಿಂದ ಕರೆಸಿದುದು ಮತ್ತು ನಿಷ್ಕಂಟಕ ರಾಜ್ಯವನ್ನು ಸ್ವೀಕರಿಸಲು ಹೇಳಿದುದು (ವನ 277/31–32). ಇವನು ತನ್ನ ತಾಯಿಯನ್ನು ನಿಂದಿಸಿದುದು ಮತ್ತು ಆಕೆಯ ಕೆಟ್ಟ ಕೆಲಸ ದಿಂದಾಗಿ ಬಿಕ್ಕಿ ಬಿಕ್ಕಿ ಅತ್ತದ್ದು (ವನ 277/33–34). ಇವನ ಚಿತ್ರಕೂಟ ಯಾತ್ರೆ (ವನ 277/35–38). ಶ್ರೀರಾಮನು ಹಿಂತಿರುಗಿದಾಗ ಅವನಿಗೆ ರಾಜ್ಯ ಸಮರ್ಪಣೆ ಮಾಡಿದುದು (ವನ 29/65).

**ಭರತೀ** – ಭರತನೆಂಬ ಅಗ್ನಿಯ ಪುತ್ರಿ (ವನ 219/7).

**ಭರದ್ವಾಜ** – (1) ಒಬ್ಬ ಪ್ರಾಚೀನ ಋಷಿ. ಸಪ್ತರ್ಷಿಗಳಲ್ಲಿ ಒಬ್ಬ. ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/51). ಇವನ ಕೃಪೆಯಿಂದಲೇ ಭರತನಿಗೆ ಭುಮನ್ಯು ಎಂಬ ಪುತ್ರನಾದನು (ಆದಿ 94/22). ಇದೇ ಭಾರದ್ವಾಜನು ಒಮ್ಮೆ ಗಂಗಾದ್ವಾರದಲ್ಲಿದ್ದು, ಕಠೋರವ್ರತಪಾಲನೆ ಮಾಡುತ್ತಿದ್ದನು. ಒಂದು ದಿನ ಅವನಿಗೆ ಒಂದು ವಿಶೇಷ ರೀತಿಯ ಯಜ್ಞವನ್ನು ಪೂರೈಸಬೇಕಾಗಿತ್ತು. ಅದುದರಿಂದ ಅವನು ಮಹರ್ಷಿಗಳನ್ನು ಸಂಗಡ ಕರಕೊಂಡು ಗಂಗೆಯಲ್ಲಿ ಸ್ನಾನಮಾಡಲು ಹೋದನು. ಅಲ್ಲಿ ಮೊದಲೇ ಸ್ನಾನಮಾಡಿ ಬಟ್ಟೆ ಬದಲಾಯಿಸುತ್ತಿದ್ದ ಘೃತಾಚೀ ಎಂಬ ಅಪ್ಸರೆಯನ್ನು ನೋಡಿ, ಮಹರ್ಷಿಯ ವೀರ್ಯ ಸ್ಖಲಿಸಿತು. ಮಹರ್ಷಿಯು ಅದನ್ನೆತ್ತಿ ದ್ರೋಣ(ಕಲಶ)ದಲ್ಲಿಟ್ಟನು. ಅದರಿಂದ ಒಬ್ಬ ಪುತ್ರ ಉತ್ಪನ್ನನಾದನು. ಅವನಿಗೆ ದ್ರೋಣ ನೆಂಬ ಹೆಸರು ಇಡಲ್ಪಟ್ಟಿತು (ಕೆಲವರ ಅಭಿಪ್ರಾಯ ದಂತೆ ದ್ರೋಣನ ತಂದೆಯಾದ ಭರದ್ವಾಜ, ಸಪ್ತರ್ಷಿಗಳಲ್ಲಿರುವ ಭರದ್ವಾಜನಿಗಿಂತ ಭಿನ್ನನಾಗಿ ದ್ದಾನೆ.) (ಆದಿ 129/33–38). ಇವನು ಅಗ್ನಿ ವೇಶನಿಗೆ ಆಗ್ನೇಯಾಸ್ತ್ರದ ಶಿಕ್ಷಣವನ್ನಿತ್ತನು (ಆದಿ

129/39). ಇವನು ಬ್ರಹ್ಮ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 11/22). ಇವನು ತನ್ನ ಪುತ್ರ ಯವಕ್ರೀತನಿಗೆ ಅಭಿಮಾನ ಪಡಬಾರದೆಂದು ಉಪದೇಶಮಾಡಿದುದು (ವನ 135/44). ಇವನು ಪುತ್ರ ಶೋಕದಿಂದ ವಿಲಪಿಸಿದುದು (ವನ 137/10-18). ಇವನಿಂದ ತನ್ನ ಮಿತ್ರ ರೈಭ್ಯ ಮುನಿಗೆ ಶಾಪ (ವನ 137/15). ಪುತ್ರ ಶೋಕದಿಂದ ಈತನ ಅಗ್ನಿಪ್ರವೇಶ (ವನ 137/19). ರೈಭ್ಯಪುತ್ರ ಅರ್ವಾವಸುವಿನಿಂದ ಇವನ ಪುನರುಜ್ಜೀವನ (ವನ 138/22). ಇವನು ದ್ರೋಣಾಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸುವಂತೆ ಹೇಳಿದುದು (ದ್ರೋಣ 190/35-40). ಭೃಗುವಿನೊಂದಿಗೆ ಸೃಷ್ಟ್ಯಾದಿಗಳ ಸಂಬಂಧವಾಗಿ ಕೇಳಿದುದು ಮತ್ತು ಉತ್ತರ ಪಡೆದುದು (ಶಾಂತಿ 182 ರಿಂದ 192). ಇವನು ಭಗವಾನ್ ವಿಷ್ಣುವಿನ ಎದೆಯ ಮೇಲೆ ಜಲ ತುಂಬಿದ ಕೈಯಿಂದ ಪ್ರಹರಿಸಿದುದು (ಶಾಂತಿ 342/54). ರಾಜಾ ದಿವೋದಾಸನಿಗೆ ಆಶ್ರಯವನ್ನಿತ್ತು, ಪುತ್ರೇಷ್ಟಿಯ ಮೂಲಕ ಅವನಿಗೆ ಪುತ್ರ ಪ್ರದಾನ ಮಾಡಿದುದು (ಅನು 30/30). ವೃಷಾದರ್ಭಿಯೊಡನೆ ಪ್ರತಿಗ್ರಹದೋಷವನ್ನು ಹೇಳಿದುದು (ಅನು 93/41). ಅರುಂಧತಿಯೊಡನೆ ತನ್ನ ಶರೀರ ದೌರ್ಬಲ್ಯದ ಕಾರಣ ಹೇಳಿದುದು (ಅನು 93/66). ಯಾತುಧಾನಿಗೆ ತನ್ನ ಹೆಸರಿನ ವ್ಯಾಖ್ಯಾನ ತಿಳಿಸಿದುದು (ಅನು 93/88). ಕಮಲದಂಟಿನ ಅಪಹಾರದ ಕುರಿತು ಶಪಥ ಮಾಡಿದುದು (ಅನು 93/118-119). ಅಗಸ್ತ್ಯರ ಕಮಲಗಳ ಅಪಹಾರವಾದಾಗ ಶಪಥ ಮಾಡಿದುದು (ಅನು 94/35).

(2) ಇವನು ಶಂಯು ಎಂಬ ಅಗ್ನಿಯ ಪ್ರಥಮ ಪುತ್ರನಾಗಿದ್ದಾನೆ. ಯಜ್ಞದಲ್ಲಿ ಪ್ರಥಮ ಆಜ್ಯ ಭಾಗದ ಮೂಲಕ ಈ ಭಾರದ್ವಾಜನೆಂಬ ಅಗ್ನಿಯದೇ ಪೂಜೆನಡೆಯುತ್ತದೆ (ವನ 219/5).

(3) ಒಂದು ಭಾರತೀಯ ಜನಪದ (ಭೀಷ್ಮ 9/68).

**ಭರ್ಗ** – ಒಂದು ಭಾರತೀಯ ಜನಪದ (ಭೀಷ್ಮ 9/51).

**ಭರ್ತೃಸ್ಥಾನ** – ಇಲ್ಲಿಗೆ ಹೋಗುವುದರಿಂದ ಅಶ್ವಮೇಧ ಯಜ್ಞದ ಫಲಸಿಗುತ್ತದೆ. ಇಲ್ಲಿ ಮಹಾಸೇನ ಕಾರ್ತಿಕೇಯನ ನಿವಾಸಸ್ಥಾನವಿದೆ. ಇಲ್ಲಿ ಯಾತ್ರಿಕನಿಗೆ ಸಿದ್ಧಿ ಪ್ರಾಪ್ತವಾಗುತ್ತದೆ (ವನ 84/76; ವನ 85/60).

**ಭಲ್ಲಾಟ** – ಒಂದು ಭಾರತೀಯ ಜನಪದ. ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನನು ಅದನ್ನು ಗೆದ್ದಿದ್ದನು (ಸಭಾ 30/5).

**ಭವ** – (1) ಏಕಾದಶ ರುದ್ರರಲ್ಲಿ ಒಬ್ಬ. ಇವನು ಬ್ರಹ್ಮನ ಮೊಮ್ಮಗ ಮತ್ತು ಸ್ಥಾಣುವಿನ ಪುತ್ರ (ಆದಿ 66/1-3).

(2) ಒಬ್ಬ ಸನಾತನ ವಿಶ್ವೇದೇವ (ಅನು 91/35).

**ಭವದಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/13).

**ಭಾಗೀರಥೀ**– ಇಲ್ಲಿ ಹೋಗಿ ತರ್ಪಣಕೊಡಬೇಕು (ವನ 85/14).

**ಬಾಙ್ಕಾಸುರಿ (ಭಾಂಗಾಸುರೀ)** – ಒಬ್ಬ ರಾಜ. ಇವನು ಯಮರಾಜನ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15).

**ಬಾಣ್ಡಾಯನಿ** – ಒಬ್ಬ ಋಷಿ. ಇವನು ಇಂದ್ರಸಭೆಯಲ್ಲಿ ಉಪಸ್ಥಿತನಾಗಿದ್ದು ವಜ್ರಧಾರಿ ಇಂದ್ರನ ಉಪಾಸನೆಮಾಡುತ್ತಾನೆ (ಸಭಾ 7/12).

**ಭಾಣ್ಡೀರ** – ವ್ರಜಭೂಮಿಯಲ್ಲಿರುವ ಒಂದು ವನ ಮತ್ತು ಅಲ್ಲಿರುವ ಒಂದು ವಟ ವೃಕ್ಷ. ಇದರ ನೆರಳಿನಲ್ಲಿ ಶ್ರೀಕೃಷ್ಣ ಗೊಲ್ಲಬಾಲಕರೊಂದಿಗೆ ಕರುಗಳನ್ನು ಮೇಯಿಸುತ್ತಾ, ತರತರದ ಆಟಗಳನ್ನು ಆಡುತ್ತಿದ್ದನು. ಭಾಂಡಿರ ವನದಲ್ಲಿ ವಾಸಮಾಡುವ ಅನೇಕ ಗೊಲ್ಲರು, ಅಲ್ಲಿ ಆಟವಾಡುತ್ತಾ, ವಿವಿಧ ಆಟಿಕೆಗಳಿಂದ ಶ್ರೀಕೃಷ್ಣನನ್ನು ಸಂತೋಷಪಡಿಸುತ್ತಿದ್ದರು (ಸಭಾ 38/29). (ವೃಂದಾವನದಲ್ಲಿ ಕೇಶೀಘಟ್ಟದ ಎದುರುಗಡೆ, ಯಮುನೆಯ ಆಚೆದಡದಲ್ಲಿ, ಉತ್ತರದಿಕ್ಕಿನಲ್ಲಿ ಈ ಕಾಡು ನೆಲಸಿದೆ. ಇಲ್ಲಿ ಬ್ರಹ್ಮನು ಶ್ರೀರಾಧಾಕೃಷ್ಣರ ವಿವಾಹ ಮಾಡಿಸಿದನೆಂದು ಪುರಾಣಗಳಲ್ಲಿ ಕಥೆ ಇದೆ).

**ಭಾದ್ರಪದ** (ಪೌಷ್ಠಪದ) – (ಹನ್ನೆರಡು ತಿಂಗಳುಗಳಲ್ಲಿ ಒಂದು ಯಾವ ತಿಂಗಳ ಪೂರ್ಣಿಮೆಗೆ ಪೂರ್ವಭಾದ್ರಪದ ಅಥವಾ ಉತ್ತರಭಾದ್ರಪದವೆಂಬ ಹೆಸರಿನ ನಕ್ಷತ್ರಯೋಗವಿದೆಯೋ, ಅದನ್ನು 'ಭಾದ್ರಪದ'ವೆನ್ನುತ್ತಾರೆ. ಇದು ಶ್ರಾವಣದ

ಅನಂತರ ಆಶ್ವೀಜದ ಮೊದಲು ಬರುತ್ತದೆ.) ಭಾದ್ರಪದ ಮಾಸದಲ್ಲಿ ಪ್ರತಿದಿನ ಒಂದು ಹೊತ್ತು ಊಟ ಮಾಡುವವನು ಗೋಧನಸಂಪನ್ನನೂ, ಸಮೃದ್ಧಿಶೀಲನೂ, ಅವಿಚಲ ಐಶ್ವರ್ಯಭಾಗವುಳ್ಳವನೂ ಆಗುತ್ತಾನೆ (ಅನು 106/28). ಭಾದ್ರಪದ ದ್ವಾದಶಿಯಂದು ಉಪವಾಸ ಪೂರ್ವಕ ಹೃಷಿಕೇಶನ ಹೆಸರಿನಲ್ಲಿ ಭಗವಂತನ ಪೂಜೆಮಾಡುವ ಮನುಷ್ಯ ಸೌತ್ರಾಮಣಿ ಯಜ್ಞದ ಫಲಪಡೆಯುತ್ತಾ ಪವಿತ್ರಾತ್ಮನಾಗುತ್ತಾನೆ (ಅನು 109/12).

**ಭಾನು** – (1) ಒಬ್ಬ ದೇವತೆ. ವಿವಸ್ವಂತನೆಂದೇ ತಿಳಿಯಲ್ಪಡುತ್ತಾನೆ (ಆದಿ 1/42).

(2) 'ಪ್ರಾಧಾ' ಎಂಬ ಕಶ್ಯಪಪತ್ನಿಯ ಗರ್ಭದಿಂದ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/47).

(3) ಇವನು ಶ್ರೀಕೃಷ್ಣನ ಪುತ್ರ (ಸಭಾ 2/35). ಮರಣಾನಂತರ ಈತ ವಿಶ್ವೇದೇವರಲ್ಲಿ ಪ್ರವಿಷ್ಟನಾದನು (ಸ್ವರ್ಗಾ 5/16–18).

(4) ಇವನು ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಇವನು ಆಂಗಿರಸ ಚ್ಯವನನ ಅಂಶದಿಂದ ಹುಟ್ಟಿದ್ದನು (ವನ 220/9). ಈತನನ್ನೇ ಮನು ಅಥವಾ ಬೃಹದ್ಭಾನುವೆಂದೂ ಹೇಳುತ್ತಾರೆ (ವನ 221/8).

(5) ಒಬ್ಬ ಪ್ರಾಚೀನ ರಾಜ. ಇವನು ಕೃಪಾಚಾರ್ಯನೊಂದಿಗೆ ನಡೆಯುವ ಅರ್ಜುನನ ಯುದ್ಧವನ್ನು ನೋಡಲು ಇಂದ್ರನ ವಿಮಾನದಲ್ಲಿ ಆಗಮಿಸಿದ್ದನು (ವಿರಾಟ 56/9–10).

**ಭಾನುದತ್ತ** – ಇವನು ಶಕುನಿಯ ಸಹೋದರ. ಇವನು ಭೀಮಸೇನನೊಂದಿಗೆ ಯುದ್ಧ ಮಾಡಿ ಕೊಲ್ಲಲ್ಪಟ್ಟನು (ದ್ರೋಣ 157/24–26).

**ಭಾನುದೇವ** – ಒಬ್ಬ ಪಾಂಚಾಲ ಯೋಧ. ಇವನು ಕರ್ಣನಿಂದ ಕೊಲ್ಲಲ್ಪಟ್ಟನು (ಕರ್ಣ 48/15).

**ಭಾನುಮತಿ** – (1) ಇವಳು ಕೃತವೀರ್ಯನ ಪುತ್ರಿ ಮತ್ತು ಪೂರುವಂಶದ ರಾಜಾ ಅಹಂಯಾತಿಯ ಪತ್ನಿಯಾಗಿದ್ದಳು. ಇವಳ ಗರ್ಭದಿಂದ ಸಾರ್ವಭೌಮನೆಂಬ ಪುತ್ರ ಹುಟ್ಟಿದನು (ಆದಿ 95/15).

(2) ಮಹರ್ಷಿ ಅಂಗೀರಸನ ಪ್ರಥಮ ಪುತ್ರಿ. ಈಕೆ ಒಳ್ಳೆಯ ರೂಪವತಿಯಾಗಿದ್ದಳು (ವನ 218/3).

**ಭಾನುಮಂತ** – ಕಲಿಂಗ ದೇಶದ ರಾಜಕುಮಾರ. ಇವನು ಕೌರವ ಪಕ್ಷದ ಕಡೆಯಿಂದ ಯುದ್ಧ ಮಾಡುತ್ತಾ, ಭೀಮಸೇನನ ಮೂಲಕ ಕೊಲ್ಲಲ್ಪಟ್ಟನು (ಭೀಷ್ಮ 54/33–39).

**ಭಾನುಸೇನ** – ಇವನು ಕರ್ಣನ ಪುತ್ರ. ಭೀಮಸೇನನಿಂದ ಇವನ ವಧೆ (ಕರ್ಣ 48/27).

**ಭಾರತ** – ಭರತನ ವಂಶದಲ್ಲಿ ಹುಟ್ಟುವವರು 'ಭಾರತ'ನೆಂದು ಕರೆಯಲ್ಪಡುತ್ತಾರೆ (ಆದಿ 172/504).

**ಭಾರತವರ್ಷ** – ಜಂಬೂದ್ವೀಪದ ಒಂಭತ್ತು ದೇಶಗಳಲ್ಲಿ ಒಂದು (ಭೀಷ್ಮ 6/7). ಇದರ ವಿಶೇಷ ವರ್ಣನೆ (ಭೀಷ್ಮ 9 ರಿಂದ 10).

**ಭಾರತಸಂಹಿತಾ** – ವ್ಯಾಸರಿಂದ ರಚಿಸಲ್ಪಟ್ಟ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳ ಸಂಹಿತೆ. ಇದನ್ನು ವಿದ್ವಾಂಸರು ಭಾರತವೆಂದೂ ಹೇಳುತ್ತಾರೆ (ಆದಿ 1/102).

**ಭಾರತೀ** – ಒಂದು ನದಿ. ಅಗ್ನಿಗಳನ್ನು ಉತ್ಪನ್ನಗೊಳಿಸಿದ ನದಿಗಳಲ್ಲಿ ಇದೂ ಒಂದಾಗಿ ಪರಿಗಣಿಸಲ್ಪಟ್ಟಿದೆ (ವನ 222/25–26).

**ಭಾರದ್ವಾಜ** – ಒಬ್ಬ ಋಷಿ. ಸತ್ಯವಾನನು ಜೀವಂತನಾಗುವ ವಿಶ್ವಾಸನೀಡಿ, ರಾಜಾ ದ್ಯುಮತ್ಸೇನನಿಗೆ ಈತ ಆಶ್ವಾಸನೆಯನ್ನಿತ್ತಿದ್ದನು (ವನ 298/16).

**ಭಾರದ್ವಾಜತೀರ್ಥ** – ಇದು ಐದು ನಾರೀ ತೀರ್ಥಗಳಲ್ಲಿ ಒಂದಾಗಿದೆ. ಇಲ್ಲಿಗೆ ಅರ್ಜುನನು ತೀರ್ಥಯಾತ್ರಾ ಸಮಯದಲ್ಲಿ ಹೋಗಿದ್ದನು (ಆದಿ 215/4).

**ಭಾರದ್ವಾಜೀ** – ಭಾರತವರ್ಷದ ಒಂದು ಪ್ರಧಾನ ನದಿ. ಇದರ ನೀರನ್ನು ಇಲ್ಲಿರುವ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/29).

**ಭಾರುಂಡ** – ಉತ್ತರ ಕುರುವರ್ಷದಲ್ಲಿ ವಾಸಿಸುವ ಮಹಾಶಕ್ತಿಶಾಲಿ ಪಕ್ಷಿಗಳ ಒಂದು ಜಾತಿ. ಇವುಗಳ ಕೊಕ್ಕು ಬಹಳ ತೀಕ್ಷ್ಣವಾಗಿದೆ. ಇವುಗಳು ಅಲ್ಲಿ ಸತ್ತ ಜನರ ಶವಗಳನ್ನೆತ್ತಿ ಕಂದರಗಳಲ್ಲೆಸೆದು ಬರುತ್ತವೆ (ಭೀಷ್ಮ 7/12; ಶಾಂತಿ 169/9).

**ಭಾರ್ಗವ** – ಒಂದು ಭಾರತೀಯ ಜನಪದ (ಭೀಷ್ಮ 9/50).

**ಭಾರ್ಗವಾಸ್ತ್ರ** – ಕರ್ಣನಿಗೆ ಪರಶುರಾಮನು ದಯಪಾಲಿಸಿದ ಅಸ್ತ್ರ. ಆದರೆ ಅವನ ವಧಾ ಕಾಲದಲ್ಲಿ ಅದು ಮರೆತುಹೋಯಿತು. ಆಗಲೇ ಅವನು ರಥದ ಎಡಚಕ್ರವನ್ನು ಭೂಮಿಯು ನುಂಗಲು ಉಪಕ್ರಮಿಸಿತು (ಕರ್ಣ 90).

**ಭಾಲುಕಿ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಾನೆ (ಸಭಾ 4/15).

**ಭಾವನ** – ದ್ವಾರಕೆಯ ಸಮೀಪವರ್ತಿ ವೇಣುಮಂತ ಪರ್ವತದ ಹತ್ತಿರವಿರುವ ಒಂದು ಸುಂದರ ಕಾಡು (ಸಭಾ 38/294).

**ಭಾಮಿನಿ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/11).

**ಭಾಸ** – ಒಂದು ಪರ್ವತ. ಪರ್ವತಗಳ ಅಧಿಪತಿಗಳಲ್ಲಿ ಇದೂ ಪರಿಗಣಿಸಲ್ಪಟ್ಟಿದೆ (ಆಶ್ವ 43/5).

**ಭಾಸೀ** – (1) ಕಶ್ಯಪನ ಪ್ರಾಧಾ ಹೆಸರಿನ ಪತ್ನಿಯಿಂದ ಹುಟ್ಟಿದ ಎಂಟು ಕನ್ಯೆಯರಲ್ಲಿ ಒಬ್ಬಳು (ಆದಿ 65/46).

(2) ಇವಳು ತಾಮ್ರಾಳ ಪುತ್ರಿ. ಈಕೆ ಗೃಧ್ರ ಮತ್ತು ಕೋಳಿಗಳಿಗೆ ಜನ್ಮವಿತ್ತಳು (ಆದಿ 66/56–57).

**ಭಾಸ್ಕರ** – ಕಶ್ಯಪನ ಮೂಲಕ ಅದಿತಿಯ ಗರ್ಭದಿಂದ ಹುಟ್ಟಿದ ಹನ್ನೆರಡು ಮಂದಿ ಆದಿತ್ಯದಲ್ಲಿ ಒಬ್ಬ (ಅನು 150/14–15).

**ಭಾಸ್ಕರಿ** – ಒಬ್ಬ ಪ್ರಾಚೀನ ಋಷಿ. ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡುವುದಕ್ಕಾಗಿ ಬಂದಿದ್ದನು (ಶಾಂತಿ 47/12).

**ಭಾಸ್ವರ** – ಸೂರ್ಯನ ಮೂಲಕ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸುಭ್ರಾಜನೆಂದಾಗಿತ್ತು (ಶಲ್ಯ 45/31).

**ಭೀಮ** – (1) ಕಶ್ಯಪನಿಂದ ಮುನಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/43).

(2) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/98). ಇವನು ಭೀಮಸೇನನಿಂದ ಕೊಲ್ಲಲ್ಪಟ್ಟನು (ಭೀಷ್ಮ 64/36–37).

(3) ಇವನು ಮಹಾರಾಜ ಈಲಿನನ ಮೂಲಕ ರಥಂತರಿಯ ಗರ್ಭದಿಂದ ಹುಟ್ಟಿದ್ದನು. ಇವನಿಗೆ ಇತರ ನಾಲ್ಕು ಮಂದಿ ಸಹೋದರರಿದ್ದರು – ದುಷ್ಯಂತ, ಶೂರ, ಪ್ರವನು ಮತ್ತು ವಸು (ಆದಿ 94/17–18).

(4) ಇವನು ವಿದರ್ಭ ದೇಶದ ರಾಜನಾಗಿದ್ದನು (ವನ 53/5). ದಶಾರ್ಣರಾಜ ಸುದಾಮಾನ ಪುತ್ರಿ ಇವನ ಪತ್ನಿಯಾಗಿದ್ದಳು (ವನ 69/14–15). ಮಹರ್ಷಿ ದಮನನ ಕೃಪೆಯಿಂದ ಇವನಿಗೆ ದಮ, ದಾಂತ ಮತ್ತು ದಮನನೆಂಬ ಮೂವರು ಪುತ್ರರು ಮತ್ತು ದಮಯಂತಿ ಎಂಬ ಹೆಸರಿನ ಕನ್ಯೆ ಹುಟ್ಟಿದರು (ವನ 53/6–9). ಇವನಿಂದ ದಮಯಂತಿಯ ಸ್ವಯಂವರದ ಏರ್ಪಾಡು (ವನ 54/8–9). ಇವನಿಂದ ನಳನೊಂದಿಗೆ ದಮಯಂತಿಯ ವಿವಾಹ ಮಾಡಲ್ಪಟ್ಟದ್ದು (ವನ 57/40–41). ಸಾರಥಿ ವಾರ್ಷ್ಣೇಯನ ಮೂಲಕ ತರಲ್ಪಟ್ಟ ರಾಜಾ ನಳನ ಮಕ್ಕಳನ್ನು ತನ್ನ ಆಶ್ರಯದಲ್ಲಿರಿಸಿಕೊಂಡದ್ದು (ವನ 60/23–24). ದಮಯಂತಿಯಿಂದ ಇವನ ಗುಣಗಳ ವರ್ಣನೆ (ವನ 64/44–47). ಈತ ನಳದಮಯಂತಿಯರನ್ನು ಹುಡುಕುವುದಕ್ಕಾಗಿ, ಬಹುಮಾನದ ಘೋಷಣೆಮಾಡಿ, ಬ್ರಾಹ್ಮಣರನ್ನು ನಾಲ್ಕುದಿಕ್ಕುಗಳಿಗೆ ಕಳುಹಿಸಿದುದು (ವನ 68/2–5). ಮಹಾರಾಣಿಯ ಪ್ರೇರಣೆಯಿಂದ ರಾಜಾ ನಳನ ಅನ್ವೇಷಣೆಗೋಸ್ಕರ ಬ್ರಾಹ್ಮಣರನ್ನು ಆಜ್ಞೆ ಕೊಟ್ಟು ಕಳುಹಿಸಿದುದು (ವನ 69/34). ತನ್ನಲ್ಲಿಗೆ ಬಂದ ಅಯೋಧ್ಯಾರಾಜ ಋತುಪರ್ಣನಿಗೆ ಇವನಿಂದ ಸ್ವಾಗತ (ವನ 73/20). ಪ್ರಕಟಗೊಂಡ ನಳನನ್ನು ಪುತ್ರನಂತೆ ಸ್ವೀಕರಿಸಿದುದು ಮತ್ತು ಆದರ ಸತ್ಕಾರಗಳೊಂದಿಗೆ ಆಶ್ವಾಸನೆಯನ್ನಿತ್ತದ್ದು (ವನ 77/3–5). ಒಂದು ತಿಂಗಳ ಅನಂತರ ಸೇನೆ, ರಥ ಇತ್ಯಾದಿಗಳೊಂದಿಗೆ ರಾಜಾನಳನನ್ನು ಬೀಳ್ಕೊಟ್ಟದ್ದು (ವನ 78/1–2). ಇವನ ಮೂಲಕ, ಆದರ–ಸತ್ಕಾರಗಳೊಂದಿಗೆ ರಾಜಾ ನಳನ ಸಮೇತ ದಮಯಂತಿಗೆ ವಿದಾಯ (ವನ 79/1–2).

(5) ಇವನು ದೇವತೆಗಳ ಯಜ್ಞದ ವಿನಾಶ ಮಾಡುವ ಪಾಂಚಜನ್ಯನ ಮೂಲಕ ಹುಟ್ಟಿದ ಐವರು ವಿನಾಯಕರಲ್ಲಿದ್ದಾನೆ (ವನ 221/11).

(6) ಅಂಶನಿಂದ ಸ್ಕಂದನಿಗೆ ಕೊಡಲ್ಪಟ್ಟ ಐದು ಅನುಚರರಲ್ಲಿ ಒಬ್ಬ. ಉಳಿದ ನಾಲ್ವರ ಹೆಸರು–ಪರಿಘ, ವಟ, ದಹತಿ ಮತ್ತು ದಹನ (ಶಲ್ಯ 45/34–35).

(7) ಒಬ್ಬ ಪ್ರಾಚೀನ ರಾಜ. ಇವನು ಯಮನ ಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ. ಈ ಸಭೆಯಲ್ಲಿ ಭೀಮನೆಂಬ ಹೆಸರಿನ ನೂರು ರಾಜರಿದ್ದಾರೆ (ಸಭಾ 8/24). ಇವನು ತಪಸ್ಸಿನ ಮೂಲಕ ಪ್ರಜೆಗಳನ್ನು ಕಷ್ಟದಿಂದ ಉದ್ಧರಿಸಿದ್ದನು (ವನ 3/11). ಇವನು ಪ್ರಾಚೀನಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲಪೀಡಿತನಾಗಿ ಇದನ್ನೆಲ್ಲಾ ಬಿಟ್ಟುಹೋದನು (ಶಾಂತಿ 227/49).

**ಭೀಮಜಾನು** – ಒಬ್ಬ ಪ್ರಾಚೀನ ರಾಜ. ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/21).

**ಭೀಮಬಲ (ಭೂರಿಬಲ)**. – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/98; ಆದಿ 116/7). ಭೀಮಸೇನನಿಂದ ಇವನ ವಧೆ (ಶಲ್ಯ 26/14–15).

(2) ಇವನು ದೇವತೆಗಳ ಯಜ್ಞನಾಶ ಮಾಡುವ ಪಾಂಚಜನ್ಯನ ಮೂಲಕ ಹುಟ್ಟಿದ ಐದು ಮಂದಿ ವಿನಾಯಕರಲ್ಲಿದ್ದಾನೆ (ವನ 221/11).

**ಭೀಮರಥ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/103; ಆದಿ 116/12). ಭೀಮಸೇನನಿಂದ ಇವನ ವಧೆ (ಭೀಷ್ಮ 64/36–37).

(2) ಕೌರವ ಪಕ್ಷದ ಯೋಧ. ಇವನು ದ್ರೋಣ ನಿರ್ಮಿತ ಗರುಡವ್ಯೂಹದ ಹೃದಯ ಸ್ಥಾನದಲ್ಲಿ ನಿಂತಿದ್ದನು (ದ್ರೋಣ 20/12). ಇವನು ಪಾಂಡವ ಪಕ್ಷದ ಮ್ಲೇಚ್ಛರಾಜ ಶಾಲ್ವನ ವಧೆ ಮಾಡಿದ್ದನು (ದ್ರೋಣ 25/26). ಮೊದಲು ಯುಧಿಷ್ಠಿರನು ರಾಜನಾಗಿದ್ದಾಗ, ಇವನು ಆತನ ಸಭಾಭವನದಲ್ಲಿರುತ್ತಿದ್ದನು (ಸಭಾ 4/26).

**ಭೀಮರಥೀ (ಭೀಮಾ)**– ದಕ್ಷಿಣಭಾರತದಲ್ಲಿರುವ ಒಂದು ನದಿ. ಇದು ಸಮಸ್ತ ಪಾಪಭಯವನ್ನು ನಾಶಮಾಡುತ್ತದೆ (ವನ 88/3). (ಇದರ ತಟದಲ್ಲಿಯೇ ಸುಪ್ರಸಿದ್ಧ ತೀರ್ಥ ಪಂಡರಾಪುರ ವಿದೆ.) ಇದು ಭಾರತವರ್ಷದ ಮುಖ್ಯ ನದಿ ಗಳಲ್ಲಿದೆ. ಇದರ ನೀರನ್ನು ಇಲ್ಲಿರುವವರು ಕುಡಿಯುತ್ತಾರೆ (ಭೀಷ್ಮ 9/20). ಇದನ್ನೇ 'ಭೀಮಾ' ಎಂದೂ ಹೇಳುತ್ತಾರೆ (ಭೀಷ್ಮ 9/22).

**ಭೀಮವೇಗ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/98; ಆದಿ 116/7).

**ಭೀಮಶರ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/99).

**ಭೀಮಸೇನ** – (1) ಇವನು ಮಹಾರಾಜ ಪರೀಕ್ಷಿತನ ಪುತ್ರ ಮತ್ತು ಜನಮೇಜಯನ ಸಹೋದರನಾಗಿದ್ದನು. ಇವನು ಕುರುಕ್ಷೇತ್ರದ ಯಜ್ಞದಲ್ಲಿ ದೇವತೆಗಳ ಹೆಣ್ಣು ನಾಯಿಯಾದ ಸರಮೆಯ ಮಗನನ್ನು ಹೊಡೆದಿದ್ದನು (ಆದಿ 3/1–2).

(2) ಕಶ್ಯಪ ಪತ್ನಿ ಮುನಿಯ ಗರ್ಭದಿಂದ ಹುಟ್ಟಿದ ಒಬ್ಬ ದೇವಗಂಧರ್ವ (ಆದಿ 65/42). ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿ ದ್ದನು (ಆದಿ 122/55).

(3) ಇವನು ಸೋಮವಂಶದ ಮಹಾರಾಜ ಅವಿಕ್ಷಿತನ ಮೊಮ್ಮಗ ಮತ್ತು ಪರೀಕ್ಷಿತನ ಪುತ್ರ ನಾಗಿದ್ದನು. ಇವನ ತಾಯಿಯ ಹೆಸರು ಸುಯಶಾ. ಇವನಿಂದ ಕೇಕಯ ದೇಶದ ರಾಜಕುಮಾರಿ 'ಕುಮಾರಿ'ಯ ಗರ್ಭದಿಂದ ಪ್ರತಿಶ್ರವನ ಜನ್ಮ ವಾಯಿತು (ಆದಿ 94/52–55; ಆದಿ 95/42–43).

(4) ಇವನು ಮಹಾರಾಜ ಪಾಂಡುವಿನ ಕ್ಷೇತ್ರಜ ಪುತ್ರ. ವಾಯುದೇವನ ಮೂಲಕ ಕುಂತಿಯ ಗರ್ಭದಿಂದ ಇವನ ಜನ್ಮವಾಗಿತ್ತು. ಈ ಕುಮಾರನು ಸಮಸ್ತ ಬಲವಂತರಲ್ಲಿ ಶ್ರೇಷ್ಠನೆಂದು ಇವನ ಜನ್ಮಕಾಲದಲ್ಲಿ ಆಕಾಶವಾಣಿಯಾಯಿತು (ಆದಿ 122/14–15). ಹುಟ್ಟಿದ ಹತ್ತನೇ ದಿನ ಇವನು ತಾಯಿಯ ಮಡಿಲಿನಿಂದ ಒಂದು ವಿಶಾಲ ಶಿಲಾಖಂಡದ ಮೇಲೆ ಬಿದ್ದನು. ಇವನ ಶರೀರದ ಪೆಟ್ಟಿನಿಂದ ಆ ಶಿಲೆ ಚೂರು ಚೂರಾ ಯಿತು (ಆದಿ 122/15). ಇವನ ಜನ್ಮ ಕಾಲದ ಗ್ರಹಸ್ಥಿತಿ (ಆದಿ 122/18). ಶತಶೃಂಗ ನಿವಾಸಿ ಗಳಾದ ಋಷಿಗಳ ಮೂಲಕ ಇವನ ನಾಮಕರಣ ಸಂಸ್ಕಾರ (ಆದಿ 123/19–20). ವಸುದೇವನ ಪುರೋಹಿತ ಕಾಶ್ಯಪನ ಮೂಲಕ ಇವನ ಉಪನಯನಾದಿ ಸಂಸ್ಕಾರಗಳು ಪೂರ್ಣವಾದವು. ಇವನು ರಾಜರ್ಷಿ ಶುಕನಿಂದ ಗದಾಯುದ್ಧದ ಶಿಕ್ಷಣ ಪಡೆದನು (ಆದಿ 123/31). ಕೃಪಾ ಚಾರ್ಯನು ಇವನಿಗೆ (ಪಾಂಡವರಿಗೆ) ಅಸ್ತ್ರಶಸ್ತ್ರ

ಗಳ ಶಿಕ್ಷಣವನ್ನಿತ್ತನು (ಆದಿ 129/23). ದ್ರೋಣಾಚಾರ್ಯನು ಇವನಿಗೆ (ಪಾಂಡವರಿಗೆ) ನಾನಾ ಪ್ರಕಾರದ ಮಾನವ ಮತ್ತು ದಿವ್ಯ ಅಸ್ತ್ರಶಸ್ತ್ರಗಳ ಶಿಕ್ಷಣವನ್ನಿತ್ತನು (ಆದಿ 131/4,9). ಇವನ ಮೂಲಕ ದ್ರೌಪದಿಯ ಗರ್ಭದಿಂದ ಸುತಸೋಮನ ಜನ್ಮ (ಆದಿ 95/75). ಇವನ ಮೂಲಕ ಕಾಶೀರಾಜ ಕುಮಾರಿ ಬಲಂಧರಾಳ ಗರ್ಭದಿಂದ 'ಸರ್ವಗ'ನ ಜನನ (ಆದಿ 95/77). ಬಾಲಕ್ರೀಡೆಗಳಲ್ಲಿ ಇವನ ಮೂಲಕ ಧೃತರಾಷ್ಟ್ರ ಪುತ್ರರ ಪರಾಜಯ (ಆದಿ 127/16–24). ದುರ್ಯೋಧನನು ಇವನಿಗೆ ವಿಷಮಿಶ್ರಿತ ಭೋಜನಮಾಡಿಸಿದುದು; ಮೂರ್ಛಿತನಾದಾಗ ಬಳ್ಳಿಗಳಿಂದ ಕಟ್ಟಿಸಿ ಗಂಗಾಜಲದಲ್ಲಿ ಎಸೆಯುವಂತೆ ಮಾಡಿದುದು (ಆದಿ 127/45–54). ಮೂರ್ಛಿತಾವಸ್ಥೆಯಲ್ಲಿ ಇವನು ನಾಗಲೋಕಕ್ಕೆ ತಲುಪಿದುದು. ಅಲ್ಲಿ ಸರ್ಪಗಳು ಕಡಿದದ್ದರಿಂದ, ತಿಂದ ವಿಷ ದೂರವಾದ ಕಾರಣ ತನ್ನ ಪರಾಕ್ರಮವನ್ನು ಪ್ರಕಟಿಸಿದುದು (ಆದಿ 127/55–59). ನಾಗಲೋಕದಲ್ಲಿ ಇವನು ಆರ್ಯಕನಾಗನನ್ನು ಆಲಿಂಗಿಸಿದುದು; ಆರ್ಯಕನ ಪ್ರೇರಣೆಯಿಂದ ಪ್ರಸನ್ನನಾದ ನಾಗರಾಜ ವಾಸುಕಿಯ ಆಜ್ಞೆಯಿಂದ, ಇವನು ಎಂಟು ಕುಂಡಗಳ ದಿವ್ಯ ರಸಪಾನ ಮಾಡಿದುದು. ಇದರಿಂದಾಗಿ ಈತನಿಗೆ ಒಂದು ಸಾವಿರ ಆನೆಗಳ ಬಲ ಪ್ರಾಪ್ತವಾದುದು (ಆದಿ 127/63–71). ಎಂಟನೇ ದಿನ ರಸವು ಜೀರ್ಣವಾದಾಗ ಇವನು ಎಚ್ಚತ್ತದ್ದು; ನಾಗಗಳ ಮೂಲಕ ಇವನಿಗೆ ಮಂಗಲಾಚಾರ ಪೂರ್ವಕ ಸ್ವಾಗತ ಸತ್ಕಾರ ಮತ್ತು ಹತ್ತುಸಾವಿರ ಆನೆಗಳಿಗೆ ಸಮಾನವಾಗಿ ಬಲಶಾಲಿಯಾಗಲು ವರದಾನ ಮಾಡಿ, ಇವನನ್ನು ಪುನಃ ಮೇಲಕ್ಕೆ ತಲುಪಿಸಿದುದು (ಆದಿ 128/20–28). ಈತ ನಾಗಲೋಕದಿಂದ ಹಿಂತಿರುಗಿ ತಾಯಿಯನ್ನು ವಂದಿಸಿದುದು ಮತ್ತು ಸಹೋದರರನ್ನು ಭೇಟಿಯಾದುದು (ಆದಿ 128/29–30). ಗದಾಯುದ್ಧದಲ್ಲಿ ಈತ ಪ್ರವೀಣನಾದುದು (ಆದಿ 131/61). ಹಸ್ತಿನಾಪುರದ ರಂಗಭೂಮಿಯಲ್ಲಿ, ಪರೀಕ್ಷೆಯ ಸಮಯದಲ್ಲಿ ದುರ್ಯೋಧನನೊಂದಿಗೆ ಗದಾಯುದ್ಧ ಮತ್ತು ಅಶ್ವತ್ಥಾಮನಿಂದ ಆ ಯುದ್ಧದ ನಿವಾರಣೆ (ಆದಿ 134/1–5). ಇವನಿಂದ ಕರ್ಣನ ತಿರಸ್ಕಾರ (ಆದಿ 136/6–7). ಕರ್ಣನ ಪಕ್ಷವಹಿಸಿ ದುರ್ಯೋಧನನು ಇವನನ್ನು ಆಕ್ಷೇಪಿಸಿದುದು (ಆದಿ 136/10–16). ಇವನ ಮೂಲಕ ದ್ರುಪದನ ಗಜಸೇನೆಯ ಸಂಹಾರ (ಆದಿ 137/31–35). ಬಲರಾಮನಿಂದ ಇವನಿಗೆ ಗದಾಯುದ್ಧದ ಶಿಕ್ಷಣ (ಆದಿ 138/4). ಇವನಿಂದ ಲಾಕ್ಷಾಗೃಹ ಉರಿಸಲ್ಪಟ್ಟದ್ದು (ಆದಿ 147/10). ಸುರಂಗದಿಂದ ಹೊರಟು ಓಡುವಾಗ, ಹಾದಿಯಲ್ಲಿ ಬಸವಳಿದ ಸಹೋದರರನ್ನೂ, ತಾಯಿಯನ್ನೂ ಈತ ಹೊತ್ತುಕೊಂಡದ್ದು (ಆದಿ 147/20–21). ಭೂಮಿಯ ಮೇಲೆ ನಿದ್ರಿಸುತ್ತಿದ್ದ ಸಹೋದರರನ್ನು ತಾಯಿಯನ್ನೂ ಕಂಡು ಇವನು ದುಃಖಿಸಿದುದು (ಆದಿ 150/21–41). ಹಿಡಿಂಬವನದಲ್ಲಿ ಇವನು ಜಾಗರಣೆ ಮಾಡಿದುದು (ಆದಿ 150/44–45). ಹಿಡಿಂಬನೊಂದಿಗೆ ಮಾತುಕತೆ (ಆದಿ 151/23–36). ಹಿಡಿಂಬಾಸುರನೊಂದಿಗೆ ಇವನ ಯುದ್ಧ (ಆದಿ 152/38–45). ಇವನಿಂದ ಹಿಡಿಂಬನ ವಧೆ (ಆದಿ 153/32). ಹಿಡಿಂಬೆಯನ್ನು ಕೊಲ್ಲಲು ಈತ ಸಿದ್ಧನಾದುದು. ಆಗ ಯುಧಿಷ್ಠಿರನು ಈತನನ್ನು ತಡೆದುದು (ಆದಿ 154/1–2). ಹಿಡಿಂಬೆಗೆ ಪುತ್ರದಾನ ಮಾಡಲು ಇವನಿಗೆ ತಾಯಿಯಿಂದ ಆದೇಶ ಪ್ರಾಪ್ತವಾದುದು (ಆದಿ 154/18). ಹಿಡಿಂಬೆಯೊಂದಿಗೆ ಇವನ ಶರ್ತ (ಆದಿ 154/20). ಹಿಡಿಂಬೆಯೊಂದಿಗೆ ಇವನ ವಿಹಾರ (ಆದಿ 154/21–30). ಇವನ ಮೂಲಕ ಹಿಡಿಂಬೆಯ ಗರ್ಭದಿಂದ ಘಟೋತ್ಕಚನ ಜನ್ಮ (ಆದಿ 154/31). ಏಕಚಕ್ರದಲ್ಲಿ ವಾಸಿಸುತ್ತಿದ್ದಾಗ, ಪೂರ್ಣ ಭಿಕ್ಷೆಯ ಅರ್ಧಭಾಗ ಇವನಿಗೆ ಸಲ್ಲುತ್ತಿತ್ತು (ಆದಿ 156/6). ಬ್ರಾಹ್ಮಣನಿಗೆ ಉಪಕಾರ ಮಾಡಲು ಇವನಿಗೆ ತಾಯಿಯಾದ ಕುಂತಿಯಿಂದ ಆಜ್ಞೆ (ಆದಿ 160/20). ಇವನು ಭೋಜನ ಸಾಮಗ್ರಿ ತೆಗೆದುಕೊಂಡು ಬಕಾಸುರನನ್ನು ಕರೆದುದು (ಆದಿ 162/4–5). ಬಕಾಸುರನು ಬಂದು, ಕುಪಿತನಾಗಿ, ಇವನೊಂದಿಗೆ ಯುದ್ಧ ಪ್ರಾರಂಭಿಸಿದುದು (ಆದಿ 162/6–28). ಇವನಿಂದ ಬಕಾಸುರನ ವಧೆ (ಆದಿ 163/1). ಮನುಷ್ಯರನ್ನು ಹಿಂಸಿಸಬಾರದೆಂಬ ಶರ್ತದ ಮೇಲೆ ಬಕನ ಪರಿವಾರದವರಿಗೆ ಈತ ಜೀವದಾನ ಮಾಡಿದುದು (ಆದಿ 163/2–

4). ದ್ರೌಪದಿಯ ಸ್ವಯಂವರಕ್ಕೆ ಬಂದಿರುವ ರಾಜರೊಂದಿಗೆ ಬ್ರಾಹ್ಮಣ ವೇಷದಲ್ಲಿ ಯುದ್ಧ ಮಾಡುತ್ತಿದ್ದಾಗ ಶ್ರೀಕೃಷ್ಣನು ಬಲರಾಮನಿಗೆ ಇವನ ಪರಿಚಯ ತಿಳಿಸಿದುದು (ಆದಿ 188/14–21). ಸ್ವಯಂವರದ ಸಂದರ್ಭದಲ್ಲಿ ಶಲ್ಯನೊಂದಿಗೆ ಇವನ ಯುದ್ಧ ಮತ್ತು ಶಲ್ಯನ ಪರಾಜಯ (ಆದಿ 189/23–29). ದ್ರೌಪದಿಯೊಂದಿಗೆ ವಿಧಿ ಪೂರ್ವಕ ಈತನ ವಿವಾಹ (ಆದಿ 197/13). ಇವನಿಗೆ ಮಯಾಸುರನಿಂದ ಗದೆಯ ಕಾಣಿಕೆ (ಸಭಾ 3/18–21). ಜರಾಸಂಧ ವಧೆಯ ಕುರಿತು, ಶ್ರೀಕೃಷ್ಣ ಹಾಗೂ ಯುಧಿಷ್ಠಿರನೊಂದಿಗೆ ಇವನ ಮಾತುಕತೆ (ಸಭಾ 15/11–13). ಜರಾ ಸಂಧ ವಧೆಗೋಸ್ಕರ ಶ್ರೀಕೃಷ್ಣ ಮತ್ತು ಅರ್ಜುನ ನೊಂದಿಗೆ ಇವನ ಮಗಧಯಾತ್ರೆ (ಸಭಾ 20). ಜರಾಸಂಧನೊಂದಿಗೆ ಇವನ ಮಲ್ಲಯುದ್ಧ. ಜರಾಸಂಧನನ್ನು ಸಿಗಿಯಲು ಶ್ರೀಕೃಷ್ಣನಿಂದ ಸಂಕೇತ (ಸಭಾ 23/10ರಿಂದ 24/6). ಇವನು ಜರಾಸಂಧನನ್ನು ಸಿಗಿದುದು (ಸಭಾ 24/7). ಜರಾಸಂಧನು ಪುನಃ ಜೀವಂತನಾದಾಗ, ಇವನಿಗೆ ಶ್ರೀಕೃಷ್ಣನಿಂದ ಪುನಃ ಸಂಕೇತಪ್ರಾಪ್ತಿ. ಆ ಸಂಕೇತ ಪ್ರಕಾರ ಇವನು ಜರಾಸಂಧನನ್ನು ಸಿಗಿದು ಎರಡು ದಿಕ್ಕುಗಳಿಗೆ ಎಸೆದುದು (ಸಭಾ 24/7). ಪೂರ್ವದಿಕ್ಕಿನ ಪ್ರದೇಶಗಳನ್ನು ಗೆಲ್ಲಲು ಇವನು ಹೊರಟದ್ದು ಮತ್ತು ವಿಭಿನ್ನ ದೇಶಗಳ ಮೇಲೆ ವಿಜಯ ಸಂಪಾದಿಸಿದ್ದು (ಸಭಾ 29). ಇವನು ಪೂರ್ವದಿಕ್ಕಿನ ಅನೇಕ ದೇಶಗಳನ್ನು ರಾಜರನ್ನೂ ಗೆದ್ದು, ಅಪಾರಧನ ಸಂಪತ್ತಿ ನೊಂದಿಗೆ ಇಂದ್ರಪ್ರಸ್ಥಕ್ಕೆ ಹಿಂತಿರುಗಿದುದು (ಸಭಾ 30). ಅಗ್ರಪೂಜೆಯ ಸನ್ನಿವೇಶದಲ್ಲಿ ಭೀಷ್ಮ ಹಾಗೂ ಧೃತರಾಷ್ಟ್ರನನ್ನು ತಲುಪಿಸಲು ಈತ ಹೋಗಿದ್ಧದ್ದು (ಸಭಾ 45/48). ದುಷ್ಟ ಕೌರವನ ಮೂಲಕ, ತುಂಬಿದ ಸಭೆಯಲ್ಲಿ, ದ್ರೌಪದಿಯ ಮಾನಭಂಗ ಮಾಡಲ್ಪಟ್ಟಾಗ, ಈತ ಕುಪಿತನಾಗಿ ಯುಧಿಷ್ಠಿರ ಕೈಗಳನ್ನು ಸುಡಲು ಹೇಳಿದುದು (ಆದಿ 68/6). ಇವನಿಂದ, ದುಃಶಾಸನನ ಎದೆ ಯನ್ನು ಸೀಳಿ, ಅವನ ರಕ್ತಕುಡಿಯುವ ಭೀಷಣ ಪ್ರತಿಜ್ಞೆ (ಸಭಾ 68/52–53). ಇವನ ರೋಷ ಪೂರ್ಣ ಉದ್ಗಾರ (ಸಭಾ 70/12–17). ದುರ್ಯೋಧನನ ತೊಡೆಯನ್ನು ಮುರಿಯಲು ಇವನ ಪ್ರತಿಜ್ಞೆ (ಸಭಾ 71/14). ದ್ಯೂತ ಸಭೆಯಲ್ಲಿ ಸಮಸ್ತ ಶತ್ರುಗಳನ್ನು ಕೊಲ್ಲಲು ಈತ ಸಿದ್ಧನಾದುದು (ಸಭಾ 72/10–11). ದುಃಶಾಸನನು ಕುಚೋದ್ಯ ಮಾಡಿದಾಗ, ಅವನನ್ನು ಕೊಲ್ಲಲು ಇವನ ಪ್ರತಿಜ್ಞೆ (ಸಭಾ 77/16–18). ದುಃಶಾ ಸನನ ರಕ್ತ ಕುಡಿಯಲು ಮತ್ತು ಧೃತರಾಷ್ಟ್ರನ ಎಲ್ಲಾ ಪುತ್ರರ ವಧೆಮಾಡಲು ಇವನ ಪ್ರತಿಜ್ಞೆ (ಸಭಾ 77/20–22). ದುರ್ಯೋಧನನನ್ನು ಕೊಲ್ಲಲು ಪ್ರತಿಜ್ಞೆ ಮಾಡಿದುದು (ಸಭಾ 77/26–28). ಇವನು ತನ್ನ ಭುಜಗಳ ಕಡೆ ನೋಡುತ್ತಾ ಕಾಡಿಗೆ ನಡೆದುದು; (70/4). ಕಿರ್ಮೀರ ನೊಂದಿಗೆ ಇವನ ಯುದ್ಧ. ಇವನಿಂದ ಆತನ ವಧೆ (ವನ 11/28–67). ಪುರುಷಾರ್ಥವನ್ನು ಪ್ರಶಂಸಿಸುತ್ತಾ, ಇವನು ಯುಧಿಷ್ಠಿರನೊಡನೆ ಯುದ್ಧ ಪ್ರಾರಂಭಿಸಲು ಒತ್ತಾಯಿಸಿದುದು (ವನ 33). ಇವನು ಯುಧಿಷ್ಠಿರನನ್ನು ಯುದ್ಧ ಮಾಡಲು ಪ್ರೋತ್ಸಾಹಿಸಿದುದು (ವನ 35). ಅರ್ಜುನನಿಗಾಗಿ ಇವನ ಚಿಂತೆ (ವನ 80/17–21). ಗಂಧಮಾದನ ಪರ್ವತದ ಮೇಲೆ ಹತ್ತಲು ಈತ ಉತ್ಸಾಹ ತೋರಿದುದು (ವನ 140/9–17). ಗಂಧಮಾದನದ ಯಾತ್ರೆಯಲ್ಲಿ ಇವನು ಘಟೋತ್ಕಚನನ್ನು ಸ್ಮರಿಸಿದುದು (ವನ 144/25). ಇವನು ಸೌಗಂಧಿಕ ಪುಷ್ಪ ತರಲು ಪ್ರಸ್ಥಾನ ಮಾಡಿದುದು (ವನ 146/9). ಕದಲೀವನದಲ್ಲಿ ಹನುಮಂತನೊಡನೆ ಈತನ ಭೇಟಿ (ವನ 146/86). ಹನುಮಂತನೊಡನೆ ಇವನ ಸಂವಾದ (ವನ 147 ರಿಂದ 150). ಹನುಮಂತನಿಂದ ಇವನಿಗೆ ಆಶ್ವಾಸನೆ (ವನ 151/16–19). ಭೀಮನು ಸೌಗಂಧಿಕ ವನ ಪ್ರವೇಶಿಸಿದುದು (ವನ 152). ಇವನು ಸೌಗಂಧಿಕ ಸರೋವರದ ಬಳಿಗೆ ತಲುಪಿದುದು (ವನ 153/10). ಕ್ರೋಧ ವಶರೆಂಬ ರಾಕ್ಷಸರೊಂದಿಗೆ ಇವನ ಯುದ್ಧ. ಅವರನ್ನು ಸೋಲಿಸಿ ಸೌಗಂಧಿಕ ಪುಷ್ಪಗಳನ್ನು ಕಿತ್ತದ್ದು (ವನ 154/18–23). ಜಟಾಸುರ ನೊಂದಿಗೆ ಇವನ ಯುದ್ಧ: ಇವನಿಂದ ಆತನ ವಧೆ (ವನ 157/52–70). ಹಿಮಾಲಯದ ಶಿಖರದ ಮೇಲೆ ಯಕ್ಷ ರಾಕ್ಷಸರೊಂದಿಗೆ ಇವನ ಯುದ್ಧ. ಇವನಿಂದ ರಾಕ್ಷಸರಾಜ ಮಣಿಮಂತನ ವಧೆ (ವನ 160/49–77). ಗಂಧಮಾದನದಿಂದ

ಹೊರಡಲು ಯುಧಿಷ್ಠಿರನೊಂದಿಗೆ ಇವನ ಮಾತುಕತೆ (ವನ 176/7–16). ಇವನು ಅಜಗರ ದಿಂದ ಹಿಡಿಯಲ್ಪಟ್ಟದ್ದು (ವನ 178/28). ಹೆಬ್ಬಾವಿನಿಂದ ಹಿಡಿಯಲ್ಪಟ್ಟಾಗ, ಅವನೊಂದಿಗೆ ಸಂವಾದರೂಪದಲ್ಲಿ ಈತ ವಿಲಪಿಸಿದುದು (ವನ 179/25–38). ಅಜಗರ ರೂಪದ ನಹುಷನ ಹಿಡಿತದಿಂದ ಇವನ ಬಿಡುಗಡೆ (ವನ 181/43). ಚಿತ್ರಸೇನನಿಂದ ದುರ್ಯೋಧನನ ಬಂಧಿಸಲ್ಪಟ್ಟಾಗ ಇವನ ಕಟೂಕ್ತಿ (ವನ 242/15–21). ಇವನಿಂದ ಕೋಟಿಕಾಸ್ಯನ ವಧೆ (ವನ 271/26). ಜಯದ್ರಥನನ್ನು ಹಿಡಿದು, ಅವನ ಕೂದಲನ್ನು ಕತ್ತರಿಸಿ ಐದು ಜುಟ್ಟನ್ನು ಉಳಿಸಿದುದು ಮತ್ತು ಯುಧಿಷ್ಠಿರನ ದಾಸನೆಂದು ಘೋಷಿಸುವಂತೆ ಮಾಡಿದುದು (ವನ 272/3–11). ದ್ವೈತವನದಲ್ಲಿ ನೀರುತರಲು ಹೋದುದು ಮತ್ತು ಸರೋವರ ದಲ್ಲಿ ಮೂರ್ಛಿತನಾಗಿ ಬಿದ್ದುದು (ವನ 312/33–40). ಅಜ್ಞಾತವಾಸದ ಬಗೆಗೆ ಚಿಂತಾ ಮಗ್ನನಾದ ಯುಧಿಷ್ಠಿರನಿಗೆ ಪ್ರೋತ್ಸಾಹ ನೀಡಿ ದುದು (ವನ 315/24–26). ವಿರಾಟನಗರದಲ್ಲಿ ಬಲ್ಲವನೆಂಬ ಹೆಸರಿನಿಂದಿರುತ್ತೇನೆಂದು ಹೇಳಿ ದುದು (ವಿರಾಟ 2/1). ಈತನನ್ನು ತನ್ನ ಬಳಿ ಇರಿಸಿಕೊಳ್ಳುವಂತೆ ವಿರಾಟರಾಜನನ್ನು ಪ್ರಾರ್ಥಿಸಿ ದುದು (ವಿರಾಟ 8/7). ಜೀಮೂತನೆಂಬ ಮಲ್ಲನೊಡನೆ ಕುಸ್ತಿಯಾಡಿದುದು ಮತ್ತು ಆತನ ವಧೆ ಮಾಡಿದುದು (ವಿರಾಟ 13/24–36). ದ್ರೌಪದಿಯೊಡನೆ ರಾತ್ರಿ ಹೊತ್ತು ಪಾಕಶಾಲೆಗೆ ಬಂದ ಕಾರಣ ಕೇಳಿದುದು (ವಿರಾಟ 17/17–21). ಪ್ರಾಚೀನ ಕಾಲದ ಪತಿವ್ರತೆಯರ ಉದಾ ಹರಣೆಯ ಮೂಲಕ ದ್ರೌಪದಿಯನ್ನು ಸಮಾ ಧಾನಪಡಿಸಿದುದು (ವಿರಾಟ 21/1–17). ದ್ರೌಪದಿಗೆ ಕೀಚಕನನ್ನು ಕೊಲ್ಲುವ ವಿಶ್ವಾಸ ನೀಡಿ, ನೃತ್ಯಶಾಲೆಯನ್ನು ಪ್ರವೇಶಿಸಿದುದು (ವಿರಾಟ 22/38). ಕೀಚಕನೊಂದಿಗೆ ಇವನ ಯುದ್ಧ; ಆತನ ವಧೆ (ವಿರಾಟ 22/52–82). ಇವನ ಮೂಲಕ ನೂರೈದು ಉಪಕೀಚಕರ ವಧೆ ಮತ್ತು ದ್ರೌಪದಿಯ ಬಿಡುಗಡೆ (ವಿರಾಟ 23/27–28). ಯುಧಿಷ್ಠಿರನ ಆಜ್ಞೆಯಂತೆ ಸುಶರ್ಮನನ್ನು ಜೀವಂತ ಸೆರೆಹಿಡಿದುದು (ವಿರಾಟ 33/48). ಯುಧಿಷ್ಠಿರನ ಆಜ್ಞೆಯಂತೆ ಸುಶರ್ಮನನ್ನು ಬಿಡುಗಡೆಗೊಳಿಸಿದುದು ಮತ್ತು ಆತ ಯುಧಿಷ್ಠಿರನ ದಾಸನೆಂದು ಘೋಷಿಸಿದುದು (ವಿರಾಟ 33/59). ಸಂಜಯನಿಂದ ಇವನ ಪರಾಕ್ರಮದ ವರ್ಣನೆ (ಉದ್ಯೋಗ 50/19–25). ಶಾಂತಿ ವಿಷದಲ್ಲಿ ಶ್ರೀಕೃಷ್ಣನೊಡನೆ ಇವನ ಅಭಿಪ್ರಾಯ (ಉದ್ಯೋಗ 74). ತನ್ನ ಶಕ್ತಿಯ ವರ್ಣನೆ ಮಾಡುತ್ತಾ ಶ್ರೀಕೃಷ್ಣನಿಗೆ ಉತ್ತರವನ್ನಿತ್ತದ್ದು (ಉದ್ಯೋಗ 76). ಶಿಖಂಡಿಯನ್ನು ಪ್ರಧಾನ ಸೇನಾಪತಿಯಾಗಿ ಮಾಡುವಂತೆ ಸಲಹೆಯನ್ನಿ ತ್ತದ್ದು (ಉದ್ಯೋಗ 151/29–32). ಉಲೂಕ ನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರ ವನ್ನಿತ್ತದ್ದು (ಉದ್ಯೋಗ 162/20–29). ಉಲೂಕನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರವನ್ನಿತ್ತದ್ದು (ಉದ್ಯೋಗ 163/32–36). ಕವಚವನ್ನು ಕಳಚಿಬಿಟ್ಟು, ಕಾಲ್ನಡಿಗೆಯಿಂದಲೇ ಕೌರವ ಸೇನೆಯ ಕಡೆಗೆ ಹೋಗುತ್ತಿದ್ದ ಯುಧಿಷ್ಠಿರನೊಡನೆ, ಅದರ ಕಾರಣ ಕೇಳಿದುದು (ಭೀಷ್ಮ 43/17). ಇವನ ವಿಕಟ ಗರ್ಜನೆಯ ಭಯಂಕರ ರೂಪ (ಭೀಷ್ಮ 44/8–13). ಪ್ರಥಮ ದಿನದಂದು ಯುದ್ಧಾರಂಭದಲ್ಲಿ ದುರ್ಯೋಧನ ನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/19–20). ಕಲಿಂಗರೊಂದಿಗೆ ಯುದ್ಧ ಮಾಡುತ್ತಿದ್ದಾಗ, ಇವನ ಮೂಲಕ ಶುಕ್ರದೇವನ ವಧೆ (ಭೀಷ್ಮ 54/25). ಇವನಿಂದ ಭಾನು ಮಂತನ ವಧೆ (ಭೀಷ್ಮ 54/39). ಇವನಿಂದ ಕಲಿಂಗ ರಾಜ ಶ್ರುತಾಯುವಿನ ಚಕ್ರರಕ್ಷಕರಾದ ಸತ್ಯದೇವ ಮತ್ತು ಸತ್ಯರ ವಧೆ (ಭೀಷ್ಮ 54/76). ಇವನ ಮೂಲಕ ಕೇತುಮಂತನ ವಧೆ (ಭೀಷ್ಮ 54/77). ಗಜಸೇನೆಯ ಸಂಹಾರ ಮಾಡಿ ರಕ್ತನದಿಯನ್ನು ನಿರ್ಮಿಸಿದುದು (ಭೀಷ್ಮ 58/16–19). ಇವನಿಂದ ದುರ್ಯೋಧನನ ಗಜಸೇನೆಯ ಸಂಹಾರ (ಭೀಷ್ಮ 62/49–65). ಇವನ ಅದ್ಭುತ ಪರಾಕ್ರಮ ಮತ್ತು ಭೀಷ್ಮನೊಂದಿಗೆ ಯುದ್ಧ (ಭೀಷ್ಮ 63/1–26). ಧೃತರಾಷ್ಟ್ರ ಪುತ್ರರೊಡನೆ ಇವನ ಯುದ್ಧ. ಇವನಿಂದ ಸೇನಾಪತಿ, ಜಲಸಂಧ, ಸುಷೇಣ, ಉಗ್ರ ವೀರಬಾಹು, ಭೀಮ, ಭೀಮರಥ ಮತ್ತು ಸುಲೋಚನರೆಂಬ ಎಂಟು ಮಂದಿ ಧೃತರಾಷ್ಟ್ರ ಪುತ್ರರ ವಧೆ (ಭೀಷ್ಮ 64/32–38). ಇವನ ಭಯಂಕರ ಯುದ್ಧ

(ಭೀಷ್ಮ 70). ಭೀಷ್ಮನೊಂದಿಗೆ ಇವನ ಘೋರ ಯುದ್ಧ (ಭೀಷ್ಮ 72/21–25). ದುರ್ಯೋಧನ ನೊಂದಿಗೆ ಇವನ ಯುದ್ಧ (ಭೀಷ್ಮ 73/17–23). ಧೃತರಾಷ್ಟ್ರ ಪುತ್ರರ ಮೇಲೆ ಆಕ್ರಮಣ ಮಾಡಿ ಘೋರ ಪರಾಕ್ರಮವನ್ನು ಪ್ರಕಟಿಸಿದುದು (ಭೀಷ್ಮ 77/6–36). ಇವನು ದುರ್ಯೋಧನನನ್ನು ಪರಾ ಜಯಗೊಳಿಸಿದುದು (ಭೀಷ್ಮ 79/11–16). ಇವನಿಂದ ಕೃತವರ್ಮನ ಪರಾಜಯ (ಭೀಷ್ಮ 82/60–61). ಇವನ ಅದ್ಭುತ ಪೌರುಷ (ಭೀಷ್ಮ 85/32–40). ಭೀಷ್ಮನ ಸಾರಥಿಯನ್ನು ಕೊಂದು, ಆತನನ್ನು ಯುದ್ಧರಂಗದಿಂದ ಪ್ರತ್ಯೇಕಿಸಿದುದು (ಭೀಷ್ಮ 88/12). ಇವನಿಂದ ಧೃತರಾಷ್ಟ್ರನ ಎಂಟು ಪುತ್ರರ ವಧೆ (ಭೀಷ್ಮ 88/13–29). ಇವನ ಮೂಲಕ ಗಜಸೇನೆಯ ಸಂಹಾರ (ಭೀಷ್ಮ 89/26–31). ಇವನ ಪ್ರಹಾರದಿಂದ ದ್ರೋಣಾಚಾರ್ಯ ಮೂರ್ಛಿತನಾದುದು (ಭೀಷ್ಮ 94/18–19). ಇವನಿಂದ ಧೃತರಾಷ್ಟ್ರನ ಒಂಭತ್ತು ಪುತ್ರರ ವಧೆ (ಭೀಷ್ಮ 96/23–27). ಇವನಿಂದ ಗಜಸೇನೆಯ ಸಂಹಾರ (ಭೀಷ್ಮ 102/31–39). ಇವನಿಂದ ಬಾಹ್ಲೀಕನ ಪರಾಜಯ (ಭೀಷ್ಮ 104/18–27). ಭೂರಿಶ್ರವನೊಂದಿಗೆ ದ್ವಂದ್ವ ಯುದ್ಧ ಮಾಡಿದುದು (ಭೀಷ್ಮ 110/10–11; ಭೀಷ್ಮ 111/44–49). ಇವನು ಹತ್ತು ಪ್ರಮುಖ ಮಹಾರಥಿಗಳೊಂದಿಗೆ ಯುದ್ಧ ಮಾಡಿದುದು ಮತ್ತು ಅದ್ಭುತ ಪರಾಕ್ರಮ ತೋರಿದುದು (ಭೀಷ್ಮ 113ರಿಂದ 114). ಇವನಿಂದ ಗಜಸೇನೆಯ ಸಂಹಾರ (ಭೀಷ್ಮ 116/37–39). ಧೃತರಾಷ್ಟ್ರನ ಮೂಲಕ ಇವನ ಪರಾಕ್ರಮದ ವರ್ಣನೆ (ದ್ರೋಣ 10/13–14). ವಿವಿಂಶತಿಯೊಂದಿಗೆ ಇವನ ಯುದ್ಧ (ದ್ರೋಣ 14/27–30). ಗದಾಯುದ್ಧದಲ್ಲಿ ಶಲ್ಯ ನನ್ನು ಪರಾಜಯಗೊಳಿಸಿದುದು (ದ್ರೋಣ 15/8–32). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/3). ದುರ್ಮರ್ಷಣನೊಂದಿಗೆ ಇವನ ಯುದ್ಧ (ದ್ರೋಣ 25/5–7). ಇವನಿಂದ ಮ್ಲೇಚ್ಛರಾಜ ಅಂಗನ ವಧೆ (ದ್ರೋಣ 26/17). ಭಗದತ್ತ ಮತ್ತು ಆತನ ಗಜರಾಜನೊಂದಿಗೆ ಹೋರಾಟದಲ್ಲಿ ಪರಾಜಿತನಾಗಿ ಓಡಿದುದು (ದ್ರೋಣ 26/19–29). ಇವನು ಕರ್ಣನ ಮೇಲೆ ಆಕ್ರಮಣ ಮಾಡಿದುದು ಮತ್ತು ಆತನ ಹದಿನೈದು ಯೋಧರನ್ನು ಒಟ್ಟಾಗಿ ವಧಿಸಿದುದು (ದ್ರೋಣ 32/63–64). ಚಕ್ರವ್ಯೂಹದಲ್ಲಿ ಜೊತೆ ಯಾಗಿ ಬರುವೆನೆಂದು ಅಭಿಮನ್ಯುವಿಗೆ ಆಶ್ವಾಸನೆ (ದ್ರೋಣ 35/22–23). ಜಯದ್ರಥವಧೆಯ ಬಗೆಗೆ ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ಅನುಮೋದಿಸಿದುದು (ದ್ರೋಣ 73/53). ಚಿತ್ರಸೇನ, ವಿವಿಂಶತಿ ಮತ್ತು ವಿಕರ್ಣರೊಂದಿಗೆ ಇವನ ಯುದ್ಧ (ದ್ರೋಣ 16/31). ಅಲಂಬುಷ ನೊಂದಿಗೆ ಇವನ ಯುದ್ಧ (ದ್ರೋಣ 106/16–17). ಇವನಿಂದ ಅಲಂಬುಷನ ಪರಾಜಯ (ದ್ರೋಣ 108/42). ಅರ್ಜುನನ ಸಮಾಚಾರ ವನ್ನು ತರಲು ಸಾತ್ಯಕಿಯೊಂದಿಗೆ ಹೋಗುತ್ತಿ ದ್ದಾಗ, ಸಾತ್ಯಕಿಯು ಹೇಳಿದುದರಿಂದ, ಯುಧಿ ಷ್ಠಿರನ ರಕ್ಷಣೆಗಾಗಿ ಹಿಂತಿರುಗಿದುದು (ದ್ರೋಣ 112/70–76). ಕೃತವರ್ಮನೊಂದಿಗೆ ಇವನ ಯುದ್ಧ (ದ್ರೋಣ 114/67–80). ಗಾಬರಿಗೊಂಡ ಯುಧಿಷ್ಠಿರನಿಗೆ ಸಮಾಧಾನ ಹೇಳಿದುದು (ದ್ರೋಣ 126/32–34). ಧೃಷ್ಟದ್ಯುಮ್ನನಿಗೆ ಯುಧಿಷ್ಠಿರನ ರಕ್ಷಣೆಯ ಹೊಣೆಯನ್ನು ನೀಡಿ ದುದು (ದ್ರೋಣ 127/4–9). ಯುಧಿಷ್ಠಿರನ ಆಜ್ಞೆಯಿಂದ ಅರ್ಜುನನ ಬಳಿಗೆ ಹೋಗಲು ನಿರ್ಗಮಿಸಿದುದು (ದ್ರೋಣ 127/29). ಇವ ನಿಂದ ದ್ರೋಣಾಚಾರ್ಯನ ಪರಾಜಯ (ದ್ರೋಣ 127/42–54). ಇವನ ಮೂಲಕ ಕುಂಡಭೇದಿ, ಸುಷೇಣ, ದೀರ್ಘಲೋಚನ, ವೃಂದಾರಕ, ಅಭಯ, ರೌದ್ರಕರ್ಮಾ, ದುರ್ವಿಮೋಚನ, ವಿಂದ, ಅನುವಿಂದ, ಸುವರ್ಮಾ ಮತ್ತು ಸುದರ್ಶನರ ವಧೆ (ದ್ರೋಣ 127/60–67). ರಥಸಹಿತನಾಗಿ ದ್ರೋಣಾಚಾರ್ಯನನ್ನು ಈತ ಎಂಟು ಬಾರಿ ದೂರಕ್ಕೆಸೆದುದು (ದ್ರೋಣ 128/18–21). ಶ್ರೀಕೃಷ್ಣ ಮತ್ತು ಅರ್ಜುನನ ಬಳಿಗೆ ಹೋಗಿ, ಯುಧಿಷ್ಠಿರನಿಗೆ ಸೂಚನೆ ಕೊಡುವುದ ಕ್ಕಾಗಿ ಈತ ಸಿಂಹನಾದ ಮಾಡಿದುದು (ದ್ರೋಣ 128/32). ಕರ್ಣನೊಂದಿಗೆ ಇವನ ಯುದ್ಧ. ಅವನಿಂದ ಪರಾಜಿತನಾದುದು (ದ್ರೋಣ 129). ಇವನಿಂದ ದುಃಶಲನ ವಧೆ (ದ್ರೋಣ 129/39). ಕರ್ಣನೊಂದಿಗೆ ಯುದ್ಧ ಮತ್ತು ಆತನನ್ನು ಪರಾಜಯಗೊಳಿಸಿದುದು (ದ್ರೋಣ 131). ಕರ್ಣನೊಂದಿಗೆ ಘೋರಯುದ್ಧ (ದ್ರೋಣ

132ರಿಂದ 133). ಇವನಿಂದ ಧೃತರಾಷ್ಟ್ರ ಪುತ್ರ ದುರ್ಜಯನ ವಧೆ (ದ್ರೋಣ 133/41-42). ಕರ್ಣನೊಂದಿಗೆ ಯುದ್ಧ; ಈತನ ಪರಾಜಯ (ದ್ರೋಣ 134). ಇವನಿಂದ ಧೃತರಾಷ್ಟ್ರ ಪುತ್ರ ದುರ್ಮುಖನ ವಧೆ (ದ್ರೋಣ 134/20-29). ಇವನಿಂದ ದುರ್ಮರ್ಷಣ, ದುಃಸಹ, ದುರ್ಮದ, ದುರ್ಧರ (ದುರಾಧಾರ). ಮತ್ತು ಜಯನ ವಧೆ (ದ್ರೋಣ 135/30-36). ಇವನಿಂದ ಕರ್ಣನ ಪರಾಜಯ (ದ್ರೋಣ 136/17). ಇವನಿಂದ ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ಚಿತ್ರಾಯುಧ ಮತ್ತು ಚಿತ್ರವರ್ಮರ ವಧೆ (ದ್ರೋಣ 136/20-22). ಕರ್ಣನೊಂದಿಗೆ ಇವನ ಘೋರ ಯುದ್ಧ (ದ್ರೋಣ 137). ಇವನಿಂದ ಶತ್ರುಂಜಯ, ಶತ್ರುಸಹ, ಚಿತ್ರ (ಚಿತ್ರಬಾಣ), ಚಿತ್ರಾಯುಧ (ಅಗ್ರಾಯುಧ), ದೃಢ (ದೃಢವರ್ಮಾ), ಚಿತ್ರಸೇನ (ಉಗ್ರಸೇನ). ಮತ್ತು ವಿಕರ್ಣರ ವಧೆ (ದ್ರೋಣ 137/29-30). ಕರ್ಣನೊಂದಿಗೆ ಇವನ ಭಯಂಕರ ಯುದ್ಧ ಮತ್ತು ಆತನ ಪರಾಜಯ (ದ್ರೋಣ 139/9). ಇವನಿಂದ ಕರ್ಣನ ಅನೇಕ ಧನುಸ್ಸು ಗಳು ಕಡಿಯಲ್ಪಟ್ಟದ್ದು (ದ್ರೋಣ 139/19-22). ಅಸ್ತ್ರಹೀನನಾದ ಕರ್ಣನನ್ನು ಹಿಡಿದುಕೊಳ್ಳಲು ಈತ ಅವನ ರಥವನ್ನೇರಿದುದು (ದ್ರೋಣ 139/74-75). ಕರ್ಣನ ಪ್ರಹಾರದಿಂದ ಇವನು ಮೂರ್ಛಿತನಾದುದು (ದ್ರೋಣ 139/91). ಕರ್ಣನನ್ನು ಕೊಲ್ಲಲು ಅರ್ಜುನನೊಡನೆ ಹೇಳಿದುದು (ದ್ರೋಣ 148/3-6). ಇವನ ಗುದ್ದು ಗಳಿಂದಲೂ ಏಟಿನಿಂದಲೂ ಕಲಿಂಗ ರಾಜ ಕುಮಾರನ ವಧೆ (ದ್ರೋಣ 155/24). ಇವನ ಗುದ್ದು ಮತ್ತು ಏಟುಗಳಿಂದ ಜಯರಾತನ ವಧೆ (ದ್ರೋಣ 155/28). ಇವನ ಹೊಡೆತ ಮತ್ತು ಗುದ್ದುಗಳಿಂದ ದುರ್ಮದ (ದುರ್ಧರ್ಷ) ಮತ್ತು ದುಷ್ಕರ್ಣರ ವಧೆ (ದ್ರೋಣ 155/40). ಇವನ ಪರಿಘದ ಪ್ರಹಾರದಿಂದ ಸೋಮದತ್ತನು ಮೂರ್ಛಿತನಾದುದು (ದ್ರೋಣ 157/10-11). ಇವನಿಂದ ಬಾಹ್ಲೀಕನ ವಧೆ (ದ್ರೋಣ 157/11-15). ಇವನಿಂದ ನಾಗದತ್ತ, ದೃಢರಥ (ದೃಢಾಶ್ವ), ಮಹಾಬಾಹು, ಅಯೋಭುಜ (ಅಯೋಬಾಹು), ದೃಢ (ದೃಢಕ್ಷತ್ರ), ಸುಹಸ್ತ, ವಿರಜಾ, ಪ್ರಮಾಥಿ, ಉಗ್ರ (ಉಗ್ರಶ್ರವಾ) ಮತ್ತು ಅನುಯಾಯಿ (ಅಗ್ರಯಾಯಿ) ಎಂಬವರ ವಧೆ (ದ್ರೋಣ 157/16-19). ಇವನಿಂದ ಶತಚಂದ್ರನ ವಧೆ (ದ್ರೋಣ 157/23). ಇವನಿಂದ ಶಕುನಿಯ ಸಹೋದರ ಗವಾಕ್ಷ, ಶರಭ, ವಿಭು, ಸುಭಗ ಮತ್ತು ಭಾನುದತ್ತರ ವಧೆ (ದ್ರೋಣ 157/23-26). ದ್ರೋಣಾಚಾರ್ಯನೊಂದಿಗೆ ಇವನು ಯುದ್ಧ ಮಾಡುತ್ತಿದ್ದಾಗ ಕೌರವ ಸೇನೆಯನ್ನು ಚಲ್ಲಾಪಿಲ್ಲಿಗೊಳಿಸಿದುದು (ದ್ರೋಣ 161). ದುರ್ಯೋಧನನೊಂದಿಗೆ ಇವನ ಯುದ್ಧ ಮತ್ತು ಆತನ ಪರಾಜಯ (ದ್ರೋಣ 166/43-58). ಅಲಾಯುಧನೊಂದಿಗೆ ಇವನ ಘೋರ ಯುದ್ಧ (ದ್ರೋಣ 177). ಇವನಿಂದ ಅರ್ಜುನನಿಗೆ ಪ್ರೋತ್ಸಾಹ (ದ್ರೋಣ 186/9-11). ಧೃಷ್ಟದ್ಯುಮ್ನನನ್ನು ನಿಂದಿಸಿದುದು (ದ್ರೋಣ 186/51-54). ಕರ್ಣನೊಂದಿಗೆ ಹೋರಾಡಿ ಪರಾಜಿತನಾದುದು (ದ್ರೋಣ 188/10-22). ಕರ್ಣನೊಂದಿಗೆ ಇವನ ಯುದ್ಧ (ದ್ರೋಣ 189/50-55). ಅಶ್ವತ್ಥಾಮಾ ಎಂಬ ಆನೆಯನ್ನು ಕೊಂದು, ದ್ರೋಣಾಚಾರ್ಯನಿಗೆ ಅಶ್ವತ್ಥಾಮನು ಸತ್ತನೆಂಬ ಸುಳ್ಳು ಸುದ್ದಿಯನ್ನು ಹೇಳಿದುದು (ದ್ರೋಣ 190/15-16). ದ್ರೋಣಾಚಾರ್ಯನನ್ನು ನಿಂದಿಸುತ್ತಾ ಅಶ್ವತ್ಥಾಮನ ಮರಣವನ್ನು ತಿಳಿಸಿದುದು (ದ್ರೋಣ 192/37-42). ಅರ್ಜುನನೊಂದಿಗೆ ಈತನ ವೀರೋಚಿತ ಉದ್ಗಾರ (ದ್ರೋಣ 197/3-22). ಧೃಷ್ಟದ್ಯುಮ್ನನೊಂದಿಗೆ ವಾಗ್ಬಾಣಗಳಿಂದ ಹೋರಾಡುತ್ತಿದ್ದ ಸಾತ್ಯಕಿಯನ್ನು ಹಿಡಿದು ಶಾಂತಗೊಳಿಸಿದುದು (ದ್ರೋಣ 198/50-52). ಇವನ ವೀರೋಚಿತ ಉದ್ಗಾರ ಮತ್ತು ನಾರಾಯಣಾಸ್ತ್ರದ ವಿರುದ್ಧವಾಗಿ ಯುದ್ಧ ಮಾಡಿದುದು (ದ್ರೋಣ 199/45-63). ಅಶ್ವತ್ಥಾಮನೊಂದಿಗೆ ಇವನ ಘೋರಯುದ್ಧ ಮತ್ತು ಸಾರಥಿ ಮಡಿದು ಹೋದುದರಿಂದಾಗಿ ಯುದ್ಧದಿಂದ ತೊಲಗಿದುದು (ದ್ರೋಣ 200/87-128). ಇವನಿಂದ ಕುಲೂತನರೇಶ ಕ್ಷೇಮಧೂರ್ತಿಯ ವಧೆ (ಕರ್ಣ 12/25-44). ಅಶ್ವತ್ಥಾಮನೊಂದಿಗೆ ಇವನ ಘೋರಯುದ್ಧ. ಅವನ ಪ್ರಹಾರದಿಂದ ಮೂರ್ಛಿತನಾದುದು (ಕರ್ಣ 15). ಇವನಿಂದ ಕರ್ಣಪುತ್ರ ಭಾನುಸೇನನ ವಧೆ (ಕರ್ಣ

48/27). ಕರ್ಣನನ್ನು ಸೋಲಿಸಿ ಅವನ ನಾಲಿಗೆಯನ್ನು ಕಡಿಯಲು ಸಿದ್ಧನಾದುದು (ಕರ್ಣ 50/47). ಕರ್ಣನೊಂದಿಗೆ ಇವನ ಘೋರ ಯುದ್ಧ. ಗಜಸೇನೆ, ರಥಸೇನೆ ಮತ್ತು ಕುದುರೆ ಸವಾರರ ವಧೆ (ಕರ್ಣ 51). ಇವನಿಂದ ವಿವಿತ್ಸು, ವಿಕಟ, ಸಮ, ಕ್ರಾಥ (ಕ್ರಥನ), ನಂದ ಮತ್ತು ಉಪನಂದರ ವಧೆ (ಕರ್ಣ 51/12–19). ಇವನಿಂದ ಕೌರವ ಸೇನೆಯ ಮಹಾಸಂಹಾರ (ಕರ್ಣ 56/70–81). ಇವನಿಂದ ದುರ್ಯೋಧನನ ಪರಾಜಯ ಮತ್ತು ಗಜಸೇನೆಯ ಸಂಹಾರ (ಕರ್ಣ 61/53; 62/74). ಯುದ್ಧದ ಸರ್ವಹೊಣೆಯನ್ನೂ ತಾನೇ ವಹಿಸಿ, ಅರ್ಜುನನನ್ನು ಯುಧಿಷ್ಠಿರನ ಬಳಿಗೆ ಕಳುಹಿಸಿದುದು (ಕರ್ಣ 65/10). ತನ್ನ ಸಾರಥಿ ವಿಶೋಕನೊಂದಿಗೆ ಇವನ ಮಾತುಕತೆ (ಕರ್ಣ 76). ಇವನಿಂದ ಕೌರವ ಸೇನೆಯ ಭೀಷಣ ಸಂಹಾರ ಮತ್ತು ಶಕುನಿಯ ಪರಾಜಯ (ಕರ್ಣ 77/24–70). (ಕರ್ಣ 81/24–35). ದುಃಶಾಸನನೊಂದಿಗೆ ಇವನ ಘೋರ ಯುದ್ಧ (ಕರ್ಣ 82/33 ರಿಂದ 83/10). ದುಃಶಾಸನನ ವಧೆ ಮಾಡಿ, ಅವನ ರಕ್ತಪಾನ ಮಾಡಿದುದು (ಕರ್ಣ 83/28–29). ಇವನಿಂದ ಧೃತರಾಷ್ಟ್ರನ ಹತ್ತು ಪುತ್ರ(ನಿಷಂಗೀ, ಕವಚೀ, ಪಾಶೀ, ದಂಡಧಾರ, ಧನುರ್ಗ್ರಹ, ಅಲೋಲುಪ, ಶಲ, ಸಂಧ (ಸತ್ಯಸಂಧ), ವಾತವೇಗ ಮತ್ತು ಸುವರ್ಜಾ)ರ ವಧೆ (ಕರ್ಣ 84/2–6). ಕರ್ಣವಧೆಗಾಗಿ ಅರ್ಜುನನನ್ನು ಪ್ರೋತ್ಸಾಹಿಸಿದುದು (ಕರ್ಣ 89/37–42). ಇವನಿಂದ ಇಪ್ಪತ್ತೈದು ಸಾವಿರ ಕಾಲಾಳುಗಳ ವಧೆ (ಕರ್ಣ 93/28). ಇವನಿಂದ ಕೃತವರ್ಮನ ಪರಾಜಯ (ಶಲ್ಯ 11/45–47). ಇವನಿಂದ ಶಲ್ಯನ ಪರಾಜಯ (ಶಲ್ಯ 11/61–62). ಶಲ್ಯನೊಂದಿಗೆ ಇವನ ಗದಾಯುದ್ಧ (ಶಲ್ಯ 12/12–27). ಶಲ್ಯನೊಂದಿಗೆ ಇವನ ಘೋರ ಯುದ್ಧ (ಶಲ್ಯ 13; ಶಲ್ಯ 15/16–27). ಇವನಿಂದ ದುರ್ಯೋಧನನ ಪರಾಜಯ (ಶಲ್ಯ 16/42–44). ಇವನಿಂದ ಶಲ್ಯನ ಸಾರಥಿ ಮತ್ತು ಕುದುರೆಗಳ ವಧೆ (ಶಲ್ಯ 17/27). ಇವನಿಂದ ಇಪ್ಪತ್ತೊಂದು ಸಾವಿರ ಪದಾತಿಗಳ ವಧೆ (ಶಲ್ಯ 19/49–50). ಇವನ ಮೂಲಕ ಗಜಸೇನೆಯ ಸಂಹಾರ (ಶಲ್ಯ 25/30–36). ಇವನಿಂದ ಧೃತರಾಷ್ಟ್ರನ ಹನ್ನೊಂದು ಪುತ್ರ (ದುರ್ಮರ್ಷಣ), ಶ್ರುತಾಂತ (ಚಿತ್ರಾಂಗ), ಚೈತ್ರ, ಭೂರಿಬಲ (ಭೀಮಬಲ), ರವಿ, ಜಯತ್ಸೇನ, ಸಂಜಾತ, (ದುರ್ವಿಷಾಹ), ದುರ್ವಿಮೋಚನ, ದುಷ್ಪ್ರಧರ್ಷ (ದುಷ್ಪ್ರಧರ್ಷಣ), ಶ್ರುತರ್ವಾರ ವಧೆ (ಶಲ್ಯ 26/4–32). ಇವನಿಂದ ಧೃತರಾಷ್ಟ್ರ ಪುತ್ರ ಸುದರ್ಶನನ ವಧೆ (ಶಲ್ಯ 27/49–50). ಗದಾಯುದ್ಧ ಪ್ರಾರಂಭದಲ್ಲಿ ದುರ್ಯೋಧನನಿಗೆ ಎಚ್ಚರಿಕೆಯನ್ನಿತ್ತದ್ದು (ಶಲ್ಯ 33/43–51). ಇವನು ಯುಧಿಷ್ಠಿರನಲ್ಲಿ ತನ್ನ ಉತ್ಸಾಹ ಪ್ರಕಟಿಸಿದುದು (ಶಲ್ಯ 56/16–27). ದುರ್ಯೋಧನನಿಗೆ ಎಚ್ಚರಿಕೆ ಕೊಟ್ಟದ್ದು (ಶಲ್ಯ 56/29–36). ದುರ್ಯೋಧನನೊಂದಿಗೆ ಭಯಂಕರ ಗದಾಯುದ್ಧ (ಶಲ್ಯ 57). ಗದಾಪ್ರಹಾರದಿಂದ ದುರ್ಯೋಧನನ ತೊಡೆಯನ್ನು ಮುರಿದುದು (ಶಲ್ಯ 58/47). ಇವನು ದುರ್ಯೋಧನನನ್ನು ತುಚ್ಛೀಕರಿಸಿ, ಅವನ ತಲೆಯನ್ನು ಕಾಲಿಂದ ತುಳಿದುದು (ಶಲ್ಯ 59/4–12). ಯುಧಿಷ್ಠಿರನೊಂದಿಗೆ ವಿಜಯ ಸೂಚಕವಾದ ಮಾತುಕತೆ (ಶಲ್ಯ 60/43–46). ದುರ್ಯೋಧನನ್ನು ಬೀಳಿಸಿದ ಬಳಿಕ, ಪಾಂಡವ ಸೈನಿಕರಿಂದ ಇವನ ಪ್ರಶಂಸೆ (ಶಲ್ಯ 61/7–16). ಅಶ್ವತ್ಥಾಮನನ್ನು ಕೊಲ್ಲಲು ಈತ ಹೊರಟದ್ದು (ಸೌಪ್ತಿಕ 11/28–38). ಗಂಗಾತಟದಲ್ಲಿ ವ್ಯಾಸರ ಬಳಿ ಕುಳಿತಿದ್ದ ಅಶ್ವತ್ಥಾಮನನ್ನು ಯುದ್ಧಕ್ಕೆ ಕರೆದದ್ದು (ಸೌಪ್ತಿಕ 13/16–17). ಅಶ್ವತ್ಥಾಮನ ಮಣಿಯನ್ನು ದ್ರೌಪದಿಗೆ ಕೊಟ್ಟು ಆಕೆಯನ್ನು ಶಾಂತಗೊಳಿಸಿದುದು (ಸೌಪ್ತಿಕ 16/26–33). ತನ್ನನ್ನು ಸಮರ್ಥಿಸಿಕೊಳ್ಳುತ್ತಾ ಗಾಂಧಾರಿಯೊಂದಿಗೆ ಕ್ಷಮಾಯಾಚನೆ ಮಾಡಿದುದು (ಸ್ತ್ರೀ 15/2–11; 15–20). ಸನ್ಯಾಸವನ್ನು ವಿರೋಧಿಸಿ, ತನ್ನ ಕರ್ತವ್ಯಪಾಲನೆಗೆ ಒತ್ತು ನೀಡುತ್ತಾ, ಯುಧಿಷ್ಠಿರನಿಗೆ ಸಮಾಧಾನ ನೀಡಿದುದು (ಶಾಂತಿ 10). ಭೀಮಸೇನನು, ಹಿಂದೆ ಅನುಭವಿಸಿದ ದುಃಖವನ್ನೆಲ್ಲಾ ಜ್ಞಾಪಿಸಿಕೊಡುತ್ತಾ, ಮೋಹವನ್ನು ತ್ಯಜಿಸಿ, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು, ರಾಜ್ಯ ಶಾಸನವನ್ನೂ, ಯಜ್ಞವನ್ನೂ ಮಾಡುವಂತೆ ಯುಧಿಷ್ಠಿರನ್ನು ಪ್ರೇರಿಸಿದುದು (ಶಾಂತಿ 16). ಯುಧಿಷ್ಠಿರನಿಂದ ಯುವರಾಜ ಪದವಿಯಲ್ಲಿ

ಈತನ ನೇಮಕ (ಶಾಂತಿ 41/9). ಯುಧಿಷ್ಠಿರ ನಿಂದ ಇವನಿಗೆ ವಾಸಿಸುವುದಕ್ಕೆ ದುರ್ಯೋಧನನ ಅರಮನೆ ಕೊಡಲ್ಪಟ್ಟಿತು (ಶಾಂತಿ 44/6–7). ಯುಧಿಷ್ಠಿರನು ಕೇಳಿದಾಗ, ಭೀಮಸೇನನು ತ್ರಿವರ್ಗ ಗಳಲ್ಲಿ ಕರ್ಮದ ಪ್ರಾಧಾನ್ಯವನ್ನು ಕೇಳಿದಾಗ, ಭೀಮಸೇನನು ತ್ರಿವರ್ಗಗಳಲ್ಲಿ ಕರ್ಮದ ಪ್ರಾಧಾನ್ಯವನ್ನು ಹೇಳಿದುದು (ಶಾಂತಿ 167/29–40). ಯುಧಿಷ್ಠಿರನು ಕೇಳಿದಾಗ, ಶಂಕರನ ಆರಾಧನೆಯ ಮೂಲಕ, ಮರುತ್ತನು ಬಿಟ್ಟು ಹೋದ ಧನವನ್ನು ತರಲು ಸಲಹೆ ನೀಡಿದುದು (ಆಶ್ವ 63/11–15). ವ್ಯಾಸರ ಆಜ್ಞೆಯಂತೆ, ರಾಜ್ಯ ಮತ್ತು ನಗರದ ರಕ್ಷಣೆಗೆ ನಕುಲ ಸಹಿತ ಭೀಮ ಸೇನನ ನೇಮಕ (ಆಶ್ವ 72/19). ಯುಧಿಷ್ಠಿರನ ಆಜ್ಞೆ ಪ್ರಕಾರ, ಭೀಮಸೇನನು ಬ್ರಾಹ್ಮಣರೊಂದಿಗೆ ಹೋಗಿ, ಯಜ್ಞ ಭೂಮಿಯನ್ನು ಅಳತೆ ಮಾಡಿಸಿ ದುದು ಮತ್ತು ಅಲ್ಲಿ ಯಜ್ಞಮಂಟಪ, ನೂರಾರು ನಿವಾಸ ಸ್ಥಾನ ಮತ್ತು ಬ್ರಾಹ್ಮಣರು ಉಳಕೊಳ್ಳಲು ಉತ್ತಮ ಭವನಗಳು ಇತ್ಯಾದಿಗಳನ್ನು ಶಿಲ್ಪ ಶಾಸ್ತ್ರಾನುಸಾರವಾಗಿ ನಿರ್ಮಾಣ ಮಾಡಿಸಿದುದು, ರಾಜರನ್ನು ಆಮಂತ್ರಿಸಲು ದೂತರನ್ನು ಕಳುಹಿಸಿ ದುದು (ಆಶ್ವ 85/7–17). ಆಗಮಿಸಿದ ರಾಜರ ಪೂಜೆಮಾಡಲು ಯುಧಿಷ್ಠಿರನಿಂದ ಭೀಮನಿಗೆ ಆದೇಶ (ಆಶ್ವ 86/1–3). ಬಭ್ರುವಾಹನನು ಇವನ ಪಾದಕ್ಕೆರಗಿದುದು ಮತ್ತು ಭೀಮಸೇನನು ಸತ್ಕಾರಪೂರ್ವಕ ಅವನಿಗೆ ಅಪಾರಧನವನ್ನಿತ್ತದ್ದು (ಆಶ್ವ 88/6–11). ಶ್ರೀಕೃಷ್ಣನು ದ್ವಾರಕೆಗೆ ಹೋಗು ವಾಗ, ಭೀಮಸೇನನು ಅವನ ರಥದ ಮೇಲೇರಿ, ಅವನ ಮೇಲೆ ಛತ್ರ ಹಿಡಿದುದು (ಆಶ್ವ 92). ಧೃತರಾಷ್ಟ್ರನ ಬಗೆಗೆ ಭೀಮನ ಕೋಪ ಮತ್ತು ದುರ್ಭಾವನೆ, ತನಗೆ ಕೃತಜ್ಞರಾದ ವ್ಯಕ್ತಿಗಳ ಮೂಲಕ, ಧೃತರಾಷ್ಟ್ರನ ಆಜ್ಞೆಯನ್ನು ಭಂಗ ಪಡಿಸಿದುದು. ಅವರಿಗೆ ಕೇಳಿಸುವಂತೆ, ದುರ್ಯೋ ಧನ, ದುಃಶಾಸನನೇ ಮೊದಲಾದವರನ್ನು ದಮನ ಮಾಡಿದ, ತನ್ನ ಚಂದನ ಚರ್ಚಿತ ಭುಜಗಳ ಬಲವನ್ನು ಪ್ರಶಂಸೆ ಮಾಡಿದುದು; ಧೃತರಾಷ್ಟ್ರ ಮತ್ತು ಗಾಂಧಾರಿಯ ಮನದಲ್ಲಿ ಉದ್ವೇಗ ವನ್ನುಂಟುಮಾಡಿದುದು (ಆಶ್ರಮ 3/3–13). ಧೃತರಾಷ್ಟ್ರನಿಂದ ಶ್ರಾದ್ಧಕ್ಕಾಗಿ ಧನ ಕೇಳಲ್ಪಟ್ಟಾಗ, ಭೀಮಸೇನನಿಂದ ವಿರೋಧ (ಆಶ್ರಮ 11/7–24). ಅರ್ಜುನನು ಭೀಮಸೇನನಿಗೆ ಸಮಾಧಾನ ಹೇಳಿದುದು (ಆಶ್ರಮ 12/1–2). ವನಗಮನ ಮಾಡುವಾಗ, ಕುಂತಿ ಯುಧಿಷ್ಠಿರನೊಡನೆ ಭೀಮಸೇನನೇ ಮೊದಲಾದವರೊಡನೆ ಸಂತೋಷ ಕರವಾಗಿ ವರ್ತಿಸುವಂತೆ ಆದೇಶ ನೀಡಿದುದು (ಆಶ್ರಮ 16/15). ಭೀಮಸೇನನು ಗಜರಾಜರ ಸೇನಾಸಮೇತನಾಗಿ ಗಜಾರೂಢನಾಗಿ, ಧೃತರಾಷ್ಟ್ರ ಮತ್ತು ಕುಂತಿ ಮೊದಲಾದವರನ್ನು ಭೇಟಿ ಮಾಡಲು, ಸಹೋದರರೊಂದಿಗೆ ಕಾಡಿಗೆ ಹೋದುದು (ಆಶ್ರಮ 23/9). ಭೀಮಸೇನನೇ ಮೊದಲಾದವರ ಆಗಮನವನ್ನು ಕಂಡು, ಕುಂತಿಯು ಹುಚ್ಚು ಆತುರದಿಂದ ಮುಂದೆ ಬಂದದ್ದು (ಆಶ್ರಮ 24/11). ಸಂಜಯನು ಋಷಿಗಳಿಗೆ ಭೀಮಸೇನ ಮತ್ತು ಆತನ ಪತ್ನಿಯ ಪರಿಚಯ ನೀಡಿದುದು (ಆಶ್ರಮ 25/6,12). ಭೀಮಸೇನನು ತನ್ನ ಸಹೋದರರೊಂದಿಗೆ ಮಹಾಪ್ರಸ್ಥಾನದ ನಿರ್ಧಾರ ಕೈಗೊಂಡು, ತನ್ನ ಆಭೂಷಣಗಳನ್ನು ಕಳಚಿಟ್ಟು, ಅವರೊಂದಿಗೆ ಮಹಾಪ್ರಸ್ಥಾನ ಮಾಡಿದುದು (ಮಹಾಪ್ರಸ್ಥಾನ 1/20–25). ದಾರಿಯಲ್ಲಿ ದ್ರೌಪದಿ, ಸಹದೇವ, ನಕುಲ ಮತ್ತು ಅರ್ಜುನರು ಕ್ರಮವಾಗಿ ಬಿದ್ದಾಗ, ಇವನು ಯುಧಿಷ್ಠಿರನೊಡನೆ ಕಾರಣ ಕೇಳಿದುದು (ಮಹಾಪ್ರಸ್ಥಾನ 2). ಸ್ವರ್ಗದಲ್ಲಿ ಈತ ಮರು ದ್ಗಣಗಳಿಂದ ಆವರಿಸಲ್ಪಟ್ಟು, ವಾಯುದೇವನ ಬಳಿ ವಿರಾಜಮಾನನಾಗಿ ಕಾಣಿಸಿದುದು (ಸ್ವರ್ಗಾ 4/7–8). ಮಹಾಭಾರತದಲ್ಲಿ ಬಂದಿರುವ ಭೀಮ ಸೇನನ ಹೆಸರು – ಅಚ್ಯುತಾನುಜ, ಅನಿಲಾತ್ಮಜ, ಅರ್ಜುನಾಗ್ರಜ, ಅರ್ಜುನಪೂರ್ವಜ, ಬಲ್ಲವ, ಭೀಮ, ಧನ್ವಾ, ಜಯ, ಕೌಂತೇಯ, ಕೌರವ, ಕುರುಶಾರ್ದೂಲ, ಮಾರುತಾತ್ಮಜ, ಮಾರುತಿ, ಪಾಂಡವ, ಪಾರ್ಥ, ಪವನಾತ್ಮಜ, ಪ್ರಭಂಜನಾ ಸುತ, ರಾಕ್ಷಸಕಂಟಕ, ಸಮೀರಣ ಸುತ, ವಾಯು ಪುತ್ರ, ವಾಯುಸುತ, ವೃಕೋದರ ಇತ್ಯಾದಿ.

(5) ಇವನು ಕಾಶೀರಾಜ. ದಿವೋದಾಸನ ತಂದೆ (ಉದ್ಯೋಗ 117/1).

**ಭೀಷ್ಮ** – ಇವನು ಶಾಂತನುವಿನ ಮೂಲಕ ಗಂಗೆಯ ಗರ್ಭದಿಂದ, ಎಂಟನೇ ವಸುವಿನ ಅಂಶದಿಂದ ಹುಟ್ಟಿದ್ದನು. ಇವನ ಹೆಸರು ದೇವವ್ರತ ಎಂದಾಗಿತ್ತು (ಆದಿ 63/91; ಆದಿ

95/47, ಆದಿ 100/21). ಬಾಲ್ಯದಲ್ಲಿಯೇ ಇವನು ಗಂಗಾಪ್ರವಾಹಕ್ಕೆ ತಡೆಯುಂಟುಮಾಡಿ, ಅಸ್ತ್ರವಿದ್ಯೆಯನ್ನು ಅಭ್ಯಸಿಸಿದುದು (ಆದಿ 100/26). ಗಂಗೆಯ ಮೂಲಕ ಶಾಂತನುವಿಗೆ ಈತನ ಪರಿಚಯವಾದುದು ಮತ್ತು ಆಕೆ ಪ್ರಶಂಸೆ ಮಾಡಿದುದು (ಆದಿ 100/33–40). ಯುವ ರಾಜ ಪದದಲ್ಲಿ ಇವನ ಅಭಿಷೇಕ (ಆದಿ 100/43). ತಂದೆಯು ದುಃಖಿತನಾದುದನ್ನು ಕಂಡು, ಅವನಿಗಾಗಿ ದಾಶರಾಜನೊಡನೆ ಸತ್ಯವತಿಯನ್ನು ಯಾಚಿಸಿದುದು (ಆದಿ 100/75). ತಂದೆಯ ಮನೋರಥವನ್ನು ಈಡೇರಿಸುವುದಕ್ಕಾಗಿ, 'ಸತ್ಯವತಿ ಕುಮಾರನೇ ರಾಜನಾಗುವನು' ಎಂದು ಈತನು ದುಷ್ಕರ ಪ್ರತಿಜ್ಞೆ ಮಾಡಿದುದು (ಆದಿ 100/87). ಸಮಸ್ತ ದೇವತೆಗಳನ್ನು, ಋಷಿಗಳನ್ನೂ ಸಾಕ್ಷಿಯಾಗಿಟ್ಟು, ತಾನು ಜೀವನಪರ್ಯಂತ ಅಖಂಡ ಬ್ರಹ್ಮಚಾರಿಯಾಗಿರುತ್ತೇನೆಂದು ಈತನಿಂದ ಭೀಷಣ ಪ್ರತಿಜ್ಞೆ (ಆದಿ 100/94–96). ಇವನ ಮೇಲೆ ದೇವತೆಗಳಿಂದ ಪುಷ್ಪವೃಷ್ಟಿ ಮತ್ತು ಇವನಿಗೆ 'ಭೀಷ್ಮ'ನೆಂಬ ಹೆಸರು ಇಡಲ್ಪಟ್ಟದ್ದು (ಆದಿ 100/98). ತಂದೆಯಿಂದ ಇವನಿಗೆ ಇಚ್ಛಾ ಮರಣದ ವರದಾನ (ಆದಿ 100/102). ಇವನು ಚಿತ್ರಾಂಗದನ ಅಂತ್ಯೇಷ್ಟಿ ಸಂಸ್ಕಾರ ಮಾಡಿಸಿದುದು (ಆದಿ 101/11). ಸ್ವಯಂವರಕ್ಕೆ ಬಂದಿದ್ದ ಶಾಲ್ವನೇ ಮೊದಲಾದ ಬೇರೆ ಬೇರೆ ರಾಜರನ್ನು ಗೆದ್ದು, ಇವನು ವಿಚಿತ್ರವೀರ್ಯನಿಗಾಗಿ ಕಾಶೀರಾಜ ಕನ್ಯೆಯರನ್ನು ಅಪಹಾರ ಮಾಡಿದುದು (ಆದಿ 102/11–58). ಇವನಿಂದ ಅಷ್ಟವಿಧ ವಿವಾಹಗಳ ಸ್ವರೂಪದ ವರ್ಣನೆ (ಆದಿ 102/12–15). ವಿಚಿತ್ರವೀರ್ಯನ ಅಂತ್ಯೇಷ್ಟಿ ಸಂಸ್ಕಾರ ಮಾಡಿಸಿದುದು (ಆದಿ 102/73). ಇವನು ಸಿಂಹಾಸನವನ್ನೇರುವಂತೆ, ವಂಶರಕ್ಷಣೆಗಾಗಿ ಅಂಬಿಕೆಯೇ ಮೊದಲಾದವರ ಗರ್ಭದಲ್ಲಿ ಪುತ್ರೋತ್ಪಾದನೆ ಮಾಡುವಂತೆ, ವಿವಾಹವಾಗುಂತೆ ಸತ್ಯವತಿ ಒತ್ತಾಯಿಸಿದುದು (ಆದಿ 103/10–11). ಯಾವ ಪರಿಸ್ಥಿತಿಯೇ ಬರಲಿ, ಎಂತಹ ಮೌಲ್ಯವನ್ನಾದರೂ ತೆತ್ತು, ಸತ್ಯವನ್ನು ಬಿಡದಿರುವೆನೆಂದೂ, ಸ್ತ್ರೀ ಸಹವಾಸ ಮಾಡದಿರುವೆನೆಂದೂ ಇವನ ಘೋಷಣೆ (ಆದಿ 103/12–18). ವಿಚಿತ್ರವೀರ್ಯನ ಕ್ಷೇತ್ರ(ಪತ್ನಿಯರು)ದಲ್ಲಿ ಬ್ರಾಹ್ಮಣರ ಮೂಲಕ ಸಂತಾನೋತ್ಪತ್ತಿ ಮಾಡಬಹುದೆಂದು ಸತ್ಯವತಿಗೆ ಸಲಹೆಯನ್ನಿತ್ತದ್ದು (ಆದಿ 104/12). ಇವನಲ್ಲಿ ಸತ್ಯವತಿ(ವ್ಯಾಸ ಜನ್ಮಸಂಬಂಧವಾದ)ಯ ಆತ್ಮಕಥನ (ಆದಿ 104/5–16). ವಿಚಿತ್ರವೀರ್ಯನ ಪತ್ನಿಯರಲ್ಲಿ, ವ್ಯಾಸನ ಮೂಲಕ ಸಂತಾನೋತ್ಪತ್ತಿ ಮಾಡಿಸುವಂತೆ ಇವನಿಗೆ ಸತ್ಯವತಿಯ ಸಲಹೆ (ಆದಿ 104/18–19). ಸತ್ಯವತಿಯ ಈ ಪ್ರಸ್ತಾವಕ್ಕೆ ಇವನ ಅನುಮೋದನೆ (ಆದಿ 104/22–23). ಧೃತರಾಷ್ಟ್ರನಿಗೆ ಗಾಂಧಾರಿಯನ್ನು ಒಪ್ಪಿಸುವಂತೆ ಇವನು ಸುಬಲನ ಬಳಿಗೆ ದೂತರನ್ನೂ ಕಳುಹಿಸಿದುದು (ಆದಿ 109/11). ಮದ್ರರಾಜನ ನಗರಕ್ಕೆ ಹೋಗಿ, ಇವನು ಪಾಂಡುವಿಗಾಗಿ ಮಾದ್ರಿಯನ್ನು ಯಾಚಿಸಿದುದು (ಆದಿ 112/2–7). ಮದ್ರರಾಜನು ಈತನಿಂದ ಶುಲ್ಕ ಸ್ವೀಕಾರ ಮಾಡಿ, ಮಾದ್ರಿಯನ್ನು ಪಾಂಡುವಿಗೋಸ್ಕರ ಸಮರ್ಪಿಸಿದನು (ಆದಿ 112/14–16). ಇವನು ರಾಜಾದೇವಕನ ಕನ್ಯೆಯನ್ನು ತಂದು ವಿದುರನ ವಿವಾಹವನ್ನು ಪೂರೈಸಿದುದು (ಆದಿ 113/12–13). ಶತಶೃಂಗ ನಿವಾಸಿಗಳಾದ ಋಷಿಗಳು, ಇವನಿಗೆ ಪಾಂಡುವಿನ ಪರಲೋಕವಾಸ ಮತ್ತು ಮಾದ್ರಿಯ ಸಹಗಮನದ ಸಮಾಚಾರವನ್ನು ಹೇಳಿ, ಪಾಂಡವರ ಜನ್ಮವೃತ್ತಾಂತ ಹೇಳಿದುದು (ಆದಿ 125/22–33). ಪಾಂಡುವಿನ ನಿಧನಕ್ಕಾಗಿ ಇವನು ಶೋಕಿಸಿದುದು ಮತ್ತು ಆತನಿಗೆ ಜಲಾಂಜಲಿಯನ್ನಿತ್ತದ್ದು (ಆದಿ 126/27–28). ಇವನ ಮೂಲಕ ಪಾಂಡುವಿನ ಶ್ರಾದ್ಧ ಪೂರೈಸಲ್ಪಟ್ಟದ್ದು (ಆದಿ 127/1). ರಾಜಕುಮಾರರ ಶಿಕ್ಷಣಕ್ಕಾಗಿ ಯೋಗ್ಯಗುರುವನ್ನು ಹುಡುಕಿದುದು (ಆದಿ 129/24–26). ರಾಜಕುಮಾರರ ಶಿಕ್ಷಣಕ್ಕಾಗಿ ಇವನು ದ್ರೋಣಾಚಾರ್ಯನನ್ನು ತನ್ನಲ್ಲಿ ಗೌರವಪೂರ್ವಕವಾಗಿ ಇರಿಸಿಕೊಂಡದ್ದು (ಆದಿ 130/77–79). ಪಾಂಡವರು ಅರಗಿನಾಲಯದಲ್ಲಿ ಸುಟ್ಟುಹೋದ ವಾರ್ತೆಕೇಳಿ ಇವನು ವಿಲಾಪ ಮಾಡಿದುದು; ಪಾಂಡವರಿಗೆ ಜಲಾಂಜಲಿ ಕೊಡಲು ಸಿದ್ಧನಾದ ಭೀಷ್ಮನಿಗೆ, ವಿದುರನು ಪಾಂಡವರು ಜೀವಂತವಾಗಿರುವ ರಹಸ್ಯವನ್ನು ಹೇಳಿದುದು; ಜಲಾಂಜಲಿಯನ್ನು ನಿಷೇಧಿಸಿದುದು (ಆದಿ 149/18). ದುರ್ಯೋಧನನು ಪಾಂಡವರಿಗೆ ಅರ್ಧರಾಜ್ಯ ಕೊಡುವಂತೆ ಭೀಷ್ಮನ ಸಲಹೆ

(ಆದಿ 202). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಆಗಮಿಸಿದುದು (ಸಭಾ 34/5). 'ಯಾವ ಕೆಲಸ ಆಗಿದೆ? ಯಾವುದು ಆಗಿಲ್ಲ' – ಇದರ ಮೇಲ್ವಿಚಾರಣೆಗೋಸ್ಕರ ಯುಧಿಷ್ಠಿರನು ಈತನನ್ನು ನಿಯೋಜಿಸಿದ್ದನು (ಸಭಾ 35/6). ರಾಜಸೂಯ ಯಜ್ಞದಲ್ಲಿ ಶ್ರೀಕೃಷ್ಣನ ಅಗ್ರಪೂಜೆ ಮಾಡುವಂತೆ ಇವನು ಯುಧಿಷ್ಠಿರನಿಗೆ ಆದೇಶ ನೀಡಿದುದು (ಸಭಾ 36/28–29). ಇವನು ಶಿಶುಪಾಲನ ಆಕ್ಷೇಪ ಗಳನ್ನು ಖಂಡಿಸಿ, ಶ್ರೀಕೃಷ್ಣನ ಮಹಿಮೆಯನ್ನು ವಿಸ್ತಾರಪೂರ್ವಕ ವರ್ಣಿಸಿದುದು (ಸಭಾ 38). ಶಿಶುಪಾಲನ ಮೂಲಕ ಗೊಂದಲವುಂಟಾದಾಗ, ಚಿಂತಿತನಾದ ಯುಧಿಷ್ಠಿರನಿಗೆ ಇವನ ಆಶ್ವಾಸನೆ (ಸಭಾ 40). ಶಿಶುಪಾಲನಿಂದ ಇವನ ನಿಂದೆ (ಸಭಾ 41). ಶಿಶುಪಾಲನನ್ನು ಹೊಡೆಯದಂತೆ ಇವನು ಭೀಮನನ್ನು ತಡೆದುದು (ಸಭಾ 42/13). ಇವನು ಶಿಶುಪಾಲನ ಜನ್ಮವೃತ್ತಾಂತ ಹೇಳಿದುದು (ಸಭಾ 43). ಶಿಶುಪಾಲನಿಂದ ಇವನಿಗೆ ಧಿಕ್ಕಾರ (ಸಭಾ 44/6–32). ಶಿಶು ಪಾಲನ ಮಾತುಗಳಿಗೆ ಉತ್ತರ ನೀಡಿದುದು (ಸಭಾ 44/34). ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಲು ಸಮಸ್ತ ರಾಜರಿಗೆ ಇವನ ಪಂಥಾ ಹ್ವಾನ (ಸಭಾ 44/41–42). ಇವನಿಂದ ದ್ರೌಪದಿಯ ಮಾತುಗಳಿಗೆ ಉತ್ತರ ಕೊಡಲ್ಪಟ್ಟದ್ದು (ಸಭಾ 69/14–21). ಇವನು ಪುಲಸ್ತ್ಯರೊಡನೆ ತೀರ್ಥಯಾತ್ರೆಯ ಕುರಿತು ಪ್ರಶ್ನೆ ಮಾಡಿದುದು (ವನ 82/4–7). ದುರ್ಯೋಧನನಿಗೆ ಉಪದೇ ಶಿಸುತ್ತಾ, ಪಾಂಡವರೊಂದಿಗೆ ಸಂಧಿಮಾಡಿ ಕೊಳ್ಳಲು ಹೇಳಿದುದು (ವನ 253/4–10). ಯುಧಿಷ್ಠಿರನ ಮಹಿಮೆಯನ್ನು ಹೇಳುತ್ತಾ, ಪಾಂಡವರ ಅನ್ವೇಷಣೆ ಮಾಡಲು ಇವನ ಸಮ್ಮತಿ (ವಿರಾಟ 28). ಕರ್ಣನ ಮಾತುಗಳಿಂದ ಕುಪಿತವಾದ ಸೇನೆಯಲ್ಲಿ ಶಾಂತಿ ಮತ್ತು ಐಕ್ಯ ವನ್ನು ಕಾಪಾಡಲು ಪ್ರಯತ್ನಿಸಿದುದು (ವಿರಾಟ 51/1–3). ಪಾಂಡವರ ವನವಾಸ ಕಾಲದ ಪೂರ್ಣತ್ವದ ಕುರಿತು ಇವನ ನಿರ್ಣಯ (ವಿರಾಟ 52/1–4). ದುರ್ಯೋಧನನನ್ನು ಹಸ್ತಿನಾವತಿಯ ಕಡೆಗೆ ಕಳುಹಿಸಿ, ಸೇನೆಯನ್ನು ವ್ಯೂಹ ಬದ್ಧ ಗೊಳಿಸಿದುದು (ವಿರಾಟ 52/16–23). ಅರ್ಜುನ ನೊಂದಿಗೆ ಈತನ ಅದ್ಭುತಯುದ್ಧ ಮತ್ತು ಮೂರ್ಛಿತನಾದಾಗ, ಸಾರಥಿಯ ಮೂಲಕ ರಣ ರಂಗದಿಂದ ತೊಲಗಿಸಲ್ಪಟ್ಟದ್ದು (ವಿರಾಟ 64). ದುರ್ಯೋಧನನಿಗೆ ಸೇನಾಸಹಿತ ಹಸ್ತಿನಾವತಿಗೆ ಹಿಂತಿರುಗಲು ಸಲಹೆ ನೀಡಿದುದು (ವಿರಾಟ 66/21–22). ಇವನಿಂದ ದ್ರುಪದ ಪುರೋಹಿತನ ಮಾತಿನ ಸಮರ್ಥನೆ (ಉದ್ಯೋಗ 21/2–7). ಇವನು ಕರ್ಣನನ್ನು ನಿಂದಿಸುತ್ತಾ, ಅರ್ಜುನ ನನ್ನು ಪ್ರಶಂಸೆ ಮಾಡಿದುದು (ಉದ್ಯೋಗ 21/16–17). ದುರ್ಯೋಧನನಿಗೆ ತಿಳಿಯಹೇಳುತ್ತಾ, ಶ್ರೀಕೃಷ್ಣ ಮತ್ತು ಅರ್ಜುನರ ಮಹಿಮೆಯನ್ನು ಹೇಳಿದುದು (ಉದ್ಯೋಗ 49/2–28). ಇವನು ಕರ್ಣನನ್ನು ಪರಿಹಾಸಮಾಡಿದುದು (ಉದ್ಯೋಗ 49/34–42). ಇವನು ಕರ್ಣನನ್ನು ಆಕ್ಷೇಪಿಸಿ ದುದು (ಉದ್ಯೋಗ 62/7–11). ಶ್ರೀಕೃಷ್ಣನನ್ನು ಸೆರೆಯಲ್ಲಿಡುವ ಸಂಬಂಧವಾಗಿ, ದುರ್ಯೋಧನನ ಮಾತುಕೇಳಿ, ಕುಪಿತನಾಗಿ, ಸಭೆಯಿಂದ ಎದ್ದು ಹೋದುದು (ಉದ್ಯೋಗ 88/19–23). ಪಾಂಡವ ರೊಡನೆ ಸಂಧಿ ಮಾಡಿಕೊಳ್ಳುವಂತೆ ದುರ್ಯೋಧನ ನಿಗೆ ಉಪದೇಶಿಸಿದುದು (ಉದ್ಯೋಗ 125/2–8). ದುರ್ಯೋಧನನಿಗೆ ಪುನಃ ಉಪದೇಶಿಸಿದುದು (ಉದ್ಯೋಗ 126). ಸಭೆಯಿಂದ ಎದ್ದು ಹೋಗು ವಾಗ, ದುರ್ಯೋಧನನ ಉದ್ದಂಡತೆಯನ್ನು ವರ್ಣಿಸಿದುದು (ಉದ್ಯೋಗ 128/30–32). ಯುದ್ಧ ಮಾಡದಿರಲು ದುರ್ಯೋಧನನಿಗೆ ತಿಳಿಸಿ ದುದು (ಉದ್ಯೋಗ 138). ಭೀಷ್ಮನು ಪಾಂಡವ ರನ್ನು ಕೊಲ್ಲದಿರಲು, ಆದರೆ ಪ್ರತಿದಿನ ಅವರ ಹತ್ತುಸಾವಿರ ಯೋಧರನ್ನು ಕೊಲ್ಲಲು ಪ್ರತಿಜ್ಞೆ ಮಾಡಿ, ಕರ್ಣನನ್ನು ಕೂಡಿಕೊಂಡು ಯುದ್ಧ ಮಾಡುವುದಿಲ್ಲವೆಂದು ಶರ್ತವನ್ನಿಟ್ಟದ್ದು (ಉದ್ಯೋಗ 156/21–24). ದುರ್ಯೋಧನನು ಕೇಳಿದಾಗ ಕೌರವ ಪಕ್ಷದ ರಥಿ ಮತ್ತು ಅತಿರಥಿ ಗಳ ಪರಿಚಯನೀಡಿದುದು (ಉದ್ಯೋಗ 165 ರಿಂದ 168). ಇವನು ಕರ್ಣನನ್ನು ಧಿಕ್ಕರಿಸಿ ದುದು (ಉದ್ಯೋಗ 168/30–38). ದುರ್ಯೋಧನ ನಿಗೆ ಪಾಂಡವ ಪಕ್ಷದ ಅತಿರಥಿ ಮೊದಲಾದವರ ಪರಿಚಯ ನೀಡಿದುದು (ಉದ್ಯೋಗ 169 ರಿಂದ 172) ದುರ್ಯೋಧನನೊಡನೆ ಶಿಖಂಡಿ ಮತ್ತು ಪಾಂಡವರ ವಧೆ ಮಾಡುವುದಿಲ್ಲವೆಂದು ಹೇಳಿ

ದುದು (ಉದ್ಯೋಗ 172/20–21). ದುರ್ಯೋಧನನಿಗೆ ಅಂಬೋಪಾಖ್ಯಾನವನ್ನು ಹೇಳಿದುದು (ಉದ್ಯೋಗ 173). ಇವನಿಂದ ಕಾಶೀರಾಜನ ಮೂವರು ಕನ್ಯೆಯರ ಅಪಹರಣ (ಉದ್ಯೋಗ 173/13). ಇವನಿಂದ ಪರಶುರಾಮನ ಪೂಜೆ (ಉದ್ಯೋಗ 178/27). ಅಂಬೆಯನ್ನು ಸ್ವೀಕರಿಸುವ ಕುರಿತು ಪರಶುರಾಮನ ಆಜ್ಞೆಯನ್ನು ತಿರಸ್ಕರಿಸಿದುದು (ಉದ್ಯೋಗ 178/32–34). ಕೊಲ್ಲುವ ಬೆದರಿಕೆ ಹಾಕಿದಾಗ, ಪರಶುರಾಮನಿಗೆ ರೋಷಪೂರಿತ ಉತ್ತರಕೊಟ್ಟದ್ದು (ಉದ್ಯೋಗ 178/43–64). ಪರಶುರಾಮನೊಂದಿಗೆ ಯುದ್ಧಮಾಡಲು ಕುರುಕ್ಷೇತ್ರಕ್ಕೆ ಹೋದುದು (ಉದ್ಯೋಗ 178/80). ಯುದ್ಧದ ಸಂದರ್ಭದಲ್ಲಿ, ಪರಶುರಾಮನೊಡನೆ, ಯುದ್ಧ ಮಾಡಲು ಆಜ್ಞೆ ಬೇಡಿದುದು (ಉದ್ಯೋಗ 179/14). ಪರಶುರಾಮನೊಂದಿಗೆ ಇವನ ಯುದ್ಧ (ಉದ್ಯೋಗ 179/27ರಿಂದ 185). ವಸುಗಳಿಂದ ಇವನಿಗೆ ಪ್ರಸ್ವಾಪನಾಸ್ತ್ರ ಪ್ರಾಪ್ತಿ (ಉದ್ಯೋಗ 183/11–13). ದೇವತೆಗಳೂ ನಾರದರೂ ತಡೆದ ಕಾರಣ, ಪ್ರಸ್ವಾಪನಾಸ್ತ್ರ ಪ್ರಯೋಗ ಮಾಡದಿದ್ದುದು (ಉದ್ಯೋಗ 185/7). ದೇವತೆಗಳು, ಪಿತೃಗಳು ಮತ್ತು ಗಂಗೆಯ ಆಗ್ರಹದಿಂದ ಯುದ್ಧ ನಿಲಿಸಿ, ಪರಶುರಾಮರ ಕಾಲಿಗೆ ಪ್ರಣಾಮ ಮಾಡಿದುದು (ಉದ್ಯೋಗ 185/35). ದುರ್ಯೋಧನನಿಗೆ ಶಿಖಂಡಿಯ ಜನ್ಮವೃತ್ತಾಂತ ಹೇಳಿದುದು (ಉದ್ಯೋಗ 188 ರಿಂದ 192). ಒಂದು ತಿಂಗಳಲ್ಲಿ ಪಾಂಡವ ಸೇನೆಯನ್ನು ನಾಶಮಾಡುವ ತನ್ನ ಶಕ್ತಿಯನ್ನು ದುರ್ಯೋಧನನಿಗೆ ಹೇಳಿದುದು (ಉದ್ಯೋಗ 193/14). ಯುಧಿಷ್ಠಿರನಿಗೆ ಯುದ್ಧಕ್ಕೆ ಆಜ್ಞೆಯನ್ನಿತ್ತು. ಅವನಿಗೆ ಮಂಗಳವನ್ನು ಬಯಸಿದುದು (ಭೀಷ್ಮ 43/44–48). ಪ್ರಥಮ ದಿನದ ಯುದ್ಧದಲ್ಲಿ ಅರ್ಜುನನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/8–11). ಯುದ್ಧದಲ್ಲಿ ಇವನಿಂದ ವಿರಾಟಪುತ್ರ ಶ್ವೇತನ ವಧೆ (ಭೀಷ್ಮ 48/3–115). ಪ್ರಥಮ ದಿನದ ಯುದ್ಧದಲ್ಲಿ ಇವನ ಪ್ರಚಂಡ ಪರಾಕ್ರಮ (ಭೀಷ್ಮ 49/41–51). ಅರ್ಜುನನೊಂದಿಗೆ ಇವನ ಘೋರ ಯುದ್ಧ (ಭೀಷ್ಮ 52). ಸಾತ್ಯಕಿಯ ಮೂಲಕ ಸಾರಥಿ ಕೊಲ್ಲಲ್ಪಟ್ಟಾಗ, ಕುದುರೆಗಳ ಮೂಲಕ ರಣಕ್ಷೇತ್ರದಿಂದ ಹೊರಗೆ ಕೊಂಡು ಹೋಗಲ್ಪಟ್ಟದ್ದು (ಭೀಷ್ಮ 45/114–115). ಅರ್ಜುನನ ಹೊಡೆತದಿಂದ ಓಡುತ್ತಿರುವ ಸೇನೆಯನ್ನು ಕಂಡು, ಎರಡನೇ ದಿನದ ಯುದ್ಧವನ್ನು ಸ್ಥಗಿತಗೊಳಿಸಲು ಆದೇಶವನ್ನಿತ್ತದ್ದು (ಭೀಷ್ಮ 55/42). ದುರ್ಯೋಧನನು ನಿಂದಿಸಿದಾಗ, ಸೇನಾಸಹಿತರಾದ ಪಾಂಡವರನ್ನು ತಡೆಯುವ ಪ್ರತಿಜ್ಞೆ ಮಾಡಿದುದು (ಭೀಷ್ಮ 58/42–44). ಭೀಷ್ಮನ ಅದ್ಭುತ ಪರಾಕ್ರಮ (ಭೀಷ್ಮ 59/51–74). ಕೊಲ್ಲಲು ಸಿದ್ಧನಾದ ಕೃಷ್ಣನನ್ನು ಇವನು ಆಹ್ವಾನಿಸಿದುದು (ಭೀಷ್ಮ 59/96–98). ಅರ್ಜುನನೊಂದಿಗೆ ಇವನ ದ್ವೈರಥ ಯುದ್ಧ (ಭೀಷ್ಮ 60/25–29). ಭಗದತ್ತನು ಸಂಕಟದಲ್ಲಿ ಬಿದ್ದಿರುವುದನ್ನು ನೋಡಿ, ಅವನ ರಕ್ಷಣೆಗೋಸ್ಕರ ದ್ರೋಣಾಚಾರ್ಯ ಮತ್ತು ದುರ್ಯೋಧನನಿಗೆ ಆದೇಶ ನೀಡಿದುದು (ಭೀಷ್ಮ 64/64–69). ಪಾಂಡವರ ಪರಾಕ್ರಮದ ಕುರಿತು ಕೇಳಿದಾಗ, ಉತ್ತರನ ಪ್ರಸಂಗದಲ್ಲಿ, ದುರ್ಯೋಧನನಿಗೆ, ನಾರಾಯಣನ ಅವತಾರವಾದ ಶ್ರೀಕೃಷ್ಣ ಮತ್ತು ನರನ ಅವತಾರವಾದ ಅರ್ಜುನನ ಮಹಿಮೆಯನ್ನು ಹೇಳಿದುದು (ಭೀಷ್ಮ 65/35 ರಿಂದ 68). ಇವನಿಂದ ಬ್ರಹ್ಮಭೂತ ಸ್ತೋತ್ರದ ವರ್ಣನೆ (ಭೀಷ್ಮ 68/2–11). ಶಿಖಂಡಿ ಎದುರಾದಾಗ ಯುದ್ಧ ನಿಲ್ಲಿಸಿದುದು (ಭೀಷ್ಮ 69/29). ಭೀಮಸೇನನೊಂದಿಗೆ ಇವನ ಘೋರ ಯುದ್ಧ (ಭೀಷ್ಮ 70). ಅರ್ಜುನಾದಿ ಯೋಧರೊಡನೆ ಇವನ ಘೋರ ಯುದ್ಧ (ಭೀಷ್ಮ 71). ಭೀಮಸೇನನನ್ನು ಗಾಯಗೊಳಿಸಿ, ಸಾತ್ಯಕಿಯನ್ನು ಸೋಲಿಸಿದುದು (ಭೀಷ್ಮ 72/21–28). ವಿರಾಟನನ್ನು ಗಾಯಗೊಳಿಸಿದುದು (ಭೀಷ್ಮ 73/2). ಭೀಮಸೇನನ ಪರಾಕ್ರಮದಿಂದ ಭಯಪಟ್ಟ ದುರ್ಯೋಧನನಿಗೆ ಧೈರ್ಯ ಹೇಳಿದುದು (ಭೀಷ್ಮ 80/8–12). ಯುಧಿಷ್ಠರನನ್ನು ರಥಹೀನನಾಗಿ ಮಾಡಿದುದು (ಭೀಷ್ಮ 86/11). ಭೀಮಸೇನನ ಮೂಲಕ ಇವನ ಸಾರಥಿ ಮಡಿದಾಗ, ಇವನ ರಥವನ್ನೆಳೆದುಕೊಂಡು ಕುದುರೆಗಳು ಓಡಿದುದು (ಭೀಷ್ಮ 88/12). ಘಟೋತ್ಕಚನೊಡನೆ ಹೋರಾಡಲು ಭಗದತ್ತನಿಗೆ ಆಜ್ಞೆಯನ್ನಿತ್ತದ್ದು (ಭೀಷ್ಮ 95/17–20). ದುರ್ಯೋಧನನೊಂದಿಗೆ ಅರ್ಜುನನ ಪರಾಕ್ರಮವನ್ನು ವರ್ಣಿಸಿ, ಶಿಖಂಡಿಯನ್ನು

ಹೊರತುಪಡಿಸಿ, ಉಳಿದ ಸೋಮಕರ ಮತ್ತು ಪಾಂಚಾಲರ ವಧೆ ಮಾಡುವ ಪ್ರತಿಜ್ಞೆ ಮಾಡಿದುದು (ಭೀಷ್ಮ 98/4–23). ಸಾತ್ಯಕಿಯೊಂದಿಗೆ ಇವನ ಯುದ್ಧ (ಭೀಷ್ಮ 104/29–36). ಇವನ ಮೂಲಕ ಚೇದಿ, ಕಾಶಿ ಮತ್ತು ಕರೂಷ ದೇಶದ ಹದಿನಾಲ್ಕು ಸಾವಿರ ಮಹಾರಥಿಗಳ ವಧೆ (ಭೀಷ್ಮ 106/18–20). ತನ್ನನ್ನು ಕೊಲ್ಲಲು ಬರುತ್ತಿದ್ದ ಶ್ರೀಕೃಷ್ಣನಿಗೆ ಇವನ ಸ್ವಾಗತ (ಭೀಷ್ಮ 106/64–67). ಯುಧಿಷ್ಠಿರನಿಗೆ ತನ್ನ ವಧೆಯ ಉಪಾಯ ಹೇಳಿದುದು (ಭೀಷ್ಮ 107/76–88). ಆತನೊಡನೆ ಯುದ್ಧ ಮಾಡದಿರಲು ಶಿಖಂಡಿಯೊಡನೆ ಹೇಳಿದುದು (ಭೀಷ್ಮ 108/43). ದುರ್ಯೋಧನನಿಗೆ ಉತ್ತರವನ್ನಿತ್ತದ್ದು; ಪಾಂಡವ ಸೇನೆಯ ಸಂಹಾರ ಮಾಡಿದುದು (ಭೀಷ್ಮ 109/24–39). ತನ್ನ ಮೇಲೆ ಆಕ್ರಮಣ ಮಾಡಲು ಯುಧಿಷ್ಠಿರನಿಗೆ ಆದೇಶ ನೀಡಿದುದು (ಭೀಷ್ಮ 115/13–15). ಇವನ ಅದ್ಭುತ ಪರಾಕ್ರಮ (ಭೀಷ್ಮ 116/62–78). ಅರ್ಜುನನ ಪ್ರಹಾರದಿಂದ ಮೂರ್ಛಿತನಾದುದು (ಭೀಷ್ಮ 117/64). ಇವನ ಮೂಲಕ ವಿರಾಟನ ಸಹೋದರ ಶತಾನೀಕನ ವಧೆ (ಭೀಷ್ಮ 118/27). ಇವನಿಂದ ಪಾಂಡವ ಸೇನೆಯ ಭೀಷಣ ಸಂಹಾರ (ಭೀಷ್ಮ ಅಧ್ಯಾಯ 118 ರಿಂದ 119/1–54ರ ವರೆಗೆ). ಜೀವನದಲ್ಲಿ ವೈರಾಗ್ಯಹೊಂದಿ ಮೃತ್ಯುವಿನ ಕುರಿತು ಚಿಂತನೆ ಮಾಡಿದುದು (ಭೀಷ್ಮ 119/34–35). ಅರ್ಜುನನ ಮೂಲಕ ರಥದಿಂದ ಬೀಳಿಸಲ್ಪಟ್ಟದ್ದು (ಭೀಷ್ಮ 119/87). ಸೂರ್ಯನು ಉತ್ತರಾಯಣಕ್ಕೆ ಬರುವ ತನಕ ಪ್ರಾಣಧಾರಣೆ ಮಾಡುವ ಕುರಿತು ಹಂಸಗಳಿಗೆ ಹೇಳಿದುದು (ಭೀಷ್ಮ 119/104–108). ಸಂಜಯನು ಧೃತರಾಷ್ಟ್ರನಿಗೆ ಇವನ ಮಹತ್ತ್ವವನ್ನು ವರ್ಣಿಸಿದುದು (ಭೀಷ್ಮ 120/10–15). ಶರಶಯ್ಯೆಯಲ್ಲಿ ಮಲಗಿರುವಾಗ ರಾಜರೊಡನೆ ದಿಂಬನ್ನು ಕೇಳಿದುದು (ಭೀಷ್ಮ 120/34). ರಾಜರಿಂದ ತನಗೆ ಯೋಗ್ಯವಾದ ದಿಂಬು ಸಿಗದಿದ್ದಾಗ, ಅರ್ಜುನನೊಡನೆ ಕೇಳಿದುದು (ಭೀಷ್ಮ 120/38). ರಾಜರಿಗೆ ಉಪದೇಶಿಸುತ್ತಾ ಯುದ್ಧ ನಿಲ್ಲಿಸಲು ಒತ್ತಾಯಿಸಿದುದು (ಭೀಷ್ಮ 120/51–55). ಇವನು ಅರ್ಜುನನೊಡನೆ ನೀರನ್ನು ಕೇಳಿದುದು (ಭೀಷ್ಮ 121/18–19). ಇವನ ಮೂಲಕ ಅರ್ಜುನನ ಪ್ರಶಂಸೆಯ ವರ್ಣನೆ (ಭೀಷ್ಮ 121/30–37). ಯುದ್ಧ ನಿಲ್ಲಿಸಲು ದುರ್ಯೋಧನನಿಗೆ ಉಪದೇಶಿಸಿದುದು (ಭೀಷ್ಮ 121/38–55). ಕರ್ಣನೊಡನೆ ಗುಟ್ಟಾಗಿ ಮಾತುಕತೆ ಮಾಡಿದುದು (ಭೀಷ್ಮ 122/8–22). ಸ್ವರ್ಗಪ್ರಾಪ್ತಿಯ ಇಚ್ಛೆಯಿಂದ ಹೋರಾಡುವಂತೆ ಕರ್ಣನಿಗೆ ಅನುಮತಿಯನ್ನಿತ್ತದ್ದು (ಭೀಷ್ಮ 122/34–38). ಕರ್ಣನಿಗೆ ಪ್ರೋತ್ಸಾಹವನ್ನಿತ್ತು ಯುದ್ಧಕ್ಕೆ ಕಳುಹಿಸಿದುದು (ದ್ರೋಣ 4/2–14). ಧರ್ಮದ ರಹಸ್ಯವನ್ನು ತಿಳಿಯುವುದಕ್ಕಾಗಿ, ಭೀಷ್ಮನ ಬಳಿಗೆ ಹೋಗುವಂತೆ ಯುಧಿಷ್ಠಿರನಿಗೆ ವ್ಯಾಸನ ಪ್ರೇರಣೆ (ಶಾಂತಿ 37/5–7). ಇವನಿಂದ ಶ್ರೀಕೃಷ್ಣನ ಸ್ತುತಿ (ಭೀಷ್ಮ ಸ್ತವರಾಜ) (ಶಾಂತಿ 47/16–100; ಶಾಂತಿ 51/2–9). ಧರ್ಮೋಪದೇಶ ಮಾಡಲು ಶ್ರೀಕೃಷ್ಣನ ಸಮ್ಮುಖದಲ್ಲಿ ತನ್ನ ಅಸಮರ್ಥತೆಯನ್ನು ಪ್ರಕಟಿಸಿದುದು (ಶಾಂತಿ 52/2–13). ತಾನು ಕಷ್ಟರಹಿತನಾದೆನೆಂದು ಹೇಳುತ್ತಾ, 'ತಾವೇಕೆ ಉಪದೇಶ ಮಾಡುವುದಿಲ್ಲ'ವೆಂದು ಶ್ರೀಕೃಷ್ಣನೊಡನೆ ಕೇಳಿದುದು (ಶಾಂತಿ 54/17–24). ಯುಧಿಷ್ಠಿರನ ಗುಣವರ್ಣನೆಯೊಂದಿಗೆ, ಆತನು ಪ್ರಶ್ನೆ ಮಾಡುವಂತೆ ಆದೇಶ ನೀಡಿದುದು (ಶಾಂತಿ 55/2–10). ಭಯಭೀತನೂ, ಲಜ್ಜಿತನೂ ಆದ ಯುಧಿಷ್ಠಿರನಿಗೆ ಆಶ್ವಾಸನೆಯನ್ನಿತ್ತದ್ದು (ಶಾಂತಿ 14/19). ಯುಧಿಷ್ಠಿರನಿಗೆ ನಾನಾ ಪ್ರಕಾರದ ದೃಷ್ಟಾಂತ ಮತ್ತು ಉಪಾಖ್ಯಾನಗಳ ಮೂಲಕ ರಾಜಧರ್ಮ, ಆಪದ್ಧರ್ಮ ಮತ್ತು ಮೋಕ್ಷಧರ್ಮದ ಉಪದೇಶ ನೀಡಿದುದು (ಶಾಂತಿ 56/12ರಿಂದ ಅನು 165 ರವರೆಗೆ). ಶ್ರೀಕೃಷ್ಣನೊಡನೆ ಭಗವಾನ್ ಶಿವನ ಮಹಿಮಾವರ್ಣನೆ ಮಾಡಲು ಹೇಳಿದುದು (ಅನು 14/18–21). ಯುಧಿಷ್ಠಿರನು ಹಸ್ತಿನಾಪುರಕ್ಕೆ ಹೋಗುವಂತೆ ಆದೇಶ ಮತ್ತು ಉಪದೇಶ ನೀಡಿದುದು (ಅನು 166/9–14). ಧೃತರಾಷ್ಟ್ರನಿಗೆ ಕರ್ತವ್ಯದ ಉಪದೇಶವನ್ನಿತ್ತದ್ದು (ಅನು 167/30–35). ಶ್ರೀಕೃಷ್ಣನೊಂದಿಗೆ ದೇಹತ್ಯಾಗಕ್ಕೆ ಅನುಮತಿ ಕೇಳಿದುದು (ಅನು 167/ 37–45). ಈತ ಪ್ರಾಣತ್ಯಾಗ ಮಾಡಿದುದು (ಅನು 168/2–7). ಕೌರವರಿಂದ ಇವನ ದಹನ ಸಂಸ್ಕಾರ ಮತ್ತು ಇವನಿಗೆ ಜಲಾಂಜಲಿಯನ್ನಿತ್ತದ್ದು (ಅನು 168/10–20). ಇವನಿಗಾಗಿ ಅಳುತ್ತಿರುವ ಗಂಗಾ

ದೇವಿಯ ಶೋಕ, ಇವನ ಪರಾಕ್ರಮದ ಪ್ರಶಂಸೆ ಮತ್ತು ಈತ ಶಿಖಂಡಿಯಿಂದ ಕೊಲ್ಲಲ್ಪಟ್ಟ ಕಾರಣ ದುಃಖ ಪ್ರಕಟಿಸಿದುದು (ಅನು 168/21–29). 'ಭೀಷ್ಮನ ವಧೆ ಅರ್ಜುನನಿಂದಾಗಿದೆ' ಎಂದು ಹೇಳಿ, ಶ್ರೀಕೃಷ್ಣ ಮತ್ತು ವ್ಯಾಸ ಗಂಗೆಗೆ ಆಶ್ವಾಸನೆ ನೀಡಿದುದು (ವನ 168/30–35). ವ್ಯಾಸನು ಆವಾಹನೆ ಮಾಡಿದಾಗ ಇವನು ಗಂಗಾಜಲದಿಂದ ಪ್ರಕಟನಾದುದು (ಆಶ್ರಮ 32/7). ಸ್ವರ್ಗಕ್ಕೆ ಹೋಗಿ, ಭೀಷ್ಮ ವಸುಗಳ ಸ್ವರೂಪದಲ್ಲಿ ಸೇರಿದುದು (ಸ್ವರ್ಗಾ 5/11–12). ಮಹಾಭಾರತದಲ್ಲಿ ಬಂದಿರುವ ಭೀಷ್ಮನ ಹೆಸರುಗಳು – ಆಪಗಾಸುತ, ಆಪಗೇಯ, ಭಗೀರಥಪುತ್ರ, ಭಾಗೀರಥಿಸುತ, ಭಾರತ, ಭರತಶ್ರೇಷ್ಠ, ಪಿತಾಮಹ, ಭರತರ್ಷಭ, ಭರತಸತ್ತಮ, ಭೀಷ್ಮಕ, ಶಾಂತನವ, ಶಾಂತನು ಪುತ್ರ, ಶಾಂತನುಸುತ, ಶಾಂತನೂಜ, ಶಾಂತನುನಂದನ, ದೇವವ್ರತ, ಗಂಗಾಸುತ, ಗಾಂಗೇಯ, ಜಾಹ್ನವೀಪುತ್ರ, ಜಾಹ್ನವೀಸುತ, ಕೌರವ, ಕೌರವಧುರಂಧರ, ಕೌರವನಂದನ, ಕೌರವ್ಯ, ಕುರುಶಾರ್ದೂಲ, ಕುರುಶ್ರೇಷ್ಠ, ಕುರೂದ್ವಹ, ಕುರುಕುಲಶ್ರೇಷ್ಠ, ಕುರುಕುಲೋದ್ವಹ, ಕುರುಮುಖ್ಯ, ಕುರುನಂದನ, ಕುರುಪತಿ, ಕುರುಪಿತಾಮಹ, ಕುರುಪ್ರವೀರ, ಕುರುಪುಂಗವ, ಕುರುರಾಜರ್ಷಿಸತ್ತಮ, ಕುರುಸತ್ತಮ, ಕುರೂತ್ತಮ, ಕುರುವಂಶಕೇತು, ಕುರುವರಶ್ರೇಷ್ಠ, ಕುರುವೃದ್ಧ, ಮಹಾವ್ರತ, ನದೀಜ, ಪ್ರಪಿತಾಮಹ, ಸಾಗರಗಾಸುತ, ಸತ್ಯಸಂಧ, ತಾಲಧ್ವಜ, ವಸು ಇತ್ಯಾದಿ.

**ಭೀಷ್ಮಕ** – ವಿದರ್ಭದೇಶದ ಅಧಿಪತಿ, ಭೋಜವಂಶದ ಒಬ್ಬ ರಾಜ. ಇವನು ಪೃಥ್ವಿಯ ಕಾಲಂಶಕ್ಕೆ ಸ್ವಾಮಿ, ಇಂದ್ರನ ಸಖ ಮತ್ತು ಬಲವಂತ ಆಗಿದ್ದನು. ಇವನು ಅಸ್ತ್ರವಿದ್ಯೆಯ ಬಲದಿಂದ ಪಾಂಡ್ಯ, ಕ್ರಥ ಮತ್ತು ಕೈಶಿಕ ದೇಶಗಳ ಮೇಲೆ ವಿಜಯಗಳಿಸಿದ್ದನು. ಇವನ ಸಹೋದರ ಆಕೃತಿ ಪರಶುರಾಮನಿಗೆ ಸರಿಯಾದ ಶೌರ್ಯಸಂಪನ್ನನಾಗಿದ್ದನು. ಇವನು ರುಕ್ಮಿಣಿಯ ತಂದೆ ಮತ್ತು ಶ್ರೀಕೃಷ್ಣನ ಮಾವನಾಗಿದ್ದನು. ಮಗಧರಾಜ ಜರಾಸಂಧನ ಮೇಲೆ ಇವನಿಗೆ ಭಕ್ತಿಯಿತ್ತು (ಸಭಾ 14/21–22). ರಾಜಸೂಯ ಯಜ್ಞದ ಸಂದರ್ಭದಲ್ಲಿ, ಸಹದೇವನು ಭೋಜಕಟ ನಗರಕ್ಕೆ ತಲುಪಿದಾಗ, ಈತ ಎರಡು ದಿನ ಕಾಲ ಯುದ್ಧಮಾಡಿ, ಪರಾಜಿತನಾಗಿದ್ದನು (ಸಭಾ 31/11–12). ಮಹಾಮಾನ್ಯನಾದ ಭೀಷ್ಮಕನ ಇನ್ನೊಂದು ಹೆಸರು ಹಿರಣ್ಯರೋಮನೆಂದಾಗಿತ್ತು. ಇವನು ಸಾಕ್ಷಾತ್ ಇಂದ್ರನ ಮಿತ್ರನಾಗಿದ್ದನು. ಸಂಪೂರ್ಣ ದಾಕ್ಷಿಣಾತ್ಯ ಪ್ರದೇಶದ ಮೇಲೆ ಇವನ ಪ್ರಭುತ್ವವಿದ್ದಿತು. ಇವನ ಪುತ್ರನ ಹೆಸರು ರುಕ್ಮಿ ಎಂದಾಗಿತ್ತು. ಇವನು ಎಲ್ಲಾ ಕಡೆಗಳಲ್ಲಿ ಪ್ರಖ್ಯಾತನಾಗಿದ್ದನು (ಉದ್ಯೋಗ 158/1–2). ಇವನು ಕಲಿಂಗರಾಜ ಚಿತ್ರಾಂಗದನ ಮಗಳ ಸ್ವಯಂವರ ಸಂದರ್ಭದಲ್ಲಿ ರಾಜಪುರ ನಗರಕ್ಕೆ ಹೋಗಿದ್ದನು (ಶಾಂತಿ 4/2–6).

**ಭೀಷ್ಮಪರ್ವ** – ಮಹಾಭಾರತದ ಒಂದು ಪ್ರಧಾನ ಪರ್ವ.

**ಭೀಷ್ಮವಧಪರ್ವ** – ಭೀಷ್ಮಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 43ರಿಂದ 122).

**ಭೀಷ್ಮಸ್ವರ್ಗಾರೋಹಣಪರ್ವ** – ಅನುಶಾಸನ ಪರ್ವದ ಒಂದು ಅವಾಂತರಪರ್ವ (ಅಧ್ಯಾಯ 167 ರಿಂದ 168).

**ಭುಮನ್ಯು** – (1) ಇವನು ಮಹಾರಾಜ ದುಷ್ಯಂತನ ಮೊಮ್ಮಗ ಮತ್ತು ಭರತನ ಮಗ. ಇವನು ಮಹರ್ಷಿ ಭರದ್ವಾಜನ ಕೃಪೆಯಿಂದ ಜನಿಸಿದ್ದನು (ಆದಿ 94/19–22). ಇವನ ತಾಯಿಯ ಹೆಸರು ಸುನಂದಾ. ಈಕೆ ಕಾಶೀರಾಜ ಸರ್ವಸೇನನ ಮಗಳು (ಆದಿ 95/32). ತಂದೆಯ ಮೂಲಕ ಯುವರಾಜ ಪಟ್ಟದಲ್ಲಿ ಇವನ ಅಭಿಷೇಕ (ಆದಿ 94/23). ಇವನ ಮೂಲಕ ಪುಷ್ಕರಿಣಿಯ ಗರ್ಭದಿಂದ ದಿವಿರಥ, ಸುಹೋತ್ರ, ಸುಹೋತಾ, ಸುಹವಿ, ಸುಯಜು ಮತ್ತು ಋಚೀಕರೆಂಬ ಪುತ್ರರು ಹುಟ್ಟಿದರು (ಆದಿ 94/24–25). ಇವನ ಮೂಲಕ ದಾಶಾರ್ಹಕನ್ಯೆ ವಿಜಯಾಳ ಗರ್ಭದಿಂದ ಸುಹೋತ್ರನ ಜನನ (ಆದಿ 95/33).

(2) ಇವನು ಚಂದ್ರವಂಶದ ಮಹಾರಾಜ ಕುರುವಿನ ಮರಿಮಗ ಮತ್ತು ಧೃತರಾಷ್ಟ್ರನ ಪುತ್ರನಾಗಿದ್ದನು (ಆದಿ 94/59).

(3) ಒಬ್ಬ ದೇವಗಂಧರ್ವ. ಈತ ಅರ್ಜುನನ ಜನ್ಮಮಹೋತ್ಸವ ಸಂದರ್ಭದಲ್ಲಿ ಆಗಮಿಸಿದ್ದನು (ಆದಿ 122/58).

**ಭುವನ** – (1) ಒಬ್ಬ ದಿವ್ಯ ಮಹರ್ಷಿ. ಇವನು ಪ್ರಯಾಣ ಕಾಲದಲ್ಲಿ ಭೀಷ್ಮನನ್ನು ನೋಡಲು ಆಗಮಿಸಿದ್ದನು (ಅನು 26/8).

(2) ಒಬ್ಬ ಸನಾತನ ವಿಶ್ವೇದೇವ (ಅನು 91/35).

**ಭೂತಕರ್ಮಾ** – ಕೌರವ ಪಕ್ಷದ ಒಬ್ಬ ಯೋಧ. ಇವನು ನಕುಲಪುತ್ರ ಶತಾನೀಕನೊಂದಿಗೆ ಯುದ್ಧದಲ್ಲಿ ಕೊಲ್ಲಲ್ಪಟ್ಟನು (ದ್ರೋಣ 25/22–23).

**ಭೂತಧಾಮಾ** – ಯಾವ ಇಂದ್ರರ ಅಂಶದಿಂದ ಪಾಂಡವರ ಜನನವಾಯಿತೋ, ಆ ಐದು ಮಂದಿಯಲ್ಲಿ ಎರಡನೆಯವನ ಹೆಸರು ಭೂತ ಧಾಮಾ ಎಂದಾಗಿತ್ತು (ಆದಿ 196/28–29).

**ಭೂತಮಥನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಭೂತಲಯ** – ಒಂದು ಹಳ್ಳಿಯ ಹೆಸರು. ಇಲ್ಲಿ ಕಳ್ಳರ, ದರೋಡೆಕೋರರ ನಿವಾಸಸ್ಥಳವಿತ್ತು. ಇಲ್ಲಿ ಒಂದು ನದಿ ಇತ್ತು. ಅದರಲ್ಲಿ ಶವಗಳು ತೇಲಿಬಿಡಲ್ಪಡುತ್ತಿದ್ದವು. ಇಂತಹ ನದಿಯಲ್ಲಿ ಸ್ನಾನಮಾಡುವುದು ಶಾಸ್ತ್ರ ನಿಷಿದ್ಧವಾಗಿದೆ (ವನ 129/9).

**ಭೂತಶರ್ಮಾ** – ಕೌರವ ಪಕ್ಷದ ಒಬ್ಬ ಯೋಧ. ಇವನು ದ್ರೋಣಾಚಾರ್ಯನು ನಿರ್ಮಿಸಿದ ಗರುಡ ವ್ಯೂಹದ ಕುತ್ತಿಗೆಯ ಸ್ಥಾನದಲ್ಲಿ ನಿಂತಿದ್ದನು (ದ್ರೋಣ 20/6–7).

**ಭೂತಿತೀರ್ಥಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/27).

**ಭೂಪತಿ** – ಒಬ್ಬ ಸನಾತನ ವಿಶ್ವೇದೇವ (ಅನು 91/32).

**ಭೂಮಿ** – (1) ಭೂದೇವಿ. ಈಕೆ ಬ್ರಹ್ಮನ ಪುತ್ರಿ ಮತ್ತು ಭಗವಾನ್ ನಾರಾಯಣನ ಪತ್ನಿ. ಭಗವಾನ್ ವರಾಹನೊಂದಿಗೆ ಸಮಾಗಮವಾದಾಗ ಈಕೆಯ ಗರ್ಭದಿಂದ ಒಬ್ಬ ಪುತ್ರನಾದನು. ಆತ ಈ ಭೂತಲದಲ್ಲಿ ಭೌಮ ಅಥವಾ ನರಕನೆಂದು ಪ್ರಸಿದ್ಧನಾದನು. ಶ್ರೀಕೃಷ್ಣನಿಂದ ಭೌಮಾಸುರನು ಕೊಲ್ಲಲ್ಪಟ್ಟಾಗ ಆಕೆ ಸ್ವತಃ ಪ್ರಕಟಗೊಂಡು, ಅದಿತಿಯ ಎರಡೂ ಕುಂಡಲಗಳನ್ನು ಹಿಂತಿರುಗಿ ಸಿದಳು ಮತ್ತು ನರಕಾಸುರ ಸಂತಾನವನ್ನು ರಕ್ಷಿ ಸಲು ಶ್ರೀಕೃಷ್ಣನನ್ನು ಪ್ರಾರ್ಥಿಸಿದಳು (ಸಭಾ 38/29). ಈಕೆ ತನ್ನ ಭಾರವನ್ನು ಇಳಿಸಲು ಭಗವಾನ್ ವಿಷ್ಣುವನ್ನು ಪ್ರಾರ್ಥಿಸಿದುದು (ವನ 142/41–42). ವರಾಹರೂಪಧಾರಿ ವಿಷ್ಣುವಿನಿಂದ ಈಕೆಯ ಉದ್ಧಾರ (ವನ 142/45–47). ಸಂಜಯನು ಧೃತರಾಷ್ಟ್ರನೊಡನೆ ಈಕೆಯ ಮಹಿಮೆಯನ್ನು ವರ್ಣಿಸಿದುದು (ಭೀಷ್ಮ 4/10ರಿಂದ 5/12). ಶ್ರೀಕೃಷ್ಣನಿಂದ, ವೈಷ್ಣವಾಸ್ತ್ರ ಬೇಡಿದ ಕಥೆಯ ವರ್ಣನೆ (ದ್ರೋಣ 29/30–31). ಪೃಥುವಿನೊಡನೆ ತನ್ನನ್ನು ಆತನ ಕನ್ಯೆಯೆಂದು ಒಪ್ಪಿಕೊಳ್ಳಲು ಪ್ರಾರ್ಥಿಸಿದುದು (ದ್ರೋಣ 69/15). ಪರಶುರಾಮನಿಂದ ಕ್ಷತ್ರಿಯ ಸಂಹಾರವಾದ ಬಳಿಕ, ಕಶ್ಯಪನಲ್ಲಿ ಭೂಪಾಲಕರನ್ನು ಯಾಚಿಸಿದುದು ಮತ್ತು ಅಳಿದುಳಿದ ರಾಜ ಕುಮಾರರ ವಿವರ ತಿಳಿಸಿದುದು (ಶಾಂತಿ 49/74–76). ಶ್ರೀಕೃಷ್ಣನು ಕೇಳಿದಾಗ ಬ್ರಾಹ್ಮಣರ ಮಹಿಮೆಯನ್ನು ವರ್ಣಿಸಿದುದು (ಅನು 34/22–29). ಈಕೆ ಶ್ರೀಕೃಷ್ಣನಿಗೆ ಗೃಹಸ್ಥಧರ್ಮವನ್ನು ಹೇಳಿದುದು (ಅನು 97/5–23). ಅಂಗರಾಜನಲ್ಲಿ ಸ್ಪರ್ಧೆಯುಂಟಾದುದರಿಂದ ಈಕೆ ಅದೃಶಳಾದುದು (ಅನು 153/2). ಕಾಶ್ಯಪಿಯೆಂದು ಈಕೆಗೆ ಹೆಸರಾಗಲು ಕಾರಣ (ಅನು 154/7).

(2) ಪ್ರಾಚೀನ ರಾಜನಾದ ಭೂಮಿಪತಿಯ ಭಾರ್ಯೆ (ಉದ್ಯೋಗ 117/14).

**ಭೂಮಿಂಜಯ** – (1) ಕೌರವ ಪಕ್ಷದ ಒಬ್ಬ ಯೋಧ. ಇವನು ದ್ರೋಣಾಚಾರ್ಯನಿರ್ಮಿತ ಗರುಡವ್ಯೂಹದ ಹೃದಯ ಸ್ಥಾನದಲ್ಲಿ ನಿಂತಿದ್ದನು (ದ್ರೋಣ 20/13–14).

(2) ವಿರಾಟನ ಪುತ್ರ (ನೋಡು – ಉತ್ತರ) (ವಿರಾಟ 35/9).

**ಭೂಮಿಪತಿ**– ಒಬ್ಬ ಪ್ರಾಚೀನ ರಾಜ (ಉದ್ಯೋಗ 117/14).

**ಭೂಮಿಪರ್ವ** – ಭೀಷ್ಮ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 11ರಿಂದ 12).

**ಭೂಮಿಪಾಲ** – ಒಬ್ಬ ಪ್ರಾಚೀನ ಕ್ಷತ್ರಿಯ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಜನಿಸಿದ್ದನು (ಆದಿ 67/61–66). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/16).

**ಭೂಮಿಶಯ**– ಒಬ್ಬ ಪ್ರಾಚೀನ ನರೇಶ. ಇವನಿಗೆ

ರಾಜಾ ಅಮೂರ್ತರಯಾನಿಂದ ಖಡ್ಗಪ್ರಾಪ್ತಿಯಾಗಿತ್ತು. ಇವನು ಆ ಖಡ್ಗವನ್ನು ದುಷ್ಯಂತ ಕುಮಾರ ಭರತನಿಗೆ ಕೊಟ್ಟಿದ್ದನು (ಶಾಂತಿ 166/75).

**ಭೂರಿ** – ಇವನು ಕುರುವಂಶದ ಸೋಮದತ್ತನ ಪುತ್ರ. ಇವನ ಇಬ್ಬರು ತಮ್ಮಂದಿರ ಹೆಸರು ಭೂರಿಶ್ರವ ಮತ್ತು ಶಲನೆಂದಾಗಿತ್ತು. ಇವನು ತನ್ನ ತಂದೆ ಮತ್ತು ಸಹೋದರರೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/14–15). ತಂದೆ ಮತ್ತು ಸೋದರರೊಂದಿಗೆ ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಕೂಡಾ ಆಗಮಿಸಿದ್ದನು (ಸಭಾ 34/8). ಸಾತ್ಯಕಿಯೊಂದಿಗೆ ಇವನ ಯುದ್ಧ ಮತ್ತು ವಧೆ (ದ್ರೋಣ 166/1–12). ಮೃತ್ಯುವಿನ ಅನಂತರ ಈತ ವಿಶ್ವೇದೇವರಲ್ಲಿ ಸೇರಿದನು (ಸ್ವರ್ಗಾ 5/16–17).

**ಭೂರಿತೇಜಾ** – ಒಬ್ಬ ಪ್ರಾಚೀನ ರಾಜ. ಈತ ಕ್ರೋಧವಶನೆಂಬ ದೈತ್ಯನ ಅಂಶದಿಂದ ಜನಿಸಿದ್ದನು (ಆದಿ 67/63–66). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/17).

**ಭೂರಿದ್ಯುಮ್ನ** – (1) ಒಬ್ಬ ಪ್ರಾಚೀನ ರಾಜ. ಈತ ಯಮರಾಜನ ಸಭೆಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/19,21). ಇವನು ಗೋದಾನಮಾಡಿ ಸ್ವರ್ಗಲೋಕ ಪಡೆದನು (ಅನು 76/25).

(2) ಒಬ್ಬ ಮಹರ್ಷಿ. ಈತ ಶಾಂತಿದೂತನಾಗಿ ಹಸ್ತಿನಾವತಿಯ ಕಡೆಗೆ ಹೋಗುವ ಶ್ರೀಕೃಷ್ಣನಿಗೆ ಹಾದಿಯಲ್ಲಿ ದಕ್ಷಿಣಾವರ್ತ ಪರಿಕ್ರಮಮಾಡಿದ್ದನು (ಉದ್ಯೋಗ 83/27).

(3) ಇವನು ರಾಜಾ ವೀರದ್ಯುಮ್ನನ ಏಕಮಾತ್ರ ಪುತ್ರನಾಗಿದ್ದನು. ಇವನು ಕಾಡಿನಲ್ಲಿ ಕಳೆದು ಹೋಗಿದ್ದನು (ಶಾಂತಿ 127/14).

**ಭೂರಿಬಲ** (ಭೀಮಬಲ) – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/98; ಆದಿ 116/7). ಭೀಮನಿಂದ ಈತನ ವಧೆ (ಶಲ್ಯ 26/14–15).

**ಭೂರಿಶ್ರವಾ** – ಇವನು ಕುರುವಂಶದ ಸೋಮದತ್ತನ ಪುತ್ರ. ಇವನು ತಂದೆ ಮತ್ತು ಸೋದರರೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/14–15). ಇವನ ಮೂಲಕ ಪಾಂಡವರ ಪರಾಕ್ರಮದ ವರ್ಣನೆ; ಅವರೊಂದಿಗೆ ಯುದ್ಧಮಾಡದೆ, ಅವರೊಡನೆ ಸಂಧಿ ಮಾಡುವಂತೆ ದುರ್ಯೋಧನನಿಗೆ, ದ್ರುಪದ ನಗರದಲ್ಲಿ ಈತನ ಸಲಹೆ (ಆದಿ 199/7). ತನ್ನ ತಂದೆ ಮತ್ತು ಸಹೋದರರೊಂದಿಗೆ, ಇವನು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಬಂದಿದ್ದನು (ಸಭಾ 34/8). ಇವನು ಒಂದು ಅಕ್ಷೌಹಿಣೀ ಸೇನೆಯೊಂದಿಗೆ, ದುರ್ಯೋಧನನ ಸಹಾಯಕ್ಕೆ ಬಂದದ್ದು (ಉದ್ಯೋಗ 19/16). ಭೀಷ್ಮನು ಇವನನ್ನು ರಥಿಗಳ, ಯೂಥಪತಿಗಳ ಯೂಥಪತಿ ರೂಪದಲ್ಲಿ ಪರಿಗಣಿಸಿದ್ದು (ಉದ್ಯೋಗ 165/29). ಪ್ರಥಮ ದಿನದ ಯುದ್ಧದಲ್ಲಿ ಶಂಖನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/35–37). ಸಾತ್ಯಕಿಯ ಮೇಲೆ ಇವನ ಆಕ್ರಮಣ ಮತ್ತು ಯುದ್ಧ (ಭೀಷ್ಮ 63/33 ರಿಂದ 64/4). ಸಾತ್ಯಕಿಯೊಂದಿಗೆ ಇವನ ಘೋರಯುದ್ಧ (ಭೀಷ್ಮ 74). ಇವನಿಂದ ಸಾತ್ಯಕಿಯ ಹತ್ತು ಪುತ್ರರ ವಧೆ (ಭೀಷ್ಮ 74/25). ಧೃಷ್ಟಕೇತುವಿನೊಂದಿಗೆ ಇವನ ಯುದ್ಧ ಮತ್ತು ಇವನಿಂದ ಧೃಷ್ಟಕೇತುವಿನ ಪರಾಜಯ (ಭೀಷ್ಮ 84/35–39). ಭೀಮಸೇನನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 110/10–11). (ಭೀಷ್ಮ 111/44–49). ಶಿಖಂಡಿಯೊಂದಿಗೆ ಇವನ ಯುದ್ಧ (ದ್ರೋಣ 14/43–45). ಮಣಿಮಂತನೊಂದಿಗೆ ಯುದ್ಧಮಾಡಿ, ಅವನ ವಧೆ ಮಾಡಿದುದು (ದ್ರೋಣ 25/53–55). ಇವನ ಧ್ವಜದ ವರ್ಣನೆ (ದ್ರೋಣ 105/22–24). ಸಾತ್ಯಕಿಯೊಂದಿಗೆ ಯುದ್ಧಮಾಡಿ ಅವನ ಜುಟ್ಟು ಹಿಡಿದು ಎಳೆದುದು (ದ್ರೋಣ 142/59–62). ಅರ್ಜುನನಿಂದ ಇವನ ಬಲಭುಜ ಕಡಿಯಲ್ಪಟ್ಟದ್ದು (ದ್ರೋಣ 142/72). ಇವನಿಂದ ಅರ್ಜುನನಿಗೆ ಧಿಕ್ಕಾರ (ದ್ರೋಣ 143/4–15). ಇವನು ಆಮರಣ ಉಪವಾಸಕ್ಕಾಗಿ ಕುಳಿತದ್ದು (ದ್ರೋಣ 143/33–35). ಸಾತ್ಯಕಿಯಿಂದ ಇವನ ವಧೆ (ದ್ರೋಣ 143/54). ಮರಣಾನಂತರ ಇವನು ವಿಶ್ವೇದೇವರಲ್ಲಿ ಪ್ರವೇಶ ಹೊಂದಿದುದು (ಸ್ವರ್ಗಾ 5/16). ಮಹಾಭಾರತದಲ್ಲಿ ಬಂದಿರುವ ಭೂರಿಶ್ರವನ ಹೆಸರುಗಳು– ಭೂರಿದಕ್ಷಿಣ, ಶಲಾಗ್ರಜ, ಕೌರವ, ಕೌರವ

ದಾಯಾದ, ಕೌರವೇಯ, ಕೌರವ್ಯ, ಕೌರವ್ಯ ಮುಖ್ಯ, ಕುರುಶಾರ್ದೂಲ, ಕುರುಶ್ರೇಷ್ಠ, ಕುರೂದ್ವಹ, ಕುರುಪುಂಗವ, ಯೂಪಕೇತನ, ಯೂಪಕೇತು ಇತ್ಯಾದಿ.

**ಭೂರಿಹಾ** – ಒಬ್ಬ ರಾಕ್ಷಸ. ಇವನು ಪ್ರಾಚೀನ ಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ, ಎಲ್ಲಾ ಬಿಟ್ಟು ಸತ್ತುಹೋದನು (ಶಾಂತಿ 227/51–56).

**ಭೂಲಿಂಗ** – ಹಿಮಾಲಯದ ಇನ್ನೊಂದು ಭಾಗದಲ್ಲಿ ವಾಸಿಸುವ ಒಂದು ಹಕ್ಕಿ. ಅದು ಸದಾ ಹೀಗೆಯೇ ಮಾತಾಡುತ್ತಿರುತ್ತದೆ. 'ಮಾ ಸಾಹಸಮ್' ಅಂದರೆ 'ಸಾಹಸ ಮಾಡಬೇಡಿರಿ'. ಆದರೆ ಸ್ವತಃ ಸಾಹಸದ ಕೆಲಸ ಮಾಡುತ್ತಾ, ಸಿಂಹದ ಹಲ್ಲುಗಳಲ್ಲಿ ಸಿಕ್ಕಿರುವ ಮಾಂಸದ ತುಂಡನ್ನು ತನ್ನ ಕೊಕ್ಕಿನಿಂದ ಕುಕ್ಕುತ್ತಿರುತ್ತದೆ (ಸಭಾ 44/28–30).

**ಭೂಷಿಕ** – ಒಂದು ಭಾರತೀಯ ಜನಪದ (ಭೀಷ್ಮ 9/58).

**ಭೃಗು** – ಒಬ್ಬ ಮಹರ್ಷಿ. ಇವನು ಬ್ರಹ್ಮನ ಮೂಲಕ ವರುಣನ ಯಜ್ಞದಲ್ಲಿ, ಅಗ್ನಿಯಿಂದ ಹುಟ್ಟಿದ್ದನು (ಆದಿ 5/8). ಇವನ ಪ್ರಿಯ ಪತ್ನಿಯ ಹೆಸರು ಪುಲೋಮಾ ಎಂದಾಗಿತ್ತು (ಆದಿ 5/13). ಪುಲೋಮನೆಂಬ ರಾಕ್ಷಸ ಅಪಹಾರ ಮಾಡುವಾಗ, ಇವನ ಪತ್ನಿ ಪುಲೋಮೆಯ ಗರ್ಭಜಾರಿತು. ಅದರಿಂದ ಚ್ಯವನನೆಂಬ ಪುತ್ರನ ಜನನವಾಯಿತು (ಆದಿ 6/1–24; ಆದಿ 66/ 44–45). ಪತ್ನಿ ಪುಲೋಮೆ ತನ್ನ ಅಪಹರಣದ ರಹಸ್ಯ ಹೇಳಿದಾಗ, ಈತ ಅಗ್ನಿದೇವನಿಗೆ ಸರ್ವ ಭಕ್ಷಿಯಾಗೆಂದು ಶಾಪ ನೀಡಿದುದು (ಆದಿ 6/14). ಇವನ ಇನ್ನೊಬ್ಬ ಮಗನ ಹೆಸರು 'ಕವಿ' ಎಂದಾಗಿತ್ತು (ಆದಿ 66/42). ಚ್ಯವನ ಮಾತ್ರವಲ್ಲದೆ ಇವನಿಗೆ ಇತರ ಆರು ಮಕ್ಕಳಾದರು. ಅವರು ಸೃಷ್ಟಿಯ ವಿಸ್ತಾರಕರೂ ಇವನಂತೆಯೇ ಗುಣವಂತರೂ ಆಗಿದ್ದರು. ಅವರ ಹೆಸರು ಹೀಗಿದೆ– ವಜ್ರಶೀರ್ಷ, ಶುಚಿ, ಔರ್ವ, ಶುಕ್ರ, ವರೇಣ್ಯ ಮತ್ತು ಸವನ. ಭೃಗುವಂಶದವರೆಲ್ಲರೂ ಸಾಮಾನ್ಯವಾಗಿ ವಾರುಣರೆಂದು ಹೇಳಲ್ಪಡುತ್ತಾರೆ (ಅನು 85/128). ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/16). ಇಂದ್ರನ ಸಭೆಯಲ್ಲಿದ್ದು ಆ ಸಭೆಯ ಶೋಭೆಯನ್ನು ಹೆಚ್ಚಿಸುತ್ತಾನೆ (ಸಭಾ 7/29). ಬ್ರಹ್ಮನ ಸಭೆಯಲ್ಲಿ ಉಪಸ್ಥಿತನಾಗಿದ್ದು, ಆತನ ಸೇವೆ ಮಾಡುತ್ತಾನೆ (ಸಭಾ 11/19). ಇವನು ತನ್ನ ಸೊಸೆಗೆ ಸಂತಾನಾರ್ಥವಾಗಿ ವರದಾನ ಮಾಡಿದುದು (ವನ 115/35–37). ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುವಾಗ ಶ್ರೀಕೃಷ್ಣನಿಗೆ ಈತನಿಂದ ದಕ್ಷಿಣಾವರ್ತ ಪರಿಕ್ರಮ (ಉದ್ಯೋಗ 83/27). ಇವನು ದ್ರೋಣಾಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸಲು ಹೇಳಿದುದು (ದ್ರೋಣ 190/34–40). ಇವನು ಭರದ್ವಾಜನಿಗೆ ಜಗತ್ತಿನ ಉತ್ಪತ್ತಿ ಮತ್ತು ವಿಭಿನ್ನ ತತ್ವಗಳ ವರ್ಣನೆಮಾಡಿದುದು (ಶಾಂತಿ 182). ಆಕಾಶದಿಂದ ಇತರ ನಾಲ್ಕು ಸ್ಥೂಲಭೂತಗಳ ಉತ್ಪತ್ತಿಯ ವರ್ಣನೆ (ಶಾಂತಿ 183). ಪಂಚ ಮಹಾಭೂತಗಳ ಗುಣಗಳ ವಿಸ್ತಾರಪೂರ್ವಕ ವರ್ಣನೆ (ಶಾಂತಿ 184). ಶರೀರದೊಳಗೆ ಜಠರಾನಲ ಮತ್ತು ಪ್ರಾಣಾಪಾನಾದಿ ವಾಯುಗಳ ಸ್ಥಿತಿ ಇತ್ಯಾದಿಗಳ ವರ್ಣನೆ (ಶಾಂತಿ 185). ಜೀವನದ ಅಧಿಕಾರ ಮತ್ತು ನಿತ್ಯತೆಯನ್ನು ನಾನಾ ಬಗೆಯ ಯುಕ್ತಿಗಳಿಂದ ಸಿದ್ಧಪಡಿಸಿದುದು (ಶಾಂತಿ 187). ವರ್ಣವಿಭಾಗ ಮೂಲಕ ಮನುಷ್ಯ ಮತ್ತು ಸಮಸ್ತ ಪ್ರಾಣಿಗಳ ಉತ್ಪತ್ತಿಯ ವರ್ಣನೆ (ಶಾಂತಿ 188). ನಾಲ್ಕೂ ವರ್ಣಗಳ ಬೇರೆ ಬೇರೆ ಕರ್ಮಗಳ ಮತ್ತು ಸದಾಚಾರದ ವರ್ಣನೆ ಮತ್ತು ವೈರಾಗ್ಯದಿಂದ ಪರಬ್ರಹ್ಮ ಪ್ರಾಪ್ತಿಯ ನಿರೂಪಣೆ (ಶಾಂತಿ 189). ಸತ್ಯದ ಮಹಿಮೆ, ಅಸತ್ಯದ ದೋಷ; ಲೋಕ ಮತ್ತು ಪರಲೋಕಗಳ ಸುಖ–ದುಃಖದ ವಿವೇಚನೆ (ಶಾಂತಿ 190). ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮ ಧರ್ಮಗಳ ವರ್ಣನೆ (ಶಾಂತಿ 191). ವಾನಪ್ರಸ್ಥ ಮತ್ತು ಸನ್ಯಾಸ ಧರ್ಮಗಳ ವರ್ಣನೆ ಮತ್ತು ಹಿಮಾಲಯ ಉತ್ತರ ಪಾರ್ಶ್ವದಲ್ಲಿರುವ ಉತ್ಕೃಷ್ಟ ಲೋಕದ ವಿಲಕ್ಷಣತೆ ಹಾಗೂ ಮಹತ್ವದ ಪ್ರತಿಪಾದನೆ (ಶಾಂತಿ 192). ಹಿಮವಂತನು ರತ್ನದ ಭಂಡಾರವಾಗದಿರಲೆಂದು ಈತನ ಶಾಪ (ಶಾಂತಿ 342/62). ಇವನು ರಾಜಾ ವೀತಹವ್ಯನಿಗೆ ಆಶ್ರಯವನ್ನಿತ್ತು, ಬ್ರಾಹ್ಮಣ್ಯ ಪ್ರದಾನ ಮಾಡಿದುದು (ಅನು 30/57–58). ಇವನು ಅಗ್ನಿಜ್ವಾಲೆಯಿಂದ ಹುಟ್ಟಿದ್ದನು;

ಆದುದರಿಂದ ಇವನ ಹೆಸರು 'ಭೃಗು'ವೆಂದಾಯಿತು (ಅನು 85/105–106). ಅಗಸ್ತ್ಯರ ಕಮಲಗಳು ಅಪಹರಿಸಲ್ಪಟ್ಟಾಗ ಇವನು ಶಪಥ ಮಾಡಿದುದು (ಅನು 94/16). ಅಗಸ್ತ್ಯನೊಡನೆ ನಹುಷನ ಪತನಕ್ಕೆ ಉಪಾಯ ಕೇಳಿದುದು (ಅನು 99/15). ಇವನು ಅಗಸ್ತ್ಯನಿಗೆ ನಹುಷನ ಪತನಕ್ಕೆ ಉಪಾಯ ಹೇಳಿದುದು (ಅನು 99/22–28). ಇವನಿಂದ ನಹುಷನಿಗೆ ಶಾಪ (ಅನು 100/24–25). ನಹುಷನು ಪ್ರಾರ್ಥಿಸಿದಾಗ, ಅವನ ಶಾಪ ನಿವೃತ್ತಿಯ ಮಾರ್ಗಹೇಳಿದುದು (ಅನು 100/30).

**ಭೃಗುತೀರ್ಥ** – ಮಹರ್ಷಿಗಳಿಂದ ಸೇವಿಸಲ್ಪಡುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ ಪರಶುರಾಮನು, ಶ್ರೀರಾಮನಿಂದ ಅಪಹೃತವಾದ ತನ್ನ ತೇಜಸ್ಸನ್ನು ಪುನಃ ಪ್ರಾಪ್ತಿಸಿಕೊಂಡಿದ್ದನು. ರಾಜಾ ಯುಧಿಷ್ಠಿರನೂ ತನ್ನ ಸಹೋದರರೊಂದಿಗೆ, ಇಲ್ಲಿ ಸ್ನಾನ–ತರ್ಪಣ ಇತ್ಯಾದಿ ಮಾಡಿದ್ದನು. ಇದರಿಂದಾಗಿ ಅವನ ರೂಪ ಅತ್ಯಂತ ತೇಜಸ್ವಿಯಾಯಿತು ಮತ್ತು ಅವನು ಶತ್ರುಗಳಿಗೆ ಅತ್ಯಂತ ದುರ್ಧರ್ಷನಾದನು (ವನ 99/34–38).

**ಭೃಗುತುಂಗ** – ಒಂದು ಪ್ರಾಚೀನ ಪರ್ವತ. ಇಲ್ಲಿ ರಾಜಾ ಯಯಾತಿಯು ತನ್ನ ಪತ್ನಿಯರೊಂದಿಗೆ ತಪಸ್ಸು ಮಾಡಿದ್ದನು (ಅದಿ 75/57). ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನನು ಇಲ್ಲಿಗೆ ಬಂದಿದ್ದನು (ಅದಿ 214/2). ಇಲ್ಲಿ ಶಾಕಾಹಾರಿಯಾಗಿ ಒಂದು ತಿಂಗಳು ವಾಸಿಸಿದರೆ ಅಶ್ವಮೇಧ ಯಜ್ಞದ ಫಲಸಿಗುತ್ತದೆ (ವನ 84/50). ಇಲ್ಲಿ ಉಪವಾಸ ಮಾಡುವುದರಿಂದ ಮನುಷ್ಯ ತನ್ನ ಹಿಂದುಮುಂದಿನ ಏಳೇಳು ತಲೆಮಾರಿನವರ ಉದ್ಧಾರ ಮಾಡುತ್ತಾನೆ (ವನ 85/91–92). ಈ ಮಹಾಪರ್ವತಕ್ಕೆ ಭೃಗುತುಂಗ ಆಶ್ರಮವೆಂದೂ ಪ್ರಸಿದ್ಧಿ ಇದೆ. ಇಲ್ಲಿ ಭೃಗು ತಪಸ್ಸು ಮಾಡಿದ್ದನು (ವನ 90/23). ಭೃಗುತುಂಗದಲ್ಲಿ 'ಮಹಾಹ್ರದ' ವೆಂಬ ಒಂದು ತೀರ್ಥ ಅಥವಾ ಸರೋವರವಿದೆ. ಲೋಭತ್ಯಾಗ ಮಾಡಿ ಇಲ್ಲಿ ಸ್ನಾನಮಾಡುವವನು ಮತ್ತು ಮೂರು ರಾತ್ರಿ ನಿರಾಹಾರನಾಗಿರುವವನು ಬ್ರಹ್ಮಹತ್ಯಾ ಪಾಪದಿಂದ ಮುಕ್ತನಾಗುತ್ತಾನೆ (ಅನು 25/18–19).

**ಭೇಡೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/13).

**ಭೇರಿಸ್ವನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಭೈರವ** – ಧೃತರಾಷ್ಟ್ರ ವಂಶದ ಒಬ್ಬ ನಾಗ. ಇವನು ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/17).

**ಭೋಗವತೀ** – (1) ನಾಗಲೋಕ (ಆದಿ 206/51; ಸಭಾ 38/29).

(2) ಪಾತಾಳಲೋಕದಲ್ಲಿರುವ ಗಂಗೆ (ಸಭಾ 38/29). ಪ್ರಯಾಗದಲ್ಲಿ ವಾಸುಕಿನಾಗನ ತೀರ್ಥ ವಿಶೇಷ. ಇದು ಗಂಗೆಯಲ್ಲೇ ಇದೆ. ಇಲ್ಲಿ ಸ್ನಾನ ಮಾಡಿದರೆ ಅಶ್ವಮೇಧಯಜ್ಞದ ಫಲ ದೊರಕುತ್ತದೆ (ವನ 85/86; ಉದ್ಯೋಗ 186/27).

(3) ಸರಸ್ವತೀ ನದಿಯ ನಾಮಾಂತರ (ವನ 24/20).

(4). ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/8).

**ಭೋಗವಂತ (ಭೋಗವಾನ್)** – ಒಂದು ಪರ್ವತ. ಇದನ್ನು ಭೀಮಸೇನನು ಪೂರ್ವ ದಿಗ್ವಿಜಯಕಾಲದಲ್ಲಿ ಗೆದ್ದಿದ್ದನು (ಸಭಾ 30/12).

**ಭೋಜ** – (1) ಒಂದು ವಂಶ. ಇದು ಯದುವಂಶದ ಅಂತರ್ಗತವಾಗಿದೆ (ಆದಿ 218/18).

(2) ಮಾರ್ತಿಕಾವತ ದೇಶದ ಒಬ್ಬ ರಾಜ. ಈತ ದ್ರೌಪದೀ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/6). ಇವನು ಯುಧಿಷ್ಠಿರನ ಸಭೆಯ ಸಭಾಸದನಾಗಿದ್ದನು (ಸಭಾ 4/26). ಕೌರವ ಪಕ್ಷದಿಂದ ಯುದ್ಧಮಾಡುತ್ತಾ ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 48/8). ಇವನು ಕಳಿಂಗರಾಜ ಚಿತ್ರಾಂಗದನ ಕನ್ಯೆಯ ಸ್ವಯಂವರಕ್ಕೂ ಹೋಗಿದ್ದನು (ಶಾಂತಿ 4/7).

(3) ಯದು ವಂಶದ ಒಬ್ಬ ರಾಜ. ಈತನಿಗೆ ಮಹಾರಾಜ ಉಶೀನರನಿಂದ ಖಡ್ಗ ಪ್ರಾಪ್ತಿಯಾಗಿತ್ತು (ಶಾಂತಿ 166/79). (ಇವನಿಂದಲೇ ಯಾದವರಲ್ಲಿ ಭೋಜವಂಶದ ಪರಂಪರೆ ಪ್ರಚಲಿತವಾಯಿತು).

**ಭೋಜಕಟ** – ವಿದರ್ಭದೇಶದ ರಾಜಧಾನಿ. ಇದನ್ನು ಸಹದೇವನು ಗೆದ್ದಿದ್ದನು (ಸಭಾ 31/

24

11–12). ರುಕ್ಮಿಣೀ ಹರಣದ ಸಂದರ್ಭದಲ್ಲಿ ಶ್ರೀಕೃಷ್ಣನೊಂದಿಗೆ ಯುದ್ಧ ಮಾಡಿ ರುಕ್ಮಿ ಸೋತಲ್ಲಿಯೇ, ಆತ ಈ ಹೊಸ ನಗರವನ್ನು ಸ್ಥಾಪಿಸಿದ್ದನು (ಉದ್ಯೋಗ 158/14–15). (ಇದರ ಹಿಂದೆ ಈ ರಾಜ್ಯದ ರಾಜಧಾನಿ ಕುಂಡಿನಾಪುರದಲ್ಲಿತ್ತು).

**ಭೋಜಾ** – ಸೌವೀರ ರಾಜನಾದ ಸರ್ವಾಂಗ ಸುಂದರಿ, ಕಮನೀಯ ಕನ್ಯೆ. ಈಕೆಯನ್ನು ತನ್ನ ರಾಣಿಯಾಗಿ ಮಾಡಿಕೊಳ್ಳಲು ಸಾತ್ಯಕಿ ಅಪಹಾರ ಮಾಡಿದ್ದನು (ದ್ರೋಣ 10/33).

**ಭೌಮ** – ಒಬ್ಬ ಅಸುರ (ನೋಡಿರಿ ನರಕಾಸುರ) (ಸಭಾ 38/29).

**ಭ್ರಮರ** – ಸೌವೀರ ದೇಶದ ಒಬ್ಬ ರಾಜಕುಮಾರ. ಈತ ಜಯದ್ರಥನ ರಥದ ಹಿಂದೆ ಕೈಯಲ್ಲಿ ಧ್ವಜಹಿಡಕೊಂಡು ಹೋಗುತ್ತಿದ್ದನು. ದ್ರೌಪದೀ ಹರಣದ ಸಂದರ್ಭದಲ್ಲಿ ಜಯದ್ರಥನೊಂದಿಗೆ ಹೋಗಿದ್ದನು (ವನ 265/10–11). ಅರ್ಜುನ–ನಿಂದ ಇವನ ವಧೆಯಾಯಿತು (ವನ 271/27).

## ಮ

**ಮಕರಿ** – ಭಾರತವರ್ಷದ ಒಂದು ಪ್ರಧಾನ ನದಿ. ಇಲ್ಲಿರುವವರು ಅದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/23).

**ಮಗಧ** – ಒಂದು ಪ್ರಾಚೀನ ದೇಶ. ಬಿಹಾರ ಪ್ರಾಂತದ ದಕ್ಷಿಣ ಭಾಗ. ಇದರ ರಾಜಧಾನಿ ಗಿರಿವ್ರಜ(ಆಧುನಿಕ ರಾಜಗೃಹ)ವಾಗಿತ್ತು (ಸಭಾ 21/2–3). ಒಂದು ಕಾಲದಲ್ಲಿ ಬೃಹದ್ರಥನು ಮಗಧ ದೇಶದ ರಾಜನಾಗಿದ್ದನು (ಆದಿ 63/30). ಕಾಲೇಯರಲ್ಲಿ ಮಹಾಶ್ರೇಷ್ಠ ಅಸುರ ನಾಗಿದ್ದವನೇ ಮಗಧ ದೇಶದಲ್ಲಿ ಜಯತ್ಸೇನ ವೆಂಬ ರಾಜನಾಗಿದ್ದನು (ಆದಿ 67/48). ಈ ದೇಶದ ಮೇಲೆ ಪಾಂಡು ಆಕ್ರಮಣ ಮಾಡಿ, ಅಲ್ಲಿದ್ದ ರಾಜಾ 'ದೀರ್ಘ'ನ ವಧೆ ಮಾಡಿದ್ದನು (ಆದಿ 112/26–27). ಈ ದೇಶದಲ್ಲಿ ಜರಾ ರಾಕ್ಷಸಿ(ಗೃಹದೇವಿ)ಗೋಸ್ಕರ ಮಹಾ ಉತ್ಸವ ವನ್ನು ಆಚರಿಸುವಂತೆ ರಾಜಾ ಬೃಹದ್ರಥನು ಆಜ್ಞೆ ಮಾಡಿದ್ದನು (ಸಭಾ 18/10). ಮಹಾಭಾರತ ಕಾಲದಲ್ಲಿ ಜರಾಸಂಧ ಮಗಧ ದೇಶದ ರಾಜ ನಾಗಿದ್ದನು. ಇವನನ್ನು ಶ್ರೀಕೃಷ್ಣನು ಯುಕ್ತಿಯಿಂದ ಭೀಮಸೇನನ ಮೂಲಕ ಕೊಲ್ಲಿಸಿದನು (ಸಭಾ 24/74). ಜರಾಸಂಧನ ಮರಣಾನಂತರ, ಅವನ ಪುತ್ರ ಸಹದೇವನಿಗೆ, ಶ್ರೀಕೃಷ್ಣನು ಮಗಧ ದೇಶದ ರಾಜ್ಯಾಭಿಷೇಕ ಮಾಡಿದನು (ಸಭಾ 24/43). ಪೂರ್ವದಿಗ್ವಿಜಯ ಕಾಲದಲ್ಲಿ ಈ ದೇಶವನ್ನು ಭೀಮಸೇನನು ತನ್ನ ವಶಕ್ಕೆ ತೆಗೆದುಕೊಂಡಿದ್ದನು (ಸಭಾ 30/16–18). ಇಲ್ಲಿರುವ ರಾಜನೂ, ಯುಧಿಷ್ಠಿರನಿಗೆ ರಾಜಸೂಯ ಯಜ್ಞದಲ್ಲಿ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 52/18). ಇಲ್ಲಿರುವ ರಾಜ ಮತ್ತು ನಿವಾಸಿಗಳು ಮಹಾ ಭಾರತ ಯುದ್ಧದಲ್ಲಿ ಯುಧಿಷ್ಠಿರನ ಪಕ್ಷಕ್ಕೆ ಬಂದಿದ್ದರು (ಉದ್ಯೋಗ 53/2). ಭಾರತದ ಪ್ರಮುಖ ಜನಪದಗಳಲ್ಲಿ ಈ ದೇಶ ಪರಿಗಣಿಸಲ್ಪಟ್ಟಿದೆ (ಭೀಷ್ಮ 9/50).

**ಮಘಾ** – (1) ಒಂದು ತೀರ್ಥ. ಇಲ್ಲಿಗೆ ಹೋದರೆ ಅಗ್ನಿಷ್ಟೋಮ ಮತ್ತು ಅತಿರಾತ್ರ ಯಜ್ಞಗಳ ಫಲ ಸಿಗುತ್ತದೆ (ವನ 84/51).

(2) ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ನಕ್ಷತ್ರದ ಹೆಸರು. ಮಂಗಲ ಗ್ರಹವು ವಕ್ರಗತಿಯಿಂದ ಮಘಾನಕ್ಷತ್ರದ ಮೇಲೆ ಬಂದಾಗ, ಅಮಂಗಲದ ಸೂಚಕವಾಗುತ್ತದೆ (ಭೀಷ್ಮ 3/14). ಮಘಾ ನಕ್ಷತ್ರದ ಮೇಲೆ ಚಂದ್ರನ ಇರುವಿಕೆ ಅಪ ಶಕುನವೆಂದು ತಿಳಿಯಬೇಕು (ಭೀಷ್ಮ 17/2). ಮಘಾ ನಕ್ಷತ್ರದಲ್ಲಿ ಎಳ್ಳಿನಿಂದ ತುಂಬಿದ, ವರ್ಧ ಮಾನ ಪಾತ್ರವನ್ನು ದಾನ ಮಾಡುವ ಮನುಷ್ಯ, ಈ ಲೋಕದಲ್ಲಿ ಪುತ್ರರಿಂದಲೂ ಪಶುಗಳಿಂದಲೂ ಸಂಪನ್ನನಾಗಿ, ಪರಲೋಕದಲ್ಲಿ ಆನಂದವನ್ನು ಪಡೆಯುತ್ತಾನೆ (ಅನು 64/12). ಆಶ್ವಿನಿ ಮಾಸದ ಕೃಷ್ಣಪಕ್ಷದಲ್ಲಿ ಮಘಾ ಮತ್ತು ತ್ರಯೋದಶಿಯ ಸಂಯೋಗವಾದರೆ, ತುಪ್ಪದಿಂದ ಮಿಶ್ರವಾದ ಪಾಯಸ ದಾನ ಮಾಡುವುದರಿಂದ ಪಿತೃಗಳಿಗೆ ತೃಪ್ತಿಯಾಗುತ್ತದೆ (ಅನು 88/7; ಅನು 126/35–37). ಮಘಾ ನಕ್ಷತ್ರದಲ್ಲಿ ಆನೆಯ ಶರೀರದ ನೆರಳಿನಲ್ಲಿ ಕುಳಿತು, ಅದರ ಕಿವಿಗಳಿಂದ ಗಾಳಿ ಯನ್ನು ಪಡೆಯುತ್ತಾ, ಅಕ್ಕಿ ಪಾಯಸ ಅಥವಾ ಲೌಹಶಾಕವನ್ನು ಪಿತೃಗಳಿಗೋಸ್ಕರ ದಾನ ಮಾಡುವುದರಿಂದ, ಅವರು ಸಂತುಷ್ಟರಾಗುತ್ತಾರೆ

(ಅನು 88/8). ಮಘಾದಲ್ಲಿ ಶ್ರಾದ್ಧ ಮತ್ತು ಪಿಂಡದಾನ ಮಾಡುವ ಮನುಷ್ಯ ತನ್ನ ಕುಟುಂಬದವರಲ್ಲಿ ಶ್ರೇಷ್ಠನಾಗುತ್ತಾನೆ (ಅನು 89/5). ಚಾಂದ್ರವ್ರತದ ಸಮಯದಲ್ಲಿ ಮಘಾ ನಕ್ಷತ್ರವನ್ನು ಚಂದ್ರನ ಮೂಗಿನ ಸ್ಥಾನದಲ್ಲಿ ಆವಾಹಿಸಬೇಕು (ಅನು 110/8).

ಈ ಶ್ಲೋಕಕ್ಕೆ ಇನ್ನೊಂದು ವ್ಯಾಖ್ಯಾನ ಹೀಗಿದೆ: ಪ್ರೇತಪಕ್ಷವೆಂದರೆ ಭಾದ್ರಪದ ಕೃಷ್ಣಪಕ್ಷದಲ್ಲಿ (ಪಿತೃ ಪಕ್ಷದಲ್ಲಿ) ತ್ರಯೋದಶೀ ತಿಥಿಯಲ್ಲಿ ಚಂದ್ರನು ಮಘಾ ನಕ್ಷತ್ರದಲ್ಲಿಯೂ – ಸೂರ್ಯನು ಹಸ್ತ ನಕ್ಷತ್ರದಲ್ಲಿಯೂ ಇರುವಾಗ 'ಗಜಚ್ಛಾಯಾ' ಎಂಬ ಪುಣ್ಯಕಾಲ ಬರುತ್ತದೆ. ಆ ಗಜಚ್ಛಾಯಾ ಪುಣ್ಯಕಾಲದಲ್ಲಿ, ವ್ಯಜನರೂಪವಾದ ಆನೆಯ ಕಿವಿಗಳಿಂದ ಗಾಳಿಯು ಬೀಸಲ್ಪಡುತ್ತಿರುವಾಗ – ಆಡಿನ ಸಂಬಂಧವಾದ, ಕೆಂಪಾದ ಮಾಂಸವನ್ನು ಪಿತೃಗಳ ಪ್ರೀತ್ಯರ್ಥವಾಗಿ ಅರ್ಪಿಸಿದರೆ ಅವರಿಗೆ ತೃಪ್ತಿಯಾಗುತ್ತದೆ.

**ಮಙ್ಕಣಕ** – ಒಬ್ಬ ಪ್ರಾಚೀನ ಋಷಿ. ಇವನು ವಾಯುದೇವನ ಮೂಲಕ ಸುಕನ್ಯೆಯ ಗರ್ಭ ದಿಂದ ಹುಟ್ಟಿದ್ದನು (ಶಲ್ಯ 38/59). ಸಪ್ತಸಾರಸ್ವತ ತೀರ್ಥದಲ್ಲಿ ಇವನಿಗೆ ಸಿದ್ಧಿ ಪ್ರಾಪ್ತವಾಗಿತ್ತು. ಒಂದು ಬಾರಿ ಇವನ ಕೈಗೆ ದರ್ಭೆ ಚುಚ್ಚಿದ್ದರಿಂದ ಗಾಯವಾಯಿತು. ಇದರಿಂದ ಕಾಯಿಪಲ್ಲೆಯ ರಸ ತೊಟ್ಟಿಕ್ಕತೊಡಗಿತು. ಅದನ್ನು ನೋಡಿ ಹರ್ಷೋತ್ಸಾಹದಿಂದ ಇವನು ನೃತ್ಯ ಮಾಡಲು ತೊಡಗಿದನು (ವನ 83/115–117). ಆಗ ಮಹಾದೇವನು ಇವನ ಬಳಿಗೆ ಬಂದು, ನೃತ್ಯದ ಕಾರಣ ಕೇಳಿದುದು (ವನ 83/120–121). ಈತ ಮಹಾದೇವನೊಡನೆ ತನ್ನ ಸಂತೋಷದ ಕಾರಣ ಹೇಳಿದುದು (ವನ 83/122–123). ಮಹಾ ದೇವನ ಕೈಯಿಂದ ಸುರಿಯುತ್ತಿರುವ ಭಸ್ಮವನ್ನು ಕಂಡು, ಈತ ಲಜ್ಜಿತನಾಗಿ, ಅವನ ಪಾದಕ್ಕೆರಗಿ ದುದು ಮತ್ತು ಮಹಾದೇವನ ಸ್ತುತಿ ಮಾಡಿದುದು (ವನ 83/124–131). ಇವನಿಗೆ ಶಿವನಿಂದ ವರದಾನ ಪ್ರಾಪ್ತವಾದುದು (ವನ 83/132–134). ಇವನ ವೀರ್ಯದಿಂದ ಏಳು ಪುತ್ರರ ಜನನವಾಗಿತ್ತು; ಅವರೆಲ್ಲರೂ ಋಷಿಗಳಾದರು. ಅವರ ಹೆಸರು – ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯುಜ್ವಾಲ, ವಾಯುರೇತಾ ಮತ್ತು ವಾಯುಚಕ್ರ (ಶಲ್ಯ 38/34–38). ಇವನ ಚರಿತ್ರೆಯ ವಿಶೇಷ ವರ್ಣನೆ (ಶಲ್ಯ 38/38–58).

**ಮಙ್ಕಿ** – ಒಬ್ಬ ಪ್ರಾಚೀನ ಮುನಿ (ಶಾಂತಿ 177/4). ಒಂಟೆಯ ಮೂಲಕ ಇವನ ಕರುಗಳ ಅಪಹರಣವಾದಾಗ, ಇವನು ಆಸೆ ಮತ್ತು ಬಯಕೆಗಳ ಆಳವಾದ ವಿಮರ್ಶೆ ಮಾಡಿದನು. ಇದು ಮಂಕಿಗೀತೆಯೆಂಬ ಹೆಸರಿನಿಂದ ಪ್ರಸಿದ್ಧ ವಾಗಿದೆ (ಶಾಂತಿ 177/9–52). ಕೊನೆಗೆ ಇವನು ಧನಭೋಗಗಳಿಂದ ವಿರಕ್ತನಾಗಿ ಪರಮಾನಂದ ಸ್ವರೂಪ ಪರಬ್ರಹ್ಮನನ್ನು ಪಡೆದನು (ಶಾಂತಿ 177/53–54).

**ಮಙ್ಗ** – ಶಾಕದ್ವೀಪದ ಒಂದು ಜನಪದ. ಅದರಲ್ಲಿ ಹೆಚ್ಚಾಗಿ ಕರ್ತವ್ಯಪಾಲನೆಯಲ್ಲಿ ತತ್ಪರ ರಾದ ಬ್ರಾಹ್ಮಣರು ವಾಸಿಸುತ್ತಾರೆ (ಭೀಷ್ಮ 11/36).

**ಮಚಕ್ರುಕ** – ಸಮಂತಪಂಚಕ ಮತ್ತು ಕುರು ಕ್ಷೇತ್ರದ ಗಡಿಯನ್ನು ನಿರ್ಧರಿಸುವ ಒಂದು ಸ್ಥಳ. ಇಲ್ಲಿ ಮಚ ಕ್ರುಕರೆಂಬ ಯಕ್ಷರು ದ್ವಾರಪಾಲ ರೂಪದಲ್ಲಿ ವಾಸಿಸುತ್ತಾರೆ. ಈ ಯಕ್ಷರಿಗೆ ನಮಸ್ಕಾರ ಮಾಡಿದರೆ ಸಹಸ್ರ ಗೋದಾನದ ಫಲಪ್ರಾಪ್ತವಾಗುತ್ತದೆ (ವನ 83/9; ಶಲ್ಯ 53/24).

**ಮಜ್ಜಾನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

**ಮಞ್ಜುಲಾ** – ಭಾರತ ವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಇಲ್ಲಿರುವ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/34).

**ಮಣಿ** – (1) ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/19).

(2) ಒಬ್ಬ ಋಷಿ. ಈತ ಬ್ರಹ್ಮಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 11/24).

(3) ಚಂದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸುಮಣಿ ಎಂದಾಗಿತ್ತು (ಶಲ್ಯ 45/32).

**ಮಣಿಕಾಂಚನ** – ಶ್ಯಾಮಗಿರಿಯ ಹತ್ತಿರವಿರುವ ಶಾಕದ್ವೀಪದ ಒಂದು ದೇಶ (ಭೀಷ್ಮ 11/26).

**ಮಣಿಕುಟ್ಟಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/20).

**ಮಣಿಜಲಾ** – ಶಾಕದ್ವೀಪದ ಒಂದು ಪ್ರಮುಖ ನದಿ (ಭೀಷ್ಮ 11/32).

**ಮಣಿನಾಗ** – (1) ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/6). ಗಿರಿವ್ರಜದ ಬಳಿ ಇವನ ನಿವಾಸಸ್ಥಾನವಿತ್ತು (ಸಭಾ 21/9).
(2) ಒಂದು ತೀರ್ಥ. ಇಲ್ಲಿ ಒಂದು ರಾತ್ರಿ ವಾಸಿಸುವುದರಿಂದ ಸಹಸ್ರ ಗೋದಾನದ ಫಲ ಸಿಗುತ್ತದೆ. ಈ ತೀರ್ಥದ ಪ್ರಸಾದ ಭಕ್ಷಣೆ ಮಾಡುವುದರಿಂದ, ಸರ್ಪದಂಶನದ ವಿಷ, ಪ್ರಭಾವ ಬೀರುವುದಿಲ್ಲ (ವನ 84/106).

**ಮಣಿಪರ್ವತ** – ಒಂದು ಪರ್ವತ. ಇಲ್ಲಿ ಹದಿನಾರು ಸಾವಿರದ ಒಂದು ನೂರು ಮಂದಿ ಅಪಹೃತ ಕನ್ಯೆಯರಿಗೆ ಇರಲು, ದುಷ್ಟ ಭೌಮಾಸುರನು ಅಂತಃಪುರದ ನಿರ್ಮಾಣ ಮಾಡಿಸಿದ್ದನು (ಸಭಾ 38/29).

**ಮಣಿಪೂರ** – ಇದು ಧರ್ಮಜ್ಞನಾದ ರಾಜಾ ಚಿತ್ರವಾಹನನ ರಾಜಧಾನಿಯಾಗಿತ್ತು. ತೀರ್ಥ ಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಅರ್ಜುನನ ಆಗಮನವಾಗಿತ್ತು. ಅವನು ಚಿತ್ರಾಂಗದೆಯನ್ನು ವಿವಾಹವಾಗಿ ಮೂರು ವರ್ಷಗಳವರೆಗೆ ಇಲ್ಲಿ ವಾಸಿಸಿದ್ದನು. ಅರ್ಜುನನ ಮೂಲಕ ಚಿತ್ರಾಂಗದೆಯ ಗರ್ಭದಿಂದ ಇಲ್ಲಿಯೇ ಬಭ್ರುವಾಹನನ ಜನನವಾಗಿತ್ತು (ಸಭಾ 214/13–27). ಅಶ್ವಮೇಧದ ಕುದುರೆಯನ್ನು ಹಿಂಬಾಲಿಸುತ್ತಾ, ಮಣಿಪೂರಕ್ಕೆ ಅರ್ಜುನನ ಪುನರಾಗಮನ. ಪಿತಾ–ಪುತ್ರರ ಘೋರ ಯುದ್ಧ (ಆಶ್ವ 79).

**ಮಣಿಪುಷ್ಪಕ** – ಸಹದೇವನ ಶಂಖದ ಹೆಸರು (ಭೀಷ್ಮ 25/16).

**ಮಣಿಭದ್ರ** – ಒಬ್ಬ ಯಕ್ಷ. ಇವನು ಕುಬೇರ ಸಭೆಯಲ್ಲಿರುತ್ತಾ ಅವನ ಸೇವೆ ಮಾಡುತ್ತಾನೆ (ಸಭಾ 10/15). ಇವನು ಯಾತ್ರಿಕರ ಮತ್ತು ವ್ಯಾಪಾರಿಗಳ ಉಪಾಸ್ಯ ದೇವನಾಗಿದ್ದಾನೆ (ವನ 64/130; ವನ 65/22). ಕುಂಡಧಾರ ಮೇಘನ ಪ್ರಾರ್ಥನೆಯಿಂದ ಇವನು ಬ್ರಾಹ್ಮಣನಿಗೆ ವರದಾನ ಮಾಡಿದುದು (ಶಾಂತಿ 271/21–22). ಇವನ ಮೂಲಕ ಅಷ್ಟಾವಕ್ರಮುನಿಯ ಸ್ವಾಗತ (ಅನು 19/33). ಮರುತ್ತನ ಧನವನ್ನು ತರಲು ಹೋಗುವಾಗ ಯುಧಿಷ್ಠಿರನು ಈತನಿಗೆ ಪಾಯಸ, ಹಣ್ಣಿನ ತಿರುಳು ಮತ್ತು ಜಲಾಂಜಲಿಯನ್ನಿತ್ತು ಪೂಜೆ ಮಾಡಿದ್ದನು (ಆಶ್ವ 65/7).

**ಮಣಿಮತೀಪುರಿ** – ಇದು ಇಲ್ವಲ ದೈತ್ಯನ ಪಟ್ಟಣವಾಗಿತ್ತು (ವನ 96/4).

**ಮಣಿಮಂಥ** – ಒಂದು ಪರ್ವತ. ಇಲ್ಲಿ ಶ್ರೀಕೃಷ್ಣನು ಲಕ್ಷ–ಕೋಟಿಗಟ್ಟಲೆ ವರ್ಷಗಳವರೆಗೆ ಶಿವನ ಆರಾಧನೆ ಮಾಡಿದ್ದನು (ಅನು 18/33).

**ಮಣಿಮಂತ** (ಮಣಿಮಾನ್) – (1) ಒಬ್ಬ ರಾಜ. ಇವನು ದನಾಯುವಿನ ಪುತ್ರ ವೃತ್ತನೆಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/44). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/22). ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಇವನನ್ನು ಸೋಲಿಸಿದ್ದನು (ಸಭಾ 30/11). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/20). ಭೂರಿಶ್ರವನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 25/53–55). ದ್ರೋಣಾಚಾರ್ಯನಿಂದ ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/13–14).
(2) ಒಬ್ಬ ನಾಗ. ಇವನು ವರುಣನ ಸಭೆಯಲ್ಲಿದ್ದು, ಆತನ ಉಪಾಸನೆ ಮಾಡುತ್ತಾನೆ (ಸಭಾ 9/9).
(3) ಒಂದು ತೀರ್ಥ. ಇಲ್ಲಿ ಒಂದು ರಾತ್ರಿ ವಾಸ ಮಾಡಿದರೆ ಅಗ್ನಿಷ್ಟೋಮ ಯಜ್ಞದ ಫಲಪ್ರಾಪ್ತಿಯಾಗುತ್ತದೆ (ವನ 82/101).
(4) ಒಬ್ಬ ಯಕ್ಷ ಅಥವಾ ರಾಕ್ಷಸ. ಇವನು ಕುಬೇರನ ಸಖನಾಗಿದ್ದನು. ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ವಧೆ (ವನ 160/59–77). ಅಗಸ್ತ್ಯನನ್ನು ಅಪಮಾನಗೊಳಿಸಿದುದರಿಂದ, ಅವನ ಮೂಲಕ ಇವನಿಗೆ ಶಾಪ ದೊರಕಿದುದರ ವರ್ಣನೆ (ವನ 161/60–62).
(5) ಒಂದು ಪರ್ವತ. ಇದು ಸ್ವಪ್ನದಲ್ಲಿ ಶ್ರೀಕೃಷ್ಣನೊಂದಿಗೆ ಶಿವನ ಬಳಿಗೆ ಹೋಗುತ್ತಿದ್ದ ಅರ್ಜುನನಿಗೆ ದಾರಿಯಲ್ಲಿ ಸಿಕ್ಕಿತ್ತು (ದ್ರೋಣ 80/24).

**ಮಣ್ಣಕ** – ಒಂದು ಭಾರತೀಯ ಜನಪದ (ಭೀಷ್ಮ 9/43).

**ಮಣ್ಡಲಕ** – ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/8).

**ಮಣ್ಡೂಕ** – ಕುದುರೆಗಳಲ್ಲಿ ಒಂದು ಜಾತಿ. ಈ ಜಾತಿಯ ಅನೇಕ ಅಶ್ವಗಳನ್ನು, ಅರ್ಜುನನು ದಿಗ್ವಿಜಯ ಕಾಲದಲ್ಲಿ ಗಂಧರ್ವನಗರದಿಂದ, ಕಪ್ಪದ ರೂಪದಲ್ಲಿ ಪಡೆದಿದ್ದನು (ಸಭಾ 28/6).

**ಮತಙ್ಗ** – (1) ಒಬ್ಬ ಪ್ರಾಚೀನ ರಾಜರ್ಷಿ. ಇವನು ಶಾಪದಿಂದ ವ್ಯಾಧನಾಗಿದ್ದನು. ಇವನು ದುರ್ಭಿಕ್ಷಕಾಲದಲ್ಲಿ ವಿಶ್ವಾಮಿತ್ರನ ಪತ್ನಿಯನ್ನು ಸಾಕಿದ್ದನು (ಆದಿ 71/31). ಮಹರ್ಷಿ ವಿಶ್ವಾಮಿತ್ರನು ಪುರೋಹಿತನಾಗಿ ಇವನ ಯಜ್ಞವನ್ನು ಸಾಂಗಗೊಳಿಸಿದ್ದನು. ಅಲ್ಲಿಗೆ ಇಂದ್ರನು ಸೋಮ ಪಾನ ಮಾಡಲು ಸ್ವತಃ ಆಗಮಿಸಿದ್ದನು (ಆದಿ 71/33).

(2) ಒಬ್ಬ ಮಹರ್ಷಿ. ಅವನ ಆಶ್ರಮ ತೀರ್ಥ ವೆಂದು ತಿಳಿಯಲ್ಪಡುತ್ತದೆ (ವನ 84/101).

(3) ಇವನು ಬ್ರಾಹ್ಮಣಿಯ ಗರ್ಭದಲ್ಲಿ ಬ್ರಾಹ್ಮಣೇತರನಿಂದ ಜನಿಸಿದ್ದನು (ಅನು 27/8). ಗರ್ದಭಿಯೊಂದಿಗೆ ಇವನ ಸಂವಾದ (ಅನು 27/11–19). ಬ್ರಾಹ್ಮಣ್ಯ ಪ್ರಾಪ್ತಿಗಾಗಿ ಇವನ ತಪಸ್ಸು (ಅನು 27/22–23). ವರಕೊಡಲು ಬಂದ ಇಂದ್ರನೊಡನೆ ಇವನ ಸಂವಾದ (ಅನು 27/24 ರಿಂದ 29/12). ಇವನು ಇಂದ್ರನೊಡನೆ ವರ ಬೇಡಿದುದು. ಇಂದ್ರನು ವರ ನೀಡಿದುದು (ಅನು 29/22–25). ಪ್ರಾಣತ್ಯಾಗದ ಅನಂತರ ಇವನಿಗೆ ಉತ್ತಮ ಸ್ಥಾನಪ್ರಾಪ್ತಿ (ಅನು 29/26).

**ಮತಂಗಕೇದಾರ** – ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯ ಸಹಸ್ರ ಗೋದಾನದ ಫಲಪಡೆಯುತ್ತಾನೆ (ವನ 85/17–18; ವನ 87/25).

**ಮತಂಗಾಶ್ರಮ** – ಶ್ರಮ ಮತ್ತು ಶೋಕ ನಾಶಮಾಡುವ ಈ ಆಶ್ರಮಕ್ಕೆ ಪ್ರವೇಶ ಮಾಡಿದರೆ, ಮನುಷ್ಯ ಗವಾಯನ ಯಜ್ಞದ ಫಲ ಪಡೆಯುತ್ತಾನೆ (ವನ 84/101).

**ಮತಿ** – ದಕ್ಷ ಪ್ರಜಾಪತಿಯ ಮಗಳು ಮತ್ತು ಧರ್ಮರಾಜನ ಪತ್ನಿ (ಆದಿ 66/15).

**ಮತಿನಾರ** – ಪೂರುವಂಶದ ಒಬ್ಬ ರಾಜ. ಇವನು ಪೂರುವಿನ ಮೊಮ್ಮಗನಾದ ಅನಾಧೃಷ್ಟಿ (ಋಚೇಯು).ಯ ಪುತ್ರ. ಇವನು ಮಹಾ ಧಾರ್ಮಿಕನು. ಅಶ್ವಮೇಧಾದಿ ದೊಡ್ಡ ದೊಡ್ಡ ಯಜ್ಞಗಳನ್ನು ಪೂರೈಸಿದ್ದನು. ಇವನಿಗೆ ತಂಸು, ಮಹಾನ್, ಅತಿರಥ ಮತ್ತು ದ್ರುಹ್ಯು ಎಂಬ ನಾಲ್ವರು ಪುತ್ರರಿದ್ದರು (ಆದಿ 94/13–14). (ಆದಿ ಪರ್ವದ 94ನೇ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ಪರಂಪರೆಗೆ ಅನುಸಾರವಾಗಿ, ರಾಜಾ ಮತಿನಾರನು ಪೂರುವಿನ ನಾಲ್ಕನೇ ತಲೆಮಾರಿನಲ್ಲಿ ಬರುತ್ತಾನೆ ಆದರೆ ಆದಿಪರ್ವದ 95ನೇ ಅಧ್ಯಾಯದ 11ರಿಂದ 26ರ ವರೇಗಿನ ಶ್ಲೋಕಗಳಲ್ಲಿ ಮಾಡಲ್ಪಟ್ಟ ಪೂರುವಂಶದ ವರ್ಣನೆ ಪ್ರಕಾರ, ರಾಜಾ ಮತಿನಾರನು ಪೂರುವಿನಿಂದ 16ನೇ ತಲೆಮಾರಿನಲ್ಲಿ ಬರುತ್ತಾನೆ.).

**ಮತ್ಕುಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಮತ್ತಮಯೂರ**– ಒಂದು ಕ್ಷತ್ರಿಯ ಸಮುದಾಯ. ಪಶ್ಚಿಮದಿಗ್ವಿಜಯ ಕಾಲದಲ್ಲಿ ನಕುಲನು ಇದನ್ನು ಗೆದ್ದಿದ್ದನು (ಸಭಾ 32/5).

**ಮತ್ಸ್ಯ** – (1) ಒಬ್ಬ ರಾಜ. ಈತ ಉಪರಿಚರ ವಸುವಿನ ವೀರ್ಯದ ಮೂಲಕ ಮೀನಿನ ಗರ್ಭದಿಂದ ಜನಿಸಿದ್ದನು (ಆದಿ 63/50–63). ಇವನು ಯಮಸಭೆಯಲ್ಲಿದ್ದುಕೊಂಡು, ಸೂರ್ಯಪುತ್ರ ಯಮನ ಉಪಾಸನೆಮಾಡುತ್ತಾನೆ (ಸಭಾ 8/10).

(2) ಒಂದು ದೇಶ ಮತ್ತು ಅಲ್ಲಿರುವ ನಿವಾಸಿಗಳು. ಕಾಡಿನಲ್ಲಿ ಸುತ್ತಾಡುತ್ತಾ ಪಾಂಡವರು ಮತ್ಸ್ಯದೇಶಕ್ಕೆ ಬಂದಿದ್ದರು (ಆದಿ 155/2). ಇಲ್ಲಿರುವ ನಿವಾಸಿಗಳು ಜರಾಸಂಧನ ಭಯದಿಂದ, ಉತ್ತರದಿಕ್ಕನ್ನು ಬಿಟ್ಟು, ದಕ್ಷಿಣ ಭಾಗಕ್ಕೆ ಓಡಿಹೋಗಿದ್ದರು (ಸಭಾ 14/28). ಪೂರ್ವ ದಿಗ್ವಿಜಯದ ಸಂದರ್ಭದಲ್ಲಿ ಭೀಮಸೇನನು ಈ ದೇಶದ ಮೇಲೆ ವಿಜಯ ಪಡೆದಿದ್ದನು (ಸಭಾ 30/8). ಸಹದೇವನೂ ದಕ್ಷಿಣ ದಿಗ್ವಿಜಯ ಕಾಲದಲ್ಲಿ ಇದನ್ನು ಗೆದ್ದಿದ್ದನು (ಸಭಾ 31/4). ಅರ್ಜುನನ ಮೂಲಕ ಅಜ್ಞಾತ ವಾಸಕ್ಕೋಸ್ಕರ ಆರಿಸಲ್ಪಟ್ಟ ದೇಶಗಳಲ್ಲಿ ಈ ಮತ್ಸ್ಯದೇಶವೂ ಸೇರಿತ್ತು (ವಿರಾಟ 1/12–13). ಮಹಾಭಾರತ ಕಾಲದಲ್ಲಿ ವಿರಾಟ ಇಲ್ಲಿ ರಾಜನಾಗಿದ್ದನು (ವಿರಾಟ 1/17). ಮತ್ಸ್ಯನರೇಶ ವಿರಾಟನಲ್ಲಿಯೇ

ಪಾಂಡವರು ತಮ್ಮ ಅಜ್ಞಾತವಾಸದ ಸಮಯವನ್ನು ಕಳೆದಿದ್ದರು (ವಿರಾಟ 7). ಮತ್ಸ್ಯದೇಶದ ರಾಜಾ ವಿರಾಟನು ಒಂದು ಅಕ್ಷೌಹಿಣೀ ಸೇನೆಯೊಂದಿಗೆ ಯುಧಿಷ್ಠಿರನ ಸಹಾಯಕ್ಕೆ ಬಂದಿದ್ದನು (ಉದ್ಯೋಗ 19/12). ಈ ದೇಶ ಭಾರತದ ಪ್ರಮುಖ ಜನಪದಗಳಲ್ಲಿ ಗಣಿಸಲ್ಪಟ್ಟಿದೆ (ಭೀಷ್ಮ 9/40). ಮತ್ಸ್ಯದೇಶದ ಕೆಲವು ಸೈನಿಕರು ಭೀಷ್ಮನಿಂದ ಕೊಲ್ಲಲ್ಪಟ್ಟಿದ್ದರು (ಭೀಷ್ಮ 49/42). ದ್ರೋಣಾಚಾರ್ಯನಿಂದ ಮತ್ಸ್ಯದೇಶದ ಐನೂರು ವೀರರ ವಧೆ ಒಂದೇ ಕಾಲದಲ್ಲಿ ನಡೆದಿತ್ತು (ದ್ರೋಣ 190/31). ಕರ್ಣನೂ ಮೊದಲೊಮ್ಮೆ ಈ ದೇಶವನ್ನು ಗೆದ್ದಿದ್ದನು (ಕರ್ಣ 8/18). ಇಲ್ಲಿ ವಾಸಿಸುವವರು ಧರ್ಮವನ್ನು ತಿಳಿದವರೂ, ಸತ್ಯವಾದಿಗಳೂ ಆಗಿದ್ದರು (ಕರ್ಣ 45/28, 30). ಯುದ್ಧದಲ್ಲಿ ಬದುಕಿ ಉಳಿದ ಮತ್ಸ್ಯದೇಶದ ವೀರರನ್ನು ಅಶ್ವತ್ಥಾಮನು ಸಂಹಾರ ಮಾಡಿದುದು (ಸೌಪ್ತಿಕ 8/158–159).

**ಮತ್ಸ್ಯಗಂಧಾ** – ದಾಶರಾಜನಿಂದ ಪೋಷಿಸಲ್ಪಟ್ಟ ಕನ್ಯೆ (ಆದಿ 63/69, 86). (ವಿಶೇಷ ನೋಡಿರಿ– ಸತ್ಯವತಿ).

**ಮಥುರಾ** – (ಪುರಾಣಾನುಸಾರ ಏಳು ಮೋಕ್ಷದಾಯಕ ಪಟ್ಟಣಗಳಲ್ಲಿ ಒಂದು ಪುರದ ಹೆಸರು. ಇದು ವ್ರಜದಲ್ಲಿ ಯಮುನೆಯ ಬಲ ದಂಡೆಯಲ್ಲಿದೆ. ರಾಮಾಯಣ (ಉತ್ತರಕಾಂಡ) ಪ್ರಕಾರ ಇದನ್ನು ಮಧುವೆಂಬ ದೈತ್ಯನು ಸ್ಥಾಪಿಸಿದ್ದನು. ಅವನ ಮಗ ಲವಣಾಸುರನನ್ನು ಗೆದ್ದು, ಶತ್ರುಘ್ನನು ಇಲ್ಲಿ ವಿಜಯಸಾಧಿಸಿದ್ದನು. ಪಾಲಿ ಭಾಷೆಯ ಗ್ರಂಥಗಳಲ್ಲಿ ಇದನ್ನು ಮಥುರಾ ಎಂದು ಬರೆದಿದ್ದಾರೆ. ಮಹಾಭಾರತ ಕಾಲದಲ್ಲಿ, ಇಲ್ಲಿ ಶೂರಸೇನ ವಂಶದವರ ರಾಜ್ಯವಿತ್ತು. ಇದೇ ವಂಶದ ಒಂದು ಶಾಖೆಯಲ್ಲಿ ಭಗವಾನ್ ಶ್ರೀಕೃಷ್ಣನ ಜನನವಾಗಿತ್ತು. ಶೂರಸೇನ ವಂಶಜರ ಅನಂತರ ಅಶೋಕನ ಸಮಯದಲ್ಲಿ ಅವನ ಆಚಾರ್ಯ ಉಪಗುಪ್ತನು ಇದನ್ನು ಬೌದ್ಧ ಧರ್ಮದ ಕೇಂದ್ರವಾಗಿ ಮಾಡಿದ್ದನು. ಇದು ಜೈನರ ತೀರ್ಥಸ್ಥಾನವೂ ಆಗಿದೆ. ಅವರ ಹತ್ತೊಂಭತ್ತನೇ ತೀರ್ಥಂಕರ ಮಲ್ಲಿನಾಥನ ಜನ್ಮಸ್ಥಾನ ಇದೇ ಆಗಿದೆ. ಮೌರ್ಯಸಾಮ್ರಾಜ್ಯದ ಅನಂತರ ಈ ಸ್ಥಾನವು ಅನೇಕ ಗ್ರೀಕ್, ಫಾರ್ಸಿ, ಮತ್ತು ಶಕ ಕ್ಷತ್ರಿಯರ ಅಧಿಕಾರದಲ್ಲಿತ್ತು. ಮಹಮೂದ್ ಗಜನವೀ ಕ್ರಿ.ಶ. 1017ರಲ್ಲಿ ಆಕ್ರಮಣಮಾಡಿ, ಈ ನಗರವನ್ನು ನಷ್ಟ ಭ್ರಷ್ಟಗೊಳಿಸಿದ್ದನು. ಇತರ ಮುಸಲ್ಮಾನ ಬಾದಶಹರೂ ಆಗಾಗ ಆಕ್ರಮಣ ಮಾಡಿ, ಇದನ್ನು ಪುಡಿಪುಡಿ ಮಾಡಿದರು. ಇಲ್ಲಿ ಹಿಂದುಗಳ ಅನೇಕ ಮಂದಿರಗಳಿವೆ. ಇದು ಅನೇಕ ಕೃಷ್ಣೋಪಾಸಕ ವೈಷ್ಣವ ಸಂಪ್ರದಾಯದ ಆಚಾರ್ಯರ ಕೇಂದ್ರವಾಗಿದೆ. ಮಥುರಾದ ಇನ್ನೊಂದು ಹೆಸರು ಶೂರಸೇನಪುರವಾಗಿದೆ (ಸಭಾ 38). ಇಲ್ಲಿಯೇ ಭಗವಾನ್ ಶ್ರೀಕೃಷ್ಣನ ಅವತಾರವಾಯಿತು. ನವಜಾತ ಬಾಲಕ ಶ್ರೀಹರಿಯನ್ನು, ವಸುದೇವನು ಕಂಸನ ಭಯದಿಂದ, ಮಥುರೆಯಿಂದ ತೆಗೆದುಕೊಂಡುಹೋಗಿ, ನಂದ ಗೋಪನ ಮನೆಯಲ್ಲಿ ಅಡಗಿಸಿಟ್ಟನು (ಸಭಾ 38). ಮಥುರೆಯಲ್ಲಿಯೇ ಶ್ರೀಕೃಷ್ಣನು ಆಂಧ್ರ ದೇಶದ ಮಲ್ಲನಾದ ಚಾಣೂರನ ವಧೆ ಮಾಡಿದ್ದನು. ಅಲ್ಲಿಯೇ ಬಲದೇವನು ಮುಷ್ಟಿಕನನ್ನು ಕೊಂದಿದ್ದನು. ಅದೇ ನಗರದಲ್ಲಿ ಶ್ರೀಕೃಷ್ಣನು ಕಂಸನ ಸಹೋದರ ಮತ್ತು ಸೇನಾಪತಿಯಾದ ಸುನಾಮನ ಸಂಹಾರ ಮಾಡಿದನು. ಐರಾವತ ಕುಲದಲ್ಲಿ ಹುಟ್ಟಿದ ಕುವಲಯಾಪೀಡವನ್ನು ನಾಶ ಮಾಡಿದನು. ಕಂಸನನ್ನು ಕೊಂದು, ಉಗ್ರಸೇನನನ್ನು ಮಥುರಾ ರಾಜ್ಯದಲ್ಲಿ ಅಭಿಷಿಕ್ತನಾಗಿ ಮಾಡಿ, ತನ್ನ ಮಾತಾಪಿತರ ಪಾದಗಳಿಗೆ ವಂದಿಸಿದನು (ಸಭಾ 38). ಶ್ರೀಕೃಷ್ಣನು ಶೂರಸೇನಪುರವಾದ ಮಥುರೆಯನ್ನು ಬಿಟ್ಟು ದ್ವಾರಕೆಗೆ ಹೊರಟುಹೋಗಿದ್ದನು (ಸಭಾ 38). ಕಂಸನು ಕೊಲ್ಲಲ್ಪಟ್ಟಾಗ, ಅವನ ಪತ್ನಿಯರ ಪ್ರೇರಣೆಯಿಂದ ಜರಾಸಂಧನು ಮಥುರೆಯ ಮೇಲೆ ಆಕ್ರಮಣ ಮಾಡಿದನು. ಅವನ ಮಂತ್ರಿಗಳಾದ ಹಂಸ ಮತ್ತು ಡಿಂಭಕರು ಆತ್ಮಹತ್ಯೆ ಮಾಡಿಕೊಂಡಾಗ ಉತ್ಸಾಹಶೂನ್ಯನಾಗಿ, ಆತ ಹಿಂತಿರುಗಿದನು. ಇದರಿಂದಾಗಿ ಮಥುರಾವಾಸಿಯಾದವರು ಆನಂದದಿಂದ ಅಲ್ಲಿ ವಾಸಿಸಲು ತೊಡಗಿದರು. ಅನಂತರ ತನ್ನ ಪುತ್ರಿಯರ ಪ್ರೇರಣೆಯಿಂದ, ಜರಾಸಂಧನು ಪುನಃ ಆಕ್ರಮಣ ಮಾಡಿದಾಗ, ಯಾದವರು ಅಲ್ಲಿಂದ ಓಡಿಹೋದರು ಮತ್ತು ರೈವತಕ ಪರ್ವತದಿಂದ ಸುಶೋಭಿತವಾದ ಕುಶಸ್ಥಲಿಗೆ ಹೋಗಿ ವಾಸಿಸತೊಡಗಿದರು (ಸಭಾ

14/35–50). ಜರಾಸಂಧನು ಗಿರಿವ್ರಜದಿಂದ ಒಂದು ಗದೆಯನ್ನು ಎಸೆದಿದ್ದನು. ಅದು ಮಥುರೆಯ ಒಂದು ಸ್ಥಳದಲ್ಲಿ ಬಿದ್ದಿತು. ಆ ಸ್ಥಳ ಗದಾವಸಾನವೆಂದು ಪ್ರಸಿದ್ಧವಾಯಿತು (ಸಭಾ 19/23–24). ಮಥುರೆಯ ಯೋಧರು ಮಲ್ಲ ಯುದ್ಧದಲ್ಲಿ ನಿಪುಣರಾಗಿರುತ್ತಾರೆ (ಶಾಂತಿ 101/5). ಸಾಕ್ಷಾತ್ ನಾರಾಯಣನೇ ಕಂಸವಧೆ ಮಾಡುವುದಕ್ಕೋಸ್ಕರ ಮಥುರೆಯಲ್ಲಿ ಶ್ರೀಕೃಷ್ಣ ರೂಪದಿಂದ ಅವತಾರ ಹೊಂದಿದ್ದನು (ಶಾಂತಿ 339/89–90).

**ಮದಧಾರ** – ಒಂದು ಪರ್ವತ. ಅದನ್ನು ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನನು ಗೆದ್ದಿದ್ದನು (ಸಭಾ 30/9).

**ಮದಯಂತೀ** – ರಾಜಾ ಮಿತ್ರಸಹ (ಕಲ್ಮಾಷಪಾದ ಅಥವಾ ಸೌದಾಸ)ನ ಪತ್ನಿ. ಈಕೆಯ ಗರ್ಭ ದಿಂದ ವಸಿಷ್ಠನ ಮೂಲಕ ಅಶ್ಮಕನ ಜನನ ವಾಯಿತು (ಆದಿ 176/43–46; ಆದಿ 181/26; ಶಾಂತಿ 234/30). ಕುಂಡಲದ ಯಾಚನೆಗಾಗಿ ಹೋದ ಉತ್ತಂಕಮುನಿಯೊಂದಿಗೆ ಇವನ ಸಂವಾದ (ಆಶ್ವ 57/21–28). ಉತ್ತಂಕನಿಗೆ ಕುಂಡಲವನ್ನಿತ್ತದ್ದು (ಆಶ್ವ 58/3).

**ಮದಾಸುರ** – ಚ್ಯವನನ ಮೂಲಕ ಸೃಷ್ಟಿಸಲ್ಪಟ್ಟ ಕೃತ್ಯೆಯ ರೂಪದಲ್ಲಿ ಒಬ್ಬ ವಿಶಾಲಕಾಯ ಅಸುರ (ವನ 124/19).

**ಮದಿರಾ** – ವಸುದೇವನ ಅನೇಕ ಪತ್ನಿಯರಲ್ಲಿ ಒಬ್ಬಳು. ಇವಳು ದೇವಕಿ, ಭದ್ರಾ ಮತ್ತು ರೋಹಿಣಿಯೊಂದಿಗೆ, ಪತಿಯ ಚಿತೆಯನ್ನೇರಿ ಭಸ್ಮವಾಗಿದ್ದಳು (ಮೌಸಲ 7/18).

**ಮದಿರಾಕ್ಷ** (ಮದಿರಾಶ್ವ) – ಮತ್ಸ್ಯನರೇಶ ವಿರಾಟನ ಸಹೋದರ. ತ್ರಿಗರ್ತರ ಮೂಲಕ ಗೋಗ್ರಹಣವಾದಾಗ, ಇವನು ಕವಚ ಧರಿಸಿ, ಯುದ್ಧಕ್ಕೆ ಹೊರಟದ್ದು (ವಿರಾಟ 31/12–13). ಗೋಹರಣ ಕಾಲದಲ್ಲಿ ತ್ರಿಗರ್ತರೊಡನೆ ಇವನ ಯುದ್ಧ (ವಿರಾಟ 32/19–21). ಇವನು ವಿರಾಟ ರಾಜನ ಚಕ್ರರಕ್ಷಕನೂ ಆಗಿದ್ದನು (ವಿರಾಟ 33/40). ಇವನು ಒಬ್ಬ ಉದಾರ ರಥಿಕ, ಎಲ್ಲಾ ಅಸ್ತ್ರಗಳ ಜ್ಞಾನಿ ಮತ್ತು ಮನಸ್ವೀ ವೀರನಾಗಿದ್ದನು (ಉದ್ಯೋಗ 171/15). ದ್ರೋಣಾಚಾರ್ಯನಿಂದ ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/34).

**ಮದಿರಾಶ್ವ** – ಒಬ್ಬ ರಾಜರ್ಷಿ. ಇವನು ಇಕ್ಷ್ವಾಕು ಕುಮಾರ ದಶಾಶ್ವನ ಪುತ್ರನಾಗಿದ್ದನು. ಇವನು ಪರಮ ಧರ್ಮಾತ್ಮ, ಸತ್ಯವಾದಿ, ತಪಸ್ವೀ, ದಾನಿ ಮತ್ತು ವೇದ ಹಾಗೂ ಧನುರ್ವೇದದ ಅಭ್ಯಾಸದಲ್ಲಿ ತತ್ಪರನಾದ್ದನು (ಅನು 2/7–8). ಹಿರಣ್ಯಹಸ್ತನಿಗೆ ಕನ್ಯಾದಾನಮಾಡಿ ದೇವವಂದಿತ ಲೋಕಗಳಿಗೆ ಹೋಗಿದ್ದನು (ಶಾಂತಿ 234/35; ಅನು 137/24).

**ಮದ್ರ** – ಒಂದು ಪ್ರಾಚೀನ ಭಾರತೀಯ ಜನಪದ (ಇದು ಆಧುನಿಕ ಅಭಿಪ್ರಾಯದಂತೆ, ರಾವಿ ಮತ್ತು ಚಿನಾಬ್ ಅಥವಾ ರಾವಿ ಮತ್ತು ಝೀಲಂನ ಮಧ್ಯದ ಭೂಭಾಗದಲ್ಲಿ ನೆಲಸಿತ್ತು.). ಭೀಷ್ಮನು ವೃದ್ಧಮಂತ್ರಿಗಳು, ಬ್ರಾಹ್ಮಣರು ಮತ್ತು ಸೇನೆಯೊಂದಿಗೆ ಈ ದೇಶಕ್ಕೆ ಹೋದುದು ಮತ್ತು ಮದ್ರರಾಜ ಶಲ್ಯನೊಂದಿಗೆ ಪಾಂಡುವಿಗೋಸ್ಕರ ಮಾದ್ರಿಯನ್ನು ಸ್ವೀಕರಿಸಿದುದು (ಆದಿ 112/2–7). ಈ ಬಾಲಕನು ಮುಂದೆ ಮದ್ರ ಮೊದಲಾದ ದೇಶಗಳ ಮೇಲೆ ವಿಜಯ ಪಡೆಯುವವನೆಂದು ಅರ್ಜುನನ ಜನ್ಮಕಾಲದಲ್ಲಿ ಆಕಾಶವಾಣಿಯಾಗಿತ್ತು (ಆದಿ 122/40). ಪಾಂಡುಪುತ್ರ ನಕುಲನು ಈ ದೇಶದ ಮೇಲೆ ಪ್ರೀತಿಯಿಂದಲೇ ವಿಜಯ ಪಡೆದಿದ್ದನು (ಸಭಾ 32/14–15). ಮದ್ರ ಅಥವಾ ಮದ್ರದೇಶದ ಜನರು ಯುಧಿಷ್ಠಿರನಿಗೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 52/14). ಸತಿ ಸಾವಿತ್ರಿಯ ತಂದೆ ಅಶ್ವಪತಿ ಮದ್ರದೇಶದ ನರೇಶನೇ ಆಗಿದ್ದನು (ವನ 293/13). ಕರ್ಣನು ಮದ್ರ ಮತ್ತು ವಾಹೀಕ ಇತ್ಯಾದಿ ದೇಶಗಳನ್ನು ಆಚಾರಭ್ರಷ್ಟವೆಂದು ಹೇಳಿ, ಅವರನ್ನು ನಿಂದಿಸಿದ್ದನು (ಕರ್ಣ 44 ರಿಂದ 45).

**ಮದ್ರಕ** – (1) ಒಬ್ಬ ಪ್ರಾಚೀನ ಕ್ಷತ್ರಿಯ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/59–60).

(2) ಮದ್ರದೇಶದ ಯೋಧ. ಇವನು ಕೌರವ ಸೇನೆಯಲ್ಲಿದ್ದನು (ಭೀಷ್ಮ 51/7).

ಮದ್ರಕಲಿಂಗ – ಒಂದು ಭಾರತೀಯ ಜನಪದ (ಭೀಷ್ಮ 9/42).

**ಮಧು** – (1) ಒಬ್ಬ ಮಹಾ ದೈತ್ಯ. ಇವನು ಕೈಟಭನ ಸಹೋದರ. ಇವನು ಭಗವಾನ್ ವಿಷ್ಣುವಿನ ಕಿವಿಯ ಮಲದಿಂದ ಹುಟ್ಟಿದ್ದನು.

ಅವನೇ ಮಣ್ಣಿನಿಂದ ಈತನ ಆಕೃತಿ ತಯಾರಿಸಿದ್ದನು. ಇವನ ಚರ್ಮ ಮೃದುವಾಗಿರುವುದರಿಂದ, ಇವನ ಹೆಸರು ಮಧುವೆಂದು ಇಡಲ್ಪಟ್ಟಿತ್ತು (ಸಭಾ 38/29). ಕೈಟಭ ಸಹಿತನಾಗಿ ಈತ ಬ್ರಹ್ಮನನ್ನು ಕೊಲ್ಲಲು ಸಿದ್ಧನಾದನು (ವನ 12/39). ಇವನು ವಿಷ್ಣುವಿಗೆ ತನ್ನ ಮರಣದ ವರವನ್ನಿತ್ತದ್ದು (ವನ 203/30). ಇವನು ವಿಷ್ಣು ವಿನೊಡನೆ ವರಯಾಚಿಸಿದುದು (ವನ 203/31–32). ಇವನು ತಮೋಗುಣದಿಂದ ಜನಿಸಿದ್ದನು. ಇವನು ಅಸುರರ ಪೂರ್ವಜನಾಗಿದ್ದನು. ಇವನ ಸ್ವಭಾವ ತುಂಬಾ ಉಗ್ರವಾಗಿತ್ತು. ಇವನು ಸದಾ ಭಯಂಕರ ಕೆಲಸ ಮಾಡುವವನಾಗಿದ್ದನು. ಈ ಅಸುರನನ್ನು ವಿಷ್ಣು ಬ್ರಹ್ಮನ ಹಿತಕ್ಕಾಗಿಯೇ ಕೊಂದಿದ್ದನು. ಆದುದರಿಂದಲೇ ಆತ ಮಧು ಸೂದನನೆಂದು ಕರೆಯಲ್ಪಡುತ್ತಾನೆ (ಶಾಂತಿ 207 /14–16). ಇವನ ಹುಟ್ಟಿನ ವರ್ಣನೆ (ಶಾಂತಿ 347/25–26). ಭಗವಾನ್ ಹಯಗ್ರೀವನಿಂದ (ವಿಷ್ಣು). ಇವನ ವಧೆ (ಸಭಾ 38/29; ವನ 203/35; ಶಾಂತಿ 347/69–70).

(2) ಯಮನ ಸಭೆಯಲ್ಲಿರುವ ಒಬ್ಬ ರಾಜ (ಸಭಾ 8/16).

**ಮಧುಕುಂಭಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಮಧುಚ್ಛಂದಾ** – ಒಬ್ಬ ವಾನಪ್ರಸ್ಥನಾದ ಋಷಿ. ಈತ ಆ (ವಾನಪ್ರಸ್ಥ) ಧರ್ಮದ ಪಾಲನೆಯಿಂದ ಉತ್ತಮಲೋಕವನ್ನು ಪಡೆದನು (ಶಾಂತಿ 244/16). ಇವನು ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬನಾಗಿದ್ದನು (ಅನು 4/50).

**ಮಧುಪರ್ಕ** – (1) ದೇವತೆಗಳ, ಅತಿಥಿಗಳ ಪೂಜೆಯಲ್ಲಿ ಒಂದು ಉಪಚಾರಕ್ರಮ. ಇದು ವಿಶೇಷವಿಧಿಯಿಂದ ಅರ್ಪಿಸಲ್ಪಡುತ್ತದೆ (ವನ 52/41). (ಪ್ರಾಯಶಃ ಮೊಸರು, ಜೇನು ಮತ್ತು ತುಪ್ಪಗಳೇ ಮಧುಪರ್ಕದಲ್ಲಿ ಉಪಯೋಗಿಸಲ್ಪಡು ತ್ತವೆ. ಕೆಲವರು ಜೇನಿನ ಬದಲಾಗಿ ಸಕ್ಕರೆ ಹಾಕುತ್ತಾರೆ.)

(2) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/14).

**ಮಧುಮಂತ (ಮಧುಮಾನ್)** – ಒಂದು ಭಾರತೀಯ ಜನಪದ (ಭೀಷ್ಮ 9/53).

**ಮಧುರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/71).

**ಮಧುರಸ್ವರಾ** – ಸ್ವರ್ಗಲೋಕದ ಒಬ್ಬ ಅಪ್ಸರೆ. ಇವಳು ಅರ್ಜುನನ ಸ್ವಾಗತದಲ್ಲಿ ನೃತ್ಯ ಮಾಡಿದ್ದಳು (ವನ 43/30).

**ಮಧುಲಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/19).

**ಮಧುವಟೀ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿಗೆ ಹೋಗಿ ದೇವೀ ತೀರ್ಥದಲ್ಲಿ ಸ್ನಾನಮಾಡಿ, ಮಾನವನು ದೇವತೆ ಪಿತೃಗಳ ಪೂಜೆಮಾಡಿದರೆ, ದೇವಿಯ ಆಜ್ಞಾ ಪ್ರಕಾರ, ಸಹಸ್ರ ಗೋದಾನದ ಫಲ ಪಡೆಯು ತ್ತಾನೆ (ವನ 83/94).

**ಮಧುವನ** – ವಾನರ ರಾಜ ಸುಗ್ರೀವನ ಅಧಿಕಾರದಲ್ಲಿ ಸುರಕ್ಷಿತವಾಗಿದ್ದ ಒಂದು ವನ; ಹನುಮಂತ; ಅಂಗದ ಮೊದಲಾದವರು ಬಲಾತ್ಕಾರದಿಂದ ಅದರೊಳಗೆ ನುಗ್ಗಿ, ಅಲ್ಲಿರುವ ಮಧುವನ್ನು ಕುಡಿದಿದ್ದರು (ವನ 282/27–28).

**ಮಧುವರ್ಣ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ಮಧುವಿಲಾ** – ಕರ್ದಮಿಲಕ್ಷೇತ್ರದ ಹತ್ತಿರ ಹರಿಯುತ್ತಿರುವ ಒಂದು ಪ್ರಸಿದ್ಧ ನದಿ. ಅದರ ಇನ್ನೊಂದು ಹೆಸರು ಸಮಂಗಾ (ವನ 135/1). ವೃತ್ರಾಸುರನ ವಧೆಮಾಡಿ, ಕಾಂತಿಹೀನನಾದ ಇಂದ್ರ, ಸಮಂಗಾ ಅಥವಾ ಮಧುವಿಲಾದಲ್ಲಿ ಸ್ನಾನಮಾಡಿಯೇ ಪಾಪಮುಕ್ತನಾಗಲು ಸಾಧ್ಯ ವಾಗಿತ್ತು (ವನ 135/2). ತನ್ನ ತಂದೆ ಕಹೋಳನ ಆಜ್ಞೆಯಿಂದ, ಸಮಂಗಾದಲ್ಲಿ ಸ್ನಾನ ಮಾಡಿದ್ದ ರಿಂದ, ಅಷ್ಟಾವಕ್ರನ ಎಲ್ಲಾ ಅಂಗಗಳು ಸರಿ ಯಾಗಿದ್ದವು. ಇದರಿಂದಾಗಿಯೇ ಅದು ಪುಣ್ಯ ಮಯವಾಯಿತು. ಇದರಲ್ಲಿ ಸ್ನಾನಮಾಡುವ ಮನುಷ್ಯ ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ (ವನ 134/39–40).

**ಮಧುಸೂದನ** – ಶ್ರೀಕೃಷ್ಣನ ಒಂದು ಹೆಸರು. ಮಧುವೆಂಬ ಅಸುರನನ್ನು ಕೊಂದ ಕಾರಣ ಇವನು ಮಧುಸೂದನನೆಂದು ಹೇಳಲ್ಪಡುತ್ತಾನೆ (ವನ 207/16).

**ಮಧುಸ್ರವ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇದು ಪೃಥೂದಕದ

ಬಳಿ ಇದೆ. ಇದರಲ್ಲಿ ಸ್ನಾನ ಮಾಡುವುದರಿಂದ ಸಾವಿರ ಗೋದಾನದ ಫಲಸಿಗುತ್ತದೆ (ವನ 83/150).

**ಮನಸ್ಯು** – ಮಹಾರಾಜ ಪೂರುವಿನ ಮೊಮ್ಮಗ ಮತ್ತು ಪ್ರವೀರನ ಮಗ. ಇವನ ತಾಯಿಯ ಹೆಸರು 'ಶೂರಸೇನಿ'. ಇವನು ಚಕ್ರವರ್ತಿ ಸಮ್ರಾಟನಾಗಿದ್ದನು. ಇವನ ಮೂಲಕ, ಈತನ ಪತ್ನಿ ಸೌವೀರಿಯ ಗರ್ಭದಿಂದ ಮೂವರು ಪುತ್ರರು ಹುಟ್ಟಿದರು. – ಶಕ್ತ, ಸಂಹನನ ಮತ್ತು ವಾಗ್ಮಿ (ಆದಿ 94/6–7).

**ಮನಸ್ವಿನೀ** – ಪ್ರಜಾಪತಿ ದಕ್ಷನ ಪುತ್ರಿ, ಧರ್ಮ ರಾಜನ ಪತ್ನಿ ಮತ್ತು ಚಂದ್ರನ ತಾಯಿ (ಆದಿ 66/19).

**ಮನು** – (1) ಮಾನವಸೃಷ್ಟಿಯ ಪವರ್ತಕ ಆದಿ ಮನು. ಇವನು ವಿರಾಟ್ ಅಂಡದಿಂದ ಜನಿಸಿದನು (ಆದಿ 1/32). ಇವನ ಪುತ್ರಿ ಆರುಷಿ ಚ್ಯವನ ಮಹರ್ಷಿಯ ಪತ್ನಿ (ಆದಿ 66/46). ಇವನನ್ನೇ ಸ್ವಯಂಭೂವಿನ ಪುತ್ರನೆಂದು ತಿಳಿದು, 'ಸ್ವಾಯಂಭುವ'ನೆಂದು ಹೇಳಲಾಗಿದೆ. ಇವನು ಧರ್ಮಸಮ್ಮತ ವಿವಾಹದ ವಿಷಯದಲ್ಲಿ ತನ್ನ ನಿರ್ಣಯ ಹೇಳಿದ್ದಾನೆ (ಆದಿ 73/9). ಇವನು ಸೋಮನಿಗೆ ಚಾಕ್ಷುಷೀ ವಿದ್ಯೆಯನ್ನು ಪ್ರದಾನ ಮಾಡಿದ್ದನು (ಆದಿ 169/43). ಮಗಧ ದೇಶವನ್ನು ಮೇಘಗಳಿಗೆ ಅಪರಿಹಾರ್ಯವಾಗಿ ಮಾಡಿದ್ದನು. ಇದರಿಂದಾಗಿ ಮೋಡಗಳು ಸದಾ ಸಮಯಕ್ಕೆ ಸರಿಯಾಗಿ ಅಲ್ಲಿ ಮಳೆ ಸುರಿಸುತ್ತಿದ್ದವು (ಸಭಾ 21/10). ಇವನು ಇಂದ್ರನ ವಿಮಾನದಲ್ಲಿ ಕುಳಿತು, ಕೌರವರೊಂದಿಗೆ ಅರ್ಜುನನ ಯುದ್ಧ ನೋಡಲು ಬಂದಿದ್ದನು (ವಿರಾಟ 56/10). ಇವನ ಪತ್ನಿಯ ಹೆಸರು ಸರಸ್ವತಿ (ಉದ್ಯೋಗ 117/14). (ಪುರಾಣಾಂತರದಲ್ಲಿ ಶತರೂಪೆಯೆಂಬ ಹೆಸರಿದೆ.) ಬಿಂದು ಸರೋವರದ ದಡದಲ್ಲಿ ಇವನು ಸದಾ ಇರುತ್ತಾನೆ (ಭೀಷ್ಮ 7/46). ಪೃಥ್ವೀ ಧೇನುವಿನ ಹಾಲು ಕರೆಯುವಾಗ, ಇವನು ಕರುವಾಗಿದ್ದನು (ದ್ರೋಣ 69/21). ಇವನು ಸ್ಕಂದನ ಜನ್ಮ ಸಮಯದಲ್ಲಿ ಕೂಡಾ ಆಗಮಿಸಿದ್ದನು (ಶಲ್ಯ 45/10). ಸಿದ್ಧರೊಂದಿಗೆ ಇವನ ಸಂವಾದ, ಇವನ ವರ್ಣನೆ ಪ್ರಕಾರ ಧರ್ಮದ ಸ್ವರೂಪ, ಪಾಪದಿಂದ ಶುದ್ಧವಾಗಲು ಪ್ರಾಯಶ್ಚಿತ್ತ, ಅಭಕ್ಷ್ಯ ವಸ್ತುಗಳ ವರ್ಣನೆ, ದಾನಕ್ಕೆ ಅಧಿಕಾರಿಗಳು ಮತ್ತು ಅನಧಿಕಾರಿಗಳ ವಿವೇಚನೆ (ಶಾಂತಿ 36). ಇವನು ಮನುಷ್ಯರಲ್ಲಿ ಆದಿ ರಾಜನಾಗಿದ್ದನು (ಶಾಂತಿ 67/21–22). ಇವನನ್ನು ಪ್ರಜಾಪತಿ ಮನುವೆಂದೂ ಹೇಳುತ್ತಾರೆ. ಇವನು ಬೃಹಸ್ಪತಿಯ ಪ್ರಶ್ನೆಗಳಿಗೆ ಉತ್ತರಿಸುತ್ತಾ, ಜ್ಞಾನ ಮತ್ತು ತ್ಯಾಗಗಳ ಪ್ರಶಂಸೆ ಮಾಡುತ್ತಾ, ಆತನಿಗೆ ಪರಮಾತ್ಮ ತತ್ವವನ್ನು ಉಪದೇಶಿಸಿದನು ಮತ್ತು ಆತನ ಇತರ ಪ್ರಶ್ನೆಗಳನ್ನು ವಿವೇಚಿಸಿದನು (ಶಾಂತಿ ಅಧ್ಯಾಯ 201 ರಿಂದ 206). ಪಾಂಚರಾತ್ರ ಆಗಮಕ್ಕೆ ಅನುಸಾರವಾಗಿಯೇ, ಸ್ವಾಯಂಭುವ ಮನುವು ಧರ್ಮಶಾಸ್ತ್ರದ ನಿರ್ಮಾಣ ಮತ್ತು ಧರ್ಮೋಪದೇಶ ಮಾಡಿದನು (ಶಾಂತಿ 335/44–45). ಉಪಮನ್ಯು ಸರ್ವಾಲಂಕಾರಗಳಿಂದಲೂ, ಪರಿವಾರಗಣಗಳಿಂದಲೂ ಆವೃತನಾಗಿ, ಮಹಾದೇವನ ದರ್ಶನ ಮಾಡುತ್ತಿದ್ದನು. ಆಗ ಸ್ವಾಯಂಭುವ ಮನುವು ಅಲ್ಲಿಗೆ ಬರುತ್ತಿರುವುದನ್ನು ಆತ ನೋಡಿದನು (ಅನು 14/280). "ಪುಷ್ಪ, ಧೂಪ, ದೀಪ ಮತ್ತು ಉಪಹಾರ ದಾನದ ಮಾಹಾತ್ಮ್ಯ" ಪ್ರಸಂಗದಲ್ಲಿ, ತಪಸ್ವಿಯಾದ ಸುವರ್ಣ ಮತ್ತು ಮನುವಿನ ಸಂವಾದ (ಅನು 98).

(2) ಕಶ್ಯಪನ 'ಪ್ರಾಧಾ' ಎಂಬ ಪತ್ನಿಯಿಂದ ಹುಟ್ಟಿದ ಪುತ್ರ (ಆದಿ 65/45–46).

(3) ವಿವಸ್ವಂತನ ಪುತ್ರ. ಇವನು ವೈವಸ್ವತ ಮನುವೆಂದು ಪ್ರಸಿದ್ಧನಾದನು (ಆದಿ 75/12). ಇವನಿಗೆ ವೇನ, ಧೃಷ್ಣು, ನರಿಷ್ಯಂತ, ನಾಭಾಗ ಇಕ್ಷ್ವಾಕು, ಕಾರೂಷ, ಶರ್ಯಾತಿ, ಇಲಾ, ಪೃಷಧ್ರ, ನಾಭಾಗಾರಿಷ್ಟರೆಂಬ ಹತ್ತು ಪುತ್ರರಿದ್ದರು (ಆದಿ 75/15–16). ವೈವಸ್ವತ ಮನುವಿನ ಚರಿತ್ರೆ ಮತ್ತು ಮತ್ಸ್ಯಾವತಾರದ ಕಥೆ (ವನ 187). ಇವನಿಗೆ ವಿವಸ್ವಂತನಿಂದ ಯೋಗಪ್ರಾಪ್ತಿಯಾಯಿತು. ಮತ್ತು ಇವನು ಅದೇ ಯೋಗವನ್ನು ಇಕ್ಷ್ವಾಕುವಿಗೆ ಪ್ರದಾನ ಮಾಡಿದನು (ಭೀಷ್ಮ 122/38–42). ತ್ರೇತಾಯುಗದ ಆರಂಭದಲ್ಲಿ ಸೂರ್ಯನು ಮನುವಿಗೂ, ಮನುವು ಅಖಿಲ ಜಗತ್ತಿನ ಕಲ್ಯಾಣಕ್ಕೋಸ್ಕರ ತನ್ನ ಪುತ್ರ ಇಕ್ಷ್ವಾಕುವಿಗೂ, ಸಾತ್ವತ ಧರ್ಮದ ಉಪದೇಶ

ಮಾಡಿದರು (ಶಾಂತಿ 348/51). ಮಹರ್ಷಿ ಗೌತಮರಿಂದ ಇವನಿಗೆ ಶಿವಸಹಸ್ರನಾಮದ ಪ್ರಾಪ್ತಿಯಾಯಿತು. ಇವನು ಸಮಾಧಿನಿಷ್ಠನೂ, ಜ್ಞಾನಿಯೂ ಆದ ನಾರಾಯಣ ಎಂಬ ಸಾಧ್ಯ ದೇವತೆಗೆ, ಈ ಸ್ತೋತ್ರವನ್ನು ಉಪದೇಶಿಸಿದನು (ಅನು 17/177–178).

(4) ಈತ ತಪನೆಂಬ ಹೆಸರಿನ ಪಾಂಚಜನ್ಯ ನೆಂಬ ಅಗ್ನಿಯ ಪುತ್ರ, ಇವನಿಗೆ ಭಾನುವೆಂದೂ ಹೆಸರಿತ್ತು. ಇವನಿಗೆ ಮೂವರು ಪತ್ನಿಯರಿದ್ದರು. ಸುಪ್ರಜಾ, ಬೃಹದ್ಭಾಸಾ ಮತ್ತು ನಿಶಾ. ಪ್ರಥಮ ಇಬ್ಬರಿಂದ ಆರು ಪುತ್ರರು ಮತ್ತು ಮೂರನೆ ಯವಳಿಂದ ಒಬ್ಬ ಕನ್ಯೆ ಮತ್ತು ಏಳು ಪುತ್ರರು ಹುಟ್ಟಿದರು (ವನ 221/4–15).

(5) ಪ್ರಾಚೇತಸನೆಂದು ಪ್ರಸಿದ್ಧನಾದ ಮನು. ಇವನು ಆರು ವ್ಯಕ್ತಿಗಳನ್ನು ತ್ಯಾಜ್ಯರೆಂದು ಹೇಳಿದ್ದಾನೆ (ಶಾಂತಿ 57/43–45).

(6) ಸ್ವಾರೋಚಿಷನೆಂಬ ಹೆಸರಿನಿಂದ ಪ್ರಸಿದ್ಧ ನಾದ ಮನು. ಇವನಿಗೆ ಬ್ರಹ್ಮನು ಸಾತ್ವತ ಧರ್ಮೋಪದೇಶ ಮಾಡಿದನು. ಅನಂತರ ಸ್ವಾರೋಚಿಷನು ತನ್ನ ಪುತ್ರ ಶಂಖಪದನಿಗೆ ಇದನ್ನು ಉಪದೇಶಿಸಿದನು (ಶಾಂತಿ 348/36–37).

(7) ಚಾಕ್ಷುಷನೆಂಬ ಮನು. ಇವನ ಪುತ್ರ ಭಗವಾನ್ ವರಿಷ್ಠನೆಂಬ ಹೆಸರಿನಿಂದ ಪ್ರಸಿದ್ಧ ನಾಗಿದ್ದಾನೆ (ಅನು 18/20).

(8). ಸೌವರ್ಣನೆಂಬ ಮನು. ಇವನ ಕಾಲದಲ್ಲಿ ವೇದವ್ಯಾಸನು ಸಪ್ತರ್ಷಿ ಪದವಿಯಲ್ಲಿ ಪ್ರತಿಷ್ಠಿತ ನಾಗುತ್ತಾನೆ (ಅನು 18/43).

**ಮನೋಜವ** – (1) ಅನಿಲನೆಂಬ ವಸುವಿನ ಪ್ರಥಮ ಪುತ್ರ, ಇವನ ತಾಯಿಯ ಹೆಸರು ಶಿವಾ (ಆದಿ 66/25).

(2) ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಪವಿತ್ರ ತೀರ್ಥ. ಇದು ವ್ಯಾಸವನದಲ್ಲಿದೆ. ಇಲ್ಲಿ ಸ್ನಾನಮಾಡುವುದರಿಂದ ಸಹಸ್ರ ಗೋದಾನದ ಫಲಸಿಗುತ್ತದೆ (ವನ 83/93).

**ಮನೋಜವಾ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/16).

**ಮನೋನುಗ** – ಕ್ರೌಂಚ ದ್ವೀಪದ ವಾಮನ ಪರ್ವತದ ಬಳಿಯ ಒಂದು ದೇಶ (ಭೀಷ್ಮ 12/21).

**ಮನೋರಮಾ** – (1) ಒಬ್ಬ ಅಪ್ಸರೆ. ಇವಳು ಕಶ್ಯಪನ ಪ್ರಾಧಾ ಹೆಸರಿನ ಪತ್ನಿಯಿಂದ ಹುಟ್ಟಿದವಳು (ಆದಿ 65/50). ಇವಳು ಅರ್ಜುನನ ಜನ್ಮಮಹೋತ್ಸವಕ್ಕೆ ಬಂದು ನೃತ್ಯ ಮಾಡಿದ್ದಳು (ಆದಿ 122/62).

(2) ಉದ್ದಾಲಕ ಮುನಿಯು ಆವಾಹನೆ ಮಾಡಿದಾಗ, ಆತನ ಯಜ್ಞದಲ್ಲಿ ಪ್ರಕಟವಾದ ಸರಸ್ವತಿ ನದಿಯ ಹೆಸರು (ಶಲ್ಯ 38/25).

**ಮನೋಹರಾ** – (1) ಸೋಮನೆಂಬ ವಸುವಿನ ಪತ್ನಿ. ಈಕೆಯ ಗರ್ಭದಿಂದ ಮೊದಲು ವರ್ಚಾ ಎಂಬವನ ಜನನವಾಗಿತ್ತು. ಅನಂತರ ಶಿಶಿರ, ಪ್ರಾಣ ಮತ್ತು ರಮಣರೆಂಬ ಮೂವರು ಪುತ್ರರು ಹುಟ್ಟಿದರು (ಆದಿ 66/22).

(2) ಅಲಕಾಪುರದ ಒಬ್ಬ ಅಪ್ಸರೆ. ಇವಳು ಅಷ್ಟಾವಕ್ರನ ಸ್ವಾಗತಕ್ಕೋಸ್ಕರ ಕುಬೇರ ಸಭೆಯಲ್ಲಿ ನೃತ್ಯಮಾಡಿದ್ದಳು (ಅನು 19/45).

**ಮನ್ಥರಾ** – ದುಂದುಭೀ ಎಂಬ ಗಂಧರ್ವಿಯ ಅಂಶದಿಂದ ಹುಟ್ಟಿದ ಒಬ್ಬ ಕುಬ್ಜ ದಾಸಿ. ಇವಳು ಕೈಕೆಯ ಸೇವೆಯಲ್ಲಿರುತ್ತಿದ್ದಳು (ವನ 276/10). ಈಕೆ ಕೈಕೇಯಿಯ ಮನಸ್ಸಿನಲ್ಲಿ ಭೇದ ಹುಟ್ಟಿಸಿ ದುದು (ವನ 277/17–18).

**ಮನ್ಥಿನೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಮನ್ದಗ** – ಶಾಕದ್ವೀಪದ ಒಂದು ಜನಪದ. ಇಲ್ಲಿ ಧರ್ಮಾತ್ಮ ಶೂದ್ರರ ನಿವಾಸವಿದೆ (ಭೀಷ್ಮ 11/38).

**ಮನ್ದಗಾ** – ಭಾರತದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ನಿವಾಸಿಗಳು ಕುಡಿ ಯುತ್ತಾರೆ (ಭೀಷ್ಮ 9/23).

**ಮನ್ದಪಾಲ** – ವಿದ್ವಾಂಸನಾದ ಒಬ್ಬ ಮಹರ್ಷಿ. ಇವನು ಧರ್ಮಜ್ಞರಲ್ಲಿ ಶ್ರೇಷ್ಠನೂ, ಕಠೋರ ವ್ರತಪಾಲನೆ ಮಾಡುವವನೂ ಆಗಿದ್ದನು. ಇವನು ಊರ್ಧ್ವರೇತಸ್ಕ ಮುನಿಗಳ ಮಾರ್ಗವನ್ನು ಆಶ್ರಯಿಸಿ, ಸದಾ ವೇದಗಳ ಸ್ವಾಧ್ಯಾಯ, ಧರ್ಮಪಾಲನೆ, ತಪಸ್ಸಿನಲ್ಲಿ ಮಗ್ನನಾಗಿರುತ್ತಿದ್ದನು. ತನ್ನ ತಪಸ್ಸನ್ನು ಪೂರ್ಣಗೊಳಿಸಿ, ಶರೀರ ತ್ಯಾಗ ಮಾಡಿ, ಇವನು ಪಿತೃಲೋಕಕ್ಕೆ ಹೋದಾಗ, ಅಲ್ಲಿ ಇವನಿಗೆ ತನ್ನ ತಪಸ್ಸು ಹಾಗೂ

ಸತ್ಕರ್ಮಗಳ ಫಲಸಿಗಲಿಲ್ಲ. ಇವನು ದೇವತೆಗಳೊಡನೆ ಇದರ ಕಾರಣ ಕೇಳಿದನು. ನೀನು ಪಿತೃಋಣದಿಂದ ಮುಕ್ತನಾಗಿಲ್ಲವೆಂದು ದೇವತೆಗಳು ಹೇಳಿದರು: 'ಸಂತಾನ ಪಡೆದು ತನ್ನ ವಂಶಪರಂಪರೆಯನ್ನು ಅವಿಚ್ಛಿನ್ನಮಾಡಲು ಪ್ರಯತ್ನಪಡು' ಎಂದರು. ಇದನ್ನು ಕೇಳಿ, ಶೀಘ್ರವಾಗಿ ಸಂತಾನ ಪಡೆಯಲು ಇವನು ಶಾರ್ಙ್ಗಿಕ ಪಕ್ಷಿಯಾಗಿ, ಜರಿತಾ ಎಂಬ ಹೆಣ್ಣು ಪಕ್ಷಿಯೊಡನೆ ಸಂಬಂಧ ಸ್ಥಾಪಿಸಿದನು. ಆಕೆಯ ಗರ್ಭದಲ್ಲಿ ನಾಲ್ಕು ಮಂದಿ ಬ್ರಹ್ಮವಾದಿ ಪುತ್ರರಿಗೆ ಜನ್ಮವನ್ನಿತ್ತು, ಈತ ಲಪಿತಾ ಎಂಬ ಪಕ್ಷಿಣಿಯ ಬಳಿಗೆ ಹೊರಟುಹೋದನು. ಮಕ್ಕಳು ತಾಯಿಯೊಂದಿಗೆ ಖಾಂಡವವನದಲ್ಲೇ ಉಳಿದರು. ಅಗ್ನಿದೇವನು ಆ ವನವನ್ನು ಉರಿಸಲು ತೊಡಗಿದಾಗ, ಈತ ಅವನನ್ನು ಸ್ತುತಿಸಿದನು ಮತ್ತು ತನ್ನ ಪುತ್ರರ ಜೀವನ ರಕ್ಷಣೆಗೆ ವರ ಬೇಡಿದನು. ಆಗ ಅಗ್ನಿದೇವನು 'ತಥಾಸ್ತು' ಎಂದು ಹೇಳಿ ಇವನ ಪ್ರಾರ್ಥನೆಯನ್ನು ಸ್ವೀಕರಿಸಿದನು (ಆದಿ 228). ಮಂದಪಾಲನು ಲಪಿತೆಯೊಂದಿಗೆ ತನ್ನ ಮಕ್ಕಳ ರಕ್ಷಣೆಯ ಕುರಿತುಚಿಂತಿಸಿದುದು. ಲಪಿತೆಯ ಮತ್ಸರಪೂರ್ಣ ಮಾತುಕೇಳಿ, ಮಂದಪಾಲನು ತನ್ನ ಹೇಳಿಕೆಯ ಸತ್ಯವನ್ನು ಆಕೆಯೊಡನೆ ಹೇಳಿದುದು ಮತ್ತು ತನ್ನ ಮಕ್ಕಳ ಬಳಿಗೆ ಹೋದುದು. ಮಕ್ಕಳಿಂದ ಅಭಿನಂದಿಸಲ್ಪಡದಿದ್ದಾಗ, ಇವನು ಜರಿತೆಯೊಡನೆ ಜ್ಯೇಷ್ಠನೇ ಮೊದಲಾದ ಪುತ್ರರ ಪರಿಚಯ ಕೇಳಿದುದು. ಜರಿತೆಯು ಈತನನ್ನು ನಿಂದಿಸಿದುದು. ಮಂದಪಾಲನು ಸ್ತ್ರೀಯರ ಸವತಿಮತ್ಸರದೋಷವನ್ನು ವರ್ಣಿಸಿ, ಅವರ ವಿಶ್ವಾಸಹೀನತೆಯನ್ನು ಹೇಳಿದುದು. ಅನಂತರ ತನ್ನ ಬಳಿಗೆ ಬಂದ ಪುತ್ರರಿಗೆ ಇವನ ಆಶ್ವಾಸನೆ ಮತ್ತು ಅವರನ್ನೂ ಜರಿತೆಯನ್ನೂ ಕರಕೊಂಡು ದೇಶಾಂತರಕ್ಕೆ ಹೊರಟುಹೋದುದು (ಆದಿ 232/2 ರಿಂದ 233/4).

**ಮನ್ದರಾಚಲ** – ಒಂದು ಪರ್ವತ. ಅದರ ಎತ್ತರ ಹನ್ನೊಂದು ಸಾವಿರ ಯೋಜನವಿತ್ತು. ಅದು ಭೂಮಿಯ ಒಳಗೂ ಅಷ್ಟೇ ಆಳಕ್ಕೆ ಹುದುಗಿದೆ. ಇದರ ವಿಶೇಷ ವರ್ಣನೆ (ಆದಿ 18/1–3). ಭಗವಾನ್ ವಿಷ್ಣುವಿನ ಪ್ರೇರಣೆಯಿಂದ, ಶೇಷನಾಗನ ಮೂಲಕ, ಸಮುದ್ರಮಥನಕ್ಕೋಸ್ಕರ ಇದು ಕಡೆಗೋಲಾಗಿ ಮಾಡಲ್ಪಟ್ಟಿತ್ತು (ಆದಿ 18/13). ಸಮುದ್ರಮಥನದ ಸಮಯದಲ್ಲಿ, ಇದರ ಮೂಲಕ ಜಲಜಂತುಗಳ ಮತ್ತು ಪಾತಾಳವಾಸಿ ಪ್ರಾಣಿಗಳ ಸಂಹಾರ (ಆದಿ 18/16–21). ಇವನು ಕುಬೇರ ಸಭೆಯಲ್ಲಿದ್ದು, ಆತನ ಉಪಾಸನೆ ಮಾಡುತ್ತಾನೆ (ಸಭಾ 10/31). ಕೈಲಾಸದ ಬಳಿಯಲ್ಲಿ ಮಂದರಾಚಲವಿದೆ. ಇದರ ಮೇಲೆ ಮಾಣಿವರನೆಂಬ ಯಕ್ಷ ಮತ್ತು ಯಕ್ಷರಾಜ ಕುಬೇರ ವಾಸಮಾಡುತ್ತಾರೆ. ಇಲ್ಲಿ ಎಂಭತ್ತೆಂಟು ಸಾವಿರ ಗಂಧರ್ವರೂ, ಅವರ ನಾಲ್ಕು ಪಾಲು ಕಿನ್ನರರೂ, ಯಕ್ಷರೂ ವಾಸಿಸುತ್ತಾರೆ (ವನ 139/5–6). ಸ್ವಪ್ನಾವಸ್ಥೆಯಲ್ಲಿ ಶ್ರೀಕೃಷ್ಣನೊಂದಿಗೆ ಕೈಲಾಸಕ್ಕೆ ಹೋಗುತ್ತಿದ್ದ ಅರ್ಜುನನು ದಾರಿಯಲ್ಲಿ ಮಂದರಾಚಲದ ಮೇಲೆ ಪಾದಾರ್ಪಣ ಮಾಡಿದ್ದನು. ಇದು ಅಪ್ಸರೆಯರಿಂದ ವ್ಯಾಪ್ತವೂ, ಕಿನ್ನರರಿಂದ ಸುಶೋಭಿತವೂ ಆಗಿತ್ತು (ದ್ರೋಣ 80/33). ಭಗವಾನ್ ಶಂಕರನು ತ್ರಿಪುರದಹನ ಕಾಲದಲ್ಲಿ ಮಂದರಾಚಲವನ್ನು ತನ್ನ ಧನುಸ್ಸು ಹಾಗೂ ರಥದ ಗಾಲಿಯ ಅಚ್ಚನ್ನಾಗಿ ಮಾಡಿಕೊಂಡಿದ್ದನು (ದ್ರೋಣ 202/76; ಕರ್ಣ 34/20). ಉತ್ತರ ದಿಕ್ಕಿನ ಯಾತ್ರೆ ಮಾಡುವಾಗ ಅಷ್ಟಾವಕ್ರ ಈ ಪರ್ವತದ ಮೇಲೆ ಹೋಗಿದ್ದನು (ಅನು 19/54).

**ಮನ್ದವಾಹಿನೀ** – ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/33).

**ಮನ್ದಾಕಿನೀ** – (1) ಗಿರಿವರ ಚಿತ್ರಕೂಟದ ಬಳಿ ಹರಿಯುವ ಒಂದು ಸರ್ವಪಾಪನಾಶಿನಿ ನದಿ. ಇದರಲ್ಲಿ ಸ್ನಾನಮಾಡಿ ದೇವತೆ, ಪಿತೃಗಳ ಪೂಜೆ ಮಾಡುವುದರಿಂದ, ಅಶ್ವಮೇಧ ಯಜ್ಞದ ಫಲ ದೊರಕುತ್ತದೆ (ವನ 85/58–59). ಭಾರತೀಯ ಪ್ರಜೆಗಳು ನೀರು ಕುಡಿಯುವ ಪ್ರಮುಖ ನದಿಗಳಲ್ಲಿ ಈ ನದಿಯೂ ಗಣಿಸಲ್ಪಟ್ಟಿದೆ (ಭೀಷ್ಮ 9/36). ಚಿತ್ರಕೂಟದಲ್ಲಿ ಮಂದಾಕಿನಿಯ ಜಲದಲ್ಲಿ ಸ್ನಾನಮಾಡಿ ಉಪವಾಸ ಮಾಡುವುದರಿಂದ, ಮನುಷ್ಯ ರಾಜಲಕ್ಷ್ಮಿಯಿಂದ ಸೇವಿಸಲ್ಪಡುತ್ತಾನೆ (ಅನು 25/29).

(2) (ಉತ್ತರಾಖಂಡದಲ್ಲಿ ಗಢವಾಲದ ಕೇದಾರ ಪರ್ವತಮಾಲೆಯಿಂದ ಹೊರಡುವ 'ಮಂದಾಗ್ನಿ'

ಅಥವಾ 'ಕಾಲೀಗಂಗಾ' ಎಂಬ ನದಿ). ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/34).

(3) ಯಕ್ಷರಾಜ ಕುಬೇರನ ಕಮಲಪುಷ್ಪಗಳಿಂದ ಶೋಭಾಯಮಾನವಾದ ಒಂದು ಕೊಳ. ಅದು ಗಂಗಾಜಲದಿಂದ ತುಂಬಿರುವ ಕಾರಣ 'ಮಂದಾಕಿನಿ' ಎನ್ನಲ್ಪಡುತ್ತದೆ (ಅನು 19/32).

**ಮನ್ದಾರ** – ಹಿರಣ್ಯಕಶಿಪುವಿನ ಜ್ಯೇಷ್ಠಪುತ್ರ. ಇವನು ಶಿವನ ವರದಿಂದ ಒಂದು ಅರ್ಬುದ ವರ್ಷಗಳ ವರೆಗೆ ಇಂದ್ರನೊಂದಿಗೆ ಯುದ್ಧ ಮಾಡುತ್ತಿದ್ದನು. ಇವನ ಅಂಗಗಳ ಮೇಲೆ ಭಗವಾನ್ ವಿಷ್ಣುವಿನ ಭಯಂಕರ ಚಕ್ರ, ಮತ್ತು ಇಂದ್ರನ ವಜ್ರ ಕೂಡಾ, ಹಳೆಯ ಹುಲ್ಲಿನಂತೆ ಜೀರ್ಣಶೀರ್ಣವಾಗಿತ್ತು (ಅನು 14/74–75).

**ಮನ್ದೋದರೀ** – (1) ರಾವಣನ ಪತ್ನಿ (ವನ 281/16).

(2) ಸ್ಕಂದನ ಅನುಚರಿಯಾದ ಒಬ್ಬಳು ಮಾತೃಕೆ (ಶಲ್ಯ 46/17).

**ಮನ್ಮಥಕರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ಮನ್ಯುಮಂತ (ಮನ್ಯುಮಾನ್)** – ಭಾನು (ಮನು) ಎಂಬ ಅಗ್ನಿಯ ದ್ವಿತೀಯಪುತ್ರ (ವನ 221/11).

**ಮಯ** – ಒಬ್ಬ ದಾನವ. ಇವನು ಸ್ವಲ್ಪ ಕಾಲದ ವರೆಗೆ ಖಾಂಡವವನದಲ್ಲಿ ವಾಸಿಸುತ್ತಿದ್ದನು. ಅರ್ಜುನನು ಇವನನ್ನು ಸುಟ್ಟುಹೋಗದಂತೆ ರಕ್ಷಿಸಿದನು; ಆದುದರಿಂದ ಇವನು ಪಾಂಡವರಿಗಾಗಿ ಒಂದು ದಿವ್ಯ ಸಭಾಭವನವನ್ನು ನಿರ್ಮಿಸಿದನು. ಇದನ್ನು ತೆಗೆದುಕೊಳ್ಳಲು ದುರ್ಯೋಧನನು ಬಯಸಿದ್ದನು (ಆದಿ 61/48–49). ಇವನು ಖಾಂಡವವನ ದಹನ ಕಾಲದಲ್ಲಿ ತಕ್ಷಕನ ನಿವಾಸಸ್ಥಾನದಿಂದ ಓಡಿಹೋದನು. ಇವನು ಓಡುತ್ತಿರುವುದನ್ನು ಶ್ರೀಕೃಷ್ಣನು ನೋಡಿದನು. ಅಗ್ನಿದೇವನು ಮೂರ್ತಿಮಂತನಾಗಿ ಗರ್ಜಿಸಲು ಮತ್ತು ಆ ರಾಕ್ಷಸನನ್ನು ಕೇಳಲು ತೊಡಗಿದನು. ಇವನನ್ನು ಕೊಲ್ಲಲು ಶ್ರೀಕೃಷ್ಣನು ಚಕ್ರವನ್ನೆತ್ತಿದನು. ಆಗ ಈತ ಅರ್ಜುನನಿಗೆ ಶರಣಾದನು. ಅರ್ಜುನನು ಅಭಯವನ್ನಿತ್ತನು. ಇದನ್ನು ನೋಡಿ ಶ್ರೀಕೃಷ್ಣನೂ ಇವನನ್ನು ಕೊಲ್ಲಲಿಲ್ಲ; ಅಗ್ನಿದೇವನೂ ಸುಡಲಿಲ್ಲ (ಆದಿ 227/39–45). ಇವನು ದಾನವರ ಶ್ರೇಷ್ಠ ಶಿಲ್ಪಿ ಮತ್ತು ನಮುಚಿಯ ಸಹೋದರನಾಗಿದ್ದನು (ಆದಿ 227/41–45). ಮಯಾಸುರನು ಶ್ರೀಕೃಷ್ಣ ಮತ್ತು ಅಗ್ನಿಯಿಂದ ತನ್ನ ರಕ್ಷಣೆಯಾದಾಗ, ಅರ್ಜುನನಿಗೆ ಈ ಉಪಕಾರಕ್ಕೆ ಪ್ರತ್ಯುಪಕಾರವಾಗಿ, ತಾನು ಯಾವುದಾದರೂ ಸೇವೆ ಅರ್ಪಿಸುವ ಇಚ್ಛೆಯನ್ನು ಪ್ರಕಟಿಸಿದುದು. ಅರ್ಜುನನು ಸೇವೆಯನ್ನು ಸ್ವೀಕರಿಸಲು ನಿರಾಕರಿಸಿದಾಗ, ಮಯಾಸುರನು ತಾನು ದಾನವರ ವಿಶ್ವಕರ್ಮನೆಂದು ಹೇಳಿದುದು ಮತ್ತು ಅವನಿಗೆ ಸಂತೋಷಪೂರ್ವಕವಾಗಿ ಯಾವುದಾದರೂ ವಸ್ತುವಿನ ನಿರ್ಮಾಣಮಾಡಿ ಕೊಡುವಂತೆ ತನ್ನ ಇಚ್ಛೆ ಪ್ರಕಟಿಸಿದುದು (ಸಭಾ 1/3–6). ಅರ್ಜುನನು ಮಯಾಸುರನಿಗೆ ಶ್ರೀಕೃಷ್ಣನ ಇಚ್ಛಾನುಸಾರ ಏನಾದರೂ ಮಾಡುವಂತೆ ಹೇಳಿದುದು. ಯುಧಿಷ್ಠಿರನಿಗೋಸ್ಕರ ಒಂದು ದಿವ್ಯ ಸಭಾಭವನ ನಿರ್ಮಿಸುವಂತೆ ಶ್ರೀಕೃಷ್ಣನು ಆದೇಶ ನೀಡಿದುದು (ಸಭಾ 1/7–13). ಮಯಾಸುರನು ಸಂತೋಷದಿಂದ, ಅವನ ಆಜ್ಞೆಯನ್ನು ಶಿರೋಧಾರ್ಯವೆಂದು ಸ್ವೀಕರಿಸಿದುದು, ಯುಧಿಷ್ಠಿರನಿಂದ ಇವನ ಸತ್ಕಾರ. ಇವನು ಪಾಂಡವರಿಗೆ ದೈತ್ಯರ ಅದ್ಭುತ ಚರಿತ್ರೆಯನ್ನು ತಿಳಿಸಿದುದು. ಮತ್ತು ಅವರಿಗೋಸ್ಕರ ದಿವ್ಯಸಭಾಭವನ ನಿರ್ಮಿಸಲು ಭೂಮಿಯನ್ನು ಅಳತೆ ಮಾಡಿಸಿದುದು (ಸಭಾ 1/14–21). ಮಯಾಸುರನು ಭೀಮಸೇನ ಮತ್ತು ಅರ್ಜುನರಿಗೆ ಗದೆ ಮತ್ತು ಶಂಖವನ್ನು ತಂದು ಕೊಟ್ಟದ್ದು. ಪಾಂಡವರಿಗಾಗಿ ಅದ್ಭುತ ಸಭಾ ನಿರ್ಮಾಣ ಮಾಡಿದುದು (ಸಭಾ 3). ಸಭೆಯನ್ನು ನಿರ್ಮಿಸಿ ಮಯನು ಅರ್ಜುನನಿಗೆ ತೋರಿಸಿದುದು ಮತ್ತು ಒಂದು ಮಾಯಾಮಯ ಧ್ವಜ ನಿರ್ಮಿಸಿ ಕೊಟ್ಟದ್ದು (ಸಭಾ 4). ದಕ್ಷಿಣ ಸಮುದ್ರದ ಬಳಿ ಸಹ್ಯ, ಮಲಯ ಮತ್ತು ದುರ್ದುರವೆಂಬ ಪರ್ವತಗಳ ಹತ್ತಿರ, ಒಂದು ವಿಶಾಲ ಗುಹೆಯ ಒಳಗೆ ನಿರ್ಮಿಸಿದ ದಿವ್ಯ ಭವನದಲ್ಲಿ, ತ್ರೇತಾಯುಗದ ಮಯಾಸುರ ವಾಸಿಸುತ್ತಿದ್ದನು. ಅಲ್ಲಿಯೇ ಪ್ರಭಾವತಿ ಎಂಬ ಒಬ್ಬ ತಪಸ್ವಿನಿ ತಪಸ್ಸು ಮಾಡುತ್ತಿದ್ದಳು. ಆಕೆ ಹನುಮಂತನೇ ಮೊದಲಾದ ವಾನರರಿಗೆ ನಾನಾ ಪ್ರಕಾರದ ಭೋಜ್ಯ ಪದಾರ್ಥ ಮತ್ತು

ಕುಡಿಯಲು ಯೋಗ್ಯವಾದ ತರತರದ ರಸಗಳನ್ನು ಕೊಟ್ಟಿದ್ದಳು (ವನ 282/40–43). ಇವನಿಂದ ತ್ರಿಪುರವೆಂಬ ಮೂರು ಪುರಗಳ ನಿರ್ಮಾಣ (ಕರ್ಣ 33/17).

**ಮಯದರ್ಶನಪರ್ವ** – ಆದಿ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 227 ರಿಂದ 233).

**ಮಯೂರ** – ಒಬ್ಬ ವಿಖ್ಯಾತ ಮಹಾನ್ ಅಸುರ. ಇವನು ಈ ಭೂಮಿಯಲ್ಲಿ ವಿಶ್ವನೆಂಬ ರಾಜನ ರೂಪದಲ್ಲಿ ಹುಟ್ಟಿದ್ದನು (ಆದಿ 65/35–36).

**ಮರೀಚಿ** – (1) ಬ್ರಹ್ಮ ಮಾನಸ ಪುತ್ರ. ಕಶ್ಯಪನ ತಂದೆ (ಆದಿ 65/10–11; ಆದಿ 75/10). ಇವನ ಹುಟ್ಟಿನ ವರ್ಣನೆ (ಅನು 85/107). ಇವನು ಅರ್ಜುನನ ಜನ್ಮ ಮಹೋತ್ಸವಕ್ಕೆ ಆಗಮಿಸಿದ್ದನು (ಆದಿ 122/52). ಇವನು ಇಂದ್ರಸಭೆಯಲ್ಲಿ ಉಪಸ್ಥಿತನಾಗಿರುತ್ತಾನೆ (ಸಭಾ 7/17). ಬ್ರಹ್ಮನ ಸಭೆಯಲ್ಲಿ ಉಪಸ್ಥಿತನಾಗಿದ್ದು, ಆತನ ಉಪಾಸನೆ ಮಾಡುತ್ತಾನೆ (ಸಭಾ 11/18). ಸ್ಕಂದನ ಜನ್ಮಕಾಲದಲ್ಲಿ ಅವನ ಬಳಿಗೆ ಹೋಗಿದ್ದನು (ಶಲ್ಯ 45/10). ಶರಶಯ್ಯೆಯಲ್ಲಿದ್ದ ಭೀಷ್ಮನ ಬಳಿಗೆ ಇವನೂ ಹೋಗಿದ್ದನು (ಶಾಂತಿ 47/10). ಇವನಿಗೆ ಅಂಗೀರಸನಿಂದ ದಂಡ ಪ್ರಾಪ್ತವಾಯಿತು. ಇವನು ಅದನ್ನು ಭೃಗುವಿಗೆ ಕೊಟ್ಟನು (ಶಾಂತಿ 122/37). ಇವನು ಬ್ರಹ್ಮನ ಪ್ರಥಮ ಪುತ್ರ. ಇವನಿಗೆ ವಿಷ್ಣು ಖಡ್ಗವನ್ನಿತ್ತನು; ಇವನು ಅದನ್ನು ಅನ್ಯ ಮಹರ್ಷಿಗಳಿಗೆ ಕೊಟ್ಟನು (ಶಾಂತಿ 166/166). ಇವನು ಇಪ್ಪತ್ತೊಂದು ಮಂದಿ ಪ್ರಜಾಪತಿಗಳಲ್ಲಿ ಒಬ್ಬ (ಶಾಂತಿ 334/35). 'ಚಿತ್ರಶಿಖಂಡಿ' ಎಂದು ಹೇಳಲ್ಪಡುವ ಋಷಿಗಳಲ್ಲಿ ಇವನೂ ಗಣಿಸಲ್ಪಡುತ್ತಾನೆ (ಶಾಂತಿ 335/29). ಇವನು ಎಂಟು ಪ್ರಕೃತಿಗಳಲ್ಲಿಯೂ ಗಣಿಸಲ್ಪಡುತ್ತಾನೆ (ಶಾಂತಿ 340/34). ಅಗ್ನಿಯ ಮರೀಚಿ(ಕಿರಣ)ಗಳಿಂದ ಮರೀಚಿಕಾ ಹುಟ್ಟಿತು (ಅನು 85/107).

(2) ಒಬ್ಬ ಸ್ವರ್ಗದ ಅಪ್ಸರೆ. ಈಕೆ ಅರ್ಜುನನ ಜನ್ಮಮಹೋತ್ಸವಕ್ಕೆ ಬಂದು ಗಾಯನ, ನೃತ್ಯ ಮಾಡಿದ್ದಳು (ಅದಿ 122/62).

**ಮರುಕಕ್ಷ** – ಒಂದು ಭಾರತೀಯ ಜನಪದ. ಇಲ್ಲಿರುವ ನಿವಾಸಿ ಶೂದ್ರರು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 51/9–10).

**ಮರುತ್ತ** – (1) ಒಬ್ಬ ಸುಪ್ರಸಿದ್ಧ ಸಮ್ರಾಟ. ಈತ ಪ್ರಾಚೀನ ಕಾಲದಲ್ಲಿ ಈ ಪೃಥ್ವಿಯ ಶಾಸಕನಾಗಿದ್ದನು (ಆದಿ 1/227). ಇವನು ಯಮ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/16). ಐದು ಸಮ್ರಾಟರಲ್ಲಿ ಒಬ್ಬ (ಸಭಾ 15/16). ಇವನು ಮಹಾರಾಜ ಅವಿಕ್ಷಿತನ ಪುತ್ರ. ಬೃಹಸ್ಪತಿಯೊಂದಿಗೆ ಸ್ಪರ್ಧಾಭಾವನೆಯುಳ್ಳ, ಇವನ ಸಹೋದರ ಸಂವರ್ತನು ಇವನ ಯಜ್ಞ ಮಾಡಿಸಿದ್ದನು. ಸಾಕ್ಷಾತ್ ಭಗವಾನ್ ಶಂಕರನು ಪ್ರಚುರ ಧನರಾಶಿಯ ರೂಪದಲ್ಲಿ, ಇವನಿಗೆ ಹಿಮಾಲಯದ ಒಂದು ಸುವರ್ಣಮಯ ಶಿಖರವನ್ನು ಕೊಟ್ಟಿದ್ದನು. ಪ್ರತಿದಿನ ಯಜ್ಞ ಕಾರ್ಯದ ಅಂತ್ಯದಲ್ಲಿ, ಇವನ ಸಭೆಯಲ್ಲಿ ಇಂದ್ರನೇ ಮೊದಲಾದ ದೇವತೆಗಳು ಮತ್ತು ಬೃಹಸ್ಪತಿಯೇ ಮೊದಲಾದ ಸಮಸ್ತ ಪ್ರಜಾಪತಿ ಗಣ, ಸಭಾಸದರ ರೂಪದಲ್ಲಿ ಕುಳಿತುಕೊಳ್ಳುತ್ತಿದ್ದರು. ಇವನ ಯಜ್ಞಮಂಟಪದ ಎಲ್ಲಾ ಸಾಮಗ್ರಿಗಳು ಚಿನ್ನದಿಂದ ಮಾಡಲ್ಪಟ್ಟಿದ್ದವು. ಇವನ ಮನೆಯಲ್ಲಿ ಮರುದ್ಗಣಗಳು, ಪಾಕಗಳನ್ನು ಬಡಿಸುವ ಕೆಲಸಮಾಡುತ್ತಿದ್ದರು. ವಿಶ್ವೇದೇವರು ಇವನ ರಾಜಸಭೆಯಲ್ಲಿ ಸಭಾಸದರಾಗಿದ್ದರು. ಇವನು ತನ್ನ ಸಮಸ್ತ ಪ್ರಜೆಗಳನ್ನು ರೋಗವಿಲ್ಲದವರಾಗಿ ಮಾಡಿದ್ದನು. ಇವನು ದೇವತೆ, ಪಿತೃ ಮತ್ತು ಋಷಿಗಳನ್ನು ಸಂತುಷ್ಟಿಗೊಳಿಸಿದ್ದನು. ಬ್ರಾಹ್ಮಣರಿಗೆ ಶಯ್ಯಾ, ಆಸನ, ವಾಹನ ಮತ್ತು ಅಪಾರ ಸ್ವರ್ಣರಾಶಿಯನ್ನು ಕೊಟ್ಟಿದ್ದನು. ಇಂದ್ರನು ಯಾವಾಗಲೂ ಇವನಿಗೆ ಶುಭಚಿಂತನೆ ಮಾಡುತ್ತಿದ್ದನು. ಇವನು ಯುವಕನಾಗಿದ್ದುಕೊಂಡು ಪ್ರಜೆ, ಮಂತ್ರಿ, ಧರ್ಮಪತ್ನಿ, ಪುತ್ರ ಮತ್ತು ಸಹೋದರರೊಂದಿಗೆ ಒಂದು ಸಾವಿರ ವರ್ಷಗಳ ವರೆಗೆ ರಾಜ್ಯಾಧಿಕಾರ ಮಾಡಿದ್ದನು (ದ್ರೋಣ 55/37–49). ಶ್ರೀಕೃಷ್ಣನ ಮೂಲಕ, ನಾರದ–ಸೃಂಜಯ ಸಂವಾದ ರೂಪದಲ್ಲಿ, ಇವನ ಪ್ರಭಾವ ಹಾಗೂ ಯಜ್ಞದ ವರ್ಣನೆ (ಶಾಂತಿ 29/19–24). ಇವನ ದಂಡದ ಕುರಿತಾದ ವಿಧಾನ (ಶಾಂತಿ 57/7). ಇವನಿಗೆ

ಮಹಾರಾಜ ಮುಚುಕುಂದನಿಂದ ಖಡ್ಗಪ್ರಾಪ್ತಿ ಯಾಯಿತು; ಇವನು ರೈವತನಿಗೆ ಖಡ್ಗವನ್ನು ಕೊಟ್ಟನು (ಶಾಂತಿ 166/77). ಇವನ ಮೂಲಕ ಅಂಗಿರಸನಿಗೆ ಕನ್ಯಾದಾನ ಮತ್ತು ಸ್ವರ್ಗಪ್ರಾಪ್ತಿ (ಶಾಂತಿ 234/28; ಅನು 137/16). ಈತ ಕರಂಧಮನ ಮೊಮ್ಮಗ. ತನ್ನ ಯಜ್ಞ ಮಾಡಿಸು ವಂತೆ ಬೃಹಸ್ಪತಿಯೊಂದಿಗೆ ಇವನ ಪ್ರಾರ್ಥನೆ. ಅವನು ಅಸ್ವೀಕಾರ ಮಾಡಿದಾಗ, ಇವನು ಲಜ್ಜಿತನೂ, ದುಃಖಿತನೂ ಆಗಿ ಹಿಂತಿರುಗಿದ್ದು (ಆಶ್ವ 6/4–10). ಹಿಂತಿರುಗುವಾಗ ನಾರದನ ಭೇಟಿ ಮತ್ತು ಆತನೊಡನೆ ತನ್ನ ಶೋಕದ ಕಾರಣ ಹೇಳಿದುದು (ಆಶ್ವ 6/15–16). ನಾರದನು ಹೇಳಿದ ಪ್ರಕಾರ ಸಂವರ್ತನೊಂದಿಗೆ ಈತನ ಭೇಟಿ ಮತ್ತು ಆತನ ಹಿಂದೆಯೇ ಹೋದುದು (ಆಶ್ವ 6/30–33). ಸಂವರ್ತ ನೊಂದಿಗೆ ಮಾತುಕತೆ ಮತ್ತು ಅವನ ಒಡನಾಟ ಬಿಟ್ಟುಕೊಡುವುದಿಲ್ಲವೆಂದು ಈತನ ಪ್ರತಿಜ್ಞೆ (ಆಶ್ವ 7/3–23). ಶಿವನ ಕೃಪೆಯಿಂದ ಇವನಿಗೆ ಅವ ನಿಂದ ಧನಪ್ರಾಪ್ತಿ (ಆಶ್ವ 8/32). ಧೃತರಾಷ್ಟ್ರನ ಮೂಲಕ ತರಲ್ಪಟ್ಟ ಇಂದ್ರನ ಸಂದೇಶಕ್ಕೆ ಈತನ ಉತ್ತರ (ಆಶ್ವ 10/6–7). ಇಂದ್ರನಿಂದ ಭೀತ ನಾದುದು (ಆಶ್ವ 10/16). ಯಜ್ಞಪೂರ್ಣಗೊಳಿಸಿ ರಾಜಧಾನಿಗೆ ಹಿಂತಿರುಗಿದುದು (ಆಶ್ವ 10/34–35).

(2) ಒಬ್ಬ ಮಹರ್ಷಿ. ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುತ್ತಿದ್ದ ಕೃಷ್ಣನನ್ನು ದಾರಿ ಯಲ್ಲಿ ಈತ ಪರಿಕ್ರಮಣ ಮಾಡಿದ್ದನು (ಉದ್ಯೋಗ 83/27). ಇವನು ಇಂದ್ರಸಭೆಯಲ್ಲಿ ವಿರಾಜಮಾನನಾಗಿರುತ್ತಾನೆ (ಸಭಾ 7/17).

**ಮರುದ್ಗಣ** – ದೇವತೆಗಳ ಒಂದು ಗಣ (ಶಲ್ಯ 45/6).

**ಮರುದ್ಗಣತೀರ್ಥ** – ಒಂದು ತೀರ್ಥ. ಇಲ್ಲಿ ಪವಿತ್ರಭಾವದಿಂದ ಸ್ನಾನ ಮಾಡುವ ಮನುಷ್ಯ ತೀರ್ಥರೂಪನಾಗಿ ಬಿಡುತ್ತಾನೆ (ಅನು 25/38).

**ಮರುಭೂಮಿ** (ಮರುಧನ್ವ) – ಮಾರವಾಡ ಪ್ರದೇಶ (ವರ್ತಮಾನಕಾಲದ ರಾಜಸ್ಥಾನ ಪ್ರಾಂತ). ಇದನ್ನು ಪಶ್ಚಿಮ ದಿಗ್ವಿಜಯ ಕಾಲದಲ್ಲಿ ನಕುಲನು ಗೆದ್ದಿದ್ದನು (ಸಭಾ 32/5). ಮರುಭೂಮಿಯ ಶೀರ್ಷಿಕೆಸ್ಥಾನದಲ್ಲಿ ಕಾಮ್ಯಕ ವನವಿದೆ. ಅಲ್ಲಿ ತೃಣಬಿಂದು ಸರೋವರವಿದೆ (ವನ 258/13). ಕೌರವರ ಸೇನೆಯ ಡೇರೆ ಮರುಭೂಮಿಯಲ್ಲೂ ನೆಲಸಿತ್ತು (ಉದ್ಯೋಗ 19/30). ಮರುಧನ್ವ ಅಥವಾ ಮಾರವಾಡ ದಲ್ಲಿಯೇ ಉತ್ತಂಕಮುನಿ ವಾಸಿಸುತ್ತಿದ್ದನು. ಅವನೊಂದಿಗೆ, ದ್ವಾರಕೆಗೆ ಹೋಗುತ್ತಿದ್ದಾಗ, ಶ್ರೀಕೃಷ್ಣನ ಭೇಟಿಯಾಗಿತ್ತು. ಶ್ರೀಕೃಷ್ಣನು ಇವನಿಗೆ ವಿಶ್ವರೂಪದರ್ಶನ ಮಾಡಿಸಿದ್ದನು. ಇವನ ಬಾಯಾರಿಕೆ ತಣಿಸಲು ಮರುದೇಶದಲ್ಲಿ ಉತ್ತಂಕ ಮೇಘಸೃಷ್ಟಿಯಾಗುವಂತೆ ವರಪ್ರದಾನ ಮಾಡಿ ದ್ದನು (ಅಶ್ವ ಅಧ್ಯಾಯ 53ರಿಂದ 55).

**ಮರ್ಯಾದಾ** – (1) ವಿದರ್ಭರಾಜಕುಮಾರಿ. ಇವಳು ಪೂರುವಂಶದ ರಾಜಾ ಅವಾಚೀನನ ಪತ್ನಿ. ಇವಳ ಮಗನ ಹೆಸರು 'ಅರಿಹ' ನೆಂದಾಗಿತ್ತು. ಈಕೆ ದೇವಾತಿಥಿಯ ಪತ್ನಿ ಮರ್ಯಾದಾ ಎಂಬವಳಲ್ಲ (ಆದಿ 95/18).

(2) ವಿದೇಹರಾಜನ ಪುತ್ರಿ. ಈಕೆ ಪೂರು ವಂಶದ ರಾಜ ದೇವಾತಿಥಿಯ ಪತ್ನಿ ಮತ್ತು ಅರಿಹನ ತಾಯಿಯಾಗಿದ್ದಳು (ಆದಿ 95/23).

**ಮಲಜ** – ಒಂದು ಭಾರತೀಯ ಜನಪದ (ಭೀಷ್ಮ 9/45).

**ಮಲದ** – ಪೂರ್ವಭಾರತದ ಒಂದು ಜನಪದ. ಇದನ್ನು ಭೀಮಸೇನನು ಗೆದ್ದಿದ್ದನು (ಸಭಾ 30/8). ಈ ಜನಪದದ ಯೋಧರು ಕೌರವ ಪಕ್ಷದಲ್ಲಿದ್ದರು ಮತ್ತು ದುರ್ಯೋಧನನನ್ನು ಮುಂದಿಟ್ಟುಕೊಂಡು ಯುದ್ಧಕ್ಷೇತ್ರದಲ್ಲಿ ನಡೆಯು ತ್ತಿದ್ದರು (ದ್ರೋಣ 7/15–16).

**ಮಲಯ** – ದಕ್ಷಿಣ ಭಾರತದ ಒಂದು ಪರ್ವತ. ಈತ ಕುಬೇರನ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 10/32). ಪಾಂಡ್ಯ ಮತ್ತು ಚೋಳ ದೇಶದ ರಾಜರು, ಮಲಯ ಮತ್ತು ದುರ್ದುರ ಪರ್ವತಗಳಿಂದ, ಸ್ವರ್ಣಮಯ ಗಡಿಗೆಗಳಲ್ಲಿ ಇಟ್ಟಿರುವ ಶ್ರೀಗಂಧದ ರಸ ಮತ್ತು ಶ್ರೀಗಂಧವನ್ನು ತೆಗೆದುಕೊಂಡು, ಯುಧಿಷ್ಠಿರನಿಗೆ ಕಾಣಿಕೆ ಒಪ್ಪಿಸಲು ಬಂದಿದ್ದರು (ಸಭಾ 52/33–34). ಸೀತೆಯನ್ನು ಹುಡುಕಲು ದಕ್ಷಿಣಕ್ಕೆ ಹೋಗುತ್ತಿದ್ದ ವಾನರರು ಮಲಯ ಪರ್ವತವನ್ನು ದಾಟಿದ್ದರು (ವನ 282/44). ಭಾರತವರ್ಷದ ಏಳು ಕುಲಪರ್ವತಗಳಲ್ಲಿ

ಮಲಯಪರ್ವತವೂ ಗಣಿಸಲ್ಪಟ್ಟಿದೆ (ಭೀಷ್ಮ 9/11). ಇಲ್ಲಿ ಮೃತ್ಯು ತಪಸ್ಸುಮಾಡಿದ್ದಳು (ದ್ರೋಣ 54/26). ತ್ರಿಪುರದಹನ ಕಾಲದಲ್ಲಿ ಶಂಕರನು ಮಲಯವನ್ನು ತನ್ನ ರಥದ ಸ್ತಂಭವನ್ನಾಗಿ ಮಾಡಿದ್ದನು (ದ್ರೋಣ 202/73). ಶುಕದೇವನು ಊರ್ಧ್ವಗತಿಯನ್ನೈದುವಾಗ, ಅವನ ಆಕಾಶಮಾರ್ಗದಲ್ಲಿ ಒಂದು ಮಲಯ ಪರ್ವತ ಬಂದಿತ್ತು; ಅದರಲ್ಲಿ ಊರ್ವಶಿ ಮತ್ತು ವಿಪ್ರಚಿತ್ತಿ ಎಂಬ ಅಪ್ಸರೆಯರು ನಿತ್ಯ ನಿವಾಸ ಮಾಡುತ್ತಾರೆ. ಕೈಲಾಸದಿಂದ ಮೇಲಕ್ಕೆ ಹಾರಿದಾಗ ಈ ಪರ್ವತ ಸಿಕ್ಕಿತ್ತು; ಆದುದರಿಂದ ಇದನ್ನು ದಕ್ಷಿಣದ ಮಲಯಪರ್ವತಕ್ಕಿಂತ ಭಿನ್ನವೆಂದು ತಿಳಿಯಬೇಕು (ಶಾಂತಿ 332/21).

**ಮಲಯಧ್ವಜ** – (ಪಾಂಡ್ಯ). ಪಾಂಡ್ಯದೇಶದ ಒಬ್ಬ ರಾಜ. ಇವನು ಅಶ್ವತ್ಥಾಮನೊಂದಿಗೆ ಯುದ್ಧಮಾಡಿ ಕೊಲ್ಲಲ್ಪಟ್ಟನು (ಕರ್ಣ 20/19–47).

**ಮಲ್ಲರಾಷ್ಟ್ರ** – ಒಂದು ಪ್ರಾಚೀನ ಗಣತಂತ್ರ ರಾಜ್ಯ. ಇಲ್ಲಿಗೆ ಅಧಿಪತಿಯಾಗಿದ್ದ 'ಪಾರ್ಥಿವ'ನನ್ನು ಭೀಮಸೇನನು ಸೋಲಿಸಿದ್ದನು (ವರ್ತಮಾನ ಕಾಲದ ಕುಶೀನಾರಾ ಅಥವಾ ಕುಶೀನಗರ(ಕಸಯಾ)ವೇ ಮಲ್ಲರಾಷ್ಟ್ರದ ರಾಜಧಾನಿಯಾಗಿತ್ತು. ಬೌದ್ಧಗ್ರಂಥಗಳಲ್ಲಿ ಇದರ ವಿಶೇಷ ವರ್ಣನೆ ಸಿಗುತ್ತದೆ.) (ಸಭಾ 30/3 ಭೀಷ್ಮ 9/44). ಅರ್ಜುನನು ಅಜ್ಞಾತವಾಸಕ್ಕೋಸ್ಕರ ಆಯ್ಕೆಮಾಡಿದ ದೇಶಗಳಲ್ಲಿ ಮಲ್ಲ ರಾಷ್ಟ್ರವೂ ಸೇರಿದೆ (ವಿರಾಟ 1/3).

**ಮಲ್ಲಿಕಾ** – ಪ್ರಶಸ್ತವಾದ ಕಣ್ಣುಗುಡ್ಡೆಗಳಿರುವ ಕುದುರೆ ಮಲ್ಲಿಕಾಕ್ಷ. ಬಿಳಿಯ ಬಣ್ಣದ ಮೈ, ಕಣ್ಣಿನ ಪಾಪೆಯಂತೆ ಕಪ್ಪುಗೆರೆಯಿಂದ ಕೂಡಿದ ಮೈಬಣ್ಣವಿರುತ್ತದೆ. ಇಂತಹ ಕುದುರೆ ಯಜಮಾನನ ಸುಖವನ್ನು ವರ್ಧಿಸುತ್ತದೆ (ದ್ರೋಣ 23).

**ಮಶಕ** – ಶಾಕದ್ವೀಪದ ಒಂದು ಜನಪದ. ಇಲ್ಲಿ ಎಲ್ಲಾ ಕಾಮನೆಗಳನ್ನು ಪೂರ್ಣಗೊಳಿಸುವ ಕ್ಷತ್ರಿಯರು ವಾಸಿಸುತ್ತಾರೆ (ಭೀಷ್ಮ 11/37–38).

**ಮಸೀರ** – ಒಂದು ಭಾರತೀಯ ಜನಪದ (ಭೀಷ್ಮ 9/53).

**ಮಹತ್ತರ** – ಪಾಂಚಜನ್ಯನೆಂಬ ಅಗ್ನಿಯ ಐದು ಮಂದಿ ಪುತ್ರರಲ್ಲಿ ಒಬ್ಬ. ಈತ ಕಾಶ್ಯಪನ ಅಂಶದಿಂದ ಹುಟ್ಟಿದ್ದನು (ವನ 220/9).

**ಮಹಾಕರ್ಣಿ** – ಮಗಧರಾಜ ಅಂಬುವೀಚನ ದುಷ್ಟಮಂತ್ರಿ (ಆದಿ 203/19).

**ಮಹಾಕರ್ಣೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಮಹಾಕಾಯಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/24).

**ಮಹಾಕಾಲ** – (1) ಭಗವಾನ್ ಶಿವನ ಪಾರ್ಷದ. ಈತ ಕುಬೇರನ ಸಭೆಯಲ್ಲಿರುತ್ತಾನೆ (ಸಭಾ 10/34).

(2) ಉಜ್ಜಯಿನಿಯಲ್ಲಿ ಶಿಪ್ರಾ ನದಿಯ ದಡದಲ್ಲಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ 'ಮಹಾಕಾಲ'ವೆಂಬ ಜ್ಯೋತಿರ್ಲಿಂಗವಿದೆ. ಇಲ್ಲಿ ನಿಯಮದಿಂದ ವಾಸಿಸುತ್ತಾ ನಿಯಮಿತ ಭೋಜನ ಮಾಡಬೇಕು. ಇಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನ, ಆಚಮನ ಮಾಡುವುದರಿಂದ, ಅಶ್ವಮೇಧ ಯಜ್ಞದ ಫಲ ಸಿಗುತ್ತದೆ (ವನ 82/49).

**ಮಹಾಕಾಶ** – ಶಾಕದ್ವೀಪದ ಒಂದು ದೇಶ (ಭೀಷ್ಮ 11/25).

**ಮಹಾಕ್ರೌಂಚ** – ಕ್ರೌಂಚದ್ವೀಪದ ಒಂದು ಪರ್ವತ (ಭೀಷ್ಮ 12/7).

**ಮಹಾಗಂಗಾ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ ಒಂದು ಪಕ್ಷದ ತನಕ ನಿರಾಹಾರನಾಗಿರುವ ಮನುಷ್ಯ, ಪಾಪಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ (ಅನು 25/22).

**ಮಹಾಗೌರೀ** – ಭಾರತದ ಒಂದು ಮುಖ್ಯ ನದಿ. ಇಲ್ಲಿರುವವರು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/33).

**ಮಹಾಚೂಡಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/5).

**ಮಹಾಜಯ** – ನಾಗರಾಜ ವಾಸುಕಿಯ ಮೂಲಕ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು 'ಜಯ'ನೆಂದಾಗಿತ್ತು (ಶಲ್ಯ 45/52).

**ಮಹಾಜವಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/22).

**ಮಹಾಜಾನು** – ಒಬ್ಬ ಶ್ರೇಷ್ಠದ್ವಿಜ. ಇವನು ಪ್ರಮದ್ವರೆಗೆ ಸರ್ಪದಂಶನವಾದಾಗ ದಯೆಯಿಂದ

ಕರಗಿ, ಆಕೆಯನ್ನು ನೋಡಲು ಬಂದಿದ್ದನು (ಆದಿ 8/24).

**ಮಹಾತೇಜಾ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

**ಮಹಾದೇವ** – ಭಗವಾನ್ ಶಿವನ ಒಂದು ಹೆಸರು (ಉದ್ಯೋಗ 188/4) (ನೋಡಿರಿ – ಶಿವ ).

**ಮಹಾದ್ಯುತಿ** – ಒಬ್ಬ ಪ್ರಾಚೀನ ರಾಜ (ಆದಿ 1/232).

**ಮಹಾನ್** – (1) ಪೂರುವಂಶದ ರಾಜಾ ಮತಿನಾರನ ಪುತ್ರ (ಆದಿ 94/14).
(2) ಪ್ರಜಾಪತಿ ಭರತನೆಂಬ ಹೆಸರಿನ ಅಗ್ನಿಯ ಪುತ್ರನಾದ ಪಾವಕ. ಇವನು ಅತ್ಯಂತ ಮಹನೀಯ (ಪೂಜ್ಯ)ನಾದುದರಿಂದ ಮಹಾನ್ ಎಂದು ಹೇಳಲ್ಪಡುತ್ತಾನೆ (ವನ 219/8).

**ಮಹಾನದೀ** – (1) ಉತ್ಕಲ ಪ್ರದೇಶದಲ್ಲಿ (ಒರಿಸ್ಸಾ). ಹರಿಯುವ ಒಂದು ಪ್ರಸಿದ್ಧ ನದಿ. ಇಲ್ಲಿಗೆ ಅರ್ಜುನ ಹೋಗಿದ್ದನು (ಆದಿ 214/7). ಮಹಾನದಿಯಲ್ಲಿ ಸ್ನಾನಮಾಡಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣ ಕೊಡುವವನು ಅಕ್ಷಯ ಲೋಕಗಳನ್ನು ಪಡೆಯುತ್ತಾನೆ. ಮತ್ತು ತನ್ನ ಕುಲದ ಉದ್ಧಾರ ಮಾಡುತ್ತಾನೆ (ವನ 84/84).
(2) ಶಾಕದ್ವೀಪದ ಒಂದು ನದಿ (ಭೀಷ್ಮ 11/32).

**ಮಹಾನಂದಾ** – ಒಂದು ತೀರ್ಥ. ಇದರ ಸೇವೆ ಮಾಡಿದ ಪುರುಷ, ಸ್ವರ್ಗದಲ್ಲಿರುವ ನಂದನವನದಲ್ಲಿ ಅಪ್ಸರೆಯರಿಂದ ಸೇವೆ ಪಡೆಯುತ್ತಾನೆ (ಅನು 25/45).

**ಮಹಾಪಗಾ** – ಭಾರತದ ಒಂದು ಮುಖ್ಯ ನದಿ. ಇಲ್ಲಿರುವ ಜನರು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/28).

**ಮಹಾಪದ್ಮ** – ಘಟೋತ್ಕಚನ ಜೊತೆಗಾರನಾಗಿದ್ದ ರಾಕ್ಷಸನ ವಾಹನವಾಗಿ ಬಂದ ಗಜರಾಜ (ಭೀಷ್ಮ 64/57). ಇದು ಒಂದು ದಿಗ್ಗಜವಾಗಿದೆ (ದ್ರೋಣ 121/25–26).

**ಮಹಾಪದ್ಮಪುರ** – ಗಂಗೆಯ ದಕ್ಷಿಣ ದಡದಲ್ಲಿರುವ ಒಂದು ನಗರ (ಶಾಂತಿ 353/1).

**ಮಹಾಪಾರಿಷದೇಶ್ವರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಮಹಾಪಾರ್ಶ್ವ** – ಕೈಲಾಸಪರ್ವತದ ಮೇಲೆ ಮಹಾದೇವನ ಈಶಾನ್ಯಭಾಗದಲ್ಲಿರುವ ಒಂದು ಪರ್ವತ (ಅನು 19/21).

**ಮಹಾಪುಮಾನ್** – ಮೋದಾಕಿ ವರ್ಷದ ಮುಂದಕ್ಕೆ ಇರುವ ಒಂದು ಪರ್ವತ (ಭೀಷ್ಮ 11/26).

**ಮಹಾಪುರ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿ ಮೂರು ರಾತ್ರಿ ತನಕ ಪಾವಿತ್ರ್ಯ ಪೂರ್ವಕ ಉಪವಾಸಮಾಡುವುದರಿಂದ ಮನುಷ್ಯ ಚರಾಚರ ಪ್ರಾಣಿಗಳಿಂದ ಮತ್ತು ಮನುಷ್ಯರಿಂದ ಪ್ರಾಪ್ತವಾಗುವ ಭಯವನ್ನು ಕಳೆದುಕೊಳ್ಳುತ್ತಾನೆ (ಅನು 25/26).

**ಮಹಾಪ್ರಸ್ಥಾನಿಕಪರ್ವ** – ಮಹಾಭಾರತದ ಒಂದು ಪ್ರಧಾನಪರ್ವ.

**ಮಹಾಬಲ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/71).

**ಮಹಾಬಲಾ** – (ಪ್ರಥಮ) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/9).

**ಮಹಾಬಲಾ** – (ದ್ವಿತೀಯ) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಮಹಾಬಾಹು** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/98). ಭೀಮಸೇನನಿಂದ ಈತನ ವಧೆ (ದ್ರೋಣ 157/19).
(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/105).

**ಮಹಾಭಯ** – ಅಧರ್ಮನ ಪತ್ನಿ ನಿರ್ಋತಿಯ ಗರ್ಭದಿಂದ ಹುಟ್ಟಿದ ಮೂರು ಮಂದಿ ನೈರ್ಋತರೆಂಬ ಹೆಸರಿನ ರಾಕ್ಷಸರಲ್ಲಿ ಒಬ್ಬ. ಇತರ ಇಬ್ಬರ ಹೆಸರು ಭಯ ಮತ್ತು ಮೃತ್ಯುವೆಂದಾಗಿದೆ (ಆದಿ 66/54–55).

**ಮಹಾಭಿಷ** – ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಒಬ್ಬ ಪ್ರಾಚೀನ ರಾಜ. ಈತ ಸತ್ಯವಾದಿಯೂ ಸತ್ಯಪರಾಕ್ರಮನೂ ಆಗಿದ್ದನು (ಆದಿ 96/1). ಇವನು ಸಾವಿರ ಅಶ್ವಮೇಧ ಮತ್ತು ನೂರು ರಾಜಸೂಯಾಧ್ವರಗಳ ಮೂಲಕ ಇಂದ್ರನನ್ನು ಸಂತುಷ್ಟಗೊಳಿಸಿ, ಸ್ವರ್ಗಲೋಕವನ್ನು ಪಡೆದಿದ್ದನು (ಆದಿ 96/2). ಬ್ರಹ್ಮನ ಸಭೆಯಲ್ಲಿ ಕುಳಿತಿದ್ದ ಮಹಾಭಿಷನು, ಗಂಗೆಯ ಅನಾವೃತ ಶರೀರದ ಕಡೆಗೆ ನೋಡಿದ ಕಾರಣ ಬ್ರಹ್ಮನಿಂದ ಶಾಪ

ದೊರಕಿತು (ಆದಿ 96/4–7). ಇವನು ಮರ್ತ್ಯ ಲೋಕದಲ್ಲಿ ರಾಜಾಪ್ರತೀಪನೇ ತನ್ನ ತಂದೆಯಾಗಲು ಅರ್ಹನೆಂದು ಆರಿಸಿಕೊಂಡನು (ಆದಿ 96/9). ಇವನೇ ಪ್ರತೀಪನಲ್ಲಿ 'ಶಾಂತನು' ರೂಪದಿಂದ ಹುಟ್ಟಿದನು (ಆದಿ 97/17).

**ಮಹಾಭೌಮ** – ಪೂರು ವಂಶದ ರಾಜಾ ಅರಿಹನ ಪುತ್ರ. ಇವನ ಮೂಲಕ ಸುಯಜ್ಞಾಳ ಗರ್ಭದಿಂದ ಅಯುತನಾಯೀಯ ಜನನ ವಾಯಿತು (ಆದಿ 95/19–20).

**ಮಹಾಮತೀ** – ಮಹರ್ಷಿ ಅಂಗಿರಸನ ಏಳನೇ ಪುತ್ರಿ. ಈಕೆ ಆತನ ಮಹಾಯಾಗದಲ್ಲಿ ಜ್ಯೋತಿಸ್ವರೂಪಳು (ವನ 218/7).

**ಮಹಾಮುಖ** – ಜಯದ್ರಥನ ಸೇನೆಯ ಒಬ್ಬ ಯೋಧ. ಈತ ದ್ರೌಪದೀ ಹರಣ ಸಂದರ್ಭದಲ್ಲಿ ನಕುಲನಿಂದ ಕೊಲ್ಲಲ್ಪಟ್ಟನು (ವನ 271/16–17).

**ಮಹಾಯಶಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಮಹಾರಥ** – ಏಕಾಕಿಯಾಗಿ ಹತ್ತು ಸಾವಿರ ಧನುರ್ಧಾರಿಗಳಾದ ಯೋಧರನ್ನು, ಎದುರಿಸಿ ನಿಂತು ಯುದ್ಧಮಾಡುವ ಸಾಮರ್ಥ್ಯವುಳ್ಳವನೂ, ಶಸ್ತ್ರವಿದ್ಯೆಯಲ್ಲಿ ಮತ್ತು ಶಾಸ್ತ್ರಗಳಲ್ಲಿ ಪ್ರಾವೀಣ್ಯವುಳ್ಳವನೂ, ಮಹಾರಥನೆನಿಸುತ್ತಾನೆ (ಉದ್ಯೋಗ 155). ಅಸಂಖ್ಯಾತ ಯೋಧರನ್ನು, ಏಕಕಾಲದಲ್ಲಿ ಎದುರಿಸಿನಿಂತು, ಯುದ್ಧಮಾಡುವ ಸಾಮರ್ಥ್ಯವುಳ್ಳವನು ಅತಿರಥನೆಂದು ಕರೆಯಲ್ಪಡುತ್ತಾರೆ (ಭಾ. ಪ್ರ.).

**ಮಹಾರವ** – ಯದುವಂಶದ ಒಬ್ಬ ಕ್ಷತ್ರಿಯ. ಇವನು ರೈವತಕ ಪರ್ವತದ ಮೇಲೆ ಜರಗುವ ಉತ್ಸವದಲ್ಲಿ ಸಮ್ಮಿಲಿತನಾಗಿದ್ದನು (ಆದಿ 218/11).

**ಮಹಾರೌದ್ರ** – ಘಟೋತ್ಕಚನ ಜೊತೆಗಾರನಾದ ಒಬ್ಬ ರಾಕ್ಷಸ. ಇವನು ದುರ್ಯೋಧನನಿಂದ ಕೊಲ್ಲಲ್ಪಟ್ಟನು (ಭೀಷ್ಮ 91/20–21).

**ಮಹಾಲಯ** – ಒಂದು ತೀರ್ಥ. ಇಲ್ಲಿ ಆರನೇ ಸಮಯದತನಕ ಉಪವಾಸಪೂರ್ವಕ ಒಂದು ತಿಂಗಳವರೆಗೆ ವಾಸಮಾಡುವುದರಿಂದ ಮನುಷ್ಯನು ಎಲ್ಲಾ ಪಾಪಗಳಿಂದ ಮುಕ್ತನಾಗಿ ಸುವರ್ಣ ರಾಶಿಯನ್ನು ಪಡೆಯುತ್ತಾನೆ ಮತ್ತು ಹಿಂದು ಮುಂದಿನ ಹತ್ತು ಹತ್ತು ತಲೆಮಾರಿನ ಉದ್ಧಾರ ಮಾಡುತ್ತಾನೆ (ವನ 84/54–55).

ಈ ಶ್ಲೋಕದಲ್ಲಿ "ಆರನೇ ಸಮಯ"ವೆಂಬುದರ ಬದಲಾಗಿ, "ಮಹಾಲಯ ಅಮಾವಾಸ್ಯೆಯ ಒಂದು ತಿಂಗಳ ಕಾಲ, ಮೂರು ದಿನಗಳಿಗೊಮ್ಮೆ ಊಟಮಾಡುತ್ತಾ ವ್ರತನಿಷ್ಠನಾಗಿದ್ದರೆ" ಎಂದೂ ಅರ್ಥೈಸಿದ್ದಾರೆ.

**ಮಹಾವೀರ** – ಒಬ್ಬ ಪ್ರಾಚೀನ ಕ್ಷತ್ರಿಯ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/66).

**ಮಹಾವೇಗಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/16).

**ಮಹಾಶಿರಾ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10).

**ಮಹಾಶೋಣ** – ಶೋಣಭದ್ರವೆಂಬ ನದಿ. ಅದನ್ನು ದಾಟಿ ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನ ಮಗಧವನ್ನು ತಲುಪಿದ್ದರು (ಸಭಾ 20/27).

**ಮಹಾಶ್ರಮ** – ಒಂದು ತೀರ್ಥ. ಇದು ಎಲ್ಲಾ ಪಾಪಗಳಿಂದಲೂ ಮುಕ್ತಗೊಳಿಸುತ್ತದೆ. ಅಲ್ಲಿ ಒಂದು ಹೊತ್ತು ಉಪವಾಸಮಾಡಿ, ಒಂದು ರಾತ್ರಿ ವಾಸಿಸಿದರೆ, ಆ ಮನುಷ್ಯನಿಗೆ ಶುಭಲೋಕಗಳು ಪ್ರಾಪ್ತವಾಗುತ್ತವೆ (ವನ 84/53–54). ಇಲ್ಲಿ ಒಂದು ತಿಂಗಳು ಉಪವಾಸ ಮಾಡಿದರೆ, ಮನುಷ್ಯ ಅಷ್ಟೇ ಸಮಯದಲ್ಲಿ 'ಸಿದ್ಧ'ನಾಗಿ ಬಿಡುತ್ತಾನೆ (ಅನು 25/17–18).

**ಮಹಾಶ್ವ** – ಒಬ್ಬ ಪ್ರಾಚೀನ ರಾಜ. ಇವನು ಯಮನ ಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/19).

**ಮಹಾಸೇನ** – ಸ್ಕಂದನ ಇನ್ನೊಂದು ಹೆಸರು (ವನ 225/27; ಶಲ್ಯ 46/60). ಇವನು ಬ್ರಹ್ಮನ ಸಭೆಯಲ್ಲಿದ್ದುಕೊಂಡು, ಅವನ ಉಪಾಸನೆ ಮಾಡುತ್ತಾನೆ (ಸಭಾ 11/52).

**ಮಹಾಸ್ವನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/26).

**ಮಹಾಹನು** – ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/10).

**ಮಹಾಹ್ರದ** – ಒಂದು ಉತ್ತಮ ತೀರ್ಥ.

ಇದರಲ್ಲಿ ಸ್ನಾನಮಾಡುವ ಮನುಷ್ಯ ಎಂದೂ ದುರ್ಗತಿಗೆ ಬೀಳುವುದಿಲ್ಲ ಮತ್ತು ತುಂಬಾ ಸ್ವರ್ಣರಾಶಿ ಪಡೆಯುತ್ತಾನೆ (ವನ 84/144–145). ಮಹಾಹ್ರದದಲ್ಲಿ ಸ್ನಾನಮಾಡಿ, ಶುದ್ಧಚಿತ್ತನಾಗಿ, ಒಂದು ತಿಂಗಳ ವರೆಗೆ ನಿರಾಹಾರನಾಗಿರುವವನು ಜಮದಗ್ನಿಗೆ ಸರಿಯಾದ ಸದ್ಗತಿ ಪಡೆಯುತ್ತಾನೆ (ಅನು 25/48).

**ಮಹಿಷ ಅಥವಾ ಮಹಿಷಾಸುರ** – ಒಬ್ಬ ಅಸುರ. ಇವನು ದೇವತೆಗಳನ್ನು ಸೋಲಿಸಿ, ರುದ್ರನ ರಥದ ಮೇಲೆ ಆಕ್ರಮಣ ಮಾಡಿದ್ದನು (ವನ 231/88). ಸ್ಕಂದನಿಂದ ಇವನ ವಧೆ (ವನ 231/96; ಶಲ್ಯ 46/74). ಇವನಿಗೆ ಮಹೇಶ್ವರನಿಂದ ವರಪ್ರಾಪ್ತವಾದ ವರ್ಣನೆ (ಅನು 14/214).

**ಮಹಿಷಕ (ಮಾಹಿಷಕ)** – (1) ಒಂದು ದಕ್ಷಿಣ ಭಾರತೀಯ ಜನಪದ (ವರ್ತಮಾನ ಕಾಲದ ಮೈಸೂರು ರಾಜ್ಯ) (ಭೀಷ್ಮ 9/59). ಮಾಹಿಷಕ ಮೊದಲಾದ ದೇಶಗಳ ಧರ್ಮ–ಆಚಾರ–ವ್ಯವಹಾರಗಳು ನಿಂದಿತವಾಗಿವೆ (ಕರ್ಣ 44/43).
(2) ಒಂದು ಜಾತಿ. ಇದು ಮೊದಲು ಕ್ಷತ್ರಿಯವಾಗಿತ್ತು. ಆದರೆ ಬ್ರಾಹ್ಮಣರ ಕೃಪಾದೃಷ್ಟಿ ದೊರಕದ ಕಾರಣ ಶೂದ್ರವಾಯಿತು (ಅನು 33/22–23). ಅರ್ಜುನನು ಅಶ್ವಮೇಧದ ಕುದುರೆಯನ್ನು ರಕ್ಷಿಸುವ ಕಾಲದಲ್ಲಿ ಇವರೆಲ್ಲರನ್ನು ಗೆದ್ದಿದ್ದನು (ಆಶ್ವ 83/11).

**ಮಹಿಷದಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/28).

**ಮಹಿಷಾನನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/25).

**ಮಹಿಷ್ಮತೀ** – ಮಹರ್ಷಿ ಅಂಗಿರಸನ ಆರನೇ ಪುತ್ರಿ, ಇವಳ ಇನ್ನೊಂದು ಹೆಸರು 'ಅನುಮತಿ' ಎಂದೂ ಇದೆ (ವನ 218/6).

**ಮಹೀ** – ಒಂದು ನದಿ. ಇದು ಅಗ್ನಿಯ ಉತ್ಪತ್ತಿಸ್ಥಾನವೆಂದು ಹೇಳಲಾಗಿದೆ (ವನ 222/23–26).

**ಮಹೇಂದ್ರ** – ಒಂದು ಪರ್ವತ. ಇಲ್ಲಿ ಪರಶುರಾಮನ ವಾಸಸ್ಥಳವಿತ್ತು. ಕ್ಷತ್ರಿಯ ಸಂಹಾರಮಾಡಿ, ಅವನು ಇಲ್ಲಿ ತಪಸ್ಸು ಮಾಡಿದ್ದನು (ಆದಿ 64/4; ಆದಿ 129/53). ಪಾಂಡುಪುತ್ರ ಅರ್ಜುನ ಇಲ್ಲಿಗೆ ಹೋಗಿದ್ದನು (ಆದಿ 214/13). ಇವನು ಕುಬೇರ ಸಭೆಯಲ್ಲಿದ್ದು ಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 10/30). ಈ ಪರ್ವತದ ಮೇಲೆ ರಾಮತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಯಜ್ಞದ ಫಲಸಿಗುತ್ತದೆ (ವನ 85/16). ಪೂರ್ವಕಾಲದಲ್ಲಿ ಬ್ರಹ್ಮನು ಇಲ್ಲಿ ಯಜ್ಞ ಮಾಡಿದ್ದನು. ಇದು ಪೂರ್ವದಿಕ್ಕಿನಲ್ಲಿದೆ (ವನ 87/22–28). ಯುಧಿಷ್ಠಿರನು ತೀರ್ಥಯಾತ್ರೆ ಮಾಡುತ್ತಾ ಈ ಪರ್ವತದ ಮೇಲೆ ಹೋಗಿದ್ದನು (ವನ 114/30). ಚತುರ್ದಶಿ ತಿಥಿಯಂದು ಪರಶುರಾಮನು ಮಹೇಂದ್ರ ಪರ್ವತಕ್ಕೆ ಬಂದು ಯುಧಿಷ್ಠಿರಾದಿಗಳಿಗೆ ದರ್ಶನವನ್ನಿತ್ತನು (ವನ 117/16). ಭಾರತ ವರ್ಷದ ಏಳು ಕುಲಪರ್ವತಗಳಲ್ಲಿ ಮಹೇಂದ್ರ ಪರ್ವತವೂ ಒಂದಾಗಿದೆ (ಭೀಷ್ಮ 9/11). ಸಂಪೂರ್ಣ ಪೃಥ್ವಿಯನ್ನು ಕಶ್ಯಪರಿಗೆ ಕೊಟ್ಟು, ಅವರ ಆಜ್ಞೆಯಂತೆ ಪರಶುರಾಮ ಮಹೇಂದ್ರ ಪರ್ವತದಲ್ಲಿ ಇರತೊಡಗಿದನು (ದ್ರೋಣ 70/22–23). (ವನ 117/14).

**ಮಹೇಂದ್ರಾ** – ಭಾರತದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿ ವಾಸಿಸುವವರು ಕುಡಿಯುತ್ತಾರೆ (ಭೀಷ್ಮ 9/22).

**ಮಹೇಶ್ವರ** – ಭಗವಾನ್ ಶಿವನ ಒಂದು ಹೆಸರು (ಉದ್ಯೋಗ 111/9).

**ಮಹೋತ್ಥ** – ಪಶ್ಚಿಮ ಭಾರತದ ಒಂದು ಜನಪದ. ಇದರ ಅಧಿಪತಿಯಾದ ರಾಜರ್ಷಿ ಆಕ್ರೋಶನನ್ನು ನಕುಲನು ಗೆದ್ದಿದ್ದನು (ಸಭಾ 32/6).

**ಮಹೋದರ** – (1) ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/16).
(2) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/18). ಭೀಮಸೇನನಿಂದ ಇವನ ವಧೆ (ದ್ರೋಣ 157/19).
(3) ಒಬ್ಬ ಪ್ರಾಚೀನ ಋಷಿ. ಇವನ ತೊಡೆಯಲ್ಲಿ ಶ್ರೀರಾಮನಿಂದ ಕೊಲ್ಲಲ್ಪಟ್ಟ ಒಬ್ಬ ರಾಕ್ಷಸನ ತಲೆ ಅಂಟಿಕೊಂಡಿತ್ತು. ಅದು ಔಶನನ ತೀರ್ಥದಲ್ಲಿ ಬಿಡುಗಡೆಯಾಯಿತು. ಇದೇ ಕಾರಣದಿಂದಾಗಿ ಈ ತೀರ್ಥದ ಹೆಸರು 'ಕಪಾಲಮೋಚನ' ವಾಯಿತು (ಶಲ್ಯ 39/11–22).

**ಮಹೋದರ್ಯ** – ಸಾಯಂಪ್ರಾತಃಕಾಲಗಳಲ್ಲಿ ಸ್ಮರಿಸಲು ಯೋಗ್ಯನಾದ ಒಬ್ಬ ರಾಜ (ಅನು 165/52).

**ಮಹೌಜಾ** – (1) ಒಬ್ಬ ಕ್ಷತ್ರಿಯ ರಾಜ. ಇವನು ಐದನೇ ಕಾಲೇಯನ ಅಂಶದಿಂದ ಹುಟ್ಟಿದ್ದನು (ಆದಿ 67/52). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/22).
(2) ಒಂದು ಕ್ಷತ್ರಿಯ ಕುಲ. ಇದರಲ್ಲಿ 'ವರಯು' ಎಂಬ ಕುಲಕಂಟಕ ರಾಜ ಹುಟ್ಟಿದ್ದನು (ಉದ್ಯೋಗ 74/15).

**ಮಾಕಂದೀ** – ರಾಜಾ ದ್ರುಪದನ ಗಂಗಾತಟದ ನಗರ (ಆದಿ 137/73).

**ಮಾಗಧ** – ಕೌರವಪಕ್ಷದಲ್ಲಿದ್ದ ಮಗಧ ದೇಶದ ಯೋಧ (ಭೀಷ್ಮ 51/12).

**ಮಾಘ** – (ಹನ್ನೆರಡು ತಿಂಗಳುಗಳಲ್ಲಿ ಒಂದು. ಯಾವ ತಿಂಗಳ ಪೂರ್ಣಿಮೆಯಂದು 'ಮಘಾ'. ನಕ್ಷತ್ರದ ಯೋಗವಿರುತ್ತದೋ, ಅದನ್ನು 'ಮಾಘ'ವೆನ್ನುತ್ತಾರೆ. ಇದು ಪೌಷದ ಅನಂತರ ಮತ್ತು ಫಾಲ್ಗುನದ ಮೊದಲು ಬರುತ್ತದೆ.). ಮಾಘಮಾಸದ ಅಮಾವಾಸ್ಯೆಯದಿನ ಪ್ರಯಾಗ ತೀರ್ಥದಲ್ಲಿ ಮೂರುಕೋಟಿ ಹತ್ತುಸಾವಿರ ಇತರ ತೀರ್ಥಗಳ ಸಮಾಗಮವಾಗುತ್ತದೆ. ಮಾಘ ಮಾಸದಲ್ಲಿ ಪ್ರಯಾಗದಲ್ಲಿ ಸ್ನಾನ ಮಾಡುವವನು ಎಲ್ಲಾ ಪಾಪಗಳಿಂದ ಮುಕ್ತನಾಗಿ, ಸ್ವರ್ಗಕ್ಕೆ ಹೋಗುತ್ತಾನೆ (ಅನು 25/36–38). ಮಾಘ ಮಾಸದಲ್ಲಿ ಬ್ರಾಹ್ಮಣನಿಗೆ ತಿಲದಾನ ಮಾಡುವವನು ಎಂದೂ ನರಕದರ್ಶನ ಮಾಡುವುದಿಲ್ಲ (ಅನು 66/8). ಮಾಘ ಮಾಸವನ್ನು ನಿಯಮಪೂರ್ವಕ, ಒಂದು ಹೊತ್ತು ಭೋಜನಮಾಡಿ ಕಳೆಯುವವನು, ಧನವಂತ ಕುಲದಲ್ಲಿ ಜನ್ಮವೆತ್ತಿ, ತನ್ನ ಕುಟುಂಬದ ಜನರಲ್ಲಿ ಮಹತ್ವವನ್ನು ಪಡೆಯುತ್ತಾನೆ (ಅನು 106/31). ಮಾಘ ಮಾಸದ ದ್ವಾದಶಿಯಂದು ಹಗಲು ರಾತ್ರಿ ಉಪವಾಸವಿದ್ದು, ಭಗವಾನ್ ಮಾಧವನ ಪೂಜೆ ಮಾಡುವುದರಿಂದ, ಉಪಾಸಕನಿಗೆ ರಾಜಸೂಯ ಯಜ್ಞದ ಫಲಪ್ರಾಪ್ತವಾಗುತ್ತದೆ. ಅವನು ತನ್ನ ಕುಲವನ್ನು ಉದ್ಧಾರ ಮಾಡುತ್ತಾನೆ (ಅನು 109/5). ಭೀಷ್ಮನು ಮಾಘಮಾಸದ ಶುಕ್ಲಪಕ್ಷದ ಅಷ್ಟಮಿ ತಿಥಿಯಂದು ದೇಹತ್ಯಾಗಕ್ಕೋಸ್ಕರ ಶ್ರೀಕೃಷ್ಣನಲ್ಲಿ ಆಜ್ಞೆ ಕೇಳಿದ್ದನು (ಅನು 167/28–45).

**ಮಾಠರವನ** – ದಕ್ಷಿಣದ ಒಂದು ತೀರ್ಥ. ಇಲ್ಲಿ ಸೂರ್ಯನ ಪಾರ್ಶ್ವವರ್ತಿ ದೇವತೆಯಾದ ಮಾಠರನ ವಿಜಯಸ್ತಂಭ ಶೋಭಾಯಮಾನವಾಗಿದೆ (ವನ 88/10).

**ಮಾಣಿವರ** – ಒಬ್ಬ ಯಕ್ಷ. ಇವನು ಮಂದರಾಚಲದಲ್ಲಿ ವಾಸಿಸುತ್ತಾನೆ (ವನ 139/5).

**ಮಾಣ್ಡವ್ಯ** – ಒಬ್ಬ ಪ್ರಸಿದ್ಧ ಮಹರ್ಷಿ. ಇವನು ಧೈರ್ಯವಂತನೂ ಎಲ್ಲಾ ಧರ್ಮಗಳ ಜ್ಞಾನಿಯೂ, ಸತ್ಯನಿಷ್ಠನೂ, ತಪಸ್ವಿಯೂ ಆಗಿದ್ದನು (ಆದಿ 106/2–3). (ವಿಶೇಷ ನೋಡಿರಿ–ಅಣೀಮಾಂಡವ್ಯ).

**ಮಾಣ್ಡವ್ಯಾಶ್ರಮ** – ತೀರ್ಥಸ್ವರೂಪವಾದ ಒಂದು ಆಶ್ರಮ. ಇಲ್ಲಿ ಕಾಶೀರಾಜ ಕನ್ಯೆ ಕಠೋರ ವ್ರತವನ್ನು ಆಶ್ರಯಿಸಿ, ಸ್ನಾನಮಾಡಿದ್ದಳು (ಉದ್ಯೋಗ 186/28–29).

**ಮಾತಂಗ** – ಒಬ್ಬ ಮುನಿ. ಅವನ ಮಾತುಗಳು ಪ್ರಮಾಣರೂಪದಲ್ಲಿ ಸ್ವೀಕರಿಸಲ್ಪಡುತ್ತವೆ. ಆ ವಚನಗಳು ಹೀಗಿವೆ. 'ವೀರಪುರುಷನು ಸದಾ ಉದ್ಯೋಗ ಮಾಡುವವನಾಗಿರಬೇಕು. ಯಾರ ಮುಂದೆಯೂ ತಲೆತಗ್ಗಿಸಿರಬಾರದು; ಯಾಕೆಂದರೆ ಉದ್ಯೋಗ ಮಾಡುವುದು ಪುರುಷನ ಕರ್ತವ್ಯ ಪುರುಷಾರ್ಥವಾಗಿದೆ. ವೀರಪುರುಷನು ಆ ಸಮಯದಲ್ಲಿ ನಷ್ಟವಾಗಿ ಹೋಗಬಹುದು. ಆದರೆ ಎಂದೂ ಶತ್ರುವಿನ ಮುಂದೆ ನತಮಸ್ತಕನಾಗಬಾರದು.' (ಉದ್ಯೋಗ 127/19–20).

**ಮಾತಂಗೀ** – ಕ್ರೋಧವಶನ ಕ್ರೋಧದಿಂದ ಹುಟ್ಟಿದ ಕನ್ಯೆ. ಈಕೆ ಆನೆಗಳಿಗೆ ಜನ್ಮಕೊಟ್ಟಿದ್ದಳು (ಆದಿ 66/61, 66).

**ಮಾತರಿಶ್ವಾ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/14).

**ಮಾತಲಿ** – ಇಂದ್ರನ ಸಾರಥಿ. ಇವನು ಅರ್ಜುನನಿಗೆ ಸ್ವರ್ಗಲೋಕಕ್ಕೆ ಹೋಗಲು ಇಂದ್ರನ ಸಂದೇಶವನ್ನು ತಿಳಿಸಿದುದು (ವನ 42/11–14). ಇವನು ಅರ್ಜುನನನ್ನು ಇಂದ್ರನ ದಿವ್ಯರಥದಲ್ಲಿ ಕುಳ್ಳಿರಿಸಿ, ಗಂಧಮಾದನದ ಮೇಲೆ ಕರೆತಂದುದು

ಮತ್ತು ಪಾಂಡವರಿಗೆ ಕರ್ತವ್ಯದ ಕರೆಯನ್ನಿತ್ತದ್ದು (ವನ 165/1–9). ಇಂದ್ರನ ರಥ ತೆಗೆದು ಕೊಂಡು ಶ್ರೀರಾಮನ ಸೇವೆಗೆ ಉಪಸ್ಥಿತ ನಾದುದು (ವನ 290/13–14). ಇವನು ತನ್ನ ಪುತ್ರಿ ಗುಣಕೇಶಿಗೋಸ್ಕರ ವರನನ್ನು ಹುಡುಕಲು ಹೊರಟದ್ದು (ಉದ್ಯೋಗ 97/20–21). ಹಾದಿ ಯಲ್ಲಿ ನಾರದನ ಭೇಟಿ ಮತ್ತು ಆತನೊಂದಿಗೆ ಪೃಥ್ವಿಯ ಕೆಳಗಿನ ಲೋಕಕ್ಕೆ ಹೋಗಿ ವರನನ್ನು ಹುಡುಕಿದುದು (ಉದ್ಯೋಗ ಅಧ್ಯಾಯ 98ರಿಂದ 103). ನಾಗಕುಮಾರ ಸುಮುಖನೊಂದಿಗೆ ತನ್ನ ಕನ್ಯೆಯ ವಿವಾಹಮಾಡಲು ನಿಶ್ಚಯ ಮಾಡಿ ದುದು (ಉದ್ಯೋಗ 103/25–26). ಆರ್ಯಕ ನೊಡನೆ ಸುಮುಖನನ್ನು ಅಳಿಯನಾಗಿ ಮಾಡಿ ಕೊಳ್ಳುವ ವಿಚಾರ ಹೇಳಿ, ಇಂದ್ರನ ಬಳಿಗೆ ಹೋಗುವ ವಿಚಾರ ಮಾಡಿದುದು (ಉದ್ಯೋಗ 104/18–21). ಎಲ್ಲರಿಗೂ ವಂದನೀಯ ಪುರುಷನ ಕುರಿತಾಗಿ, ಈತ ಇಂದ್ರನ ಮುಂದೆ ಪ್ರಶ್ನೆ ಮಾಡಿದುದು (ಅನು 96/22).

**ಮಾತೃತೀರ್ಥ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಪ್ರಾಚೀನ ತೀರ್ಥ. ಇದರಲ್ಲಿ ಸ್ನಾನ ಮಾಡುವುದರಿಂದ ಸಂತತಿ ಅಭಿವೃದ್ಧಿಯಾಗುತ್ತದೆ ಮತ್ತು ಆ ಮನುಷ್ಯ ಎಂದೂ ಕ್ಷೀಣಹೊಂದ ದಿರುವ ಸಂಪತ್ತನ್ನು ಭೋಗಿಸುತ್ತಾನೆ (ವನ 83/58).

**ಮಾದ್ರವತೀ** – ಅಭಿಮನ್ಯು ಪುತ್ರ ರಾಜಾ ಪರೀಕ್ಷಿತನ ಧರ್ಮಪತ್ನಿ ಮತ್ತು ಜನಮೇಜಯನ ತಾಯಿ (ಆದಿ 95/85). ಪಾಂಡುವಿನ ದ್ವಿತೀಯ ಪತ್ನಿ ಮತ್ತು ನಕುಲ ಸಹದೇವರ ತಾಯಿಯಾದ ಮಾದ್ರಿಯನ್ನು 'ಮಾದ್ರವತಿ' ಎಂದು ಹೇಳಲಾಗು ತ್ತಿತ್ತು (ಆಶ್ವ 52/56).

**ಮಾದ್ರೀ** – ಮದ್ರದೇಶದ ರಾಜನ ಮಗಳು. ಮದ್ರರಾಜ ಶಲ್ಯನ ಸಹೋದರಿ. ಪಾಂಡುವಿನ ದ್ವಿತೀಯ ಪತ್ನಿ ಮತ್ತು ನಕುಲ ಸಹದೇವರ ತಾಯಿ. ಈಕೆ 'ಧೃತಿ' ಎಂಬ ದೇವಿಯ ಅಂಶ ದಿಂದ ಹುಟ್ಟಿದ್ದಳು (ಆದಿ 67/160). ಸಾಧ್ವಿಯೂ, ಯಶಸ್ವಿನಿಯೂ ಆದ ಮಾದ್ರಿಯ ಹೊಗಳಿಕೆ ಯನ್ನು ಕೇಳಿ, ಭೀಷ್ಮನು ಶಲ್ಯನ ಬಳಿಗೆ ಹೋಗಿ, ಪಾಂಡುವಿಗೋಸ್ಕರ ಈಕೆಯ ವರಣ ಮಾಡಿ ದುದು, ಶಲ್ಯನ ಕುಲಧರ್ಮಕ್ಕೆ ಅನುಸಾರವಾಗಿ, ಕನ್ಯಾಶುಲ್ಕರೂಪದಲ್ಲಿ ಆತನಿಗೆ ಅಪಾರ ಧನವ ನ್ನಿತ್ತದ್ದು, ಶಲ್ಯನು ತನ್ನ ಸೋದರಿಯನ್ನು ಅಲಂಕರಿಸಿ, ಭೀಷ್ಮನ ಕೈಗೆ ಒಪ್ಪಿಸಿದುದು ಮತ್ತು ಭೀಷ್ಮನು ಮಾದ್ರಿಯನ್ನು ಕರಕೊಂಡು ಹಸ್ತಿನಾ ಪುರಕ್ಕೆ ಆಗಮಿಸಿದುದು (ಆದಿ 112/1–17). ಶುಭದಿನ ಮತ್ತು ಶುಭಮುಹೂರ್ತದಲ್ಲಿ ಪಾಂಡು ವಿನ ಮೂಲಕ, ವಿಧಿವತ್ತಾಗಿ ಮಾದ್ರಿಯ ಪಾಣಿ ಗ್ರಹಣ (ಆದಿ 112/18). ತನ್ನ ಪತಿಯೊಂದಿಗೆ ಕಾಡಿನಲ್ಲಿ ಮಾದ್ರಿಯ ವಾಸ (ಆದಿ 113/6). ಶಾಪಗ್ರಸ್ತನಾದಾಗ ಸನ್ಯಾಸಸ್ವೀಕರಿಸಲು ನಿಶ್ಚಯ ಮಾಡಿ, ಕುಂತಿಯೊಂದಿಗೆ ಮಾದ್ರಿಯು ಹಸ್ತಿನಾ ವತಿಗೆ ಹೋಗುವಂತೆ ಪಾಂಡುವಿನ ಆಜ್ಞೆ, ಪತಿ ಯೊಂದಿಗಿದ್ದು ವಾನಪ್ರಸ್ಥ ಧರ್ಮದ ಪಾಲನೆ ಮಾಡುವ ಇಚ್ಛೆಯನ್ನು ಈಕೆ ತಿಳಿಸಿದುದು. ಇಲ್ಲವಾದರೆ ಪ್ರಾಣತ್ಯಾಗ ಮಾಡುವ ನಿಶ್ಚಯ ವನ್ನು ತಿಳಿಸಿದುದು (ಆದಿ 118/1–30). 'ಪುತ್ರ ಪ್ರಾಪ್ತಿಗಾಗಿ ನನ್ನ ಮೇಲೂ ಕುಂತೀದೇವಿ ಅನುಗ್ರಹ ಮಾಡಲಿ' ಎಂದು ಪಾಂಡುವಿನೊಡನೆ ಈಕೆಯ ಪ್ರಾರ್ಥನೆ (ಆದಿ 123/1–6). ಅಶ್ವಿನೀ ಕುಮಾರರ ಮೂಲಕ, ಇವಳ ಗರ್ಭದಿಂದ ನಕುಲ ಹಾಗೂ ಸಹದೇವನ ಜನ್ಮ (ಆದಿ 123/16). ಪಾಂಡು ನಿಧನ ಹೊಂದಿದಾಗ ಈಕೆಯ ವಿಲಾಪ (ಆದಿ 124/17). ಪಾಂಡು ವಿನೊಂದಿಗೆ ತಾನು ಸಹಗಮನ ಮಾಡಲು ಒಪ್ಪಿಗೆ ನೀಡಬೇಕೆಂದು ಕುಂತಿಯೊಡನೆ ಈಕೆಯ ಪ್ರಾರ್ಥನೆ (ಆದಿ 124/25). ಶತಶೃಂಗ ನಿವಾಸಿಗಳಾದ ಋಷಿಗಳಿಂದ ಈಕೆಗೆ ಧೈರ್ಯದ ಆಶ್ವಾಸನೆ ಮತ್ತು ಸಹಗಮನ ಮಾಡದಿರಲು ಆಗ್ರಹ (ಆದಿ 124/28). ತನ್ನ ಕೊನೆಯ ಕಾಲದಲ್ಲಿ ಈಕೆಯ ಮೂಲಕ ಪಾಂಡವರಿಗೆ ಶಿಕ್ಷಣ (ಆದಿ 124/28). ಕುಂತಿಯಿಂದ ಆಜ್ಞೆ ಪಡೆದು ಈಕೆಯ ಚಿತಾರೋಹಣ (ಆದಿ 124/31). ಧೃತರಾಷ್ಟ್ರನ ಆಜ್ಞೆಯಿಂದ ವಿದುರಾದಿಗಳ ಮೂಲಕ, ಪಾಂಡು ಮತ್ತು ಮಾದ್ರಿಯರ ಅಸ್ಥಿಗೆ ರಾಜೋಚಿತ ಕ್ರಮದಿಂದ ದಹನ ಸಂಸ್ಕಾರ, ಸಹೋದರ ಬಂಧುಗಳೊಂದಿಗೆ ಇವಳಿಗೆ ಜಲಾಂಜಲಿ ನೀಡಿಕೆ (ಆದಿ 126). ತನ್ನ ಪತಿ ಯೊಂದಿಗೆ ಮಹೇಂದ್ರ ಭವನದಲ್ಲಿ ಮಾದ್ರಿಯ ನಿವಾಸ (ಸ್ವರ್ಗ 4/20; ಸ್ವರ್ಗ 5/15).

**ಮಾದ್ರೇಯಜಾಂಗಲ** – ಒಂದು ಭಾರತೀಯ ಜನಪದ (ಭೀಷ್ಮ 9/39).

**ಮಾಧವ** – ಶ್ರೀ ಕೃಷ್ಣನ ಹೆಸರು. ಮೌನ, ಧ್ಯಾನ ಮತ್ತು ಯೋಗದಿಂದ ಶ್ರೀಕೃಷ್ಣನ ಬೋಧ ಅಥವಾ ಸಾಕ್ಷಾತ್ಕಾರವಾಗುತ್ತದೆ. ಆದುದರಿಂದ ಈತನನ್ನು 'ಮಾಧವ'ನೆನ್ನುತ್ತಾರೆ (ಉದ್ಯೋಗ 70/4).

**ಮಾಧವೀ** – (1) ರಾಜಾ ಯಯಾತಿಯ ಪುತ್ರಿ. ಈಕೆ ತಪಸ್ವಿನಿಯೂ ಮೃಗಚರ್ಮ ಸಮಾವೃತಳೂ ಆಗಿ, ಮೃಗವ್ರತ ಪಾಲಿಸುತ್ತಿದ್ದಳು. ಇವಳು ಅಷ್ಟಕನೇ ಮೊದಲಾದ ಮಕ್ಕಳಿಗೆ ಯಯಾತಿಯ ಪರಿಚಯ ಮಾಡಿಸಿದುದು. ತನ್ನ ಪುಣ್ಯದ ಮೂಲಕ ಸ್ವರ್ಗಕ್ಕೆ ಹೋಗುವಂತೆ ಈಕೆಯಿಂದ ಯಯಾತಿಗೆ ಆಶ್ವಾಸನೆ (ಆದಿ 93/13). ಯಯಾತಿಯು ಗಾಲವನಿಗೆ ತನ್ನ ಪುತ್ರಿ ಮಾಧವಿಯನ್ನು ಒಪ್ಪಿಸಿದುದು (ಉದ್ಯೋಗ 115/12). ಈಕೆ ಗಾಲವನೊಂದಿಗೆ ತನ್ನ ಅಂತ ರಂಗವನ್ನು ಹೇಳಿದುದು (ಉದ್ಯೋಗ 116/10–13). ಇವಳ ಗರ್ಭದಿಂದ ಅಯೋಧ್ಯಾಧೀಶ ಹರ್ಯಶ್ವನ ಮೂಲಕ ವಸುಮಂತನ (ವಸುಮನಾ) ಜನನ (ಉದ್ಯೋಗ 116/16). ಕಾಶೀರಾಜ ದಿವೋದಾಸನ ಮೂಲಕ ಈಕೆಯ ಗರ್ಭದಿಂದ ಪ್ರತರ್ದನನ ಜನ್ಮ (ಉದ್ಯೋಗ 117/18). ಉಶೀನರನ ಮೂಲಕ ಶಿಬಿಯ ಜನನ (ಉದ್ಯೋಗ 118/20). ವಿಶ್ವಾಮಿತ್ರನ ಮೂಲಕ ಈಕೆಯ ಗರ್ಭದಿಂದ ಅಷ್ಟಕನ ಜನ್ಮ (ಉದ್ಯೋಗ 119/18). ಇವಳ ಸ್ವಯಂವರದ ವರ್ಣನೆ (ಉದ್ಯೋಗ 120/1–5). ಈಕೆಯ ಸ್ವಯಂವರ ದಲ್ಲಿ ತಪೋವನವನ್ನು ವರಣಮಾಡಿ, ಮೃಗಿ ರೂಪದಿಂದ ತಪಸ್ಸನ್ನಾಚರಿಸಿದುದು (ಉದ್ಯೋಗ 120/5–11). ಸ್ವರ್ಗಲೋಕದಿಂದ ಪತನ ಹೊಂದಿದ ತಂದೆ ಯಯಾತಿಗೋಸ್ಕರ ಈಕೆ ತನ್ನ ತಪಸ್ಸಿನ ಅರ್ಧ ಪುಣ್ಯವನ್ನು ಕೊಡಲು ಸಿದ್ಧಳಾದುದು (ಉದ್ಯೋಗ 120/25).

(2) ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/7).

**ಮಾನವರ್ಜಕ** – ಒಂದು ಭಾರತೀಯ ಜನಪದ (ಭೀಷ್ಮ 9/50).

**ಮಾನವೀ** – ಭಾರತವರ್ಷದ ಒಂದು ಪ್ರಮುಖ ನದಿ. ಇಲ್ಲಿರುವ ಜನರು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/32).

**ಮಾನಸ** – (1) ವಾಸುಕಿ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪ ಯಜ್ಞದಲ್ಲಿ ದಗ್ಧನಾದನು (ಆದಿ 57/5).

(2) ಧೃತರಾಷ್ಟ್ರಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಸರ್ಪಸತ್ರದಲ್ಲಿ ಭಸ್ಮವಾದನು (ಆದಿ 57/16).

(3) ಹಿಮಾಲಯದಲ್ಲಿರುವ ಒಂದು ಪ್ರಾಚೀನ ಸರೋವರ. ಇಲ್ಲಿಗೆ ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನ ಆಗಮಿಸಿದ್ದನು (ಸಭಾ 28/4). ಮಾನಸ ಸರೋವರದ ಅಕ್ಕಪಕ್ಕದಲ್ಲಿ ವಾಸಿಸುವ ಸಾಧಕನಿಗೆ, ಯುಗಾಂತದಲ್ಲಿ, ಪಾರ್ಷದರು ಮತ್ತು ಪಾರ್ವತೀ ಸಮೇತನಾಗಿ, ಇಚ್ಛಾನುಸಾರ ರೂಪಧಾರಣೆ ಮಾಡುವ, ಭಗವಾನ್ ಶಂಕರನ ಪ್ರತ್ಯಕ್ಷ ದರ್ಶನವಾಗುತ್ತದೆ. ಈ ಸರೋವರದ ದಡದಲ್ಲಿ ಚೈತ್ರಮಾಸದಲ್ಲಿ, ಕಲ್ಯಾಣಕಾಮರಾದ ಯಾಜಕರು, ಅನೇಕ ಪ್ರಕಾರದ ಯಜ್ಞಗಳ ಮೂಲಕ, ಪರಿವಾರ ಸಹಿತನಾಗಿರುವ, ಪಿನಾಕಧಾರೀ ಭಗವಾನ್ ಶಿವನ ಆರಾಧನೆ ಮಾಡುತ್ತಾರೆ. ಈ ಸರೋ ವರದಲ್ಲಿ ಶ್ರದ್ಧಾಪೂರ್ವಕ ಸ್ನಾನ ಮತ್ತು ಆಚಮನಮಾಡಿ, ಪಾಪಮುಕ್ತನಾದ ಜಿತೇಂದ್ರಿಯ ಪುರುಷ ಶುಭಲೋಕಗಳಿಗೆ ಹೋಗುತ್ತಾನೆ. ಈ ಸರೋವರದ ಇನ್ನೊಂದು ಹೆಸರು ಉಜ್ಜಾನಕ ವೆಂದಿತ್ತು. ಇಲ್ಲಿ ಭಗವಾನ್ ಸ್ಕಂದ ಮತ್ತು ಅರುಂಧತಿ ಸಹಿತನಾಗಿ ವಸಿಷ್ಠ ಮಹರ್ಷಿ ಸಾಧನೆಮಾಡಿ, ಸಿದ್ಧಿ ಮತ್ತು ಶಾಂತಿ ಪಡೆದಿದ್ದನು (ವನ 130/14–17). ಇಲ್ಲಿರುವ ಹಂಸರೂಪ ಧಾರೀ ಮಹರ್ಷಿಗಳು ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೋಡಲು ಬಂದಿದ್ದರು (ಭೀಷ್ಮ 119/98–99). ಈ ಸರೋವರ ಒಂದು ಪವಿತ್ರ ತೀರ್ಥವಾಗಿದೆ (ಶಾಂತಿ 152/12–13). ಉಪಶ್ರುತಿ ದೇವಿಯು ಶುಚಿಗೆ, ಇದೇ ಸರೋ ವರದ ಕಮಲನಾಳದಲ್ಲಿ ಅಡಗಿರುವ ಇಂದ್ರನ ದರ್ಶನಮಾಡಿಸಿದ್ದಳು. ದೇವತೆಗಳು ವಸಿಷ್ಠನಿಗೆ ಶರಣಾಗಿ, ಈ ಸರೋವರದ ತಟದಲ್ಲಿ ಯಜ್ಞ ಪ್ರಾರಂಭಿಸಿದ್ದರು (ಅನು 155/16).

**ಮಾನಸದ್ವಾರ** – ಮಾನಸರೋವರದ ಹತ್ತಿರವಿರುವ ಒಂದು ಪರ್ವತ. ಇದು ಅದರ

ದ್ವಾರವೆಂದು ತಿಳಿಯಲ್ಪಡುತ್ತದೆ. ಇದರ ಮಧ್ಯಭಾಗದಲ್ಲಿ ಪರಶುರಾಮನು ತನ್ನ ಆಶ್ರಮ ಮಾಡಿಕೊಂಡಿದ್ದನು (ವನ 130/12).

**ಮಾನುಷತೀರ್ಥ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ಲೋಕವಿಖ್ಯಾತ ತೀರ್ಥ. ಇಲ್ಲಿ ವ್ಯಾಧರ ಬಾಣಗಳಿಂದ ಗಾಯಗೊಂಡ ಮೃಗಗಳು ಆ ಸರೋವರದಲ್ಲಿ ಮುಳುಗಿ ಮನುಷ್ಯಶರೀರ ಪಡೆದಿದ್ದವು. ಆದುದರಿಂದಲೇ ಇದರ ಹೆಸರು ಮಾನುಷ ತೀರ್ಥವಾಯಿತು. ಇಲ್ಲಿ ಬ್ರಹ್ಮಚರ್ಯ ಪಾಲನೆಯ ಮೂಲಕ, ಏಕಾಗ್ರಚಿತ್ತನಾಗಿ ಸ್ನಾನ ಮಾಡುವ ಮನುಷ್ಯ ಪಾಪಮುಕ್ತನಾಗಿ, ಸ್ವರ್ಗದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/65–66).

**ಮಾನ್ಧಾತಾ** – ಇಕ್ಷ್ವಾಕುವಂಶದ ಮಹಾರಾಜ ಯುವನಾಶ್ವನ ಪುತ್ರ (ವನ 42/41). ಯುವನಾಶ್ವನ ಹೊಟ್ಟೆಯಿಂದ ಇವನ ಜನನ (ವನ 126/27–28). 'ಮಾಂಧಾತ'ನೆಂಬ ಹೆಸರು ಬರಲು ಕಾರಣ (ವನ 126/30–31). ಇವನ ಚರಿತ್ರೆಯ ವರ್ಣನೆ (ವನ 126/35–44). ವೈಷ್ಣವ ಯಾಗ ಮಾಡಿ ಉತ್ತಮಲೋಕ ಪಡೆದ ರಾಜರಲ್ಲಿ ಇವನೂ ಒಬ್ಬ (ವನ 257/5–6). ಸೃಂಜಯನನ್ನು ಸಮಾಧಾನಪಡಿಸುತ್ತಿದ್ದ ನಾರದರ ಮೂಲಕ ಇವನ ಮಹತ್ವದ ವರ್ಣನೆ (ದ್ರೋಣ 62). ಶ್ರೀಕೃಷ್ಣನಿಂದ ಇವನ ಯಜ್ಞ ಮತ್ತು ಪ್ರಭಾವದ ವರ್ಣನೆ (ಶಾಂತಿ 29/81–93). ರಾಜಧರ್ಮದ ಕುರಿತು, ಇಂದ್ರರೂಪಧರಿಸಿದ ವಿಷ್ಣುವಿನೊಡನೆ ಸಂವಾದ (ಶಾಂತಿ 64/16–30; ಶಾಂತಿ 65). ಅಂಗೀರಸ ಪುತ್ರ ಉತಥ್ಯನಿಂದ ಇವನಿಗೆ ರಾಜಧರ್ಮದ ಕುರಿತು ಉಪದೇಶ (ಶಾಂತಿ 90 ರಿಂದ 91). ಇವನು ಅಂಗರಾಜ ವಸುಹೋಮನೊಡನೆ ದಂಡದ ಉತ್ಪತ್ತಿ ಮೊದಲಾದ ಪ್ರಸಂಗಗಳನ್ನು ಕೇಳಿದುದು (ಶಾಂತಿ 122/11–13). ಇವನು ಒಂದೇ ದಿನದಲ್ಲಿ ಸಂಪೂರ್ಣ ಪೃಥ್ವಿಯನ್ನು ಗೆದ್ದಿದ್ದನು (ಶಾಂತಿ 124/16). ಇವನಿಂದ ಇಂದ್ರನ ಅತಿಕ್ರಮಣ (ಶಾಂತಿ 355/3). ಬೃಹಸ್ಪತಿಯೊಂದಿಗೆ ಗೋದಾನದ ಕುರಿತು ಪ್ರಶ್ನಿಸಿದುದು (ಅನು 76/4). ಇವನು ಸದಾ ಲಕ್ಷಾಂತರ ಗೋದಾನ ಮಾಡುತ್ತಿದ್ದನು (ಅನು 81/5–6). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/61).

**ಮಾರಿಷ** – ಒಂದು ಭಾರತೀಯ ಜನಪದ (ಭೀಷ್ಮ 9/60).

**ಮಾರಿಷಾ** – (1) ಹತ್ತುಮಂದಿ ಪ್ರಚೇತಸರ ಪತ್ನಿ. ಪ್ರಾಚೇತಸ ದಕ್ಷನ ತಾಯಿ (ಆದಿ 75/5). (2) ಭಾರತವರ್ಷದ ಒಂದು ನದಿ. ಇದರ ನೀರನ್ನು ಇಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/36).

**ಮಾರೀಚ** – ಒಬ್ಬ ರಾಕ್ಷಸ. (ಈತ ತಾಟಕೆಯೆಂಬ ರಾಕ್ಷಸಿಯ ಪುತ್ರ ಮತ್ತು ಸುಬಾಹುವಿನ ಸಹೋದರನಾಗಿದ್ದನು.) ವಿಶ್ವಾಮಿತ್ರನ ಯಜ್ಞಕ್ಕೆ ವಿಘ್ನವುಂಟುಮಾಡಿದ ಕಾರಣ, ಇವನ ಸಹೋದರ ಸುಬಾಹು ಶ್ರೀರಾಮನಿಂದ ಕೊಲ್ಲಲ್ಪಟ್ಟನು; ಮಾರೀಚನೂ ಬಲವಾದ ಏಟು ತಿನ್ನಬೇಕಾಗಿ ಬಂತು (ಸಭಾ 38/29). ಇವನು ಕಪಟಮೃಗವಾಗಿ, ಸೀತಾಪಹಾರ ಮಾಡಿಸಲು ಕಾರಣನಾದನು (ವನ 147/34). ಈತ ರಾವಣನಿಗೆ ನೀತಿ ಹೇಳಿದುದು (ವನ 278/6–7). ರಾವಣನಿಗೆ ಸಹಾಯಮಾಡಲು ಒಪ್ಪಿ, ತನ್ನ ಶ್ರಾದ್ಧ ತರ್ಪಣಮಾಡಿದ ಅನಂತರ, ಮೃಗರೂಪ ಧಾರಣೆ ಮಾಡಿ, ಈತ ಸೀತೆಗೆ ಆಶೆ ಹುಟ್ಟಿಸಿದುದು (ವನ 278/10). ಶ್ರೀರಾಮನ ಅಮೋಘ ಬಾಣದಿಂದ ಇವನ ಮೃತ್ಯು. ಸಾಯುವ ಕಾಲದಲ್ಲಿ ಇವನು ರಾಮನಂತಿರುವ ಸ್ವರದಲ್ಲಿ ಆರ್ತನಾದ ಮಾಡಿ ಪ್ರಾಣತ್ಯಾಗ ಮಾಡಿದುದು (ವನ 278/11–23).

**ಮಾರುತ** – ದಕ್ಷಿಣ ಭಾರತದ ಒಂದು ಜನಪದ. ದೃಷ್ಟದ್ಯುಮ್ನನ ಮೂಲಕ ನಿರ್ಮಿಸಲ್ಪಟ್ಟ ಕ್ರೌಂಚ ವ್ಯೂಹದಲ್ಲಿ, ಬಲರೆಕ್ಕೆಯ ಸ್ಥಾನದಲ್ಲಿ, ಈ ದೇಶದ ಯೋಧರು ನಿಂತಿದ್ದರು (ಭೀಷ್ಮ 50/51).

**ಮಾರುತಂತವ್ಯ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/54).

**ಮಾರುತಸ್ಕಂಧ** – ದೇವತೆಗಳ ಒಂದು ವ್ಯೂಹ. ಇದರ ರಕ್ಷಣೆಯ ಭಾರವನ್ನು ಸ್ಕಂಧನು ವಹಿಸಿದ್ದನು (ವನ 231/55).

**ಮಾರುತಾಶನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

**ಮಾರುಧ** – ಒಂದು ರಾಜಧಾನಿ ಅಥವಾ ಒಬ್ಬ ರಾಜ. ಇವನನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ಗೆದ್ದಿದ್ದನು (ಸಭಾ 31/14).

**ಮಾರ್ಕಂಡೇಯ** – (1) ಒಬ್ಬ ಸುಪ್ರಸಿದ್ಧ ಮಹಾಮುನಿ. ಇವನು ಯುಧಿಷ್ಠಿರನ ಸಭೆಯಲ್ಲಿ ರುತ್ತಿದ್ದನು (ಸಭಾ 4/15). ಇವನು ಬ್ರಹ್ಮನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆಮಾಡು ತ್ತಾನೆ (ಸಭಾ 11/22). ಇವನ ಮೂಲಕ ಪಾಂಡವರಿಗೆ ಧರ್ಮದ ಆದೇಶ (ವನ 25/8–18). ಇವನು ಪಯೋಷ್ಣಿಯ ದಡದಲ್ಲಿ, ಅದರ ಮಹಿಮೆ ಮತ್ತು ರಾಜಾನೃಗನ ಮಹತ್ವದ ವಿಷಯದಲ್ಲಿ ಸ್ತುತಿಮಾಡಿದ್ದನು (ವನ 88/5–7). ಇವನ ಮೂಲಕ ಕರ್ಮಫಲ ಭೋಗದ ವಿವೇಚನೆ (ವನ 183/61–95). ಇವನು ಯುಧಿ ಷ್ಠಿರನ ಪ್ರಶ್ನೆಗಳಿಗನುಸಾರವಾಗಿ, ಮಹರ್ಷಿಗಳ ಹಾಗೂ ರಾಜರ್ಷಿಗಳ ಜೀವನಕ್ಕೆ ಸಂಬಂಧಿಸಿದ ವಿವಿಧ ಉಪದೇಶಪೂರ್ಣ ಕಥೆಗಳನ್ನು ಹೇಳಿ ದುದು (ವನ 186ರಿಂದ 232). ಮಾರ್ಕಂ ಡೇಯನು ಸಾವಿರ ಸಾವಿರ ಯುಗಗಳ ಅಂತ್ಯ ದಲ್ಲಿ ನಡೆಯುವ ಅನೇಕ ಮಹಾಪ್ರಲಯಗಳ ದೃಶ್ಯ ನೋಡಿದ್ದನು. ಪ್ರಪಂಚದಲ್ಲಿ ಇವನಿಗೆ ಸರಿಯಾದ ಆಯುಸ್ಸುಳ್ಳ ಇತರ ಯಾವ ಪುರುಷನೂ ಇಲ್ಲ. ಮಹಾತ್ಮನಾದ ಬ್ರಹ್ಮನ ಹೊರತಾಗಿ ಇತರ ಯಾರಿಗೂ ಇವನಿಗೆ ಸಮನಾದ ದೀರ್ಘಾಯುವಿಲ್ಲ. ಈ ಪ್ರಪಂಚ ದೇವತೆ, ದಾನವ ಮತ್ತು ಅಂತರಿಕ್ಷಾದಿಗಳಿಂದ ಶೂನ್ಯವಾದಾಗ, ಆ ಪ್ರಲಯ ಕಾಲದಲ್ಲಿ ಕೇವಲ ಇವನು ಮಾತ್ರ ಬ್ರಹ್ಮನ ಬಳಿಯಲ್ಲಿದ್ದು, ಅವನ ಉಪಾಸನೆ ಮಾಡುತ್ತಾನೆ. ಪ್ರಳಯಕಾಲ ಮುಗಿದ ಮೇಲೆ, ಬ್ರಹ್ಮನ ಮೂಲಕ ರಚನೆಯಾದ ಜೀವ ಸೃಷ್ಟಿಯನ್ನು, ಎಲ್ಲರಿಗಿಂತ ಮೊದಲು, ಈತನೇ ಚೆನ್ನಾಗಿ ನೋಡುತ್ತಾನೆ. ಇವನು ತತ್ಪರತಾ ಪೂರ್ವಕವಾಗಿ, ಚಿತ್ತವೃತ್ತಿಗಳನ್ನು ನಿರೋಧಿಸಿ, ಸರ್ವಲೋಕ ಪಿತಾಮಹ ಸಾಕ್ಷಾತ್ ಲೋಕಗುರು ಬ್ರಹ್ಮನ ಆರಾಧನೆ ಮಾಡಿದ್ದಾನೆ ಮತ್ತು ಘೋರ ತಪಸ್ಸಿನ ಮೂಲಕ ಮರೀಚಿ ಮೊದಲಾದ ಪ್ರಜಾಪತಿಗಳನ್ನು ಕೂಡಾ ಗೆದ್ದಿದ್ದಾನೆ. ಇವನು ಭಗವಾನ್ ನಾರಾಯಣನ ಸಮೀಪವಿರುವ ಭಕ್ತರಲ್ಲಿ ಎಲ್ಲರಿಗಿಂತ ಶ್ರೇಷ್ಠನಾಗಿದ್ದಾನೆ. ಪರ ಲೋಕದಲ್ಲಿ ಸರ್ವತ್ರ ಇವನ ಮಹಿಮೆ ಹಾಡ ಲ್ಪಡುತ್ತದೆ. ಇವನು ಸರ್ವವ್ಯಾಪಕ ಪರಬ್ರಹ್ಮನ ಉಪಲಬ್ಧಿಯ ಸ್ಥಾನಭೂತವಾದ, ಹೃದಯ ಕಮಲಕರ್ಣಿಕೆಯನ್ನು, ಯೌಗಿಕ ಕಲೆಯಿಂದ, ಅಲೌಕಿಕ ಉದ್ಘಾಟನೆಮಾಡಿ, ವೈರಾಗ್ಯ ಮತ್ತು ಅಭ್ಯಾಸದಿಂದ ಪ್ರಾಪ್ತವಾದ ದಿವ್ಯದೃಷ್ಟಿಯ ಮೂಲಕ, ವಿಶ್ವರಚನಾಕಾರ ಭಗವಂತನನ್ನು ಅನೇಕ ಬಾರಿ ಸಾಕ್ಷಾತ್ಕಾರ ಮಾಡಿದ್ದನು. ಆದುದರಿಂದ ಎಲ್ಲರನ್ನೂ ಕೊಲ್ಲುವ ಮೃತ್ಯು ಮತ್ತು ಶರೀರವನ್ನು ಜರ್ಜರಗೊಳಿಸುವ ಜರೆ ಇವನ ಸ್ಪರ್ಶ ಮಾಡುವುದಿಲ್ಲ (ವನ 188/2–11). ಇವನಿಂದ ಬಾಲಮುಕುಂದನ ದರ್ಶನ (ವನ 188/92). ಇವನು ಬಾಲ ಮುಕುಂದನ ಉದರ ಪ್ರವೇಶ ಮಾಡಿದುದು ಮತ್ತು ಅಲ್ಲಿ ಬ್ರಹ್ಮಾಂಡ ದರ್ಶನ ಮಾಡಿದುದು (ವನ 188/100–125). ಹೊಟ್ಟೆಯಿಂದ ಹೊರಗೆ ಬಂದ ಮೇಲೆ ಬಾಲ ಮುಕುಂದನೊಂದಿಗೆ ಇವನ ಮಾತುಕತೆ (ವನ 188/130 ರಿಂದ 189/49). ಇವನ ಮೂಲಕ ಶ್ರೀಕೃಷ್ಣನ ಮಹಿಮೆಯ ಪ್ರತಿಪಾದನೆ (ವನ 189/53–57). ಇವನ ಮೂಲಕ ಕಲಿಯುಗ ಕಾಲದ ವರ್ತನೆ ಗಳ ವರ್ಣನೆ (ವನ 190/7–92). ಕಲ್ಕಿ ಅವತಾರದ ವರ್ಣನೆ (ವನ 190/93–97). ಯುಧಿಷ್ಠಿರನಿಗೆ ಇವನ ಧರ್ಮೋಪದೇಶ (ವನ 191/23–30). ಇವನ ಮೂಲಕ ಯುಧಿಷ್ಠಿರನಿಗೆ ವಿವಿಧ ಧಾರ್ಮಿಕ ವಿಷಯಗಳ ಉಪದೇಶ (ವನ 200). ಸ್ಕಂದನ ಹೆಸರುಗಳ ವರ್ಣನೆ ಮತ್ತು ಸ್ತುತಿ (ವನ 232). ಇವನು ಯುಧಿಷ್ಠಿರಾದಿಗಳಿಗೆ ಶ್ರೀರಾಮನ ಉಪಾಖ್ಯಾನ ಮತ್ತು ಸತಿಸಾವಿತ್ರಿಯ ಚರಿತ್ರೆಯನ್ನು ಹೇಳಿದುದು (ವನ 273 ರಿಂದ 299). ಇವನು ಧೃತರಾಷ್ಟ್ರನಿಗೆ ತ್ರಿಪುರ ವಧೆಯ ಕಥೆ ಹೇಳಿದ್ದನು (ಕರ್ಣ 33/2). ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡುವುದಕ್ಕೋಸ್ಕರ ಇತರ ಋಷಿಗಳೊಂದಿಗೆ, ಇವನೂ ಹೋಗಿದ್ದನು (ಶಾಂತಿ 47/11). ಇವನಿಗೆ ನಚಿಕೇತನಿಂದ ಶಿವಸಹಸ್ರನಾಮದ ಉಪದೇಶ ದೊರಕಿತ್ತು. ಇವನು ಅದನ್ನು ಉಪಮನ್ಯುಗೆ ಉಪದೇಶಿಸಿದನು (ಅನು 17/79). ಇವನು ನಾರದನೊಂದಿಗೆ ಅನೇಕ ರೀತಿಯ ಪ್ರಶ್ನೆ ಮಾಡಿದ್ದನು (ಅನು 22). ಪ್ರಯಾಣಕಾಲದ ಸಮಯದಲ್ಲಿ ಭೀಷ್ಮರ ಬಳಿಗೆ ಹೋದ ಋಷಿಗಳಲ್ಲಿ ಇವನೂ ಇದ್ದನು (ಅನು

26/6). ಇವನು ಮಾಂಸಭಕ್ಷಣ ದೋಷವನ್ನು ಹೇಳಿದ್ದನು (ಅನು 115/37–39). ಇವನ ಧಮಪತ್ನಿಯ ಹೆಸರು ಧೂರ್ಮೋರ್ಣಾ ಎಂದಾಗಿತ್ತು (ಅನು 146/4). ಯುಧಿಷ್ಠಿರನು ಮಹಾ ಪ್ರಸ್ಥಾನಕ್ಕೆ ಮೊದಲು ಇತರ ಋಷಿಗಳೊಂದಿಗೆ ಭಗವದ್ಬುದ್ಧಿಯಿಂದ ಮಾರ್ಕಂಡೇಯನ ಪೂಜೆ ಮಾಡಿದ್ದನು (ಮಹಾಪ್ರಸ್ಥಾನ 1/12). ಮಹಾ ಭಾರತದಲ್ಲಿ ಬಂದಿರುವ ಮಾರ್ಕಂಡೇಯನ ಹೆಸರುಗಳು – ಭಾರ್ಗವ, ಭಾರ್ಗವಸತ್ತಮ, ಭೃಗುಕುಲಶಾರ್ದೂಲ, ಭೃಗುನಂದನ, ಬ್ರಹ್ಮರ್ಷಿ, ವಿಪ್ರರ್ಷಿ ಇತ್ಯಾದಿ.

(2) ಒಂದು ಪ್ರಸಿದ್ಧ ತೀರ್ಥ. ಇದು ಗಂಗಾ ಮತ್ತು ಗೋಮತಿಯ ಸಂಗಮದಲ್ಲಿದೆ (ಈ ಸ್ಥಳ ವಾರಣಾಸಿಯಿಂದ ಸಾಧಾರಣ ಹದಿನಾರು ಮೈಲು ಉತ್ತರದಲ್ಲಿದೆ). ಇಲ್ಲಿಗೆ ಹೋದರೆ ಮನುಷ್ಯ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ. ಮತ್ತು ತನ್ನ ಕುಲದ ಉದ್ಧಾರ ಮಾಡುತ್ತಾನೆ (ವನ 84/80–81).

**ಮಾರ್ಕಂಡೇಯಸಮಾಸ್ಯಾಪರ್ವ** – ವನಪರ್ವದ ಒಂದು ಅವಾಂತರಪರ್ವ (ಅಧ್ಯಾಯ 182 ರಿಂದ 232).

**ಮಾರ್ಗಣಾಪ್ರಿಯಾ** – ಕಶ್ಯಪನ ಮೂಲಕ ಪ್ರಾಧಾ ಎಂಬ ಪತ್ನಿಯಿಂದ ಜನಿಸಿದ ಪುತ್ರಿ (ಆದಿ 65/45).

**ಮಾರ್ಗಶೀರ್ಷ** – (ಹನ್ನೆರಡು ತಿಂಗಳುಗಳಲ್ಲಿ ಒಂದು. ಯಾವ ತಿಂಗಳ ಪೂರ್ಣಿಮಾ ತಿಥಿ ಯಂದು ಮೃಗಶಿರಾ ನಕ್ಷತ್ರದ ಯೋಗವಿರುತ್ತದೋ ಅದನ್ನು ಮಾರ್ಗಶೀರ್ಷವೆನ್ನುತ್ತಾರೆ. ಇದು ಕಾರ್ತಿಕದ ಅನಂತರ ಪೌಷದ ಮೊದಲು ಬರುತ್ತದೆ.) ಮಾರ್ಗಶೀರ್ಷ ಮಾಸವನ್ನು ಒಂದು ಹೊತ್ತು ಭೋಜನ ಮಾಡುತ್ತಾ ಕಳೆಯುವವನು ಮತ್ತು ಶಕ್ತಿಗೆ ಅನುಸಾರವಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸುವವನು, ರೋಗ ಮತ್ತು ಪಾಪಗಳಿಂದ ಮುಕ್ತನಾಗುತ್ತಾನೆ (ಅನು 106/17–18). ಮಾರ್ಗಶೀರ್ಷ ಮಾಸದಲ್ಲಿ ದ್ವಾದಶೀ ತಿಥಿಯ ದಿನ, ಹಗಲುರಾತ್ರಿ ಉಪವಾಸಮಾಡಿ, ಭಗವಾನ್ ಕೇಶವನ ಪೂಜೆ, ಅರ್ಚನೆ ಮಾಡುವುದರಿಂದ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ ಮತ್ತು ಅವನ ಎಲ್ಲಾ ಪಾಪಗಳು ನಷ್ಟವಾಗುತ್ತವೆ (ಅನು 109/3).

**ಮಾರ್ತಿಕಾವತ** – ಒಂದು ದೇಶ. ಶಾಲ್ವನು ಅಲ್ಲಿ ರಾಜನಾಗಿದ್ದನು (ವನ 14/16; ವನ 20/15). ಪರಶುರಾಮನು ಈ ದೇಶದ ಕ್ಷತ್ರಿಯರ ಸಂಹಾರಮಾಡಿದ್ದನು (ದ್ರೋಣ 70/12). ಅರ್ಜುನನು ಕೃತವರ್ಮನ ಪುತ್ರನನ್ನು ಮಾರ್ತಿಕಾವತ ನಗರದ ರಾಜನಾಗಿ ಮಾಡಿದ್ದನು (ಮೌಸಲ 7/69).

**ಮಾರ್ದಮರ್ಷಿ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/57).

**ಮಾಲ** – ಒಂದು ಭಾರತೀಯ ಜನಪದ (ಭೀಷ್ಮ 9/39).

**ಮಾಲತಿಕಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/4).

**ಮಾಲಯ** – ಗರುಡನ ಪ್ರಮುಖ ಸಂತಾನ ಗಳಲ್ಲಿ ಒಬ್ಬ (ಉದ್ಯೋಗ 101/4).

**ಮಾಲವ** – (1) ಪಶ್ಚಿಮ ಭಾರತದ ಒಂದು ಜನಪದ. ಇದನ್ನು ನಕುಲನು ಸೋಲಿಸಿದ್ದನು (ಸಭಾ 32/7). ಇಲ್ಲಿದ್ದ ರಾಜನೂ ಪ್ರಜೆಗಳೂ ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಬಂದಿದ್ದರು (ಸಭಾ 34/11). ಮಾಲವ ದೇಶದ ಶಸ್ತ್ರಧಾರಿ ಕ್ಷತ್ರಿಯರಾಜಕುಮಾರರು ಅಜಾತಶತ್ರು ಯುಧಿಷ್ಠಿರನಿಗೆ ಅಪಾರ ಧನದ ಕಾಣಿಕೆ ಕೊಟ್ಟಿದ್ದರು (ಸಭಾ 52/15). ಕರ್ಣನು ಈ ದೇಶವನ್ನು ಗೆದ್ದಿದ್ದನು (ವನ 254/20). ಇದು ಭಾರತ ವರ್ಷದ ಒಂದು ಪ್ರಮುಖ ಜನಪದವಾಗಿದೆ (ಭೀಷ್ಮ 9/60–62). ಮಾಲವಗಣರು ಭೀಷ್ಮನ ಆಜ್ಞಾನುಸಾರವಾಗಿ ಕಿರೀಟಧಾರಿ ಅರ್ಜುನನನ್ನು ಎದುರಿಸಿದುದು (ಭೀಷ್ಮ 59/76). ಶ್ರೀಕೃಷ್ಣನು ಈ ದೇಶದ ಯೋಧರನ್ನು ಗೆದ್ದಿದ್ದನು (ದ್ರೋಣ 11/17). ಅರ್ಜುನನು ತನ್ನ ಬಾಣಗಳ ಮೂಲಕ ಮಾಲವಯೋಧರನ್ನು ತೀವ್ರಗಾಯಗೊಳಿಸಿದ್ದನು (ದ್ರೋಣ 19/16). ಪರಶುರಾಮನು ತನ್ನ ಹರಿತ ವಾದ ಬಾಣಗಳ ಮೂಲಕ, ಮಾಲವ ದೇಶ ಕ್ಷತ್ರಿಯರ ಸಂಹಾರ ಮಾಡಿದ್ದನು (ದ್ರೋಣ 70/11–13). ರಾಜಾ ಯುಧಿಷ್ಠಿರನು ಯುದ್ಧದಲ್ಲಿ ಕ್ರುದ್ಧನಾಗಿ, ಮಾಲವ ಸೈನಿಕರನ್ನು ಯಮಲೋಕಕ್ಕೆ ಕಳುಹಿಸಿದನು (ದ್ರೋಣ 157/28).

(2) ರಾಜಾಅಶ್ವಪತಿಯ ಮೂಲಕ ಮಾಲವಿಯ

ಗರ್ಭದಿಂದ ಹುಟ್ಟಿದ ಒಂದು ಕ್ಷತ್ರಿಯ ಜಾತಿ (ವನ 297/59–60).

**ಮಾಲವಾ** – ಒಂದು ನದಿ. ಇದು ನಿತ್ಯ ಸ್ಮರಣೀಯವಾದುದು (ಅನು 165/25).

**ಮಾಲವೀ** – ಮದ್ರರಾಜನಾದ ಮಹಾರಾಜ ಅಶ್ವಪತಿಯ ಹಿರಿಯ ಪತ್ನಿ ಮತ್ತು ಸಾವಿತ್ರಿಯ ತಾಯಿ. ಇವಳ ಗರ್ಭದಿಂದ ನೂರುಮಂದಿ 'ಮಾಳವ'ರೆಂಬ ಪುತ್ರರು ಜನಿಸುವ ವರದಾನ ಪ್ರಾಪ್ತವಾಗಿತ್ತು (ವನ 296/59–60). ಮದ್ರ ಪತಿಯ ರಾಣಿ ಮಾಲವಿಯಿಂದ ಸಾವಿತ್ರಿಗೆ ನೂರು ಮಂದಿ ಬಲವಂತರಾದ ಸಹೋದರರು ಜನಿಸಿದ್ದರು (ವನ 299/13).

**ಮಾಲಿನೀ** – (1) ಕಣ್ವ ಮುನಿಯ ಆಶ್ರಮ ಸಮೀಪದಲ್ಲಿ ಹರಿಯುವ ಒಂದು ನದಿ (ಕೆಲವರ ಅಭಿಪ್ರಾಯ ಪ್ರಕಾರ ಸಹಾರನಪುರ ಜಿಲ್ಲೆಯ ಚೂಕಾನದಿಯೇ ಪ್ರಾಚೀನ ಮಾಲಿನಿಯಾಗಿದೆ; ಕೆಲವು ವಿದ್ವಾಂಸರು ಹಿಮಾಲಯದಲ್ಲಿ ಇದು ನೆಲಸಿದೆ ಎಂದು ಹೇಳುತ್ತಾರೆ.) ಇದರ ಎರಡೂ ದಡಗಳಲ್ಲಿ ಕಣ್ವನ ಆಶ್ರಮ ಹರಡಿಕೊಂಡಿತ್ತು. ಇದು ಮಧ್ಯದಲ್ಲಿ ಹರಿಯುತ್ತಿತ್ತು (ಆದಿ 70/21). ಇದರ ದಡದಲ್ಲಿಯೇ ಶಕುಂತಳೆಯ ಜನ್ಮವಾಗಿತ್ತು (ಆದಿ 72/10).

(2) ಶಿಶುವಿನ ತಾಯಿ. ಸಪ್ತಮಾತೃಕೆಯರಲ್ಲಿ ಒಬ್ಬಳು (ವನ 228/17).

(3) ಒಬ್ಬ ರಾಕ್ಷಸ ಕನ್ಯೆ. ಈಕೆ ಕುಬೇರನ ಆಜ್ಞೆ ಪ್ರಕಾರ ಮಹರ್ಷಿ ವಿಶ್ರವಾನ ಪರಿಚರ್ಯೆಯಲ್ಲಿ ತತ್ಪರಳಾಗಿದ್ದಳು. ವಿಶ್ರವನಿಂದ ಈಕೆಯ ಗರ್ಭ ದಲ್ಲಿ ವಿಭೀಷಣನೆಂಬ ಪುತ್ರ ಜನಿಸಿದನು (ವನ 275/3–8).

(4). ಅಂಗದೇಶದ ಒಂದು ಸಮೃದ್ಧ ನಗರ. ಇದು ಜರಾಸಂಧನಿಂದ ಕರ್ಣನಿಗೆ ಕೊಡಲ್ಪಟ್ಟಿತ್ತು (ಶಾಂತಿ 5/6).

**ಮಾಲ್ಯಪಿಂಡಕ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/13).

**ಮಾಲ್ಯವಂತ** – (1) ಒಂದು ಪರ್ವತ. ಇಲಾವೃತವರ್ಷದಲ್ಲಿ ಮೇರು ಮತ್ತು ಮಂದರಾ ಚಲದ ಮಧ್ಯದ ಶೈಲೋದಾನದಿಯ ಎರಡು ದಡಗಳಲ್ಲಿ ವಾಸಿಸುವವರನ್ನು ಗೆದ್ದು ಮುಂದು ವರಿದಾಗ, ಇದು ಅರ್ಜುನನಿಗೆ ಕಾಣಸಿಕ್ಕಿತು (ಸಭಾ 28/6). ನೀಲಗಿರಿಯ ದಕ್ಷಿಣದಲ್ಲಿ ಮತ್ತು ನಿಷಧದ ಉತ್ತರದಲ್ಲಿ ಸುದರ್ಶನವೆಂಬ ಒಂದು ಜಂಬುನೇರಳೆ ಮರವಿದೆ. ಆ ಕಾರಣದಿಂದಾಗಿ ಸಂಪೂರ್ಣ ದ್ವೀಪವು ಜಂಬೂದ್ವೀಪವೆಂದು ಹೇಳಲ್ಪಡುತ್ತದೆ. ಅಲ್ಲಿಯೇ ಮಾಲ್ಯವಂತವೆಂಬ ಪರ್ವತವಿದೆ. ಜಂಬೂಫಲದ ರಸದಿಂದ ಜಂಬೂನದಿ ಹರಿಯುತ್ತದೆ. ಅದು ಮಾಲ್ಯ ವಂತದ ಶಿಖರದ ಮೇಲೆ ಪೂರ್ವದ ಕಡೆಗೆ ಪ್ರವಹಿಸುತ್ತದೆ. ಮಾಲ್ಯವಂತ ಪರ್ವತದ ಮೇಲೆ ಸಂವರ್ತಕ ಮತ್ತು ಕಾಲಾಗ್ನಿಯೆಂಬ ಅಗ್ನಿ ದೇವತೆಗಳು ಸದಾ ಪ್ರಜ್ವಲಿತವಾಗಿರುತ್ತವೆ. ಈ ಪರ್ವತ ಐದಾರು ಯೋಜನಗಳಷ್ಟು ವಿಸ್ತಾರ ವಾಗಿದೆ. ಅಲ್ಲಿ ಸುವರ್ಣದಂತಿರುವ ಕಾಂತಿ ಯುಳ್ಳ ಮಾನವರು ಜನಿಸುತ್ತಾರೆ (ಭೀಷ್ಮ 7/27–29).

(2) ಹಿಮಾಚಲ ಪ್ರದೇಶದ ಒಂದು ಪರ್ವತ. ಆರ್ಷ್ಟಿಷೇಣನ ಆಶ್ರಮದಿಂದ ಗಂಧಮಾದನದ ಕಡೆಗೆ ಮುಂದುವರಿದಾಗ, ಹಾದಿಯಲ್ಲಿ ಮಾಲ್ಯ ವಂತ ಪರ್ವತವು ಪಾಂಡವರಿಗೆ ಸಿಕ್ಕಿತ್ತು. ಅಲ್ಲಿಂದ ಗಂಧಮಾದನ ಕಾಣಿಸುತ್ತಿತ್ತು (ವನ 158/36–37).

(3) ಕಿಷ್ಕಿಂಧಾ ಕ್ಷೇತ್ರದ ಒಳಗಿರುವ ಒಂದು ಪರ್ವತ. ಅದರ ಸಮೀಪ ಸುಗ್ರೀವ ಮತ್ತು ವಾಲಿಯ ಯುದ್ಧ ನಡೆದಿತ್ತು (ವನ 280/26). ಇದು ತುಂಗಭದ್ರಾ ತಟದ ಮೇಲಿದೆ). ಇದರ ಸುಂದರ ಶಿಖರದ ಮೇಲೆ, ಶ್ರೀರಾಮನು ಮಳೆ ಗಾಲದ ನಾಲ್ಕು ತಿಂಗಳ ತನಕ ವಾಸಿಸಿದ್ದನು (ವನ 280/40).

**ಮಾವೆಲ್ಲ** – ಸಮ್ರಾಟ ಉಪರಿಚರ ವಸುವಿನ ಚತುರ್ಥ ಪುತ್ರ (ಆದಿ 63/30–31). ಮಹಾ ಬಲವಂತನಾದ ಮಾವೆಲ್ಲ ಯುಧಿಷ್ಠಿರನ ರಾಜ ಸೂಯ ಯಜ್ಞಕ್ಕೆ ಆಗಮಿಸಿದ್ದನು (ಸಭಾ 34/13–14).

**ಮಾವೆಲ್ಲಕ** – ಒಂದು ಜನಪದ. ಇಲ್ಲಿರುವ ಯೋಧರನ್ನು ಕರಕೊಂಡು ತ್ರಿಗರ್ತರಾಜ ಸುಶರ್ಮಾ, ಅರ್ಜುನನೊಂದಿಗೆ ಹೋರಾಡಲು ಹೋಗಿದ್ದನು (ದ್ರೋಣ 17/20). ಅರ್ಜುನ ನಿಂದ ಮಾವೆಲ್ಲಕ ಯೋಧರ ಸಂಹಾರ (ದ್ರೋಣ 19/16–36). ದ್ರೋಣಾಚಾರ್ಯನನ್ನು

25

ಮುಂದಿಟ್ಟುಕೊಂಡು, ಮಾವೆಲ್ಲಕರು ಅರ್ಜುನನನ್ನು ಆಕ್ರಮಿಸಿದುದು (ದ್ರೋಣ 91/38–44). ಅರ್ಜುನನಿಂದ ಇವರು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/48–49).

**ಮಾಸವ್ರತೋಪವಾಸ ಫಲ** – ಆಶ್ವಿನಿ ತಿಂಗಳನ್ನು ಒಂದು ಹೊತ್ತು ಭೋಜನಮಾಡಿ ಕಳೆಯುವವನು, ಪವಿತ್ರನೂ ನಾನಾ ಬಗೆಯ ವಾಹನಗಳಿಂದ ಸಂಪನ್ನನೂ ಅನೇಕ ಪುತ್ರಯುಕ್ತನೂ ಆಗುತ್ತಾನೆ (ಅನು 106/29). ಆಶ್ವಿನ ಮಾಸದ ದ್ವಾದಶಿ ತಿಥಿಯಂದು ಹಗಲು ರಾತ್ರಿ ಉಪವಾಸ ಮಾಡಿ, ಪದ್ಮನಾಭನ ಹೆಸರಿನಲ್ಲಿ ಭಗಂತನ ಪೂಜೆ ಮಾಡುವವನು ಸಹಸ್ರ ಗೋದಾನದ ಪುಣ್ಯ ಫಲವನ್ನು ಪಡೆಯುತ್ತಾನೆ (ಅನು 109/13). ಕಾರ್ತಿಕ ಮಾಸದಲ್ಲಿ ಒಂದು ಹೊತ್ತು ಭೋಜನ ಮಾಡುವ ಮನುಷ್ಯ, ಶೂರವೀರನೂ ಅನೇಕ ಭಾರ್ಯೆಯರಿಂದ ಒಡಗೂಡಿದವನೂ, ಕೀರ್ತಿವಂತನೂ ಆಗುತ್ತಾನೆ (ಅನು 106/30). ಕಾರ್ತಿಕ ಮಾಸದ ದ್ವಾದಶಿ ತಿಥಿಯ ದಿನ ಹಗಲು ರಾತ್ರಿ ಉಪವಾಸ ಮಾಡಿ, ಭಗವಾನ್ ದಾಮೋದರನ ಪೂಜೆ ಮಾಡುವುದರಿಂದ, ಸ್ತ್ರೀಯಾಗಲಿ ಪುರುಷನಾಗಲಿ ಗೋಯಜ್ಞದ ಫಲ ಪಡೆಯುತ್ತಾನೆ (ಅನು 109/14). ನಿಯಮ ಪೂರ್ವಕ ವಾಸಿಸುತ್ತಾ, ಚೈತ್ರಮಾಸವನ್ನು ಒಂದು ಹೊತ್ತು ಭೋಜನ ಮಾಡುತ್ತಾ ಕಳೆಯುವವನು, ಸುವರ್ಣ, ಮಣಿ ಮತ್ತು ಮುತ್ತುಗಳಿಂದ ಸಂಪನ್ನವಾದ ಮಹಾಕುಲದಲ್ಲಿ ಜನ್ಮ ಪಡೆಯುತ್ತಾನೆ (ಅನು 106/23). ಚೈತ್ರಮಾಸದ ದ್ವಾದಶೀ ತಿಥಿಯಂದು, ಹಗಲುರಾತ್ರಿ ಉಪವಾಸಮಾಡಿ, ವಿಷ್ಣುನಾಮದಲ್ಲಿ ಭಗವಂತನ ಪೂಜೆ ಮಾಡುವವನು ಪುಂಡರೀಕ ಯಜ್ಞದ ಫಲ ಪಡೆಯುತ್ತಾನೆ ಮತ್ತು ದೇವಲೋಕಕ್ಕೆ ಹೋಗುತ್ತಾನೆ (ಅನು 109/7). ಜ್ಯೇಷ್ಠ ಮಾಸದಲ್ಲಿ ಒಂದೇ ಹೊತ್ತು ಭೋಜನ ಮಾಡುವವನು, ಅನುಪಮವೂ ಶ್ರೇಷ್ಠವೂ ಆದ ಐಶ್ವರ್ಯಪಡೆಯುತ್ತಾನೆ (ಅನು 106/25). ಜ್ಯೇಷ್ಠ ಮಾಸದಲ್ಲಿ ದ್ವಾದಶೀ ತಿಥಿಯ ದಿನ ಹಗಲು ರಾತ್ರಿ ಉಪವಾಸ ಮಾಡಿ ಭಗವಾನ್ ತ್ರಿವಿಕ್ರಮನ ಪೂಜೆ ಮಾಡುವವನು, ಗೋಮೇಧ ಯಜ್ಞದ ಫಲಪಡೆಯುತ್ತಾನೆ ಮತ್ತು ಅಪ್ಸರೆಯರೊಂದಿಗೆ ಆನಂದವನ್ನನುಭವಿಸುತ್ತಾನೆ (ಅನು 109/9). (ಉಳಿದ ತಿಂಗಳುಗಳ ಫಲವನ್ನು ಆಯಾಯ ತಿಂಗಳ ಹೆಸರುಗಳ ಪ್ರಕರಣದಲ್ಲಿ ನೋಡಿರಿ).

**ಮಾಹಿಕ** – ಒಂದು ಭಾರತೀಯ ಜನಪದ (ಭೀಷ್ಮ 9/46).

**ಮಾಹಿಷ್ಮತೀ** – ಒಂದು ಪ್ರಾಚೀನ ನಗರ. ಇದು ರಾಜಾ ನೀಲನ ರಾಜಧಾನಿಯಾಗಿತ್ತು. ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ಈ ನಗರವನ್ನು ಆಕ್ರಮಿಸಿ, ರಾಜಾ ನೀಲನನ್ನು ಸೋಲಿಸಿದನು ಮತ್ತು ಅವನ ಮೇಲೆ ತೆರಿಗೆಯನ್ನು ವಿಧಿಸಿದನು (ಸಭಾ 31/21–60). ಈ ನಗರವು ಇಕ್ಷ್ವಾಕುವಿನ ಹತ್ತನೇ ಪುತ್ರ ದಶಾಶ್ವನ ರಾಜಧಾನಿಯೂ ಆಗಿತ್ತು (ಅನು 2/6). ಮಾಹಿಷ್ಮತೀ ನಗರದಲ್ಲಿ ಸಹಸ್ರ ಬಾಹುಗಳಿರುವ, ತೇಜಸ್ವೀ, ಕಾರ್ತವೀರ್ಯಾರ್ಜುನನೆಂಬ ಒಬ್ಬ ಹೈಹಯ ವಂಶದ ರಾಜ, ಸಮಸ್ತ ಭೂಮಂಡಲದ ಶಾಸನ ಮಾಡುತ್ತಿದ್ದನು (ಅನು 152/3).

**ಮಾಹೇಯ** – ಒಂದು ಭಾರತೀಯ ಜನಪದ (ಭೀಷ್ಮ 9/49).

**ಮಾಹೇಶ್ವರಪದ** – ಇದು ಸೋಮಪದವೆಂಬ ತೀರ್ಥದ ಒಂದು ಅವಾಂತರ ತೀರ್ಥವಾಗಿದೆ. ಇದರಲ್ಲಿ ಸ್ನಾನ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 84/119).

**ಮಾಹೇಶ್ವರಪುರ** – ಒಂದು ತೀರ್ಥ. ಇಲ್ಲಿಗೆ ಹೋಗಿ ಭಗವಾನ್ ಶಂಕರನ ಪೂಜೆ ಮತ್ತು ಉಪವಾಸಮಾಡುವುದರಿಂದ, ಮನುಷ್ಯ ಮನೋವಾಂಛಿತ ಪೂರ್ಣಕಾಮನೆಗಳನ್ನು ಪಡೆಯುತ್ತಾನೆ (ವನ 84/129).

**ಮಾಹೇಶ್ವರೀಧಾರಾ** – ಒಂದು ತೀರ್ಥ. ಇಲ್ಲಿಗೆ ಯಾತ್ರೆಮಾಡಿದರೆ ಅಶ್ವಮೇಧ ಯಜ್ಞದ ಫಲ ಸಿಗುತ್ತದೆ ಮತ್ತು ಕುಲದ ಉದ್ಧಾರವಾಗುತ್ತದೆ (ವನ 84/117).

**ಮಿತ್ರ** – ದ್ವಾದಶಾದಿತ್ಯರಲ್ಲಿ ಒಬ್ಬ. ಇವನ ತಾಯಿಯ ಹೆಸರು ಅದಿತಿ ಮತ್ತು ತಂದೆಯ ಹೆಸರು ಕಶ್ಯಪನೆಂದಾಗಿತ್ತು (ಆದಿ 65/15). ಇವನು ಇತರ ಆದಿತ್ಯರೊಂದಿಗೆ ಪಾಂಡುನಂದನ ಅರ್ಜುನನ ಜನ್ಮಕಾಲದಲ್ಲಿ, ಅವನ ಮಹತ್ತ್ವವನ್ನು ಹೆಚ್ಚಿಸುತ್ತಾ ಆಕಾಶದಲ್ಲಿ ನಿಂತಿದ್ದನು (ಆದಿ 122/66–67). ಖಾಂಡವವನ

ದಹನ ಕಾಲದಲ್ಲಿ ಇಂದ್ರನ ಕಡೆಯಿಂದ, ಶ್ರೀಕೃಷ್ಣ ಮತ್ತು ಅರ್ಜುನನ ಮೇಲೆ ಆಕ್ರಮಣ ಮಾಡಲು, ಇವನೂ ಆಗಮಿಸಿದ್ದನು. ಸುತ್ತಲೂ ಅಂಚಿನಲ್ಲಿ ಚೂರಿಗಳಿಂದ ಕೂಡಿದ ಚಕ್ರವನ್ನು ಹಿಡಿದು ನಿಂತಿದ್ದನು (ಆದಿ 226/36). ಮಿತ್ರದೇವತೆ ದೇವರಾಜ ಇಂದ್ರನ ಸಭೆಯಲ್ಲಿರುತ್ತಾನೆ (ಸಭಾ 7/21). ಇವನು ಸ್ಕಂದನಿಗೆ ಸುವ್ರತ ಮತ್ತು ಸತ್ಯ ಸಂಧನೆಂಬ ಇಬ್ಬರು ಪಾರ್ಷದರನ್ನು ಕೊಟ್ಟಿದ್ದನು (ಶಲ್ಯ 45/41–42).

**ಮಿತ್ರಜ್ಞ** – ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಐದು ಮಂದಿ ದೇವವಿನಾಯಕರಲ್ಲಿ ಒಬ್ಬ (ವನ 220/12).

**ಮಿತ್ರದೇವ** – ತ್ರಿಗರ್ತರಾಜ ಸುಶರ್ಮನ ಸಹೋದರ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ಕರ್ಣ 27/3–25).

**ಮಿತ್ರಧರ್ಮಾ** – ಪಾಂಚಜನ್ಯನೆಂಬ ಅಗ್ನಿಯ ಮಗ. ಐದು ಮಂದಿ ದೇವವಿನಾಯಕರಲ್ಲಿ ಒಬ್ಬ (ವನ 220/12).

**ಮಿತ್ರವರ್ಧನ** – ಪಾಂಚಜನ್ಯನೆಂಬ ಅಗ್ನಿಯ ಮಗ. ಐದು ಮಂದಿ ದೇವವಿನಾಯಕರಲ್ಲಿ ಒಬ್ಬ (ವನ 220/12).

**ಮಿತ್ರವರ್ಮಾ** – ತ್ರಿಗರ್ತರಾಜ ಸುಶರ್ಮನ ಸಹೋದರ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ಕರ್ಣ 27/3–23).

**ಮಿತ್ರವಂತ** (ಮಿತ್ರವಾನ್) – ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಐದು ಮಂದಿ ದೇವ ವಿನಾಯಕರಲ್ಲಿ ಒಬ್ಬ (ವನ 220/12).

**ಮಿತ್ರವಿಂದ** – ಒಬ್ಬ ದೇವತೆ. ರಥಂತರನೆಂಬ ಅಗ್ನಿಗೆ ಕೊಡಲ್ಪಟ್ಟ ಹವಿಸ್ಸು ಇವನ ಭಾಗವಾಗಿರುತ್ತದೆ (ವನ 220/19).

**ಮಿತ್ರವಿಂದಾ** – (ಅವಂತಿರಾಜನ ಪುತ್ರಿ ಮತ್ತು ವಿಂದಾನುವಿಂದರ ಸೋದರಿ) ಶ್ರೀಕೃಷ್ಣನ ಎಂಟು ಪಟ್ಟ ಮಹಿಷಿಯರಲ್ಲಿ ಒಬ್ಬಳು. ದ್ವಾರಕೆಯಲ್ಲಿ ಇವಳ ಅರಮನೆ ವೈಡೂರ್ಯಮಣಿಯಂತೆ ಪ್ರಕಾಶಮಾನವೂ, ಹಸುರುಬಣ್ಣದ್ದೂ ಆಗಿದೆ. ಅದನ್ನು ನೋಡಿದಾಗ ಸಾಕ್ಷಾತ್ ಶ್ರೀಹರಿಯೇ ಶೋಭಾಯಮಾನನಾಗಿರುವನೋ ಎಂಬ ಭಾವನೆಯುಂಟಾಗುತ್ತಿತ್ತು. ಆ ಪ್ರಾಸಾದವನ್ನು ದೇವಗಣಗಳೂ ಹೊಗಳುತ್ತಿದ್ದವು. ಶ್ರೀಕೃಷ್ಣನ ಮಹಿಷಿ ಮಿತ್ರವಿಂದೆಯ ಆ ಅರಮನೆ, ಇತರ ಅರಮನೆಗಳ ಆಭರಣದಂತೆ ಕಾಣಿಸುತ್ತಿತ್ತು (ಸಭಾ 38/29).

**ಮಿತ್ರಸಹ** – (ನೋಡಿರಿ ಕಲ್ಮಾಷಪಾದ).

**ಮಿತ್ರಾ** – ಉಮಾದೇವಿಯ ಅನುಗಾಮಿನಿ ಸಖಿ (ವನ 231/48).

**ಮಿತ್ರಾವರುಣ** – ಸದಾ ಜೊತೆಯಲ್ಲಿರುವ ಮಿತ್ರ ಮತ್ತು ವರುಣದೇವತೆ (ಶಲ್ಯ 54/14). (ಮಹರ್ಷಿ ಅಗಸ್ತ್ಯ ಮತ್ತು ವಸಿಷ್ಠರಿಬ್ಬರೂ ಮಿತ್ರಾವರುಣರ ಪುತ್ರರು.).

**ಮಿಥಿಲಾ** – ಈಶಾನ್ಯ ಭಾರತದ ಒಂದು ಪ್ರಾಚೀನ ಜನಪದ. ಇಲ್ಲಿ ವಿದೇಹ ವಂಶದ ಕ್ಷತ್ರಿಯರ ರಾಜ್ಯವಿತ್ತು. ರಾಜಾ ಪಾಂಡು ಈ ದೇಶದ ಮೇಲೆ ಆಕ್ರಮಣ ಮಾಡಿ, ಅಲ್ಲಿರುವ ಕ್ಷತ್ರಿಯ ವೀರರನ್ನು ಸೋಲಿಸಿದ್ದನು (ಆದಿ 112/28). (ಆಧುನಿಕ ತಿರಹುತದ ಪ್ರಾಚೀನ ಹೆಸರು ಮಿಥಿಲಾ ಹಾಗೂ ವಿದೇಹವೆಂದಾಗಿದೆ. ಮಿಥಿಲಾ ಶಬ್ದವು ಆ ಜನಪದದ ರಾಜಧಾನಿಗೂ ಪ್ರಯೋಗಿಸಲ್ಪಟ್ಟಿದೆ. ವೇದ, ಬ್ರಾಹ್ಮಣಗ್ರಂಥ ಮತ್ತು ಉಪನಿಷತ್ತುಗಳಲ್ಲೂ ಮಿಥಿಲೆ ಮತ್ತು ವಿದೇಹದ ಗೌರವಪೂರ್ಣ ಉಲ್ಲೇಖವಿದೆ.) ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನ ಇಂದ್ರಪ್ರಸ್ಥದಿಂದ ಮಗಧಕ್ಕೆ ಹೋಗುವಾಗ ಮಿಥಿಲೆಗೂ ಹೋಗಿದ್ದರು (ಸಭಾ 20/28). ಮಿಥಿಲೆಯಲ್ಲಿಯೇ ಪ್ರಖ್ಯಾತನೂ, ಮಾತಾಪಿತರ ಭಕ್ತನೂ ಆದ ಧರ್ಮವ್ಯಾಧ ವಾಸಿಸುತ್ತಿದ್ದನು. ಅವನ ಬಳಿಗೆ ಕರ್ತವ್ಯದ ಶಿಕ್ಷಣಪಡೆಯಲು, ಕೌಶಿಕನೆಂಬ ಬ್ರಾಹ್ಮಣನನ್ನು, ಒಬ್ಬ ಪತಿವ್ರತೆ ಕಳುಹಿಸಿದ್ದಳು (ವನ 206/44 ರಿಂದ 216/32). ದಿಗ್ವಿಜಯ ಕಾಲದಲ್ಲಿ ಕರ್ಣನು ಮಿಥಿಲೆಯನ್ನು ಗೆದ್ದಿದ್ದನು (ವನ 254/8). ಜಗಜ್ಜನನಿಯಾದ ಸೀತೆ ಮಿಥಿಲೆ ಅಥವಾ ವಿದೇಹ ರಾಜ ಜನಕನ ಪುತ್ರಿಯಾಗಿದ್ದಳು. ಅವಳನ್ನು ಭಗವಾನ್ ಶ್ರೀರಾಮನ ಪ್ರಿಯ ಪತ್ನಿಯಾಗಲು ವಿಧಾತನು ಸೃಷ್ಟಿಸಿದ್ದನು (ವನ 274/9). ಮಿಥಿಲೆಯ ಕನ್ಯೆಯಾದುದರಿಂದಲೇ ಯಶಸ್ವಿನಿ ಸೀತೆ 'ಮೈಥಿಲಿ' ಎಂದು ಕರೆಯಲ್ಪಡುತ್ತಿದ್ದಳು (ವನ 277/2). ಪ್ರಾಚೀನ ಕಾಲದಲ್ಲಿ ಮಿಥಿಲಾಪುರದ ಒಬ್ಬ ರಾಜ ಧರ್ಮಧ್ವಜನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಅವನ ಬ್ರಹ್ಮ

ಜ್ಞಾನದ ವರ್ಣನೆ ಕೇಳಿ, ಸನ್ಯಾಸಿನಿಯಾದ ಸುಲಭಾ ಎಂಬವಳ ಮನಸ್ಸಿನಲ್ಲಿ ಅವನ ದರ್ಶನ ಮಾಡುವ ಇಚ್ಛೆ ಉಂಟಾಗಿತ್ತು. ಅವಳು ಬಹಳ ಜನಸಮುದಾಯದಿಂದ ತುಂಬಿರುವ, ರಮಣೀಯವಾದ ಮಿಥಿಲೆಗೆ ತಲುಪಿ, ಭಿಕ್ಷೆ ಸ್ವೀಕರಿಸುವ ನೆಪದಲ್ಲಿ, ಮಿಥಿಲೆಯ ರಾಜನ ದರ್ಶನ ಮಾಡಿದ್ದಳು (ಶಾಂತಿ 320/4–12). ತಂದೆಯ ಆಜ್ಞೆ ಪ್ರಕಾರ, ಶುಕದೇವನು ಮಿಥಿಲೆಯ ರಾಜಾ ಜನಕನೊಂದಿಗೆ, ಧರ್ಮದ ನಿಷ್ಠೆ ಮತ್ತು ಮೋಕ್ಷದ ಪರಮಾಶ್ರಯವನ್ನು ಕೇಳುವುದಕ್ಕಾಗಿ, ಮಿಥಿಲಾನಗರಕ್ಕೆ ಹೋಗಿದ್ದನು (ಶಾಂತಿ 325/6–7).

**ಮಿಞ್ಜಿಕಮಿಞ್ಜಿಕ** – ಶಿವನ ವೀರ್ಯದಿಂದ ಹುಟ್ಟಿದ ಒಂದು ಜೊತೆ ಅವಳಿ ಮಕ್ಕಳು (ವನ 231/10).

**ಮಿಶ್ರಕ** – (1) ಅಶ್ವಗಳ ಒಂದು ದಳ (ಸಭಾ 38/29).

(2) ದ್ವಾರಕಾಪುರದ ಶೋಭೆಯನ್ನು ಹೆಚ್ಚಿಸುವ ಒಂದು ದಿವ್ಯ ವನ (ಸಭಾ 38/29).

(3) ಕುರುಕ್ಷೇತ್ರದ ಗಡಿಯ ಒಳಗಿರುವ ಒಂದು ಉತ್ತಮ ತೀರ್ಥ. ಇಲ್ಲಿ ಮಾಡಿದ ಸ್ನಾನ, ಎಲ್ಲಾ ತೀರ್ಥಗಳಲ್ಲಿ ಮಾಡಲ್ಪಟ್ಟ ಸ್ನಾನದಂತೆ ಫಲ ಕೊಡುವಂತಹುದಾಗಿದೆ (ವನ 83/91–92).

**ಮಿಶ್ರಕೇಶೀ** – ಒಬ್ಬ ಅಪ್ಸರೆ. ಇವಳು ಕಶ್ಯಪನ ಪ್ರಾಧಾ ಎಂಬ ಪತ್ನಿಯಿಂದ ಜನಿಸಿದ್ದಳು (ಆದಿ 65/49). ಇವಳ ಗರ್ಭದಿಂದ, ಪೂರುಪುತ್ರ ರೌದ್ರಾಶ್ವನ ಮೂಲಕ ಅನ್ವಗ್ಭಾನು ಮೊದಲಾದ ಹತ್ತು ಮಹಾಧನುರ್ಧರರ ಜನನವಾಗಿತ್ತು (ಆದಿ 94/8). ಈಕೆ ಅರ್ಜುನನ ಸ್ವಾಗತದಲ್ಲಿ ನೃತ್ಯ ಮಾಡಿದ್ದಳು (ವನ 43/29).

**ಮಿಶ್ರೀ** – ಒಬ್ಬ ನಾಗ. ಇವನು ಬಲರಾಮನ ಪರಮಧಾಮ ಗಮನದ ಸಮಯದಲ್ಲಿ ಅವನ ಸ್ವಾಗತಕ್ಕಾಗಿ ಪ್ರಭಾಸಕ್ಷೇತ್ರಕ್ಕೆ ಬಂದಿದ್ದನು (ಮೌಸಲ 4/15–16).

**ಮುಕುಟ** – ಒಂದು ಕ್ಷತ್ರಿಯ ವಂಶ. ಇದರಲ್ಲಿ 'ವಿಗಾಹನ'ನೆಂಬ ಕುಲಕಳಂಕ ರಾಜ ಹುಟ್ಟಿದ್ದನು (ಉದ್ಯೋಗ 74/16).

**ಮುಕುಟಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/23).

**ಮುಖಕರ್ಣೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/29).

**ಮುಖಮಂಡಿಕಾ** – ಶಿಶುಗ್ರಹ ಸ್ವರೂಪೆಯಾದ ದಿತಿಯ ಹೆಸರು (ವನ 230/30).

**ಮುಖರ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/16).

**ಮುಖಸೇಚಕ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/16).

**ಮುಚುಕುಂದ** – ಒಬ್ಬ ಪ್ರಾಚೀನ ರಾಜರ್ಷಿ. ಇವನು ಯಮನ ಸಭೆಯಲ್ಲಿದ್ದುಕೊಂಡು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/21). ಪೂರ್ವಕಾಲದಲ್ಲಿ ಧನಾಧ್ಯಕ್ಷ ಕುಬೇರ, ರಾಜರ್ಷಿ ಮುಚುಕುಂದನಲ್ಲಿ ಪ್ರಸನ್ನನಾಗಿ, ಅವನಿಗೆ ಸಂಪೂರ್ಣ ಪೃಥ್ವಿಯನ್ನು ಕೊಡಲು ಸಿದ್ಧನಾದನು; ಆದರೆ ಇವನು ಅದನ್ನು ಸ್ವೀಕರಿಸಲಿಲ್ಲ. 'ನಾನು ತನ್ನ ಬಾಹುಬಲದಿಂದ ಆರ್ಜಿಸಲ್ಪಟ್ಟ ರಾಜ್ಯವನ್ನು ಭೋಗಿಸುವೆನೆಂಬುದೇ ನನ್ನ ಇಚ್ಛೆಯಾಗಿದೆ.' ಎಂದು ಹೇಳಿದನು. ಇದರಿಂದ ಕುಬೇರನು ತುಂಬಾ ಪ್ರಸನ್ನನೂ ವಿಸ್ಮಿತನೂ ಆದನು. ಅನಂತರ ಕ್ಷತ್ರಿಯ ಧರ್ಮದಲ್ಲಿ ತತ್ಪರನಾದ ಮುಚುಕುಂದನು ತನ್ನ ಬಾಹುಬಲದಿಂದ ಪಡೆದ ಈ ಭೂಮಿಯನ್ನು ನ್ಯಾಯಸಮ್ಮತವಾಗಿ ಪಾಲಿಸಿದನು (ಉದ್ಯೋಗ 132/9–11). ಒಂದು ಬಾರಿ ಮುಚುಕುಂದನು ತನ್ನ ಬಲವನ್ನು ತಿಳಿಯುವುದಕ್ಕಾಗಿ ಅಲಕಾಪತಿ ಕುಬೇರನ ಮೇಲೆ ಆಕ್ರಮಣ ಮಾಡಿದನು. ಕುಬೇರನಿಂದ ಕಳುಹಿಸಲ್ಪಟ್ಟ ರಾಕ್ಷಸರು ಈತನ ಸೇನೆಯನ್ನು ತುಳಿಯಲು ಆರಂಭಮಾಡಿದರು. ಆಗ ಈತ ಪುರೋಹಿತರ ಗಮನವನ್ನು ಈ ಕಡೆಗೆ ಸೆಳೆದನು. ವಸಿಷ್ಠನು ತಪೋಬಲದಿಂದ ರಾಕ್ಷಸರ ಸಂಹಾರ ಮಾಡಿದನು. ಇದರಿಂದಾಗಿ ಕುಬೇರನೊಂದಿಗೆ ವಾದವಿವಾದವುಂಟಾಯಿತು. ಕುಬೇರನು ಇವನಿಗೆ ರಾಜ್ಯಕೊಡಲು ಬಯಸಿದನು. ಆದರೆ ಇವನು ಸ್ವೀಕರಿಸಲಿಲ್ಲ. ತನ್ನ ಬಾಹುಬಲದಿಂದ ಉಪಾರ್ಜಿಸಿದ ರಾಜ್ಯವನ್ನೇ ಉಪಭೋಗಿಸಿದನು (ಶಾಂತಿ 74/4–20). ಪರಶುರಾಮನೊಂದಿಗೆ ಶರಣಾಗತ ರಕ್ಷಣೆಯ ಕುರಿತು ಇವನ ಪ್ರಶ್ನೆ (ಶಾಂತಿ 143/7). ರಾಜಾ

ಕಾಂಬೋಜನಿಂದ ಇವನಿಗೆ ಖಡ್ಗ ಪ್ರಾಪ್ತಿಯಾಯಿತು; ಇವನು ಅದನ್ನು ಮರುತ್ತನಿಗೆ ಕೊಟ್ಟನು (ಶಾಂತಿ 166/77). ಗೋದಾನ ಮಹಿಮೆಯ ವಿಷಯದಲ್ಲಿ ಇವನ ಹೆಸರು ಉಲ್ಲೇಖಿಸಲ್ಪಟ್ಟಿದೆ (ಅನು 76/25). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/61). ಸಾಯಂಪ್ರಾತಃ ಕಾಲಗಳಲ್ಲಿ ಸ್ಮರಣೀಯರಾದ ರಾಜರಲ್ಲಿ ಇವನ ಹೆಸರೂ ಸೇರಿದೆ (ಅನು 165/54–60).

**ಮುಞ್ಜ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/23).

**ಮುಞ್ಜಕೇತು** – ಒಬ್ಬ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/21).

**ಮುಞ್ಜಕೇಶ** – ಒಬ್ಬ ಕ್ಷತ್ರಿಯ ರಾಜ. ಇವನು ನಿಚಂದ್ರನೆಂಬ ಅಸುರನ ಅಂಶದಿಂದ ಜನಿಸಿದ್ದನು (ಆದಿ 67/25–26). ಪಾಂಡವರ ಕಡೆಯಿಂದ, ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲ್ಪಟ್ಟಿತ್ತು (ಉದ್ಯೋಗ 4/14).

**ಮುಞ್ಜಪೃಷ್ಠ** – ಹಿಮಾಲಯದ ಶಿಖರದಲ್ಲಿ ರುದ್ರಸೇವಿತ ಒಂದು ಸ್ಥಾನ (ಶಾಂತಿ 122/4).

**ಮುಞ್ಜವಟ**– (1) ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಸ್ಥಾಣುತೀರ್ಥ. ಅಲ್ಲಿ ಒಂದು ರಾತ್ರಿ ವಾಸಿಸುವುದರಿಂದ, ಮನುಷ್ಯನು ಗಣಪತಿ ಪದವನ್ನು ಪಡೆಯುತ್ತಾನೆ (ವನ 83/22).

(2) ಗಂಗಾತಟದಲ್ಲಿರುವ, ಮಹಾದೇವನ ಒಂದು ಪರಮೋತ್ತಮ ತೀರ್ಥ. ಇಲ್ಲಿ ಮಹಾದೇವನಿಗೆ ಪ್ರಣಾಮ ಮಾಡಿ, ಅವನಿಗೆ ಪ್ರದಕ್ಷಿಣೆ ಬಂದರೆ ಗಣಪತಿ ಪದ ಪ್ರಾಪ್ತವಾಗುತ್ತದೆ. ಇಲ್ಲಿ ಗಂಗಾಸ್ನಾನ ಮಾಡಿದರೆ ಸಮಸ್ತ ಪಾಪಗಳಿಂದ ಮೋಕ್ಷ ದೊರಕುತ್ತದೆ (ವನ 85/67–68).

**ಮುಞ್ಜವಾನ್** – ಹಿಮಾಲಯದ ಹಿಂಭಾಗದಲ್ಲಿರುವ ಒಂದು ಪರ್ವತ. ಇಲ್ಲಿ ಉಮಾವಲ್ಲಭ ಭಗವಾನ್ ಶಂಕರ ಸದಾತಪಸ್ಸು ಮಾಡುತ್ತಿರುತ್ತಾನೆ. ಇದರ ವಿಶೇಷ ವರ್ಣನೆ (ಆಶ್ವ 8/1–12).

**ಮುಞ್ಜಾವಟ** – ಹಿಮಾಲಯದ ಶಿಖರದಲ್ಲಿರುವ ಒಂದು ಸ್ಥಾನ. ಇಲ್ಲಿ ಪರಶುರಾಮನು, ಋಷಿಗಳೊಡನೆ ತನ್ನ ಜಟೆಯನ್ನು ಕಟ್ಟಲು ಆದೇಶ ನೀಡಿದ್ದನು (ಶಾಂತಿ 122/3).

**ಮುಣ್ಡ** – ಕೌರವದಲದಲ್ಲಿದ್ದ ಮುಂಡದೇಶದ ಯೋಧ (ಭೀಷ್ಮ 56/9).

**ಮುಣ್ಡವೇದಾಂಗ** – ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/17).

**ಮುಣ್ಡಿ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ಮುದಾವರ್ತ** – ಹೈಹಯವಂಶದಲ್ಲಿ ಹುಟ್ಟಿದ ಒಬ್ಬ ಕುಲಗೇಡಿ ರಾಜ (ಉದ್ಯೋಗ 74/13).

**ಮುದಿತಾ** – ಸಹನೆಂಬ ಅಗ್ನಿಯ ಭಾರ್ಯೆ (ವನ 222/1).

**ಮುದ್ಗರ** – ತಕ್ಷಕಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಅವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/10).

**ಮುದ್ಗರಪರ್ಣಕ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/13).

**ಮುದ್ಗರಪಿಂಡಕ** – ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/9).

**ಮುದ್ಗಲ (ಮೌದ್ಗಲ್ಯ)** – (1) ವೇದವಿದ್ಯಾ ಪಾರಂಗತನಾದ ಒಬ್ಬ ಬ್ರಾಹ್ಮಣ ಮುನಿ. ಇವನು ಜನಮೇಜಯನ ಸರ್ಪಸತ್ರದಲ್ಲಿ ಸದಸ್ಯನಾಗಿದ್ದನು (ಆದಿ 53/9). ಇವನು ಕುರುಕ್ಷೇತ್ರದಲ್ಲಿ ಶಿಲೋಂಛ ವೃತ್ತಿಯಿಂದ ಜೀವಿಸುತ್ತಿದ್ದನು (ವನ 260/3). ಇವನಿಂದ ದುರ್ವಾಸನ ಸ್ವಾಗತ (ವನ 260/14–22). ದೇವದೂತರೊಂದಿಗೆ ಇವನ ಸಂವಾದ ಮತ್ತು ಸ್ವರ್ಗಕ್ಕೆ ಹೋಗಲು ನಿರಾಕರಿಸಿದುದು (ವನ 260/32 ರಿಂದ 261/44). ಇವನ ಇನ್ನೊಂದು ಹೆಸರು ಮೌದ್ಗಲ್ಯನೆಂದೂ ಇತ್ತು (ವನ 261/24). ಈತ ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/9). ಶತದ್ಯುಮ್ನನಿಂದ ಇವನಿಗೆ ಸುವರ್ಣಮಯ ಭವನ ಪ್ರಾಪ್ತಿ (ಶಾಂತಿ 234/32; ಅನು 137/21).

(2) ಒಂದು ದೇಶ. ಇದನ್ನು ಶ್ರೀಕೃಷ್ಣ ಗೆದ್ದಿದ್ದನು (ದ್ರೋಣ 11/16–18).

**ಮುನಿ** – (1) ದಕ್ಷ ಪ್ರಜಾಪತಿಯ ಪುತ್ರಿ ಹಾಗೂ ಕಶ್ಯಪನಪತ್ನಿ (ಆದಿ 65/12). ಇವನಿಗೆ ದೇವ ಗಂಧರ್ವಜಾತಿಯ ಭೀಮಸೇನೇ ಮೊದಲಾದ ಹದಿನಾರು ಮಂದಿ ಪುತ್ರರಿದ್ದರು (ಆದಿ 65/42–44).

(2) ಅಹರ(ಅಹಃ)ನೆಂಬ ವಸುವಿನ ಒಬ್ಬ ಪುತ್ರ (ಆದಿ 66/23).

(3) ಪೂರು ವಂಶದ ಮಹಾರಾಜ ಕುರುವಿನ ಮೂಲಕ ವಾಹಿನಿಯ ಗರ್ಭದಿಂದ ಹುಟ್ಟಿದ ಐದು ಪುತ್ರರಲ್ಲಿ ಒಬ್ಬ. ಉಳಿದ ನಾಲ್ವರು ಅಶ್ವವಂತ, ಅಭಿಷ್ಯಂತ, ಚಿತ್ರರಥ ಮತ್ತು ಜನಮೇಜಯರಾಗಿದ್ದರು (ಆದಿ 94/50).

**ಮುನಿದೇಶ** – ಕ್ರೌಂಚದ್ವೀಪದ ಅಂಧಕಾರದ ಅನಂತರದ ಒಂದು ದೇಶ (ಭೀಷ್ಮ 12/22).

**ಮುನಿವೀರ್ಯ** – ಒಬ್ಬ ಸನಾತನ ವಿಶ್ವೇದೇವ (ಅನು 91/31).

**ಮುಮುಚು** – ದಕ್ಷಿಣ ದಿಕ್ಕನ್ನಾಶ್ರಯಿಸಿರುವ ಒಬ್ಬ ಋಷಿ (ಅನು 165/39).

**ಮುರ (ಮುರು)** – (1) ಒಂದು ಪ್ರಾಚೀನ ದೇಶ. ಇಲ್ಲಿ ರಾಜಾ ಭಗದತ್ತನು ಶಾಸನ ಮಾಡುತ್ತಿದ್ದನು (ಸಭಾ 14/14).

(2) ಒಬ್ಬ ಮಹಾ ಅಸುರ. ಈತ ಪ್ರಾಗ್ಜ್ಯೋತಿಷ ಪುರದ ರಾಜಾಭೌಮಾಸುರನ ರಾಜ್ಯದ ಗಡಿ ಯನ್ನು ರಕ್ಷಿಸುತ್ತಿದ್ದ ನಾಲ್ಕು ಮಂದಿ ಪ್ರಧಾನ ಅಸುರರಲ್ಲಿ ಒಬ್ಬನಾಗಿದ್ದನು. ಇವನಿಗೆ ಒಂದು ಸಾವಿರ ಪುತ್ರರಿದ್ದರು. ಅವರಲ್ಲಿ ಹತ್ತುಮಂದಿ ಭೌಮಾಸುರನ ಅಂತಃಪುರ ರಕ್ಷಕರಾಗಿದ್ದರು. ಇವನು ತಪಸ್ಸುಮಾಡಿ ಇಚ್ಛಾನುಸಾರವಾಗಿ ವರ ಪಡೆದಿದ್ದನು. ಇವನು ಭೌಮಾಸುರನ ರಾಜ್ಯದ ಗಡಿಯಲ್ಲಿ ಆರು ಸಾವಿರ ಪಾಶಗಳನ್ನು ಅಳ ವಡಿಸಿದ್ದನು. ಅವುಗಳು ಮೌರವಪಾಶಗಳೆಂದು ಪ್ರಖ್ಯಾತವಾಗಿದ್ದವು. ಅವುಗಳ ಅಂಚಿನ ಭಾಗ ಗಳಲ್ಲಿ ಚೂರಿಗಳು ಅಳವಡಿಸಲ್ಪಟ್ಟಿದ್ದವು. ಶ್ರೀಕೃಷ್ಣನು ಈ ಪಾಶಗಳನ್ನು ಸುದರ್ಶನಚಕ್ರದ ಮೂಲಕ ಕತ್ತರಿಸಿ, ಮುರನನ್ನು ಅವನ ವಂಶಜರ ಸಹಿತವಾಗಿ ಕೊಂದುಹಾಕಿದನು (ಸಭಾ 38/29).

**ಮುರ್ಮುರಾ** – ಒಂದು ನದಿ. ಇದು ಅಗ್ನಿಯ ಉತ್ಪತ್ತಿಸ್ಥಾನವೆಂದು ಹೇಳಲ್ಪಟ್ಟಿದೆ (ವನ 222/25).

**ಮುಷ್ಟಿಕ** – ಒಬ್ಬ ಅಸುರ. ಇವನು ಕಂಸನ ಸೇವಕನಾಗಿದ್ದನು. ಬಲರಾಮನಿಂದ ಇವನ ವಧೆ (ಸಭಾ 38/29).

**ಮುಸಲ** – ವಿಶ್ವಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/53).

**ಮೂಕ** – (1) ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಭಸ್ಮವಾದನು (ಆದಿ 57/9).

(2) ಒಬ್ಬ ದಾನವ. ಇವನು ಹಂದಿಯರೂಪ ಧರಿಸಿ ಅರ್ಜುನನ್ನು ಕೊಲ್ಲಲು ಹೊಂಚು ಹಾಕಿ ದ್ದನು (ವನ 38/7). ಅರ್ಜುನನಿಂದ ಇವನ ವಧೆ (ವನ 39/16).

**ಮೂಲ** – (ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು). ಮೂಲನಕ್ಷತ್ರದಂದು ಏಕಾಗ್ರಚಿತ್ತನಾಗಿ, ಬ್ರಾಹ್ಮಣ ರಿಗೆ ಮೂಲಫಲ (ಗೆಡ್ಡೆಗೆಣಸು) ದಾನ ಮಾಡು ವವನ ಪಿತೃಗಳು ತೃಪ್ತರಾಗುತ್ತಾರೆ; ಅವನು ಅಭೀಷ್ಟಗತಿಯನ್ನು ಪಡೆಯುತ್ತಾನೆ (ಅನು 64/ 24). ಮೂಲನಕ್ಷತ್ರದ ದಿನ ಶ್ರಾದ್ಧ ಮಾಡುವುದ ರಿಂದ ಆರೋಗ್ಯ ಅಭಿವೃದ್ಧಿಯಾಗುತ್ತದೆ (ಅನು 89/10). ಮಾರ್ಗಶಿರ ಮಾಸದಲ್ಲಿ ಶುಕ್ಲಪಕ್ಷದ ಪಾಡ್ಯದಂದು, ಮೂಲ ನಕ್ಷತ್ರದೊಂದಿಗೆ ಚಂದ್ರನ ಯೋಗವಿದ್ದರೆ, ಚಂದ್ರ ಸಂಬಂಧವಾದ ವ್ರತ ಆರಂಭಿಸಬೇಕು. ದೇವತೆಗಳ ಸಹಿತ, ಮೂಲ ನಕ್ಷತ್ರದ ಮೂಲಕ, ಅವನ ಎರಡೂ ಪಾದಗಳ ಧ್ಯಾನಮಾಡಬೇಕು (ಅನು 110/3).

**ಮೂಷಕ** – ಒಂದು ಭಾರತೀಯ ಜನಪದ (ಭೀಷ್ಮ 9/56, 63).

**ಮೂಷಕಾದ (ಮೂಷಿಕಾದ)** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/12). ಇವನು ವರುಣ ಸಭೆಯಲ್ಲಿರುತ್ತಾ ಆತನ ಉಪಾ ಸನೆ ಮಾಡುತ್ತಾನೆ (ಸಭಾ 9/10). ನಾರದರು ಮಾತಲಿಗೆ ಇವನ ಪರಿಚಯ ಮಾಡಿದುದು (ಉದ್ಯೋಗ 103/14).

**ಮೃಗಧೂಮ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪುಣ್ಯ ತೀರ್ಥ. ಇಲ್ಲಿ ಮಹಾದೇವನ ಪೂಜೆ ಮಾಡಿದರೆ, ಅಶ್ವಮೇಧ ಯಜ್ಞದ ಫಲ ಸಿಗುತ್ತದೆ (ವನ 83/101).

**ಮೃಗಮಂದಾ** – ಕ್ರೋಧವಶನ ಕ್ರೋಧದಿಂದ ಹುಟ್ಟಿದ ಒಬ್ಬ ಕನ್ನಿಕೆ. ಇವಳಿಂದಲೇ ಕರಡಿಗಳ ಜನನವಾಯಿತು (ಆದಿ 66/60–62).

**ಮೃಗವ್ಯಾಧ** – ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಆತ್ಮಜ. ಸ್ಥಾಣುವಿನ ಪುತ್ರ (ಆದಿ 66/2).

**ಮೃಗಶಿರಾ** – (ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು). ಮೃಗಶಿರಾ ನಕ್ಷತ್ರದ ದಿನ, ಹಾಲುಕೊಡುವ

ಗೋವನ್ನು ಕರುಸಹಿತ ದಾನ ಮಾಡಿದರೆ, ದಾನಿ ಮರಣಾನಂತರ ಸರ್ವೋತ್ತಮ ಸ್ವರ್ಗಕ್ಕೆ ಹೋಗುತ್ತಾನೆ (ಅನು 64/7). ಈ ನಕ್ಷತ್ರದಲ್ಲಿ ಶ್ರಾದ್ಧ ಮಾಡಿದರೆ ತೇಜಸ್ಸು ಪ್ರಾಪ್ತವಾಗುತ್ತದೆ (ಅನು 89/3). ಮಾರ್ಗಶೀರ್ಷ ಮಾಸದಲ್ಲಿ, ಚಂದ್ರವ್ರತದಲ್ಲಿ, ಮೃಗಶಿರೆಯನ್ನು ಚಂದ್ರನ ನೇತ್ರವೆಂದು ಭಾವಿಸಿ, ಪೂಜೆ ಮಾಡುವ ಕ್ರಮವಿದೆ (ಅನು 110/8).

**ಮೃಗಸ್ವಪ್ನೋದ್ಭವಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 258).

**ಮೃಗೀ** – ಕ್ರೋಧವಶನ ಕ್ರೋಧದಿಂದ ಹುಟ್ಟಿದ ಕನ್ಯೆಯರಲ್ಲಿ ಒಬ್ಬಳೂ. ಪ್ರಪಂಚದ ಎಲ್ಲಾ ಮೃಗಗಳು ಇವಳ ಸಂತಾನಗಳೇ ಆಗಿವೆ (ಆದಿ 66/60–62).

**ಮೃಗತಪಾ** – ದಾನವರ ಪ್ರಖ್ಯಾತ ಹತ್ತು ಕುಲಗಳಲ್ಲಿ ಒಂದು (ಆದಿ 65/28–29).

**ಮೃತ್ತಿಕಾವತೀ** – ಒಂದು ಜನಪದ. ಇದನ್ನು ಕರ್ಣನು ಗೆದ್ದಿದ್ದನು (ವನ 254/10).

**ಮೃತ್ಯು** – (1) (ಪುರುಷ). ಅಧರ್ಮನ ಪತ್ನಿ ನಿರ್ಋತಿಯ ಗರ್ಭದಿಂದ ಹುಟ್ಟಿದ ಮೂರು ಪುತ್ರರಲ್ಲಿ ಒಬ್ಬ. ಇವನು ಎಲ್ಲಾ ಪ್ರಾಣಿಗಳ ನಾಶಕ. ಇವನಿಗೆ ಪತ್ನಿಯಾಗಲಿ, ಪುತ್ರರಾಗಲಿ ಯಾರೂ ಇಲ್ಲ; ಯಾಕೆಂದರೆ ಇವನು ಎಲ್ಲರ ಅಂತಕನು (ಆದಿ 66/54–55). ಜಾಪಕ ಬ್ರಾಹ್ಮಣನ ಬಳಿಗೆ ಇವನ ಆಗಮನ (ಶಾಂತಿ 199/32). ಅರ್ಜುನಕನೆಂಬ ವ್ಯಾಧ ಮತ್ತು ಸರ್ಪನೊಂದಿಗೆ ಇವನ ಸಂವಾದ (ಅನು 1/50–68). ಸುದರ್ಶನನು ಮೃತ್ಯುವನ್ನು ಜಯಿಸಿದ ವರ್ಣನೆ (ಅನು 2/48–67).

(2) (ಸ್ತ್ರೀ) ಬ್ರಹ್ಮನ ಶರೀರದಿಂದ ಸ್ತ್ರೀರೂಪದಲ್ಲಿ ಈಕೆಯ ಜನನ (ದ್ರೋಣ 53/17–18; ಶಾಂತಿ 257/15). ಬ್ರಹ್ಮನಿಂದ ತಾನು ಸಂಹಾರಕಾರ್ಯಕ್ಕೆ ನಿಯೋಜಿಸಲ್ಪಟ್ಟಾಗ ಈಕೆಯ ರೋದನ (ದ್ರೋಣ 53/22–23; ಶಾಂತಿ 257/21). ಇವಳ ಘೋರ ತಪಸ್ಸು (ದ್ರೋಣ 54/17–26). (ಶಾಂತಿ 258/15–24). ಬ್ರಹ್ಮನಿಂದ ವರಯಾಚನೆ (ದ್ರೋಣ 54/30–32). ಸಂಹಾರ ಕಾರ್ಯವನ್ನು ಈಕೆ ಸ್ವೀಕರಿಸಿದುದು (ದ್ರೋಣ 54/44; ಶಾಂತಿ 258/37). ಇವಳ ಪ್ರಾಬಲ್ಯದ ವರ್ಣನೆ (ಶಾಂತಿ 319).

**ಮೇಕಲ** – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ಜನರು (ಭೀಷ್ಮ 9/41). ಈ ದೇಶದ ಯೋಧರು ಭೀಷ್ಮನ ರಕ್ಷಣೆಯಲ್ಲಿ ತತ್ಪರರಾಗಿದ್ದರು (ಭೀಷ್ಮ 51/13–14). ಕೋಸಲ ರಾಜ ಬೃಹದ್ಬಲನೊಂದಿಗೆ ಮೇಕಲ ದೇಶದ ಸೈನಿಕರಿದ್ದರು (ಭೀಷ್ಮ 87/9). ಕರ್ಣನು ಈ ದೇಶವನ್ನು ಗೆದ್ದಿದ್ದನು (ದ್ರೋಣ 4/8). ಮೇಕಲರು ಮೊದಲು ಕ್ಷತ್ರಿಯರಾಗಿದ್ದರು; ಆದರೆ ಬ್ರಾಹ್ಮಣರೊಂದಿಗೆ ಮತ್ಸರಿಸಿದುದರಿಂದ ನೀಚರಾದರು (ಅನು 35/17–18).

**ಮೇಘಕರ್ಣಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/30).

**ಮೇಘನಾದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

**ಮೇಘಪುಷ್ಪ** – ಶ್ರೀಕೃಷ್ಣನ ರಥದ ಒಂದು ದಿವ್ಯಾಶ್ವ (ವಿರಾಟ 45/21; ಉದ್ಯೋಗ 83/19; ದ್ರೋಣ 79/38; ದ್ರೋಣ 147/47; ಸೌಪ್ತಿಕ 13/3; ಶಾಂತಿ 53/51).

ಮೇಘಮಾಲಾ – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/30).

**ಮೇಘಮಾಲೀ** – ಮೇರುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಕಾಂಚನನೆಂದಾಗಿತ್ತು (ಶಲ್ಯ 45/47).

**ಮೇಘವಾಸಾ** – ಒಬ್ಬ ದೈತ್ಯ. ಇವನು ವರುಣ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತಾನೆ (ಸಭಾ 9/14).

**ಮೇಘವಾಹನ** – ಒಬ್ಬ ರಾಜ. ಇವನು ಜರಾಸಂಧನನ್ನು ಮಸ್ತಕಮಣಿಯೆಂದು ತಿಳಿದು, ಸದಾ ಅವನ ಸಮ್ಮುಖದಲ್ಲಿ ನತಮಸ್ತಕನಾಗಿರುತ್ತಿದ್ದನು (ಸಭಾ 14/13).

**ಮೇಘವಾಹಿನೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/17).

**ಮೇಘವೇಗ** – ಕೌರವಪಕ್ಷದ ಒಬ್ಬ ವೀರ. ಇವನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 48/15–16).

**ಮೇಘಸಂಧಿ** – ಮಗಧ ದೇಶದ ರಾಜಕುಮಾರ. ಇವನು ಸಹದೇವನ ಪುತ್ರ. ಆತನೊಂದಿಗೆ ಇವನೂ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು

(ಆದಿ 185/8). ಅಶ್ವಮೇಧದ ಕುದುರೆಯ ರಕ್ಷಣಾ ಸಂದರ್ಭದಲ್ಲಿ, ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಪರಾಜಯ (ಆಶ್ವ 82).

**ಮೇಘಸ್ವನಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/8).

**ಮೇದ** – ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ಸರ್ಪ. ಈತ ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟು ಭಸ್ಮವಾದನು (ಆದಿ 57/11).

**ಮೇದಿನೀ** – ಪೃಥ್ವಿಯ ಒಂದು ಹೆಸರು. ಭಗವಾನ್ ವಿಷ್ಣುವಿನ ಮೂಲಕ, ಮಧು ಮತ್ತು ಕೈಟಭರೆಂಬ ಇಬ್ಬರೂ ರಾಕ್ಷಸರು ವಧಿಸಲ್ಪಟ್ಟಾಗ, ಅವರ ಹೆಣಗಳು ನೀರಲ್ಲಿ ಮುಳುಗಿ ಒಂದಾದವು. ಜಲದಿಂದ, ತೆರೆಗಳಿಂದ ಮಥಿಸಲ್ಪಟ್ಟು, ಆ ಇಬ್ಬರೂ ದೈತ್ಯರು ಮೇದಸ್ಸನ್ನು ಬಿಟ್ಟರು; ಅದರಿಂದ ಆಚ್ಛಾದಿತವಾಗಿ ಅಲ್ಲಿರುವ ನೀರು ಅದೃಶ್ಯವಾಯಿತು. ಅದರ ಮೇಲೆಯೇ ನಾರಾಯಣನು ನಾನಾ ಪ್ರಕಾರದ ಜೀವಿಗಳ ಸೃಷ್ಟಿ ಮಾಡಿದನು. ಆ ದೈತ್ಯರ ಮೇದಸ್ಸಿನಿಂದ ಪೂರ್ಣ ವಸುಧೆಯು ಆಚ್ಛಾದಿಸಲ್ಪಟ್ಟಿತು. ಆದುದರಿಂದ ಮೇದಿನಿ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು (ಸಭಾ 38/29).

**ಮೇಧಾ** – ದಕ್ಷ ಪ್ರಜಾಪತಿಯ ಪುತ್ರಿ ಹಾಗೂ ಧರ್ಮರಾಜನ ಪತ್ನಿ (ಆದಿ 66/14).

**ಮೇಧಾತಿಥಿ** – (1) ಒಬ್ಬ ಪ್ರಾಚೀನ ಮಹರ್ಷಿ. ಈತ ಇಂದ್ರನ ಸಭೆಯಲ್ಲಿರುತ್ತಾನೆ (ಸಭಾ 7/17). ಇವನ ಪುತ್ರ ಕಣ್ವಮುನಿ ಪೂರ್ವದಿಕ್ಕಿನ ಋಷಿ (ಶಾಂತಿ 208/27). ಇವನು ವಾನಪ್ರಸ್ಥವನ್ನು ಪಾಲಿಸಿ, ಸ್ವರ್ಗಪಡೆದನು (ಶಾಂತಿ 244/17). ಇವನು ಉಪರಿಚರವಸುವಿನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/7). ಇವನು ದಿವ್ಯ ಮಹರ್ಷಿಯೆಂದು ತಿಳಿಯಲ್ಪಟ್ಟಿದ್ದಾನೆ. ಪ್ರಯಾಣ ಕಾಲದಲ್ಲಿ ಭೀಷ್ಮನನ್ನು ನೋಡಲು ಆಗಮಿಸಿದ್ದನು ಮತ್ತು ಯುಧಿಷ್ಠಿರನಿಂದ ಪೂಜಿಸಲ್ಪಟ್ಟನು (ಅನು 26/3–9).

(2) ಒಂದು ನದಿ. ಇದು ಅಗ್ನಿಯ ಉತ್ಪತ್ತಿ ಸ್ಥಾನವೆಂದು ಹೇಳಲಾಗಿದೆ (ವನ 222/23).

**ಮೇಧಾವಿಕ** – ಒಂದು ತೀರ್ಥ. ಇಲ್ಲಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣ ಮಾಡುವುದರಿಂದ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ ಮತ್ತು ಮೇಧಾಶಕ್ತಿಯನ್ನು ಪಡೆಯುತ್ತಾನೆ (ವನ 85/55).

**ಮೇಧಾವೀ** – (1) ಬಾಲಧಿ ಮುನಿಯ ಮಗ. ಇವನ ಜನನ ತಂದೆಯ ತಪಸ್ಸಿನಿಂದಾಗಿತ್ತು. ಪರ್ವತಗಳು ಇವನ ಆಯುಸ್ಸಿಗೆ ಕಾರಣವಾಗಿದ್ದವು. ಮೇಧಾಯುಕ್ತನಾದುದರಿಂದ ಇವನ ಹೆಸರು ಮೇಧಾವಿಯಾಗಿತ್ತು. ಇವನು ಮಹಾ ಉದ್ಧಟನಾಗಿದ್ದನು (ವನ 135/45–49). ಧನುಷಾಕ್ಷ ಮುನಿಯ ಮೂಲಕ, ಇವನ ಆಯುಸ್ಸಿಗೆ ಕಾರಣೀಭೂತವಾದ ಪರ್ವತಗಳನ್ನು ಎಮ್ಮೆಗಳಿಂದ ವಿದೀರ್ಣಗೊಳಿಸಲಾಯಿತು; ಇದರಿಂದಾಗಿ ಅವನ ಮರಣವಾಯಿತು (ವನ 135/53).

(2) ಒಬ್ಬ ಬ್ರಾಹ್ಮಣ ಬಾಲಕ. ಇವನು ತಂದೆಗೆ ಜ್ಞಾನೋಪದೇಶ ಮಾಡಿದನು (ಶಾಂತಿ 175/9–38). ಇವನ ಮೂಲಕ ತಂದೆಗೆ ಶರೀರ ಮತ್ತು ಪ್ರಪಂಚದ ಅನಿತ್ಯತೆಯ ಉಪದೇಶ (ಶಾಂತಿ 377).

**ಮೇಧ್ಯಾ** – ಪಶ್ಚಿಮದಿಕ್ಕಿನ ಒಂದು ಪುಣ್ಯಮಯ ತೀರ್ಥ (ವನ 89/15). ಈ ನದಿ ಅಗ್ನಿಯ ಉತ್ಪತ್ತಿ ಸ್ಥಾನವೆಂದು ತಿಳಿಯಲ್ಪಟ್ಟಿದೆ (ವನ 222/23). ಸಾಯಂಪ್ರಾತಃಕಾಲಗಳಲ್ಲಿ ಸ್ಮರಿಸಲು ಯೋಗ್ಯವಾದ ನದಿಗಳಲ್ಲಿ ಇದರ ಹೆಸರೂ ಬಂದಿದೆ (ಅನು 165/26).

**ಮೇನಕಾ** – ಸ್ವರ್ಗಲೋಕದ ಒಬ್ಬ ಶ್ರೇಷ್ಠ ಅಪ್ಸರೆ. ಇವಳು ಗಂಧರ್ವರಾಜ ವಿಶ್ವಾವಸುವಿನಿಂದ ಗರ್ಭಧಾರಣೆ ಮಾಡಿದಳು. ಸ್ಥೂಲಕೇಶ ಋಷಿಯ ಹತ್ತಿರ ತನ್ನ ಪುತ್ರಿ ಪ್ರಮದ್ವರೆಗೆ ಜನ್ಮವನ್ನಿತ್ತು, ಅಲ್ಲಿಯೇ ಬಿಟ್ಟುಹೋದಳು (ಆದಿ 8/6–7). ಇವಳ ಗರ್ಭದಿಂದ ವಿಶ್ವಾಮಿತ್ರನ ಮೂಲಕ ಶಕುಂತಲೆಯ ಜನನವಾಯಿತು (ಆದಿ 72/2–9). ಇವಳು ಪ್ರಧಾನ ಆರು ಮಂದಿ ಅಪ್ಸರೆಯರಲ್ಲಿ ಗಣಿಸಲ್ಪಟ್ಟಿದ್ದಾಳೆ (ಆದಿ 74/68–69). ಅರ್ಜುನನ ಜನ್ಮೋತ್ಸವದಲ್ಲಿ ಇವಳು ಗಾಯನ ಮಾಡಿದ್ದಳು (ಆದಿ 122/64). ಇವಳು ಕುಬೇರ ಸಭೆಯಲ್ಲಿರುತ್ತಾಳೆ (ಸಭಾ 10/10). ಇವಳು ಅರ್ಜುನನ ಸ್ವಾಗತಕ್ಕಾಗಿ ಇಂದ್ರಸಭೆಯಲ್ಲಿ ನೃತ್ಯ ಮಾಡಿದ್ದಳು (ವನ 43/29).

**ಮೇನಾ** – ಭಾರತ ವರ್ಷದ ಒಂದು ನದಿ.

ಇದರ ಜಲವನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/23).

**ಮೇರು** – ಸ್ವರ್ಣಮಯ ಶಿಖರಗಳಿಂದ ಶೋಭಾಯಮಾನವಾದ ಒಂದು ದಿವ್ಯ ಪರ್ವತ. ಇದು ಮೇಲಿಂದ ಕೆಳಗಿನವರೆಗೂ ಚಿನ್ನದ್ದೆಂದು ತಿಳಿಯಲ್ಪಡುತ್ತದೆ. ಇದು ತೇಜಸ್ಸಿನ ಮಹಾರಾಶಿ. ಇದು ತನ್ನ ಶಿಖರಗಳಿಂದ ಸೂರ್ಯನ ಪ್ರಭೆಯನ್ನು ತಿರಸ್ಕೃತಗೊಳಿಸುತ್ತದೆ. ಇದರ ಮೇಲೆ ದೇವತೆಗಳೂ, ಗಂಧರ್ವರೂ ವಾಸಿಸುತ್ತಾರೆ. ಇದರ ಯಾವ ಅಳತೆಯೂ ಇಲ್ಲ. ಮೇರುವಿನ ಮೇಲೆ ಎಲ್ಲಾ ಕಡೆ ಭಯಂಕರ ಸರ್ಪಗಳು ತುಂಬಿಕೊಂಡಿವೆ. ದಿವ್ಯ ಔಷಧಿಗಳು ಇದನ್ನು ಪ್ರಕಾಶಮಾನವಾಗಿಡುತ್ತವೆ. ಈ ಮಹಾಪರ್ವತವು ತನ್ನ ಔನ್ನತ್ಯದಿಂದ ಸ್ವರ್ಗಲೋಕವನ್ನು ಆಕ್ರಮಿಸಿ ನಿಂತಿದೆ. ಇಲ್ಲಿ ಒಂದು ಕಾಲದಲ್ಲಿ ದೇವತೆಗಳೆಲ್ಲಾ ಅಮೃತ ಪ್ರಾಪ್ತಿಗೋಸ್ಕರ ಸಮಾಲೋಚನೆ ಮಾಡಿದ್ದರು. ಈ ಪರ್ವತದ ಮೇಲೆ, ಅಸುರರೂ, ದೇವತೆಗಳೂ ಸೇರಿ ಮಹಾಸಾಗರವನ್ನು ಮಥನ ಮಾಡಿದರೆ ಅಮೃತ ಪ್ರಕಟವಾದೀತೆಂದು ಭಗವಂತನಾದ ನಾರಾಯಣನು ಬ್ರಹ್ಮನಲ್ಲಿ ಹೇಳಿದ್ದನು (ಆದಿ 17/5–13). ಇದೇ ಮೇರುಪರ್ವತದ ಬದಿಯಲ್ಲಿ ವಸಿಷ್ಠರ ಆಶ್ರಮವಿದೆ (ಆದಿ 99/6). ಈ ಪರ್ವತವು ತನ್ನ ಚಿನ್ಮಯಸ್ವರೂಪದಿಂದ ಕುಬೇರನ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತದೆ (ಸಭಾ 10/33). ಈ ಪರ್ವತ ಇಲಾವೃತ ಖಂಡದ ಮಧ್ಯದಲ್ಲಿದೆ. ಮೇರುವಿನ ಸುತ್ತಲೂ, ಮಂಡಲಾಕಾರದಲ್ಲಿ ಇಲಾವೃತ ವರ್ಷವು ನೆಲಸಿದೆ. ದಿವ್ಯವಾದ ಸುವರ್ಣಮಯ ಮಹಾಮೇರು ಪರ್ವತದಲ್ಲಿ ನಾಲ್ಕು ರೀತಿಯ ಬಣ್ಣಗಳು ಕಾಣಲ್ಪಡುತ್ತವೆ. ಇಲ್ಲಿವರೆಗೆ ತಲುಪುವುದು ಎಲ್ಲರಿಗೂ ಅತ್ಯಂತ ಕಠಿನವಾಗಿದೆ. ಇದರ ಉದ್ದ ಒಂದು ಲಕ್ಷ ಯೋಜನವಿದೆ. ಇದರ ದಕ್ಷಿಣಭಾಗದಲ್ಲಿ ವಿಶಾಲವಾದ ಜಂಬೂ ವೃಕ್ಷವಿದೆ. ಆದುದರಿಂದ ಈ ವಿಶಾಲದ್ವೀಪವನ್ನು ಜಂಬೂದ್ವೀಪವೆನ್ನುತ್ತಾರೆ (ಸಭಾ 28/6). ಅತ್ಯಂತ ಪ್ರಕಾಶಮಾನವಾದ ಮಹಾಮೇರು ಪರ್ವತ ಉತ್ತರದಿಕ್ಕನ್ನು ಪ್ರಕಾಶಗೊಳಿಸುತ್ತಾ ನಿಂತಿದೆ. ಇದರ ಮೇಲೆ ಬ್ರಹ್ಮಜ್ಞಾನಿಗಳು ಮಾತ್ರ ಹೋಗಲು ಸಾಧ್ಯವಿದೆ. ಈ ಪರ್ವತದ ಮೇಲೆಯೇ ಬ್ರಹ್ಮನ ಸಭೆಯಿದೆ. ಇಲ್ಲಿ ಸಮಸ್ತ ಪ್ರಾಣಿಗಳ ಸೃಷ್ಟಿ ಮಾಡುತ್ತಾ ಬ್ರಹ್ಮನು ವಾಸಿಸುತ್ತಾನೆ. ಬ್ರಹ್ಮನ ಮಾನಸಪುತ್ರರ ನಿವಾಸ ಸ್ಥಾನವೂ ಮೇರುಪರ್ವತವೇ ಆಗಿದೆ. ವಸಿಷ್ಠಾದಿ ಸಪ್ತರ್ಷಿಗಳೂ ಇಲ್ಲಿಯೇ ಪ್ರಸನ್ನರೂ, ಪ್ರತಿಷ್ಠಿತರೂ ಆಗಿರುತ್ತಾರೆ. ಮೇರುವಿನ ಉತ್ತಮ ಶಿಖರ ರಜೋಗುಣರಹಿತವಾಗಿದೆ. ಇದರ ಮೇಲೆ ಆತ್ಮತೃಪ್ತ ದೇವತೆಗಳೊಂದಿಗೆ ಪಿತಾಮಹ ಬ್ರಹ್ಮನಿರುತ್ತಾನೆ. ಇಲ್ಲಿ ಬ್ರಹ್ಮಲೋಕದಿಂದಲೂ ಎತ್ತರದಲ್ಲಿ ಶ್ರೀಮನ್ನಾರಾಯಣನ ಉತ್ತಮ ಸ್ಥಾನ ಪ್ರಕಾಶ ಮಾನವಾಗಿದೆ. ಪರಮಾತ್ಮ ವಿಷ್ಣುವಿನ ಈ ಧಾಮ ಸೂರ್ಯ ಮತ್ತು ಅಗ್ನಿಗಳಿಗಿಂತಲೂ ಹೆಚ್ಚು ತೇಜಸ್ವಿಯಾಗಿದೆ. ಮತ್ತು ತನ್ನದೇ ಪ್ರಭೆಯಿಂದ ಪ್ರಕಾಶಮಾನವಾಗಿದೆ. ಪೂರ್ವ ದಿಕ್ಕಿನಲ್ಲಿ ಮೇರುಪರ್ವತದ ಮೇಲೆಯೇ ಭಗವಾನ್ ನಾರಾಯಣನ ಸ್ಥಾನ ಶೋಭಾಯಮಾನವಾಗಿದೆ. ಇಲ್ಲಿಗೆ ಪ್ರಯತ್ನಶೀಲರೂ, ಜ್ಞಾನಿಗಳೂ ಆದ ಮಹಾತ್ಮರಿಗೆ ಮಾತ್ರ ಹೋಗಲು ಸಾಧ್ಯವಾಗುತ್ತದೆ. ಆ ನಾರಾಯಣ ಧಾಮದಲ್ಲಿ ಬ್ರಹ್ಮರ್ಷಿಗಳಿಗೇ ಸಂಚಾರವಿಲ್ಲ; ಮಹರ್ಷಿಗಳಿಗಂತೂ ಹೇಗೆ ಸಾಧ್ಯವಾದೀತು? ಭಕ್ತಿಯ ಪ್ರಭಾವದಿಂದ ಯತ್ನಶೀಲರಾದ ಮಹಾತ್ಮರು, ಇಲ್ಲಿ ಭಗವಾನ್ ನಾರಾಯಣನನ್ನು ಕಾಣುತ್ತಾರೆ. ಇಲ್ಲಿಗೆ ಹೋಗಿ ಮನುಷ್ಯ ಪುನಃ ಈ ಲೋಕಕ್ಕೆ ಹಿಂತಿರುಗುವುದಿಲ್ಲ. ಇದು ಪರಮೇಶ್ವರನ ಅವಿನಾಶಿ ಮತ್ತು ಅವಿಕಾರಿ ಸ್ಥಾನವಾಗಿದೆ. ನಕ್ಷತ್ರಗಳ ಸಹಿತವಾಗಿ, ಸೂರ್ಯ ಚಂದ್ರರು ಪ್ರತಿದಿನ ನಿಶ್ಚಲವಾದ ಮೇರು ಪರ್ವತವನ್ನು ಪ್ರದಕ್ಷಿಣೆ ಮಾಡುತ್ತಾರೆ. ಅಸ್ತಾಚಲಕ್ಕೆ ಹೋಗಿ, ಸಂಧ್ಯಾಕಾಲದ ಗಡಿಯನ್ನು ಉತ್ತರಿಸಿ, ಭಗವಾನ್ ಸೂರ್ಯನು, ಉತ್ತರದಿಕ್ಕನ್ನು ಆಶ್ರಯಿಸುತ್ತಾನೆ; ಪುನಃ ಮೇರುಪರ್ವತವನ್ನು ಅನುಸರಿಸಿ, ಉತ್ತರ ದಿಕ್ಕಿನ ಎಲ್ಲೆಯತನಕ ತಲುಪಿ, ಸಮಸ್ತ ಪ್ರಾಣಿಗಳ ಹಿತದಲ್ಲಿ ತತ್ಪರನಾದ ಆತ, ಪುನಃ ಪೂರ್ವಾಭಿಮುಖನಾಗಿ ಹೋಗುತ್ತಾನೆ (ವನ 163/12–42). ಮಾಲ್ಯವಂತ ಮತ್ತು ಗಂಧಮಾದನವೆಂಬ ಎರಡು ಪರ್ವತಗಳ ಮಧ್ಯದಲ್ಲಿ, ಮಂಡಲಾಕಾರದಲ್ಲಿ ಸುವರ್ಣಮಯ ಮೇರುಪರ್ವತವಿದೆ. ಇದರ ಎತ್ತರ ಎಂಭತ್ತನಾಲ್ಕುಸಾವಿರ ಯೋಜನ

ವಿದೆ. ಕೆಳಗೆಯೂ ಎಂಭತ್ತನಾಲ್ಕು ಯೋಜನಗಳ ತನಕ ಭೂಮಿಯ ಒಳಗಡೆ ಹುದುಗಿಕೊಂಡಿದೆ. ಇದರ ಪಾರ್ಶ್ವ ಭಾಗದಲ್ಲಿ ನಾಲ್ಕು ದ್ವೀಪಗಳಿವೆ– ಭದ್ರಾಶ್ವ, ಕೇತುಮಾಲ, ಜಂಬೂದ್ವೀಪ ಮತ್ತು ಉತ್ತರ ಕುರು. ಈ ಪರ್ವತದ ಶಿಖರದ ಮೇಲೆ ಬ್ರಹ್ಮ, ರುದ್ರ, ಇಂದ್ರರು, ಒಟ್ಟಾಗಿ ನಾನಾ ರೀತಿಯ ಯಜ್ಞಗಳನ್ನು ಸಾಂಗಗೊಳಿಸುತ್ತಾರೆ. ಆ ಸಮಯದಲ್ಲಿ ತುಂಬುರು, ನಾರದ, ವಿಶ್ವಾವಸು ಮೊದಲಾದ ಗಂಧರ್ವರು ಇಲ್ಲಿ ಬಂದು, ಇದರ ಸ್ತುತಿಮಾಡುತ್ತಾರೆ. ಮಹಾತ್ಮರಾದ ಸರ್ಪರ್ಷಿಗಣ ಮತ್ತು ಪ್ರಜಾಪತಿ ಕಶ್ಯಪ, ಪ್ರತಿಯೊಂದು ಪರ್ವ ದಿನದಂದು, ಈ ಪರ್ವತಕ್ಕೆ ಆಗಮಿಸುತ್ತಾರೆ. ದೈತ್ಯರ ಸಹಿತನಾಗಿ ಶುಕ್ರಾಚಾರ್ಯನು ಮೇರು ಶಿಖರದಲ್ಲಿಯೇ ವಾಸಿಸುತ್ತಾನೆ. ಇಲ್ಲಿರುವ ಎಲ್ಲಾ ರತ್ನ ಮತ್ತು ರತ್ನಮಯ ಪರ್ವತಗಳು ಅವನ ಅಧಿಕಾರದಲ್ಲೇ ಇವೆ. ಕುಬೇರನು ಅವನಿಂದ ಐಶ್ವರ್ಯದ ಕಾಲಂಶವನ್ನು ಪಡಕೊಂಡು, ಸದು ಪಯೋಗಪಡಿಸುತ್ತಾನೆ. ಸುಮೇರು ಪರ್ವತದ ಉತ್ತರಭಾಗದಲ್ಲಿ ದಿವ್ಯವೂ, ರಮಣೀಯವೂ ಆದ ಕರ್ಣಿಕಾರ ವನವಿದೆ. ಅಲ್ಲಿ ಭಗವಾನ್ ಶಂಕರನು ಬೆಟ್ಟದಾವರೆ(ಕನೇರ)ಯ ದಿವ್ಯಮಾಲೆ ಯನ್ನು ಧರಿಸಿ, ಭಗವತಿ ಉಮೆಯೊಂದಿಗೆ ವಿಹರಿಸುತ್ತಾನೆ. ಈ ಪರ್ವತದ ಶಿಖರದಿಂದ, ಹಾಲಿನ ಸಮಾನವಾದ ಶ್ವೇತಧಾರೆಯುಳ್ಳ, ಪುಣ್ಯ ಮಯಿ ಭಾಗೀರಥೀ ಗಂಗೆ ಬಹಳ ವೇಗವಾಗಿ ಚಂದ್ರಹ್ರದಕ್ಕೆ ಧುಮುಕುತ್ತದೆ. ಮೇರುವಿನ ಪಶ್ಚಿಮಕ್ಕೆ ಕೇತುಮಾಲ ವರ್ಷವಿದೆ. ಅಲ್ಲಿ ಜಂಬೂಖಂಡವೆಂಬ ಪ್ರದೇಶವಿದೆ. ಅಲ್ಲಿ ವಾಸಿಸು ವವರ ಆಯುಸ್ಸು ಹತ್ತು ಸಾವಿರ ವರ್ಷಗಳಾ ಗಿವೆ. ಅಲ್ಲಿರುವ ಪುರುಷರು ಸುವರ್ಣದಂತೆ ಕಾಂತಿವಂತರೂ, ಸ್ತ್ರೀಯರು ಅಪ್ಸರೆಯರಂತೆ ಸುಂದರಿಯರೂ ಆಗಿರುತ್ತಾರೆ. ಅವರಿಗೆ ಎಂದೂ ರೋಗ–ಶೋಕಗಳಿರುವುದಿಲ್ಲ. ಅವರ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ (ಭೀಷ್ಮ 6/10–33). ಪರ್ವತಗಳ ಮೂಲಕ ಪೃಥ್ವಿಯ ಹಾಲು ಹಿಂಡು ವಾಗ, ಈ ಮೇರು ಹಾಲು ಕರೆಯುವವ ನಾಗಿದ್ದನು (ದ್ರೋಣ 69/18). ತ್ರಿಪುರದಹನಕ್ಕೆ ಹೋಗುತ್ತಿದ್ದ ಭಗವಾನ್ ಶಿವನು ಮೇರು ಪರ್ವತವನ್ನು, ತನ್ನ ರಥದ ಧ್ವಜದಂಡವಾಗಿ ಮಾಡಿದ್ದನು (ದ್ರೋಣ 202/78). ಮೇರು ಸ್ಕಂದನಿಗೆ ಕಾಂಚನ ಮತ್ತು ಮೇಘಮಾಲಿ ಎಂಬ ಇಬ್ಬರು ಪಾರ್ಷದರನ್ನು ಕೊಟ್ಟಿದ್ದನು (ಶಲ್ಯ 45/48–49). ಇವನು ಪೃಥುವಿಗೆ ಸುವರ್ಣರಾಶಿ ಯನ್ನು ಕೊಟ್ಟಿದ್ದನು (ಶಾಂತಿ 59/1–9). ಇವನು ಪರ್ವತಗಳ ರಾಜನಾಗಿ ಮಾಡಲ್ಪಟ್ಟಿದ್ದನು (ಶಾಂತಿ 222/28). ವ್ಯಾಸನು ತನ್ನ ಶಿಷ್ಯರೊಂದಿಗೆ ಮೇರುಪರ್ವತದ ಮೇಲೆ ವಾಸಿಸುತ್ತಾನೆ (ಶಾಂತಿ 341/22–23). ಸ್ಥೂಲಶಿರ ಮತ್ತು ವಡವಾ ಮುಖರು ಇಲ್ಲಿ ತಪಸ್ಸು ಮಾಡಿದ್ದರು (ಶಾಂತಿ 342/59–60).

**ಮೇರುಪ್ರಭ** – ದ್ವಾರಕಾಪುರದ ದಕ್ಷಿಣದಲ್ಲಿರುವ, ಲತಾವೇಷ್ಟ ಪರ್ವತವನ್ನು ಸುತ್ತುವರಿದು ಶೋಭಾಯಮಾನವಾಗಿರುವ ಮೂರು ವನಗಳಲ್ಲಿ ಒಂದು. ಉಳಿದ ಎರಡು ತಾಲವನ ಮತ್ತು ಪುಷ್ಪಕವನಗಳಾಗಿದ್ದವು. ಈ ಮಹಾವನ ತುಂಬಾ ಶೋಭೆಯಿಂದ ಕೂಡಿತ್ತು (ಸಭಾ 38/29).

**ಮೇರುಭೂತ** – ಒಂದು ಭಾರತೀಯ ಜನಪದ (ಭೀಷ್ಮ 9/48).

**ಮೇರುವ್ರಜ** – ಒಂದು ನಗರ. ಇದು ರಾಕ್ಷಸರಾಜ ವಿರೂಪಾಕ್ಷನ ರಾಜಧಾನಿಯಾಗಿತ್ತು (ಶಾಂತಿ 170/19).

**ಮೇರುಸಾವರ್ಣಿ (ಮೇರುಸಾವರ್ಣ)** – ಒಬ್ಬ ಋಷಿ. ಇವನು ಹಿಮಾಲಯದಲ್ಲಿ ಯುಧಿಷ್ಠಿರನಿಗೆ ಧರ್ಮ ಮತ್ತು ಜ್ಞಾನದ ಉಪದೇಶ ಮಾಡಿದನು (ಸಭಾ 78/14). ಇವನು ದೊಡ್ಡ ತಪಸ್ವೀ, ಜಿತೇಂದ್ರಿಯ ಮತ್ತು ಲೋಕಗಳಲ್ಲಿ ವಿಖ್ಯಾತ ನಾಗಿದ್ದನು (ಅನು 150/44–45).

**ಮೇಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ಮೇಷಹೃತ್** – ಗರುಡನ ಪ್ರಮುಖ ಸಂತಾನ ಗಳಲ್ಲಿ ಒಬ್ಬ (ಉದ್ಯೋಗ 101/12).

**ಮೈತ್ರ** – (1) ಒಂದು ಜಾತಿಯ ರಾಕ್ಷಸರು. ಇವರನ್ನು ಎದುರಿಸಲು ಸಿದ್ಧನಿರುವಂತೆ, ಯುಧಿ ಷ್ಠಿರನಿಗೆ ಲೋಮಶಮುನಿಯ ಪ್ರೇರಣೆಯಾಯಿತು. (2) ಒಂದು ಮುಹೂರ್ತ. ಇದರಲ್ಲಿ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಯಾತ್ರೆ ಪ್ರಾರಂಭಿಸಿದ್ದನು (ಉದ್ಯೋಗ 83/6).

(3) ಅನುರಾಧಾನಕ್ಷತ್ರ. ಈ ದಿನ ಕೃತವರ್ಮನು

ದುರ್ಯೋಧನನ ಪಕ್ಷ ಸ್ವೀಕರಿಸಿದನು (ಶಲ್ಯ 35/14).

(4). ಕನಕ ಅಥವಾ ಸುವರ್ಣ (ಅನು 85/113).

**ಮೈತ್ರೇಯ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10). ಧೃತರಾಷ್ಟ್ರ ಮತ್ತು ದುರ್ಯೋಧನ ರೊಡನೆ, ಪಾಂಡವರ ಬಗೆಗೆ ಸದ್ಭಾವವನ್ನು ಇರಿಸಿಕೊಳ್ಳುವಂತೆ ಇವನ ಒತ್ತಾಯ (ವನ 10/11–27). ಇವನಿಂದ ದುರ್ಯೋಧನನಿಗೆ ಶಾಪ (ವನ 10/34). ಹಸ್ತಿನಾವತಿಗೆ ಹೋಗು ವಾಗ, ಹಾದಿಯಲ್ಲಿ ಶ್ರೀಕೃಷ್ಣನೊಡನೆ ಇವನ ಭೇಟಿ (ಉದ್ಯೋಗ 83/67). ಶರಶಯ್ಯೆಯಲ್ಲಿದ್ದ ಭೀಷ್ಮನ ಬಳಿಗೆ ಇವನೂ ಹೋಗಿದ್ದನು (ಶಾಂತಿ 47/6). ವ್ಯಾಸರೊಂದಿಗೆ ಧರ್ಮದ ಕುರಿತು ಈತನ ಪ್ರಶ್ನೋತ್ತರ (ಅನು 120ರಿಂದ 122).

**ಮೈನಸಿಲ** – ಒಂದು ಪರ್ವತೀಯ ಲೋಹ. ಇದು ಕೆಂಪಾಗಿರುತ್ತದೆ (ವನ 158/94).

**ಮೈನಾಕ** – (1) ಕೈಲಾಸ ಪರ್ವತದ ಉತ್ತರ ದಿಕ್ಕಿನಲ್ಲಿರುವ ಒಂದು ಪರ್ವತ. ಇದರ ಸಮೀಪವೇ ಬಿಂದುಸರೋವರವಿದೆ. ಇಲ್ಲಿ ರಾಜಾ ಭಗೀರಥನು, ಗಂಗಾವತರಣಕ್ಕಾಗಿ, ಅನೇಕ ವರ್ಷಗಳ ವರೆಗೆ ತಪಸ್ಸು ಮಾಡಿದ್ದನು (ಸಭಾ 3/9–11). ಪಾಂಡವರು ಉತ್ತರಾಖಂಡದ ಯಾತ್ರಾಕಾಲದಲ್ಲಿ, ಈ ಪರ್ವತವನ್ನು ದಾಟಿ ಮುಂದೆ ಹೋಗಿದ್ದರು (ವನ 139/1). ಬಿಂದು ಸರೋವರದ ಸಮೀಪವಿರುವ ಮೈನಾಕ ಪರ್ವತ ಸುವರ್ಣಮಯ ಶಿಖರಗಳಿಂದ ಶೋಭಾಯ ಮಾನವಾಗಿದೆ (ವನ 145/44). ಪಾಂಡವರಿಂದ ಮೈನಾಕದರ್ಶನ (ವನ 158/17). ಕೈಲಾಸದಿಂದ ಉತ್ತರದಲ್ಲಿ ಇದರ ಸ್ಥಿತಿಯ ವರ್ಣನೆ (ಭೀಷ್ಮ 6/42).

(2) ಪಶ್ಚಿಮ ದಿಕ್ಕಿನ ತೀರ್ಥಮೂಲವಾದ ಒಂದು ಪರ್ವತ ಇದು ವೈಡೂರ್ಯ ಶಿಖರದ ಬಳಿ ನರ್ಮದಾ ದಡದಲ್ಲಿದೆ (ವನ 89/11). ಇಲ್ಲಿರುವ ತೀರ್ಥದ ಫಲ (ಅನು 25/59).

(3) ಕ್ರೌಂಚದ್ವೀಪದಲ್ಲಿ ಅಂಧಕಾರದ ಅನಂತರದ ಒಂದು ಪರ್ವತ (ಭೀಷ್ಮ 12/18).

**ಮೈಂದ** – ಒಬ್ಬ ವಾನರ ರಾಜ. ಇವನು ಕಿಷ್ಕಿಂಧೆಯೆಂಬ ಗುಹೆಯಲ್ಲಿರುತ್ತಿದ್ದನು. ದಕ್ಷಿಣ ದಿಗ್ವಿಜಯ ಕಾಲದಲ್ಲಿ, ಸಹದೇವನು ಏಳು ದಿನಗಳ ಕಾಲ ಹೋರಾಡಿದರೂ, ಇವನನ್ನು ಸೋಲಿಸಲು ಸಾಧ್ಯವಾಗಲಿಲ್ಲ. ಆಗ ಮೈಂದನೇ ಸ್ವತಃ ಪ್ರಸನ್ನನಾಗಿ ಎಲ್ಲಾ ಬಗೆಯ ರತ್ನಗಳನ್ನು ಕಾಣಿಕೆಕೊಟ್ಟನು ಮತ್ತು 'ಹೋಗು, ಬುದ್ಧಿವಂತ ನಾದ ಯುಧಿಷ್ಠಿರನ ಕಾರ್ಯಕ್ಕೆ ಯಾವ ವಿಘ್ನವೂ ಆಗಬಾರದು' ಎಂದು ಹೇಳಿದನು (ಸಭಾ 31/18). ಇವನು ವಾನರ ರಾಜ ಸುಗ್ರೀವನ ಮಂತ್ರಿಯಾಗಿದ್ದನು. ಮತ್ತು ಮಹಾ ಮನಸ್ವಿಯೂ ಬುದ್ಧಿವಂತನೂ, ಬಲವಂತನೂ ಆಗಿದ್ದನು (ವನ 280/23). ಶ್ರೀರಾಮಚಂದ್ರನ ಕಾರ್ಯಮಾಡುವುದಕ್ಕೋಸ್ಕರ ಹೋಗುತ್ತಿದ್ದ ವಿಶಾಲ ವಾನರ ಸೇನೆಯ ರಕ್ಷಕರಲ್ಲಿ ಇವನೂ ಒಬ್ಬನಾಗಿದ್ದನು (ವನ 283/19). ಮಾಯೆ ಯಿಂದ ಅದೃಶ್ಯವಾದ ಪ್ರಾಣಿಗಳನ್ನು ಕೂಡ, ಪ್ರತ್ಯಕ್ಷ ತೋರಿಸುವ ಶಕ್ತಿಯುಳ್ಳ, ಕುಬೇರನಿಂದ ಕಳುಹಿಸಲ್ಪಟ್ಟ ಜಲದಿಂದ ಇವನೂ ತನ್ನ ಕಣ್ಣುಗಳನ್ನು ತೊಳೆದಿದ್ದನು (ವನ 289/10–13).

**ಮೋಕ್ಷಧರ್ಮಪರ್ವ** – ಶಾಂತಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 174 ರಿಂದ 365).

**ಮೋದಾಕೀ** – ಕೇಸರ ಪರ್ವತದ ಬಳಿಯಿರುವ ಶಾಕದ್ವೀಪದ ಒಂದು ದೇಶ (ಭೀಷ್ಮ 11/26).

**ಮೋದಾಗಿರಿ** – ಒಂದು ದೇಶ. ಇಲ್ಲಿರುವ ರಾಜನನ್ನು ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಕೊಂದುಕೆಡಹಿದ್ದನು (ಸಭಾ 30/31).

**ಮೋದಾಪುರ** – ಒಂದು ನಗರ. ಇಲ್ಲಿರುವ ರಾಜನನ್ನು ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನನು ಸೋಲಿಸಿದ್ದನು (ಸಭಾ 27/11).

**ಮೋಹನ** – ಒಂದು ಜನಪದ. ಇದನ್ನು ಕರ್ಣನು ಗೆದ್ದಿದ್ದನು (ವನ 254/10).

**ಮೌಂಜಾಯನ** – ಒಬ್ಬ ಋಷಿ. ಇವನು ಯುಧಿ ಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 41/13). ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನೊಡನೆ ಇವನ ಭೇಟಿ (ಉದ್ಯೋಗ 83/64).

**ಮೌರ್ವೀ** – ಒಂದು ಜಾತಿಯ ಹುಲ್ಲು. ಇದ ರಿಂದ ಮೇಖಲೆ ತಯಾರಿಸಲ್ಪಡುತ್ತದೆ (ದ್ರೋಣ 17/23).

**ಮೌಸಲಪರ್ವ** – ಮಹಾಭಾರತದ ಒಂದು

ಪ್ರಧಾನ ಪರ್ವ.

**ಮ್ಲೇಚ್ಛ** – ಒಂದು ಜಾತಿ ಮತ್ತು ದೇಶ. ನಂದಿನಿ ಹಸುವಿನ ನೊರೆಯಿಂದ ಮ್ಲೇಚ್ಛ ಜಾತಿಯ ಸೃಷ್ಟಿಯಾಯಿತು. ಈ ಮ್ಲೇಚ್ಛ ಸೈನಿಕರು ವಿಶ್ವಾಮಿತ್ರನ ಸೇನೆಯನ್ನು ನಷ್ಟಭ್ರಷ್ಟಗೊಳಿಸಿದರು (ಆದಿ 174/38–40). ಭೀಮಸೇನನು ಸಮುದ್ರ ದಡದ ಮ್ಲೇಚ್ಛರನ್ನೂ, ಅವರ ಅಧಿಪತಿಗಳನ್ನೂ ಗೆದ್ದು, ಅವರಿಂದ ಕಪ್ಪದ ರೂಪದಲ್ಲಿ ತರತರದ ರತ್ನಗಳನ್ನು ಪಡೆದಿದ್ದನು (ಸಭಾ 30/25–27). ಸಮುದ್ರದ ದ್ವೀಪಗಳಲ್ಲಿ ವಾಸಿಸುವ ಮ್ಲೇಚ್ಛ ರಾಜರನ್ನು ಮಾದ್ರಿಕುಮಾರ ಸಹದೇವನು ಸೋಲಿಸಿದ್ದನು (ಸಭಾ 31/66). ನಕುಲನೂ ಅವರನ್ನು ಗೆದ್ದಿದ್ದನು (ಸಭಾ 32/16). ಸಮುದ್ರದ ದ್ವೀಪಗಳಲ್ಲಿ ವಾಸಿಸುವ ಮ್ಲೇಚ್ಛರೊಂದಿಗೆ, ರಾಜಾಭಗದತ್ತನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಆಗಮಿಸಿದ್ದನು (ಸಭಾ 34/10). ಮ್ಲೇಚ್ಛರ ಒಡೆಯನಾದ ಭಗದತ್ತ ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನಲ್ಲಿಗೆ ಬಂದಿದ್ದನು (ಸಭಾ 51/14). ಪ್ರಲಯದ ಪೂರ್ವರೂಪ ಪ್ರಾರಂಭವಾಗುವಾಗ, ಈ ಪೃಥ್ವಿಯಲ್ಲಿ ಅನೇಕ ಮ್ಲೇಚ್ಛರಾಜರು ರಾಜ್ಯಭಾರ ಮಾಡಲು ತೊಡಗು ತ್ತಾರೆ (ವನ 188/34). ವಿಷ್ಣುಯಶಾ ಕಲ್ಕಿ ಭೂಮಂಡಲದಲ್ಲಿ ಸರ್ವತ್ರ ಹರಡಿರುವ ಮ್ಲೇಚ್ಛ ರನ್ನು ಸಂಹರಿಸುವನು (ವನ 190/97). ಕರ್ಣನು ತನ್ನ ದಿಗ್ವಿಜಯದಲ್ಲಿ ಮ್ಲೇಚ್ಛ ರಾಜ್ಯಗಳನ್ನು ಗೆದ್ದಿದ್ದನು (ವನ 254/19–21). ಭಾರತೀಯ ಜನಪದವೊಂದರ ಹೆಸರು ಮ್ಲೇಚ್ಛವೆಂದಿದೆ (ಭೀಷ್ಮ 9/57). ಮ್ಲೇಚ್ಛಜಾತಿಯವನಾದ ಅಂಗ ಭೀಮಸೇನನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು (ದ್ರೋಣ 26/17). ನಂದಿನಿ ಗೋವಿನಿಂದ ಹುಟ್ಟಿದ ಮ್ಲೇಚ್ಛರು, ಅರ್ಜುನನ ಮೇಲೆ ಹರಿತವಾದ ಬಾಣಗಳ ಮಳೆಗರೆಯುತ್ತಿದ್ದರು; ಆದರೆ ಅರ್ಜುನನು, ಮುಖದ ಮೇಲೆ ಗಡ್ಡ ತುಂಬಿದ ಆ ಎಲ್ಲಾ ಮ್ಲೇಚ್ಛರನ್ನು ಸಂಹಾರ ಮಾಡಿದನು (ದ್ರೋಣ 93/43–49). ವೀರ ಸಾತ್ಯಕಿಯಿಂದ, ರಣಭೂಮಿಯಲ್ಲಿ ಗಾಯ ಗೊಂಡು ನೂರಾರು ಮ್ಲೇಚ್ಛರು ಪ್ರಾಣಕಳ ಕೊಂಡರು (ದ್ರೋಣ 119/43). ಮ್ಲೇಚ್ಛರು ಪಾಂಡವ ಸೇನೆಯ ಮೇಲೆ ಅತ್ಯಂತ ಕ್ರೋಧ ಗೊಂಡ ಗಜರಾಜರನ್ನು ಮುನ್ನುಗ್ಗಿಸಿದ್ದರು (ಕರ್ಣ 22/10). ಮ್ಲೇಚ್ಛ ಜಾತಿಯ ಅಂಗರಾಜ, ಪಾಂಡುಕುಮಾರ ನಕುಲನ ಮೂಲಕ ಕೊಲ್ಲ ಲ್ಪಟ್ಟನು (ಕರ್ಣ 22/18). ಮ್ಲೇಚ್ಛ ಸೈನಿಕರು ದುರ್ಯೋಧನನ ಸಹಾಯಕ್ಕೋಸ್ಕರ, ಆವೇಶ ಭರಿತರಾಗಿ ಹೋರಾಡುತ್ತಿದ್ದರು. ಅರ್ಜುನನ ಹೊರತಾಗಿ ಇತರ ಯಾರಿಂದಲೂ ಅವರನ್ನು ಗೆಲ್ಲುವುದು ಅಸಂಭವವಾಗಿತ್ತು (ಕರ್ಣ 73/19–22). ಅರ್ಜುನನು ಅಶ್ವಮೇಧದ ಕುದುರೆಯನ್ನು ರಕ್ಷಿಸುವ ಕಾಲದಲ್ಲಿ ಅನೇಕ ಮ್ಲೇಚ್ಛ ಸೈನಿಕರನ್ನು ಎದುರಿಸಬೇಕಾಗಿ ಬಂತು (ಆಶ್ವ 73/25). ಯುಧಿಷ್ಠಿರನ ಯಜ್ಞಶಾಲೆಯಲ್ಲಿ, ಬ್ರಾಹ್ಮಣರು ತೆಗೆದುಕೊಂಡ ಬಳಿಕ ಉಳಿದಿದ್ದ ಧನವನ್ನು ಮ್ಲೇಚ್ಛಜಾತಿಯ ಜನರು ಎತ್ತಿಕೊಂಡು ಹೋದರು (ಆಶ್ವ 89/26).

## ಯ

**ಯಕೃಲ್ಲೋಮಾ** – ಒಂದು ಭಾರತೀಯ ಜನಪದ (ಭೀಷ್ಮ 9/46).

**ಯಕ್ಷ** – ದೇವತೆಗಳ ಒಂದು ವರ್ಗ ಅಥವಾ ಉಪದೇವತೆಗಳು. ಇವರು ವಿರಾಟ್ ಅಂಡ ದಿಂದ ಬ್ರಹ್ಮಾದಿ ದೇವತೆಗಳ ಸೃಷ್ಟಿಯ ಅನಂತರ ಜನಿಸಿದರೆಂದು ಹೇಳಲಾಗಿದೆ (ಆದಿ 1/35). ಶುಕದೇವನು ಯಕ್ಷರಿಗೆ ಮಹಾಭಾರತದ ಕಥೆ ಯನ್ನು ಹೇಳಿದ್ದನು (ಆದಿ 1/108). ಯಕ್ಷರು ಪುಲಸ್ತ್ಯ ಮುನಿಯ ಸಂತಾನವಾಗಿದ್ದಾರೆ (ಆದಿ 66/7). ಕುಬೇರಸಭೆಯಲ್ಲಿದ್ದುಕೊಂಡು, ಲಕ್ಷಾಂ ತರ ಯಕ್ಷರು ಆತನ ಉಪಾಸನೆ ಮಾಡುತ್ತಾರೆ (ಸಭಾ 10/18). ಬ್ರಹ್ಮಸಭೆಯಲ್ಲಿ ಇವರಿರುತ್ತಾ ರೆಂದು ಹೇಳಲಾಗಿದೆ (ಸಭಾ 11/56). ಕುಬೇರ ನಿಗೆ ಯಕ್ಷರರಾಜ ಪದವಿಯಲ್ಲಿ ಅಭಿಷೇಕಮಾಡ ಲಾಗಿತ್ತು (ವನ 111/10–11). ಭೀಮಸೇನನು ಯಕ್ಷರನ್ನೂ ರಾಕ್ಷಸರನ್ನೂ ಹೊಡೆದು ಓಡಿಸಿ ದ್ದನು (ವನ 160/57–58). ಸುಂದ ಉಪ ಸುಂದರು ಇವರನ್ನು ಪೀಡಿಸಿದ್ದರು; ಪರಾಜಯ ಗೊಳಿಸಿದ್ದರು (ವನ 208/7).

**ಯಕ್ಷಗ್ರಹ** – ಯಕ್ಷಸಂಬಂಧಿಯಾದ ಒಂದು

ಗ್ರಹ. ಇದರ ಬಾಧೆಯುಂಟಾದರೆ ಮನುಷ್ಯ ಹುಚ್ಚನಾಗುತ್ತಾನೆ (ವನ 230/53).

**ಯಕ್ಷಯುದ್ಧಪರ್ವ** – ವನಪರ್ವದ ಒಂದು ಅವಾಂತರಪರ್ವ (ಅಧ್ಯಾಯ 158ರಿಂದ 164).

**ಯಕ್ಷಿಣೀ** – ಒಬ್ಬ ದೇವಿ. ಈಕೆಯ ಪ್ರಸಾದ ರೂಪದ ನೈವೇದ್ಯ ಭಕ್ಷಣೆಯಿಂದ ಬ್ರಹ್ಮಹತ್ಯೆಯಿಂದಲೂ ಮುಕ್ತಿದೊರಕುತ್ತದೆ (ವನ 84/105).

**ಯಕ್ಷಿಣೀತೀರ್ಥ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಲೋಕ ವಿಖ್ಯಾತ ತೀರ್ಥ. ಇಲ್ಲಿಗೆ ಹೋಗುವುದರಿಂದ ಮತ್ತು ಸ್ನಾನಮಾಡುವುದರಿಂದ ಎಲ್ಲಾ ಕಾಮನೆಗಳೂ ಪೂರ್ಣವಾಗುತ್ತವೆ. ಇದು ಕುರುಕ್ಷೇತ್ರದ ವಿಖ್ಯಾತ ದ್ವಾರವಾಗಿದೆ. ಅದನ್ನು ಪ್ರದಕ್ಷಿಣೆ ಮಾಡಿ, ತೀರ್ಥಯಾತ್ರಿಕನಾದ ಮನುಷ್ಯ ಏಕಾಗ್ರಚಿತ್ತನಾಗಿ, ಪುಷ್ಕರ ತೀರ್ಥ ಸಮಾನವಾದ ಆ ತೀರ್ಥದಲ್ಲಿ ಸ್ನಾನಮಾಡಿ, ದೇವತೆ–ಪಿತೃಗಳ ಪೂಜೆ ಮಾಡಿದರೆ, ಅವನು ಕೃತಕೃತ್ಯನಾಗುತ್ತಾನೆ ಮತ್ತು ಅಶ್ವಮೇಧ ಯಜ್ಞದ ಫಲಪಡೆಯುತ್ತಾನೆ. ಉತ್ತಮ ಶ್ರೇಣಿಯ ಮಹಾತ್ಮನಾದ ಜಮದಗ್ನಿ ಪುತ್ರ ಪರಶುರಾಮನು ಈ ತೀರ್ಥವನ್ನು ನಿರ್ಮಿಸಿದ್ದನು (ವನ 83/23–25).

**ಯಕ್ಷ್ಮಾ** – ಒಂದು ರೋಗ. ಇದನ್ನು ಕ್ಷಯ ರೋಗ; ಜೀರ್ಣಜ್ವರವೆನ್ನುತ್ತಾರೆ. ಚಂದ್ರನ ಮೇಲೆ ಕೋಪಿಸಿಗೊಂಡು, ಪ್ರಜಾಪತಿ ದಕ್ಷನು ಆತನಿಗಾಗಿಯೇ ಈ ರೋಗವನ್ನು ಸೃಷ್ಟಿಸಿದ್ದನು (ಶಲ್ಯ 35/61–62).

**ಯಜ್ಞವಾಹ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

**ಯಜ್ಞಸೇನ** – ಪಾಂಚಾಲರಾಜ ಪೃಷತನ ಪುತ್ರ (ಆದಿ 130/42) (ನೋಡಿರಿ – ದ್ರುಪದ).

**ಯತಿ** – (1) ನಹುಷನ ಪ್ರಥಮ ಪುತ್ರ. ಯಯಾತಿಯ ಅಣ್ಣ (ಆದಿ 75/30). ಇವನು ಯೋಗಾಭ್ಯಾಸದಿಂದ ಬ್ರಹ್ಮಜ್ಞಾನಿಯಾಗಿದ್ದನು (ಆದಿ 75/31).

(2) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ಯಥಾವಾಸ** – ವಾನಪ್ರಸ್ಥನಾದ ಒಬ್ಬ ಋಷಿ. ಇವನು ವಾನಪ್ರಸ್ಥ ಧರ್ಮದ ಪಾಲನೆ ಹಾಗೂ ಪ್ರಸಾರ ಮಾಡಿ ಸ್ವರ್ಗಕ್ಕೆ ಹೋಗಿದ್ದನು (ಶಾಂತಿ 244/17).

**ಯದು** – (1) ರಾಜಾ ಯಯಾತಿಯ ಪ್ರಥಮ ಪುತ್ರ. ಇವನು ದೇವಯಾನಿಯ ಗರ್ಭದಿಂದ ಜನಿಸಿದ್ದನು (ಆದಿ 75/35; ಆದಿ 83/9). ಇವನು ತನ್ನ ತಂದೆಗೆ ಯೌವನವನ್ನು ಕೊಡಲು ಅಸ್ವೀಕಾರ ಮಾಡಿದುದು (ಆದಿ 75/43; ಆದಿ 84/5). ಯಯಾತಿಯು ಇವನ ಸಂತಾನದವರು ರಾಜ್ಯಾಧಿಕಾರದಿಂದ ವಂಚಿತರಾಗಲೆಂದು ಶಾಪ ಕೊಟ್ಟದ್ದು (ಆದಿ 84/9). ಯದುವಿನ ಸಂತಾನದವರೇ ಯಾದವರಾದರು (ಆದಿ 95/10). ಭಗವಂತನಾದ ನಾರಾಯಣನು ತನ್ನ ತಲೆಯಿಂದ ಎರಡು ಕೂದಲುಗಳನ್ನು ಕಿತ್ತನು; ಅವುಗಳಲ್ಲಿ ಒಂದು ಬಿಳಿ, ಇನ್ನೊಂದು ಕಪ್ಪಾಗಿತ್ತು. ಆ ಎರಡೂ ಕೂದಲುಗಳು ಯದುಕುಲದ ಇಬ್ಬರು ಸ್ತ್ರೀಯರಾದ ರೋಹಿಣಿ ಮತ್ತು ದೇವಕಿಯ ರೊಳಗೆ ಪ್ರವೇಶಮಾಡಿದವು. ರೋಹಿಣಿಯಿಂದ ಬಲರಾಮನು ಜನಿಸಿದನು; ಈತ ಭಗವಾನ್ ನಾರಾಯಣನ ಬಿಳಿಕೂದಲಿನ ರೂಪವಾಗಿದ್ದನು. ದೇವಕಿಯ ಗರ್ಭದಿಂದ ಕಪ್ಪು ಕೂದಲಿನ ಸ್ವರೂಪನಾದ, ಭಗವಾನ್ ಶ್ರೀಕೃಷ್ಣನ ಪ್ರಾದುರ್ಭಾವವಾಯಿತು (ಆದಿ 196/32–33). ಯದು ದೇವಯಾನಿಯ ಪುತ್ರ ಮತ್ತು ಶುಕ್ರಾಚಾರ್ಯರ ದೌಹಿತ್ರನಾಗಿದ್ದನು. ಇವನು ಬಲವಂತನೂ ಉತ್ತಮ ಪರಾಕ್ರಮಸಂಪನ್ನನೂ, ಯಾದವ ವಂಶದ ಪ್ರವರ್ತಕನೂ ಆಗಿದ್ದನು. ಇವನ ಬುದ್ಧಿ ತುಂಬಾ ಮಂದವಾಗಿತ್ತು. ಇವನು ಗರ್ವಾಂಧನಾಗಿ, ಸಮಸ್ತ ಕ್ಷತ್ರಿಯರನ್ನು ಅಪಮಾನಿಸಿದ್ದನು. ಇವನು ತಂದೆಯ ಆದೇಶವನ್ನು ಪಾಲಿಸುತ್ತಿರಲಿಲ್ಲ. ಸಹೋದರರನ್ನೂ, ತಂದೆಯನ್ನೂ ಅಪಮಾನಿಸುತ್ತಿದ್ದನು. ಆ ಕಾಲದಲ್ಲಿ ಭೂಮಂಡಲದಲ್ಲಿ ಯದುವೇ ಬಲಾಧಿಕನಾಗಿದ್ದನು. ಈತ ಸಮಸ್ತ ರಾಜರನ್ನೂ ಸ್ವಾಧೀನಗೊಳಿಸಿ, ಹಸ್ತಿನಾವತಿಯಲ್ಲಿ ವಾಸಿಸುತ್ತಿದ್ದನು. ಇವನ ತಂದೆ ಯಯಾತಿ ಅತ್ಯಂತ ಕೋಪಿಷ್ಠನಾಗಿ ಇವನಿಗೆ ಶಾಪಕೊಟ್ಟನು ಮತ್ತು ರಾಜ್ಯಾಧಿಕಾರದಿಂದಲೂ ಇಳಿಸಿದನು. ಇವನನ್ನು ಅನುಸರಿಸಿದ ಸಹೋದರರಿಗೂ ತಂದೆಯಿಂದ ಶಾಪ ದೊರಕಿತು (ಉದ್ಯೋಗ 149/6–11). ಈ ಯದುವಿನ ವಂಶದಲ್ಲಿಯೇ ದೇವಮೀಢನೆಂಬ ಒಬ್ಬ ಪ್ರಖ್ಯಾತ ಯಾದವನಾದನು. ಅವನ ಪುತ್ರನ ಹೆಸರು ಶೂರನೆಂದಾ

ಗಿತ್ತು (ದ್ರೋಣ 144/6–7). ಯದುವಿನ ಪುತ್ರನ ಹೆಸರು ಕ್ರೋಷ್ಟಾ ಎಂದಾಗಿತ್ತು (ಅನು 147/28). (2) ಒಬ್ಬ ರಾಜಕುಮಾರ. ಈತ ಉಪರಿಚರ ವಸುವಿನ ಪುತ್ರ. ಅವನು ಯುದ್ಧದಲ್ಲಿ ಯಾರಿಂದಲೂ ಪರಾಜಿತನಾಗುತ್ತಿರಲಿಲ್ಲ (ಆದಿ 63/31).

**ಯಮ** – (1) ಸಮಸ್ತ ಪ್ರಾಣಿಗಳ ನಿಯಾಮಕನಾದ ಯಮರಾಜ. ಇವನು ಸೂರ್ಯನ ಪುತ್ರ ಮತ್ತು ಎಲ್ಲರ ಶುಭಾಶುಭಕರ್ಮಗಳ ಸಾಕ್ಷಿಯಾಗಿದ್ದಾನೆ (ಆದಿ 74/30; ಆದಿ 75/22). ಶೂದ್ರನಾಗಿ ಜನ್ಮವೆತ್ತುವಂತೆ ಮಾಂಡವ್ಯನಿಂದ ಇವನಿಗೆ ಶಾಪ (ಆದಿ 107/14–16). ದ್ರೌಪದೀ ಸ್ವಯಂವರ ನೋಡಲು ಇವನ ಆಗಮನ (ಆದಿ 186/6). ನೈಮಿಷಾರಣ್ಯದಲ್ಲಿ ಇವನ ಮೂಲಕ, ದೇವತೆಗಳ ಯಜ್ಞದಲ್ಲಿ ಶಾಮಿತ್ರ–ಕರ್ಮ–ಸಂಪಾದನೆ (ಆದಿ 196/1). ಖಾಂಡವವನದಹನ ಕಾಲದಲ್ಲಿ, ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ಯುದ್ಧ ಮಾಡಲು, ಇಂದ್ರನ ಕಡೆಯಿಂದ, ಇವನೂ ಕಾಲದಂಡವನ್ನು ಹಿಡಿದು ಬಂದಿದ್ದನು (ಆದಿ 226/32). ಇವನು ಒಂದು ಸಾವಿರ ವರ್ಷ ಕಳೆದಾಗ ಬಿಂದು ಸರೋವರದಲ್ಲಿ ಯಜ್ಞವನ್ನು ಅನುಷ್ಠಾನಗೊಳಿಸುತ್ತಾನೆ (ಸಭಾ 3/15). ನಾರದನಿಂದ ಇವನ ದಿವ್ಯಸಭೆಯ ವರ್ಣನೆ (ಸಭಾ 8). ಇವನು ಬ್ರಹ್ಮಸಭೆಯಲ್ಲಿ ವಿರಾಜಮಾನನಾಗಿರುತ್ತಾನೆ (ಸಭಾ 11/51). ಇವನಿಂದ ಅರ್ಜುನನಿಗೆ ದಂಡಾಸ್ತ್ರದ ದಾನ (ವನ 41/25). ದಮಯಂತೀ ಸ್ವಯಂವರದಲ್ಲಿ ಇವನಿಂದ ನಲರಾಜನಿಗೆ ವರಪ್ರದಾನ (57/37). ಸಾವಿತ್ರಿಗೆ ಅನೇಕ ವರಗಳನ್ನು ಕೊಟ್ಟ ಬಳಿಕ, ಈತ ಸತ್ಯವಾನನನ್ನು ಸಜೀವಗೊಳಿಸಿದುದು (ವನ 297/11–60). ಇಂದ್ರನು ಇವನನ್ನು ಪಿತೃಗಳ ರಾಜನಾಗಿ ಮಾಡಿದ್ದನು (ಉದ್ಯೋಗ 16/14). ಪಿತೃಗಳ ಮೂಲಕ, ಪೃಥ್ವಿ ದೋಹನ ಕಾಲದಲ್ಲಿ ಇವನು ಕರುವಾಗಿದ್ದನು (ದ್ರೋಣ 69/26). ತ್ರಿಪುರದಹನ ಕಾಲದಲ್ಲಿ ಈತ ಶಿವನ ಬಾಣದ ಪುಂಖಭಾಗದಲ್ಲಿ ಪ್ರತಿಷ್ಠಿತನಾಗಿದ್ದನು (ದ್ರೋಣ 202/77). ಇವನಿಂದ ಸ್ಕಂದನಿಗೆ ಉನ್ಮಾಥ ಮತ್ತು ಪ್ರಮಾಥರೆಂಬ ಇಬ್ಬರು ಪಾರ್ಷದರ ಕೊಡುಗೆ (ಶಲ್ಯ 45/30). ಗೌತಮ ಮಹರ್ಷಿಯೊಂದಿಗೆ ಇವನಿಂದ ಧರ್ಮದ ಕುರಿತು ಸಂವಾದ (ಶಾಂತಿ 129). ಇವನಿಂದ ಜಾಪಕ ಬ್ರಾಹ್ಮಣನಿಗೆ ವರದಾನ (ಶಾಂತಿ 199/30). ಇವನಿಗೆ ನಾರಾಯಣನಿಂದ ಶಿವ ಸಹಸ್ರನಾಮದ ಉಪದೇಶಸಿಕ್ಕಿತು; ಇವನು ನಚಿಕೇತನಿಗೆ ಇದರ ಉಪದೇಶವನ್ನಿತ್ತನು (ಅನು 17/178–179). ಶರ್ಮೀ ಎಂಬ ಬ್ರಾಹ್ಮಣನನ್ನು ತರುವಂತೆ, ತನ್ನ ದೂತರಿಗೆ ಈತನ ಆದೇಶ (ಅನು 68/6–9). ಬ್ರಾಹ್ಮಣನಿಗೆ ತಿಲ, ಜಲ ಮತ್ತು ಅನ್ನದಾನದ ಮಹಿಮೆಯನ್ನು ಹೇಳಿದುದು (ಅನು 68/16–22). ನಚಿಕೇತನೊಂದಿಗೆ ಸಂವಾದದಲ್ಲಿ, ಗೋದಾನಮಹಿಮೆಯನ್ನು ಹೇಳಿದುದು (ಅನು 71/18–56). ಇವನಿಂದ ಧರ್ಮರಹಸ್ಯದ ವರ್ಣನೆ (ಅನು 130/14–33). ಇವನ ಲೋಕದ ವರ್ಣನೆ (ಅನು 145). ಇವನು ಮುಂಜವಾನ್ ಪರ್ವತದ ಮೇಲೆ ಶಿವನ ಉಪಾಸನೆ ಮಾಡುತ್ತಾನೆ (ಆಶ್ವ 8/4–6).

(2) ವರುಣನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಅತಿಯಮ (ಶಲ್ಯ 45/54).

**ಯಮಕ** – ಒಂದು ದೇಶ ಮತ್ತು ಜಾತಿಯ ಜನರು. ಇಲ್ಲಿದ್ದ ರಾಜ, ರಾಜಕುಮಾರ ಮತ್ತು ನಿವಾಸಿಗಳು ಕೂಡ ಯುಧಿಷ್ಠಿರನ ಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 52/13–17).

**ಯಮದೂತ** – ಮಹರ್ಷಿ ವಿಶ್ವಾಮಿತ್ರರ ಬ್ರಹ್ಮವಾದಿಪುತ್ರರಲ್ಲಿ ಒಬ್ಬ (ಅನು 4/51).

**ಯಮುನಾ** – (ಸೂರ್ಯಪುತ್ರಿ ಯಮುನೆ. ಈಕೆ ಪರಮಪಾವನ ನದಿಯ ರೂಪದಲ್ಲಿ ವಿರಾಜಿಸುತ್ತಾಳೆ. ಕಲಿಂದ ಪರ್ವತದಲ್ಲಿ ಹುಟ್ಟಿದ ಕಾರಣ ಇವಳನ್ನು ಕಾಲಿಂದಿಯೆಂದು ಹೇಳುತ್ತಾರೆ. ಇವಳು ಯಮುನೋತ್ತರಿಯಿಂದ ಹೊರಟು ಪ್ರಯಾಗಕ್ಕೆ ಬರುತ್ತಾಳೆ. ಅಲ್ಲಿ ಗಂಗೆಯೊಂದಿಗೆ ಸಂಗಮವಾಗುತ್ತದೆ. ಶ್ರೀಕೃಷ್ಣನ ಪರಮಪಾವನ ಲೀಲಾಕ್ಷೇತ್ರ ಇವಳ ತಟದಲ್ಲಿದೆ. ಇವಳು ಆಧಿದೈವಿಕ ರೂಪದಿಂದ ಶ್ರೀಕೃಷ್ಣನ ಪಟ್ಟಮಹಿಷಿಯಾಗಿದ್ದಳು.) ಯಮುನೆಯ ದ್ವೀಪದಲ್ಲಿ ಪರಾಶರನು ಸತ್ಯವತಿಯ ಗರ್ಭದಿಂದ ವ್ಯಾಸನನ್ನು ಪಡೆದಿದ್ದನು (ಆದಿ 60/2). ಇದು ಗಂಗೆಯ ಏಳು ಧಾರೆಗಳಲ್ಲಿ ಒಂದು. ಇದರ ನೀರನ್ನು ಕುಡಿಯು

ವವರು ಪಾಪಮುಕ್ತರಾಗುತ್ತಾರೆ (ಆದಿ 169/19–21). ಜರಾಸಂಧನ ಮಂತ್ರಿ ಮತ್ತು ಸೇನಾಪತಿಗಳಾದ ಹಂಸ ಮತ್ತು ಡಿಂಭಕರು ಯಮುನೆಗೆ ಹಾರಿ ಸತ್ತು ಹೋಗಿದ್ದರು (ಸಭಾ 14/43–44). ವನಗಮನ ಕಾಲದಲ್ಲಿ, ಪಾಂಡವರು ಯಮುನೆಯ ನೀರನ್ನು ಕುಡಿದು, ಮುಂದೆ ಹೋಗಿದ್ದರು (ವನ 5/2). ಸೃಂಜಯಪುತ್ರ ಸಹದೇವನು ಯಮುನಾ ತಟದಲ್ಲಿ, ಲಕ್ಷ ಸ್ವರ್ಣ ಮುದ್ರೆಗಳ ದಕ್ಷಿಣೆಯನ್ನಿತ್ತು ಅಗ್ನಿಯ ಉಪಾಸನೆ ಮಾಡಿದ್ದನು (ವನ 90/7). ರಾಜಾಭರತನು ಯಮುನೆಯ ದಡದಲ್ಲಿ ಮೂವತ್ತೈದು ಅಶ್ವಮೇಧ ಯಜ್ಞಗಳನ್ನು ನೆರವೇರಿಸಿದ್ದನು (ವನ 90/8). ಇದು ಆರ್ಚಿಕ ಪರ್ವತದ ಹತ್ತಿರ ಹರಿಯುತ್ತದೆ. ಬ್ರಹ್ಮರ್ಷಿಗಳಿಂದ ಸೇವಿತವಾದ ಪುಣ್ಯಮಯೀ ನದಿಯಾಗಿದೆ ಮತ್ತು ಪಾಪಭಯವನ್ನು ದೂರಕ್ಕೋಡಿಸುತ್ತದೆ. ಇದರ ದಡದಲ್ಲಿ ಮಾಂಧಾತಾ ಮತ್ತು ದಾನಶಿರೋಮಣಿ ಸಹದೇವಕುಮಾರ ಸೋಮಕರು ಯಜ್ಞ ಮಾಡಿದ್ದರು (ವನ 125/21–26). ಇದರ ದಡದಲ್ಲಿ ನಾಭಾಗ ಪುತ್ರ ರಾಜಾ ಅಂಬರೀಷನು ಯಜ್ಞ ಮಾಡಿದ್ದನು (ವನ 129/2). ಅಗಸ್ತ್ಯನು ಯಮುನಾತಟದಲ್ಲಿ ಘೋರ ತಪಸ್ಸು ಮಾಡಿದ್ದನು (ವನ 161/56). ರಾಜಾ ಶಾಂತನು ಯಮುನಾ ದಡದಲ್ಲಿ ಏಳು ದೊಡ್ಡ ದೊಡ್ಡ ಯಜ್ಞಗಳನ್ನು ನೆರವೇರಿಸಿದ್ದನು (ವನ 162/25). ಇದು ಭಾರತದ ಪ್ರಮುಖ ನದಿಗಳಲ್ಲಿ ಒಂದಾಗಿದೆ. ಇದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/15). ಭರತನು ಯಮುನಾದಡದಲ್ಲಿ, ಒಂದು ಬಾರಿ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿದ್ದನು (ದ್ರೋಣ 68/8). ಇವನೇ ಇದೇ ನದಿ ತಟದಲ್ಲಿ ಮುನ್ನೂರು ಅಶ್ವಮೇಧ ಯಜ್ಞ ಪೂರ್ಣ ಮಾಡಿದ್ದನು (ಶಾಂತಿ 29/46).

**ಯಮುನಾತೀರ್ಥ** – ಸರಸ್ವತೀ ತಟದಲ್ಲಿರುವ ಪುಣ್ಯ ತೀರ್ಥ. ಇಲ್ಲಿ ಅದಿತಿ ಪುತ್ರ ವರುಣನು ರಾಜಸೂಯಯಜ್ಞವನ್ನು ನೆರವೇರಿಸಿದ್ದನು (ಶಲ್ಯ 49/11–15).

**ಯಮುನಾದ್ವೀಪ** – ಯಮುನೆಯ ಮಧ್ಯದಲ್ಲಿರುವ ದ್ವೀಪ. ಇಲ್ಲಿ ಸತ್ಯವತಿಯು ಪರಾಶರನ ಮೂಲಕ ವ್ಯಾಸನಿಗೆ ಜನ್ಮವಿತ್ತಳು (ಆದಿ 60/2).

**ಯಮುನಾಪ್ರಭವ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ, ಮನುಷ್ಯ ಅಶ್ವಮೇಧಯಜ್ಞದ ಫಲವನ್ನು ಪಡೆದು, ಸ್ವರ್ಗದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/44).

**ಯಯಾತಿ** – ಒಬ್ಬ ಪ್ರಾಚೀನ ರಾಜರ್ಷಿ (ಆದಿ 1/229). ಮಹಾರಾಜ ನಹುಷನ ದ್ವಿತೀಯ ಪುತ್ರ. ಇವನ ಅಣ್ಣ ಯೋಗವನ್ನಾಶ್ರಯಿಸಿ, ಬ್ರಹ್ಮಭೂತಮುನಿಯಾದನು. ಆದುದರಿಂದ ಇವನೇ ಭೂಮಂಡಲದ ರಾಜನಾದನು. ಇವನು ಈ ಪೃಥ್ವಿಯ ಪಾಲಕನಾದನು ಮತ್ತು ಅನೇಕ ಯಜ್ಞಗಳನ್ನು ನೆರವೇರಿಸಿದನು (ಆದಿ 75/30–32). ಇವನು ಅಪರಾಜಿತನೂ, ಮನಸ್ಸು ಮತ್ತು ಇಂದ್ರಿಯಗಳನ್ನು ಸಂಯಮದಲ್ಲಿಟ್ಟುಕೊಳ್ಳುವವನೂ, ಭಕ್ತಿಭಾವದಿಂದ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸುವವನೂ ಆಗಿದ್ದನು (ಆದಿ 75/33). ದೇವಯಾನೀ ಮತ್ತು ಶರ್ಮಿಷ್ಠೆಯಿಂದ ಇವನಿಗೆ ಐದು ಮಂದಿ ಪುತ್ರರಿದ್ದರು. ಪುತ್ರರೊಡನೆ ಈತ ಯೌವನವನ್ನು ಬೇಡಿದುದು, ಕೊನೆಯ ಪುತ್ರನ ಯೌವನದಿಂದ, ಇಬ್ಬರೂ ಪತ್ನಿಯರು ಮತ್ತು ವಿಶ್ವಾಚೀ ಅಪ್ಸರೆಯೊಂದಿಗೆ ಇವನ ವಿಹಾರ. ಕಾಮಭೋಗದಿಂದ ತೃಪ್ತನಾಗದಿದ್ದಾಗ, ಇವನಿಂದ ವೈರಾಗ್ಯಪೂರ್ಣ ಗಾಥೆಯ ಗಾಯನ ಇತ್ಯಾದಿ ಸಂಕ್ಷಿಪ್ತ ಕಥೆ (ಆದಿ 75/34–58). ಬಾವಿಯಲ್ಲಿ ಬಿದ್ದಿದ್ದ ದೇವಯಾನಿಯನ್ನು ಇವನು ಕೈಹಿಡಿದೆತ್ತಿ ಉದ್ಧರಿಸಿದುದು (ಆದಿ 78/14–23). ದೇವಯಾನಿಯಿಂದ ಈತನೊಡನೆ ವಿವಾಹವಾಗಲು ಪ್ರಾರ್ಥನೆ (ಆದಿ 78/23). ಬ್ರಾಹ್ಮಣ ಕನ್ಯೆಯಾದುದರಿಂದ ಇವನು ದೇವಯಾನಿಯ ಪ್ರಾರ್ಥನೆಯನ್ನು ಅಸ್ವೀಕಾರಮಾಡಿದುದು ಮತ್ತು ಆಕೆಯಿಂದ ಅನುಮತಿ ಪಡೆದು ತನ್ನ ನಗರಕ್ಕೆ ಹೋದುದು (ಆದಿ 78/23). ಕಾಡಿನಲ್ಲಿ ಸಖಿಯರೊಂದಿಗೆ ಸಂಚರಿಸುತ್ತಿದ್ದ ದೇವಯಾನಿಯೊಂದಿಗೆ ಇವನ ಭೇಟಿ (ಆದಿ 81/1–7). ಯಯಾತಿ ಮತ್ತು ದೇವಯಾನಿಯರ ಸಂವಾದ. ಇಬ್ಬರೂ ಪರಸ್ಪರ ಪರಿಚಯ ಕೇಳಿದುದು ಮತ್ತು ಹೇಳಿದುದು, ದೇವಯಾನಿಯು ಇವನೊಡನೆ ವಿವಾಹಪ್ರಸ್ತಾವನೆಯನ್ನು ವ್ಯಕ್ತಪಡಿಸಿದುದು, ಯಯಾತಿಯು ಶುಕ್ರಾಚಾರ್ಯರ ಶಾಪಭಯವನ್ನು ಹೇಳಿದುದು, ದೇವಯಾನಿಯು ತನ್ನ

ದಾಸಿಯನ್ನು ಕಳುಹಿಸಿ, ತಂದೆಯನ್ನು ಕರೆಸಿದುದು ಮತ್ತು ತನ್ನನ್ನು ರಾಜಾ ಯಯಾತಿಯ ಕೈಗೆ ಕೊಡುವಂತೆ ಒತ್ತಾಯಿಸಿದುದು, ಶುಕ್ರಾಚಾರ್ಯನು ತನ್ನ ಪುತ್ರಿಯನ್ನು ರಾಜನಿಗೆ ಒಪ್ಪಿಸಿದುದು, ಇವನನ್ನು ವರ್ಣಸಂಕರ ಭಯದಿಂದ ಮುಕ್ತನಾಗಿ ಮಾಡಿದುದು, ಜೊತೆಯಲ್ಲಿ ಶರ್ಮಿಷ್ಠೆಯನ್ನು ತನ್ನ ಶಯ್ಯೆಗೆ ಕರೆಸಬಾರದೆಂದು ಎಚ್ಚರಿಸಿದುದು. ದೇವಯಾನಿಯೊಂದಿಗೆ ಯಯಾತಿಯ ಶಾಸ್ತ್ರೋಕ್ತ ರೀತಿಯ ವಿವಾಹ; ಎರಡು ಸಾವಿರ ಸಖಿಯರ ಸಹಿತ ಶರ್ಮಿಷ್ಠೆ ಮತ್ತು ದೇವಯಾನಿಯನ್ನು ಕರಕೊಂಡು, ಸಂತೋಷದಿಂದ ಇವನು ತನ್ನ ನಗರದ ಕಡೆಗೆ ಹೋದುದು (ಆದಿ 81/8–38). ಯಯಾತಿಯಿಂದ ದೇವಯಾನಿಗೆ ಪುತ್ರ ಪ್ರಾಪ್ತಿ (ಆದಿ 82/4–5). ಯಯಾತಿಯು ಏಕಾಂತದಲ್ಲಿರುವುದನ್ನು ಕಂಡು ಶರ್ಮಿಷ್ಠೆಯು ಆತನ ಬಳಿಗೆ ಹೋದುದು ಮತ್ತು ತನ್ನ ಋತುಕಾಲವನ್ನು ಸಫಲಗೊಳಿಸಬೇಕೆಂದು ಪ್ರಾರ್ಥಿಸಿದುದು; ಈ ಕುರಿತು ಯಯಾತಿ ಮತ್ತು ಶರ್ಮಿಷ್ಠೆಯರ ಸಂವಾದ. ಶರ್ಮಿಷ್ಠೆಯ ವಿವರಣೆಯ ಯಥಾರ್ಥತೆಯನ್ನು ಸ್ವೀಕರಿಸಿ, ಯಯಾತಿಯು ಆಕೆಯನ್ನು ಧರ್ಮಾನುಸಾರವಾಗಿ ತನ್ನ ಪತ್ನಿಯಾಗಿ ಮಾಡಿಕೊಂಡದ್ದು. ಇವನೊಂದಿಗೆ ಸಹವಾಸಮಾಡಿ ಶರ್ಮಿಷ್ಠೆ ದೇವೋಪಮನಾದ ಪುತ್ರನಿಗೆ ಜನ್ಮವಿತ್ತದ್ದು (ಆದಿ 82/11–27). ಯಯಾತಿಯು ದೇವಯಾನಿಯಲ್ಲಿ ಯದು ಮತ್ತು ತುರ್ವಸು ಎಂಬ ಇಬ್ಬರು ಪುತ್ರರನ್ನೂ, ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು ಮತ್ತು ಪೂರು ಎಂಬ ಮೂವರು ಪುತ್ರರನ್ನೂ ಪಡೆದುದು (ಆದಿ 83/9–10). ವನದಲ್ಲಿ ಶರ್ಮಿಷ್ಠೆಯ ಪುತ್ರರು ಆಡುತ್ತಿರುವುದನ್ನು ನೋಡಿ, ದೇವಯಾನಿಯು ಯಯಾತಿಯೊಂದಿಗೆ ಆ ಕುರಿತು ಕೇಳಿದುದು. ಅವರು ಯಯಾತಿಯ ಪುತ್ರರೆಂದು ತಿಳಿದಾಗ, ದೇವಯಾನಿ ಸಿಟ್ಟುಗೊಂಡು ತಂದೆಯ ಬಳಿಗೆ ಹೋದುದು, ಯಯಾತಿಯು ಆಕೆಯನ್ನು ಸಮಾಧಾನ ಪಡಿಸಲು ಅವಳ ಹಿಂದಿನಿಂದಲೇ ನಡೆದುದು (ಆದಿ 83/11–27). ಪುತ್ರಿಯ ಬಾಯಿಯಿಂದ ಯಯಾತಿಯ ಅಪರಾಧವನ್ನು ಕೇಳಿ, ಶುಕ್ರಾಚಾರ್ಯನ ಮೂಲಕ, ಜರಾಗ್ರಸ್ತನಾಗುವಂತೆ ಇವನಿಗೆ ಶಾಪ (ಆದಿ 83/28–31). ಯಯಾತಿಯು ತನ್ನ ನಿರ್ದೋಷತ್ವವನ್ನು ಹೇಳಿದುದು ಮತ್ತು ಶುಕ್ರಾಚಾರ್ಯನೊಡನೆ ತನ್ನ ವೃದ್ಧಾಪ್ಯನಿವೃತ್ತಿಗಾಗಿ ಪ್ರಾರ್ಥಿಸಿದುದು (ಆದಿ 83/32–38). ಶುಕ್ರಾಚಾರ್ಯನು ಯಯಾತಿಗೆ, ಇತರರ ಯೌವನವನ್ನು ತೆಗೆದುಕೊಂಡು, ಆ ಮುದುಕತನವನ್ನು ಆತನ ಶರೀರಕ್ಕೆ ಹಾಕುವ ಸೌಲಭ್ಯವನ್ನು ನೀಡಿದುದು ಮತ್ತು ತನ್ನ ಯೌವನವನ್ನು ಕೊಡುವ ಪುತ್ರನಿಗೇ ರಾಜನಾಗುವಂತೆ ವರಪ್ರದಾನ ಮಾಡಿದುದು (ಆದಿ 83/39–42). ಇವನು ಯದುವಿನೊಡನೆ, ಆತನ ಯೌವನವನ್ನು ಕೇಳಿದುದು; ಆತ ನಿರಾಕರಿಸಿದಾಗ, ಅವನ ಸಂತಾನವು ರಾಜ್ಯಾಧಿಕಾರದಿಂದ ವಂಚಿತವಾಗಲೆಂದು ಶಾಪ ಕೊಟ್ಟದ್ದು (ಆದಿ 84/1–9). ಇವನು ತುರ್ವಸುವಿನೊಂದಿಗೆ ಯೌವನವನ್ನು ಕೇಳಿದುದು; ಅವನು ನಿರಾಕರಿಸಿದಾಗ, ಆತ ಮ್ಲೇಚ್ಛರ ರಾಜನಾಗುವಂತೆ ಶಾಪವನ್ನಿತ್ತದ್ದು (ಆದಿ 84/10–15). ಇವನು ದ್ರುಹ್ಯುವಿನೊಂದಿಗೆ ಯೌವನವನ್ನು ಕೇಳಿದುದು, ಕೊಡದಿದ್ದಾಗ, ಅವನ ಮನೋರಥ ಎಂದೂ ಕೈಗೂಡದಂತೆ, ಅತಿ ದುರ್ಗಮ ದೇಶಗಳಲ್ಲಿ ವಾಸಿಸುವಂತೆ ಮತ್ತು ರಾಜ್ಯಾಧಿಕಾರದಿಂದ ವಂಚಿತನಾಗಿ 'ಭೋಜ'ನೆಂದು ಕರೆಸಲ್ಪಡುವಂತೆ ಶಾಪವನ್ನಿತ್ತದ್ದು (ಆದಿ 84/16–22). ಅನುವಿನೊಂದಿಗೆ ಈತ ಯೌವನವನ್ನು ಕೋರಿದುದು. ಅವನು ನಿರಾಕರಿಸಿದಾಗ, ಆತ ಜರಾಗ್ರಸ್ತನಾಗುವಂತೆಯೂ, ಯುವಕರಾಗಿದ್ದಾಗಲೇ ಅವನ ಸಂತಾನದವರು ಸಾಯುವಂತೆ ಮತ್ತು ಅಗ್ನಿಹೋತ್ರ ತ್ಯಾಗಿಗಳಾಗುವಂತೆ ಶಾಪವನ್ನಿತ್ತದ್ದು (ಆದಿ 84/23–26). ಇವನು ಪೂರುವಿನೊಂದಿಗೆ ಯುವಾವಸ್ಥೆಯನ್ನು ಕೇಳಿದುದು, ಅವನು ಸಂತೋಷಪೂರ್ವಕ ಆ ಕೋರಿಕೆಯನ್ನು ಸ್ವೀಕರಿಸಿದುದು. ಆಜ್ಞಾಪಾಲನೆಯಿಂದ ಸಂತುಷ್ಟನಾಗಿ, ಇವನು ಪೂರುವಿಗೆ ವರನೀಡಿದುದು (ಆದಿ 84/27–34). ಸಾವಿರ ವರ್ಷಕಾಲ ವಿಷಯ ಸುಖವನ್ನು ಅನುಭವಿಸಿದರೂ, ಅದರಿಂದ ತೃಪ್ತನಾಗದಿರಲು ಈತನಿಂದ ವೈರಾಗ್ಯಪೂರ್ಣ ಉದ್ಗಾರ. ಪೂರುವಿಗೆ ಆತನ ಯೌವನವನ್ನು ಹಿಂತಿರುಗಿಸಿ, ವೃದ್ಧಾವಸ್ಥೆಯನ್ನು ಸ್ವೀಕರಿಸಿದುದು ಮತ್ತು ಪೂರುವಿನ ಪಟ್ಟಾಭಿಷೇಕಕ್ಕೆ ವಿರೋಧಪಡಿಸುತ್ತಿದ್ದ

ಪ್ರಜೆಗಳಿಗೆ, ತಾನು ಜ್ಯೇಷ್ಠಪುತ್ರನಿಗೆ ರಾಜ್ಯಕೊಡದಿರಲು ಕಾರಣಹೇಳಿ, ಪೂರುವಿಗೆ ರಾಜ್ಯಾಭಿಷೇಕ ಮಾಡಲು ಅವರಿಂದ ಅನುಮತಿ ಪಡೆದುದು. ಪ್ರಜೆಗಳಿಂದ ಅನುಮತಿ ದೊರೆತ ಮೇಲೆ, ಪೂರುವಿಗೆ ಪಟ್ಟಾಭಿಷೇಕಮಾಡಿ ಈತ ಕಾಡಿಗೆ ಹೋದುದು (ಆದಿ 85/1–33). ಇವನ ಪುತ್ರರಲ್ಲಿ ಯದುವಿನಿಂದ ಯಾದವರು, ತುರ್ವಸುವಿನಿಂದ ಯವನರು (ತುರ್ಕರು) ದ್ರ್ಯುಹ್ಯುವಿನಿಂದ ಭೋಜರು, ಅನುವಿನಿಂದ ಮ್ಲೇಚ್ಛ ಜಾತಿಯ ಜನರು ಮತ್ತು ಪೂರುವಿನಿಂದ ಪೌರವರಾದರು (ಆದಿ 85/34–35). ತಪಸ್ಸು ಮಾಡಿ, ಈತ ಸ್ವರ್ಗಕ್ಕೆ ಹೋದುದು, ಅಲ್ಲಿಂದ ಪತನ ಹೊಂದಿದುದು, ಆಕಾಶದಲ್ಲಿಯೇ ನಿಂತದ್ದು, ವಸುಮಂತ, ಅಷ್ಟಕ, ಪ್ರತರ್ದನ, ಶಿಬಿ ಎಂಬವರನ್ನು ಭೇಟಿ ಮಾಡಿ, ಸತ್ಸಂಗದ ಪ್ರಭಾವದಿಂದ ಪುನಃ ಸ್ವರ್ಗಕ್ಕೆ ಹೋದ ಸಂಕ್ಷಿಪ್ತ ಕಥೆ (ಆದಿ 86/1–6). ಒಂದು ಸಾವಿರ ವರ್ಷಗಳ ವರೆಗೆ ಇವನ ಘೋರ ತಪಸ್ಸು ಮತ್ತು ಸ್ವರ್ಗ ಗಮನ (ಆದಿ 86/12–17). ಇಂದ್ರನು ಕೇಳಿದಾಗ ಇವನು ತನ್ನ ಪುತ್ರ ಪೂರುವಿಗೆ ಮಾಡಿದ ಉಪದೇಶದ ವರ್ಣನೆ ಮಾಡಿದುದು (ಆದಿ 87). ಆತ್ಮಪ್ರಶಂಸೆ ಮತ್ತು ಅನ್ಯ ಸತ್ಪುರುಷರ ನಿಂದಾರೂಪದೋಷದಿಂದ, ಪುಣ್ಯಕ್ಷಯವಾದುದರಿಂದ, ಇಂದ್ರನ ಪ್ರೇರಣೆಯಿಂದ ಇವನು ಸ್ವರ್ಗದಿಂದ ಬಿದ್ದದ್ದು; ಸತ್ಪುರುಷರ ಸಮೀಪವೇ ಬೀಳಲು ಇಂದ್ರನಲ್ಲಿ ವರ ಪಡೆದುದು (ಆದಿ 88/1–5). ಇವನು ಆಕಾಶದಿಂದ ಬೀಳುತ್ತಿರುವುದನ್ನು ನೋಡಿ, ರಾಜರ್ಷಿಯಾದ ಅಷ್ಟಕನು ಇವನಿಗೆ ಧೈರ್ಯನೀಡುತ್ತಾ ಪರಿಚಯ ಕೇಳಿದುದು (ಆದಿ 88/6–13). ಯಯಾತಿಯು ಅಷ್ಟಕನಿಗೆ ತನ್ನ ಪರಿಚಯ ಹೇಳಿದುದು; ಯಯಾತಿ ಮತ್ತು ಅಷ್ಟಕರ ಸಂವಾದ, (ಆದಿ 89ರಿಂದ 90). ಆಶ್ರಮಧರ್ಮ ಸಂಬಂಧವಾಗಿ ಯಯಾತಿ ಮತ್ತು ಅಷ್ಟಕರ ಸಂವಾದ (ಆದಿ 91). ಅಷ್ಟಕ ಯಯಾತಿ ಸಂವಾದ. ಇತರರು ಕೊಟ್ಟ ಪುಣ್ಯದಾನವನ್ನು ಈತ ಅಸ್ವೀಕಾರ ಮಾಡಿದುದು (ಆದಿ 92). ಇವನು ವಸುಮಂತ ಮತ್ತು ಶಿಬಿಯ ಪುಣ್ಯದಾನವನ್ನೂ ಅಸ್ವೀಕಾರ ಮಾಡಿದುದು. ಇವನ ಪುತ್ರಿ ಮಾಧವಿ ಬಂದು, ಇವನಿಗೆ ಪ್ರಣಾಮ ಮಾಡಿದುದು; ಅಷ್ಟಕನೇ ಮೊದಲಾದ ತನ್ನ ನಾಲ್ವರು ಪುತ್ರರ ಪರಿಚಯ ಹೇಳಿದುದು; ದೌಹಿತ್ರರ ಪುಣ್ಯವು ತನ್ನದೇ ಪುಣ್ಯವೆಂದು ಹೇಳಿ, ಯಯಾತಿಯು ಅದನ್ನು ಸ್ವೀಕರಿಸುವಂತೆ ಹೇಳಿದುದು. ಮಗಳು ಮತ್ತು ಮೊಮ್ಮಕ್ಕಳು ನನ್ನ ಉದ್ಧಾರ ಮಾಡಿದರೆಂದು ಹೇಳುತ್ತಾ ಯಯಾತಿಯು ಆ ಪುಣ್ಯವನ್ನು ಸ್ವೀಕರಿಸಿದುದು. ಮತ್ತು ಅಷ್ಟಕನೇ ಮೊದಲಾದ ನಾಲ್ಕು ಮಂದಿ ರಾಜರೊಂದಿಗೆ ಸ್ವರ್ಗಕ್ಕೆ ಹೋದುದು. ಇವನಿಂದ ಶಿಬಿಯ ಶ್ರೇಷ್ಠತ್ವದ ಪ್ರತಿಪಾದನೆ ಮತ್ತು ಸತ್ಯದ ಮಹಿಮಾವರ್ಣನೆ (ಆದಿ 93). ಇವನಿಗೆ ಇಬ್ಬರು ಪತ್ನಿಯರಿದ್ದರು – ಶುಕ್ರಾಚಾರ್ಯನ ಪುತ್ರಿ ದೇವಯಾನೀ ಮತ್ತು ವೃಷಪರ್ವನ ಪುತ್ರಿ ಶರ್ಮಿಷ್ಠೆ. ಇವನ ವಂಶವನ್ನು ಪರಿಚಯಿಸುವ ಒಂದು ಶ್ಲೋಕದ ಭಾವಾರ್ಥ ಹೀಗಿದೆ– ದೇವಯಾನಿಯು ಯದು ಮತ್ತು ತುರ್ವಸುಗಳೆಂಬ ಇಬ್ಬರು ಪುತ್ರರಿಗೆ ಜನ್ಮವಿತ್ತಳು. ವೃಷಪರ್ವನ ಪುತ್ರಿ ಶರ್ಮಿಷ್ಠೆ ದ್ರುಹ್ಯು, ಅನು, ಪೂರುವೆಂಬ ಮಕ್ಕಳನ್ನು ಪಡೆದಳು (ಆದಿ 95/7–9). ಇವನು ಯಮಸಭೆಯಲ್ಲಿದ್ದುಕೊಂಡು, ಸೂರ್ಯಪುತ್ರ ಯಮನ, ಉಪಾಸನೆ ಮಾಡುತ್ತಾನೆ (ಸಭಾ 8/8). ಗುರುದಕ್ಷಿಣೆ ಕೊಡುವುದಕ್ಕಾಗಿ ಒಬ್ಬ ಬ್ರಾಹ್ಮಣನಿಗೆ ಇವನಿಂದ ಸಾವಿರ ಗೋವುಗಳ ದಾನ (ವನ 195). ಇವನು ಅರ್ಜುನ ಮತ್ತು ಕೃಪಾಚಾರ್ಯನ ಯುದ್ಧವನ್ನು ನೋಡುವುದಕ್ಕಾಗಿ, ಇಂದ್ರನೊಂದಿಗೆ ಆತನ ವಿಮಾನವನ್ನೇರಿ ಬಂದಿದ್ದನು (ವಿರಾಟ 56/9–10). ಗರುಡ ಮತ್ತು ಗಾಲವರು ರಾಜಾಯಯಾತಿಯ ಬಳಿಗೆ ಹೋಗಿ, ಗುರುವಿಗೆ ಕೊಡಲು ಒಂದು ಕಿವಿ ಕಪ್ಪಾದ ಎಂಟುನೂರು ಕುದುರೆಗಳನ್ನು ಯಾಚಿಸಿದುದು (ಉದ್ಯೋಗ 114). ಇವನು ಸಾವಿರಾರು ಯಜ್ಞಗಳನ್ನು ನೆರವೇರಿಸಿದವನೂ, ದಾನಿಯೂ, ದಾನಪತಿಯೂ, ಪ್ರಭಾವಶಾಲಿಯೂ, ರಾಜೋಚಿತ ತೇಜಸ್ಸಿನಿಂದ ಪ್ರಕಾಶಿಸಲ್ಪಡುವವನೂ, ಎಲ್ಲಾ ರಾಜರ ಸ್ವಾಮಿಯೂ (ಸಮ್ರಾಟ) ಆಗಿದ್ದನು (ಉದ್ಯೋಗ 115/2). ಇವನು ಗಾಲವನಿಗೆ ಗುರುದಕ್ಷಿಣೆಗೋಸ್ಕರ ಧನವನ್ನು ಪ್ರಾಪ್ತಿಸಿಕೊಳ್ಳಲು, ತನ್ನ ಕನ್ಯೆ ಮಾಧವಿಯನ್ನು ಸಮರ್ಪಿಸಿದುದು (ಉದ್ಯೋಗ 115/5–14).

ಸ್ವರ್ಗದಲ್ಲಿ ಗರ್ವಿಷ್ಠನಾದ ಇವನಿಂದ ದೇವತೆಗಳ, ಮನುಷ್ಯರ ಮತ್ತು ಮಹರ್ಷಿಗಳ ಅವಹೇಳನೆ (ಉದ್ಯೋಗ 120/15-16). ಸ್ವರ್ಗಲೋಕದಿಂದ ಇವನ ಪತನ (ಉದ್ಯೋಗ 121/11). ದೌಹಿತ್ರರ ಪುಣ್ಯದಾನದಿಂದ ಪುನಃ ಈತನ ಸ್ವರ್ಗಾರೋಹಣ (ಉದ್ಯೋಗ 122/15). ಇವನು ಬ್ರಹ್ಮನೊಡನೆ ತನ್ನ ಅಧಃಪತನದ ಕಾರಣ ಕೇಳಿದುದು (ಉದ್ಯೋಗ 123/12-13). ಸೃಂಜಯನನ್ನು ಸಮಾಧಾನಪಡಿಸುತ್ತಾ, ನಾರದನಿಂದ ಈತನ ದಾನಯಜ್ಞಾದಿ ಸತ್ಕರ್ಮಗಳ ವರ್ಣನೆ (ದ್ರೋಣ 63). ಇವನ ಯಜ್ಞ ವೈಭವದ ವರ್ಣನೆ (ಶಲ್ಯ 41/33-39). ಶ್ರೀಕೃಷ್ಣನ ಮೂಲಕ ನಾರದ-ಸೃಂಜಯ ಸಂವಾದ ರೂಪದಲ್ಲಿ ಇವನ ಯಜ್ಞದ ವರ್ಣನೆ (ಶಾಂತಿ 29/94-99). ಇವನಿಗೆ ನಹುಷನಿಂದ ಖಡ್ಗ ಪ್ರಾಪ್ತಿಯಾಯಿತು. ಇವನು ಆ ಖಡ್ಗವನ್ನು ಪೂರುವಿಗೆ ಕೊಟ್ಟನು (ಶಾಂತಿ 116/74). ಬೋಧ್ಯ ಋಷಿಯೊಂದಿಗೆ ಶಾಂತಿಯ ಕುರಿತಾಗಿ ಇವನ ಪ್ರಶ್ನೆ (ಶಾಂತಿ 178/5). ಅಗಸ್ತ್ಯರ ಕಮಲಗಳ ಅಪಹಾರ ನಡೆದಾಗ ಇವನು ಶಪಥ ಮಾಡಿದುದು (ಅನು 94/27). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/58-61).

**ಯಯಾತಿಪತನ** – ಒಂದು ತೀರ್ಥ. ಇಲ್ಲಿಗೆ ತೀರ್ಥಯಾತ್ರೆ ಹೋಗುವುದರಿಂದ ಅಶ್ವಮೇಧ ಯಜ್ಞದ ಫಲದೊರಕುತ್ತದೆ (ವನ 82/48).

**ಯವಕ್ರೀತ** – ಭರದ್ವಾಜನ ಪುತ್ರ, ವೇದಗಳ ಜ್ಞಾನಪ್ರಾಪ್ತಿಗಾಗಿ ಇವನ ಘೋರ ತಪಸ್ಸು (ವನ 135/16). ಇಂದ್ರನ ಮೂಲಕ ಇವನು ತಪಸ್ಸಿನಿಂದ ನಿವಾರಣೆ ಹೊಂದಿದುದು (ವನ 135/38). ರೈಭ್ಯ ಮುನಿಯು ಸೃಷ್ಟಿಸಿದ ರಾಕ್ಷಸನಿಂದ ಇವನ ಮೃತ್ಯು (ವನ 136/19). ಅರ್ವಾವಸುವಿನ ಪ್ರಯತ್ನದಿಂದ ಇವನ ಪುನರುಜ್ಜೀವನ (ವನ 138/22). ಇವನು ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೋಡಲು ಹೋಗಿದ್ದನು (ಅನು 26/6).
(2) ಇವನು ಅಂಗೀರಸನ ಪುತ್ರ; ಪೂರ್ವ ದಿಕ್ಕನ್ನಾಶ್ರಯಿಸಿವಾಸಿಸುತ್ತಾನೆ (ಶಾಂತಿ 208/26).

**ಯವಕ್ಷಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/30).

**ಯವನ** – ಭಾರತವರ್ಷದ ಒಂದು ಜಾತಿ ಮತ್ತು ಜನಪದ. ತುರ್ವಸುವಿನ ಸಂತಾನ 'ಯವನ' (ತುರ್ಕ).ವೆಂದು ಕರೆಯಲ್ಪಟ್ಟಿತು (ಆದಿ 75/34). ನಂದಿನಿಯು ಯೋನಿ ಪ್ರದೇಶದಿಂದ ಯವನರನ್ನು ಸೃಷ್ಟಿಸಿದಳು ಮತ್ತು ಆಕೆಯ ಪಾರ್ಶ್ವಭಾಗದಿಂದಲೂ ಯವನರ ಜನನವಾಯಿತು (ಆದಿ 174/36-37). ದಿಗ್ವಿಜಯಕಾಲದಲ್ಲಿ ಸಹದೇವನು ಇವರ ನಗರವನ್ನು ಗೆದ್ದಿದ್ದನು (ಸಭಾ 31/73). ನಕುಲನೂ ಯವನರನ್ನು ಸೋಲಿಸಿದ್ದನು (ಸಭಾ 32/17). ಕಲಿಯುಗದಲ್ಲಿ ಇವರು ಈ ದೇಶದ ರಾಜರಾಗುವ ಭವಿಷ್ಯವಾಣಿ (ವನ 188/35). ಕರ್ಣನು ದಿಗ್ವಿಜಯ ಕಾಲದಲ್ಲಿ, ಪಶ್ಚಿಮದಲ್ಲಿ ಯವನರನ್ನು ಗೆದ್ದಿದ್ದನು (ವನ 254/18). ಕಾಂಬೋಜರಾಜ ಸುದಕ್ಷಿಣನು ಯವನರೊಂದಿಗೆ, ಒಂದು ಅಕ್ಷೌಹಿಣೀ ಸೇನೆಯನ್ನು ಕೂಡಿಕೊಂಡು, ದುರ್ಯೋಧನನ ಬಳಿಗೆ ಬಂದನು (ಉದ್ಯೋಗ 19/21-22). ಯವನ ಒಂದು ಭಾರತೀಯ ಜನಪದ (ಭೀಷ್ಮ 9/65). ಯವನರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರಲ್ಲಿ ದ್ವೇಷ ಸಾಧಿಸಿದುದರಿಂದ ಶೂದ್ರತ್ವವನ್ನು ಪಡೆದರು (ಅನು 35/18).

**ಯಶಸ್ವಿನೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/10).

**ಯಶೋದಾ** – ನಂದಗೋಪನ ಪತ್ನಿ. ಈಕೆಯ ಮಡಿಲಲ್ಲಿ ಬಾಲಕೃಷ್ಣನು ಬೆಳೆದಿದ್ದನು. ಒಂದು ದಿನ ತಾಯಿ ಯಶೋದೆ ಶಿಶುವಾದ ಶ್ರೀಕೃಷ್ಣನನ್ನು ಒಂದು ಗಾಡಿಯ ಕೆಳಗಡೆ ಮಲಗಿಸಿ, ಯಮುನಾ ದಡಕ್ಕೆ ಹೋದಳು. ಅದೇ ಸಮಯದಲ್ಲಿ ಶ್ರೀಕೃಷ್ಣನ ಪಾದಸ್ಪರ್ಶವಾದ ಕಾರಣ ಗಾಡಿ ಮಗುಚಿ ಬಿದ್ದಿತು (ಸಭಾ 38/ 29).

**ಯಶೋಧರ** – (1) ಪಾಂಡವ ಪಕ್ಷದ ದುರ್ಮುಖನ ಮಗ (ದ್ರೋಣ 184/5).
(2) ಶ್ರೀಕೃಷ್ಣನಿಂದ ರುಕ್ಮಿಣಿಯ ಗರ್ಭದಲ್ಲಿ ಹುಟ್ಟಿದ ಪುತ್ರ (ಅನು 14/33).

**ಯಶೋಧರಾ** – ತ್ರಿಗರ್ತರಾಜನ ಪುತ್ರಿ, ಇವಳು ಪೂರುವಂಶದ ಮಹಾರಾಜ ಹಸ್ತಿಯ ಪತ್ನಿ ಮತ್ತು ವಿಕುಂಠನನ ತಾಯಿ (ಆದಿ 95/35).

**ಯಾಜ** – ಕಾಶ್ಯಪ ಗೋತ್ರೋತ್ಪನ್ನ ಒಬ್ಬ ಬ್ರಹ್ಮರ್ಷಿ. ಇವನು ಯಮುನಾ ತಟದಲ್ಲಿ ವಾಸಿಸು

ತ್ತಿದ್ದನು. ಇವನ ತಮ್ಮನ ಹೆಸರು ಉಪಯಾಜಿ. ಇವನು ವೈದಿಕ ಸಂಹಿತೆಯ ಅಧ್ಯಯನದಲ್ಲಿ ಸದಾಮಗ್ನನೂ ಸೂರ್ಯ ಭಕ್ತನೂ, ಸುಯೋಗ್ಯನೂ ಆದ ಶ್ರೇಷ್ಠ ಋಷಿಯಾಗಿದ್ದನು (ಆದಿ 166/8). ಉಪಯಾಜನಿಂದ ಇವನ ಹೀನ ಮನೋವೃತ್ತಿಯ ವರ್ಣನೆ (ಆದಿ 166/16). ದ್ರೋಣನಾಶಕ ಪುತ್ರ ಪ್ರಾಪ್ತಿಗೋಸ್ಕರ, ಇವನೊಡನೆ ದ್ರುಪದನ ಪ್ರಾರ್ಥನೆ (ಆದಿ 166/22–31). ದ್ರೋಣವಿನಾಶಕ ಪುತ್ರೇಷ್ಟಿಯಲ್ಲಿ ಸಹಯೋಗಕೊಡಲು ಇವನಿಂದ ಉಪಯಾಜನಿಗೆ ಪ್ರೇರಣೆ (ಆದಿ 166/32). ದ್ರುಪದನ ಅಭೀಷ್ಟ ಪುತ್ರನಿಗೋಸ್ಕರ, ಯಜ್ಞಕ್ಕೆ ಈತ ಆಹುತಿಯನ್ನಿತ್ತದ್ದು (ಆದಿ 166/39). ಇವನ ಆಹುತಿಯ ಮೂಲಕ ಯಜ್ಞಕುಂಡದಿಂದ ಧೃಷ್ಟದ್ಯುಮ್ನ ಮತ್ತು ದ್ರೌಪದಿಯ ಪ್ರಾದುರ್ಭಾವ (ಆದಿ 166/39–44).

**ಯಾಜ್ಞವಲ್ಕ್ಯ** – ಒಬ್ಬ ಶ್ರೇಷ್ಠ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/12). ಇವನು ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಅಧ್ವರ್ಯುವಾಗಿದ್ದನು (ಸಭಾ 33/35). ವಿದೇಹರಾಜ ಜನಕನು ಕೇಳಿದಾಗ, ಇವನು ಜ್ಞಾನಸಂಬಂಧವಾದ ವಿವಿಧ ಉಪದೇಶವನ್ನು ನೀಡಿದುದು (ಶಾಂತಿ 310 ರಿಂದ 318). ಗಂಧರ್ವರಾಜ ವಿಶ್ವಾವಸುವಿನ ಇಪ್ಪತ್ತನಾಲ್ಕು ಪ್ರಶ್ನೆಗಳಿಗೆ ಇವನಿಂದ ಸಮಾಧಾನ (ಶಾಂತಿ 318/27–84). ಸೂರ್ಯದೇವನಿಂದ ಇವನಿಗೆ ವೇದಜ್ಞಾನದ ಪ್ರಾಪ್ತಿ (ಶಾಂತಿ 318/6–12). ಇವನ ಸಮ್ಮುಖದಲ್ಲಿ ಸರಸ್ವತಿ ಪ್ರಕಟವಾದುದು (ಶಾಂತಿ 318/14). ಇವನು ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರನೆಂದು ಹೇಳಲಾಗಿದೆ (ಅನು 4/51).

**ಯಾತುಧಾನೀ** – ರಾಜಾವೃಷಾದರ್ಭಿಯ ಮೂಲಕ ಯಜ್ಞದಿಂದ ಪ್ರಕಟಗೊಂಡ ಒಂದು ಕೃತ್ಯೆ (ಅನು 93/53). ಸರೋವರದ ಬಳಿಗೆ ಹೋದ ಸಪ್ತರ್ಷಿಗಳೊಡನೆ, ಅವರ ಹೆಸರಿನ ಅರ್ಥದ ಕುರಿತು ಈಕೆ ಪ್ರಶ್ನೆ ಕೇಳಿದುದು (ಅನು 93/80). ಶುನಃ ಸಖರೂಪಧಾರಿ ಇಂದ್ರನ ಮೂಲಕ ಇವಳ ವಧೆ (ಅನು 93/105).

**ಯಾನಸಂಧಿಪರ್ವ**– ಉದ್ಯೋಗ ಪರ್ವದ ಒಂದು ಅವಾಂತರಪರ್ವ (ಅಧ್ಯಾಯ 47ರಿಂದ 71).

**ಯಾಮುನ** – (1) ಒಂದು ಭಾರತೀಯ ಜನಪದ (ಭೀಷ್ಮ 9/51).
(2) ಗಂಗೆ– ಯಮುನೆಯ ಮಧ್ಯಭಾಗದಲ್ಲಿರುವ ಒಂದು ಪ್ರಾಚೀನ ಪರ್ವತ (ಅನು 68/3).

**ಯಾಯಾತ** – ಒಂದು ಪ್ರಾಚೀನತೀರ್ಥ. ಇಲ್ಲಿ ರಾಜಾಯಯಾತಿ ಯಜ್ಞಮಾಡಿದ್ದನು. ಇದರ ವಿಶೇಷ ಮಹಿಮೆಯ ವರ್ಣನೆ (ಶಲ್ಯ 41/32–39).

**ಯಾಯಾವರ** – ಮುನಿವೃತ್ತಿಯಿಂದ ಕಠೋರ ವ್ರತಪಾಲನೆಮಾಡುತ್ತಾ, ಸದಾ ಇತ್ತಿಂದತ್ತ ತಿರುಗಾಡುತ್ತಿರುವ, ಗೃಹಸ್ಥಬ್ರಾಹ್ಮಣರ ಒಂದು ಸಮೂಹವಿಶೇಷದ ಹೆಸರು. ಜರತ್ಕಾರು ಮುನಿ ಯಾಯಾವರನಾಗಿದ್ದನು (ಆದಿ 13/11, 18). ಯಾಯಾವರರ ಧರ್ಮದ ವರ್ಣನೆ (ಅನು 142).

**ಯಾಸ್ಕ** – ಒಬ್ಬ ಪ್ರಾಚೀನ ಋಷಿ. ಇವನು ಅನೇಕ ಯಜ್ಞಗಳಲ್ಲಿ ನಾರಾಯಣನನ್ನು ಶಿಪಿವಿಷ್ಟ ವೆಂಬ ಹೆಸರಿನಲ್ಲಿ ಕೀರ್ತಿಸಿದ್ದಾನೆ (ಶಾಂತಿ 342/72).

**ಯುಗಂಧರ** – (1) ಒಂದು ಪರ್ವತ ಅಥವಾ ಪ್ರದೇಶ (ಇಲ್ಲಿರುವ ಜನರು ಒಂಟೆ ಮತ್ತು ಕತ್ತೆಯ ಹಾಲಿನಿಂದ ಮೊಸರು ಮಾಡುತ್ತಾರೆ. ಅದು ಶಾಸ್ತ್ರ ನಿಷಿದ್ಧವಾಗಿದೆ.) (ವನ 129/9).
(2) ಪಾಂಡವ ಪಕ್ಷದ ಒಬ್ಬ ಯೋಧ. ಇವನು ದ್ರೋಣಾಚಾರ್ಯನ ಮೇಲೆ ಆಕ್ರಮಣ ಮಾಡಿ, ಕೊನೆಗೆ ಆತನಿಂದ ಕೊಲ್ಲಲ್ಪಟ್ಟನು (ದ್ರೋಣ 16/30–31).

**ಯುಗಪ** – ಒಬ್ಬ ದೇವ ಗಂಧರ್ವ. ಇವನು ಅರ್ಜುನನ ಜನ್ಮೋತ್ಸವಕ್ಕೆ ಆಗಮಿಸಿದ್ದನು (ಆದಿ 122/56).

**ಯುಧಾಮನ್ಯು** – ಪಾಂಡವಪಕ್ಷದ ಒಬ್ಬ ಶ್ರೇಷ್ಠ ರಥಿಕ. ಇವನು ಪಾಂಚಾಲ ದೇಶದ ರಾಜ ಕುಮಾರ (ಉದ್ಯೋಗ 170/5). ಇವನು ಅರ್ಜುನನ ಚಕ್ರರಕ್ಷಕನಾಗಿದ್ದನು (ಭೀಷ್ಮ 15/19). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/3). ಕೃತವರ್ಮನೊಂದಿಗೆ ಯುದ್ಧ (ದ್ರೋಣ 92/27–32). ದುರ್ಯೋಧನನೊಂದಿಗೆ ಇವನ ಯುದ್ಧ (ದ್ರೋಣ 130/30–43). ಕೃಪಾಚಾರ್ಯ

ನಿಂದ ಈತ ಪರಾಜಿತನಾದುದು (ಕರ್ಣ 61/55–56). ಇವನಿಂದ ಕರ್ಣನ ಸಹೋದರ ಚಿತ್ರಸೇನನ ವಧೆ (ಕರ್ಣ 83/39). ಅಶ್ವತ್ಥಾಮನ ಮೂಲಕ ಇವನ ವಧೆ (ಸೌಪ್ತಿಕ 8/38).

**ಯುಧಿಷ್ಠಿರ** – ಮಹಾರಾಜ ಪಾಂಡುವಿನ ಕ್ಷೇತ್ರಜ ಪುತ್ರ (ಆದಿ 1/14; ಆದಿ 63/115–116). ಧರ್ಮ ರಾಜನ ಮೂಲಕ ಕುಂತಿಯ ಗರ್ಭದಿಂದ ಇವನ ಜನ್ಮ; ಇವನ ಜನನ ಕಾಲದಲ್ಲಿ ಗ್ರಹಗಳ ಸ್ಥಿತಿ (ಆದಿ 122/6–7). ಇವನ ಜನ್ಮಕಾಲದಲ್ಲಿ ಆಕಾಶವಾಣಿಯಾಗಿತ್ತು. ಆ ವಾಣಿಯು 'ಈತ ಶ್ರೇಷ್ಠಪುರುಷನೂ ಧರ್ಮಾತ್ಮರಲ್ಲಿ ಅಗ್ರಗಣ್ಯನೂ ಪರಾಕ್ರಮಿಯೂ ಸತ್ಯವಾದಿಯೂ ಆದ ರಾಜ ನಾಗುವನು. ಪಾಂಡುವಿನ ಈ ಪ್ರಥಮ ಪುತ್ರನು 'ಯುಧಿಷ್ಠಿರ'ನೆಂಬ ಹೆಸರಿನಿಂದ ವಿಖ್ಯಾತನಾಗಿ, ಮೂರೂ ಲೋಕಗಳಲ್ಲಿ ಪ್ರಸಿದ್ಧನಾಗುವನು. ಇವನು ಯಶಸ್ವಿಯೂ, ತೇಜಸ್ವಿಯೂ, ಸದಾ ಚಾರಿಯೂ ಆಗುವನು (ಆದಿ 122/7–10). ಶತಶೃಂಗನಿವಾಸಿ ಋಷಿಗಳ ಮೂಲಕ ಇವನ ನಾಮಕರಣ ಸಂಸ್ಕಾರ (ಆದಿ 123/19–20). ವಸುದೇವನ ಪುರೋಹಿತನಾದ ಕಾಶ್ಯಪನ ಮೂಲಕ ಇವನ ಉಪನಯನಾದಿ ಸಂಸ್ಕಾರ (ಆದಿ 123/31). ರಾಜರ್ಷಿ ಶುಕನಿಂದ ಶಿಕ್ಷಣ ಪಡೆದು ಇವನು ತೋಮರ ಬೀಸುವ ಕಲೆಯಲ್ಲಿ ಪಾರಂಗತನಾದುದು (ಆದಿ 123/31). ಪಾಂಡು ವಿನ ಚಿತೆಯನ್ನೇರುವ ಮೊದಲು ಮಾದ್ರಿ ತನ್ನ ಪುತ್ರರ ತಲೆಯನ್ನಾಘ್ರಾಣಿಸಿ, ಯುಧಿಷ್ಠಿರನ ಕೈಹಿಡಿದು ಹೇಳಿದಳು 'ಪುತ್ರರೇ, ಈಗ ಅಣ್ಣನಾದ ಯುಧಿಷ್ಠಿರನೇ ನೀವು ನಾಲ್ಕು ಮಂದಿ ಸಹೋ ದರರ ತಂದೆಯಾಗಿದ್ದಾನೆ.' (ಆದಿ 124/28). ಶತಶೃಂಗ ನಿವಾಸಿಗಳಾದ ಮುನಿಗಳು ಪಾಂಡವ ರನ್ನು ಹಸ್ತಿನಾಪುರಕ್ಕೆ ಕರಕೊಂಡು ಹೋಗಿ, ಭೀಷ್ಮನಿಗೆ ಯುಧಿಷ್ಠಿರನ ಪರಿಚಯಮಾಡಿಸುತ್ತಾ 'ಮಹಾರಾಜ ಪಾಂಡುವಿಗೆ ಸಾಕ್ಷಾತ್ ಧರ್ಮ ರಾಜನ ಮೂಲಕ ಈ ಪುತ್ರನು ಪ್ರಾಪ್ತವಾಗಿ ದ್ದಾನೆ. ಇವನ ಹೆಸರು ಯುಧಿಷ್ಠಿರ' ಎಂದರು (ಆದಿ 125/22–23). ದುರ್ಯೋಧನನಿಂದ ಜಲವಿಹಾರದ ಸೂಚನೆ ಮತ್ತು ಯುಧಿಷ್ಠಿರನು ಅದನ್ನು ಒಪ್ಪಿದುದು (ಆದಿ 127/35–37). ಧರ್ಮಾತ್ಮನಾದ ಯುಧಿಷ್ಠಿರನು ಭೀಮಸೇನ ನನ್ನು ಕಾಣದೆ, ತಾಯಿಯಾದ ಕುಂತಿಯ ಬಳಿಗೆ ಹೋಗಿ ಭೀಮಸೇನನ ಕುರಿತಾಗಿ ಕೇಳಿದುದು ಮತ್ತು ಆತನಿಗಾಗಿ ಕಳವಳಕ್ಕೀಡಾದುದು. ಭೀಮ ಸೇನನು ಕಳೆದುಹೋದ ಸಮಾಚಾರದಿಂದ ಚಿಂತಿತಳಾದ ಕುಂತಿ, ಆತನನ್ನು ಹುಡುಕಲು ಯುಧಿಷ್ಠಿರನಿಗೆ ಆದೇಶಿಸಿದುದು (ಆದಿ 128/4–12). ಭೀಮಸೇನನು ನಾಗಲೋಕದಿಂದ ಬಂದು ತನ್ನ ಅಣ್ಣನಿಗೆ ನಮಸ್ಕಾರ ಮಾಡಿದುದು ಮತ್ತು ದುರ್ಯೋಧನನ ದುಷ್ಕಾರ್ಯವನ್ನು ಹೇಳಿದುದು. ಭೀಮಸೇನನು ಪೂರ್ಣ ಸುಮ್ಮನಿರುವಂತೆ ಯುಧಿ ಷ್ಠಿರನ ಸಲಹೆ; ಅವರು ಸದಾ ಜಾಗೃತರಾದುದು (ಆದಿ 128/30–35). ಇವನು ದ್ರೋಣಾಚಾರ್ಯ ನೊಡನೆ, "ಕೃಪಾಚಾರ್ಯನ ಅನುಮತಿ ಪಡೆದು, ನೀವು ಸದಾ ಹಸ್ತಿನಾಪುರದಲ್ಲಿಯೇ ಇದ್ದು, ಜೀವನನಿರ್ವಹಣೆ ಮಾಡಲು ಬೇಕಾದುದನ್ನು ಒದಗಿಸುವೆವು" ಎಂದು ಹೇಳಿದುದು (ಆದಿ 130/26). ರಥದಲ್ಲಿ ಕುಳಿತು ಯುದ್ಧಮಾಡುವು ದರಲ್ಲಿ ಇವನ ಕೌಶಲ್ಯ (ಆದಿ 131/63). ದ್ರೋಣಾ ಚಾರ್ಯನಿಂದ ಇವನ ಲಕ್ಷ್ಯವೇಧದ ಪರೀಕ್ಷೆ (ಆದಿ 131/71–77). ಯುಧಿಷ್ಠಿರನು ದ್ರುಪದ ನೊಂದಿಗೆ ಯುದ್ಧ ಮಾಡದಂತೆ ಅರ್ಜುನನು ತಡೆದುದು (ಆದಿ 137/26). ಧೃತರಾಷ್ಟ್ರನಿಂದ ಇವನಿಗೆ ಯೌವರಾಜ್ಯಾಭಿಷೇಕ (ಆದಿ 138/2). ಯುಧಿಷ್ಠಿರನು ತನ್ನ ಶೀಲ, ಸದಾಚಾರ ಮತ್ತು ಮನೋಯೋಗಪೂರ್ವಕ ಪ್ರಜಾಪಾಲನೆಯ ಪ್ರವೃತ್ತಿಯಿಂದ, ತನ್ನ ತಂದೆ ಪಾಂಡುವಿನ ಕೀರ್ತಿ ಯನ್ನು ಮುಚ್ಚಿಹಾಕಿದ್ದನು (ಆದಿ 138/3). ಪ್ರಜಾವರ್ಗದವರು ಯುಧಿಷ್ಠಿರನೇ ರಾಜ್ಯವನ್ನು ಪಡೆಯಲು ಯೋಗ್ಯನೆಂದು ಹೇಳಿದುದು (ಆದಿ 140/23–28). ಸಹೋದರರ ಸಮೇತ ವಾರಣಾ ವತಕ್ಕೆ ಹೋಗಲು ಸಿದ್ಧನಾಗಿ, ಯುಧಿಷ್ಠಿರನು ಗೌರವಾರ್ಹ ಕೌರವರಿಂದ ಅನುಮತಿ ಮತ್ತು ಆಶೀರ್ವಾದ ಬೇಡಿದುದು (ಆದಿ 142/11–16). ಹಸ್ತಿನಾವತಿಯ ಬ್ರಾಹ್ಮಣರು, ಧೃತರಾಷ್ಟ್ರನ ವಿಷಮವರ್ತನೆಯನ್ನು ನಿಂದಿಸುತ್ತಾ, ಯುಧಿಷ್ಠಿರ ನಿರುವಲ್ಲಿಗೇ ತಮ್ಮ ಮನೆಮಠ ಬಿಟ್ಟು ಹೋಗಲು ನಿಶ್ಚಯಮಾಡಿದುದು. ಯುಧಿಷ್ಠಿರನು ಪಟ್ಟಣಿಗ ರನ್ನು ಸಮಾಧಾನಗೊಳಿಸಿದುದು ಮತ್ತು ಧೃತ ರಾಷ್ಟ್ರನ ಆಜ್ಞಾಧೀನರಾಗಿರುವಂತೆ ಒತ್ತಾಯಿಸಿ

ದುದು (ಆದಿ 144/6–17). ಲಾಕ್ಷಾಗೃಹದಲ್ಲಿ ಕೌರವರ ಒಳಸಂಚಿನಿಂದ ಬದುಕಲು ಇವನಿಗೆ ವಿದುರನ ಸೂಚನೆ (ಆದಿ 144/19–26). 'ನಾನು ನಿಮ್ಮ ಮಾತನ್ನು ತಿಳಿದುಕೊಂಡೆ' ಎಂದು ಯುಧಿಷ್ಠಿರನ ಉತ್ತರ. ಕುಂತಿಯು ವಿಚಾರಿಸಿದಾಗ ಯುಧಿಷ್ಠಿರನು ವಿದುರನ ಹೇಳಿಕೆಯ ತಾತ್ಪರ್ಯ ತಿಳಿಸಿದುದು (ಆದಿ 144/27–33). ವಾರಣಾವತವಾಸಿಗಳಿಂದ ಸುತ್ತುವರಿಯಲ್ಪಟ್ಟ ಧರ್ಮರಾಜ ಯುಧಿಷ್ಠಿರನು ದೇವಗಣಗಳ ಮಧ್ಯದಲ್ಲಿರುವ ಸಾಕ್ಷಾತ್ ಇಂದ್ರನಂತೆ ಸುಶೋಭಿತನಾದನು (ಆದಿ 145/4). ಯುಧಿಷ್ಠಿರನು ಭೀಮಸೇನನಿಗೆ ಲಾಕ್ಷಾಗೃಹವು ಅಗ್ನಿವರ್ಧಕ ಪದಾರ್ಥಗಳಿಂದ ತಯಾರಿಸಿದ್ದೆಂದು ಹೇಳಿ, ಅದರೊಳಗೆ ಜಾಗ್ರತೆಯಿಂದ ಯಾವುದಾದರೂ ಗುಪ್ತಸ್ಥಾನದಲ್ಲಿ ವಾಸಿಸಲು ಮತ್ತು ಪಾಪಿಯಾದ ಪುರೋಚನ ಹಾಗೂ ದುರ್ಯೋಧನರಿಗೆ ಮೋಸಕೊಟ್ಟು, ಅಲ್ಲಿಂದ ಓಡಿಹೋಗುವ ನಿರ್ಧಾರವನ್ನು ತಿಳಿಸಿದುದು (ಆದಿ 145/13–31). ವಿದುರನು ಕಳುಹಿಸಿದ ಖನಕನೊಂದಿಗೆ ಯುಧಿಷ್ಠಿರನ ಮಾತುಕತೆ ಮತ್ತು ಸಹೋದರ ಸಹಿತ ತನ್ನನ್ನು ಸಂಕಟಮುಕ್ತನಾಗಿ ಮಾಡಲು, ಯಾವುದಾದರೂ ಉಪಾಯಮಾಡುವಂತೆ ಆಗ್ರಹ ಮಾಡಿದುದು (ಆದಿ 146/1–15). ಅರಗಿನ ಮನೆಯನ್ನು ಉರಿಸಲು ಇವನಿಂದ ಸಹೋದರರಿಗೆ ಸೂಚನೆ (ಆದಿ 147/2–4). ವಿದುರನಿಂದ ಕಳುಹಿಸಲ್ಪಟ್ಟ ನಾವಿಕನು ಯುಧಿಷ್ಠಿರನಿಗೆ ವಿದುರನ ಸಂದೇಶ ತಿಳಿಸಿದುದು. ತಾಯಿ ಮತ್ತು ಸಹೋದರರ ಸಹಿತ ಈತ ಗಂಗೆಯನ್ನು ಉತ್ತರಿಸಿದುದು (ಆದಿ 147). ಭೀಷ್ಮ, ಕೌರವ ಮತ್ತು ಪುತ್ರರ ಸಹಿತನಾದ ಧೃತರಾಷ್ಟ್ರ, ಯುಧಿಷ್ಠಿರಾದಿಗಳಿಗೆ ಜಲಾಂಜಲಿಯನ್ನಿತ್ತದ್ದು, ಪುರವಾಸಿಗಳೂ, ಭೀಷ್ಮನೂ ಇವರಿಗಾಗಿ ಶೋಕ ಮತ್ತು ವಿಲಾಪ ಮಾಡಿದುದು. ವಿದುರನು ಭೀಷ್ಮನೊಡನೆ ಗುಟ್ಟಾಗಿ, ಯುಧಿಷ್ಠಿರಾದಿಗಳು ಜೀವಂತವಿರುವ ವಿಷಯತಿಳಿಸಿದುದು (ಆದಿ 149/15–18). ಧರ್ಮರಾಜ ಯುಧಿಷ್ಠಿರನ ಪ್ರೇರಣೆಯಿಂದ, ಬಲಶಾಲಿಯಾದ ಭೀಮಸೇನನು ಸಹೋದರರನ್ನೂ ಕುಂತಿಯನ್ನೂ ಎತ್ತಿಕೊಂಡು ವೇಗವಾಗಿ ನಡೆದುದು (ಆದಿ 149/23–26). ತಾಯಿ ಮತ್ತು ಯುಧಿಷ್ಠಿರಾದಿಗಳ ದಯನೀಯ ಅವಸ್ಥೆಯನ್ನು ಕಂಡು ಭೀಮಸೇನನ ವಿಷಾದ ಮತ್ತು ರೋಷ (ಆದಿ 150/21–43). ಭೀಮಸೇನನು ಹಿಡಿಂಬೆಗೆ ತನ್ನ ಅಣ್ಣನ ಪರಿಚಯನೀಡಿದುದು (ಆದಿ 141/31). ಹಿಡಿಂಬೆಯ ಬಾಯಿಯಿಂದ ಭೀಮಸೇನ ಮತ್ತು ಹಿಡಿಂಬರ ಯುದ್ಧದ ವಿಚಾರ ಕೇಳಿ, ಯುಧಿಷ್ಠಿರನು ಜಿಗಿದು ಎದ್ದು ನಿಂತದ್ದು (ಆದಿ 153/13). ಹಿಡಿಂಬೆಯನ್ನು ಕೊಲ್ಲಲು ಸಿದ್ಧನಾದ ಭೀಮನನ್ನು ಈತ ನಿಷೇಧಿಸಿದುದು (ಆದಿ 154/2–3). ಕುಂತಿಸಹಿತ ಯುಧಿಷ್ಠಿರನೊಡನೆ ಹಿಡಿಂಬೆಯಿಂದ ಭೀಮಸೇನನಿಗಾಗಿ ಪ್ರಾರ್ಥನೆ. ಇದನ್ನೊಪ್ಪಲು ಕುಂತಿಯು ಯುಧಿಷ್ಠಿರನ ಸಮ್ಮತಿ ಬಯಸಿದುದು. ಯುಧಿಷ್ಠಿರನಿಂದ ಕೆಲವು ನಿಯಮಕ್ಕೊಳಪಟ್ಟು, ಹಿಡಿಂಬೆಯು ಭೀಮಸೇನನನ್ನು ಕರಕೊಂಡು ಹೋಗಲು ಆದೇಶ (ಆದಿ 154/4–18). ಭೀಮಸೇನನನ್ನು ಬಕನೆಂಬ ರಾಕ್ಷಸನ ಬಳಿಗೆ ಕಳುಹಿಸುವ ಕುರಿತು ಯುಧಿಷ್ಠಿರ ಮತ್ತು ಕುಂತಿಯ ಮಾತುಕತೆ (ಆದಿ 161). ಪಾಂಚಾಲ ದೇಶಕ್ಕೆ ಹೋಗುವಂತೆ ಯುಧಿಷ್ಠಿರನಿಗೆ ಕುಂತಿಯ ಪ್ರೇರಣೆ ಮತ್ತು ಇವನ ಸಮ್ಮತಿ (ಆದಿ 167/3–8). ಚಿತ್ರರಥ ಗಂಧರ್ವನ ಪ್ರಾಣರಕ್ಷಣೆಗಾಗಿ ಅರ್ಜುನನಿಗೆ ಇವನ ಆದೇಶ (ಆದಿ 169/36–37). ಪಾಂಚಾಲಯಾತ್ರೆಯ ಸಮಯದಲ್ಲಿ, ಹಾದಿಯಲ್ಲಿ ಬ್ರಾಹ್ಮಣರೊಂದಿಗೆ ಯುಧಿಷ್ಠಿರನ ಮಾತುಕತೆ (ಆದಿ 183). ಶ್ರೀಕೃಷ್ಣನು ಪಾಂಡವರನ್ನು ಗುರುತಿಸಿ, ಬಲರಾಮನಿಗೆ ಯುಧಿಷ್ಠಿರಾದಿಗಳ ಪರಿಚಯತಿಳಿಸಿದುದು (ಆದಿ 186/9–10). ಕುಂತಿಯು ಯುಧಿಷ್ಠಿರನೊಡನೆ ತನ್ನ ಹೇಳಿಕೆಯು ಸತ್ಯವಾಗುವಂತೆಯೂ, ದ್ರೌಪದಿಯು ಅಧರ್ಮದಿಂದ ರಕ್ಷಿಸಲ್ಪಡುವಂತೆಯೂ ಉಪಾಯವನ್ನು ಕೇಳಿದುದು (ಆದಿ 190/3–5). ಇವನು ತಾಯಿಯಾದ ಕುಂತಿಗೆ ಆಶ್ವಾಸನೆಯನ್ನಿತ್ತು, ಅರ್ಜುನನೊಡನೆ ದ್ರೌಪದಿಯ ಕುರಿತು ವಾರ್ತಾಲಾಪ ಮಾಡಿ, 'ದ್ರೌಪದಿ, ಸಹೋದರರಾದ ನಮ್ಮೆಲ್ಲರ ಪತ್ನಿಯಾಗುವಳೆಂ'ಬ ನಿಶ್ಚಯವನ್ನು ಹೇಳಿದುದು (ಆದಿ 190/6–16). ಶ್ರೀಕೃಷ್ಣ ಮತ್ತು ಬಲರಾಮರು ಕುಂಬಾರನ ಮನೆಗೆ ಹೋಗಿ, ಯುಧಿಷ್ಠಿರನಿಗೆ ಪ್ರಣಾಮ ಮಾಡಿದುದು. ಯುಧಿಷ್ಠಿರನು ಅವರೊಡನೆ ಕುಶಲ ಸಮಾಚಾರ ಕೇಳಿ, 'ತಾವು

ನಮ್ಮನ್ನು ಹೇಗೆ ಗುರುತಿಸಿದಿರೆಂ'ದು ತನ್ನ ಜಿಜ್ಞಾಸೆಯನ್ನು ಪ್ರಕಟಿಸಿದುದು (ಆದಿ 190/18–22). ದ್ರುಪದ ಪುರೋಹಿತನು ಯುಧಿಷ್ಠಿರನೊಂದಿಗೆ ಅವರ ಪರಿಚಯ ಕೇಳಿದುದು ಮತ್ತು ದ್ರುಪದನ ಅಭಿಲಾಷೆಯನ್ನು ತಿಳಿಸಿದುದು. ಯುಧಿಷ್ಠಿರನು ಭೀಮಸೇನನಿಂದ ಪುರೋಹಿತರ ಪೂಜೆ ಮಾಡಿಸಿ, ಆ ಸಮಯಕ್ಕೆ ಸಂಬಂಧಿಸಿದ ಮಾತುಕತೆ ಮಾಡಿದುದು ಮತ್ತು ದ್ರುಪದನ ಅಭಿಲಾಷೆ ಸಫಲವಾಗಿದೆ ಎಂದು ತಿಳಿಸಿದುದು (ಆದಿ 192). ಪುರೋಹಿತನ ಬಾಯಿಯಿಂದ ಯುಧಿಷ್ಠಿರನ ಹೇಳಿಕೆಯನ್ನು ಕೇಳಿ, ದ್ರುಪದನು ಪಾಂಡವರ ಶೀಲಸ್ವಭಾವಗಳ ಪರೀಕ್ಷೆ ಮಾಡಿದುದು ಮತ್ತು ಅವರೆಲ್ಲರಿಗೂ ಭೋಜನ ಮಾಡಿಸಿದುದು (ಆದಿ 193). ಯುಧಿಷ್ಠಿರನು ತನ್ನ ಎಲ್ಲಾ ಸಹೋದರರ ಪರಿಚಯತಿಳಿಸಿ, ದ್ರುಪದನಿಗೆ ಆಶ್ವಾಸನೆಯನ್ನಿತ್ತದ್ದು (ಆದಿ 194/8–12). ದ್ರುಪದನು ಯುಧಿಷ್ಠಿರನೊಡನೆ ಲಾಕ್ಷಾಗೃಹದಿಂದ ಸಂತೋಷಪೂರ್ವಕ ಬದುಕಿಬಂದ ಸಮಾಚಾರ ಕೇಳಿದುದು; ಯುಧಿಷ್ಠಿರನು ಎಲ್ಲಾ ವಿಚಾರ ತಿಳಿಸಿದುದು (ಆದಿ 194/15–17). 'ದ್ರೌಪದಿಯ ವಿವಾಹ ಯಾರೊಡನೆ ಆಗಬೇಕು' ಎಂದು. ದ್ರುಪದನು ಕೇಳಿದಾಗ, 'ದ್ರೌಪದಿ, ಸಹೋದರರಾದ ನಮ್ಮೆಲ್ಲರ ಮಹಾರಾಣಿಯಾಗುವಳು' ಎಂದು ಈತನ ಉತ್ತರ. ಈ ಕಾರ್ಯ ಧರ್ಮಸಂಗತವೆಂದು ಹೇಳಿದುದು. ದ್ರುಪದನು ಇವನ ಈ ನಿರ್ಧಾರವನ್ನು ಲೋಕವೇದವಿರುದ್ಧವೆಂದು ಹೇಳಿದುದು; ಕುಂತಿಯೇ ಮೊದಲಾದವರೊಂದಿಗೆ ಕುಳಿತು ಈ ಕುರಿತು ವಿಚಾರ ಮಾಡುವಂತೆ ಪ್ರೇರಿಸಿದುದು (ಆದಿ 194/20–32). ವ್ಯಾಸರು ಕೇಳಿದಾಗ ದ್ರೌಪದೀ ವಿವಾಹ ಸಂಬಂಧವಾಗಿ ಇವನ ನಿರ್ಣಯ (ಆದಿ 195/13–17). ದ್ರೌಪದಿಯೊಂದಿಗೆ ವಿಧಿಪೂರ್ವಕ ಈತನ ವಿವಾಹ (ಆದಿ 197/11–12). ಯುಧಿಷ್ಠಿರನು ಅರ್ಧರಾಜ್ಯ ಪಡೆದು ಸಹೋದರರ ಸಹಿತನಾಗಿ ಖಾಂಡವಪ್ರಸ್ಥವನ್ನು ಪ್ರವೇಶಿಸಿದುದು (ಆದಿ 206/23–27). ಶ್ರೀಕೃಷ್ಣನು ವಿಶ್ವಕರ್ಮನ ಮೂಲಕ ಯುಧಿಷ್ಠಿರನಿಗೆ ಇಂದ್ರಪ್ರಸ್ಥದಲ್ಲಿ ಒಂದು ದಿವ್ಯನಗರ ನಿರ್ಮಾಣ ಮಾಡಿಸಿದುದು, ಯುಧಿಷ್ಠಿರನು ಆ ನಗರ ಮತ್ತು ಭವನ ಪ್ರವೇಶ ಮಾಡಿದುದು. ದ್ವಾರಕೆಗೆ ಹೋಗುತ್ತಿರುವ ಶ್ರೀಕೃಷ್ಣನೊಡನೆ, ಪಾಂಡವರ ಮೇಲೆ ಸದಾಕೃಪಾ ಪೂರ್ಣನಾಗಿರುವಂತೆಯೂ, ಕರ್ತವ್ಯಕ್ಕೆ ಅನುಮತಿಯನ್ನು ಕೊಡುವಂತೆಯೂ ಪ್ರಾರ್ಥಿಸಿದುದು (ಆದಿ 206/28–51). ಸಹೋದರರ ಸಹಿತನಾದ ಯುಧಿಷ್ಠಿರನಿಂದ ಧರ್ಮಪೂರ್ವಕ ಪ್ರಜಾಪಾಲನೆ (ಆದಿ 207/5–8). ಇವನ ಬಳಿಗೆ ದೇವರ್ಷಿ ನಾರದನ ಶುಭಾಗಮನ (ಆದಿ 207/9). ರಾಜಾ ಯುಧಿಷ್ಠಿರನಿಂದ ದೇವರ್ಷಿ ನಾರದನ ಸತ್ಕಾರ. ನಾರದನು ಯುಧಿಷ್ಠಿರಾದಿಗಳೊಡನೆ, ದ್ರೌಪದಿಯ ಕುರಿತಾಗಿ ಕೆಲವು ನಿಯಮಗಳನ್ನು ಮಾಡಿಕೊಳ್ಳುವಂತೆ ಹೇಳಿ, ಅವರಿಗೆ ಸುಂದ ಮತ್ತು ಉಪಸುಂದರ ಕಥೆಯನ್ನು ಹೇಳಿದುದು (ಆದಿ 207/18 ರಿಂದ ಆದಿ 211ರ ತನಕ). ನಿಯಮಭಂಗ ಮಾಡಿದ ಪ್ರಾಯಶ್ಚಿತ್ತಕ್ಕಾಗಿ ಆಜ್ಞೆ ಬೇಡುತ್ತಿರುವ ಧನಂಜಯನನ್ನು ಕಾಡಿಗೆ ಹೋಗದಂತೆ ಯುಧಿಷ್ಠಿರನು ತಡೆದುದು (ಆದಿ 212/27–33). ಸುಭದ್ರಾಹರಣಕ್ಕೆ ಇವನಿಂದ ಅರ್ಜುನನಿಗೆ ಅನುಮತಿ (ಆದಿ 218/25). ಸುಭದ್ರೆಗೋಸ್ಕರ ವರದಕ್ಷಿಣೆ ತೆಗೆದುಕೊಂಡು ಬಂದ ಶ್ರೀಕೃಷ್ಣ ಬಲರಾಮಾದಿಗಳು ಯುಧಿಷ್ಠಿರನ ಭೇಟಿ ಮಾಡಿದುದು; ಯುಧಿಷ್ಠಿರನಿಂದ ಅವರೆಲ್ಲರ ಸತ್ಕಾರ (ಆದಿ 220/38–43). ಅಭಿಮನ್ಯು ಜನಿಸಿದಾಗ, ಯುಧಿಷ್ಠಿರನು ಬ್ರಾಹ್ಮಣರಿಗೆ ಹತ್ತುಸಾವಿರ ಗೋದಾನ ಮಾಡಿದುದು (ಆದಿ 220/69). ದ್ರೌಪದಿ ಯುಧಿಷ್ಠಿರನಿಂದ ಪ್ರತಿವಿಂಧ್ಯನೆಂಬ ಪುತ್ರನನ್ನು ಪಡೆದುದು (ಆದಿ 63/122–123; ಆದಿ 95/75; ಆದಿ 220/79). ಇವನ ಮೂಲಕ ಶಿಬಿ ರಾಜಕುಮಾರಿ ದೇವಿಕೆಯ ಗರ್ಭದಿಂದ ಯೌಧೇಯನ ಜನನ (ಆದಿ 95/76). ಯುಧಿಷ್ಠಿರ ಮತ್ತು ಆತನ ರಾಜ್ಯದ ವಿಶೇಷತೆ (ಆದಿ 221/2–16). ಶ್ರೀಕೃಷ್ಣನು ಧರ್ಮರಾಜ ಯುಧಿಷ್ಠಿರನಿಗೆ ಒಂದು ದಿವ್ಯ ಸಭಾಭವನವನ್ನು ಸಿದ್ಧಪಡಿಸುವಂತೆ ಮಯಾಸುರನಿಗೆ ಆದೇಶ ನೀಡಿದುದು (ಸಭಾ 1/10–13). ಶ್ರೀಕೃಷ್ಣನು ದ್ವಾರಕೆಗೆ ಹೋಗುತ್ತಿರುವಾಗ, ಅವನ ರಥದ ಮೇಲೆ ದಾರುಕನನ್ನು ಸರಿಸಿ, ರಾಜಾ ಯುಧಿಷ್ಠಿರನು ಸ್ವತಃ ಕುಳಿತದ್ದು ಮತ್ತು ಕುದುರೆಯ ಲಗಾಮುಗಳನ್ನು ಹಿಡಿದುದು (ಸಭಾ 2/16–17). ಮಯಾಸುರನು ರಾಜಾ

ಯುಧಿಷ್ಠಿರನಿಗೆ ದಿವ್ಯಸಭಾಭವನ ಸಿದ್ಧವಾಗಿದೆ ಯೆಂಬ ಸೂಚನೆಯನ್ನಿತ್ತದ್ದು (ಸಭಾ 3/37). ಮಯನಿರ್ಮಿತ ಸಭಾಭವನಕ್ಕೆ ಈತನ ಪ್ರವೇಶ (ಸಭಾ 4/1–8). ನಾರದನಿಂದ ಈತನಿಗೆ ವಿವಿಧ ಮಂಗಲಮಯ ಉಪದೇಶಗಳು (ಸಭಾ 5). ವಿವಿಧ ದಿವ್ಯಸಭೆಗಳ ಕುರಿತು ಇವನ ಜಿಜ್ಞಾಸೆ. ನಾರದನಿಂದ ಅವುಗಳ ವರ್ಣನೆ (ಸಭಾ 6 ರಿಂದ 11). ರಾಜಸೂಯ ಯಜ್ಞಮಾಡಲು ಇವನಿಗೆ ನಾರದನ ಮೂಲಕ ಪಾಂಡುವಿನ ಸಂದೇಶ (ಸಭಾ 12). ರಾಜಸೂಯ ಯಜ್ಞದ ಕುರಿತು ಇವನ ಸಂಕಲ್ಪ. ಆ ಕುರಿತು ಸಹೋದರರು, ಮಂತ್ರಿಗಳು, ಮುನಿಗಳು ಮತ್ತು ಶ್ರೀಕೃಷ್ಣನೊಡನೆ ಸಲಹೆ ಪಡೆದುದು (ಸಭಾ 13). ಶ್ರೀಕೃಷ್ಣನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಸಮ್ಮತಿಸಿದುದು (ಸಭಾ 14). ರಾಜಸೂಯ ಯಜ್ಞದ ಮೊದಲು ಜರಾಸಂಧನನ್ನು ಕೊಲ್ಲಲು ಶ್ರೀಕೃಷ್ಣನಿಂದ ಈತನಿಗೆ ಸಲಹೆ (ಸಭಾ 15). ಜರಾಸಂಧನನ್ನು ಗೆಲ್ಲುವ ಕುರಿತು ಇವನು ಉತ್ಸಾಹಹೀನವಾದಾಗ ಅರ್ಜುನನ ಉತ್ಸಾಹ ಪೂರ್ಣ ಉದ್ಗಾರ (ಸಭಾ 16/13). ಶ್ರೀಕೃಷ್ಣನು ಅರ್ಜುನನ ಮಾತನ್ನು ಅನುಮೋದಿಸುತ್ತಾ, ಇವನ ಕೇಳಿಕೆಗೋಸ್ಕರ ಜರಾಸಂಧನ ಜನನ ಪ್ರಸಂಗವನ್ನು ಹೇಳಿದುದು (ಸಭಾ 17/19). ಇವನ ಅನುಮೋದನೆಯ ಅನಂತರ ಶ್ರೀಕೃಷ್ಣ, ಭೀಮಸೇನ ಮತ್ತು ಅರ್ಜುನರ ಮಗಧಯಾತ್ರೆ (ಸಭಾ 20). ಅರ್ಜುನನು ಉತ್ತರ ದಿಕ್ಕಿನ ವಿಜಯಕ್ಕೋಸ್ಕರ ಹೋಗಲು ಯುಧಿಷ್ಠಿರನಿಂದ ಆಜ್ಞೆ ಬೇಡಿದುದು. ಯುಧಿಷ್ಠಿರನು ಸ್ವಸ್ತಿವಾಚನ ಮಾಡಿಸಿ, ಹೋಗಲು ಆಜ್ಞೆಯನ್ನಿತ್ತದ್ದು (ಸಭಾ 25/1–7). ಇತರ ಸಹೋದರರೂ ಧರ್ಮ ರಾಜನಿಂದ ಸಮ್ಮಾನಿತರಾಗಿ ದಿಗ್ವಿಜಯಕ್ಕೋಸ್ಕರ ಯಾತ್ರೆಮಾಡಿದುದು ಮತ್ತು ಕೇವಲ ಧರ್ಮ ರಾಜನು ಖಾಂಡವಪ್ರಸ್ಥದಲ್ಲಿ ಉಳಿದುದು (ಸಭಾ 25/8–11). ಯುಧಿಷ್ಠಿರನ ಶಾಸನದ ವಿಶೇಷತೆ, ಶ್ರೀಕೃಷ್ಣನ ಆಜ್ಞೆಯಿಂದ ಈತ ರಾಜಸೂಯ ಯಜ್ಞದ ದೀಕ್ಷೆ ವಹಿಸಿದುದು. ರಾಜರನ್ನೂ ಬ್ರಾಹ್ಮಣರನ್ನೂ, ಸಂಬಂಧಿಗಳನ್ನೂ ಕರೆಸಲು ಆಮಂತ್ರಣ ಕಳುಹಿಸಿದುದು (ಸಭಾ 33). ಇವನ ಯಜ್ಞಕ್ಕೆ ಎಲ್ಲಾ ದೇಶದ ರಾಜರೂ, ಕೌರವರೂ, ಯಾದವರೂ ಆಗಮಿಸಿದುದು. ಅವರೆಲ್ಲರಿಗೆ ಭೋಜನ ವಿಶ್ರಾಂತಿ ಇತ್ಯಾದಿಗಳ ಸುವ್ಯವಸ್ಥೆ (ಸಭಾ 34). ಇವನ ರಾಜಸೂಯ ಯಜ್ಞದ ವರ್ಣನೆ (ಸಭಾ 35). ಯುಧಿಷ್ಠಿರನ ಯಜ್ಞ ಶಾಲೆಯ ವಿಶೇಷತೆ, ಇವನ ಆ ಧನವೈಭವ ಮತ್ತು ಯಜ್ಞವೈಭವವನ್ನು ನೋಡಿ, ದೇವರ್ಷಿ ನಾರದನ ಸಂತೋಷ (ಸಭಾ 36/9–10). ರಾಜರಿಗೆ ಅರ್ಘ್ಯಪ್ರದಾನ ಮಾಡಲು, ಭೀಷ್ಮನು ಯುಧಿಷ್ಠಿರನಿಗೆ ಆದೇಶ ನೀಡಿದುದು ಮತ್ತು ಭೀಷ್ಮನೊಡನೆ ಕೇಳಿ, ಯುಧಿಷ್ಠಿರನು ಸಹದೇವನ ಮೂಲಕ ಶ್ರೀಕೃಷ್ಣನಿಗೆ ಎಲ್ಲರಿಗಿಂತ ಮೊದಲು ಅರ್ಘ್ಯ ಪ್ರದಾನ ಮಾಡಿಸಿದುದು (ಸಭಾ 36/22–31). ಶಿಶುಪಾಲನು ವಿರೋಧಿಸಿದಾಗ ಇವನು ಆತನನ್ನು ಸಮಾಧಾನಪಡಿಸಿದುದು (ಸಭಾ 38/1–5). ಯುಧಿಷ್ಠಿರನು ಭೀಷ್ಮನಿಂದ ಶ್ರೀಕೃಷ್ಣನ ಸಂಪೂರ್ಣ ಚರಿತ್ರೆಗಳನ್ನು ಕೇಳುವ ಇಚ್ಛೆ ಪ್ರಕಟಿಸಿದುದು. ಭೀಷ್ಮನು ಭಗವಂತನ ಅತೀತ, ವರ್ತಮಾನ ಮತ್ತು ಭಾವೀ ಅವತಾರಗಳ ವರ್ಣನೆಮಾಡಿದುದು (ಸಭಾ 38/29). ಶಿಶುಪಾಲನು ರಾಜಸೂಯಯಜ್ಞದಲ್ಲಿ ಅಡ್ಡಿಯ ನ್ನುಂಟುಮಾಡಿದ್ದರಿಂದ ಇವನ ಚಿಂತೆ ಮತ್ತು ಭೀಷ್ಮನ ಮೂಲಕ ಇವನಿಗೆ ಆಶ್ವಾಸನೆ (ಸಭಾ 40). ಶಿಶುಪಾಲನ ಅಂತ್ಯೇಷ್ಟಿ ಸಂಸ್ಕಾರ ಮಾಡಲು, ಯುಧಿಷ್ಠಿರನು ತನ್ನ ಸಹೋದರರಿಗೆ ಆಜ್ಞೆ ಮಾಡಿದುದು ಮತ್ತು ಅವನ ಪುತ್ರನಿಗೆ ಚೇದಿ ದೇಶದ ರಾಜ್ಯಾಭಿಷೇಕ ಮಾಡಿದುದು (ಸಭಾ 45/34–36). ಇವನ ರಾಜಸೂಯ ಯಜ್ಞದ ವಿಸ್ತೃತ ವರ್ಣನೆ ಮತ್ತು ಅದರ ಸಮಾಪ್ತಿ (ಸಭಾ 45/37–39). ಧರ್ಮಾತ್ಮನಾದ ಯುಧಿಷ್ಠಿರನ ಅವಭೃಥ ಸ್ನಾನ. ರಾಜರು ಈತ ನಿಗೆ ಅಭಿನಂದನೆ ಹೇಳಿ, ಸ್ವದೇಶಕ್ಕೆ ಹೊರಡಲು ಅನುಮತಿ ಯಾಚಿಸಿದುದು. ಯುಧಿಷ್ಠಿರನು ಅವರೆಲ್ಲರನ್ನೂ ತನ್ನ ರಾಜ್ಯದ ಗಡಿಯತನಕ ತಲುಪಿಸಿ ಬರಲು, ಸಹೋದರರಿಗೆ ಆದೇಶ ನೀಡಿ ದುದು (ಸಭಾ 45/40–45). ಶ್ರೀಕೃಷ್ಣನು ಯುಧಿ ಷ್ಠಿರನಿಂದ ವಿದಾಯ ಯಾಚಿಸಿದುದು; ಈತ ಗದ್ಗದ ಕಂಠದಿಂದ ಅನುಮತಿ ನೀಡಿದುದು; ಅವನು ಹೋಗುತ್ತಿರುವಾಗ, ಸಹೋದರರು ಸಹಿತ ನಾಗಿ ಯುಧಿಷ್ಠಿರನು ಕಾಲ್ನಡಿಗೆಯಲ್ಲೇ ಆತನ

ಹಿಂದೆ ಹಿಂದೆ ಹೋದುದು, ಶ್ರೀಕೃಷ್ಣನು ತನ್ನ ರಥವನ್ನು ತಡೆದು, ಯುಧಿಷ್ಠಿರನಿಗೆ ಕರ್ತವ್ಯದ ಉಪದೇಶ ಕೊಟ್ಟು, ಈತನನ್ನು ಹಿಂತಿರುಗಿಸಿದುದು ಮತ್ತು ತಾನೂ ಆಜ್ಞೆ ಪಡೆದು ಹೋದುದು (ಸಭಾ 45/51–67). ರಾಜಸೂಯ ಯಜ್ಞಾಂತ್ಯದಲ್ಲಿ ವ್ಯಾಸರ ಭವಿಷ್ಯವಾಣಿಯಿಂದ ಇವನಿಗೆ ಚಿಂತೆ ಮತ್ತು ಸಮತ್ವಪೂರ್ಣ ವರ್ತನೆ ಮಾಡಿಕೊಂಡಿರಲು ಪ್ರತಿಜ್ಞೆ (ಸಭಾ 46). ಇವನಿಂದ ಪ್ರತಿದಿನ ಹತ್ತು ಸಾವಿರ ಬ್ರಾಹ್ಮಣರಿಗೆ, ಚಿನ್ನದ ಬಟ್ಟಲಲ್ಲಿ ಭೋಜನದಾನ (ಸಭಾ 49/18). ರಾಜಾಸೂಯ ಯಜ್ಞದಲ್ಲಿ ಇವನಿಗೆ ಸಮುದ್ರರಾಜನ ಮೂಲಕ ಮಧುವಿನ ಕಾಣಿಕೆ (ಸಭಾ 49/26). ಇವನ ರಾಜಸೂಯ ಯಜ್ಞದಲ್ಲಿ ಲಕ್ಷ ಬ್ರಾಹ್ಮಣರು ಭೋಜನಮಾಡಿದಾಗ ಶಂಖಧ್ವನಿ (ಸಭಾ 49/31). ಯುಧಿಷ್ಠಿನಿಗೆ ಕಾಣಿಕೆಯಾಗಿ ಸಿಕ್ಕಿದ ವಸ್ತುಗಳನ್ನು ದುರ್ಯೋಧನನು ವರ್ಣಿಸಿದುದು (ಸಭಾ 51ರಿಂದ 53). ಧೃತರಾಷ್ಟ್ರನ ಪ್ರೇರಣೆಯಿಂದ ವಿದುರನು ಇವನ ಬಳಿಗೆ ಬಂದುದು. ಆತನೊಡನೆ ಇವನ ಮಾತುಕತೆ (ಸಭಾ 58/16). ಇವನು ಪುರೋಹಿತ ಮತ್ತು ಸೇವಕರೊಂದಿಗೆ, ಸಪರಿವಾರವಾಗಿ ಹಸ್ತಿನಾಪುರಕ್ಕೆ ಹೋದುದು (ಸಭಾ 58/20). ಜೂಜಿನ ಅನೌಚಿತ್ಯದ ಕುರಿತಾಗಿ ಶಕುನಿಯೊಂದಿಗೆ ಇವನ ಸಂವಾದ (ಸಭಾ 59). ಯುಧಿಷ್ಠಿರನಿಂದ ದ್ಯೂತಕ್ರೀಡೆಯ ಆರಂಭ (ಸಭಾ 60/6–9). ಶಕುನಿಯ ಮೋಸದಿಂದ ಇವನು ಜೂಜಿನ ಪ್ರತಿಯೊಂದು ಪಣದಲ್ಲೂ ಸೋತದ್ದು (ಸಭಾ 61). ಧನ, ರಾಜ್ಯ, ಸಹೋದರರು ಮತ್ತು ದ್ರೌಪದಿಯ ಸಮೇತ ಈತ ತನ್ನನ್ನೂ ಸೋತುಕೊಂಡದ್ದು (ಸಭಾ 65). ಶತ್ರುಗಳನ್ನು ಕೊಲ್ಲಲು ಸಿದ್ಧನಾದ ಭೀಮಸೇನನನ್ನು ಯುಧಿಷ್ಠಿರನು ಶಾಂತಗೊಳಿಸಿದುದು (ಸಭಾ 72). ಇವನಿಗೆ ಧೃತರಾಷ್ಟ್ರನ ಆಶ್ವಾಸನೆ ಹಾಗೂ ಎಲ್ಲಾ ಧನವನ್ನು ಹಿಂತಿರುಗಿಸಿ, ಇಂದ್ರಪ್ರಸ್ಥಕ್ಕೆ ಹೋಗಲು ಆಜ್ಞೆಯನ್ನಿತ್ತದ್ದು (ಸಭಾ 73/2–16). ಇವನು ಇಂದ್ರಪ್ರಸ್ಥಕ್ಕೆ ಹಿಂತಿರುಗಿದುದು (ಸಭಾ 73/17–18). ಧೃತರಾಷ್ಟ್ರನ ಆಜ್ಞೆಯಿಂದ ಪುನಃ ದ್ಯೂತಕ್ಕಾಗಿ, ಇವನು ಮಾರ್ಗದಿಂದಲೇ ಹಿಂತಿರುಗಿದುದು (ಸಭಾ 76/6). ಎಲ್ಲರೂ ಅಡ್ಡಿಪಡಿಸಿದರೂ ಈತ ಶಕುನಿಯೊಂದಿಗೆ ಪುನಃ ಜೂಜಾಡಿದುದು ಮತ್ತು ಸೋತದ್ದು (ಸಭಾ 76/21–24). ಇವನು ಧೃತರಾಷ್ಟ್ರಾದಿಗಳಿಂದ, ವನಗಮನಕ್ಕಾಗಿ ವಿದಾಯ ಹೊಂದಿದುದು (ಸಭಾ 78/1–3). ವಿದುರನು ಯುಧಿಷ್ಠಿರನೊಂದಿಗೆ, ಕುಂತಿಯನ್ನು ತನ್ನ ಮನೆಯಲ್ಲಿ ಸತ್ಕಾರಪೂರ್ವಕ ಇರಿಸಿಕೊಳ್ಳುವ ಇಚ್ಛೆಯನ್ನು ಪ್ರಕಟಿಸಿದುದು ಮತ್ತು ಆ ಎಲ್ಲಾ ಸಹೋದರರಿಗೂ ಸಾಂತ್ವನ ಮತ್ತು ಆಶೀರ್ವಾದ ಕೊಟ್ಟದ್ದು (ಸಭಾ 78/5–23). ಯುಧಿಷ್ಠಿರಾದಿ ಪುತ್ರರು ಕಾಡಿನ ಕಡೆಗೆ ಹೋಗುತ್ತಿರುವುದನ್ನು ಕಂಡು ಕುಂತಿ ಆರ್ತಸ್ವರದಿಂದ ವಿಲಪಿಸಿದುದು. ಯುಧಿಷ್ಠಿರಾದಿಗಳು ಆಕೆಗೆ ಪ್ರಣಾಮಮಾಡಿ, ಹೊರಟು ಹೋದುದು (ಸಭಾ 79/13–30). ಯುಧಿಷ್ಠಿರನು ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಕಾಡಿಗೆ ನಡೆದುದು (ಸಭಾ 80/4). ಇವನು ತನ್ನೊಂದಿಗೆ ಬರುತ್ತಿದ್ದ ಪುರವಾಸಿಗಳನ್ನು ಹಿಂದಿರುಗಿ ಹೋಗುವಂತೆ ಒತ್ತಾಯಿಸಿದುದು (ವನ 1/37). ಜೊತೆಯಾಗಿ ಬರುತ್ತಿದ್ದ ಬ್ರಾಹ್ಮಣರೊಡನೆ ಹಿಂತಿರುಗಿ ಹೋಗುವಂತೆ ಇವನ ಆಗ್ರಹ (ವನ 2/2–4). ಇವನಿಂದ ಸೂರ್ಯನ ಸ್ತುತಿ (ವನ 3/36–69). ಸೂರ್ಯನಿಂದ ಈತನಿಗೆ ಅಕ್ಷಯಪಾತ್ರೆಯ ಪ್ರಾಪ್ತಿ (ವನ 3/72). ಈತ ಕಿರ್ಮೀರನಿಗೆ ತನ್ನ ಪರಿಚಯ ಹೇಳಿದುದು (ವನ 11/26–27). ಶ್ರೀಕೃಷ್ಣನ ಮುಖದಿಂದ ಶಾಲ್ವೋಪಾಖ್ಯಾನ – ಶ್ರವಣ (ವನ 15 ರಿಂದ 22). ಮಾರ್ಕಂಡೇಯನಿಂದ ಈತನಿಗೆ ಧರ್ಮದ ಕುರಿತಾದ ಆದೇಶ (ವನ 25/8–18). ಇವನಿಂದ ಕ್ರೋಧದ ನಿಂದೆ ಮತ್ತು ಕ್ಷಮೆಯ ಪ್ರಶಂಸೆ (ವನ 29). ದ್ರೌಪದಿಯ ಆಕ್ಷೇಪಕ್ಕೆ ಸಮಾಧಾನ (ವನ 31). ಇವನು ಭೀಮಸೇನನಿಗೆ ಬುದ್ಧಿಹೇಳುತ್ತಾ ಧರ್ಮದಲ್ಲಿಯೇ ಸ್ಥಿರನಾಗಿ ನಿಂತದ್ದು (ವನ 34). ಭೀಮಸೇನನಿಗೆ ಸಮಾಧಾನ (ವನ 36/2–20). ಇವನಿಗೆ ವ್ಯಾಸರಿಂದ ಪ್ರತಿಸ್ಮೃತಿ ವಿದ್ಯಾಪ್ರಾಪ್ತಿ (ವನ 36/38). ಇವನು ವ್ಯಾಸರ ಆಜ್ಞೆಯಿಂದ, ಸಹೋದರರು ಹಾಗೂ ವಿಪ್ರರೊಂದಿಗೆ ದ್ವೈತವನದಿಂದ ಕಾಮ್ಯಕ ವನಕ್ಕೆ ಹೋದುದು (ವನ 36/41). ಇವನಿಂದ ಅರ್ಜುನನಿಗೆ ಪ್ರತಿಸ್ಮೃತಿ ವಿದ್ಯೆಯ ಉಪದೇಶ (ವನ 37/16). ಇಂದ್ರನು ಲೋಮಶನನ್ನು,

ಯುಧಿಷ್ಠಿರನಿಗಾಗಿ ಸಂದೇಶವನ್ನಿತ್ತು ಕಳುಹಿಸಿದುದು ಮತ್ತು ಇವನ ರಕ್ಷಣೆಗಾಗಿ ಆತನನ್ನು ನಿಯುಕ್ತಗೊಳಿಸಿದುದು (ವನ 47/24–33). ಹದಿಮೂರು ವರ್ಷ ಶಾಂತವಾಗಿರಲು ಭೀಮಸೇನನಿಗೆ ಉಪದೇಶ (ವನ 52/37–39). ಬೃಹದಶ್ವನೊಂದಿಗೆ ಮಾತುಕತೆ ಮತ್ತು ನಲೋಪಾಖ್ಯಾನವನ್ನು ಕೇಳುವ ಇಚ್ಛೆಯನ್ನು ಪ್ರಕಟಿಸಿದುದು (ವನ 52/42–59). ಬೃಹದಶ್ವನು ಇವನಿಗೆ ನಲೋಪಾಖ್ಯಾನವನ್ನು ಹೇಳಿದುದು. ಇವನಿಗೆ ಮಹರ್ಷಿ ಬೃಹದಶ್ವನಿಂದ ಅಕ್ಷಹೃದಯ ಮತ್ತು ಅಶ್ವವಿದ್ಯೆಯ ಪ್ರಾಪ್ತಿ (ವನ 53ರಿಂದ 79). ದ್ರೌಪದಿಯು ಯುಧಿಷ್ಠಿರನೊಂದಿಗೆ ಅರ್ಜುನನಿಗಾಗಿ ಚಿಂತಿಸಿದುದು (ವನ 80/11–15). ಯುಧಿಷ್ಠಿರನ ಬಳಿಗೆ ದೇವರ್ಷಿ ನಾರದರ ಆಗಮನ. ಇವನಿಂದ ನಾರದನಲ್ಲಿ ತೀರ್ಥಯಾತ್ರಾ ಫಲದ ಕುರಿತು ಪ್ರಶ್ನೆ. ನಾರದನು ಭೀಷ್ಮ – ಪುಲಸ್ತ್ಯ ಸಂವಾದವನ್ನು ಪ್ರಸ್ತುತಪಡಿಸಿದುದು ಮತ್ತು ಇವನು ಋಷಿಗಳೊಂದಿಗೆ ತೀರ್ಥಯಾತ್ರೆ ಮಾಡಲು ಆದೇಶ ನೀಡಿದುದು (ವನ 81 ರಿಂದ 85). ಧೌಮ್ಯರೊಂದಿಗೆ ಪುಣ್ಯ, ತಪೋವನ, ಆಶ್ರಮ ಹಾಗೂ ನದಿ ಇತ್ಯಾದಿಗಳ ವಿಷಯವಾಗಿ ಈತನ ಪ್ರಶ್ನೆ. ಧೌಮ್ಯನಿಂದ ಇವನ ಮುಂದೆ ನಾಲ್ಕು ದಿಕ್ಕುಗಳಲ್ಲಿರುವ ತೀರ್ಥಗಳ ವರ್ಣನೆ (ವನ 86ರಿಂದ 90). ಯುಧಿಷ್ಠಿರನ ಬಳಿಗೆ ಮಹರ್ಷಿ ಲೋಮಶನ ಆಗಮನ ಇವನೊಡನೆ ಅರ್ಜುನನಿಗೆ ಪಾಶುಪತಾದಿ ದಿವ್ಯಾಸ್ತ್ರಗಳು ಪ್ರಾಪ್ತವಾದ ವಿಷಯವನ್ನು ಹೇಳಿ, ಇಂದ್ರನ ಸಂದೇಶವನ್ನು ತಿಳಿಸಿದುದು (ವನ 91). ಮಹರ್ಷಿ ಲೋಮಶರ ಮುಖದಿಂದ ಇಂದ್ರ ಮತ್ತು ಅರ್ಜುನನ ಸಂದೇಶವನ್ನು ಕೇಳಿ ಯುಧಿಷ್ಠಿರನು ಪ್ರಸನ್ನನಾದುದು ಮತ್ತು ಇವನು ತೀರ್ಥಯಾತ್ರೆಗೆ ಸಿದ್ಧನಾಗಿ, ತನ್ನ ಹೆಚ್ಚಿನ ಒಡನಾಡಿಗಳಿಗೆ ವಿದಾಯ ಹೇಳಿದುದು (ವನ 92). ಋಷಿಗಳು ಯುಧಿಷ್ಠಿರನ ಬಳಿಗೆ ಬಂದು ತಮ್ಮನ್ನೂ ತೀರ್ಥಯಾತ್ರೆಗಾಗಿ ಸಂಗಡ ಕರಕೊಂಡು ಹೋಗುವಂತೆ ಒತ್ತಾಯಿಸಿದುದು. ಇವನು ಅವರ ಮಾತನ್ನು ಒಪ್ಪಿ, ಋಷಿಗಳಿಗೆ ನಮಸ್ಕಾರಮಾಡಿ ತೀರ್ಥಯಾತ್ರೆಗೆ ಹೊರಟದ್ದು (ವನ 93). ಮಹರ್ಷಿ ಲೋಮಶರು ದೇವತೆಗಳ ಮತ್ತು ಧರ್ಮಾತ್ಮರಾದ ರಾಜರ ಉದಾಹರಣೆಯನ್ನು ಕೊಟ್ಟು, ಯುಧಿಷ್ಠಿರನಿಗೆ ಅಧರ್ಮದಿಂದ ಹಾನಿಯೆಂದು ಹೇಳಿದುದು ಮತ್ತು ತೀರ್ಥಯಾತ್ರೆಯಿಂದ ದೊರಕುವ ಪುಣ್ಯದ ಮಹಿಮೆಯನ್ನು ವರ್ಣಿಸುತ್ತಾ ಆಶ್ವಾಸನೆಯನ್ನಿತ್ತದ್ದು (ವನ 94). ಶಮಠನು ಯುಧಿಷ್ಠಿರನೊಡನೆ ಅಮೂರ್ತರಯಾನ ಪುತ್ರ, ರಾಜರ್ಷಿ, ಗಯನಯಜ್ಞದ ವರ್ಣನೆ ಮಾಡಿದುದು (ವನ 95/18–29). ಇವನು ಅಗಸ್ತ್ಯಾಶ್ರಮಕ್ಕೆ ತಲುಪಿ, ವಾತಾಪಿಯ ವಿನಾಶದ ಕುರಿತಾಗಿ ಲೋಮಶನೊಂದಿಗೆ ಕೇಳಿದುದು; ಲೋಮಶನು ಇವನಲ್ಲಿ ಅಗಸ್ತ್ಯರ ಚರಿತ್ರೆಯನ್ನು ಹೇಳಿದುದು (ವನ 96 ರಿಂದ 99/30). ಯುಧಿಷ್ಠಿರನು ಪುನಃ ಅಗಸ್ತ್ಯರ ಚರಿತ್ರೆಯನ್ನು ಹೇಳಿದುದು (ವನ ಅಧ್ಯಾಯ 100 ರಿಂದ 105). ಯುಧಿಷ್ಠಿರನ ಕೋರಿಕೆಯಂತೆ ಲೋಮಶನು, ಭಗೀರಥನ ಪ್ರಯತ್ನದಿಂದ ಸಮುದ್ರವು ಹೇಗೆ ತುಂಬಿತೆಂಬ ಪ್ರಸಂಗವನ್ನು ಹೇಳಿದುದು (ವನ 106 ರಿಂದ 109). ಯುಧಿಷ್ಠಿರನ ಕೇಳಿಕೆಗೋಸ್ಕರ ಲೋಮಶನು ಹೇಮಕೂಟದಲ್ಲಿ ಘಟಿಸಲ್ಪಡುವ ಅದ್ಭುತ ವಿಚಾರಗಳ ರಹಸ್ಯವನ್ನು ಹೇಳಿದುದು ಮತ್ತು ಋಷ್ಯಶೃಂಗನ ಚರಿತ್ರೆಯನ್ನು ತಿಳಿಸಿದುದು (ವನ 110 ರಿಂದ 113). ಇವನು ಕೌಶಿಕೀ, ಗಂಗಾಸಾಗರ ಹಾಗೂ ವೈತರಣೀ ನದಿಯನ್ನುತ್ತರಿಸಿ, ಮಹೇಂದ್ರಪರ್ವತಕ್ಕೆ ಹೋದುದು (ವನ 114). ಅಕೃತವ್ರಣನು ಯುಧಿಷ್ಠಿರನಿಗೆ ಜಮದಗ್ನಿಯ ಜನನ ಪ್ರಸಂಗವನ್ನು ಹೇಳುತ್ತಾ, ಪರಶುರಾಮನ ಉಪಾಖ್ಯಾನವನ್ನು ವರ್ಣಿಸಿದುದು (ವನ 115 ರಿಂದ 117/15). ಮಹೇಂದ್ರ ಪರ್ವತದ ಮೇಲೆ ಈತನಿಗೆ ಪರಶುರಾಮನ ದರ್ಶನ ಮತ್ತು ಯುಧಿಷ್ಠಿರನಿಂದ ಆತನ ಪೂಜೆ (ವನ 117/16–18). ಇವನು ವಿಭಿನ್ನ ತೀರ್ಥಗಳನ್ನು ನೋಡುತ್ತಾ ಪ್ರಭಾಸಕ್ಷೇತ್ರಕ್ಕೆ ತಲುಪಿ, ತಪಸ್ಸಿನಲ್ಲಿ ಮಗ್ನನಾದುದು ಮತ್ತು ಯಾದವರು ಸಹೋದರ ಸಹಿತನಾದ ಇವನ ಸಂದರ್ಶನ ಮಾಡಿದುದು (ವನ 118). ಬಲದೇವನಿಂದ ಇವನ ಬಗೆಗೆ ಸಹಾನುಭೂತಿಸೂಚಕ ಉದ್ಗಾರ (ವನ 119). ಇವನಿಂದ ಶ್ರೀಕೃಷ್ಣನ ಹೇಳಿಕೆಯ ಅನುಮೋದನೆ (ವನ 120/27). ಲೋಮಶನಿಂದ ಯುಧಿಷ್ಠಿರ

ನಲ್ಲಿ ರಾಜಾ ಗಯನ ಯಜ್ಞದ ಪ್ರಶಂಸೆ, ಚ್ಯವನ–ಸುಕನ್ಯೆಯರ ಚರಿತ್ರೆಯ ವರ್ಣನೆ (ವನ 121 ರಿಂದ 125). ಯುಧಿಷ್ಠಿರನ ಕೇಳಿಕೆಯಿಂದ; ಲೋಮಶನ ಮೂಲಕ ಮಾಂಧಾತನ ಚರಿತ್ರೆಯ ವರ್ಣನೆ, ಸೋಮಕ ಮತ್ತು ಜಂತುವಿನ ಉಪಾಖ್ಯಾನಗಳ ಕಥನ (ವನ 126 ರಿಂದ 127). ಲೋಮಶನು ಯುಧಿಷ್ಠಿರನಿಗೆ ವಿಭಿನ್ನ ತೀರ್ಥಗಳ ಮಹಿಮಾ ವರ್ಣನೆ ಮಾಡುತ್ತಾ, ಅನೇಕಾನೇಕ ಉಪಾಖ್ಯಾನ ಹೇಳಿದುದು (ವನ 128 ರಿಂದ 138). ಸಹೋದರರೊಂದಿಗೆ ಯುಧಿಷ್ಠಿರನ ಉತ್ತರಾಖಂಡಯಾತ್ರೆ, ಲೋಮಶ ನಿಂದ ಅದರ ದುರ್ಗಮತೆಯ ವರ್ಣನೆ, ಗಂಗೆ ಯೊಡನೆ ರಕ್ಷಣೆಗಾಗಿ ಯುಧಿಷ್ಠಿರನ ಪ್ರಾರ್ಥನೆ. ಭೀಮಸೇನನು ದ್ರೌಪದಿಯ ರಕ್ಷಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಯುಧಿಷ್ಠಿರನ ಆದೇಶ. ನಕುಲಸಹ ದೇವರ ಶರೀರವನ್ನು ಕೈಯಿಂದ ನೇವರಿಸಿ, ಸಮಾಧಾನಪಡಿಸಿದುದು (ವನ 139). ಯುಧಿ ಷ್ಠಿರನು, ಸಹದೇವ ಮತ್ತು ದ್ರೌಪದಿ ಸಹಿತ ಭೀಮಸೇನನು, ಧೌಮ್ಯ, ಸಾರಥಿ, ಸೇವಕ, ರಥ, ಕುದುರೆಗಳು, ಬೇರೆ ಬೇರೆ ಬ್ರಾಹ್ಮಣರೊಂದಿಗೆ ಹಿಂತಿರುಗಲು ಆಜ್ಞೆಯನ್ನಿತ್ತದ್ದು; ತಾನು ಹಿಂತಿರು ಗುವ ತನಕ ಗಂಗಾದ್ವಾರದಲ್ಲಿ ನಿರೀಕ್ಷಿಸುತ್ತಾ ಇರಲು ಹೇಳಿದುದು (ವನ 140/1–7). ಅರ್ಜುನ ನನ್ನು ಕಾಣದೆ ಈತನ ಮಾನಸಿಕ ಕಳವಳ. ಗಂಧಮಾದನ ಗಿರಿಯ ಮೇಲೆ ಹೋಗಲು ದೃಢನಿಶ್ಚಯ ಮಾಡಿದುದು (ವನ 141). ಗಂಧ ಮಾದನ ಯಾತ್ರೆಯಲ್ಲಿ ದ್ರೌಪದಿ ಮೂರ್ಛಿತ ಳಾದಾಗ ಇವನ ವಿಲಾಪ (ವನ 144/10–14). ಯುಧಿಷ್ಠಿರನು ದ್ರೌಪದಿಗೆ ಆಶ್ವಾಸನೆಯನ್ನೀ ಯುತ್ತಾ, 'ಈ ದುರ್ಗಮ ಹಾದಿಯಲ್ಲಿ ದ್ರೌಪದಿ ಹೇಗೆ ನಡೆಯಲು ಸಾಧ್ಯ'ವೆಂದು ಭೀಮಸೇನನಲ್ಲಿ ಕೇಳಿದುದು (ವನ 144/21–22). ಇವನ ಆಜ್ಞೆ ಯಿಂದ ಭೀಮಸೇನನ ಮೂಲಕ ಘಟೋತ್ಕಚನ ಸ್ಮರಣೆ; ಆತನ ಸಹಾಯದಿಂದ ದ್ರೌಪದೀ ಸಹಿತ ಇವರೆಲ್ಲರೂ ಗಂಧಮಾದನ ಪರ್ವತ ಮತ್ತು ಬದರಿಕಾಶ್ರಮವನ್ನು ಪ್ರವೇಶಿಸಿದುದು (ವನ 144 /25ರಿಂದ 145). ಭೀಮಸೇನನು ಸೌಗಂಧಿಕ ಪುಷ್ಪ ತರಲು ಹೋದಾಗ ಭಯಂಕರ ಉತ್ಪಾತ ಗಳನ್ನು ನೋಡಿ, ಇವನ ಕಳವಳ ಮತ್ತು ಘಟೋತ್ಕಚನ ಸಹಾಯದಿಂದ ಎಲ್ಲರ ಜೊತೆ ಯಲ್ಲಿ ಈತ ಸೌಗಂಧಿಕ ವನವನ್ನು ತಲುಪಿದುದು (ವನ 155). ಇವನಿಗೆ ಆಕಾಶವಾಣಿಯ ಮೂಲಕ, ಸೌಗಂಧಿಕವನದಿಂದ ನರನಾರಾಯಣಾ ಶ್ರಮಕ್ಕೆ ಹಿಂತಿರುಗಿ ಹೋಗಲು ಆದೇಶ (ವನ 156/13–16). ಅಪಹರಣ ಮಾಡುತ್ತಿದ್ದಾಗ ಜಟಾ ಸುರನಿಗೆ ಇವನಿಂದ ಧಿಕ್ಕಾರ (ವನ 157/12–30). ಇವನಿಂದ ಗಂಧಮಾದನದ ರಮಣೀ ಯತೆಯ ವರ್ಣನೆ (ವನ 158/77–101). ಪ್ರಶ್ನೆಯ ರೂಪದಲ್ಲಿ ಆರ್ಷ್ಟಿಷೇಣನಿಂದ ಯುಧಿ ಷ್ಠಿರನಿಗೆ ಉಪದೇಶ (ವನ 159). ಗಂಧಮಾದನ ಪರ್ವತದಲ್ಲಿ ರಾಕ್ಷಸರ ವಧೆ ಮಾಡಿದ ಕಾರಣ ಈತನಿಂದ ಭೀಮಸೇನನಿಗೆ ಭರ್ತ್ಸನೆ (ವನ 161/10–12). ಕುಬೇರನೊಡನೆ ಈತನ ಭೇಟಿ ಮತ್ತು ಆತನಿಂದ ಇವನಿಗೆ ಸಮಾಧಾನ (ವನ 161/43–46). ಧೌಮ್ಯನು ಯುಧಿಷ್ಠಿರನಿಗೆ ಮೇರು ಪರ್ವತ ಮತ್ತು ಅದರ ಶಿಖರಗಳ ಮೇಲಿರುವ ಬ್ರಹ್ಮಾ, ವಿಷ್ಣು ಇತ್ಯಾದಿ ಸ್ಥಾನಗಳ ಕಡೆಗೆ ಗಮನ ಸೆಳೆದುದು; ಸೂರ್ಯ, ಚಂದ್ರರ ಗತಿ ಮತ್ತು ಪ್ರಭೆಯ ವರ್ಣನೆ ಮಾಡಿದುದು (ವನ 163). ಯುಧಿಷ್ಠಿರಾದಿಗಳು ಅರ್ಜುನನಿಗೋಸ್ಕರ ಉತ್ಕಂ ಠಿತರಾದುದು; ಇವರ ಬಳಿಗೆ ಅರ್ಜುನನ ಆಗಮನ (ವನ 164). ಅರ್ಜುನನು ಯುಧಿ ಷ್ಠಿರನ ಚರಣಗಳಿಗೆ ಪ್ರಣಾಮ ಮಾಡಿ, ಎಲ್ಲಾ ಸಹೋದರರನ್ನೂ, ದ್ರೌಪದಿಯನ್ನೂ ಭೇಟಿಯಾ ದುದು ಮತ್ತು ವಿನೀತಭಾವದಿಂದ ಯುಧಿಷ್ಠಿರನ ಹತ್ತಿರ ನಿಂತದ್ದು (ವನ 165/4–5). ಇವನಿಂದ ಗಂಧಮಾದನದ ಮೇಲೆ ಇಂದ್ರನಿಗೆ ಸ್ವಾಗತ ಸತ್ಕಾರ, ಇಂದ್ರನು ಇವರಿಗೆ ಸಮಾಧಾನ ಹೇಳಿ ಹಿಂತಿರುಗಿದುದು (ವನ 166). ಅರ್ಜುನನಿಂದ ಈತನ ಸಮಕ್ಷಮದಲ್ಲಿ, ತನ್ನ ತಪಸ್ಸು, ಯಾತ್ರೆ ಮತ್ತು ಸ್ವರ್ಗಯಾತ್ರೆಯ ವೃತ್ತಾಂತದ ವರ್ಣನೆ (ವನ 167 ರಿಂದ 173). ಅರ್ಜುನನಿಂದ ಯಾತ್ರೆಯ ವೃತ್ತಾಂತ ಕೇಳಿ, ಇವನು ಆತನನ್ನು ಅಭಿನಂದಿಸಿದುದು ಮತ್ತು ದಿವ್ಯಾಸ್ತ್ರಗಳ ದರ್ಶನ ಮಾಡುವ ಇಚ್ಛೆಯನ್ನು ಪ್ರಕಟಿಸಿದುದು (ವನ 174/11–15). ಯುಧಿಷ್ಠಿರ ಮತ್ತು ಭೀಮಸೇನನ ಮಾತುಕತೆ (ವನ 176/7–17). ಸೋದರ ಸಹಿತನಾಗಿ ಯುಧಿಷ್ಠಿರನು, ಗಂಧಮಾದನದಿಂದ

ಬದರಿಕಾಶ್ರಮ ಮೊದಲಾದ ಸ್ಥಾನಗಳನ್ನುತ್ತರಿಸಿ, ದ್ವೈತವನವನ್ನು ಪ್ರವೇಶಿಸಿದುದು (ವನ 177). ಯುಧಿಷ್ಠಿರನಿಗೆ ಅನಿಷ್ಟದರ್ಶನದಿಂದ ಚಿಂತೆ ಮತ್ತು ಈತನು ಭೀಮನನ್ನು ಅನ್ವೇಷಣೆ ಮಾಡುತ್ತಾ, ಅವನ ಬಳಿಗೆ ತಲುಪಿ, ಅವನು ಹೆಬ್ಬಾವಿನ ವಶದಲ್ಲಿ ಬಿದ್ದಿರುವುದನ್ನು ನೋಡಿದುದು (ವನ 179). ಅಜಗರ ರೂಪಧಾರಿ ನಹುಷನೊಂದಿಗೆ ಇವನ ಮಾತುಕತೆ. ಇವನಿಂದ ತನ್ನ ಪ್ರಶ್ನೆಗಳಿಗೆ ಯೋಗ್ಯ ಉತ್ತರ ಪಡೆದು, ಸಂತುಷ್ಟನಾದ ಸರ್ಪರೂಪಧಾರಿ ನಹುಷನು ಭೀಮಸೇನನನ್ನು ಬಿಟ್ಟುಬಿಟ್ಟದ್ದು ಮತ್ತು ಯುಧಿಷ್ಠಿರನೊಂದಿಗೆ ವಾರ್ತಾಲಾಪ ಮಾಡಿದ ಪ್ರಭಾವದಿಂದ ಸರ್ಪಯೋನಿಯಿಂದ ಮುಕ್ತನಾಗಿ ಸ್ವರ್ಗಕ್ಕೆ ಹೋದುದು (ವನ 180ರಿಂದ 181). ಯುಧಿಷ್ಠಿರಾದಿಗಳಿಂದ ಪುನಃ ದ್ವೈತವನದಿಂದ ಕಾಮ್ಯಕವನ ಪ್ರವೇಶ (ವನ 182/17–18). ಸತ್ಯಭಾಮಾಸಹಿತನಾಗಿ ಶ್ರೀಕೃಷ್ಣನು ಯುಧಿಷ್ಠಿರನ ಬಳಿಗೆ ಬಂದುದು ಮತ್ತು ಯುಧಿಷ್ಠಿರ ಹಾಗೂ ಭೀಮಸೇನನಿಗೆ ಪ್ರಣಾಮ ಮಾಡಿದುದು (ವನ 183/7–8). ಇವನು ಶ್ರೀಕೃಷ್ಣನ ಮಾತುಗಳನ್ನು ಕೇಳಿ ಅನುಮೋದಿಸಿದುದು (ವನ 183/16–40). ಇವನ ಬಳಿಗೆ ಮಾರ್ಕಂಡೇಯನ ಶುಭಾಗಮನ ಮತ್ತು ಇವನ ಕೇಳಿಕೆಯಂತೆ ಮಾರ್ಕಂಡೇಯರಿಂದ ಕರ್ಮಫಲದ ವಿವೇಚನೆ (ವನ 183/41–95). ಸರ್ವಕಾರಣಕಾಲನ ಕುರಿತು ಮಾರ್ಕಂಡೇಯನೊಡನೆ ಈತನ ಜಿಜ್ಞಾಸೆ (ವನ 188/2–16). ಮಾರ್ಕಂಡೇಯನು ಕಲಿಯುಗ ಪ್ರಭಾವದ ವರ್ಣನೆ ಮಾಡುವಂತೆ ಪ್ರಶ್ನೆ (ವನ 190/2–6). ಯುಧಿಷ್ಠಿರನ ಕೋರಿಕೆಯಂತೆ ಮಾರ್ಕಂಡೇಯನಿಂದ ಧರ್ಮದ ಉಪದೇಶ (ವನ 191/21–30). ಯುಧಿಷ್ಠಿರನು ಆತ ಹೇಳಿದ ಧರ್ಮದ ಪಾಲನೆ ಮಾಡುವೆನೆಂದು ಪ್ರತಿಜ್ಞೆ ಮಾಡಿದುದು (ವನ 191/31–32). ಪತಿವ್ರತೆ ಮತ್ತು ಧರ್ಮವ್ಯಾಧನ ಕಥೆಯನ್ನು ಕೇಳಿ, ಯುಧಿಷ್ಠಿರನು ಸಂತೋಷ ಸೂಚಿಸಿದುದು (ವನ 216/36). ಅಗ್ನಿಯ ಕುರಿತಾಗಿ ಯುಧಿಷ್ಠಿರನ ಜಿಜ್ಞಾಸೆ ಮತ್ತು ಮಾರ್ಕಂಡೇಯರಿಂದ ಅಗ್ನಿವಂಶದ ವರ್ಣನೆ (ವನ 217ರಿಂದ 222). ಯುಧಿಷ್ಠಿರನು ಕೇಳಿದಾಗ ಮಾರ್ಕಂಡೇಯನು ಕಾರ್ತಿಕೆಯನ ಜನ್ಮಕರ್ಮ ವೃತ್ತಾಂತವನ್ನು ತಿಳಿಸಿದುದು (ವನ 223 ರಿಂದ 231). ಇವನು ಕಾರ್ತಿಕೇಯನ ತ್ರಿಲೋಕ ವಿಖ್ಯಾತ ಹೆಸರುಗಳನ್ನು ಕೇಳುವ ಇಚ್ಛೆ ಪ್ರಕಟಿಸಿದುದು. ಮಾರ್ಕಂಡೇಯನು ಆ ಹೆಸರುಗಳನ್ನು ತಿಳಿಸಿದುದು (ವನ 232). ಯುಧಿಷ್ಠಿರಾದಿ ಪಾಂಡವರ ಸಮಾಚಾರ ಕೇಳಿ, ಧೃತರಾಷ್ಟ್ರನ ಖೇದ ಮತ್ತು ಚಿಂತಾಪೂರ್ಣ ಉದ್ಗಾರ (ವನ 236). ಗಂಧರ್ವರ ಕೈಯಿಂದ ಕೌರವರನ್ನು ಬಿಡಿಸಲು ಭೀಮಸೇನನಿಗೆ ಇವನ ಆದೇಶ (ವನ 243/1–19). ಚಿತ್ರಸೇನನು ಯುಧಿಷ್ಠಿರನ ಬಳಿಗೆ ಬಂದುದು. ದುರ್ಯೋಧನನ ಕುಚೇಷ್ಟೆಯನ್ನು ಹೇಳಿದುದು, ಯುಧಿಷ್ಠಿರನು ಕೌರವರನ್ನು ಬಂಧನದಿಂದ ಬಿಡಿಸಿದುದು, ಗಂಧರ್ವರ ಪ್ರಶಂಸೆ ಮಾಡಿದುದು; ದುರ್ಯೋಧನನಿಗೆ ಪ್ರೀತಿಪೂರ್ವಕವಾಗಿ ದುಸ್ಸಾಹಸಕ್ಕೆ ಕೈಯಿಕ್ಕದಂತೆ ಸಲಹೆ ನೀಡಿದುದು (ವನ 246/12–23). ದುಃಶಾಸನನು ಯುಧಿಷ್ಠಿರನ ಬಳಿಗೆ ದೂತನನ್ನು ಕಳುಹಿಸಿ, ದುರ್ಯೋಧನನ ವೈಷ್ಣವ ಯಜ್ಞಕ್ಕೆ ಬರುವಂತೆ ಸಂದೇಶ ಹೇಳಿಸಿದುದು; ಯುಧಿಷ್ಠಿರನು ದುರ್ಯೋಧನನ ಯಜ್ಞಕರ್ಮವನ್ನು ಪ್ರಶಂಸೆ ಮಾಡಿ, ಅವಧಿ ತೀರುವ ಮುನ್ನ ಬರಲು ಅಸಮರ್ಥತೆಯನ್ನು ಪ್ರಕಟಿಸಿದುದು (ವನ 256/7–14). ಕರ್ಣನಿಂದ ಅರ್ಜುನ ವಧೆಯ ಪ್ರತಿಜ್ಞೆಯನ್ನು ಕೇಳಿ ಈತನ ಚಿಂತೆ (ವನ 257/23–24). ಸ್ವಪ್ನದಲ್ಲಿ ಮೃಗಗಳಿಂದ ಪ್ರೇರಿತನಾಗಿ, ಸಹೋದರರ ಸಹಿತ ಈತ ಕಾಮ್ಯಕವನಕ್ಕೆ ಹೋದುದು (ವನ 258). ಯುಧಿಷ್ಠಿರನ ಚಿಂತೆ, ವ್ಯಾಸರ ಆಗಮನ, ಯುಧಿಷ್ಠಿರನಿಂದ ಆತನ ಸತ್ಕಾರ, ಅವನು ಯುಧಿಷ್ಠಿರನಿಗೆ ತಪಸ್ಸು ಮತ್ತು ದಾನದ ಮಹಿಮೆಯನ್ನು ಹೇಳಿದುದು, ವಿಚಾರಿಸಿದಾಗ, ತಪಸ್ಸಿನಿಂದಲೂ ದಾನವೇ ಶ್ರೇಷ್ಠವೆಂದು ಹೇಳಿದುದು (ವನ 259). ದುರ್ಯೋಧನನು ದುರ್ವಾಸನನ್ನು ಸಂತುಷ್ಟಗೊಳಿಸಿ, ಆತ ಯುಧಿಷ್ಠಿರನ ಅತಿಥಿಯಾಗುವಂತೆ ಹೇಳಿದುದು (ವನ 262/7–22). ಇವನಿಂದ ದುರ್ವಾಸನ ಅತಿಥಿ ಸತ್ಕಾರ (ವನ 263/2–4). ದ್ರೌಪದೀ ಹರಣದ ಸಂದರ್ಭದಲ್ಲಿ ತ್ರಿಗರ್ತರಾಜನೊಂದಿಗೆ ಇವನ ಯುದ್ಧ ಮತ್ತು ಇವನಿಂದ ಆತನ ವಧೆ.

ಭೀಮನಿಂದ ಬಂಧಿಸಲ್ಪಟ್ಟ ಜಯದ್ರಥ ಯುಧಿಷ್ಠಿರನ ಮುಂದೆ ಉಪಸ್ಥಿತನಾದುದು; ಅವನ ಅವಸ್ಥೆಯನ್ನು ಕಂಡು ಯುಧಿಷ್ಠಿರನು ನಕ್ಕದ್ದು; ಅವನನ್ನು ದಾಸ್ಯದಿಂದ ಬಿಡುಗಡೆಗೊಳಿಸಿ, ಬಿಟ್ಟುಬಿಡಲು ಆದೇಶ ನೀಡಿದುದು; ಜಯದ್ರಥನ ದುಷ್ಕರ್ಮವನ್ನು ನಿಂದಿಸಿ, ಹೋಗಲು ಹೇಳಿದುದು (ವನ 272/14–23). ತನ್ನ ದುರವಸ್ಥೆಯಿಂದ ದುಃಖಿತನಾದ ಯುಧಿಷ್ಠಿರನು ಮಾರ್ಕಂಡೇಯ ಮುನಿಯೊಂದಿಗೆ ಪ್ರಶ್ನೆ ಮಾಡಿದುದು. ಆತ ಶ್ರೀರಾಮೋಪಾಖ್ಯಾನವನ್ನು ಹೇಳಿ ಯುಧಿಷ್ಠಿರನಿಗೆ ಧೈರ್ಯ ತುಂಬಿದುದು (ವನ 273 ರಿಂದ 292). ಮಾರ್ಕಂಡೇಯನೊಡನೆ ದ್ರೌಪದಿಯಂತಹ ಇತರ ಯಾರಾದರೂ ಪತಿವ್ರತೆ ಸ್ತ್ರೀಯ ಕುರಿತು ಧರ್ಮಜನ ಜಿಜ್ಞಾಸೆ; ಉತ್ತರ ರೂಪವಾಗಿ ಮಾರ್ಕಂಡೇಯನು ಸಾವಿತ್ರಿಯ ಉಪಾಖ್ಯಾನವನ್ನು ಹೇಳಿದುದು (ವನ 293 ರಿಂದ 299). ಮರದ ಮೇಲೆ ಹತ್ತಿ ನೀರಾಶ್ರಯವನ್ನು ಹುಡುಕುವಂತೆ ಯುಧಿಷ್ಠಿರನು ನಕುಲನಿಗೆ ಹೇಳಿದುದು (ವನ 312/5–6). ನೀರು ದೊರಕಿದರೆ ಬತ್ತಳಿಕೆಗಳಲ್ಲಿ ತುಂಬಿ ತರುವಂತೆ ಯುಧಿಷ್ಠಿರನು ನಕುಲನಿಗೆ ಆಜ್ಞಾಪಿಸಿದುದು (ವನ 312/9). ನಕುಲನು ಹಿಂತಿರುಗಲು ತಡವಾದುದರಿಂದ ಯುಧಿಷ್ಠಿರನು ಸಹದೇವನನ್ನು ಕಳುಹಿಸಿದುದು (ವನ 312/14–15). ಅವರು ಹಿಂತಿರುಗಲು ವಿಳಂಬವಾದಾಗ, ಮೊದಲು ಹೋದ ಇಬ್ಬರು ಸಹೋದರರನ್ನು ಕರೆಸಲು ಮತ್ತು ನೀರನ್ನು ತರಲು ಈತ ಅರ್ಜುನನಿಗೆ ಆದೇಶ ನೀಡಿದುದು (ವನ 312/20–21). ಅವನು ಹಿಂತಿರುಗಲೂ ತಡವಾದಾಗ ಯುಧಿಷ್ಠಿರನು ಭೀಮಸೇನನನ್ನು ಕಳುಹಿಸಿದುದು (ವನ 312/33–35). ಕೊನೆಗೆ ಯುಧಿಷ್ಠಿರನು ಜಲಾಶಯದ ದಡಕ್ಕೆ ಹೋದ ನಾಲ್ಕೂ ಸಹೋದರರು ಸರೋವರದ ಬಳಿ ಬಿದ್ದಿರುವುದನ್ನು ನೋಡಿ ವಿಲಾಪ ಮಾಡಿದುದು (ವನ 313/4–27). ಯುಧಿಷ್ಠಿರನು ಜಲವನ್ನು ಪ್ರವೇಶಿಸಿದುದು; ತಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಟ್ಟ ಬಳಿಕವೇ ನೀರು ಕುಡಿಯಲು ಮತ್ತು ತೆಗೆದುಕೊಂಡು ಹೋಗಲು ಯಕ್ಷನ ಆದೇಶ (ವನ 313/28–30). 'ನೀನು ಯಾರು'? ಎಂದು ಯುಧಿಷ್ಠಿರನು ಪ್ರಶ್ನಿಸಿದಾಗ, ಯಕ್ಷನು ಪ್ರತ್ಯಕ್ಷನಾದುದು; ತನ್ನ ಬುದ್ಧಿಗೆ ಅನುಸಾರವಾಗಿ, ಯಕ್ಷನ ಪ್ರಶ್ನೆಗಳಿಗೆ ಉತ್ತರ ಕೊಡುವೆನೆಂದು ಯುಧಿಷ್ಠಿರನು ಪ್ರತಿಜ್ಞೆ ಮಾಡಿದುದು (ವನ 313/31–34). ಇವನು ಯಕ್ಷನ ಪ್ರಶ್ನೆಗಳಿಗೆ ಉತ್ತರವನ್ನಿತ್ತದ್ದು (ವನ 313/45–121). 'ನೀನು ತನ್ನ ಸಹೋದರರಲ್ಲಿ ಯಾರೊಬ್ಬನನ್ನು ಬಯಸುವೆಯೋ, ಅವನೊಬ್ಬ ಮಾತ್ರ ಜೀವಿಸಬಲ್ಲನು' ಯಕ್ಷನು ಹೀಗೆ ಹೇಳಿದಾಗ, ಯುಧಿಷ್ಠಿರನು ನಕುಲನು ಜೀವಿಸುವಂತೆ ತನ್ನ ಇಚ್ಛೆಯನ್ನು ಪ್ರಕಟಿಸಿದುದು. ಈ ಕುರಿತು ಯಕ್ಷ ಮತ್ತು ಯುಧಿಷ್ಠಿರರ ಸಂವಾದ. ಈ ವಿಷಯವಾಗಿ ಸಂತುಷ್ಟನಾದ ಯಕ್ಷನು ಈತನ ಎಲ್ಲಾ ಸೋದರರು ಜೀವಿಸುವಂತೆ ವರನೀಡಿದುದು (ವನ 313/122–133). ಯಕ್ಷನು ನಾಲ್ಕು ಸಹೋದರರನ್ನು ಬದುಕಿಸಿ, ಧರ್ಮನ ಸ್ವರೂಪದಲ್ಲಿ ಪ್ರತ್ಯಕ್ಷನಾಗಿ ಯುಧಿಷ್ಠಿರನಿಗೆ ವರ ನೀಡಿದುದು (ವನ 314). ಅಜ್ಞಾತವಾಸದ ಕುರಿತು ಅನುಮತಿ ತೆಗೆದುಕೊಳ್ಳುವಾಗ, ಮಹರ್ಷಿ ಧೌಮ್ಯರು ಯುಧಿಷ್ಠಿರನಿಗೆ ಉಪದೇಶ ಮಾಡಿದುದು ಮತ್ತು ಭೀಮಸೇನನು ಪ್ರೋತ್ಸಾಹ ನೀಡಿದುದು (ವನ 315/1–26). ಯುಧಿಷ್ಠಿರನು ಬ್ರಾಹ್ಮಣನಿಗೆ ಅರಣೀ ಸಹಿತ ಮಂಥನಕಾಷ್ಠವನ್ನು ಒಪ್ಪಿಸಿದುದು ಮತ್ತು ತನ್ನ ಸಹೋದರರನ್ನು ಒಟ್ಟಾಗಿಟ್ಟು, ಯಾವುದಾದರೂ ಉತ್ತಮ ನಿವಾಸಸ್ಥಾನವನ್ನು ಆಯ್ಕೆ ಮಾಡಲು ಅರ್ಜುನನಲ್ಲಿ ಹೇಳಿದುದು (ವಿರಾಟ 1/6–9). ಇವನು ಅಜ್ಞಾತವಾಸದ ಒಂದು ವರ್ಷವನ್ನು ವಿರಾಟನಗರದಲ್ಲಿ ಕಳೆಯಲು ನಿರ್ಧಾರವನ್ನು ಪ್ರಕಟಿಸಿದುದು; ಅರ್ಜುನನು ವಿಚಾರಿಸಿದಾಗ ವಿರಾಟನಗರದಲ್ಲಿ ತಾನು ಮಾಡುವ ಭಾವೀ ಕಾರ್ಯಕ್ರಮವನ್ನು ಹೇಳಿದುದು (ವಿರಾಟ 1/15–28). ಭೀಮಸೇನನ ಮುಂದಿನ ಕಾರ್ಯವನ್ನು ಈತ ಕೇಳಿದುದು (ವಿರಾಟ 1). ಅರ್ಜುನನ ಭಾವೀ ಕಾರ್ಯಕ್ರಮದ ಕುರಿತು ಕೇಳಿದುದು (ವಿರಾಟ 2/11–24). ನಕುಲನ ಕಾರ್ಯದ ಕುರಿತು ಜಿಜ್ಞಾಸೆ ಮಾಡಿದುದು (ವಿರಾಟ 3/2). ಸಹದೇವನೊಂದಿಗೆ ಆತನ ಭವಿಷ್ಯದ ಕಾರ್ಯಪದ್ಧತಿಯನ್ನು ಕೇಳಿದುದು (ವಿರಾಟ 3/7). ದ್ರೌಪದಿಯ

ಕಾರ್ಯಕ್ರಮದ ಕುರಿತು ಕೇಳಿದುದು (ವಿರಾಟ 3/14–17). ಈತ ದ್ರೌಪದಿಗೆ ಪ್ರೋತ್ಸಾಹವನ್ನಿತ್ತದ್ದು (ವಿರಾಟ 3/22–23). ಪುರೋಹಿತರೂ, ದ್ರೌಪದಿಯ ಸೇವಿಕೆಯರೂ, ಅಡುಗೆಯವರ ಸಮೇತ ಪಾಂಚಾಲದೇಶಕ್ಕೆ ಹೋಗಲು ಈತ ಆದೇಶ ನೀಡಿದುದು ಮತ್ತು ಇಂದ್ರಸೇನಾದಿಗಳು ಕೇವಲ ರಥವನ್ನು ತೆಗೆದುಕೊಂಡು ದ್ವಾರಕೆಗೆ ಹೋಗುವಂತೆ ಆದೇಶಿಸಿದುದು (ವಿರಾಟ 4/1–5). ಧೌಮ್ಯನು ಇವನಿಗೆ ರಾಜನಲ್ಲಿ ವಾಸಿಸುವ ಕ್ರಮ ಹೇಳಿದುದು (ವಿರಾಟ 4/7–51). ಇವನು ಧೌಮ್ಯನಿಗೆ ಕೃತಜ್ಞತೆ ಹೇಳಿದುದು (ವಿರಾಟ 4/52–53). ದ್ರೌಪದಿಯನ್ನು ಹೆಗಲ ಮೇಲೆ ಏರಿಸಿಕೊಂಡು ಹೋಗಲು, ಈತ ಅರ್ಜುನನಿಗೆ ಆದೇಶಿಸಿದುದು (ವಿರಾಟ 5/7). ರಾಜಧಾನಿಯ ಸಮೀಪ ತಲುಪಿ, ಈತ ಅರ್ಜುನನಲ್ಲಿ ತಮ್ಮ ತಮ್ಮ ವಸ್ತ್ರಗಳನ್ನು ಕಳಚಿಡುವಂತೆ ಆಜ್ಞೆ ಮಾಡಿದುದು (ವಿರಾಟ 5/9–12). ಶಮೀ ವೃಕ್ಷದ ಮೇಲೆ ಹತ್ತಿ ಎಲ್ಲರ ಧನುಸ್ಸುಗಳನ್ನು ಇಡುವಂತೆ ಈತ ನಕುಲನಿಗೆ ಆಜ್ಞಾಪಿಸಿದುದು, ಐವರು ಸಹೋದರರಿಗೂ ಗುಪ್ತನಾಮಗಳನ್ನು ನಿಶ್ಚಯ ಮಾಡಿದುದು (ವಿರಾಟ 5/28–35). ಇವನಿಂದ ದುರ್ಗಾದೇವಿಯ ಸ್ತುತಿ; ದೇವಿ ಪ್ರತ್ಯಕ್ಷಳಾಗಿ ಇವನಿಗೆ ವರವನ್ನಿತ್ತದ್ದು (ವಿರಾಟ 6). ಯುಧಿಷ್ಠಿರನು ರಾಜಾ ವಿರಾಟನನ್ನು ಭೇಟಿಯಾದುದು ಮತ್ತು ಅಲ್ಲಿ ಆದರ ಪೂರ್ವಕವಾಗಿ ವಾಸಿಸಿದುದು. ಕೀಚಕನಿಂದ ಹೊಡೆಯಲ್ಪಟ್ಟಾಗ, ಈತನಿಂದ ದ್ರೌಪದಿಗೆ ಸಾಂಕೇತಿಕ ಆಶ್ವಾಸನೆ (ವಿರಾಟ 16/40–44). ಸುಶರ್ಮನ ಕೈಯಿಂದ ವಿರಾಟನನ್ನು ಬಿಡಿಸಲು ಭೀಮಸೇನನಿಗೆ ಆದೇಶ (ವಿರಾಟ 33/ 11–13). ಒಂದು ಸಾವಿರ ತ್ರಿಗರ್ತರನ್ನು ಈತ ಯುದ್ಧದಲ್ಲಿ ಕೊಂದುಹಾಕಿದ್ದು (ವಿರಾಟ 33/33). ಸುಶರ್ಮನನ್ನು ದಾಸ್ಯದಿಂದ ಬಿಡುಗಡೆಗೊಳಿಸಿದುದು (ವಿರಾಟ 33/61). ಇವನಿಂದ ವಿರಾಟರಾಜನಿಗೆ ಅಭಿನಂದನೆ (ವಿರಾಟ 34/14). ಈತ ಬಾರಿಬಾರಿಗೂ ಬೃಹನ್ನಲೆಯನ್ನು ಪ್ರಶಂಸೆ ಮಾಡುತ್ತಿದ್ದುದರಿಂದ ಕೋಪಗೊಂಡ ವಿರಾಟನು, ಯುಧಿಷ್ಠಿರನ ಮುಖದ ಮೇಲೆ ದಾಳದಿಂದ ಪ್ರಹಾರ ಮಾಡಿದುದು; ಇವನ ಮೂಗಿನಿಂದ ರಕ್ತ ಸುರಿದುದು (ವಿರಾಟ 68/37–47). ಉತ್ತರನ ಮಾತಿನಂತೆ ವಿರಾಟನು ಯುಧಿಷ್ಠಿರನ ಕ್ಷಮೆಯಾಚಿಸಿದುದು; ತಾನು ಮೊದಲೇ ಕ್ಷಮಾದಾನ ಮಾಡಿದ್ದೇನೆಂದು ಈತ ಸೂಚಿಸಿದುದು (ವಿರಾಟ 68/61–65). ಅರ್ಜುನನು ವಿರಾಟರಾಜನಿಗೆ ಮಹಾರಾಜ ಯುಧಿಷ್ಠಿರನ ಪರಿಚಯ ಹೇಳಿದುದು (ವಿರಾಟ 70). ವಿರಾಟನು ಯುಧಿಷ್ಠಿರನಿಗೆ ರಾಜ್ಯ ಸಮರ್ಪಣೆ ಮಾಡಿ, ಅರ್ಜುನನೊಂದಿಗೆ ಉತ್ತರೆಯ ವಿವಾಹ ಪ್ರಸ್ತಾಪ ಮಾಡಿದುದು (ವಿರಾಟ 71/ 28–35). ಮತ್ಸ್ಯರಾಜಕನ್ಯೆ ಮತ್ತು ಪಾರ್ಥಪುತ್ರನ ಸಂಬಂಧವನ್ನು ಈತ ಅನುಮೋದಿಸಿದುದು ಮತ್ತು ಮಿತ್ರರಿಗೆ ಆಮಂತ್ರಣ ಕಳುಹಿಸಿದುದು (ವಿರಾಟ 72/12–13). ಅಭಿಮನ್ಯು ಮತ್ತು ಉತ್ತರೆಯ ವಿವಾಹವಾದಾಗ, ಧರ್ಮಪುತ್ರ ಯುಧಿಷ್ಠಿರನ ಮೂಲಕ ಬ್ರಾಹ್ಮಣರಿಗೆ ಧನ, ಸಾವಿರಾರು ಗೋವು, ನಾನಾ ಪ್ರಕಾರದ ರತ್ನ, ತರತರದ ವಸ್ತ್ರ, ಆಭರಣ, ವಾಹನ ಮತ್ತು ಶಯ್ಯೆ ಇತ್ಯಾದಿಗಳ ದಾನ (ವಿರಾಟ 721/38–40). ವಿರಾಟನ ಸಭೆಯಲ್ಲಿ ಯುಧಿಷ್ಠಿರಾದಿಗಳ ಮುಂದೆ ಶ್ರೀಕೃಷ್ಣ, ಬಲರಾಮ, ಸಾತ್ಯಕಿ ಮತ್ತು ದ್ರುಪದನ ಭಾಷಣ (ಉದ್ಯೋಗ 1 ರಿಂದ 4). ಅರ್ಜುನನೊಂದಿಗೆ ಯುದ್ಧವಾಗುವಾಗ ಕರ್ಣನ ಸಾರಥಿಯಾದರೆ, ಆತನ ಉತ್ಸಾಹ ನಷ್ಟಗೊಳಿಸುವ ಕಾರ್ಯ ಮಾಡಬೇಕೆಂದು ಶಲ್ಯನಲ್ಲಿ ಇವನ ಪ್ರಾರ್ಥನೆ (ಉದ್ಯೋಗ 8/45; ಉದ್ಯೋಗ 18/23). ಯುಧಿಷ್ಠಿರನ ಸಹಾಯಕ್ಕೆ ಬಂದ ಸೇನೆಗಳ ಸಂಕ್ಷಿಪ್ತ ವಿವರಣೆ (ಉದ್ಯೋಗ 19/1–15). ಸಂಜಯನೊಡನೆ ಕೌರವ ಪಕ್ಷದ ಕುಶಲವನ್ನು ಕೇಳುತ್ತಾ, ಇವನು ಸಾರಗರ್ಭಿತ ಪ್ರಶ್ನೆ ಮಾಡಿದುದು (ಉದ್ಯೋಗ 23/6–28). ಇಂದ್ರಪ್ರಸ್ಥವನ್ನು ಹಿಂತಿರುಗಿಸಿದ ಮೇಲೆಯೇ ಶಾಂತಿ ಸಾಧ್ಯವಾದೀತೆಂದು ಸಂಜಯನಲ್ಲಿ ಹೇಳಿಕೆ (ಉದ್ಯೋಗ 26/29). ಸಂಜಯನ ಮಾತುಗಳಿಗೆ ಉತ್ತರ (ಉದ್ಯೋಗ 28). ಸಂಜಯನು ವಿದಾಯ ಹೊಂದುತ್ತಿರುವಾಗ, ಪ್ರಧಾನ ಕುರುವಂಶೀಯರಿಗೆಲ್ಲ ಇವನ ಸಂದೇಶ (ಉದ್ಯೋಗ 30/3–49). ದುರ್ಯೋಧನನಿಂದ ಐದು ಗ್ರಾಮಗಳ ಬೇಡಿಕೆಯ ಸಂದೇಶ (ಉದ್ಯೋಗ 31/19). ಇವನ ರಥದ ವರ್ಣನೆ

(ಉದ್ಯೋಗ 56/14). ಇವನು ಶ್ರೀಕೃಷ್ಣನೊಡನೆ ಧೃತರಾಷ್ಟ್ರನ ಲೋಭದ ಕುರಿತು ಚರ್ಚಿಸುತ್ತಾ, ಧನದ ಮಹತ್ವದ ಕುರಿತು ಹೇಳುತ್ತಾ, ತನ್ನ ಅಭಿಪ್ರಾಯವನ್ನು ನಿವೇದಿಸಿದುದು (ಉದ್ಯೋಗ 72/6–78). ತಾಯಿಯಾದ ಕುಂತಿ ಮತ್ತು ಕೌರವರಿಗೆ ಹೇಳಲು, ಶ್ರೀಕೃಷ್ಣನಲ್ಲಿ ಸಂದೇಶವನ್ನಿತ್ತದ್ದು (ಉದ್ಯೋಗ 83/37–48). ಕುಂತಿಯು ಶ್ರೀಕೃಷ್ಣನೊಂದಿಗೆ ಯುಧಿಷ್ಠಿರಾದಿಗಳ ಕುಶಲ ಸಮಾಚಾರ ಕೇಳಿದುದು ಮತ್ತು ತನ್ನ ಕಷ್ಟಗಳನ್ನು ನೆನಸಿ ದುಃಖಿಸಿದುದು (ಉದ್ಯೋಗ 90/4–89). ಕುಂತಿಯ ಮೂಲಕ ಯುಧಿಷ್ಠಿರನಿಗೆ ಸಂದೇಶ (ಉದ್ಯೋಗ 132 ರಿಂದ 136). ಇವನು ಶ್ರೀಕೃಷ್ಣನೊಡನೆ ಕೌರವ ಸಭೆಯ ಸಮಾಚಾರ ಕೇಳಿದುದು; ಶ್ರೀಕೃಷ್ಣನು ಉತ್ತರಿಸಿದುದು (ಉದ್ಯೋಗ 147 ರಿಂದ 150 ವರೇಗೆ). ಪ್ರಧಾನ ಸೇನಾಪತಿಯನ್ನು ಆಯ್ಕೆ ಮಾಡಲು ಈತನ ಸೂಚನೆ (ಉದ್ಯೋಗ 151/8). ಕುರುಕ್ಷೇತ್ರದಲ್ಲಿ ತನ್ನ ಸೇನೆಯ ಶಿಬಿರ ಹೂಡಿದುದು (ಉದ್ಯೋಗ 152/1). ಶ್ರೀಕೃಷ್ಣನೊಡನೆ ತನ್ನ ಕರ್ತವ್ಯದ ಕುರಿತಾಗಿ ಕೇಳಿದುದು (ಉದ್ಯೋಗ 154/5). ತನ್ನ ಸೇನಾಪತಿಗೆ ಅಭಿಷೇಕ ಮಾಡಿದುದು (ಉದ್ಯೋಗ 157/11–14). ಉಲೂಕನಲ್ಲಿ ದುರ್ಯೋಧನನ ಸಂದೇಶಕ್ಕೆ ಉತ್ತರ ನೀಡಿದುದು (ಉದ್ಯೋಗ 162/51–56; ಉದ್ಯೋಗ 163/25–30). ಅರ್ಜುನನ ಶಕ್ತಿಯನ್ನು ತಿಳಿಯುವುದಕ್ಕಾಗಿ ಈತನ ಪ್ರಶ್ನೆ (ಉದ್ಯೋಗ 194/7). ತನ್ನ ಸೇನೆಯನ್ನು ಕುರುಕ್ಷೇತ್ರಕ್ಕೆ ತೆಗೆದುಕೊಂಡು ಹೋದುದು (ಉದ್ಯೋಗ 196). ಅರ್ಜುನನೊಡನೆ ತನ್ನ ಸೇನೆಯ ವ್ಯೂಹರಚನೆ ಮಾಡಲು ಆದೇಶಿಸಿದುದು (ಭೀಷ್ಮ 19/6). ಕೌರವ ಸೇನೆಯನ್ನು ನೋಡಿ ಈತನು ವಿಷಾದಿಸಿದುದು (ಭೀಷ್ಮ 21/3–5). ತನ್ನ ಅನಂತವಿಜಯವೆಂಬ ಶಂಖ ಊದಿದುದು (ಭೀಷ್ಮ 25/16). ಭೀಷ್ಮನೊಡನೆ ಯುದ್ಧಕ್ಕೆ ಆಜ್ಞೆ ಬೇಡಿದುದು (ಭೀಷ್ಮ 43/37). ದ್ರೋಣಾಚಾರ್ಯನಿಗೆ ಪ್ರಣಾಮಮಾಡಿ ಆತನೊಡನೆ ಯುದ್ಧಕ್ಕೆ ಅಪ್ಪಣೆ ಬೇಡಿದುದು (ಭೀಷ್ಮ 43/52). ಕೃಪಾಚಾರ್ಯನನ್ನು ಗೌರವಿಸಿ, ಆತನಿಂದಲೂ ಯುದ್ಧಕ್ಕೆ ಅಪ್ಪಣೆ ಬೇಡಿದುದು (ಭೀಷ್ಮ 43/69). ಶಲ್ಯನೊಡನೆ ಯುದ್ಧಕ್ಕೆ ಅನುಮತಿ ಕೇಳಿದುದು (ಭೀಷ್ಮ 43/78). ಯುಧಿಷ್ಠಿರನು ಕೌರವವೀರರನ್ನು ತನ್ನ ಪಕ್ಷಕ್ಕೆ ಬರುವಂತೆ ಆಮಂತ್ರಿಸಿದುದು ಮತ್ತು ಬಂದ ಯುಯುತ್ಸುವನ್ನು ತನ್ನ ಪಕ್ಷಕ್ಕೆ ತೆಗೆದುಕೊಂಡದ್ದು (ಭೀಷ್ಮ 43/94–101). ಪ್ರಥಮ ದಿನದ ಯುದ್ಧದಲ್ಲಿ ಶಲ್ಯನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/28–30). ಭೀಷ್ಮನ ಪರಾಕ್ರಮ ಕಂಡು ಇವನ ಚಿಂತೆ (ಭೀಷ್ಮ 50/4–24). ಶಲ್ಯನೊಂದಿಗೆ ಇವನ ಯುದ್ಧ (ಭೀಷ್ಮ 71/18–21). ಇವನಿಂದ ತನ್ನ ಸೇನೆಯ ಮೂಲಕ ವಜ್ರವ್ಯೂಹ ನಿರ್ಮಾಣ (ಭೀಷ್ಮ 81/22–23). ಇವನ ಭಯಂಕರ ಕೋಪ ಮತ್ತು ಇವನಿಂದ ಶ್ರುತಾಯುವಿನ ಪರಾಜಯ (ಭೀಷ್ಮ 84/8–17). ಶಿಖಂಡಿಯನ್ನು ನಿಂದಿಸಿದುದು (ಭೀಷ್ಮ 85/20–25). ಭೀಷ್ಮನಿಗೆ ಭಯಪಟ್ಟು ಇವನು ಧನುರ್ಬಾಣಗಳನ್ನು ಎಸೆದುದು (ಭೀಷ್ಮ 86/2–11). ಇವನ ಮೇಲೆ ಭಗದತ್ತನ ಆಕ್ರಮಣ (ಭೀಷ್ಮ 95/84). ಭೀಷ್ಮನು ಎಲ್ಲಾ ಕಡೆಯಿಂದ ಈತನನ್ನು ಆಕ್ರಮಿಸಿದುದು (ಭೀಷ್ಮ 102/27–28). ಶಕುನಿಯೊಂದಿಗೆ ಇವನ ಯುದ್ಧ (ಭೀಷ್ಮ 105/11–23). ಶಲ್ಯನೊಂದಿಗೆ ಯುದ್ಧ (ಭೀಷ್ಮ 105/30–33). ಭೀಷ್ಮವಧೆಗಾಗಿ, ಕರುಣಾಪೂರ್ಣಶಬ್ದಗಳಲ್ಲಿ, ಇವನು ಕೃಷ್ಣನೊಡನೆ ಸಲಹೆ ಕೇಳಿದುದು (ಭೀಷ್ಮ 107/13–24). ಭೀಷ್ಮವಧೆಯ ಉಪಾಯವನ್ನು ಆತನಲ್ಲಿಯೇ ಕೇಳುವಂತೆ ಶ್ರೀಕೃಷ್ಣನೊಡನೆ ಹೇಳಿದುದು (ಭೀಷ್ಮ 107/41–51). ಭೀಷ್ಮನ ಬಳಿಗೆ ಹೋಗಿ, ಅವನೊಡನೆ ಆತನ ವಧೋಪಾಯವನ್ನು ಕೇಳಿದುದು (ಭೀಷ್ಮ 107/62–74). ದ್ರೋಣಾಚಾರ್ಯನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 110/17; ಭೀಷ್ಮ 111/50–52). ಭೀಷ್ಮನ ಆದೇಶದ ಪ್ರಕಾರ, ತನ್ನ ಸೇನೆ ಆತನ ಮೇಲೆ ಆಕ್ರಮಣ ಮಾಡುವಂತೆ ಆಜ್ಞೆ ನೀಡಿದುದು (ಭೀಷ್ಮ 115/17–20). ಶಲ್ಯನೊಂದಿಗೆ ದ್ವಂದ್ವಯುದ್ಧ (ಭೀಷ್ಮ 116/40–41). ಶ್ರೀಕೃಷ್ಣನೊಂದಿಗೆ ಸಂಭಾಷಣೆ (ಭೀಷ್ಮ 120/69–70). ಧೃತರಾಷ್ಟ್ರನಿಂದ ಇವನ ಶೌರ್ಯದ ವರ್ಣನೆ (ದ್ರೋಣ 10/7–12). ದ್ರೋಣಾಚಾರ್ಯನು ಈತನನ್ನು ಸೆರೆಹಿಡಿಯಲು ಮಾಡಿದ ಪ್ರತಿಜ್ಞೆಯನ್ನು ಕೇಳಿ, ಅರ್ಜುನನು ತನ್ನ ಬಳಿಯೇ

ಇರುವಂತೆ ಈತ ಹೇಳಿದುದು (ದ್ರೋಣ 13/3–6). ದ್ರೋಣಾಚಾರ್ಯನಿಂದ ತನ್ನನ್ನು ರಕ್ಷಿಸಲು, ಈತ ಅರ್ಜುನನಿಗೆ ಆದೇಶ ನೀಡಿದುದು (ದ್ರೋಣ 17/42–43). ದ್ರೋಣಾಚಾರ್ಯನಿಂದ ನಿರ್ಮಿಸಲ್ಪಟ್ಟ ಗರುಡವ್ಯೂಹವನ್ನು ನೋಡಿ ಈತ ಭಯಭೀತನಾದುದು (ದ್ರೋಣ 20/20–21). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/10). ಶಲ್ಯನೊಂದಿಗೆ ಯುದ್ಧ (ದ್ರೋಣ 25/15–17). ವಿಶಾಲಸೇನೆಯೊಂದಿಗೆ ಈತ ಭಗ ದತ್ತನನ್ನು ಆಕ್ರಮಿಸಿದುದು (ದ್ರೋಣ 26/31–39). ಅಭಿಮನ್ಯುವಿನೊಡನೆ ವ್ಯೂಹ ಭೇದಿಸು ವಂತೆ ಹೇಳಿದುದು (ದ್ರೋಣ 35/14–17). ಜಯದ್ರಥನು ಇವರನ್ನು ವ್ಯೂಹದ ಒಳಗೆ ನುಗ್ಗ ದಂತೆ ತಡೆದುದು (ದ್ರೋಣ 42/3–8). ಅಭಿ ಮನ್ಯುವಿನ ಮರಣಾನಂತರ ಇವನು ತನ್ನ ಸೈನಿಕರಿಗೆ ಧೈರ್ಯ ಹೇಳಿದುದು (ದ್ರೋಣ 49/35). ಅಭಿಮನ್ಯುವಿನ ಮರಣದಿಂದಾಗಿ ಈತನ ಕರುಣಾಪೂರ್ಣವಿಲಾಪ (ದ್ರೋಣ 51). ವ್ಯಾಸ ರೊಂದಿಗೆ ಮೃತ್ಯುವಿನ ಉತ್ಪತ್ತಿ ಮೊದಲಾದ ವಿಷಯವಾಗಿ ಪ್ರಶ್ನೆ ಮಾಡಿದುದು (ದ್ರೋಣ 52/18–19). ವ್ಯಾಸರು ತಿಳಿಯಪಡಿಸಿದ ಮೇಲೆ ಅಭಿಮನ್ಯುವಧೆಯಿಂದ ಹುಟ್ಟಿದ ಶೋಕದಿಂದ ಮುಕ್ತನಾದುದು (ದ್ರೋಣ 71/25–26). ಅರ್ಜುನನೊಡನೆ ಅಭಿಮನ್ಯುವಧೆಯ ವೃತ್ತಾಂತ ಹೇಳಿದುದು (ದ್ರೋಣ 73/1–16). ಯುದ್ಧಕಾಲ ದಲ್ಲಿ ಈತನಿಂದ ದಾನ ಪೂಜೆ ಮೊದಲಾದ ನಿತ್ಯಾಚರಣೆಗಳು (ದ್ರೋಣ 82). ಜಯದ್ರಥ ವಧೆಗೋಸ್ಕರ ಮಾಡಲ್ಪಟ್ಟ ಅರ್ಜುನನ ಪ್ರತಿಜ್ಞೆ ಯನ್ನು ಪೂರ್ಣಮಾಡುವುದಕ್ಕೋಸ್ಕರ ಶ್ರೀಕೃಷ್ಣ ನೊಡನೆ ಪ್ರಾರ್ಥಿಸಿದುದು (ದ್ರೋಣ 83/10–19). ಅರ್ಜುನನನ್ನು ವಿಜಯಿಯಾಗುವಂತೆ ಆಶೀರ್ವದಿಸಿದುದು (ದ್ರೋಣ 84/4). ಶಲ್ಯ ನೊಂದಿಗೆ ಈತನ ಯುದ್ಧ (ದ್ರೋಣ 96/29–30). ಕೃತವರ್ಮನ ಮೇಲೆ ಇವನ ಆಕ್ರಮಣ (ದ್ರೋಣ 97/2). ದ್ರೋಣಾಚಾರ್ಯನೊಂದಿಗೆ ಯುದ್ಧ; ಆತನಿಂದ ಇವನ ಪರಾಜಯ (ದ್ರೋಣ 106/18–47). ಸಾತ್ಯಕಿಯ ರಕ್ಷಣೆಗೋಸ್ಕರ ಸೈನಿಕರಿಗೆ ಆದೇಶ ನೀಡಿದುದು (ದ್ರೋಣ 110/14–19). ಇವನು ಸಾತ್ಯಕಿಯನ್ನು ಹೊಗಳುತ್ತಾ, ಆತ ಅರ್ಜುನನ ಸಹಾಯಕ್ಕೆ ಹೋಗುವಂತೆ ಆದೇಶಿಸಿದುದು (ದ್ರೋಣ 110/42–103). ತನ್ನ ರಕ್ಷಣೆಯ ಎಲ್ಲಾ ಯೋಗ್ಯ ವ್ಯವಸ್ಥೆಯನ್ನು ಹೇಳಿ, ಸಾತ್ಯಕಿ ಅರ್ಜುನನ ಸಹಾಯಕ್ಕಾಗಿ ಹೋಗಲೇ ಬೇಕೆಂದು, ಆಗ್ರಹಪೂರ್ಣ ಆದೇಶ ನೀಡಿದುದು (ದ್ರೋಣ 111/40–51). ದುರ್ಯೋಧನನೊಂದಿಗೆ ಯುದ್ಧ (ದ್ರೋಣ 124/54–47). ಅರ್ಜುನ ಮತ್ತು ಸಾತ್ಯಕಿಗೋಸ್ಕರ ಈತನ ಚಿಂತೆ ಮತ್ತು ಅವರ ಸುಳಿವನ್ನು ವಿಚಾರಿಸಲು ಭೀಮಸೇನ ನನ್ನು ಕಳುಹಿಸಿದುದು (ದ್ರೋಣ 126). ಭೀಮ ಸೇನ ಮತ್ತು ಅರ್ಜುನನ ಸಿಂಹನಾದ ಕೇಳಿ, ಸಂತೋಷಪೂರ್ವಕವಾಗಿ, ಅವರ ಕುರಿತೇ ವಿಚಾರ ಮಾಡಿದುದು (ದ್ರೋಣ 128/39–55). ಜಯದ್ರಥ ವಧೆಯ ಅನಂತರ ಶ್ರೀಕೃಷ್ಣನ ಸ್ತುತಿ ಮಾಡಿದುದು (ದ್ರೋಣ 149/54–60). ದುರ್ಯೋ ಧನನೊಂದಿಗೆ ಯುದ್ಧ ಮತ್ತು ಅವನನ್ನು ಮೂರ್ಛೆಗೊಳಿಸಿದುದು (ದ್ರೋಣ 153/29–39). ದ್ರೋಣಾಚಾರ್ಯನೊಂದಿಗೆ ಯುದ್ಧ ಮತ್ತು ಅವನನ್ನು ಪರಾಜಯಗೊಳಿಸಿದುದು (ದ್ರೋಣ 157/27–43). ದ್ರೋಣಾಚಾರ್ಯ ನೊಂದಿಗೆ ಯುದ್ಧ ಮತ್ತು ಆತನನ್ನು ಮೂರ್ಛೆ ಗೊಳಿಸಿದುದು (ದ್ರೋಣ 162/36–42). ಇವನು ದೀಪ ಉರಿಸುವಂತೆ ಕಾಲಾಳು ಸೈನಿಕರಿಗೆ ಆದೇಶ ನೀಡಿದುದು (ದ್ರೋಣ 163/27). ಕೃತವರ್ಮ ನೊಂದಿಗೆ ಯುದ್ಧ ಮತ್ತು ಆತನಿಂದ ಪರಾಜಿತ ನಾದುದು (ದ್ರೋಣ 165/24–40). ಕರ್ಣನ ಪರಾಕ್ರಮದಿಂದ ಇವನ ಗಾಬರಿ (ದ್ರೋಣ 173/25–28). ಘಟೋತ್ಕಚವಧೆಯಿಂದ ಶೋಕ ವಿಹ್ವಲನಾದುದು (ದ್ರೋಣ 183/27–50). ಧೃಷ್ಟ ದ್ಯುಮ್ನಾದಿ ಮಹಾರಥರು ದ್ರೋಣಾಚಾರ್ಯನ ಮೇಲೆ ಆಕ್ರಮಣ ಮಾಡುವಂತೆ ಆದೇಶ (ದ್ರೋಣ 184/3–8). ದ್ರೋಣಾಚಾರ್ಯನೊಡನೆ ವಂಚನೆಯಿಂದ ಅಶ್ವತ್ಥಾಮನು ಮಡಿದ ವಾರ್ತೆ ಹೇಳಿದುದು (ದ್ರೋಣ 190/55). ಅರ್ಜುನ ನೊಡನೆ ಕೌರವಸೇನೆಯ ಸಿಂಹನಾದದ ಕಾರಣ ಕೇಳಿದುದು (ದ್ರೋಣ 196/10–25). ನಾರಾಯಣಾಸ್ತ್ರದ ಪ್ರಭಾವ ನೋಡಿ ಇವನು ಖೇದಗೊಂಡದ್ದು (ದ್ರೋಣ 199/26–36). ಕರ್ಣನೊಂದಿಗೆ ಯುದ್ಧಮಾಡಲು, ಅರ್ಜುನನು

ವ್ಯೂಹ ರಚಿಸುವಂತೆ ಆದೇಶ ನೀಡಿದುದು (ಕರ್ಣ 11/23–27). ಇವನಿಂದ ದುರ್ಯೋಧನನ ಪರಾಜಯ (ಕರ್ಣ 28/7–8; ಕರ್ಣ 29/32). ತನ್ನ ಪಕ್ಷದ ವೀರರು; ಅವರಿಗೆ ಯೋಗ್ಯ ಪ್ರತಿಕಕ್ಷಿಗಳೊಂದಿಗೆ ಯುದ್ಧ ಮಾಡಲು ಆದೇಶ (ಕರ್ಣ 46/34–36). ಕರ್ಣನೊಂದಿಗೆ ಯುದ್ಧದಲ್ಲಿ, ಆತನನ್ನು ಮೂರ್ಛೆಗೊಳಿಸಿದುದು (ಕರ್ಣ 49/21). ಕರ್ಣನಿಂದ ಪರಾಜಿತನಾಗಿ ಈತ ಯುದ್ಧಕ್ಷೇತ್ರದಿಂದ ತೊಲಗಿದುದು (ಕರ್ಣ 49/49). ಅಶ್ವತ್ಥಾಮನಿಂದ ಪರಾಜಿತನಾಗಿ ಈತ ಯುದ್ಧರಂಗದಿಂದ ಸರಿದುದು (ಕರ್ಣ 55/38). ಇವನ ಮೇಲೆ ಕೌರವ ಸೈನಿಕರ ಆಕ್ರಮಣ ಮತ್ತು ಕರ್ಣನ ಪ್ರಹಾರದಿಂದ ವ್ಯಾಕುಲನಾಗಿ ಯುದ್ಧಸ್ಥಳದಿಂದ ತೊಲಗಿದುದು (ಕರ್ಣ 63/31). ಕರ್ಣನಿಂದ ಗಾಯಗೊಂಡು, ಓಡಿ ಶಿಬಿರಕ್ಕೆ ಹೋದುದು (ಕರ್ಣ 63/33–34). ಅರ್ಜುನನೊಡನೆ ಭ್ರಮಾಧೀನನಾಗಿ ಕರ್ಣನು ಕೊಲ್ಲಲ್ಪಟ್ಟ ವೃತ್ತಾಂತ ಕೇಳಿದುದು (ಕರ್ಣ 66). ಅರ್ಜುನನಿಗೆ ಅಪಮಾನಜನಕವಾಗಿ ಕ್ರೋಧ ಪೂರ್ಣ ಮಾತು ಹೇಳಿದುದು (ಕರ್ಣ 68). ಅರ್ಜುನನು ಅಪಮಾನಿಸಿದ್ದರಿಂದ ದುಃಖಿಯಾಗಿ ಕಾಡಿಗೆ ಹೋಗಲು ಸಿದ್ಧನಾದುದು (ಕರ್ಣ 70/43–47). ಅರ್ಜುನನನ್ನು ಪ್ರೀತಿಪೂರ್ವಕ ಭೇಟಿಯಾಗಿ ಆಶೀರ್ವಾದ ಮಾಡಿದುದು (ಕರ್ಣ 71/30–34,40). ಕರ್ಣನ ಮರಣದಿಂದ ಸಂತುಷ್ಟನಾಗಿ ಶ್ರೀಕೃಷ್ಣ ಮತ್ತು ಅರ್ಜುನನನ್ನು ಹೊಗಳಿದುದು (ಕರ್ಣ 96/41–45). ಇವನು ಶಲ್ಯನ ಚಕ್ರರಕ್ಷಕರಾದ ಚಂದ್ರಸೇನ ಮತ್ತು ದ್ರುಮಸೇನರನ್ನು ವಧಿಸಿದುದು (ಶಲ್ಯ 12/52–53). ಶಲ್ಯನೊಂದಿಗೆ ಯುದ್ಧ (ಶಲ್ಯ 13;15). ಇವನಿಂದ ಶಲ್ಯನ ಪರಾಜಯ (ಶಲ್ಯ 16/62–66). ಶಲ್ಯನ ವಧೆ (ಶಲ್ಯ 17/52). ಇವನಿಂದ ಶಲ್ಯನ ತಮ್ಮನ ವಧೆ (ಶಲ್ಯ 17/86–87). ಇವನು ಸೇನಾಸಮೇತನಾಗಿ ದ್ವೈಪಾಯನ ಸರೋವರಕ್ಕೆ ಹೋದುದು (ಶಲ್ಯ 30/53–54). ಜಲದಲ್ಲಿ ಅಡಗಿದ ದುರ್ಯೋಧನನನ್ನು ಯುದ್ಧಕ್ಕಾಹ್ವಾನಿಸಿದುದು (ಶಲ್ಯ 31/18–73). 'ನಮ್ಮಲ್ಲಿ ಯಾರಾದರೊಬ್ಬನನ್ನು ಕೊಂದರೆ ರಾಜ್ಯ ನಿನ್ನದಾಗುವುದು' ಎಂದು ದುರ್ಯೋಧನನನಿಗೆ ವರವನ್ನಿತ್ತದ್ದು (ಶಲ್ಯ 32/26–27; ಶಲ್ಯ 32/ 61–62). ಭೀಮಸೇನನಿಗೆ ತಿಳಿಯಪಡಿಸಿ ಅನ್ಯಾಯಮಾಡದಂತೆ ತಡೆದುದು (ಶಲ್ಯ 59/ 15–20). ದುರ್ಯೋಧನನಿಗೆ ಸಮಾಧಾನ ಹೇಳುತ್ತಾ ಖೇದವನ್ನು ಪ್ರಕಟಿಸಿದುದು (ಶಲ್ಯ 59/22–30). ಶ್ರೀಕೃಷ್ಣನೊಡನೆ ವಾರ್ತಾಲಾಪ (ಶಲ್ಯ 60/35–38). ಭೀಮಸೇನನ ಪ್ರಶಂಸೆ (ಶಲ್ಯ 60/47–48). ಶ್ರೀಕೃಷ್ಣನಿಗೆ ಕೃತಜ್ಞತೆಯನ್ನು ತೋರಿಸಿದುದು (ಶಲ್ಯ 62/28–32). ಗಾಂಧಾರಿಯನ್ನು ಸಮಾಧಾನಗೊಳಿಸಲು ಶ್ರೀಕೃಷ್ಣನನ್ನು ಹಸ್ತಿನಾವತಿಗೆ ಕಳುಹಿಸಿದುದು (ಶಲ್ಯ 62/40–42). ಧೃಷ್ಟದ್ಯುಮ್ನನ ಸಾರಥಿಯ ಮುಖದಿಂದ ಪಾಂಚಾಲರ ಮತ್ತು ದ್ರೌಪದೀಪುತ್ರರ ಮೃತ್ಯು ಸಮಾಚಾರವನ್ನು ಕೇಳಿ ವಿಲಪಿಸಿದುದು (ಸೌಪ್ತಿಕ 16/35). ಅಶ್ವತ್ಥಾಮನಿಂದ ತನ್ನ ಪುತ್ರರು ಕೊಲ್ಲಲ್ಪಟ್ಟ ವಿಷಯದಲ್ಲಿ ಶ್ರೀಕೃಷ್ಣನೊಂದಿಗೆ ಪ್ರಶ್ನೆ (ಸೌಪ್ತಿಕ 17/2–5). ಸಹೋದರ ಸಹಿತನಾಗಿ ಇವನು ಧೃತರಾಷ್ಟ್ರನನ್ನು ಭೇಟಿಮಾಡಿದುದು (ಸ್ತ್ರೀ 12/11). ಗಾಂಧಾರಿಯೊಡನೆ ಕ್ಷಮೆಯಾಚನೆ ಮಾಡಿದುದು (ಸ್ತ್ರೀ 15/25–28). ಗಾಂಧಾರಿಯ ದೃಷ್ಟಿ ಬಿದ್ದುದರಿಂದ ಇವನ ಉಗುರು ಕಪ್ಪಾದುದು (ಸ್ತ್ರೀ 15/30). ಧೃತರಾಷ್ಟ್ರನೊಡನೆ ಯುದ್ಧದಲ್ಲಿ ಸತ್ತವರ ಸಂಖ್ಯೆ ಮತ್ತು ಅವಸ್ಥೆಯ ಕುರಿತು ವರ್ಣಿಸಿದುದು (ಸ್ತ್ರೀ 26/9–10, 12–17). ಸತ್ತವರ ದಹನ ಸಂಸ್ಕಾರಕ್ಕೋಸ್ಕರ ಆಜ್ಞೆ ಮಾಡಿದುದು (ಸ್ತ್ರೀ 26/24–26). ಕುಂತಿಯ ಮುಖದಿಂದ ಕರ್ಣನು ತನ್ನ ಸಹೋದರನೆಂದು ತಿಳಿದು ಅವನಿಗಾಗಿ ವಿಲಪಿಸಿದುದು (ಸ್ತ್ರೀ 27/ 15–25). ಸ್ತ್ರೀಯರ ಮನಸ್ಸಿನಲ್ಲಿ, ರಹಸ್ಯವಾದ ವಿಚಾರ ಗುಪ್ತವಾಗಿ ಉಳಿಯದಿರಲೆಂದು ಶಾಪ ಕೊಟ್ಟದ್ದು (ಸ್ತ್ರೀ 27/29). ಕರ್ಣನ ಕುರಿತಾಗಿ ಶೋಕ ವ್ಯಕ್ತಪಡಿಸುತ್ತಾ, ಆತನಿಗೆ ಶಾಪ ದೊರಕಿದ ವೃತ್ತಾಂತವನ್ನು ನಾರದರಲ್ಲಿ ಕೇಳಿದುದು (ಶಾಂತಿ 1/13–44). ಇವನು ಚಿಂತಿತನಾದುದು (ಶಾಂತಿ 6/2). ಸ್ತ್ರೀಯರು ಗೋಪ್ಯವಿಚಾರಗಳನ್ನು ಮನಸ್ಸಿನಲ್ಲಿ ಅಡಗಿಸಲಸಾಧ್ಯವಾಗದಂತೆ ಶಾಪಕೊಟ್ಟದ್ದು (ಶಾಂತಿ 6/11). ತನ್ನ ಆಂತರಿಕ ದುಃಖವನ್ನು ತೋರಿಸುತ್ತಾ, ರಾಜ್ಯವನ್ನು ತ್ಯಜಿಸಿ ವನವಾಸ ಮಾಡುವೆನೆಂದು ಅರ್ಜುನನೊಡನೆ ಹೇಳಿದುದು

(ಶಾಂತಿ 7). ರಾಜ್ಯವನ್ನು ಬಿಟ್ಟು ವಾನಪ್ರಸ್ಥ ಅಥವಾ ಸನ್ಯಾಸಗ್ರಹಣ ಮಾಡುವ ನಿರ್ಧಾರ ವನ್ನು ಹೇಳಿದುದು (ಶಾಂತಿ 9). ಭೀಮಸೇನನ ಮಾತನ್ನು ವಿರೋಧಿಸಿ, ಇವನು ಮುನಿವೃತ್ತಿ ಯನ್ನು ಪ್ರಶಂಸಿಸಿದುದು (ಶಾಂತಿ 17). ತನ್ನ ಅಭಿಪ್ರಾಯವನ್ನೇ ಯಥಾರ್ಥವಾದುದೆಂದು ಈತ ಪ್ರತಿಪಾದಿಸಿದುದು (ಶಾಂತಿ 19). ವ್ಯಾಸನೊಡನೆ ರಾಜರ್ಷಿ ಸುದ್ಯುಮ್ನನ ಚರಿತ್ರೆಯ ಕುರಿತು ಜಿಜ್ಞಾಸೆ (ಶಾಂತಿ 23/17). ವ್ಯಾಸರಲ್ಲಿ ತನ್ನ ಅತೀವ ದುಃಖವನ್ನು ಪ್ರಕಟಿಸಿದುದು (ಶಾಂತಿ 25/2–3). ಐಶ್ವರ್ಯ ತ್ಯಾಗದ ಮಹಿಮೆಯನ್ನು ಪ್ರತಿಪಾದಿಸಿದುದು (ಶಾಂತಿ 26). ಶೋಕದ ಕಾರಣವನ್ನು ಹೇಳುತ್ತಾ ಶರೀರ ತ್ಯಾಗಮಾಡಲು ಸಿದ್ಧನಾದುದು (ಶಾಂತಿ 27/1–26). ಶ್ರೀಕೃಷ್ಣ ನೊಡನೆ ಸೃಂಜಯ ಪುತ್ರ ಸುವರ್ಣಷ್ಠೀವಿಯ ವಿಷಯವಾಗಿ ಕೇಳಿದುದು (ಶಾಂತಿ 30/1–3). ನಾರದನೊಡನೆ ಸೃಂಜಯ ಪುತ್ರ ಸುವರ್ಣ ಷ್ಠೀವಿಯ ವೃತ್ತಾಂತ ಕೇಳಿದುದು (ಶಾಂತಿ 31/1). ವ್ಯಾಸನೊಡನೆ ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಕೇಳಿದುದು (ಶಾಂತಿ 33/1–12). ವ್ಯಾಸನೂ, ಶ್ರೀಕೃಷ್ಣನೂ ಸಮಾಧಾನಪಡಿಸಿದ ಮೇಲೆ, ಇವನು ಹಸ್ತಿನಾವತಿಗೆ ಹೋದುದು ಮತ್ತು ನಗರ ಪ್ರವೇಶ ಮಾಡಿದುದು (ಶಾಂತಿ 37/30–49). ನಗರಪ್ರವೇಶ ಕಾಲದಲ್ಲಿ ಪುರವಾಸಿಗಳು ಮತ್ತು ಬ್ರಾಹ್ಮಣರ ಮೂಲಕ ಇವನ ಸತ್ಕಾರ (ಶಾಂತಿ 38/1–21). ಇವನ ರಾಜ್ಯಾಭಿಷೇಕ (ಶಾಂತಿ 40/12–16). ತಾನು ಧೃತರಾಷ್ಟ್ರನ ಅಧೀನದಲ್ಲಿದ್ದುಕೊಂಡು, ಸಹೋದರಾದಿಗಳನ್ನು ಬೇರೆ ಬೇರೆ ಕಾರ್ಯಕ್ಕೆ ನಿಯುಕ್ತಿಗೊಳಿಸಿದುದು (ಶಾಂತಿ 41). ಇವನಿಂದ ಸಹೃದರ ಮತ್ತು ಖಾಸಾ ಸಂಬಂಧಿಗಳ ಶ್ರಾದ್ಧ (ಶಾಂತಿ 42/3–8). ಇವನಿಂದ ಶ್ರೀಕೃಷ್ಣನ ಸ್ತುತಿ (ಶಾಂತಿ 43/ 2–16). ಇವನಿಂದ ಸಹೋದರರಿಗಾಗಿ ಅರಮನೆ ಗಳ ವಿಭಜನೆ (ಶಾಂತಿ 44). ಬ್ರಾಹ್ಮಣರಿಗೂ, ಆಶ್ರಿತರಿಗೂ ಸತ್ಕಾರಪೂರ್ವಕವಾಗಿ ದಾನ ನೀಡಿ ದುದು (ಶಾಂತಿ 45/4–11). ಶ್ರೀಕೃಷ್ಣನ ಬಳಿಗೆ ಹೋಗಿ, ಇವನು ಕೃತಜ್ಞತೆ ತೋರಿದುದು (ಶಾಂತಿ 45/17–19). ಶ್ರೀಕೃಷ್ಣನು ಧ್ಯಾನಮಗ್ನ ನಾಗಿರುವುದನ್ನು ಕಂಡು, ಆತನ ಧ್ಯಾನದ ಕಾರಣ ಕೇಳಿದುದು (ಶಾಂತಿ 46/1–10). ಶ್ರೀಕೃಷ್ಣನ ಆಜ್ಞಾನುಸಾರ ಭೀಷ್ಮರ ಬಳಿಗೆ ಹೋಗಲು ಸಿದ್ಧನಾದುದು (ಶಾಂತಿ 46/25–30). ಪರಶುರಾಮನು ಮಾಡಿದ ಕ್ಷತ್ರಿಯ ಸಂಹಾರದ ಕುರಿತು ಇವನ ಜಿಜ್ಞಾಸೆ (ಶಾಂತಿ 48/10–15). ಸಾತ್ಯಕಿಯ ಮೂಲಕ ಶ್ರೀಕೃಷ್ಣನ ಸಂದೇಶ ಪಡೆದು, ಅರ್ಜುನನು ರಥವನ್ನು ಸಿದ್ಧಪಡಿಸುವಂತೆ ಆದೇಶ ನೀಡಿದುದು (ಶಾಂತಿ 53/14–17). ಸಹೋದರರು ಮತ್ತು ಶ್ರೀಕೃಷ್ಣಾದಿ ಗಳೊಂದಿಗೆ ಭೀಷ್ಮನ ಬಳಿಗೆ ಹೋದುದು (ಶಾಂತಿ 53/14–28). ಶ್ರೀಕೃಷ್ಣನೇ ಮೊದಲು ಭೀಷ್ಮನೊಂದಿಗೆ ಮಾತುಕತೆ ಮಾಡುವಂತೆ ಹೇಳಿ ದುದು (ಶಾಂತಿ 54/12–14). ಭೀಷ್ಮನಿಂದ ಆಶ್ವಾಸನೆ ಪಡೆದು ಆತನ ಬಳಿಗೆ ಹೋದುದು (ಶಾಂತಿ 55/20–21). ಇವನಿಂದ ಪ್ರಶ್ನೆಗಳು; ಆ ಪ್ರಶ್ನೆಗಳಿಗೆ ಸರಿಯಾಗಿ, ಭೀಷ್ಮನಿಂದ ರಾಜಧರ್ಮ ಆಪದ್ಧರ್ಮ ಮತ್ತು ಮೋಕ್ಷಧರ್ಮಗಳ ರಹಸ್ಯಗಳು ವಿವಿಧ ದೃಷ್ಟಾಂತಗಳ ಮೂಲಕ ವಿಶದವಾಗಿ ವಿವೇಚಿಸಲ್ಪಟ್ಟದ್ದು (ಶಾಂತಿ 57 ರಿಂದ 365). ಭೀಷ್ಮನಿಂದ ಯುಧಿಷ್ಠಿರನಿಗೆ, ಈತನ ಪ್ರಶ್ನೆಗಳಿಗೆ ಅನುಸಾರವಾಗಿ ವಿವಿಧ ಉಪದೇಶ (ಅನು ಅಧ್ಯಾಯ 1 ರಿಂದ 165). ಭೀಷ್ಮನ ಆಜ್ಞೆಪ್ರಕಾರ ಪರಿವಾರಸಹಿತ ಹಸ್ತಿನಾ ಪುರಕ್ಕೆ ಪ್ರಸ್ಥಾನ (ಅನು 166/15–17). ಭೀಷ್ಮನ ಅಂತ್ಯೇಷ್ಟಿ ಸಂಸ್ಕಾರದ ಸಾಮಗ್ರಿ ತೆಗೆದುಕೊಂಡು ಯುಧಿಷ್ಠಿರಾದಿಗಳು, ಅವನ ಬಳಿಗೆ ಹೋದುದು (ಅನು 167/6–23). ಭೀಷ್ಮನು ಇವನಿಗೆ ಕರ್ತವ್ಯದ ಉಪದೇಶ ಮಾಡಿದುದು (ಅನು 167/49–52). ಭೀಷ್ಮನಿಗೆ ಜಲಾಂಜಲಿಯನ್ನಿತ್ತ ಮೇಲೆ, ಶೋಕದಿಂದ ವ್ಯಾಕುಲನಾಗಿ, ಈತ ಗಂಗಾತಟದಲ್ಲಿ ಬಿದ್ದದ್ದು (ಆಶ್ವ 1/3). ಇವನನ್ನು ಈ ಸ್ಥಿತಿಯಲ್ಲಿ ನೋಡಿ, ಶ್ರೀಕೃಷ್ಣನು ಅಧೀರನಾಗದಂತೆ ಈತನಿಗೆ ಹೇಳಿದುದು ಮತ್ತು ಧೃತರಾಷ್ಟ್ರನು ಇವನನ್ನು ಸಮಾಧಾನಗೊಳಿಸಿ ದುದು (ಆಶ್ವ 1). ಶ್ರೀಕೃಷ್ಣನು ಇವನನ್ನು ಸಂತೈಸಿದುದು (ಆಶ್ವ 2/2–8). ಶೋಕದಿಂದ ವ್ಯಥಿತನಾಗಿ ಕಾಡಿಗೆ ಹೋಗುವುದಕ್ಕೋಸ್ಕರ ಶ್ರೀಕೃಷ್ಣನಿಂದ ಆಜ್ಞೆ ಬೇಡಿದುದು (ಆಶ್ವ 2/11–12). ವ್ಯಾಸನು ಇವನನ್ನು ಸಂತೈಸಿದುದು (ಆಶ್ವ

27

2/15–20). ವ್ಯಾಸನು ಈತನನ್ನು ಸಮಾಧಾನ ಪಡಿಸುತ್ತಾ ಅಶ್ವಮೇಧ ಯಜ್ಞಮಾಡಲು ಆಜ್ಞೆಯ ನ್ನಿತ್ತದ್ದು; ಯುಧಿಷ್ಠಿರನು ಧನಾಭಾವದಿಂದ ಅಸಮರ್ಥತೆಯನ್ನು ತೋರಿಸಿದಾಗ, ಹಿಮಾಲಯದಿಂದ, ರಾಜಾ ಮರುತ್ತನು ಇಟ್ಟಿರುವ ಧನವನ್ನು ತರಲು ಸಲಹೆಯನ್ನಿತ್ತದ್ದು (ಆಶ್ವ 3/1–21). ಯುಧಿಷ್ಠಿರನು ಕೇಳಿದಾಗ, ವ್ಯಾಸನು ಇವನಿಗೆ ಮರುತ್ತ ರಾಜನ ಉಪಾಖ್ಯಾನ ಹೇಳಿದುದು (ಆಶ್ವ 3/22 ರಿಂದ 10/36). ಶ್ರೀಕೃಷ್ಣನು ಯುಧಿಷ್ಠಿರನಿಗೆ ಉಪದೇಶವನ್ನಿತ್ತು, ಯಜ್ಞಕ್ಕೋಸ್ಕರ ಪ್ರೇರಿಸಿದುದು (ಆಶ್ವ 11 ರಿಂದ 13). ಇವನ ರಾಜ್ಯ ಶಾಸನದ ಶ್ರೇಷ್ಠತೆಯ ವರ್ಣನೆ (ಆಶ್ವ 14/17). ಶ್ರೀಕೃಷ್ಣನು ದ್ವಾರಕೆಗೆ ಹೋಗಲು ಸಮ್ಮತಿಸಿದುದು (ಆಶ್ವ 52/44–50). ಮರುತ್ತನು ಬಿಟ್ಟು ಹೋದ ಐಶ್ವರ್ಯವನ್ನು ತರುವ ಕುರಿತು ಸಹೋದರರೊಡನೆ ಸಲಹೆ ಕೇಳಿದುದು (ಆಶ್ವ 63/4–9). ಸಹೋದರರ ಸಹಿತ ಧನವನ್ನು ತರಲು ಇವನ ಪ್ರಸ್ಥಾನ (ಆಶ್ವ 63/20–24). ಹಿಮಾಲಯದ ಮೇಲೆ ಹೋಗಿ ಶಿಬಿರ ಹೂಡಿದುದು ಮತ್ತು ಬ್ರಾಹ್ಮಣರು ಹೇಳಿದ ಪ್ರಕಾರ, ಸಹೋದರರ ಸಮೇತ ಆ ರಾತ್ರಿ ಉಪವಾಸ ಮಾಡಿದುದು (ಆಶ್ವ 64/7–15). ಪಾರ್ಷದರ ಸಹಿತನಾದ ಶಂಕರನನ್ನು ಪೂಜಿಸಿದುದು (ಆಶ್ವ 65/2–13). ಐಶ್ವರ್ಯವನ್ನು ಅಗೆಸಿ, ವಾಹನಗಳಲ್ಲಿ ಹೇರಿ, ಈತ ಹಸ್ತಿನಾವತಿಗೆ ಹಿಂತಿರುಗಿದುದು (ಆಶ್ವ 65/20–21). ವ್ಯಾಸನೂ, ಶ್ರೀಕೃಷ್ಣನೂ ಯುಧಿಷ್ಠಿರನಿಗೆ ಯಜ್ಞಕ್ಕೋಸ್ಕರ ಆಜ್ಞೆ ನೀಡಿದುದು (ಆಶ್ವ 71/15–26). ಅಶ್ವಮೇಧ ಸಂಬಂಧವಾದ ಕುದುರೆಯನ್ನು ಯಾರು ರಕ್ಷಿಸಬೇಕು? ಈ ಕುರಿತು ಈತ ವ್ಯಾಸನೊಡನೆ ಕೇಳಿದುದು; ಆತನ ಆಜ್ಞಾನುಸಾರ ಅರ್ಜುನನಿಗೆ ಅಶ್ವರಕ್ಷಣೆಗೆ ಹೋಗಲು ಆದೇಶ ನೀಡಿದುದು (ಆಶ್ವ 72/12–24). ಭೀಮಸೇನನು ರಾಜರ ಪೂಜೆ ಮಾಡುವಂತೆ ಈತನ ಆದೇಶ. ಶ್ರೀಕೃಷ್ಣನು ಯುಧಿಷ್ಠಿರನೊಡನೆ ಅರ್ಜುನನ ಸಂದೇಶ ತಿಳಿಸಿದುದು (ಆಶ್ವ 86). 'ಅರ್ಜುನನು ಅಧಿಕತರ ಕಷ್ಟ ಯಾಕೆ ಸಹಿಸಬೇಕಾಗುತ್ತದೆ' – ಈ ಕುರಿತಾಗಿ ಯುಧಿಷ್ಠಿರನ ಜಿಜ್ಞಾಸೆ. ಅರ್ಜುನನ ಮೊಣಕಾಲುಗಳ ಹಿಂಭಾಗ (ಪಿಂಡಿಕೆ) ಇರಬೇಕಾದುದಕ್ಕಿಂತ ಅಧಿಕ ದಪ್ಪವಾಗಿರುವುದೇ ಕಾರಣವೆಂದು ಶ್ರೀಕೃಷ್ಣನು ಹೇಳಿದುದು (ಆಶ್ವ 87/1–10). ಬಭ್ರುವಾಹನನು ಇವನಿಗೆ ಪ್ರಣಾಮ ಮಾಡಿದುದು; ಇವನು ಸತ್ಕಾರಪೂರ್ವಕ ಆತನಿಗೆ ಧನವನ್ನಿತ್ತದ್ದು (ಆಶ್ವ 88/6, 10–11). ವ್ಯಾಸರ ಆಜ್ಞೆಪ್ರಕಾರ ಯುಧಿಷ್ಠಿರನು ಅಶ್ವಮೇಧ ಯಜ್ಞದ ದೀಕ್ಷೆ ವಹಿಸಿದುದು (ಆಶ್ವ 88/12–17). ಇವನ ಯಜ್ಞವೈಭವದ ವರ್ಣನೆ (ಆಶ್ವ 88/12–17; 88/18–40). ಯುಧಿಷ್ಠಿರನು ಯಜ್ಞಧೂಮದ ಗಂಧವನ್ನು ಮೂಸಿದುದು; ಯಜ್ಞಪೂರ್ಣವಾದಾಗ ವ್ಯಾಸನು ಇವನಿಗೆ ಆಶೀರ್ವಾದ ಮಾಡಿದುದು (ಆಶ್ವ 89/5–7). ಇವನು ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ರಾಜರಿಗೆ ಉಡುಗೊರೆಗಳನ್ನು ಕೊಟ್ಟು, ವಿದಾಯ ಕೋರಿದುದು. ಯಜ್ಞಪೂರ್ಣಗೊಳಿಸಿ ಈತ ನಗರ ಪ್ರವೇಶ ಮಾಡಿದುದು (ಆಶ್ವ 89/39–44). ಉಡುಗೊರೆಗಳನ್ನೂ ಕೊಟ್ಟು ವಿದಾಯ ಕೋರಿದುದು (89/7–38). ಇವನ ಯಜ್ಞದಲ್ಲಿ ಒಂದು ಮುಂಗುಸಿಯು, ಉಂಛವೃತ್ತಿಯ ಬ್ರಾಹ್ಮಣನ ಮೂಲಕ ಮಾಡಲ್ಪಟ್ಟ ಒಂದು ಸೇರು ಹಿಟ್ಟಿನ ದಾನದ ಮಹಿಮೆಯು ಈ ಆಶ್ವಮೇಧ ಯಜ್ಞಕ್ಕಿಂತ ಮೇಲಾದುದೆಂದು ಹೇಳಿದುದು (ಆಶ್ವ 90). ಯುಧಿಷ್ಠಿರನ ಕೇಳಿಕೆಯಂತೆ ಶ್ರೀಕೃಷ್ಣನು ಇವನಿಗೆ ಧರ್ಮದ ಮಹತ್ವ ಮತ್ತು ದಾನ ಇತ್ಯಾದಿಗಳ ಮಹಾತ್ಮೆಯನ್ನು ವಿಸ್ತಾರಪೂರ್ವಕ ಹೇಳಿದುದು (ಆಶ್ವ 92). ಶ್ರೀಕೃಷ್ಣನು ದ್ವಾರಕೆಗೆ ಹೋಗುವಾಗ ಅವನ ರಥದ ಮೇಲೆ ಕುಳಿತು, ಇವನು ಸ್ವಲ್ಪ ಹೊತ್ತು ಸಾರಥ್ಯವನ್ನು ಕೈಗೆತ್ತಿಕೊಳ್ಳುವುದು ಮತ್ತು ಅವನನ್ನು ಬೀಳ್ಕೊಂಡು ಅವನದೇ ಭಜನೆ ಚಿಂತನೆಯಲ್ಲಿ ತೊಡಗಿದುದು (ಆಶ್ವ 92). ಸಹೋದರರ ಸಹಿತ ಯುಧಿಷ್ಠಿರನು ಧೃತರಾಷ್ಟ್ರ ಮತ್ತು ಗಾಂಧಾರಿಯ ಸೇವೆ ಮಾಡಿದುದು (ಆಶ್ರಮ 1/6–7). ಇವನು ತನ್ನ ಸಹೋದರರನ್ನೂ ಮಂತ್ರಿಗಳನ್ನೂ ಧೃತರಾಷ್ಟ್ರನ ಸೇವೆಗೋಸ್ಕರ ಪ್ರೇರಿಸಿದುದು ಮತ್ತು ಅವರ ಸೇವೆಯಿಂದ ಮುಖ ತಿರುಗಿಸುವವರು ತನ್ನ ಶತ್ರುಗಳೆಂದು ಹೇಳಿದುದು (ಆಶ್ರಮ 2/3–5). ಯುಧಿಷ್ಠಿರನಿಂದ ಧೃತರಾಷ್ಟ್ರ ಮತ್ತು ಗಾಂಧಾರಿಯ ಸೇವೆ (ಆಶ್ರಮ 2/17–20). ಧೃತರಾಷ್ಟ್ರನು ಯುಧಿಷ್ಠಿರ

ನೊಂದಿಗ ಕಾಡಿಗೆ ಹೋಗಲು ಅನುಮತಿ ಕೇಳಿದುದು; ಯುಧಿಷ್ಠಿರನು ದುಃಖಿತನಾಗಿ ಅವರಿಗೇ ರಾಜ್ಯವನ್ನರ್ಪಿಸಿ, ತಾನು ಅವರ ಸೇವೆಯಲ್ಲಿರುವ ಇಚ್ಛೆಯನ್ನು ಪ್ರಕಟಿಸಿದುದು (ಆಶ್ರಮ 3/30–55). ಮೂರ್ಚ್ಛಿತನಾದ ಧೃತರಾಷ್ಟ್ರನ ಶರೀರದ ಮೇಲೆ ಈತ ಕೈಯಿಂದ ಸವರಿದುದು; ಧೃತರಾಷ್ಟ್ರನು ಇವನನ್ನು ಅಪ್ಪಿಕೊಂಡು, ಈತನ ಶಿರಸ್ಸನ್ನು ಆಘ್ರಾಣಿಸಿದುದು (ಆಶ್ರಮ 3/67–75). ಧೃತರಾಷ್ಟ್ರನು ಆಹಾರ ಸ್ವೀಕರಿಸುವಂತೆ ಇವನು ಒತ್ತಾಯಿಸಿದುದು (ಆಶ್ರಮ 3/84–85). ವ್ಯಾಸನು ಸಮಾಧಾನಪಡಿಸಿದ ಮೇಲೆ ಈತ ಧೃತರಾಷ್ಟ್ರನಿಗೆ ಕಾಡಿಗೆ ಹೋಗಲು ಅನುಮತಿಯನ್ನಿತ್ತದ್ದು (ಆಶ್ರಮ 4). ಧೃತರಾಷ್ಟ್ರನಿಂದ ಇವನಿಗೆ ರಾಜನೀತಿಯ ಉಪದೇಶ (ಆಶ್ರಮ 5 ರಿಂದ 7). ಧೃತರಾಷ್ಟ್ರನು ವಿದುರನ ಮೂಲಕ, ಶ್ರಾದ್ಧಕ್ಕೋಸ್ಕರ ಈತನಿಂದ ಹಣ ಯಾಚಿಸಿದುದು. ಇವನು ಸಂತೋಷದಿಂದ ಅದನ್ನು ಒಪ್ಪಿದುದು (ಆಶ್ರಮ 11/1–7). ಭೀಮಸೇನನು ಆಕ್ಷೇಪಿಸಿದಾಗ ಸುಮ್ಮನಿರುವಂತೆ ಯುಧಿಷ್ಠಿರನು ಹೇಳಿದುದು (ಆಶ್ರಮ 11/25). ಧೃತರಾಷ್ಟ್ರನಿಗೆ ಬೇಕಾದಷ್ಟು ಧನಕೊಡಲು ಈತ ಒಪ್ಪಿದುದು (ಆಶ್ರಮ 12/7–13). ಧೃತರಾಷ್ಟ್ರನು ಕಾಡಿಗೆ ಹೊರಟಾಗ ಇವನು ಬಿಕ್ಕಿಬಿಕ್ಕಿ ಅತ್ತದ್ದು ಮತ್ತು ಮೂರ್ಚ್ಛಿತನಾಗಿ ಬಿದ್ದದು (ಆಶ್ರಮ 15/16). ಇವನು ಮನೆಗೆ ಹಿಂತಿರುಗುವಂತೆ ಕುಂತಿಗೆ ಹೇಳಿದುದು; ಕುಂತಿ ಈತನಿಗೆ ಎಲ್ಲಾ ಸಹೋದರರು ಮತ್ತು ದ್ರೌಪದಿಯ ಮೇಲೆ ಪ್ರೀತಿಯನ್ನಿಡಲು ಹೇಳಿ, ತಾನು ಕಾಡಿಗೇ ಹೋಗುವ ನಿರ್ಧಾರವನ್ನು ಹೇಳಿದುದು (ಆಶ್ರಮ 16/7–17). ಇವನು ಕುಂತಿಯೊಡನೆ ಆಕೆಯ ವನಗಮನ ಅನುಚಿತವೆಂದು ಹೇಳಿ, ಬಾರಿಬಾರಿಗೂ ಮನೆಗೆ ಹಿಂತಿರುಗುವಂತೆ ಆಗ್ರಹಿಸಿದುದು (ಆಶ್ರಮ 16/19–28). ಕುಂತಿಯು ಯುಧಿಷ್ಠಿರನ ಒತ್ತಾಯಕ್ಕೆ ಉತ್ತರ ಹೇಳಿದುದು (ಆಶ್ರಮ 17). ಯುಧಿಷ್ಠಿರನಿಗೆ ತಾಯಿಯನ್ನು ನೋಡಲು ಕಾಡಿಗೆ ಹೋಗುವ ಇಚ್ಛೆ, ಸಹದೇವ ಮತ್ತು ದ್ರೌಪದಿಗೆ ಇವನೊಂದಿಗೆ ಹೋಗುವ ಉತ್ಸಾಹ, ರಾಣಿವಾಸ ಮತ್ತು ಸೇನಾಸಹಿತ ಇವನ ವನಪ್ರಸ್ಥಾನ (ಆಶ್ರಮ 22). ಸೇನಾಸಹಿತ ಇವನ ಯಾತ್ರೆ ಮತ್ತು ಕುರುಕ್ಷೇತ್ರಕ್ಕೆ ತಲುಪಿದುದು (ಆಶ್ರಮ 23). ಇವನ ಮೂಲಕ ಕಾಡಿನಲ್ಲಿ ಕುಂತಿ, ಗಾಂಧಾರಿ ಮತ್ತು ಧೃತರಾಷ್ಟ್ರನ ದರ್ಶನ (ಆಶ್ರಮ 24). ಸಂಜಯನು ಋಷಿಗಳಿಗೆ ಇವನ ಪರಿಚಯ ನೀಡಿದುದು (ಆಶ್ರಮ 25/5). ಧೃತರಾಷ್ಟ್ರ ಮತ್ತು ಯುಧಿಷ್ಠಿರನ ಮಾತುಕತೆ ಮತ್ತು ವಿದುರನು ಯುಧಿಷ್ಠಿರನ ಶರೀರವನ್ನು ಪ್ರವೇಶಿಸಿದುದು (ಆಶ್ರಮ 26). ಯುಧಿಷ್ಠಿರಾದಿಗಳು ಋಷಿಗಳ ಆಶ್ರಮ ನೋಡಿದುದು, ಕಲಶ ಇತ್ಯಾದಿ ಹಂಚಿದುದು ಮತ್ತು ಧೃತರಾಷ್ಟ್ರನ ಬಳಿಗೆ ಬಂದು ಕುಳಿತದ್ದು (ಆಶ್ರಮ 27/5–15). ಮಹರ್ಷಿ ವ್ಯಾಸನಿಂದ ವಿದುರ ಮತ್ತು ಯುಧಿಷ್ಠಿರನಲ್ಲಿರುವ ಧರ್ಮರೂಪತ್ವದ ಪ್ರತಿಪಾದನೆ (ಆಶ್ರಮ 28/11–22). ಧೃತರಾಷ್ಟ್ರ ಮತ್ತು ತಾಯಿಯಿಂದ ಬೀಳ್ಕೊಂಡು ಯುಧಿಷ್ಠಿರಾದಿಗಳು ಹಸ್ತಿನಾವತಿಗೆ ಬಂದುದು (ಆಶ್ರಮ 36). ಧೃತರಾಷ್ಟ್ರಾದಿಗಳು ದಾವಾನಲದಲ್ಲಿ ದಗ್ಧರಾದ ವಿಷಯವನ್ನು ನಾರದನಿಂದ ಕೇಳಿ, ಯುಧಿಷ್ಠಿರಾದಿಗಳ ಶೋಕ (ಆಶ್ರಮ 37). ನಾರದನ ಸಮ್ಮುಖದಲ್ಲಿ ಯುಧಿಷ್ಠಿರನು, ಧೃತರಾಷ್ಟ್ರಾದಿಗಳು ಲೌಕಿಕ ಅಗ್ನಿಯಲ್ಲಿ ಸುಟ್ಟುಹೋದ ವರ್ಣನೆ ಮಾಡುತ್ತಾ ವಿಲಪಿಸಿದುದು (ಆಶ್ರಮ 38). ರಾಜಾ ಯುಧಿಷ್ಠಿರನು ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿಯರ ಅಸ್ಥಿಗಳನ್ನು ಗಂಗೆಯಲ್ಲಿ ಪ್ರವಹಿಸಲು ಬಿಟ್ಟದ್ದು ಮತ್ತು ಅವರ ಶ್ರಾದ್ಧ ಕರ್ಮಮಾಡಿದುದು (ಆಶ್ರಮ 39). ಯುಧಿಷ್ಠಿರನು ಅಪಶಕುನಗಳನ್ನು ಕಂಡದ್ದು ಮತ್ತು ಯಾದವರ ವಿನಾಶದ ಸಮಾಚಾರ ಕೇಳಿ ಸಹೋದರ ಸಹಿತನಾಗಿ ದುಃಖ ಶೋಕಗಳಲ್ಲಿ ಮುಳುಗಿದುದು (ಮೌಸಲ 1/1–11). ಯುಧಿಷ್ಠಿರನು ಸಹೋದರ ಸಹಿತನಾಗಿ ಕಾಲಪಾಶವನ್ನು ಸ್ವೀಕರಿಸುವ ನಿಶ್ಚಯಮಾಡಿ, ಯುಯುತ್ಸುವಿಗೆ ರಾಜ್ಯದ ಪಾಲನೆಯ ಭಾರವನ್ನು ವಹಿಸಿಕೊಟ್ಟು, ಪರೀಕ್ಷಿತನನ್ನು ತನ್ನ ರಾಜ್ಯದಲ್ಲಿ ಅಭಿಷಿಕ್ತನಾಗಿ ಮಾಡಿ, ಹಸ್ತಿನಾಪುರದಲ್ಲಿ ಪರೀಕ್ಷಿತನನ್ನೂ ಇಂದ್ರಪ್ರಸ್ಥದಲ್ಲಿ ವಜ್ರನನ್ನೂ ಇರಗೊಡಿಸಿ, ಸುಭದ್ರೆಯೊಂದಿಗೆ ಇವರ ರಕ್ಷಣೆಮಾಡುವಂತೆ ಹೇಳಿದುದು (ಮಹಾಪ್ರಸ್ಥಾನ 1/3–9). ಇವನಿಂದ ವಸುದೇವ, ಶ್ರೀಕೃಷ್ಣ, ಬಲರಾಮಾದಿಗಳಿಗೆ ಜಲಾಂಜಲಿ ದಾನ ಮತ್ತು ಶ್ರಾದ್ಧಕರ್ಮ

(ಮಹಾಪ್ರಸ್ಥಾನ 1/10–13). ಕೃಪಾಚಾರ್ಯನನ್ನು ಪೂಜಿಸಿ, ಪರೀಕ್ಷಿತನನ್ನು ಆತನ ಶಿಷ್ಯತ್ವಕ್ಕೆ ಒಪ್ಪಿಸಿದುದು (ಮಹಾಪ್ರಸ್ಥಾನ 1/14–15). ಪ್ರಜೆಗಳು, ಮಂತ್ರಿಗಳೇ ಮೊದಲಾದವರನ್ನು ಕರೆಸಿ, ಅವರ ಮುಂದೆ ತನ್ನ ಮಹಾಪ್ರಸ್ಥಾನದ ವಿಚಾರವನ್ನು ಪ್ರಕಟಿಸಿದುದು ಮತ್ತು ಅವರು ಅಡ್ಡಿಮಾಡಿದರೂ ಅವರಿಂದ ಅನುಮತಿ ಪಡೆದು ಸೋದರರೊಂದಿಗೆ ಮಹಾಪ್ರಸ್ಥಾನವನ್ನೇ ನಿರ್ಧರಿಸಿದುದು (ಮಹಾಪ್ರಸ್ಥಾನ 1/16–19). ಸಹೋದರರ ಸಹಿತ ತನ್ನ ಆಭೂಷಣಗಳನ್ನು ಕಳಚಿ ಇವನು ಉತ್ಸರ್ಗಕಾಲದ ಹೋಮ ಮಾಡಿಸಿದುದು, ಮತ್ತು ಅಗ್ನಿಗಳನ್ನು ಜಲದಲ್ಲಿ ವಿಸರ್ಜಿಸಿ, ಮಹಾಯಾತ್ರೆಗೆ ಹೊರಟದ್ದು (ಮಹಾಪ್ರಸ್ಥಾನ 1/19–22). ಯುಧಿಷ್ಠಿರನ ಅಪೇಕ್ಷೆಯ ಪ್ರಕಾರ, ಐವರು ಪಾಂಡವ ಸಹೋದರರು ದ್ರೌಪದಿ ಮತ್ತು ಒಂದು ನಾಯಿ ಒಟ್ಟಾಗಿ ಹಸ್ತಿನಾವತಿಯಿಂದ ಹೊರಟದ್ದು (ಮಹಾಪ್ರಸ್ಥಾನ 1/24–25). ಪೂರ್ವದಿಕ್ಕಿನ ಕಡೆಗೆ ಇವರೆಲ್ಲರ ಪ್ರಸ್ಥಾನ, ಯುಧಿಷ್ಠಿರನು ಎಲ್ಲರ ಮುಂದಿನಿಂದ ಹೋದುದು (ಮಹಾಪ್ರಸ್ಥಾನ 11/29–31). ಕೆಂಪುಸಮುದ್ರದ ದಡದಲ್ಲಿ ಅರ್ಜುನನು ಗಾಂಡೀವ ಧನುಸ್ಸನ್ನೂ, ಅಕ್ಷಯ ತೂಣೀರಗಳನ್ನೂ ತ್ಯಜಿಸುವಂತೆ ಅಗ್ನಿದೇವನು ಹೇಳಿದುದು. ಸಹೋದರರ ಪ್ರೇರಣೆಯಿಂದ ಅರ್ಜುನನು ಅವೆಲ್ಲವನ್ನೂ ನೀರಿಗೆಸೆದುದು (ಮಹಾಪ್ರಸ್ಥಾನ 1/33–42). ಇವರು ಪೂರ್ವದಿಂದ ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಿಗೆ ಹೋದುದು (ಮಹಾಪ್ರಸ್ಥಾನ 1/43–46). ಹಾದಿಯಲ್ಲಿ ದ್ರೌಪದಿ, ಸಹದೇವ, ನಕುಲ, ಅರ್ಜುನ, ಭೀಮಸೇನರು ಬಿದ್ದು ಹೋದುದು; ಯುಧಿಷ್ಠಿರನಿಂದ ಪ್ರತಿಯೊಬ್ಬನೂ ಬಿದ್ದ ಕಾರಣ ಹೇಳಲ್ಪಟ್ಟದ್ದು (ಮಹಾಪ್ರಸ್ಥಾನ 2). ಇಂದ್ರನು ಇವನ ಬಳಿಗೆ ರಥ ತೆಗೆದುಕೊಂಡು ಬಂದದ್ದು ಮತ್ತು ಅದರಲ್ಲಿ ಕುಳಿತುಕೊಳ್ಳಲು ಹೇಳಿದುದು (ಮಹಾಪ್ರಸ್ಥಾನ 3/1). ಇಂದ್ರನಿಂದ ತನ್ನ ಸಹೋದರರೂ, ದ್ರೌಪದಿಯೂ ಸ್ವರ್ಗಕ್ಕೆ ತಲುಪಿದ ವೃತ್ತಾಂತವನ್ನು ಕೇಳಿ ತನ್ನೊಂದಿಗೆ ಬಂದ ನಾಯಿಯನ್ನೂ ಕರಕೊಂಡು ಸ್ವರ್ಗಕ್ಕೆ ಹೋಗುವ ನಿರ್ಧಾರವನ್ನು ಹೇಳಿದುದು (ಮಹಾಪ್ರಸ್ಥಾನ 3/2–7). ನಾಯಿಗೆ ಸ್ವರ್ಗದಲ್ಲಿ ಸ್ಥಾನವಿಲ್ಲವೆಂದು ಹೇಳಿ, ಈತ ಏಕಾಂಗಿಯಾಗಿ ಬರಲು ಇಂದ್ರನು ಹೇಳಿದುದು; ಆದರೆ ಇವನು ಶರಣಾಗತ ನಾಯಿಯನ್ನು ಬಿಟ್ಟುಬಿಡದಿರುವ ತನ್ನ ನಿಶ್ಚಯವನ್ನು ಹೇಳಿದುದು (ಮಹಾಪ್ರಸ್ಥಾನ 3/8–16). ನಾಯಿಯ ರೂಪದಲ್ಲಿ ಬಂದಿರುವ ಧರ್ಮನಿಂದ ಯುಧಿಷ್ಠಿರನಿಗೆ ಅಭಿನಂದನೆ ಮತ್ತು ಇಂದ್ರ ಹಾಗೂ ಧರ್ಮನೊಂದಿಗೆ ಈತ ಸದೇಹನಾಗಿ ಸ್ವರ್ಗಕ್ಕೆ ಹೋದುದು (ಮಹಾಪ್ರಸ್ಥಾನ 3/17–25). ದೇವರ್ಷಿ ನಾರದನಿಂದ ಈತನ ಪ್ರಶಂಸೆ, ಇಂದ್ರನ ಮೂಲಕ ಉತ್ತಮ ಲೋಕದಲ್ಲಿರಲು ಪ್ರೇರಿತನಾದರೂ, ತನ್ನ ಸಹೋದರರ ಹೊರತಾಗಿ ಅಲ್ಲಿರಲು ಈತ ತಿರಸ್ಕರಿಸಿದುದು; ಶುಭ ಅಥವಾ ಅಶುಭವಾದ ಯಾವುದೇ ಲೋಕದಲ್ಲಿ ಅವರೊಂದಿಗಿರುವ ಇಚ್ಛೆಯನ್ನು ಪ್ರಕಟಿಸಿದುದು (ಮಹಾಪ್ರಸ್ಥಾನ 3/26–38). ಸ್ವರ್ಗದಲ್ಲಿ ದುರ್ಯೋಧನನು ಶ್ರೀಸಂಪನ್ನನಾಗಿರುವುದನ್ನು ಕಂಡು, ಮತ್ಸರಕ್ಕೊಳಗಾದ ಯುಧಿಷ್ಠಿರನು ಒಮ್ಮಿಂದೊಮ್ಮೆಗೆ ಹಿಂದೆ ಸರಿದುದು ಮತ್ತು ಆತನೊಂದಿಗೆ ಇರಲು ಇಚ್ಛಿಸದೆ, ತನ್ನ ಸಹೋದರರ ಬಳಿಗೆ ಹೋಗುವ ಉತ್ಸಾಹ ತೋರಿದುದು (ಸ್ವರ್ಗಾ 1/6–10). ನಗುತ್ತಾ ಇದ್ದ ನಾರದರು, ಯುಧಿಷ್ಠಿರನಿಗೆ, ಸ್ವರ್ಗದಲ್ಲಿ ದುರ್ಯೋಧನನ ಗೌರವಪೂರ್ಣ ಸ್ಥಿತಿಯ ಪರಿಚಯ ಮಾಡಿದುದು ಮತ್ತು ಈತ ಅವನನ್ನು ಭೇಟಿಯಾಗುವಂತೆ ಹೇಳಿದುದು (ಸ್ವರ್ಗಾ 1/11–18). ಇವನು ತನ್ನ ಸಹೋದರರಿಗೂ, ಖಾಸಾ ಸಂಬಂಧಿಕರಿಗೂ ಸಿಕ್ಕಿದ ಲೋಕಗಳ ಕುರಿತಾಗಿ ಜಿಜ್ಞಾಸೆ ಪ್ರಕಟಿಸಿದುದು ಮತ್ತು ಅವರೆಲ್ಲರೊಂದಿಗೆ ಭೇಟಿಯಾಗುವ ಅಭಿಲಾಷೆಯನ್ನು ವ್ಯಕ್ತಪಡಿಸಿದುದು (ಸ್ವರ್ಗಾ 1/20–26). ದೇವದೂತನು ಯುಧಿಷ್ಠಿರನಿಗೆ ಮಾಯಾಮಯ ನರಕದ ದರ್ಶನ ಮಾಡಿಸಿದುದು ಮತ್ತು ಸಹೋದರರ ಕರುಣಾಪೂರ್ಣ ಆಕ್ರಂದನವನ್ನು ಕೇಳಿ, ತಾನೂ ಅಲ್ಲಿಯೇ ಇರುವ ನಿಶ್ಚಯ ಮಾಡಿದುದು (ಸ್ವರ್ಗಾ 2). ಇಂದ್ರನೂ ಧರ್ಮನೂ ಯುಧಿಷ್ಠಿರನನ್ನು ಸಂತೈಸಿದುದು. ಇವನು ಮಂದಾಕಿನಿಯಲ್ಲಿ ಸ್ನಾನ ಮಾಡಿ, ಮಾನವ ಶರೀರವನ್ನು ತೊರೆದು ದಿವ್ಯಲೋಕಕ್ಕೆ ಹೋದುದು (ಸ್ವರ್ಗಾ3). ಯುಧಿಷ್ಠಿರನು ದಿವ್ಯಲೋಕದಲ್ಲಿ ಶ್ರೀಕೃಷ್ಣ,

ಅರ್ಜುನಾದಿ ಎಲ್ಲಾ ಸಂಬಂಧಿಗಳ ದರ್ಶನ ಮಾಡಿದುದು (ಸ್ವರ್ಗ 4). ಇವನು ಧರ್ಮನ ಸ್ವರೂಪದಲ್ಲಿ ಪ್ರವೇಶಿಸಿದುದು (ಸ್ವರ್ಗ 5/22). ಮಹಾಭಾರತದಲ್ಲಿ ಬಂದಿರುವ ಯುಧಿಷ್ಠಿರನ ಹೆಸರುಗಳು – ಆಜಮೀಢ, ಅಜಾತಶತ್ರು, ಭಾರತ, ಭಾರತಶಾರ್ದೂಲ, ಭರತಪ್ರವರ್ಹ, ಭರತರ್ಷಭ, ಭರತಸತ್ತಮ, ಭರತಸಿಂಹ, ಭೀಮ ಪೂರ್ವಜ, ಧರ್ಮ, ಧರ್ಮಜ, ಧರ್ಮನಂದನ, ಧರ್ಮಪ್ರಭವ, ಧರ್ಮಪುತ್ರ, ಧರ್ಮರಾಟ್, ಧರ್ಮರಾಜ, ಧರ್ಮಸೂನು, ಧರ್ಮಸುತ, ಧರ್ಮತನಯ, ಧರ್ಮಾತ್ಮಜ, ಕೌಂತೇಯ, ಕೌರವ, ಕೌರವಶ್ರೇಷ್ಠ, ಕೌರವಾಗ್ರ್ಯ ಕೌರವನಂದನ, ಕೌರವನಾಥ, ಕೌರವರ್ಷಭ, ಕೌರವಸತ್ತಮ, ಕೌರವವಂಶವರ್ಧನ, ಕೌರ ವೇಂದ್ರ, ಕೌರವ್ಯ, ಕುಂತೀನಂದನ, ಕುಂತೀಪುತ್ರ, ಕುಂತಿಸುತ, ಕುರುಶಾರ್ದೂಲ, ಕುರುಶ್ರೇಷ್ಠ, ಕುರುಶ್ರೇಷ್ಠತಮ, ಕುರೂದ್ವಹ, ಕುರುಕುಲಶ್ರೇಷ್ಠ, ಕುರುಕುಲೋದ್ವಹ, ಕುರುಮುಖ್ಯ, ಕುರುನಂದನ, ಕುರುಪಾಂಡವಾಗ್ರ್ಯ, ಕುರುಪತಿ, ಕುರುಪ್ರವೀರ, ಕುರುಪುಂಗವ, ಕುರುರಾಜ, ಕುರುಸತ್ತಮ, ಕುರೂತ್ತಮ, ಕುರುವರ್ಧನ, ಕುರುವೀರ, ಕುರು ವೃಷಭ, ಮೃದಂಗಕೇತು, ಪಾಂಡವ, ಪಾಂಡವ ಶ್ರೇಷ್ಠ, ಪಾಂಡವಾಗ್ರ್ಯ, ಪಾಂಡವಮುಖ್ಯ, ಪಾಂಡವನಂದನ, ಪಾಂಡವರ್ಷಭ, ಪಾಂಡ ವೇಯ, ಪಾಂಡುನಂದನ, ಪಾಂಡುನೃಪಾತ್ಮಜ, ಪಾಂಡುಪುತ್ರ, ಪಾಂಡುಸೂನು, ಪಾಂಡುಸುತ, ಪಾಂಡುವೀರ, ಪಾರ್ಥ, ಯಾದವೀಮಾತಃ, ಯಾದವೀಪುತ್ರ – ಇತ್ಯಾದಿ.

**ಯುಯುತ್ಸು** – (1) ಧೃತರಾಷ್ಟ್ರನಿಗೆ ವೈಶ್ಯ ಜಾತಿಯ ಹೆಂಡತಿಯಲ್ಲಿ ಹುಟ್ಟಿದ ಮಗ. ಇವನಿಗೆ 'ಕರಣ'ನೆಂಬ ಹೆಸರಿತ್ತು (ಆದಿ 63/118). ಇವನ ಜನನ (ಆದಿ 114/43). ದುರ್ಯೋಧನನ ಪ್ರೇರಣೆಯಿಂದ ಭೀಮಸೇನನ ಭೋಜನದಲ್ಲಿ ಹಾಕಿದ ವಿಷದ ಕುರಿತಾಗಿ, ಇವನ ಮೂಲಕ ಭೀಮಸೇನನಿಗೆ ಸೂಚನೆ (ಆದಿ 128/37–38). ಇವನು ದ್ರೌಪದಿ ಸ್ವಯಂ ವರಕ್ಕೆ ಹೋಗಿದ್ದನು (ಆದಿ 185/2). ಈತ ಕುರುಕ್ಷೇತ್ರದ ಬಯಲಲ್ಲಿ ಪಾಂಡವರ ಪಕ್ಷಕ್ಕೆ ಬಂದದ್ದು (ಭೀಷ್ಮ 43/100). ಇವನು ಯೋಧ ರಲ್ಲಿ ಶ್ರೇಷ್ಠನೂ ಧನುರ್ಧರರಲ್ಲಿ ಉತ್ತಮನೂ ಶೌರ್ಯಸಂಪನ್ನನೂ ಸತ್ಯಪ್ರತಿಜ್ಞನೂ, ಮಹಾ ಬಲವಂತನೂ ಆಗಿದ್ದನು. ವಾರಣಾವತ ನಗರದಲ್ಲಿ ಅನೇಕ ರಾಜರು, ಕೋಪದಿಂದ ಬಂದು ಯುಯುತ್ಸುವಿನ ಮೇಲೆ ಆಕ್ರಮಣ ಮಾಡಿದರು. ಅವನನ್ನು ಕೊಲ್ಲಲು ಬಯಸಿದ್ದರು; ಆದರೆ ಇವನನ್ನು ಗೆಲ್ಲಲಾಗಲಿಲ್ಲ (ದ್ರೋಣ 10/58–59). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/34–35). ಸುಬಾಹುವಿ ನೊಂದಿಗೆ ಯುದ್ಧ ಮಾಡಿ, ಅವನ ಎರಡೂ ಭುಜಗಳನ್ನು ತುಂಡು ಮಾಡಿದುದು (ದ್ರೋಣ 25/13–14). ಭಗದತ್ತನ ಆನೆಯಿಂದ ಇವನ ರಥದ ಕುದುರೆಗಳು ಕೊಲ್ಲಲ್ಪಟ್ಟದ್ದು (ದ್ರೋಣ 26/56). ಅಭಿಮನ್ಯುವಧೆಯಿಂದ ಹರ್ಷೋನ್ಮತ್ತ ರಾದ ಕೌರವರನ್ನು ಈತ ನಿಂದಿಸಿದುದು (ದ್ರೋಣ 72/60–63). ಉಲೂಕನೊಂದಿಗೆ ಯುದ್ಧದಲ್ಲಿ ಈತ ಪರಾಜಿತನಾದುದು (ಕರ್ಣ 25/11). ಶ್ರೀಕೃಷ್ಣ ಮತ್ತು ಯುಧಿಷ್ಠಿರನಿಂದ ಆಜ್ಞೆ ಪಡೆದು, ಈತ ರಾಜಮಹಿಳೆಯರೊಂದಿಗೆ ಹಸ್ತಿನಾವತಿಗೆ ಹಿಂತಿರುಗಿದುದು (ಶಲ್ಯ 29/86–88). ವಿದುರನು ಕೇಳಿದಾಗ ಆತನಿಗೆ ಎಲ್ಲಾ ಸಮಾಚಾರ ತಿಳಿಸಿ ದುದು (ಶಲ್ಯ 29/91–95). ಯುಧಿಷ್ಠಿರನಿಂದ ಈತನಿಗೆ ಧೃತರಾಷ್ಟ್ರನ ಸೇವಾ ಭಾರವಹಿಸ ಲ್ಪಟ್ಟದ್ದು (ಶಾಂತಿ 41/17–18). ಭೀಷ್ಮನಿಗೆ ಅಂತ್ಯೇಷ್ಟಿ ಸಂಸ್ಕಾರಕ್ಕೋಸ್ಕರ ಚಿತೆಯ ನಿರ್ಮಾಣ ಮಾಡುವಾಗ ಪಾಂಡವರೊಂದಿಗೆ ಇವನೂ ಇದ್ದನು (ಅನು 168/11). ಮರುತ್ತನ ಧನವನ್ನು ತರಲು ಪಾಂಡವರು ಹಿಮಾಲಯಕ್ಕೆ ಹೋಗು ವಾಗ, ಇವನು ಹಸ್ತಿನಾಪುರದ ರಕ್ಷಣೆಗೆ ನಿಯೋ ಜಿಸಲ್ಪಟ್ಟಿದ್ದನು (ಅಶ್ವ 63/24). ಪಾಂಡವರು ಕಾಡಿನಲ್ಲಿರುವ ಧೃತರಾಷ್ಟ್ರನನ್ನು ನೋಡಲು ಹೋದಾಗಲೂ, ನಗರರಕ್ಷಣೆಯ ಭಾರ ಇವನ ಮೇಲೆಯೇ ಇದ್ದಿತು (ಆಶ್ರಮ 23/15). ಯುಯುತ್ಸುವನ್ನು ಮುಂದಿಟ್ಟುಕೊಂಡು ಪಾಂಡ ವರು ಧೃತರಾಷ್ಟ್ರನಿಗೆ ಜಲಾಂಜಲಿಯನ್ನಿತ್ತರು (ಆಶ್ರಮ 39/12). ಮಹಾಪ್ರಸ್ಥಾನ ಕಾಲದಲ್ಲಿ ಬಾಲಕ ಪರೀಕ್ಷಿತನಿಗೆ ರಾಜ್ಯಾಭಿಷೇಕ ಮಾಡಿ ಯುಧಿಷ್ಠಿರನು ಹೊರಟಾಗ, ಯುಯುತ್ಸುವಿಗೆ ರಾಜ್ಯರಕ್ಷಣೆಯ ಭಾರವನ್ನು ವಹಿಸಿಕೊಟ್ಟಿದ್ದನು

(ಮಹಾಪ್ರಸ್ಥಾನ 1/6). ಮಹಾಭಾರತದಲ್ಲಿ ಬಂದಿರುವ ಯುಯುತ್ಸುವಿನ ಹೆಸರುಗಳು – ಧಾರ್ತರಾಷ್ಟ್ರ, ಧೃತರಾಷ್ಟ್ರಜ, ಧೃತರಾಷ್ಟ್ರಸುತ, ಕರಣ, ಕೌರವ್ಯ, ಕೌರವ, ವೈಶ್ಯಾಪುತ್ರ ಇತ್ಯಾದಿ.

(2) ಧೃತರಾಷ್ಟ್ರನಿಗೆ ಗಾಂಧಾರಿಯ ಗರ್ಭದಿಂದ ಹುಟ್ಟಿದ ಮಗ (ಶಾಂತಿ 67/93).

**ಯುಯುಧಾನ** – ಇವನು ಸತ್ಯಕನ ಮಗ. ಇವನನ್ನೇ ಸಾತ್ಯಕಿ ಎನ್ನುತ್ತಾರೆ (ಸಭಾ 4/35). (ವಿಶೇಷ ನೋಡಿರಿ– ಸಾತ್ಯಕಿ).

**ಯುವನಾಶ್ವ** – ಇಕ್ಷ್ವಾಕುವಂಶದ ಒಬ್ಬ ಸುಪ್ರಸಿದ್ಧ ರಾಜ. ಇವನು ತುಂಬಾ ದಕ್ಷಿಣೆಯನ್ನಿತ್ತು ಅನೇಕ ಯಜ್ಞಗಳನ್ನು ಮಾಡಿದ್ದನು. ಈತ ಒಂದು ಸಾವಿರ ಅಶ್ವಮೇಧಗಳನ್ನು ಮಾಡಿದ್ದನು (ವನ 126/5–6). ಈತ ರಾಜಾ ಸುದ್ಯುಮ್ನನ ಪುತ್ರ, ಬಾಯಾರಿದ್ದ ಈತ ಅಭಿಮಂತ್ರಿತ ಜಲವನ್ನು ಕುಡಿದುದು (ವನ 126/15). ಇವನ ಎಡ ಹೊಟ್ಟೆಯಿಂದ ಮಾಂಧಾತಾನ ಜನನ (ವನ 126/27). ಇವನಿಗೆ ಮಹಾರಾಜ ರೈವತನಿಂದ ಖಡ್ಗಪ್ರಾಪ್ತಿಯಾಯಿತು. ಇವನು ಅದನ್ನು ರಘುವಿಗೆ ಕೊಟ್ಟನು (ಶಾಂತಿ 166/78). ಇವನಿಂದ ಮಾಂಸ ಭಕ್ಷಣ ನಿಷೇಧ; ಅದರಿಂದಾಗಿ ಈತನಿಗೆ ಪರಾವರ ತತ್ತ್ವಜ್ಞಾನ (ಅನು 115/61).

(2) ವಿಷ್ವಗಶ್ವ ಕುಮಾರ ಅದ್ರಿಯಪುತ್ರ, ಈತ ಶ್ರಾವನ ತಂದೆ (ವನ 202/3).

(3) ವೃಷಾದರ್ಭನ ಪುತ್ರ, ಇವನು ಎಲ್ಲಾ ಪ್ರಕಾರದ ರತ್ನ, ಅಭೀಪ್ಸಿತ ಸ್ತ್ರೀ ಮತ್ತು ಸುರಮ್ಯ ಗೃಹಗಳನ್ನು ದಾನಮಾಡಿ ಸ್ವರ್ಗವಾಸ ಪಡೆದನು (ಶಾಂತಿ 234/15).

**ಯೂಪಕೇತು** – ಭೂರಿಶ್ರವನ ನಾಮಾಂತರ (ಸಭಾ 44/19). (ವಿಶೇಷ ನೋಡಿರಿ ಭೂರಿಶ್ರಮ)

**ಯೋಗ** – ಒಬ್ಬ ಋಷಿ. ಈತ ತಪಸ್ವಿ, ಜಿತೇಂದ್ರಿಯ ಮತ್ತು ಮೂರು ಲೋಕಗಳಲ್ಲಿ ವಿಖ್ಯಾತನು (ಅನು 150/45).

**ಯೋಜನಗಂಧಾ** – ವ್ಯಾಸ ಜನನಿ, ಸತ್ಯವತಿಯ ಇನ್ನೊಂದು ಹೆಸರು (ಆದಿ 63/82–83). (ನೋಡಿರಿ– ಸತ್ಯವತಿ).

**ಯೋತಿಮತ್ಸಕ** – ಒಬ್ಬ ರಾಜ. ಇವನ ಬಳಿಗೆ ಪಾಂಡವಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿರ್ಣಯವಾಗಿತ್ತು (ಉದ್ಯೋಗ 4/20).

**ಯೋಧ್ಯ** – ಒಂದು ದೇಶ. ಅದನ್ನು ದಿಗ್ವಿಜಯ ಕಾಲದಲ್ಲಿ ಕರ್ಣನು ಗೆದ್ದಿದ್ದನು (ವನ 254/8–9).

**ಯೋನಿತೀರ್ಥ** – ಭೀಮೆಯ ಉತ್ತಮ ಸ್ಥಾನದಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯನು ದೇವಿಯ ಪುತ್ರನಾಗುತ್ತಾನೆ. ಅವನ ಅಂಗಕಾಂತಿ, ಕಾಯಿಸಿದ 'ಸುವರ್ಣಕುಂಡಕ'ಕ್ಕೆ ಸಮಾನವಾಗುತ್ತದೆ. ಆ ತೀರ್ಥ ಸೇವನೆಯಿಂದ ಮನುಷ್ಯನಿಗೆ ಸಹಸ್ರಗೋದಾನದ ಫಲ ಸಿಗುತ್ತದೆ (ವನ 82/84).

**ಯೋನಿದ್ವಾರ** – ಉದಯಗಿರಿಯ ಮೇಲಿರುವ ಒಂದು ತೀರ್ಥ. ಇಲ್ಲಿಗೆ ಹೋದರೆ ಮನುಷ್ಯ ಯೋನಿಸಂಕಟದಿಂದ ಮುಕ್ತನಾಗುತ್ತಾನೆ (ವನ 84/95).

**ಯೌಧೇಯ** – (1) ಯುಧಿಷ್ಠಿರನ ಪುತ್ರ, ಇವನು ಯುಧಿಷ್ಠಿರನ ಮೂಲಕ, ಶಿಬಿ ದೇಶದ ರಾಜಾ ಗೋವಾಸನನ ಪುತ್ರಿ ದೇವಿಕೆಯ ಗರ್ಭದಿಂದ ಹುಟ್ಟಿದ್ದನು (ಆದಿ 95/76).

(2) ಒಂದು ದೇಶ ಮತ್ತು ಜಾತಿಯ ಜನರು. ಇಲ್ಲಿರುವ ರಾಜ, ರಾಜಕುಮಾರ ಮತ್ತು ನಿವಾಸಿಗಳು, ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 52/14–17).

**ಯೌನ** – ಒಂದು ಜಾತಿ. ಈ ಜಾತಿಯ ಜನರು ಪಾಪಾಚಾರವುಳ್ಳವರು ಮತ್ತು ಚಂಡಾಲರು. ಕಾಗೆ ಮತ್ತು ಗೃಧ್ರರೀತಿಯ ಆಚಾರ ವಿಚಾರದರಾಗಿರುತ್ತಾರೆ (ಶಾಂತಿ 207/43–45).

**ಯೌವನಾಶ್ವ** – ಯುವನಾಶ್ವನ ಪುತ್ರ ಮಾಂಧಾತಾ (ಸಭಾ 53/21). (ವಿಶೇಷ ನೋಡಿರಿ – ಮಾಂಧಾತಾ).

## ರ

**ರಕ್ತಾಂಗ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/18).

**ರಕ್ಷಿತಾ** – ಒಬ್ಬ ಅಪ್ಸರೆ. ಈಕೆ ಪ್ರಾಧಾ ಎಂಬವಳ ಗರ್ಭದಿಂದ ಕಶ್ಯಪನ ಮೂಲಕ ಜನಿಸಿದ್ದಳು (ಆದಿ 65/50).

**ರಕ್ಷೋವಾಹ** – ಒಂದು ದೇಶ. ಪರಶುರಾಮನು ಇಲ್ಲಿ ವಾಸಿಸುವ ಕ್ಷತ್ರಿಯರ ಸಂಹಾರ ಮಾಡಿದ್ದನು (ದ್ರೋಣ 70/12).

**ರಘು** – ಒಬ್ಬ ಪ್ರಾಚೀನ ರಾಜ. ಸಂಜಯನಿಂದ ಮಾಡಲ್ಪಟ್ಟ ಪ್ರಾಚೀನ ರಾಜರ ಗಣನೆಯಲ್ಲಿ ಇವನ ಹೆಸರಿದೆ (ಆದಿ 1/232). ವಿರಾಟನ ಗೋಗ್ರಹಣ ಕಾಲದಲ್ಲಿ, ಕೌರವರೊಂದಿಗೆ ನಡೆಯುವ ಅರ್ಜುನನ ಯುದ್ಧವನ್ನು ನೋಡುವುದಕ್ಕೋಸ್ಕರ, ಇಂದ್ರನ ವಿಮಾನದಲ್ಲಿ ಕುಳಿತು ಈತನೂ ಬಂದಿದ್ದನು (ವಿರಾಟ 56/10). ಮಹಾರಾಜ ಯುವನಾಶ್ವನ ಮೂಲಕ, ಇಕ್ಷ್ವಾಕು ವಂಶದ ರಘುವಿಗೆ ಖಡ್ಗ ಪ್ರಾಪ್ತಿಯಾಗಿತ್ತು, ಇವನು ಅದನ್ನು ಹರಿಣಾಶ್ವನಿಗೆ ಕೊಟ್ಟಿದ್ದನು (ಶಾಂತಿ 166/78). ಇವನು ಮಾಂಸಭಕ್ಷಣ ನಿಷೇಧ ಮಾಡಿದ್ದನು (ಇದರಿಂದಾಗಿ ಈತನಿಗೆ ಪರಾವರತತ್ತ್ವದ ಜ್ಞಾನ ಪ್ರಾಪ್ತವಾಗಿತ್ತು (ಅನು 115/59–61). ರಾಜಾ ರಘುವಿಗೆ ಪ್ರಣಾಮ ಮಾಡುವ ಕ್ಷತ್ರಿಯ ಸಂಗ್ರಾಮವಿಜಯಿಯಾಗುತ್ತಾನೆ (ಅನು 150/81). ಸಾಯಂಪ್ರಾತಃ ಕಾಲಗಳಲ್ಲಿ ಇವನ ನಾಮವನ್ನು ಕೀರ್ತಿಸುವವನು ಧರ್ಮಫಲಕ್ಕೆ ಭಾಗಿಯಾಗುತ್ತಾನೆ (ಅನು 165/51–60).

**ರಜ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ರಜಿ** – ಇವನು ಆಯುವಿನಿಂದ ಸ್ವರ್ಭಾನು ಕುಮಾರಿಯ ಗರ್ಭದಲ್ಲಿ ಜನಿಸಿದ್ದನು. ಇವನಿಗೆ ಇತರ ನಾಲ್ಕು ಸಹೋದರರಿದ್ದರು. ಅವರ ಹೆಸರು ನಹುಷ, ವೃದ್ಧಶರ್ಮಾ, ಗಯ ಮತ್ತು ಅನೇನಾ (ಆದಿ 75/25–26).

**ರಣೋತ್ಕಟ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ರತಾ** – ದಕ್ಷನ ಪುತ್ರಿ ಈಕೆ ಧರ್ಮನ ಪತ್ನಿ. ಇವಳ ಗರ್ಭದಿಂದ ಅಹಃ ಎಂಬ ವಸುವಿನ ಜನ್ಮವಾಗಿದೆ (ಆದಿ 66/17–20).

**ರತಿ** – (1) ಈಕೆ ಧರ್ಮಪುತ್ರ ಕಾಮದೇವನ ಪತ್ನಿ (ಆದಿ 66/32–33). ಬ್ರಹ್ಮನ ಸಭೆಯಲ್ಲಿರುತ್ತಾ ಈಕೆ ಆತನ ಉಪಾಸನೆ ಮಾಡುತ್ತಾಳೆ (ಸಭಾ 11/43).

(2) ಅಲಕಾಪುರದ ಒಬ್ಬ ಅಪ್ಸರೆ. ಈಕೆ ಅಷ್ಟಾವಕ್ರನ ಸ್ವಾಗತ ಸಂದರ್ಭದಲ್ಲಿ, ಕುಬೇರ ಭವನದಲ್ಲಿ ನೃತ್ಯ ಮಾಡಿದ್ದಳು (ಅನು 19/45).

**ರತಿಗುಣ** – ಒಬ್ಬ ದೇವಗಂಧರ್ವ. ಈತ ಕಶ್ಯಪನಿಂದ ಪ್ರಾಧೆಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/47).

**ರಥಚಿತ್ರಾ** – ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಇಲ್ಲಿರುವವರು ಕುಡಿಯುತ್ತಾರೆ (ಭೀಷ್ಮ 9/26).

**ರಥಧ್ವಾನ** – ಶಂಯುಪುತ್ರ ವೀರನೆಂಬ ಅಗ್ನಿಯ ನಾಮಾಂತರ (ವನ 219/9–10) (ನೋಡಿರಿ – ವೀರ).

**ರಥಂತರ** – (1) ರಥಂತರವೆಂಬ ಹೆಸರಿನ ಸಾಮ. ಈತ ಮೂರ್ತಿಮಂತನಾಗಿ ಬ್ರಹ್ಮನ ಸಭೆಯಲ್ಲಿ ವಿರಾಜಿಸುತ್ತಾನೆ (ಸಭಾ 11/30). ವಸಿಷ್ಠಮುನಿ ರಥಂತರ ಸಾಮದ ಮೂಲಕ ಇಂದ್ರನ ಮೋಹವನ್ನು ದೂರಮಾಡಿ, ಅವನನ್ನು ಪ್ರಬುದ್ಧನಾಗುವಂತೆ ಮಾಡಿದ್ದನು (ಶಾಂತಿ 281/21–26; ಆಶ್ವ 11/18–19).

(2) ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಇವನ ಇನ್ನೊಂದು ಹೆಸರು 'ತರಸಾಹರ'ನೆಂದಾಗಿದೆ. ಇವನು ಪಾಂಚಜನ್ಯನ ಮುಖದಿಂದ ಪ್ರಕಟಗೊಂಡಿದ್ದನು (ವನ 220/7).

**ರಥಂತರ್ಯಾ (ರಥಂತರೀ)** – ಸಮ್ರಾಟ ದುಷ್ಯಂತನ ತಾಯಿ. ಶಕುಂತಲೆಯ ಅತ್ತೆ. ಇವಳಿಂದ ಶಕುಂತಲೆಗೆ ಆಶೀರ್ವಾದ (ಆದಿ 74/125). 'ರಥಂತರ್ಯಾ' ಈ ಹೆಸರು ದಾಕ್ಷಿಣಾತ್ಯ ಪಾಠಕ್ಕೆ ಅನುಸಾರವಾಗಿದೆ. ನೀಲಕಂಠಿಯ ಅನುಸಾರ ಇವಳ ಹೆಸರು 'ರಥಂತರೀ' ಆಗಿತ್ತು (ಆದಿ 94/17). ಈಕೆ ಮಹಾರಾಜ ಈಲಿನನ ಪತ್ನಿಯಾಗಿದ್ದಳು. ಇವಳಿಗೆ ಐವರು ಪುತ್ರರಾದರು. ಅವರ ಹೆಸರು ಹೀಗಿದೆ: ದುಷ್ಯಂತ, ಶೂರ, ಭೀಮ, ಪ್ರವಸು ಮತ್ತು ವಸು (ಆದಿ 94/16–18; ಆದಿ 95/28).

**ರಥಪ್ರಭು** – ಶಂಯುಪುತ್ರ ವೀರನೆಂಬ ಅಗ್ನಿಯ ನಾಮಾಂತರ (ವನ 219/9–10). (ನೋಡಿರಿ ವೀರ).

**ರಥವಾಹನ** – ವಿರಾಟನ ಸಹೋದರ. ಇವನು ಪಾಂಡವರ ಕಡೆಯಿಂದ ಯುದ್ಧ ಮಾಡುತ್ತಿದ್ದನು (ದ್ರೋಣ 158/42).

**ರಥಸೇನ** – ಪಾಂಡವ ಪಕ್ಷದ ಒಬ್ಬ ಯೋಧ.

ಇವನ ರಥಕ್ಕೆ ಕಡಲೆ ಹೂವಿನಂತಹ ಬಣ್ಣವುಳ್ಳ ಕುದುರೆಗಳು ಕಟ್ಟಲ್ಪಟ್ಟಿದ್ದವು. ಆ ಕುದುರೆಗಳ ರೋಮಸಮೂಹ ಶ್ವೇತಲೋಹಿತ ವರ್ಣದ್ದಾಗಿತ್ತು (ದ್ರೋಣ 23/62).

**ರಥಸ್ಥಾ** – ಗಂಗೆಯ ಏಳು ಧಾರೆಗಳಲ್ಲಿ ಒಂದು ಇದರ ನೀರು ಕುಡಿದರೆ ಮನುಷ್ಯನ ಎಲ್ಲಾ ಪಾಪಗಳು ತಕ್ಷಣ ನಷ್ಟವಾಗುತ್ತವೆ (ಆದಿ 169/20–21).

**ರಥಾಕ್ಷ** – ಸ್ಕಂದನ ಒಬ್ಬಸೈನಿಕ (ಶಲ್ಯ 45/63).

**ರಥಾತಿರಥ ಸಂಖ್ಯಾನಪರ್ವ** – ಶಾಂತಿಪರ್ವದ ಒಂದು ಅವಾಂತರಪರ್ವ (ಅಧ್ಯಾಯ 165 ರಿಂದ 172).

**ರಥಾವರ್ತ**– ಶಾಕಂಭರೀ ದೇವಿಯ ದಕ್ಷಿಣಾರ್ಧ ಭಾಗದಲ್ಲಿರುವ ಒಂದು ತೀರ್ಥ. ಇಲ್ಲಿಗೆ ಯಾತ್ರೆ ಮಾಡುವ ಶ್ರದ್ಧಾಳು ಪುರುಷ, ಮಹಾದೇವನ ಕೃಪೆಯಿಂದ ಪರಮಗತಿಯನ್ನು ಪಡೆಯುತ್ತಾನೆ (ವನ 84/23).

**ರನ್ತಿದೇವ** – ಒಬ್ಬ ಪ್ರಾಚೀನ ರಾಜ (ಆದಿ 1/226). ಇವನು ರಾಜಾ ಸಂಕೃತಿಯ ಮಗ. ಸಂಜಯನಿಗೆ ತಿಳಿಸುತ್ತಾ, ನಾರದನಿಂದ ಇವನ ಅತಿಥಿ ಸತ್ಕಾರ ಮತ್ತು ದಾನ ಇತ್ಯಾದಿಗಳ ವರ್ಣನೆ (ದ್ರೋಣ 67). ಶ್ರೀಕೃಷ್ಣನಿಂದ ಈತನ ದಾನ ಮತ್ತು ಆತಿಥಿ ಸತ್ಕಾರ ಇತ್ಯಾದಿಗಳ ವರ್ಣನೆ (ಶಾಂತಿ 29/120–129). ವಸಿಷ್ಠನಿಗೆ ಶೀತೋಷ್ಣ ನೀರನ್ನು ದಾನಮಾಡಿ, ಈತ ಸ್ವರ್ಗದಲ್ಲಿ ಪ್ರತಿಷ್ಠಿತನಾದುದು (ಶಾಂತಿ 234/17). ಫಲ–ಮೂಲ ಮತ್ತು ಎಲೆಗಳ ಮೂಲಕ ಋಷಿಗಳ ಪೂಜೆಮಾಡಿ, ಇವನು ಅಭಿಲಾಷೆ ಮಾಡಿದ ಸಿದ್ಧಿಯನ್ನು ಪಡೆದುದು (ಶಾಂತಿ 292/7). ಇವನು ಎಂದೂ ಮಾಂಸ ತಿಂದಿರ ಲಿಲ್ಲ (ಅನು 115/63). ವಸಿಷ್ಠ ಮುನಿಗೆ ವಿಧಿವತ್ತಾಗಿ ಅರ್ಘ್ಯದಾನಮಾಡಿದುದರಿಂದ, ಇವನಿಗೆ ಶ್ರೇಷ್ಠ ಲೋಕಗಳ ಪ್ರಾಪ್ತಿ (ಅನು 137/6). ಸಾಯಂಪ್ರಾತಃಕಾಲಗಳಲ್ಲಿ ಸ್ಮರಣೆ ಮಾಡಲು ಯೋಗ್ಯರಾದ ರಾಜರಲ್ಲಿ ಈತ ಗಣಿಸ ಲ್ಪಟ್ಟಿದ್ದಾನೆ. (ಅನು 150/51).

**ರಭೇಣಕ** – ತಕ್ಷಕಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾಗಿದ್ದನು (ಆದಿ 57/8).

**ರಮಠ** – ಒಂದು ಮ್ಲೇಚ್ಛ ಜಾತಿ. ಈ ಜಾತಿ ಯವರು ಮಾಂಧಾತಾನ ರಾಜ್ಯದಲ್ಲಿ ವಾಸಿಸುತ್ತಿ ದ್ದರು (ಶಾಂತಿ 65/14–15).

**ರಮಣ** – (1) ಇವನು ಸೋಮನೆಂಬ ವಸುವಿನ ಮೂಲಕ ಮನೋಹರೆಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 66/22).

(2) ದ್ವಾರಕೆಯ ಸಮೀಪವಿರುವ ಒಂದು ದಿವ್ಯವನ (ಸಭಾ 38/29).

**ರಮಣಕ** – ಒಂದು ದೇಶ (ವರ್ಷ). ಇದು ಶ್ವೇತಪರ್ವತದ ದಕ್ಷಿಣ ಮತ್ತು ನಿಷದಪರ್ವತದ ಉತ್ತರದಲ್ಲಿದೆ. ಇಲ್ಲಿ ಜನ್ಮವೆತ್ತುವ ಮನುಷ್ಯರು, ಉತ್ತಮ ಕುಲದವರಾಗಿ, ನೋಡಲು ಪ್ರಿಯರಾ ಗಿರುತ್ತಾರೆ. ಅಲ್ಲಿರುವ ಎಲ್ಲ ಮನುಷ್ಯರು ಶತ್ರು ರಹಿತರಾಗಿರುತ್ತಾರೆ. ರಮಣಕವರ್ಷದ ಮನುಷ್ಯರು ಸದಾ ಪ್ರಸನ್ನಚಿತ್ತರಾಗಿ, ಹನ್ನೊಂದುವರೆ ಸಾವಿರ ವರ್ಷಗಳ ವರೆಗೆ ಜೀವಿತರಾಗಿರುತ್ತಾರೆ (ಭೀಷ್ಮ 8/2–4).

**ರಮಣಚೀನ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/66).

**ರಮ್ಭಾ** – ಒಬ್ಬ ಅಪ್ಸರೆ. ಇವಳು ಪ್ರಾಧಾಳ ಗರ್ಭದಿಂದ ಕಶ್ಯಪನ ಮೂಲಕ ಹುಟ್ಟಿದ್ದಳು (ಆದಿ 65/50). ಇವಳು ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/62). ಕುಬೇರನ ಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾಳೆ (ಸಭಾ 10/10). ಇವಳು ಇಂದ್ರ ಸಭೆಯಲ್ಲಿ ಅರ್ಜುನನ ಸ್ವಾಗತಕ್ಕಾಗಿ ನೃತ್ಯಮಾಡಿ ದ್ದಳು (ವನ 43/29). ಇವಳು ನಲಕೂಬರನ ಪತ್ನಿಯಾಗಿ ಇರುತ್ತಿದ್ದಳು. ಈಕೆ ತಿರಸ್ಕಾರ ಮಾಡಿದ ಕಾರಣ, ರಾವಣನಿಗೆ ನಲಕೂಬರನು ಈ ರೀತಿ ಶಾಪಕೊಟ್ಟನು. 'ನೀನು ಬಯಸದಿ ರುವ ಯಾವ ಸ್ತ್ರೀಯನ್ನೂ ಬಲಾತ್ಕಾರ ಮಾಡಲು ಸಾಧ್ಯವಿಲ್ಲ; ಮಾಡಿದರೆ ಪ್ರಾಣಕಳಕೊಳ್ಳಬೇಕಾ ದೀತು' (ವನ 280/60). ವಿಶ್ವಾಮಿತ್ರನ ಶಾಪ ದಿಂದ ಈಕೆ ಕಲ್ಲಾಗಬೇಕಾಗಿ ಬಂದಿತ್ತು (ಅನು 3/11). ಕುಬೇರನ ಸಭೆಯಲ್ಲಿ, ಅಷ್ಟಾವಕ್ರನ ಸ್ವಾಗತ ಕ್ಕಾಗಿ ಈಕೆ ನೃತ್ಯಮಾಡಿದ್ದಳು (ಅನು 19/44).

**ರಮ್ಯಕ** – ನೀಲಗಿರಿಯನ್ನು ದಾಟಿದರೆ ರಮ್ಯಕ ವರ್ಷ ಸಿಗುತ್ತದೆ. ತನ್ನ ಉತ್ತರ ದಿಗ್ವಿಜಯದ ಸಮಯದಲ್ಲಿ ಅರ್ಜುನನು ಈ ದೇಶವನ್ನು

ಗೆದ್ದು, ಆ ದೇಶದ ಜನರಮೇಲೆ ತೆರಿಗೆ ಹಾಕಿದ್ದನು (ಸಭಾ 28/6).

**ರಮ್ಯಗ್ರಾಮ** – ಒಂದು ರಾಜಧಾನಿ ಅಥವಾ ಒಬ್ಬ ರಾಜ. ಇದನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ತನ್ನ ಅಧಿಕಾರದೊಳಗೆ ತಂದಿದ್ದನು (ಸಭಾ 31/14).

**ರವಿ** – (1) ಈ ವಿವಸ್ವಂತನು ಜ್ಞಾನಪ್ರದನೆಂದು ತಿಳಿಯಲಾಗಿದೆ (ಆದಿ 1/42).

(2) ಸೌವೀರ ದೇಶದ ಒಬ್ಬ ರಾಜಕುಮಾರ. ಇವನು ಜಯದ್ರಥನ ರಥದ ಹಿಂದೆ ಕೈಯಲ್ಲಿ ಧ್ವಜಹಿಡಕೊಂಡು ಹೋಗುತ್ತಿದ್ದನು (ವನ 265/10). ಅರ್ಜುನನಿಂದ ಈತನ ವಧೆ (ವನ 271/27).

(3) ಧೃತರಾಷ್ಟ್ರನ ಒಬ್ಬ ಮಗ. ಇವನು ಭೀಮಸೇನನಿಂದ ಕೊಲ್ಲಲ್ಪಟ್ಟನು (ಶಲ್ಯ 26/14–15).

**ರಶ್ಮಿವಂತ (ರಶ್ಮಿವಾನ್)** – ಒಬ್ಬ ಸನಾತನ ವಿಶ್ವೇದೇವ (ಅನು 91/36).

**ರಸಾತಲ** – ಭೂಮಿಯ ಕೆಳಗಿರುವ ಒಂದು ಲೋಕ, ಪ್ರಳಯಕಾಲದಲ್ಲಿ ಸಂವರ್ತಕವೆಂಬ ಅಗ್ನಿ ಪೃಥ್ವಿಯನ್ನು ಭೇದಿಸಿ, ರಸಾತಲದವರೆಗೆ ತಲುಪುತ್ತದೆ (ವನ 188/69–70). ದೈತ್ಯರ ಮೂಲಕ ಹುಟ್ಟಿದ ಕೃತ್ಯೆ, ದುರ್ಯೋಧನನನ್ನು ಕರಕೊಂಡು ರಸಾತಲವನ್ನು ಪ್ರವೇಶಿಸಿದ್ದಳು (ವನ 251/29). ರಸಾತಲವು ಪೃಥ್ವಿಯ ಏಳನೇ ತಳವಾಗಿದೆ. ಇಲ್ಲಿ ಅಮೃತದಿಂದ ಹುಟ್ಟಿದ ಗೋಮಾತೆ ಸುರಭಿ ವಾಸಿಸುತ್ತಾಳೆ (ಉದ್ಯೋಗ 102/1). ರಸಾತಲ ನಿವಾಸಿಗಳು ಪೂರ್ವ ಕಾಲದಲ್ಲಿ ಒಂದು ಕಥೆಯನ್ನು ಹಾಡಿದ್ದರು. ಅದರ ಪ್ರಕಾರ ರಸಾತಲದಲ್ಲಿರುವಾಗ ಸಿಗುವ ಸುಖದಷ್ಟು, ನಾಗಲೋಕ, ಸ್ವರ್ಗಲೋಕ ಮತ್ತು ಅಲ್ಲಿರುವ ವಿಮಾನಗಳಲ್ಲಿ ವಾಸಿಸಿದರೂ ಸಿಗುವುದಿಲ್ಲ (ಉದ್ಯೋಗ 102/14–15). ಭಗವಾನ್ ವರಾಹನು ರಸಾತಲಕ್ಕೆ ಹೋಗಿ, ದೇವದ್ರೋಹಿಗಳಾದ ಅಸುರರನ್ನು ತನ್ನ ಗೊರಸುಗಳಿಂದ ವಿದೀರ್ಣಗೊಳಿಸಿದನು (ಶಾಂತಿ 206/26). ಹಯಗ್ರೀವ ರೂಪಧಾರಿ ಭಗವಾನ್ ಶ್ರೀಹರಿಯು ರಸತಾಲ ಪ್ರವೇಶಿಸಿ, ಮಧು ಮತ್ತು ಕೈಟಭರ ಅಧಿಕಾರದೊಳಗಿದ್ದ ವೇದಗಳ ಉದ್ಧಾರ ಮಾಡಿದನು (ಶಾಂತಿ 347/ 54–58). ರಾಜಾ ವಸು ಕೇವಲ ಒಮ್ಮೆ ಸುಳ್ಳಾಡಿದ್ದರಿಂದ, ರಸಾತಲಕ್ಕೆ ಹೋಗಬೇಕಾಯಿತು (ಅನು 6/34; ಆಶ್ವ 91/23). ರಸಾತಲವು ಭಗವಾನ್ ಅನಂತನ ಸನಾತನ ಧಾಮವಾಗಿದೆ. ಬಲರಾಮನು ಪ್ರಭಾಸ ಕ್ಷೇತ್ರದಲ್ಲಿ ತನ್ನ ಮಾನವ ಶರೀರವನ್ನು ಪರಿತ್ಯಾಗ ಮಾಡಿ, ರಸಾತಲವನ್ನು ಪ್ರವೇಶಿಸಿದನು (ಸ್ವರ್ಗಾ 5/23).

**ರಹಸ್ಯಾ** – ಭಾರತ ವರ್ಷದ ಒಂದು ನದಿ. ಇದರ ನೀರನ್ನು ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/19).

**ರಾಕಾ** – (1) ಪೂರ್ಣಿಮಾ ತಿಥಿಯ ಅಧಿಷ್ಠಾತ್ರೀ ದೇವಿ. ಈಕೆ ಮೂರ್ತಿವಂತಳಾಗಿ ಸ್ಕಂದನ ಜನ್ಮ ಸಮಯದಲ್ಲಿ ಅಲ್ಲಿಗೆ ಆಗಮಿಸಿದ್ದಳು (ಶಲ್ಯ 45/14).

(2) ಒಬ್ಬ ರಾಕ್ಷಸ ಕನ್ಯೆ. ಈಕೆ ಕುಬೇರನ ಆಜ್ಞೆಯಿಂದ ಮಹರ್ಷಿ ವಿಶ್ರವಾನ ಪರಿಚರ್ಯೆ ಮಾಡುತ್ತಿದ್ದಳು. ವಿಶ್ರವನು ಈಕೆಯ ಗರ್ಭದಿಂದ 'ಖರ'ನೆಂಬ ಪುತ್ರನನ್ನೂ, ಶೂರ್ಪಣಖಾ ಎಂಬ ಪುತ್ರಿಯನ್ನೂ ಪಡೆದಿದ್ದನು (ವನ 275/3–8).

**ರಾಕ್ಷಸ** – ಒಂದು ಪ್ರಕಾರದ ವಿವಾಹ (ಆದಿ 73/9). (ಯುದ್ಧ ಮಾಡಿ, ಹೊಡೆದು ಕಡಿದು, ಅಳುತ್ತಿರುವ ಕನ್ಯೆಯನ್ನು, ಆಕೆಯ ಅಳುತ್ತಿರುವ ಸಹೋದರ ಹಾಗೂ ಬಂಧುಗಳಿಂದ ಸೆಳೆದು ತರುವುದು, ರಾಕ್ಷಸ ವಿವಾಹವೆಂದು ತಿಳಿಯಲಾಗಿದೆ.) ಈ ವಿವಾಹವು ಕ್ಷತ್ರಿಯರಿಗೆ, ಅದರಲ್ಲೂ ರಾಜರಿಗೆ ವಿಹಿತವಾಗಿದೆ (ಆದಿ 73/11–13).

**ರಾಕ್ಷಸಗ್ರಹ** – ರಾಕ್ಷಸ ಸಂಬಂಧಿಯಾದ ಒಂದು ಗ್ರಹ. ಇದರ ಬಾಧೆಯುಂಟಾದರೆ, ಮನುಷ್ಯನು ಬೇರೆ ಬೇರೆ ರಸಗಳ ಆಸ್ವಾದನೆಯಿಂದ, ಸುಗಂಧಗಳನ್ನು ಮೂಸುವುದರಿಂದ, ಕೂಡಲೇ ಉನ್ಮತ್ತನಾಗುತ್ತಾನೆ (ವನ 230/50).

**ರಾಕ್ಷಸಸತ್ರ** – ಪರಾಶರನು ರಾಕ್ಷಸರ ಮೇಲೆ ಗೋಪಗೊಂಡು ರಾಕ್ಷಸಸತ್ರವನ್ನು ಪ್ರಾರಂಭಿಸಿ, ಅದರಲ್ಲಿ ರಾಕ್ಷಸರನ್ನು ಹೋಮಿಸಲು ಪ್ರಾರಂಭಿಸಿದನು (ಆದಿ 180/2–3). ಪುಲಸ್ತ್ಯಾದಿ ಮಹರ್ಷಿಗಳು ಸಮಾಧಾನಪಡಿಸಿದ್ದರಿಂದ, ಈ ಯಜ್ಞದ ಸಮಾಪ್ತಿ (ಆದಿ 180/21).

**ರಾಗ-ಖಾಂಡವ** – ರಾಜಾ ದಿಲೀಪನ ಯಜ್ಞದಲ್ಲಿ ತಯಾರಿಸಿದ ಒಂದು ಬಗೆಯ

ಮೋದಕ (ದ್ರೋಣ 61/8).

**ರಾಗಾ** – ಮಹರ್ಷಿ ಅಂಗೀರಸನ ದ್ವಿತೀಯ ಪುತ್ರಿ. ಇವಳ ಮೇಲೆ ಸಮಸ್ತ ಪ್ರಾಣಿಗಳಿಗೆ ಪ್ರೀತಿ ಇತ್ತು. ಆದುದರಿಂದ ಇವಳ ಹೆಸರು 'ರಾಗಾ' ಎಂದಾಯಿತು (ವನ 218/4).

**ರಾಜಗೃಹ (ಗಿರಿವ್ರಜ)** – ಒಂದು ಪ್ರಾಚೀನ ನಗರ. ಇದು ಮಗಧದ ರಾಜಧಾನಿಯಾಗಿತ್ತು. ಇಲ್ಲಿದ್ದ ರಾಜಾ ದೀರ್ಘನೆಂಬವನು ಬಲೋದ್ಧತ ನಾಗಿದ್ದನು. ಪಾಂಡುವಿನಿಂದ ಕೊಲ್ಲಲ್ಪಟ್ಟನು (ಆದಿ 112/27). ಈ ನಗರವು ರಾಜಾ ಅಂಬುವೀಚನ ರಾಜಧಾನಿಯೂ ಆಗಿತ್ತು (ಆದಿ 203/17). ಇಲ್ಲಿ ಜರಾಸಂಧನು ರಾಜನಾಗಿದ್ದನು (ಸಭಾ 21). ಇದು ಒಂದು ತೀರ್ಥವೂ ಆಗಿದೆ. ಇಲ್ಲಿ ಸ್ನಾನಮಾಡಿದ ಮನುಷ್ಯ ಕಕ್ಷೀವಾನನಂತೆ ಪ್ರಸನ್ನನಾಗಿರುತ್ತಾನೆ (ವನ 84/104–105). ಸಹದೇವ ಕುಮಾರನಾದ ಮೇಘಸಂಧಿಯೂ ಇಲ್ಲಿಯೇ ವಾಸಿಸುತ್ತಿದ್ದನು (ಆಶ್ವ 82/2).

**ರಾಜಧರ್ಮ** – ಒಬ್ಬ ಬಕರಾಜ. ಇವನ ಇನ್ನೊಂದು ಹೆಸರು ನಾಡೀಜಂಘನೆಂದಾಗಿತ್ತು. ಇವನು ಕಶ್ಯಪಪುತ್ರ ಮತ್ತು ಬ್ರಹ್ಮನ ಮಿತ್ರನಾಗಿ ದ್ದನು (ಶಾಂತಿ 169/19–20). ಇವನಿಂದ ಕೃತಘ್ನ ನಾದ ಗೌತಮನ ಸ್ವಾಗತ (ಶಾಂತಿ 169/23–24). ಕೃತಘ್ನ ಗೌತಮನ ಆತಿಥ್ಯ–ಸತ್ಕಾರ (ಶಾಂತಿ 170/3–9). ಇವನು ಧನಕ್ಕೋಸ್ಕರ, ಗೌತಮನನ್ನು ತನ್ನ ಮಿತ್ರ ರಾಕ್ಷಸರಾಜ ವಿರೂಪಾಕ್ಷನ ಬಳಿಗೆ ಕಳುಹಿಸಿದುದು (ಶಾಂತಿ 170/14–16). ಹಣ ಪಡೆದು ಹಿಂತಿರುಗಿದ ಗೌತಮನನ್ನು ಸತ್ಕರಿಸಿ ದುದು (ಶಾಂತಿ 171/29–30). ಗೌತಮನಿಂದ ಈತನ ವಧೆ (ಶಾಂತಿ 172/3). ಸುರಭಿಯ ನೊರೆಯಿಂದ ರಾಜ ಧರ್ಮನು ಜೀವಿಸಿದುದು ಮತ್ತು ವಿರೂಪಾಕ್ಷನನ್ನು ಭೇಟಿಯಾದುದು (ಶಾಂತಿ 173/3–5). ಗೌತಮನನ್ನು ಬದುಕಿಸಲು ಇಂದ್ರನೊಡನೆ ಈತನ ಆಗ್ರಹ (ಶಾಂತಿ 173/11–12). ಇಂದ್ರನಿಂದ ಅಮೃತವು ಹಾರಿಸಲ್ಪಟ್ಟಾಗ ಗೌತಮನು ಜೀವಿಸಿದುದು. ರಾಜಧರ್ಮನು ಐಶ್ವರ್ಯಾದಿಗಳ ಸಹಿತ ಗೌತಮನಿಗೆ ವಿದಾಯ ಕೋರಿ, ತನ್ನ ಮನೆಯನ್ನು ಪ್ರವೇಶಿಸಿದುದು (ಶಾಂತಿ 173/13–15).

**ರಾಜಧರ್ಮಾನುಶಾಸನಪರ್ವ** – ಶಾಂತಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1ರಿಂದ 130ರ ವರೆಗೆ).

**ರಾಜನೀ** – ಭಾರತವರ್ಷದ ಒಂದು ನದಿ. ಅದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/21).

**ರಾಜಪುರ** – (1) ಕಾಂಬೋಜ ದೇಶದ ಪ್ರಸಿದ್ಧ ನಗರ. ಇಲ್ಲಿ ಕರ್ಣನು ಕಾಂಬೋಜರ ಮೇಲೆ ವಿಜಯ ಪಡೆದಿದ್ದನು (ದ್ರೋಣ 4/5).

(2) ಕಲಿಂಗರಾಜ ಚಿತ್ರಾಂಗದನ ರಾಜಧಾನಿ. ಇಲ್ಲಿ ರಾಜಕನ್ಯೆಯ ಸ್ವಯಂವರದಲ್ಲಿ ಅನೇಕ ರಾಜರು ಸಮ್ಮಿಲಿತರಾಗಿದ್ದರು (ಶಾಂತಿ 4/3).

**ರಾಜಸೂಯಪರ್ವ** – ಸಭಾಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 33ರಿಂದ 35).

**ರಾಜಸೂಯ** – ಒಂದು ಮಹಾಯಜ್ಞ, ರಾಜಾ ಹರಿಶ್ಚಂದ್ರನು ಇದನ್ನು ಪೂರೈಸಿದುದು (ಸಭಾ 12/23). ರಾಜಸೂಯಪರ್ವದಲ್ಲಿ ಇದರ ವಿಶೇಷ ವರ್ಣನೆ (ಸಭಾ 33ರಿಂದ 35). ಯುಧಿಷ್ಠಿರನಿಂದ ಸಾಂಗಗೊಳಿಸಲ್ಪಟ್ಟದ್ದು (ಸಭಾ 45). ಯುಧಿಷ್ಠಿರನ ರಾಜಸೂಯ ಯಜ್ಞದ ವಿಶೇಷತೆ (ಸಭಾ 45/38).

**ರಾಜಸೂಯಾರಂಭಪರ್ವ** – ಸಭಾಪರ್ವದ ಒಂದು ಅವಾಂತರಪರ್ವ (ಅಧ್ಯಾಯ 13ರಿಂದ 19).

**ರಾತ್ರಿದೇವಿ** – ರಾತ್ರಿಯ ಅಧಿಷ್ಠಾತ್ರಿ ದೇವಿ. ಶಚಿಯು ತನ್ನ ಮನೋಕಾಮನೆಯನ್ನು ಪೂರ್ತಿ ಮಾಡುವುದಕ್ಕೋಸ್ಕರ, ಈಕೆಯ ಆರಾಧನೆ ಮಾಡಿದ್ದಳು (ಉದ್ಯೋಗ 13/25–27). ಇವಳು ಮೂರ್ತಿಮಂತಳಾಗಿ ಸ್ಕಂದನ ಅಭಿಷೇಕ ಸಮಾರಂಭಕ್ಕೆ ಆಗಮಿಸಿದ್ದಳು (ಶಲ್ಯ 45/15).

**ರಾಧಾ** – ಅದಿರಥ ಸೂತನ ಪತ್ನಿ. ಬಾಲಕ ಕರ್ಣನನ್ನು ಅಧಿರಥನು ಈಕೆಯ ಮಡಿಲಿಗೆ ಒಪ್ಪಿಸಿದ್ದನು (ಆದಿ 67/140, ಆದಿ 110/23). ಇವಳಿಂದ ಕರ್ಣನ ನಾಮಕರಣ (ಆದಿ 110/24; ವನ 309/10 ; ಉದ್ಯೋಗ 141/5–6).

**ರಾಮ (ರಾಮಚಂದ್ರ)** – ಅವಿನಾಶಿಯೂ, ಮಹಾಬಾಹುವೂ ಆದ ಭಗವಾನ್ ವಿಷ್ಣುವಿನ ಅವತಾರ ಸ್ವರೂಪನಾದ ದಶರಥನಂದನ ಶ್ರೀರಾಮ. ಜಗತ್ತಿನ ಸಂತೋಷವನ್ನು ಹೆಚ್ಚಿಸಲು ಮತ್ತು ಧರ್ಮದ ಸ್ಥಾಪನೆಗೋಸ್ಕರ, ಶ್ರೀಹರಿ

ತನ್ನನ್ನು ತಾನೇ ನಾಲ್ಕುರೂಪಗಳಲ್ಲಿ ವಿಭಕ್ತಗೊಳಿಸಿ, ಚೈತ್ರ ಶುಕ್ಲ ನವಮಿಯ ದಿನ ಈ ಭೂಮಿಯಲ್ಲಿ ಅವತರಿಸಿದನು. ಶ್ರೀರಾಮನನ್ನು ಸಾಕ್ಷಾತ್ ಭೂತನಾಥ ಶ್ರೀಹರಿಯ ಸ್ವರೂಪವೆಂದು ಹೇಳಲಾಗಿದೆ. ಇವನು ವಿಶ್ವಾಮಿತ್ರನ ಯಜ್ಞಕ್ಕೆ ವಿಘ್ನವನ್ನುಂಟುಮಾಡುತ್ತಿದ್ದ ಸುಬಾಹುವಿನ ವಧೆ ಮಾಡಿದುದು ಮತ್ತು ಮಾರೀಚನಿಗೂ ನೋವನ್ನುಂಟುಮಾಡಿದುದು. ವಿಶ್ವಾಮಿತ್ರನಿಂದ ಈತನಿಗೆ ದೇವತೆಗಳಿಗೂ ದುರ್ಜಯವಾದ ದಿವ್ಯಾಸ್ತ್ರಗಳದಾನ. ಜನಕನ ಧನುರ್ಯಜ್ಞದಲ್ಲಿ ಇವನಿಂದ ಶಿವನ ಧನುರ್ಭಂಗ. ಸೀತೆಯೊಂದಿಗೆ ಇವನ ವಿವಾಹ. ತಂದೆಯ ಆಜ್ಞೆಯಿಂದ ಹದಿನಾಲ್ಕು ವರ್ಷಕಾಲ ಇವನ ವನವಾಸ. ಇವನು ಜನಸ್ಥಾನದಲ್ಲಿದ್ದು ದೇವತೆಗಳ ಕಾರ್ಯಸಾಧನೆ ಮಾಡಿದುದು ಮತ್ತು ಅಲ್ಲಿಯೇ ಜನಹಿತಕ್ಕೋಸ್ಕರ ಹದಿನಾಲ್ಕು ಸಾವಿರ ರಾಕ್ಷಸರ ವಧೆ. ರಾಕ್ಷಸರ ವಂಚನೆಯಿಂದ ಇವನ ಪತ್ನಿ ಸೀತೆಯ ಅಪಹಾರ. ಸುಗ್ರೀವನೊಂದಿಗೆ ಇವನ ಮೈತ್ರಿ. ಇವನಿಂದ ವಾನರರಾಜ ವಾಲಿಯ ವಧೆ ಮತ್ತು ಸುಗ್ರೀವನ ಪಟ್ಟಾಭಿಷೇಕ. ಈತ ಸಮುದ್ರಕ್ಕೆ ಸೇತುವೆ ಕಟ್ಟಿ ಲಂಕಾಪ್ರವೇಶ ಮಾಡಿದುದು ಮತ್ತು ಈತನಿಂದ ರಾವಣನ ವಧೆ, ಲಂಕೆಯ ರಾಜಪಟ್ಟದಲ್ಲಿ ವಿಭೀಷಣನಿಗೆ ಅಭಿಷೇಕ ಮತ್ತು ಆತನಿಗೆ ಅಮರತ್ವ ಪ್ರದಾನ ಮಾಡಿದುದು. ಪುನಃ ಸೇನೆ ಇತ್ಯಾದಿಗಳ ಸಹಿತ ಪುಷ್ಪಕ ವಿಮಾನದ ಮೂಲಕ ಅಯೋಧ್ಯೆಗೆ ಬಂದು ಧರ್ಮಪೂರ್ವಕ ರಾಜ್ಯಪಾಲನೆ ಮಾಡಿದುದು. ಇವನ ಆಜ್ಞೆಯಂತೆ ಶತ್ರುಘ್ನನ ಮೂಲಕ, ಮಥುರಾ ನಿವಾಸಿಯಾದ ಮಧುಪುತ್ರ ಲವಣಾಸುರನ ವಧೆ. ಇವನಿಂದ ಹತ್ತು ಅಶ್ವಮೇಧ ಯಜ್ಞಗಳ ನೆರವೇರಿಸುವಿಕೆ. ಇವನ ರಾಜ್ಯದ ವಿಶೇಷತೆ (ಸಭಾ 38/29). ಸರಯೂವಿನ ಗೋಪ್ರತಾರ ತೀರ್ಥದಲ್ಲಿ ಸೇವಕರು, ವಾಹನಗಳೊಂದಿಗೆ ಸ್ನಾನಮಾಡಿ ಶ್ರೀರಾಮನು ತನ್ನ ನಿತ್ಯಧಾಮಕ್ಕೆ ಹೋದನು (ವನ 84/70–71). ಹನುಮಂತನಿಂದ ಭೀಮಸೇನನೊಡನೆ ಈತನ ಸಂಕ್ಷಿಪ್ತ ಚರಿತ್ರೆಯ ವರ್ಣನೆ (ವನ 148). ಇವನ ತಂದೆಯ ಹೆಸರು ದಶರಥ. ತಾಯಿಯ ಹೆಸರು ಕೌಸಲ್ಯೆ ಮತ್ತು ಪತ್ನಿಯ ಹೆಸರು ಸೀತೆಯಾಗಿತ್ತು (ವನ 274/6–9). ಇವನು ತನ್ನ ನಾಲ್ವರು ಸಹೋದರರಲ್ಲಿ ಹಿರಿಯನಾಗಿದ್ದನು ಮತ್ತು ಬುದ್ಧಿವಂತನಾಗಿದ್ದನು. ತನ್ನ ಮನೋಹರ ರೂಪ ಮತ್ತು ಸುಂದರ ಸ್ವಭಾವದಿಂದ ಸಮಸ್ತ ಪ್ರಜೆಗಳಿಗೆ ಆನಂದವನ್ನೀಯುತ್ತಿದ್ದನು. ಎಲ್ಲರ ಮನಸ್ಸೂ ಇವನಲ್ಲಿ ರಮಿಸುತ್ತಿತ್ತು. ಮಾತ್ರವಲ್ಲದೆ ತಂದೆಯ ಮನಸ್ಸಿನಲ್ಲಿ ಕೂಡಾ ಆನಂದ ಹೆಚ್ಚಿಸುವವನಾಗಿದ್ದನು. ತಂದೆಯ ಮನಸ್ಸಿನಲ್ಲಿ ಇವನನ್ನು ಯುವರಾಜ ಪಟ್ಟದಲ್ಲಿ ಅಭಿಷಿಕ್ತನಾಗಿ ಮಾಡುವ ಇಚ್ಛೆಯಾಯಿತು. ಆದುದರಿಂದ ಅವನು ಮಂತ್ರಿಗಳು ಮತ್ತು ಧರ್ಮಜ್ಞ ಪುರೋಹಿತರೊಡನೆ ಸಲಹೆ ಕೇಳಿದನು. ಎಲ್ಲರೂ ಏಕಕಂಠದಿಂದ, ಆತನ ಆ ಸಮಯೋಚಿತ ಅಭಿಪ್ರಾಯವನ್ನು ಅನುಮೋದಿಸಿದರು (ವನ 277/6–8). ಶ್ರೀರಾಮನ ನೇತ್ರಗಳು ಸುಂದರವಾಗಿದ್ದವು. ಮತ್ತು ಸ್ವಲ್ಪ ಕೆಂಪಾಗಿದ್ದವು. ಭುಜಗಳು ದೊಡ್ಡವುಗಳೂ, ಮೊಣಕಾಲಪರ್ಯಂತ ಉದ್ದವೂ ಆಗಿದ್ದವು. ಇವನು ಮದ್ದಾನೆಯಂತೆ ಗಂಭೀರವಾಗಿ ನಡೆಯುತ್ತಿದ್ದನು. ಇವನ ಕಂಠ ಶಂಖದಂತೆ ಸುಂದರ, ವಿಶಾಲವಾದ ಎದೆ ಮತ್ತು ತಲೆಯ ಮೇಲೆ ಕಪ್ಪುಕಪ್ಪಾದ ಗುಂಗುರಾದ ಕೂದಲುಗಳಿದ್ದವು. ಇವನ ದೇಹ ದಿವ್ಯ ಕಾಂತಿಯಿಂದ ಹೊಳೆಯುತ್ತಿತ್ತು. ಯುದ್ಧದಲ್ಲಿ ಇವನ ಪರಾಕ್ರಮ ದೇವರಾಜ ಇಂದ್ರನಿಗಿಂತ ಕಡಿಮೆಯಾಗಿರಲಿಲ್ಲ. ಇವನು ಸಮಸ್ತ ಧರ್ಮಗಳಲ್ಲಿ ಪಾರಂಗತನೂ, ವಿದ್ವಾಂಸನೂ, ಬೃಹಸ್ಪತಿಗೆ ಸಮಾನ ಬುದ್ಧಿವಂತನೂ ಆಗಿದ್ದನು. ಎಲ್ಲಾ ಪ್ರಜೆಗಳಿಗೂ ಈತನ ಮೇಲೆ ಅನುರಾಗವಿತ್ತು. ಇವನು ಎಲ್ಲಾ ವಿದ್ಯೆಗಳಲ್ಲೂ ಪ್ರವೀಣನೂ ಮತ್ತು ಜಿತೇಂದ್ರಿಯನೂ ಆಗಿದ್ದನು. ಇವನ ಅದ್ಭುತ ರೂಪ ನೋಡಿ, ಶತ್ರುಗಳ ಕಣ್ಣು ಮನಸ್ಸುಗಳೂ ಆಕರ್ಷಿಸಲ್ಪಡುತ್ತಿದ್ದವು. ಇವನು ದುಷ್ಟರ ದಮನ ಕಾರ್ಯದಲ್ಲಿ ಸಮರ್ಥ, ಧರ್ಮಾತ್ಮರ ಸಂರಕ್ಷಕ, ಧೈರ್ಯವಂತ, ದುರ್ಧರ್ಷ, ವಿಜಯಿ ಮತ್ತು ಅಪರಾಜಿತನಾಗಿದ್ದನು. ಕೌಸಲ್ಯಾನಂದನ ಶ್ರೀರಾಮನನ್ನು ನೋಡಿ, ತಂದೆಯಾದ ದಶರಥನಿಗೆ ಮನಸ್ಸಿನಲ್ಲಿ ತುಂಬಾ ಸಂತೋಷವಾಗುತ್ತಿತ್ತು (ವನ 277/9–13). ಮಂಥರೆಯು ಹಾದಿ ತಪ್ಪಿಸಿದುದರಿಂದ, ಕೈಕೆ ರಾಜಾ ದಶರಥನೊಡನೆ ಭರತನಿಗೆ

ರಾಜ್ಯಾಭಿಷೇಕ ಮಾಡುವಂತೆಯೂ, ಶ್ರೀರಾಮನಿಗೆ ವನವಾಸ ವಿಧಿಸುವಂತೆಯೂ ವರ ಬೇಡಿದುದು (ವನ 277/16–26). ತಂದೆಯ ಸತ್ಯವನ್ನು ರಕ್ಷಿಸುವುದಕ್ಕಾಗಿ, ಇವನು ಲಕ್ಷ್ಮಣ ಮತ್ತು ಸೀತೆಯೊಂದಿಗೆ ವನಗಮನ ಮಾಡಿದುದು (ವನ 277/28–29). ಇವನ ವಿಯೋಗದಿಂದಾಗಿ ರಾಜಾ ದಶರಥನ ದೇಹತ್ಯಾಗ (ವನ 277/30). ಶ್ರೀರಾಮಲಕ್ಷ್ಮಣರು ಕಾಡಿಗೆ ಹೋದುದರಿಂದ, ಅಯೋಧ್ಯೆಯ ರಾಜ್ಯ ನಿಷ್ಕಂಟಕವೆಂದು ತಿಳಿದು, ಕೈಕೆ ಅದನ್ನು ಭರತನಿಗೊಪ್ಪಿಸಿದುದು. ಭರತನು ಕೈಕೆಯಿಯನ್ನು ನಿಂದಿಸಿ ಸಹೋದರ ಶ್ರೀರಾಮನನ್ನು ಅನುಸರಿಸಿದುದು ಮತ್ತು ಆತನನ್ನು ಹಿಂತಿರುಗಿ ಕರಕೊಂಡು ಬರುವ ಇಚ್ಛೆಯಿಂದ, ಋಷಿಗಳು, ಬ್ರಾಹ್ಮಣರು ಮತ್ತು ನಗರ ಹಾಗೂ ಜನಪದದ ಜನರೊಂದಿಗೆ ಚಿತ್ರಕೂಟಕ್ಕೆ ಹೋಗಿ ಶ್ರೀರಾಮನ ದರ್ಶನ ಮಾಡಿದುದು (ವನ 277/31–38). ಶ್ರೀರಾಮನ ಆಜ್ಞೆಯಿಂದ ಭರತನು ಹಿಂತಿರುಗಿದುದು ಮತ್ತು ಇವನ ಪಾದುಕೆಗಳನ್ನು ಮುಂದಿಟ್ಟು, ನಂದಿಗ್ರಾಮದಲ್ಲಿ ವಾಸಿಸುತ್ತಾ, ರಾಜ್ಯಪರಿಪಾಲನೆ ಮಾಡಿದುದು (ವನ 277/39). ನಗರ ಮತ್ತು ಜನಪದದ ಜನರ ಪುನರಾಗಮನದ ಸಂಶಯದಿಂದ, ಘೋರಾರಣ್ಯ ಪ್ರವೇಶ ಮಾಡಿ, ಇವನು ಶರಭಂಗ ಋಷಿಯ ಆಶ್ರಮಕ್ಕೆ ಹೋದುದು, ಅಲ್ಲಿ ಶರಭಂಗನೊಡನೆ ಈತನ ಭೇಟಿ. ಅವನನ್ನು ಸತ್ಕರಿಸಿ, ದಂಡಕಾರಣ್ಯದ ಗೋದಾವರಿ ದಡಕ್ಕೆ ಹೋಗಿ ವಾಸಿಸಿದುದು (ವನ 277/40–41). ಶೂರ್ಪಣಖೆಯ ಕಾರಣದಿಂದಾಗ, ಜನಸ್ಥಾನ ನಿವಾಸಿಯಾದ ಖರನೊಡನೆ, ಈತನಿಗೆ ಬಲವಾದ ವೈರವುಂಟಾದುದು (ವನ 277/42). ಅಲ್ಲಿ ಇವನಿಂದ ತಪಸ್ವಿಗಳಾದ ಮುನಿಗಳ ರಕ್ಷಣೆಗಾಗಿ, ಖರ ದೂಷಣಾದಿ ಹದಿನಾಲ್ಕು ಸಹಸ್ರ ರಾಕ್ಷಸರವಧೆ (ವನ 277/44). ಶ್ರೀರಾಮನ ಭಯದಿಂದಲೇ ಗೋಕರ್ಣತೀರ್ಥದಲ್ಲಿ ಮಾರೀಚನ ತಪಸ್ಸು (ವನ 277/56). ರಾವಣನು ಶ್ರೀರಾಮನೊಡನೆ ವೈರ ಸಾಧಿಸುವುದನ್ನು ಮಾರೀಚನು ನಿಷೇಧಿಸಿದುದು ಮತ್ತು ಶ್ರೀರಾಮನೇ ತನ್ನ ಸನ್ಯಾಸಕ್ಕೆ ಕಾರಣನೆಂದು ಹೇಳಿದುದು (ವನ 278/6–8). ಮಾರೀಚನು ಮೃಗರೂಪಧರಿಸಿ, ಸೀತೆಯ ಸಮ್ಮುಖಕ್ಕೆ ಹೋದುದು, ಸೀತೆಯು ಅದನ್ನು ಕೊಂದು ತರುವಂತೆ ಶ್ರೀರಾಮನನ್ನು ಪ್ರೇರಿಸಿದುದು; ಸೀತೆಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ, ಲಕ್ಷ್ಮಣನನ್ನು ಆಕೆಯ ರಕ್ಷಣೆಗೆ ನಿಯೋಜಿಸಿ, ಶ್ರೀರಾಮನು ಧನುರ್ಬಾಣಗಳನ್ನು ತೆಗೆದುಕೊಂಡು ಆ ಮೃಗವನ್ನು ಹಿಂಬಾಲಿಸಿದುದು (ವನ 278/17–20). ಶ್ರೀರಾಮನು ಮೃಗರೂಪಧಾರಿ ಮಾರೀಚನನ್ನು ಗುರುತಿಸಿ ವಧಿಸಿದುದು (ವನ 278/21–22). ರಾವಣನಿಂದ ಇವನ ಪತ್ನಿ ಸೀತೆಯ ಅಪಹಾರ (ವನ 278/42–44). ಸೀತೆಯನ್ನು ಒಬ್ಬಂಟಿಗಳಾಗಿ ಬಿಟ್ಟುಬಂದ ಕಾರಣ ಶ್ರೀರಾಮನು ಲಕ್ಷ್ಮಣನನ್ನು ನಿಂದಿಸಿದುದು ಮತ್ತು ಆಶ್ರಮದ ಕಡೆಗೆ ಜೋರಾಗಿ ನಡೆದುದು. ದಾರಿಯಲ್ಲಿ ಪರ್ವತ ಸದೃಶನಾದ ಜಟಾಯು ಬಿದ್ದಿರುವುದನ್ನು ಕಂಡು, ಅವನನ್ನು ರಾಕ್ಷಸನೆಂದು ಭಾವಿಸಿ, ಲಕ್ಷ್ಮಣ ಸಹಿತನಾದ ಶ್ರೀರಾಮನು ಧನುಸ್ಸನ್ನೆತ್ತಿ ಆತನ ಮೇಲೆ ಆಕ್ರಮಿಸಲು ಹೋದುದು; ಆತ ತನ್ನ ಪರಿಚಯ ತಿಳಿಸಿದಾಗ, ಅವನ ಹತ್ತಿರ ಹೋಗಿ, ಅವನ ದುರ್ದಶೆಯನ್ನು ಪ್ರತ್ಯಕ್ಷನೋಡಿದುದು; 'ಸೀತಾದೇವಿಯನ್ನು ಬಿಡಿಸುವುದಕ್ಕೋಸ್ಕರ ಯುದ್ಧ ಮಾಡುವಾಗ, ನಾನು ರಾವಣನ ಕೈಯಿಂದ ಹೊಡೆಯಲ್ಪಟ್ಟೆನು. ಅವನು ದಕ್ಷಿಣದಿಕ್ಕಿಗೆ ಹೋಗಿದ್ದಾನೆ' ಎಂದು ಸಾಂಕೇತಿಕವಾಗಿ ಹೇಳಿ, ಜಟಾಯು ಶ್ರೀರಾಮನ ಮುಂದೆ ಪ್ರಾಣತ್ಯಾಗ ಮಾಡಿದುದು. ಇವನ ಮೂಲಕ ಜಟಾಯುವಿನ ಅಂತ್ಯೇಷ್ಟಿ ಸಂಸ್ಕಾರ (ವನ 279/14–24). ಇವನಿಂದ ಕಬಂಧನ ಎಡ ಭುಜದ ಖಂಡನೆ (ವನ 279/36–37). ಕಬಂಧನು ವಿಶ್ವಾವಸುವೆಂಬ ಗಂಧರ್ವರೂಪಕ್ಕೆ ಪರಿವರ್ತನೆ ಹೊಂದಿ, ಶ್ರೀರಾಮನಿಗೆ ತನ್ನ ಪರಿಚಯವನ್ನಿತ್ತದ್ದು ಮತ್ತು ಪಂಪಾ ಸರೋವರದ ಹತ್ತಿರ ಋಷ್ಯಮೂಕ ಪರ್ವತದ ಮೇಲೆ ವಾಸಮಾಡುವ ಸುಗ್ರೀವನೊಂದಿಗೆ ಮೈತ್ರಿ ಸ್ಥಾಪಿಸಲು ಸಲಹೆಯನ್ನು ಕೊಟ್ಟು, ಆತನು ಅಲ್ಲಿಂದ ಅಂತರ್ಧಾನನಾದುದು (ವನ 279/40–48). ಪಂಪಾ ಸರೋವರಕ್ಕೆ ಹೋಗಿ, ಶ್ರೀರಾಮನು ಸೀತೆಗಾಗಿ ವಿಲಪಿಸಿದುದು ಮತ್ತು ಲಕ್ಷ್ಮಣನು ಆತನನ್ನು ಸಂತೈಸಿದುದು (ವನ 280/1–6). ಇವನು

ಪಂಪಾ ಸರೋವರದಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣ ನೀಡಿದುದು ಮತ್ತು ಋಷ್ಯಮೂಕದ ಬಳಿಗೆ ಹೋಗಿ, ಅದರ ಶಿಖರದಲ್ಲಿ ಕುಳಿತ ಐದು ವಾನರರನ್ನು ನೋಡಿದುದು (ವನ 280/8–9). ಹನುಮಂತನೊಡನೆ ಭೇಟಿ; ಮಾತುಕತೆಯ ಅನಂತರ ಸುಗ್ರೀವನೊಂದಿಗೆ ಈತನ ಸಖ್ಯ ಮತ್ತು ಆತನೊಂದಿಗೆ ತನ್ನ ಕಾರ್ಯದ ನಿವೇದನೆ. ಸೀತೆಯು ಬೀಳಿಸಿದ ವಸ್ತ್ರವನ್ನು ಸುಗ್ರೀವನು ಇವನಿಗೆ ತೋರಿಸಿದುದು (ವನ 280/10–12). ಶ್ರೀರಾಮನು ಸುಗ್ರೀವನನ್ನು ವಾನರರಾಜನೆಂಬ ಪದವಿಯಲ್ಲಿ ಅಭಿಷೇಕ ಮಾಡಿದುದು ಮತ್ತು ವಾಲಿಯನ್ನು ಕೊಂದು ಉರುಳಿಸುತ್ತೇನೆಂದು ಪ್ರತಿಜ್ಞೆ ಮಾಡಿದುದು. ಸುಗ್ರೀವನೂ ಸೀತೆಯನ್ನು ಹುಡುಕಿ ತರುವ ವಿಶ್ವಾಸ ನೀಡಿದುದು (ವನ 280/13–14). ಇವನಿಂದ ವಾಲಿಯ ವಧೆ (ವನ 280/35–38). ಇವನು ಮಳೆಗಾಲದ ನಾಲ್ಕು ತಿಂಗಳು ಮಾಲ್ಯವಂತ ಗಿರಿಯ ಸುಂದರ ಪೃಷ್ಠಭಾಗದಲ್ಲಿ ವಾಸಿಸಿದುದು (ವನ 280/40). ಸುಗ್ರೀವನ ಮೇಲೆ ಇವನ ಕೋಪ (ವನ 282/5–11). ಲಕ್ಷ್ಮಣನು ಸುಗ್ರೀವನನ್ನು ಕರಕೊಂಡು, ಮಾಲ್ಯವಂತ ಪರ್ವತದ ಶಿಖರದ ಮೇಲೆ ಶ್ರೀರಾಮನ ಬಳಿಗೆ ಬಂದದ್ದು ಮತ್ತು ಆತನ ಮೂಲಕ ಮಾಡಲ್ಪಡುವ ಸೀತಾನ್ವೇಷಣಾ ಕಾರ್ಯವನ್ನು ಸೂಚಿಸಿದುದು (ವನ 282/22). ಹನುಮಂತನು ಲಂಕೆಯಿಂದ ಹಿಂತಿರುಗಿ, ಶ್ರೀರಾಮನಿಗೆ ಅಲ್ಲಿರುವ ವೃತ್ತಾಂತವನ್ನೂ, ಸೀತೆಯ ಕುಶಲ ಸಮಾಚಾರವನ್ನೂ ಹೇಳಿದುದು (ವನ 282/37–71). ಶ್ರೀರಾಮನ ಬಳಿಗೆ ಬೇರೆ ಬೇರೆ ದೇಶಗಳಿಂದ ವಿಶಾಲ ವಾನರಸೇನೆಯ ಸಹಿತ, ವಾನರ ಯೂಥಪತಿಗಳ ಆಗಮನ (ವನ 283/1–13). ಶುಭಮುಹೂರ್ತದಲ್ಲಿ ಶ್ರೀರಾಮನು ಸೇನಾಸಹಿತನಾಗಿ ಲಂಕೆಗೆ ಹೊರಟದ್ದು (ವನ 283/14–15). ಶ್ರೀರಾಮನು ಸಮುದ್ರ ದಾಟಲು ವಾನರರೊಂದಿಗೆ ಉಪಾಯ ಕೇಳಿದುದು; ಸಮುದ್ರವನ್ನು ಆರಾಧಿಸುವ ನಿಶ್ಚಯಮಾಡಿ, ಅದರ ತಡಿಯಲ್ಲಿ ದರ್ಭ ಶಯನನಾದುದು (ವನ 283/23–32). ಸ್ವಪ್ನದಲ್ಲಿ ಸಮುದ್ರನು ಶ್ರೀರಾಮನಿಗೆ ಕಾಣಿಸಿಕೊಂಡು, ನಳನಿಂದ ಸೇತುವೆ ಕಟ್ಟಿಸಿ, ಅದರ ಮೇಲಿಂದ ಸೇನಾಸಮೇತನಾಗಿ ದಾಟಿ ಹೋಗುವ ಮಾರ್ಗ ಸೂಚಿಸಿದುದು (ವನ 283/33–42). ಶ್ರೀರಾಮನು ನಳನಿಗೆ ಆದೇಶವನ್ನಿತ್ತು ಸಮುದ್ರದ ಮೇಲೆ ಒಂದುನೂರು ಯೋಜನ ಉದ್ದವಾದ ಮತ್ತು ಹತ್ತು ಯೋಜನ ಅಗಲವಾದ ಸೇತುವೆ ಸಿದ್ಧಪಡಿಸಿದುದು (ವನ 283/43–45). ಇವನ ಬಳಿಗೆ ಸಚಿವರ ಸಮೇತ ವಿಭೀಷಣನ ಆಗಮನ; ಶ್ರೀರಾಮನು ಆತನ ನಡತೆ ಮತ್ತು ಚಲನವಲನಗಳಿಂದ ಆತನನ್ನು ಪರಿಶುದ್ಧನೆಂದು ಕಂಡುಕೊಂಡು ಸಂತುಷ್ಟನಾದುದು; ಅವನನ್ನು ರಾಕ್ಷಸ ರಾಜ್ಯಕ್ಕೆ ಅಭಿಷಿಕ್ತನಾಗಿ ಮಾಡಿದುದು; ಸಲಹೆಗಾರನಾಗಿ ಮಾಡಿದುದು ಮತ್ತು ಅವನದೇ ಅಭಿಪ್ರಾಯ ಪ್ರಕಾರ ಮಹಾಸಾಗರವನ್ನು ದಾಟಿದುದು (ವನ 283/46–50). ಇವನು ಲಂಕೆಯ ಎಲ್ಲೆಯನ್ನು ತಲುಪಿ; ಅಲ್ಲಿರುವ ಉದ್ಯಾನಗಳನ್ನು ನಷ್ಟಭ್ರಷ್ಟ ಮಾಡಿದುದು, ವಿಭೀಷಣನ ಸೆರೆಯಲ್ಲಿ ಸಿಕ್ಕಿದ್ದ ಶುಕ ಮತ್ತು ಸಾರಣರಿಗೆ ತನ್ನ ಸೇನೆಯ ಸಂದರ್ಶನ ಮಾಡಿಸಿ ಬಿಟ್ಟದ್ದು ಮತ್ತು ಅಂಗದನನ್ನು ರಾವಣನ ಸಭೆಗೆ ದೂತನಾಗಿ ಕಳುಹಿಸಿದುದು (ವನ 283/51–54). ಅಂಗದನು ರಾವಣನ ಬಳಿಗೆ ಹೋಗಿ ಶ್ರೀರಾಮನ ಸಂದೇಶ ತಿಳಿಸಿದುದು ಮತ್ತು ಹಿಂತಿರುಗಿ ಶ್ರೀರಾಮನಿಗೆ ಅಲ್ಲಿರುವ ಎಲ್ಲಾ ವಿಚಾರಗಳನ್ನು ಹೇಳಿ, ರಾಮನಿಂದ ಪ್ರಶಂಸೆಗೊಳಗಾದುದು (ವನ 284/1–22). ಇವನಿಂದ ನಿಶಾಚರರ ಸಂಹಾರ (ವನ 284/39). ಶ್ರೀರಾಮ ಮತ್ತು ರಾವಣನ ಸೇನೆಗಳ ದ್ವಂದ್ವ ಯುದ್ಧ (ವನ 285). ಇಂದ್ರಜಿತುವಿನ ಮಾಯಾಯುದ್ಧದಲ್ಲಿ ಲಕ್ಷ್ಮಣಸಹಿತನಾಗಿ ಶ್ರೀರಾಮನ ಮೂರ್ಛೆ (ವನ 288). ಇವನು ಎಚ್ಚರಗೊಂಡು, ಕುಬೇರನಿಂದ ಕಳುಹಿಸಲ್ಪಟ್ಟ, ಅಭಿಮಂತ್ರಿತ ಜಲದಿಂದ, ಪ್ರಮುಖ ವಾನರರ ಸಹಿತ ತಾನೂ ಕಣ್ಣನ್ನು ತೊಳೆದುದು (ವನ 289/1–14). ಶ್ರೀರಾಮ ಮತ್ತು ರಾವಣನ ಯುದ್ಧ ಮತ್ತು ಇವನಿಂದ ರಾವಣ ವಧೆ (ವನ 290). ಸೀತೆಯ ಕುರಿತಾಗಿ ಶ್ರೀರಾಮನ ಸಂದೇಹ, ಇವನ ಬಳಿಗೆ ಬ್ರಹ್ಮ, ಇಂದ್ರ, ಅಗ್ನಿ, ವಾಯು, ವರುಣ, ಕುಬೇರ, ಸಪ್ತರ್ಷಿಗಣ ಮತ್ತು ಸ್ವರ್ಗೀಯ ರಾಜಾ ದಶರಥನ ಆಗಮನ,

ಸೀತೆಯು ಇವನ ಮುಂದೆ ತನ್ನ ಶುದ್ಧಚಾರಿತ್ರ್ಯದ ಬಗ್ಗೆ ಶಪಥ ಮಾಡಿದುದು, ವಾಯು, ಅಗ್ನಿ ಮೊದಲಾದ ದೇವತೆಗಳು, ಇವನ ಮುಂದೆ ಸೀತೆಯ ಶುದ್ಧತೆಯನ್ನು ಸಮರ್ಥಿಸಿದುದು, ದಶ ರಥನು ಇವನಿಗೆ ಅಯೋಧ್ಯೆಗೆ ಹೋಗಿ ರಾಜ್ಯ ಶಾಸನ ಮಾಡುವಂತೆ ಆಜ್ಞೆಯನ್ನಿತ್ತದ್ದು, ಶ್ರೀರಾಮನು ದೇವತೆಗಳಿಗೆ ನಮಸ್ಕಾರ ಮಾಡಿ, ತನ್ನ ಪತ್ನಿ ಸೀತೆಯನ್ನು ಕೂಡಿಕೊಂಡದ್ದು, ಅವಿಂಧ್ಯನಿಗೆ ವರದಾನ, ತ್ರಿಜಟೆಗೆ ಧನ ಹಾಗೂ ಸಮ್ಮಾನ ನೀಡಿ ಸಂತುಷ್ಟಗೊಳಿಸಿದುದು (ವನ 291/1–41). ಬ್ರಹ್ಮನಿಂದ ಕೊಡಲ್ಪಟ್ಟ ವರದಿಂದ ಶ್ರೀರಾಮನು ಸತ್ತ ವಾನರರನ್ನು ಬದುಕಿಸಿದುದು, ಮಾತಲಿಯು ಈತನಿಗೆ ವರವನ್ನಿತ್ತದ್ದು, ಶ್ರೀರಾಮನು ಪುಷ್ಪಕವಿಮಾನದ ಮೂಲಕ, ಸೇನಾಸಹಿತನಾಗಿ, ಕಿಷ್ಕಂಧೆಗೆ ಬಂದು ಸುಗ್ರೀವ ನಿಗೆ ರಾಜ್ಯಾಭಿಷೇಕ ಮಾಡಿ, ಅಂಗದನನ್ನು ಯುವರಾಜ ಪದವಿಯಲ್ಲಿ ಪ್ರತಿಷ್ಠಾಪಿಸಿದುದು. ಅಯೋಧ್ಯೆಗೆ ಹಿಂತಿರುಗಿ ಭರತನನ್ನು ಭೇಟಿ ಮಾಡಿದುದು; ಮತ್ತು ಪಟ್ಟಾಭಿಷಿಕ್ತನಾದುದು (ವನ 291/42–66). ರಾಜ್ಯಾಭಿಷೇಕದ ಅನಂತರ ಶ್ರೀರಾಮನು ಸುಗ್ರೀವ ಮತ್ತು ವಿಭೀಷಣರನ್ನು ಆದರಪೂರ್ವಕ ಬೀಳ್ಕೊಟ್ಟದ್ದು; ಪುಷ್ಪಕವಿಮಾನ ವನ್ನು ಕುಬೇರನಿಗೆ ಹಿಂತಿರುಗಿಸಿದುದು; ಗೋಮತಿಯ ದಡದಲ್ಲಿ (ನೈಮಿಷಾರಣ್ಯದಲ್ಲಿ). ಹತ್ತು ಅಶ್ವಮೇಧಯಜ್ಞಗಳನ್ನು ಸಾಂಗಗೊಳಿಸಿ ದುದು (ವನ 291/67–70). ಸೃಂಜಯನನ್ನು ಸಂತೈಸುತ್ತಿದ್ದ ನಾರದನು ಇವನ ಚರಿತ್ರೆಯನ್ನು ವರ್ಣಿಸಿದುದು (ದ್ರೋಣ 59). ಶ್ರೀಕೃಷ್ಣನಿಂದ ಇವನ ರಾಜ್ಯ ಇತ್ಯಾದಿಗಳ ವರ್ಣನೆ (ಶಾಂತಿ 29/51–62). ಗೋದಾನ ಮಹಿಮೆಯ ಪ್ರಸಂಗ ದಲ್ಲಿ ಇವನ ಹೆಸರು ಉಲ್ಲೇಖಿಸಲ್ಪಟ್ಟಿದೆ (ಅನು 76/26). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/64). ಇವನ ಯಜ್ಞದಲ್ಲಿ ಧನ ದಾನದ ವರ್ಣನೆ (ಅನು 137/14). ಮಹಾ ಭಾರತದಲ್ಲಿ ಬಂದಿರುವ ರಾಮನ ಹೆಸರುಗಳು– ಅಯೋಧ್ಯಾಧಿಪತಿ, ದಶರಥಪುತ್ರ, ದಶರಥಾತ್ಮಜ, ದಾಶರಥಿ, ಇಕ್ಷ್ವಾಕುನಂದನ, ಕಾಕುತ್ಸ್ಥ, ಕೌಸಲಾ ನಂದವರ್ಧನ, ಕೌಸಲ್ಯಾಮಾತಃ, ಕೋಸಲೇಂದ್ರ, ಲಕ್ಷಣಾಗ್ರಜ, ರಾಘವ ಇತ್ಯಾದಿ.

**ರಾಮಕ** – ಒಂದು ಪರ್ವತ. ಇದನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ತನ್ನ ಅಧಿಕಾರದೊಳಗೆ ತಂದಿದ್ದನು (ಸಭಾ 31/68).

**ರಾಮಠ** – ಪಶ್ಚಿಮ ದಿಕ್ಕಿನಲ್ಲಿ ವಾಸಮಾಡುವ ಒಂದು ಮ್ಲೇಚ್ಛ ಜಾತಿ, ಪಶ್ಚಿಮ ದಿಗ್ವಿಜಯ ಕಾಲದಲ್ಲಿ ನಕುಲನು ಆಜ್ಞಾಮಾತ್ರದಿಂದಲೇ ಇವರನ್ನು ತನ್ನ ಅಧೀನಕ್ಕೆ ತಂದಿದ್ದನು (ಸಭಾ 132/12). ಈ ಜಾತಿಯ ಜನರು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕರೆಸಲ್ಪಟ್ಟಿದ್ದರು. ಇವರ ವರ್ಣನೆ (ವನ 51/25).

**ರಾಮಣೀಯಕ** – ಒಂದು ದ್ವೀಪ. ಇದು ನಾಗಗಳ ನಿವಾಸಸ್ಥಾನ (ಆದಿ 26/8). ಇಲ್ಲಿರುವ ಕಾಡು ಇತ್ಯಾದಿಗಳ ವಿಶೇಷ ವರ್ಣನೆ (ಆದಿ 27/1–9).

**ರಾಮತೀರ್ಥ** – (1) ಗೋಮತೀ ನದಿಯ ಒಂದು ತೀರ್ಥ. ಇಲ್ಲಿ ಸ್ನಾನಮಾಡಿ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ ಮತ್ತು ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ (ವನ 84/73).

(2) ಪರಶುರಾಮ ಸೇವಿತವಾದ ಮಹೇಂದ್ರ ಪರ್ವತದ ಮೇಲಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡಿದರೆ ಅಶ್ವಮೇಧ ಯಜ್ಞದ ಫಲ ಸಿಗುತ್ತದೆ (ವನ 85/17).

(3) ಸರಸ್ವತೀ ತಟದ ಒಂದು ತೀರ್ಥ. ಇದರ ವಿಶೇಷ ವರ್ಣನೆ (ಶಲ್ಯ 49/7–11).

**ರಾಮಹ್ರದ** – ಕುರುಕ್ಷೇತ್ರದ ಗಡಿಯನ್ನು ನಿರ್ಧರಿಸುವ ಒಂದು ಮಡು (ಶಲ್ಯ 53/24). ಇಲ್ಲಿ ಕಾಶೀರಾಜಕುಮಾರಿ ಅಂಬೆ ಸ್ನಾನ ಮಾಡಿದ್ದಳು (ಉದ್ಯೋಗ 186/28).

**ರಾಮೋಪಾಖ್ಯಾನಪರ್ವ**– ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 273 ರಿಂದ 292).

**ರಾವಣ** – ಒಬ್ಬ ರಾಕ್ಷಸ ರಾಜ. ಇವನು ಅತ್ಯಂತ ದುರಾತ್ಮನಾಗಿದ್ದನು. ಈತ ಸೀತಾದೇವಿ ಯನ್ನು ಅಪಹರಿಸಿದ್ದನು (ವನ 147/33–34). ಇವನು ವಿಶ್ರವಸನ ಪುತ್ರ. ಇವನ ತಾಯಿಯ ಹೆಸರು ಪುಷ್ಪೋತ್ಕಟೆ. ಇವನ ತಮ್ಮ ಕುಂಭಕರ್ಣ (ವನ 275/7). ಇವನ ಅದ್ಭುತ ತಪಸ್ಸು ಮತ್ತು ಬ್ರಹ್ಮನಲ್ಲಿ ವರ ಬೇಡಿದುದು (ವನ 275/16–

25). ಇವನಿಗೆ ಕುಬೇರನ ಶಾಪ (ವನ 275/34–35). ಮಾರೀಚನ ಬಳಿಗೆ ಹೋಗಿ ಅವನ ಕಪಟಮೃಗವಾಗುವಂತೆ ನಿರ್ಬಂಧಿಸಿದುದು (ವನ 278/9). ಇವನ ಮೂಲಕ ಸೀತೆಯ ಅಪಹಾರ (ವನ 278/43). ಇವನಿಂದ ಜಟಾಯುವಿನ ರೆಕ್ಕೆಗಳು ಕಡಿಯಲ್ಪಟ್ಟದ್ದು (ವನ 279/6). ಇವನಿಗೆ ನಲಕೂಬರನ ಶಾಪದ ವರ್ಣನೆ (ವನ 280/57–61). ಇವನು ಸೀತೆಯೊಡನೆ ತನಗೆ ಅನುಕೂಲವಾಗುವಂತೆ ಹೇಳಿದುದು (ವನ 281). ಅಂಗದನು ರಾವಣನಿಗೆ ಶ್ರೀರಾಮನ ಸಂದೇಶ ತಿಳಿಸಿದುದು (ವನ 284/10–16). ಇವನು ಕುಂಭಕರ್ಣನನ್ನು ಯುದ್ಧಕ್ಕಾಗಿ ಎಬ್ಬಿಸಿದುದು (ವನ 286/20). ಇಂದ್ರಜಿತುವನ್ನು ಯುದ್ಧಕ್ಕೆ ಕಳುಹಿಸಿದುದು (ವನ 288/2). ಸೀತೆಯನ್ನು ಕೊಂದುಹಾಕಲು ಸಿದ್ಧನಾದುದು (ವನ 289/27). ಶ್ರೀರಾಮನಿಂದ ಇವನ ವಧೆ (ವನ 290/30). ಮಹಾಭಾರತ ದಲ್ಲಿ ಬಂದಿರುವ ರಾವಣನ ಹೆಸರುಗಳು– ದಶಗ್ರೀವ, ದಶಕಂಧರ, ದಶಾನನ, ದಶಾಸ್ಯ, ಪೌಲಸ್ತ್ಯ, ಪೌಲಸ್ತ್ಯತನಯ, ರಕ್ಷಃಪತಿ, ರಕ್ಷಃ, ರಾಕ್ಷಸ, ರಾಕ್ಷಸಾಧಿಪ, ರಾಕ್ಷಸಾಧಿಪತಿ, ರಾಕ್ಷಸ ಶ್ರೇಷ್ಠ, ರಾಕ್ಷಸಮಹೇಶ್ವರ, ರಾಕ್ಷಸಪತಿ, ರಾಕ್ಷಸ ಪುಂಗವ, ರಾಕ್ಷಸರಾಜ, ರಾಕ್ಷಸೇಶ್ವರ, ರಾಕ್ಷಸೇಂದ್ರ ಇತ್ಯಾದಿ.

**ರಾಹು** – ಕಶ್ಯಪನ ಮೂಲಕ ಸಿಂಹಿಕೆಯ ಗರ್ಭ ದಿಂದ ಹುಟ್ಟಿದವನು (ಆದಿ 65/31). ಕಪಟ ದಿಂದ ಈತನ ಅಮೃತಪಾನ ಮತ್ತು ಭಗವಾನ್ ವಿಷ್ಣುವಿನಿಂದ ಇವನ ಶಿರಚ್ಛೇದನ (ಆದಿ 19/4–6). ಚಂದ್ರ ಮತ್ತು ಸೂರ್ಯರಲ್ಲಿ ಇವನ ವೈರ (ಆದಿ 19/9). ಬ್ರಹ್ಮನ ಸಭೆಯಲ್ಲಿ ಕುಳಿತು ಕೊಳ್ಳುವ ಗ್ರಹಗಳ ಜೊತೆಯಲ್ಲಿ ಇವನ ಹೆಸರೂ ಬಂದಿದೆ (ಸಭಾ 11/29). ಧೃತರಾಷ್ಟ್ರನಲ್ಲಿ ಸಂಜಯನ ಮೂಲಕ ಇವನ ವಿಶೇಷ ವರ್ಣನೆ (ಭೀಷ್ಮ 12/40–43).

**ರುಕ್ಮರಥ** – (1) ಮದ್ರರಾಜ ಶಲ್ಯನ ಮಗ. ಇವನು ತನ್ನ ತಂದೆ ಮತ್ತು ಸಹೋದರ ರುಕ್ಮಾಂಗದನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/14). ಶ್ವೇತನೊಂದಿಗೆ ಈತನ ಯುದ್ಧ ಮತ್ತು ಆತನ ಬಾಣಗಳಿಂದ ಮೂರ್ಛಿತನಾದುದು (ಭೀಷ್ಮ 47/48–59). ಅಭಿಮನ್ಯುವಿನೊಂದಿಗೆ ಈತನ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 45/9–13). ಸಹದೇವನಿಂದ ಇವನ ಮರಣದ ವರ್ಣನೆ (ಕರ್ಣ 5/26).

(2) ಸ್ವರ್ಣಮಯ ರಥದಲ್ಲಿ ಸಂಚರಿಸುವ ಕಾರಣ ದ್ರೋಣಾಚಾರ್ಯನಿಗೆ ರುಕ್ಮರಥನೆಂಬ ಹೆಸರೂ ಇತ್ತು (ವಿರಾಟ 58/2).

(3) ಕೌರವ ಪಕ್ಷದಲ್ಲಿದ್ದ ತ್ರಿಗರ್ತ ದೇಶದ ರಾಜಕುಮಾರರ ಒಂದು ಗುಂಪಿನ ಹೆಸರು. ಈ ದಳ ಕರ್ಣನ ಆಜ್ಞಾನುಸಾರವಾಗಿ ಅರ್ಜುನನ ಮೇಲೆ ಆಕ್ರಮಣ ಮಾಡಿತ್ತು (ದ್ರೋಣ 112/19–25).

**ರುಕ್ಮಾಂಗದ** – ಮಹಾರಾಜ ಶಲ್ಯನ ಪುತ್ರ. ಇವನು ತನ್ನ ತಂದೆ ಮತ್ತು ಸಹೋದರ ರುಕ್ಮರಥನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/14).

**ರುಕ್ಮಿಣೀ** – ನಾರಾಯಣ ಸ್ವರೂಪನಾದ ಶ್ರೀಕೃಷ್ಣ ನಿಗೆ ಆನಂದ ಪ್ರದಾನಮಾಡಲು, ಈ ಭೂಮಿ ಯಲ್ಲಿ ವಿದರ್ಭರಾಜ ಭೀಷ್ಮಕನ ಕುಲದಲ್ಲಿ ಹುಟ್ಟಿದ ಲಕ್ಷ್ಮಿ (ಆದಿ 67/156). ಶಿಶುಪಾಲನು ಈಕೆಯನ್ನು ಬಯಸುತ್ತಿದ್ದನು. ಆದರೆ ಅವನಿಂದ ಪಡೆಯಲಾಗಲಿಲ್ಲ (ಸಭಾ 45/15). ಈಕೆ ಲಕ್ಷ್ಮಿ ಯೊಂದಿಗೆ ಆಕೆಯ ನಿವಾಸಯೋಗ್ಯಸ್ಥಾನದ ಕುರಿತು ಕೇಳಿದುದು (ಅನು 11/4). ಇವಳ ಪುತ್ರರ ಹೆಸರು– ಚಾರುದೇಷ್ಣ, ಸುಚಾರು, ಚಾರು ವೇಶ, ಯಶೋಧರ, ಚಾರುಶ್ರವಾ, ಚಾರುಯಶಾ, ಪ್ರದ್ಯುಮ್ನ, ಶಂಭು (ಅನು 14/33–34). ಮಹರ್ಷಿ ದುರ್ವಾಸನು ಈಕೆಯನ್ನು ರಥಕ್ಕೆ ಹೂಡಿದುದು (ಅನು 159/28–35). ಪ್ರಸನ್ನ ನಾದ ದುರ್ವಾಸನಿಂದ ಈಕೆಗೆ ವರಪ್ರಾಪ್ತಿ (ಅನು 159/45–47). ಶ್ರೀಕೃಷ್ಣ ರಹಿತವಾದ ದ್ವಾರಕೆ ಮತ್ತು ಶ್ರೀಕೃಷ್ಣ ಪತ್ನಿಯರನ್ನು ನೋಡಿ, ಬಿಕ್ಕಿಬಿಕ್ಕಿ ಅಳುತ್ತಿದ್ದ ಅರ್ಜುನ ಮೂರ್ಛಿತನಾಗಿ ನೆಲದ ಮೇಲೆ ಬಿದ್ದಾಗ, ರುಕ್ಮಿಣಿಯೇ ಮೊದಲಾದ ರಾಣಿಯರು ಅಲ್ಲಿಗೆ ಓಡಿ ಬಂದರು. ಅರ್ಜುನ ನನ್ನು ಸುತ್ತುವರಿದು ದೊಡ್ಡ ಸ್ವರದಲ್ಲಿ ವಿಲಪಿಸ ತೊಡಗಿದರು. ಅವರು ಅರ್ಜುನನನ್ನು ಎತ್ತಿ, ಚಿನ್ನದ ಮಣೆಯ ಮೇಲೆ ಕುಳ್ಳಿರಿಸಿದರು.

ಅವನನ್ನು ಸುತ್ತುವರಿದು, ಅವರು ಸುಮ್ಮನೆ ಕುಳಿತುಬಿಟ್ಟರು (ಮೌಸಲ 5/12–14). ರುಕ್ಮಿಣಿ ಪತಿಲೋಕ ಪ್ರಾಪ್ತಿಗಾಗಿ ಅಗ್ನಿಪ್ರವೇಶ ಮಾಡಿದಳು (ಮೌಸಲ 7/73). ಮಹಾಬಾಹು ವಿಶ್ವಕರ್ಮನು ಇಂದ್ರನ ಪ್ರೇರಣೆಯಿಂದ, ಭಗವಾನ್ ಪದ್ಮನಾಭನಿಗಾಗಿ ನಿರ್ಮಿಸಿದ ಮನೋಹರವಾದ ಪ್ರಾಸಾದದ ವಿಸ್ತಾರ, ಎಲ್ಲಾ ಬದಿಗಳಿಂದ ಒಂದೊಂದು ಯೋಜನದಷ್ಟಿತ್ತು. ಅದರ ಎತ್ತರವಾದ ಶಿಖರದ ಮೇಲೆ ಚಿನ್ನ ಹೊದಿಸಲ್ಪಟ್ಟಿತ್ತು. ಇದರಿಂದಾಗಿ ಅದು ಮೇರು ಪರ್ವತದ ಎತ್ತರವಾದ ಶೃಂಗದ ಶೋಭೆಯನ್ನು ಧರಿಸಿದೆ. ಮಹಾತ್ಮಾ ವಿಶ್ವಕರ್ಮನು ಆ ಪ್ರಾಸಾದವನ್ನು ಮಹಾರಾಣಿ ರುಕ್ಮಿಣಿಗೋಸ್ಕರ ರಚಿಸಿದ್ದನು. ಇದು ಈಕೆಯ ಸರ್ವೋತ್ತಮ ನಿವಾಸವಾಗಿತ್ತು (ಸಭಾ 38/28).

**ರುಕ್ಮೀ** – ಒಬ್ಬ ಶ್ರೇಷ್ಠ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/62). (ಇವನು ವಿದರ್ಭ ದೇಶದ ಭೋಜಕಟ ನಗರದ ರಾಜ, ಭೀಷ್ಮಕನ ಪುತ್ರ ಮತ್ತು ರುಕ್ಮಣಿಯ ಸಹೋದರನಾಗಿದ್ದನು.) ಇವನು ಭೋಜಕಟದ ನಿವಾಸಿಯಾಗಿದ್ದನು. ಸಹದೇವನ ದಿಗ್ವಿಜಯ ಕಾಲದಲ್ಲಿ, ಇವನು ಪ್ರೀತಿಪೂರ್ವಕ ಆತನ ಶಾಸನವನ್ನು ಸ್ವೀಕರಿಸಿದ್ದನು (ಸಭಾ 31/62–63). ಕರ್ಣನ ದಿಗ್ವಿಜಯ ಕಾಲದಲ್ಲಿ ಇವನು ಕಪ್ಪವನ್ನೊಪ್ಪಿಸಿದುದು (ವನ 254/14). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿರ್ಧಾರ ಮಾಡಲ್ಪಟ್ಟಿತ್ತು (ಉದ್ಯೋಗ 4/16). ಇವನ ತಂದೆ ದಾಕ್ಷಿಣಾತ್ಯ ದೇಶದ ಅಧಿಪತಿ ಮತ್ತು ಸಾಕ್ಷಾತ್ ಇಂದ್ರನ ಸಖನಾದ ಮಹಾಮಾನ್ಯ ಭೀಷ್ಮಕನಾಗಿದ್ದನು. ಈತನಿಗೆ ಹಿರಣ್ಯರೋಮಾ ಎಂಬ ಹೆಸರೂ ಇತ್ತು. ರುಕ್ಮಿ ಎಲ್ಲಾ ದಿಕ್ಕುಗಳಲ್ಲೂ ವಿಖ್ಯಾತನಾಗಿದ್ದನು. ಇವನು ಗಂಧಮಾದನವಾಸಿಯಾಗಿದ್ದ, ಕಿಂಪುರುಷ ಪ್ರವರನಾದ ದ್ರುಮನ ಶಿಷ್ಯನಾಗಿ, ನಾಲ್ಕು ಪಾದಗಳಿಂದ ಕೂಡಿದ ಸಂಪೂರ್ಣ ಧನುರ್ವೇದದ ಶಿಕ್ಷಣ ಪಡೆದಿದ್ದನು. ಇವನಿಗೆ ಇಂದ್ರದೇವತೆಯ ತೇಜಸ್ವಿಯಾದ ವಿಜಯವೆಂಬ ಹೆಸರಿನ ಧನುಸ್ಸು ಪ್ರಾಪ್ತವಾಗಿತ್ತು. ಅದು ಶಾರ್ಙ್ಗ ಮತ್ತು ಗಾಂಡೀವ ಧನುಸ್ಸಿಗೆ ಸಮಾನವಾಗಿ ತೇಜಃಪೂರ್ಣವಾಗಿತ್ತು. ಈ ಧನುಸ್ಸು ಇವನಿಗೆ ತನ್ನ ಗುರುವಾದ ದ್ರುಮನಿಂದಲೇ ಪ್ರಾಪ್ತವಾಗಿತ್ತು. ಇವನು ಹಿಂದೆ ಶ್ರೀಕೃಷ್ಣನಿಂದ ತನ್ನ ಸಹೋದರಿ ರುಕ್ಮಿಣಿಯ ಅಪಹರಣವನ್ನು ಸಹಿಸಲಾರದೆ, ತಾನು ಶ್ರೀಕೃಷ್ಣನನ್ನು ಕೊಲ್ಲದೆ ತನ್ನ ನಗರಕ್ಕೆ ಹಿಂತಿರುಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ಆದರೆ ಶ್ರೀಕೃಷ್ಣನ ಮುಂದೆ ಹೋಗಿ ಇವನು ಪರಾಜಿತನಾದನು. ಆದುದರಿಂದ ನಾಚಿಕೆಪಟ್ಟು ಪುನಃ ಕುಂಡಿನಾಪುರಕ್ಕೆ ಹಿಂತಿರುಗಲಿಲ್ಲ. ಅವನು ಪರಾಜಯ ಹೊಂದಿದ ಸ್ಥಳದಲ್ಲಿಯೇ ಭೋಜಕಟವೆಂಬ ನಗರವನ್ನು ಸ್ಥಾಪಿಸಿದನು ಮತ್ತು ಅಲ್ಲಿಯೇ ತನ್ನ ಸಮಸ್ತ ಪರಿವಾರದೊಂದಿಗೆ ವಾಸಿಸತೊಡಗಿದನು (ಉದ್ಯೋಗ 158/1–16). ಇವನು ಒಂದು ಅಕ್ಷೌಹಿಣೀ ಸೈನ್ಯದಿಂದ ಪರಿವೇಷ್ಟಿತನಾಗಿ ಪಾಂಡವರ ಬಳಿಗೆ ಬಂದನು. ಇವನ ಮನಸ್ಸಿನಲ್ಲಿ ಶ್ರೀಕೃಷ್ಣನಿಗೆ ಪ್ರಿಯವಾದುದನ್ನು ಮಾಡುವ ಇಚ್ಛೆ ಇತ್ತು. ಪಾಂಡವರಿಗೆ ಈ ಸೂಚನೆ ಸಿಕ್ಕಿತು. ಯುಧಿಷ್ಠಿರನು ಮುಂದೆ ಹೋಗಿ ಇವನನ್ನು ಸ್ವಾಗತಿಸಿದನು. ಆದರ ಸತ್ಕಾರದ ಅನಂತರ ಇವನು ವಿಶ್ರಾಂತಿ ಪಡೆದನು. ಅನಂತರ ಅರ್ಜುನನೊಡನೆ ಹೇಳಿದನು. 'ನೀನು ಭಯಪಟ್ಟಿರುವೆಯಾದರೆ, ನಾನು ನಿನ್ನ ಸಹಾಯಕ್ಕಾಗಿ ಬಂದಿದ್ದೇನೆ.' ಅರ್ಜುನನು ನಗುತ್ತಾ ಇವನ ಸಹಾಯ ಸ್ವೀಕರಿಸಲು ನಿರಾಕರಿಸಿದನು. ಆಗ ಇವನು ದುರ್ಯೋಧನನ ಬಳಿಗೆ ಹೋಗಿ ಅಲ್ಲಿಯೂ ಇದೇ ಮಾತನ್ನು ಹೇಳಿದನು. ವೀರರನ್ನು ಗೌರವಿಸುವ ದುರ್ಯೋಧನನು ಇವನ ಸಹಾಯವನ್ನು ತಿರಸ್ಕರಿಸಿದನು. ಅನಂತರ ಇವನು ಕ್ಷೇಮವಾಗಿ ತನ್ನ ಮನೆಗೆ ಹಿಂತಿರುಗಿದನು (ಉದ್ಯೋಗ 158/17–39). ಇವನು ಕಲಿಂಗರಾಜ ಚಿತ್ರಾಂಗದನ ಮಗಳ ಸ್ವಯಂವರಕ್ಕೆ ಹೋಗಿದ್ದನು (ಶಾಂತಿ 4/7).

**ರುಚಿ** – (1) ಅಲಕಾಪುರದ ಒಬ್ಬ ಅಪ್ಸರೆ. ಈಕೆ ಅಷ್ಟಾವಕ್ರನ ಸ್ವಾಗತ ಸಂದರ್ಭದಲ್ಲಿ ಕುಬೇರನ ಅರಮನೆಯಲ್ಲಿ ನೃತ್ಯಮಾಡಿದ್ದಳು (ಅನು 19/44). (2) ಮಹರ್ಷಿ ದೇವಶರ್ಮನ ಪತ್ನಿ. ಈಕೆ ಅನುಪಮ ಸುಂದರಿಯಾಗಿದ್ದಳು. ಇಂದ್ರನು ಈಕೆಯಲ್ಲಿ ಆಸಕ್ತನಾಗಿದ್ದನು (ಅನು 40/17–18).

ಇವಳ ರಕ್ಷಣೆಯ ಹೊಣೆಯನ್ನು ತನ್ನ ಶಿಷ್ಯ ವಿಪುಲನಿಗೆ ಒಪ್ಪಿಸಿ, ದೇವಶರ್ಮನು ಯಜ್ಞಕ್ಕೋಸ್ಕರ ಹೊರಗೆ ಹೋದನು (ಅನು 40/21–41). ವಿಪುಲನು ಯೋಗಾಭ್ಯಾಸದ ಮೂಲಕ ರುಚಿಯ ಶರೀರವನ್ನು ಪ್ರವೇಶಿಸಿದುದು (ಅನು 40/58–60). ಕಾಮಾಸಕ್ತನಾದ ಇಂದ್ರನು ರುಚಿಯ ಬಳಿಗೆ ಆಗಮಿಸಿದುದು ಮತ್ತು ತನ್ನ ಪರಿಚಯ ಹೇಳಿದುದು (ಅನು 41/2–8). ವಿಪುಲನು ಇಂದ್ರನಿಂದ ರುಚಿಯನ್ನು ರಕ್ಷಿಸಿದುದು. ದೇವಶರ್ಮನು ಹಿಂತಿರುಗಿದಾಗ ರುಚಿಯನ್ನು ಆತನಿಗೊಪ್ಪಿಸಿದುದು (ಅನು 41/27–29). ಈಕೆ ಅಂಗರಾಜನ ಪತ್ನಿಯಾದ, ತನ್ನ ಸಹೋದರಿ ಪ್ರಭಾವತಿಯ ಮನೆಗೆ ಹೋಗುವಾಗ, ಯಾವಳೋ ದೇವಸುಂದರಿಯ ವೇಣಿಯಿಂದ, ಮಾರ್ಗದಲ್ಲಿ ಬಿದ್ದಿದ್ದ ಪರಿಮಳಯುಕ್ತ ಪುಷ್ಪವನ್ನು ತನ್ನ ವೇಣಿಯಲ್ಲಿ ತೊಟ್ಟುಕೊಂಡು ಹೋದುದು; ಆ ಪುಷ್ಪವನ್ನು ನೋಡಿ ಪ್ರಭಾವತಿಯು ಅದೇ ರೀತಿಯ ಹೂವನ್ನು ತರಿಸಿಕೊಡುವಂತೆ ಈಕೆಯನ್ನು ಆಗ್ರಹಿಸಿದುದು (ಅನು 42/5–10). ಈಕೆ ಆಶ್ರಮಕ್ಕೆ ಹಿಂತಿರುಗಿ, ದೇವಶರ್ಮನೊಡನೆ ಅಂತಹ ಪುಷ್ಪ ತರಿಸಿಕೊಡಲು ಒತ್ತಾಯಿಸಿದುದು (ಅನು 42/11). ಪತಿಯೊಂದಿಗೆ ಈಕೆ ಸ್ವರ್ಗಕ್ಕೆ ಹೋದುದು (ಅನು 43/17).

**ರುಚಿಪರ್ವಾ** – ರಾಜಾ ಆಕೃತಿಯ ಪುತ್ರ. ಇವನು ಭೀಮಸೇನನ ರಕ್ಷಣೆಗಾಗಿ ಭಗದತ್ತನ ಆನೆಯ ಮೇಲೆ ಆಕ್ರಮಣಮಾಡಿದನು ಮತ್ತು ಭಗದತ್ತನಿಂದ ಕೊಲ್ಲಲ್ಪಟ್ಟನು (ದ್ರೋಣ 26/51–53).

**ರುಚಿಪ್ರಭ** – ಒಬ್ಬ ರಾಕ್ಷಸ. ಇವನು ಪ್ರಾಚೀನ ಕಾಲದಲ್ಲಿ ಈ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಇದನ್ನು ಬಿಟ್ಟು ಪರಲೋಕವಾಸಿಯಾದನು (ಶಾಂತಿ 227/52).

**ರುದ್ರ** – ಮಹಾದೇವನ ಒಂದು ಹೆಸರು (ಉದ್ಯೋಗ 117/10). (ವಿಶೇಷ ನೋಡಿರಿ ಶಿವ).

**ರುದ್ರಕೋಟಿ** – ಶಿವನ ದರ್ಶನಕ್ಕಾಗಿ ಕೋಟ್ಯಂತರ ಮುನಿಗಳು ಏಕತ್ರಿತರಾದ ಸ್ಥಳ. ಇಲ್ಲಿ ಶಿವನು ಅವರಲ್ಲಿ ಪ್ರಸನ್ನನಾಗಿ ಕೋಟ್ಯಂತರ ಶಿವಲಿಂಗಗಳ ರೂಪದಲ್ಲಿ ದರ್ಶನವನ್ನಿತ್ತಿದ್ದನು. ಇಲ್ಲಿ ಸ್ನಾನ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ದೊರಕುತ್ತದೆ. ಮತ್ತು ಕುಲದ ಉದ್ಧಾರವಾಗುತ್ತದೆ (ವನ 82/118–124; ವನ 83/77).

**ರುದ್ರಪದ** – ಒಂದು ತೀರ್ಥ. ಇಲ್ಲಿಗೆ ಹೋಗಿ ಒಂದು ಹಗಲುರಾತ್ರಿ ಉಪವಾಸವಿದ್ದ ಯಾತ್ರಿಕನು ಇಂದ್ರಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 83/181–182).

**ರುದ್ರರೋಮಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/7).

**ರುದ್ರಸೂನು** – ಕಾರ್ತಿಕೇಯನ ಒಂದು ಹೆಸರು ಮತ್ತು ಈ ಹೆಸರಿನ ಅರ್ಥ (ವನ 229/27).

**ರುದ್ರಸೇನ** – ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕನಾದ ಒಬ್ಬ ರಾಜ (ದ್ರೋಣ 158/39).

**ರುದ್ರಾಣೀ** – ಪಾರ್ವತೀದೇವಿಯ ಒಂದು ಹೆಸರು (ಉದ್ಯೋಗ 117/10) (ವಿಶೇಷ ನೋಡಿರಿ– ಪಾರ್ವತೀ).

**ರುದ್ರಾಣೀರುದ್ರ** – ಒಂದು ತೀರ್ಥ. ಇಲ್ಲಿಗೆ ಉತ್ತರ ದಿಕ್ಕಿಗೆ ಹೋಗುತ್ತಿದ್ದ ಅಷ್ಟಾವಕ್ರಮುನಿ ಆಗಮಿಸಿದ್ದನು (ಅನು 19/31).

**ರುದ್ರಾವರ್ತ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಸ್ವರ್ಗಲೋಕ ಪ್ರಾಪ್ತಿಯಾಗುತ್ತದೆ (ವನ 84/37).

**ರುಮಣ್ವಾನ್ (ರುಮಣ್ವಂತ)** – ಜಮದಗ್ನಿಯಿಂದ ರೇಣುಕೆಯ ಗರ್ಭದಲ್ಲಿ ಹುಟ್ಟಿದ ಜ್ಯೇಷ್ಠಪುತ್ರ. ಇವನಿಗೆ ನಾಲ್ಕು ಮಂದಿ ಸಹೋದರರಿದ್ದರು. ಅವರ ಹೆಸರು – ಸುಷೇಣ, ವಸು, ವಿಶ್ವಾವಸು ಮತ್ತು ಪರಶುರಾಮ. ತಾಯಿಯನ್ನು ವಧಿಸುವಂತೆ ಇವರಿಗೆ ತಂದೆ ಆಜ್ಞೆ ನೀಡಿದ್ದನು. ಆದರೆ ಇವರು ಆಜ್ಞೆಯನ್ನು ಪಾಲಿಸಲಿಲ್ಲ. ಇದರಿಂದ ಕುಪಿತನಾದ ಮಹರ್ಷಿ ಜಮದಗ್ನಿಯು ಇವರಿಗೆ ಶಾಪಕೊಟ್ಟನು. ಶಾಪದಿಂದಾಗ ಇವರು ಮೃಗ ಪಕ್ಷಿಗಳಂತೆ ಜಡಬುದ್ಧಿಯವರಾದರು (ವನ 116/10–12). ಪರಶುರಾಮನು ತಂದೆಯನ್ನು ಪ್ರಸನ್ನಗೊಳಿಸಿ, ಇವರನ್ನು ಶಾಪಮುಕ್ತರನ್ನಾಗಿಸಿದನು (ವನ 116/17–18).

**ರುರು** – ಒಬ್ಬ ಋಷಿಕುಮಾರ. ಈತ ಮಹರ್ಷಿ ಚ್ಯವನನ ಮೊಮ್ಮಗ ಮತ್ತು ಪ್ರಮತಿಯ ಪುತ್ರನಾಗಿದ್ದನು. ಘೃತಾಚಿಯೆಂಬ ಅಪ್ಸರೆಯ ಗರ್ಭದಿಂದ ಇವನ ಜನ್ಮವಾಗಿತ್ತು (ಆದಿ 5/9; ಅನು

30/64). ಸರ್ಪದಂಶನದಿಂದ ಮರಣ ಹೊಂದಿದ ತನ್ನ ಪ್ರೇಯಸಿ ಪ್ರಮದ್ವರೆಗಾಗಿ ಈತ ವಿಲಪಿಸಿದುದು. ಆಕೆಗೆ ತನ್ನ ಅರ್ಧ ಆಯುಸ್ಸನ್ನಿತ್ತು ಬದುಕಿಸಿದುದು ಮತ್ತು ಆಕೆಯೊಂದಿಗೆ ಈತನ ವಿವಾಹವಾದುದು (ಆದಿ 8/26 ರಿಂದ 9/18ರ ತನಕ). ಸರ್ಪ ಜಾತಿಯೊಡನೆ ಈತನ ದ್ವೇಷ, ಡುಂಢುಭದೊಂದಿಗೆ ಈತನ ಸಂವಾದ, ಮತ್ತು ಇವನಿಗೆ ಡುಂಡುಭನಿಂದ ಅಹಿಂಸೆ ಮತ್ತು ವರ್ಣಧರ್ಮಗಳ ಸಂಕ್ಷಿಪ್ತ ಉಪದೇಶ (ಆದಿ 9/19ರಿಂದ 11 ಅಧ್ಯಾಯದ ಕೊನೆಯ ವರೆಗೆ). ಸರ್ಪಸತ್ರದ ಕುರಿತು ಈತನ ಜಿಜ್ಞಾಸೆ ಮತ್ತು ತಂದೆಯಿಂದ ಅದಕ್ಕೆ ಸಮಾಧಾನ (ಆದಿ 12 ಅಧ್ಯಾಯ).

**ಋಷಂಗು** – ಒಬ್ಬ ಋಷಿ. ಇವನ ಆಶ್ರಮದಲ್ಲಿ ಅರ್ಷ್ಟಿಷೇಣ ಮುನಿ ಘೋರ ತಪಸ್ಸು ಮಾಡಿದ್ದನು ಮತ್ತು ವಿಶ್ವಾಮಿತ್ರನಿಗೆ ಇಲ್ಲಿಯೇ ಬ್ರಾಹ್ಮಣತ್ವ ಪ್ರಾಪ್ತವಾಗಿತ್ತು. ಇವನು ಇಲ್ಲಿ ಹಾಡಿದ ಗಾಥೆಯ ಪರಿಣಾಮವಾಗಿ, ಯಾವನಾದರೂ ಸರಸ್ವತಿಯ ಉತ್ತರ ತಟದಲ್ಲಿ, ಪೃಥೂದಕ ತೀರ್ಥದಲ್ಲಿ ಜಪ ಮಾಡುತ್ತಾ, ಶರೀರವನ್ನು ಪರಿತ್ಯಾಗ ಮಾಡಿದರೆ, ಅವನು ಮರಳಿ ಮೃತ್ಯುವಿನ ಕಷ್ಟವನ್ನು ಅನುಭವಿಸಬೇಕಾಗಿಲ್ಲ (ಶಲ್ಯ 39/24–34).

**ಋಷದ್ರು** – ಒಬ್ಬ ಪ್ರಾಚೀನ ರಾಜ. ಇವನು ಯಮನ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 8/13).

**ಋಷರ್ದ್ಧಿಕ** – ಸುರಾಷ್ಟ್ರವಂಶದ ಒಬ್ಬ ಕುಲಗೇಡಿ ರಾಜ (ಉದ್ಯೋಗ 74/14).

**ರುಹಾ** – ನಾಗಮಾತೆ ಸುರಸೆಯ ಮಗಳು. ಇವಳಿಗೆ ಇಬ್ಬರು ಸಹೋದರಿಯರಿದ್ದಾರೆ. ಅವರ ಹೆಸರು ಅನಲಾ ಮತ್ತು ವೀರುಧಾ. ಯಾರು ವೃಕ್ಷ ಹೂಗಳಿಂದ ಫಲವನ್ನು ಸ್ವೀಕರಿಸುತ್ತಾರೋ, ಅವರೆಲ್ಲ ಈಕೆಯ ಸಂತಾನದವರು (ಆದಿ 66/70).

**ರೂಪವಾಹಿಕ** – ಒಂದು ಭಾರತೀಯ ಜನದಪ (ಭೀಷ್ಮ 9/43).

**ರೂಪಿಣ** – ಇವನು ಸಮ್ರಾಟ. ಅಜಮೀಢನಿಂದ ಕೇಶಿನಿಯ ಗರ್ಭದಲ್ಲಿ ಹುಟ್ಟಿದವನು. ಇವನಿಗೆ ಇಬ್ಬರು ಸಹೋದರರಿದ್ದರು. ಅವರ ಹೆಸರು ಜಹ್ನು ಮತ್ತು ವ್ರಜನ (ಆದಿ 94/32).

**ರೇಣುಕ** – ರಸಾತಲನಿವಾಸಿಯಾದ ಅತ್ಯಂತ ಶಕ್ತಿಶಾಲಿ ಮತ್ತು ಸತ್ವ ಪರಾಕ್ರಮಗಳಿಂದ ಯುಕ್ತನಾದ ಒಬ್ಬ ನಾಗ. ಈತ ದೇವತೆಗಳಿಂದ ಕಳುಹಿಸಲ್ಪಟ್ಟು ದಿಗ್ಗಜಗಳ ಬಳಿಗೆ ಹೋಗಿ ಧರ್ಮದ ವಿಷಯದಲ್ಲಿ ಪ್ರಶ್ನೆ ಮಾಡಿದನು (ಅನು 132/2–6).

**ರೇಣುಕಾ** – (1) ಮುನಿವರ ಜಮದಗ್ನಿಯ ಪತ್ನಿ ಮತ್ತು ಪರಶುರಾಮನ ತಾಯಿ (ವನ 99/42). ಈಕೆಯ ಗರ್ಭದಿಂದ ರುಮಣ್ವಂತ, ಸುಷೇಣ, ವಸು, ವಿಶ್ವಾವಿಸು, ಮತ್ತು ಪರಶುರಾಮರ ಜನ್ಮ (ವನ 116/4). ಈಕೆಯ ಮೇಲೆ ಕುಪಿತನಾದ ಗಂಡನ ಆಜ್ಞೆಯಂತೆ, ಮಗ ಪರಶುರಾಮನ ಮೂಲಕ ಈಕೆಯ ವಧೆ (ವನ 116/14). ಜಮದಗ್ನಿಯ ವರದಿಂದ ಈಕೆಯ ಪುನರುಜ್ಜೀವನ (ವನ 116/17–18). ಮಹರ್ಷಿ ಜಮದಗ್ನಿಯು ಪ್ರಯೋಗಿಸಿದ ಬಾಣಗಳನ್ನು ಈಕೆ ಎತ್ತಿ ಎತ್ತಿ ತಂದದ್ದು (ಅನು 95/7–15). ಒಂದು ಬಾರಿ ತಡವಾದಾಗ, ಹಿಂತಿರುಗಲು ವಿಳಂಬದಾದುದೇಕೆಂದು ಈಕೆ ಪತಿಗೆ ಕಾರಣ ತಿಳಿಸಿದುದು (ಅನು 95/16–17).

(2) ಒಂದು ಸಿದ್ಧಸೇವಿತ ತೀರ್ಥ. ಇದರಲ್ಲಿ ಸ್ನಾನಮಾಡಿದರೆ ಬ್ರಾಹ್ಮಣ ಚಂದ್ರನಂತೆ ನಿರ್ಮಲನಾಗುತ್ತಾನೆ (ವನ 82/82).

(3) ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನಾದಿಗಳನ್ನು ಮಾಡುವುದರಿಂದ ತೀರ್ಥಯಾತ್ರಿಕನು ಎಲ್ಲಾ ಪಾಪಗಳಿಂದ ಮುಕ್ತನಾಗಿ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ (ವನ 83/159–160).

**ರೇವತೀ** – (1) ಬಲರಾಮನ ಪತ್ನಿ (ಆದಿ 218–7).

(2) ಅದಿತಿಯ ಒಂದು ಹೆಸರು (ವನ 230/29).

(3) ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು (ಭೀಷ್ಮ 11/18). ಕಾರ್ತಿಕಮಾಸದ ರೇವತಿ ನಕ್ಷತ್ರದಲ್ಲಿ ಮೈತ್ರವೆಂಬ ಮುಹೂರ್ತ ಬಂದಾಗ ಶ್ರೀಕೃಷ್ಣನು ಯಾತ್ರೆಯನ್ನು ಆರಂಭಿಸಿದನು (ಉದ್ಯೋಗ 83/6–7). ಯಾವಾತನು ರೇವತಿ ನಕ್ಷತ್ರದ ದಿನ ಕಂಚಿನ ದುಗ್ಧಪಾತ್ರೆಯ ಸಮೇತ, ಹಸುವನ್ನು ದಾನಕೊಡುತ್ತಾನೋ, ಆ ಧೇನು ಪರಲೋಕ

ದಲ್ಲಿ ಎಲ್ಲಾ ಭೋಗಗಳನ್ನು ಕೂಡಿಕೊಂಡು, ಆ ದಾತೃವಿನ ಸೇವೆಗಾಗಿ ಉಪಸ್ಥಿತವಾಗುತ್ತದೆ (ಅನು 64/33). ರೇವತಿಯಲ್ಲಿ ಶ್ರಾದ್ಧಮಾಡುವ ಮನುಷ್ಯ ಚಿನ್ನ, ಬೆಳ್ಳಿ, ಮಾತ್ರವಲ್ಲದೆ ಇತರ ನಾನಾ ಪ್ರಕಾರದ ಧನವನ್ನು ಪಡೆಯುತ್ತಾನೆ (ಅನು 89/14). ಚಾಂದ್ರವ್ರತದಲ್ಲಿ ರೇವತಿಯನ್ನು ಚಂದ್ರನ ಕಣ್ಣೆಂದು ಭಾವಿಸಿ, ಆ ಅಂಗವನ್ನು ಪೂಜಿಸುವ ವಿಧಾನವಿದೆ (ಅನು 110/5).

**ರೈಭ್ಯ** – (1) ಯುಧಿಷ್ಠಿರನ ಸಭೆಯಲ್ಲಿದ್ದ ಒಬ್ಬ ಋಷಿ (ಸಭಾ 4/16). ಇವನು ಭರದ್ವಾಜ ಮುನಿಯ ಸಖನಾಗಿದ್ದನು. ಇವನಿಗೆ ಅರ್ವಾವಸು ಮತ್ತು ಪರಾವಸುಗಳೆಂಬ ಇಬ್ಬರು ಮಕ್ಕಳಿದ್ದರು. ಪುತ್ರರೊಂದಿಗೆ ರೈಭ್ಯನೂ ದೊಡ್ಡ ವಿದ್ವಾಂಸನಾಗಿದ್ದನು (ವನ 135/12–14). ಭರದ್ವಾಜನು ಯವಕ್ರೀತನನ್ನು ರೈಭ್ಯ ಮುನಿಯ ಬಳಿಗೆ ಹೋಗದಂತೆ ತಡೆದುದು (ವನ 135/57–58). ಇವನು ಯುವಕ್ರೀತನ ಮೇಲೆ ಕುಪಿತನಾಗಿ, ತನ್ನ ಜಟೆಯ ಆಹುತಿಯ ಮೂಲಕ, ಒಬ್ಬ ಕೃತ್ಯೆ ಮತ್ತು ಒಬ್ಬ ರಾಕ್ಷಸನನ್ನು ಸೃಷ್ಟಿಸಿದುದು ಮತ್ತು ಯುವಕ್ರೀತನನ್ನು ಕೊಲ್ಲುವಂತೆ ಅವರಿಗೆ ಆದೇಶ ನೀಡಿದುದು (ವನ 136/ 8–12). ಇವನು ತನ್ನ ಜ್ಯೇಷ್ಠ ಪುತ್ರನಿಂದ ಕೊಲ್ಲಲ್ಪಡುವಂತೆ ಭರದ್ವಾಜನಿಂದ ಶಾಪ (ವನ 137/15). ಹಿಂಸ್ರಪಶುವೆಂಬ ಭ್ರಾಂತಿಯಿಂದ, ತನ್ನ ಪುತ್ರ ಪರಾವಸುವಿನ ಮೂಲಕ ಈತನ ಮೃತ್ಯು (ವನ 138/6). ತನ್ನ ಎರಡನೆಯ ಮಗ ಅರ್ವಾವಸುವಿನ ಪ್ರಯತ್ನದಿಂದ ಈತನ ಪುನರುಜ್ಜೀವನ (ವನ 138/20–23). ಇವನು ಅಂಗೀರಸನ ಮಗ (ಶಾಂತಿ 208/26–27). ಉಪರಿಚರವಸುವಿನ ಯಜ್ಞದಲ್ಲಿ ಈತ ಸದಸ್ಯನಾದುದು (ಶಾಂತಿ 336/7). ಪ್ರಯಾಣಕಾಲದಲ್ಲಿ, ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/6).

(2) ಒಬ್ಬ ಮುನಿ. ಇವನಿಗೆ ವೀರಣನಿಂದ ಸಾತ್ವತ ಧರ್ಮದ ಉಪದೇಶವಾಗಿತ್ತು. ಇವನು ತನ್ನ ಪುತ್ರ ದಿಕ್ಪಾಲಕುಕ್ಷಿಗೆ ಈ ಧರ್ಮದ ಶಿಕ್ಷಣವನ್ನಿತ್ತನು (ಶಾಂತಿ 348/42–43).

**ರೈವತ** – (1) ರೇವತಿಯ ಗ್ರಹದ ಹೆಸರು (ವನ 230/29).

(2) ಒಬ್ಬ ಪ್ರಾಚೀನ ರಾಜ. ಇವನು ದಕ್ಷಿಣ ದಿಕ್ಕಿನಲ್ಲಿರುವ ಮಂದರಾಚಲದ ಕುಂಜಗಳಲ್ಲಿ, ಗಂಧರ್ವರಿಂದ ಹಾಡಲ್ಪಡುವ ಗಾಥೆಗಳ ರೂಪದಲ್ಲಿ, ಸಾಮಗಾನವನ್ನು ಕೇಳುತ್ತಾ ಕೇಳುತ್ತಾ, ತನ್ಮಯನಾಗಿ ತನ್ನ ಪತ್ನಿ, ಮಂತ್ರಿ, ರಾಜ್ಯಗಳಿಂದ ಕೂಡಾ ವಿರಕ್ತನಾಗಿ, ಕಾಡಿಗೆ ಹೋಗಲು ವಿವಶನಾದನು (ಉದ್ಯೋಗ 109/9–10). ಇವನಿಗೆ ಮರುತ್ತನಿಂದ ಮತ್ತು ಇವನಿಂದ ಯುವನಾಶ್ವನಿಗೆ ಖಡ್ಗಪ್ರಾಪ್ತಿಯಾಯಿತು (ಶಾಂತಿ 166/77–78). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/63). ಈತ ಪ್ರಾತಃಸಂಧ್ಯಾ ಕಾಲಗಳಲ್ಲಿ ಕೀರ್ತಿಸಲ್ಪಡಲು ಯೋಗ್ಯನಾದ ರಾಜನು (ಅನು 165/53).

(3) ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/19).

**ರೈವತಕ** – (1) (ಗುಜರಾತದ ಒಂದು ಪರ್ವತ. ಇದು ಆಧುನಿಕ ಜೂನಾಗಡದ ಬಳಿಯಿದೆ ಮತ್ತು 'ಗಿರಿನಾರ'ವೆಂದು ಹೇಳಲ್ಪಡುತ್ತದೆ. ಇದನ್ನೇ ಮಹಾಭಾರತದಲ್ಲಿ 'ಉಜ್ಜಯಂತಗಿರಿ' ಯೆಂದು ಕರೆಯಲಾಗಿದೆ. ಇದು ಪ್ರಭಾಸ ಕ್ಷೇತ್ರದಿಂದ ಅಧಿಕ ದೂರವಲ್ಲ) ಶ್ರೀಕೃಷ್ಣ ಮತ್ತು ಅರ್ಜುನ ಪ್ರಭಾಸಕ್ಷೇತ್ರದಲ್ಲಿ ವಿಹಾರ ನಡೆಸಿ, ಇದೇ ಪರ್ವತದ ಮೇಲೆ ಬಂದಿದ್ದರು (ಆದಿ 217/8). ಇಲ್ಲಿ ಯದುವಂಶದವರ ಮಹಾಉತ್ಸವ ಜರಗಿತ್ತು (ಆದಿ 218/1–12). ಸುಭದ್ರೆಯು ಇದನ್ನು ಪರಿಕ್ರಮಿಸಿದ್ದಳು. ಇದೇ ಉತ್ಸವದ ಸಂದರ್ಭದಲ್ಲಿ ಇಲ್ಲಿಂದ ಅರ್ಜುನನ ಮೂಲಕ ಸುಭದ್ರಾಪಹರಣ ನಡೆಯಿತು (ಆದಿ 219/6–7).

(2) ಶಾಕದ್ವೀಪದ ಒಂದು ಪರ್ವತ (ಭೀಷ್ಮ 11/18).

**ರೋಚನಾಮುಖ** – ಒಬ್ಬ ದೈತ್ಯ. ಈತ ಗರುಡನಿಂದ ಕೊಲ್ಲಲ್ಪಟ್ಟಿದ್ದನು (ಉದ್ಯೋಗ 105/12).

**ರೋಚಮಾನ** – (1) ಒಬ್ಬ ಕ್ಷತ್ರಿಯ ರಾಜ. ಇವನು ಅಶ್ವಗ್ರೀವನೆಂಬ ಮಹಾನ್ ರಾಕ್ಷಸನ ಅಂಶದಿಂದ ಜನ್ಮವೆತ್ತಿದ್ದನು (ಆದಿ 67/18). ದ್ರೌಪದೀ ಸ್ವಯಂವರಕ್ಕೆ ಇವನ ಶುಭಾಗಮನವಾಗಿತ್ತು (ಆದಿ 185/10). (ಬೇರೆಯೇ ರೋಚಮಾನನೆಂಬವನು ಇಲ್ಲಿಗೆ ಬಂದವನಾಗಿರುವ ಸಾಧ್ಯತೆ ಇದೆ.) ಇವನು ಅಶ್ವಮೇಧ ದೇಶದ ರಾಜನಾಗಿದ್ದನು. ಭೀಮಸೇನನು ದಿಗ್ವಿಜಯ

ಕಾಲದಲ್ಲಿ ಇವನನ್ನು ಪರಾಜಯಗೊಳಿಸಿದ್ದನು (ಸಭಾ 29/8). ಈತನಿಗೆ ಪಾಂಡವಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ವಿಚಾರ ಮಾಡಲಾಗಿತ್ತು (ಉದ್ಯೋಗ 4/12). ಇವನು ಪಾಂಡವಪಕ್ಷದ ಮಹಾರಥಿ ವೀರನಾಗಿದ್ದನು (ಉದ್ಯೋಗ 172/1). ನಕ್ಷತ್ರಗಳಿಂದ ಚಿತ್ರಿತವಾದ ಅಂತರಿಕ್ಷದಂತಿರುವ, ವರ್ಣಮಯವಾದ ಕುದುರೆಗಳು, ಈತನನ್ನು ಯುದ್ಧಭೂಮಿಗೆ ತಲುಪಿಸಿದ್ದವು (ದ್ರೋಣ 20/47). ಕರ್ಣನೊಂದಿಗೆ ಈತನ ಯುದ್ಧ ಮತ್ತು ಆತನಿಂದ ಗಾಯಗೊಂಡದ್ದು (ಕರ್ಣ 56/45–47). (ಪ್ರಕರಣವನ್ನು ಅವಲೋಕಿಸಿದಾಗ ಈತ ಪಾಂಚಾಲದೇಶೀಯ, ಚೇದಿ ದೇಶೀಯ ಅಥವಾ ಯಾವುದೋ ಅನ್ಯ ದೇಶದ ನಿವಾಸಿಯೆಂದು ಸಿದ್ಧವಾಗುತ್ತದೆ.) ಕರ್ಣನಿಂದ ಈತನ ವಧೆ (ಕರ್ಣ 56/49).

(2) ಉರಗ ದೇಶದ ರಾಜ. ದಿಗ್ವಿಜಯ ಕಾಲದಲ್ಲಿ ಅರ್ಜುನನು ಈತನನ್ನು ಪರಾಜಯಗೊಳಿಸಿದ್ದನು (ಸಭಾ 27/19).

(3) ರೋಚಮಾನರೆಂಬ ಹೆಸರಿನ ಇಬ್ಬರು ಸಹೋದರರಿದ್ದರು. ದ್ರೋಣಾಚಾರ್ಯನಿಂದ ಇವರು ವಧಿಸಲ್ಪಟ್ಟ ವರ್ಣನೆ (ಕರ್ಣ 6/20–21).

**ರೋಚಮಾನಾ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/29).

**ರೋಮಕ** – ಒಂದು ಭಾರತೀಯ ಜನಪದ ಮತ್ತು ನಿವಾಸಿಗಳು ಇವರು ಯುಧಿಷ್ಠಿರನಿಗೆ ಕಾಣಿಕೆವಸ್ತುಗಳನ್ನು ತೆಗೆದುಕೊಂಡು ಬಂದಿದ್ದರು (ಸಭಾ 51/ 17).

**ರೋಹಿಣೀ** – (1) ಕ್ರೋಧವಶಾಕುಮಾರಿಯಾದ ಸುರಭಿಯ ಪುತ್ರಿ (ಗೌ). ಈಕೆಗೆ ವಿಮಲಾ ಮತ್ತು ಅನಲಾ ಎಂಬ ಇಬ್ಬರು ಕನ್ಯೆಯರಿದ್ದರು. ಇವಳಿಂದ ಹಸು, ಹೋರಿಗಳ ಜನ್ಮವಾಯಿತು (ಸಭಾ 66/60–68).

(2) ಚಂದ್ರನ ಪತ್ನಿ (ಆದಿ 198/5). ಪ್ರಜಾಪತಿ ದಕ್ಷನ ನಕ್ಷತ್ರಗಳೆಂಬ ಇಪ್ಪತ್ತೇಳು ಪುತ್ರಿಯರಲ್ಲಿ ಇವಳು ಪ್ರಮುಖಳಾಗಿದ್ದಳು. ತನ್ನ ರೂಪ ವೈಭವದಿಂದ, ತನ್ನ ಇತರ ಸಹೋದರಿಯರಿಗಿಂತ ಹೆಚ್ಚು ಮೇಲ್ಮಟ್ಟದವಳಾಗಿದ್ದಳು. ಆದುದರಿಂದ ಗಂಡನ ಹೃದಯವಲ್ಲಭೆಯಾಗಿದ್ದಳು (ಶಲ್ಯ 35/45–48). ಮಹಾನ್ ಖಡ್ಗಕ್ಕೆ ಆಕೆಯ ಗೋತ್ರವೆಂದು ಹೇಳಲಾಗಿದೆ (ಶಾಂತಿ 166/82). ರೋಹಿಣಿ ನಕ್ಷತ್ರದಂದು ಕಳಿತ ಹಣ್ಣುಗಳ ತಿರುಳು, ಅನ್ನ, ತುಪ್ಪ, ಹಾಲು ಪೇಯ ಪದಾರ್ಥಗಳನ್ನು ಬ್ರಾಹ್ಮಣರಿಗೆ ದಾನ ಕೊಟ್ಟರೆ, ದಾತನಿಗೆ ಸರ್ವ ಋಣಗಳಿಂದ ಮೋಕ್ಷ ಲಭಿಸುತ್ತದೆ (ಅನು 64/ 6). ಸಂತಾನ ಕಾಮನೆಯುಳ್ಳ ಪುರುಷನು ರೋಹಿಣೀ ನಕ್ಷತ್ರ ದಿನ ಪಿತೃಶ್ರಾದ್ಧಮಾಡಬೇಕು (ಅನು 89/3). ಚಾಂದ್ರವ್ರತದಲ್ಲಿ, ಚಂದ್ರನ ನಕ್ಷತ್ರಮಯ ಸ್ವರೂಪದ ಚಿಂತನೆ ಮಾಡುವಾಗ, ರೋಹಿಣಿಯನ್ನು ಅವನ ಮೀನ ಗಂಡದಲ್ಲಿರುವಳೆಂದು ತಿಳಿದು, ತತ್ಸಂಬಂಧವಾದ ಮಂತ್ರದಿಂದ ಆ ಅಂಗದ ಪೂಜೆ ಮಾಡಬೇಕು (ಆದಿ 110/3).

(3) ವಸುದೇವನ ಭಾರ್ಯೆ ಮತ್ತು ಬಲರಾಮನ ತಾಯಿ (ಆದಿ 196/33, ಸಭಾ 38/ 29). ಈಕೆ ವಸುದೇವನ ಮರಣಾನಂತರ, ಅವನ ಶವದೊಂದಿಗೆ ಚಿತೆಯಲ್ಲಿ ದಗ್ಧಳಾದಳು (ಮೌಸಲ 7/18, 24).

(4) ಮನು (ಭಾನು) ಎಂಬ ಅಗ್ನಿಯ ಮೂರನೆಯ ಹೆಂಡತಿಯಾದ ನಿಶಾ ಎಂಬವಳ ಗರ್ಭದಿಂದ ಜನಿಸಿದ ಒಬ್ಬ ಕನ್ಯೆ. ಈಕೆ 'ಸ್ವಿಷ್ಟಕೃತ್' ಎಂದು ತಿಳಿಯಲ್ಪಟ್ಟಿದ್ದಾಳೆ. ಇವಳ ಹೆಸರು ರೋಹಿಣಿ. ಈಕೆ ಯಾವುದೋ ಅಶುಭಕರ್ಮದ ಫಲವಾಗಿ ಹಿರಣ್ಯಕಶಿಪುವಿನ ಪತ್ನಿಯಾಗಿದ್ದಳು (ವನ 221/15,18,19).

**ರೋಹೀ** – ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಅಲ್ಲಿರುವ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/30).

**ರೋಹೀತಕ (ಮತ್ತು ರೋಹೀತಕಾರಣ್ಯ)** – ಒಂದು ಪರ್ವತ ಮತ್ತು ಅದರ ಸಮೀಪದ ದೇಶ. ಪಶ್ಚಿಮ ದಿಗ್ವಿಜಯ ಕಾಲದಲ್ಲಿ ನಕುಲನು ಈ ದೇಶದ ಮೂಲಕ ಮುಂದೆ ಹೋಗಿದ್ದನು (ಸಭಾ 32/4–5). ಇದರ ಹತ್ತಿರವೇ ಇರುವ ಕಾಡನ್ನು 'ರೋಹೀತಕಾರಣ್ಯ'ವೆನ್ನುತ್ತಾರೆ. ಇದು ಕೌರವರ ವಿಶಾಲಸೇನೆಯಿಂದ ಆವರಿಸಲ್ಪಟ್ಟಿತ್ತು (ಉದ್ಯೋಗ 19/30–31). (ಇದನ್ನೇ ಈಗ ರೋಹತಕ (ಪಂಜಾಬ)ಎನ್ನುತ್ತಾರೆ).

**ರೌದ್ರ** – ಕೈಲಾಸ ಮತ್ತು ಮಂದರಾಚಲದ ಮೇಲೆ ವಾಸಿಸುವ ಒಂದು ವಿಧದ ರಾಕ್ಷಸರು.

ಉತ್ತರಾಖಂಡದ ಯಾತ್ರಾಕಾಲದಲ್ಲಿ, ಇವರ ಕುರಿತು ಎಚ್ಚರದಿಂದಿರಲು, ಲೋಮಶರು ಯುಧಿಷ್ಠಿರನಿಗೆ ಹೇಳಿದ್ದರು (ವನ 139/10).

**ರೌದ್ರಕರ್ಮಾ** – ಧೃತರಾಷ್ಟ್ರನ ನೂರುಮಕ್ಕಳಲ್ಲಿ ಒಬ್ಬ (ಆದಿ 67/104; ಆದಿ 116/12). ಇವನು ಭೀಮಸೇನನಿಂದ ಕೊಲ್ಲಲ್ಪಟ್ಟನು (127/62).

**ರೌದ್ರಾಶ್ವ** – ಇವನು ರಾಜಾ ಪೂರುವಿಗೆ ಪೌಷ್ಟೀ ಎಂಬವಳ ಗರ್ಭದಲ್ಲಿ ಹುಟ್ಟಿದವನು. ಇವನಿಗೆ ಇಬ್ಬರು ಸಹೋದರರಿದ್ದರು. ಅವರ ಹೆಸರು – ಪ್ರವೀರ ಮತ್ತು ಈಶ್ವರ (ಆದಿ 94/5). ಇವನಿಂದ ಮಿಶ್ರಕೇಶೀ ಎಂಬ ಅಪ್ಸರೆಯ ಗರ್ಭದಲ್ಲಿ ಅನ್ವಗ್ಭಾನು ಮೊದಲಾದ ಹತ್ತು ಮಂದಿ ಮಹಾ ಧನುರ್ಧರ ಪುತ್ರರು ಹುಟ್ಟಿದ್ದರು (ಆದಿ 94/8).

**ರೌಪ್ಯಾ** – ಒಂದು ನದಿ. ಇದರ ಸಮೀಪ ಋಚೀಕಪುತ್ರ ಜಮದಗ್ನಿಯ ಪ್ರಸರ್ಪಣವೆಂಬ ತೀರ್ಥವಿದೆ (ವನ 129/7).

**ರೌಮ್ಯ** – ಗಣೇಶ್ವರರ ಒಂದು ದಳ. ಇವರನ್ನು ವೀರಭದ್ರನು ತನ್ನ ರೋಪಕೂಪಗಳಲ್ಲಿ ಸೃಷ್ಟಿಸಿದ್ದನು (ಶಾಂತಿ 284/35).

## ಲ

**ಲಕ್ಷಣಾ** – ಒಬ್ಬ ಅಪ್ಸರೆ. ಆಕೆ ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯ ಮಾಡಿದ್ದಳು (ಆದಿ 122/62).

**ಲಕ್ಷ್ಮಣ** – (1) ಮಹಾರಾಜ ದಶರಥನ ನಾಲ್ಕು ಪುತ್ರರಲ್ಲಿ ಒಬ್ಬ. ಸುಮಿತ್ರೆಯ ಜ್ಯೇಷ್ಠಪುತ್ರ ಮತ್ತು ಶತ್ರುಘ್ನನ ಸಹೋದರ (ವನ 274/7–8). ಶ್ರೀರಾಮನೊಂದಿಗೆ ಇವನ ವನಗಮನ (ವನ 277/29). ಸೀತೆಯ ಕಠೋರವಚನ ಕೇಳಿ ಆಕೆಯನ್ನು ಒಬ್ಬಂಟಿಗಳಾಗಿ ಬಿಟ್ಟು ಈತ ಶ್ರೀರಾಮನ ಬಳಿಗೆ ಹೋದುದು (ವನ 278/30–31). ಸೀತೆಯನ್ನು ಬಿಟ್ಟು ಬಂದುದಕ್ಕಾಗಿ ಶ್ರೀರಾಮನಿಂದ ಈತನಿಗೆ ಧಿಕ್ಕಾರ (ವನ 279/13–14). ಈತ ಶ್ರೀರಾಮನೊಂದಿಗೆ ಜಟಾಯುವಿನ ಬಳಿಗೆ ಹೋದುದು (ವನ 279/20). ಶ್ರೀರಾಮನೊಂದಿಗೆ ಕಾಡಿನಲ್ಲಿ ಸುತ್ತಾಡುತ್ತಿದ್ದಾಗ ಕಬಂಧನಿಂದ ಈತ ಹಿಡಿಯಲ್ಪಟ್ಟದ್ದು ಮತ್ತು ದುಃಖಿತನಾಗಿ ವಿಲಪಿಸಿದುದು (ವನ 279/30–34). ಶ್ರೀರಾಮನ ಆಶ್ವಾಸನೆಪಡೆದು, ಇವನು ಕಬಂಧನ ಬಲ ತೋಳನ್ನು ಕತ್ತರಿಸಿದುದು ಮತ್ತು ಅವನ ಪಕ್ಕೆಲುಬಿನ ಮೇಲೆ ಪ್ರಹಾರ ಮಾಡಿ ಅವನನ್ನು ಕೊಂದು ಹಾಕಿದ್ದು (ವನ 279/36–37). ಶ್ರೀರಾಮನ ಸೂಚನೆಯ ಪ್ರಕಾರ ಕಿಷ್ಕಿಂಧೆಯಲ್ಲಿ ಸುಗ್ರೀವನಿಗೆ, ಆತನ ಸಂದೇಶ ತಿಳಿಸಿದುದು (ವನ 282/14). ಶ್ರೀರಾಮನು ವಿಭೀಷಣನನ್ನು ಈತನ ಮಿತ್ರನಾಗುವಂತೆ ಮಾಡಿದನು (ವನ 283/49). ಈತ ಲಂಕೆಯಲ್ಲಿ ರಾಕ್ಷಸರನ್ನು ಆರಿಸಿ ಆರಿಸಿ ಕೊಂದುಹಾಕಿದ್ದು (ವನ 284/40). ಇವನ ಮೂಲಕ ಕುಂಭಕರ್ಣನ ವಧೆ (ವನ 287/17–19). ಪ್ರಮಾಥಿ ಮತ್ತು ವಜ್ರವೇಗರೊಂದಿಗೆ ಈತನ ಯುದ್ಧ (ವನ 287/25). ಮೇಘನಾದನ ಬಾಣಗಳಿಂದ, ಸಹೋದರರಾದ ಶ್ರೀರಾಮ ಲಕ್ಷ್ಮಣರು ಮೂರ್ಚ್ಛಿತರಾದುದು (ವನ 288 ಅಧ್ಯಾಯ). ಇವನಿಂದ ಮೇಘನಾದನ ವಧೆ (ವನ 289/23). ಮಹಾಭಾರತದಲ್ಲಿ ಬಂದಿರುವ ಲಕ್ಷ್ಮಣನ ಹೆಸರುಗಳು – ಇಕ್ಷ್ವಾಕುನಂದನ, ಕಾಕುತ್ಸ್ಥ, ರಾಘವ, ರಾಮಾನುಜ, ಸೌಮಿತ್ರಿ.

(2) ದುರ್ಯೋಧನನ ಮಹಾರಥಿ ಪುತ್ರ. ಅಭಿಮನ್ಯುವಿನೊಂದಿಗೆ ಇವನ ಯುದ್ಧ (ಭೀಷ್ಮ 55/8–13). ಅಭಿಮನ್ಯುವಿನೊಂದಿಗೆ ಯುದ್ಧ ಮತ್ತು ಆತನಿಂದ ಇವನ ಪರಾಜಯ (ಭೀಷ್ಮ 73/32–37). ಕ್ಷತ್ರದೇವನೊಂದಿಗೆ ಯುದ್ಧ (ದ್ರೋಣ 14/49). ಸಮುದ್ರ ಪ್ರಾಂತದ ಅಧಿಪತಿಯೊಂದಿಗೆ ಯುದ್ಧ (ದ್ರೋಣ 25/34–35). ಅಭಿಮನ್ಯುವಿನ ಮೂಲಕ ವಧೆ (ದ್ರೋಣ 46/17). ಇವನಿಂದ ಅಂಬಷ್ಠಪುತ್ರನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/10–11). ಇವನಿಂದ ಶಿಖಂಡಿಯ ಮಗ ಕ್ಷತ್ರದೇವನ ವಧೆಯ ವರ್ಣನೆ (ಕರ್ಣ 6/26–27). ವ್ಯಾಸರು ಆವಾಹನೆ ಮಾಡಿದಾಗ ಗಂಗೆಯ ನೀರಿನಲ್ಲಿ ಪ್ರಕಟಗೊಂಡ, ಕೌರವ ಪಾಂಡವ ಪಕ್ಷದ ವ್ಯಕ್ತಿಗಳಲ್ಲಿ ಇವನೂ ಇದ್ದನು (ಆಶ್ರಮ 32/11).

**ಲಕ್ಷ್ಮಣಾ** – ಭಗವಾನ್ ಶ್ರೀಕೃಷ್ಣನ ಪಟ್ಟದ ರಾಣಿಯರಲ್ಲಿ ಒಬ್ಬಳು (ಸಭಾ 38/29).

**ಲಕ್ಷ್ಮೀ** – (1) ಸಮುದ್ರದಿಂದ ಪ್ರಕಟಗೊಂಡ

ದೇವಿ (ಆದಿ 18/35). ಭಗವಾನ್ ವಿಷ್ಣುವಿನ ಪತ್ನಿ (ಆದಿ 98/6). (ಈಕೆಗೆ ಎರಡು ಸ್ವರೂಪ ಗಳಿವೆ – ವಿಷ್ಣುಪ್ರಿಯಾ ಲಕ್ಷ್ಮೀ ಮತ್ತು ರಾಜ್ಯ ಲಕ್ಷ್ಮೀ. ವಿಷ್ಣುಪ್ರಿಯೆಯಾದ ಲಕ್ಷ್ಮಿ ಸತಿಯರಿ ಗೆಲ್ಲಾ ಶಿರೋಮಣಿ. ಈಕೆ ಪತಿಯ ಆಶ್ರಯಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಆದರೆ ರಾಜ್ಯಲಕ್ಷ್ಮಿ ಅನೇಕ ಸ್ವರೂಪಧರಿಸಿ, ಅನೇಕ ಲೋಕಗಳಲ್ಲಿ ಮತ್ತು ಅನೇಕ ರಾಜರ ಬಳಿ ವಾಸಿಸುತ್ತಾಳೆ. ಈಕೆ ಅಸ್ಥಿರ ಮತ್ತು ಚಂಚಲಳು. ಸದ್ಗುಣ, ಸದ್ಧರ್ಮ ಗಳಿರುವಲ್ಲಿ ಈಕೆಯ ವಾಸ. ಆ ಗುಣಗಳ ಅಭಾವವಿರುವಲ್ಲಿಂದ ಈಕೆ ತೊಲಗುತ್ತಾಳೆ. ಈ ಕೆಳಗೆ ರಾಜ್ಯಲಕ್ಷ್ಮಿಯ ವಿಚಾರವಾಗಿಯೇ ಕೆಲವು ವಿಷಯಗಳು ಬರೆಯಲ್ಪಡುತ್ತವೆ. ಈಕೆ ಕುಬೇರನ ಸಭೆಯಲ್ಲಿ ವಿರಾಜಮಾನಳಾಗಿರುತ್ತಾಳೆ (ಸಭಾ 10/19). ಬ್ರಹ್ಮಸಭೆಯಲ್ಲೂ ಈಕೆಯ ಉಪಸ್ಥಿತಿ ಇದೆ (ಸಭಾ 11/41). ಅರ್ಜುನನಿಗೋಸ್ಕರ ದ್ರೌಪದಿ ಈಕೆಯೊಡನೆ ಮಂಗಳಕಾಮನೆಯನ್ನು ಮಾಡಿದುದು (ವನ 37/33). ಈಕೆ ಪ್ರಹ್ಲಾದ ನನ್ನು ಬಿಟ್ಟುಹೋದುದು. ಪ್ರಶ್ನಿಸಿದಾಗ ಆತನಿಗೆ ಇದರ ಕಾರಣ ಹೇಳಿದುದು (ಶಾಂತಿ 124/58–62). ಬಲಿಯನ್ನು ತ್ಯಜಿಸಿ, ಇಂದ್ರನ ಬಳಿಗೆ ಬಂದುದು ಮತ್ತು ಆತನೊಂದಿಗೆ ಇವಳ ಸಂವಾದ (ಶಾಂತಿ 225/5–29). ಇಂದ್ರ ಮತ್ತು ನಾರದರಿಗೆ ಈಕೆಯ ದರ್ಶನವಾದುದು (ಶಾಂತಿ 228/16). ಇಂದ್ರನು ಕೇಳಿದಾಗ ಅಸುರರ ಸದ್ಗುಣ ಮತ್ತು ದುರ್ಗುಣಗಳ ವರ್ಣನೆ (ವನ 228/29–84). ರುಕ್ಮಿಣಿಯು ಪ್ರಶ್ನಿಸಿದಾಗ, ಭೃಗು ಪುತ್ರಿ, ನಾರಾಯಣಪ್ರಿಯೆ ಲಕ್ಷ್ಮಿಯ ಮೂಲಕ ತನ್ನ ನಿವಾಸಯೋಗ್ಯ ಸ್ಥಾನಗಳ ವರ್ಣನೆ (ಅನು 11/6–21). ಗೋವುಗಳ ಸಂಗಡ ರಾಜ್ಯಲಕ್ಷ್ಮಿಯ ಸಂವಾದ; ಈಕೆ ಸೆಗಣಿಯಲ್ಲಿ ತನ್ನ ನಿವಾಸ ಮಾಡಿದುದು (ಅನು 82 ಅಧ್ಯಾಯ). ಈಕೆ ಯಿಂದ ಧರ್ಮರಹಸ್ಯದ ವರ್ಣನೆ (ಅನು 127/6–7).

(2) ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಧರ್ಮನ ಪತ್ನಿ (ಆದಿ 66/14).

**ಲಙ್ಕಾ** – ರಾಕ್ಷಸ ರಾಜಧಾನಿ. ರಾಜಸೂಯ ಯಜ್ಞದ ಸಮಯದಲ್ಲಿ ಸಹದೇವನು ಲಂಕಾಧಿ ಪತಿಯಿಂದ ಕಪ್ಪತೆಗೆದುಕೊಳ್ಳಲು ಘಟೋತ್ಕಚ ನನ್ನು ಕಳುಹಿಸಿದ್ದನು (ಸಭಾ 31/72). ಯುಧಿ ಷ್ಠಿರನ ರಾಜಸೂಯಯಜ್ಞದಲ್ಲಿ ಲಂಕಾವಾಸಿಗಳು ಭೋಜನ ಪದಾರ್ಥಗಳನ್ನು ಬಡಿಸುವ ಕೆಲಸ ಮಾಡಿಸುತ್ತಿದ್ದರು (ವನ 51/23–26). ಇಲ್ಲಿ ರಾಕ್ಷಸರಾಜ ರಾವಣನ ರಾಜಧಾನಿ ಇತ್ತು. ಇದನ್ನು ಹನುಮಂತನು ಉರಿಸಿದ್ದನು (ವನ 148/9). ಬ್ರಹ್ಮನು ಲಂಕಾಪುರಿಯನ್ನು ಕುಬೇರ ನಿಗೆ ವಾಸಿಸಲು ಕೊಟ್ಟಿದ್ದನು (ವನ 274/16–17). ರಾವಣನು ಇದನ್ನು ಕುಬೇರನಿಂದ ಸೆಳ ಕೊಂಡಿದ್ದನು (ವನ 265/32–33). ಸೀತೆಯನ್ನು ಅಪಹರಿಸಿ, ರಾವಣನು ಆಕೆಯನ್ನು ಅಶೋಕ ವನದ ಸಮೀಪ ಸುಂದರವಾದ ಭವನದಲ್ಲಿ ಇರಿಸಿದ್ದನು (ವನ 280/41–42). ಮಹಾನಗರ ವಾದ ಲಂಕೆ, ತ್ರಿಕೂಟಪರ್ವತದ ಗುಹೆಯಲ್ಲಿ ನೆಲಸಿದೆ (ವನ 282/56). ಶ್ರೀರಾಮನು ವಾನರ ಸೈನಿಕರ ಮೂಲಕ ಲಂಕೆಯ ಹೂದೋಟಗಳನ್ನು ನಾಶಗೊಳಿಸಿದ್ದನು (ವನ 283/51). ಲಂಕಾ ಪಟ್ಟಣದ ಸುರಕ್ಷೆಗೋಸ್ಕರವಿದ್ದ ಸುದೃಢ ವ್ಯವಸ್ಥೆಯ ವರ್ಣನೆ (ವನ 284/2–6). ಅಂಗದ ಶ್ರೀರಾಮನ ದೂತನಾಗಿ ಲಂಕೆಗೆ ಹೋಗಿದ್ದನು (ವನ 284/7). ಶ್ರೀರಾಮನಿಂದ ಲಂಕೆಯ ಮೇಲೆ ಆಕ್ರಮಣ (ವನ 284/23). ರಾವಣನು ಕೊಲ್ಲಲ್ಪಟ್ಟಾಗ, ಲಂಕಾರಾಜ್ಯ ವಿಭೀಷಣನ ಅಧಿ ಕಾರಕ್ಕೆ ಕೊಡಲ್ಪಟ್ಟಿತು (ವನ 291/5).

**ಲಙ್ಗತೀ** – ಒಂದು ನದಿ. ಇವಳು ವರುಣ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡುತ್ತಾಳೆ (ಸಭಾ 9/23).

**ಲಜ್ಜಾ** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಧರ್ಮನ ಪತ್ನಿ. ಬ್ರಹ್ಮನು ಧರ್ಮನ ಪತ್ನಿ ಯರನ್ನು ಧರ್ಮದ ದ್ವಾರವೆಂದು ನಿಶ್ಚೈಸಿದ್ದಾನೆ (ಆದಿ 66/14–15).

**ಲತಾ** – ಒಬ್ಬ ಅಪ್ಸರೆ. ಈಕೆ ವರ್ಗಾ ಎಂಬವಳ ಸಖಿಯಾಗಿದ್ದಳು (ಆದಿ 215/20). ಬ್ರಾಹ್ಮಣ ಶಾಪದಿಂದ ಮೊಸಳೆಯಾಗಿ ಈಕೆಯ ಜನನ (ಆದಿ 215/23). ಅರ್ಜುನನ ಮೂಲಕ ಮೊಸಳೆಯ ರೂಪದಿಂದ ಈಕೆಯ ಉದ್ಧಾರ (ಆದಿ 216/21). ಈಕೆ ಕುಬೇರನ ಸಭೆಯಲ್ಲಿದ್ದು, ಆತನ ಸೇವೆಗೆ ಉಪಸ್ಥಿತಳಾಗಿರುತ್ತಾಳೆ (ಸಭಾ 10/10–11).

**ಲತಾವೇಷ್ಟ** – ದ್ವಾರಕೆಯ ದಕ್ಷಿಣದಲ್ಲಿರುವ ಒಂದು ಪರ್ವತ. ಇದು ಐದು ಬಣ್ಣಗಳದ್ದಾದುದರಿಂದ ಇಂದ್ರಧ್ವಜದಂತೆ ಕಾಣಿಸುತ್ತಿತ್ತು (ಸಭಾ 38/29).

**ಲಪಿತಾ** – ಮಂದಪಾಲ ಋಷಿಯ ದ್ವಿತೀಯ ಪತ್ನಿಯಾದ ಒಬ್ಬ ಶಾರ್ಙ್ಗಪಕ್ಷಿ. ಇವಳು ಜರಿತೆಯ ಸವತಿ (ಆದಿ 22/17). ಜರಿತೆಯ ಗರ್ಭದಿಂದ ಹುಟ್ಟಿದ ತನ್ನ ಮಕ್ಕಳ ಕುರಿತಾಗಿ, ಮಂದಪಾಲ ಋಷಿಯು ತನಗುಂಟಾದ ಚಿಂತೆಯನ್ನು ಲಿಪಿತೆಗೆ ವಿವರಿಸಿದುದು (ಆದಿ 232/2–6). ಲಿಪಿತೆಯು ಮಂದಪಾಲನನ್ನು ನಿಂದಿಸುತ್ತಾ ಆತನನ್ನು ಉಪೇಕ್ಷಿಸಿದುದು (ಆದಿ 232/7–13).

**ಲಪೇಟಿಕಾ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ತೀರ್ಥಯಾತ್ರಿಕನು ವಾಜಪೇಯ ಯಜ್ಞದ ಫಲಪಡೆಯುತ್ತಾನೆ ಮತ್ತು ದೇವತೆಗಳಿಂದ ಪೂಜಿಸಲ್ಪಡುತ್ತಾನೆ (ವನ 85/15).

**ಲಮ್ಪಾಕ** – ಒಂದು ದೇಶ. ಈ ದೇಶದವರು ಕೌರವಸೇನೆಗೆ ಬಂದು ಸೇರಿ ಸಾತ್ಯಕಿಯನ್ನು ಆಕ್ರಮಿಸಿದ್ದರು; ಆದರೆ ಸಾತ್ಯಕಿ ಅವರನ್ನು ಛಿನ್ನಭಿನ್ನಗೊಳಿಸಿದ್ದನು (ದ್ರೋಣ 121/42–43).

**ಲಮ್ಬಪಯೋಧರಾ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/21).

**ಲಮ್ಬನೀ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/18).

**ಲಮ್ಬಾ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/18).

**ಲಯ** – ಒಬ್ಬ ಪ್ರಾಚೀನ ರಾಜ. ಇವನು ಯಮನ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/21).

**ಲಲಾಟಾಕ್ಷ** – ಒಂದು ದೇಶ. ಇಲ್ಲಿದ್ದ ರಾಜ ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಬಂದಿದ್ದನು (ಸಭಾ 51/17).

**ಲಲಾಮ** – ಕುದುರೆಗಳ ಒಂದು ಭೇದ. (ಯಾವ ಕುದುರೆಯ ಲಲಾಟದ ಮಧ್ಯಭಾಗದಲ್ಲಿ ನಕ್ಷತ್ರದಂತೆ ಬಿಳಿ ಚಿಹ್ನೆಯಿರುತ್ತದೋ, ಅದರ ಆ ಚಿಹ್ನೆಯ ಹೆಸರು ಲಲಾಮವೆಂದಾಗಿದೆ. ಆ ಚಿಹ್ನೆಯಿಂದ ಕೂಡಿದ ಅಶ್ವವನ್ನು ಲಲಾಮವೆನ್ನುತ್ತಾರೆ (ದ್ರೋಣ 23/13).

**ಲಲಿತಕ** – ಶಾಂತನುವಿನ ಉತ್ತಮತೀರ್ಥ. ಇಲ್ಲಿ ಸ್ನಾನಮಾಡಿದರೆ ಮನುಷ್ಯ ಎಂದೂ ದುರ್ಗತಿಗೆ ಬೀಳುವುದಿಲ್ಲ (ವನ 84/34).

**ಲಲಿತ್ಥ** – ಒಂದು ದೇಶ ಮತ್ತು ಅಲ್ಲಿರುವ ನಿವಾಸಿಗಳು. ಇಲ್ಲಿರುವ ಸೈನಿಕರು ಸುಶರ್ಮನೊಂದಿಗೆ ಅರ್ಜುನನ ವಧೆ ಮಾಡಲು ಪ್ರತಿಜ್ಞೆ ಮಾಡಿದ್ದರು (ದ್ರೋಣ 17/20). ಇವರು ಅರ್ಜುನನಿಂದ ನೋಯಿಸಲ್ಪಟ್ಟಿದ್ದರು (ದ್ರೋಣ 19/16). ಇವರ ರಾಜ ಅಭಿಮನ್ಯುವಿನ ಮೇಲೆ ಶರವರ್ಷ ಮಾಡಿದ್ದನು (ದ್ರೋಣ 37/26). ಪೂರ್ವಕಾಲದಲ್ಲಿ ಕರ್ಣನು ಈ ದೇಶದ ಮೇಲೆ ವಿಜಯಪಡೆದಿದ್ದನು (ದ್ರೋಣ 91/40). ಅರ್ಜುನನಿಂದ ಇವರು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/47).

**ಲವಣ** – (1) ರಾಮಣೀಯಕ ದ್ವೀಪದಲ್ಲಿ ವಾಸಿಸುವ ಒಬ್ಬ ಅಸುರ. ಈತ ಮೊತ್ತಮೊದಲು ಈ ದ್ವೀಪಕ್ಕೆ ಬರುವುದನ್ನು ನಾಗರು ನೋಡಿದ್ದರು (ಆದಿ 27/2).

(2) ಮಧುವೆಂಬ ರಾಕ್ಷಸನ ಪುತ್ರ. ಶ್ರೀರಾಮನ ಆಜ್ಞೆಯಿಂದ ಶತ್ರುಘ್ನನ ಮೂಲಕ ಈತನ ವಧೆ (ಸಭಾ 38/29). ಚಕ್ರವರ್ತಿಯಾದ ರಾಜಾ ಮಾಂಧಾತನು, ಲವಣಾಸುರನಿಂದ ಪ್ರಯೋಗಿಸಲ್ಪಟ್ಟ ಶಿವದತ್ತ ತ್ರಿಶೂಲದಿಂದ ಸೇನಾ ಸಮೇತನಾಗಿ ನಾಶಹೊಂದಿದ್ದನು. ಆ ಶೂಲ ಇನ್ನೂ ಅಸುರನ ಕೈಯಲ್ಲಿದ್ದಾಗಲೇ, ರಾಜನ ಸರ್ವನಾಶವಾಗಿತ್ತು (ಅನು 14/267–268).

**ಲವಣಾಶ್ವ** – ಒಬ್ಬ ಬ್ರಹ್ಮರ್ಷಿ. ಇವನು ಅಜಾತಶತ್ರುವಾದ ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/23).

**ಲಾಕ್ಷಾಗೃಹ** – ದುಷ್ಟನಾದ ದುರ್ಯೋಧನನ ಪ್ರೇರಣೆಯಿಂದ, ಮಹಾತ್ಮರಾದ ಪಾಂಡವರ ವಿನಾಶಕ್ಕೋಸ್ಕರ, ವಾರಣಾವತನಗರದಲ್ಲಿ, ಅರಗು ಮೊದಲಾದ ಬೆಂಕಿಯನ್ನು ಹೆಚ್ಚಿಸುವ ಪದಾರ್ಥಗಳಿಂದ ನಿರ್ಮಿಸಲ್ಪಟ್ಟ ಮನೆ (ಆದಿ 143/8–17). ಪುರೋಚನನ ಮೂಲಕ ಪಾಂಡವರಿಗೆ ಈ ಮನೆಯ ಕುರಿತು ವಿವರಣೆ. ಇದರೊಳಗೆ ಪಾಂಡವರ ಪ್ರವೇಶ. ಇದರ ನಿರ್ಮಾಣದ ಕುರಿತು ಯುಧಿಷ್ಠಿರನು ಭೀಮಸೇನ

ನೊಡನೆ ರಹಸ್ಯವಾಗಿ ವಿವರಿಸಿದುದು (ಆದಿ 145/11–19). ವಿದುರನಿಂದ ಕಳುಹಿಸಲ್ಪಟ್ಟ ಖನಕನ ಮೂಲಕ ಇದರೊಳಗೆ ಸುರಂಗದ ನಿರ್ಮಾಣ (ಆದಿ 146/16). ಭೀಮಸೇನನಿಂದ ಇದರ ದಹನ (ಆದಿ 147/10).

**ಲಾಙ್ಗಲೀ** – ಒಂದು ಶ್ರೇಷ್ಠ ನದಿ. ಈಕೆ ವರುಣ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾಳೆ (ಸಭಾ 9/22).

**ಲಾಟ** – ಒಂದು ಕ್ಷತ್ರಿಯ ಜಾತಿ. ಈ ಜಾತಿಯವರು ಬ್ರಾಹ್ಮಣರಲ್ಲಿ ಅಸೂಯೆಪಟ್ಟದ್ದರಿಂದ ನೀಚರಾದರು (ಅನು 35/17–18).

**ಲಿಖಿತ** – ಒಬ್ಬ ಪ್ರಾಚೀನ ಮುನಿ. ಈತ ಇಂದ್ರನ ಸಭಾಸದ (ಸಭಾ 7/11). ಇವನು ಶಂಖನ ಸಹೋದರನಾಗಿದ್ದನು. ಇವನು ತನ್ನ ಸಹೋದರನ ಆಜ್ಞೆಯ ಪ್ರಕಾರ ರಾಜಾ ಸುದ್ಯುಮ್ನನ ಬಳಿಗೆ ಹೋಗಿ, ಅವನೊಡನೆ ಕಳ್ಳತನದ ಅಪರಾಧಕ್ಕೆ ದಂಡನೆಯನ್ನು ಕೇಳಿದನು ಮತ್ತು ತನ್ನ ಎರಡೂ ಕೈಗಳನ್ನು ಕಡಿಸಿಕೊಂಡನು (ಶಾಂತಿ 23/18–36). ಸಹೋದರನಾದ ಶಂಖನ ತಪೋಬಲದಿಂದ ಇವನಿಗೆ ಪುನಃ ಕೈಗಳು ಮೂಡಿಬಂದವು (ಶಾಂತಿ 23/41–42).

**ಲೀಲಾಢ್ಯ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/53).

**ಲೋಕಪಾಲ** – ಇಂದ್ರ, ಅಗ್ನಿ, ಯಮ ಮತ್ತು ವರುಣ– ಇವರನ್ನು ಲೋಕಪಾಲರೆಂದು ಹೇಳಲಾಗಿದೆ. ಇವರು ದಮಯಂತಿ ಸ್ವಯಂವರಕ್ಕೆ ಬರುವಾಗ, ಹಾದಿಯಲ್ಲಿ ರಾಜಾ ನಳನೊಂದಿಗೆ ಭೇಟಿ ಮತ್ತು ಆತನು ದೂತನಾಗುವಂತೆ ಹೇಳಿದುದು (ವನ 54/28 ರಿಂದ 55/5). ಇವರಿಂದ ನಳನಿಗೆ ವರದಾನ (ವನ 57/35–38).

**ಲೋಕಪಾಲಸಭಾಖ್ಯಾನಪರ್ವ** – ಸಭಾಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 5 ರಿಂದ 12).

**ಲೋಕೋದ್ಧಾರ** – ಒಂದು ಲೋಕವಿಖ್ಯಾತ ಪ್ರಾಚೀನ ತೀರ್ಥ. ಇಲ್ಲಿ ಭಗವಂತನಾದ ವಿಷ್ಣು ಎಷ್ಟೋ ಲೋಕಗಳ ಉದ್ಧಾರ ಮಾಡಿದ್ದನು. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ತನ್ನ ಆತ್ಮೀಯ ಜನರ ಉದ್ಧಾರ ಮಾಡುತ್ತಾನೆ (ವನ 83/44–45).

**ಲೋಪಾಮುದ್ರಾ** – ತನಗೆ ಪತ್ನಿಯಾಗುವುದಕ್ಕಾಗಿ ಮಹರ್ಷಿ ಅಗಸ್ತ್ಯನು ಒಬ್ಬ ಸುಂದರ ಕನ್ಯೆಯ ನಿರ್ಮಾಣಮಾಡಿದನು. ಪುತ್ರಾಕಾಂಕ್ಷಿಯಾಗಿ ತಪಸ್ಸುಮಾಡುತ್ತಿದ್ದ ವಿದರ್ಭರಾಜನಿಗೆ ಆಕೆಯನ್ನು ಕೊಟ್ಟನು. ಆ ರಾಜಭವನದಲ್ಲಿ ವಿದ್ಯುತ್ತಿನಂತೆ ಆ ಕನ್ಯೆಯ ಪ್ರಾದುರ್ಭಾವವಾಯಿತು. ಅವಳನ್ನು ಪಡೆದು ರಾಜನಿಗೆ ತುಂಬಾ ಸಂತೋಷವಾಯಿತು. ಅವನು ಬ್ರಾಹ್ಮಣರಿಗೆ ಈ ಶುಭಸಮಾಚಾರ ತಿಳಿಸಿದನು. ಬ್ರಾಹ್ಮಣರು ಆಕೆಗೆ 'ಲೋಪಾಮುದ್ರಾ' ಎಂಬ ಹೆಸರಿಟ್ಟರು. ಮೆಲ್ಲಮೆಲ್ಲನೆ ಆಕೆ ಯುವಾವಸ್ಥೆಯನ್ನು ಪ್ರವೇಶಿಸಿದಳು. ನೂರು ದಾಸಿಯರು ಮತ್ತು ನೂರು ಕನ್ಯೆಯರು ಆಕೆಯ ಸೇವೆಯಲ್ಲಿದ್ದರು. ಮಹಾತ್ಮಾ ಅಗಸ್ತ್ಯನ ಭಯದಿಂದ ಯಾವ ರಾಜಕುಮಾರನೂ ಆಕೆಯನ್ನು ವರಿಸಲಿಲ್ಲ. ಅವಳು ತನ್ನ ಶೀಲಸದಾಚಾರಗಳಿಂದ ತಂದೆ ಹಾಗೂ ಸ್ವಜನರನ್ನು ಸಂತುಷ್ಟಿಗೊಳಿಸಿದ್ದಳು. ಅವಳು ಯುವತಿಯಾದುದನ್ನು ಕಂಡು ತಂದೆ ಆಕೆಯ ವಿವಾಹಕ್ಕೋಸ್ಕರ ಯೋಚನಾಮಗ್ನನಾದನು (ವನ 96/19–30). ಒಂದು ದಿನ ಮಹರ್ಷಿ ಅಗಸ್ತ್ಯನು ಬಂದು, ವಿದರ್ಭರಾಜನೊಡನೆ ಲೋಪಾಮುದ್ರೆಯನ್ನು ಯಾಚಿಸಿದನು. ರಾಜನು ತನ್ನ ಮಗಳ ಮದುವೆಯನ್ನು ಆತನೊಂದಿಗೆ ಮಾಡಲು ಇಚ್ಛಿಸುತ್ತಿರಲಿಲ್ಲ; ಆದರೆ ಮಹರ್ಷಿಯ ಶಾಪಭಯದಿಂದ ಅವನು ಕನ್ಯೆಯನ್ನು ಕೊಡದಿರಲು, ತಿರಸ್ಕರಿಸಲು ಧೈರ್ಯಪಡಲಿಲ್ಲ. ತಾಯಿ ತಂದೆಯರು ಸಂಕಟದಲ್ಲಿ ಸಿಲುಕಿದ್ದನ್ನು ನೋಡಿ, ಲೋಪಾಮುದ್ರೆ ಹೀಗೆ ಹೇಳಿದಳು; 'ತಾವು ನನ್ನನ್ನು ಮಹರ್ಷಿಗಳ ಸೇವೆಗೆ ಒಪ್ಪಿಸಿಬಿಡಿ ಮತ್ತು ನನ್ನನ್ನು ರಕ್ಷಿಸಿ'. ಆಗ ಆ ರಾಜ ದಂಪತಿಗಳು ಅಗಸ್ತ್ಯರೊಂದಿಗೆ ಆಕೆಯ ವಿವಾಹ ಮಾಡಿದರು. ಲೋಪಮುದ್ರೆಯು ಪತಿಯ ಆಜ್ಞೆಯಂತೆ ಅಮೂಲ್ಯವಾದ ವಸ್ತ್ರಾಭರಣಗಳನ್ನು ಕಳಚಿಟ್ಟು, ವಲ್ಕಲ ಮತ್ತು ಮೃಗಚರ್ಮವನ್ನು ಧರಿಸಿದಳು. ಅವಳು ಪತಿಯಂತೆಯೇ ವ್ರತಾಚರಣೆಯ ಪಾಲನೆ ಮಾಡತೊಡಗಿದಳು. ಮಹರ್ಷಿಯು ಆಕೆಯನ್ನು ಕರಕೊಂಡು ಗಂಗಾದ್ವಾರಕ್ಕೆ ಬಂದನು ಮತ್ತು ಘೋರತಪಸ್ಸಿನಲ್ಲಿ

ಮಗ್ನನಾದನು. ಲೋಪಾಮುದ್ರೆ ತುಂಬಾ ಸಂತೋಷ ಮತ್ತು ವಿಶೇಷ ಆದರಗಳೊಂದಿಗೆ ಪತಿಯ ಸೇವೆ ಮಾಡತೊಡಗಿದಳು. ದೀರ್ಘ ಕಾಲದ ಅನಂತರ ಪ್ರಸನ್ನನಾಗಿ, ಮಹರ್ಷಿಯು ಆಕೆಯನ್ನು ಸಮಾಗಮಕ್ಕೋಸ್ಕರ ತನ್ನ ಬಳಿಗೆ ಕರೆದನು. ತಂದೆಯ ಮನೆಗೆ ಸಮಾನವಾದ ಅರಮನೆಯಲ್ಲಿ, ಆತನೊಂದಿಗೆ ಸಮಾಗಮ ಹೊಂದಬೇಕೆಂದು ಲೋಪಾಮುದ್ರೆ ಇಚ್ಛೆಯನ್ನು ಪ್ರಕಟಿಸಿದಳು. ಆಗ ಮಹರ್ಷಿಯು ಲೋಪಾ ಮುದ್ರೆಯ ಇಚ್ಛೆಯನ್ನು ಪೂರ್ಣ ಮಾಡುವುದ ಕ್ಕಾಗಿ, ಧನಸಂಗ್ರಹಿಸಲು ಹೊರಟನು (ವನ 98 ಅಧ್ಯಾಯ). ಲೋಪಮುದ್ರೆ ಬಯಸಿದ್ದನ್ನು ಅಗಸ್ತ್ಯನು ಪೂರ್ಣಮಾಡಿದನು. ಆಗ ಆಕೆ ಆತನೊಡನೆ ಒಬ್ಬ ಅತ್ಯಂತ ಬಲಶಾಲಿ ಪುತ್ರನನ್ನು ಯಾಚಿಸಿದಳು. ಆಗ ಮಹರ್ಷಿಯು ಪ್ರಶ್ನಿಸಿ ದನು. 'ನಿನ್ನ ಗರ್ಭದಿಂದ ಹತ್ತಕ್ಕೆ ಸಮಾನರಾದ ಒಂದು ಸಾವಿರ ಅಥವಾ ಒಂದು ನೂರು ಪುತ್ರರು ಹುಟ್ಟಲಿಯೋ ಅಥವಾ ಸಾವಿರಾರು ಮಂದಿಯನ್ನು ಜಯಿಸುವ ಒಬ್ಬನೇ ಪುತ್ರನಾ ಗಲಿಯೋ'? ಲೋಪಾಮುದ್ರೆಯು ಸಹಸ್ರರಿಗೆ ಸಮಾನನಾದ ಒಬ್ಬನೇ ಶ್ರೇಷ್ಠ ಪುತ್ರನನ್ನು ಯಾಚಿಸಿದಳು. ಮಹರ್ಷಿಯು ಗರ್ಭಧಾನ ಮಾಡಿ ಕಾಡಿಗೆ ಹೊರಟುಹೋದನು. ಆ ಗರ್ಭ ಏಳು ವರ್ಷಗಳವರೆಗೆ ತಾಯಿಯ ಗರ್ಭದಲ್ಲಿ ಬೆಳೆಯುತ್ತಾ ಇದ್ದಿತು. ಏಳು ವರ್ಷ ಕಳೆದ ಬಳಿಕ ಅದು ತನ್ನ ತೇಜಸ್ಸು ಮತ್ತು ಪ್ರಭಾವ ದಿಂದ ಪ್ರಜ್ವಲಿಸುತ್ತಾ ಉದರದಿಂದ ಹೊರಗೆ ಬಂದಿತು. ಅವನೇ ಮಹಾ ವಿದ್ವಾಂಸನಾದ 'ದೃಢಸ್ಯು' ಎಂಬ ಹೆಸರಿನಿಂದ ವಿಖ್ಯಾತನಾದನು (ವನ 99/18–25). ಈಕೆಯ ಪಾತಿವ್ರತ್ಯದ ಪ್ರಶಂಸೆ (ವಿರಾಟ 21/14).

**ಲೋಮಪಾದ** – ಅಂಗದೇಶದ ಒಬ್ಬ ರಾಜ. (ಇವನು ರಾಜಾ ದಶರಥನ ಮಿತ್ರನಾಗಿದ್ದನು.) ಇವನು ರಾಜ್ಯದಲ್ಲಿ ಮಳೆಯಾಗುವಂತೆ ಮಾಡಲು, ಋಷ್ಯಶೃಂಗನನ್ನು ತರುವುದಕ್ಕೋಸ್ಕರ ವೇಶ್ಯೆಯರನ್ನು ನಿಯೋಜಿಸಿದುದು (ವನ 110/ 53). ಇವನಿಂದ 'ನಾವ್ಯಾಶ್ರಮ'ದ ನಿರ್ಮಾಣ (ವನ 113/9). ಇವನು ತನ್ನ ಪುತ್ರಿ ಶಾಂತೆ ಯನ್ನು ಋಷ್ಯಶೃಂಗ ಮುನಿಗೆ ವಿವಾಹ ಮಾಡಿ ಕೊಟ್ಟದ್ದು (ವನ 113/11). ಇವನ ಮೇಲೆ ವಿಭಾಂಡಕ ಮಹರ್ಷಿಯ ಕೃಪೆ (ವನ 113/20). ರಾಜರ್ಷಿ ಲೋಮಪಾದನು, ತನ್ನ ಕನ್ಯೆ ಶಾಂತೆ ಯನ್ನು ಋಷ್ಯಶೃಂಗ ಮುನಿಗೆ ದಾನಮಾಡಿ, ಎಲ್ಲಾ ರೀತಿಯ, ಸಕಲ ಭೋಗಗಳಿಂದ ಸಂಪನ್ನ ನಾದನು (ಶಾಂತಿ 234/34).

**ಲೋಮಶ** – (1) ಒಬ್ಬ ಪ್ರಾಚೀನ ದೀರ್ಘಜೀವಿ ಮಹರ್ಷಿ. ಈತ ಧರ್ಮಪಾಲನೆಯಿಂದಾಗಿ ಶುದ್ಧ ಹೃದಯಿಯಾಗಿದ್ದನು (ವನ 31/12). ಈತ ಸ್ವರ್ಗಕ್ಕೆ ಹೋಗಿ ಇಂದ್ರನ ಭೇಟಿ ಮಾಡಿ ದುದು. ಅಲ್ಲಿ ಇಂದ್ರನ ಅರ್ಧ ಸಿಂಹಾಸನದಲ್ಲಿ ಅರ್ಜುನನು ಕುಳಿತದ್ದನ್ನು ನೋಡಿ, 'ಅವನ ಪುಣ್ಯಕರ್ಮಗಳಾವುವು?' ಎಂಬ ಪ್ರಶ್ನೆ ಈತನ ಮನಸ್ಸಿನಲ್ಲಿ ಹುಟ್ಟಿದುದು (ವನ 47/1–5). ಇಂದ್ರನ ಮೂಲಕ ಇವನ ಮಾನಸಿಕ ಪ್ರಶ್ನೆಗಳಿಗೆ ಸಮಾಧಾನ (ವನ 47/7–31). ಇವನು ಇಂದ್ರ ಮತ್ತು ಅರ್ಜುನನ ಸಂದೇಶವನ್ನು ತೆಗೆದು ಕೊಂಡು, ಕಾಮ್ಯಕ ವನದಲ್ಲಿ ಯುಧಿಷ್ಠಿರನ ಬಳಿಗೆ ಬಂದುದು (ವನ 47/33–35). ಈತ ಯುಧಿಷ್ಠಿರನಿಗೆ, ಅರ್ಜುನನಿಗೆ ದಿವ್ಯಾಸ್ತ್ರ ಪ್ರಾಪ್ತಿ ಯಾದ ಸೂಚನೆಯನ್ನಿತ್ತದ್ದು (ವನ 91/10–14). ಇವನು ಯುಧಿಷ್ಠಿರನಿಗೆ ಇಂದ್ರನ ಸಂದೇಶ ತಿಳಿಸಿದುದು (ವನ 91/17–25). ಇವನು ಯುಧಿಷ್ಠಿರನಿಗೆ ಅರ್ಜುನನ ಸಂದೇಶವನ್ನು ಹೇಳಿದುದು (ವನ 12/1–7). ಇವನಿಂದ ಯುಧಿಷ್ಠಿರನಿಗೆ ಆಶ್ವಾಸನೆ (ವನ 94/17–22). ಈತ ಯುಧಿಷ್ಠಿರನಿಗೆ ಅಗಸ್ತ್ಯರ ಕಥೆ ತಿಳಿಸಿ ದುದು (ವನ ಅಧ್ಯಾಯ 16 ರಿಂದ 99). ಇವನಿಂದ ಯುಧಿಷ್ಠಿರನಿಗೆ ರಾಮ ಮತ್ತು ಪರಶುರಾಮರ ಚರಿತ್ರೆಯ ವರ್ಣನೆ (ವನ 99/40–41). ವೃತ್ರಾಸುರನಿಂದ ಪೀಡಿಸಲ್ಪಟ್ಟ ದೇವತೆಗಳಿಗೆ ದಧೀಚಿ ಮಹರ್ಷಿಯ ಅಸ್ಥಿದಾನ ಮತ್ತು ವಜ್ರನಿರ್ಮಾಣದ ವರ್ಣನೆ (ವನ 100 ಅಧ್ಯಾಯ). ಇವನಿಂದ, ವೃತ್ರಾಸುರ ವಧೆ ಮತ್ತು ಅಸುರರ ಭಯಂಕರ ಆಲೋಚನೆಗಳ ವರ್ಣನೆ (ವನ 101 ಅಧ್ಯಾಯ). ಈತನಿಂದ, ಕಾಲೇಯ ರಿಂದ ಮಾಡಲ್ಪಟ್ಟ ತಪಸ್ವಿಗಳ, ಮುನಿಗಳ ಮತ್ತು ಬ್ರಹ್ಮಚಾರಿಗಳೇ ಮೊದಲಾದವರ ವಧೆಯ ವರ್ಣನೆ ಮತ್ತು ದೇವತೆಗಳಿಂದ ಮಾಡಲ್ಪಟ್ಟ,

ಭಗವಂತನ ಸ್ತುತಿಯ ವರ್ಣನೆ (ವನ 102 ಅಧ್ಯಾಯ). ಲೋಮಶರು ಯುಧಿಷ್ಠಿರನಿಗೆ ತಿಳಿಸಿದ ಪ್ರಮುಖ ವಿಷಯಗಳ ಸಂಕ್ಷಿಪ್ತ ಸೂಚನೆ ಈ ಪ್ರಕಾರವಿದೆ. ಭಗವಂತನ ಆದೇಶದಿಂದ, ದೇವತೆಗಳು ಮಹರ್ಷಿ ಅಗಸ್ತ್ಯರ ಆಶ್ರಮಕ್ಕೆ ಹೋಗಿ, ಅವರ ಸ್ತುತಿ ಮಾಡಿದುದು. ಅಗಸ್ತ್ಯರು ವಿಂಧ್ಯ ಪರ್ವತವು ಎತ್ತರಕ್ಕೇರದಂತೆ ತಡೆದುದು ಮತ್ತು ದೇವತೆಗಳೊಂದಿಗೆ ಸಾಗರ ದಡಕ್ಕೆ ಹೋದುದು. ಅಗಸ್ತ್ಯರು ಸಮುದ್ರಪಾನ ಮಾಡಿದುದು. ದೇವತೆಗಳು ಕಾಲೇಯ ದೈತ್ಯರ ವಧೆ ಮಾಡಿ, ಬ್ರಹ್ಮನೊಡನೆ ಸಮುದ್ರವನ್ನು ಪುನಃ ತುಂಬಿಸಲು ಉಪಾಯವನ್ನು ಕೇಳಿದುದು. ರಾಜಾಸಗರನು ಸಂತಾನಕ್ಕಾಗಿ ತಪಸ್ಸು ಮಾಡಿ ದುದು ಮತ್ತು ಶಿವನಿಂದ ವರ ಪಡೆದುದು. ಸಗರಪುತ್ರರ ಜನ್ಮ, ಕಪಿಲರ ಕ್ರೋಧಾಗ್ನಿಯಿಂದ ಅವರು ಭಸ್ಮವಾದುದು, ಅಸಮಂಜಸನನ್ನು ಪರಿ ತ್ಯಾಗ ಮಾಡಿದುದು, ಅಂಶುಮಂತನ ಪ್ರಯತ್ನ ದಿಂದ ಸಗರನ ಯಜ್ಞ ಪೂರ್ಣವಾದುದು. ಅಂಶುಮಂತನಿಂದ ದಿಲೀಪನಿಗೆ, ದಿಲೀಪನಿಂದ ಭಗೀರಥನಿಗೆ ರಾಜ್ಯ ಪ್ರಾಪ್ತಿ. ಭಗೀರಥನು ಹಿಮಾಲಯದ ಮೇಲೆ ತಪಸ್ಸಿನ ಮೂಲಕ, ಗಂಗೆ ಮತ್ತು ಮಹಾದೇವನನ್ನು ಪ್ರಸನ್ನಗೊಳಿಸಿ, ಅವರಿಂದ ವರಪಡೆದುದು. ಗಂಗಾಮಾತೆ ಭೂಮಿಗೆ ಇಳಿದುದು ಮತ್ತು ಸಮುದ್ರವನ್ನು ಜಲದಿಂದ ತುಂಬಿದುದರ ವಿವರಣೆ ಮತ್ತು ಸಗರ ಪುತ್ರರ ಉದ್ಧಾರ. ನಂದಾ ಮತ್ತು ಕೌಶಿಕೀ ಮಹಾತ್ಮೆ, ಋಷ್ಯಶೃಂಗನ ಉಪಾಖ್ಯಾನ ಮತ್ತು ಅವನನ್ನು ತನ್ನ ರಾಜ್ಯಕ್ಕೆ ಬರಮಾಡಿಕೊಳ್ಳಲು ರಾಜಾ ಲೋಮಪಾದನ ಪ್ರಯತ್ನ. ವೇಶ್ಯೆಯು ಋಷ್ಯಶೃಂಗನನ್ನು ಪ್ರಲೋಭನಗೊಳಿಸಿದುದು ಮತ್ತು ವಿಭಾಂಡಕ ಮುನಿಯು ಆಶ್ರಮಕ್ಕೆ ಬಂದು ತನ್ನ ಪುತ್ರನ ಚಿಂತೆಯ ಕಾರಣ ಕೇಳಿದುದು. ಋಷ್ಯಶೃಂಗನು ತಂದೆಯೊಡನೆ ತನ್ನ ಚಿಂತೆಯ ಕಾರಣವನ್ನು ಹೇಳುತ್ತಾ, ಬ್ರಹ್ಮಚಾರಿರೂಪ ಧರಿಸಿದ ವೇಶ್ಯೆಯ ಸ್ವರೂಪ ಮತ್ತು ಆಚರಣೆ ಯನ್ನು ವರ್ಣಿಸಿದುದು. ಋಷ್ಯಶೃಂಗನು ಅಂಗ ರಾಜ ಲೋಮಪಾದನಲ್ಲಿಗೆ ಹೋದುದು, ರಾಜನು ಆತನಿಗೆ ತನ್ನ ಕನ್ಯೆಯನ್ನು ಕೊಟ್ಟದ್ದು, ರಾಜ ನಿಂದ ವಿಭಾಂಡಕ ಮುನಿಯ ಸತ್ಕಾರ ಮತ್ತು ಆತನ ಮೇಲೆ ಮುನಿಯು ಪ್ರಸನ್ನನಾದುದು (ವನ ಅಧ್ಯಾಯ 103ರಿಂದ 113). ಲೋಮಶ ನಿಂದ ರಾಜಾಗಯನ ಯಜ್ಞದ ಪ್ರಶಂಸೆ, ಪಯೋಷ್ಣೀ, ವೈದೂರ್ಯ ಪರ್ವತ, ನರ್ಮದಾ ಮಹಾತ್ಮೆ ಮತ್ತು ಚ್ಯವನ ಸುಕನ್ಯಾ ಚರಿತ್ರೆಯ ವರ್ಣನೆ (ವನ 121). ಮಹರ್ಷಿ ಲೋಮಶನ ಮೂಲಕ, ಚ್ಯವನನಿಗೆ ಸುಕನ್ಯಾ ಪ್ರಾಪ್ತಿಯಾದ ಪ್ರಸಂಗದ ವರ್ಣನೆ (ವನ 122). ಅಶ್ವಿನೀ ಕುಮಾರರ ಕೃಪೆಯಿಂದ, ಮಹರ್ಷಿ ಚ್ಯವನನಿಗೆ ಸುಂದರರೂಪ ಮತ್ತು ಯುವಾವಸ್ಥೆ ಪ್ರಾಪ್ತವಾದ ಕುರಿತು ವರ್ಣನೆ (ವನ 123). ಶರ್ಯಾತಿಯ ಯಜ್ಞದಲ್ಲಿ ಚ್ಯವನನು ಇಂದ್ರನ ಮೇಲೆ ಕೋಪಿಸಿ, ವಜ್ರವನ್ನು ಸ್ತಂಭನಗೊಳಿಸಿದುದು; ಮತ್ತು ಅವ ನನ್ನು ಕೊಲ್ಲಲು ಮದಾಸುರನನ್ನು ಸೃಷ್ಟಿಸಿದುದು (ವನ 124). ಅಶ್ವಿನಿಕುಮಾರರು ಯಜ್ಞದಲ್ಲಿ ಭಾಗ ವನ್ನು ಸ್ವೀಕರಿಸಿದ ಬಳಿಕ, ಇಂದ್ರನು ಸಂಕಟ ದಿಂದ ಮುಕ್ತನಾದುದು – ಇತ್ಯಾದಿ ಪ್ರಸಂಗಗಳ ಮತ್ತು ಬೇರೆಬೇರೆ ತೀರ್ಥಗಳ ಮಹತ್ವಗಳ ಕುರಿತು ಲೋಮಶನ ವರ್ಣನೆ (ವನ 125). ರಾಜಾಮಾಂಧಾತನ ಜನ್ಮ ಮತ್ತು ಈತನಿಂದ ಅವನ ಸಂಕ್ಷಿಪ್ತ ಚರಿತ್ರೆಯ ವರ್ಣನೆ (ವನ 126). ಲೋಮಶನು ಯುಧಿಷ್ಠಿರನಿಗೆ ಸೋಮಕ ಮತ್ತು ಜಂತು ಎಂಬವರ ಉಪಾಖ್ಯಾನ ತಿಳಿಸಿದುದು – ಸೋಮಕನಿಗೆ ನೂರು ಪುತ್ರರ ಪ್ರಾಪ್ತಿ. ಸೋಮಕ ಮತ್ತು ಪುರೋಹಿತ ಸಮಾನ ವಾಗಿ ನರಕ ಮತ್ತು ಪುಣ್ಯಲೋಕಗಳನ್ನು ಉಪಭೋಗಿಸಿದುದು (ವನ 127–128). ಇವನಿಂದ ಕುರುಕ್ಷೇತ್ರದ ದ್ವಾರಭೂತವಾದ ಪ್ಲಕ್ಷಪ್ರಸ್ರವಣವೆಂಬ ಯಮುನಾತೀರ್ಥ ಮತ್ತು ಸರಸ್ವತೀತೀರ್ಥದ ಮಹಿಮೆಯ ವರ್ಣನೆ (ವನ 129). ಲೋಮಶರಿಂದ ಬೇರೆ ಬೇರೆ ತೀರ್ಥಗಳ ಮಹಿಮೆ ಮತ್ತು ರಾಜಾ ಉಶೀನರನ ಕಥೆಯ ಪ್ರಾರಂಭ – ರಾಜಾ ಉಶೀನರನು ಹದ್ದಿಗೆ ತನ್ನ ಶರೀರದ ಮಾಂಸವನ್ನು ಕೊಟ್ಟು ಶರಣಾಗತ ನಾದ ಪಾರಿವಾಳದ ಪ್ರಾಣರಕ್ಷಣೆ ಮಾಡಿದುದು (ವನ 130–131). ಅಷ್ಟಾವಕ್ರನ ಜನ್ಮವೃತ್ತಾಂತ ಮತ್ತು ಆತ ರಾಜಾ ಜನಕನೊಂದಿಗೆ ಮಾಡಿದ ವಾರ್ತಾಲಾಪ, ಬಂದೀ ಮತ್ತು ಅಷ್ಟಾವಕ್ರನ ಚರ್ಚೆ, ಬಂದಿಯ ಪರಾಜಯ, ಸಮಂಗಾದಲ್ಲಿ

ಸ್ನಾನಮಾಡಿದಾಗ ಅಷ್ಟಾವಕ್ರನ ಅಂಗಗಳು ಸರಿಯಾದುದು, ಲೋಮಶನಿಂದ ಈ ಸನ್ನಿವೇಶಗಳ ವರ್ಣನೆ (ವನ 133–134). ಲೋಮಶನಿಂದ ಕರ್ದಮಿಲ ಕ್ಷೇತ್ರ ಇತ್ಯಾದಿ ತೀರ್ಥಗಳ ಮಹಿಮೆ, ರೈಭ್ಯ ಮತ್ತು ಭರದ್ವಾಜ ಪುತ್ರ ಯವಕ್ರೀತ ಮುನಿಯ ಕಥೆ; ಋಷಿಗಳಿಗೆ ವಿರೋಧಮಾಡಿದುದರಿಂದ ಮೇಧಾವಿಯ ಮೃತ್ಯುವಿನ ವರ್ಣನೆ (ವನ 135). ಯವಕ್ರೀತನು ರೈಭ್ಯಮುನಿಯ ಸೊಸೆಯೊಂದಿಗೆ ಮಾಡಿದ ವ್ಯಭಿಚಾರ ಮತ್ತು ರೈಭ್ಯಮುನಿಯ ಕ್ರೋಧದಿಂದ ಹುಟ್ಟಿದ ರಾಕ್ಷಸನ ಮೂಲಕ ಅವನ ಮೃತ್ಯು ಇತ್ಯಾದಿ ಸಂದರ್ಭಗಳ ವರ್ಣನೆ (ವನ 136). ಭರದ್ವಾಜನು ಪುತ್ರ ಶೋಕದಿಂದ ವಿಲಪಿಸಿದುದು; ರೈಭ್ಯನಿಗೆ ಶಾಪವನ್ನಿತ್ತುದು, ಮತ್ತು ತಾನು ಅಗ್ನಿಪ್ರವೇಶ ಮಾಡಿದುದು. ಅರ್ವಾವಸುವಿನ ತಪಸ್ಸಿನ ಪ್ರಭಾವದಿಂದ ಪರಾವಸು ಬ್ರಹ್ಮಹತ್ಯಾ ದೋಷದಿಂದ ಮುಕ್ತನಾದುದು; ರೈಭ್ಯ, ಭರದ್ವಾಜ ಮತ್ತು ಯುವಕ್ರೀತಾದಿಗಳು ಪುನಃ ಜೀವಂತರಾದುದು, ಇತ್ಯಾದಿ ಸನ್ನಿವೇಶಗಳನ್ನು ಲೋಮಶನು ಹೇಳಿದ್ದನು (ವನ 137–138). ಪಾಂಡವರ ಉತ್ತರಾಖಂಡ ಯಾತ್ರೆಯ ಸಮಯದಲ್ಲಿ, ಲೋಮಶರಿಂದ ಅದರ ದುರ್ಗಮತೆಯ ಕುರಿತು ವರ್ಣನೆ (ವನ 139). ಲೋಮಶನು ನರಕಾಸುರವಧೆ ಮತ್ತು ಭಗವಂತನಾದ ವರಾಹನ ಮೂಲಕ ವಸುಧೆಯ ಉದ್ಧಾರವಾದ ಕಥೆ ಹೇಳಿದುದು (ವನ 142). ಲೋಮಶನು ಯುಧಿಷ್ಠಿರನಿಗೆ ವಿವಿಧ ಉಪದೇಶವನ್ನಿತ್ತು, ದೇವತೆಗಳ ಪರಮ ಪವಿತ್ರ ಸ್ಥಾನಕ್ಕೆ ಹೋದುದು (ವನ 176/22). ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/7). ಇವನಿಂದ ಅನ್ನದಾನದ ಮಹಿಮೆಯ ವರ್ಣನೆ (ಅನು 67/10). ಇವನಿಂದ ಧರ್ಮದ ರಹಸ್ಯಗಳ ವರ್ಣನೆ (ಅನು 129). ಈತ ಉತ್ತರದಿಕ್ಕಿನ ಋಷಿ (ವನ 165/46).

(2) ಬಿಡಾಲೋಪಾಖ್ಯಾನದಲ್ಲಿ ಬಂದಿರುವ ಗಂಡು ಬೆಕ್ಕು (ಶಾಂತಿ 138/22). ಪಲಿತನೆಂಬ ಇಲಿಯೊಡನೆ ಈತನ ಸಂವಾದ (ಶಾಂತಿ 138/34–198).

**ಲೋಮಹರ್ಷಣ** – ಒಬ್ಬ ಮುನಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/12).

**ಲೋಹ** – ಒಂದು ಪ್ರಾಚೀನ ದೇಶ. ಇದನ್ನು ಉತ್ತರದಿಗ್ವಿಜಯ ಕಾಲದಲ್ಲಿ ಅರ್ಜುನ ಗೆದ್ದಿದ್ದನು (ಸಭಾ 27/25).

**ಲೋಹಿತಾರಣೀ** – ಭಾರತ ವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/18).

**ಲೋಹಮೇಖಲಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/18,21).

**ಲೋಹವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಲೋಹಿತ** – (1) ಒಬ್ಬ ರಾಜ. ಈತನನ್ನು ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನನನ್ನು ತನ್ನ ಅಧೀನಕ್ಕೊಳಪಡಿಸಿದ್ದನು (ಸಭಾ 27/17).

(2) ಒಬ್ಬ ನಾಗ. ಈತ ವರುಣ ಸಭೆಯಲ್ಲಿ ಕುಳಿತು ಅಲ್ಲಿರುವ ಸೌಂದರ್ಯವನ್ನು ಹೆಚ್ಚಿಸುತ್ತಾನೆ (ಸಭಾ 9/8).

**ಲೋಹಿತಗಂಗಾ** – ಒಂದು ಸ್ಥಾನವಿಶೇಷ. ಇಲ್ಲಿ ಶ್ರೀಕೃಷ್ಣನು 'ವಿರೂಪಾಕ್ಷ' ಮತ್ತು 'ಪಂಚಜನ' ಹೆಸರಿನಿಂದ ಪ್ರಸಿದ್ಧರಾದ ಐದು ರಾಕ್ಷಸರ ವಧೆ ಮಾಡಿದ್ದನು (ಸಭಾ 38/29).

**ಲೋಹಿತಾಕ್ಷ** – ಬ್ರಹ್ಮನಿಂದ ಸ್ಕಂದನಿಗೆ ಕೊಡಲ್ಪಟ್ಟ ನಾಲ್ಕು ಪಾರ್ಷದರಲ್ಲಿ ಒಬ್ಬ. ಇತರ ಮೂವರ ಹೆಸರು – ನಂದಿಸೇನ, ಘಂಟಾಕರ್ಣ ಮತ್ತು ಕುಮುದಮಾಲಿ (ಶಲ್ಯ 45/24–25).

**ಲೋಹಿತಾಕ್ಷೀ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/22–24).

**ಲೋಹಿತಾಯನಿ** – ಕೆಂಪು ಸಾಗರನ ಮಗಳು. ಇವಳು ಸ್ಕಂದನ ದಾಯಿ. ಕದಂಬ ವೃಕ್ಷಗಳ ಮೇಲೆ ಇವಳ ಪೂಜೆ ನಡೆಯುತ್ತದೆ (ವನ 230/40–41).

**ಲೋಹಿತ್ಯಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/35).

**ಲೌಹಿತ್ಯ** – (1) ಒಂದು ಪ್ರಾಚೀನ ದೇಶ. ಪೂರ್ವ ದಿಗ್ವಿಜಯ ಕಾಲದಲ್ಲಿ ಭೀಮಸೇನನು ಈ ದೇಶಕ್ಕೆ ಹೋಗಿ, ಇಲ್ಲಿರುವ ಅನೇಕ ಮ್ಲೇಚ್ಛ ರಾಜರನ್ನು ಗೆದ್ದನು. ಮತ್ತು ಅವರಿಂದ ತರ

ತರದ ರತ್ನಗಳನ್ನು ಕಪ್ಪದ ರೂಪದಲ್ಲಿ ಪಡೆದನು (ಸಭಾ 30/26-27).

(2) ಶ್ರೀರಾಮನ ಪ್ರಭಾವದಿಂದ ಪ್ರಕಟವಾದ ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ತುಂಬಾ ಸುವರ್ಣದ ರಾಶಿಯನ್ನು ಪಡೆಯುತ್ತಾನೆ (ವನ 85/2). ಕಾರ್ತಿಕ ಪೂರ್ಣಿಮೆಯಂದು ಕೃತ್ತಿಕಾ ಯೋಗವಿದ್ದಾಗ, ಲೌಹಿತ್ಯ ತೀರ್ಥದಲ್ಲಿ ಸ್ನಾನ ಮಾಡುವವನಿಗೆ ಪುಂಡರೀಕ ಯಜ್ಞದ ಫಲ ಪ್ರಾಪ್ತವಾಗುತ್ತದೆ (ಅನು 25/46).

(3) ಒಂದು ಮಹಾನದಿ. ಈತ ವರುಣ ಸಭೆಯಲ್ಲಿದ್ದುಕೊಂಡು, ಅವನ ಉಪಾಸನೆ ಮಾಡುತ್ತಾನೆ. (ಆಧುನಿಕ 'ಬ್ರಹ್ಮಪುತ್ರ'ವನ್ನು ಲೌಹಿತ್ಯ ಅಥವಾ 'ಲೋಹಿತ್ಯ' ಎನ್ನುತ್ತಾರೆ (ಸಭಾ 9/22).

## ವ

**ವಂಶು** – ಒಂದು ನದಿ. ಇದರ ತಟದಲ್ಲಿ ಹುಟ್ಟಿದ ಕತ್ತೆಗಳು, ಸೌಂದರ್ಯ ಮತ್ತು ಬಲಗಳಲ್ಲಿ ವಿಖ್ಯಾತವಾಗಿವೆ. ಅನೇಕ ಮ್ಲೇಚ್ಛ ದೇಶಗಳ ರಾಜರು ಯುಧಿಷ್ಠಿರನಿಗೆ ರಾಜಸೂಯ ಯಾಗದಲ್ಲಿ ಕಾಣಿಕೆಕೊಡಲು, ಇಂತಹ ಕತ್ತೆಗಳನ್ನು ತಂದಿದ್ದರು (ಸಭಾ 51/17-20).

**ವಂಶಗುಲ್ಮ** – ಒಂದು ತೀರ್ಥ. ಇದು ಶೋಣ ಮತ್ತು ನರ್ಮದೆಯ ಉಗಮ ಸ್ಥಾನವಾಗಿದೆ. ಇಲ್ಲಿ ಸ್ನಾನ ಮಾಡಿದರೆ ಯಾತ್ರಿಕರು ಅಶ್ವಮೇಧ ಯಜ್ಞದ ಫಲ ಪಡೆಯುತ್ತಾರೆ (ವನ 85/9).

**ವಂಶಮೂಲಕ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ತನ್ನ ವಂಶದ ಉದ್ಧಾರ ಮಾಡುತ್ತಾನೆ (ವನ 83/41-42).

**ವಂಶಾ** – ಕಶ್ಯಪನ 'ಪ್ರಾಧಾ' ಎಂಬ ಪತ್ನಿಯಲ್ಲಿ ಹುಟ್ಟಿದ ಪುತ್ರಿ (ಆದಿ 65/45-46).

**ವಕ (ಬಕ)** – ಏಕಚಕ್ರದಿಂದ ಎರಡು ಕ್ರೋಶ ದೂರದಲ್ಲಿ, ಯಮುನೆಯ ದಡದಲ್ಲಿ, ಘೋರ ಕಾಂತಾರದಲ್ಲಿ, ಒಂದು ಗುಹೆಯಲ್ಲಿ ವಾಸಿಸುವ, ಒಬ್ಬ ಬಲವಂತನಾದ ನರಭಕ್ಷಕ ರಾಕ್ಷಸ. ಏಕಚಕ್ರಾ ನಗರ ಮತ್ತು ಅಲ್ಲಿರುವ ಜನಪದದ ಮೇಲೆ ಈತನ ಶಾಸನ ನಡೆಯುತ್ತಿತ್ತು (ಆದಿ 159/3-4). ಇವನಿಂದ ನಗರದ ರಕ್ಷಣೆ ಅವನಿಗೆ ಕಪ್ಪದ ರೂಪದಲ್ಲಿ ಕೊಡಲ್ಪಡುತ್ತಿದ್ದ ದೈನಿಕ ಭೋಜನ (ಆದಿ 159/5-7). ಈತನೊಡನೆ ಭೀಮಸೇನನ ಯುದ್ಧ ಮತ್ತು ಈತನ ವಧೆ (ಆದಿ 162/5 ರಿಂದ 163).

**ವಕದಾಲ್ಭ್ಯ** – (ಬಕದಾಲ್ಭ್ಯ). ಒಬ್ಬ ಪ್ರಾಚೀನ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿದ್ದನು (ಸಭಾ 4/11). ಇವನು ಯುಧಿಷ್ಠಿರನಿಗೆ ಬ್ರಾಹ್ಮಣರ ಮಹತ್ತ್ವ ಹೇಳಿದುದು (ವನ 26/6-20). ಇವನು ಇಂದ್ರನಿಗೆ ಚಿರಜೀವಿಗಳ ದುಃಖ ಸುಖಗಳನ್ನು ವರ್ಣಿಸಿದುದು (ವನ 193). ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನೊಡನೆ ಮಾರ್ಗ ಮಧ್ಯದಲ್ಲಿ ಈತನ ಭೇಟಿ (ಉದ್ಯೋಗ 83/64ರ ಅನಂತರ). ಇವನು ಧೃತರಾಷ್ಟ್ರನ ಅವನತಿಗಾಗಿ, ಅಗ್ನಿಯಲ್ಲಿ ಆಹುತಿಯನ್ನು ಕೊಟ್ಟ ಪ್ರಸಂಗ (ಶಲ್ಯ 41/5-27).

**ವಕನಖ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/58).

**ವಕವಧಪರ್ವ** (ಬಕವಧಪರ್ವ) – ಆದಿಪರ್ವದ ಒಂದು ಅವಾಂತರಪರ್ವ (ಅಧ್ಯಾಯ 156 ರಿಂದ 163).

**ವಕ್ರ** – ಒಬ್ಬ ರಾಜ. ಈತನ ಇನ್ನೊಂದು ಹೆಸರು ದಂತವಕ್ರ. ಇವನು ದ್ರೌಪದೀ ಸ್ವಯಂವರದಲ್ಲಿ ಲಕ್ಷ್ಯವೇಧಕ್ಕಾಗಿ ವಿಫಲಪ್ರಯತ್ನ ಮಾಡಿದ್ದನು (ಆದಿ 186/15). ಇವನು ಶ್ರೀಕೃಷ್ಣನಿಂದ ಹತನಾದನು (ಉದ್ಯೋಗ 130/48). ಇವನು ಕಲಿಂಗ ರಾಜ ಚಿತ್ರಾಂಗದನ ಮಗಳ ಸ್ವಯಂವರದಲ್ಲೂ ಉಪಸ್ಥಿತನಾಗಿದ್ದನು (ಶಾಂತಿ 4/6) (ವಿಶೇಷ ನೋಡಿರಿ– ದಂತವಕ್ರ).

**ವಕ್ರೋಗ್ರೀವ** – ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಪುತ್ರರಲ್ಲಿ ಒಬ್ಬ (ಅನು 4/53).

**ವಙ್ಗ** – ಪೂರ್ವ ಭಾರತದ ಒಂದು ಪ್ರಸಿದ್ಧ ಜನಪದ (ಆಧುನಿಕ ಬಂಗಾಲ). (ಆದಿ 214/9; ಭೀಷ್ಮ 9/46). ತೀರ್ಥಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಅರ್ಜುನನ ಆಗಮನ (ಆದಿ 214/9). ಭೀಮಸೇನನಿಂದ ಈ ದೇಶದ ರಾಜನ ಮೇಲೆ ಆಕ್ರಮಣ (ಸಭಾ 30/23). ವಂಗ

ದೇಶದ ರಾಜರು ಯುಧಿಷ್ಠಿರನ ಬಳಿಗೆ ಕಪ್ಪ ಕಾಣಿಕೆ ತೆಗೆದುಕೊಂಡು ಹೋಗಿದ್ದರು (ಸಭಾ 52/18). ದಿಗ್ವಿಜಯ ಕಾಲದಲ್ಲಿ ಕರ್ಣನು ಈ ದೇಶವನ್ನು ಗೆದ್ದಿದ್ದನು (ವನ 254/8). ಘಟೋತ್ಕಚನೊಂದಿಗೆ ವಂಗರಾಜನ ಯುದ್ಧ ಮತ್ತು ಪರಾಜಯ (ಭೀಷ್ಮ 92/6–12). ಒಮ್ಮೆ ಶ್ರೀಕೃಷ್ಣನು ವಂಗದೇಶವನ್ನು ಗೆದ್ದಿದ್ದನು (ದ್ರೋಣ 11/15). ಪರಶುರಾಮನು ಈ ದೇಶದ ಕ್ಷತ್ರಿಯರನ್ನು ಸಂಹಾರ ಮಾಡಿದ್ದನು (ದ್ರೋಣ 70/12). ಕರ್ಣನಿಂದ ಈ ದೇಶ ಜಯಿಸಲ್ಪಟ್ಟದ್ದು ಮತ್ತು ಆಶ್ರಿತವಾಗಿ ಮಾಡಲ್ಪಟ್ಟ ಕುರಿತು ವರ್ಣನೆ (ಕರ್ಣ 8/19). ಅಶ್ವಮೇಧದ ಯಜ್ಞರಕ್ಷಣೆಗಾಗಿ ಹೋಗಿದ್ದ ಅರ್ಜುನ ವಂಗ ದೇಶದ ಮ್ಲೇಚ್ಛ ಸೇನೆಯನ್ನು ಸೋಲಿಸಿದ್ದನು (ಆಶ್ವ 82/29–30).

**ವಜ್ರ** – (1) ಇಂದ್ರನ ಅಸ್ತ್ರ. ಇದು ವಿಶ್ವಕರ್ಮನ ಕೈಯಿಂದ, ದಧೀಚಿಯ ಎಲುಬುಗಳ ಮೂಲಕ ರಚಿಸಲ್ಪಟ್ಟಿತ್ತು (ವನ 100/24). ಇವನು ಇಂದ್ರನ ಪ್ರೇರಣೆಯಿಂದ ವ್ಯಾಘ್ರನಾಗಿ ಸುವರ್ಣಷ್ಠೀವಿಯನ್ನು ಕೊಂದುಹಾಕಿದ್ದನು (ಶಾಂತಿ 31/25–33). ಧಾತಾ ಎಂಬವನು ದಧೀಚಿಯ ಎಲುಬುಗಳ ಸಂಗ್ರಹಮಾಡಿ, ಅವುಗಳಿಂದ ವಜ್ರದ ನಿರ್ಮಾಣ ಮಾಡಿದ್ದನು (ಶಾಂತಿ 342/40–41).

(2) ವಿಶ್ವಾಮಿತ್ರನ ಬ್ರಹ್ಮಜ್ಞಾನಿ ಮಕ್ಕಳಲ್ಲಿ ಒಬ್ಬ (ಅನು 4/52).

(3) ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಮಗ. ಮೌಸಲಯುದ್ಧದಲ್ಲಿ ಯಾದವರ ಸಂಹಾರವಾದಾಗ, ಅರ್ಜುನನ ಮೂಲಕ ಈತ ಉಳಿದ ಯದುವಂಶದವರಿಗೆ ಇಂದ್ರಪ್ರಸ್ಥದಲ್ಲಿ ರಾಜನಾಗಿ ಮಾಡಲ್ಪಟ್ಟನು (ಮೌಸಲ 7/72). ಮಹಾಪ್ರಸ್ಥಾನ ಕಾಲದಲ್ಲಿ, ಯುಧಿಷ್ಠಿರನು ಸುಭದ್ರೆಯೊಡನೆ ರಾಜಾ ವಜ್ರನ ರಕ್ಷಣೆಯ ಬಗೆಗೆ ಎಚ್ಚರಿಸಿದುದು (ಮಹಾ ಪ್ರ 1/8–9).

**ವಜ್ರದತ್ತ** – ಪ್ರಾಜ್ಯೋತಿಷಪುರದ ರಾಜ. ಈತ ಭಗದತ್ತನ ಮಗ. ಇವನು ಯುದ್ಧದಲ್ಲಿ ತುಂಬಾ ಕಠೋರದವನಾಗಿದ್ದನು (ಆಶ್ವ 75/1). ಈತ ಅರ್ಜುನನೊಂದಿಗೆ ಯುದ್ಧಕ್ಕೆ ಸಿದ್ಧನಾಗಿ ಪಟ್ಟಣದಿಂದ ಹೊರಟದ್ದು ಮತ್ತು ಅಶ್ವಮೇಧದ ಅಶ್ವವನ್ನು ಹಿಡಿದು ನಗರದ ಕಡೆಗೆ ನಡೆದುದು (ಆಶ್ವ 75/2–3). ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಪರಾಜಯ (ಆಶ್ವ 75/5 ರಿಂದ 76/20 ವರೆಗೆ).

**ವಜ್ರನಾಭ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/63).

**ವಜ್ರಬಾಹು** – ಒಬ್ಬ ವಾನರ. ಇವನು ಕುಂಭಕರ್ಣನಿಗೆ ಗ್ರಾಸವಾಗಿದ್ದನು (ವನ 287/6).

**ವಜ್ರವಿಷ್ಕಂಭ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/10).

**ವಜ್ರವೇಗ** – ದೂಷಣನ ತಮ್ಮ. ಈತ ರಾವಣನ ಪ್ರೇರಣೆಯಿಂದ ವಿಶಾಲ ಸೇನೆಯೊಂದಿಗೆ ಕುಂಭಕರ್ಣನ ಹಿಂಬಾಲಕನಾಗಿದ್ದನು. ಇವನ ಒಬ್ಬ ಸಹೋದರನ ಹೆಸರು ಪ್ರಮಾಥಿ (ವನ 286/27). ಹನುಮಂತನಿಂದ ಇವನ ವಧೆ (ವನ 287/26).

**ವಜ್ರಶೀರ್ಷ** – ಪ್ರಜಾಪತಿ ಭೃಗುವಿನ ಏಳು ಮಂದಿ ವ್ಯಾಪಕ ಪುತ್ರರಲ್ಲಿ ಒಬ್ಬ. ಇವನ ಆರು ಸಹೋದರರ ಹೆಸರು – ಚ್ಯವನ, ಶುಚಿ, ಔರ್ವ, ಶುಕ್ರ, ವರೇಣ್ಯ ಮತ್ತು ಸವನ. ಇವರೆಲ್ಲ ಭೃಗುವಿನ ಸಮವಾದ ಗುಣವಂತರು (ಅನು 85/127–129).

**ವಜ್ರೀ** – ಒಬ್ಬ ಸನಾತನ ವಿಶ್ವೇದೇವ (ಅನು 91/33).

**ವಟ** – ಅಂಶನಿಂದ ಸ್ಕಂದನಿಗೆ ಕೊಡಲ್ಪಟ್ಟ ಐವರು ಅನುಚರರಲ್ಲಿ ಒಬ್ಬ. ಆ ನಾಲ್ಕು ಮಂದಿಯ ಹೆಸರುಗಳು – ಪರಿಘ, ಭೀಮ, ದಹತಿ ಮತ್ತು ದಹನ (ಶಲ್ಯ 45/34).

**ವಡವಾ** – ಒಂದು ತ್ರಿಭುವನ ವಿಖ್ಯಾತ ತೀರ್ಥ ಮತ್ತು ನದಿ. ಇಲ್ಲಿ ಸಾಯಂ ಸಂಧ್ಯಾ ಸಮಯದಲ್ಲಿ ವಿಧಿಪೂರ್ವಕ ಸ್ನಾನ ಮತ್ತು ಆಚಮನ ಮಾಡಿ, ಅಗ್ನಿದೇವನಿಗೆ ಚರು ನಿವೇದನೆ ಮಾಡುವ ಕ್ರಮವಿದೆ. ಅಲ್ಲಿ ಪಿತೃಗಳಿಗೆ ಕೊಡಲ್ಪಟ್ಟ ದಾನ ಅಕ್ಷಯವಾಗುತ್ತದೆ. 'ಸಪ್ತಚರು'ವೆಂದು ಇದರ ಹೆಸರಾಗಲು ಕಾರಣ (ವನ 82/92–99). ಅಲ್ಲಿ ಅಗ್ನಿಗೆ ಸಮರ್ಪಿತವಾದ ಚರು ಒಂದು ಲಕ್ಷ ಗೋದಾನ, ನೂರು ರಾಜಸೂಯ ಮತ್ತು ಸಾವಿರ ಅಶ್ವಮೇಧ ಯಜ್ಞಗಳಿಗಿಂತ ಕೂಡಾ ಅಧಿಕ ಕಲ್ಯಾಣಕಾರಿಯಾಗಿದೆ (ವನ

82/99–100). ವಡವಾನದಿಯನ್ನು ಅಗ್ನಿಯ ಉತ್ಪತ್ತಿ ಸ್ಥಾನವೆಂದು ಹೇಳಲಾಗಿದೆ (ವನ 22/24–25).

**ವಡವಾಗ್ನಿ** – ಸಮುದ್ರದ ಒಳಗಿರುವ ಒಂದು ಅಗ್ನಿ. ಇದನ್ನು ವಡವಾಮುಖವೆಂದೂ ಹೇಳುತ್ತಾರೆ. ಈ ಅಗ್ನಿಯ ಮುಖದಲ್ಲಿ ಸಮುದ್ರನು ತನ್ನ ಜಲರೂಪೀ ಹವಿಸ್ಸನ್ನು ಆಹುತಿ ಕೊಡುತ್ತಿರುತ್ತಾನೆ (ಆದಿ 21/16). ಮಹರ್ಷಿ ಔರ್ವನು ಕ್ರೋಧದಿಂದ, ಸಮಸ್ತ ಲೋಕಗಳ ವಿನಾಶದ ಸಂಕಲ್ಪ ಮಾಡಿದಾಗ, ಅವನ ಪಿತೃಗಳು ಬಂದು, ಅವನನ್ನು ಸಮಾಧಾನಪಡಿಸಿದರು ಮತ್ತು ಆತ ತನ್ನ ಕ್ರೋಧಾಗ್ನಿಯನ್ನು ಸಮುದ್ರದಲ್ಲಿ ಹಾಕಲು ಹೇಳಿದರು. ಪಿತೃಗಳ ಆದೇಶದಿಂದ ಅವನು ತನ್ನ ಕ್ರೋಧಾಗ್ನಿಯನ್ನು ಸಮುದ್ರಕ್ಕೆ ಹಾಕಿದನು. ಅದೇ ಈವತ್ತು ಕೂಡಾ, ಹೆಣ್ಣು ಕುದುರೆಯ ಮುಖದಂತಹ ಆಕೃತಿಯಿಂದ, ಮಹಾಸಾಗರದ ಜಲವನ್ನು ಕುಡಿಯುತ್ತದೆ. ವಡವಾ(ಹೆಣ್ಣು ಕುದುರೆ)ದಂತಹ ಮುಖಾಕೃತಿ ಇರುವುದರಿಂದಲೇ ಇವನನ್ನು ವಡವಾಗ್ನಿ ಎನ್ನುತ್ತಾರೆ (ಆದಿ 179/21–22). ವಡವಾನಲ ಮತ್ತು ಉದಾನದ ಏಕತೆ (ವನ 219/20). ಭಗವಾನ್ ಶಿವನ ಕ್ರೋಧವೇ ವಡವಾನಲನಾಗಿ, ಸಮುದ್ರದ ಜಲವನ್ನು ಕುಡಿಯುತ್ತಿರುತ್ತಾನೆ (ಸೌಪ್ತಿಕ 18/21).

**ವಡವಾಮುಖ** – ನಾರಾಯಣನ ಅವತಾರಭೂತನಾದ ಒಬ್ಬ ಪ್ರಾಚೀನ ಋಷಿ. ಇವನು ಸಮುದ್ರದ ನೀರನ್ನು ಉಪ್ಪುಪ್ಪಾಗಿ ಮಾಡಿದ್ದನು (ಶಾಂತಿ 342/60).

**ವತ್ಸ (ವತ್ಸಭೂಮಿ)** – (1) ಒಂದು ಭಾರತೀಯ ಜನಪದ. ಇದನ್ನು ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನ ಗೆದ್ದಿದ್ದನು (ಸಭಾ 30/10). ಕರ್ಣನು ಈ ದೇಶದ ಮೇಲೆ ವಿಜಯ ಪಡೆದಿದ್ದನು (ವನ 254/9–10). ವತ್ಸದೇಶದ ಪರಾಕ್ರಮಿಗಳಾದ ಭೂಮಿಪಾಲಕರು ಪಾಂಡವರ ಸಹಾಯಕರಾಗಿದ್ದರು. ಮತ್ತು ಅವರ ವಿಜಯವನ್ನು ಬಯಸುತ್ತಿದ್ದರು (ಉದ್ಯೋಗ 53/1–2). ವತ್ಸಭೂಮಿಯು ಸಿದ್ಧರಿಂದಲೂ ಚಾರಣರಿಂದಲೂ ಸೇವಿಸಲ್ಪಡುತ್ತದೆ. ಅಲ್ಲಿ ಪುಣ್ಯಾತ್ಮರ ಆಶ್ರಮಗಳಿವೆ. ಅಲ್ಲೆಲ್ಲಾ ಕಾಶೀರಾಜನ ಕನ್ಯೆ ಅಂಬಾ ಸಂಚರಿಸಿದ್ದಳು (ಉದ್ಯೋಗ 186/24). ಅಂಬಾ ವತ್ಸ ದೇಶದ ಭೂಮಿಯಲ್ಲಿ 'ಅಂಬಾ' ಎಂಬ ಹೆಸರಿನ ನದಿಯಾಗಿ ಪ್ರವಹಿಸಿದಳು. ಅದು ಮಳೆಗಾಲದಲ್ಲಿ ಮಾತ್ರ ಜಲದಿಂದ ತುಂಬಿರುತ್ತದೆ (ಉದ್ಯೋಗ 186/40). ವತ್ಸದೇಶದ ಯೋಧರು ಧೃಷ್ಟದ್ಯುಮ್ನನಿಂದ ನಿರ್ಮಿಸಲ್ಪಟ್ಟ ಕ್ರೌಂಚಾರುಣ ವ್ಯೂಹದ ಎಡರೆಕ್ಕೆಯಲ್ಲಿ ನಿಂತಿದ್ದರು (ಭೀಷ್ಮ 50/53). ಕರ್ಣನಿಂದ ಈ ದೇಶ ಜಯಿಸಲ್ಪಟ್ಟ ವರ್ಣನೆ (ಕರ್ಣ 8/20).

(2) ಕಾಶೀರಾಜ ಪ್ರತರ್ದನನ ಪುತ್ರ. ಇವನನ್ನು ಗೋಶಾಲೆಯಲ್ಲಿ ವತ್ಸಗಳು (ಕರುಗಳು). ಪಾಲಿಸಿದ್ದವು. ಆದುದರಿಂದಲೇ ಇವನ ಹೆಸರು ವತ್ಸನೆಂದಾಯಿತು (ಶಾಂತಿ 49/79).

(3) ಶರ್ಯಾತಿ ವಂಶದ ರಾಜ. ಹೈಹಯ ಮತ್ತು ತಾಲಜಂಘನ ತಂದೆ (ಅನು 30/7).

**ವತ್ಸನಾಭ** – ಒಬ್ಬ ಬುದ್ಧಿವಂತ ಮಹರ್ಷಿ. ಇವನ ಕಠೋರ ತಪಸ್ಸು ಮತ್ತು ಕೋಣನ ರೂಪಧರಿಸಿ ಧರ್ಮನ ಮೂಲಕ, ಮಳೆಯಿಂದ ಇವನ ರಕ್ಷಣೆ (ಅನು 12/ದಾ.ಪಾಠ). ತನ್ನಲ್ಲಿ ಕೃತಘ್ನತೆಯ ದೋಷವನ್ನು ಕಂಡು, ಈತ ಶರೀರ ತ್ಯಾಗಮಾಡಲು ಆಲೋಚಿಸಿದುದು; ಧರ್ಮನು ಸಮಾಧಾನಗೊಳಿಸಿ ತಡೆದುದು, ಇವನ ಆಯುಸ್ಸು ಅನೇಕ ನೂರು ವರ್ಷಗಳಷ್ಟಿದೆಯೆಂದು ತಿಳಿಸಿದುದು (ಅನು 12).

**ವತ್ಸಲ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ವದಾನ್ಯ** – ಒಬ್ಬ ಪ್ರಾಚೀನ ಋಷಿ. ಅಷ್ಟಾವಕ್ರನು ಈತನು ಕನ್ಯೆಯನ್ನು ಯಾಚಿಸಿದ್ದನು. ಇವನು ಅಷ್ಟಾವಕ್ರನಿಗೆ ತನ್ನ ಕನ್ಯೆಯ ವಿವಾಹಕ್ಕಿರುವ ನಿಯಗಳನ್ನು ಹೇಳಿದುದು ಮತ್ತು ಅವನನ್ನು ಉತ್ತರದಿಕ್ಕಿಗೆ ಕಳುಹಿಸಿದುದು (ಅನು 19/24–25). ಹಿಂತಿರುಗಿದ ಬಳಿಕ ಅಷ್ಟಾವಕ್ರನ ಯಾತ್ರೆಯ ಕುರಿತು ಈತನ ಪ್ರಶ್ನೆ (ಅನು 21/13–14). ಅಷ್ಟಾವಕ್ರನೊಡನೆ ತನ್ನ ಕನ್ಯೆಯ ವಿವಾಹ ಮಾಡಿದುದು (ಅನು 21/17–18).

**ವಧೂಸರಾ** – ಚ್ಯವನ ಮುನಿಯ ಆಶ್ರಮ ಸಮೀಪದಲ್ಲಿ ಹರಿಯುವ ಒಂದು ನದಿ. ಇದು ಭೃಗುಪತ್ನಿ ಪುಲೋಮೆಯ ಕಣ್ಣೀರಿನಿಂದ ಪ್ರಕಟಗೊಂಡಿತ್ತು. ಇದು ವಧು(ಪುಲೋಮಾ)ವನ್ನು ಅನುಸರಿಸುತ್ತಿತ್ತು. ಆದುದರಿಂದ ಬ್ರಾಹ್ಮಣನು

ಇದಕ್ಕೆ 'ವಧೂಸರಾ' ಎಂಬ ಹೆಸರಿಟ್ಟನು (ಆದಿ 125/6–8). ಇದೊಂದು ಪುಣ್ಯಮಯವಾದ ನದಿ. ಇದರಲ್ಲಿ ಸ್ನಾನ ಮಾಡಿದುದರಿಂದ, ಪರಶು ರಾಮನಿಗೆ ತೇಜೋಮಯ ಶರೀರ ಪ್ರಾಪ್ತ ವಾಯಿತು (ವನ 99/68).

**ವಧ್ರ** – ಒಂದು ಭಾರತೀಯ ಜನಪದ (ಭೀಷ್ಮ 9/55).

**ವಧ್ಯಶ್ವ** – ಒಬ್ಬ ರಾಜ. ಈತ ಯಮಸಭೆ ಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

**ವನಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ವನವಾಸಿಕ** – ಒಂದು ಭಾರತೀಯ ಜನಪದ (ಭೀಷ್ಮ 9/58).

**ವನಾಯು** – (1) ಕಶ್ಯಪ ಪತ್ನಿ ದನುವಿನ ಒಬ್ಬ ಮಗ. ಇವನು ದನುವಿನ ಹತ್ತು ಪ್ರಧಾನ ಪುತ್ರರಲ್ಲಿ ಒಬ್ಬ (ಆದಿ 65/30).

(2) ಊರ್ವಶಿಯ ಗರ್ಭದಿಂದ ಪುರೂರವನಿಗೆ ಹುಟ್ಟಿದ ಆರು ಪುತ್ರರಲ್ಲಿ ಒಬ್ಬ. ಉಳಿದ ಐದು ಮಂದಿಯ ಹೆಸರು ಆಯು, ಧೀಮಾನ್, ಅಮಾವಸು, ದೃಢಾಯು, ಮತ್ತು ಶತಾಯು (ಆದಿ 75/25–26).

(3) ಒಂದು ಭಾರತೀಯ ಜನಪದ (ಭೀಷ್ಮ 9/56).

**ವನೇಯು** – ಪೂರುಪುತ್ರ ರೌದ್ರಾಶ್ವನಿಂದ ಮಿಶ್ರೇ ಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ವನು. ಇವನಿಗೆ ಇತರ ಒಂಭತ್ತು ಸಹೋದರರಿ ದ್ದರು. ಅವರ ಹೆಸರುಗಳು ಋಚೇಯು, ಕಕ್ಷೇಯು, ಕೃಕಣೇಯು, ಸ್ಥಂಡಿಲೇಯು, ಜಲೇಯು, ತೇಜೇಯು, ಸತ್ಯೇಯು, ಧರ್ಮೇಯು ಮತ್ತು ಸಂತತೇಯು (ಆದಿ 94/ 8–11).

**ವನ್ದನಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/18).

**ವನ್ದೀ (ಬನ್ದೀ)** – ರಾಜಾ ಜನಕನ ಓಲಗ ಚಾವಡಿಯಲ್ಲಿ ಶಾಸ್ತ್ರಾರ್ಥಿಯಾಗಿದ್ದ ಪಂಡಿತ (ವನ 132/4). ಇವನ ಮೂಲಕ ಕಹೋಡ (ಕಹೋಳ)ನು ನೀರಲ್ಲಿ ಮುಳುಗಿಸಲ್ಪಟ್ಟದ್ದು (ವನ 132/15). ಇವನೊಂದಿಗೆ ಅಷ್ಟಾವಕ್ರನ ಶಾಸ್ತ್ರಾರ್ಥ (ವನ 134/3–20). ಶಾಸ್ತ್ರಾರ್ಥದಲ್ಲಿ ಅಷ್ಟಾವಕ್ರ ನಿಂದ ಈತನ ಪರಾಜಯ (ವನ 134/21). ಈತ ರಾಜಾಜನಕನಲ್ಲಿ ವರುಣಪುತ್ರನೆಂದು ತನ್ನ ಪರಿಚಯ ಹೇಳಿದುದು (ವನ 134/24). ಸಮುದ್ರದಲ್ಲಿ ಪ್ರವೇಶಮಾಡಿದುದು (ವನ 134/37).

**ವಪು** – ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮ ಕಾಲದಲ್ಲಿ ನೃತ್ಯಮಾಡಿದ್ದಳು (ಆದಿ 122/63).

**ವಪುಷ್ಟಮಾ** – ಕಾಶೀರಾಜ ಸುವರ್ಣವರ್ಮನ ಪುತ್ರಿ. ಈಕೆ ಪರೀಕ್ಷಿತ ಕುಮಾರ ಜನಮೇಜಯನ ಪತಿವ್ರತೆಯಾದ ಪತ್ನಿಯಾಗಿದ್ದಳು (ಆದಿ 44/ 8–11). ಇವಳ ಗರ್ಭದಿಂದ ಶತಾನೀಕ ಮತ್ತು ಶಂಕುಕರ್ಣರೆಂಬ ಇಬ್ಬರು ಪುತ್ರರು ಹುಟ್ಟಿದರು (ಆದಿ 95/86).

**ವಪುಷ್ಮತೀ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/11).

**ವರದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ವರದಾನ** – ದ್ವಾರಕೆಯ ಸಮೀಪದ ಒಂದು ತೀರ್ಥ. ಇಲ್ಲಿ ಮುನಿವರ ದುರ್ವಾಸನು ಶ್ರೀಕೃಷ್ಣ ನಿಗೆ ವರಕೊಟ್ಟಿದ್ದನು. ಅಲ್ಲಿ ಸ್ನಾನ ಮಾಡುವು ದರಿಂದ ಮನುಷ್ಯ ಸಾವಿರ ಗೋದಾನದ ಫಲ ವನ್ನು ಪಡೆಯುತ್ತಾನೆ (ವನ 82/63–64).

**ವರದಾಸಂಗಮ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನದ ಫಲ ದೊರಕುತ್ತದೆ (ವನ 85/35).

**ವರಯು** – ಮಹೌಜ ವಂಶದ ಒಬ್ಬ ಕುಲ ಕಂಟಕ ರಾಜ (ಉದ್ಯೋಗ 74/15).

**ವರಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/26).

**ವರಾಂಗೀ** – ಈಕೆ ಸೋಮವಂಶದ ರಾಜಾ ಸಂಯಾತಿಯ ಪತ್ನಿಯಾಗಿದ್ದಳು. ಇವಳ ತಂದೆಯ ಹೆಸರು ದೃಷದ್ವಂತನೆಂದಾಗಿತ್ತು. ಇವಳ ಗರ್ಭದಿಂದ ಸಂಯಾತಿಯ ಮೂಲಕ ಅಹಂಯಾತಿಯ ಜನ್ಮವಾಗಿತ್ತು (ಆದಿ 95/14).

**ವರಾಹ** – (1) ಪ್ರಾಚೀನ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/17).

(2) ಮಗಧದ ರಾಜಧಾನಿ ಗಿರಿವ್ರಜದ ಸಮೀಪವಿರುವ ಒಂದುಪರ್ವತ (ಸಭಾ 21/2).
(3) ಭಗವಂತ ವಿಷ್ಣುವಿನ ಒಂದು ಅವತಾರ. ಇವನ ಮೂಲಕ ಏಕಾರ್ಣವದ ಜಲದಲ್ಲಿ ಮುಳುಗಿದ್ದ ಪೃಥ್ವಿಯ ಉದ್ಧಾರ. ವರಾಹಾವತಾರದ ಸಂಕ್ಷಿಪ್ತ ಚರಿತ್ರೆಯ ವರ್ಣನೆ. ಇವನಿಂದ ಹಿರಣ್ಯಾಕ್ಷನ ವಧೆ (ಸಭಾ 38/29).

**ವರಾಹಕ** – ಧೃತರಾಷ್ಟ್ರ ಕುಲೋತ್ಪನ್ನನಾದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಭಸ್ಮವಾದನು (ಆದಿ 57/18).

**ವರಾಹಕರ್ಣ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿರುತ್ತಾ, ಆತನ ಸೇವೆಮಾಡುತ್ತಾನೆ (ಸಭಾ 10/16).

**ವರಾಹಾಂಬ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ (ಶಾಂತಿ 227/52).

**ವರಿಷ್ಠ** – ಚಾಕ್ಷುಷ ಮನುವಿನ ಪುತ್ರ (ಅನು 18/20). ಇವನಿಂದ ಗೃತ್ಸಮದ ಋಷಿಗೆ ಶಾಪ (ಅನು 18/23–25).

**ವರೀ** – ಒಬ್ಬ ಸನಾತನ ವಿಶ್ವೇದೇವ (ಅನು 91/33).

**ವರೀತಾಕ್ಷ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಪೂರ್ವಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಕಾಲವಶದಿಂದ ಇದನ್ನು ಬಿಟ್ಟು ಮರಣ ಪಡೆದನು (ಶಾಂತಿ 227/52).

**ವರುಣ** – (1) ಕಶಪ್ಯನಿಂದ ಅದಿತಿಯ ಗರ್ಭದಲ್ಲಿ ಹುಟ್ಟಿದ ದ್ವಾದಶಾದಿತ್ಯರಲ್ಲಿ ಒಬ್ಬ (ಆದಿ 65/15). ಇವನ ಜ್ಯೇಷ್ಠ ಪತ್ನಿ ದೇವೀ ಎಂಬವಳು, ಇವನ ವೀರ್ಯದಿಂದ ಬಲನೆಂಬ ಒಬ್ಬ ಪುತ್ರನಿಗೂ, ಸುರಾ ಎಂಬ ಹೆಸರಿನ ಕನ್ಯೆಗೂ ಜನ್ಮಕೊಟ್ಟಿದ್ದಳು (ಆದಿ 66/52). ಮಹರ್ಷಿ ವಸಿಷ್ಠನು ಇವನ ಪುತ್ರರೂಪದಿಂದ ಹುಟ್ಟಿದ್ದನು (ಆದಿ 99/5). ಈತ ಅರ್ಜುನನ ಜನ್ಮಸಮಯದಲ್ಲಿ ಅಲ್ಲಿ ಉಪಸ್ಥಿತನಾಗಿದ್ದನು (ಆದಿ 122/66). ಈತ ನಾಲ್ಕನೆಯ ಲೋಕಪಾಲನು. ಅದಿತಿಯ ಪುತ್ರ, ಜಲಾಧೀಶ ಮತ್ತು ಜಲದಲ್ಲೇ ವಾಸಮಾಡುವವನಾಗಿದ್ದಾನೆ. ಅಗ್ನಿಯು ಇವನ ಸ್ಮರಣೆ ಮಾಡಿದನು ಮತ್ತು ಇವನು ಅಗ್ನಿಗೆ ದರ್ಶನವಿತ್ತನು. ಅಗ್ನಿ ಇವನಿಂದ ದಿವ್ಯಧನುಸ್ಸು, ಅಕ್ಷಯ ತೂಣೀರ ಮತ್ತು ಕಪಿಧ್ವಜವುಳ್ಳ ರಥವನ್ನು ಯಾಚಿಸಿದನು. ವರುಣನು ಆ ಎಲ್ಲಾ ವಸ್ತುಗಳನ್ನು ಅವನಿಗೆ ಕೊಟ್ಟನು (ಆದಿ 224/1–6). ಇವನು ಪಾಶ ಮತ್ತು ವಜ್ರವನ್ನು ತೆಗೆದುಕೊಂಡು ಶ್ರೀಕೃಷ್ಣ ಮತ್ತು ಅರ್ಜುನನ ಮೇಲೆ ಆಕ್ರಮಣ ಮಾಡಿದ್ದನು (226/32–37). ನಾರದರಿಂದ ಇವನ ದಿವ್ಯಸಭೆಯ ವರ್ಣನೆ (ಸಭಾ 9). ಈತ ಬ್ರಹ್ಮಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 11/51). ಇವನಿಂದ ಅರ್ಜುನನಿಗೆ ಪಾಶವೆಂಬ ಹೆಸರಿನ ಅಸ್ತ್ರದ ದಾನ (ವನ 41/27–32). ಇವನು ರಾಜಾ ನಳನಿಗೆ ದಮಯಂತೀ ಸ್ವಯಂವರದ ಸಂದರ್ಭದಲ್ಲಿ ವರವನ್ನಿತ್ತದ್ದು (ವನ 57/38). ಈತ ಇತರ ದೇವತೆಗಳೊಂದಿಗೆ 'ವಿಶಾಖ ಯಾಪ'ದಲ್ಲಿ ತಪಸ್ಸು ಮಾಡಿದ್ದನು. ಆದುದರಿಂದ ಆ ಸ್ಥಾನ ಪರಮ ಪವಿತ್ರವೆಂದು ಗಣಿಸಲ್ಪಟ್ಟಿದೆ (ವನ 90/16). ಋಚೀಕಮುನಿಗೆ ವರುಣನು ಒಂದು ಕಿವಿ ಕಪ್ಪಾದ ಒಂದು ಸಾವಿರ ಕುದುರೆಗಳನ್ನು ಕೊಟ್ಟಿದ್ದನು (ವನ 115/27). ರಾಜಾಜನಕನ ಸಭೆಯಲ್ಲಿದ್ದ ಶಾಸ್ತ್ರಾರ್ಥೀ ಪಂಡಿತನಾದ ವಂದಿ ಇವನ ಮಗನೇ ಆಗಿದ್ದನು (ವನ 134/24). ಇವನಿಂದ ಸೀತೆಯ ಪರಿಶುದ್ಧತೆಯ ಸಮರ್ಥನೆ (ವನ 291/29). ಇವನು ನೂರು ವರ್ಷಗಳ ಕಾಲ ಗಾಂಡೀವ ಧನುಸ್ಸನ್ನು ಧಾರಣೆಮಾಡಿಕೊಂಡಿದ್ದನು (ವಿರಾಟ 43/6). ಇವನ ಪತ್ನಿಯ ಹೆಸರು ಗೌರಿ (ಉದ್ಯೋಗ 117/9). ಒಮ್ಮೆ ಶ್ರೀಕೃಷ್ಣನು ಈತನನ್ನು ಗೆದ್ದಿದ್ದನು (ಉದ್ಯೋಗ 130/49). ಇವನಿಂದ ಶ್ರುತಾಯುಧನ ತಾಯಿ ಪರ್ಣಾಶಾ ಎಂಬವಳಿಗೆ ವರದಾನ (ದ್ರೋಣ 92/47–49). ಶ್ರುತಾಯುಧನಿಗೆ ಗದೆಯನ್ನಿತ್ತು, ಅದರ ಪ್ರಯೋಗದ ನಿಯಮವನ್ನು ತಿಳಿಸಿದುದು (ದ್ರೋಣ 92/50–51). ಇವನಿಂದ ಸ್ಕಂದನಿಗೆ ಯಮ ಮತ್ತು ಅತಿಯಮರೆಂಬ ಇಬ್ಬರು ಪಾರ್ಷದರ ಕೊಡುಗೆ (ಶಲ್ಯ 45/45–46). ಈತ ಸ್ಕಂದನಿಗೆ ಒಂದು ನಾಗ(ಆನೆ)ವನ್ನು ಉಡುಗೊರೆ ನೀಡಿದುದು (ಶಲ್ಯ 46/52, ಅನು 86/25). ದೇವತೆಗಳಿಂದ ಜಲೇಶ್ವರ ಪದವಿಯಲ್ಲಿ ಈತನಿಗೆ ಅಭಿಷೇಕ (ಶಲ್ಯ 47/9–10). ಇವನು ಸರಸ್ವತಿ ನದಿಯ ಯಮುನಾ ತೀರ್ಥದಲ್ಲಿ ರಾಜಸೂಯಾ

ಧ್ವರ ಮಾಡಿದ್ದನು (ಶಲ್ಯ 49/11–12). ಇವನಿಂದ ಉತಥ್ಯನ ಮಡದಿಯಾದ ಭದ್ರೆಯ ಅಪಹರಣ (ಅನು 154/13). ಉತಥ್ಯನು ಸಮುದ್ರದ ಎಲ್ಲಾ ನೀರನ್ನು ಕುಡಿದಾಗ, ಈತ ಅವನ ಪತ್ನಿಯನ್ನು ಹಿಂತಿರುಗಿಸಿದುದು (ಅನು 154/28). ಪರಮ ಧಾಮಗಮನದ ಸಂದರ್ಭದಲ್ಲಿ ಬಲರಾಮನನ್ನು ಸ್ವಾಗತಿಸಲು ಈತ ಬಂದಿದ್ದನು (ಮೌಸಲ 4/16). ಅಗ್ನಿಯು ವರುಣನಿಗೆ ಹಿಂತಿರುಗಿಸು ವುದಕ್ಕಾಗಿ ಅರ್ಜುನನಿಂದ ಗಾಂಡೀವ ಧನುಸ್ಸು ಮತ್ತು ದಿವ್ಯ ತೂಣೀರಗಳನ್ನು ನೀರಿಗೆ ಹಾಕಿಸಿ ದ್ದನು (ಮಹಾಪ್ರ. 1/41–42). ಮಹಾಭಾರತ ದಲ್ಲಿ ಬಂದಿರುವ ವರುಣನ ಹೆಸರುಗಳು – ಅದಿತಿಪುತ್ರ, ಆದಿತ್ಯ, ಅಂಬುಪ, ಅಂಬುಪತಿ, ಅಂಬುರಾಟ್, ಅಂಬದೀಶ, ಅಪಾಂಪತಿ, ದೇವ ದೇವ, ಗೋಪತಿ, ಜಲಾಧಿಪ, ಜಲೇಶ್ವರ, ಲೋಕ ಪಾಲ, ಸಲಿಲರಾಜ, ಸಲಿಲೇಶ, ಸಲಿಲೇಶ್ವರ, ಉದಕ್ಪತಿ, ವಾರಿಪ, ಯಾದಸಾಂಭರ್ತಾ, ಯಾದಸಾಂಪತಿ ಇತ್ಯಾದಿ.

(2) ಒಬ್ಬ ದೇವಗಂಧರ್ವ. ಈತ ಕಶ್ಯಪನ ಪತ್ನಿ ಮುನಿಯ ಮಗ (ಆದಿ 65/42).

(3) ಸಾಗರ ಮತ್ತು ಸಿಂಧುನದಿಯ ಸಂಗಮ ದಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡಿ, ಶುದ್ಧಚಿತ್ತನಾಗಿ, ದೇವತೆಗಳಿಗೆ, ಋಷಿಗಳಿಗೆ ಮತ್ತು ಪಿತೃಗಳಿಗೆ ತರ್ಪಣಕೊಡುವ ಪದ್ಧತಿ ಇದೆ. ಹೀಗೆ ಮಾಡುವುದರಿಂದ ಮನುಷ್ಯನು ದಿವ್ಯಕಾಂತಿಯಿಂದ ದೇದೀಪ್ಯಮಾನನಾಗಿ ವರುಣ ಲೋಕವನ್ನು ಪ್ರಾಪ್ತಿಸಿಕೊಳ್ಳುತ್ತಾನೆ (ವನ 82/ 68–69).

**ವರುಣದ್ವೀಪ** – ಒಂದು ದ್ವೀಪದ ಹೆಸರು (ಸಭಾ 38/29).

**ವರುಣಶ್ರೋತಸ** – ದಕ್ಷಿಣದಿಕ್ಕಿನಲ್ಲಿ ಮಾಠರ ವನದ ಒಳಗೆ ಶೋಭಾಯಮಾನವಾದ ಮಾಠರ (ಸೂರ್ಯನ ಪಕ್ಕದಲ್ಲಿರುವ ದೇವತೆ)ನ ವಿಜಯ ಸ್ತಂಭ, ಇದು ಪ್ರವೇಣೀ ನದಿಯ ಉತ್ತರಕ್ಕಿರುವ ಮಾರ್ಗದಲ್ಲಿ ಕಣ್ವನ ಪುಣ್ಯಮಯ ಆಶ್ರಮದಲ್ಲಿದೆ (ವನ 88/10–11).

**ವರೂಥ** – ವರೂಥವೆಂದರೆ ರಥದಲ್ಲಿ ಕುಳಿತಿರು ವವರಿಗೆ ಹೊಡೆತ ಬೀಳದಂತೆ ಸುತ್ತಲೂ ಹಾಕಿ ರುವ ಕಟಕಟೆ (ಉದ್ಯೋಗ 155) (ಭಾ.ಪ್ರ.).

**ವರೂಥಿನೀ** – ಒಬ್ಬ ಅಪ್ಸರೆ. ಈಕೆ ಇಂದ್ರ ಸಭೆಯಲ್ಲಿ ಅರ್ಜುನನ ಸ್ವಾಗತಕ್ಕಾಗಿ ನೃತ್ಯ ಮಾಡಿದ್ದಳು (ವನ 43/29).

**ವರೇಣ್ಯ** – ಪ್ರಜಾಪತಿ ಭೃಗುವಿನ ಏಳು ಮಂದಿ ವ್ಯಾಪಕ ಪುತ್ರರಲ್ಲಿ ಒಬ್ಬ. ಇವನ ಆರು ಮಂದಿ ಸಹೋದರರ ಹೆಸರು – ಚ್ಯವನ, ಶುಚಿ, ಔರ್ವ, ಶುಕ್ರ, ವಜ್ರಶೀರ್ಷ ಮತ್ತು ಸವನ. ಇವರೆಲ್ಲರೂ ಭೃಗುವಿನಂತೆ ಗುಣವಂತರಾಗಿದ್ದರು (ಅನು 85/126–129).

**ವರ್ಗಾ** – ಒಬ್ಬ ಅಪ್ಸರೆ. ಈಕೆ ಕುಬೇರನ ಪ್ರೇಯಸಿಯಾಗಿದ್ದಳು. ಆದರೆ ಯಾವನೋ ಬ್ರಾಹ್ಮಣನ ಶಾಪದಿಂದ, ಸೌಭದ್ರವೆಂಬ ತೀರ್ಥ ದಲ್ಲಿ ಮೊಸಳೆಯಾಗಿ ವಾಸಿಸತೊಡಗಿದರು. ಸಖಿಯರ ಸಹಿತ ಈಕೆ ಮೊಸಳೆಯಾಗಲು ಕಾರಣ (ಆದಿ 215/15–21). ಅರ್ಜುನನ ಮೂಲಕ, ಮೊಸಳೆಯ ಜನ್ಮದಿಂದ ಈಕೆಯ ಉದ್ಧಾರ (ಆದಿ 215/12). (ಇವಳಿಗೆ ಸೌರ ಭೇಯಿ, ಸಮೀಚೀ, ಬುದ್‌ಬುದಾ ಮತ್ತು ಲತಾ ಎಂಬ ನಾಲ್ವರು ಸಖಿಯರಿದ್ದರು. ಅವರೆಲ್ಲರೂ ಬ್ರಾಹ್ಮಣನ ಶಾಪದಿಂದ ಬೇರೆ ಬೇರೆ ತೀರ್ಥ ಗಳಲ್ಲಿ ಮೊಸಳೆಗಳಾಗಿದ್ದರು. ಇವಳ ಪ್ರಾರ್ಥನೆ ಯಂತೆ ಅರ್ಜುನನು ಅವರೆಲ್ಲರ ಉದ್ಧಾರ ಮಾಡಿದನು.) ನಾರದನ ಮೂಲಕ ಇವಳಿಗೆ ಮತ್ತು ಇವಳ ಸಖಿಯರಿಗೆ ದಕ್ಷಿಣ ಸಮುದ್ರದ ಸಮೀಪದಲ್ಲಿರುವ ತೀರ್ಥಗಳಿಗೆ ಹೋಗಲು ಆದೇಶ ಮತ್ತು ಅರ್ಜುನನಿಂದ ಇವರೆಲ್ಲರ ಉದ್ಧಾರವಾಗುವ ಆಶ್ವಾಸನೆ (ಆದಿ 216/17). ಈಕೆ ಕುಬೇರನ ಸಭೆಯಲ್ಲಿ ಧನಾಧ್ಯಕ್ಷನ ಸೇವೆಗೋಸ್ಕರ ಉಪಸ್ಥಿತಳಾಗಿರುತ್ತಾಳೆ (ಸಭಾ 10/12).

**ವರ್ಚಾ** – (1) ಸೋಮನೆಂಬ ವಸುವಿನ ಪ್ರಥಮ ಪುತ್ರ. ಇವನ ತಾಯಿಯ ಹೆಸರು ಮನೋಹರಾ ಎಂದಾಗಿತ್ತು (ಆದಿ 66/22). ಈತನೇ ಅಭಿಮನ್ಯುವಿನ ರೂಪದಲ್ಲಿ ಪ್ರಕಟಗೊಂಡಿದ್ದನು (ಆದಿ 67/112–113; ಸ್ವರ್ಗಾ 5/18–19).

(2) ಗೃತ್ಸಮದ ವಂಶದ ಸುಚೇತನೆಂಬ ಬ್ರಾಹ್ಮಣನ ಪುತ್ರ. ಇವನು ವಿಹವ್ಯನ ತಂದೆ ಯಾಗಿದ್ದನು (ಅನು 30/61).

**ವರ್ಣಸಂಕರ** – ಬೇರೆ ಬೇರೆ ವರ್ಣದ ತಂದೆ

29

ತಾಯಿಗಳಿಂದ ಹುಟ್ಟಿದ ಸಂತಾನ. ಇದರ ಭೇದಗಳ ವಿಸ್ತೃತ ವರ್ಣನೆ (ಅನು 47).

**ವರ್ಧನ** – ಅಶ್ವಿನೀಕುಮಾರರ ಮೂಲಕ ಸ್ಕಂದ ನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ನಂದನನೆಂದಾಗಿತ್ತು (ಶಲ್ಯ 45/38).

**ವರ್ಧಮಾನ** – ಹಸ್ತಿನಾಪುರನಗರದ ಒಂದು ಪ್ರಧಾನ ದ್ವಾರ (ಆದಿ 125/9).

**ವರ್ಮಕ** – ಒಂದು ದೇಶ. ಇಲ್ಲಿರುವವರನ್ನು ಪೂರ್ವದಿಗ್ವಿಜಯ ಕಾಲದಲ್ಲಿ ಭೀಮಸೇನನು ಗೆದ್ದಿದ್ದನು (ಸಭಾ 30/13).

**ವಲ್ಕಲ** – ಒಂದು ಭಾರತೀಯ ಜನಪದ (ಭೀಷ್ಮ 9/62).

**ವಲ್ಗುಜಂಘ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/52).

**ವಲ್ಲಭ** – ಬಲಾಕಾಶ್ವನ ಪುತ್ರ, ಇವನು ಸಾಕ್ಷಾತ್ ಧರ್ಮನಂತಿದ್ದನು. ಇವನ ಪುತ್ರನ ಹೆಸರು ಕುಶಿಕನೆಂದಾಗಿತ್ತು (ಅನು 4/5).

**ವಶಾತಲ** – ಒಂದು ದೇಶ ಮತ್ತು ಅಲ್ಲಿರುವ ಕ್ಷತ್ರಿಯ ರಾಜಕುಮಾರರು. ಇವರು ರಾಜಾ ಯುಧಿಷ್ಠಿರನಿಗೆ ಉಡುಗೊರೆ ತಂದಿದ್ದರು (ಸಭಾ 52/15–17).

**ವಸಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/31).

**ವಸಾತಿ** – (1) ಈತ ಸೋಮವಂಶದ ಮಹಾ ರಾಜ ಕುರುವಿನ ವಂಶದಲ್ಲಿ ಹುಟ್ಟಿದ ರಾಜಾ ಜನಮೇಜಯನ ಎಂಟನೆಯ ಪುತ್ರನಾಗಿದ್ದನು (ಆದಿ 94/57).

(2) ಒಂದು ಭಾರತೀಯ ಜನಪದ. ಇಲ್ಲಿರುವ ವೀರಕ್ಷತ್ರಿಯರು ದುರ್ಯೋಧನನ ಆಜ್ಞೆಯಿಂದ, ಭೀಷ್ಮನ ರಕ್ಷಣೆಗೆ ನಿಯುಕ್ತರಾಗಿದ್ದು, ತತ್ಪರತೆ ಯಿಂದ ಆತನ ರಕ್ಷಣೆ ಮಾಡತೊಡಗಿದರು (ಭೀಷ್ಮ 51/14).

**ವಸಾತೀಯ** – ಕೌರವ ಪಕ್ಷದ ಒಬ್ಬ ಯೋಧ. ಈತ ಅಭಿಮನ್ಯುವಿನೊಂದಿಗೆ ಯುದ್ಧಮಾಡಿ, ಅವನಿಂದ ಕೊಲ್ಲಲ್ಪಟ್ಟನು (ದ್ರೋಣ 44/8–11).

**ವಸಿಷ್ಠ (ವಶಿಷ್ಠ)** – ಒಬ್ಬ ಪ್ರಸಿದ್ಧ ಬ್ರಹ್ಮರ್ಷಿ. ಈತ ಬ್ರಹ್ಮನ ಮಾನಸಪುತ್ರ. ಒಂದು ಕಾಲದಲ್ಲಿ ರಾಜಾ ಸಂವರಣನು ಶತ್ರುಗಳಿಂದ ಪರಾಜಿತನಾಗಿ, ಸಿಂಧುವೆಂಬ ಮಹಾನದದ ದಡದಲ್ಲಿರುವ ಪೊದರುಗಳಲ್ಲಿ, ಒಂದು ಸಾವಿರ ವರ್ಷ ಅಡಗಿ ದ್ದಾಗ, ಭಗವಾನ್ ವಸಿಷ್ಠ ಮುನಿ ಅವನ ಬಳಿಗೆ ಬಂದನು. ರಾಜನು ಆತನನ್ನು ಉತ್ತಮ ಆಸನ ದಲ್ಲಿ ಕುಳ್ಳಿರಿಸಿ ಹೇಳಿದನು, 'ಭಗವನ್', ನಾನು ಪುನಃ ರಾಜ್ಯಕ್ಕಾಗಿ ಪ್ರಯತ್ನಪಡುತ್ತಿದ್ದೇನೆ. ತಾವು ನನ್ನ ಪುರೋಹಿತರಾಗಿರಿ'. ಆಗ ವಸಿಷ್ಠನು, 'ಬಹಳ ಒಳ್ಳೆಯದು' ಎಂದು ಹೇಳಿ, ಭರತ ವಂಶದವರನ್ನು ಸ್ವೀಕರಿಸಿದನು ಮತ್ತು ಪೂರು ವಂಶದ ಸಂವರಣನನ್ನು ಸಮಸ್ತ ಕ್ಷತ್ರಿಯರ ಸಮ್ರಾಟ ಪದವಿಯಲ್ಲಿ ಅಭಿಷೇಚನಗೊಳಿಸಿದನು (ಆದಿ 94/40–45). ವಸಿಷ್ಠನಿಗೆ ಆಪವನೆಂದೂ ಒಂದು ಹೆಸರಿದೆ (ಆದಿ 98/23). ಪೂರ್ವ ಕಾಲದಲ್ಲಿ ವರುಣನು ಇವನನ್ನು ಪುತ್ರರೂಪದಲ್ಲಿ ಪಡೆದಿದ್ದನು (ಆದಿ 99/5). ಗಿರಿರಾಜ ಮೇರು ವಿನ ಪಾರ್ಶ್ವಭಾಗದಲ್ಲಿ ಇವನ ಪವಿತ್ರ ಆಶ್ರಮ ವಿತ್ತು. ಅದು ಮೃಗಪಕ್ಷಿಗಳಿಂದ ತುಂಬಿರುತ್ತಿತ್ತು. ಎಲ್ಲಾ ಋತುಗಳಲ್ಲಿಯೂ ಅರಳುವ ಹೂಗಳು ಆ ಆಶ್ರಮದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದವು. ಆ ಆಶ್ರಮದ ಹತ್ತಿರದ ಕಾಡಿನಲ್ಲಿ ರುಚಿಕರವಾದ ಹಣ್ಣು–ಗಡ್ಡೆ ಮತ್ತು ನೀರಿನ ಸೌಕರ್ಯವಿತ್ತು. ಪುಣ್ಯವಂತರಲ್ಲಿ ಶ್ರೇಷ್ಠನಾದ ವರುಣಪುತ್ರ, ಮಹರ್ಷಿ ವಸಿಷ್ಠ ಅಲ್ಲಿಯೇ ತಪಸ್ಸು ಮಾಡು ತ್ತಿದ್ದನು (ಆದಿ 99/6–7). ದಕ್ಷ ಪುತ್ರಿ ಸುರಭಿಯ ಮಗಳಾದ ನಂದಿನಿ ಎಂಬ ಗೋವು, ಇವನಿಗೆ ಹೋಮ ಧೇನುವಿನ ರೂಪದಲ್ಲಿ ಪ್ರಾಪ್ತವಾಗಿ ದ್ದಳು (ಆದಿ 99/8–9). ಒಂದು ದಿನ ದ್ಯೌ ಎಂಬ ವಸುವು ತನ್ನ ಹೆಂಡತಿಯ ದುರಾಶೆಗೆ ಒಡಂಬಟ್ಟು, ಈತನ ಹೋಮಧೇನುವನ್ನು ಅಪ ಹರಿಸಿದನು (ಆದಿ 99/28). ವಸಿಷ್ಠನು ಫಲ–ಗಡ್ಡೆಗಳನ್ನು ತೆಗೆದುಕೊಂಡು ಆಶ್ರಮಕ್ಕೆ ಹಿಂತಿ ರುಗಿದಾಗ, ಕರು ಸಹಿತವಾಗಿ ಆ ಧೇನುವನ್ನು ಕಾಣದೆ ಕಾಡಿನಲ್ಲಿ ಹುಡುಕತೊಡಗಿದನು. ದಿವ್ಯ ದೃಷ್ಟಿಯಿಂದ ಯಥಾರ್ಥ ವಿಷಯವನ್ನು ತಿಳಿದು, ಈತ ರೋಷಾವೇಶದಿಂದ, ವಸುಗಳು ಮನುಷ್ಯ ಯೋನಿಯಲ್ಲಿ ಜನ್ಮವೆತ್ತುವಂತೆ ಶಾಪಕೊಟ್ಟನು (ಆದಿ 99/29–33). ವಸುಗಳು ಪ್ರಾರ್ಥಿಸಿದಾಗ ಅವರಲ್ಲಿ ಏಳು ಮಂದಿ ಒಂದೊಂದು

ವರ್ಷದಲ್ಲಿ ಶಾಪಮುಕ್ತರಾಗುವಂತೆ ಈತ ಅನುಗ್ರಹ ಮಾಡಿದನು. ದ್ಯೌ ಎಂಬ ವಸು ದೀರ್ಘಕಾಲದವರೆಗೆ ಮನುಷ್ಯ ಯೋನಿಯಲ್ಲಿ ರಲು, ಸಂತಾನೋತ್ಪತ್ತಿ ಮಾಡದಿರಲು, ಧರ್ಮಾತ್ಮನೂ, ಸರ್ವಶಾಸ್ತ್ರ ವಿಶಾರದನೂ, ಪಿತೃ ಹಿತೈಷಿಯೂ, ಸ್ತ್ರೀಭೋಗ ಪರಿತ್ಯಾಗಿಯೂ ಆಗಿರಲು ಹೇಳಿದನು (ಆದಿ 99/35–41). ಭೀಷ್ಮನು ಮಹರ್ಷಿ ವಸಿಷ್ಠನಿಂದ ಆರೂ ಅಂಗ ಗಳ ಸಹಿತ ಸಮಸ್ತ ವೇದಗಳ ಅಧ್ಯಯನ ಮಾಡಿದ್ದನು (ಆದಿ 100/35). ಅರ್ಜುನನ ಜನ್ಮ ಸಮಯದಲ್ಲಿ ಸಪ್ತರ್ಷಿಮಂಡಲದೊಂದಿಗೆ ಈತನೂ ಆಗಮಿಸಿದ್ದನು (ಆದಿ 122/51). ರಾಜಾ ಸಂವರಣನಿಂದ ಇವನ ಸ್ಮರಣೆ; ಇವನು ಹನ್ನೆರಡನೆಯ ದಿನ ರಾಜನಿಗೆ ದರ್ಶನವನ್ನಿತ್ತದ್ದು (ಆದಿ 172/13–14). 'ಸೂರ್ಯಕನ್ಯೆ ತಪತಿ ರಾಜನ ಚಿತ್ತಾಪಹಾರ ಮಾಡಿದ್ದಾಳೆ' ಎಂಬುದನ್ನು ತಿಳಿದು ಈತ ಊರ್ಧ್ವಲೋಕಕ್ಕೆ ಹೋದುದು; ಇವನಿಂದ ಸೂರ್ಯನ ಸ್ತುತಿ. ಸೂರ್ಯನಿಂದ ಈತನಿಗೆ ಸ್ವಾಗತ ಮತ್ತು ಇವನು ಅಭಿಲಾಷಿಸಿದ ವಸ್ತುವನ್ನು ಕೊಡುವ ಆಶ್ವಾಸನೆ (ಆದಿ 172/15–20). ಸಂವರಣನಿಗೋಸ್ಕರ ಈತ ತಪತಿಯನ್ನು ಸ್ವೀಕರಿಸಿದುದು. ಸೂರ್ಯನು ಸಂವರಣನಿಗಾಗಿ ತನ್ನ ಮಗಳನ್ನು ಈತನಿಗೆ ದಾನಮಾಡಿದುದು. ಈತ ತಪತಿಯನ್ನು ಕರಕೊಂಡು ರಾಜನ ಬಳಿಗೆ ಆಗಮಿಸಿದುದು (ಆದಿ 172/20–28). ಈತನ ಆಜ್ಞೆಯಿಂದ ರಾಜನು ತಪತಿಯೊಂದಿಗೆ ವಿಧಿವತ್ತಾಗಿ ವಿವಾಹವಾದುದು ಮತ್ತು ಆಕೆಯೊಂದಿಗೆ ಪರ್ವತದ ಮೇಲೆ ವಿಹರಿಸಿದುದು (ಆದಿ 172/32–34). ಅರ್ಜುನನು ಕೇಳಿದಾಗ ಗಂಧರ್ವನು ಅವನಿಗೆ ವಸಿಷ್ಠನ ಪರಿಚಯ ನೀಡಿದುದು. 'ಈತ ಬ್ರಹ್ಮನ ಮಾನಸಪುತ್ರ, ಅರುಂಧತೀ ದೇವಿಯ ಪತಿ. ದೇವದುರ್ಜಯವಾದ ಕಾಮ–ಕ್ರೋಧವೆಂಬ ಎರಡೂ ಶತ್ರುಗಳು ಇವನ ತಪಸ್ಸಿನಿಂದ ಸಾರ್ವಕಾಲಿಕ ಪರಾಜಯಹೊಂದಿ, ಇವನ ಕಾಲನ್ನೊತ್ತುತ್ತಿವೆ. ಇಂದ್ರಿಯಗಳನ್ನು ವಶಪಡಿಸಿಕೊಂಡ ಕಾರಣ 'ವಶಿಷ್ಠ'ನೆಂದು ಕರೆಯಲ್ಪಡುತ್ತಾನೆ (ಆದಿ 173/1–6). ವಿಶ್ವಾಮಿತ್ರನ ಅಪರಾಧದಿಂದ, ಮನಸ್ಸಿನಲ್ಲಿ ಕ್ರೋಧಧಾರಣೆ ಮಾಡಿದ್ದರೂ ಕೂಡ, ಈ ಉದಾರ ಬುದ್ಧಿಯ ಮಹರ್ಷಿಯು ಕುಶಿಕ ವಂಶದ ಮೂಲಚ್ಛೇದ ಮಾಡಲಿಲ್ಲ. ನೂರು ಮಕ್ಕಳು ಕೊಲ್ಲಲ್ಪಟ್ಟಾಗ, ಸಂತಪ್ತನಾದರೂ, ಪ್ರತೀಕಾರ ಮಾಡುವ ಶಕ್ತಿ ಇದ್ದರೂ ಕೂಡ, ಇವನು ಅಸಮರ್ಥನಂತೆ, ಎಲ್ಲವನ್ನೂ ಸಹಿಸಿಕೊಂಡನು. ಆದರೆ ವಿಶ್ವಾಮಿತ್ರನ ವಿನಾಶ ಮಾಡಲು ಯಾವ ರೀತಿಯ ಕ್ರೂರಕರ್ಮವನ್ನೂ ಮಾಡಲಿಲ್ಲ. ಈತ ತನ್ನ ಸತ್ತ ಪುತ್ರರನ್ನು ಯಮಲೋಕದಿಂದ ತರಲು ಶಕ್ತನಾಗಿದ್ದನು; ಆದರೆ ಯಮರಾಜನ ಅಧಿಕಾರವನ್ನು ಉಲ್ಲಂಘಿಸಲು ಸಿದ್ಧನಾಗಲಿಲ್ಲ (ಆದಿ 173/7–9). ಈತನನ್ನು ಪುರೋಹಿತನಾಗಿ ಪಡೆದು, ಇಕ್ಷ್ವಾಕುವಂಶದ ರಾಜರು, ಈ ಪೃಥ್ವಿಯ ಮೇಲೆ ಅಧಿಕಾರ ಪಡೆದಿದ್ದರು (ಆದಿ 173/10). ಇವನ ಆಶ್ರಮಕ್ಕೆ ರಾಜಾ ವಿಶ್ವಾಮಿತ್ರನ ಆಗಮನ; ನಂದಿನಿಯ ಪ್ರಭಾವದಿಂದ, ವಸಿಷ್ಠನ ಮೂಲಕ ಸೈನ್ಯ ಮತ್ತು ಮಂತ್ರಿಗಳ ಸಮೇತ ರಾಜನ ಅತಿಥಿಸತ್ಕಾರ (ಆದಿ 174/6–11). ವಿಶ್ವಾಮಿತ್ರನು ಈತನೊಂದಿಗೆ ನಂದಿನಿಯನ್ನು ಯಾಚಿಸಿದುದು; ರಾಜನು ತನ್ನ ಎಲ್ಲಾ ರಾಜ್ಯವನ್ನೇ ಕೊಟ್ಟರೂ, ಪ್ರತಿಯಾಗಿ ನಂದಿನಿಯನ್ನು ಕೊಡಲು ಈತ ನಿರಾಕರಿಸಿದುದು (ಆದಿ 174/16–18). ವಿಶ್ವಾಮಿತ್ರನಿಂದ ಬಲಾತ್ಕಾರವಾಗಿ ನಂದಿನಿಯ ಅಪಹಾರವಾಗುತ್ತಿರುವುದನ್ನು ಕಂಡು, ಈತ ಮೌನವಾಗಿದ್ದುದು. ಈತನೊಡನೆ ನಂದಿನಿಯ ಕಾತರ ಪ್ರಾರ್ಥನೆ. ನಂದಿನಿಯು ತನ್ನ ಶಕ್ತಿಯಿಂದಲೇ ಆಶ್ರಮದಲ್ಲಿರುವಂತೆ ಈತ ಆಜ್ಞೆನೀಡಿದುದು. ಇವನಿಂದ ಆಜ್ಞೆ ಪಡೆಯುತ್ತಲೇ, ನಂದಿನಿ ಮ್ಲೇಚ್ಛರನ್ನು ಸೃಷ್ಟಿಸಿದುದು. ಅವರ ಮೂಲಕ ವಿಶ್ವಾಮಿತ್ರನ ಸೇನೆಯನ್ನು ಹೊಡೆದು ಓಡಿಸಿದುದು (ಆದಿ 174/21–43). ವಿಶ್ವಾಮಿತ್ರನು ಇವನ ಮೇಲೆ ನಾನಾ ರೀತಿಯ ಅಸ್ತ್ರಶಸ್ತ್ರ ಮತ್ತು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದುದು; ಇವನು ತನ್ನ ಬಿದಿರಿನ ಬೆತ್ತದಿಂದ ಅವನ ಎಲ್ಲಾ ಅಸ್ತ್ರಶಸ್ತ್ರಗಳನ್ನು ಭಸ್ಮೀಭೂತಗೊಳಿಸಿದುದು (ಆದಿ 174/43). ಶಕ್ತಿಯ ಶಾಪದಿಂದ ರಾಕ್ಷಸತ್ವ ಪಡೆದ ಕಲ್ಮಾಷಪಾದನು ವಿಶ್ವಾಮಿತ್ರನ ಪ್ರೇರಣೆ ಪಡೆದು, ಇವನ ಪುತ್ರರನ್ನು ಭಕ್ಷಿಸಿದುದು; ಈತನ ಶೋಕ (ಆದಿ 175/1–43). ಮಹರ್ಷಿಯು ವಿಶ್ವಾಮಿತ್ರನ ವಿನಾಶಮಾಡದೆ, ತಾನೇ ಶರೀರತ್ಯಾಗ ಮಾಡಲು

ನಿರ್ಧರಿಸಿದನು. ಇವನು ಮೇರುಪರ್ವತದ ತುದಿಯಿಂದ ಹಾರಿಬಿದ್ದನು. ಆದರೆ ಪರ್ವತದ ಶಿಲೆಯೂ ಇವನಿಗೆ ಹತ್ತಿಯ ರಾಶಿಯಂತಾಯಿತು. ಇವನು ಧಗಧಗಿಸುತ್ತಿದ್ದ, ದಾವಾನಲದೊಳಗೆ ನುಗ್ಗಿದನು; ಆದರೆ ಆ ಬೆಂಕಿ ಈತನಿಗೆ ಶೀತಲವಾಯಿತು. ಇವನು ಕುತ್ತಿಗೆಗೆ ಕಲ್ಲನ್ನು ಕಟ್ಟಿಕೊಂಡು ಸಮುದ್ರಜಲಕ್ಕೆ ಹಾರಿದನು. ಆದರೆ ಸಮುದ್ರನು ತನ್ನ ತೆರೆಗಳಿಂದ ನೂಕಿ, ಇವನನ್ನು ದಡಕ್ಕೆ ಹಾಕಿದನು (ಆದಿ 175/44–49). ಮಳೆಗಾಲದಲ್ಲಿ ನದಿಯೊಂದು ಹೊಸ ನೀರಿನಿಂದ ಪೂರ್ಣ ತುಂಬಿದೆ ಮತ್ತು ದಡದಲ್ಲಿರುವ ಮರಗಳನ್ನು ತೇಲಿಸಿಕೊಂಡು ಹೋಗುತ್ತಿದೆ. ವಸಿಷ್ಠನು ಇದೇ ನೀರಿನಲ್ಲಿ ಮುಳುಗಿ ಬಿಡುತ್ತೇನೆಂದು ನಿರ್ಧರಿಸಿದನು. ತನ್ನ ಶರೀರವನ್ನು ಪಾಶಗಳಿಂದ ಚೆನ್ನಾಗಿ ಬಂಧಿಸಿ, ಇವನು ಆ ಮಹಾನದಿಯ ನೀರಿಗೆ ಹಾರಿದನು. ಆದರೆ ಆ ನದಿ ಈತನ ಕಟ್ಟುಗಳನ್ನು ಕಡಿದು ದಡಕ್ಕೆ ತಲುಪಿಸಿತು. ಅದರ ಮೂಲಕ 'ವಿಪಾಶ' (ಬಂಧನರಹಿತ)ವಾದುದರಿಂದ ಈತ ಅದಕ್ಕೆ ವಿಪಾಶಾ ಎಂದು ಹೆಸರಿಟ್ಟನು. ಇದರ ಅನಂತರ ಹಿಮಾಲಯದಿಂದ ಹುಟ್ಟಿದ ಇನ್ನೊಂದು ಭಯಂಕರ ನದಿಯ ಪ್ರಖರ ಧಾರೆಯಲ್ಲಿ ತನ್ನನ್ನು ಹಾಕಿಕೊಂಡನು; ಆದರೆ ಇವನು ಬೀಳುತ್ತಲೇ ಅದು ನೂರಾರು ಧಾರೆಗಳಾಗಿ ಛಿದ್ರಗೊಂಡು, ವೇಗವಾಗಿ ಅತ್ತಿತ್ತ ಓಡಿತು. ಆದುದರಿಂದ ಅದು 'ಶತದ್ರು' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು (ಆದಿ 170/1–9). ಇವನು ತನ್ನ ಪುತ್ರವಧುವಾದ ಅದೃಶ್ಯಂತಿಯ ಗರ್ಭಸ್ಥ ಬಾಲಕನ ಮುಖದಿಂದ ವೇದಾಧ್ಯಯದ ಧ್ವನಿಕೇಳಿ ಮತ್ತು ಶಕ್ತಿಯ ಗರ್ಭಸ್ಥ ಬಾಲಕನ ಸೂಚನೆ ಪಡೆದು, ತನ್ನ ವಂಶ ಪರಂಪರೆ ಸುರಕ್ಷಿತವಾಗಿದೆಯೆಂದು ತಿಳಿದು, ಮೃತ್ಯುಸಂಕಲ್ಪವನ್ನು ತ್ಯಜಿಸಿದನು (ಆದಿ 176/12–16). ರಾಕ್ಷಸನ ಭಯದಿಂದ ಬೆದರಿದ, ಅದೃಶ್ಯಂತಿಗೆ ಆಶ್ವಾಸನೆಕೊಟ್ಟು, ಈತ ಕಲ್ಮಾಷಪಾದನನ್ನು ಶಾಪದಿಂದ ಉದ್ಧರಿಸಿದುದು ಮತ್ತು ರಾಜನ ಪ್ರಾರ್ಥನೆಯಿಂದ, ಈತ ರಾಣಿ ಮದಯಂತಿಯ ಗರ್ಭದಲ್ಲಿ ಅಶ್ಮಕನೆಂಬ ಪುತ್ರನನ್ನು ಸೃಷ್ಟಿಸಿದುದು (ಆದಿ 176/17–47). ಭೃಗುವಂಶದ ಔರ್ವನ ಕಥೆಯನ್ನು ಹೇಳಿ ಇವನಿಂದ ಪರಾಶರನ ಜಗದ್ವಿನಾಶಕ ಸಂಕಲ್ಪದ ನಿವಾರಣೆ ಮತ್ತು ಪರಾಶರನ ರಾಕ್ಷಸಸತ್ರದ ಸಮಾಪ್ತಿ (ಆದಿ 177/11 ರಿಂದ ಆದಿ 180/21 ವರೆಗೆ). ಇವನು ಬ್ರಹ್ಮಸಭೆಯಲ್ಲಿ ವಿರಾಜಮಾನನಾಗಿರುತ್ತಾನೆ (ಸಭಾ 11/19). ಇವನಿಂದ ಶ್ರೀರಾಮನ ರಾಜ್ಯಾಭಿಷೇಕ (ವನ 291/66). ಶಾಂತಿದೂತನಾಗಿ ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನಿಗೆ ಈತ ಪ್ರದಕ್ಷಿಣೆ ಮಾಡಿದುದು (ಉದ್ಯೋಗ 83/27). ಇವನು ದ್ರೋಣಾಚಾರ್ಯನ ಬಳಿಗೆ ಬಂದು, ಅವನೊಡನೆ ಯುದ್ಧ ನಿಲ್ಲಿಸುವಂತೆ ಹೇಳಿದುದು (ದ್ರೋಣ 190/33–40). ಕುರುಕ್ಷೇತ್ರದಲ್ಲಿ ವಸಿಷ್ಠನು ಆವಾಹನೆಮಾಡಿದಾಗ, ಸರಸ್ವತಿ ನದಿ 'ಓಘವತಿ' ಎಂಬ ಹೆಸರಿನಿಂದ ಪ್ರಕಟಗೊಂಡದ್ದು (ಶಲ್ಯ 38/27–29). ವಸಿಷ್ಠಾಪವಾಹ ತೀರ್ಥದ ಪ್ರಕರಣದಲ್ಲಿ ವಿಶ್ವಾಮಿತ್ರನ ಕೋಪ ಮತ್ತು ವಸಿಷ್ಠನ ಸಹನಶೀಲತೆ (ಶಲ್ಯ 42 ಅಧ್ಯಾಯ). ಈತ ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/7). ವಸಿಷ್ಠನು ಮುಚುಕುಂದನ ಪುರೋಹಿತನಾಗಿದ್ದನು. ಕುಬೇರ ಹಾಗೂ ಯಕ್ಷರೊಂದಿಗೆ ಯುದ್ಧ ಪ್ರಾರಂಭವಾದಾಗ ಈತ ತಪಸ್ಸಿನಿಂದ ಮುಚುಕುಂದನಿಗೆ ವಿಜಯಿಯಾಗುವಂತೆ ಮಾಡಿದನು (ಶಾಂತಿ 74/5–6). ಇವನಿಂದ ಪ್ರಜೆಗಳಿಗೆ ಜೀವದಾನ (ಶಾಂತಿ 234/27; ಅನು 137/13). ವೃತ್ರಾಸುರನಿಂದ ಭಯಭೀತನಾದ ಇಂದ್ರನನ್ನು ರಥಂತರ ಸಾಮದ ಮೂಲಕ ಸಚೇತನಗೊಳಿಸಿದುದು (ಶಾಂತಿ 291/21–26). ಮೂಲಗೋತ್ರ ಪ್ರವರ್ತಕರಾದ ನಾಲ್ಕು ಮಂದಿ ಋಷಿಗಳಲ್ಲಿ ಇವನೂ ಒಬ್ಬ (ಶಾಂತಿ 296/17). ವಿದೇಹರಾಜ ಕರಾಲಜನಕನಿಗೆ ವಿವಿಧ ಜ್ಞಾನೋಪದೇಶ (ಶಾಂತಿ 302–308). ಇಪ್ಪತ್ತೊಂದು ಪ್ರಜಾಪತಿಗಳಲ್ಲಿ ಈತನೂ ಗಣಿಸಲ್ಪಟ್ಟಿದ್ದಾನೆ (ಶಾಂತಿ 334/36). ಈತ ಚಿತ್ರ ಶಿಖಂಡಿಗಳೆಂಬ ಋಷಿಗಳಲ್ಲಿ ಒಬ್ಬ (ಶಾಂತಿ 335/28–29). ಇವನಿಂದ ಹಿರಣ್ಯಕಶಿಪುವಿಗೆ ಶಾಪ (ಶಾಂತಿ 342/31). ಪುರುಷಾರ್ಥದ ಶ್ರೇಷ್ಠತೆಯ ಕುರಿತು ಬ್ರಹ್ಮನೊಂದಿಗೆ ಇವನ ಸಂವಾದ (ಅನು 6 ಅಧ್ಯಾಯ). ಇವನು ರಾಜಾ ಸೌದಾಸನಿಗೆ ಗೋದಾನದ ವಿಧಿ ಮತ್ತು ಗೋವುಗಳ ಮಹತ್ತ್ವ ಹೇಳಿದುದು (ಅನು

78/5 ರಿಂದ 80 ಅಧ್ಯಾಯ). ಪರಶುರಾಮರಿಗೆ ಶುದ್ಧಿಗೋಸ್ಕರ ಸುವರ್ಣದಾನ ಮತ್ತು ಅದರ ಉತ್ಪತ್ತಿಯ ಪ್ರಸಂಗ ಹೇಳಿದುದು (ಅನು 74/44ರಿಂದ 75 ಅಧ್ಯಾಯ). ವೃಷಾದರ್ಭಿಯೊಡನೆ ಪ್ರತಿಗ್ರಹದ ದೋಷವನ್ನು ಹೇಳಿದುದು (ಅನು 93/39). ಅರುಂಧತಿಯೊಡನೆ ತನ್ನ ದೌರ್ಬಲ್ಯದ ಕಾರಣ ಹೇಳಿದುದು (ಅನು 93/61). ಯಾತುಧಾನಿಯೊಡನೆ ತನ್ನ ಹೆಸರಿನ ಅರ್ಥ ಹೇಳಿದುದು (ಅನು 93/84). ಕಮಲದಂಟಿನ ಅಪಹಾರವಾದಾಗ ಪ್ರತಿಜ್ಞೆ ಮಾಡಿದುದು (ಅನು 93/114–115). ಅಗಸ್ತ್ಯರ ಕಮಲಗಳ ಕಳವಾದಾಗ ಪ್ರತಿಜ್ಞೆ ಮಾಡಿದುದು (ಅನು 94/17). ಬ್ರಹ್ಮನೊಂದಿಗೆ ಯಜ್ಞದ ಕುರಿತು ಪ್ರಶ್ನೆ ಮಾಡಿದುದು (ಅನು 126/44–45). ವಾಯುದೇವನಿಂದ ಇವನ ಪ್ರಭಾವದ ವರ್ಣನೆ (ಅನು 155/16–25). ಕುಂಭದಲ್ಲಿ ದೇವತೆಗಳ ವೀರ್ಯ ಸ್ಥಾಪಿತವಾಗಿತ್ತು. ಅದರಿಂದ ಈತನ ಜನನವಾಯಿತು (ಅನು 158/19). ವೃತ್ರಾಸುರನಿಂದ ಹಿಡಿಯಲ್ಪಟ್ಟ ಮತ್ತು ಮೋಹಿತನಾದ ಇಂದ್ರನನ್ನು ಸಚೇತನಗೊಳಿಸಿದುದು (ಆಶ್ವ 11/18–19). ಮಹಾಭಾರತದಲ್ಲಿ ಬಂದಿರುವ ವಸಿಷ್ಠನ ಹೆಸರುಗಳು : ಆಪವ, ಅರುಂಧತೀಪತಿ, ಬ್ರಹ್ಮರ್ಷಿ, ದೇವರ್ಷಿ, ಹೈರಣ್ಯಗರ್ಭ, ಮೈತ್ರಾವರುಣಿ, ವಾರುಣಿ ಇತ್ಯಾದಿ.

**ವಸಿಷ್ಠಪರ್ವತ** – ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನ ಇಲ್ಲಿಗೆ ಆಗಮಿಸಿದ್ದನು (ಆದಿ 214/2).

**ವಸಿಷ್ಠಾಪವಾಹ** – ಸರಸ್ವತೀ ತಟದ ಒಂದು ಪ್ರಾಚೀನ ತೀರ್ಥ. ಇದರ ಉತ್ಪತ್ತಿಯ ವರ್ಣನೆ (ಶಲ್ಯ 42).

**ವಸಿಷ್ಠಾಶ್ರಮ** – ನಿಶ್ಚೀರಾ ಸಂಗಮದ ಸಮೀಪವಿರುವ ತೀರ್ಥಮೂಲವಾದ ಒಂದು ಆಶ್ರಮ. ಇದು ಮೂರೂ ಲೋಕಗಳಲ್ಲಿ ಪ್ರಖ್ಯಾತವಾದುದು. ಇಲ್ಲಿ ಸ್ನಾನಮಾಡುವ ಮನುಷ್ಯ ವಾಜಪೇಯ ಯಜ್ಞದ ಫಲ ಪಡೆಯುತ್ತಾನೆ (ವನ 84/140–141).

**ವಸು** – (1) ಚೇದಿ ದೇಶದ ರಾಜ ಉಪರಿಚರ ವಸು (ಆದಿ 63/1–2) (ನೋಡಿರಿ : ಉಪರಿಚರವಸು).

(2) ಧರ್ಮದೇವನಿಂದ ದಕ್ಷಕನ್ಯೆಯ ಗರ್ಭದಲ್ಲಿ ಎಂಟು ಪುತ್ರರು ಜನಿಸಿದರು. ಇವರು ವಸುಗಣವೆಂದು ಕರೆಯಲ್ಪಡುತ್ತಾರೆ (ಆದಿ 66/17–18) (ನೋಡಿರಿ–ಅಷ್ಟವಸು).

(3) ಮಹಾರಾಜ ಈಲಿನನಿಂದ ರಥಂತರಿಯ ಗರ್ಭದಲ್ಲಿ ಹುಟ್ಟಿದವನು. ಇವನಿಗೆ ಇತರ ನಾಲ್ವರು ಸಹೋದರರಿದ್ದರು. ಅವರ ಹೆಸರು– ದುಷ್ಯಂತ, ಶೂರ, ಭೀಮ ಮತ್ತು ಪ್ರವಸು (ಆದಿ 94/17–18).

(4) ವಿದ್ವಾಂಸನಾದ ಒಬ್ಬ ಬ್ರಾಹ್ಮಣಮುನಿ. ಇವನ ಪುತ್ರನ ಹೆಸರು ಪೈಲ (ಪ್ರಾಯಶಃ ಈತ ಜಮದಗ್ನಿ ಪುತ್ರ ವಸುವೇ ಆಗಿರಬೇಕು.) (ಸಭಾ 33/35).

(5) ಜಮದಗ್ನಿಯ ಒಬ್ಬ ಮಗ. ಇವನ ತಾಯಿ ರೇಣುಕೆ. ಇವನ ಸಹೋದರರು – ರುಮಣ್ವಂತ, ಸುಷೇಣ, ವಿಶ್ವಾವಸು ಮತ್ತು ಪರಶುರಾಮ. ಮಾತೃವಧೆಗೆ ಸಂಬಂಧಿಸಿ ತಂದೆಯ ಆಜ್ಞೆಯನ್ನು ಪಾಲಿಸದಿದ್ದುದರಿಂದ, ಈತನಿಗೆ ಪಿತೃಶಾಪ ಪ್ರಾಪ್ತವಾಗಿತ್ತು (ವನ 116/10–12). ಪರಶುರಾಮನ ಮೂಲಕ, ಶಾಪದಿಂದ ಇವನ ಉದ್ಧಾರವಾಯಿತು (ವನ 116/17).

(6) ಕೃಮಿ ಕುಲದ ಒಬ್ಬ ಕುಲಗೇಡಿ ರಾಜ (ಉದ್ಯೋಗ 74/13).

(7) ಭಗವಾನ್ ಶಿವನ ಒಂದು ಹೆಸರು (ಅನು 17/140).

(8) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/25).

**ವಸುಚಂದ್ರ** – ಯುಧಿಷ್ಠಿರನ ಸಂಬಂಧಿಯೂ, ಸಹಾಯಕನೂ ಆದ ಒಬ್ಬ ರಾಜ. ಈತ ಇಂದ್ರನಂತೆ ಪರಾಕ್ರಮಯಾಗಿದ್ದನು (ದ್ರೋಣ 158/40).

**ವಸುದಾನ** – (1) ಒಬ್ಬ ಕ್ಷತ್ರಿಯ ರಾಜ. ಈತ ಪಾಂಶುರಾಷ್ಟ್ರದ ಅಧಿಪತಿಯಾಗಿದ್ದನು. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/27). ಇವನು ಪಾಂಶುದೇಶದಿಂದ ಇಪ್ಪತ್ತಾರು ಆನೆ, ಎರಡು ಸಾವಿರ ಕುದುರೆ ಮತ್ತು ಎಲ್ಲಾ ರೀತಿಯ ಕಾಣಿಕೆವಸ್ತುಗಳನ್ನು ತಂದು ಪಾಂಡವರಿಗೆ ಅರ್ಪಿಸಿದ್ದನು (ಸಭಾ 52/27–28). ಈತ ಯುಧಿಷ್ಠಿರನೊಂದಿಗೆ ಕುರುಕ್ಷೇತ್ರಕ್ಕೆ ಪ್ರಯಾಣಿಸಿ

ದ್ದನು (ಉದ್ಯೋಗ 151/63). ಇವನು ಅತಿರಥ ನಾಗಿದ್ದನು (ಉದ್ಯೋಗ 171/27). ಯುದ್ಧ ಸ್ಥಳದಲ್ಲಿ ಪಾಂಡವ ಸೇನಾಪತಿಯಾದ ಧೃಷ್ಟ ದ್ಯುಮ್ನನ ಬೆಂಗಡೆಯೇ ಹೋಗಿದ್ದನು (ದ್ರೋಣ 23/41). ದ್ರೋಣಾಚಾರ್ಯನ ಭಲ್ಲೆಯಿಂದ ಇವನ ವಧೆಯಾಯಿತು (ದ್ರೋಣ 190/30). ಇವನು ಯುದ್ಧದಲ್ಲಿ ಘೋರಸಂಹಾರ ಮಾಡು ತ್ತಿದ್ದನು. ದ್ರೋಣನಿಂದ ಈತ ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/38).

(2) ಪಾಂಡವಪಕ್ಷದ ಪಾಂಚಾಲರಾಜಕುಮಾರ. ಈತ ದ್ರೋಣಾಚಾರ್ಯನಿಂದ ಕೊಲ್ಲಲ್ಪಟ್ಟನು (ದ್ರೋಣ 21/55).

**ವಸುದಾಮಾ** – ಸ್ಕಂದನ ಅನುಚರಿ ಮಾತೃಕೆ (ಶಲ್ಯ 46/5).

**ವಸುದೇವ** – ಶೂರಸೇನ ಪುತ್ರ, ದೇವಕಿಯ ಪತಿ. ಶ್ರೀಕೃಷ್ಣನ ತಂದೆ. ಕುಂತಿಯ ಸಹೋದರ. ಉಗ್ರಸೇನನ ಮಂತ್ರಿ. ಪಾಂಡವರಿಗೆ ಚವಲಾದಿ ಸಂಸ್ಕಾರಗಳನ್ನು ಮಾಡಿಸುವಂತೆ, ವೃಷ್ಣಿ ವಂಶೀಯರಿಂದ ಈತನಿಗೆ ಪ್ರೇರಣೆ. ಪಾಂಡು ಪುತ್ರರ ಸಂಸ್ಕಾರಮಾಡಿಸಲು ಈತ ಕಾಶ್ಯಪನೆಂಬ ಪುರೋಹಿತನನ್ನು ಶತಶೃಂಗ ಪರ್ವತಕ್ಕೆ ಕಳುಹಿಸಿ ದುದು (ಆದಿ 123/31). ಉಗ್ರಸೇನನ ಸಹೋದರ ನಾದ ದೇವಕನ ಪುತ್ರಿ ದೇವಕಿಯೊಂದಿಗೆ ಈತನ ವಿವಾಹ. ದೇವಕಿಯನ್ನು ಕೊಲ್ಲಲು ಉದ್ಯುಕ್ತ ನಾದ ಕಂಸನಿಗೆ ಈತನ ಆಶ್ವಾಸನೆ (ಸಭಾ 22/36). ಇವನು ನವಜಾತ ಶಿಶುವಾದ ಶ್ರೀಕೃಷ್ಣ ನನ್ನು ರಾತ್ರಿಯಲ್ಲಿ ವ್ರಜಭೂಮಿಗೆ ತಲುಪಿಸಿ ದುದು ಮತ್ತು ಅಲ್ಲಿಂದ ನಂದನ ಮಗಳನ್ನು ತೆಗೆದುಕೊಂಡು ಬಂದುದು (ಸಭಾ 22/36). ಇವನು ಶ್ರೀಕೃಷ್ಣನಿಂದ ಮಹಾಭಾರತಯುದ್ಧದ ವೃತ್ತಾಂತ ಕೇಳಿದುದು (ಆಶ್ವ 60/1–4). ಸುಭದ್ರೆಯು ಮೂರ್ಚ್ಛಿತಳಾದುದನ್ನು ನೋಡಿ, ತಾನು ಮೂರ್ಚ್ಛಿತನಾದುದು. ಪುನಃ ಶ್ರೀಕೃಷ್ಣ ನಿಂದ ಅಭಿಮನ್ಯುವಧೆಯ ಸುದ್ದಿ ಕೇಳಿದುದು (ಆಶ್ವ 61/5–15). ಅಭಿಮನ್ಯುವಿನ ಶ್ರಾದ್ಧಮಾಡಿ ದುದು (ಆಶ್ವ 62/1). ಮೌಸಲ ಕಾಂಡದಲ್ಲಿ ಯಾದವರ ಸಂಹಾರವಾದಾಗ, ಶ್ರೀಕೃಷ್ಣನು ದ್ವಾರಕೆಯಲ್ಲಿರುವ ತನ್ನ ತಂದೆ ವಸುದೇವನ ಬಳಿಗೆ ಬಂದುದು; ಅರ್ಜುನನನ್ನು ನಿರೀಕ್ಷಿಸು ತ್ತಿರುವ ಸ್ತ್ರೀಯರ ರಕ್ಷಣೆ ಮಾಡುವಂತೆ ಈತ ನೊಡನೆ ಹೇಳಿದುದು. ಇವನ ಪಾದಗಳ ಮೇಲೆ ತಲೆಯನ್ನು ಚಾಚಿ, ಬಲರಾಮನೊಂದಿಗೆ ತಪಸ್ಸ ನ್ನಾಚರಿಸುವ ವಿಚಾರದಿಂದ, ಕೂಡಲೇ ಅಲ್ಲಿಂದ ಹೊರಟು ಹೋದುದು (ಮೌಸಲ 4/8–10). ಇವನು ಅರ್ಜುನನಿಗೆ ವೃಷ್ಣಿವಂಶದವರ ದುಃಖ ಕಾರಕ ನಾಶದ ವಿಚಾರ ತಿಳಿಸಿದುದು ಮತ್ತು ಶ್ರೀಕೃಷ್ಣನ ಸಂದೇಶವನ್ನು ಹೇಳಿದುದು (ಮೌಸಲ 6 ಅಧ್ಯಾಯ). ಅರ್ಜುನನು ಶ್ರೀಕೃಷ್ಣ ವಿರಹ ಜನಿತವಾದ ತನ್ನ ದುಃಖವನ್ನು ಈತನಿಗೆ ಹೇಳಿ ದುದು ಮತ್ತು ವೃಷ್ಣಿವಂಶದ ಸ್ತ್ರೀಯರನ್ನು ಇಂದ್ರ ಪ್ರಸ್ಥಕ್ಕೆ ಕರಕೊಂಡು ಹೋಗುವ ಅಭಿಪ್ರಾಯ ವನ್ನು ಪ್ರಕಟಿಸಿದುದು (ಮೌಸಲ 7/1–6). ಪರಮಾತ್ಮ ಚಿಂತನೆಯ ಮೂಲಕ ಈತನಿಂದ ಶರೀರ ತ್ಯಾಗ (ಮೌಸಲ 7/15). ಅರ್ಜುನನಿಂದ ಇವನ ಅಂತ್ಯೇಷ್ಟಿಸಂಸ್ಕಾರ. ಇವನ ನಾಲ್ವರು ಪತ್ನಿಯರಿಂದ ಇವನ ಶವನೊಂದಿಗೆ ಚಿತಾ ರೋಹಣ (ಮೌಸಲ 7/19–20). ಇವನು ಸ್ವರ್ಗಕ್ಕೆ ಹೋಗಿ ವಿಶ್ವೇದೇವರ ಸ್ವರೂಪದಲ್ಲಿ ಸೇರಿಕೊಂಡನು (ಸ್ವರ್ಗಾ 5/17). ಮಹಾ ಭಾರತದಲ್ಲಿ ಬಂದಿರುವ ವಸುದೇವನ ಹೆಸರು ಗಳು– ಆನಕದುಂದುಭಿ, ಶೌರಿ, ಶೂರಪುತ್ರ, ಶೂರಸೂನು, ಶೂರಸುತ, ಶೂರಾತ್ಮಜ, ಯದೂ ದ್ವಹ – ಇತ್ಯಾದಿ.

**ವಸುಧಾರಾ** – ಒಂದು ತೀರ್ಥ. ಇದು ಎಲ್ಲರಿಂ ದಲೂ ಪ್ರಶಂಸಿಸಲ್ಪಟ್ಟಿದೆ. ಇಲ್ಲಿಗೆ ಹೋಗುವುದ ರಿಂದಲೇ ಅಶ್ವಮೇಧಯಜ್ಞದ ಫಲ ಸಿಗುತ್ತದೆ. ಇಲ್ಲಿ ಸ್ನಾನಮಾಡಿ, ಶುದ್ಧ ಮತ್ತು ಸಮಚಿತ್ತನಾಗಿ, ದೇವತೆಗಳಿಗೂ ಪಿತೃಗಳಿಗೂ ತರ್ಪಣಕೊಡುವುದ ರಿಂದ, ಮನುಷ್ಯ ವಿಷ್ಣುಲೋಕದಲ್ಲಿ ಪ್ರತಿಷ್ಠಿತ ನಾಗುತ್ತಾನೆ. ಅಲ್ಲಿ ವಸುಗಳ ಪವಿತ್ರ ಸರೋವರ ವಿದೆ. ಅದರಲ್ಲಿ ಸ್ನಾನ ಮತ್ತು ಜಲಪಾನ ಮಾಡುವುದರಿಂದ ಮನುಷ್ಯನು ವಸು ದೇವತೆ ಗಳಿಗೆ ಪ್ರಿಯನಾಗುತ್ತಾನೆ (ವನ 82/76–78).

**ವಸುಪ್ರಭ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/63).

**ವಸುಮನಾ (ವಸುಮಂತ)** – (1) ಒಬ್ಬ ಪ್ರಾಚೀನ ರಾಜ. ಇವನು ಅಯೋಧ್ಯೆಯ ರಾಜ ಹರ್ಯಶ್ವನ ಮೂಲಕ ಯಯಾತಿಕನ್ಯೆ ಮಾಧವಿಯ

ಗರ್ಭದಿಂದ ಹುಟ್ಟಿದ್ದನು. ಸ್ವರ್ಗದಿಂದ ಬಿದ್ದ ರಾಜಾಯಯಾತಿ ಇವನ ಬಳಿಗೆ ಪತನಹೊಂದಿ, ಇವನನ್ನು ಭೇಟಿಮಾಡಿ, ಸತ್ಸಂಗದ ಪ್ರಭಾವ ದಿಂದ ಸ್ವರ್ಗಕ್ಕೆ ಹೋದನು (ಆದಿ 86/5–6). ಸ್ವರ್ಗದಿಂದ ಬೀಳುತ್ತಿದ್ದಾಗ ರಾಜಾ ಯಯಾತಿ ಯೊಂದಿಗೆ ಈತನ ಭೇಟಿ (ಆದಿ 93/1). ಈತನಿಂದ ಯಯಾತಿಗೆ ಪುಣ್ಯದಾನ ಮಾಡುವ ಆಶ್ವಾಸನೆ (ಆದಿ 93/3–5). ತನ್ನ ತಾಯಿಯಾದ ಮಾಧವಿಯೊಡನೆ ಈತ ಯಯಾತಿಯ ಪರಿ ಚಯ ಕೇಳಿದುದು (ಆದಿ 93/13). ಅಷ್ಟಕನೇ ಮೊದಲಾದ ರಾಜರೊಂದಿಗೆ ಇವನ ಸ್ವರ್ಗಾಭಿ ಗಮನ (ಆದಿ 93/16). ಈತ ಯಮಸಭೆಯಲ್ಲಿ ರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/13). ಇವನು ತೀರ್ಥ ಯಾತ್ರೆಮಾಡಿ, ಪವಿತ್ರವಾದ ಯಶಸ್ಸನ್ನೂ, ಅಪಾರ ಧನವನ್ನೂ ಪ್ರಾಪ್ತಮಾಡಿಕೊಂಡನು (ವನ 94/ 17–90). ವಿಶ್ವಾಮಿತ್ರನ ಪುತ್ರ ಅಷ್ಟಕನ ಅಶ್ವಮೇಧ ಯಜ್ಞಕ್ಕೆ ಈತ ಹೋಗಿದ್ದನು (ವನ 198/1–2). ನಾರದನು ಇವನನ್ನು ತನ್ನಿಂದಲೂ ಶಿಬಿ ಯಿಂದಲೂ ಮೊದಲು ಸ್ವರ್ಗ ಲೋಕದಿಂದ ಇಳಿಯಲು ಅಧಿಕಾರಿಯೆಂದು ಹೇಳಿದುದು (ವನ 198/11–15). ಇವನು ಇಂದ್ರನ ರಥವನ್ನೇರಿ ವಿರಾಟನಗರದ ಆಕಾಶದಲ್ಲಿ, ಅರ್ಜುನ ಮತ್ತು ಕೃಪಾಚಾರ್ಯರ ಯುದ್ಧ ನೋಡಲು ಬಂದಿ ದ್ದನು (ವಿರಾಟ 56/9–10). ನೈಮಿಷಾರಣ್ಯದಲ್ಲಿ, ವಾಜಪೇಯ ಯಜ್ಞದ ಮೂಲಕ, ಶ್ರೀಹರಿಯ ಆರಾಧನೆ ಮಾಡುತ್ತಿರುವ ವಸುಮಂತನೇ ಮೊದಲಾದವರ ಬಳಿಗೆ ಯಯಾತಿ ಸ್ವರ್ಗದಿಂದ ಕೆಳಗೆ ಬಿದ್ದುದು (ಉದ್ಯೋಗ 121/10–11). ಇವನು ದಾನಪತಿಯೆಂಬ ಹೆಸರಿನಿಂದ ವಿಖ್ಯಾತ ನಾಗಿದ್ದನು. ಇವನು ಯಯಾತಿಗೆ ತನ್ನ ಪುಣ್ಯ ಫಲವನ್ನು ಕೊಟ್ಟನು (ಉದ್ಯೋಗ 122/3–5). ಇವನು ಕೋಸಲ ದೇಶದ ರಾಜನಾಗಿದ್ದನು. ರಾಜ್ಯದ ವೃದ್ಧಿ ಮತ್ತು ಹ್ರಾಸದ ಕುರಿತಾಗಿ ಬೃಹಸ್ಪತಿಯೊಡನೆ ಇವನ ಪ್ರಶ್ನೆ (ಶಾಂತಿ 68/6–7). ವಾಮದೇವನೊಡನೆ ರಾಜಧರ್ಮದ ಕುರಿ ತಾಗಿ ಈತ ಕೇಳಿದುದು (ಶಾಂತಿ 92/4).

(2) ಒಬ್ಬ ರಾಜ. ಇವನು ಯುಧಿಷ್ಠಿರನ ಸಭೆ ಯಲ್ಲಿರುತ್ತಿದ್ದನು (ಸಭಾ 4/32). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/21).

(3) ಒಬ್ಬ ಅಗ್ನಿ. ಅಗ್ನಿಹೋತ್ರಿ ಸಂಬಂಧಿಯಾದ ಅಗ್ನಿಯನ್ನು ಯಾರಾದರೂ ರಜಸ್ವಲೆ ಸ್ತ್ರೀ ಮುಟ್ಟಿದರೆ, ಈತನಿಗೆ ಅಷ್ಟಕಪಾಲ ಚರುವಿನ ಮೂಲಕ ಆಹುತಿ ಕೊಡುವ ವಿಧಿ ಇದೆ (ವನ 221/27). ಈತ ಬ್ರಹ್ಮನ ಸಭೆಯಲ್ಲಿರುತ್ತಾನೆ (ಸಭಾ 11/30).

(4) ಜನಕವಂಶದ ಒಬ್ಬ ರಾಜಕುಮಾರ. ಇವನಿಗೆ ಋಷಿಯೊಬ್ಬನಿಂದ ಧರ್ಮವಿಷಯಕ ವಾದ ಉಪದೇಶ ಪ್ರಾಪ್ತವಾಗಿತ್ತು (ಶಾಂತಿ 309 ಅಧ್ಯಾಯ).

**ವಸುಮಿತ್ರ** – ಒಬ್ಬ ಕ್ಷತ್ರಿಯ ರಾಜ. ಈತ ದನಾಯುವಿನ ಮಗ ವಿಕ್ಷರನೆಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/41).

**ವಸುಶ್ರೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/14).

**ವಸುಷೇಣ** – ಕರ್ಣನ ಒಂದು ಹೆಸರು. ಈ ಹೆಸರು ಅಧಿರಥ ಮತ್ತು ರಾಧೆಯಿಂದ ಬಾಲ್ಯಾ ವಸ್ಥೆಯಲ್ಲಿ ಇಡಲ್ಪಟ್ಟಿತ್ತು (ಆದಿ 67/141, 147; ವನ 309/14) (ವಿಶೇಷ ನೋಡಿರಿ–ಕರ್ಣ).

**ವಸುಹೋಮ** – ಅಂಗ ದೇಶದ ಒಬ್ಬ ರಾಜ. ಇವನು ಮಾಂಧಾತನಿಗೆ ದಂಡದ ಉತ್ಪತ್ತಿ ಇತ್ಯಾದಿಯ ಉಪದೇಶ ಕೊಟ್ಟಿದ್ದನು (ಶಾಂತಿ 122/1–54).

**ವಸ್ತ್ರಪ** – ಕ್ಷತ್ರಿಯರ ಒಂದು ಜಾತಿ. ಈ ಜಾತಿಯ ರಾಜಕುಮಾರರು ಯುಧಿಷ್ಠಿರನಿಗಾಗಿ ಕಾಣಿಕೆ ತಂದಿದ್ದರು (ಸಭಾ 52/15–17).

**ವಸ್ತ್ರಾ** – ಭಾರತ ವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/25).

**ವಸ್ವೋಕಸಾರಾ** – ಗಂಗೆಯ ಏಳು ಧಾರೆಗಳಲ್ಲಿ ಒಂದು (ಭೀಷ್ಮ 6/48).

**ವಹಿ** – ವಿಪಾಶಾದಲ್ಲಿರುವ ಒಂದು ಪಿಶಾಚಿ. ಇದು 'ಹೀಕ'ದ ಒಡನಾಡಿ. ಇವೆರಡರ ಸಂತತಿ ಗಳು 'ವಾಹೀಕ'ವೆಂದು ಹೇಳಲ್ಪಟ್ಟಿವೆ. ಇವು ಪ್ರಜಾಪತಿಯ ಸೃಷ್ಟಿಗಳಲ್ಲ (ಕರ್ಣ 44/41–42).

**ವಹೀನರ** – ಒಬ್ಬ ರಾಜ. ಈತ ಯಮಸಭೆ

ಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15).

**ವಹ್ನಿ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಈತ ಹಿಂದಿನಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಕಾಲವಶನಾಗಿ ಇದನ್ನೆಲ್ಲಾ ಬಿಟ್ಟು ಹೊರಟು ಹೋದನು (ಶಾಂತಿ 227/52).

**ವಾಗಿಂದ್ರ** – ಗೃತ್ಸಮದ ವಂಶಿಯಾದ ಪ್ರಕಾಶನ ಪುತ್ರ, ಇವನ ಪುತ್ರನ ಹೆಸರು ಪ್ರಮಿತಿ ಎಂದಾಗಿತ್ತು (ಅನು 30/63).

**ವಾಗ್ಮೀ** – ರಾಜಾ ಪೂರುವಿನ ಮೊಮ್ಮಗನಾದ ಮನಸ್ಯುವಿನ ಮೂಲಕ, ಸೌವೀರಿಯ ಗರ್ಭದಿಂದ ಹುಟ್ಟಿದ ಮೂವರು ಪುತ್ರರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರು ಶಕ್ತ ಮತ್ತು ಸಂಹನನ ಎಂದಾಗಿತ್ತು (ಆದಿ 24/5–7).

**ವಾಜಪೇಯ** – ಒಂದು ಯಜ್ಞದ ವಿಶೇಷ (ಸಭಾ 5/100).

**ವಾಟಧಾನ** – (1) ಒಬ್ಬ ಕ್ಷತ್ರಿಯ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/63). ಇವನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/23).

(2) ಒಂದು ದೇಶ ಮತ್ತು ಅಲ್ಲಿರುವ ನಿವಾಸಿಗಳು. ಪಶ್ಚಿಮ ದಿಗ್ವಿಜಯ ಕಾಲದಲ್ಲಿ ನಕುಲನು ವಾಟಧಾನ ದೇಶದ ಕ್ಷತ್ರಿಯರನ್ನು ಸೋಲಿಸಿದ್ದನು (ಸಭಾ 32/8). ಧನಧಾನ್ಯದಿಂದ ಸಂಪನ್ನವಾದ ಈ ದೇಶ ಕೌರವ ಸೇನೆಯಿಂದ ಆಕ್ರಮಿಸಲ್ಪಟ್ಟಿತ್ತು (ಉದ್ಯೋಗ 19/31). ಭಾರತದ ಪ್ರಮುಖ ಜನಪದಗಳಲ್ಲಿ ಇದೂ ಗಣಿಸಲ್ಪಟ್ಟಿದೆ (ಭೀಷ್ಮ 9/47). ಈ ದೇಶದ ಸೈನಿಕರು ಭೀಷ್ಮ ನಿರ್ಮಿತ ಗರುಡವ್ಯೂಹದ ಶಿರೋಭಾಗದಲ್ಲಿ ಅಶ್ವತ್ಥಾಮನೊಂದಿಗೆ ನಿಲ್ಲಿಪಿಸಲ್ಪಟ್ಟಿದ್ದರು (ಭೀಷ್ಮ 56/4). ಭಗವಾನ್ ಶ್ರೀಕೃಷ್ಣನೂ ಹಿಂದೊಮ್ಮೆ ಈ ದೇಶವನ್ನು ಗೆದ್ದಿದ್ದನು (ದ್ರೋಣ 11/17). ಇಲ್ಲಿರುವ ಸೈನಿಕರು ಅರ್ಜುನನ ಮೂಲಕ ಕೊಲ್ಲಲ್ಪಟ್ಟಿದ್ದರು (ಕರ್ಣ 73/17).

**ವಾಣೀ** – ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/20).

**ವಾತಘ್ನ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/54).

**ವಾತಜ** – ಒಂದು ಭಾರತೀಯ ಜನಪದ (ಭೀಷ್ಮ 9/54).

**ವಾತವೇಗ (ವಾಯುವೇಗ)** – (1) ಧೃತರಾಷ್ಟ್ರನ ನೂರುಪುತ್ರರಲ್ಲಿ ಒಬ್ಬ (ಆದಿ 67/102; ಆದಿ 116/10). ಈತ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/2). ಭೀಮಸೇನನಿಂದ ಇವನ ವಧೆ (ಕರ್ಣ 84/2–6).

(2) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/10).

**ವಾತಸ್ಕಂಧ** – ಒಬ್ಬ ಮಹರ್ಷಿ. ಇವನು ಇಂದ್ರನ ಸಭೆಯಲ್ಲಿರುತ್ತಾ, ವಜ್ರಧಾರಿ ಇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/14).

**ವಾತಾಧಿಪ** – ಒಬ್ಬ ರಾಜ. ಇವನನ್ನು ಸಹದೇವನು ದಕ್ಷಿಣದಿಗ್ವಿಜಯ ಕಾಲದಲ್ಲಿ ತನ್ನ ವಶಕ್ಕೆ ತೆಗೆದುಕೊಂಡಿದ್ದನು (ಸಭಾ 31/15).

**ವಾತಾಪಿ** – ದುರ್ಜಯವಾದ ಮಣಿಮತಿ ನಗರ ನಿವಾಸಿಯಾದ ಇಲ್ವಲನೆಂಬ ದೈತ್ಯನ ತಮ್ಮ (ವನ 96/1–4). ಇಲ್ವಲನು ಮಾಯೆಯಿಂದ ತನ್ನ ಸಹೋದರ ವಾತಾಪಿಯನ್ನು ಆಡು ಅಥವಾ ಕುರಿಯಾಗಿ ಮಾಡುತ್ತಿದ್ದನು. ವಾತಾಪಿಯೂ ಇಚ್ಛಾನುಸಾರ ರೂಪಧಾರಣೆ ಮಾಡಲು ಸಮರ್ಥನಾಗಿದ್ದನು. ಆದುದರಿಂದ ಅವನು ಕ್ಷಣಮಾತ್ರದಲ್ಲಿ ಕುರಿ ಅಥವಾ ಆಡು ಆಗಿ ಬಿಡುತ್ತಿದ್ದನು. ಇಲ್ವಲನು ಆ ಕುರಿ ಅಥವಾ ಆಡನ್ನು ಕೊಂದು, ಆ ಮಾಂಸವನ್ನು ಯಾವನಾದರೂ ಬ್ರಾಹ್ಮಣನಿಗೆ ತಿನ್ನಿಸುತ್ತಿದ್ದನು. ಸತ್ತಪ್ರಾಣಿಯನ್ನು ತಾನು ಕರೆದಾಗ, ಅದು ಜೀವಂತವಾಗಿ ಕಾಣಿಸಿಕೊಳ್ಳುವಂತೆ ಮಾಡುವ ಶಕ್ತಿ ಇಲ್ವಲನಲ್ಲಿತ್ತು. ಅವನು ವಾತಾಪಿಯನ್ನು ಕೂಗಿ ಕರೆಯುತ್ತಿದ್ದನು; ಆಗ ಬಲವಂತನಾದ ಆ ದೈತ್ಯ ಬ್ರಾಹ್ಮಣನ ಹೊಟ್ಟೆಯನ್ನು ಸಿಗಿದು, ನಗುತ್ತಾ ಹೊರಗೆ ಬರುತ್ತಿದ್ದನು (ವನ 96/7–13). ಅವನು ಅಗಸ್ತ್ಯರೊಡನೆಯೂ ಇದೇ ವ್ಯವಹಾರ ನಡೆಸಿದನು; ಆದರೆ ಅಗಸ್ತ್ಯನು ಇವನನ್ನು ಹೊಟ್ಟೆಯಲ್ಲಿಯೇ ಜೀರ್ಣಿಸಿಕೊಂಡನು; ಇವನು ಪುನಃ ಹೊರಗೆ ಬರಲಾಗಲಿಲ್ಲ (ವನ 99/39).

**ವಾತಾಪೀ** – ದನುವಿನ ಪುತ್ರ, ಪ್ರಸಿದ್ಧವಾದ ಹತ್ತು ದಾನವಕುಲಗಳಲ್ಲಿ ಒಂದು (ಆದಿ 65/28–30).

**ವಾತಿಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ವಾತ್ಸ್ಯ** – (1) ಒಬ್ಬ ವೇದವಿದ್ಯಾ ಪಾರಂಗತ ನಾದ ಋಷಿ. ಇವನು ಜನಮೇಜಯನ ಸರ್ಪ ಯಜ್ಞದಲ್ಲಿ ಸದಸ್ಯನಾಗಿದ್ದನು (ಆದಿ 53/9–10). ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಈತನೂ ಹೋಗಿದ್ದನು (ಶಾಂತಿ 47/5).
(2) ಒಂದು ದೇಶ. ಇದನ್ನು ಶ್ರೀಕೃಷ್ಣನು ಗೆದ್ದಿದ್ದನು (ದ್ರೋಣ 11/15). (ನೋಡಿರಿ 'ವತ್ಸ').

**ವಾನವ** – ಒಂದು ಭಾರತೀಯ ಜನಪದ (ಭೀಷ್ಮ 9/54).

**ವಾಭ್ರವಾಯಣಿ (ಬಾಭ್ರವಾಯಣಿ)** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/57).

**ವಾಮದೇವ** – (1) ಒಬ್ಬ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/17). ಈತನು ರಾಜಾ ಶಲನಿಗೆ ತನ್ನ ವಾಮ್ಯ ಅಶ್ವವನ್ನು ಕೊಟ್ಟದ್ದು (ವನ 192/43). ಅಶ್ವಗಳನ್ನು ಹಿಂತಿರುಗಿಸದಿದ್ದಾಗ, ರಾಜನೊಡನೆ ಈತನ ಮಾತುಕತೆ ಮತ್ತು ಕೊನೆಗೆ ಕೃತ್ಯೆಯಿಂದ ಹುಟ್ಟಿದ ರಾಕ್ಷಸರ ಮೂಲಕ ರಾಜನನ್ನು ನಾಶ ಪಡಿಸಿದುದು (ವನ 192/48–59). ಶಲನ ತಮ್ಮ ದಲನೊಂದಿಗೆ ಇವನ ಮಾತುಕತೆ ಮತ್ತು ಅಶ್ವಗಳನ್ನು ಪುನಃ ಪಡೆದುದು (ವನ 192/60–72). ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುವ ಶ್ರೀಕೃಷ್ಣನಿಗೆ ಈತನಿಂದ ಪ್ರದಕ್ಷಿಣೆ (ಉದ್ಯೋಗ 83/27–28). ಇವನಿಂದ ಮಹಾರಾಜ ವಸುವಂತನಿಗೆ ರಾಜಧರ್ಮದ ಉಪದೇಶ (ಶಾಂತಿ ಅಧ್ಯಾಯ 92 ರಿಂದ 94).
(2) ಒಬ್ಬ ರಾಜ. ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನನು ಈತನನ್ನು ತನ್ನ ಅಧೀನಕ್ಕೆ ಒಳಪಡಿಸಿದ್ದನು (ಸಭಾ 27/11).

**ವಾಮನ** – (1) ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/6; ಉದ್ಯೋಗ 103/10).
(2) ಭಗವಂತನಾದ ವಿಷ್ಣುವಿನ ಅವತಾರ. ದೇವತೆಗಳ ಪ್ರಾರ್ಥನೆಯಿಂದ ಅದಿತಿ ಮಾತೆಯ ಗರ್ಭದಿಂದ ಭಗವಾನ್ ನಾರಾಯಣನ ಪ್ರಾದುರ್ಭಾವ, ಬ್ರಹ್ಮಚಾರಿ ವಾಮನನಿಂದ ಬಲಿಯೊಡನೆ ಮೂರು ಹೆಜ್ಜೆ ಭೂಮಿಯ ಯಾಚನೆ (ಸಭಾ 38/29). ತ್ರಿಭುವನಗಳನ್ನು ಅಳೆಯುವ ಸಮಯ ಈತ ಅದ್ಭುತ ರೂಪಧಾರಣೆ ಮಾಡಿದುದು. ಇವನ ಚರಣದ ಆಘಾತದಿಂದ ಗಂಗೆಯ ಪ್ರಾಕಟ್ಯ. ಇವನಿಂದ ದಾನವರ ಭೀಷಣ ಸಂಹಾರ (ಸಭಾ 38/29). ಇವನಿಂದ ರಾಜಾಬಲಿಯ ಬಂಧನ ಬಲಿಯನ್ನು ಸುತಲಲೋಕಕ್ಕೆ ಕಳುಹಿಸಿ, ಇವನಿಂದ ಇಂದ್ರನಿಗೆ ತ್ರಿಭುವನ ರಾಜ್ಯಗಳ ದಾನ (ಸಭಾ 38/29).
(3) ಕುರುಕ್ಷೇತ್ರದ ಎಲ್ಲೆಯಲ್ಲಿರುವ ತ್ರಿಭುವನ ವಿಖ್ಯಾತವಾದ ಒಂದು ತೀರ್ಥ. ಇಲ್ಲಿ ವಿಷ್ಣು ಪದದಲ್ಲಿ ಸ್ನಾನ ಮತ್ತು ವಾಮನದೇವತೆಯ ಪೂಜೆಮಾಡುವುದರಿಂದ, ಮನುಷ್ಯನು ಎಲ್ಲಾ ಪಾಪಗಳಿಂದ ಶುದ್ಧನಾಗಿ, ಭಗವಂತನಾದ ವಿಷ್ಣುವಿನ ಲೋಕಕ್ಕೆ ಹೋಗುತ್ತಾನೆ (ವನ 83/103).
(4) ಒಂದು ಸರ್ವಪಾಪ ವಿನಾಶಕವಾದ ತೀರ್ಥ. ಇಲ್ಲಿಗೆ ಯಾತ್ರೆಮಾಡಿ ಶ್ರೀಹರಿಯ ದರ್ಶನ ಮಾಡುವುದರಿಂದ, ಮನುಷ್ಯ ಎಂದೂ ದುರ್ಗತಿಗೆ ಬೀಳುವುದಿಲ್ಲ (ವನ 84/130–131).
(5) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/10).
(6) ಕ್ರೌಂಚ ದ್ವೀಪದ ಒಂದು ಪರ್ವತ (ಭೀಷ್ಮ 12/18).
(7) ನಾಲ್ಕು ದಿಗ್ಗಜಗಳಲ್ಲಿ ಒಂದು. ಉಳಿದ ಮೂರರ ಹೆಸರು ಐರಾವತ, ಸುಪ್ರತೀಕ ಮತ್ತು ಅಂಜನ (ಭೀಷ್ಮ 12/33). ಇದು ಘಟೋತ್ಕಚನ ಒಡನಾಡಿಯಾದ ಒಬ್ಬ ರಾಕ್ಷಸನ ವಾಹನವಾಗಿತ್ತು (ಭೀಷ್ಮ 64/57).

**ವಾಮನಿಕಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/23).

**ವಾಮಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/12, 17).

**ವಾಮ್ಯ** – ಮಹರ್ಷಿ ವಾಮದೇವನ ಅಶ್ವಗಳ ಹೆಸರು (ವನ 192/41).

**ವಾಯು** – ವಾಯುತತ್ತ್ವದ ಅಭಿಮಾನಿ ದೇವತೆ. ಇವನನ್ನು ಮೇನಕೆಯು ವಿಶ್ವಾಮಿತ್ರನನ್ನು ಮೋಹಗೊಳಿಸುವ ಕಾಲದಲ್ಲಿ ತನ್ನ ಆವಶ್ಯಕ ಸಹಾಯಕ್ಕಾಗಿ ಆಯ್ಕೆಮಾಡಿದ್ದಳು. ಇಂದ್ರನು ಈತನನ್ನು ಆಕೆಯ ಜೊತೆಯಲ್ಲಿ ಕಳುಹಿಸಿದನು ಮತ್ತು ಈತ ಮೇನಕೆಯ ವಸ್ತ್ರವನ್ನು ಹಾರಿಸಿದನು (ಆದಿ 72/1–4). ಇವನಿಂದ ಕುಂತಿಯ ಗರ್ಭದಲ್ಲಿ ಭೀಮಸೇನನ ಜನ್ಮ (ಆದಿ 122/11–

30

14). ಇವನು ಬ್ರಹ್ಮನ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 11/20). ಇವನು ಶಾಲ್ವನನ್ನು ಕೊಲ್ಲಲು ಸಿದ್ಧನಾದ ಪ್ರದ್ಯುಮ್ನನ ಬಳಿಗೆಬಂದು, ದೇವತೆಗಳ ಸಂದೇಶ ತಿಳಿಸಿದುದು (ವನ 19/22–24). ಇವನಿಂದ ದಮಯಂತಿಯ ಶುದ್ಧತೆಯ ಸಮರ್ಥನೆ (ವನ 76/36–39). ಇವನಿಂದ ಸೀತೆಯ ಶುದ್ಧತೆಯ ಸಮರ್ಥನೆ (ವನ 291/27). ತ್ರಿಪುರದಹನದ ಸಮಯದಲ್ಲಿ ಈತ ಭಗವಾನ್ ಶಂಕರನ ಬಾಣದ ರೆಕ್ಕೆಯಾಗಿದ್ದನು (ದ್ರೋಣ 202/76–77). ಇವನಿಂದ ಸ್ಕಂದನಿಗೆ ಬಲ ಮತ್ತು ಅತಿ ಬಲರೆಂಬ ಪಾರ್ಷದರ ಕೊಡುಗೆ (ಶಲ್ಯ 45/44–45). ಮಹಾರಾಜ ಪೂರೂರವನು ಕೇಳಿದಾಗ ಆತನಿಗೆ ಪುರೋಹಿತನ ಆವಶ್ಯಕತೆಯನ್ನು ಹೇಳಿದುದು (ಶಾಂತಿ 72/10–25). ನಾರದನ ಮುಖದಿಂದ ಬೂರುಗ ವೃಕ್ಷದ ಉದ್ದಂಡತೆಯನ್ನು ಕೇಳಿ, ಈತ ಆ ವೃಕ್ಷವನ್ನು ಗದರಿಸಿದುದು (ಶಾಂತಿ 156/6–9). ಬೂರುಗದ ಮರಕ್ಕೆ ಎಚ್ಚರಿಕೆ ನೀಡಿದುದು (ಶಾಂತಿ 157/5–6). ಈತ ಗರುಡನಿಂದ ಸಾತ್ವತ ಧರ್ಮದ ಶಿಕ್ಷಣ ಪಡೆದನು ಮತ್ತು ತಾನೂ ವಿಘಸಾಶಿ ಋಷಿಗಳಿಗೆ ಅದರ ಉಪದೇಶವನ್ನಿತ್ತನು (ಶಾಂತಿ 348/22–24). ಇವನ ಮೂಲಕ ಧರ್ಮಾಧರ್ಮದ ರಹಸ್ಯದ ವರ್ಣನೆ (ಅನು 128). ಇವನಿಂದ ಕಾರ್ತವೀರ್ಯನಿಗೆ ಬ್ರಾಹ್ಮಣರ ಮಹತ್ತ್ವದ ಕುರಿತು ಪ್ರತಿಪಾದನೆ (ಅನು 152/24 ರಿಂದ ಅನು 157 ವರೆಗೆ).

(2) ಒಬ್ಬ ಪ್ರಾಚೀನ ಋಷಿ. ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/9).

**ವಾಯುಚಕ್ರ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುಜ್ವಾಲ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುಬಲ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುಭಕ್ಷ** – ಒಬ್ಬ ಪ್ರಾಚೀನ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/13). ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಮಾರ್ಗ ಮಧ್ಯದಲ್ಲಿ ಭೇಟಿಮಾಡಿದನು (ಉದ್ಯೋಗ 83/64).

**ವಾಯುಮಂಡಲ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುರೇತಾ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುವೇಗ** – (1) ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/63). ಇವನಿಗೆ ಪಾಂಡವರ ಕಡೆಯಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/17).

(2) ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾಯುಹಾ** – ಮಂಕಣಕ ಮುನಿಯ ಕಲಶದಲ್ಲಿಡಲ್ಪಟ್ಟ ವೀರ್ಯದಿಂದ ಹುಟ್ಟಿದ ಒಬ್ಬ ಋಷಿ (ಶಲ್ಯ 38/32–37).

**ವಾರಣ** – ಒಂದು ಪ್ರದೇಶ. ಇದು ಕೌರವ ಸೇನೆಯಿಂದ ಆವೃತವಾಗಿತ್ತು (ಉದ್ಯೋಗ 19/31).

**ವಾರಣಾವತ** – ಒಂದು ಪ್ರಾಚೀನ ನಗರ. ಇಲ್ಲಿ ದುರ್ಯೋಧನನು ಪಾಂಡವರನ್ನು ಕೊಲ್ಲಿಸುವುದಕ್ಕೋಸ್ಕರ, ಪುರೋಚನನ ಸಹಕಾರದಿಂದ ಲಾಕ್ಷಾಗೃಹ ನಿರ್ಮಾಣ ಮಾಡಿಸಿದ್ದನು (ಆದಿ 61/17). (ಆಧುನಿಕ ಅಭಿಪ್ರಾಯ ಪ್ರಕಾರ 'ವರ್ನವಾ'. ಇದು ಮೇರಠದಿಂದ ವಾಯವ್ಯದಲ್ಲಿ ಹತ್ತೊಂಬತ್ತು ಮೈಲು ದೂರದಲ್ಲಿದೆ.) ಪಾಂಡವರು ಇಲ್ಲಿ ಒಂದು ವರ್ಷ ವಾಸಿಸಿದ್ದರು (ಆದಿ 61/21–22). ಧೃತರಾಷ್ಟ್ರನ ಮಂತ್ರಿಗಳಿಂದ ಈ ಪಟ್ಟಣದ ಹೊಗಳಿಕೆ ಮತ್ತು ಅಲ್ಲಿ ನಡೆಯುವ ಜಾತ್ರೆಯ ವರ್ಣನೆ (ಆದಿ 142/3–4). ಪಾಂಡವರು ಸಂಧಿಗಾಗಿ ಬೇಡಿದ ಐದು ಗ್ರಾಮಗಳಲ್ಲಿ ವಾರಣಾವತವೂ ಒಂದಾಗಿತ್ತು (ಉದ್ಯೋಗ 31/19–20). ಧೃತರಾಷ್ಟ್ರ ಪುತ್ರ

ಯುಯುತ್ಸು ಇಲ್ಲಿ ಅನೇಕ ರಾಜರೊಂದಿಗೆ ಆರು ತಿಂಗಳುಗಳ ವರೆಗೆ, ಅಪರಾಜಿತನಾಗಿ ಯುದ್ಧ ಮಾಡಿದ್ದನು (ದ್ರೋಣ 10/58–59).

**ವಾರವತ್ಯಾ** – ಒಂದು ನದಿ. ಈಕೆ ವರುಣ ಸಭೆಯಲ್ಲಿದ್ದುಕೊಂಡು, ವರುಣದೇವನ ಉಪಾಸನೆ ಮಾಡುತ್ತಾಳೆ (ಸಭಾ 9/22).

**ವಾರವಾಸ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/45).

**ವಾರಾಣಸಿ** – ಭೀಷ್ಮನು ತಾಯಿಯ ಆಜ್ಞೆಯಿಂದ, ಕಾಶೀರಾಜಕನ್ಯೆಯರ ಸ್ವಯಂವರಕ್ಕಾಗಿ ವಾರಾಣಸಿ ಪುರಕ್ಕೆ ಹೋದನು. ಅಲ್ಲಿ ಬಂದಿರುವ ಸಮಸ್ತ ರಾಜರಿಗೂ ಪಂಥಾಹ್ವಾನ ನೀಡಿ, ಅವರನ್ನು ಯುದ್ಧದಲ್ಲಿ ಸೋಲಿಸಿ, ಕಾಶೀರಾಜನ ಮೂವರೂ ಕನ್ಯೆಯರನ್ನು ಅಪಹರಿಸಿದನು (ಆದಿ 102/3–53). ಇದು ಒಂದು ಪ್ರಮುಖ ತೀರ್ಥ. ಅಲ್ಲಿ ಹೋಗಿ ಕಪಿಲಾ ಮಡುವಿನಲ್ಲಿ ಸ್ನಾನಮಾಡಿ, ಭಗವಾನ್ ಶಂಕರನ ಪೂಜೆ ಮಾಡುವುದರಿಂದ ರಾಜಸೂಯ ಯಜ್ಞದ ಫಲ ಸಿಗುತ್ತದೆ (ವನ 84/78). ವಾರಾಣಸಿಯ ಮಧ್ಯ ಭಾಗ ಅವಿಮುಕ್ತ ಕ್ಷೇತ್ರವೆಂದು ಹೇಳಲ್ಪಡುತ್ತದೆ. ಇಲ್ಲಿ ಪ್ರಾಣೋತ್ಸರ್ಗ ಮಾಡುವವನಿಗೆ ಮೋಕ್ಷ ಪ್ರಾಪ್ತ ವಾಗುತ್ತದೆ (ವನ 84/79). (ಇದು ಏಳು ಮೋಕ್ಷದಾಯಕ ಕ್ಷೇತ್ರಗಳಲ್ಲಿ ಒಂದಾಗಿದೆ.) ಇದನ್ನು ಶ್ರೀಕೃಷ್ಣನು ಉರಿಸಿದ್ದನು (ಉದ್ಯೋಗ 48/76). ಕಾಶೀಪಟ್ಟಣದಲ್ಲಿ ಕಾಶೀರಾಜನ ಪುತ್ರ ನನ್ನು ಧೃಷ್ಟದ್ಯುಮ್ನನು ಕೊಂದಿದ್ದನು (ದ್ರೋಣ 10/60–62). ಇದೇ ಪಟ್ಟಣದಲ್ಲಿ ಮಹಾಜ್ಞಾನಿ ಯಾದ ತುಲಾಧಾರ ವೈಶ್ಯನು ಇರುತ್ತಿದ್ದನು (ಶಾಂತಿ 261/42–43). ಪೂರ್ವಕಾಲದಲ್ಲಿ ಭಗವಾನ್ ಶಿವನು ವಾರಾಣಸಿ ಪುರದಲ್ಲಿ ಮುನಿವರ ಜೈಗೀಷವ್ಯನಿಗೆ, ಆತನ ಸಬಲಸಾಧನೆ ಯಿಂದ ಸಂತುಷ್ಟನಾಗಿ, ಅಣಿಮಾದಿ ಅಷ್ಟಸಿದ್ಧಿ ಗಳ ಪ್ರದಾನ ಮಾಡಿದ್ದನು (ಅನು 18/37). ತೇಜಸ್ವಿ ರಾಜನಾದ ದಿವೋದಾಸನು, ಇಂದ್ರನ ಆಜ್ಞೆಯಿಂದ, ವಾರಾಣಸಿ ಎಂಬ ನಗರವನ್ನು ನಿರ್ಮಾಣಮಾಡಿದ್ದನು. ಈ ಪಟ್ಟಣ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಂದ ತುಂಬಿತ್ತು. ನಾನಾ ಪ್ರಕಾರದ ದ್ರವ್ಯಗಳಿಂದ ಸಂಪನ್ನವಾಗಿತ್ತು. ಅದರ ಸಂತೆ ಬೀದಿಗಳೂ, ಅಂಗಡಿಗಳೂ ಧನವೈಭವದಿಂದ ತುಂಬಿದ್ದವು. ಈ ನಗರದ ಎಲ್ಲೆಯ ಒಂದು ತುದಿ ಗಂಗೆಯ ಉತ್ತರ ತಡಿಯವರೆಗೆ ಮತ್ತು ಇನ್ನೊಂದು ತುದಿ ಗೋಮತಿಯ ದಕ್ಷಿಣ ದಡದ ವರೆಗೆ ಹರಡಿತ್ತು. ಇದು ಇಂದ್ರನ ಅಮರಾವತಿಯಂತೆ ಕಾಣುತ್ತಿತ್ತು (ಅನು 30/16–18). ಪೂರ್ವ ಕಾಲದಲ್ಲಿ ಇಲ್ಲಿ ಭಗವಾನ್‌ಶಂಕರನ ದರ್ಶನಕ್ಕಾಗಿ, ಸಂವರ್ತ ಮುನಿ ಪ್ರತಿದಿನ ಬರುತ್ತಿದ್ದನು. ಇಲ್ಲಿಯೇ ರಾಜಾ ಮರುತ್ತನು, ನಾರದನು ಹೇಳಿದ ಪ್ರಕಾರ, ಸಂವರ್ತನನ್ನು ಗುರುತಿಸಿ, ಅವನನ್ನು ತನ್ನ ಪುರೋಹಿತ ಪೀಠದಲ್ಲಿ ಪ್ರತಿಷ್ಠೆಗೊಳಿಸಿದ್ದನು (ಆಶ್ವ 6/22ರಿಂದ ಆಶ್ವ 7/18ರ ತನಕ).

**ವಾರಾಹ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಉತ್ತಮ ತೀರ್ಥ. ಇಲ್ಲಿ ಭಗವಾನ್ ವಿಷ್ಣು ಹಿಂದೆ ವವಾರಾಹರೂಪದಲ್ಲಿ ಇದ್ದನು. ಇಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲ ಸಿಗುತ್ತದೆ (ವನ 83/18–19).

**ವಾರಿಸೇನ** – ಒಬ್ಬ ರಾಜ. ಈತ ಯಮ ಸಭೆಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾ ಸನೆ ಮಾಡುತ್ತಾನೆ (ಸಭಾ 8/20).

**ವಾರುಣತೀರ್ಥ** – ದಕ್ಷಿಣ ಭಾರತದಲ್ಲಿ ಪಾಂಡ್ಯ ದೇಶದೊಳಗಿರುವ ಒಂದು ತೀರ್ಥ (ವನ 88/13).

**ವಾರುಣಹ್ರದ** – ವರುಣದೇವತೆಯ ಒಂದು ಸರೋವರ. ಇಲ್ಲಿ ಮಹಾತೇಜಸ್ವಿ ಅಗ್ನಿದೇವ ಪ್ರಕಾಶಿತನಾಗುತ್ತಾನೆ (ಉದ್ಯೋಗ 98/18).

**ವಾರುಣೀ** – ಈಕೆ ಕ್ಷೀರಸಾಗರ ಮಥನದಲ್ಲಿ ಹುಟ್ಟಿದವಳು (ಉದ್ಯೋಗ 102/12).

**ವಾರ್ಕ್ಷೀ** – ಕಂಡು ಮುನಿಯ ಪುತ್ರಿ. ಈಕೆ ಹತ್ತು ಮಂದಿ ಪ್ರಚೇತಸರ ಪತ್ನಿಯಾಗಿದ್ದಳು (ಆದಿ 195/15).

**ವಾರ್ತ** – ಒಬ್ಬ ರಾಜ. ಈತ ಯಮಸಭೆ ಯಲ್ಲಿದ್ದು, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10).

**ವಾರ್ಧಕ್ಷೇಮಿ** – ಪಾಂಡವಪಕ್ಷದ ಒಬ್ಬ ಮಹಾರಥಿ ಯೋಧ. ಅವನು ವೃಷ್ಣಿ ವಂಶದ ಕ್ಷತ್ರಿಯನಾಗಿದ್ದನು (ಉದ್ಯೋಗ 171/17). ಈತ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/9). ಇವನ ಕುದುರೆಗಳ ವರ್ಣನೆ (ದ್ರೋಣ

23/35). ಕೃಪಾಚಾರ್ಯನೊಂದಿಗೆ ಈತನ ಯುದ್ಧ (ದ್ರೋಣ 25/51-52). ಯುದ್ಧದಲ್ಲಿ ಈತ ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/28-29).

**ವಾರ್ಷಗಣ್ಯ** – ಒಬ್ಬ ಪ್ರಾಚೀನ ಋಷಿ. ಗಂಧರ್ವರಾಜ ವಿಶ್ವಾವಸು ಒಮ್ಮೆ ಜೀವಾತ್ಮ ಪರಮಾತ್ಮ ತತ್ತ್ವದ ವಿವೇಚನೆಯನ್ನು ಈತನಿಂದ ಕೇಳಿದ್ದನು (ಶಾಂತಿ 318/59).

**ವಾರ್ಷ್ಣೇಯ** – (1) ಒಂದು ಪ್ರಾಚೀನ ದೇಶ. ಇಲ್ಲಿರುವ ರಾಜ, ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 51/24).

(2) ರಾಜಾ ನಳನ ಸಾರಥಿ (ವನ 60/10). ಈತ ರಾಜಾ ನಳನ ಕುಮಾರ ಕುಮಾರಿಯರಾದ ಇಂದ್ರಸೇನ ಮತ್ತು ಇಂದ್ರಸೇನೆಯರನ್ನು ಕುಂಡಿನಾಪುರಕ್ಕೆ ಬಿಟ್ಟು ಅಯೋಧ್ಯೆಗೆ ಹೋದುದು (ವನ 60/21-24). ಋತುಪರ್ಣನ ಸಾರಥಿಯಾದುದು (ವನ 60/25). ಋತುಪರ್ಣನು ಇವನನ್ನು ಬಾಹುಕನ ಸೇವೆಗೆ ನೇಮಕಗೊಳಿಸಿದುದು (ವನ 67/7). ಋತುಪರ್ಣನೊಂದಿಗೆ ವಿದರ್ಭಕ್ಕೆ ಹೋಗುವಾಗ, ದಾರಿಯಲ್ಲಿ ಈತನಿಗೆ ಬಾಹುಕನೇ ನಳನಾಗಿರಬೇಕೆಂಬ ಸಂದೇಹವುಂಟಾದುದು (ವನ 71/26-34).

(3) ಭಗವಾನ್ ಶ್ರೀಕೃಷ್ಣನ ಒಂದು ಹೆಸರು (ಭೀಷ್ಮ 27/36).

**ವಾಲಖಿಲ್ಯ (ಬಾಲಖಿಲ್ಯ)** – ಬ್ರಹ್ಮನ ಶಕ್ತಿಶಾಲಿ ಪುತ್ರನಾದ ಮಹರ್ಷಿ ಕ್ರತುವಿನಿಂದ ಹುಟ್ಟಿದ ಋಷಿಗಳು. ಇವರ ಸಂಖ್ಯೆ ಅರುವತ್ತು ಸಾವಿರ. ಇವರು ಕ್ರತುವಿನಷ್ಟೇ ಪವಿತ್ರರೂ, ಮೂರು ಲೋಕಗಳಲ್ಲಿ ವಿಖ್ಯಾತರೂ, ಸತ್ಯವಾದಿಗಳೂ, ವ್ರತಪರಾಯಣರೂ, ಸೂರ್ಯನ ಮುಂದೆ ಸಂಚರಿಸುವವರೂ ಆಗಿದ್ದಾರೆ (ಆದಿ 66/4-9). ಕಶ್ಯಪನ ಪ್ರಾರ್ಥನೆಯಿಂದ, ಗರುಡನಿಂದ ಮುರಿಯಲ್ಪಟ್ಟ ವಟ ಶಾಖೆಯನ್ನು ಬಿಟ್ಟು, ಇವರು ತಪಸ್ಸಿಗಾಗಿ ಹೋದರು (ಆದಿ 30/18). ದೇವರಾಜ ಇಂದ್ರನ ಅಪರಾಧ ಮತ್ತು ಪ್ರಮಾದದಿಂದ ಮತ್ತು ಮಹಾತ್ಮರಾದ ವಾಲಖಿಲ್ಯ ಋಷಿಗಳ ತಪಸ್ಸಿನ ಪ್ರಭಾವದಿಂದ, ಪಕ್ಷಿರಾಜನಾದ ಗರುಡನ ಹುಟ್ಟಿನ ಕುರಿತು ಬೃಹಸ್ಪತಿಯಿಂದ ವರ್ಣನೆ (ಆದಿ 30/40). ಪುತ್ರಕಾಮನೆಯಿಂದ ಮಾಡಲ್ಪಡುತ್ತಿದ್ದ ಮಹರ್ಷಿ ಕಶ್ಯಪರ ಯಜ್ಞದ ಸಹಾಯಕ್ಕೆ, ಪಲಾಶದ ಒಂದು ಚಿಕ್ಕ ಗೆಲ್ಲನ್ನು ತೆಗೆದುಕೊಂಡು ಬರುತ್ತಿರುವ, ಅಂಗುಷ್ಠ ಮಧ್ಯಭಾಗದಷ್ಟು ಶರೀರವಿರುವ ವಾಲಖಿಲ್ಯ ಋಷಿಗಳನ್ನು, ಬಲೋನ್ಮತ್ತನಾದ ಇಂದ್ರನು ಪರಿಹಾಸ ಮಾಡಿದುದು; ಅಪಮಾನ ಮತ್ತು ಅತಿಕ್ರಮಣ ಮಾಡಿದುದು (ಆದಿ 31/5-10). ರೋಷಾವೇಶದಿಂದ ತುಂಬಿದ ವಾಲಖಿಲ್ಯರು ದೇವರಾಜನಿಗೆ ಭಯಕಾರಕನಾದ ಇನ್ನೊಬ್ಬ ಇಂದ್ರನ ಸೃಷ್ಟಿಗೋಸ್ಕರ ಅಗ್ನಿಯಲ್ಲಿ ವಿಧಿವತ್ತಾಗಿ ಹೋಮ ಮಾಡಿದುದು (ಆದಿ 31/11-14). ಮಹರ್ಷಿ ಕಶ್ಯಪನು ವಿನಯಪೂರ್ವಕವಾಗಿ ವಾಲಖಿಲ್ಯರನ್ನು ಸಮಾಧಾನಗೊಳಿಸಿದುದು, ಇವರ ಸಂಕಲ್ಪಾನುಸಾರ ಆಗುವ ಪುತ್ರನನ್ನು ಯಾಚಕನಾಗಿ ಬಂದ ದೇವರಾಜ ಇಂದ್ರನ ಮೇಲೆ ಅನುಗ್ರಹ ಮಾಡುವುದಕ್ಕೋಸ್ಕರ ಒತ್ತಾಯ ಮಾಡಿದುದು. ವಾಲಖಿಲ್ಯರು ಆತನ ಒತ್ತಾಯವನ್ನು ಸ್ವೀಕರಿಸಿದುದು (ಆದಿ 31/16-23). ಇವರು ಸೂರ್ಯಕಿರಣವನ್ನು ಪಾನ ಮಾಡುವ ಋಷಿಗಳು. ಇವರು ಬ್ರಹ್ಮನ ಸಭೆಯಲ್ಲಿರುತ್ತಾರೆ (ಸಭಾ 11/20). ಇವರು ಸರಸ್ವತಿಯ ದಡದಲ್ಲಿ ಯಜ್ಞ ಮಾಡಿದ್ದರು (ವನ 90/10). ದ್ರೋಣಾಚಾರ್ಯರ ಬಳಿಗೆ ಬಂದು ಯುದ್ಧ ನಿಲ್ಲಿಸಲು ಹೇಳಿದರು (ದ್ರೋಣ 190/33-40). ಇವರು ರಾಜಾಪೃಥುವಿನಿಂದ ಮಂತ್ರಿಗಳಾಗಿದ್ದರು (ಶಾಂತಿ 59/110). ಅಗಸ್ತ್ಯರ ಕಮಲಗಳ ಕಳ್ಳತನವಾದಾಗ ಇವರು ಶಪಥ ಮಾಡಿದ್ದರು (ಅನು 94/39). ವಾಲಖಿಲ್ಯ ಗಣ ತಪಸ್ಸಿನಿಂದ ಸಿದ್ಧಿ ಹೊಂದಿದೆ. ಇವರು ಎಲ್ಲಾ ಧರ್ಮಗಳ ಜ್ಞಾನಿಗಳು ಮತ್ತು ಸೂರ್ಯಮಂಡಲದಲ್ಲಿ ವಾಸಿಸುತ್ತಾರೆ. ಅಲ್ಲಿ ಅವರು ಉಂಛ ವೃತ್ತಿಯನ್ನು ಆಶ್ರಯಿಸಿ, ಪಕ್ಷಿಗಳಂತೆ ಒಂದೊಂದು ಕಾಳನ್ನು ಹೆಕ್ಕಿ, ಅದರಿಂದಲೇ ಜೀವನ ನಿರ್ವಹಣೆ ಮಾಡುತ್ತಾರೆ. ಮೃಗಚರ್ಮ, ಚೀರ ಮತ್ತು ವಲ್ಕಲ – ಇವುಗಳೇ ಇವರ ವಸ್ತ್ರಗಳಾಗಿವೆ. ಈ ವಾಲಖಿಲ್ಯರು ಶೀತೋಷ್ಣ ಇತ್ಯಾದಿ ದ್ವಂದ್ವರಹಿತರು, ಸನ್ಮಾರ್ಗದಲ್ಲಿ ನಡೆಯುವವರು ಮತ್ತು ತಪೋಧನರು. ಇವರಲ್ಲಿ ಪ್ರತಿಯೊಬ್ಬನ ಶರೀರವು

ಹೆಬ್ಬೆರಳಿನ ತುದಿಗೆ ಸಮಾನವಾಗಿದೆ. ಇಷ್ಟು ಲಘುಶರೀರವಾದರೂ, ಇವರು ತಮ್ಮ ತಮ್ಮ ಕರ್ತವ್ಯದಲ್ಲಿ ನಿರತರಾಗಿ, ಸದಾ ತಪಸ್ಸಿನಲ್ಲಿ ಮಗ್ನರಾಗಿರುತ್ತಾರೆ. ಇವರ ತಪಸ್ಸಿನ ಫಲ ಘನ ವಾದುದು. ಇವರು ದೇವತೆಗಳ ಕಾರ್ಯ ಸಿದ್ಧಿಗೊಳಿಸಲು, ಅವರಿಗೆ ಸಮಾನವಾದ ರೂಪ ಧರಿಸುತ್ತಾರೆ. ಇವರು ತಪಸ್ಸಿನಿಂದ ಸರ್ವಪಾಪ ಗಳನ್ನು ದಗ್ಧಗೊಳಿಸಿ, ತಮ್ಮ ತೇಜಸ್ಸಿನಿಂದ ಸಮಸ್ತ ದಿಕ್ಕುಗಳನ್ನು ಪ್ರಕಾಶಗೊಳಿಸುತ್ತಾರೆ (ಅನು 141/99–102). ಇವರು ಪ್ರತಿದಿನ ನಾನಾ ಪ್ರಕಾರದ ಸ್ತೋತ್ರಗಳ ಮೂಲಕ, ನಿರಂತರ ಉದಯಿಸುತ್ತಿರುವ ಸೂರ್ಯನ ಸ್ತುತಿ ಮಾಡುತ್ತಾ, ಒಮ್ಮೆಲೆ ಮುಂದೆ ಹೋಗುತ್ತಾ ಇರುತ್ತಾರೆ ಮತ್ತು ತಮ್ಮ ಸೂರ್ಯ ತುಲ್ಯ ಕಿರಣಗಳಿಂದ ಎಲ್ಲಾ ದಿಕ್ಕುಗಳನ್ನು ಪ್ರಕಾಶಗೊಳಿಸುತ್ತಾ ಇರುತ್ತಾರೆ. ಇವರೆಲ್ಲರೂ ಧರ್ಮಜ್ಞರೂ, ಸತ್ಯವಾದಿಗಳೂ ಆಗಿದ್ದಾರೆ. ಇವರಲ್ಲಿಯೇ ಲೋಕರಕ್ಷಣೆಗೋಸ್ಕರ ನಿರ್ಮಲ ಸತ್ಯಪ್ರತಿಷ್ಠಿತವಾಗಿದೆ. ಈ ವಾಲಖಿಲ್ಯರ ತಪೋಬಲದಿಂದಲೇ ಈ ಜಗತ್ತೆಲ್ಲಾ ಆಧರಿಸಿ ನಿಂತಿದೆ. ಈ ಮಹಾತ್ಮರ ತಪಸ್ಸು, ಸತ್ಯ ಮತ್ತು ಕ್ಷಮೆಯ ಪ್ರಭಾವದಿಂದ ಎಲ್ಲಾ ಭೂತಗಳೂ ಯಥಾವತ್ತಾಗಿವೆ ಎಂದು ಪಂಡಿತರಾದ ಪುರುಷರು ಒಪ್ಪುತ್ತಾರೆ (ಅನು 142/33).

**ವಾಲಶಿಖ** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/8).

**ವಾಲೀ** – (1) ವರುಣ ಸಭೆಯಲ್ಲಿರುತ್ತಾ ಆತನ ಉಪಾಸನೆಮಾಡುವ ಒಬ್ಬ ದೈತ್ಯ (ಸಭಾ 9/14). (2) ಒಬ್ಬ ವಾನರ ರಾಜ. ಈತ ಸುಗ್ರೀವನ ಸೋದರ ಮತ್ತು ಇಂದ್ರನ ಮಗನಾಗಿದ್ದನು. ಶ್ರೀರಾಮನಿಂದ ಇವನ ವಧೆ (ಸಭಾ 38/29; ವನ 147). ಇವನ ಪತ್ನಿಯ ಹೆಸರು ತಾರೆ (ವನ 280/18). ಸುಗ್ರೀವನೊಂದಿಗೆ ವಾಲಿಯ ಯುದ್ಧ ಮತ್ತು ಶ್ರೀರಾಮನಿಂದ ವಧೆ (ವನ 280/30–36). ಇವನಿಗೆ ಅಂಗದನೆಂಬ ಒಬ್ಬ ಮಗನಿದ್ದನು (ವನ 288/14).

**ವಾಲ್ಮೀಕಿ** – (1) ಒಬ್ಬ ಮಹರ್ಷಿ. ಈತ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/16). ಈತ ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನಿಗೆ ಪ್ರದಕ್ಷಿಣೆ ಮಾಡಿದುದು (ಉದ್ಯೋಗ 83/27). ಭೂರಿಶ್ರವನ ವಧೆಯ ಅನಂತರ ಸಾತ್ಯಕಿ ಮಹರ್ಷಿ ವಾಲ್ಮೀಕಿಯ ಒಂದು ಶ್ಲೋಕವನ್ನು ಹಾಡಿದ್ದನು (ದ್ರೋಣ 143/67–68). ಶಿವಭಕ್ತಿಯ ಕುರಿತಾಗಿ ಯುಧಿಷ್ಠಿರನೊಡನೆ ತನ್ನ ಅನುಭವ ಹೇಳಿದುದು (ಅನು 18/8–10). (2) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ವಾಷ್ಕಲ** – ಹಿರಣ್ಯಕಶಿಪುವಿನ ಐದನೆಯ ಮಗ (ಆದಿ 65/18).

**ವಾಸವೀ** – ಉಪರಿಚರವಸುವಿನ ವೀರ್ಯದಿಂದ ಅದ್ರಿಕೆಯ ಗರ್ಭದಲ್ಲಿ ಹುಟ್ಟಿದವಳು. ದಾಶ ರಾಜನಿಂದ ಪಾಲಿಸಲ್ಪಟ್ಟವಳು (ನೋಡಿರಿ ಸತ್ಯವತಿ). (ಆದಿ 63/51–71).

**ವಾಸಿಷ್ಠ** – (1) ವಸಿಷ್ಠನಿಗೆ ಸಂಬಂಧಿಸಿದ ವಸ್ತು (ಆಖ್ಯಾನ) (ಆದಿ 174/2). (2) ವಸಿಷ್ಠ ಪುತ್ರ ಶಕ್ತಿ ಹಾಗೂ ವಸಿಷ್ಠನ ವಂಶಜರು (ಆದಿ 180/20 ವನ 26/7). (3) ಒಂದು ತೀರ್ಥ. ಇದರಲ್ಲಿ ಸ್ನಾನ ಮಾಡಿ ವಾಸಿಷ್ಠೀ ನದಿಯನ್ನು ಉತ್ತರಿಸಿ ಹೋಗುವ ಕ್ಷತ್ರಿಯಾದಿ ಎಲ್ಲಾ ವರ್ಣದ ಜನರು, ದ್ವಿಜಾತಿ (ಬ್ರಾಹ್ಮಣ)ಯವರಾಗುತ್ತಾರೆ (ವನ 84/48). (4) ಒಬ್ಬ ಅಗ್ನಿ (ವನ 220/1).

**ವಾಸಿಷ್ಠೀ** – ಒಂದು ನದಿ (ವನ 84/48).

**ವಾಸುಕಿ** – ಒಬ್ಬ ನಾಗರಾಜ. ಇವನು ಆಸ್ತೀಕನ ಮಾವ, ಮತ್ತು ಕಶ್ಯಪ ಹಾಗೂ ಕದ್ರುವಿನ ಪುತ್ರನಾಗಿದ್ದನು (ಆದಿ 35/5). ನಾಗಗಳ ರಕ್ಷಣೆಗಾಗಿ, ಇವನು ತನ್ನ ಸಹೋದರಿ ಜರತ್ಕಾರುವನ್ನು, ಜರತ್ಕಾರುಋಷಿಯ ಸೇವೆಗಾಗಿ, ಅವನ ಪತ್ನಿಯಾಗಿ ಸಮರ್ಪಿಸಿದುದು (ಆದಿ 14/6–7; ಆದಿ 46/20–23). ಸಮುದ್ರಮಥನ ಕಾಲದಲ್ಲಿ ಈತ ಮಂಥನದಂಡದ ಹಗ್ಗವಾದುದು (ಆದಿ 18/13). ನಾಗಗಳಿಂದ ಈತನಿಗೆ ನಾಗ ರಾಜ ಪದವಿಯಲ್ಲಿ ಅಭಿಷೇಕ (ಆದಿ 36/25). ತಾಯಿಯ ಶಾಪದಿಂದ ಈತ ಚಿಂತಿತನಾದುದು (ಆದಿ 37/3–9). (ಆದಿ 48/3–8). ತಾಯಿಯ ಶಾಪದಿಂದ ತಮ್ಮನ್ನು ರಕ್ಷಿಸಿಕೊಳ್ಳುವ ಉಪಾಯದ ಕುರಿತು, ಸರ್ಪಗಳೊಂದಿಗೆ ಈತನ ಪರಾಮರ್ಶೆ (ಆದಿ 37/10–34). ಏಲಾತಪತ್ರನಾಗನಿಂದ ಈತನಿಗೆ ತನ್ನ ಸಹೋದರಿ ಜರತ್ಕಾರುವನ್ನು,

ಜರತ್ಕಾರುವೆಂಬ ಋಷಿಗೆ ವಿವಾಹ ಮಾಡಿ ಕೊಡಲು ಸಲಹೆ (ಆದಿ 38/18–19). ಬ್ರಹ್ಮನ ಆಜ್ಞೆಯಿಂದ ವಾಸುಕಿಯು, ಜರತ್ಕಾರು ಮುನಿ ಯೊಂದಿಗೆ, ತನ್ನ ಸೋದರಿಯನ್ನು ವಿವಾಹ ಮಾಡಲು ಪ್ರಯತ್ನ ಶೀಲನಾದುದು (ಆದಿ 39 ಅಧ್ಯಾಯ). ಸರ್ಪಯಜ್ಞದಲ್ಲಿ ಉರಿಯುತ್ತಿರುವ ನಾಗಗಳನ್ನು ನೋಡಿ, ಭಯಭೀತನಾದ ಈತ ಆಸ್ತೀಕನಿಗೆ ಹೇಳುವಂತೆ ತನ್ನ ಸಹೋದರಿ ಯನ್ನು ಪ್ರೇರಿಸಿದುದು (ಆದಿ 53/20–26). ಇವನ ವಂಶದಲ್ಲಿ ಸುಟ್ಟುಹೋದ ನಾಗಗಳ ಗಣನೆ (ಆದಿ 57/5–6). ಈತ ಅರ್ಜುನನ ಜನ್ಮ ಸಮಯದಲ್ಲಿ ಅಲ್ಲಿಗೆ ಆಗಮಿಸಿದ್ದನು (ಆದಿ 122/71). ಆರ್ಯಕನು ಪ್ರಾರ್ಥಿಸಿದಾಗ, ಭೀಮ ಸೇನನಿಗೆ ದಿವ್ಯರಸಪಾನ ಮಾಡಿಸುವಂತೆ, ಈತ ನಿಂದ ಸರ್ಪಗಳಿಗೆ ಆದೇಶ (ಆದಿ 127/69). ಈತ ವರುಣಸಭೆಯಲ್ಲಿದ್ದುಕೊಂಡು, ಆತನ ಉಪಾಸನೆ ಮಾಡುತ್ತಾನೆ (ಸಭಾ 9/8). ಅರ್ಜುನನು ಒಮ್ಮೆ ಈತನ ಸಹೋದರಿಯ ಚಿತ್ತಾಪಹಾರ ಮಾಡಿದ್ದನು (ವಿರಾಟ 2/14). ತ್ರಿಪುರದಹನ ಕಾಲದಲ್ಲಿ ಇವನು ಶಿವನ ಧನುಸ್ಸಿನ ಸಿಂಜಿನಿಯಾಗಿದ್ದನು (ದ್ರೋಣ 202/76). ಮಾತ್ರವಲ್ಲದೆ ಅವರ ರಥದ ನೊಗವಿಡುವ ಮೂಕೀಮರ ಆಗಿದ್ದನು (ಕರ್ಣ 34/22). ಕರ್ಣ ಮತ್ತು ಅರ್ಜುನರ ದ್ವೈರಥ ಯುದ್ಧ ಕಾಲದಲ್ಲಿ ಇವನು ಅರ್ಜುನನ ವಿಜಯವನ್ನು ಸಮರ್ಥಿಸುವವನಾಗಿದ್ದನು (ಕರ್ಣ 87/43). ನಾಗಧನ್ವಾತೀರ್ಥ ಇವನ ನಿವಾಸ ಸ್ಥಾನವಾಗಿದೆ. ಅಲ್ಲಿಯೇ ದೇವತೆಗಳು ಇವನನ್ನು ನಾಗರಾಜ ನೆಂದು ಅಭಿಷೇಚನ ಮಾಡಿದ್ದರು (ಶಲ್ಯ 37/30–32). ಇವನಿಂದ ಸ್ಕಂದನಿಗೆ ಜಯ ಮತ್ತು ಮಹಾಜಯರೆಂಬ ಪಾರ್ಷದರ ಕೊಡುಗೆ (ಶಲ್ಯ 45/52–53). ಇವನು ಏಳು ಮಂದಿ ಧರಣೀಧರರಲ್ಲಿ ಒಬ್ಬ (ಅನು 150/41). ಬಲರಾಮನ ಪರಮಧಾಮಗಮನ ಸಮಯ ದಲ್ಲಿ, ಇವನು ಆತನ ಸ್ವಾಗತಕ್ಕಾಗಿ ಬಂದಿದ್ದನು (ಮೌಸಲ 4/15). ಮಹಾಭಾರತದಲ್ಲಿ ಬಂದಿ ರುವ ವಾಸುಕಿಯ ಹೆಸರುಗಳು: ನಾಗರಾಟ್, ನಾಗರಾಜ, ನಾಗೇಂದ್ರ, ಪನ್ನಗ, ಪನ್ನಗರಾಟ್, ಪನ್ನಗರಾಜ, ಪನ್ನಗೇಶ್ವರ, ಪನ್ನಗೇಂದ್ರ, ಸರ್ಪರಾಟ್, ಸರ್ಪರಾಜ ಇತ್ಯಾದಿ.

**ವಾಸುಕಿತೀರ್ಥ** – ಪ್ರಯಾಗದಲ್ಲಿ (ದಾರಗಂಜದ ಬಳಿ ಗಂಗಾತಟದಲ್ಲಿ) ಭೋಗವತೀ ಎಂಬ ಉತ್ತಮ ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧ ಯಜ್ಞದ ಉತ್ತಮ ಫಲಸಿಗುತ್ತದೆ (ವನ 85/86).

**ವಾಸುದೇವ** – (1) ವಸುದೇವನ ಪುತ್ರ ಶ್ರೀಕೃಷ್ಣ (ಸಭಾ 38/29) (ನೋಡಿರಿ ಕೃಷ್ಣ).

(2) (ಪೌಂಡ್ರಕ) ಪುಂಡ್ರದೇಶದ ರಾಜಾ ವಾಸುದೇವ. ಈತ ದ್ರೌಪದೀ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದನು (ಆದಿ 185/12) (ವಿಶೇಷ ನೋಡಿರಿ ಪೌಂಡ್ರಕ).

**ವಾಹಿನೀ** – (1) ಸೇನಾವಿಶೇಷ. ಮೂರು ಗುಲ್ಮಗಳಿಗೆ ಒಂದು ಗಣ ಮತ್ತು ಮೂರು ಗಣಗಳಿಗೆ ಒಂದು ವಾಹಿನೀ ಆಗುತ್ತದೆ (ಆದಿ 2/21).

(2) ಇವಳು ಸೋಮವಂಶದ ರಾಜಾ ಕುರುವಿನ ಪತ್ನಿಯಾಗಿದ್ದಳು. ಇವಳ ಗರ್ಭದಿಂದ ಕುರುವಿಗೆ ಅಶ್ವವಂತನೇ ಮೊದಲಾದ ಐದು ಮಂದಿ ಪುತ್ರರಾದರು (ಆದಿ 94/50–51).

(3) ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯು ತ್ತಾರೆ (ಭೀಷ್ಮ 9/34).

**ವಿಂಶ** – ಸೂರ್ಯವಂಶದ ಇಕ್ಷ್ವಾಕುವಿನ ಜ್ಯೇಷ್ಠ ಪುತ್ರ, ಇವನು ಧನುರ್ಧರರಾದ ವೀರರಿಗೆ ಆದರ್ಶನಾಗಿದ್ದನು. ಇವನ ಪುತ್ರನ ಹೆಸರು ವಿವಿಂಶ (ಆಶ್ವ 4/4–5).

**ವಿಕಟ (ವಿಕಟಾನನ)** – ಧೃತರಾಷ್ಟ್ರನ ನೂರು ಮಂದಿ ಪುತ್ರರಲ್ಲಿ ಒಬ್ಬ (ಆದಿ 67/96, ಆದಿ 116/5). ಈತ ದ್ರೌಪದೀ ಸ್ವಯಂವರಕ್ಕೆ ಹೋಗಿ ದ್ದನು. ಭೀಮಸೇನನನ್ನು ಗಾಯಗೊಳಿಸಿದ ಧೃತ ರಾಷ್ಟ್ರನ ಹದಿನಾಲ್ಕು ಮಕ್ಕಳಲ್ಲಿ ಇವನೂ ಒಬ್ಬ ನಾಗಿದ್ದನು (ಕರ್ಣ 51/7–9). ಭೀಮಸೇನನಿಂದ ಇವನ ವಧೆ (ಕರ್ಣ 51/16).

**ವಿಕರ್ಣ** – (1) ಧೃತರಾಷ್ಟ್ರನ ಒಬ್ಬ ಮಹಾರಥಿ ಮಗ. ಹನ್ನೊಂದು ಮಹಾರಥಿಗಳಲ್ಲಿ ಒಬ್ಬ (ಆದಿ 63/119). ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/94; ಆದಿ 116/4). ದ್ರುಪದನ ಮೇಲೆ ಆಕ್ರಮಣ ಮಾಡಿದ ದುರ್ಯೋಧನಾದಿ

ದ್ರೋಣಶಿಷ್ಯರಲ್ಲಿ ಇವನೂ ಇದ್ದನು (ಆದಿ 137/19–21). ಇವನು ದ್ರೌಪದೀ ಸ್ವಯಂ ವರಕ್ಕೂ ಹೋಗಿದ್ದನು (ಆದಿ 185/1). ದ್ರುಪದ ನಗರದಿಂದ ಬರುತ್ತಿದ್ದ ಪಾಂಡವರನ್ನು ಎದುರು ಗೊಳ್ಳಲು ಈತ ಹೋದುದು (ಆದಿ 206/13). ತುಂಬಿದ ಸಭೆಯಲ್ಲಿ ದ್ರೌಪದಿಯ ಪ್ರಶ್ನೆಗೆ ಮೌನವಾಗಿದ್ದ ರಾಜರ ಮಧ್ಯದಲ್ಲಿ ಈತನಿಂದ ನ್ಯಾಯಯುಕ್ತವಾದ ನಿರ್ಣಯ (ಸಭಾ 68/11). ಕರ್ಣನಿಂದ ಇವನಿಗೆ ನಿಂದನೆ (ಸಭಾ 68/30). ವಿರಾಟನ ಗೋಗ್ರಹಣದ ಸಮಯದಲ್ಲಿ ಅರ್ಜುನನ ಮೇಲೆ ಆಕ್ರಮಣ (ವಿರಾಟ 54/9). ಅರ್ಜುನನಿಂದ ಪರಾಜಿತನಾಗಿ ಓಡಿದುದು (ವಿರಾಟ 54/10). ಅರ್ಜುನನೊಂದಿಗೆ ಯುದ್ಧ ಮತ್ತು ಗಾಯಗೊಂಡು ರಥದಿಂದ ಕೆಳಗೆ ಉರುಳಿದುದು (ವಿರಾಟ 61/42). ಗಜರಾಜ ನೊಂದಿಗೆ ಅರ್ಜುನನ ಮೇಲೆ ಆಕ್ರಮಣ ಮತ್ತು ಸೋತು ಓಡಿದುದು (ವಿರಾಟ 65/6–10). ಪ್ರಥಮ ದಿನದ ಯುದ್ಧದಲ್ಲಿ ಸುತಸೋಮ ನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/ 58–59). ಸಹದೇವನೊಂದಿಗೆ ಸಂಗ್ರಾಮ (ಭೀಷ್ಮ 71/21–22). ಅಭಿಮನ್ಯುವಿನಿಂದ ಪರಾ ಜಯ (ಭೀಷ್ಮ 78/21–22; ಭೀಷ್ಮ 84/40– 42). ಘಟೋತ್ಕಚನಿಂದ ಪರಾಜಯ (ಭೀಷ್ಮ 92/36). ನಕುಲನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/10–12; ಭೀಷ್ಮ 111/34–36). ಭೀಮಸೇನ ನೊಂದಿಗೆ ಯುದ್ಧ (ಭೀಷ್ಮ 113 ಅಧ್ಯಾಯ). ಶಿಖಂಡಿಯೊಂದಿಗೆ ಯುದ್ಧ (ದ್ರೋಣ 25/36– 37). ಭೀಮಸೇನನೊಂದಿಗೆ ಯುದ್ಧ (ದ್ರೋಣ 96/31). ನಕುಲನೊಂದಿಗೆ ಯುದ್ಧ (ದ್ರೋಣ 106/12). ನಕುಲನಿಂದ ಇವನ ಪರಾಜಯ (ದ್ರೋಣ 107/30). ಭೀಮಸೇನನಿಂದ ಇವನ ವಧೆ ಮತ್ತು ಇದರಿಂದಾಗಿ ಅವನ ಶೋಕ ಪ್ರಕಟಿಸಿದುದು (ದ್ರೋಣ 137/29–35). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/8–9). ಮಹಾಭಾರತದಲ್ಲಿ ಬಂದಿರುವ ವಿಕರ್ಣನ ಹೆಸರುಗಳು: ಭರತರ್ಷಭ, ಭರತಸತ್ತಮ, ಧಾರ್ತರಾಷ್ಟ್ರ, ಧೃತರಾಷ್ಟ್ರಜ, ದುರ್ಯೋಧನಾವರ, ಕುರುಪ್ರವೀರ, ಕುರುವರ್ಧನ – ಇತ್ಯಾದಿ.

(2) ಒಂದು ಭಾರತೀಯ ಜನಪದ. ಇಲ್ಲಿರುವ ಸೈನಿಕರು ದುರ್ಯೋಧನನೊಂದಿಗೆ ಇದ್ದು, ಶಕುನಿಯ ಸೇನಾಸಂರಕ್ಷಣೆ ಮಾಡುತ್ತಿದ್ದರು (ಭೀಷ್ಮ 51/15).

(3) ಐಶ್ವರ್ಯವಂತನಾದ ಒಬ್ಬ ಶಿವಭಕ್ತ ಋಷಿ. ಇವನು ಶಿವನನ್ನು ಪ್ರಸನ್ನಗೊಳಿಸಿ, ಮನೋ ವಾಂಛಿತ ಸಿದ್ಧಿಪಡೆದಿದ್ದನು (ಅನು 14/99).

**ವಿಕಲ್ಪ** – ಒಂದು ಭಾರತೀಯ ಜನಪದ (ಭೀಷ್ಮ 9/59).

**ವಿಕಾಥಿನಿ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/18).

**ವಿಕುಂಜ** – ಒಂದು ಭಾರತೀಯ ಜನಪದ. ಈ ದೇಶದ ಸೈನಿಕರು, ಭೀಷ್ಮನಿಂದ ನಿರ್ಮಿಸಲ್ಪಟ್ಟ ಗರುಡವ್ಯೂಹದ ಎಡರೆಕ್ಕೆಯ ಸ್ಥಾನದಲ್ಲಿ, ರಾಜಾ ಬೃಹದ್ಬಲನೊಂದಿಗೆ ನಿಂತಿದ್ದರು (ಭೀಷ್ಮ 56/9).

**ವಿಕುಂಠನ** – ಇವನು ಸೋಮವಂಶದ ಮಹಾರಾಜ ಹಸ್ತಿಯಿಂದ, ತ್ರಿಗರ್ತರಾಜ ಪುತ್ರಿ ಯಶೋಧರೆಯ ಗರ್ಭದಲ್ಲಿ ಹುಟ್ಟಿದ್ದನು. ಇವನ ಪತ್ನಿ ದಶಾರ್ಣಕುಲದ ಕನ್ಯೆ ಸುದೇವಾ ಆಗಿದ್ದಳು. ಈಕೆಯ ಗರ್ಭದಿಂದ ಅಜಮೀಢನೆಂಬ ಪುತ್ರ ಜನ್ಮವೆತ್ತಿದನು (ಆದಿ 95/35–36).

**ವಿಕೃತ** – ಬೇರೆ ಹೆಸರು ಮತ್ತು ರೂಪಧಾರಣೆ ಮಾಡಿ ಬಂದ ಕಾಮ, ಅವನೊಂದಿಗೆ ರಾಜಾ ಇಕ್ಷ್ವಾಕುವಿನ ಸಂವಾದ ನಡೆದಿತ್ತು (ಶಾಂತಿ 199/88–117).

**ವಿಕ್ರಮ** (ಬಲವರ್ಧನ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/98; ಆದಿ 116/17).

**ವಿಕ್ಷರ** – ಕಶ್ಯಪ ಪತ್ನಿ ದನಾಯುವಿನ ಗರ್ಭ ದಿಂದ ಹುಟ್ಟಿದ ಅಸುರರಲ್ಲಿ, ಶ್ರೇಷ್ಠ ನಾಲ್ವರು ಪುತ್ರರಲ್ಲಿ ಒಬ್ಬ. ಉಳಿದ ಮೂವರ ಹೆಸರು– ಬಲ, ವೀರ ಮತ್ತು ವೃತ್ರ (ಆದಿ 65/33). ಇವನೇ ಭೂಮಿಯಲ್ಲಿ ರಾಜಾ ವಸುಮಿತ್ರನ ರೂಪದಲ್ಲಿ ಹುಟ್ಟಿದ್ದನು (ಆದಿ 67/41).

**ವಿಗಾಹನ** – ಮುಕುಟ ವಂಶದ ಒಬ್ಬ ಕುಲಗೇಡಿ ರಾಜ (ಉದ್ಯೋಗ 74/16).

**ವಿಗ್ರಹ** – ಸಮುದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸಂಗ್ರಹನೆಂದಾಗಿತ್ತು (ಶಲ್ಯ 45/50).

**ವಿಚಖ್ನು** – ಒಬ್ಬ ಪ್ರಾಚೀನ ರಾಜ. ಈತ ಹಿಂಸೆಯ ನಿಂದೆಯನ್ನು, ಅಹಿಂಸಾ ಧರ್ಮದ

ಪ್ರಶಂಸೆಯನ್ನು ಮಾಡಿದ್ದನು. ಸುರೆ, ಆಸವ, ಮಧು, ಮಾಂಸ, ಮೀನು ಮತ್ತು ಎಳ್ಳು ಹಾಗೂ ಅಕ್ಕಿಯ ಪಾಯಸ- ಈ ಎಲ್ಲಾ ವಸ್ತುಗಳನ್ನು ಧೂರ್ತರು ಯಜ್ಞದಲ್ಲಿ ಪ್ರಚಲಿತಗೊಳಿಸಿದರೆಂದು ಇವನು ಸ್ಪಷ್ಟವಾಗಿ ಘೋಷಿಸಿದ್ದನು. ವೇದಗಳಲ್ಲಿ ಇವುಗಳ ಉಪಯೋಗದ ವಿಧಾನವಿಲ್ಲ. ಆ ಧೂರ್ತರು ಅಭಿಮಾನ, ಮೋಹ ಮತ್ತು ಲೋಭಕ್ಕೆ ವಶರಾಗಿ, ಆ ವಸ್ತುಗಳ ಬಗ್ಗೆ ತಮ್ಮ ಲೋಲುಪತೆಯನ್ನು ತೋರಿಸಿದ್ದಾರೆ. ಬ್ರಾಹ್ಮಣರು ಎಲ್ಲಾ ಯಜ್ಞಗಳಲ್ಲಿಯೂ ಭಗವಾನ್ ವಿಷ್ಣುವಿಗೇ ಗೌರವ ತೋರಿಸುತ್ತಾರೆ. ಮತ್ತು ಪಾಯಸ ಹಾಗೂ ಹೂ ಇತ್ಯಾದಿಗಳಿಂದ ಅವರ ಪೂಜಾ ವಿಧಾನವಿದೆ (ಶಾಂತಿ 265/3–12).

**ವಿಚಿತ್ರ** – ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧ ವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/61).

**ವಿಚಿತ್ರವೀರ್ಯ** – ಶಾಂತನುವಿನಿಂದ ಸತ್ಯವತಿಯ ಗರ್ಭದಲ್ಲಿ ಹುಟ್ಟಿದ ರಾಜ. ಇವನು ಚಿತ್ರಾಂಗದನ ತಮ್ಮ (ಆದಿ 95/49–50; ಆದಿ 101/3). ಧೃತರಾಷ್ಟ್ರ ಮತ್ತು ಪಾಂಡು ಇವನ ಕ್ಷೇತ್ರಜ ಪುತ್ರರು (ಆದಿ 1/94–95). ಭೀಷ್ಮನಿಂದ ಇವನ ರಾಜ್ಯಾಭಿಷೇಕ (ಆದಿ 101/12). ಭೀಷ್ಮನ ಆಜ್ಞಾನುಸಾರ ಇವನ ರಾಜ್ಯಶಾಸನ (ಆದಿ 101/13). ಕಾಶೀರಾಜ ಪುತ್ರಿ ಅಂಬಿಕೆ ಮತ್ತು ಅಂಬಾಲಿಕೆಯೊಂದಿಗೆ ವಿಧಿವತ್ತಾಗಿ ಈತನ ವಿವಾಹ (ಆದಿ 95/51; ಆದಿ 102/65). ಸಂಯಮಹೀನ ಜೀವನದಿಂದಾಗಿ, ರಾಜಕ್ಷಯ ದಿಂದ ಈತನ ಅಸಾಮಯಿಕ ಮೃತ್ಯು (ಆದಿ 102/70–71). ಭೀಷ್ಮನಿಂದ ಇವನ ಅಂತ್ಯೇಷ್ಟಿ ಸಂಸ್ಕಾರ (ಆದಿ 102/73). ಇವನ ಪತ್ನಿ ಅಂಬಿಕೆಯ ಗರ್ಭದಿಂದ ವ್ಯಾಸನ ಮೂಲಕ ಧೃತರಾಷ್ಟ್ರನ ಜನ್ಮ (ಆದಿ 105/13–15). ಇವನ ದ್ವಿತೀಯ ಪತ್ನಿ ಅಂಬಾಲಿಕೆಯ ಗರ್ಭದಿಂದ ವ್ಯಾಸರ ಮೂಲಕ ಪಾಂಡುವಿನ ಜನನ (ಆದಿ 105/17–21). ಇವನ ಪತ್ನಿಯ ದಾಸಿಯ ಗರ್ಭದಿಂದ ವ್ಯಾಸರ ಮೂಲಕ ವಿದುರನ ಜನ್ಮ (ಆದಿ 105/24–28).

**ವಿಜಯ** – (1) ಒಬ್ಬ ಪ್ರಾಚೀನ ರಾಜ (ಆದಿ 1/233).

(2) ಭಗವಾನ್ ಶಂಕರನ ತ್ರಿಶೂಲದ ಹೆಸರು. ಈ ವಿಜಯವೆಂಬ ತ್ರಿಶೂಲ ಸ್ಕಂದನ ಭದ್ರವಟ ಯಾತ್ರೆಯ ಸಮಯದಲ್ಲಿ, ಯಮರಾಜನ ಹಿಂದಿ ನಿಂದ ಹೋಗಿತ್ತು. ಇದು ಮೂರು ಶಿಖರ ಗಳಿಂದ ಶೋಭಾಯಮಾನವಾಗಿದ್ದು, ಸಿಂದೂ ರಾದಿಗಳಿಂದ ಸುಸಜ್ಜಿತವಾಗಿತ್ತು (ವನ 231/37–38).

(3) ಅಜ್ಞಾತವಾಸಕಾಲದಲ್ಲಿ ಯುಧಿಷ್ಠಿರನಿಂದ ನಿಶ್ಚಯಿಸಲ್ಪಟ್ಟ ಅರ್ಜುನನ ಒಂದು ಗುಪ್ತ ಹೆಸರು (ವಿರಾಟ 5/35).

(4) ಅರ್ಜುನನ ಪ್ರಸಿದ್ಧವಾದ ಹತ್ತು ಹೆಸರುಗಳಲ್ಲಿ ಒಂದು. ಈ ಹೆಸರಿನ ವ್ಯಾಖ್ಯಾನ (ವಿರಾಟ 44/9, 14).

(5) ದೇವರಾಜ ಇಂದ್ರನ ಒಂದು ದಿವ್ಯ ಧನುಸ್ಸು. ಇದು ಗಾಂಡೀವದಂತೆ ತೇಜಸ್ವಿಯಾಗಿತ್ತು ಮತ್ತು ಶ್ರೀಕೃಷ್ಣನ ಶಾರ್ಙ್ಗಧನುಸ್ಸಿಗೆ ಸಮಾನವಾಗಿತ್ತು. ದೇವತೆಗಳ ಮೂರೇ ಧನುಸ್ಸುಗಳು ದಿವ್ಯವೆಂದು ಪರಿಗಣಿಸಲ್ಪಟ್ಟಿವೆ. ವಿಜಯ, ಗಾಂಡೀವ ಮತ್ತು ಶಾರ್ಙ್ಗ. ಇವು ಕ್ರಮವಾಗಿ ಇಂದ್ರ, ವರುಣ ಮತ್ತು ವಿಷ್ಣುವಿನ ಧನುಸ್ಸುಗಳಾಗಿವೆ. ಗಂಧ ಮಾದನ ನಿವಾಸಿ ಕಿಂಪುರುಷಪ್ರವರ ದ್ರುಮನಿಗೆ ಇಂದ್ರನಿಂದ ಈ ದಿವ್ಯ ಧನುಸ್ಸು ಪ್ರಾಪ್ತವಾಗಿತ್ತು. ಇವನ ಶಿಷ್ಯ ಮಹಾತೇಜಸ್ವಿ ರುಕ್ಮಿ ಈ ಬಿಲ್ಲನ್ನು ಪ್ರಾಪ್ತಿಸಿಕೊಂಡನು (ಉದ್ಯೋಗ 158/3–9).

(6) ಒಂದು ಭಾರತೀಯ ಜನಪದ (ಭೀಷ್ಮ 9/45).

(7) ಧೃತರಾಷ್ಟ್ರನ ಒಬ್ಬ ಪುತ್ರ. ಇವನು ಜಯ, ದುರ್ಜಯರೊಂದಿಗೆ ಸೇರಿ ನೀಲ, ಕಾಶ್ಯ ಮತ್ತು ಜಯತ್ಸೇನರೆಂಬ ಮೂವರೊಡನೆ ಯುದ್ಧ ಮಾಡಿದ್ದನು (ದ್ರೋಣ 25/45). ಸಾತ್ಯಕಿ ಯೊಂದಿಗೆ ಇವನ ಯುದ್ಧ (ದ್ರೋಣ 116/6–7). ಶಕುನಿಯು ಅರ್ಜುನನ ಮೇಲೆ ಹೋರಾಟಕ್ಕಿಳಿ ದಾಗ, ಈತನೂ ಅವನೊಂದಿಗಿದ್ದನು (ದ್ರೋಣ 156/120–123).

(8) ಕರ್ಣನ ದಿವ್ಯ ಧನುಸ್ಸಿನ ಹೆಸರು. ಇದು ಸಮಸ್ತ ಆಯುಧಗಳಲ್ಲಿ ಶ್ರೇಷ್ಠವಾಗಿತ್ತು. ಇಂದ್ರನ ಪ್ರಿಯವನ್ನು ಬಯಸುವ ವಿಶ್ವಕರ್ಮನು ಇದನ್ನು ಇಂದ್ರನಿಗಾಗಿಯೇ ಸಿದ್ಧಪಡಿಸಿದ್ದನು. ದೇವೇಂದ್ರನು ಇದೇ ಧನುಸ್ಸಿನ ಸಹಾಯದಿಂದ ಎಷ್ಟೋ ದೈತ್ಯ

ಸಮೂಹದ ಮೇಲೆ ವಿಜಯ ಪಡೆದಿದ್ದನು. ಇದರ ಠಂಕಾರ ಕೇಳಿ, ದೈತ್ಯರಿಗೆ ಹತ್ತೂ ದಿಕ್ಕುಗಳನ್ನು ಗುರುತಿಸುವಲ್ಲಿ ಭ್ರಮೆಯಾಗುತ್ತಿತ್ತು. ತನ್ನ ಪರಮಪ್ರೀತಿಪಾತ್ರವಾದ ಈ ಧನುಸ್ಸನ್ನು ಇಂದ್ರ ಪರಶುರಾಮನಿಗೆ ಕೊಟ್ಟಿದ್ದನು. ಪರಶು ರಾಮನು ಈ ದಿವ್ಯವೂ, ಉತ್ತಮವೂ ಆದ ಧನುಸ್ಸನ್ನು ಕರ್ಣನಿಗೆ ಕೊಟ್ಟಿದ್ದನು. ಈ ಘೋರ ಧನುಸ್ಸು ಗಾಂಡೀವಕ್ಕಿಂತಲೂ ಶ್ರೇಷ್ಠವಾಗಿತ್ತು. ಇದರ ಮೂಲಕವೇ ಪರಶುರಾಮನು ಇಪ್ಪತ್ತೊಂದು ಬಾರಿ ಈ ಪ್ರಪಂಚವನ್ನು ಜೈಸಿದ್ದನು (ಕರ್ಣ 31/42–46).

(9) ಭಗವಾನ್ ಶಿವನ ಒಂದು ಹೆಸರು (ಅನು 17/51).

(10) ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/29).

(11) "ರಣಾಂಗಣದಲ್ಲಿ ಹೋರಾಡುತ್ತಿರುವಾಗ ನಿನ್ನ ರಥ ಹಳ್ಳದಲ್ಲಿ ಬೀಳಲಿ" ಎಂದು ಕರ್ಣನಿಗೆ ಶಾಪವನ್ನಿತ್ತ ಬ್ರಾಹ್ಮಣ (ಕರ್ಣ 42).

**ವಿಜಯಾ** – (1) ಇವಳು ದಶಾರ್ಹರಾಜನ ಪುತ್ರಿಯೂ, ಸಮ್ರಾಟನಾದ ಭುಮನ್ಯುವಿನ ಪತ್ನಿಯೂ ಆಗಿದ್ದಳು. ಇವಳ ಗರ್ಭದಿಂದ ಸುಹೋತ್ರನ ಜನ್ಮವಾಯಿತು (ಆದಿ 95/33).

(2) ಇವಳು ಮದ್ರದೇಶದ ರಾಜಾ ದ್ಯುತಿಮಂತನ ಪುತ್ರಿಯಾಗಿದ್ದಳು. ಈಕೆ ಸ್ವಯಂವರದಲ್ಲಿ ಪಾಂಡು ಪುತ್ರ ಸಹದೇವನನ್ನು ವರಿಸಿದ್ದಳು. ಸಹದೇವನಿಂದ ಈಕೆಯ ಗರ್ಭದಲ್ಲಿ ಸುಹೋತ್ರನೆಂಬ ಪುತ್ರ ಹುಟ್ಟಿದ್ದನು (ಆದಿ 95/80).

(3) ದುರ್ಗಾದೇವಿಯ ಒಂದು ಹೆಸರು (ವಿರಾಟ 6/16).

**ವಿಟಭೂತ** – ಒಬ್ಬ ದೈತ್ಯ. ಈತ ವರುಣ ಸಭೆಯಲ್ಲಿದ್ದು, ಅವನ ಉಪಾಸನೆ ಮಾಡುತ್ತಾನೆ (ಸಭಾ 9/65).

**ವಿತಂಡಾ** – ವಾದವಿಶೇಷ (ಯಾವ ಚರ್ಚೆ ಅಥವಾ ವಾದವಿವಾದದ ಉದ್ದೇಶ ತನ್ನ ಪಕ್ಷದ ಸ್ಥಾಪನೆ ಅಥವಾ ಪರಪಕ್ಷದ ಖಂಡನೆಯಾಗಿರದೆ, ವ್ಯರ್ಥವಾದ ಬಕವಾದವಾಗಿರುತ್ತದೋ, ಅದರ ಹೆಸರು ವಿತಂಡಾ ಎಂದಾಗಿದೆ (ಸಭಾ 36/4).

**ವಿತತ್ಯ** – ಗೃತ್ಸಮದ ವಂಶದ ವಿಹವ್ಯನ ಪುತ್ರ. ಈತ ಸತ್ಯನ ತಂದೆ (ಅನು 30/62).

**ವಿತರ್ಕ** – ಇವನು ಮಹಾರಾಜ ಕುರುವಿನ ವಂಶಜ ಧೃತರಾಷ್ಟ್ರನ ಪುತ್ರನಾಗಿದ್ದನು (ಆದಿ 94/58).

**ವಿತದ್ರು** – ಒಬ್ಬ ಯಾದವ. ಯದುವಂಶದ ಏಳು ಪ್ರಧಾನ ಮಂತ್ರಿಗಳಲ್ಲಿ ಈತನೂ ಗಣಿಸಲ್ಪಟ್ಟಿದ್ದಾನೆ (ಸಭಾ 14/60ರ ಅನಂತರ).

**ವಿತಸ್ತಾ** – ಕಾಶ್ಮೀರ ಮತ್ತು ಪಂಚನದ ಪ್ರದೇಶದ ಝೇಲಂ ನದಿ. ಈಕೆ ವರುಣನ ಸಭೆಯಲ್ಲಿದ್ದು, ಅವನ ಉಪಾಸನೆ ಮಾಡುತ್ತಾಳೆ (ಸಭಾ 9/19). ಇದರಲ್ಲಿ ಸ್ನಾನಮಾಡಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣಕೊಡುವುದರಿಂದ, ಮನುಷ್ಯನಿಗೆ ವಾಜಪೇಯ ಯಜ್ಞದ ಫಲಸಿಗುತ್ತದೆ. ಕಾಶ್ಮೀರದಲ್ಲಿ ನಾಗರಾಜ ತಕ್ಷಕನಿಗೆ ವಿತಸ್ತಾ ಎಂಬ ಪ್ರಸಿದ್ಧ ಭವನವಿದೆ. ಅದು ಎಲ್ಲಾ ಪಾಪನಾಶಿನಿಯಾಗಿದೆ. ಅಲ್ಲಿ ಸ್ನಾನಮಾಡುವುದರಿಂದ, ಮನುಷ್ಯನು ವಾಜಪೇಯ ಯಜ್ಞದ ಫಲ ಮತ್ತು ಸದ್ಗತಿಗೆ ಭಾಗಿಯಾಗುತ್ತಾನೆ (ವನ 82/89–91). ಇದರ ಪ್ರವಾಹದಲ್ಲಿ ನಾನ್ನೂರು ಕಪ್ಪುಕಿವಿಯ ಕುದುರೆಗಳು ಕೊಚ್ಚಿಹೋಗಿದ್ದವು (ಉದ್ಯೋಗ 119/8). ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/16). ಮನುಷ್ಯನು ಉಪವಾಸ ಮಾಡಿ, ತರಂಗಮಾಲಿನಿಯಾದ ವಿತಸ್ತಾದಲ್ಲಿ ಏಳು ದಿನ ಸ್ನಾನಮಾಡಿದರೆ, ಅವನು ಮುನಿಯಂತೆ ನಿರ್ಮಲನಾಗುತ್ತಾನೆ (ಅನು 25/7). ಪಾರ್ವತೀ ದೇವಿ ಯಾವ ನದಿಗಳ ಸಲಹೆ ಪಡೆದು, ಶಂಕರನಿಗೆ ಸ್ತ್ರೀಧರ್ಮದ ವರ್ಣನೆ ಮಾಡಿದ್ದಳೋ, ಅವುಗಳಲ್ಲಿ ವಿತಸ್ತಾ ಕೂಡ ಇದ್ದಳು (ಅನು 146/18).

**ವಿತ್ತದಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/28).

**ವಿದಂಡ** – ಒಬ್ಬ ರಾಜ. ಅವನು ತನ್ನ ಪುತ್ರ ದಂಡನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/12).

**ವಿದಭ** – ಒಂದು ಭಾರತೀಯ ಜನಪದ (ಭೀಷ್ಮ 9/64).

**ವಿದರ್ಭ** – (1) ಒಂದು ಪ್ರಾಚೀನ ದೇಶ. ಇದನ್ನು ಸಹದೇವನು ತನ್ನ ದಕ್ಷಿಣ ದಿಗ್ವಿಜಯ ಕಾಲದಲ್ಲಿ, ವಿದರ್ಭ ದೇಶದ ಭೋಜಕಟ ನಗರಕ್ಕೆ ಹೋಗಿ ಅಲ್ಲಿರುವ ರಾಜಾ ಭೀಷ್ಮಕನನ್ನು

ಪರಾಜಯಗೊಳಿಸಿದ್ದನು (ಸಭಾ 31/11–12). ಇಲ್ಲಿದ್ದ ರಾಜಾ ಭೀಷ್ಮನಿಗೆ ಮಹರ್ಷಿ ದಮನನ ಕೃಪೆಯಿಂದ, ದಮ, ದಾಂತ ಮತ್ತು ದಮನ ರೆಂಬ ಪುತ್ರರು ಮತ್ತು ದಮಯಂತಿಯೆಂಬ ಪುತ್ರಿ ಪ್ರಾಪ್ತವಾಗಿದ್ದರು (ವನ 53/5–9). ವಿದರ್ಭರಾಜಕನ್ಯೆ ದಮಯಂತಿಯ ಸ್ವಯಂವರದ ಸಮಾಚಾರ ಕೇಳಿ, ಅದರಲ್ಲಿ ಭಾಗವಹಿಸಲು ಇಂದ್ರ, ಅಗ್ನಿ, ವರುಣ ಮತ್ತು ಯಮ – ಈ ನಾಲ್ಕು ದೇವತೆಗಳು ತಮ್ಮ ಸೇವಕರು ಮತ್ತು ವಾಹನಗಳೊಂದಿಗೆ ವಿದರ್ಭದೇಶಕ್ಕೆ ಆಗಮಿಸಿ ದರು (ವನ 54/20–26). ವಿದರ್ಭದೇಶದಲ್ಲಿ ಹುಟ್ಟಿದ್ದರಿಂದಲೇ ದಮಯಂತಿ ವೈದರ್ಭಿ ಯೆಂದು ಹೇಳಲ್ಪಟ್ಟಳು (ವನ 55/12, 22; ವನ 56/5, ವನ 68/32). ನಳನ ಸಾರಥಿಯಾದ ವಾರ್ಷ್ಣೇಯನು ರಾಜಕುಮಾರ ಇಂದ್ರಸೇನ ಮತ್ತು ಕುಮಾರಿ ಇಂದ್ರಸೇನೆಯರನ್ನು ರಥದಲ್ಲಿ ಕುಳ್ಳಿರಿಸಿ ವಿದರ್ಭದೇಶಕ್ಕೆ ಹೋದನು (ವನ 60/21–22). ರಾಜಾ ನಳನು ದಮಯಂತಿಗೆ ವಿದರ್ಭದ ಹಾದಿ ತಿಳಿಸಿದುದು (ವನ 61/23). ದಮಯಂತಿಯ ತಂದೆ ವಿದರ್ಭ ರಾಜ ಭೀಮ, ಮಹಾರಥಿಯೂ, ಪೃಥ್ವಿಪಾಲಕನೂ, ಚತು ರ್ವರ್ಣಗಳ ರಕ್ಷಕನೂ ಆಗಿದ್ದನು. ಈತ ವಿದರ್ಭದೇಶದ ಪ್ರಜಾಪಾಲನೆಯನ್ನು ಚೆನ್ನಾಗಿ ನಡೆಸುತ್ತಿದ್ದನು (ವನ 64/44–47). ದಮ ಯಂತಿ ತನ್ನ ತಾಯಿಯ ಸಹೋದರಿಯಿಂದ ವಿದಾಯ ಪಡೆದು ಚೇದಿ ದೇಶದಿಂದ, ವಿದರ್ಭ ದೇಶದಲ್ಲಿರುವ ತನ್ನ ತಂದೆಯ ಮನೆಗೆ ತಲುಪಿ ದಳು (ವನ 69/21–24). ರಾಜಾ ಋತು ಪರ್ಣನು ಬಾಹುಕ ರೂಪಧಾರಿಯಾದ ನಳ ನೊಂದಿಗೆ ವಿದರ್ಭದೇಶಕ್ಕೆ ಹೋದನು (ವನ 71/2; ವನ 72/19, 42; ವನ 73/1). ನಳನು ಪ್ರಕಟಗೊಂಡ ಬಳಿಕ ವಿದರ್ಭದೇಶದಲ್ಲಿ ಮಹೋತ್ಸವವು ಆಚರಿಸಲ್ಪಟ್ಟಿತು (ವನ 77/5–8). ರುಕ್ಮಿಣಿ ವಿದರ್ಭರಾಜನ ಪುತ್ರಿಯಾಗಿದ್ದಳು. ಶ್ರೀಕೃಷ್ಣನು ಆಕೆಯ ಅಪಹರಣ ಮಾಡಿದನು. ಸಹೋದರಿಯ ಈ ಅಪಹರಣ ರುಕ್ಮಿಗೆ ಅಸಹ್ಯ ವಾಯಿತು. ಶ್ರೀಕೃಷ್ಣನನ್ನು ಕೊಲ್ಲದೆ ವಿದರ್ಭ ದೇಶದ ರಾಜಧಾನಿಗೆ ಹಿಂತಿರುಗುವುದಿಲ್ಲವೆಂದು ಆತ ಪ್ರತಿಜ್ಞೆ ಮಾಡಿದನು. ಆದರೆ ಶ್ರೀಕೃಷ್ಣನು ಎದುರಾದಾಗ, ಆತ ತನ್ನ ವಿಶಾಲವಾದ ಚತುರಂಗ ಬಲ ಸಮೇತ ಪರಾಜಿತನಾದನು. ಆದುದರಿಂದ ತನ್ನ ಪ್ರತಿಜ್ಞೆಯ ರಕ್ಷಣೆಗಾಗಿ ಅವನು ಪುನಃ ಕುಂಡಿನಾಪುರದ ಕಡೆಗೆ ಹಿಂದಿರುಗಲಿಲ್ಲ. ಅವನ ಪರಾಜಯವಾದಲ್ಲಿ, ಭೋಜಕಟವೆಂಬ ಹೆಸರಿನ ಶ್ರೇಷ್ಠ ನಗರವನ್ನು ನಿರ್ಮಿಸಿ ಅಲ್ಲಿಯೇ ವಾಸಿಸತೊಡಗಿದನು. ಆ ದಿನಗಳಲ್ಲಿ ಭೋಜಕಟವೇ ವಿದರ್ಭದ ರಾಜಧಾನಿಯ ರೂಪದಲ್ಲಿ ಪ್ರಖ್ಯಾತವಾಯಿತು (ಉದ್ಯೋಗ 158/10–16).

(2) ಒಬ್ಬ ಪ್ರಾಚೀನ ರಾಜ. ಇವನ ಮಗ ರಾಜಾ ನಿಮಿಯು ಅಗಸ್ತ್ಯ ಮುನಿಗೆ ತನ್ನ ಕನ್ಯೆ ಮತ್ತು ರಾಜ್ಯವನ್ನು ದಾನಮಾಡಿ, ಪುತ್ರ, ಪಶು ಮತ್ತು ಬಾಂಧವರ ಸಹಿತ ಸ್ವರ್ಗಕ್ಕೆ ಹೋದನು (ಅನು 137/11).

**ವಿದಿಶಾ** – ಒಂದು ನದಿ. ಇವಳು ವರುಣ ಸಭೆಯಲ್ಲಿದ್ದುಕೊಂಡು, ವರುಣನ ಉಪಾಸನೆ ಮಾಡುತ್ತಾಳೆ (ಸಭಾ 9/18). ಭಾರತದ ಪ್ರಮುಖ ನದಿಗಳಲ್ಲಿ ಈಕೆ ಗಣಿಸಲ್ಪಡುತ್ತಾಳೆ (ಭೀಷ್ಮ 9/28).

**ವಿದುರ** – ವ್ಯಾಸನಿಂದ ಅಂಬಿಕೆಯ ದಾಸಿಯ ಗರ್ಭದಲ್ಲಿ ಹುಟ್ಟಿದವನು (ಆದಿ 1/94–96). ಅಣಿಮಾಂಡವ್ಯನ ಶಾಪದಿಂದ ಧರ್ಮರಾಜನೇ ಶೂದ್ರಯೋನಿಯಲ್ಲಿ ವಿದುರನಾಗಿ ಜನ್ಮವೆತ್ತಿದ್ದನು (ಆದಿ 63/93–97). (ಆದಿ 105/29). ಈತ ರಾಜಾ ಧೃತರಾಷ್ಟ್ರ ಮತ್ತು ಪಾಂಡುವಿನ ಸಹೋ ದರನಾಗಿದ್ದನು (ಆದಿ 105/28). ಭೀಷ್ಮನಿಂದ ಇವನ ಸಂವರ್ಧನೆ, ಪಾಲನೆ ಮತ್ತು ಪೋಷಣೆ (ಆದಿ 108/17–18). ಇವನ ಧರ್ಮನಿಷ್ಠೆ ಮತ್ತು ಅಧ್ಯಯನ (ಆದಿ 108/19–22). ಶೂದ್ರಳ ಗರ್ಭದಿಂದ ಬ್ರಾಹ್ಮಣನ ಮೂಲಕ ಹುಟ್ಟಿದ ಕಾರಣ ಇವನಿಗೆ ರಾಜ್ಯಪ್ರಾಪ್ತಿ ಆಗಲಿಲ್ಲ (ಆದಿ 108/25). ಇವನಿಗೆ ಪಾಂಡುವಿನಿಂದ ಐಶ್ವರ್ಯದ ಕಾಣಿಕೆ (ಆದಿ 113/2). ರಾಜಾ ದೇವಕನ ಮನೆಯಲ್ಲಿದ್ದ, ಬ್ರಾಹ್ಮಣನಿಂದ ಶೂದ್ರ ಸ್ತ್ರೀಯಲ್ಲಿ, ಹುಟ್ಟಿದ ಕನ್ಯೆಯೊಂದಿಗೆ, ಭೀಷ್ಮನ ಮೂಲಕ ಇವನ ವಿವಾಹ (ಆದಿ 113/12–13). ದುರ್ಯೋಧನನ ಜನ್ಮಕಾಲದಲ್ಲಿ ಸಂಭವಿಸಿದ ಅಮಂಗಲಗಳನ್ನು ನೋಡಿ, ಅವನನ್ನು ತೊರೆದು

ಬಿಡಲು ಧೃತರಾಷ್ಟ್ರನಿಗೆ ಇವನ ಸಲಹೆ (ಆದಿ 115/34–40). ಆತ್ಮಕಲ್ಯಾಣಕ್ಕೋಸ್ಕರ ಸಂಪೂರ್ಣ ಜಗತ್ತನ್ನು ತೊರೆಯುವಂತೆ ಈತನ ಉಪದೇಶ (ಆದಿ 114/39). ರಾಜೋಚಿತಕ್ರಮದಲ್ಲಿ ಪಾಂಡುವಿನ ಅಸ್ಥಿಸಂಸ್ಕಾರ ಮಾಡಲು ಈತನಿಗೆ ಧೃತರಾಷ್ಟ್ರನಿಂದ ಆದೇಶ (ಆದಿ 126/1–3). ಇವನಿಂದ ಪಾಂಡುವಿನ ಅಸ್ಥಿದಾಹ ಮತ್ತು ಆತನಿಗೆ ಜಲಾಂಜಲಿ ದಾನ (ಆದಿ 126/27–28). ಭೀಮಸೇನನು ನಾಗಲೋಕಕ್ಕೆ ಹೋದಾಗ, ಚಿಂತಿತಳಾದ ಕುಂತಿಗೆ ಇವನಿಂದ ಧೈರ್ಯದ ಆಶ್ವಾಸನೆ (ಆದಿ 128/17–18). ಅಸ್ತ್ರಕೌಶಲ ಪ್ರದರ್ಶನ ಸಮಯದಲ್ಲಿ ಇವನು ರಾಜಕುಮಾರರ ಕಲೆಯನ್ನು ಧೃತರಾಷ್ಟ್ರನಿಗೆ ವರ್ಣಿಸಿದುದು (ಆದಿ 133/35). ಪಾಂಡವರು ಲಾಕ್ಷಾಗೃಹದಲ್ಲಿ ಎಚ್ಚರ ದಿಂದಿರಲು ಮತ್ತು ಕೌರವರ ಒಳ ಸಂಚಿನಿಂದ ಬದುಕುವುದಕ್ಕಾಗಿ, ಈತ ಸಾಂಕೇತಿಕ ಭಾಷೆ ಯಲ್ಲಿ ಯುಧಿಷ್ಠಿರನಿಗೆ ಸೂಚನೆ ನೀಡಿದುದು (ಆದಿ 144/19–26). ಲಾಕ್ಷಾಗೃಹದಲ್ಲಿ ಸುರಂಗ ಮಾಡಲು ಈತ ಪಾಂಡವರ ಬಳಿಗೆ ಅಗೆಯು ವವನನ್ನು ಕಳುಹಿಸಿದುದು (ಆದಿ 146/1). ಪಾಂಡವರು ಗಂಗೆಯನ್ನು ದಾಟಲು ನಾವಿಕ ರನ್ನು ಕಳುಹಿಸಿದುದು (ಆದಿ 148/2). ಲಾಕ್ಷಾ ಗೃಹದಲ್ಲಿ ಪಾಂಡವರ ಮರಣವಾಯಿತೆಂಬ ಸಮಾಚಾರದಿಂದ ದುಃಖಿತನಾದ ಭೀಷ್ಮನಿಗೆ, ಅವರಿನ್ನೂ ಬದುಕಿದ್ದಾರೆಂಬ ರಹಸ್ಯವನ್ನು ಹೇಳಿ ಧೈರ್ಯವನ್ನಿತ್ತದ್ದು (ಆದಿ 149/18). ದ್ರುಪದ ನಗರದಿಂದ ಪಾಂಡವರನ್ನು ಕರೆಸಲು ಮತ್ತು ಅವರ ಅರ್ಧರಾಜ್ಯ ಕೊಡಿಸಲು, ಧೃತರಾಷ್ಟ್ರನಿಗೆ ದ್ರೋಣ ಮತ್ತು ಭೀಷ್ಮರು ಹೇಳಿದ ಮಾತನ್ನು ಇವನು ಸಮರ್ಥಿಸಿದುದು (ಆದಿ 204/1–30). ಧೃತರಾಷ್ಟ್ರನ ಆದೇಶ ಪ್ರಕಾರ ದ್ರುಪದ ನಗರಕ್ಕೆ ಹೋಗಿ ಈತ ಪಾಂಡವರನ್ನು ಹಸ್ತಿನಾಪುರಕ್ಕೆ ಕರೆದುತಂದದ್ದು (ಆದಿ 205/4ರಿಂದ 206/11 ವರೆಗೆ). ದ್ರುಪದನಗರದಲ್ಲಿ ಇವನು ಕುಂತಿಗೆ ಧೈರ್ಯವನ್ನಿತ್ತದ್ದು (ಆದಿ 206/9). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಹೋಗಿ ದ್ದನು (ಸಭಾ 33/5). ಅಲ್ಲಿ ಧನವನ್ನು ವ್ಯಯ ಮಾಡುವ ಕಾರ್ಯ ಈತನಿಗೆ ಒಪ್ಪಿಸಲ್ಪಟ್ಟಿತ್ತು (ಸಭಾ 35/9). ಕೌರವರೊಂದಿಗೆ ಪಾಂಡವರ ದ್ಯೂತಕ್ರೀಡೆಗೆ ಇವರ ವಿರೋಧ (ಸಭಾ 49/54). ಧೃತರಾಷ್ಟ್ರನೊಡನೆ ಇವನ ಮಾತುಕತೆ (ಸಭಾ 57). ಯುಧಿಷ್ಠಿರನೊಂದಿಗೆ ಇವನ ವಾರ್ತಾಲಾಪ (ಸಭಾ 58/5–16). ದ್ಯೂತ ಕ್ರೀಡೆಯ ಸಂದರ್ಭದಲ್ಲಿ ಧೃತರಾಷ್ಟ್ರನಿಗೆ ಈತನ ಎಚ್ಚರಿಕೆ (ಸಭಾ 62). ಆತ್ಮೋದ್ಧಾರಕ್ಕಾಗಿ ಸಮಸ್ತ ಭೂಮಂಡಲವನ್ನು ತ್ಯಾಗಮಾಡಬೇಕೆಂದು ಈತನ ಉಪದೇಶ (ಸಭಾ 62/11). ಈತನಿಂದ ದ್ಯೂತಕ್ರೀಡಾ ಸೂಚನೆಗೆ ಘೋರವಿರೋಧ (ಸಭಾ 63). ದ್ಯೂತದ ಸಂದರ್ಭದಲ್ಲಿ ದುರ್ಯೋಧನನಿಗೆ ಈತನ ನಿಂದನೆ ಮತ್ತು ಈತನಿಂದ ಅವನಿಗೆ ಎಚ್ಚರಿಕೆ (ಸಭಾ 64). ದ್ರೌಪದಿಯನ್ನು ಸಭಾಭವನಕ್ಕೆ ಹಿಡಿದು ತರುವ ಸಂಬಂಧವಾಗಿ ದುರ್ಯೋಧನನು ಆದೇಶ ಕೊಟ್ಟಾಗ, ಇವನು ಪುನಃ ದುರ್ಯೋಧನನನ್ನು ತೆಗಳಿದುದು ಮತ್ತು ಕಟುವಚನಗಳಿಂದ ತೀವ್ರ ನಿಂದೆ ಮಾಡಿದುದು (ಸಭಾ 66). ಇವನು ಪ್ರಹ್ಲಾದನ ಉದಾಹರಣೆ ಕೊಟ್ಟು, ಸಭಾಸದರು ದ್ರೌಪದಿಯ ಪ್ರಶ್ನೆಗೆ ಉತ್ತರ ಕೊಡುವಂತೆ ಪ್ರೇರಿಸಿದುದು (ಸಭಾ 68/59–88). ಧೃತರಾಷ್ಟ್ರ ಪುತ್ರರಿಗೆ ಈತನ ಎಚ್ಚರಿಕೆ (ಸಭಾ 71/16–19). ಕುಂತಿಯನ್ನು ತನ್ನಲ್ಲಿರಿಸಿಕೊಳ್ಳುವ ಕುರಿತು ಯುಧಿಷ್ಠಿರನಿಗೆ ಈತನ ಸೂಚನೆ (ಸಭಾ 78/5–6). ಪಾಂಡವರು ಧರ್ಮಪೂರ್ವಕವಾಗಿ ವಾಸಿಸುವಂತೆ ಈತನ ಉಪದೇಶ (ಸಭಾ 78/9–23). ಪ್ರಜಾಜನರ ಶೋಕದ ವಿಚಾರದಲ್ಲಿ, ಧೃತರಾಷ್ಟ್ರನ ಪ್ರಶ್ನೆಗಳಿಗೆ ಈತನ ಉತ್ತರ (ಸಭಾ 80/35). ಈತ ಧೃತರಾಷ್ಟ್ರನಿಗೆ ಹಿತಕಾರಿ ಸಲಹೆ ಯನ್ನಿತ್ತದ್ದು (ವನ 4/4–17). ಧೃತರಾಷ್ಟ್ರನಿಂದ ಇವನ ತ್ಯಾಗ (ವನ 4/31). ಇವನು ಕಾಮ್ಯಕ ವನಕ್ಕೆ ಹೋಗಿ ಪಾಂಡವರನ್ನು ಸೇರಿದುದು ಮತ್ತು ಅವರಿಗೆ ಧರ್ಮಯುಕ್ತ ಸಲಹೆಯನ್ನಿ ತ್ತದ್ದು (ವನ 5/12–21). ಇವನಿಂದ ಧೃತ ರಾಷ್ಟ್ರನಿಗೆ ಕ್ಷಮಾದಾನ (ವನ 6/21–24). ಇವನು ಧೃತರಾಷ್ಟ್ರನಿಗೆ ಕಿರ್ಮೀರವಧೆಯ ಕಥೆ ಹೇಳಿದುದು (ವನ 11 ಅಧ್ಯಾಯ). ಧೃತ ರಾಷ್ಟ್ರನಿಗೆ ನೀತಿಯುಕ್ತ ಉಪದೇಶ (ವಿದುರ ನೀತಿ) (ಉದ್ಯೋಗ 33/13 ರಿಂದ 40 ಅಧ್ಯಾಯವರೆಗೆ). ಧೃತರಾಷ್ಟ್ರನಿಗೆ ಉಪದೇಶ

ಮಾಡುವಂತೆ ಕುಮಾರ ಸನತ್ಸುಜಾತನೊಡನೆ ಈತನ ಪ್ರಾರ್ಥನೆ (ಉದ್ಯೋಗ 41/10–12). ಇವನಿಂದ ದಮದ ಮಹಿಮೆಯ ವರ್ಣನೆ (ಉದ್ಯೋಗ 63/9–24). ಕೌಟುಂಬಿಕ ಕಲಹ ಮತ್ತು ಲೋಭದಿಂದ ಹಾನಿಯುಂಟಾಗುವುದೆಂದು ಹೇಳಿ, ಧೃತರಾಷ್ಟ್ರನನ್ನು ಸಂಧಿಗೋಸ್ಕರ ಒಡಂಬಡಿಸಿದುದು (ಉದ್ಯೋಗ 64 ಅಧ್ಯಾಯ). ಧೃತರಾಷ್ಟ್ರನು ಶ್ರೀಕೃಷ್ಣನ ಮಾತನ್ನು ಒಪ್ಪುವಂತೆ ಒಡಂಬಡಿಸಿದುದು (ಉದ್ಯೋಗ 87 ಅಧ್ಯಾಯ). ಇವನಿಂದ ತನ್ನ ಮನೆಯಲ್ಲಿ ಶ್ರೀಕೃಷ್ಣನ ಅತಿಥಿ ಸತ್ಕಾರ (ಉದ್ಯೋಗ 89/23–24). ಶ್ರೀಕೃಷ್ಣನನ್ನು ಪೂಜಿಸಿ ಭೋಜನ ಮಾಡಿಸಿದುದು (ಉದ್ಯೋಗ 91/38–39). ಧೃತರಾಷ್ಟ್ರ ಪುತ್ರರ ದುರ್ಭಾವನೆಯನ್ನು ಹೇಳಿ, ಶ್ರೀಕೃಷ್ಣನು ಕೌರವಸಭೆಗೆ ಹೋಗುವುದು ಅನುಚಿತವೆಂದು ತಿಳಿಸಿದುದು (ಉದ್ಯೋಗ 92 ಅಧ್ಯಾಯ). ದುರ್ಯೋಧನನಿಗೆ ಬುದ್ಧಿ ಹೇಳಿದುದು (ಉದ್ಯೋಗ 125/19, 21). ಧೃತರಾಷ್ಟ್ರನ ಆಜ್ಞೆಪ್ರಕಾರ ಗಾಂಧಾರಿಯನ್ನು ಅವನ ಬಳಿಗೆ ಕರೆದು ತಂದುದು (ಉದ್ಯೋಗ 129/6). ಧೃತರಾಷ್ಟ್ರ ಮತ್ತು ಗಾಂಧಾರಿಯ ಆಜ್ಞೆಯಿಂದ ದುರ್ಯೋಧನನನ್ನು ಕರೆದು ತಂದುದು (ಉದ್ಯೋಗ 129/16). ಶ್ರೀಕೃಷ್ಣನನ್ನು ಬಂಧಿಸುವ ದುರ್ಯೋಧನಾದಿಗಳ ದುಸ್ಸಾಹಸವನ್ನು ತಿಳಿಸಿ, ಈತ ಧೃತರಾಷ್ಟ್ರನನ್ನು ಎಚ್ಚರಿಸಿದುದು (ಉದ್ಯೋಗ 130/18ರಿಂದ 22). ದುರ್ಯೋಧನನಿಗೆ ಬುದ್ಧಿ ಹೇಳಿದುದು (ಉದ್ಯೋಗ 130/41–53). ಯುದ್ಧದ ಭಾವೀ ಪರಿಣಾಮವನ್ನು ವಿಮರ್ಶಿಸುತ್ತಾ, ಇವನು ಕುಂತಿಯೊಡನೆ ತನ್ನ ದುಃಖ ಪ್ರಕಟಿಸಿದುದು (ಉದ್ಯೋಗ 144/2–9). ಶೋಕಾಕುಲನಾದ ಧೃತರಾಷ್ಟ್ರನಿಗೆ ಆಶ್ವಾಸನೆ (ಶಲ್ಯ 1/55). ರಾಜಮಹಿಳೆಯರೊಂದಿಗೆ ಹಸ್ತಿನಾಪುರಕ್ಕೆ ಹಿಂದಿರುಗಿದ ಯುಯುತ್ಸುವಿಗೆ ಈತನಿಂದ ಪ್ರಶಂಸೆ (ಶಲ್ಯ 29/97–100). ಕಾಲನ ಪ್ರಾಬಲ್ಯವನ್ನು ತಿಳಿಸಿ, ಧೃತರಾಷ್ಟ್ರನಿಗೆ ತಿಳಿಯಪಡಿಸಿದುದು (ಸ್ತ್ರೀ 2 ಅಧ್ಯಾಯ). ಶರೀರದ ಅನಿತ್ಯತೆಯನ್ನು ಹೇಳಿ, ಧೃತರಾಷ್ಟ್ರನ ಶೋಕನಿವಾರಣೆ ಮಾಡಿದುದು (ಸ್ತ್ರೀ 3 ಅಧ್ಯಾಯ). ದುಃಖಮಯ ಪ್ರಪಂಚದ ಗಹನಸ್ವರೂಪದ ವರ್ಣನೆ ಮಾಡಿದುದು ಮತ್ತು ಅದರಿಂದ ಬಿಡುಗಡೆ ಹೊಂದುವ ಉಪಾಯ ತಿಳಿಸಿದುದು (ಸ್ತ್ರೀ 4 ಅಧ್ಯಾಯ). ಗಹನವಾದ ಕಾಡಿನ ದೃಷ್ಟಾಂತದೊಂದಿಗೆ ಪ್ರಪಂಚದ ಭಯಂಕರ ಸ್ವರೂಪದ ವರ್ಣನೆ ಮಾಡಿದುದು (ಸ್ತ್ರೀ 5 ಅಧ್ಯಾಯ). ಪ್ರಪಂಚರೂಪದ ಕಾಡಿನ ರೂಪಕದ ಕುರಿತು ಈತನ ಸ್ಪಷ್ಟೀಕರಣ (ಸ್ತ್ರೀ 6 ಅಧ್ಯಾಯ). ಸಂಸಾರಚಕ್ರದ ವರ್ಣನೆ ಮಾಡಿದುದು ಮತ್ತು ರಥದ ರೂಪಕದಿಂದ, ಸಂಯಮ ಮತ್ತು ಜ್ಞಾನ ಇತ್ಯಾದಿಗಳು ಮುಕ್ತಿಯ ಉಪಾಯವೆಂದು ತಿಳಿಸಿದುದು (ಸ್ತ್ರೀ 7 ಅಧ್ಯಾಯ). ಶೋಕನಿವಾರಣೆಗಾಗಿ ಧೃತರಾಷ್ಟ್ರನಿಗೆ ಉಪದೇಶವನ್ನಿತ್ತದ್ದು (ಸ್ತ್ರೀ 9/10). ಯುಧಿಷಿರನಿಂದ, ಮಂತ್ರಣಾದಿ ಕಾರ್ಯಗಳಲ್ಲಿ ಈತನ ನೇಮಕ (ಶಾಂತಿ 41/10). ಯುಧಿಷ್ಠಿರನ ಪ್ರಶ್ನೆಗೆ ಉತ್ತರವಾಗಿ, ಈತ ತ್ರಿವರ್ಗದಲ್ಲಿ ಧರ್ಮದ ಪ್ರಧಾನತೆಯನ್ನು ಹೇಳಿದುದು (ಶಾಂತಿ 167/5–9). ಭೀಷ್ಮನ ದಾಹಸಂಸ್ಕಾರಕ್ಕಾಗಿ ಈತ ಯುಧಿಷ್ಠಿರನೊಂದಿಗೆ ಹೋದುದು (ಅನು 167/9–10). ಇವನು ಭೀಷ್ಮನ ಚಿತಾನಿರ್ಮಾಣಕಾರ್ಯದಲ್ಲಿ ಸಹಕರಿಸಿದನು ಮತ್ತು ರೇಶ್ಮೆವಸ್ತ್ರ ಹಾಗೂ ಮಾಲೆಗಳಿಂದ ಆಚ್ಛಾದನೆಗೊಳಿಸಿ, ಅವನ ಶವವನ್ನು ಚಿತೆಯ ಮೇಲೆ ಮಲಗಿಸಿದನು (ಅನು 168/11–12). ಶ್ರೀಕೃಷ್ಣನೂ ಅರ್ಜುನನೂ ಇಂದ್ರಪ್ರಸ್ಥದಿಂದ ಹಸ್ತಿನಾಪುರಕ್ಕೆ ಬಂದು ಇವನನ್ನು ಭೇಟಿಮಾಡಿದುದು (ಆಶ್ವ 52/31). ಬಂಧುಬಾಂಧವಸಮೇತವಾಗಿ ದುರ್ಯೋಧನನು ಕೊಲ್ಲಲ್ಪಟ್ಟಾಗ, ವಿದುರ ಮತ್ತು ಸಂಜಯ ಧರ್ಮರಾಜ ಯುಧಿಷ್ಠಿರನ ಆಶ್ರಯಕ್ಕೆ ಬಂದರು (ಆಶ್ವ 60/34). ಬಲರಾಮ ಮತ್ತು ಶ್ರೀಕೃಷ್ಣ ಹಸ್ತಿನಾಪುರಕ್ಕೆ ಬಂದಾಗ, ರಾಜಾ ಧೃತರಾಷ್ಟ್ರನೂ, ಮಹಾತ್ಮಾ ವಿದುರನೂ ಎದ್ದುನಿಂತು, ಮುಂದೆ ಹೋಗಿ, ವಿಧಿವತ್ತಾಗಿ ಅವರ ಸ್ವಾಗತ ಸತ್ಕಾರ ಮಾಡಿದರು (ಆಶ್ವ 66/6). ಪಾಂಡವರು ಹಿಮಾಲಯದಿಂದ ಧನವನ್ನು ತಂದು, ಹಸ್ತಿನಾಪುರದ ಸಮೀಪಕ್ಕೆ ಬಂದಾಗ, ವಿದುರನು ಪಾಂಡವರಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ, ದೇವಮಂದಿರಗಳಲ್ಲಿ ವಿವಿಧ ಪ್ರಕಾರದ ಪೂಜೆ ಮಾಡಲು ಆಜ್ಞೆಯನ್ನಿತ್ತನು (ಆಶ್ವ 70/14–17). ಪಾಂಡವರು ನಗರಕ್ಕೆ ಬಂದು ಧೃತರಾಷ್ಟ್ರ

ಮತ್ತು ಗಾಂಧಾರಿಯನ್ನು ಭೇಟಿಯಾದ ಅನಂತರ, ವಿದುರನನ್ನು ಗೌರವಿಸಿದರು (ಆಶ್ವ 71/5–7). ವಿದುರ ಯಾವಾಗಲೂ ಧೃತರಾಷ್ಟ್ರನ ಸೇವೆಯಲ್ಲಿ ತತ್ಪರನಾಗಿರುತ್ತಿದ್ದನು (ಆಶ್ರಮ 1/12). ಅಜಾತ ಶತ್ರುವಾದ ಯುಧಿಷ್ಠಿರನ ಧೈರ್ಯ ಮತ್ತು ಶುದ್ಧ ವ್ಯವಹಾರದಿಂದ ರಾಜಾ ಧೃತರಾಷ್ಟ್ರ, ಗಾಂಧಾರಿ ಮತ್ತು ವಿದುರ ತುಂಬಾ ಪ್ರಸನ್ನರಾಗಿರುತ್ತಿದ್ದರು (ಆಶ್ರಮ 2/28–29). ಧೃತರಾಷ್ಟ್ರ ಮತ್ತು ಯುಧಿಷ್ಠಿರನ ಮಿಲನದ ಕರುಣಾಪೂರ್ಣ ದೃಶ್ಯ ನೋಡಿ ವಿದುರಾದಿಗಳು ಅತ್ತಿದ್ದರು (ಆಶ್ರಮ 3/76). ಯುಧಿಷ್ಠಿರನು ವಿದುರಾದಿಗಳ ಆಜ್ಞಾನು ಸಾರವಾಗಿ ಕಾರ್ಯ ಮಾಡುವ ನಿಶ್ಚಯಮಾಡಿ ದನು (ಆಶ್ರಮ 4/20–21). ಯುಧಿಷ್ಠಿರನಿಗೆ ವಿದುರನು ಎಲ್ಲಾ ಆವಶ್ಯಕ ವಿಷಯಗಳ ಉಪ ದೇಶ ಮಾಡಿದ್ದನು (ಆಶ್ರಮ 7/21). ವಿದುರನು ಕಾಡಿಗೆ ಹೋದ ಮೇಲೆ ನನಗೆ ಕರ್ತವ್ಯದ ಉಪದೇಶವನ್ನು ಯಾರು ಕೊಟ್ಟಾರು ಎಂಬುದೇ ಯುಧಿಷ್ಠಿರನ ಯೋಚನೆಯಾಗಿತ್ತು (ಆಶ್ರಮ 8/2). ಧೃತರಾಷ್ಟ್ರನು ವಿದುರನ ಮೂಲಕ, ಶ್ರಾದ್ಧಕ್ಕಾಗಿ ಯುಧಿಷ್ಠಿರನಿಂದ ಹಣಯಾಚಿಸಿ ದುದು (ಆಶ್ರಮ 11/1–5). ರಾಜಾಯುಧಿಷ್ಠಿರನು ವಿದುರನ ಮೂಲಕ, ಧೃತರಾಷ್ಟ್ರನಿಗೆ ಬೇಕಾದಷ್ಟು ಧನ ಕೊಡುವ ಒಪ್ಪಿಗೆಯನ್ನು ತಿಳಿಸಿದುದು (ಆಶ್ರಮ 12/4–5; 7–13). ವಿದುರನು ಧೃತರಾಷ್ಟ್ರನಿಗೆ ಯುಧಿಷ್ಠಿರನ ಔದಾರ್ಯಪೂರ್ಣ ಉತ್ತರ ತಿಳಿಸಿದುದು (ಆಶ್ರಮ 13 ಅಧ್ಯಾಯ). ಈತ ಧೃತರಾಷ್ಟ್ರನೊಂದಿಗೆ ಕಾಡಿಗೆ ಹೋದುದು (ಆಶ್ರಮ 15/8). ಕಾಡಿನ ಮಾರ್ಗದಲ್ಲಿ ಗಂಗಾ ತಟದಲ್ಲಿ ಧೃತರಾಷ್ಟ್ರಾದಿಗಳ ನಿವಾಸ. ವಿದುರನು ಅವರಿಗೆ ದರ್ಭೆಯ ಹಾಸುಗೆಯನ್ನು ಬಿಡಿಸಿ ದುದು (ಆಶ್ರಮ 18/16–20). ವಿದುರನ ಒಪ್ಪಿಗೆಯಿಂದ ಧೃತರಾಷ್ಟ್ರನು ಭಾಗೀರಥಿಯ ಪಾವನ ತಟದಲ್ಲಿ ವಾಸಮಾಡಿದುದು (ಆಶ್ರಮ 19/1). ಕುರುಕ್ಷೇತ್ರಕ್ಕೆ ತಲುಪಿ, ಧರ್ಮಾರ್ಥಗಳ ಜ್ಞಾನಿಯಾದ, ಉತ್ತಮ ಬುದ್ಧಿವಂತನಾದ ವಿದುರನು ವಲ್ಕಲ ಮತ್ತು ಹರಿದ ಬಟ್ಟೆಗಳನ್ನು ಧರಿಸಿ, ಗಾಂಧಾರಿ ಮತ್ತು ಧೃತರಾಷ್ಟ್ರನ ಸೇವೆ ಮಾಡತೊಡಗಿದನು. ಇವನು ಮನಸ್ಸನ್ನು ವಶದಲ್ಲಿರಿಸಿಕೊಂಡು, ತನ್ನ ದುರ್ಬಲ ಶರೀರದ ಮೂಲಕ ಘೋರತಪಸ್ಸಿನಲ್ಲಿ ಮಗ್ನನಾಗಿರುತ್ತಿದ್ದನು (ಆಶ್ರಮ 19/18). ವನದಲ್ಲಿ ಯುಧಿಷ್ಠಿರನು ಧೃತರಾಷ್ಟ್ರನೊಡನೆ ವಿದುರನ ನೆಲೆಯನ್ನು ಕೇಳಿದನು (ಆಶ್ರಮ 26/15). ಧೃತರಾಷ್ಟ್ರನು ಹೀಗೆ ಉತ್ತರಿಸಿದನು. "ವಿದುರನು ಕುಶಲನಾಗಿ ದ್ದಾನೆ. ಅವನು ದೊಡ್ಡ ಕಠೋರ ತಪಸ್ಸಿನಲ್ಲಿ ತನ್ಮಯನಾಗಿದ್ದಾನೆ. ನಿರಂತರವಾಗಿ ಉಪವಾಸ ಮಾಡುತ್ತಾನೆ ಮತ್ತು ವಾಯುವನ್ನು ಭಕ್ಷಿಸಿ ಬದುಕುತ್ತಾನೆ. ಆದುದರಿಂದ ಅತ್ಯಂತ ದುರ್ಬಲ ನಾಗಿದ್ದಾನೆ. ಅವನ ಶರೀರವಿಡೀ ವ್ಯಾಪ್ತವಾಗಿ ರುವ ನರನಾಡಿಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಈ ಶೂನ್ಯವಾದ ಕಾಡಿನಲ್ಲಿ, ಒಮ್ಮೊಮ್ಮೆ ಬ್ರಾಹ್ಮಣರಿಗೆ, ಎಲ್ಲಾದರೂ ಆತನ ದರ್ಶನವಾಗುವುದಿದೆ (ಆಶ್ರಮ 26/16–17). ಇದೇ ಸಮಯದಲ್ಲಿ ಮುಖದಲ್ಲಿ ಕಲ್ಲಿನ ತುಂಡನ್ನಿಟ್ಟುಕೊಂಡು, ಜಟಾಧಾರಿಯೂ, ಕೃಶಕಾಯನೂ ಆದ ವಿದುರ ದೂರದಿಂದ ಬರುತ್ತಾ ಕಾಣಿಸಿದನು. ಅವನ ಮೈಯಲೆಲ್ಲಾ ಕೊಳೆಕೆಸರು ತುಂಬಿತ್ತು. ಅವನು ದಿಗಂಬರನಾಗಿದ್ದನು. ಕಾಡಿನಲ್ಲಿ ಹಾರುತ್ತಿದ್ದ ಧೂಳಿ ಸ್ನಾನದಿಂದ ಮುಚ್ಚಿಹೋಗಿದ್ದನು. ಆ ಆಶ್ರಮದ ಕಡೆಗೆ ನೋಡಿ, ಕೂಡಲೇ ಹಿಂದಕ್ಕೆ ತಿರುಗಿದನು (ಆಶ್ರಮ 26/18–19). ರಾಜಾ ಯುಧಿಷ್ಠಿರನೊಬ್ಬನೇ ಅವನ ಹಿಂದಿನಿಂದ ಓಡಿದನು. ಅವನು ಒಮ್ಮೊಮ್ಮೆ ಕಾಣುತ್ತಿದ್ದನು. ಮತ್ತೊಮ್ಮೆ ಅದೃಶ್ಯನಾಗುತ್ತಿದ್ದನು. ಆತ ಘೋರ ಕಾಡನ್ನು ಪ್ರವೇಶಿಸತೊಡಗಿದಾಗ, ರಾಜಾ ಯುಧಿಷ್ಠಿರನು ತನ್ನ ಪರಿಚಯ ಹೇಳಿ ಅವನನ್ನು ಕೂಗಿದನು. ಆಗ ವಿದುರನು ಕಾಡಿನ ಒಳಗೆ ಒಂದು ಮರದ ಆಶ್ರಯದಲ್ಲಿ ನಿಂತುಕೊಂಡನು. ಅವನ ಶರೀರದ ಪಡಿಯಚ್ಚು ಮಾತ್ರ ಉಳಿದಿತ್ತು. ಇದರಿಂದ ಮಾತ್ರವೇ ಅವನು ಜೀವಂತ ನಾಗಿರುವ ಸೂಚನೆ ಸಿಗುತ್ತಿತ್ತು. ಯುಧಿಷ್ಠಿರನು ಅವನನ್ನು ಗುರುತಿಸಿ, ತನ್ನ ಹೆಸರು ಹೇಳಿ ಅವನ ಮುಂದೆ ನಿಂತುಕೊಂಡನು. ಮಹಾತ್ಮಾ ವಿದುರನು ಎಡೆಬಿಡದೆ ಯುಧಿಷ್ಠಿರನ ಕಡೆಗೆ ನೋಡತೊಡಗಿದನು. ಅವನು ತನ್ನ ದೃಷ್ಟಿಯನ್ನು ಇವನ ದೃಷ್ಟಿಯಲ್ಲಿ ಜೋಡಿಸಿ ಏಕಾಗ್ರನಾದನು. ತನ್ನ ಪ್ರಾಣಗಳನ್ನು ಈತನ ಪ್ರಾಣಗಳಲ್ಲಿ, ತನ್ನ ಇಂದ್ರಿಯಗಳನ್ನು ಈತನ ಇಂದ್ರಿಯಗಳಲ್ಲಿ

ಸ್ಥಾಪನೆ ಮಾಡಿ, ಈತನೊಳಗೆ ಸಮಾವೇಶ ಹೊಂದಿದನು. ತೇಜಸ್ಸಿನಿಂದ ಪ್ರಜ್ವಲಿತನಾದ ವಿದುರನು ಯೋಗಬಲವನ್ನಾಶ್ರಯಿಸಿ, ಧರ್ಮ ರಾಜ ಯುಧಿಷ್ಠಿರನ ಶರೀರದೊಳಗೆ ಪ್ರವೇಶ ಮಾಡಿದನು. ಅವನ ಶರೀರ ಹಿಂದಿನಂತೆ ವೃಕ್ಷದ ಆಧಾರದಲ್ಲಿ ನಿಂತಿತ್ತು. ಕಣ್ಣುಗಳು ಈಗಲೂ ಅದೇ ಪ್ರಕಾರ ನಿರ್ನಿಮೇಷವಾಗಿದ್ದವು. ಆದರೆ ಈಗ ಅವನ ಶರೀರದಲ್ಲಿ ಚೇತನವಿರಲಿಲ್ಲ. ಯುಧಿಷ್ಠಿರನು ವಿದುರನ ದಾಹಸಂಸ್ಕಾರ ಮಾಡಲು ಯೋಚಿಸಿದನು. ಆದರೆ ಹೀಗೆ ಮಾಡದಂತೆ ಅಶರೀರವಾಣಿಯು ಅವನನ್ನು ತಡೆಯಿತು. ಮಾತ್ರವಲ್ಲ ವಿದುರನಿಗೆ ಸಾಂತಾ ನಿಕವೆಂಬ ಲೋಕಪ್ರಾಪ್ತಿಯಾಗುವುದೆಂದೂ ಹೇಳಿತು (ಆಶ್ರಮ 26/20–33). ವ್ಯಾಸನಿಂದ ಧರ್ಮ, ವಿದುರ ಮತ್ತು ಯುಧಿಷ್ಠಿರನ ಏಕತ್ವದ ಪ್ರತಿಪಾದನೆ (ಆಶ್ರಮ 28/16–22). ವಿದುರನು ಸ್ವರ್ಗಕ್ಕೆ ಹೋಗಿ ಧರ್ಮನ ಸ್ವರೂಪದಲ್ಲಿ ಪ್ರವೇಶ ಹೊಂದಿದನು (ಸ್ವರ್ಗಾ 5/22). ಮಹಾ ಭಾರತದಲ್ಲಿ ಬಂದಿರುವ ವಿದುರನ ಹೆಸರುಗಳು– ಆಜಮೀಢ, ಭಾರತ, ಭರತರ್ಷಭ, ಕೌರವ, ಕ್ಷತ್ತಾ, ಕುರುನಂದನ ಇತ್ಯಾದಿ.

**ವಿದುರಾಗಮನರಾಜ್ಯಲಂಭಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 199 ರಿಂದ 217 ವರೆಗೆ).

**ವಿದುಲಾ** – ಒಬ್ಬ ಪ್ರಾಚೀನ ಕ್ಷತ್ರಿಯ ಮಹಿಳೆ. ಅವಳು ರಣಭೂಮಿಯಿಂದ ಓಡಿ ಬಂದ ತನ್ನ ಪುತ್ರನನ್ನು ಕಟುವಾಗಿ ನಿಂದಿಸಿದ್ದಳು (ಉದ್ಯೋಗ 133 ಅಧ್ಯಾಯ). ಇವಳು ತನ್ನ ಪುತ್ರನನ್ನು ಯುದ್ಧಕ್ಕಾಗಿ ಹುರಿದುಂಬಿಸಿದುದು (ಉದ್ಯೋಗ 134 ಅಧ್ಯಾಯ). ಈಕೆ ಶತ್ರುವಶೀಕರಣದ ಉಪಾಯವನ್ನು ಪುತ್ರನಿಗೆ ನಿರ್ದೇಶಿಸಿದುದು (ಉದ್ಯೋಗ 135/25–40). ಈಕೆ ಪುತ್ರನಿಗೆ ಧೈರ್ಯ ತುಂಬಿದ ಉಪದೇಶವನ್ನಿತ್ತದ್ದು (ಉದ್ಯೋಗ 136/1–12).

**ವಿದೂರ** – ಇವನು ಮಹಾರಾಜ ಕುರುವಿನ ಮೂಲಕ ದಶಾರ್ಹಕುಲದ ಕನ್ಯೆ ಶುಭಾಂಗಿಯ ಗರ್ಭದಿಂದ ಹುಟ್ಟಿದವನು. ಇವನು ಮಧು ವಂಶದ ಕನ್ಯೆ ಸಂಪ್ರಿಯಾಳೊಂದಿಗೆ ವಿವಾಹ ವಾದನು. ಇವಳ ಗರ್ಭದಿಂದ ಅನಶ್ವಾನೆಂಬ ಪುತ್ರ ಹುಟ್ಟಿದ್ದನು (ಆದಿ 95/39–40).

**ವಿದೂರಥ** – (1) ಒಬ್ಬ ವೃಷ್ಣಿವಂಶದ ಕ್ಷತ್ರಿಯ. ಇವನು ದ್ರೌಪದಿಯ ಸ್ವಯಂವರಕ್ಕೆ ಹೋಗಿದ್ದನು (ಆದಿ 185/19). ಇವನು ರೈವತಕ ಪರ್ವತದಲ್ಲಿ ಜರುಗುತ್ತಿದ್ದ ಉತ್ಸವದಲ್ಲಿ ಸಮ್ಮಿಲಿತನಾಗಿ, ಅದರ ಶೋಭೆಯನ್ನು ಹೆಚ್ಚಿಸುತ್ತಿದ್ದನು (ಆದಿ 218/10). ಯದುವಂಶದ ಏಳು ಪ್ರಧಾನಮಂತ್ರಿಗಳಲ್ಲಿ ಈತನು ಗಣಿಸಲ್ಪಟ್ಟಿದ್ದಾನೆ (ಸಭಾ 14/60). ಮರಣಾನಂತರ ಇವನು ವಿಶ್ವೇದೇವತೆಗಳ ರೂಪದಲ್ಲಿ ಸೇರಿಹೋಗಿದ್ದನು (ಸ್ವರ್ಗಾ 5/16). (2) ಒಬ್ಬ ಪೂರುವಂಶೀಯ ರಾಜ. ಅವನ ಪುತ್ರನನ್ನು ಋಕ್ಷವಂತ ಪರ್ವತದಲ್ಲಿ ಕರಡಿಗಳು ಸಾಕಿಬೆಳೆಸಿದ್ದವು ಇವನು ಪರಶುರಾಮನ ಕ್ಷತ್ರಿಯ ಸಂಹಾರದಲ್ಲಿ ಬದುಕಿದ್ದನು (ಶಾಂತಿ 49/75).

**ವಿದೇಹ** – (1) ರಾಜಾ ನಿಮಿ. ಇವನು ದೇಹ ಬಿದ್ದು ಹೋದುದರಿಂದ ಅಥವಾ ದೇಹಾಭಿ ಮಾನದಿಂದ ರಹಿತನಾದುದರಿಂದ 'ವಿದೇಹ' ನೆಂದು ಕರೆಯಲ್ಪಡುತ್ತಿದ್ದನು. ಇವನ ವಂಶದಲ್ಲಿ ಜನಿಸಿದ ಎಲ್ಲಾ ರಾಜರು ವಿದೇಹರೆಂದು ಕರೆಯ ಲ್ಪಟ್ಟರು. ಇವನದೇ ಹೆಸರಿನಲ್ಲಿ ಮಿಥಿಲೆಯನ್ನು 'ವಿದೇಹ'ವೆನ್ನಲಾಗುತ್ತಿದೆ. ರಾಜಾ ಪಾಂಡು ದಿಗ್ವಿಜಯ ಕಾಲದಲ್ಲಿ ಮಿಥಿಲೆಯ ಮೇಲೆ ಆಕ್ರಮಣಮಾಡಿದ್ದನು ಮತ್ತು ವಿದೇಹ ವಂಶದ ಕ್ಷತ್ರಿಯರನ್ನು ಯುದ್ಧದಲ್ಲಿ ಸೋಲಿಸಿದ್ದನು (ಆದಿ 112/28). ಈ ವಂಶದಲ್ಲಿ ಹಯಗ್ರೀವನೆಂಬ ಹೆಸರಿನ ಕುಲಕಳಂಕ ರಾಜನು ಜನ್ಮವೆತ್ತಿದ್ದನು (ಉದ್ಯೋಗ 74/15–17).

(2) ಈಶಾನ್ಯ ಭಾರತದ ಒಂದು ಜನಪದ (ಮಿಥಿಲಾ). ಇಲ್ಲಿ ವಿದೇಹವಂಶದ ಕ್ಷತ್ರಿಯರ ರಾಜ್ಯವಿತ್ತು. ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಈ ದೇಶವನ್ನು ಗೆದ್ದಿದ್ದನು (ಸಭಾ 29/4–5). ಪರಶುರಾಮನ ಆಶ್ರಮದ ದ್ವಾರ ವಿದೇಹ ದೇಶಕ್ಕಿಂತ ಉತ್ತರಕ್ಕಿತ್ತು (ವನ 130/13). ಸೀತೆ ವಿದೇಹರಾಜ ಜನಕನ ಪುತ್ರಿಯಾಗಿ ದ್ದಳು (ವನ 274/9). ಈ ದೇಶದ ಸೈನಿಕರು ಅರ್ಜುನನ ಮೇಲೆ ಆಕ್ರಮಣ ಮಾಡಿದ್ದರು (ಭೀಷ್ಮ 117/32–34). ಕರ್ಣನು ಈ ದೇಶದ ಕ್ಷತ್ರಿಯ ವೀರರನ್ನು ಪರಾಜಯಗೊಳಿಸಿದ್ದನು (ದ್ರೋಣ 4/6). ಪರಶುರಾಮನು ತನ್ನ

ಹರಿತವಾದ ಬಾಣಗಳಿಂದ ಈ ದೇಶದ ಕ್ಷತ್ರಿಯರ ಸಂಹಾರ ಮಾಡಿದ್ದನು (ದ್ರೋಣ 70/11–13). ಕರ್ಣನು ವಿದೇಹರ ಮಹಾ ಸಂಹಾರ ಮಾಡಿದ್ದನು (ಕರ್ಣ 3/19). ಕರ್ಣನು ವಿದೇಹದೇಶವನ್ನು ಗೆದ್ದು, 'ಕಪ್ಪ' ಕೊಡುವಂತೆ ಮಾಡಿದ್ದನು (ಕರ್ಣ 8/18–20; ಕರ್ಣ 9/33). ವಿದೇಹದೇಶದ ರಾಜಾ ಜನಕನು ಮಹರ್ಷಿ ಪಂಚಶಿಖನೊಡನೆ ಜರೆ ಮತ್ತು ಮರಣವನ್ನು ಲಂಘಿಸುವ ಉಪಾಯ ಕೇಳಿದನು. ಅವನು ಈತನಿಗೆ ಉಪದೇಶವನ್ನಿತ್ತನು (ಶಾಂತಿ 319 ಅಧ್ಯಾಯ). ಶುಕದೇವನು ವಿದೇಹರಾಜ ಜನಕನೊಡನೆ ಪ್ರವೃತ್ತಿ ಮತ್ತು ನಿವೃತ್ತಿ ಧರ್ಮದ ವಿಷಯವಾಗಿ ಪ್ರಶ್ನೆ ಮಾಡಿದನು. ಅವನು ಇದರ ಉತ್ತರವನ್ನಿತ್ತನು (ಶಾಂತಿ 326/10–51). ವಿದೇಹರಾಜ ಜನಕನ ಪುತ್ರಿ ಒಂದು ಶ್ಲೋಕದ ಗಾಯನ ಈ ಪ್ರಕಾರ ಮಾಡಿದ್ದಾಳೆ. 'ಸ್ತ್ರೀಯು ಯಾವುದೇ ಯಜ್ಞ ಇತ್ಯಾದಿ ಕರ್ಮ, ಶ್ರಾದ್ಧ ಹಾಗೂ ಉಪವಾಸ ಮಾಡುವುದು ಆವಶ್ಯವಲ್ಲ. ಅವಳ ಧರ್ಮ ತನ್ನ ಪತಿಸೇವೆ. ಅದರಿಂದಲೇ ಸ್ತ್ರೀಯರು ಸ್ವರ್ಗಲೋಕದ ಮೇಲೆ ವಿಜಯ ಪಡೆಯುತ್ತಾರೆ.' (ಅನು 46/12–13).

**ವಿದ್ಯಾ** – ಉಮಾದೇವಿಯ ಅನುಗಾಮಿನಿಯಾದ ಒಬ್ಬ ಸಹಚರಿ (ವನ 231/48).

**ವಿದ್ಯಾತೀರ್ಥ** – ಒಂದು ತೀರ್ಥ. ಅಲ್ಲಿಗೆ ಹೋಗಿ ಸ್ನಾನಮಾಡುವುದರಿಂದ ಮನುಷ್ಯನು ಎಲ್ಲೆಲ್ಲಿಯೂ ವಿದ್ಯಾಪ್ರಾಪ್ತಿ ಮಾಡಿಕೊಳ್ಳುತ್ತಾನೆ (ವನ 84/52).

**ವಿದ್ಯಾಧರ** – ದೇವತೆಗಳಲ್ಲೊಂದು ಜಾತಿ ಅಥವಾ ಉಪದೇವತೆ. ಇವರು ಜನಮೇಜಯನ ಸರ್ಪ ಸತ್ರದಲ್ಲಿ, ಮಂತ್ರಾಕೃಷ್ಟನಾದ ದೇವರಾಜನ ಹಿಂದಿನಿಂದ ಬರುತ್ತಿದ್ದರು (ಆದಿ 56/8–9).

**ವಿದ್ಯುಜ್ಜಿಹ್ವ** – ಘಟೋತ್ಕಚನ ಒಡನಾಡಿಯಾದ ಒಬ್ಬ ರಾಕ್ಷಸ. ದುರ್ಯೋಧನನಿಂದ ಅವನ ವಧೆಯಾಗಿತ್ತು (ಭೀಷ್ಮ 91/20–21).

**ವಿದ್ಯುಜ್ಜಿಹ್ವಾ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/8).

**ವಿದ್ಯುತಾ** – ಅಲಕಾಪುರದ ಒಬ್ಬ ಅಪ್ಸರೆ. ಇವಳು ಅಷ್ಟಾವಕ್ರ ಮಹರ್ಷಿಯ ಸ್ವಾಗತದ ಸಂದರ್ಭದಲ್ಲಿ ಕುಬೇರಭವನದಲ್ಲಿ ನೃತ್ಯ ಮಾಡಿದ್ದಳು (ಅನು 19/45).

**ವಿದ್ಯುತಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/62).

**ವಿದ್ಯುತ್ವರ್ಣಾ** – ಒಬ್ಬ ಅಪ್ಸರೆ. ಇವಳು ಕಶ್ಯಪನ 'ಪ್ರಾಧಾ' ಎಂಬ ಪತ್ನಿಯ ಗರ್ಭದಿಂದ ಜನಿಸಿದ್ದಳು (ಆದಿ 65/49). ಇವಳು ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ನೃತ್ಯಮಾಡಿದ್ದಳು (ಆದಿ 122/62).

**ವಿದ್ಯುತ್ಪ್ರಭ** – (1) ಒಬ್ಬ ದಾನವ. ಇವನಿಗೆ ರುದ್ರದೇವನ ಕೃಪೆಯಿಂದ ಒಂದು ಲಕ್ಷ ವರ್ಷಗಳವರೆಗೆ ಮೂರೂಲೋಕಗಳ ಆಧಿಪತ್ಯ, ನಿತ್ಯಪಾರ್ಷದ ಪದವಿ, ಒಂದು ಕೋಟಿ ಪುತ್ರರು ಮತ್ತು ಕುಶದ್ವೀಪದ ರಾಜ್ಯ ಇವೆಲ್ಲಾ ವರದಾನದ ರೂಪದಲ್ಲಿ ಸಿಕ್ಕಿದ್ದವು (ಅನು 14/82–84).

(2) ಒಬ್ಬ ತಪಸ್ವೀ ಮಹರ್ಷಿ. ಇವನು ಪಾಪದಿಂದ ಬಿಡುಗಡೆ ಹೊಂದುವ ಕುರಿತು ಇಂದ್ರನೊಡನೆ ಪ್ರಶ್ನೆ ಮಾಡಿದನು (ಅನು 125/45–46). ಇಂದ್ರನು ಉತ್ತರಕೊಟ್ಟ ಮೇಲೆ, ಇವನು ಸ್ವತಃ ಇಂದ್ರನಿಗೆ ಸೂಕ್ಷ್ಮಧರ್ಮದ ಉಪದೇಶವನ್ನಿತ್ತದ್ದು (ಅನು 125/51–57).

**ವಿದ್ಯುತ್ಪ್ರಭಾ** – ಉತ್ತರ ದಿಕ್ಕಿನ ಹತ್ತು ಅಪ್ಸರೆಯರು (ಉದ್ಯೋಗ 111/21).

**ವಿದ್ಯುದ್ವರ್ಚಾ** – ಒಬ್ಬ ಸನಾತನ ವಿಶ್ವೇದೇವ (ಅನು 91/33).

**ವಿದ್ಯುನ್ಮಾಲೀ** – ತಾರಕಾಸುರನ ಮೂವರು ಪುತ್ರರಲ್ಲಿ ಒಬ್ಬ. ಇವನು ಕಬ್ಬಿಣದ ಪಟ್ಟಣಕ್ಕೆ ಅಧಿಪತಿಯಾಗಿದ್ದನು. ಇವನ ಇಬ್ಬರು ಸಹೋದರರ ಹೆಸರು. ತಾರಾಕ್ಷ ಮತ್ತು ಕಮಲಾಕ್ಷ ಎಂದಾಗಿತ್ತು (ದ್ರೋಣ 202/64–65; ಕರ್ಣ 33/4–5). ಸಹೋದರರ ಸಹಿತ ಇವನ ತಪಸ್ಸು ಮತ್ತು ಬ್ರಹ್ಮನಿಂದ ವರಪ್ರಾಪ್ತಿ (ಕರ್ಣ 33/6–16). ಶಿವನ ಅಸ್ತ್ರದಿಂದ ಇವನು ಪಟ್ಟಣಸಮೇತ ದಗ್ಧನಾದುದು (ಕರ್ಣ 34/114–115).

**ವಿದ್ಯೋತಾ** – ಅಲಕಾಪುರದ ಒಬ್ಬ ಅಪ್ಸರೆ. ಇವಳು ಅಷ್ಟಾವಕ್ರನ ಸ್ವಾಗತ ಸಂದರ್ಭದಲ್ಲಿ ಕುಬೇರ ಭವನದಲ್ಲಿ ನೃತ್ಯಮಾಡಿದ್ದಳು (ಅನು 19/45).

**ವಿಧಾತಾ** – (1) ವಿಧಾತಾ ಮತ್ತು ಧಾತಾ ಎಂಬವರು ಉತ್ತಂಕನಿಗೆ ನಾಗಲೋಕದಲ್ಲಿ

ಇಬ್ಬರು ಸ್ತ್ರೀಯರ ರೂಪದಲ್ಲಿ ದರ್ಶನವಿತ್ತಿದ್ದರು (ಆದಿ 3/166). ಇವರು ಬ್ರಹ್ಮನ ಪುತ್ರರು. ಇವನ ಇನ್ನೊಬ್ಬ ಸಹೋದರನ ಹೆಸರು ಧಾತಾ. ಈ ಇಬ್ಬರು ಸಹೋದರರು ಮನುವಿನೊಂದಿಗಿರುತ್ತಾರೆ (ಆದಿ 66/50). ಕಮಲಗಳಲ್ಲಿ ವಾಸಿಸುವ ಲಕ್ಷ್ಮೀದೇವಿ ಈ ಇಬ್ಬರ ಸಹೋದರಿ (ಆದಿ 66/51). ಧಾತಾ-ವಿಧಾತಾರು ವಿರಾಟ ನಗರದ ಆಕಾಶದಲ್ಲಿ, ಗೋಗ್ರಹಣಕಾಲದಲ್ಲಿ, ಕೃಪಾಚಾರ್ಯ ಮತ್ತು ಅರ್ಜುನರ ಯುದ್ಧ ನೋಡಲು ಬಂದಿದ್ದರು (ವಿರಾಟ 56/11-12). ಇವರಿಂದ ಸ್ಕಂದನಿಗೆ ಸುವ್ರತ ಮತ್ತು ಸುಕರ್ಮ ಎಂಬ ಪಾರ್ಷದರ ದಾನ (ಶಲ್ಯ 45/42-43).

(2) ಒಬ್ಬ ಋಷಿ. ಈತ ಇಂದ್ರಸಭೆಯಲ್ಲಿರುತ್ತಾ, ವಜ್ರಧಾರಿ ಇಂದ್ರನ ಉಪಾಸನೆ ಮಾಡುತ್ತಾನೆ (ಸಭಾ 7/14). ವಿಧಾತಾ-ಬ್ರಹ್ಮಾ ಇವನು ಬ್ರಾಹ್ಮಣ ವೇಷದಲ್ಲಿ ಬಂದು ರಾಜರ್ಷಿ ಶಿಬಿಯ ಪರೀಕ್ಷೆ ಮಾಡಿದನು (ವನ 198/17-25). (ನೋಡಿರಿ - ಬ್ರಹ್ಮಾ).

**ವಿನತಾ** - ದಕ್ಷನ ಪುತ್ರಿ, ಕಶ್ಯಪನ ಪತ್ನಿ ಹಾಗೂ ಗರುಡ ಮತ್ತು ಅರುಣನ ತಾಯಿ. ಗಂಡನು ವರವನ್ನು ಕೇಳಲು ಹೇಳಿದಾಗ, ಇವಳು ಕದ್ರು ಪುತ್ರರಿಗಿಂತ ಅಧಿಕ ಬಲಶಾಲಿಗಳಾದ ಇಬ್ಬರು ಪುತ್ರರನ್ನು ಯಾಚಿಸಿದುದು (ಆದಿ 16/5-9). ಕದ್ರುವಿಗೆ ಪುತ್ರರು ಹುಟ್ಟಿದ್ದನ್ನು ಕಂಡು ಈಕೆ ಲಜ್ಜಿತಳಾದುದು ಮತ್ತು ತನ್ನ ಒಂದು ಮೊಟ್ಟೆಯನ್ನು ಒಡೆದುದು (ಆದಿ 16/16-17). ತನ್ನ ಶರೀರ ಅಪರಿಪೂರ್ಣವಾಗಿ ಉಳಿದ ಕಾರಣ ಅರುಣನು ಈಕೆ ಐನೂರು ವರ್ಷಗಳ ತನಕ ಸವತಿಯ ದಾಸಿಯಾಗಿರುವಂತೆ ಶಾಪ ನೀಡಿದುದು ಹಾಗೂ ಅದರಿಂದ ಬಿಡುಗಡೆ ಹೊಂದುವ ಉಪಾಯ ಸೂಚಿಸಿದುದು (ಆದಿ 16/18-22). ಸವತಿಯಾದ ಕದ್ರುವಿನಿಂದ ಈಕೆ ವಂಚಿಸಲ್ಪಟ್ಟದ್ದು ಮತ್ತು ಐನೂರು ವರ್ಷಗಳ ವರೆಗೆ ಆಕೆಯ ದಾಸಿಯಾದುದು (ಆದಿ 20/2ರಿಂದ ಆದಿ 23/4ರ ತನಕ). ಗರುಡನು ಅಮೃತವನ್ನು ತರುವಂತೆ ಈಕೆಯ ಆದೇಶ (ಆದಿ 27/13-15). ಬ್ರಾಹ್ಮಣ ಹಿಂಸೆಯಿಂದ ದೂರವಿರುವಂತೆ ಈಕೆಯಿಂದ ಗರುಡನಿಗೆ ಎಚ್ಚರಿಕೆ (ಆದಿ 28/2-14). ಸ್ವರ್ಗದಿಂದ ಅಮೃತವನ್ನು ತಂದು ಗರುಡನು ಈಕೆಯನ್ನು ದಾಸ್ಯದಿಂದ ಬಿಡುಗಡೆಗೊಳಿಸಿದುದು (ಆದಿ 34/8-20). ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅರುಣ ಮತ್ತು ವಾರುಣಿ - ಇವರು ವಿನತೆಯ ಪುತ್ರರು (ಆದಿ 65/39-40). ಇವಳು ಸ್ಕಂದನನ್ನು ತನ್ನ ಪಿಂಡದಾತಾಪುತ್ರನೆಂದು ಒಪ್ಪಿದಳು ಮತ್ತು ಸದಾ ಅವನೊಂದಿಗೆ ಇರುವ ಇಚ್ಛೆಯನ್ನು ಪ್ರಕಟಿಸಿದಳು (ವನ 230/12).

**ವಿನದೀ** - ಭಾರತವರ್ಷದ ಒಂದು ನದಿ. ಇದರ ನೀರನ್ನು ಇಲ್ಲಿ ವಾಸಿಸುವವರು ಕುಡಿಯುತ್ತಾರೆ (ಭೀಷ್ಮ 9/27).

**ವಿನಶನ** - (1) ಒಂದು ತೀರ್ಥ. ಇಲ್ಲಿ ಸರಸ್ವತಿ ಅದೃಶ್ಯರೂಪದಿಂದ ಹರಿಯುತ್ತಾಳೆ (ವನ 82/111). ಇದರ ವಿಶೇಷ ಮಹಿಮೆ (ಶಲ್ಯ 37/1).

(2) ಸಮಸ್ತ ಪಾಪಗಳಿಂದ ಬಿಡುಗಡೆಗೊಳಿಸುವ ಒಂದು ತೀರ್ಥ. ಅದರ ಸೇವನೆಯಿಂದ ಮನುಷ್ಯ ವಾಜಪೇಯ ಯಜ್ಞದ ಫಲ ಪಡೆಯುತ್ತಾನೆ ಮತ್ತು ಸೋಮಲೋಕಕ್ಕೆ ಹೋಗುತ್ತಾನೆ (ವನ 84/112).

**ವಿನಾಯಕ** - ಒಂದು ರೀತಿಯ ಗಣದೇವತೆ. ಇವನ ಹೆಸರನ್ನು ಶುದ್ಧಭಾವದಿಂದ ಕೀರ್ತಿಸಿದರೆ ಮನುಷ್ಯ ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ (ಅನು 150/25-29).

**ವಿನಾಶನ** - ಕಾಲಾ ಎಂಬ ಕಶ್ಯಪಪತ್ನಿಯಿಂದ ಹುಟ್ಟಿದ ಒಬ್ಬ ದಾನವ. ಕಾಲಾಳ ಪುತ್ರರು ಅಸ್ತ್ರಶಸ್ತ್ರಗಳ ಪ್ರಹಾರದಲ್ಲಿ ಕುಶಲರು ಮತ್ತು ಸಾಕ್ಷಾತ್ ಕಾಲನಿಗೆ ಸಮಾನವಾಗಿ ಭಯಂಕರರಾಗಿದ್ದರು (ಆದಿ 65/34-35).

**ವಿನ್ದ** - (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/94; ಆದಿ 116/3). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 127/34-66).

(2) ಅವಂತಿಯ ರಾಜಕುಮಾರ. ಇವನು ಅನುವಿಂದನ ಸಹೋದರ. ದಕ್ಷಿಣ ದಿಗ್ವಿಜಯ ಸಂದರ್ಭದಲ್ಲಿ ಸಹದೇವನು ಇವನನ್ನು ಸೋಲಿಸಿದ್ದನು (ಸಭಾ 31/10). ಇವನು ಒಂದು ಅಕ್ಷೌಹಿಣೀ ಸೇನೆಯನ್ನು ಕರೆದುಕೊಂಡು ದುರ್ಯೋಧನನ ಸಹಾಯಕ್ಕೆ ಬಂದದ್ದು (ಉದ್ಯೋಗ 19/24-25). ಭೀಷ್ಮನು ಇವನನ್ನು

ಶ್ರೇಷ್ಠ ರಥಿಕರಲ್ಲಿ ಗಣಿಸಿದುದು (ಉದ್ಯೋಗ 166/6). ದುರ್ಯೋಧನನ ಸೇನೆಯ ಹತ್ತು ಪ್ರಧಾನ ಅಧಿನಾಯಕರಲ್ಲಿ ಇವನೂ ಒಬ್ಬನಾಗಿದ್ದನು (ಭೀಷ್ಮ 16/15–17). ಇವನು ಭಗದತ್ತನಿಗೆ ಸಮಾನ ತೇಜಸ್ವಿಯಾಗಿದ್ದನು ಮತ್ತು ಆನೆಯ ಬೆನ್ನಮೇಲೆ ಕುಳಿತು ಕೇತುಮಂತನನ್ನು ಹಿಂಬಾಲಿಸುತ್ತಿದ್ದನು (ಭೀಷ್ಮ 17/37). ಪ್ರಥಮ ದಿನದ ಯುದ್ಧದಲ್ಲಿ ಕುಂತೀಭೋಜದೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/72–76). ವಿರಾಟ ಕುಮಾರ ಶ್ವೇತನ ಮುಷ್ಟಿಯಲ್ಲಿ ಸಿಕ್ಕಿದ ಮದ್ರರಾಜ ಶಲ್ಯನಿಗೆ ಈತ ಸಹಾಯಮಾಡಿದನು (ಭೀಷ್ಮ 47/48–49). ತನ್ನ ಸಹೋದರ ಅನುವಿಂದನೊಂದಿಗೆ ಇವನು ಇರಾವಂತನ ಮೇಲೆ ಆಕ್ರಮಣ ಮಾಡಿದುದು (ಭೀಷ್ಮ 81/27). ಇರಾವಂತನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಪರಾಜಿತನಾದುದು (ಭೀಷ್ಮ 83/12–22). ಧೃಷ್ಟದ್ಯುಮ್ನ ಮತ್ತು ಯುಧಿಷ್ಠಿರನೊಂದಿಗೆ ಇವನ ಯುದ್ಧ (ಭೀಷ್ಮ 86/33–36). ಭೀಮಸೇನ ಮತ್ತು ಅರ್ಜುನನೊಂದಿಗೆ ಯುದ್ಧ (ಭೀಷ್ಮ ಅಧ್ಯಾಯ 113ರಿಂದ 114 ವರೆಗೆ). ವಿರಾಟನೊಂದಿಗೆ ಯುದ್ಧ (ದ್ರೋಣ 25/20–21). ಭೀಮಸೇನನೊಂದಿಗೆ ಯುದ್ಧ (ದ್ರೋಣ 95/35–36). ವಿರಾಟನ ಮೇಲೆ ಇವನ ಆಕ್ರಮಣ (ದ್ರೋಣ 95/43). ವಿರಾಟನೊಂದಿಗೆ ಯುದ್ಧ (ದ್ರೋಣ 96/4–6). ಅರ್ಜುನನೊಂದಿಗೆ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 99/17–25). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/10).

(3) ಒಬ್ಬ ಕೇಕಯ ರಾಜಕುಮಾರ. ಇವನು ಕೌರವ ಪಕ್ಷದ ಯೋಧನಾಗಿದ್ದನು. ಸಾತ್ಯಕಿಯೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 13/6–35).

**ವಿನ್ಧ್ಯ** – ಮಧ್ಯಭಾರತದ ಒಂದು ಪ್ರಸಿದ್ಧ ಪರ್ವತ. ಇಲ್ಲಿ ಸುಂದ ಮತ್ತು ಉಪಸುಂದರು ತಪಸ್ಸು ಮಾಡಿದ್ದರು (ಆದಿ 208/7). ಸುಂದನ ಉಗ್ರತಪಸ್ಸಿನಿಂದ ಸಂತಪ್ತವಾದ ಕಾರಣ ಈ ಪರ್ವತದಿಂದ ಹೊಗೆ ಹೊರಡಲು ತೊಡಗಿತ್ತು (ಆದಿ 208/10). ಇವನು ಕುಬೇರ ಸಭೆಯಲ್ಲಿ ಉಪಸ್ಥಿತನಾಗಿದ್ದು ಧನಾಧ್ಯಕ್ಷನ ಉಪಾಸನೆ ಮಾಡುತ್ತಾನೆ (ಸಭಾ 10/31). ಇವನು ಸೂರ್ಯ ಮಾರ್ಗ ತಡೆಯಲು ಬೆಳೆದುದು (ವನ 104/6). ಅಗಸ್ತ್ಯರ ಮೂಲಕ ಇವನ ಬೆಳವಣಿಗೆಯ ನಿವಾರಣೆ (ವನ 104/13–14). ಈ ಉತ್ತಮ ಪರ್ವತದ ಮೇಲೆ ದುರ್ಗಾದೇವಿಯ ಸನಾತನ ನಿವಾಸಸ್ಥಾನವಿದೆ (ವಿರಾಟ 6/17). ಇವನು ಸಪ್ತಕುಲಪರ್ವತಗಳಲ್ಲಿ ಒಬ್ಬನಾಗಿದ್ದಾನೆ (ಭೀಷ್ಮ 9/11). ತ್ರಿಪುರದಹನ ಕಾಲದಲ್ಲಿ ಇವನು ಶಿವನ ರಥದ ಪಾರ್ಶ್ವವರ್ತಿ ಧ್ವಜವಾಗಿ ಮಾಡಲ್ಪಟ್ಟಿದ್ದನು (ದ್ರೋಣ 202/71). ಇವನು ಆತನ ರಥದಲ್ಲಿ ಆಧಾರಕಾಷ್ಠದ ಸ್ಥಾನ ಪಡೆದಿದ್ದನು (ಕರ್ಣ 34/22). ಇವನಿಂದ ಸ್ಕಂದನಿಗೆ ಉಛ್ಛೃಂಗ ಮತ್ತು ಅತಿಶೃಂಗ ಎಂಬ ಇಬ್ಬರು ಪಾರ್ಷದರ ದಾನ (ಶಲ್ಯ 45/49–50). ಯಾವನು ಹಿಂಸೆಯನ್ನು ತ್ಯಜಿಸಿ, ಸತ್ಯಪ್ರತಿಜ್ಞನಾಗಿ ವಿಂಧ್ಯಾಚಲದಲ್ಲಿ ತನ್ನ ಶರೀರಕ್ಕೆ ಕಷ್ಟವನ್ನಿತ್ತು, ವಿನೀತ ಭಾವದಿಂದ ತಪಸ್ಸನ್ನಾಶ್ರಯಿಸುವನೋ ಅವನಿಗೆ ಒಂದು ತಿಂಗಳಲ್ಲಿ ಸಿದ್ಧಿ ಪ್ರಾಪ್ತವಾಗುತ್ತದೆ (ಅನು 25/49).

**ವಿನ್ಧ್ಯಚುಲಿಕ** – ಒಂದು ಭಾರತೀಯ ಜನಪದ (ಭೀಷ್ಮ 9/62).

**ವಿಪಾಟ** – ಕರ್ಣನ ಒಬ್ಬ ಸಹೋದರ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ದ್ರೋಣ 32/62–63).

**ವಿಪಾಠ** – ಬಾಣವಿಶೇಷ (ಇದರ ಆಕೃತಿ ಅಗೆತದ ಉಪಕರಣದಂತಿರುತ್ತದೆ. ಇದು ಇತರ ಬಾಣಗಳಿಂದ ದೊಡ್ಡದಾಗಿರುತ್ತದೆ.) (ಆದಿ 138/6).

**ವಿಪಾಪಾ** – ಭಾರತ ವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತೀಯ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/15).

**ವಿಪಾಪ್ಮಾ** – ಒಬ್ಬ ಸನಾತನ ವಿಶ್ವೇದೇವ (ಅನು 91/30).

**ವಿಪಾಶಾ** – ಪಂಚನದ ಪ್ರದೇಶದ ಒಂದು ನದಿ. ಇವಳು ವಸಿಷ್ಠನನ್ನು ಪಾಶಮುಕ್ತಗೊಳಿಸಿದುದರಿಂದ 'ವಿಪಾಶಾ' ಎಂಬ ಹೆಸರಿನಿಂದ ಪ್ರಸಿದ್ಧವಾದಳು (ಆದಿ 176/2–6). ಇವಳು ವರುಣಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾಳೆ (ಸಭಾ 9/19). ಈಕೆಯ ನೀರನ್ನು

ಭಾರತದ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/15). ಬಹಿ (ವಹಿ) ಮತ್ತು ಹೀಕವೆಂಬ ಹೆಸರಿನ ಪಿಶಾಚಗಳು ಇಲ್ಲಿ ವಾಸಿಸುತ್ತವೆ (ಕರ್ಣ 44/41–42). ವಿಪಾಶಾ ನದಿಯಲ್ಲಿ ಪಿತೃಗಳಿಗೆ ತರ್ಪಣಕೊಡುವವನು, ಕ್ರೋಧವನ್ನು ಗೆದ್ದು ಬ್ರಹ್ಮಚರ್ಯಪಾಲನೆ ಮಾಡುತ್ತಾ ಮೂರು ರಾತ್ರಿ ಅಲ್ಲಿ ವಾಸಿಸುವವನು, ಜನನ ಮೃತ್ಯುವಿನ ಬಂಧನದಿಂದ ಮುಕ್ತನಾಗುತ್ತಾನೆ (ಅನು 25/24).

**ವಿಪುಲ** – (1) ಸೌವೀರ ದೇಶದ ರಾಜ. ಇವನು ಸಂಗ್ರಾಮ ಭೂಮಿಯಲ್ಲಿ ಅರ್ಜುನನ ಕೈಯಿಂದ ಕೊಲ್ಲಲ್ಪಟ್ಟನು (ಆದಿ 138/22).

(2) ಮಗಧ ರಾಜಧಾನಿಯಾದ ಗಿರಿವ್ರಜದ ಸಮೀಪದ ಒಂದು ಪರ್ವತ (ಸಭಾ 21/2).

(3) ಭೃಗು ವಂಶದ ಒಬ್ಬ ಋಷಿ. ಇವನು ಮಹರ್ಷಿ ದೇವಶರ್ಮಾನ ಶಿಷ್ಯನಾಗಿದ್ದನು (ಅನು 40/21–22). ಇವನು ತನ್ನ ಗುರುವಿನೊಡನೆ ಇಂದ್ರನ ರೂಪ ಹಾಗೂ ಲಕ್ಷಣವನ್ನು ಕೇಳಿ ದುದು (ಅನು 40/26). ಇಂದ್ರನಿಂದ ರಕ್ಷಣೆ ಮಾಡುವುದಕ್ಕೆ ಗುರುಪತ್ನಿಯ ಶರೀರದಲ್ಲಿ ಈತನ ಪ್ರವೇಶ (ಅನು 40/57–58). ಇಂದ್ರ ನನ್ನು ನಿಂದಿಸಿದುದು (ಅನು 41/20–26). ಗುರುವಿನಿಂದ ಈತನಿಗೆ ವರ ಪ್ರಾಪ್ತಿ (ಅನು 41/35). ಗುರುವಿನ ಆಜ್ಞೆಯಿಂದ ದಿವ್ಯಪುಷ್ಪ ವನ್ನು ತಂದದ್ದು (ಅನು 42/16). ಮಾರ್ಗದಲ್ಲಿ ತನ್ನ ದುರ್ಗತಿಯ ವಿಷಯ ತಿಳಿದು ದುಃಖಿತ ನಾದುದು (ಅನು 42/29). ಗುರುವಿನೊಡನೆ ಸ್ತ್ರೀಪುರುಷ ಜೋಡಿ ಮತ್ತು ಆರು ಮಂದಿ ಪುರುಷರ ವಿಷಯದಲ್ಲಿ ಪ್ರಶ್ನೆ (ಅನು 43/3).

**ವಿಪೃಥು** – (1) ವೃಷ್ಣಿವಂಶದ ಒಬ್ಬ ಕ್ಷತ್ರಿಯ. ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/18). ಇವನು ರೈವತಕ ಪರ್ವತದಲ್ಲಿ ಜರಗುವ ಮಹೋತ್ಸವದಲ್ಲಿ ಭಾಗವಹಿಸಿದ್ದನು (ಆದಿ 218/10). ಸುಭದ್ರೆ ಮತ್ತು ಅರ್ಜುನನ ವಿವಾಹಕ್ಕಾಗಿ ವರದಕ್ಷಿಣೆ ತೆಗೆದುಕೊಂಡು ಹೋಗುವ ಜನರಲ್ಲಿ ಇವನೂ ಇದ್ದನು (ಆದಿ 220/32). ಇವನು ಯುಧಿಷ್ಠಿರನ ಸಭೆಯಲ್ಲಿ ರುತ್ತಾ, ಅವನ ಸೇವೆಗಾಗಿ ಉಪಸ್ಥಿತನಾಗಿರು ತ್ತಿದ್ದನು (ಸಭಾ 4/30).

(2) ಒಬ್ಬ ಪ್ರಾಚೀನ ನರೇಶ. ಇವನು ಸಪ್ತರ್ಷಿಗಳ ಅನಂತರ ಭೂಮಂಡಲದ ಸಮ್ರಾಟನಾಗಿದ್ದನು (ಶಾಂತಿ 294/20).

**ವಿಪ್ರಚಿತ್ತಿ** – ದನುವಿನ ಸರ್ವತ್ರ ಪ್ರಖ್ಯಾತರಾದ ಮೂವತ್ತನಾಲ್ಕು ಪುತ್ರರಲ್ಲಿ ಒಬ್ಬ. ಇವನು ಮಹಾಯಶಸ್ವೀ ರಾಜನಾಗಿದ್ದನು. ಇವನು ತನ್ನ ಸಹೋದರರಲ್ಲಿ ಎಲ್ಲರಿಗಿಂತ ಹಿರಿಯನಾಗಿದ್ದನು (ಆದಿ 65/22). ಇವನೇ ಈ ಭೂಮಿಯಲ್ಲಿ 'ಜರಾಸಂಧ'ನೆಂಬ ರೂಪದಲ್ಲಿ ಜನ್ಮವೆತ್ತಿದ್ದನು (ಆದಿ 67/4). ಇವನು ವರುಣಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 9/12). ವಾಮನರೂಪಧಾರಿಯಾದ ಶ್ರೀಹರಿ ಮೂರು ಲೋಕಗಳನ್ನು ಅಳೆಯಲು ತೊಡಗಿದಾಗ ವಿಪ್ರಚಿತ್ತಿ ಮೊದಲಾದ ದಾನವರು ತಮ್ಮ ತಮ್ಮ ಆಯುಧ ಹಿಡಕೊಂಡು ಆತನನ್ನು ನಾಲ್ಕೂ ದಿಕ್ಕುಗಳಿಂದ ಸುತ್ತುವರಿದು ನಿಂತಿದ್ದರು (ಸಭಾ 38/29). ಪೂರ್ವಕಾಲದಲ್ಲಿ ಇವನನ್ನು ಭಗ ವಾನ್ ಶ್ರೀ ಹರಿಯು (ಇಂದ್ರರೂಪದಿಂದ) ಕ್ರಿಯಾತ್ಮಕ ಉಪಾಯಗಳಿಂದ ಕೊಂದಿದ್ದನು (ಶಲ್ಯ 31/12–13). ಇವನನ್ನು ಮತ್ತು ಇತರ ದೈತ್ಯದಾವನವರನ್ನು ಕೊಂದು ಇಂದ್ರನು ದೇವ ರಾಜನ ಪಟ್ಟದಲ್ಲಿ ಪ್ರತಿಷ್ಠಿತನಾದನು (ಶಾಂತಿ 98/50).

**ವಿಭಾಂಡ** – ಒಬ್ಬ ಪ್ರಾಚೀನ ಋಷಿ. ಇವನು ಶರಶಯ್ಯೆಯಲ್ಲಿ ಬಿದ್ದಿರುವ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/11).

**ವಿಭಾಂಡಕ** – ಕಶ್ಯಪಕುಲದಲ್ಲಿ ಹುಟ್ಟಿದ ಒಬ್ಬ ಋಷಿ. ಈತ ಇಂದ್ರನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 7/18). ಇವನು ಋಷ್ಯಶೃಂಗನ ತಂದೆಯಾಗಿದ್ದನು (ವನ 110/23). ಇವನ ಅಂತಃಕರಣ ತಪಸ್ಸಿನಿಂದ ಪವಿತ್ರವಾಗಿತ್ತು. ಇವನು ಪ್ರಜಾಪತಿಯಂತೆ ತಪಸ್ವಿ ಮತ್ತು ಅಮೋಘವೀರ್ಯವಂತ ಮಹಾತ್ಮನಾಗಿ ದ್ದನು. ಇವನ ರೂಪಸೌಂದರ್ಯ ಮಹಾತ್ಮರಿಗೆ ಸಮಾನವಾಗಿತ್ತು. ಇವನು ಬಹಳ ದೊಡ್ಡ ಸರೋವರವನ್ನು ಪ್ರವೇಶಿಸಿ ತಪಸ್ಸು ಮಾಡುತ್ತಿ ದ್ದನು. ಇವನು ದೀರ್ಘಕಾಲದ ತನಕ ಮಹಾ ಕ್ಲೇಶವನ್ನು ಸಹಿಸಿದ್ದನು (ವನ 110/32–34). ಒಂದು ದಿನ ನೀರಿನಲ್ಲಿ ಸ್ನಾನಮಾಡುವಾಗ

ಅಪ್ಸರೆಯಾದ ಉರ್ವಶಿಯನ್ನು ನೋಡಿ ಇವನ ವೀರ್ಯ ಸ್ಖಲಿಸಿತು. ಅದೇ ಸಮಯದಲ್ಲಿ ಬಾಯಾರಿಕೆಯಿಂದ ವ್ಯಾಕುಲವಾಗಿದ್ದ ಒಂದು ಹೆಣ್ಣು ಜಿಂಕೆ ಅಲ್ಲಿ ಬಂದಿತು. ಅದು ನೀರಿನೊಂದಿಗೆ ಆ ವೀರ್ಯವನ್ನು ಕುಡಿಯಿತು. ಇದರಿಂದ ಅದು ಗರ್ಭಿಣಿಯಾಯಿತು. ಅದರ ಹೊಟ್ಟೆಯಿಂದ ಮಹರ್ಷಿ ಋಷ್ಯಶೃಂಗನ ಜನನ ವಾಯಿತು (ವನ 110/35–39). ವಿಭಾಂಡಕ ಮುನಿಯ ಕಣ್ಣುಗಳು ಹಸುರು–ಹಳದಿ ಬಣ್ಣದವು ಗಳಾಗಿದ್ದವು. ತಲೆಯಿಂದ ತೊಡಗಿ ಕಾಲುಗಳ ಉಗುರುಗಳ ವರೆಗೆ ರೋಮ ರಾಜಿಗಳಿಂದ ತುಂಬಿತ್ತು. ಇವನು ಸ್ವಾಧ್ಯಾಯಶೀಲ, ಸದಾಚಾರಿ ಮತ್ತು ಸಮಾಧಿನಿಷ್ಠ ಮಹರ್ಷಿಯಾಗಿದ್ದನು. ಒಂದು ದಿನ ಈತ ಹೊರಗಿನಿಂದ ಆಶ್ರಮಕ್ಕೆ ಬಂದಾಗ ತನ್ನ ಮಗ ಚಿಂತಾಮಗ್ನನಾಗಿರು ವುದನ್ನು ನೋಡಿ, ಅವನೊಡನೆ ಕೇಳತೊಡಗಿ ದನು. 'ಮಗನೇ, ಹೇಳು! ಈ ದಿನ ಇಲ್ಲಿಗೆ ಯಾರು ಬಂದಿದ್ದನು' (ವನ 111/20–30). ಋಷ್ಯಶೃಂಗನು ತನ್ನ ತಂದೆಗೆ ಚಿಂತೆಯ ಕಾರಣ ವನ್ನು ಹೇಳುತ್ತಾ, ಬ್ರಹ್ಮಚಾರಿ – ರೂಪಧಾರಿ ವೇಶ್ಯೆಯ ಸ್ವರೂಪ ಮತ್ತು ಆಚರಣೆಯ ವರ್ಣನೆ ಮಾಡಿದನು (ವನ 112 ಅಧ್ಯಾಯ). ಈ ರೀತಿ ಅದ್ಭುತ ರೂಪಧಾರಣೆ ಮಾಡಿ ರಾಕ್ಷಸರೇ ಈ ಕಾಡಿನಲ್ಲಿ ಸುತ್ತುತ್ತಿರುತ್ತಾರೆ ಮತ್ತು ಋಷಿಮುನಿಗಳ ತಪಸ್ಸಿಗೆ ಯಾವಾಗಲೂ ವಿಘ್ನ ವನ್ನುಂಟು ಮಾಡುವ ಪ್ರಯತ್ನಮಾಡುತ್ತಾರೆಂದು ವಿಭಾಂಡಕನು ತನ್ನ ಮಗನಿಗೆ ಹೇಳಿದನು. ಆದುದರಿಂದ ತಪಸ್ವಿಯಾದವನು ಅವರ ಕಡೆಗೆ ಕಣ್ಣೆತ್ತಿನೋಡಲೇ ಬಾರದೆಂದನು. ಈ ರೀತಿ ತನ್ನ ಪುತ್ರನು ಬಂದವನೊಡನೆ ಸೇರಿಕೊಳ್ಳುವುದನ್ನು ಅಡ್ಡಿಪಡಿಸಿ, ತಾನೇ ಆ ವೇಶ್ಯೆಯನ್ನು ಹುಡುಕಲು ತೊಡಗಿದನು. ಮೂರು ದಿನಗಳ ವರೆಗೆ ಹುಡುಕಿ ದರೂ ಆಕೆಯ ಇರುವಿಕೆ ಗೊತ್ತಾಗದಾಗ, ಆಶ್ರಮಕ್ಕೆ ಹಿಂತಿರುಗಿದನು (ವನ 113/1–5). ಅನಂತರ ಇವನು ಫಲತರಲು ಕಾಡಿಗೆ ಹೋದಾಗ, ಆ ವೇಶ್ಯೆ ಅವನ ಪುತ್ರನನ್ನು ಲೋಭಗೊಳಿಸಿ ತನ್ನ ಜೊತೆಯಲ್ಲಿ ಕರೆದೊ ಯ್ದಳು; ರಾಜಾ ಲೋಮಪಾದನು ಅವನನ್ನು ತನ್ನ ಅಂತಃಪುರದಲ್ಲಿ ನಿಲ್ಲಿಸಿಕೊಂಡನು. ಆಶ್ರಮಕ್ಕೆ ಹಿಂತಿರುಗಿದಾಗ ತನ್ನ ಪುತ್ರನನ್ನು ಕಾಣದೆ ವಿಭಾಂಡಕ ಮುನಿ ಅತ್ಯಂತ ಕುಪಿತ ನಾದನು. ಇವನಿಗೆ ರಾಜಾ ಲೋಪಪಾದನ ಮೇಲೆ ಸಂದೇಹವುಂಟಾಯಿತು. ಆಗ ಅವನು ಚಂಪಾನಗರದ ಕಡೆಗೆ ನಡೆದನು. ದಾರಿಯಲ್ಲಿ ಇವನಿಗೆ ದೊಡ್ಡ ಸತ್ಕಾರವಾಯಿತು. ಅಂಗದೇಶದ ಎಲ್ಲಾ ವೈಭವ, ಈತನ ಪುತ್ರ ಋಷ್ಯಶೃಂಗನದೇ ಎಂದು ಹೇಳಲಾಯಿತು. ರಾಜನಲ್ಲಿಗೆ ತಲುಪಿ, ಈತ ಅಲ್ಲಿ ತನ್ನ ಪುತ್ರ ಮತ್ತು ಸೊಸೆಯನ್ನು ನೋಡಿದನು. ಇದರಿಂದಾಗಿ ಅವನ ಕ್ರೋಧ ಶಾಂತವಾಯಿತು. ಇವನು ರಾಜಾ ಲೋಮ ಪಾದನ ಮೇಲೆ ತುಂಬಾ ಕೃಪೆತೋರಿದನು. ಶಾಂತೆಯ ಗರ್ಭದಿಂದ ಪುತ್ರಜನನವಾದ ಬಳಿಕ ಋಷ್ಯಶೃಂಗನು ಕಾಡಿಗೇ ಬರುವಂತೆ ಆಜ್ಞೆ ನೀಡಿ, ಈತ ಆಶ್ರಮಕ್ಕೆ ಹಿಂತಿರುಗಿದನು (ವನ 113/6–21). ಅದೃಶ್ಯ ದೇವತೆಯೊಂದಿಗೆ ಈತ ಪ್ರಶ್ನೆ ಮಾಡಿದುದು (ಶಾಂತಿ 222). ಸನತ್ಕುಮಾರನೊಂದಿಗೆ ಪ್ರಶ್ನೆ (ಶಾಂತಿ 222).

**ವಿಭಾವಸು** – (1) ವಿವಸ್ವಂತ ಅಥವಾ ಸೂರ್ಯ (ಆದಿ 1/42).

(2) ಒಬ್ಬ ಕ್ರೋಧಿಯಾದ ಮಹರ್ಷಿ. ಈತ ತನ್ನ ಸಹೋದರ ಸುಪ್ರತೀಕ ಮುನಿಯ ಶಾಪದಿಂದ ಆಮೆಯಾಗಿದ್ದನು (ಆದಿ 39/15–23).

(3) ಒಬ್ಬ ಋಷಿ. ಇವನು ಯುಧಿಷ್ಠಿರನನ್ನು ವಿಶೇಷವಾಗಿ ಗೌರವಿಸುತ್ತಿದ್ದನು (ವನ 26/24).

**ವಿಭೀಷಣ** – (1) ಒಬ್ಬ ಯಕ್ಷ. ಇವನು ಕುಬೇರ ಸಭೆಯಲ್ಲಿದ್ದುಕೊಂಡು ಅವನ ಸೇವೆ ಮಾಡು ತ್ತಾನೆ (ಸಭಾ 10/17).

(2) ರಾಕ್ಷಸರಾಜ ಲಂಕಾಧಿಪತಿ ವಿಭೀಷಣ. ಇವನು ಕುಬೇರನ ಸಭೆಯಲ್ಲಿದ್ದುಕೊಂಡು, ತನ್ನ ಸಹೋದರ ಧನಾಧ್ಯಕ್ಷ ಕುಬೇರನ ಉಪಾಸನೆ ಮಾಡುತ್ತಾನೆ (ಸಭಾ 10/31). ಇವನು ವಿಶ್ರವಾ ಮುನಿಯ ಮಗ. ರಾವಣ ಮತ್ತು ಕುಂಭಕರ್ಣರ ಸಹೋದರನಾಗಿದ್ದನು. ಇವನ ತಾಯಿಯ ಹೆಸರು ಮಾಲಿನಿ ಎಂದಾಗಿತ್ತು. ಇವನಿಂದ ಯುಧಿಷ್ಠಿರನಿಗೆ ಅತ್ಯಂತ ಅಮೂಲ್ಯವಾದ ವಸ್ತು ಗಳ ಉಡುಗೊರೆ (ಸಭಾ 31/72). ಸಹದೇವನು ಘಟೋತ್ಕಚನನ್ನು ತನ್ನ ದೂತನಾಗಿಮಾಡಿ, ಇವನ ಬಳಿಗೆ ಕಳುಹಿಸಿದ್ದನು (ಸಭಾ 31/72).

ಇವನ ಆಜ್ಞೆಯಿಂದ ಘಟೋತ್ಕಚನು ಈತನ ಅಸ್ಥಾನದಲ್ಲಿ ಉಪಸ್ಥಿತನಾಗುದುದು (ಸಭಾ 31/73). ರಾಕ್ಷಸರಾಜ ವಿಭೀಷಣನ ಅರಮನೆ ತನ್ನ ಉಜ್ವಲ ಪ್ರಕಾಶದಿಂದ ಕೈಲಾಸದಂತೆ ಕಾಣಿಸುತ್ತಿತ್ತು. ಅದರ ದ್ವಾರ ಕಾಯಿಸಿದ ಚಿನ್ನ ದಿಂದ ಸಿದ್ಧಗೊಳಿಸಲ್ಪಟ್ಟಿತ್ತು. ಆವರಣ ಗೋಡೆ ಗಳಿಂದ ಸುತ್ತುವರಿಯಲ್ಪಟ್ಟ ಆ ರಾಜಮಂದಿರ ಅನೇಕ ಗೋಪುರಗಳಿಂದ ಶೋಭಾಯಮಾನ ವಾಗಿತ್ತು. ಅದರಲ್ಲಿ ಅನೇಕ ಉಪ್ಪರಿಗೆಗಳೂ, ಸೌಧಗಳೂ ರಚಿಸಲ್ಪಟ್ಟಿದ್ದವು. ತರತರದ ರತ್ನ ಗಳು ಆ ಭವನದ ಸೌಂದರ್ಯವನ್ನು ಹೆಚ್ಚಿಸು ತ್ತಿದ್ದವು. ಚಿನ್ನ, ಬೆಳ್ಳಿ ಮತ್ತು ಸ್ಫಟಿಕಮಣಿಯ ಸ್ತಂಭಗಳು ಕಣ್ಣು ಮತ್ತು ಮನಸ್ಸನ್ನು ಒಮ್ಮೆಲೆ ತಮ್ಮ ಕಡೆಗೆ ಆಕರ್ಷಿಸುತ್ತಿದ್ದವು. ಆ ಕಂಭಗಳಲ್ಲಿ ವಜ್ರ ಮತ್ತು ವೈಡೂರ್ಯಗಳು ಪೋಣಿಸಲ್ಪಟ್ಟಿ ದ್ದವು. ಸ್ವರ್ಣ ವರ್ಣದ ವಿವಿಧ ಧ್ವಜಪತಾಕೆ ಗಳಿಂದ ಆ ಭವ್ಯ ಭವನದ ಶೋಭೆ ವಿಚಿತ್ರ ವಾಗಿತ್ತು. ವಿಚಿತ್ರಮಾಲೆಗಳಿಂದ ಅಲಂಕೃತವೂ, ವಿಶುದ್ಧ ಸ್ವರ್ಣಮಯ ವೇದಿಕೆಗಳಿಂದ ವಿಭೂಷಿತವೂ ಆಗಿದ್ದ ಆ ರಾಜಭವನ ತುಂಬಾ ರಮಣೀಯವಾಗಿ ಕಾಣಿಸುತ್ತಿತ್ತು. ಅಲ್ಲಿ ಕಿವಿಗಳಿಗೆ ಮೃದಂಗದ ಮಧುರ ಧ್ವನಿ ಕೇಳಿಸುತ್ತಿತ್ತು. ವೀಣೆಯ ತಂತಿಗಳು ಝೇಂಕರಿಸುತ್ತಿದ್ದವು. ಅದರ ಲಯದಲ್ಲಿ ಗೀತೆಗಳು ಹಾಡಲ್ಪಡುತ್ತಿದ್ದವು. ನೂರಾರು ವಾದ್ಯಗಳೊಂದಿಗೆ ದಿವ್ಯ ದುಂದುಭಿ ಗಳ ಮಧುರಘೋಷ ಗುನುಗುನಿಸುತ್ತಿತ್ತು. ಮಹಾತ್ಮಾ ವಿಭೀಷಣ ಚಿನ್ನದ ಸಿಂಹಾಸನದ ಮೇಲೆ ಕುಳಿತಿದ್ದನು. ಆ ಸಿಂಹಾಸನ ಸೂರ್ಯ ನಂತೆ ಪ್ರಕಾಶಿಸುತ್ತಿತ್ತು. ಅಲ್ಲಿ ಮುತ್ತುರತ್ನಾದಿಗಳು ಪೋಣಿಸಲ್ಪಟ್ಟಿದ್ದವು. ದಿವ್ಯ ಆಭೂಷಣಗಳಿಂದ ರಾಕ್ಷಸರಾಜ ವಿಭೀಷಣನು ಶೋಭಾಯಮಾನ ನಾಗಿದ್ದನು. ಅವನ ರೂಪ ದಿವ್ಯವಾಗಿತ್ತು. ಅವನು ದಿವ್ಯಮಾಲೆ, ದಿವ್ಯವಸ್ತ್ರ ಮತ್ತು ದಿವ್ಯಗಂಧದಿಂದ ವಿಭೂಷಿತನಾಗಿದ್ದನು. ಅವನ ಸಮೀಪದಲ್ಲಿ ಅನೇಕ ಸಚಿವರು ಕುಳಿತಿದ್ದರು. ಅನೇಕ ಸುಂದರ ಯಕ್ಷರು ತಮ್ಮ ಸ್ತ್ರೀಯರೊಂದಿಗೆ, ಮಂಗಲ ಯುಕ್ತ ವಾಣಿಯ ಮೂಲಕ, ರಾಜಾ ವಿಭೀಷಣನನ್ನು ವಿಧಿವತ್ತಾಗಿ ಪೂಜಿಸುತ್ತಿದ್ದರು. ಸುಂದರಿಯರಾದ ಇಬ್ಬರು ನಾರಿಯರು ಅವನಿಗೆ ಚಾಮರ ಮತ್ತು ಬೀಸಣಿಗೆ ಬೀಸುತ್ತಿದ್ದರು. ರಾಕ್ಷಸರಾಜ ವಿಭೀಷಣ, ಕುಬೇರ ಮತ್ತು ವರುಣನಂತೆ ರಾಜಲಕ್ಷ್ಮಿಯಿಂದ ಸಂಪನ್ನನೂ, ಅದ್ಭುತನೂ ಆಗಿ ಕಾಣಿಸುತ್ತಿದ್ದನು. ಇವನ ಅಂಗಗಳಿಂದ ದಿವ್ಯಪ್ರಕಾಶ ಹೊರಹೊಮ್ಮುತ್ತಿತ್ತು. ಇವನು ಧರ್ಮನಿಷ್ಠನಾಗಿದ್ದನು ಮತ್ತು ಮನಸ್ಸಿನಲ್ಲೇ ಇಕ್ಷ್ವಾಕುವಂಶ ಶಿರೋಮಣಿ ಯಾದ ಭಗವಂತ ಶ್ರೀರಾಮನ ಸ್ಮರಣೆಮಾಡು ತ್ತಿದ್ದನು. ಘಟೋತ್ಕಚನು ಎರಡೂ ಕೈಗಳನ್ನು ಜೋಡಿಸಿ ಈತನಿಗೆ ಪ್ರಣಾಮ ಮಾಡಿದನು (ಸಭಾ 31/73). ಘಟೋತ್ಕಚನ ಮುಖದಿಂದ ಯುಧಿಷ್ಠಿರಾದಿಗಳ ಪೂರ್ಣ ಪರಿಚಯಕೇಳಿ, ವಿಭೀಷಣನು ಸಂತೋಷದಿಂದ ಸಹದೇವನಿಗೆ, ಆನೆಯ ಬೆನ್ನಮೇಲೆ ಬಿಡಿಸಲು ಯೋಗ್ಯವಾದ ವಿಚಿತ್ರ ರತ್ನಗಂಬಳಿ, ಆನೆಯ ದಂತ ಮತ್ತು ಸುವರ್ಣದಿಂದ ತಯಾರಾದ ಹಾಸುಗೆ, ಅಮೂಲ್ಯ ಆಭೂಷಣ, ಸುಂದರವಾದ ಹವಳಗಳು, ತರತರದ ಮಣಿಗಳು, ರತ್ನ, ಸ್ವರ್ಣಪಾತ್ರೆ, ಕಲಶ, ಗಡಿಗೆ, ವಿಚಿತ್ರ ಕಟಾಹ, ಸಾವಿರಾರು ಜಲಪಾತ್ರೆ, ಬೆಳ್ಳಿಯಪಾತ್ರೆ, ಹದಿನಾಲ್ಕು ಸ್ವರ್ಣಮಯ ಚಾಟಿ, ಸ್ವರ್ಣಮಯ ಕಮಲಪುಷ್ಪ, ಮಣಿಖಚಿತ ಪಲ್ಲಕಿ ಗಳು, ಬೆಲೆಬಾಳುವ ಕಿರೀಟ, ಸ್ವರ್ಣವರ್ಣದ ಕುಂಡಲಗಳು, ಚಿನ್ನದಿಂದ ಮಾಡಿದ ಹೂಗಳು, ಮಾಲೆಗಳು, ಚಂದ್ರನಂತಿರುವ ಉಜ್ವಲ ಶತಾವರ್ತ ಶಂಖ, ಶ್ರೇಷ್ಠ ಗಂಧ, ತರತರದ ಅತ್ಯಮೂಲ್ಯ ಪದಾರ್ಥಗಳು– ಇತ್ಯಾದಿಗಳನ್ನು ಕಾಣಿಕೆ ನೀಡಿದನು (ಸಭಾ 31/73). ಇವನು ರಾಕ್ಷಸರಾಜ ರಾವಣನ ತಮ್ಮನಾಗಿದ್ದನು (ವನ 148/13). ಇವನ ತಂದೆ ಮಹರ್ಷಿ ವಿಶ್ರವಾ ಮತ್ತು ತಾಯಿಯ ಹೆಸರು ಮಾಲಿನಿ (ವನ 275/8). ಇವನು ಶ್ರೀರಾಮನಿಗೆ ಶರಣಾಗತ ನಾದುದು (ವನ 283/46). ಶ್ರೀರಾಮನು ಇವನನ್ನು ಲಂಕೆಯ ರಾಜನಾಗಿಯೂ, ಲಕ್ಷ್ಮಣನ ಸಖನಾಗಿಯೂ ತನ್ನ ಸಚಿವನಾಗಿಯೂ ಮಾಡಿ ಕೊಂಡನು (ವನ 283/49). ಪ್ರಹಸ್ತನೊಂದಿಗೆ ಈತನ ಯುದ್ಧ (ವನ 285/14). ಇವನಿಂದ ಪ್ರಹಸ್ತನ ವಧೆ (ವನ 286/4). ಕುಬೇರನಿಂದ ಕಳುಹಲ್ಪಟ್ಟ ಜಲವನ್ನು ಈತ ಶ್ರೀರಾಮನಿಗೆ ಒಪ್ಪಿಸಿದುದು (ವನ 289/9–11). ಶ್ರೀರಾಮನ

ಮೂಲಕ ಲಂಕಾ ರಾಜ್ಯವನ್ನು ಪಡೆದುದು (ವನ 291/5). ಅಯೋಧ್ಯಾರಾಜ್ಯದಲ್ಲಿ ಅಭಿಷಿಕ್ತನಾದ ಮೇಲೆ, ಶ್ರೀರಾಮಚಂದ್ರನು ಪುಲಸ್ತ್ಯಕುಲನಂದನ ವಿಭೀಷಣನು ತನ್ನ ಮನೆಗೆ ಹಿಂತಿರುಗುವಂತೆ ಆಜ್ಞೆ ನೀಡಿದನು ಮತ್ತು ಕರ್ತವ್ಯದ ಶಿಕ್ಷಣವನ್ನಿತ್ತು, ಈತನನ್ನು ತುಂಬಾ ದುಃಖದಿಂದ ಬೀಳ್ಕೊಂಡನು (ವನ 291/67–68).

**ವಿಭೀಷಣಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/22).

**ವಿಭು** – ಶಕುನಿಯ ಸಹೋದರ. ತನ್ನ ನಾಲ್ವರು ಸಹೋದರರೊಂದಿಗೆ ಭೀಮಸೇನನ ಮೇಲೆ ಈತನ ಆಕ್ರಮಣ ಮತ್ತು ಆತನಿಂದ ಇವನ ಮರಣ (ದ್ರೋಣ 157/23–26).

**ವಿಭೂತಿ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/57).

**ವಿಭೂರಸಿ** – ಅದ್ಭುತನೆಂಬ ಅಗ್ನಿಯ ಪುತ್ರ (ವನ 222/26).

**ವಿಮಲತೀರ್ಥ** – ಒಂದು ಉತ್ತಮ ತೀರ್ಥ. ಇಲ್ಲಿ ಚಿನ್ನ ಮತ್ತು ಬೆಳ್ಳಿವರ್ಣದ ಮೀನುಗಳು ಕಾಣಸಿಗುತ್ತವೆ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯನು ಬೇಗನೆ ಇಂದ್ರಲೋಕವನ್ನು ಪಡೆಯುತ್ತಾನೆ ಮತ್ತು ಎಲ್ಲಾ ಪಾಪಗಳಿಂದ ಶುದ್ಧನಾಗಿ ಪರಮಗತಿಯನ್ನು ಪಡೆಯುತ್ತಾನೆ (ವನ 82/87–88).

**ವಿಮಲಪಿಂಡಕ** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/8).

**ವಿಮಲಾ** – ಸುರಭಿಪುತ್ರಿ ರೋಹಿಣಿಯ ಇಬ್ಬರು ಕನ್ಯೆಯರಲ್ಲಿ ಒಬ್ಬಳು. ಇನ್ನೊಬ್ಬಳ ಹೆಸರು ಅನಲಾ ಎಂದಾಗಿತ್ತು (ಆದಿ 66/67–68).

**ವಿಮಲಾಶೋಕತೀರ್ಥ** – ಒಂದು ತೀರ್ಥ. ಇಲ್ಲಿ ಬ್ರಹ್ಮಚರ್ಯಪಾಲನೆಯಿಂದ ಒಂದು ರಾತ್ರಿ ವಾಸಿಸಿದರೆ ಮನುಷ್ಯನು ಸ್ವರ್ಗದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/69–70).

**ವಿಮಲೋದಕಾ** – ಹಿಮಾಲಯದಲ್ಲಿ ಬ್ರಹ್ಮನ ಯಜ್ಞದಿಂದ ಪ್ರಕಟಗೊಂಡ ಸರಸ್ವತಿಯ ಹೆಸರು (ಶಲ್ಯ 38/29).

**ವಿಮುಖ** – ಒಬ್ಬ ಋಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/17).

**ವಿಮುಚ** – ದಕ್ಷಿಣ ದಿಶಾ ನಿವಾಸಿಯಾದ ಒಬ್ಬ ಪ್ರಾಚೀನ ಋಷಿ (ಶಾಂತಿ 208/28).

**ವಿಮೋಚನ** – ಕುರುಕ್ಷೇತ್ರದೊಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮತ್ತು ಆಚಮನ ಮಾಡಿ, ಕ್ರೋಧ ಮತ್ತು ಇಂದ್ರಿಯಗಳನ್ನು ವಶದಲ್ಲಿರಿಸಿಕೊಳ್ಳುವ ಮನುಷ್ಯ ಪ್ರತಿಗ್ರಹದಿಂದ ಹುಟ್ಟಿದ ಪಾಪದಿಂದ ಮುಕ್ತನಾಗುತ್ತಾನೆ (ವನ 83/161).

**ವಿಯಮ** – ರಾಕ್ಷಸನಾದ ಶತಶೃಂಗನ ಮೂವರು ಪುತ್ರರಲ್ಲಿ ಒಬ್ಬ. ಅಂಬರೀಷನ ಸೇನಾಪತಿಯಾದ ಸುದೇವನೊಂದಿಗೆ ಈತನು ಯುದ್ಧಮಾಡಿ ಅವನನ್ನು ಕೊಂದದ್ದು ಮತ್ತು ತಾನೂ ಅವನಿಂದ ವಧಿಸಲ್ಪಟ್ಟದ್ದು (ಶಾಂತಿ 98/11).

**ವಿರಜ** – ದ್ವಾರಕೆಯ ಒಂದು ಪ್ರಾಸಾದ. ಇದು ನಿರ್ಮಲವಾಗಿಯೂ ರಜೋಗುಣದ ಪ್ರಭಾವದಿಂದ ಶೂನ್ಯವಾಗಿಯೂ ಇತ್ತು. ಈ ಭವನ ಶ್ರೀಕೃಷ್ಣನ ಉಪಸ್ಥಾನಗೃಹ(ಮುಖ್ಯ ವಾಸದ ಸ್ಥಾನ)ವಾಗಿತ್ತು (ಸಭಾ 38/29).

**ವಿರಜಾ** – (1) ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಜನಿಸಿದ ಒಬ್ಬ ನಾಗ (ಆದಿ 35/13; ಉದ್ಯೋಗ 103/16).

(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 116/14). ಸಹೋದರರೊಡಗೂಡಿ, ಭೀಮಸೇನನೊಂದಿಗೆ ಈತನ ಯುದ್ಧ ಮತ್ತು ಆತನಿಂದ ವಧೆ (ದ್ರೋಣ 157/17–19).

(3) ಭಗವಾನ್ ನಾರಾಯಣನ ತೇಜಸ್ಸಿನಿಂದ ಹುಟ್ಟಿದ ಒಬ್ಬ ಮಾನಸಪುತ್ರ. ಇವನು ಭೂಮಿಯ ಮೇಲೆ ರಾಜ್ಯಭಾರ ಮಾಡುವ ಇಚ್ಛೆ ತೊರೆದು ಸನ್ಯಾಸಸ್ವೀಕರಿಸುವ ನಿಶ್ಚಯ ಮಾಡಿದನು. ಇವನ ಪುತ್ರನ ಹೆಸರು ಕೀರ್ತಿವಂತನೆಂದಾಗಿತ್ತು (ಶಾಂತಿ 59/88–90).

(4). ಕವಿಯ ಎಂಟು ಮಂದಿ ಪುತ್ರರಲ್ಲಿ ಒಬ್ಬ. ಇವನ ಏಳು ಸಹೋದರರ ಹೆಸರು – ಕವಿ, ಕಾವ್ಯ, ಧಿಷ್ಣು, ಶುಕ್ರಾಚಾರ್ಯ, ಭೃಗು, ಕಾಶೀ, ಉಗ್ರ. ಇವರು ಎಂಟು ಮಂದಿಯೂ ಪ್ರಜಾಪತಿಗಳಾಗಿದ್ದಾರೆ (ಅನು 85/132–134).

**ವಿರಸ** – ಕಾಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/16).

**ವಿರಾಜ** – ಇವನು ಭರತವಂಶದ ಮಹಾರಾಜ ಕುರುವಿನ ಮೊಮ್ಮಗ ಹಾಗೂ ಅವಿಕ್ಷಿತನ ಪುತ್ರನಾಗಿದ್ದನು (ಆದಿ 94/52).

**ವಿರಾಟ** – ಮತ್ಸ್ಯದೇಶದ ಶತ್ರುದಮನ ರಾಜ. ಈತ ಮರುದ್ಗಣಗಳ ಅಂಶದಿಂದ ಹುಟ್ಟಿದ್ದನು (ಆದಿ 67/82). ಇವನು ತನ್ನ ಪುತ್ರ ಉತ್ತರ ಹಾಗೂ ಶಂಖನೊಂದಿಗೆ ದ್ರೌಪದಿಯ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/8). ರಾಜಸೂಯ ದಿಗ್ವಿಜಯ ಕಾಲದಲ್ಲಿ ಈತ ಸಹದೇವನಿಂದ ಪರಾಜಯ ಹೊಂದಿದ್ದನು (ಸಭಾ 31/2). ಇವನು ಯುಧಿಷ್ಠಿರನ ರಾಜ ಸೂಯಯಜ್ಞಕ್ಕೆ ಆಗಮಿಸಿದ್ದನು (ಸಭಾ 44/20). ಇವನು ರಾಜಾ ಯುಧಿಷ್ಠಿರನಿಗೆ ಸ್ವರ್ಣ ಮಾಲೆಗಳಿಂದ ಅಲಂಕರಿಸಲ್ಪಟ್ಟ ಎರಡು ಸಾವಿರ ಮದ್ದಾನೆಗಳನ್ನು ಉಡುಗೊರೆಯಾಗಿ ಕೊಟ್ಟಿದ್ದನು (ಸಭಾ 52/26). ಯುಧಿಷ್ಠಿರನಿಗೆ ವಿಶೇಷ ಅಧಿಕಾರವನ್ನಿತ್ತು, ತನ್ನಲ್ಲಿ ವಿಶೇಷ ಗೌರವ ದೊಂದಿಗೆ ವಾಸಿಸುವಂತೆ ಈತ ವ್ಯವಸ್ಥೆ ಮಾಡಿ ದುದು (ವಿರಾಟ 7/16–17). ಇವನು ಭೀಮ ಸೇನನನ್ನು ತನ್ನ ಪಾಕಶಾಲಾಧ್ಯಕ್ಷನಾಗಿ ಮಾಡಿ ದುದು (ವಿರಾಟ 8/11–12). ಇವನ ಪ್ರೀತಿಯ ಹೆಂಡತಿಯ ಹೆಸರು ಸುಧೇಷ್ಣೆ ಎಂದಾಗಿತ್ತು (ವಿರಾಟ 9/6). ಸಹದೇವನನ್ನು ತನ್ನಲ್ಲಿ ಗೋಶಾಲಾಧ್ಯಕ್ಷನ ಸ್ಥಾನದಲ್ಲಿರಿಸಿದುದು (ವಿರಾಟ 10/15). ಬೃಹನ್ನಲಾ ಎಂಬ ಹೆಸರಿನ ಅರ್ಜುನನ ನಪುಂಸಕತ್ವದ ಪರೀಕ್ಷೆ ಮಾಡಿಸಿ, ಅವನನ್ನು ಅಂತಃಪುರದಲ್ಲಿ ಇರಗೊಡಿಸಿದುದು (ವಿರಾಟ 11/10–11). ಇವನ ಪುತ್ರಿಯ ಹೆಸರು ಉತ್ತರೆ ಯೆಂದಾಗಿತ್ತು. ಆಕೆಗೆ ಅರ್ಜುನನು ಗೀತ, ವಾದ್ಯ ಮತ್ತು ನೃತ್ಯಕಲೆಯ ಶಿಕ್ಷಣವನ್ನಿತ್ತಿದ್ದನು (ವಿರಾಟ 11/12–13). ನಕುಲನನ್ನು ಅಶ್ವಶಾಲಾಧ್ಯಕ್ಷ ಪದ ದಲ್ಲಿ ನೇಮಿಸಿದುದು (ವಿರಾಟ 12/9). ದ್ರೌಪದಿಯು ನಿಂದಿಸಿ, ಆಕ್ಷೇಪಿಸಿದಾಗ ಆಕೆಗೆ ಉತ್ತರವಿತ್ತದ್ದು (ವಿರಾಟ 16/35). ವಿರಾಟನ ಮೊದಲನೆಯ ರಾಣಿ ಕೋಶಲದೇಶದ ರಾಜ ಕುಮಾರಿ ಸುರಥಾ ಆಗಿದ್ದಳು. ಅವಳು ಶ್ವೇತನ ತಾಯಿ. ಆಕೆಯ ಮರಣಾನಂತರ ರಾಜನು ಸೂತಪುತ್ರಿ ಕೇಕಯ ಕುಮಾರಿ ಸುಧೇಷ್ಣೆಯನ್ನು ವಿವಾಹವಾಗಿದ್ದನು. ಈಕೆಯ ಜ್ಯೇಷ್ಠ ಪುತ್ರ ಶಂಖ ಮತ್ತು ಕಿರಿಯ ಪುತ್ರ ಉತ್ತರ. ಇವರಿಬ್ಬರಿಗಿಂತ ಕಿರಿಯವಳಾಗಿ ಉತ್ತರೆ ಎಂಬ ಮಗಳಿದ್ದಳು (ವಿರಾಟ 16/51). ಕೆಲವು ಕಡೆಗಳಲ್ಲಿ ಇವನಿಗೆ ಹತ್ತುಮಂದಿ ಸಹೋದರ ರೆಂಬ ಉಲ್ಲೇಖ ದೊರಕುತ್ತದೆ (ವಿರಾಟ 16/51). ದ್ರೌಪದಿಯನ್ನು ಉರಿಸಲು ಉಪಕೀಚಕರಿಗೆ ಅನುಮತಿಯನ್ನಿತ್ತದ್ದು (ವಿರಾಟ 23/8). ಕೀಚಕ ಮತ್ತು ಉಪಕೀಚಕರ ದಾಹಸಂಸ್ಕಾರಕ್ಕೆ ಅಪ್ಪಣೆ ಯನ್ನಿತ್ತದ್ದು (ವಿರಾಟ 24/6–7). ದ್ರೌಪದಿ ಅರಮನೆಯಿಂದ ಹೊರಹೋಗುವಂತೆ ಸುಧೇಷ್ಣೆಯ ಮೂಲಕ ಸಂದೇಶ ತಿಳಿಸಿದುದು (ವಿರಾಟ 24/9–10). ಇವನ ಸಹೋದರರ ಹೆಸರು ಶತಾನೀಕ ಮತ್ತು ಮದಿರಾಕ್ಷ ಎಂದಾಗಿತ್ತು. ಶತಾನೀಕನ ಇನ್ನೊಂದು ಹೆಸರು ಸೂರ್ಯದತ್ತ. ಇವನು ಸೇನಾಪತಿಯಾಗಿದ್ದನು. ಮದಿರಾಕ್ಷ 'ವಿಶಾಲಾಕ್ಷ' ಎಂದೂ ಕರೆಯಲ್ಪಡುತ್ತಿದ್ದನು. ಇವರಿಬ್ಬರೂ ಮಹಾರಥಿಗಳಾಗಿದ್ದರು (ವಿರಾಟ 31/11–12, 15, 20, 24; ವಿರಾಟ 32/19). ಇವನಿಂದ ಸುಧೇಷ್ಣೆಯಲ್ಲಿ ಹುಟ್ಟಿದ ಜ್ಯೇಷ್ಠ ಪುತ್ರನ ಹೆಸರು ಶಂಖನೆಂದಾಗಿತ್ತು (ವಿರಾಟ 31/16). ಗೋಹರಣ ಸಂದರ್ಭದಲ್ಲಿ ಸುಶರ್ಮ ನೊಂದಿಗೆ ಇವನ ದ್ವಂದ್ವಯುದ್ಧ (ವಿರಾಟ 32/23–30). ಸುಶರ್ಮನು ಇವನನ್ನು ಜೀವಂತ ಬಂಧಿಸಿದುದು (ವಿರಾಟ 33/7–8). ಸುಶರ್ಮನ ರಥದಿಂದ ಜಿಗಿದು, ಅವನ ಗದೆಯನ್ನೆತ್ತಿಕೊಂಡು, ಅವನ ಕಡೆಗೆ ಈತ ಓಡಿದುದು (ವಿರಾಟ 33/42). ಯುದ್ಧದಿಂದ ಬಿಡುಗಡೆಯಾದ ಬಳಿಕ ಪಾಂಡವರಿಗೆ ಈತನಿಂದ ಸನ್ಮಾನ (ವಿರಾಟ 34/4–13). ಪಟ್ಟಣದಲ್ಲಿ ವಿಜಯ ಘೋಷಣೆ ಮಾಡಲು ದೂತರನ್ನು ಕಳುಹಿಸುವುದು (ವಿರಾಟ 34/17). ಉತ್ತರನ ಕುರಿತಾಗಿ ಈತನ ಚಿಂತೆ (ವಿರಾಟ 68/10–14). ಇವನಿಂದ ಯುಧಿಷ್ಠಿರನ ತಿರಸ್ಕಾರ (ವಿರಾಟ 68/46). ಇವನು ಯುಧಿಷ್ಠಿರನಲ್ಲಿ ಕ್ಷಮೆ ಯಾಚಿಸಿದುದು (ವಿರಾಟ 68/62). ಉತ್ತರನೊಡನೆ ಯುದ್ಧದ ಸಮಾಚಾರ ಕೇಳಿದುದು (ವಿರಾಟ 68/68–76). ಪಾಂಡವರ ಸತ್ಕಾರ ಮತ್ತು ಅರ್ಜುನನೊಂದಿಗೆ ಉತ್ತರೆಯ ವಿವಾಹ ಮಾಡುವುದಕ್ಕೋಸ್ಕರ ಯುಧಿಷ್ಠಿರನಲ್ಲಿ ಈತ ಪ್ರಸ್ತಾಪಿಸಿದುದು (ವಿರಾಟ 71/32–34). ಇವನು ತನ್ನ ಸೇನೆಯೊಂದಿಗೆ ಯುಧಿಷ್ಠಿರನ ಸಹಾಯಕ್ಕಾಗಿ ಬಂದದ್ದು (ಉದ್ಯೋಗ 19/12). ಯುಧಿಷ್ಠಿರನ ಏಳು ಮಂದಿ ಪ್ರಮುಖ ಸೇನಾ

ಪತಿಗಳಲ್ಲಿ ಈತನೂ ಒಬ್ಬನಾಗಿದ್ದನು (ಉದ್ಯೋಗ 157/11-14). ಉಲೂಕನಲ್ಲಿ ದುರ್ಯೋಧನನ ಸಂದೇಶಕ್ಕೆ ಉತ್ತರವನ್ನಿತ್ತದ್ದು (ಉದ್ಯೋಗ 163/41). ಪ್ರಥಮ ದಿನದ ಯುದ್ಧದಲ್ಲಿ ಭಗದತ್ತನೊಂದಿಗೆ ಈತನ ದ್ವಂದ್ವಯುದ್ಧ (ಭೀಷ್ಮ 45/49-51). ಭೀಷ್ಮನ ಮೇಲೆ ಆಕ್ರಮಣ (ಭೀಷ್ಮ 73/1). ದ್ರೋಣಾಚಾರ್ಯನೊಂದಿಗೆ ಯುದ್ಧ ಮತ್ತು ಶಂಖನು ವಧಿಸಲ್ಪಟ್ಟಾಗ ಈತನ ಪಲಾಯನ (ಭೀಷ್ಮ 82/14-24). ಅಶ್ವತ್ಥಾಮನೊಂದಿಗೆ ಇವನ ದ್ವಂದ್ವಯುದ್ದ (ಭೀಷ್ಮ 110/16; ಭೀಷ್ಮ 111/22-27). ಜಯದ್ರಥನೊಂದಿಗೆ ದ್ವಂದ್ವಯುದ್ಧ (ಭೀಷ್ಮ 116/42-44). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/71). ಇವನ ಕುದುರೆಗಳ ವರ್ಣನೆ (ದ್ರೋಣ 23/14). ವಿಂದ ಅನುವಿಂದರೊಂದಿಗೆ ಯುದ್ಧ (ದ್ರೋಣ 25/20-21; ದ್ರೋಣ 94/4-6). ಶಲ್ಯನೊಂದಿಗೆ ಯುದ್ಧದಲ್ಲಿ ಮೂರ್ಛಿತನಾದುದು (ದ್ರೋಣ 167/34). ದ್ರೋಣಾಚಾರ್ಯನಿಂದ ಈತನ ವಧೆ (ದ್ರೋಣ 186/43). ಇವನು ವಧಿಸಲ್ಪಟ್ಟ ವರ್ಣನೆ (ಕರ್ಣ 6/6). ಇವನ ಶವದ ದಹನ ಸಂಸ್ಕಾರ (ಸ್ತ್ರೀ 26/33). ಯುಧಿಷ್ಠಿರನಿಂದ ಇವನ ಶ್ರಾದ್ಧಕರ್ಮ (ಶಾಂತಿ 42/4). ಸ್ವರ್ಗಕ್ಕೆ ಹೋದಾಗ ಈತ ಮರುದ್ಗಣಗಳಲ್ಲಿ ಸೇರಿಕೊಂಡನು (ಸ್ವರ್ಗಾ 5/15). ಮಹಾಭಾರತದಲ್ಲಿ ಬಂದಿರುವ ವಿರಾಟನ ಹೆಸರುಗಳು- ಮತ್ಸ್ಯ, ಮತ್ಸ್ಯಪತಿ, ಮತ್ಸ್ಯರಾಟ್, ಮತ್ಸ್ಯರಾಜ ಇತ್ಯಾದಿ.

**ವಿರಾಟನಗರ** – ಮತ್ಸ್ಯದೇಶದ ರಾಜಧಾನಿ. ಇದರ ಮೇಲೆ ತ್ರಿಗರ್ತರೂ ಕೌರವರೂ ಆಕ್ರಮಣ ಮಾಡಿದ್ದರು (ವಿರಾಟ 30/23).

**ವಿರಾಟಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ವಿರಾಧ** – ಕ್ರೂರಕರ್ಮಿಯಾದ ಒಬ್ಬ ರಾಕ್ಷಸ. ಈತ ಶಾಪಗ್ರಸ್ತ ಗಂಧರ್ವನಾಗಿದ್ದನು. ಭಗವಂತ ಶ್ರೀರಾಮನಿಂದ ಇವನ ವಧೆ (ಸಭಾ 38/29).

**ವಿರಾವ** – ಇಲ್ವಲನಿಂದ ಅಗಸ್ತ್ಯರಿಗೆ ಕೊಡಲ್ಪಟ್ಟ ರಥಕ್ಕೆ ಹೂಡಲ್ಪಟ್ಟ ಒಂದು ಕುದುರೆಯ ಹೆಸರು. ಇನ್ನೊಂದರ ಹೆಸರು ಸುರಾವ (ವನ 99/17).

**ವಿರಾವೀ** – ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/104; ಆದಿ 116/13).

**ವಿರೂಪ** – (1) ಒಬ್ಬ ಅಸುರ. ಇವನು ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟಿದ್ದನು (ಸಭಾ 38/29). (2) ಬೇರೆ ಹೆಸರು ಮತ್ತು ರೂಪಧಾರಣೆ ಮಾಡಿ ಬಂದಿರುವ ಕ್ರೋಧ. ರಾಜಾ ಇಕ್ಷ್ವಾಕುವಿನೊಡನೆ ಈತನ ಸಂವಾದ ನಡೆದಿತ್ತು (ಶಾಂತಿ 199/88-117).

(3) ಅಂಗೀರಸನ ಎಂಟು ಪುತ್ರರಲ್ಲಿ ಒಬ್ಬ. ಇವನ ಏಳು ಮಂದಿ ಸಹೋದರರ ಹೆಸರು- ಬೃಹಸ್ಪತಿ, ಉತಥ್ಯ, ಪಯಸ್ಯ, ಶಾಂತಿ, ಘೋರ, ಸಂವರ್ತ ಮತ್ತು ಸುಧನ್ವಾ. ಇವರೆಲ್ಲರೂ ವಾರುಣರೆಂದೂ, ಆಗ್ನೇಯರೆಂದೂ ಕರೆಯಲ್ಪಡುತ್ತಾರೆ (ಅನು 85/130-131).

**ವಿರೂಪಕ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಪ್ರಾಚೀನಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಅದನ್ನು ಬಿಟ್ಟು ಮೃತನಾದನು (ಶಾಂತಿ 227/51).

**ವಿರೂಪಾಕ್ಷ** – (1) ದನುವಿನ ಸುಪ್ರಸಿದ್ಧ ಮೂವತ್ತನಾಲ್ಕು ಪುತ್ರರಲ್ಲಿ ಒಬ್ಬ. ಇವನ ತಂದೆಯ ಹೆಸರು ಕಶ್ಯಪ (ಆದಿ 65/21-26). ಇವನೇ ರಾಜಾ ಚಿತ್ರವರ್ಮನಾಗಿ ಹುಟ್ಟಿದ್ದನು (ಆದಿ 67/22-23).

(2) ನರಕಾಸುರನ ಅನುಯಾಯಿಯಾದ ಒಬ್ಬ ಅಸುರ. ಇವನು ಔದಕಾದೊಳಗಿರುವ ಲೋಹಿತ ಗಂಗೆಯ ಮಧ್ಯದಲ್ಲಿ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು (ಸಭಾ 38/29).

(3) ಒಬ್ಬ ರಾಕ್ಷಸ. ಈತನೊಂದಿಗೆ ವಾನರರಾಜ ಸುಗ್ರೀವ ಯುದ್ಧ ಮಾಡಿದ್ದನು (ವನ 285/9).

(4) ಒಬ್ಬ ರಾಕ್ಷಸ. ಈತ ಘಟೋತ್ಕಚನ ಸಾರಥಿಯಾಗಿದ್ದನು (ದ್ರೋಣ 175/15).

(5) ಒಬ್ಬ ರಾಕ್ಷಸ ರಾಜ. ಇವನು ರಾಜಧರ್ಮಾ ಎಂಬ ಬಕನ ಗೆಳೆಯನಾಗಿದ್ದನು (ಶಾಂತಿ 170/15). ಇವನಿಂದ ಗೌತಮನೆಂಬ ಬ್ರಾಹ್ಮಣನ ಸ್ವಾಗತ (ಶಾಂತಿ 170/21). ಗೌತಮನೊಂದಿಗೆ ಇವನ ಮಾತುಕತೆ ಮತ್ತು ಆತನಿಗೆ ಧನವನ್ನಿತ್ತದ್ದು (ಶಾಂತಿ 171/2-22). ರಾಜಧರ್ಮಾನ ಕುರಿತು ಯೋಚನೆಗೀಡಾಗಿ, ಅವನನ್ನು ಹುಡುಕಲು ತನ್ನ ಪುತ್ರನನ್ನು ಕಳುಹಿಸಿದುದು (ಶಾಂತಿ 172/5-11). ಗೌತಮನನ್ನು ಕೊಲ್ಲಲು ಆಜ್ಞೆ

ಮನುಷ್ಯ ಪುತ್ರಾಪೇಕ್ಷಿಯಾದರೆ, ಅವನು ಬಹು ಸಂಖ್ಯೆಯಲ್ಲಿ ಪುತ್ರರನ್ನು ಪಡೆಯುತ್ತಾನೆ (ಅನು 89/8). ಚಾಂದ್ರವ್ರತದಲ್ಲಿ ವಿಶಾಖೆಯನ್ನು ಎರಡೂ ಭುಜಗಳಲ್ಲಿ ಸ್ಥಾಪಿಸಿ ಪೂಜಿಸುವ ಕ್ರಮವಿದೆ (ಅನು 110/6).

**ವಿಶಾಲಕ** – ಒಬ್ಬ ಯಕ್ಷ. ಇವನು ಕುಬೇರನ ಸಭೆಯಲ್ಲಿರುತ್ತಾ ಆತನ ಸೇವೆಮಾಡುತ್ತಾನೆ (ಸಭಾ 10/16).

**ವಿಶಾಲಾ** – (1) ಈಕೆ ಸೋಮವಂಶದ ಮಹಾರಾಜ ಅಜಮೀಢನ ಪತ್ನಿಯಾಗಿದ್ದಳು (ಆದಿ 95/37).

(2) ಗಯ ದೇಶದಲ್ಲಿ ರಾಜಾಗಯನ ಯಜ್ಞದಲ್ಲಿ ಪ್ರಕಟಗೊಂಡ ಸರಸ್ವತಿಯ ಹೆಸರು (ಶಲ್ಯ 38/20–21).

**ವಿಶಾಲಾಪುರಿ** – ಶ್ರೀಹರಿಯ ಪುಣ್ಯಮಯ ಪಟ್ಟಣ. ಇದು ಬದರೀವನದ ಸಮೀಪದಲ್ಲಿದೆ. ಇದು ನರನಾರಾಯಣರ ಆಶ್ರಮವಾಗಿದೆ. ಇದನ್ನು ಬದರಿಕಾಶ್ರಮವೆನ್ನುತ್ತಾರೆ (ವನ 90/24–25). ವಿಶಾಲಾದಲ್ಲಿ ತರ್ಪಣ ಕೊಡುವುದರಿಂದ ಮನುಷ್ಯ ಬ್ರಹ್ಮರೂಪನಾಗುತ್ತಾನೆ (ಅನು 25/44). (ವಿಶೇಷ ನೋಡಿರಿ – ಬದರಿಕಾ ಅಥವಾ ಬದರಿ.)

**ವಿಶಾಲಾಕ್ಷ** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/101; ಆದಿ 116/10). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ವಧೆ (ಭೀಷ್ಮ 88/15–26).

(2) ವಿರಾಟನ ತಮ್ಮ. ಇವನನ್ನು ಮದಿರಾಕ್ಷನೆಂದೂ ಕರೆಯುತ್ತಾರೆ (ವಿರಾಟ 32/19).

(3) ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/9).

**ವಿಶಾಲಕ್ಷೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/3).

**ವಿಶಿರಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/29).

**ವಿಶುಂಡೀ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/16).

**ವಿಶೋಕ** – (1) ಭೀಮಸೇನನ ಸಾರಥಿ (ಸಭಾ 33/30). ಯುದ್ಧದಲ್ಲಿ ದೃಢವಾಗಿರುವಂತೆ ಈತನಿಗೆ ಭೀಮಸೇನನ ಆದೇಶ (ಭೀಷ್ಮ 64/14). ಧೃಷ್ಟದ್ಯುಮ್ನನು ಕೇಳಿದಾಗ ಯುದ್ಧಸ್ಥಳದಲ್ಲಿ ಭೀಮನ ಇರವನ್ನು ತಿಳಿಸಿದುದು (ಭೀಷ್ಮ 77/21–25). ಭಗದತ್ತನ ಪ್ರಹಾರದಿಂದ ಮೂರ್ಚ್ಛಿತನಾದುದು (ಭೀಷ್ಮ 95/76). ಭೀಮಸೇನನೊಂದಿಗೆ ವಾರ್ತಾಲಾಪ (ಕರ್ಣ 76 ಅಧ್ಯಾಯ).

(2) ಒಬ್ಬ ಕೇಕಯ ರಾಜಕುಮಾರ. ಇವನು ಕರ್ಣನಿಂದ ಕೊಲ್ಲಲ್ಪಟ್ಟನು (ದ್ರೋಣ 82/3).

**ವಿಶೋಕಾ** – (1) ಶ್ರೀಕೃಷ್ಣನ ಒಬ್ಬಳು ಪತ್ನಿ (ಸಭಾ 38/29).

(2) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/5).

**ವಿಶ್ರವಾ** – ಒಬ್ಬ ಮುನಿ. ಇವನು ಕುಬೇರನ ತಂದೆ (ಸಭಾ 10/2). ಕುಬೇರನಲ್ಲಿ ಕೋಪಗೊಂಡ ಪುಲಸ್ತ್ಯ ತನ್ನನ್ನು ತಾನೇ ಇನ್ನೊಂದು ರೂಪದಲ್ಲಿ ಪ್ರಕಟಗೊಳಿಸಿದನು. ಪುಲಸ್ತ್ಯನ ಅರ್ಧಶರೀರದಿಂದ ಪ್ರಕಟಗೊಂಡ ಬ್ರಾಹ್ಮಣನ ಹೆಸರು 'ವಿಶ್ರವಾ' ಎಂದಾಯಿತು (ವನ 274/13–14). ಕುಬೇರನು ತಂದೆಯಾದ ವಿಶ್ರವಾನ ಸೇವೆಗೋಸ್ಕರ ಮೂವರು ಸುಂದರಿಯರಾದ ರಾಕ್ಷಸಕನ್ಯೆಯರನ್ನು ನೇಮಕಗೊಳಿಸಿದನು. ಅವರ ಹೆಸರು: ಪುಷ್ಪೋತ್ಕಟಾ, ರಾಕಾ ಮತ್ತು ಮಾಲಿನಿ (ವನ 275/3–5). ಈತನಿಂದ ಪುಷ್ಪೋತ್ಕಟೆಯಲ್ಲಿ ರಾವಣ ಮತ್ತು ಕುಂಭಕರ್ಣರು, ರಾಕೆಯಿಂದ ಖರ ಮತ್ತು ಶೂರ್ಪಣಖೆಯರು ಮತ್ತು ಮಾಲಿನಿಯಿಂದ ವಿಭೀಷಣನ ಜನ್ಮವಾಯಿತು (ವನ 275/7–8).

**ವಿಶ್ರವಾ** (ಆಶ್ರಮ) – ಆನರ್ತದೇಶದ ಎಲ್ಲೆಯೊಳಗೆ ಅಂತರ್ಗತವಾದ ಒಂದು ತೀರ್ಥ. ಇಲ್ಲಿ ನರವಾಹನ ಕುಬೇರನ ಜನನವಾಗಿತ್ತು (ವನ 89/5).

**ವಿಶ್ವ** – ಒಬ್ಬ ಕ್ಷತ್ರಿಯ ರಾಜ. ಇವನು ಮಯೂರನೆಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/36).

**ವಿಶ್ವಕರ್ಮಾ (ತ್ವಷ್ಟಾ)** – ದೇವತೆಗಳ ಶಿಲ್ಪಿ. ಎಂಟನೆಯ ವಸುವಾದ ಪ್ರಭಾಸನ ಪುತ್ರ. ಬೃಹಸ್ಪತಿಯ ಬ್ರಹ್ಮವಾದಿನಿ ಸಹೋದರಿಯಾಗಿದ್ದು ಯೋಗದಲ್ಲಿ ತತ್ಪರಳಾಗಿ, ಸಂಪೂರ್ಣ ಜಗತ್ತಿನ ಮೇಲೆ ಅನಾಸಕ್ತಭಾವದಿಂದಿದ್ದು, ಸುತ್ತುತ್ತಿದ್ದ

ವಳು, ಇವನ ತಾಯಿಯಾಗಿದ್ದಳು (ಆದಿ 66/26–28). ಇಂದ್ರಪ್ರಸ್ಥ ನಗರ ನಿರ್ಮಾಣ ಮಾಡಲು ಈತನಿಗೆ ಇಂದ್ರನ ಆದೇಶ ಮತ್ತು ಇವನಿಂದ ಆ ನಗರದ ನಿರ್ಮಾಣ (ಆದಿ 206/25). ಬ್ರಹ್ಮನ ಆದೇಶ ಪ್ರಕಾರ ಇವನಿಂದ ತಿಲೋತ್ತಮೆಯ ನಿರ್ಮಾಣ (ಆದಿ 210/11–19). ಇವನು ಒಬ್ಬ ಮಹರ್ಷಿಯ ರೂಪದಲ್ಲಿ ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/14). ಇವನು ಯಮಸಭೆಯನ್ನು ನಿರ್ಮಿಸಿದ್ದಾನೆ (ಸಭಾ 8/34). ಇವನು ವರುಣಸಭೆಯನ್ನು ನೀರಿನೊಳಗಿದ್ದು ನಿರ್ಮಿಸಿದ್ದಾನೆ (ಸಭಾ 9/2). ಇವನು ಬ್ರಹ್ಮಸಭೆಯಲ್ಲಿರುತ್ತಾ ಆತನ ಸೇವೆ ಮಾಡುತ್ತಾನೆ (ಸಭಾ 11/31). ಇವನು ಬ್ರಹ್ಮನ ವನದಲ್ಲಿ ಯಜ್ಞಮಾಡಿದ್ದನು (ವನ 114/17). ಇವನಿಂದಲೇ ಪುಷ್ಪಕ ವಿಮಾನದ ನಿರ್ಮಾಣ ವಾಗಿದೆ (ವನ 161/37). ನಲನೆಂಬ ವಾನರ ಇವನ ಪುತ್ರನಾಗಿದ್ದನು (ವನ 283/41). ಅರ್ಜುನನ ರಥದ ಧ್ವಜ ಏನಾಗಿತ್ತು? ಅದು ವಿಶ್ವಕರ್ಮವಿರಚಿತ ದಿವ್ಯಮಾಯೆಯಾಗಿತ್ತು (ವಿರಾಟ 46/3–4). ಇಂದ್ರನ ವಿರುದ್ಧವಾಗಿ, ದ್ರೋಹಭಾವದಿಂದ, ಇವನು ಮೂರು ಶಿರಗಳಿರುವ ಒಬ್ಬ ಪುತ್ರನನ್ನು ಸೃಷ್ಟಿಸಿದ್ದನು. ಅವನ ಹೆಸರು ವಿಶ್ವರೂಪನೆಂದಾಗಿತ್ತು (ಉದ್ಯೋಗ 9/3–4). ವಿಶ್ವರೂಪನು ಕೊಲ್ಲಲ್ಪಟ್ಟಾಗ, ದೇವೇಂದ್ರನ ಮೇಲೆ ಪ್ರತಿಕಾರಕ್ಕಾಗಿ, ಇವನು ವೃತ್ರಾಸುರನನ್ನು ಸೃಷ್ಟಿಸಿದನು (ಉದ್ಯೋಗ 9/45–48). ಇವನು ಇಂದ್ರನಿಗಾಗಿ ವಿಜಯವೆಂಬ ಧನುಸ್ಸನ್ನು ರಚಿಸಿದ್ದನು (ಕರ್ಣ 31/42). ತ್ರಿಪುರ ದಹನ ಕಾಲದಲ್ಲಿ ಭಗವಾನ್ ಶಿವನಿಗಾಗಿ ಈತನೇ ದಿವ್ಯರಥ ನಿರ್ಮಾಣ ಮಾಡಿದ್ದನು (ಕರ್ಣ 34/16–17) (ವಿಶೇಷ ನೋಡಿರಿ – ತ್ವಷ್ಟಾ.)

**ವಿಶ್ವಕೃತ್** – ಒಬ್ಬ ಸನಾತನ ವಿಶ್ವೇದೇವ (ಅನು 91/36).

**ವಿಶ್ವಜಿತ್** – (1) ಬೃಹಸ್ಪತಿಯ ಮೂರನೇ ಮಗ. ಇವನು ಸಮಸ್ತ ವಿಶ್ವದ ಬುದ್ಧಿಯನ್ನು ತನ್ನ ವಶದಲ್ಲಿರಿಸಿಕೊಂಡಿದ್ದಾನೆ. ಆದುದರಿಂದಲೇ ಅಧ್ಯಾತ್ಮಶಾಸ್ತ್ರದ ವಿದ್ವಾಂಸರು ಇವನನ್ನು ವಿಶ್ವಜಿತ್ ಎಂದಿದ್ದಾರೆ (ವನ 219/16).

(2) ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಪೂರ್ವಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಇದನ್ನು ಬಿಟ್ಟು ಮೃತನಾದನು (ಶಾಂತಿ 227/53).

**ವಿಶ್ವದಂಷ್ಟ್ರ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಪೂರ್ವಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಇದನ್ನು ಬಿಟ್ಟು ಮೃತಿಯನ್ನೈದಿದನು (ಶಾಂತಿ 227/52).

**ವಿಶ್ವಪತಿ** – ಮನುವೆಂಬ ಅಗ್ನಿಯ ದ್ವಿತೀಯ ಪುತ್ರ. ಇವನು ವೇದಗಳಲ್ಲಿ ಸಂಪೂರ್ಣ ವಿಶ್ವದ ಸ್ವಾಮಿಯೆಂದು ಹೇಳಲ್ಪಟ್ಟಿದ್ದಾನೆ. ಇವನ ಪ್ರಭಾವದಿಂದ ಹವಿಸ್ಸಿನ ಆಹುತಿಕ್ರಿಯೆಯು ಪರಿಪೂರ್ಣಗೊಳ್ಳುತ್ತದೆ. ಆದುದರಿಂದ ಈತ ಸ್ವಿಷ್ಟಕೃತ್ (ಉತ್ತಮ ಅಭೀಷ್ಟವನ್ನು ಪೂರ್ಣಗೊಳಿಸುವವ) ಎಂದು ಕರೆಯಲ್ಪಡುತ್ತಾನೆ (ವನ 221/17–18).

**ವಿಶ್ವಭುಕ್** – (1) ಪಾಂಡವ ರೂಪದಲ್ಲಿ ಹುಟ್ಟಿದ ಐದು ಮಂದಿ ಇಂದ್ರರಲ್ಲಿ ಒಬ್ಬ. ಉಳಿದ ನಾಲ್ಕು ಮಂದಿಯ ಹೆಸರು– ಭೂತಧಾಮಾ, ಶಿಬಿ, ಶಾಂತಿ ಮತ್ತು ತೇಜಸ್ವಿ ಎಂದಾಗಿತ್ತು (ಆದಿ 196/29).

(2) ಬೃಹಸ್ಪತಿಯ ನಾಲ್ಕನೆಯ ಮಗ. ಇವನು ಸಮಸ್ತ ಪ್ರಾಣಿಗಳನ್ನು ಉದರದಲ್ಲಿದ್ದುಕೊಂಡು, ಅವರು ತಿಂದ ಪದಾರ್ಥಗಳನ್ನು ಜೀರ್ಣಿಸುತ್ತಾನೆ. ಪಾಕಯಜ್ಞಗಳಲ್ಲಿ ಇವನ ಪೂಜೆಯೇ ನಡೆಯುತ್ತದೆ. ಇವನ ಪತ್ನಿ ಗೋಮತೀ ನದಿ (ವನ 219/17–19).

**ವಿಶ್ವರುಚಿ** – ಒಬ್ಬ ಗಂಧರ್ವರಾಜ. ಇವನು ಪೃಥ್ವೀದೋಹನ ಕಾಲದಲ್ಲಿ ಹಾಲು ಕರೆಯುವವನಾಗಿದ್ದನು (ದ್ರೋಣ 69/25).

**ವಿಶ್ವರೂಪ** – (1) ಒಬ್ಬ ರಾಕ್ಷಸ. ಈತ ವರುಣ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 9/14).

(2) ತ್ರಿಶಿರಾ, ಇವನು ತ್ವಷ್ಟಾನ ಪುತ್ರ ಮತ್ತು ದೇವತೆಗಳ ಪುರೋಹಿತನಾಗಿದ್ದನು. ಇವನು ಅಸುರರ ಸಹೋದರಿಯ ಮಗನಾಗಿದ್ದನು. ಆದುದರಿಂದ ದೇವತೆಗಳಿಗೆ ಪ್ರತ್ಯಕ್ಷವಾಗಿಯೂ, ರಾಕ್ಷಸರಿಗೆ ಪರೋಕ್ಷರೂಪದಿಂದಲೂ ಯಜ್ಞ ಭಾಗವನ್ನು ಕೊಡುತ್ತಿದ್ದನು (ಉದ್ಯೋಗ 9/3–4; ಶಾಂತಿ 342/28). ಇವನನ್ನು ಪ್ರಲೋಭನ

ಗೊಳಿಸಲು ಅಪ್ಸರೆಯರ ಆಗಮನ, ಇವನು ಅವರ ಕಡೆಗೆ ಆಸಕ್ತನಾದುದು ಮತ್ತು ಅಪ್ಸರೆಯು ಇಂದ್ರನಲ್ಲಿ ಅನುರಕ್ತಳೆಂದು ತಿಳಿದು, ಇಂದ್ರಾದಿ ದೇವತೆಗಳ ಅಭಾವಕ್ಕಾಗಿ ಸಂಕಲ್ಪಮಾಡಿ ಮಂತ್ರ ಗಳನ್ನು ಜಪಿಸಿದುದು (ಶಾಂತಿ 342/32–34). ಇವನು ತನ್ನ ಒಂದು ಮುಖದಿಂದ ಪ್ರಪಂಚದ ಎಲ್ಲಾ ಕ್ರಿಯಾನಿಷ್ಠ ಬ್ರಾಹ್ಮಣರಿಂದ ಯಜ್ಞಗಳಲ್ಲಿ ಹೋಮಿಸಲ್ಪಟ್ಟ ಸೋಮರಸವನ್ನು ಕುಡಿಯು ತ್ತಿದ್ದನು; ಇನ್ನೊಂದರಿಂದ ಅನ್ನ ಸೇವಿಸುತ್ತಿದ್ದನು ಮತ್ತು ಮೂರನೆಯದರಿಂದ ಇಂದ್ರಾದಿ ದೇವತೆ ಗಳ ತೇಜಸ್ಸನ್ನು ಕುಡಿಯುತ್ತಿದ್ದನು (ಶಾಂತಿ 342/34). ಇಂದ್ರನಿಂದ ಇವನ ವಧೆ (ಶಾಂತಿ 342/41) (ವಿಶೇಷ ನೋಡಿರಿ–ತ್ರಿಶಿರಾ.)

**ವಿಶ್ವಾ** – ದಕ್ಷಪ್ರಜಾಪತಿಯ ಒಬ್ಬ ಪುತ್ರಿ (ಆದಿ 65/12).

**ವಿಶ್ವಾಚೀ** – ಒಬ್ಬ ಅಪ್ಸರೆ. ಈಕೆ ಏಳು ಮಂದಿ ಪ್ರಧಾನ ಅಪ್ಸರೆಯರಲ್ಲಿ ಗಣಿಸಲ್ಪಟ್ಟಿದ್ದಾಳೆ (ಆದಿ 74/68). ಇವಳೊಂದಿಗೆ ರಾಜಾ ಯಯಾತಿಯ ವಿಹಾರ (ಆದಿ 75/48; ಆದಿ 85/9). ಇವಳು ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ಗಾಯನ ಮಾಡಿದ್ದಳು (ಆದಿ 122/65). ಇವಳು ಕುಬೇರನ ಸಭೆಗೆ ಬಂದು, ಅವನ ಸೇವೆಯಲ್ಲಿರು ತ್ತಾಳೆ (ಸಭಾ 10/11).

**ವಿಶ್ವಾಮಿತ್ರ** – (1) ಒಬ್ಬ ತಪಸ್ವೀ ಮಹರ್ಷಿ. ಇವನು ತನ್ನ ತಪಸ್ಸಿನಿಂದ ಇಂದ್ರನನ್ನು ಸಂತೃಪ್ತಗೊಳಿಸಿದ್ದನು (ಆದಿ 71/20). ಇವನು ಮತಂಗ ಋಷಿಯ ಯಜ್ಞ ಮಾಡಿಸಿದನು ಮತ್ತು ಮಹರ್ಷಿ ವಸಿಷ್ಠನು ತನ್ನ ಪ್ರೀತಿಯ ಪುತ್ರರಿಂದ ಎಂದೆಂದಿಗೂ ವಿಯೋಗಹೊಂದುವಂತೆ ಮಾಡಿ ದನು. ಕ್ಷತ್ರಿಯನಾದರೂ ಈತ ತಪೋಬಲದಿಂದ ಬ್ರಾಹ್ಮಣತ್ವವನ್ನು ಹೊಂದಿದನು. ತನ್ನ ಶೌಚ ಸ್ನಾನದ ಸೌಲಭ್ಯಕ್ಕಾಗಿ ಇವನಿಂದ ಕೌಶಿಕೀ ನದಿಯ ನಿರ್ಮಾಣ ಮಾಡಲ್ಪಟ್ಟಿತು ಮತ್ತು ಇವ ನಿಂದಲೇ ತ್ರಿಶಂಕುವಿಗೆ ಸ್ವರ್ಗಲಾಭವಾಯಿತು (ಆದಿ 71/27–39). ಇವನು ಮೇನಕೆಯ ಗರ್ಭದಿಂದ ಶಕುಂತಲೆಗೆ ಜನ್ಮವಿತ್ತನು (ಆದಿ 72/1–9). ಇವನು ಅರ್ಜುನನ ಜನ್ಮಕಾಲದಲ್ಲಿ ಆಗಮಿಸಿದ್ದನು (ಆದಿ 122/51). ಇವನು ಕಾನ್ಯಕುಬ್ಜದೇಶದ ಅಧಿಪತಿ ಕುಶಿಕಕುಮಾರ, ಮಹಾರಾಜ ಗಾಧಿಯ ಪುತ್ರನಾಗಿದ್ದನು (ಆದಿ 174/3–4). ವಸಿಷ್ಠನ ಆಶ್ರಮಕ್ಕೆ ಇವನ ಆಗಮನ (ಆದಿ 174/6). ನಂದಿನಿ(ಧೇನು)ಯ ಪ್ರಭಾವದಿಂದ ಮುನಿವರ ವಸಿಷ್ಠನ ಮೂಲಕ ಇವನಿಗೆ ಭವ್ಯ ಸ್ವಾಗತ (ಆದಿ 174/8–12). ಈತ ವಸಿಷ್ಠನೊಡನೆ ನಂದಿನಿಯನ್ನು ಯಾಚಿಸಿ ದುದು (ಆದಿ 174/16). ಇವನಿಂದ ವಸಿಷ್ಠನ ಕಾಮಧೇನುವಿನ ಅಪಹರಣ (ಆದಿ 174/22). ನಂದಿನಿಯ ಮೂಲಕ ಇವನ ಸಮಸ್ತ ಸೇನೆಯ ಪರಾಜಯ (ಆದಿ 174/32–43). ಇವನಿಂದ ವಸಿಷ್ಠನ ಮೇಲೆ ವಿವಿಧ ಅಸ್ತ್ರಗಳ ಪ್ರಹಾರ (ಆದಿ 174/43). ವಸಿಷ್ಠನ ಬ್ರಹ್ಮತೇಜಸ್ಸಿನಿಂದ ಪರಾಜಿತ ನಾಗಿ, ಇವನು ಕ್ಷತ್ರಬಲವನ್ನು ಧಿಕ್ಕರಿಸಿದುದು (ಆದಿ 174/44–45). ಉಗ್ರ ತಪಸ್ಸಿನ ಬಲದಿಂದ ಇವನಿಗೆ ಬ್ರಾಹ್ಮಣತ್ವ ಲಭಿಸಿದುದು (ಆದಿ 174/48). ಇವನ ಪ್ರೇರಣೆಯಿಂದ, ಶಾಪಗ್ರಸ್ತ ಕಲ್ಮಾಷಪಾದನ ಶರೀರದಲ್ಲಿ ಕಿಂಕರನೆಂಬ ರಾಕ್ಷಸನ ಪ್ರವೇಶ (ಆದಿ 175/21). ಇವನ ಪ್ರೇರಣೆಯಿಂದ, ರಾಕ್ಷಸರೂಪ ಹೊಂದಿದ್ದ ಕಲ್ಮಾಷಪಾದನ ಮೂಲಕ ವಸಿಷ್ಠನ ಸಮಸ್ತ ಪುತ್ರರ ಸಂಹಾರ (ಆದಿ 175/41). ಇವನು ಕೌಶಿಕಿಯ ದಡದಲ್ಲಿ ಬ್ರಾಹ್ಮಣ್ಯವನ್ನು ಪಡೆದನು (ವನ 87/13). ಇವನು ಉತ್ಪಲಾವನದಲ್ಲಿ ತನ್ನ ಪುತ್ರನೊಂದಿಗೆ ಯಜ್ಞಮಾಡಿದ್ದನು (ವನ 87/ 15). ಕಾನ್ಯಕುಬ್ಜ ದೇಶದಲ್ಲಿ ಇಂದ್ರನೊಂದಿಗೆ ಸೋಮಪಾನ ಮಾಡಿದನು. ಅಲ್ಲಿಯೇ ಈತ ಕ್ಷತ್ರಿಯತ್ವದಿಂದ ಮೇಲೇರಿದನು ಮತ್ತು ತನ್ನನ್ನು ಬ್ರಹ್ಮನೆಂದು ಘೋಷಿಸಿದನು (ವನ 87/17). ಇವನು ಕೌಶಿಕೀ ನದಿಯ ದಡದಲ್ಲಿ ತಪಸ್ಸು ಮಾಡಿದ್ದನು (ವನ 110/20). ಇವನ ಮೂಲಕ ಸ್ಕಂದನ ಹದಿಮೂರು ಸಂಸ್ಕಾರಗಳು ಪೂರೈಸ ಲ್ಪಟ್ಟವು (ವನ 226/13). ಈತನು ಮುನಿಪತ್ನಿ ಯರನ್ನು ನಿರಪರಾಧಿಗಳೆಂದು ಘೋಷಿಸಿದುದು (ವನ 226/16). ವಸಿಷ್ಠರೂಪಧಾರಿಯಾದ ಧರ್ಮನ ಭೋಜನವನ್ನು ತಲೆಯಮೇಲೆ ಹೊತ್ತುಕೊಂಡು ಈತ ನೂರು ವರ್ಷಗಳ ತನಕ ಅವನ ನಿರೀಕ್ಷಣೆಯಲ್ಲಿ ಕಾದಿದ್ದನು (ಉದ್ಯೋಗ 106/8–21). ಗಾಲವನು ಒತ್ತಾಯಿಸಿದುದರಿಂದ ಇವನು ಗುರುದಕ್ಷಿಣಾರೂಪದಲ್ಲಿ ಆತನಿಂದ

ಎಂಟುನೂರು ಶ್ಯಾಮಕರ್ಣವುಳ್ಳ ಕುದುರೆಗಳನ್ನು ಕೇಳಿದನು (ಉದ್ಯೋಗ 106/27). ಗಾಲವ ನೊಡನೆ ಗುರುದಕ್ಷಿಣೆಗಾಗಿ ಒತ್ತಾಯಿಸಿದನು (ಉದ್ಯೋಗ 113/20–21). ಗಾಲವನಿಂದ ಆರುನೂರು ಕುದುರೆಗಳು ಮತ್ತು ಮಾಧವಿ ಯನ್ನು ಗುರು ದಕ್ಷಿಣಾರೂಪದಲ್ಲಿ ಗ್ರಹಣ ಮಾಡಿದುದು (ಉದ್ಯೋಗ 119/17). ಮಾಧವಿಯ ಗರ್ಭದಿಂದ ಅಷ್ಟಕನೆಂಬ ಪುತ್ರನ ಪ್ರಾಪ್ತಿ (ಉದ್ಯೋಗ 119/18). ಇವನು ದ್ರೋಣಾ ಚಾರ್ಯನ ಬಳಿಗೆ ಬಂದು ಯುದ್ಧ ನಿಲ್ಲಿಸು ವಂತೆ ಹೇಳಿದುದು (ದ್ರೋಣ 190/35–40). ಇವನ ಬ್ರಾಹ್ಮಣತ್ವ ಪ್ರಾಪ್ತಿಯ ಕಥಾವರ್ಣನೆ (ಶಲ್ಯ 40/12–30). ಇವನಿಂದ ಸರಸ್ವತೀ ನದಿಗೆ ಶಾಪ (ಶಲ್ಯ 42/38–39). ಇವನ ಜನ್ಮದ ಕಥೆ (ಶಾಂತಿ 49/30). ಹಸಿವೆಯಿಂದ ವ್ಯಾಕುಲನಾಗಿ ಈತ ಒಬ್ಬ ಚಾಂಡಾಲನ ಮನೆಗೆ ನಾಯಿಯ ತೊಡೆಯನ್ನು ಕದಿಯಲು ನುಗ್ಗಿದುದು (ಶಾಂತಿ 141/45–91). ಚಾಂಡಾಲನೊಂದಿಗೆ ಸಂವಾದ (ಶಾಂತಿ 141/45–91). ಮಾಂಸವನ್ನು ಬೇಯಿಸಿ, ದೇವತೆಗಳನ್ನೂ ಪಿತೃಗಳನ್ನೂ ಸಂತುಷ್ಟಗೊಳಿಸಿ ದಾಗ, ಅವರ ಕೃಪೆಯಿಂದಲೇ ಈತನಿಗೆ ಪವಿತ್ರ ಭೋಜನ ಪ್ರಾಪ್ತಿಯಾದುದು (ಶಾಂತಿ 141/99). ಈತ ಉತ್ತರ ದಿಕ್ಕಿನ ಋಷಿ (ಶಾಂತಿ 208/33–34). ಯುಧಿಷ್ಠಿರನಿಂದ ಇವನ ಪ್ರಭಾವದ ವರ್ಣನೆ (ಅನು 3 ಅಧ್ಯಾಯ). ಇವನ ಜನ್ಮ ವೃತ್ತಾಂತ ಮತ್ತು ಇವನ ಪುತ್ರರ ಹೆಸರು (ಅನು 4 ಅಧ್ಯಾಯ). ಶಿವಮಹಿಮೆಯ ಕುರಿತು ಇವನು ಯುಧಿಷ್ಠಿರನಿಗೆ ತನ್ನ ಅನುಭವ ಹೇಳಿ ದುದು (ಅನು 18/16). ಶರಶಯ್ಯೆಯಲ್ಲಿ ಬಿದ್ದಿದ್ದ ಭೀಷ್ಮನನ್ನು ನೋಡಲು ಇವನು ಹೋಗಿದ್ದನು (ಅನು 26/5). ವೃಷಾದರ್ಭಿಯೊಡನೆ ಪ್ರತಿ ಗ್ರಹದ ದೋಷವನ್ನು ಹೇಳಿದುದು (ಅನು 93/43). ಅರುಂಧತಿಯೊಡನೆ ತನ್ನ ದೌರ್ಬಲ್ಯದ ಕಾರಣಹೇಳಿದುದು (ಅನು 93/63). ಯಾತು ಧಾನಿಯೊಡನೆ ತನ್ನ ಹೆಸರಿನ ಅಭಿಪ್ರಾಯ ತಿಳಿಸಿದುದು (ಅನು 93/92). ಮೃಣಾಲದ ಕಳವಿನ ಕುರಿತು ಶಪಥ ಮಾಡಿದುದು (ಅನು 93/124–126). ಅಗಸ್ತ್ಯರ ಕಮಲಗಳು ಅಪಹರಿಸಲ್ಪಟ್ಟಾಗ ಶಪಥ ಮಾಡಿದುದು (ಅನು 94/33). ಇವನಿಂದ ಧರ್ಮರಹಸ್ಯದ ವರ್ಣನೆ (ಅನು 126/35–37). ಸಾಂಬನ ಹೊಟ್ಟೆಯಿಂದ, ವೃಷ್ಣಿ ಅಂಧಕ ವಂಶ ವಿನಾಶಕ ಒನಕೆ ಹುಟ್ಟುವಂತೆ ಶಾಪಕೊಟ್ಟ ಋಷಿಗಳಲ್ಲಿ ಇವನೂ ಇದ್ದನು (ಮೌಸಲ 1/15–21).

(2) ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಬ್ರಾಹ್ಮಣತ್ವ ಪ್ರಾಪ್ತವಾಗುತ್ತದೆ (ವನ 83/139).

**ವಿಶ್ವಾಮಿತ್ರಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತ ವಾಸಿಗಳು ಕುಡಿಯುತ್ತಾರೆ (ಭೀಷ್ಮ 9/26).

**ವಿಶ್ವಾಮಿತ್ರಾಶ್ರಮ** – ಕೌಶಿಕೀ ನದಿಯ ದಡ ದಲ್ಲಿರುವ ವಿಶ್ವಾಮಿತ್ರ ಋಷಿಯ ಆಶ್ರಮ (ವನ 110/22).

**ವಿಶ್ವಾಯು** – ಒಬ್ಬ ಸನಾತನ ವಿಶ್ವೇದೇವ (ಅನು 91/34).

**ವಿಶ್ವಾವಸು** – (1) ಒಬ್ಬ ಗಂಧರ್ವರಾಜ. ಇವನಿಂದ ಮೇನಕೆಯ ಗರ್ಭದಲ್ಲಿ ಪ್ರಮದ್ವರೆಯ ಜನನದ ಕಥೆ (ಆದಿ 8/6–13). ಇವನು ದೇವ ಗಂಧರ್ವ. ಇವನ ತಂದೆಯ ಹೆಸರು ಕಾಶ್ಯಪ ಮತ್ತು ತಾಯಿ ಪ್ರಾಧಾ (ಆದಿ 65/47). ಇವನು ಅರ್ಜುನನ ಜನ್ಮಕಾಲದಲ್ಲಿ ಆಗಮಿಸಿದ್ದನು (ಆದಿ 122/52). ಇವನು ಸೋಮನಿಂದ ಚಾಕ್ಷುಷೀ ವಿದ್ಯೆ ಕಲಿತನು ಮತ್ತು ಚಿತ್ರರಥನಿಗೆ ಕಲಿಸಿದನು (ಆದಿ 169/43). ಈತ ದ್ರೌಪದಿಯ ಸ್ವಯಂವರ ನೋಡಲು ಬಂದಿದ್ದನು (ಆದಿ 186/7). ಇವನು ಇಂದ್ರಸಭೆಯಲ್ಲಿದ್ದು ದೇವರಾಜನ ಉಪಾಸನೆ ಮಾಡುತ್ತಾನೆ (7/22). ಕುಬೇರನ ಸಭೆಯಲ್ಲಿ ರುತ್ತಾ ಧನಾಧ್ಯಕ್ಷ ಕುಬೇರನ ಸೇವೆಮಾಡುತ್ತಾನೆ (ಸಭಾ 10/25). ಜಮದಗ್ನಿಯ ಯಜ್ಞ ದೀಕ್ಷೆಯಲ್ಲಿ ಇವನಿಂದ ಶ್ಲೋಕಗಾನ (ವನ 90/18). ಇವನು ಶಾಪವಶನಾಗಿ ಕಬಂಧನೆಂಬ ರಾಕ್ಷಸನಾಗಿದ್ದನು ಮತ್ತು ಭಗವಾನ್ ಶ್ರೀರಾಮ ನಿಂದ ಇವನ ಉದ್ಧಾರವಾಗಿತ್ತು (ವನ 279/31–43). ರಾಜಾದಿಲೀಪನ ಯಜ್ಞದಲ್ಲಿ ಇವನು ವೀಣೆ ಬಾರಿಸುತ್ತಿದ್ದನು (ದ್ರೋಣ 61/7; ಶಾಂತಿ 29/75–76). ಮಹರ್ಷಿ ಯಾಜ್ಞವಲ್ಕ್ಯ ನೊಡನೆ ಇಪ್ಪತ್ತನಾಲ್ಕು ಪ್ರಶ್ನೆಮಾಡಿದುದು ಮತ್ತು ಅವುಗಳಿಗೆ ಸಮಾಧಾನವಾದಾಗ, ಸ್ವರ್ಗಕ್ಕೆ

ಹಿಂತಿರುಗಿದುದು (ಶಾಂತಿ 318/26-84). ಮಹಾಭಾರತದಲ್ಲಿ ಬಂದಿರುವ ವಿಶ್ವಾವಸುವಿನ ಹೆಸರುಗಳು - ಗಂಧರ್ವ, ಗಂಧರ್ವರಾಜ, ಗಂಧರ್ವೇಂದ್ರ, ಕಾಶ್ಯಪ ಇತ್ಯಾದಿ.

(2) ಜಮದಗ್ನಿಯ ಐದು ಪುತ್ರರಲ್ಲಿ ಒಬ್ಬ. ಇವನ ತಾಯಿ ರೇಣುಕಾ. ಉಳಿದ ನಾಲ್ಕು ಸಹೋದರರ ಹೆಸರು ರುಮಣ್ವಂತ, ಸುಷೇಣ, ವಸು ಮತ್ತು ಪರಶುರಾಮ. ಮಾತೃವಧಾ ಸಂಬಂಧವಾದ ಆಜ್ಞಾಪಾಲನೆ ಮಾಡದಿದ್ದುದರಿಂದ ಇವನಿಗೆ ತಂದೆಯಿಂದ ಶಾಪ ಪ್ರಾಪ್ತವಾಯಿತು (ವನ 116/10-12). ಪರಶುರಾಮನ ಮೂಲಕ ಇವನು ಶಾಪದಿಂದ ಉದ್ಧಾರವಾದನು (ವನ 116/17).

**ವಿಶ್ವೇದೇವ** - (1) ದೇವತೆಗಳ ಒಂದು ಗಣ. ಅದು ಈ ಹೆಸರಿನಿಂದಲೇ ಪ್ರಸಿದ್ಧ. ಸನಾತನ ವಿಶ್ವೇದೇವರುಗಳ ಹೆಸರು (ಅನು 91/30-37).

(2) ಒಬ್ಬ ಸನಾತನ ವಿಶ್ವೇದೇವ (ಅನು 91/33).

**ವಿಷ್ಕರ** - ಒಬ್ಬ ದೈತ್ಯ. ದಾನವ ಅಥವಾ ರಾಕ್ಷಸ. ಅವನು ಪೂರ್ವಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಇದನ್ನು ಬಿಟ್ಟು ಮರಣಹೊಂದಿದನು (ಶಾಂತಿ 227/53).

**ವಿಷ್ಣು** - (1) ಇವನು ವಸುದೇವನಿಂದ ದೇವಕಿಯ ಗರ್ಭದಲ್ಲಿ ಶ್ರೀಕೃಷ್ಣ ರೂಪದಲ್ಲಿ ಅವತಾರ ಹೊಂದಿದನು (ಆದಿ 63/99-104). ದ್ವಾದಶಾದಿತ್ಯರಲ್ಲಿ ಎಲ್ಲರಿಗಿಂತ ಕಿರಿಯವ, ಆದರೆ ಗುಣದಲ್ಲಿ ಎಲ್ಲರಿಗಿಂತ ಹಿರಿಯವನು (ಆದಿ 65/16). ಇವನು ವರದಾನ ತೀರ್ಥದಲ್ಲಿ ದುರ್ವಾಸನಿಗೆ ದರ್ಶನವನ್ನಿತ್ತನು (ವನ 82/75). ದೇವತೆಗಳಿಂದ ಇವನ ಸ್ತುತಿ (ವನ 102/20-26). ಸಮುದ್ರವನ್ನು ಬತ್ತಿಸಲು, ಇವನು ಅಗಸ್ತ್ಯರ ಬಳಿಗೆ ದೇವತೆಗಳನ್ನು ಕಳುಹಿಸಿದುದು (ವನ 103/11). ಇವನು ಕೃತಯುಗದಲ್ಲಿ ಬಿಳಿ, ತ್ರೇತಾಯುಗದಲ್ಲಿ ಕೆಂಪು, ದ್ವಾಪರದಲ್ಲಿ ಹಳದಿ ಮತ್ತು ಕಲಿಯುಗದಲ್ಲಿ ಕೃಷ್ಣವರ್ಣದವನಾಗುತ್ತಾನೆ (ವನ 149/17-34). ಉತ್ತಂಕನಿಂದ ಇವನ ಸ್ತುತಿ (ವನ 201/14-24). ಪೃಥ್ವಿಯ ಉದ್ಧಾರಕ್ಕಾಗಿ ಇವನು ಧರಿಸಿದ ಯಜ್ಞ ವರಾಹ ನೂರು ಯೋಜನ ಉದ್ದ ಮತ್ತು ಹತ್ತು ಯೋಜನ ಅಗಲವಾಗಿತ್ತು (ವನ 272/51-55). ಇವನ ನರಸಿಂಹಾವತಾರದ ವರ್ಣನೆ (ವನ 272/57-61). ಇವನ ವಾಮನಾವತಾರದ ವರ್ಣನೆ (ವನ 272/62-70). ಇವನೇ ಯದುಕುಲದಲ್ಲಿ ಶ್ರೀಕೃಷ್ಣ ರೂಪದಿಂದ ಅವತಾರ ಹೊಂದಿದ್ದನು. ಇವನ ಮಹಿಮಾವರ್ಣನೆ (ವನ 272/71-77). ದೇವತೆಗಳಿಂದ ಇವನ ಸ್ತುತಿ (ಉದ್ಯೋಗ 10/6-8). ಸುಮುಖ ನಾಗನ ರಕ್ಷಣೆಗೋಸ್ಕರ ಗರುಡನ ಗರ್ವನಾಶಮಾಡಿದುದು (ಉದ್ಯೋಗ 105/19-32). ಕ್ಷೀರಸಾಗರದ ಉತ್ತರ ದಡದಲ್ಲಿ ಇವನ ನಿವಾಸಸ್ಥಾನ, ಸ್ವರೂಪ ಮತ್ತು ಮಹಿಮೆಯ ವರ್ಣನೆ (ಭೀಷ್ಮ 8/15-18). ಬ್ರಹ್ಮನಿಂದ ಈತನ ಸ್ತುತಿ (ಭೀಷ್ಮ 65/47-75). ತ್ರಿಪುರ ದಹನ ಕಾಲದಲ್ಲಿ ಭಗವಾನ್ ಶಿವನು ಇವನನ್ನು ತನ್ನ ಬಾಣವಾಗಿ ಮಾಡಿಕೊಂಡಿದ್ದನು (ದ್ರೋಣ 202/77; ಕರ್ಣ 34/49). ಇವನಿಂದ ಸ್ಕಂದನಿಗೆ ಚಕ್ರ, ವಿಕ್ರಮ ಮತ್ತು ಸಕ್ರಮರೆಂಬ ಮೂರು ಪಾರ್ಷದರ ಕೊಡುಗೆ (ಶಲ್ಯ 45/37). ಇವನಿಂದ ಸ್ಕಂದನಿಗೆ ವೈಜಯಂತೀ ಮಾಲೆ ಮತ್ತು ಎರಡು ನಿರ್ಮಲ ವಸ್ತ್ರಗಳ ದಾನ (ಶಲ್ಯ 46/49). ಈತನಿಂದ ಪೃಥ್ವಿಗೆ ಧೈರ್ಯದ ಆಶ್ವಾಸನೆ (ಸ್ತ್ರೀ 8/25-29). ಇವನು ಒಬ್ಬ ಮಾನಸ ಪುತ್ರನನ್ನು ಸೃಷ್ಟಿಸಿದನು. ಅವನ ಹೆಸರು ವಿರಜಾ ಎಂದಾಗಿತ್ತು (ಶಾಂತಿ 59/87-88). ಇಂದ್ರ ರೂಪಧಾರಿ ವಿಷ್ಣು ಮತ್ತು ಮಾಂಧಾತಾನ ಸಂವಾದ (ಶಾಂತಿ 65 ಅಧ್ಯಾಯ). ಭಗವಾನ್ ಶಿವನು ಇವನಿಗೆ ದಂಡವೆಂಬ ಹೆಸರಿನ ಅಸ್ತ್ರವನ್ನು ಅರ್ಪಿಸಿದನು. ಇವನು ಅದನ್ನು ಅಂಗೀರಸನಿಗೆ ಕೊಟ್ಟನು (ಶಾಂತಿ 122/36-37). ಭಗವಾನ್ ರುದ್ರನಿಂದ ಇವನಿಗೆ ಖಡ್ಗಪ್ರಾಪ್ತಿಯಾಯಿತು. ಅದನ್ನು ಇವನು ಮರೀಚಿಗೆ ಕೊಟ್ಟನು (ಶಾಂತಿ 166/66). ಇವನು ವಾರಾಹ ಅವತಾರವೆತ್ತಿ ದೇವತೆಗಳ ದುಃಖ ನಿವಾರಣೆ ಮಾಡಿದನು (ಶಾಂತಿ 209/16-30). ನಾರದನಿಗೆ ಧೈರ್ಯದ ಮಾತು (ಶಾಂತಿ 209/36). ವಾಮನ ರೂಪದಲ್ಲಿ ಇವನು ಮೂರೇ ಪಾದಗಳಲ್ಲಿ ಭೂಮಿಯನ್ನು ಅಳೆದಿದ್ದನು (ಶಾಂತಿ 227/7-8). ಪ್ರತಿತಿಂಗಳ ದ್ವಾದಶೀ ತಿಥಿಯ ದಿನ ಭಗವಾನ್ ವಿಷ್ಣುವಿನ ಪೂಜೆಯ ವಿಶೇಷ

ಮಾಹಾತ್ಮ್ಯ (ಅನು 109 ಅಧ್ಯಾಯ). ಇಂದ್ರನಿಗೆ ಧರ್ಮೋಪದೇಶ (ಅನು 126/11–16). ಇವನಿಂದ ಧರ್ಮದ ಮಾಹಾತ್ಮ್ಯದ ವರ್ಣನೆ (ಅನು 134/8–14). ಇವನ ಸಹಸ್ರ ನಾಮಗಳ ವರ್ಣನೆ (ಅನು 149 ಅಧ್ಯಾಯ) (ವಿಶೇಷ ನೋಡಿರಿ – ನಾರಾಯಣ).

(2) ಭಾನು (ಮನು) ಅಗ್ನಿಯ ಮೂರನೇ ಮಗ. ಇವನ ಇನ್ನೊಂದು ಹೆಸರು 'ಧೃತಿಮಂತ'. ಇವನು ಅಂಗೀರಸ ಗೋತ್ರದವನೆಂದು ತಿಳಿಯಲ್ಪಟ್ಟಿದ್ದಾನೆ. ದರ್ಶಪೌರ್ಣ ಮಾಸವೆಂಬ ಯಜ್ಞಗಳಲ್ಲಿ ಇವನಲ್ಲಿಯೇ ಹವಿಸ್ಸಿನ ಸಮರ್ಪಣೆಯಾಗುತ್ತದೆ (ವನ 221/12).

**ವಿಷ್ಣುಧರ್ಮ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/13).

**ವಿಷ್ಣುಪದತೀರ್ಥ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿ ವಾಮನದೇವರಪೂಜೆ ಮಾಡುವವ ವಿಷ್ಣುಲೋಕಕ್ಕೆ ಹೋಗುತ್ತಾನೆ (ವನ 83/103–104). ಇದು ಪ್ರಭಾಸತೀರ್ಥದ ಅನಂತರ ಸಿಗುತ್ತದೆ ಮತ್ತು ವಿಪಾಶಾ ನದಿಯ ತಟದಲ್ಲಿದೆ (ವನ 130/8–9). ಸ್ವಪ್ನದಲ್ಲಿ ಶಿವನ ಬಳಿಗೆ ಶ್ರೀಕೃಷ್ಣನೊಂದಿಗೆ ಹೋಗುತ್ತಿದ್ದ ಅರ್ಜುನನಿಗೆ ವಿಷ್ಣುಪದ ತೀರ್ಥಸಿಕ್ಕಿತ್ತು (ದ್ರೋಣ 80/35–36).

**ವಿಷ್ಣುಯಶಾ** – ಯುಗಾಂತರ ಸಮಯದಲ್ಲಿ ಕಾಲನ ಪ್ರೇರಣೆಯಿಂದ ಸಂಭಲವೆಂಬ ಗ್ರಾಮದಲ್ಲಿ ಯಾರೋ ಒಬ್ಬ ಬ್ರಾಹ್ಮಣನಲ್ಲಿ ಮಹಾಶಕ್ತಿಶಾಲಿಯಾದ ಬಾಲಕನು ಪ್ರಕಟಗೊಳ್ಳುವನು. ಅವನ ಹೆಸರು 'ವಿಷ್ಣುಯಶಾ' ಕಲ್ಕೀ ಎಂದಾಗಿರುವುದು. ಅವನು ಮಹಾಬುದ್ಧಿ ಮತ್ತು ಪರಾಕ್ರಮದಿಂದ ಸಂಪನ್ನನೂ, ಮಹಾತ್ಮನೂ, ಸದಾಚಾರಿಯೂ ಆಗಿದ್ದು ಪ್ರಜಾವರ್ಗದ ಹಿತೈಷಿಯಾಗುವನು (ಆ ಹುಡುಗನೇ ಭಗವಂತನ ಕಲ್ಕೀ ಅವತಾರವೆಂದು ಹೇಳಲ್ಪಡುವನು). ಮನಸ್ಸಿನಲ್ಲಿ ಯೋಚಿಸುತ್ತಲೇ ಅವನ ಬಳಿಗೆ ಇಚ್ಛಾನುಸಾರ ವಾಹನ, ಅಸ್ತ್ರ ಶಸ್ತ್ರಯೋಧ ಮತ್ತ ಕವಚ ಉಪಸ್ಥಿತವಾಗುವುವು. ಅವನು ಧರ್ಮವಿಜಯೀ ಚಕ್ರವರ್ತೀ ರಾಜನಾಗುವನು. ಆ ಉದಾರ ಬುದ್ಧಿಯ, ತೇಜಸ್ವೀ ಬ್ರಾಹ್ಮಣನು ದುಃಖದಿಂದ ವ್ಯಾಪ್ತವಾದ ಈ ಜಗತ್ತಿಗೆ ಆನಂದ ಪ್ರದಾನಮಾಡುವನು. ಕಲಿಯುಗವನ್ನು ಅಂತ್ಯಗೊಳಿಸುವುದಕ್ಕಾಗಿಯೇ ಅವನ ಪ್ರಾದುರ್ಭಾವವಾಗುವುದು. ಅವನೇ ಸಂಪೂರ್ಣ ಕಲಿಯುಗದ ಸಂಹಾರಮಾಡಿ ನೂತನ ಸತ್ಯಯುಗದ ಪ್ರವರ್ತಕನಾಗುವನು. ಅವನು ಬ್ರಾಹ್ಮಣರಿಂದ ಆವರಿಸಲ್ಪಟ್ಟು ಸರ್ವತ್ರ ಸಂಚರಿಸುವವನು ಮತ್ತು ಭೂಮಂಡಲದಲ್ಲಿ ಸರ್ವತ್ರ ಹಬ್ಬಿರುವ ನೀಚ ಸ್ವಭಾವದ ಎಲ್ಲಾ ಮ್ಲೇಚ್ಛರ ಸಂಹಾರ ಮಾಡುವನು (ವನ 190/93–97). ಆ ಸಮಯದಲ್ಲಿ ಕಳ್ಳರು, ಡಕಾಯತರು ಮತ್ತು ಮ್ಲೇಚ್ಛರ ವಿನಾಶ ಮಾಡಿ ಭಗವಾನ್ ಕಲ್ಕೀ ಅಶ್ವಮೇಧವೆಂಬ ಮಹಾಯಜ್ಞವನ್ನು ಮಾಡುವನು ಮತ್ತು ಅದರಲ್ಲಿ ಈ ಸಕಲ ಭೂಮಂಡಲವನ್ನು ವಿಧಿಪೂರ್ವಕ ಬ್ರಾಹ್ಮಣರಿಗೆ ಕೊಟ್ಟುಬಿಡುವನು. ಅವನ ಯಶಸ್ಸು ಮತ್ತು ಕರ್ಮ ಎಲ್ಲವೂ ಪರಮಪಾವನವಾಗಿವೆ. ಇವನು ಬ್ರಹ್ಮನಿಂದ ಆಚರಣೆಗೆ ತರಲ್ಪಟ್ಟ ಮಂಗಳಮಯ ಇತಿಮಿತಿಗಳನ್ನು ಸ್ಥಾಪಿಸಿ (ತಪಸ್ಸಿಗಾಗಿ) ರಮಣೀಯ ಕಾಡನ್ನು ಪ್ರವೇಶಿಸುವನು. ಅನಂತರ ಈ ಜಗತ್ತಿನ ನಿವಾಸಿಗಳು ಅವನ ಶೀಲ ಸ್ವಭಾವಗಳ ಅನುಕರಣೆ ಮಾಡುವರು. ದ್ವಿಜಶ್ರೇಷ್ಠ ಕಲ್ಕಿ ಯಾವಾಗಲೂ ದಸ್ಯುವಧೆಯಲ್ಲಿ ತತ್ಪರನಾಗಿದ್ದು ಸಮಸ್ತ ಭೂತಳದಲ್ಲಿ ಸುತ್ತುತ್ತಿರುವನು ಮತ್ತು ತನ್ನಿಂದ ಗೆಲ್ಲಲ್ಪಟ್ಟ ದೇಶಗಳಲ್ಲಿ ಕಪ್ಪಾದ ಮೃಗಚರ್ಮ, ಶಕ್ತಿ, ತ್ರಿಶೂಲ ಮತ್ತು ಇತರ ಅಸ್ತ್ರ–ಶಸ್ತ್ರಗಳ ಸ್ಥಾಪನೆ ಮಾಡುತ್ತಾ, ಶ್ರೇಷ್ಠ ಬ್ರಾಹ್ಮಣರಿಂದ ತನ್ನ ಸ್ತುತಿಯನ್ನು ಕೇಳುವನು ಮತ್ತು ತಾನೂ ಆ ಬ್ರಾಹ್ಮಣ ಶಿರೋಮಣಿಗಳನ್ನು ಯಥೋಚಿತವಾಗಿ ಸಮ್ಮಾನಿಸುವನು. ದಸ್ಯುಗಳ ನಾಶವಾಗುವುದರಿಂದ, ಅಧರ್ಮಕೂಡಾ ನಾಶವಾಗುತ್ತದೆ ಮತ್ತು ಧರ್ಮದ ವೃದ್ಧಿಯಾಗತೊಡಗುವುದು. ಈ ರೀತಿ ಸತ್ಯಯುಗ ಬಂದಾಗ, ಎಲ್ಲಾ ಮನುಷ್ಯರು ಸತ್ಯಧರ್ಮಪರಾಯಣರಾಗುವರು (ವನ 191/1–7).

**ವಿಷ್ವಕ್ಸೇನ** – ಒಬ್ಬ ಪ್ರಾಚೀನ ಋಷಿ. ಈತ ಇಂದ್ರ ಸಭೆಯಲ್ಲಿರುತ್ತಾನೆ (ಸಭಾ 7/18).

**ವಿಷ್ವಗಶ್ವ** – (1) ಒಬ್ಬ ಪ್ರಾಚೀನ ರಾಜ. ಇವನು ಇಕ್ಷ್ವಾಕುವಂಶದ ಮಹಾರಾಜ ಪೃಥುವಿನ ಪುತ್ರ. ಇವನ ಮಗನ ಹೆಸರು ಅದ್ರಿ (ಆದಿ 1/232; ವನ 202/3). ಗೋದಾನ ಮಹಿಮೆಯ ಕುರಿತು

ಇವನ ಪ್ರಸಿದ್ಧಿ (ಅನು 76/25–27). ಮಾಂಸ ಭಕ್ಷಣ ನಿಷೇಧ ಮಾಡಿದ್ದರಿಂದ ಇವನ ಪರಾವರ ತತ್ತ್ವದ ಜ್ಞಾನವಾಗಿತ್ತು (ಅನು 115/58–60).

(2) ಪೂರು ವಂಶದ ಒಬ್ಬ ರಾಜ. ಇವನನ್ನು ಉತ್ತರದಿಗ್ವಿಜಯ ಕಾಲದಲ್ಲಿ ಅರ್ಜುನ ಸೋಲಿಸಿದ್ದನು (ಸಭಾ 27/14).

**ವಿಹಂಗ** – ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/12).

**ವಿಹವ್ಯ** – ಗೃತ್ಸಮದವಂಶದ ವರ್ಚಾನ ಮಗ. ಇವನು ವಿತತ್ಯನ ತಂದೆ (ಅನು 30/61).

**ವೀಟಾ** – ಗೋಧಿಯ ಆಕಾರದಲ್ಲಿ ಮಾಡಿದ ಕಟ್ಟಿಗೆಯ ದಪ್ಪವಾದ ಚಿಣ್ಣಿ. ಇದು ಕೋಲಿನ ಸಹಾಯದಿಂದ ಆಟಕ್ಕೆ ಉಪಯೋಗಿಸಲ್ಪಡುತ್ತದೆ. ಪಾಂಡವರೂ, ಕೌರವರೂ ಆಡುತ್ತಿರುವಾಗ ಆ ಚಿಣ್ಣಿ ಬಾವಿಗೆ ಬಿದ್ದಿತ್ತು. ಇದನ್ನು ದ್ರೋಣಾಚಾರ್ಯನು ಕಡ್ಡಿಯ ಬಾಣಗಳ ಮೂಲಕ ಹೊರತೆಗೆದಿದ್ದನು (ಆದಿ 130/17–24).

**ವೀತಹವ್ಯ** – ಶರ್ಯಾತಿವಂಶದ ವತ್ಸನ ಮಗ. ಇವನ ಇನ್ನೊಂದು ಹೆಸರು ಹೈಹಯ (ಅನು 30/5–7). ಇವನ ಪುತ್ರರಿಂದ ಕಾಶೀರಾಜ ಹರ್ಯಶ್ವನ ವಧೆ (ಅನು 30/10–11). ಇವನ ಆ ಪುತ್ರರು ಸುದೇವನನ್ನೂ ಕೊಂದು ಹಾಕಿದರು (ಅನು 30/13–14). ಅದೇ ಪುತ್ರರಿಂದ ದಿವೋದಾಸನೂ ಪರಾಜಯಹೊಂದಿದ್ದನು (ಅನು 30/21–22). ಕಾಶೀರಾಜ ಪ್ರತರ್ದನನಿಂದ ಇವನ ಪುತ್ರರ ವಧೆ (ಅನು 30/38–43). ಇವನು ಓಡಿಹೋಗಿ ಭೃಗುವಿಗೆ ಶರಣಾದುದು (ಅನು 30/45). ಭೃಗುವಿನಿಂದ ಇವನಿಗೆ ಬ್ರಾಹ್ಮಣತ್ವ ಪ್ರದಾನ (ಅನು 30/57–58).

**ವೀತಿ** – ಒಂದು ಅಗ್ನಿ. ದಕ್ಷಿಣಾಗ್ನಿಯು ಗಾರ್ಹಪತ್ಯ ಮತ್ತು ಆಹವನೀಯವೆಂಬ ಎರಡು ಅಗ್ನಿಗಳೊಂದಿಗೆ ಸಂಸರ್ಗ ಹೊಂದಿದಾಗ, ಮಣ್ಣಿನ ಎಂಟು ಕಪಾಲಗಳಲ್ಲಿ ಸಂಸ್ಕಾರಪೂರ್ವಕ ಸಿದ್ಧಗೊಳಿಸಿದ ಪುರೋಡಾಶದಿಂದ ಈ ಅಗ್ನಿಯಲ್ಲಿ ಆಹುತಿಕೊಡಬೇಕು (ವನ 221/25).

**ವೀತಿಹೋತ್ರ** – (1) ಒಬ್ಬ ಪ್ರಾಚೀನ ರಾಜ (ಆದಿ 1/233).

(2) ಒಂದು ದೇಶ. ಅಲ್ಲಿರುವ ಕ್ಷತ್ರಿಯರನ್ನು ಪರಶುರಾಮನು ಸಂಹಾರ ಮಾಡಿದ್ದನು (ದ್ರೋಣ 70/12–13).

**ವೀರ** – (1) ಕಶ್ಯಪಪತ್ನಿ ದನಾಯುವಿನ ಗರ್ಭದಿಂದ ಹುಟ್ಟಿದ ಒಬ್ಬ ಅಸುರ (ಆದಿ 65/33).

(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/103).

(3) ಭರದ್ವಾಜನೆಂಬ ಅಗ್ನಿಗೆ ವೀರಾ ಎಂಬವಳ ಗರ್ಭದಿಂದ ಹುಟ್ಟಿದವನು. ಇವನನ್ನೇ ರಥಪ್ರಭು, ರಥಧ್ವಾನ ಮತ್ತು ಕುಂಭರೇತಾ ಎಂದೂ ಕರೆಯುತ್ತಾರೆ. ಸೋಮದೇವತೆಯೊಂದಿಗೆ ದ್ವಿತೀಯ ಆಜ್ಯಭಾಗ ಇವನಿಗೇ ಸಿಗುತ್ತದೆ. ಇವನಿಗೆ ಸರಯೂ ಎಂಬ ಪತ್ನಿಯ ಗರ್ಭದಿಂದ ಸಿದ್ಧಿ ಎಂಬ ಪುತ್ರ ಹುಟ್ಟಿದನು (ವನ 219/9–11).

(4). ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಇವನು ವಿನಾಯಕರಲ್ಲಿ ಗಣಿಸಲ್ಪಟ್ಟಿದ್ದಾನೆ (ವನ 220/13–14).

(5). ಕಳಿಂಗರಾಜ ಚಿತ್ರಾಂಗದನ ಮಗಳ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದ ಒಬ್ಬ ರಾಜ (ಶಾಂತಿ 4/7).

**ವೀರಕ** – ಒಂದು ದೇಶ. ಇಲ್ಲಿರುವ ಧರ್ಮ ಮತ್ತು ಆಚಾರ ವಿಚಾರ ದೂಷಿತವಾಗಿವೆ. ಆದುದರಿಂದ ಇದು ದೂರವಿಡಲು ಯೋಗ್ಯವಾಗಿದೆ (ಕರ್ಣ 44/13).

**ವೀರಕರಾ** – ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/26).

**ವೀರಕೇತು** – ಪಾಂಚಾಲರಾಜ ದ್ರುಪದನ ಒಬ್ಬ ಪುತ್ರ. ದ್ರೋಣಾಚಾರ್ಯನೊಂದಿಗೆ ಈತನ ಯುದ್ಧ ಮತ್ತು ಆತನಿಂದ ವಧೆ (ದ್ರೋಣ 122/33–41).

**ವೀರಣ** – ಒಬ್ಬ ಪ್ರಜಾಪತಿ. ಇವನಿಗೆ ಸನತ್ಕುಮಾರನ ಮೂಲಕ ಸಾತ್ವತ ಧರ್ಮದ ಪ್ರಾಪ್ತಿಯಾಗಿತ್ತು ಮತ್ತು ಇವನು ರೈಭ್ಯ ಮುನಿಗೆ ಈ ಧರ್ಮದ ಉಪದೇಶ ಮಾಡಿದ್ದನು (ಶಾಂತಿ 348/41–42).

**ವೀರಣಕ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟುಹೋದನು (ಆದಿ 57/18).

**ವೀರದ್ಯುಮ್ನ** – ಒಬ್ಬ ಪ್ರಾಚೀನ ರಾಜ. ಈತನ

ಪುತ್ರನ ಹೆಸರು ಭೂರಿದ್ಯುಮ್ನನೆಂದಾಗಿತ್ತು. ಅವನು ಕಾಡಿನಲ್ಲಿ ಕಳೆದುಹೋಗಿದ್ದನು. ಅವನನ್ನು ಹುಡುಕುತ್ತಾ ಈತ ಮಹರ್ಷಿ ತನುವಿನ ಬಳಿಗೆ ಹೋಗಿ ಆಶೆಯ ಕುರಿತಾಗಿ ಕೇಳಿದುದು (ಶಾಂತಿ 127/14-20). ಆಶೆಯ ಕುರಿತಾಗಿ ಈತನಿಗೆ ತನುಮುನಿಯ ಉಪದೇಶ (ಶಾಂತಿ 128 ಅಧ್ಯಾಯ).

**ವೀರಧನ್ವಾ** – ಕೌರವ ಪಕ್ಷದ ತ್ರಿಗರ್ತದೇಶದ ಒಬ್ಬ ಯೋಧ. ಇವನು ಧೃಷ್ಟಕೇತುವನ್ನು ಎದುರಿಸಲು ಮುಂದುವರಿದಿದ್ದನು (ದ್ರೋಣ 106/10). ಧೃಷ್ಟಕೇತುವಿನೊಂದಿಗೆ ಈತನ ಯುದ್ಧ ಮತ್ತು ಅವನಿಂದ ಈತನ ವಧೆ (ದ್ರೋಣ 107/9-18).

**ವೀರಧರ್ಮಾ** – ಒಬ್ಬ ರಾಜ. ಇವನಿಗೆ ಪಾಂಡವ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/16).

**ವೀರಪ್ರಮೋಕ್ಷ** – ಒಂದು ತೀರ್ಥ. ಇಲ್ಲಿಗೆ ಹೋಗುವುದರಿಂದ ಮನುಷ್ಯ ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ (ವನ 84/51).

**ವೀರಬಾಹು** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/103; ಆದಿ 116/12). ಪ್ರಥಮ ದಿನದ ಯುದ್ಧದಲ್ಲಿ ಉತ್ತರನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/77-78). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಭೀಷ್ಮ 64/35-36).

(2) ಚೇದಿ ದೇಶದ ರಾಜ. ದಶಾರ್ಣರಾಜ ಸುದಾಮಾನ ಪುತ್ರಿಯೊಂದಿಗೆ ಇವನ ವಿವಾಹವಾಗಿತ್ತು. ಆಕೆ ದಮಯಂತಿಯ ತಾಯಿಯ ಸಹೋದರಿ ಆಗಿದ್ದಳು. ಕಾಡಿನಲ್ಲಿ ರಾಜಾ ನಳನು ದಮಯಂತಿಯನ್ನು ಒಬ್ಬಂಟಿಗಳಾಗಿ ಬಿಟ್ಟು ಹೋದಾಗ ದಮಯಂತಿಗೆ ಈತನ ಅರಮನೆಯಲ್ಲೇ ಆಶ್ರಯ ದೊರಕಿತ್ತು (ವನ 69/13-15).

**ವೀರಭದ್ರ** – ಶಿವನ ಒಬ್ಬ ಪಾರ್ಷದ. ಈತ ಶಂಕರನ ಮೂರ್ತಿಮತ್ತಾದ ಕ್ರೋಧವೇ ಆಗಿದ್ದನು (ಶಾಂತಿ 284/29-34). ಇವನು ತನ್ನ ರೋಮಕೂಪಗಳಿಂದ ರೌಮ್ಯವೆಂಬ ಹೆಸರಿನ ಗಣೇಶ್ವರರನ್ನು ಪ್ರಕಟಗೊಳಿಸಿದನು (ಶಾಂತಿ 284/35). ಇವನಿಂದ ದಕ್ಷಯಜ್ಞ ವಿಧ್ವಂಸ (ಶಾಂತಿ 284/51-55).

**ವೀರಮತೀ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/25).

**ವೀರಸೇನ** – ನಳನ ತಂದೆಯಾದ ನಿಷಧ ದೇಶದ ರಾಜ. ಇವನು ಧರ್ಮ ಮತ್ತು ಅರ್ಥಗಳ ತತ್ತ್ವಜ್ಞನಾಗಿದ್ದನು (ವನ 52/55). ದಮಯಂತಿಯಿಂದ ಇವನ ಪರಿಚಯ ಕೊಡಲ್ಪಟ್ಟಿದ್ದು (ವನ 64/48). ಇವನು ತನ್ನ ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/65).

**ವೀರಾ** – (1) ಶಂಯುವಿನ ಪುತ್ರ ಭರದ್ವಾಜನೆಂಬ ಅಗ್ನಿಯ ಪತ್ನಿ. ಇವಳ ಗರ್ಭದಿಂದ ವೀರನೆಂಬ ಪುತ್ರ ಜನಿಸಿದನು (ವನ 219/9).

(2) ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/22).

**ವೀರಾಶ್ರಮ** – ವೀರಾಶ್ರಮ ನಿವಾಸಿ ಕುಮಾರ ಕಾರ್ತಿಕೇಯನ ಹತ್ತಿರಹೋಗಿ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ (ವನ 84/145).

**ವೀರಿಣೀ** – ಈಕೆ ಪ್ರಾಚೇತಸ ದಕ್ಷನ ಪತ್ನಿಯಾಗಿದ್ದಳು. ಈಕೆಯ ಗರ್ಭದಿಂದ ಒಂದು ಸಾವಿರ ಪುತ್ರರು ಮತ್ತು ಐವತ್ತು ಕನ್ಯೆಯರು ಜನಿಸಿದ್ದರು (ಆದಿ 75/6-8).

**ವೀರುಧಾ** – ನಾಗಮಾತೆಯಾದ ಸುರಸೆಯ ಮೂವರು ಪುತ್ರಿಯರಲ್ಲಿ ಒಬ್ಬಳು. ಇವಳ ಇಬ್ಬರು ಸಹೋದರಿಯರ ಹೆಸರು ಅನಲಾ ಮತ್ತು ರುಹಾ ಎಂದಾಗಿತ್ತು. ಇವಳು ಲತೆ, ಗುಲ್ಮ, ವಲ್ಲಿ ಇತ್ಯಾದಿಗಳ ಜನನಿಯಾದಳು (ಆದಿ 66/70ರ ಅನಂತರ).

**ವೀರ್ಯವತೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/8).

**ವೀರ್ಯವಂತ** – ಒಬ್ಬ ಸನಾತನ ವಿಶ್ವೇದೇವ (ಅನು 91/31).

**ವೃಕ** – (1) ಒಬ್ಬ ರಾಜ. ಈತ ದ್ರೌಪದೀ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದನು (ಆದಿ 185/10). ಇವನು ಕೌರವರ ಪಕ್ಷದಿಂದ ಯುದ್ಧ ಮಾಡುತ್ತಿದ್ದನು ಮತ್ತು ಯಾವನೋ ಪರ್ವತೀಯ ರಾಜನಿಂದ ಕೊಲ್ಲಲ್ಪಟ್ಟನು (ಕರ್ಣ 25/16-17).

(2) ಪಾಂಡವ ಪಕ್ಷದ ಒಬ್ಬ ಯೋಧ, ದ್ರೋಣಾಚಾರ್ಯನಿಂದ ಇವನ ವಧೆಯಾಗಿತ್ತು (ದ್ರೋಣ 21/16).

(3) ಒಬ್ಬ ಪ್ರಾಚೀನ ರಾಜ. ಇವನು ತನ್ನ ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/63).

**ವೃಕ್ಷವಾಸೀ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿರುತ್ತಾ ಆತನ ಸೇವೆ ಮಾಡುತ್ತಾನೆ (10/18).

**ವೃಜಿನೀವಂತ** – ಈತ ಮನುವಂಶದ ಕ್ರೋಷ್ಟಾನ ಪುತ್ರ. ಇವನ ಪುತ್ರನ ಹೆಸರು ಉಷಂಗು ಎಂದಾಗಿತ್ತು (ಅನು 147/28–29).

**ವೃತ್ತ** – ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/10; ಉದ್ಯೋಗ 103/14).

**ವೃತ್ರ (ವೃತ್ರಾಸುರ)** – ಕಶ್ಯಪ ಪತ್ನಿ ದನಾಯುವಿನ ಗರ್ಭದಿಂದ ಜನಿಸಿದ ಒಬ್ಬ ಅಸುರ (ಆದಿ 65/33). ಇವನು ರಾಜಾ ಮಣಿಮಂತನ ರೂಪದಲ್ಲಿ ಈ ಭೂಮಿಯ ಮೇಲೆ ಹುಟ್ಟಿದ್ದನು (ಆದಿ 67/44). ಈ ಮಹಾ ಅಸುರನ ಮಸ್ತಕದ ಮೇಲೆ ಪ್ರಹಾರ ಮಾಡಿದುದರಿಂದ ವಜ್ರವು ಹತ್ತು ದೊಡ್ಡ ತುಂಡುಗಳಾಗಿಯೂ ನೂರು ಸಣ್ಣ ತುಂಡುಗಳಾಗಿಯೂ ಛಿದ್ರವಾಗಿತ್ತು (ಆದಿ 169/50). ವೃತ್ರಾಸುರನು ದೇವತೆಗಳನ್ನು ಆಕ್ರಮಿಸಿದುದು (ವನ 100/4). ತ್ವಷ್ಟಾನ ಆಭಿಚಾರಾಗ್ನಿಯಿಂದ ಇವನ ಉತ್ಪತ್ತಿ (ಉದ್ಯೋಗ 9/48). ಈತ ಇಂದ್ರನನ್ನು ತನ್ನ ತುತ್ತಾಗಿ ಮಾಡಿದುದು (ಉದ್ಯೋಗ 9/52). ಮಹರ್ಷಿಗಳು ಸಂಧಾನ ಮಾಡಿದುದರಿಂದ ಇಂದ್ರನಲ್ಲಿ ಶರ್ತಪೂರ್ವಕ ಸಂಧಿ ಮಾಡಿದುದು (ಉದ್ಯೋಗ 10/27–31). ಇವನು ಶುಕ್ರಾಚಾರ್ಯರ ಪ್ರಶ್ನೆಗಳಿಗೆ ಉತ್ತರವನ್ನಿತ್ತದ್ದು (ಶಾಂತಿ 279/13–31). ಸನತ್ಕುಮಾರನ ಉಪದೇಶಗಳನ್ನು ಸಮರ್ಥಿಸುತ್ತಾ, ಇವನು ಪರಮಧಾಮವನ್ನು ಪಡೆದುದು (ಶಾಂತಿ 280/57–59). ಇಂದ್ರನೊಂದಿಗೆ ಇವನ ಯುದ್ಧ (ಶಾಂತಿ 281/13–21). ಇಂದ್ರನ ವಜ್ರ ಪ್ರಹಾರದಿಂದ ಇವನು ಕೊಲ್ಲಲ್ಪಟ್ಟ ವರ್ಣನೆ. ವೃತ್ರಾಸುರನು ಜ್ವರದಿಂದ ಪೀಡಿತನಾಗಿ ಆಕಳಿಸಿದಾಗ ಇಂದ್ರನು ವಜ್ರ ಪ್ರಹಾರ ಮಾಡಿದನು ಮತ್ತು ಈತ ಪ್ರಾಣತ್ಯಾಗ ಮಾಡಿ ವಿಷ್ಣುಲೋಕಕ್ಕೆ ಹೋದನು (ವನ 101/15; ಉದ್ಯೋಗ 10/30; ಶಾಂತಿ 282/9; ಶಾಂತಿ 283/59–60). ಇವನು ಪಂಚಭೂತಗಳನ್ನು ನುಂಗುತ್ತಾ, ಇಂದ್ರನ ಶರೀರವನ್ನು ಪ್ರವೇಶಿಸಿದುದು ಮತ್ತು ಇಂದ್ರನ ಮೂಲಕ ಕೊಲ್ಲಲ್ಪಟ್ಟ ವರ್ಣನೆ (ಅಶ್ವ 11/7–19). ಮಹಾಭಾರತದಲ್ಲಿ ಬಂದಿರುವ ವೃತ್ರಾಸುರನ ಹೆಸರುಗಳು – ಅಸುರ, ಅಸುರಶ್ರೇಷ್ಠ, ಅಸುರೇಂದ್ರ, ದೈತ್ಯ, ದೈತ್ಯಪತಿ, ದೈತ್ಯೇಂದ್ರ, ದಾನವ, ದಾನವೇಂದ್ರ, ದಿತಿಜ, ಸುರಾರಿ, ತ್ವಾಷ್ಟ್ರ, ವಿಶ್ವಾತ್ಮಾ ಇತ್ಯಾದಿ.

**ವೃದ್ಧಕನ್ಯಾ** – ಮಹರ್ಷಿ ಕುಣಿಗರ್ಗನ ಪುತ್ರಿ, ಈಕೆ ಬಾಲ ಬ್ರಹ್ಮಚಾರಿಣಿಯಾಗಿದ್ದಳು. ಈಕೆಯ ಘೋರ ತಪಸ್ಸು (ಶಲ್ಯ 52/5–10). ನಾರದನು ಹೇಳಿದುದರಿಂದ, ಇವಳು ಶೃಂಗವಂತನೊಡನೆ, ಅರ್ಧಪುಣ್ಯವನ್ನಿತ್ತು, ಪ್ರತಿಜ್ಞಾಪೂರ್ವಕ ತನ್ನ ವಿವಾಹ ಮಾಡಿದುದು (ಶಲ್ಯ 52/12–17). ಮಹರ್ಷಿ ಶೃಂಗವಂತನೊಂದಿಗೆ ಒಂದು ರಾತ್ರಿ ವಾಸಿಸಿ; ಅವನಿಗೆ ತನ್ನ ತಪಸ್ಸಿನ ಅರ್ಧಪುಣ್ಯವನ್ನು ಕೊಟ್ಟು, ಈಕೆಯ ಸ್ವರ್ಗಗಮನ (ಶಲ್ಯ 52/18–21). ಹೋಗುವಾಗ ಆಕೆ ತನ್ನ ಸ್ಥಾನವನ್ನು ತೀರ್ಥವೆಂದು ಘೋಷಿಸಿದಳು ಮತ್ತು ಅದರ ಫಲವನ್ನು ಹೀಗೆಂದು ಹೇಳಿದಳು. 'ತನ್ನ ಚಿತ್ತವನ್ನು ಏಕಾಗ್ರತೆಯಲ್ಲಿಟ್ಟು ಈ ತೀರ್ಥದಲ್ಲಿ ಸ್ನಾನ ಮತ್ತು ದೇವತರ್ಪಣ ಮಾಡಿ, ಒಂದು ರಾತ್ರಿ ವಾಸಮಾಡುವವನಿಗೆ, ಐವತ್ತೆಂಟು ವರ್ಷಕಾಲ ವಿಧಿಪೂರ್ವಕ ಬ್ರಹ್ಮಚರ್ಯಪಾಲನೆ ಮಾಡಿದ ಫಲ ಪ್ರಾಪ್ತವಾಗುವುದು (ಶಲ್ಯ 52/21–22).

**ವೃದ್ಧಕ್ಷತ್ರ** – (1) ಇವನು ಸಿಂಧುರಾಜ ಜಯದ್ರಥನ ತಂದೆ (ವನ 264/6). ಜಯದ್ರಥನ ಜನ್ಮಕಾಲದಲ್ಲಿ ಆಕಾಶವಾಣಿಯಿಂದ, ಅವನ ಮೃತ್ಯುವಿನ ಸಮಾಚಾರ ತಿಳಿದು, ಈತ ಚಿಂತಿತನಾದುದು ಮತ್ತು ತನ್ನ ಬಂಧುಗಳನ್ನೂ ಸಹೋದರರನ್ನೂ ಕರೆಸಿ ಅವರ ಮುಂದೆ, 'ನನ್ನ ಪುತ್ರನ ಶಿರಸ್ಸನ್ನು ಯಾವಾತನು ಪೃಥ್ವಿಯ ಮೇಲೆ ಉರುಳಿಸುವನೋ, ಅವನ ತಲೆಯು ನೂರಾರು ಹೋಳುಗಳಾಗಲಿ' ಎಂದು ಜಯ

ದ್ರಥನಿಗೆ ವರದಾನ ಮಾಡಿದನು. ಅನಂತರ ತನ್ನ ಪುತ್ರನನ್ನು ರಾಜಸಿಂಹಾಸನದಲ್ಲಿ ಕುಳ್ಳಿರಿಸಿ, ತಾನು ತಪಸ್ಸಿಗಾಗಿ ಪ್ರಸ್ಥಾನ ಮಾಡಿದನು (ದ್ರೋಣ 146/106–113). ಅರ್ಜುನನ ಬಾಣದ ಮೂಲಕ ಜಯದ್ರಥನ ಶಿರಸ್ಸು ಇವನ ತೊಡೆಯ ಮೇಲೆ ಬಿದ್ದುದು ಮತ್ತು ಆ ತಲೆ ಇವನ ಮಡಿಲಿನಿಂದ ಪೃಥ್ವಿಯ ಮೇಲೆ ಬಿದ್ದುದರಿಂದ ಈತನ ಮರಣ (ದ್ರೋಣ 146/122–130).

(2) ಪೂರುವಂಶದ ಒಬ್ಬ ರಾಜ. ಇವನು ಪಾಂಡವಪಕ್ಷದ ಒಬ್ಬ ಯೋಧನಾಗಿದ್ದನು. ಅಶ್ವತ್ಥಾಮನೊಂದಿಗೆ ಇವನ ಯುದ್ಧ ಮತ್ತು ಆತನಿಂದ ವಧೆ (ದ್ರೋಣ 200/73–84).

**ವೃದ್ಧಕ್ಷೇಮ** – ತ್ರಿಗರ್ತದೇಶದ ರಾಜ. ಈತ ಸುಶರ್ಮಾನ ತಂದೆ (ಆದಿ 185/9).

**ವೃದ್ಧಗಾರ್ಗ್ಯ** – ಒಬ್ಬ ತಪಸ್ವೀ ಮಹರ್ಷಿ. ಇವನು ಪಿತೃಗಳೊಡನೆ, ನೀಲವೃಷಭವನ್ನು ಬಿಡುವುದ ರಿಂದ, ಮಳೆಗಾಲದಲ್ಲಿ ದೀಪದಾನ ಮಾಡುವುದ ರಿಂದ ಮತ್ತು ಅಮಾವಾಸ್ಯೆಯಂದು ತಿಲಮಿಶ್ರಿತ ಜಲದ ಮೂಲಕ ತರ್ಪಣ ಕೊಡುವುದರಿಂದ, ಪ್ರಾಪ್ತವಾಗುವ ಫಲದ ಕುರಿತು ಪ್ರಶ್ನೆ ಮಾಡಿ ದನು. ಪಿತೃಗಳು ಈತನಿಗೆ ಅವುಗಳ ವರ್ಣನೆ ಯನ್ನು ತಿಳಿಸಿದರು (ಅನು 125/77–83).

**ವೃದ್ಧಶರ್ಮಾ** – ಆಯುವಿಗೆ ಸ್ವರ್ಭಾನು ಕುಮಾರಿಯ ಗರ್ಭದಲ್ಲಿ ಹುಟ್ಟಿದ ಐದು ಪುತ್ರ ರಲ್ಲಿ ಒಬ್ಬ. ಉಳಿದ ನಾಲ್ವರ ಹೆಸರು – ನಹುಷ, ರಜಿ, ಗಯ ಮತ್ತು ಅನೇನಾ (ಆದಿ 75/25–26).

**ವೃದ್ಧಿಕಾ** – ವೃಕ್ಷಗಳ ಮೇಲೆ ಬಿದ್ದ ಶಿವನ ವೀರ್ಯದಿಂದ ಹುಟ್ಟಿದ ನಾರಿಯರು. ಇವರು ಮನುಷ್ಯ ಮಾಂಸಭಕ್ಷಣೆ ಮಾಡುವವರು. ಸಂತಾನವನ್ನು ಬಯಸುವವರು ಇವರ ಮುಂದೆ ತಲೆಯನ್ನು ತಗ್ಗಿಸಬೇಕು (ವನ 231/16).

**ವೃಂದಾರಕ** – (1) ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 116/8). ಸಹೋದರ ರೊಂದಿಗೆ ಈತನಿಂದ ಭೀಮಸೇನನ ಮೇಲೆ ಆಕ್ರಮಣ ಮತ್ತು ಆತನಿಂದ ಇವನ ವಧೆ (ದ್ರೋಣ 127/33–61).

(2) ಕೌರವ ಪಕ್ಷದ ಒಬ್ಬ ಯೋಧ. ಇವನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 47/12).

**ವೃಷ** – (1) ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

(2) ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಪೂರ್ವಕಾಲದಲ್ಲಿ ಪೃಥ್ವಿಯ ಶಾಸಕನಾಗಿ ದ್ದನು. ಆದರೆ ಕಾಲವಶನಾಗಿ ಇದನ್ನೆಲ್ಲಾ ಬಿಟ್ಟು ಮರಣಹೊಂದಿದನು (ಶಾಂತಿ 227/51).

**ವೃಷಕ** – (1) ಗಾಂಧಾರ ರಾಜ ಸುಬಲನ ಪುತ್ರ. ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/5–6). ಇವನು ಯುಧಿಷ್ಠಿರನ ರಾಜಸೂಯಯಜ್ಞದಲ್ಲಿ ಉಪಸ್ಥಿತನಾಗಿದ್ದನು (ಸಭಾ 34/7). ದುರ್ಯೋಧನನ ಸೇನೆಯಲ್ಲಿ ಇವನು ದುರ್ಧರ್ಷ ರಥಿಯೆಂದು ಭೀಷ್ಮನಿಂದ ಹೇಳಲ್ಪಟ್ಟಿದ್ದಾನೆ (ಉದ್ಯೋಗ 168/1). ಅರ್ಜುನ ನೊಂದಿಗೆ ಯುದ್ಧಮಾಡುವಾಗ ಇವನು ಆತ ನಿಂದ ಕೊಲ್ಲಲ್ಪಟ್ಟನು (ದ್ರೋಣ 30/2–11). ವ್ಯಾಸರು ಆಹ್ವಾನಿಸಿದಾಗ ಗಂಗಾಜಲದಿಂದ ಈತ ಪ್ರಕಟಗೊಂಡನು (ಆಶ್ರಮ 32/12).

(2) ಒಬ್ಬ ರಾಜಕುಮಾರ. ಈತ ಕಲಿಂಗ (ಕಲಿಂಗರಾಜಕುಮಾರ)ನ ಸಹೋದರನಾಗಿದ್ದನು. ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 5/33).

**ವೃಷಕಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/35).

**ವೃಷಕ್ರಾಥ** – ಕೌರವಪಕ್ಷದ ಒಬ್ಬ ಯೋಧ. ಇವನು ದ್ರೋಣಾಚಾರ್ಯನಿರ್ಮಿತ ಗರುಡ ವ್ಯೂಹದ ಹೃದಯಸ್ಥಾನದಲ್ಲಿದ್ದನು (ದ್ರೋಣ 20/13).

**ವೃಷದಂಶ** – ಮಂದರಾಚಲದ ಹತ್ತಿರವಿರುವ ಒಂದು ಪರ್ವತ. ಇದು ಸ್ವಪ್ನದಲ್ಲಿ ಶ್ರೀಕೃಷ್ಣ ನೊಂದಿಗೆ ಶಿವನ ಬಳಿಗೆ ಹೋಗುತ್ತಿದ್ದ ಅರ್ಜುನ ನಿಗೆ ಮಾರ್ಗದಲ್ಲಿ ಸಿಕ್ಕಿತ್ತು (ದ್ರೋಣ 80/33).

**ವೃಷದರ್ಭ** – (1) ಒಬ್ಬ ಪ್ರಾಚೀನ ರಾಜರ್ಷಿ. ಇವನು ಯಮಸಭೆಯಲ್ಲಿರುತ್ತಾ ವಿವಸ್ವಂತನ ಮಗನಾದ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/26). ಬ್ರಾಹ್ಮಣನಿಗೆ ಸ್ವರ್ಣ ಅಥವಾ ಬೆಳ್ಳಿಯನ್ನೇ ದಾನವಾಗಿ ಕೊಡಬೇಕೆಂಬ ಗುಪ್ತ ನಿಯಮವೊಂದು ಇವನ ರಾಜ್ಯಭಾರ ಕಾಲದಲ್ಲಿ ಇವನ ನಿರ್ಣಯವಾಗಿತ್ತು (ವನ 196/3). ರಾಜಾ

ಸೇಂದುಕನು ಹೇಳಿದುದರಿಂದ, ಒಬ್ಬ ಬ್ರಾಹ್ಮಣನು ಇವನ ಬಳಿಗೆ ಬಂದು ಸಾವಿರ ಕುದುರೆಗಳನ್ನು ಯಾಚಿಸಿದುದು ಮತ್ತು ಇವನು ಆ ಬ್ರಾಹ್ಮಣನಿಗೆ ಚಾಟಿಯಿಂದ ಹೊಡೆದುದು (ವನ 196/4–8). ಈ ಹೊಡೆತದ ರಹಸ್ಯವೇನೆಂದು ಕೇಳಿದಾಗ ಬ್ರಾಹ್ಮಣನಿಗೆ ಹೇಳಿದುದು ಮತ್ತು ತನ್ನ ರಾಜ್ಯದ ಒಂದು ದಿನದ ಆದಾಯವನ್ನು ಅವನಿಗೆ ದಾನ ಮಾಡಿದುದು (ವನ 196/9–13).

(2) ಕಾಶಿ ಅಥವಾ ಕಾಶೀ ಜನಪದದ ರಾಜಾ ಉಶೀನರ. ಈತ ಶರಣಾಗತ ಪಾರಿವಾಳವನ್ನು ರಕ್ಷಿಸಿದ್ದನು (ಅನು 32 ಅಧ್ಯಾಯ).

**ವೃಷಧ್ವಜ** – ಪ್ರವೀರ ವಂಶದ ಒಬ್ಬ ಕುಲಕಳಂಕ ರಾಜ (ಉದ್ಯೋಗ 74/16).

**ವೃಷಪರ್ವಾ** – (1) ಒಬ್ಬ ದಾನವ. ಇವನು ಕಶ್ಯಪನಿಂದ ದನುವಿನಲ್ಲಿ ಹುಟ್ಟಿದ್ದನು (ಆದಿ 65/24). ಇವನು ದೀರ್ಘಪ್ರಜ್ಞನೆಂಬ ರಾಜನ ರೂಪದಲ್ಲಿ ಪೃಥ್ವಿಯಲ್ಲಿ ಜನಿಸಿದ್ದನು (ಆದಿ 67/ 15–16). ದೈತ್ಯ ಪುರೋಹಿತ ಶುಕ್ರಾಚಾರ್ಯ ಇವನ ನಗರದಲ್ಲೇ ವಾಸಿಸುತ್ತಿದ್ದನು (ಆದಿ 73/13–14). ಇವನ ಕನ್ಯೆಯ ಹೆಸರು ಶರ್ಮಿಷ್ಠೆ (ಆದಿ 78/6). ಶುಕ್ರಾಚಾರ್ಯನು ತನ್ನ ನಗರದಲ್ಲಿರಬೇಕೆಂದು ಈತನ ಕರುಣಾಪೂರ್ಣ ಪ್ರಾರ್ಥನೆ (ಆದಿ 80/7–8). ಇವನ ಪುತ್ರಿ ಶರ್ಮಿಷ್ಠೆಯನ್ನು ಜೀವನಪರ್ಯಂತ ತನ್ನ ದಾಸಿಯಾಗಿ ಮಾಡಬೇಕೆಂದು ಈತನಲ್ಲಿ ದೇವಯಾನಿಯ ಒತ್ತಾಯ (ಆದಿ 80/16). ಶರ್ಮಿಷ್ಠೆಯನ್ನು ಕರೆಸಲು ಈತ ದಾಸಿಯನ್ನು ಕಳುಹಿಸಿದುದು (ಆದಿ 80/17).

(2) ಒಬ್ಬ ಪ್ರಾಚೀನ ರಾಜರ್ಷಿ. ಈತನ ಆಶ್ರಮದೊಳಗೆ ಹೋಗಲು ಆಕಾಶವಾಣಿಯ ಮೂಲಕ ಪಾಂಡವರಿಗೆ ಆದೇಶ ದೊರಕಿತ್ತು (ವನ 156/15). ಇವನಿಂದ ಪಾಂಡವರಿಗೆ ಸ್ವಾಗತ (ವನ 158/20–23). ಈತ ಪಾಂಡವರಿಗೆ ಉಪ ದೇಶವನ್ನಿತ್ತದ್ದು (ವನ 158/26–27). ಪಾಂಡ ವರು ಹೋಗುವಾಗ ಈತ ಅವರನ್ನು ಬ್ರಾಹ್ಮಣ ರಿಗೆ ಒಪ್ಪಿಸಿದನು ಮತ್ತು ಸ್ವತಃ ಪಾಂಡವರಿಗೆ ಆಶೀರ್ವಾದ ಮಾಡಿ ಹಿಂತಿರುಗಿದನು (ವನ 158/28–29). ಪಾಂಡವರು ಪುನಃ ಹಿಂತಿರುಗಿ ವೃಷಪರ್ವಾನ ಆಶ್ರಮಕ್ಕೆ ಬಂದುದು ಮತ್ತು ಸತ್ಕೃತರಾದುದು (ವನ 177/6–8).

**ವೃಷಪ್ರಸ್ಥಗಿರಿ** – ಒಂದು ತೀರ್ಥ. ತೀರ್ಥ ಯಾತ್ರೆಯ ಸಮಯದಲ್ಲಿ ಪಾಂಡವರು ಇಲ್ಲಿ ವಾಸಿಸಿದ್ದರು (ವನ 95/3).

**ವೃಷಭ** – (1) ಮಗಧದ ರಾಜಧಾನಿ ಗಿರಿವ್ರಜದ ಸಮೀಪದ ಒಂದು ಪರ್ವತ (ಸಭಾ 21/2).

(2) ಗಾಂಧಾರರಾಜ ಸುಬಲನ ಪುತ್ರ. ಇವನು ಶಕುನಿಯ ತಮ್ಮ. ಇವನು ತನ್ನ ಐದು ಸಹೋದರರೊಂದಿಗೆ ಇರಾವಂತನ ಮೇಲೆ ಆಕ್ರಮಣ ಮಾಡಿದನು. ಆಗ ಆ ಐದು ಮಂದಿ ಕೊಲ್ಲಲ್ಪಟ್ಟರು, ಕೇವಲ ಇವನು ಮಾತ್ರ ಬದುಕಿದ್ದನು (ಭೀಷ್ಮ 90/33–47).

**ವೃಷಭಾ** – ಭಾರತವರ್ಷದ ಒಂದು ನದಿ. ಅದರ ನೀರನ್ನು ಭಾರತವಾಸಿಗಳು ಕುಡಿಯು ತ್ತಾರೆ (ಭೀಷ್ಮ 9/32).

**ವೃಷಭೇಕ್ಷಣ** – ಭಗವಾನ್ ಶ್ರೀಕೃಷ್ಣನ ಒಂದು ಹೆಸರು. ಈ ಹೆಸರಿನ ಅರ್ಥ (ಉದ್ಯೋಗ 70/7).

**ವೃಷಸೇನ** – (1) ಒಬ್ಬ ಪ್ರಾಚೀನ ರಾಜ. ಇವನು ಯಮಸಭೆಯಲ್ಲಿರುತ್ತಾ ವೈವಸ್ವತ ಯಮನ ಉಪಾಸನೆ ಮಾಡುತ್ತಾನೆ (ಸಭಾ8/13).

(2) ಯುಧಿಷ್ಠಿರನ ರಾಜಸೂಯ ಯಾಗಕ್ಕೆ ಬಂದಿದ್ದ ಒಬ್ಬ ಅಭಿಮಾನಿ ರಾಜ (ಸಭಾ 44/21–22).

(3) ಕರ್ಣನ ಒಬ್ಬ ಮಗ. ಇವನು ದುರ್ಯೋ ಧನನ ಸೇನೆಯ ಒಬ್ಬ ಶ್ರೇಷ್ಠ ರಥಿಕನಾಗಿದ್ದನು (ಉದ್ಯೋಗ 167/23). ಶತಾನೀಕನೇ ಮೊದಲಾದ ದ್ರೌಪದಿಪುತ್ರರೊಂದಿಗೆ ಈತನ ಯುದ್ಧ (ದ್ರೋಣ 16/1–10). ಪಾಂಡ್ಯನೊಂದಿಗೆ ಈತನ ಯುದ್ಧ (ದ್ರೋಣ 25/57). ಅಭಿಮನ್ಯುವಿನಿಂದ ಈತ ಪರಾಜಿತನಾದುದು (ದ್ರೋಣ 44/5–7). ಇವನ ಧ್ವಜದ ವರ್ಣನೆ (ದ್ರೋಣ 105/16–18). ಅರ್ಜುನನೊಂದಿಗೆ ಈತನ ಯುದ್ಧ (ದ್ರೋಣ 145/42–58). ದ್ರುಪದನೊಂದಿಗೆ ಇವನ ಸಂಗ್ರಾಮ (ದ್ರೋಣ 165/13). ಇವನಿಂದ ದ್ರುಪದನ ಪರಾಜಯ (ದ್ರೋಣ 168/19–26). ಸಾತ್ಯಕಿಯಿಂದ ಇವನಿಗೆ ಪರಾಜಯ (ದ್ರೋಣ 170/37–39). ದ್ರೋಣಾಚಾರ್ಯನು ಕೊಲ್ಲಲ್ಪ ಟ್ಟಾಗ ಈತ ಯುದ್ಧಸ್ಥಳದಿಂದ ಓಡಿದುದು

(ದ್ರೋಣ 193/16). ಸಾತ್ಯಕಿಯಿಂದ ಇವನ ಪರಾಜಯ (ದ್ರೋಣ 200/ 51–53; ಕರ್ಣ 48/43–45). ನಕುಲನೊಂದಿಗೆ ಈತನ ಯುದ್ಧ (ಕರ್ಣ 61/36–39). ಶತಾನೀಕನೊಂದಿಗೆ ಈತನ ಮುಖಾಮುಖಿ (ಕರ್ಣ 75/ 9–10). ನಕುಲನೊಂದಿಗೆ ಈತನ ಘೋರಸಂಗ್ರಾಮ ಮತ್ತು ಇವನಿಂದ ನಕುಲನ ಪರಾಜಯ (ಕರ್ಣ 84/ 19–35). ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 85/ 35–38). ವ್ಯಾಸರು ಆವಾಹನೆಮಾಡಿದಾಗ ಗಂಗಾಜಲದಿಂದ ಹೊರಗೆ ಬಂದ ವೀರರಲ್ಲಿ ಇವನೂ ಇದ್ದನು (ಆಶ್ರಮ 32/10).

**ವೃಷಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಇಲ್ಲಿರುವ ಜನ ಕುಡಿಯುತ್ತಾರೆ (ಭೀಷ್ಮ 9/35).

**ವೃಷಾಕಪಿ** – (1) ಭಗವಂತ ವಿಷ್ಣುವಿನ ಒಂದು ಹೆಸರು. ಈ ಹೆಸರಿನ ಅರ್ಥ (ಶಾಂತಿ 342/ 89).

(2) ಒಬ್ಬ ಋಷಿ. ಈತ ಇತರ ಋಷಿಗಳೊಡನೆ ದೇವತೆಗಳ ಯಜ್ಞದಲ್ಲಿ ಉಪಸ್ಥಿತನಾಗಿದ್ದನು (ಅನು 66/23).

(3) ಏಕಾದಶ ರುದ್ರರಲ್ಲಿ ಒಬ್ಬ (ಅನು 150/12–13).

**ವೃಷಾಂಡ** – ಒಬ್ಬ ದೈತ್ಯ, ದಾನವ ಅಥವಾ ರಾಕ್ಷಸ. ಇವನು ಈ ಪೃಥ್ವಿಯ ಪ್ರಾಚೀನ ಶಾಸಕನಾಗಿದ್ದನು. ಆದರೆ ಕಾಲನಿಂದ ಪೀಡಿತನಾಗಿ ಇವನ್ನೆಲ್ಲ ಬಿಟ್ಟು ಹೊರಟೇ ಹೋದನು (ಶಾಂತಿ 227/53).

**ವೃಷಾದರ್ಭಿ** – (1) ಕಾಶಿರಾಜ ವೃಷದರ್ಭನ ಪುತ್ರ ಯುವನಾಶ್ವ, ಈತ ಎಲ್ಲ ಬಗೆಯ ರತ್ನ, ಅಭೀಪ್ಸಿತ ಸ್ತ್ರೀ ಮತ್ತು ಸುಂದರ ಮನೆ ದಾನ ಮಾಡಿ, ಸ್ವರ್ಗಲೋಕದಲ್ಲಿ ವಾಸಮಾಡುತ್ತಾನೆ (ಶಾಂತಿ 234/25; ಅನು 137/10).

(2) ವೃಷದರ್ಭ(ಪ್ರಥಮ)ನ ಪುತ್ರ ರಾಜಾ ವೃಷಾದರ್ಭಿ. ಇವನು ಸಪ್ತರ್ಷಿಗಳಿಗೆ ದಾನ ಕೊಡಲು ಉದ್ಯತನಾದುದು (ಅನು 93/27–30). ಸಪ್ತರ್ಷಿಗಳ ಮೇಲೆ ಕುಪಿತನಾಗಿ, ಈತ ಕೃತ್ಯೆಯನ್ನು ಪ್ರಕಟಗೊಳಿಸಿದುದು (ಅನು 93/ 52–53). ಸಪ್ತರ್ಷಿಗಳನ್ನು ಕೊಲ್ಲಲು ಕೃತ್ಯೆಯನ್ನು ಕಳುಹಿಸಿದುದು (ಅನು 93/55–56).

**ವೃಷಾಮಿತ್ರ** – ಒಬ್ಬ ಋಷಿ. ಈತ ಯುಧಿಷ್ಠಿರನನ್ನು ವಿಶೇಷವಾಗಿ ಗೌರವಿಸುತ್ತಿದ್ದನು (ವನ 26/24).

**ವೃಷ್ಣಿ** – ಒಬ್ಬ ಯದುವಂಶದ ಕ್ಷತ್ರಿಯ. ಇವನ ವಂಶಜರು ವೃಷ್ಣಿಗಳೆಂದು ಕರೆಸಲ್ಪಟ್ಟರು (ಆದಿ 217/18). (ಇದೇ ವಂಶದಲ್ಲಿ ಭಗವಾನ್ ಶ್ರೀಕೃಷ್ಣ ಜನ್ಮವೆತ್ತಿದ್ದನು.)

**ವೇಗವಂತ**– (1) ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ನಾಗಯಜ್ಞದಲ್ಲಿ ಸುಟ್ಟುಹೋದನು (ಆದಿ 57/17).

(2) ಒಬ್ಬ ದಾನವ. ಇವನು ದನುವಿನ ವಿಖ್ಯಾತ ಪುತ್ರನಾಗಿದ್ದನು (ಆದಿ 65/24). ಇವನು ಈ ಭೂಮಿಯಲ್ಲಿ ಕೇಕಯ ರಾಜಕುಮಾರನ ರೂಪದಿಂದ ಹುಟ್ಟಿದ್ದನು (ಆದಿ 67/10–11).

(3) ಒಬ್ಬ ದೈತ್ಯ. ಇವನು ಶಾಲ್ವನ ಅನುಯಾಯಿಯಾಗಿದ್ದನು. ಜಾಂಬವತಿ ಪುತ್ರ ಸಾಂಬನೊಂದಿಗೆ ಈತನ ಯುದ್ಧ ಮತ್ತು ಆತನಿಂದ ವಧೆ (ವನ 16/17–20).

**ವೇಗವಾಹಿನಿ** – ಒಂದು ನದಿ. ಇವಳು ವರುಣ ಸಭೆಯಲ್ಲಿದ್ದು ವರುಣ ದೇವನ ಉಪಾಸನೆ ಮಾಡುತ್ತಾಳೆ (ಸಭಾ 9/18).

**ವೇಣಾ** – ಒಂದು ನದಿ. ಇವಳು ವರುಣ ಸಭೆಯಲ್ಲಿದ್ದು, ಆತನ ಉಪಾಸನೆ ಮಾಡುತ್ತಾಳೆ (ಸಭಾ 9/18). ದಕ್ಷಿಣ ದಿಗ್ವಿಜಯದ ಸಂದರ್ಭದಲ್ಲಿ ಸಹದೇವನು, ವೇಣಾತಟದಲ್ಲಿರುವ ಪ್ರದೇಶದ ಅರಸನನ್ನು ಪರಾಜಯಗೊಳಿಸಿದ್ದನು (ಸಭಾ 31/12). ವೇಣಾ ನದಿಯ ದಡಕ್ಕೆ ಹೋಗಿ ಮೂರು ರಾತ್ರಿ ಉಪವಾಸ ಮಾಡುವವನು, ನವಿಲು ಮತ್ತು ಹಂಸಗಳನ್ನು ಹೂಡಿದ ವಿಮಾನವನ್ನು ಪಡೆಯುತ್ತಾನೆ. ಇವಳು ಎಲ್ಲಾ ಪಾಪಗಳನ್ನು ನಾಶಮಾಡುವವಳಾಗಿದ್ದಾಳೆ (ವನ 85/32; ವನ 88/3). ಅಗ್ನಿಯನ್ನು ಉತ್ಪನ್ನ ಮಾಡುವ ನದಿಗಳಲ್ಲಿ ಈಕೆಯೂ ಗಣಿಸಲ್ಪಟ್ಟಿದ್ದಾಳೆ (ವನ 222/24–26). ಇವಳು ಭಾರತ ವರ್ಷದ ಒಬ್ಬ ನದಿಯಾಗಿದ್ದಾಳೆ. ಈ ನೀರನ್ನು ಇಲ್ಲಿರುವ ಪ್ರಜೆಗಳು ಕುಡಿಯುತ್ತಾರೆ (ಭೀಷ್ಮ 9/20–27). ಇವಳ ಹೆಸರು ಪ್ರಾತಃ ಸಂಧ್ಯಾ ಕಾಲಗಳಲ್ಲಿ ಸ್ಮರಣೆ ಮಾಡಲು ಯೋಗ್ಯವಾಗಿದೆ

(ಅನು 165/20).

**ವೇಣಾಸಂಗಮ** – ಒಂದು ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 85/34).

**ವೇಣಿಕಾ** – ಶಾಕದ್ವೀಪದ ಒಂದು ಪವಿತ್ರ ಜಲವುಳ್ಳ ನದಿ (ಭೀಷ್ಮ 11/32).

**ವೇಣೀ** – ಕೌರವ್ಯಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/12–13).

**ವೇಣೀಸ್ಕಂದ** – ಕೌರವ್ಯ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಸತ್ರದಲ್ಲಿ ದಗ್ಧನಾದನು (ಆದಿ 57/12–13).

**ವೇಣುಜಂಘ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/18).

**ವೇಣುದಾರಿ** – ಒಬ್ಬ ಯಾದವ. ಇವನು ವಭ್ರು (ಅಕ್ರೂರ)ವಿನ ಭಾರ್ಯೆಯನ್ನು ಅಪಹರಣ ಮಾಡಿದ್ದನು (ಸಭಾ 38/29).

**ವೇಣುದಾರಿಸುತ** – ಒಬ್ಬ ಯಾದವ. ಇವನನ್ನು ದಿಗ್ವಿಜಯ ಕಾಲದಲ್ಲಿ ಕರ್ಣನು ಸೋಲಿಸಿದ್ದನು (ವನ 254/15–16).

**ವೇಣುಪ** – ಒಂದು ಭಾರತೀಯ ಜನಪದ (ಉದ್ಯೋಗ 140/26).

**ವೇಣುಮಂಡಲ** – ಕುಶದ್ವೀಪದ ಏಳು ವರ್ಷಗಳಲ್ಲಿ ಎರಡನೆಯದು. ಈ ಏಳೂ ದೇಶಗಳಲ್ಲಿ ದೇವತೆ, ಗಂಧರ್ವ ಮತ್ತು ಮನುಷ್ಯರು ಆನಂದಪೂರ್ವಕ ವಾಸಿಸುತ್ತಾರೆ. ಇಲ್ಲಿ ಯಾರಿಗೂ ಮರಣವುಂಟಾಗುವುದಿಲ್ಲ. ಇಲ್ಲಿ ಕಳ್ಳಕಾಕರು, ಮ್ಲೇಚ್ಛಜಾತಿಯ ಜನರು ಇಲ್ಲ (ಭೀಷ್ಮ 12/12–15).

**ವೇಣುಮಂತ** – ಒಂದು ಶ್ವೇತವರ್ಣದ ಪರ್ವತ. ಇದು ಉತ್ತರಭಾಗದಲ್ಲಿ ಮಂದರಾಚಲಕ್ಕೆ ಸರಿಯಾಗಿ ನೆಲಸಿತ್ತು (ಸಭಾ 38/29).

**ವೇಣುವೀಣಾಧರ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/21).

**ವೇತಸವನ** – ಒಂದು ಪ್ರಾಚೀನ ತೀರ್ಥ. ಇಲ್ಲಿ ಮೃತ್ಯು ತಪಸ್ಸುಮಾಡಿದ್ದಳು (ದ್ರೋಣ 54/23).

**ವೇತನಿಕಾ** – ಬ್ರಹ್ಮನಿಂದ ಸೇವಿಸಲ್ಪಟ್ಟ ಒಂದು ತೀರ್ಥ. ಇಲ್ಲಿಗೆ ಹೋದರೆ ಮನುಷ್ಯ ಅಶ್ವಮೇಧ ಯಜ್ಞದ ಫಲಪಡೆಯುತ್ತಾನೆ. ಮತ್ತು ಶುಕ್ರಾಚಾರ್ಯರ ಲೋಕಕ್ಕೆ ಹೋಗುತ್ತಾನೆ (ವನ 84/56).

**ವೇತಾಲ ಜನನಿ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/13).

**ವೇತ್ರಕೀಯಗೃಹ** – ಏಕಚಕ್ರಾ ನಗರದ ಸಮೀಪ ವಿರುವ ಒಂದು ಸ್ಥಾನವಿಶೇಷ. ಇಲ್ಲಿ ಆ ಪ್ರದೇಶದ ರಾಜ ವಾಸಿಸುತ್ತಿದ್ದನು (ಆದಿ 159/9).

**ವೇತ್ರಕೀಯವನ** – ಒಂದು ಕಾಡು. ಇಲ್ಲಿ ಭೀಮಸೇನನು ಬಕಾಸುರನನ್ನು ಕೊಂದಿದ್ದನು (ವನ 11/30–31).

**ವೇತ್ರವತೀ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/16, 19).

**ವೇತ್ರಿಕ** – ಒಂದು ಭಾರತೀಯ ಜನಪದ. ದುರ್ಯೋಧನನು ಈ ಭಾಗದ ಸೈನಿಕರನ್ನು ಭೀಷ್ಮನ ರಕ್ಷಣೆಗಾಗಿ ಕಳುಹಿಸಿದ್ದನು (ಭೀಷ್ಮ 51/7).

**ವೇದ** – (1) ಈತ ಆಯೋದ ಧೌಮ್ಯ ಮುನಿಯ ಒಬ್ಬ ಶಿಷ್ಯನಾಗಿದ್ದನು (ಆದಿ 3/78). ಇವನ ಗುರುಭಕ್ತಿಯ ವರ್ಣನೆ (ಆದಿ 3/79). ಇವನಿಗೆ ಗುರುವಿನ ಆಶೀರ್ವಾದ ಪ್ರಾಪ್ತವಾದುದು (ಆದಿ 3/80). ಇವನ ಗಾರ್ಹಸ್ಥ್ಯ ಧರ್ಮದ ವರ್ಣನೆ (ಆದಿ 3/81). ಈತ ಜನಮೇಜಯನ ಉಪಾಧ್ಯಾಯನಾದುದು (ಆದಿ 3/82). ಪರ ದೇಶಕ್ಕೆ ಹೋಗುವಾಗ, ತನ್ನ ಶಿಷ್ಯ ಉತ್ತಂಕನಿಗೆ, ಮನೆಯ ರಕ್ಷಣೆ, ಪಾಲನೆ ಪೋಷಣೆಯ ಎಚ್ಚರಿಕೆ ವಹಿಸುವಂತೆ ಈತನ ಆದೇಶ (ಆದಿ 3/84). ಇವನು ಪರದೇಶದಿಂದ ಹಿಂತಿರುಗಿ ದಾಗ ಉತ್ತಂಕನ ಕಾರ್ಯವಿಧಾನವನ್ನು ನೋಡಿ ಪ್ರಸನ್ನನಾದುದು ಮತ್ತು ಆತನಿಗೆ ಆಶೀರ್ವಾದ ವನ್ನಿತ್ತು ಮನೆಗೆ ಹೋಗಲು ಆಜ್ಞೆ ನೀಡಿದುದು (ಆದಿ 3/88–89). ಗುರುದಕ್ಷಿಣೆ ಸ್ವೀಕರಿಸಲು ಉತ್ತಂಕನು ಒತ್ತಾಯಿಸಿದಾಗ, ಅವನನ್ನು ಗುರು ಪತ್ನಿಯ ಬಳಿಗೆ, ಗುರುದಕ್ಷಿಣೆಯ ವಸ್ತುವನ್ನು ಕೇಳಲು ಕಳುಹಿಸಿದುದು (ಆದಿ 3/90–94).

(2) ಭಾರತೀಯ ಆರ್ಯರ ಸರ್ವಪ್ರಧಾನ ಮತ್ತು ಸರ್ವಸಾಮಾನ್ಯ ಧಾರ್ಮಿಕಗ್ರಂಥ. ಇದು ಅಪ್ರತಿಮ ಜ್ಞಾನಭಂಡಾರವಾಗಿದೆ. ಇವುಗಳ ಸಂಖ್ಯೆ – ನಾಲ್ಕು. ಋಗ್ವೇದ, ಯಜುರ್ವೇದ,

ಸಾಮವೇದ ಮತ್ತು ಅಥರ್ವವೇದ. ಇವರೆಲ್ಲರೂ ಮೂರ್ತಿಮತ್ತಾಗಿ ಬ್ರಹ್ಮನ ಸಭೆಯಲ್ಲಿರುತ್ತಾರೆ (ಸಭಾ 11/32).

**ವೇದವತೀ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/17).

**ವೇದಶಿರಾ** – ಒಬ್ಬ ಪ್ರಾಚೀನ ಋಷಿ. ಇವನು ಉಪರಿಚರವಸುವಿನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/8).

**ವೇದಸ್ಮೃತಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/17).

**ವೇದಾಶ್ವಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತ ವಾಸಿಗಳು ಕುಡಿಯುತ್ತಾರೆ (ಭೀಷ್ಮ 9/28).

**ವೇದೀ** – ಬ್ರಹ್ಮನ ಭಾರ್ಯೆ (ಉದ್ಯೋಗ 117/10).

**ವೇದೀತೀರ್ಥ** – (1) ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ ಮನುಷ್ಯ ಸಾವಿರ ಗೋದಾನದ ಫಲ ಪಡೆಯುತ್ತಾನೆ (ವನ 83/99).

(2) ಒಂದು ಪರಮ ದುರ್ಗಮ ತೀರ್ಥ. (ಇದು ಪ್ರಾಯಶಃ ಸಿಂಧುವಿನ ಉಗಮಸ್ಥಾನದ ಹತ್ತಿರ ಇದೆ.) ಇಲ್ಲಿಗೆ ಯಾತ್ರೆ ಮಾಡುವುದರಿಂದ ಮನುಷ್ಯ ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ ಮತ್ತು ಸ್ವರ್ಗಕ್ಕೆ ಹೋಗುತ್ತಾನೆ (ವನ 84/47).

**ವೇನ** – (1) ವೈವಸ್ವತ ಮನುವಿನ ಪ್ರಥಮದ ಹತ್ತು ಪುತ್ರರಲ್ಲಿ ಒಬ್ಬ (ಆದಿ 75/15–17).

(2) ಮೃತ್ಯುವಿನ ಮಾನಸೀ ಕನ್ಯೆ ಸುನೀಥಾ ಎಂಬವಳ ಗರ್ಭದಿಂದ ಹುಟ್ಟಿದ ಒಬ್ಬ ರಾಜ (ಶಾಂತಿ 59/93). ಋಷಿಗಳ ಶಾಪದಿಂದ ಇವನ ಮೃತ್ಯು (ಶಾಂತಿ 59/94). ಋಷಿಗಳ ಮೂಲಕ ಇವನ ಬಲ ತೊಡೆಯ ಮಂಥನದಿಂದ ನಿಷಾದರ ಮತ್ತು ವಿಂಧ್ಯಗಿರಿ ನಿವಾಸಿಗಳಾದ ಲಕ್ಷಾಂತರ ಮ್ಲೇಚ್ಛರ ಉತ್ಪತ್ತಿಯಾಯಿತು (ಶಾಂತಿ 59/95–97). ಬಲ ಕೈಯ ಮಂಥನದಿಂದ ಪೃಥು ಹುಟ್ಟಿದನು (ಶಾಂತಿ 59/98). ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15).

**ವೇಹತ** – ಒಂದು ಪುಷ್ಟಿಕಾರಕ ಔಷಧಿ (ವನ 197/17).

**ವೈಕರ್ತನ** – ತನ್ನ ಶರೀರದಿಂದ ಕವಚವನ್ನು ಕತ್ತರಿಸಿದ ಕಾರಣದಿಂದ ಕರ್ಣನ ಹೆಸರು ವೈಕರ್ತನ ಎಂದಾಯಿತು (ಆದಿ 110/31). (ವಿಶೇಷ ನೋಡಿರಿ – ಕರ್ಣ).

**ವೈಕುಂಠ** – ಪಂಚಭೂತಗಳನ್ನೂ ಸೇರಿಸುವುದರಿಂದ ಯಾರ ಶಕ್ತಿ ಎಂದೂ ಕಡಿಮೆ (ಕುಂಠಿತ) ಆಗುವುದಿಲ್ಲವೋ, ಆತ ಭಗವಾನ್ ವೈಕುಂಠನೆಂದು ಕರೆಯಲ್ಪಡುತ್ತಾನೆ (ಶಾಂತಿ 342/80).

**ವೈಜಯಂತ** – (1) ಇಂದ್ರನ ಧ್ವಜದ ಹೆಸರು (ವನ 42/8).

(2) ಕ್ಷೀರಸಾಗರದ ಮಧ್ಯಭಾಗದಲ್ಲಿರುವ ಒಂದು ಪರ್ವತ. ಇಲ್ಲಿಗೆ ಪ್ರತಿದಿನ ಅಧ್ಯಾತ್ಮಗತಿಯ ಚಿಂತನೆ ಮಾಡಲು ಬ್ರಹ್ಮನು ಬರುತ್ತಾನೆ (ಶಾಂತಿ 350/9–10).

**ವೈಜಯಂತೀ** – (1) ಐರಾವತದ ಎರಡು ಘಂಟೆಗಳ ಹೆಸರು. ಇವನ್ನು ಇಂದ್ರನು ಸ್ಕಂದನಿಗೆ ಅರ್ಪಿಸಿದ್ದನು. ಅವುಗಳಲ್ಲಿ ಒಂದನ್ನು ವಿಶಾಖನು ತೆಗೆದುಕೊಂಡನು ಮತ್ತು ಇನ್ನೊಂದು ಸ್ಕಂದನ ಬಳಿ ಉಳಿಯಿತು (ವನ 231/18–19).

(2) ಕವಚ ಕುಂಡಲ ದಾನಕ್ಕೆ ಪ್ರತಿಯಾಗಿ, ಇಂದ್ರನಿಂದ ಕರ್ಣನಿಗೆ ಕೊಡಲ್ಪಟ್ಟ ಶಕ್ತ್ಯಾಯುಧ (ದ್ರೋಣ 179).

**ವೈದೂರ್ಯಪರ್ವತ** – ಶೂರ್ಪರಕ ಕ್ಷೇತ್ರದಲ್ಲಿ ಗೋಕರ್ಣತೀರ್ಥದ ಹತ್ತಿರವಿರುವ ಒಂದು ಪರ್ವತ. ಇದು ಶಿವಸ್ವರೂಪವೆಂದು ತಿಳಿಯಲ್ಪಡುತ್ತದೆ. ಇಲ್ಲಿಯೇ ಅಗಸ್ತ್ಯನ ಆಶ್ರಮವಿದೆ. ವೈದೂರ್ಯ ಪರ್ವತದ ದರ್ಶನಮಾಡಿ, ನರ್ಮದೆಯಲ್ಲಿ ಇಳಿಯುವುದರಿಂದ ಮನುಷ್ಯ ದೇವತೆಗಳಂತೆ ಮತ್ತು ಪುಣ್ಯಾತ್ಮರಾದ ರಾಜರಂತೆ ಪವಿತ್ರಲೋಕಗಳನ್ನು ಪಡೆಯುತ್ತಾನೆ. ಈ ಪರ್ವತ ತ್ರೇತಾ ಮತ್ತು ದ್ವಾಪರಗಳ ಸಂಧಿಕಾಲದಲ್ಲಿ ಪ್ರಕಟಗೊಂಡಿತ್ತು (ವನ 88/18, ವನ 121/19–20).

**ವೈತರಣೀ** – (1) ಭಾಗೀರಥೀ ಗಂಗೆ ಪಿತೃಲೋಕದಲ್ಲಿ ಹರಿಯುವಾಗ ಅವಳ ಹೆಸರು

ವೈತರಣೀ ಎಂದಾಗುತ್ತದೆ. ಅಲ್ಲಿ ಪಾಪಿಗಳು ಇವಳನ್ನು ದಾಟಿ ಹೋಗುವುದು ಅತ್ಯಂತ ಕಠಿನವಾಗುತ್ತದೆ (ಆದಿ 169/22).

(2) ಒಂದು ನದಿ. ಈಕೆ ವರುಣ ಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾಳೆ (ಸಭಾ 9/20). ಇವಳು ಎಲ್ಲಾ ಪಾಪಗಳಿಂದ ಬಿಡುಗಡೆಗೊಳಿಸುವವಳು. ಇವಳ ವಿರಜತೀರ್ಥದಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಚಂದ್ರನಂತೆ ಪ್ರಕಾಶಿತನಾಗುತ್ತಾನೆ (ವನ 85/6). ಭಾರತ ವಾಸಿಗಳು ನೀರು ಕುಡಿಯುವ ಭಾರತದ ಪ್ರಸಿದ್ಧ ನದಿಗಳಲ್ಲಿ ಇದೂ ಒಂದಾಗಿದೆ (ಭೀಷ್ಮ 9/34).

**ವೈತಸ್ತಿಕ** – ಬಾಣ ವಿಶೇಷ. ಹತ್ತಿರದಲ್ಲಿರುವ ಲಕ್ಷ್ಯವನ್ನು ಭೇದಿಸಲು ಸಾಧ್ಯವಾಗುವಂತೆ ದ್ರೋಣರೇ ನಿರ್ಮಿಸಿದ ಬಾಣ (ದ್ರೋಣ 122). ಇದು ಹನ್ನೆರಡು ಅಂಗುಲ ಉದ್ದದ (ಗೇಣುದ್ದ). ಬಾಣ. ಈ ರೀತಿಯ ಬಾಣಗಳು ಕೃಪ, ಕರ್ಣ, ಅರ್ಜುನ, ಅಶ್ವತ್ಥಾಮ, ಪ್ರದ್ಯುಮ್ನ, ಯುಯುಧಾನ, ಅಭಿಮನ್ಯು ಮತ್ತು ದ್ರೋಣರಲ್ಲಿ ಮಾತ್ರ ಇದ್ದಿತ್ತು (ದ್ರೋಣ 191).

**ವೈತಾಲೀ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ವೈದರ್ಭೀ** – ರಾಜಾ ಸಗರನ ಒಬ್ಬಳು ಪತ್ನಿ. ಈಕೆಯಿಂದ ಅರುವತ್ತು ಸಾವಿರ ಪುತ್ರರ ಜನನವಾಗಿತ್ತು (ವನ 106/17–23).

**ವೈದೇಹ** – ಒಂದು ಭಾರತೀಯ ಜನಪದ (ಭೀಷ್ಮ 9/57). (ವಿಶೇಷ ನೋಡಿರಿ ವಿದೇಹ)

**ವೈನತೇಯ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/10).

**ವೈಮಾನಿಕ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಅಪ್ಸರೆಯರ ದಿವ್ಯ ಲೋಕಕ್ಕೆ ಹೋಗುತ್ತಾನೆ. ಮತ್ತು ಇಚ್ಛಾನುಸಾರ ಸಂಚರಿಸುತ್ತಾನೆ (ಅನು 25/23).

**ವೈಮಿತ್ರಾ** – ಏಳು ಶಿಶುಮಾತೆಯರಲ್ಲಿ ಒಬ್ಬಳು. ಉಳಿದ ಆರು ಮಂದಿಯ ಹೆಸರು – ಕಾಕೀ, ಹಲಿಮಾ, ಮಾಲಿನೀ, ಬೃಹತಾ, ಆರ್ಯಾ ಮತ್ತು ಪಲಾಲಾ (ವನ 228/10).

**ವೈರಾಜ** – ಏಳು ಪಿತೃಗಳಲ್ಲಿ ಒಬ್ಬ. ಉಳಿದ ಆರು ಮಂದಿಯ ಹೆಸರು– ಅಗ್ನಿಷ್ವಾತ್ತ, ಸೋಮಪಾ, ಗಾರ್ಹಪತ್ಯ, ಏಕಶೃಂಗ, ಚತುರ್ವೇದ ಮತ್ತು ಕಲ. ಇವರು ಬ್ರಹ್ಮನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾರೆ (ಸಭಾ 11/46).

**ವೈರಾಟ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. ಈತ ಭೀಮಸೇನನಿಂದ ಕೊಲ್ಲಲ್ಪಟ್ಟಿದ್ದನು (ಭೀಷ್ಮ 96/26).

**ವೈರಾಮ** – ಒಂದು ಪ್ರಾಚೀನ ಜಾತಿಯ ಹೆಸರು. ಈ ಜಾತಿಯ ಜನರು ನಾನಾ ಪ್ರಕಾರದ ರತ್ನ ಮತ್ತು ತರತರದ ಉಡುಗೊರೆ ವಸ್ತುಗಳನ್ನು ತೆಗೆದುಕೊಂಡು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಬಂದಿದ್ದರು (ಸಭಾ 51/12).

**ವೈವಸ್ವತ ತೀರ್ಥ** – ಒಂದು ಪುಣ್ಯಮಯ ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯ ಸ್ವತಃ ತೀರ್ಥರೂಪನಾಗುತ್ತಾನೆ (ಅನು 25/39).

**ವೈವಸ್ವತ ಮನು** – ಹದಿನಾಲ್ಕು ಮಂದಿ ಮನುಗಳಲ್ಲಿ ಇವನು ಏಳನೆಯವನು (ಆದಿ 75/1) (ವಿಶೇಷ ನೋಡಿರಿ– ಮನು).

**ವೈವಾಹಿಕಪರ್ವ** – (1) ಆದಿ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 192 ರಿಂದ 198ರ ತನಕ).

(2) ವಿರಾಟಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 70ರಿಂದ 72ರ ವರೆಗೆ).

**ವೈಶಂಪಾಯನ** – ಮಹರ್ಷಿ ವೇದವ್ಯಾಸನ ಶಿಷ್ಯ. ಇವನು ಮಹಾರಾಜ ಜನಮೇಜಯನಿಗೆ ಮಹಾಭಾರತದ ಕಥೆಯನ್ನು ಹೇಳಿದ್ದನು (ಆದಿ 1/20–21,98). ಜನಮೇಜಯನಿಗೆ ಮಹಾಭಾರತದ ಕಥೆಯನ್ನು ಹೇಳಲು ಈತನಿಗೆ ಗುರುಗಳಾದ ವ್ಯಾಸರಿಂದ ಪ್ರೇರಣೆ ದೊರಕಿದುದು (ಆದಿ 60/22). ಇವನಿಂದ ಮಹಾಭಾರತ ಗ್ರಂಥದ ಮಹಿಮೆಯ ವಿಸ್ತಾರವಾದ ವರ್ಣನೆ (ಆದಿ 62/12–53). ಇವನು ಅಜ್ಞಾನವಶನಾಗಿ ಒಮ್ಮೆ ಬ್ರಾಹ್ಮಣ ವಧೆ ಮಾಡಿದುದರಿಂದ ಬಾಲವಧೆಯ ಪಾಪದಿಂದ ಲಿಪ್ತನಾಗಿದ್ದನು. ಆದರೂ ಸ್ವರ್ಗಕ್ಕೆ ಹೋದನು (ಅನು 6/37).

**ವೈಶಾಖ** – (ಹನ್ನೆರಡು ತಿಂಗಳುಗಳಲ್ಲಿ ಒಂದು. ಯಾವ ತಿಂಗಳ ಪೂರ್ಣಿಮೆಯ ದಿನ ವಿಶಾಖಾ ನಕ್ಷತ್ರದ ಯೋಗ ಪ್ರಾಪ್ತವಾಗುತ್ತದೋ, ಅದನ್ನು ವೈಶಾಖವೆನ್ನುತ್ತಾರೆ. ಇದು ಚೈತ್ರದ ಅನಂತರ ಮತ್ತು ಜ್ಯೇಷ್ಠದ ಮೊದಲು ಬರುತ್ತದೆ.)

ಇಂದ್ರಿಯ ಸಂಯಮಪೂರ್ವಕ ಒಂದು ಹೊತ್ತು ಭೋಜನಮಾಡಿ ವೈಶಾಖಮಾಸವನ್ನು ಕಳೆಯುವ ಸ್ತ್ರೀ ಅಥವಾ ಪುರುಷನು ಸಜಾತೀಯ ಬಂಧುಬಾಂಧವರಲ್ಲಿ ಶ್ರೇಷ್ಠತ್ವ ಪಡೆಯುತ್ತಾನೆ (ಅನು 106/24). ವೈಶಾಖಮಾಸದ ದ್ವಾದಶಿ ತಿಥಿಯಂದು ಉಪವಾಸಪೂರ್ವಕ, ಭಗವಾನ್ ಮಧುಸೂದನನ ಪೂಜೆಮಾಡುವ ಪುರುಷ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ ಮತ್ತು ಸೋಮಲೋಕಕ್ಕೆ ಹೋಗುತ್ತಾನೆ (ಅನು 109/8).

**ವೈಶಾಲಾಕ್ಷ** – ಬ್ರಹ್ಮನ ನೀತಿಶಾಸ್ತ್ರ. ಇದು ವಿಶಾಲಾಕ್ಷ ಭಗವಾನ್ ಶಿವನಿಂದ ಸಂಕ್ಷಿಪ್ತ ಮಾಡಲ್ಪಟ್ಟದ್ದರಿಂದ ವೈಶಾಲಾಕ್ಷವೆಂದು ಕರೆಯಲ್ಪಡುತ್ತದೆ (ಶಾಂತಿ 59/82).

**ವೈಶ್ರವಣ** – ಕುಬೇರನ ಒಂದು ಹೆಸರು (ಆದಿ 198/6) (ನೋಡಿರಿ– ಕುಬೇರ).

**ವೈಶ್ವಾನರ** – (1) ಒಬ್ಬ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/18).

(2) ಭಾನು (ಮನು) ಎಂಬ ಅಗ್ನಿಯ ಪ್ರಥಮ ಪುತ್ರ. ಚಾತುರ್ಮಾಸ್ಯ ಯಜ್ಞಗಳಲ್ಲಿ ಹವಿಸ್ಸಿನ ಮೂಲಕ ಪರ್ಜನ್ಯಸಹಿತ ಇವನ ಪೂಜೆ ಮಾಡಲ್ಪಡುತ್ತದೆ (ವನ 221/16).

**ವೈಷ್ಣವಧರ್ಮಪರ್ವ** – ಆಶ್ವಮೇಧಿಕಪರ್ವದ ಒಂದು ಅವಾಂತರ ಪರ್ವ. ಇದು ದಾಕ್ಷಿಣಾತ್ಯ ಪಾಠದಿಂದ ತೆಗೆದುಕೊಳ್ಳಲ್ಪಟ್ಟಿದೆ (ಅಧ್ಯಾಯ 92).

**ವೈಹಾಯಸ** – ನರನಾರಾಯಣಾಶ್ರಮ ಸಮೀಪದ ಒಂದು ಕುಂಡ (ಶಾಂತಿ 127/3).

**ವ್ಯಶ್ವ** – ಒಬ್ಬ ರಾಜ. ಈತ ಯಮ ಸಭೆಯಲ್ಲಿರುತ್ತಾ ವೈವಸ್ವತ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

**ವ್ಯಾಘ್ರಕೇತು**– ಪಾಂಡವಪಕ್ಷದ ಒಬ್ಬ ಪಾಂಚಾಲ ಯೋಧ. ಕರ್ಣ ಇವನನ್ನು ಗಾಯಗೊಳಿಸಿದ್ದನು (ಕರ್ಣ 56/44–48).

**ವ್ಯಾಘ್ರದತ್ತ** – (1) ಪಾಂಡವಪಕ್ಷದ ಒಬ್ಬ ರಾಜ. ಇವನು ಶ್ರೇಷ್ಠ ರಥಿಕರಲ್ಲಿ ಗಣಿಸಲ್ಪಟ್ಟಿದ್ದಾನೆ (ಉದ್ಯೋಗ 171/19). ದ್ರೋಣಾಚಾರ್ಯನೊಂದಿಗೆ ಇವನ ಯುದ್ಧ ಮತ್ತು ಆತನಿಂದ ವಧೆ (ದ್ರೋಣ 16/32–37). ಇವನ ಕುದುರೆಗಳ ವರ್ಣನೆ – ಕತ್ತೆಗಳ ಹಾಗೆ ಮಲಿನ ಮತ್ತು ಕೆಂಪು ವರ್ಣದವು ಮತ್ತು ಬೆನ್ನಿನ ಭಾಗದಲ್ಲಿ ಇಲಿಯಂತೆ ಕಪ್ಪು ಕೊಳಕು ಕಾಂತಿಯವುಗಳು, ವಿನೀತ ಕುದುರೆಗಳು ವ್ಯಾಘ್ರದತ್ತನನ್ನು ಯುದ್ಧರಂಗಕ್ಕೆ ತೆಗೆದುಕೊಂಡು ಹೋಗಿದ್ದವು (ದ್ರೋಣ 23/54). ವಿಕರ್ಣನಿಂದ ಈತ ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/16–17).

(2) ಮಗಧದೇಶದ ಒಬ್ಬ ರಾಜಕುಮಾರ. ಇವನು ಕೌರವಪಕ್ಷದ ಯೋಧನಾಗಿದ್ದನು. ಸಾತ್ಯಕಿಯೊಂದಿಗೆ ಇವನ ಯುದ್ಧ (ದ್ರೋಣ 106/14). ಸಾತ್ಯಕಿಯೊಂದಿಗೆ ಸಂಗ್ರಾಮ ಮಾಡುತ್ತಾ ಆತನಿಂದ ಇವನ ವಧೆ (ದ್ರೋಣ 107/31–33).

**ವ್ಯಾಘ್ರಪಾದ** – ಒಬ್ಬ ಪ್ರಾಚೀನ ಋಷಿ. ಈತ ಉಪಮನ್ಯುವಿನ ತಂದೆಯಾಗಿದ್ದನು (ಅನು 14/45).

**ವ್ಯಾಘ್ರಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/59).

**ವ್ಯಾಸ** – ಒಬ್ಬ ಮಹರ್ಷಿ. ಇವನಿಗೆ ನಮಸ್ಕಾರ ಮಾಡಿದ ಬಳಿಕ ಜಯ(ಮಹಾಭಾರತ ಹಾಗೂ ಇತಿಹಾಸ ಪುರಾಣಾದಿ)ವನ್ನು ಪಠಿಸುವುದು ಕ್ರಮವಾಗಿದೆ; ಇವನನ್ನು ಕೃಷ್ಣದ್ವೈಪಾಯನನೆಂದು ಹೇಳುತ್ತಾರೆ (ಆದಿ 1 ಮಂಗಲಾಚರಣ). ರಾಜರ್ಷಿ ಜನಮೇಜಯನ ಸರ್ಪಯಜ್ಞದಲ್ಲಿ ವೈಶಂಪಾಯನನ ಮೂಲಕ ಶ್ರೀಕೃಷ್ಣದ್ವೈಪಾಯನನಿಂದ ಕಥಿಸಲ್ಪಟ್ಟ, ಮಹಾಭಾರತದ ವಿಚಿತ್ರ, ವಿವಿಧ ಮತ್ತು ಪುಣ್ಯಮಯ ಕಥೆಗಳು ಹೇಳಲ್ಪಟ್ಟಿದ್ದವು (ಆದಿ 1/9–11). ಇವನಿಂದ ಹೇಳಲ್ಪಟ್ಟ ಮಹಾಭಾರತ ಸಂಹಿತೆ ಎಲ್ಲಾ ಶಾಸ್ತ್ರಗಳ ಅಭಿಪ್ರಾಯಕ್ಕೆ ಅನುಕೂಲವಾಗಿ, ವೇದಾರ್ಥಗಳಿಂದ ಭೂಷಿತವಾಗಿ ಮತ್ತು ನಾಲ್ಕೂ ವೇದಗಳ ಭಾವಗಳಿಂದ ಸಂಯುಕ್ತವಾಗಿದೆ (ಆದಿ 1/17–21). ಹಿಮಾಲಯದ ಪವಿತ್ರ ಕಂದರದಲ್ಲಿ ಪರ್ವತದ ಗುಹೆಯೊಳಗೆ, ಸ್ನಾನಾದಿಗಳಿಂದ ಪವಿತ್ರನಾಗಿ, ದರ್ಭೆಯ ಆಸನದಲ್ಲಿ ಕುಳಿತು, ಧ್ಯಾನಯೋಗದಲ್ಲಿ ಸ್ಥಿತನಾಗಿ, ಇವನು ಧರ್ಮದ ಮೂಲಕವಾಗಿ, ಮಹಾಭಾರತದ ಇತಿಹಾಸದ ಸ್ವರೂಪವನ್ನು ವಿಚಾರಿಸುತ್ತಾ, ಜ್ಞಾನದೃಷ್ಟಿಯ ಮೂಲಕ ಆದಿಯಿಂದ ಅಂತ್ಯದವರೆಗೆ, ಎಲ್ಲವನ್ನು ಪ್ರತ್ಯಕ್ಷ ರೀತಿಯಲ್ಲಿ ನೋಡಿದನು (ಆದಿ

1/28). ಇವನು ತಪಸ್ಸು ಮತ್ತು ಬ್ರಹ್ಮಚರ್ಯದ ಶಕ್ತಿಯಿಂದ, ಸನಾತನ ವೇದದ ವಿಸ್ತಾರಮಾಡಿ, ಲೋಕ ಪಾವನವಾದ ಪವಿತ್ರ ಇತಿಹಾಸವನ್ನು ರಚಿಸಿದನು (ಆದಿ 1/54). ಈತ ಪರಾಶರ ಮುನಿಯ ಪುತ್ರನು ಮತ್ತು ದ್ವೈಪಾಯನನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಉತ್ತಮ ವ್ರತಧಾರಿಯೂ, ನಿಗ್ರಹಾನುಗ್ರಹ ಸಮರ್ಥನೂ, ಸರ್ವಜ್ಞನೂ ಆಗಿದ್ದಾನೆ. ಇವನು ಮಹಾ ಭಾರತವನ್ನು ರಚಿಸಿ, 'ಈಗ ನಾನು ಶಿಷ್ಯರಿಗೆ ಈ ಗ್ರಂಥದ ಅಧ್ಯಯನ ಹೇಗೆ ಮಾಡಿಸಲೆ'ಂದು ಯೋಚಿಸಿದನು. ಇವನ ಯೋಚನೆಯನ್ನು ತಿಳಿದು ಲೋಕಗುರುವಾದ ಭಗವಾನ್ ಬ್ರಹ್ಮನು, ಲೋಕಕಲ್ಯಾಣದ ಕಾಮನೆಯಿಂದ ಸ್ವಯಂ ಈತನ ಆಶ್ರಮಕ್ಕೆ ಬಂದನು. ಇವನು ಬ್ರಹ್ಮನಿಗೆ ಪ್ರಣಾಮ ಮಾಡಿ, ಆತನನ್ನು ಶ್ರೇಷ್ಠ ಆಸನದಲ್ಲಿ ಕುಳ್ಳಿರಿಸಿದನು. ಅವನ ಪ್ರದಕ್ಷಿಣೆ ಮಾಡಿದನು. ಅವನ ಆಸನದ ಬಳಿಯಲ್ಲಿಯೇ ಈತ ಕೈಜೋಡಿಸಿ ನಿಂತು ಕೊಂಡನು. ಅನಂತರ ಬ್ರಹ್ಮನ ಆಜ್ಞೆ ಪ್ರಕಾರ ಕುಳಿತು ಪ್ರಸನ್ನನಾಗಿ ಹೇಳಿದನು. 'ಭಗವಂತ! ನಾನು ಒಂದು ಮಹಾ ಕಾವ್ಯದ ರಚನೆ ಮಾಡಿದ್ದೇನೆ. ಇದರಲ್ಲಿ ಎಲ್ಲಾ ವೇದಗಳ ಗುಟ್ಟಾದ ರಹಸ್ಯ ಮತ್ತು ಇತರ ಎಲ್ಲಾ ಶಾಸ್ತ್ರಗಳ ಸಾರ ಸಂಕಲಿತವಾಗಿದೆ. ಆದರೆ ಇದಕ್ಕೆ ಯಾವ ಲೇಖಕನೂ ಸಿಗುವುದಿಲ್ಲ' ಬ್ರಹ್ಮನು ಇವನ ಕಾವ್ಯವನ್ನು ಪ್ರಶಂಸಿಸಿ, ಈತ ಗಣೇಶ ನನ್ನು ಸ್ಮರಣೆ ಮಾಡುವಂತೆ ಆಜ್ಞೆಯನ್ನಿತ್ತನು. ಮತ್ತು ತಾನು ತನ್ನ ಧಾಮಕ್ಕೆ ಹೊರಟು ಹೋದನು (ಆದಿ 1/55–74). ಇವನು ಗಣೇಶನನ್ನು ಸ್ಮರಣೆ ಮಾಡಿದನು. ಗಣೇಶನು ಆಗಮಿಸಿದನು. ಲೇಖಕನಾಗಲು ವ್ಯಾಸನು ಆತನನ್ನು ಪ್ರಾರ್ಥಿಸಿದನು. 'ಬರೆಯುವಾಗ ನನ್ನ ಲೇಖನಿ ಕ್ಷಣಕಾಲವೂ ನಿಲ್ಲಬಾರದು. ಹಾಗಿದ್ದರೆ ಮಾತ್ರ ನಾನು ಲೇಖಕನಾಗುವೆನೆಂ'ದು ಆತನು ಹೇಳಿದನು. ವ್ಯಾಸನು ಹೇಳಿದನು 'ಹಾಗೆಯೇ ಆಗಲಿ! ಆದರೆ ತಾವು ಕೂಡಾ ಅರ್ಥೈಸದೆ ಒಂದು ಅಕ್ಷರ ಕೂಡಾ ಬರೆಯಲಾಗದು' ಈತ ಮಹಾಭಾರತದಲ್ಲಿ ಎಂಟು ಸಾವಿರದ ಎಂಟು ನೂರು ಶ್ಲೋಕ ರಚಿಸಿದುದರ ಅರ್ಥವನ್ನು ಇವನು ಮತ್ತು ಶುಕ್ರಾಚಾರ್ಯ ಮಾತ್ರ ತಿಳಿದಿದ್ದಾರೆಂದು ಪ್ರತೀತಿಯಿದೆ. ಗಣೇಶನು ಸರ್ವಜ್ಞನಾದರೂ, ಕ್ಷಣಕಾಲ ಇಂತಹ ಶ್ಲೋಕ ಗಳ ಕುರಿತು ಆಲೋಚಿಸುವಾಗ, ವ್ಯಾಸನು ಮತ್ತೂ ಅನೇಕ ಶ್ಲೋಕಗಳ ರಚನೆ ಮಾಡಿಬಿಡು ತ್ತಿದ್ದನು (ಆದಿ 1/75–83). ಇವನು ತಾಯಿ ಯಾದ ಸತ್ಯವತಿ ಮತ್ತು ಪರಮಜ್ಞಾನಿಯಾದ ಗಂಗಾಪುತ್ರ ಭೀಷ್ಮನ ಅನುಮತಿಯಂತೆ ವಿಚಿತ್ರವೀರ್ಯನ ಪತ್ನಿಯರ ಗರ್ಭದಿಂದ, ಅಗ್ನಿಸದೃಶರಾದ ಮೂವರು ತೇಜಸ್ವೀ ಪುತ್ರರನ್ನು ಹುಟ್ಟಿಸಿದನು. ಅವರ ಹೆಸರುಗಳು– ಧೃತರಾಷ್ಟ್ರ, ಪಾಂಡು ಮತ್ತು ವಿದುರ. ಇವರೆಲ್ಲ ಪರಲೋಕ ಸೇರಿದ ಅನಂತರ ವ್ಯಾಸರು ಮನುಷ್ಯಲೋಕದಲ್ಲಿ ಮಹಾಭಾರತದ ಪ್ರವಚನ ಮಾಡಿದರು. ಜನಮೇಜಯ ಮತ್ತು ಸಹಸ್ರಾರು ಬ್ರಾಹ್ಮಣರು ಪ್ರಶ್ನೆ ಮಾಡಿದಾಗ, 'ನೀನು ಇವರಿಗೆ ಮಹಾ ಭಾರತದ ಕಥೆಯನ್ನು ಹೇಳು' ಎಂದು ಈತ ತನ್ನ ಶಿಷ್ಯ ವೈಶಂಪಾಯನಿಗೆ ಆಜ್ಞೆಯನ್ನಿತ್ತನು (ಆದಿ 1/84–99). ಇವನು ಉಪಾಖ್ಯಾನಗಳ ಸಹಿತ ರಚಿಸಿದ ಆದ್ಯಭಾರತ ಅಥವಾ ಮಹಾ ಭಾರತ ಒಂದು ಲಕ್ಷ ಶ್ಲೋಕಗಳುಳ್ಳದ್ದಾಗಿದೆ. ಅನಂತರ ಇವನು ಉಪಾಖ್ಯಾನ ಭಾಗವನ್ನು ಬಿಟ್ಟು, ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳ ಒಂದು ಸಂಹಿತೆಯನ್ನು ರಚಿಸಿದನು; ಇದನ್ನು ವಿದ್ವಾಂಸರು 'ಭಾರತ'ವೆನ್ನುತ್ತಾರೆ. ಇವನು ಮೊತ್ತಮೊದಲು ತನ್ನ ಪುತ್ರ ಶುಕದೇವನಿಗೆ ಮಹಾಭಾರತ ಗ್ರಂಥದ ಅಧ್ಯಯನ ಮಾಡಿಸಿದನು. ಅನಂತರ ಇತರೇತರ ಯೋಗ್ಯ ಶಿಷ್ಯರಿಗೆ ಇದರ ಉಪದೇಶ ಮಾಡಿದನು. ಅನಂತರ ಭಗವಾನ್ ವ್ಯಾಸನು ಅರುವತ್ತು ಲಕ್ಷ ಶ್ಲೋಕಗಳ ಇನ್ನೊಂದು ಸಂಹಿತೆಯನ್ನು ರಚಿಸಿದನು. ಅದರ ಮೂವತ್ತು ಲಕ್ಷ ಶ್ಲೋಕಗಳು ದೇವಲೋಕದಲ್ಲಿ ಗೌರವಾರ್ಹ ವಾಗಿವೆ. ಪಿತೃಲೋಕದಲ್ಲಿ ಹದಿನೈದು ಲಕ್ಷ ಮತ್ತು ಗಂಧರ್ವಲೋಕದಲ್ಲಿ ಹದಿನಾಲ್ಕು ಲಕ್ಷ ಶ್ಲೋಕಗಳ ಪಠನೆ ನಡೆಯುತ್ತದೆ. ಉಳಿದುದು ಒಂದು ಲಕ್ಷ ಶ್ಲೋಕಗಳು. ಅವನ್ನೇ ಆದ್ಯಭಾರತ ಅಥವಾ ಮಹಾಭಾರತವೆನ್ನುತ್ತಾರೆ. ಮನುಷ್ಯ ಲೋಕದಲ್ಲಿ ಇವುಗಳೇ ಪ್ರತಿಷ್ಠಿತವಾದವುಗಳು. ದೇವತೆಗಳಿಗೆ ನಾರದನು, ಪಿತೃಗಳಿಗೆ ಅಸಿತ ದೇವಲನು, ಗಂಧರ್ವರಿಗೆ ಶುಕಮುನಿಯು

ಮತ್ತು ಮನುಷ್ಯರಿಗೆ ವೈಶಂಪಾಯನನು ಮಹಾಭಾರತ ಸಂಹಿತೆಯನ್ನು ಹೇಳಿದ್ದರು (ಆದಿ 1/101–109). ಪುತ್ರ ಮತ್ತು ಶಿಷ್ಯರ ಸಹಿತ ಭಗವಾನ್ ವೇದವ್ಯಾಸರು ಜನಮೇಜಯನ ಸರ್ಪ ಯಜ್ಞದಲ್ಲಿ ಸದಸ್ಯರಾಗಿದ್ದರು (ಆದಿ 53/7–10). ಆಸ್ತೀಕನು ಜನಮೇಜಯನ ಯಜ್ಞವನ್ನು ಸತ್ಯವತೀನಂದನ ವ್ಯಾಸನ ಯಜ್ಞಕ್ಕೆ ಸಮಾನ ವೆಂದು ಹೇಳಿದನು (ಆದಿ 55/7). ಯಜ್ಞಕರ್ಮ ದಿಂದ ಅವಕಾಶ ಸಿಕ್ಕಿದಾಗ ವ್ಯಾಸದೇವನು, ಅತಿ ವಿಚಿತ್ರವಾದ ಮಹಾಭಾರತದ ಕಥೆಯನ್ನು ಹೇಳು ತ್ತಿದ್ದನು (ಆದಿ 59/5). ಇವನನ್ನು 'ಸತ್ಯವತಿ' ಅಥವಾ 'ಕಾಲೀ'ಯು ಕನ್ಯಾವಸ್ಥೆಯಲ್ಲಿಯೇ ಪರಾಶರ ಮುನಿಯಿಂದ ಯಮುನಾ ನದಿಯ ದ್ವೀಪದಲ್ಲಿ ಹಡೆದಿದ್ದಳು. ಇವನು ಪಾಂಡವರ ಪಿತಾಮಹನಾಗಿದ್ದನು. ಇವನು ಜನ್ಮಹೊಂದು ತ್ತಲೇ ತನ್ನ ಇಚ್ಛೆಯಿಂದ ಶರೀರವನ್ನು ವೃದ್ಧಿಸಿಕೊಂಡಿದ್ದನು. ಇವನಿಗೆ ತಾನಾಗಿಯೇ, ಸಾಂಗವಾಗಿಯೂ, ಇತಿಹಾಸಗಳ ಸಹಿತ ವಾಗಿಯೂ ಸಂಪೂರ್ಣ ವೇದ ಮತ್ತು ಪರ ಮಾತ್ಮ ತತ್ತ್ವಗಳ ಜ್ಞಾನಪ್ರಾಪ್ತವಾಗಿತ್ತು. ಇವನು ವೇದಜ್ಞಾನಿಗಳಲ್ಲಿ ಶ್ರೇಷ್ಠನು. ಇವನು ಒಂದೇ ವೇದವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ದನು. ಬ್ರಹ್ಮರ್ಷಿ ವ್ಯಾಸನು ಪರಬ್ರಹ್ಮ ಮತ್ತು ಅಪರಬ್ರಹ್ಮರನ್ನು ತಿಳಿದವನೂ, ಕವಿಯೂ, (ತ್ರಿಕಾಲದರ್ಶಿ), ಸತ್ಯವ್ರತಪರಾಯಣ ಮತ್ತು ಪರಮಪವಿತ್ರನೂ ಆಗಿದ್ದನು. ಇವನು ಶಾಂತನು ವಿನ ಸಂತಾನಪರಂಪರೆಯನ್ನು ವಿಸ್ತಾರಗೊಳಿಸು ವುದಕ್ಕಾಗಿ, ಧೃತರಾಷ್ಟ್ರ, ಪಾಂಡು ಮತ್ತು ವಿದುರ ನಿಗೆ ಜನ್ಮವಿತ್ತನು. ಇವನು ಜನಮೇಜಯನ ಯಜ್ಞಮಂಟಪಕ್ಕೆ ಆಗಮಿಸಿದನು. ರಾಜಾ ಜನಮೇಜಯನು ಸೇವಕರ ಸಹಿತವಾಗಿ ಎದ್ದು ನಿಂತು ಈತನನ್ನು ಸ್ವಾಗತಿಸಿದನು. ಇವನನ್ನು ಚಿನ್ನದ ಸಿಂಹಾಸನದ ಮೇಲೆ ಕುಳ್ಳಿರಿಸಿ, ಈತನ ಪೂಜೆ ಮಾಡಿದನು ಮತ್ತು ಕುಶಲಪ್ರಶ್ನೆಯ ಅನಂತರ ಈತನೊಡನೆ ಮಹಾಭಾರತ ಯುದ್ಧದ ವೃತ್ತಾಂತವನ್ನು ಕೇಳಿದನು. ಆಗ ಈತ ತನ್ನ ಹತ್ತಿರ ಕುಳಿತಿದ್ದ ಶಿಷ್ಯ ವೈಶಂಪಾಯನನಿಗೆ ಎಲ್ಲಾ ಕಥೆಯನ್ನು ಹೇಳಲು ಆಜ್ಞೆಯನ್ನಿತ್ತನು (ಆದಿ 60/1–22). ವೈಶಂಪಾಯನನು ಗುರುವರ್ಯ ವ್ಯಾಸನಿಗೆ ನಮಸ್ಕಾರ ಮಾಡಿ, ಕಥೆಯನ್ನು ಪ್ರಾರಂಭ ಮಾಡಿದನು (ಆದಿ 61/1–2). ವ್ಯಾಸನು ಹೇಳಿದ ಪಂಚಮವೇದ ಸ್ವರೂಪವಾದ ಈ ಮಹಾಭಾರತವನ್ನು 'ಕಾರ್ಷ್ಣ ವೇದ'ವೆಂದು ಹೇಳುತ್ತಾರೆ. ಇದನ್ನು ಇತರರಿಗೆ ಕೇಳಿಸುವವನಿಗೆ ಅಭೀಷ್ಟಾರ್ಥಪ್ರಾಪ್ತವಾಗಿದೆ. ಇದರ ಮಹಿಮೆಯ ವಿಸ್ತೃತ ವರ್ಣನೆ (ಆದಿ 62/18–41). ಮುನಿವರವ್ಯಾಸನು ಪ್ರತಿದಿನ ಪ್ರಾತಃಕಾಲ ಎದ್ದು, ಸ್ನಾನಸಂಧ್ಯಾದಿಗಳಿಂದ ಶುದ್ಧನಾಗಿ ಮಹಾಭಾರತದ ರಚನೆ ಮಾಡುತ್ತಿ ದ್ದನು. ಇವನು ತಪಸ್ಸು ಮತ್ತು ನಿಯಮಗಳನ್ನು ಆಶ್ರಯಿಸಿ, ಮೂರು ವರ್ಷಗಳಲ್ಲಿ ಈ ಗ್ರಂಥ ವನ್ನು ಪೂರ್ಣಗೊಳಿಸಿದ್ದನು (ಆದಿ 62/41–42). ತಾಯಿಯಾದ ಸತ್ಯವತಿ ಪರಾಶರನ ಸಂಯೋಗದಿಂದ, ತತ್ಕ್ಷಣವೇ ಯಮುನೆಯ ದ್ವೀಪದಲ್ಲಿ ಇವನಿಗೆ ಜನ್ಮವಿತ್ತಿದ್ದಳು. ಆದುದ ರಿಂದಲೇ ಈತ ಪಾರಾಶರ್ಯ ಮತ್ತು ದ್ವೈಪಾಯನನೆಂದು ಕರೆಯಲ್ಪಟ್ಟನು. ಈತ ತಾಯಿ ಯಿಂದ ಆಜ್ಞೆ ಪಡೆದು, ತಪಸ್ಸಿನಲ್ಲಿಯೇ ತನ್ಮಯನಾದನು ಮತ್ತು ತಾಯಿಯೊಡನೆ 'ಆವಶ್ಯಕತೆ ಬಿದ್ದಾಗ ನೀನು ನನ್ನ ಸ್ಮರಣೆ ಮಾಡು; ನಾನು ಅವಶ್ಯವಾಗಿ ದರ್ಶನವನ್ನೀಯು ತ್ತೇನೆ' ಎಂದನು (ಆದಿ 63/84–85). ವೇದ ಗಳನ್ನು ವ್ಯಾಸ(ವಿಸ್ತಾರ)ಗೊಳಿಸಿದ್ದರಿಂದ ಈತ ವೇದವ್ಯಾಸನೆಂಬ ಹೆಸರಿನಿಂದ ಪ್ರಖ್ಯಾತನಾದನು (ಆದಿ 63/88). ಈತ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಮತ್ತು ಪಂಚಮ ವೇದ ಮಹಾಭಾರತದ ಅಧ್ಯಯನವನ್ನು ಸುಮಂತು, ಜೈಮಿನಿ, ಪೈಲ, ಶುಕದೇವ ಮತ್ತು ವೈಶಂಪಾಯನರಿಗೆ ಮಾಡಿಸಿದನು (ಆದಿ 63/89–90). ಈತನಿಂದ ಅಂಬಿಕೆ ಮತ್ತು ಅಂಬಾಲಿಕೆಯ ಗರ್ಭದಲ್ಲಿ ರಾಜಾ ಧೃತರಾಷ್ಟ್ರ ಮತ್ತು ಮಹಾಬಲವಂತನಾದ ಪಾಂಡುವಿನ ಜನನವಾಯಿತು. ಈತನೇ ಶೂದ್ರ ಜಾತಿಯ ಸ್ತ್ರೀಯ ಗರ್ಭದಲ್ಲಿ ವಿದುರನಿಗೆ ಜನ್ಮವಿತ್ತನು. ಅವನು ಧರ್ಮ–ಅರ್ಥಗಳ ಜ್ಞಾನದಲ್ಲಿ ನಿಪುಣನೂ, ಬುದ್ಧಿವಂತನೂ, ಮೇಧಾವಿಯೂ, ನಿಷ್ಪಾಪನೂ ಆಗಿದ್ದನು (ಆದಿ 63/113–114). ಸತ್ಯವತಿಯ ಮೂಲಕ ವ್ಯಾಸನ ಆವಾಹನೆ

ಮತ್ತು ವ್ಯಾಸನು ತಾಯಿಯ ಆಜ್ಞೆ ಪ್ರಕಾರ, ವಿಚಿತ್ರವೀರ್ಯನ ಪತ್ನಿಯರ ಗರ್ಭದಲ್ಲಿ ಸಂತಾನೋತ್ಪಾದನೆ ಮಾಡಲು ಒಪ್ಪಿಗೆಯನ್ನಿತ್ತದ್ದು (ಆದಿ 104/24–49). ಇವನಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಧೃತರಾಷ್ಟ್ರ, ಪಾಂಡು ಮತ್ತು ವಿದುರನ ಉತ್ಪತ್ತಿ ಮತ್ತು ತಾಯಿ ಕೇಳಿದಾಗ, ಆ ಪುತ್ರರ ಭಾವೀ ಗುಣಲಕ್ಷಣಗಳನ್ನು ಈತ ವರ್ಣಿಸಿದುದು (ಆದಿ 105 ಅಧ್ಯಾಯ). ಈತ ನೂರು ಮಕ್ಕಳಾಗುವಂತೆ ಗಾಂಧಾರಿಗೆ ವರವನ್ನಿತ್ತದ್ದು (ಆದಿ 114/8). ಗಾಂಧಾರಿಯ ಗರ್ಭದಿಂದ ಬಿದ್ದ ಮಾಂಸಪಿಂಡದಿಂದ ನೂರು ಪುತ್ರರಾಗುವಂತೆ ಈತನ ವ್ಯವಸ್ಥೆ (ಆದಿ 114/17–24). ಆ ಮಾಂಸಪಿಂಡದಿಂದ ನೂರ ಒಂದನೇ ಭಾಗದಿಂದ ಗಾಂಧಾರಿಗೆ ಒಬ್ಬಳು ಪುತ್ರಿಯಾಗುವಂತೆ ಆಶ್ವಾಸನೆಯನ್ನಿತ್ತದ್ದು ಮತ್ತು ಅದನ್ನೂ ತುಪ್ಪದ ಗಡಿಗೆಯಲ್ಲಿ ಸ್ಥಾಪಿಸಿದುದು (ಆದಿ 115/16–18). ಕಾಡಿನಲ್ಲಿ ಕುಂತಿ ಸಹಿತರಾದ ಪಾಂಡವರಿಗೆ ವ್ಯಾಸನು ದರ್ಶನವನ್ನಿತ್ತು ಧೈರ್ಯ ಹೇಳಿದುದು (ಆದಿ 155/5–19). ಇವನು ಪಾಂಡವರಿಗೆ ಪುನಃ ದರ್ಶನವನ್ನಿತ್ತು, ದ್ರೌಪದಿಯ ಪೂರ್ವಜನ್ಮದ ವೃತ್ತಾಂತ ಹೇಳಿದುದು ಮತ್ತು ಅವಳು ಇವರೆಲ್ಲರ ಪತ್ನಿಯಾಗುವ ವಿಷಯ ತಿಳಿಸಿ, ಪಾಂಚಾಲ ರಾಜಧಾನಿಗೆ ಹೋಗುವಂತೆ ಆದೇಶ ನೀಡಿದುದು (ಆದಿ 168 ಅಧ್ಯಾಯ). ಕೃಷ್ಣದ್ವೈಪಾಯನರ ಅಭಿಪ್ರಾಯ ಪ್ರಕಾರ ದೇವಲೋಕದಲ್ಲಿ ಅಲಕಾನಂದ ಎಂಬ ಹೆಸರಿನ ಗಂಗೆ ಭೂಲೋಕದಲ್ಲಿ ಗಂಗಾ, ಪಿತೃಲೋಕದಲ್ಲಿ ವೈತರಣೀ ಎಂಬ ನಾಮಕರಣ ಹೊಂದಿದ್ದಾಳೆ (ಆದಿ 170/24). ದ್ರುಪದನ ರಾಜಧಾನಿಯ ಕಡೆಗೆ ಹೋಗುತ್ತಿದ್ದ ಪಾಂಡವರೊಡನೆ ಮಾರ್ಗದಲ್ಲಿ ಈತನ ಭೇಟಿ ಮತ್ತು ಪರಸ್ಪರ ಸ್ವಾಗತ ಸತ್ಕಾರದ ಅನಂತರ ವಾರ್ತಾಲಾಪ (ಆದಿ 184/2,3). ದ್ರೌಪದಿಯು ಐವರು ಪುರುಷರೊಡನೆ ವಿವಾಹವಾಗುವ ವಿಷಯದಲ್ಲಿ, ವ್ಯಾಸನ ಸಮಕ್ಷಮದಲ್ಲಿ, ದ್ರುಪದ, ಧೃಷ್ಟದ್ಯುಮ್ನ ಮತ್ತು ಯುಧಿಷ್ಠಿರ ತಮ್ಮ ತಮ್ಮ ವಿಚಾರ ವ್ಯಕ್ತಪಡಿಸಿದುದು ಮತ್ತು ಆ ಸತ್ಯಕ್ಕೆ ಹೆದರಿದ ಕುಂತಿಗೆ ಈತ ಧೈರ್ಯ ತುಂಬಿದುದು (ಆದಿ 195 ಅಧ್ಯಾಯ). ಈತ ದ್ರುಪದನಿಗೆ ಪಾಂಡವರು ಮತ್ತು ದ್ರೌಪದಿಯ ಪೂರ್ವಜನ್ಮದ ಕಥೆ ಹೇಳಿ, ಅವನಿಗೆ ದಿವ್ಯದೃಷ್ಟಿಯನ್ನಿತ್ತದ್ದು (ಆದಿ 196/1–38). ದ್ರೌಪದಿ ಸ್ವರ್ಗದ ಲಕ್ಷ್ಮಿ ಮತ್ತು ಐವರೂ ಪಾಂಡವರ ಪತ್ನಿಯೆಂದು ನಿರ್ಣಯಿಸಲ್ಪಟ್ಟಿದ್ದಾಳೆ ಎಂಬ ವಿಷಯವನ್ನು ಈತ ದ್ರುಪದನಿಗೆ ಮನವರಿಕೆ ಮಾಡಿಸಿದುದು (ಆದಿ 196/51–53). ಶ್ರೀಕೃಷ್ಣ ದ್ವೈಪಾಯನ ವ್ಯಾಸ ಯುಧಿಷ್ಠಿರನ ಸಭೆಯಲ್ಲಿ ವಿರಾಜಮಾನನಾಗಿರುತ್ತಿದ್ದನು (ಸಭಾ 4/11). ಅರ್ಜುನನು ಉತ್ತರಕ್ಕೂ, ಭೀಮಸೇನನು ಪೂರ್ವಕ್ಕೂ, ಸಹದೇವನು ದಕ್ಷಿಣಕ್ಕೂ, ನಕುಲನು ಪಶ್ಚಿಮಕ್ಕೂ ದಿಗ್ವಿಜಯಕ್ಕಾಗಿ ಹೋಗುವಂತೆ ಈತನ ಆದೇಶ (ಸಭಾ 25/4). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಇವನು ಬ್ರಹ್ಮನ ಕಾರ್ಯ ನಿರ್ವಹಿಸಿದುದು (ಸಭಾ 33/34). ರಾಜಸೂಯಯಜ್ಞದ ಅಂತ್ಯದಲ್ಲಿ ಯುಧಿಷ್ಠಿರನಿಗೆ ಭವಿಷ್ಯವಾಣಿಯನ್ನು ಹೇಳಿದುದು (ಸಭಾ 46/1–17). ರಾಜಸೂಯ ಯಜ್ಞದ ಅಂತ್ಯದಲ್ಲಿ ಇವನು ಯುಧಿಷ್ಠಿರನಿಗೆ ಅಭಿಷೇಕ ಮಾಡಿದುದು (ಸಭಾ 53/10). ಇವನು ಧೃತರಾಷ್ಟ್ರನೊಡನೆ ದುರ್ಯೋಧನನ ಅನ್ಯಾಯಗಳನ್ನು ತಡೆಯಲು ಒತ್ತಾಯಿಸಿದುದು (ವನ 7/23ರಿಂದ ವನ 8 ಅಧ್ಯಾಯದ ವರೆಗೆ). ಇವನಿಂದ ಸುರಭಿ ಮತ್ತು ಇಂದ್ರನ ಉಪಾಖ್ಯಾನದ ವರ್ಣನೆ; ಪಾಂಡವರ ಪರವಾಗಿ ದಯೆ ತೋರಿದುದು (ವನ 9 ಅಧ್ಯಾಯ). ಧೃತರಾಷ್ಟ್ರನಿಗೆ ಮೈತ್ರೇಯರ ಆಗಮನದ ಸೂಚನೆಯನ್ನಿತ್ತು ಈತನ ಪ್ರಸ್ಥಾನ (ವನ 10/4–6). ಇವನು ದ್ವೈತವನದಲ್ಲಿ ಪಾಂಡವರ ಬಳಿಗೆ ಹೋದುದು ಮತ್ತು ಯುಧಿಷ್ಠಿರನಿಗೆ ಪ್ರತಿಸ್ಮೃತಿ ವಿದ್ಯೆಯನ್ನು ಉಪದೇಶ ಮಾಡಿದುದು (ವನ 36/24–38). ಕುರುಕ್ಷೇತ್ರದ ಎಲ್ಲೆಯೊಳಗೆ ಒಂದು ಮಿಶ್ರಕ ತೀರ್ಥವಿದೆ; ಅಲ್ಲಿ ಮಹಾತ್ಮನಾದ ವ್ಯಾಸನು ದ್ವಿಜರಿಗಾಗಿ ಎಲ್ಲಾ ತೀರ್ಥಗಳ ಸಮ್ಮಿಶ್ರಣ ಮಾಡಿದ್ದಾನೆ. ಮುಂದೆ ಹೋದಾಗ ವ್ಯಾಸವನವಿದೆ; ಇಲ್ಲಿಂದಲೂ ಮುಂದೆ ಹೋದಾಗ ವ್ಯಾಸಸ್ಥಳವೆಂಬ ಒಂದು ಸ್ಥಾನವಿದೆ. ಇಲ್ಲಿ ಬುದ್ಧಿವಂತನಾದ ವ್ಯಾಸನು ಪುತ್ರಶೋಕದಿಂದ ಸಂತೃಪ್ತನಾಗಿ ಶರೀರ ತ್ಯಾಗಮಾಡಲು ಆಲೋಚಿಸಿದ್ದನು (ವನ 83/91–97). ದಾನ ಧರ್ಮದ

ಪ್ರತಿಪಾದನೆಯ ಸಂದರ್ಭದಲ್ಲಿ ಮುದ್ಗಲ ಋಷಿಯ ಕಥೆಯನ್ನು ಈತ ಹೇಳಿದುದು (ವನ ಅಧ್ಯಾಯ 260 ರಿಂದ 261 ವರೆಗೆ). ಧೃತರಾಷ್ಟ್ರನಿಗೆ ಶ್ರೀಕೃಷ್ಣ ಮತ್ತು ಅರ್ಜುನರ ಮಹಿಮಾ ವಿಶೇಷವನ್ನು ಹೇಳುವಂತೆ ಸಂಜಯ ನಿಗೆ ಆದೇಶ ನೀಡಿದುದು (ಉದ್ಯೋಗ 67/10). ಇವನು ಧೃತರಾಷ್ಟ್ರನಿಗೆ ನೀತಿ ಹೇಳಿದುದು (ಉದ್ಯೋಗ 69/11–15). ಇವನಿಂದ ಸಂಜಯ ನಿಗೆ ದಿವ್ಯದೃಷ್ಟಿದಾನ (ಭೀಷ್ಮ 2/10). ಧೃತರಾಷ್ಟ್ರ ನಿಗೆ ಭಯಂಕರ ಉತ್ಪಾತಗಳ ವರ್ಣನೆ ಮಾಡಿ ದುದು (ಭೀಷ್ಮ 2/16ರಿಂದ ಭೀಷ್ಮ 3/45ವರೆಗೆ). ವಿಜಯ ಸೂಚಕ ಲಕ್ಷಣಗಳ ವರ್ಣನೆ ಮಾಡಿ ದುದು (ಭೀಷ್ಮ 3/66–85). ಇವನು ಯುಧಿಷ್ಠಿರ ನಿಗೆ ಮೃತ್ಯುವಿನ ಅನಿವಾರ್ಯತೆಯನ್ನು ಹೇಳಿ ದುದು (ದ್ರೋಣ 52/11). ಯುಧಿಷ್ಠಿರನಿಗೆ ನಾರದ ಅಕಂಪನ ಸಂವಾದವನ್ನು ತಿಳಿಸಿದುದು (ದ್ರೋಣ 52/20 ರಿಂದ 54 ಅಧ್ಯಾಯದ ವರೆಗೆ). ಷೋಡಶರಾಜಕೀಯೋಪಾಖ್ಯಾನ ಪ್ರಾರಂಭಮಾಡಿದುದು (ದ್ರೋಣ ಅಧ್ಯಾಯ 55ರಿಂದ ದ್ರೋಣ 71/22ರ ವರೆಗೆ). ಯುಧಿ ಷ್ಠಿರನ ಶೋಕನಿವಾರಣೆಮಾಡಿ ಅಂತರ್ಧಾನ ನಾದುದು (ದ್ರೋಣ 71/23). ಘಟೋತ್ಕಚ ವಧೆಯಿಂದ ದುಃಖಿತನಾದ ಯುಧಿಷ್ಠಿರನಿಗೆ ಸಮಾಧಾನ ಹೇಳಿದುದು (ದ್ರೋಣ 183/58–67). ಅಶ್ವತ್ಥಾಮನಿಗೆ ಶಿವ ಮತ್ತು ಶ್ರೀಕೃಷ್ಣನ ಮಹಿಮೆಯನ್ನು ತಿಳಿಸಿದುದು (ದ್ರೋಣ 201/56–96). ಅರ್ಜುನನಿಗೆ ಭಗವಾನ್ ಶಿವನ ಮಹಿಮೆಯನ್ನು ಹೇಳಿದುದು (ದ್ರೋಣ 202 ಅಧ್ಯಾಯ). ವಧಿಸಲು ಸಿದ್ಧನಾದ ಸಾತ್ಯಕಿಯ ಕೈಯಿಂದ ಸಂಜಯನನ್ನು ಮುಕ್ತಗೊಳಿಸಿದುದು (ಶಲ್ಯ 29/39). ಇವನಿಂದ ಧೃತರಾಷ್ಟ್ರನಿಗೆ ಸಾಂತ್ವನ (ಶಲ್ಯ 63/77). ಅರ್ಜುನ ಮತ್ತು ಅಶ್ವತ್ಥಾಮರ ಬ್ರಹ್ಮಾಸ್ತ್ರಗಳನ್ನು ಶಾಂತಗೊಳಿಸಲು ಇವನು ಪ್ರತ್ಯಕ್ಷನಾದುದು (ಸೌಪ್ತಿಕ 14/11). ಅಶ್ವತ್ಥಾಮನೊಡನೆ ತನ್ನ ಮಣಿಯನ್ನಿತ್ತು ಶಾಂತ ನಾಗಲು ಹೇಳಿದುದು (ಸೌಪ್ತಿಕ 15/19–27). ಶ್ರೀಕೃಷ್ಣನು ಅಶ್ವತ್ಥಾಮನಿಗೆ ಕೊಟ್ಟ ಶಾಪವನ್ನು ಸಮರ್ಥನೆ ಮಾಡಿದುದು (ಸೌಪ್ತಿಕ 16/17–18). ಶೋಕದಿಂದ ಮೂರ್ಛಿತನಾದ ಧೃತರಾಷ್ಟ್ರನನ್ನು ಸಮಾಧಾನಗೊಳಿಸಿದುದು (ಸ್ತ್ರೀ 8/13–49). ಪಾಂಡವರಿಗೆ ಶಾಪಕೊಡಲು ಸಿದ್ಧಳಾದ ಗಾಂಧಾರಿಯನ್ನು ಸಮಾಧಾನಗೊಳಿಸಿದುದು (ಸ್ತ್ರೀ 14/7–13). ಯುದ್ಧಾನಂತರ ಯುಧಿಷ್ಠಿರನ ಬಳಿಗೆ ಬಂದುದು (ಶಾಂತಿ 1/4). ಯುಧಿಷ್ಠಿರ ನಿಗೆ ಶಂಖ ಮತ್ತು ಲಿಖಿತರ ಚರಿತ್ರೆಯನ್ನು ಹೇಳುತ್ತಾ, ಸುದ್ಯುಮ್ನನ ರಾಜದಂಡದ ಮಹತ್ವ ವನ್ನು ಪ್ರತಿಪಾದನೆ ಮಾಡಿದುದು (ಶಾಂತಿ 23 ಅಧ್ಯಾಯ). ರಾಜಾ ಹಯಗ್ರೀವನ ಚರಿತ್ರೆಯನ್ನು ಹೇಳುತ್ತಾ, ಯುಧಿಷ್ಠಿರನಿಗೆ ರಾಜೋಚಿತ ಕರ್ತವ್ಯ ಪಾಲನೆಯನ್ನು ತಿಳಿಸಿದುದು (ಶಾಂತಿ 24 ಅಧ್ಯಾಯ). ರಾಜಾ ಸೇನಜಿತನ ಉದ್ಗಾರಗಳನ್ನು ಉಲ್ಲೇಖಿಸುತ್ತಾ ಯುಧಿಷ್ಠಿರನಲ್ಲಿ ಧೈರ್ಯ ತುಂಬಿ ದುದು (ಶಾಂತಿ 25 ಅಧ್ಯಾಯ). ಶರೀರತ್ಯಾಗ ಮಾಡಲು ಸಿದ್ಧನಾದ ಯುಧಿಷ್ಠಿರನನ್ನು ತಡೆದು ಸಮಾಧಾನಪಡಿಸಿದುದು (ಶಾಂತಿ 27/28–33). ಅಶ್ಮಮುನಿ ಮತ್ತು ಜನಕನ ಸಂವಾದ ರೂಪ ದಲ್ಲಿರುವ ಪ್ರಾರಬ್ಧದ ಪ್ರಾಬಲ್ಯವನ್ನು ಹೇಳಿ, ಯುಧಿಷ್ಠಿರನನ್ನು ಸಮಾಧಾನಗೊಳಿಸಿದುದು (ಶಾಂತಿ 28 ಅಧ್ಯಾಯ). ಅನೇಕ ಯುಕ್ತಿಗಳ ಮೂಲಕ ಯುಧಿಷ್ಠಿರನನ್ನು ಸಮಾಧಾನಪಡಿಸಿ ದುದು (ಶಾಂತಿ 32 ಅಧ್ಯಾಯ). ಕಾಲನ ಪ್ರಾಬಲ್ಯವನ್ನು ಹೇಳಿ, ದೇವಾಸುರ ಸಂಗ್ರಾಮದ ಉದಾಹರಣೆ ನೀಡಿ, ಯುಧಿಷ್ಠಿರನು ಪ್ರಾಯಶ್ಚಿತ್ತ ಮಾಡಿಕೊಳ್ಳುವ ಆವಶ್ಯಕತೆಯನ್ನು ತಿಳಿಸಿದುದು (ಶಾಂತಿ 23/14–48). ಯುಧಿಷ್ಠಿರನಿಗೆ ಪ್ರಾಯ ಶ್ಚಿತ್ತವನ್ನು ವರ್ಣಿಸಿದುದು (ಶಾಂತಿ ಅಧ್ಯಾಯ 34 ರಿಂದ 35 ವರೆಗೆ). ಸ್ವಾಯಂಭುವ ಮನುವಿನಿಂದ ಕಥಿಸಲ್ಪಟ್ಟ ಧರ್ಮವನ್ನು ಉಪ ದೇಶಿಸಿದುದು (ಶಾಂತಿ 37/6–16). ಶರಶಯ್ಯೆ ಯಲ್ಲಿ ಮಲಗಿದ್ದ ಭೀಷ್ಮನನ್ನು ನೋಡುವುದಕ್ಕಾಗಿ ಈತನ ಪಾದಾರ್ಪಣೆ (ಶಾಂತಿ 45/5). ತನ್ನ ಪುತ್ರ ಶುಕನು ಕಾಲಸ್ವರೂಪನೆಂದು ವ್ಯಾಸನು ಹೇಳಿದುದು (ಶಾಂತಿ 231/11–32). ಶುಕ ದೇವನಿಗೆ ಸೃಷ್ಟಿಕ್ರಮ ಮತ್ತು ಯುಗಧರ್ಮದ ಉಪದೇಶ ನೀಡಿದುದು (ಶಾಂತಿ 232 ಅಧ್ಯಾಯ). ಇವನು ಬ್ರಾಹ್ಮಪ್ರಲಯ ಮತ್ತು ಮಹಾಪ್ರಲಯವನ್ನು ವರ್ಣಿಸಿದುದು (ಶಾಂತಿ 233). ಬ್ರಾಹ್ಮಣರ ಕರ್ತವ್ಯ ಮತ್ತು ದಾನದ

ಪ್ರಶಂಸೆ ಮಾಡಿದುದು (ಶಾಂತಿ 234). ಸರ್ಗ, ಕಾಲ, ಧಾರಣಾ, ವೇದ, ಕರ್ತಾ, ಕಾರ್ಯಾ ಮತ್ತು ಕ್ರಿಯಾಫಲದ ವಿಷಯವಾಗಿ ಇವನು ಶುಕದೇವನಿಗೆ ಉಪದೇಶ ನೀಡಿದುದು (ಶಾಂತಿ ಅಧ್ಯಾಯ 235ರಿಂದ 339). ಶುಕದೇವನಿಗೆ ಮೋಕ್ಷಧರ್ಮದ ಕುರಿತಾಗಿ ವಿವಿಧ ಪ್ರಶ್ನೆಗಳಿಗೆ ಉತ್ತರ ನೀಡಿದುದು (ಶಾಂತಿ ಅಧ್ಯಾಯ 240 ರಿಂದ 255). ತನ್ನ ಪುತ್ರ ಶುಕದೇವನಿಗೆ ವೈರಾಗ್ಯ ಮತ್ತು ಧರ್ಮಪೂರ್ಣ ಉಪದೇಶ ವನ್ನೀಯುತ್ತಾ ಎಚ್ಚರಿಕೆ ನೀಡಿದುದು (ಶಾಂತಿ 321/4–93). ಪುತ್ರಪ್ರಾಪ್ತಿಗೋಸ್ಕರ ಇವನ ತಪಸ್ಸು ಮತ್ತು ಶಂಕರನಿಂದ ವರಪ್ರಾಪ್ತಿ (ಶಾಂತಿ 323/12–29). ಘೃತಾಚಿ ಎಂಬ ಅಪ್ಸರೆಯ ಸಂದರ್ಶನದಿಂದ ಮೋಹಿತನಾದ ಕಾರಣ, ಅರಣೀಕಾಷ್ಠದ ಮೇಲೆ ಇವನ ವೀರ್ಯದ ಪತನ ಮತ್ತು ಅದರಿಂದ ಶುಕದೇವನ ಜನನ (ಶಾಂತಿ 324/4–10). ಶುಕನನ್ನು ಜನಕನ ಬಳಿಗೆ ಕಳುಹಿಸಿದುದು (ಶಾಂತಿ 325/6–11). ಶಿಷ್ಯರಿಗೆ ವರಪ್ರದಾನ ಮಾಡಿದುದು (ಶಾಂತಿ 327/37–52). ನಾರದನು ಕೇಳಿದಾಗ ತನ್ನ ದುಃಖದ ಕಾರಣಹೇಳಿದುದು (ಶಾಂತಿ 328/16–19). ಶುಕದೇವನಿಗೆ ಅನ್ಯಾಧ್ಯಾಯದ ಕಾರಣ ತಿಳಿಸುತ್ತಾ ಪ್ರವಹ ಮೊದಲಾದ ಏಳು ವಾಯು ಗಳ ಪರಿಚಯ ತಿಳಿಸಿದುದು (ಶಾಂತಿ 328/28–57). ಪುತ್ರ ಮೋಹವಶನಾಗಿ ಶುಕದೇವನನ್ನು ಹೋಗದಂತೆ ತಡೆದುದು (ಶಾಂತಿ 331/63). ಪುತ್ರವಿರಹಜನಿತಶೋಕದಿಂದ ವ್ಯಾಸರ ವ್ಯಾಕು ಲತೆ (ಶಾಂತಿ 333/19–31). ವ್ಯಾಸನು ತನ್ನ ಶಿಷ್ಯರಿಗೆ, ಬ್ರಹ್ಮಾದಿದೇವತೆಗಳಿಗೆ ನಾರಾಯಣನು ಮಾಡಿದ, ಉಪದೇಶವನ್ನು ತಿಳಿಸಿದುದು (ಶಾಂತಿ 340/90–110). ನಾರದನ ಬಾಯಿಯಿಂದ ಈತನಿಗೆ ಸಾತ್ವತ ಧರ್ಮದ ಉಪಲಬ್ಧಿ ಮತ್ತು ಇವನಿಂದ ಧರ್ಮರಾಜ ಯುಧಿಷ್ಠಿರನಿಗೆ ಈ ಧರ್ಮದ ಉಪದೇಶ (ಶಾಂತಿ 348/64–65). ಸರಸ್ವತಿಪುತ್ರ ಅಪಾಂತರತಮನ ರೂಪದಲ್ಲಿ ಇವನ ಜನನ ಮತ್ತು ಮಹಿಮೆ (ಶಾಂತಿ 349/39–58). ಶಿವಮಹಿಮೆಯ ವಿಚಾರದಲ್ಲಿ ಯುಧಿಷ್ಠಿರನಿಗೆ ಈತ ತನ್ನ ಅನುಭವ ಹೇಳಿದುದು (ಅನು 18/1–3). ಭೀಷ್ಮನ ಸಮಕ್ಷಮದಲ್ಲಿ ಈತನಿಂದ ಬ್ರಹ್ಮಹತ್ಯೆಗೆ ಸಮಾನವಾದ ಪಾಪಗಳ ನಿರೂಪಣೆ (ಅನು 24/5–12). ವ್ಯಾಸನಿಂದ ಶುಕದೇವನಿಗೆ ಗೋವುಗಳ, ಗೋಲೋಕದ ಮತ್ತು ಗೋದಾನದ ಮಹಿಮೆಯ ವರ್ಣನೆ (ಅನು 81/12–46). ಒಂದು ಕೀಟಕ್ಕೆ ಕ್ರಮ ಬದ್ಧವಾಗಿ ಬ್ರಾಹ್ಮಣತ್ವ ಪ್ರಾಪ್ತಮಾಡಿಸಿ, ಅದನ್ನು ಉದ್ಧರಿಸಿದುದು (ಅನು ಅಧ್ಯಾಯ 117ರಿಂದ 119ರ ವರೆಗೆ). ಮೈತ್ರೇಯನ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿ ಆತನೊಂದಿಗೆ ವ್ಯಾಸನ ಸಂವಾದ (ಅನು ಅಧ್ಯಾಯ 120 ರಿಂದ 122ರ ವರೆಗೆ). ಯುಧಿಷ್ಠಿರನು ಹಸ್ತಿನಾವತಿಗೆ ಹೋಗುವಂತೆ ಆಜ್ಞಾಪಿಸಲು ಭೀಷ್ಮನಿಗೆ ಹೇಳಿದುದು (ಅನು 166/6–7). ಶೋಕಾಕುಲನಾದ ಯುಧಿಷ್ಠಿರನನ್ನು ಈತ ಸಮಾಧಾನಗೊಳಿಸಿದುದು (ಆಶ್ವ 2/15–20). ಯುಧಿಷ್ಠಿರನನ್ನು ಅಶ್ವಮೇಧ ಯಜ್ಞ ಮಾಡುವಂತೆ ಸಲಹೆಯನ್ನಿತ್ತದ್ದು (ಆಶ್ವ 3/8–10). ವ್ಯಾಸನು ಯುಧಿಷ್ಠಿರನಿಗೆ ಐಶ್ವರ್ಯ ಪ್ರಾಪ್ತಿಯ ಉಪಾಯ ತಿಳಿಸಿದುದು (ಆಶ್ವ 3/20–21). ಯುಧಿಷ್ಠಿರನಿಗೆ ಮರುತ್ತನ ವೃತ್ತಾಂತ ಹೇಳಿದುದು (ಆಶ್ವ ಅಧ್ಯಾಯ 4ರಿಂದ 10). ಪತಿಶೋಕದಿಂದ ದುಃಖಿತಳಾದ ಉತ್ತರೆಗೆ ಆಶ್ವಾಸನೆಯನ್ನು ನೀಡಿದುದು (ಆಶ್ವ 62/11–12). ಪುತ್ರ ಶೋಕದಿಂದ ದುಃಖಿತನಾದ ಅರ್ಜುನನ್ನು ಸಮಾಧಾನಪಡಿಸಿದುದು (ಆಶ್ವ 62/14–17). ಯುಧಿಷ್ಠಿರನಿಗೆ ಅಶ್ವಮೇಧ ಯಜ್ಞದ ಆಜ್ಞೆಯನ್ನಿತ್ತು ಅಂತರ್ಧಾನನಾದುದು (ಆಶ್ವ 62/20). ಇವನು ಅರ್ಜುನನನ್ನು ಅಶ್ವಮೇಧದ ಕುದುರೆಯ ರಕ್ಷಣೆಗಾಗಿಯೂ, ಭೀಮಸೇನ ಮತ್ತು ನಕುಲನನ್ನು ರಾಜ್ಯಪಾಲನೆಗಾಗಿಯೂ, ಸಹದೇವನನ್ನು ಕೌಟುಂಬಿಕ ಕಾರ್ಯಗಳ ಮೇಲ್ವಿಚಾರಣೆಗಾಗಿಯೂ ನೇಮಿಸಿದುದು (ಆಶ್ವ 72/14–20). ಇವನ ಮೂಲಕ ಶಾಸ್ತ್ರೀಯ ವಿಧಿಗೆ ಅನುಸಾರವಾಗಿ ಅಶ್ವಮೇಧದ ಕುದುರೆಯ ಉತ್ಸರ್ಗ (ಆಶ್ವ 73/3). ಯುಧಿಷ್ಠಿರನಿಂದ ಈತನಿಗೆ ಸಮಸ್ತ ಪೃಥ್ವಿಯ ದಾನ. ಇವನು ಪೃಥ್ವಿಯನ್ನು ಹಿಂತಿರುಗಿಸಿ, ಅದರ ನಿಷ್ಕ್ರಯ ರೂಪದಿಂದ ಬ್ರಾಹ್ಮಣರಿಗೆ ಸುವರ್ಣವನ್ನೀಯಲು ಆದೇಶ (ಆಶ್ವ 89/8–18). ಇವನು ಸಮಾಧಾನ ಗೊಳಿಸಿದ ಬಳಿಕ, ಯುಧಿಷ್ಠಿರನು ಧೃತರಾಷ್ಟ್ರನಿಗೆ

ಕಾಡಿಗೆ ಹೋಗಲು ಅನುಮತಿ ನೀಡಿದುದು (ಆಶ್ರಮ 4 ಅಧ್ಯಾಯ). ಇವನು ಕಾಡಿನಲ್ಲಿ ಧೃತರಾಷ್ಟ್ರನ ಬಳಿಗೆ ಬಂದುದು ಮತ್ತು ಅವನ ಕುಶಲ ಸಮಾಚಾರವನ್ನು ಕೇಳುತ್ತಾ, ವಿದುರ ಮತ್ತು ಯುಧಿಷ್ಠಿರನ ಧರ್ಮರೂಪವನ್ನು ಪ್ರತಿಪಾದಿಸಿದುದು ಮತ್ತು ಆತ ಅಭೀಷ್ಟ ವಸ್ತುವನ್ನು ಕೋರುವಂತೆ ಹೇಳಿದುದು (ಆಶ್ರಮ 28 ಅಧ್ಯಾಯ). ಈತ ತನ್ನ ತಪೋಬಲ ತೋರಿಸುವುದಾಗಿ ಹೇಳಿ, ಧೃತರಾಷ್ಟ್ರನು ಮನೋವಾಂಛಿತ ವರಬೇಡುವಂತೆ ಆಜ್ಞೆ ನೀಡಿದುದು; ಗಾಂಧಾರಿ ಮತ್ತು ಕುಂತಿ ತಮ್ಮ ಸತ್ತುಹೋದ ಪುತ್ರ ಮತ್ತು ಸಂಬಂಧಿಗಳ ದರ್ಶನ ಮಾಡಿಸುವಂತೆ ಈತನೊಡನೆ ಒತ್ತಾಯಿಸಿದುದು (ಆಶ್ರಮ 29 ಅಧ್ಯಾಯ). ಕುಂತಿಯು ಇವನಿಗೆ ಕರ್ಣನ ಜನ್ಮದಗುಪ್ತ ರಹಸ್ಯವನ್ನು ಹೇಳಿದುದು ಮತ್ತು ವ್ಯಾಸನು ಅವಳಿಗೆ ಸಮಾಧಾನ ಹೇಳಿದುದು (ಆಶ್ರಮ 38 ಅಧ್ಯಾಯ). ಈತನಿಂದ ಧೃತರಾಷ್ಟ್ರಾದಿಗಳ ಪೂರ್ವಜನ್ಮದ ಪರಿಚಯ ಮತ್ತು ಈತನ ಆಜ್ಞೆ ಪ್ರಕಾರ ಎಲ್ಲರೂ ಗಂಗಾದಡಕ್ಕೆ ಹೋದುದು (ಆಶ್ರಮ 31 ಅಧ್ಯಾಯ). ಇವನ ಪ್ರಭಾವದಿಂದ ಕುರುಕ್ಷೇತ್ರದಲ್ಲಿ ವಧಿಸಲ್ಪಟ್ಟ ಕೌರವ ಪಾಂಡವ ವೀರರು ಗಂಗಾಜಲದಿಂದ ಪ್ರಕಟವಾದುದು (ಆಶ್ರಮ 32 ಅಧ್ಯಾಯ). ಇವನ ಆಜ್ಞೆ ಪ್ರಕಾರ ವಿಧವೆಯರಾದ ಕ್ಷತ್ರಾಣಿಯರು ಗಂಗೆಯಲ್ಲಿ ಮುಳುಗಿ ತಮ್ಮ ತಮ್ಮ ಪತಿಲೋಕವನ್ನು ಪಡೆದುದು (ಆಶ್ರಮ 33/18–22). ಇವನ ಕೃಪೆಯಿಂದ ಜನಮೇಜಯನಿಗೆ ತನ್ನ ತಂದೆಯ ದರ್ಶನ ಪ್ರಾಪ್ತವಾದುದು (ಆಶ್ರಮ 35/4–11). ಧೃತರಾಷ್ಟ್ರನನ್ನು ಬೀಳ್ಕೊಡುವಂತೆ ಈತ ಪಾಂಡವರಿಗೆ ಆದೇಶ ನೀಡಿದುದು (ಆಶ್ರಮ 36/5–12). ಯದುಕುಲ ಸಂಹಾರದ ಅನಂತರ ಅರ್ಜುನನು ಈತನ ಆಶ್ರಮಕ್ಕೆ ಬಂದುದು ಮತ್ತು ಆತನೊಡನೆ ಇವನ ಮಾತುಕತೆ (ಮೌಸಲ 8 ಅಧ್ಯಾಯ). ವ್ಯಾಸರಚಿತ ಮಹಾಭಾರತದ ಶ್ರವಣ ಮತ್ತು ಪಠನದ ಮಹಿಮೆ (ಸ್ವರ್ಗಾ 5/35–68). ಮಹಾಭಾರತದಲ್ಲಿ ಬಂದಿರುವ ವ್ಯಾಸನ ಹೆಸರುಗಳು– ಕೃಷ್ಣ, ಕೃಷ್ಣದ್ವೈಪಾಯನ, ದ್ವೈಪಾಯನ, ಸತ್ಯವತೀಸುತ, ಸತ್ಯವತ್ಯಾತ್ಮಜ, ಪಾರಾಶರ್ಯ, ಪರಾಶರಾತ್ಮಜ, ಬಾದರಾಯಣ, ವೇದವ್ಯಾಸ ಇತ್ಯಾದಿ.

**ವ್ಯಾಸವನ** – ಕುರುಕ್ಷೇತ್ರದ ಗಡಿಯಲ್ಲಿರುವ ಒಂದು ಕಾಡು. ಅಲ್ಲಿರುವ ಮನೋಜವ ತೀರ್ಥದಲ್ಲಿ ಸ್ನಾನಮಾಡಿದರೆ ಮನುಷ್ಯ ಸಹಸ್ರ ಗೋದಾನಗಳ ಫಲಪಡೆಯುತ್ತಾನೆ (ವನ 83/93).

**ವ್ಯಾಸಸ್ಥಲೀ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ವ್ಯಾಸನು ಪುತ್ರಶೋಕದಿಂದ ಸಂತೃಪ್ತನಾಗಿ ಶರೀರ ತ್ಯಾಗ ಮಾಡುವ ವಿಚಾರ ಹೊಂದಿದ್ದನು. ಆ ಕಾಲದಲ್ಲಿ ಆತನನ್ನು ದೇವತೆಗಳು ಪುನಃ ಎಬ್ಬಿಸಿದ್ದರು. ಈ ಸ್ಥಳಕ್ಕೆ ಹೋದರೆ ಸಹಸ್ರ ಗೋದಾನದ ಫಲ ಸಿಗುತ್ತದೆ (ವನ 83/96–98).

**ವ್ಯುಷಿತಾಶ್ವ** – ಪೂರುವಂಶದ ಒಬ್ಬ ಧರ್ಮಾತ್ಮನಾದ ರಾಜ (ಆದಿ 120/7). ಇವನಿಂದ ವಿವಿಧ ಯಜ್ಞಗಳ ಅನುಷ್ಠಾನ (ಆದಿ 120/8–16). ರಾಜಾ ಕಕ್ಷಿವಂತನ ಪುತ್ರಿ ಭದ್ರಾ ಇವನ ಪ್ರೀತಿಯ ಪತ್ನಿಯಾಗಿದ್ದಳು. ಆಕೆ ಆ ಕಾಲದ ಅಪ್ರತಿಮ ಸುಂದರಿಯಾಗಿದ್ದಳು. ಅವಳೊಡನೆ ಅತ್ಯಧಿಕ ಕಾಮಾಸಕ್ತನಾದುದರಿಂದ, ಕ್ಷಯರೋಗದಿಂದಾಗಿ ಈತನ ಅಕಾಲ ಮೃತ್ಯುವಾಯಿತು (ಆದಿ 120/18–19). ಭದ್ರೆಯು ವಿಲಪಿಸಿದಾಗ ಆಕಾಶವಾಣಿಯ ಮೂಲಕ ಇವನು ಆಕೆಗೆ ಧೈರ್ಯನೀಡಿದುದು ಮತ್ತು ಈತನ ಶವದ ಮೂಲಕ ಆಕೆಯ ಗರ್ಭದಿಂದ ಏಳು ಪುತ್ರರ ಜನನ (ಆದಿ 120/33–36).

**ವ್ಯೂಕ** – ಒಂದು ಭಾರತೀಯ ಜನಪದ (ಭೀಷ್ಮ 9/61).

**ವ್ಯೂಢೋರು** (ವ್ಯೂಢೋರಸ್ಕ) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/105; ಆದಿ 116/14). ಭೀಮಸೇನನಿಂದ ಈತನ ವಧೆ (ಭೀಷ್ಮ 96/23).

**ವ್ಯೂಹ** – ಯುದ್ಧಕಾಲದಲ್ಲಿ, ಚತುರಂಗ ಸೇನೆಯ ವಿಭಿನ್ನ ಅಂಗಗಳನ್ನು ಸಂಘಟಿಸಿ ವಿಶೇಷಕ್ರಮದಿಂದ ನಿಲ್ಲಿಸುವ ರೀತಿಗೆ ವ್ಯೂಹವೆನ್ನುತ್ತಾರೆ. ಸೇನಾದುರ್ಗಬಂಧನ ಇದೇ ಆಗಿತ್ತು. ಮಹಾಭಾರತ ಕಾಲದಲ್ಲಿ ಅನೇಕ ಪ್ರಕಾರದ ವ್ಯೂಹ ರಚನೆಯಾಗುತ್ತಿತ್ತು. ಮಹಾ

ಭಾರತದಲ್ಲಿ ವರ್ಣಿಸಲ್ಪಟ್ಟ ಕೆಲವು ವ್ಯೂಹಗಳ ಹೆಸರು ಈ ಪ್ರಕಾರವಿತ್ತು. ಅರ್ಧಚಂದ್ರವ್ಯೂಹ (ಭೀಷ್ಮ ; ಅಧ್ಯಾಯ 56) ಕ್ರೌಂಚವ್ಯೂಹ (ಭೀಷ್ಮ : ಅಧ್ಯಾಯ 50) ಗರುಡವ್ಯೂಹ (ಭೀಷ್ಮ ; ಅಧ್ಯಾಯ 56) ಚಕ್ರವ್ಯೂಹ (ಭೀಷ್ಮ : ಅಧ್ಯಾಯ 34) ಮಕರವ್ಯೂಹ (ಭೀಷ್ಮ ; ಅಧ್ಯಾಯ 69) ಮಂಡಲವ್ಯೂಹ (ಭೀಷ್ಮ ; ಅಧ್ಯಾಯ 81) ಮಂಡಲಾರ್ಧವ್ಯೂಹ (ದ್ರೋಣ : ಅಧ್ಯಾಯ 20) ವಜ್ರವ್ಯೂಹ (ಭೀಷ್ಮ ; ಅಧ್ಯಾಯ 81) ಶಕಟವ್ಯೂಹ (ದ್ರೋಣ; ಅಧ್ಯಾಯ 7) ಶ್ಯೇನ ವ್ಯೂಹ (ಭೀಷ್ಮ ಅಧ್ಯಾಯ 69) ಸರ್ವತೋಭದ್ರ (ಭೀಷ್ಮ ; ಅಧ್ಯಾಯ 99) ಸುಪರ್ಣವ್ಯೂಹ (ದ್ರೋಣ; ಅಧ್ಯಾಯ 20) ಸೂಚೀಮುಖ ವ್ಯೂಹ (ಭೀಷ್ಮ ; ಅಧ್ಯಾಯ77).

**ವ್ಯೋಮರಿ** – ಒಬ್ಬ ಸನಾತನ ವಿಶ್ವೇದೇವ (ಅನು 91/35).

**ವ್ರಜನ** – ಸಮ್ರಾಟ ಅಜಮೀಢನಿಗೆ ಕೇಶಿನಿಯ ಗರ್ಭದಿಂದ ಹುಟ್ಟಿದ ಮೂವರು ಪುತ್ರರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರು: ಜಹ್ನು ಮತ್ತು ರೂಪಿಣ (ಆದಿ 94/31–32).

**ವ್ರೀಹಿದ್ರೌಹಿಕಪರ್ವ** – ವನಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 259 ರಿಂದ 261ರ ವರೆಗೆ).

## ಶ

**ಶಂಯು** – ಇವನು ಬೃಹಸ್ಪತಿಯ ಪ್ರಥಮ ಪುತ್ರ. ಇವನಿಗೆ ಪ್ರಧಾನ ಆಹುತಿಗಳನ್ನು ಕೊಡುವ ಕಾಲದಲ್ಲಿ, ಸರ್ವಪ್ರಥಮವಾಗಿ ತುಪ್ಪದ ಆಹುತಿ ಕೊಡಲ್ಪಡುತ್ತದೆ. ಚಾತುರ್ಮಾಸ್ಯ ಸಂಬಂಧಿ ಯಾದ ಯಜ್ಞಗಳಲ್ಲಿ ಮತ್ತು ಅಶ್ವಮೇಧ ಯಜ್ಞದಲ್ಲಿ ಇವನ ಪೂಜೆ ನಡೆಯುತ್ತದೆ. ಈತ ಸರ್ವ ಪ್ರಥಮವಾಗಿ ಉತ್ಪನ್ನಹೊಂದಿದವನು ಮತ್ತು ಸರ್ವಸಮರ್ಥನಾಗಿದ್ದಾನೆ. ಇವನು ಅನೇಕ ವರ್ಣದ ಜ್ವಾಲೆಗಳಿಂದ ಪ್ರಜ್ವಲಿತನಾಗು ತ್ತಾನೆ. ಇವನ ಪತ್ನಿಯ ಹೆಸರು ಸತ್ಯಾ ಎಂದಾ ಗಿತ್ತು. ಅವಳು ಧರ್ಮನ ಪುತ್ರಿ. ಆಕೆಯ ಗರ್ಭ ದಲ್ಲಿ ಈತನಿಂದ ಅಗ್ನಿಸ್ವರೂಪನಾದ ಒಬ್ಬ ಪುತ್ರ ಮತ್ತು ಉತ್ತಮ ವ್ರತಪಾಲನೆ ಮಾಡುವ ಮೂವರು ಕನ್ಯೆಯರು ಜನಿಸಿದರು (ವನ 219/2–4).

**ಶಕ** – ಒಂದು ಭಾರತೀಯ ಜನಪದ ಮತ್ತು ಜಾತಿ. ಶಕಜಾತಿಯ ಜನರು ವಸಿಷ್ಠನ ನಂದಿನಿ ಹಸುವಿನ ಕೆಚ್ಚಲಿನಿಂದ ಪ್ರಕಟವಾದರು (ಆದಿ 174/36). ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಶಕರನ್ನು ಪರಾಜಯಗೊಳಿಸಿದ್ದನು (ಸಭಾ 30/14). ನಕುಲನೂ ಇವರನ್ನು ಗೆದ್ದಿದ್ದನು (ಸಭಾ 32/17). ಶಕದೇಶ ಮತ್ತು ಜಾತಿಯ ರಾಜನು ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದನು (ಸಭಾ 51/32). ಕಲಿಯುಗದಲ್ಲಿ ಶಕ ಇತ್ಯಾದಿ ಜಾತಿಯ ಜನರು ರಾಜರಾಗುವ ಉಲ್ಲೇಖ (ವನ 188/ 35). ಶಕದೇಶದ ರಾಜನ ಬಳಿಗೆ ಪಾಂಡವರ ಕಡೆಯಿಂದ ರಣದ ಆಮಂತ್ರಣ ಕಳುಹಿಸಲ್ಪಡುವ ವಿಚಾರ ಮಾಡಲ್ಪಟ್ಟಿತ್ತು (ಉದ್ಯೋಗ 4/15). ಈತ ಕಾಂಬೋಜರಾಜ ಸುದಕ್ಷಿಣನೊಂದಿಗೆ ದುರ್ಯೋಧನನ ಸೇನೆಯಲ್ಲಿ ಸಮ್ಮಿಲಿತನಾಗಿ ದ್ದನು (ಉದ್ಯೋಗ 19/21). ಶಕ ಎಂಬುದು ಒಂದು ಭಾರತೀಯ ಜನಪದದ ಹೆಸರು (ಭೀಷ್ಮ 9/51). ಭಗವಾನ್ ಶ್ರೀಕೃಷ್ಣನು ಶಕದೇಶದ ಮೇಲೆ ವಿಜಯಪಡೆದಿದ್ದನು (ದ್ರೋಣ 11/18). ಸಾತ್ಯಕಿಯು ಅನೇಕ ಶಕ ಸೈನಿಕರ ಸಂಹಾರ ಮಾಡಿದ್ದನು (ದ್ರೋಣ 119/45, 53). ಕರ್ಣನೂ ಶಕದೇಶವನ್ನು ಗೆದ್ದಿದ್ದನು (ಕರ್ಣ 8/18). ಶಕರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರ ದರ್ಶನದಿಂದ ವಂಚಿತರಾದು ದರಿಂದ (ತಮ್ಮ ಧರ್ಮಕರ್ಮದಲ್ಲಿ ಭ್ರಷ್ಟರಾದುದ ರಿಂದ) ಶೂದ್ರ ಪ್ರವೃತ್ತಿಯನ್ನು ಪಡೆದರು (ಅನು 33/21).

**ಶಕುನಿ** – (1) ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/16).

(2) ಗಾಂಧಾರ ರಾಜ ಸುಬಲನ ಮಗ. ದುರ್ಯೋಧನನ ಮಾವ. ಇವನದೇ ಸಹಾಯ ದಿಂದ ದುರ್ಯೋಧನನು ಯುಧಿಷ್ಠಿರನನ್ನು ಜೂಜಿನಲ್ಲಿ ವಂಚಿಸಿದ್ದನು (ಆದಿ 61/50). ದೇವತೆಗಳ ಕೋಪದಿಂದ ಇವನು ಧರ್ಮ

ವಿರೋಧಿಯಾದನು (ಆದಿ 63/111-112). ಇವನು ದ್ವಾಪರನ ಅಂಶದಿಂದ ಹುಟ್ಟಿದ್ದನು (ಆದಿ 67/78; ಆಶ್ರಮ 31/10). ಇವನ ಮೂಲಕ ಗಾಂಧಾರಿಯ ವಿವಾಹ ನೆರವೇರಿಸುವಿಕೆ (ಆದಿ 109/15-16). ಈತ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/2). ಪಾಂಡವರನ್ನು ಸಮೂಲ ನಾಶಮಾಡಲು ಈತ ದ್ರುಪದನಗರದಲ್ಲಿ ಕೌರವರಿಗೆ ಸಲಹೆ ನೀಡಿದುದು (ಆದಿ 199/7). ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಈತನ ಆಗಮನ (ಸಭಾ 34/6). ಎಲ್ಲರೂ ವಿದಾಯ ಹೇಳಿ ಹೊರಟು ಹೋದ ಮೇಲೂ ಇವನು ಆ ದಿವ್ಯ ಸಭಾ ಭವನದಲ್ಲಿ ಕೌರವನೊಂದಿಗಿದ್ದನು (ಸಭಾ 45/68). ಪಾಂಡವರನ್ನು ಜೈಸುವ ವಿಚಾರವಾಗಿ ದುರ್ಯೋಧನನೊಂದಿಗೆ ಇವನ ಮಾತುಕತೆ (ಸಭಾ 48 ಅಧ್ಯಾಯ). ಯುಧಿಷ್ಠಿರನ ಸಂಪತ್ತನ್ನು (ಐಶ್ವರ್ಯ) ಕಬಳಿಸಲು, ಇವನು ಧೃತರಾಷ್ಟ್ರನಿಗೆ ದ್ಯೂತಕ್ರೀಡೆಯ ಸಲಹೆ ನೀಡಿದುದು (ಸಭಾ 49 ಅಧ್ಯಾಯ). ಜೂಜಿನ ಅನೌಚಿತ್ಯದ ಕುರಿತಾಗಿ ಈತನೊಂದಿಗೆ ಯುಧಿಷ್ಠಿರನ ಸಂವಾದ (ಸಭಾ 59 ಅಧ್ಯಾಯ). ಜೂಜಿನಲ್ಲಿ ಮೋಸಮಾಡಿ ಇವನು ಯುಧಿಷ್ಠಿರನನ್ನು ಸೋಲಿಸಿದುದು (ಸಭಾ ಅಧ್ಯಾಯ 60ರಿಂದ 61ರ ವರೆಗೆ). ಇವನೊಂದಿಗೆ ಜೂಜಾಡಿ, ಯುಧಿಷ್ಠಿರನು ತನ್ನ ಎಲ್ಲಾ ಐಶ್ವರ್ಯವನ್ನೂ ಕಳಕೊಂಡದ್ದು (ಸಭಾ ಅಧ್ಯಾಯ 65). ಮರುದ್ಯೂತದಲ್ಲಿ ಇವನು ಯುಧಿಷ್ಠಿರನಿಗೆ ಜೂಜಿನ ಶರ್ತವನ್ನು ಹೇಳಿದುದು ಮತ್ತು ಒಂದೇ ಆಟದಲ್ಲಿ ತನ್ನ ವಿಜಯವನ್ನು ಘೋಷಿಸಿದುದು (ಸಭಾ 76/9-24). ಪಾಂಡವರು ಪ್ರತಿಜ್ಞೆ ಮುರಿದು ಕಾಡಿನಿಂದ ಹಿಂತಿರುಗಲಾರರೆಂದು ಹೇಳಿ, ದುರ್ಯೋಧನನ ಅಂಜಿಕೆಯನ್ನು ದೂರಮಾಡಿದುದು (ವನ 7/7-10). ದ್ವೈತವನದಲ್ಲಿ ಪಾಂಡವರ ಬಳಿಗೆ ಹೋಗಲು ಈತ ಘೋಷಯಾತ್ರೆಯ ಸಲಹೆಯನ್ನು ಸಮರ್ಥಿಸಿದುದು (ವನ 238/21-23). ಘೋಷಯಾತ್ರೆಗೆ ಅನುಮತಿ ನೀಡುವಂತೆ ಧೃತರಾಷ್ಟ್ರನನ್ನು ಒಪ್ಪಿಸಿದುದು (ವನ 239/18-21). ಇವನು ದುರ್ಯೋಧನನೊಂದಿಗೆ ಘೋಷಯಾತ್ರೆಗೆ ಹೋದುದು ಮತ್ತು ಗಂಧರ್ವರೊಂದಿಗೆ ಯುದ್ಧಮಾಡಿ ಗಾಯಗೊಂಡದ್ದು (ವನ 241/17-27). ಪಾಂಡವರಿಗೆ ರಾಜ್ಯ ಹಿಂತಿರುಗಿಸಲು ದುರ್ಯೋಧನನಿಗೆ ನೀತಿಹೇಳಿದುದು (ವನ 251/1-8). ಪ್ರಥಮ ದಿನದ ಯುದ್ಧದಲ್ಲಿ ಪ್ರತಿವಿಂಧ್ಯನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/63-65). ಇರಾವಂತನಿಂದ ಇವನ ಐದು ಮಂದಿ ಸಹೋದರರ ವಧೆ (ಭೀಷ್ಮ 90/25-47). ಯುಧಿಷ್ಠಿರ, ನಕುಲ ಮತ್ತು ಸಹದೇವರ ಮೇಲೆ ಇವನ ಆಕ್ರಮಣ ಮತ್ತು ಅವರಿಂದ ಈತನ ಪರಾಜಯ (ಭೀಷ್ಮ 105/8-23). ಸಹದೇವನೊಂದಿಗೆ ಯುದ್ಧ (ದ್ರೋಣ 14/22-25). ಇವನಿಂದ ಮಾಯೆಗಳ ಪ್ರಯೋಗ. ಅರ್ಜುನನಿಂದ ಆ ಮಾಯೆಗಳ ನಾಶವಾದಾಗ ಇವನ ಪಲಾಯನ (ದ್ರೋಣ 30/15-28). ಅಭಿಮನ್ಯುವಿನೊಂದಿಗೆ ಯುದ್ಧ (ದ್ರೋಣ 37/5). ನಕುಲಸಹದೇವರೊಂದಿಗೆ ಯುದ್ಧ (ದ್ರೋಣ 96/21-25). ಸಾತ್ಯಕಿಯೊಂದಿಗೆ ಯುದ್ಧ (ದ್ರೋಣ 120/11). ಭೀಮಸೇನನ ಮೂಲಕ ಇವನ ಏಳು ರಥಿಕರ ಮತ್ತು ಐದು ಸಹೋದರರ ಸಂಹಾರ (ದ್ರೋಣ 157/22-26). ನಕುಲನ ಮೂಲಕ ಇವನ ಪರಾಜಯ (ದ್ರೋಣ 169/16). ದುರ್ಯೋಧನನ ಆಜ್ಞೆಯಿಂದ ಪಾಂಡವರ ಮೇಲೆ ಇವನ ಆಕ್ರಮಣ (ದ್ರೋಣ 170/66). ಅರ್ಜುನನಿಂದ ಇವನ ಪರಾಜಯ (ದ್ರೋಣ 161/25-39). ದ್ರೋಣಾಚಾರ್ಯ ಕೊಲ್ಲಲ್ಪಟ್ಟಾಗ ಈತ ಯುದ್ಧ ಸ್ಥಳದಿಂದ ಓಡಿದುದು (ದ್ರೋಣ 193/9). ಇವನಿಂದ ಸುತಸೋಮನ ಪರಾಜಯ (ಕರ್ಣ 25/40-41). ಸಾತ್ಯಕಿಯಿಂದ ಈತ ಪರಾಜಿತನಾದುದು (ಕರ್ಣ 61/48-49). ಭೀಮಸೇನನಿಂದ ನೆಲಕ್ಕೆ ಕೆಡಹಲ್ಪಟ್ಟದ್ದು (ಕರ್ಣ 77/69-70). ಇವನಿಂದ ಸಹೋದರ ಸಹಿತನಾದ ಕುಲಿಂದ ರಾಜಕುಮಾರನ ವಧೆ (ಕರ್ಣ 85/7-19). ಪಾಂಡವರ ಕುದುರೆ ಸವಾರರಿಂದ ಇವನ ಮೇಲೆ ಆಕ್ರಮಣ. ಈತ ಓಡಿದುದು. ಪುನಃ ಧೃಷ್ಟದ್ಯುಮ್ನನ ಸೇನೆಯ ಮೇಲೆ ಆಕ್ರಮಣ ಮಾಡಿದುದು ಮತ್ತು ಪಾಂಡವ ಸೈನಿಕರಿಂದ ಸುತ್ತುವರಿಯಲ್ಪಟ್ಟು ಗಾಯಗೊಂಡದ್ದು (ಶಲ್ಯ 23/41-87). ಸಹದೇವನಿಂದ ಇವನ ವಧೆ

(ಶಲ್ಯ 28/61). ವ್ಯಾಸರ ಪ್ರಭಾವದಿಂದ, ಇವನೂ ಗಂಗಾಜಲದಿಂದ ಪ್ರಕಟಗೊಂಡು ತನ್ನ ಹತ್ತಿರದ ಸಂಬಂಧಿಗಳೊಂದಿಗೆ ಭೇಟಿಯಾಗಿದ್ದನು (ಆಶ್ರಮ 32/9). ಮರಣಾನಂತರ ಇವನು ದ್ವಾಪರನಲ್ಲಿ ಸೇರಿಹೋದನು (ಸ್ವರ್ಗಾ5/21). ಮಹಾಭಾರತದಲ್ಲಿ ಬಂದಿರುವ ಶಕುನಿಯ ಹೆಸರುಗಳು – ಗಾಂಧಾರ, ಗಾಂಧಾರಪತಿ, ಗಾಂಧಾರರಾಜ, ಗಾಂಧಾರರಾಜಪುತ್ರ, ಗಾಂಧಾರ ರಾಜಸುತ, ಕಿತವ, ಪರ್ವತೀಯ, ಸೌಬಲ, ಸೌಬಲಕ, ಸೌಬಲೇಯ, ಸುಬಲಜ, ಸುಬಲಪುತ್ರ, ಸುಬಲಸುತ, ಸುಬಲಾತ್ಮಜ ಇತ್ಯಾದಿ.

**ಶಕುನಿಕಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/15).

**ಶಕುನಿಗ್ರಹ** – ರೌದ್ರರೂಪಧಾರಿಣಿ ವಿನತಾ (ವನ 230/26).

**ಶಕುಂತ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/50).

**ಶಕುಂತಲಾ** – ಮಹರ್ಷಿ ಕಣ್ವನ ಸಾಕುಮಗಳು. ಈಕೆ ದುಷ್ಯಂತನ ಧರ್ಮಪತ್ನಿ ಮತ್ತು ಭರತನ ತಾಯಿಯಾದಳು. ಇವಳಲ್ಲಿಗೆ ಮಹಾರಾಜ ದುಷ್ಯಂತನ ಆಗಮನ. ಇವಳಿಂದ ಆತನ ಸ್ವಾಗತ ಮತ್ತು ತನ್ನ ಜನ್ಮವಿಚಾರದ ವರ್ಣನೆ (ಆದಿ 71 ಅಧ್ಯಾಯ). ಈಕೆ ವಿಶ್ವಾಮಿತ್ರನಿಂದ ಮೇನಕೆಯೆಂಬ ಅಪ್ಸರೆಯ ಗರ್ಭದಲ್ಲಿ, ಹಿಮಾಲಯದ ಶಿಖರದ ಮೇಲೆ ಮಾಲಿನಿ ನದಿಯ ದಡದಲ್ಲಿ ಜನಿಸಿದ್ದಳು. ಕಣ್ವ ಈಕೆಯ ಪಾಲಕ ತಂದೆಯಾಗಿದ್ದನು. ಇವಳ ಹುಟ್ಟಿನ ಕಥೆ (ಆದಿ 72/1–10). ಶಕುಂತಗಳ (ಪಕ್ಷಿಗಳು) ಮೂಲಕ ರಕ್ಷಿಸಲ್ಪಟ್ಟ ಕಾರಣ ಇವಳ ಹೆಸರು ಶಕುಂತಲೆ ಎಂದಾಯಿತು (ಆದಿ 72/11–16). ದುಷ್ಯಂತನು ಪ್ರಾರ್ಥಿಸಿದಾಗ ಈಕೆಯಿಂದ ಸ್ತ್ರೀ ಸ್ವಾತಂತ್ರ್ಯದ ನಿಷೇಧ ತನ್ನ ಪಿತೃಭಕ್ತಿ ಹಾಗೂ ಬ್ರಾಹ್ಮಣನ ಪ್ರಭಾವದ ವರ್ಣನೆ (ಆದಿ 73/5 ರಿಂದ 6ರ ಮೊದಲವರೆಗೆ). ದುಷ್ಯಂತನು ವಿವಾಹದ ಎಂಟು ಭೇದಗಳನ್ನು ಹೇಳಿ ಈಕೆಯೊಂದಿಗೆ ಗಾಂಧರ್ವ ವಿವಾಹವನ್ನು ಸಮರ್ಥಿಸಿದುದು (ಆದಿ 73/8–14). ದುಷ್ಯಂತನೊಂದಿಗೆ ವಿವಾಹವಾಗಲು ಈಕೆಯ ಶರ್ತ (ಆದಿ 73/15–17). ದುಷ್ಯಂತನೊಂದಿಗೆ ಈಕೆಯ ಗಾಂಧರ್ವವಿವಾಹ (ಆದಿ 73/19–20). ಈಕೆ ತನ್ನ ಗುಪ್ತವಿವಾಹದ ವೃತ್ತಾಂತವನ್ನು ಕಣ್ವನಲ್ಲಿ ಹೇಳಿದುದು (ಆದಿ 73/24). ಕಣ್ವನಿಂದ ಇವಳ ವಿವಾಹದ ಸಮರ್ಥನೆ ಮತ್ತು ಆಶೀರ್ವಾದ (ಆದಿ 73/32). ಇವಳ ಗರ್ಭದಿಂದ ದುಷ್ಯಂತನ ಮೂಲಕ ಭರತನ ಜನನ (ಆದಿ 74/2). ಕಣ್ವನಿಂದ ಈಕೆಗೆ ಪಾತಿವ್ರತ್ಯ ಧರ್ಮದ ಉಪದೇಶ ಮತ್ತು ಅದರ ಮಹಿಮೆಯ ವರ್ಣನೆ (ಆದಿ 74/9–10). ತಂದೆಯ ಆದೇಶ ಪಡೆದು ಈಕೆಯಿಂದ ಪತಿಗೃಹಕ್ಕೆ ಗಮನ (ಆದಿ 74/10–14). ರಾಜಾ ದುಷ್ಯಂತನೊಡನೆ ಈಕೆ ತನ್ನ ಪುತ್ರನನ್ನು ಸ್ವೀಕರಿಸಲು ಮತ್ತು ಅವನಿಗೆ ಯುವರಾಜ ಪದವಿಯಲ್ಲಿ ಅಭಿಷೇಕಗೊಳಿಸಲು ಹೇಳಿದುದು ಮತ್ತು ತನ್ನೊಂದಿಗೆ ಆತನ ಸಂಬಂಧ ಮತ್ತು ಪ್ರತಿಜ್ಞೆಯನ್ನು ನೆನಪು ಮಾಡಿದುದು (ಆದಿ 74/16–18). ದುಷ್ಯಂತನು ಅಸ್ವೀಕಾರಮಾಡಿದಾಗ ಈಕೆಯಿಂದ ಅಪಮಾನ ಮತ್ತು ಕ್ರೋಧ ತುಂಬಿದ ನಿಂದನೆ, ಧರ್ಮದ ಶ್ರೇಷ್ಠತೆ ಹಾಗೂ ಪರಮಾತ್ಮ ಮತ್ತು ಸೂರ್ಯಾದಿದೇವತೆಗಳು, ಪುಣ್ಯಾಪಾಪಗಳ ಸಾಕ್ಷಿಗಳೆಂದು ಹೇಳಿ, ತನ್ನೊಂದಿಗೆ ದುಷ್ಯಂತನಿಗಿದ್ದ ಪೂರ್ವಸಂಬಂಧದ ಸ್ಮರಣೆ ನೀಡಿದುದು (ಆದಿ 74/21–67). ದುಷ್ಯಂತನಲ್ಲಿ ಈಕೆಯಿಂದ ತನ್ನ ಜನ್ಮದ ಶ್ರೇಷ್ಠತ್ವದ ಪ್ರತಿಪಾದನೆ (ಆದಿ 74/69–70). ದುಷ್ಯಂತನಲ್ಲಿ ಈಕೆ ಪುನಃ ತನ್ನ ಜನ್ಮ ಕರ್ಮದ ಮಹತ್ತನ್ನು ಹೇಳುತ್ತಾ ಸತ್ಯಧರ್ಮದ ಶ್ರೇಷ್ಠತೆಯನ್ನು ಕಥನಮಾಡಿದುದು ಮತ್ತು ನಿರಾಶಳಾಗಿ ಹೊರಹೊರಟದ್ದು (ಆದಿ 74/84ರಿಂದ 108). ಆಕಾಶವಾಣಿಯ ಮೂಲಕ ಈಕೆಯ ಹೇಳಿಕೆ ಸತ್ಯವೆಂದು ಘೋಷಿಸಲ್ಪಟ್ಟಾಗ ದುಷ್ಯಂತನಿಂದ ಅಂಗೀಕಾರ (ಆದಿ 74/109–125). ದುಷ್ಯಂತನಿಂದ ಈಕೆಗೆ ಪಟ್ಟದ ರಾಣಿಯಾಗಿ ಅಭಿಷೇಕ (ಆದಿ 74/125).

**ಶಕ್ತ** – ರಾಜಾ ಪೂರುವಿನ ಮೊಮ್ಮಗ ಮತ್ತು ಮನಸ್ಯುವಿನ ಪುತ್ರ. ಈತ 'ಸೌವೀರಿ'ಯ ಗರ್ಭದಿಂದ ಹುಟ್ಟಿದ್ದನು. ಇವನಿಗೆ ಇನ್ನೂ ಇಬ್ಬರು ಸಹೋದರರಿದ್ದರು. ಅವರ ಹೆಸರು: ಸಂವಹನ ಮತ್ತು ವಾಗ್ಮೀ. ಇವರೆಲ್ಲರೂ ಶೂರರೂ ವೀರರೂ ಮಹಾರಥಿಗಳೂ ಆಗಿದ್ದರು (ಆದಿ 94/7).

**ಶಕ್ತಿ** – ಮಹರ್ಷಿ ವಸಿಷ್ಠನ ಕುಲಾಭಿವೃದ್ಧಿ

ಮಾಡಿದ ಮಹಾಮನಸ್ವೀ ಪುತ್ರ. ಇವನು ನೂರು ಮಂದಿ ಸಹೋದರರಲ್ಲಿ ಜ್ಯೇಷ್ಠನೂ, ಶ್ರೇಷ್ಠನೂ ಆದ ಮುನಿಯಾಗಿದ್ದನು (ಇವನ ತಾಯಿ ಅರುಂಧತಿಯಾಗಿದ್ದಳು). (ಆದಿ 175/6). ಕಲ್ಮಾಷಪಾದನಿಂದ ಇವನ ಮೇಲೆ ಪ್ರಹಾರ. ಇವನಿಂದ ಕಲ್ಮಾಷಪಾದನು ರಾಕ್ಷಸನಾಗುವಂತೆ ಶಾಪ (ಆದಿ 175/40). ಇವನಿಂದ ಸ್ಥಾಪಿಸಲ್ಪಟ್ಟ ಅದೃಶ್ಯಂತಿಯ ಗರ್ಭದಿಂದ ಪರಾಶರನ ಜನ್ಮ (ಆದಿ 177/1). ಈತ ವಸಿಷ್ಠನ ಪುತ್ರನಾಗಿದ್ದನು. ಇವನ ಪುತ್ರ ಪರಾಶರನಾಗಿದ್ದನು. ಮತ್ತು ಪರಾಶರನ ಪುತ್ರ ವ್ಯಾಸ ಈತನ ಮೊಮ್ಮಗನಾಗಿದ್ದನು (ಶಾಂತಿ 349/6–7). ಈತ ಉತ್ತರ ದಿಕ್ಕಿನ ಋಷಿಯಾಗಿದ್ದನು. ಇವನ ನಾಮಾಂತರ ವಸಿಷ್ಠನೆಂದಾಗಿತ್ತು (ಅನು 165/44).

**ಶಕ್ರ** (ಇಂದ್ರ) – ದ್ವಾದಶಾದಿತ್ಯರಲ್ಲಿ ಒಬ್ಬ (ಆದಿ 65/15).

**ಶಕ್ರಕುಮಾರಿಕಾ** – ಸಿದ್ಧರಿಂದ ಸೇವಿಸಲ್ಪಡುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನಮಾಡಿದರೆ ಬೇಗನೆ ಸ್ವರ್ಗಪ್ರಾಪ್ತಿಯಾಗುತ್ತದೆ (ವನ 82/81).

**ಶಕ್ರದೇವ** – ಒಬ್ಬ ಕಲಿಂಗ ರಾಜಕುಮಾರ. ಈತ ಕೌರವಪಕ್ಷದ ಯೋಧನಾಗಿದ್ದನು. ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ವಧೆ (ಭೀಷ್ಮ 54/24–25).

**ಶಕ್ರವಾಪೀ** – ಗಿರಿವ್ರಜದ ಸಮೀಪ ಗೌತಮನ ಆಶ್ರಮದ ಹತ್ತಿರದಲ್ಲಿರುವ ಕಾಡಿನಲ್ಲಿ ವಾಸಿಸುವ ಒಬ್ಬ ನಾಗ (ಸಭಾ 21/9).

**ಶಕ್ರಾವರ್ತ** – ಒಂದು ತೀರ್ಥ. ಇಲ್ಲಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣಕೊಡುವ ಮನುಷ್ಯ ಪುಣ್ಯಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/29).

**ಶಙ್ಕರ** – ಒಬ್ಬ ಸನಾತನ ವಿಶ್ವೇದೇವ (ಅನು 91/35).

**ಶಙ್ಕು** – ಯದುವಂಶದ ಒಬ್ಬ ಕ್ಷತ್ರಿಯ. ಈತ ದ್ರೌಪದೀ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದನು (ಆದಿ 185/19). ಸುಭದ್ರೆ ಮತ್ತು ಅರ್ಜುನರ ವಿವಾಹ ಸಂದರ್ಭದಲ್ಲಿ, ವೃಷ್ಣಿವಂಶದ ಇತರ ಅನೇಕರೊಡನೆ ಈತನೂ ವರದಕ್ಷಿಣೆ ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಬಂದಿದ್ದನು (ಆದಿ 220/31–33). ಇವನು ಒಬ್ಬ ಮಹಾರಥಿ ವೀರನಾಗಿದ್ದನು (ಸಭಾ 14/59).

**ಶಙ್ಕುಕರ್ಣ** – (1) ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾಗಿದ್ದನು (ಆದಿ 57/15).

(2) ಭಗವಾನ್ ಶಿವನ ಒಬ್ಬ ದಿವ್ಯ ಪಾರ್ಷದ. ಈತ ಕುಬೇರನ ಸಭೆಯಲ್ಲಿ ಉಪಸ್ಥಿತನಾಗಿರುತ್ತಾನೆ (ಸಭಾ 10/34–35).

(3) ಪಾರ್ವತಿಯಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಪುಷ್ಪದಂತ (ಶಲ್ಯ 45/51).

(4) ಸ್ಕಂದನ ಒಬ್ಬ ಸೈನಿಕ (ಶಲ್ಯ 45/56).

**ಶಙ್ಕುಕರ್ಣೇಶ್ವರ** – ಭಗವಾನ್ ಶಿವನ ಒಂದು ಮೂರ್ತಿ. ಇವನ ಪೂಜೆಯಿಂದ ಅಶ್ವಮೇಧ ಯಜ್ಞದ ಹತ್ತು ಪಾಲು ಹೆಚ್ಚಿನ ಫಲ ಪ್ರಾಪ್ತವಾಗುತ್ತದೆ (ವನ 82/70).

**ಶಙ್ಖ** – (1) ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/8). ನಾರದನು ಮಾತಲಿಗೆ ಈತನ ಪರಿಚಯಮಾಡಿದ್ದನು (ಉದ್ಯೋಗ 103/12). ಬಲರಾಮನು ಪರಮಧಾಮಕ್ಕೆ ಹೋಗುವಾಗ ಅವನ ಸ್ವಾಗತಕ್ಕಾಗಿ ಈತನೂ ಬಂದಿದ್ದನು (ಮೌಸಲ 4/17).

(2) ರಾಜಾ ವಿರಾಟನ ಪುತ್ರ. ಈತ ತನ್ನ ತಂದೆ ಮತ್ತು ಸಹೋದರನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು. ಉತ್ತರ ಮತ್ತು ಉತ್ತರೆಯ ಸಹೋದರ (ಆದಿ 185/8). ತ್ರೈಗರ್ತರಿಂದ ಗೋಹರಣವಾದಾಗ ಈತ ಯುದ್ಧಕ್ಕೆ ಹೋದುದು (ವಿರಾಟ 31/16). ಪ್ರಥಮ ದಿನದ ಸಂಗ್ರಾಮದಲ್ಲಿ ಭೂರಿಶ್ರವನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/35–37). ಶಲ್ಯನೊಂದಿಗೆ ಯುದ್ಧ (ಭೀಷ್ಮ 49/26–40). ದ್ರೋಣಾಚಾರ್ಯನೊಂದಿಗೆ ಯುದ್ಧ ಮತ್ತು ಆತನಿಂದ ಇವನ ವಧೆ (ಭೀಷ್ಮ 82/21–23). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/37). ಮರಣಾನಂತರ ಈತ ವಿಶ್ವೇದೇವತೆಗಳಲ್ಲಿ ಐಕ್ಯವಾದನು (ಸ್ವರ್ಗಾ 5/17–18).

(3) ಒಬ್ಬ ಋಷಿ. ಈತ ಮಹರ್ಷಿ ಲಿಖಿತನ ಸಹೋದರ. ಇವನು ಇಂದ್ರಸಭೆಯಲ್ಲಿರುತ್ತಾ ದೇವರಾಜ ಇಂದ್ರನ ಉಪಾಸನೆ ಮಾಡುತ್ತಾನೆ

(ಸಭಾ 7/11). ಕೇಳದೆ (ಅಪ್ಪಣೆ ವಿನಃ). ತನ್ನ ಆಶ್ರಮದ ಹಣ್ಣನ್ನು ಕೊಯ್ದುದಕ್ಕಾಗಿ, ಈತ ತನ್ನ ಸಹೋದರ ಲಿಖಿತನನ್ನು ದಂಡನೆ ಪಡೆಯಲು ರಾಜಾ ಸುದ್ಯುಮ್ನನ ಬಳಿಗೆ ಕಳುಹಿಸಿದುದು (ಶಾಂತಿ 23/20–27). ತನ್ನ ಸಹೋದರ ಲಿಖಿತನ ಮೇಲೆ ಇವನ ಕೃಪೆ (ಶಾಂತಿ 23/38–42). ಇವನಿಂದ ಲಿಖಿತನ ಸಂದೇಹಕ್ಕೆ ಸಮಾಧಾನ (ಶಾಂತಿ 23/43–44). ಈತ ತಿಲದಾನ ಮಾಡಿ ದಿವ್ಯಲೋಕವನ್ನು ಪ್ರಾಪ್ತಿಸಿಕೊಂಡನು (ಅನು 66/12).

(4) ಒಬ್ಬ ದೈತ್ಯ. ಇವನು ವರುಣಸಭೆಯಲ್ಲಿದ್ದು, ಅವನ ಉಪಾಸನೆ ಮಾಡುತ್ತಾನೆ (ಸಭಾ 9/13).

(5) ಶ್ರೇಷ್ಠ ನಿಧಿಗಳಲ್ಲಿ ಪ್ರಮುಖನಾದ ಶಂಖ. ಈತ ಕುಬೇರ ಸಭೆಯಲ್ಲಿದ್ದು ಧನಾಧ್ಯಕ್ಷನಾದ ಕುಬೇರನ ಉಪಾಸನೆ ಮಾಡುತ್ತಾನೆ (ಸಭಾ 10/39). ಪಾಂಚಾಲರಾಜ ಬ್ರಹ್ಮದತ್ತನು ಉತ್ತಮ ಬ್ರಾಹ್ಮಣರಿಗೆ ಶಂಖನಿಧಿಯನ್ನು ದಾನಮಾಡಿದ್ದನು. ಇದರಿಂದ ಅವನಿಗೆ ಉತ್ತಮಗತಿ ಪ್ರಾಪ್ತವಾಗಿತ್ತು (ಶಾಂತಿ 234/29; ಅನು 137/17).

(6) ಸಹೋದರರಾದ ಐದು ಮಂದಿ ಕೇಕಯ ರಾಜಕುಮಾರರಲ್ಲಿ ಒಬ್ಬ. ಇವನು ಪಾಂಡವ ಪಕ್ಷದ ರಥಿಕನಾಗಿದ್ದನು (ಉದ್ಯೋಗ 171/15).

**ಶಙ್ಖತೀರ್ಥ** – ಸರಸ್ವತೀ ತಟದಲ್ಲಿರುವ ಒಂದು ಪ್ರಾಚೀನ ತೀರ್ಥ. ಇದರ ವಿಶೇಷ ವರ್ಣನೆ (ಶಲ್ಯ 37/19–26).

**ಶಙ್ಖನಖ** – ಒಬ್ಬ ನಾಗ. ಈತ ವರುಣ ಸಭೆಯಲ್ಲಿರುತ್ತಾ, ಅವನ ಉಪಾಸನೆ ಮಾಡುತ್ತಾನೆ (ಸಭಾ 9/8).

**ಶಙ್ಖಪದ** – ಸ್ವಾರೋಚಿಷ ಮನುವಿನ ಪುತ್ರ. ಇವನಿಗೆ ತಂದೆಯಿಂದ ನಾರಾಯಣನನ್ನು ಪ್ರತಿಪಾದಿಸುವ ಸಾತ್ವತಧರ್ಮದ ಉಪದೇಶ ಪ್ರಾಪ್ತವಾಗಿತ್ತು. ಇವನು ತನ್ನ ಪುತ್ರ ದಿಕ್ಪಾಲ ಸುವರ್ಣಾಭನಿಗೆ ಈ ಧರ್ಮದ ಶಿಕ್ಷಣ ವನ್ನಿತ್ತಿದ್ದನು (ಶಾಂತಿ 348/37–38).

**ಶಙ್ಖಪಿಂಡ** – ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/23).

**ಶಙ್ಖಮುಖ** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/11).

**ಶಙ್ಖಮೇಖಲ** – ಒಬ್ಬ ಋಷಿ. ಈತ ಸರ್ಪದಂಶನದಿಂದ ಸತ್ತ ಪ್ರಮದ್ವರೆಯನ್ನು ನೋಡುವುದಕ್ಕೋಸ್ಕರ, ಸ್ಥೂಲಕೇಶನ ಆಶ್ರಮದ ಹತ್ತಿರವಿರುವ ಕಾಡಿಗೆ ಆಗಮಿಸಿದ್ದನು (ಆದಿ 8/24).

**ಶಙ್ಖಲಿಕಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/15).

**ಶಙ್ಖಶಿರಾ** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/12). ಶಂಖಶೀರ್ಷವೆಂಬ ಹೆಸರಿನಲ್ಲೂ ಇವನದೇ ವರ್ಣನೆ ಬಂದಿದೆ (ಉದ್ಯೋಗ 103/15).

**ಶ್ರವಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/26).

**ಶಙ್ಖನಿ (ಶಂಖಿನಿ)** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ತೀರ್ಥ. ಇಲ್ಲಿರುವ ದೇವೀತೀರ್ಥದಲ್ಲಿ ಸ್ನಾನ ಮಾಡುವುದರಿಂದ ಉತ್ತಮ ರೂಪ ಪ್ರಾಪ್ತವಾಗುತ್ತದೆ (ವನ 83/51).

**ಶಚೀ** – ದೇವರಾಜ ಇಂದ್ರನ ಪತ್ನಿ. ಈಕೆಯ ಅಂಶದಿಂದ ದ್ರೌಪದಿ ಪ್ರಕಟಗೊಂಡಿದ್ದಳು (ಆದಿ 67/157). ಈಕೆ ಇಂದ್ರಸಭೆಯಲ್ಲಿ ದೇವರಾಜ ಇಂದ್ರನೊಂದಿಗೆ ಉತ್ತಮ ಸಿಂಹಾಸನದಲ್ಲಿ ಸಮಾಸೀನಳಾಗಿರುತ್ತಾಳೆ (ಸಭಾ 7/4). ಬ್ರಹ್ಮ ಸಭೆಯಲ್ಲೂ ಉಪಸ್ಥಿತಳಾಗಿದ್ದು, ದೇವೇಶ್ವರನಾದ ಬ್ರಹ್ಮನ ಉಪಾಸನೆ ಮಾಡುತ್ತಾಳೆ (ಸಭಾ 11/42). ಈಕೆ ದೇವೇಂದ್ರನ ಮಹಾರಾಣಿ. ಇವಳು ಇಂದ್ರಭವನಕ್ಕೆ ಬಂದ ಸತ್ಯಭಾಮೆಯನ್ನು ದೇವ ಮಾತೆಯಾದ ಅದಿತಿಯ ಸನ್ನಿಧಿಗೆ ತಲುಪಿಸಿದ್ದಳು (ಸಭಾ 38/29). (ಇವಳನ್ನು ಪುಲೋಮನೆಂಬ ಅಸುರನ ಮಗಳೆಂದು ಹೇಳಲಾಗಿದೆ.) ಈಕೆ ನಹುಷನ ಭಯದಿಂದ ಬೃಹಸ್ಪತಿಗೆ ಶರಣಾದುದು (ಉದ್ಯೋಗ 11/20–23). ನಹುಷನನ್ನು ಪತಿಯಾಗಿ ಸ್ವೀಕರಿಸಲು ತಿರಸ್ಕರಿಸಿದುದು (ಉದ್ಯೋಗ 12/15). ನಹುಷನೊಡನೆ ಸ್ವಲ್ಪ ಕಾಲದ ಸಮಯಾವಧಿ ಕೇಳಿದುದು (ಉದ್ಯೋಗ 13/4–6). ಈಕೆಯಿಂದ ಉಪಶ್ರುತಿಯ ಉಪಾಸನೆ (ಉದ್ಯೋಗ 13/26–27). ಉಪಶ್ರುತಿಯ ಸಹಾಯದಿಂದ ಇಂದ್ರನೊಂದಿಗೆ ಈಕೆಯ ಭೇಟಿ (ಉದ್ಯೋಗ 14/11–12). ಸಪ್ತರ್ಷಿಗಳಿಂದ ಹೊರಲ್ಪಡುವ ಶಿಬಿಕೆಯಲ್ಲಿ ಬರುವಂತೆ ನಹುಷನಲ್ಲಿ ಕೋರಿಕೆ (ಉದ್ಯೋಗ 15/9–14). ಸ್ಕಂದನ

ಜನ್ಮಕಾಲದಲ್ಲಿ ಈಕೆ ಅವನ ಬಳಿಗೆ ಹೋಗಿದ್ದಳು (ಶಲ್ಯ 45/13). ಈಕೆ ನಹುಷನ ಭಯದಿಂದ ಮುಕ್ತಳಾದ ಕಥೆ (ಶಾಂತಿ 352/47–50).

**ಶಠ** – ಒಬ್ಬ ದಾನವ. ಈತ ಕಶ್ಯಪಪತ್ನಿ ದನುವಿನ ಗರ್ಭದಿಂದ ಜನಿಸಿದ್ದನು (ಆದಿ 65/29).

**ಶತಕುಂಭಾ** – ಒಂದು ತೀರ್ಥದಿಂದ ಹುಟ್ಟಿದ ನದಿ. ಇಲ್ಲಿಗೆ ಯಾತ್ರೆ ಮಾಡಿದರೆ ಮನುಷ್ಯ ಸ್ವರ್ಗಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84 /10–11). ಇದು ಅಗ್ನಿಯ ಉತ್ಪತ್ತಿ ಸ್ಥಾನವಾಗಿದೆ (ವನ 222/22–26). ಭಾರತವಾಸಿಗಳು ನೀರು ಕುಡಿಯುವ ನದಿಗಳಲ್ಲಿ ಇದು ಒಂದಾಗಿದೆ (ಭೀಷ್ಮ 9/19).

**ಶತಘಂಟಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/11).

**ಶತಘ್ನೀ** – ಒಂದೇ ಬಾರಿಗೆ ನೂರು ಮಂದಿಯನ್ನು ಸಂಹರಿಸುವ ಯಂತ್ರವಿಶೇಷ (ವನ 284).

**ಶತಚಂದ್ರ** – ಕೌರವಪಕ್ಷದ ಒಬ್ಬ ಮಹಾರಥಿ ಯೋಧ. ಶಕುನಿಯ ಸಹೋದರ. ಭೀಮಸೇನನಿಂದ ಇವನ ವಧೆ (ದ್ರೋಣ 157/23).

**ಶತಜ್ಯೋತಿ** – ಸುಭ್ರಾಟನ ಮೂವರು ಪುತ್ರರಲ್ಲಿ ಒಬ್ಬ. ಇವನಿಗೆ ಒಂದು ಲಕ್ಷ ಪುತ್ರರಾಗಿದ್ದರು (ಆದಿ 1/44–45).

**ಶತದ್ಯುಮ್ನ** – ಒಬ್ಬ ಪ್ರಾಚೀನ ರಾಜ. ಇವನು ಮುದ್ಗಲ (ಮೌದ್ಗಲ್ಯ) ಬ್ರಾಹ್ಮಣನಿಗೆ ಚಿನ್ನದ ಮನೆಯನ್ನು ಅರ್ಪಿಸಿದ್ದನು. ಆ ಪುಣ್ಯದಿಂದ ಸ್ವರ್ಗವನ್ನು ಪಡೆದನು (ಶಾಂತಿ 234/32; ಅನು 137/21).

**ಶತದ್ರು (ಶತದ್ರೂ)** – ಹಿಮಾಲಯ ಪರ್ವತದಿಂದ ಉಗಮಿಸಿದ ಒಂದು ನದಿ. ಅದರ ಆಧುನಿಕ ಹೆಸರು ಸತಲಜ. ಒಂದು ಬಾರಿ ಪುತ್ರಶೋಕದಿಂದ ವ್ಯಾಕುಲನಾಗಿ ವಸಿಷ್ಠ ಆತ್ಮಹತ್ಯೆಗಾಗಿ ಈ ನದಿಗೆ ಹಾರಿದ್ದನು. ಆಗ ಈತ ಅಗ್ನಿಗೆ ಸಮಾಧಾನನಾದ ತೇಜಸ್ವಿಯೆಂದು ತಿಳಿದು, ಈ ನದಿ ನೂರಾರು ಧಾರೆಗಳಾಗಿ, ತುಂಡುತುಂಡಾಗಿ ಅತ್ತಿತ್ತ ಓಡಿದಳು. ಶತಧಾ ವಿದ್ರುತವಾದುದರಿಂದ ಈಕೆಯ ಹೆಸರು 'ಶತದ್ರು' ಎಂದಾಯಿತು (ಆದಿ 176/8–9). ಇವಳು ವರುಣ ಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾಳೆ (ಸಭಾ 9/19). ಇದು ಭಾರತದ ಒಂದು ಪ್ರಮುಖ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/15). ಮಹಾದೇವನು ಕೇಳಿದಾಗ, ಸ್ತ್ರೀಧರ್ಮವನ್ನು ವರ್ಣಿಸುತ್ತಾ, ಪಾರ್ವತಿಯು ಆ ಕುರಿತು ಸಲಹೆ ಕೇಳಿದ ಪವಿತ್ರವಾದ ಪ್ರಮುಖ ನದಿಗಳಲ್ಲಿ ಶತದ್ರು ಒಬ್ಬಳಾಗಿದ್ದಳು (ಅನು 146/18). ಈಕೆ ಸಾಯಂಪ್ರಾತಃಸ್ಮರಣೀಯ ನದಿಯಾಗಿದ್ದಾಳೆ (ಅನು 165/18).

**ಶತಧನ್ವಾ** – ಒಬ್ಬ ಕ್ಷತ್ರಿಯ. ಈತನನ್ನು ಶ್ರೀಕೃಷ್ಣನು ಸೋಲಿಸಿದ್ದನು (ವನ 12/20). ಇವನು ಕಲಿಂಗರಾಜ ಚಿತ್ರಾಂಗದನ ಮಗಳ ಸ್ವಯಂವರಕ್ಕೆ ಹೋಗಿದ್ದನು (ಶಾಂತಿ 4/7).

**ಶತಪತ್ರವನ** – ದ್ವಾರಕೆಯ ಪಶ್ಚಿಮ ಭಾಗದಲ್ಲಿರುವ ಸುಕಕ್ಷ ಪರ್ವತವನ್ನು ಎಲ್ಲಾ ಬದಿಯಿಂದಲೂ ಸುತ್ತುವರಿದು ಸುಶೋಭಿತವಾಗಿರುವ ಒಂದು ವನ (ಸಭಾ 38/29).

**ಶತಪರ್ವಾ** – ಶುಕ್ರನ ಮಡದಿ (ಉದ್ಯೋಗ 117/13).

**ಶತಬಲಾ** – ಭಾರತವರ್ಷದ ಒಂದು ನದಿ. ಇಲ್ಲಿರುವ ಜನರು ಅದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/20).

**ಶತಭಿಷಾ** – ಒಂದು ನಕ್ಷತ್ರ. ಇದರ ಯೋಗವಿದ್ದಾಗ ಅಗರು ಮತ್ತು ಚಂದನ ಸಹಿತ ಸುಗಂಧ ಪದಾರ್ಥಗಳನ್ನು ದಾನಮಾಡುವವನು ಪರಲೋಕದಲ್ಲಿ ಅಪ್ಸರೆಯರ ಸಮುದಾಯವನ್ನೂ ಅಕ್ಷಯಲೋಕವನ್ನೂ ಪಡೆಯುತ್ತಾನೆ (ಅನು 64/30). ಚಂದ್ರವ್ರತದಲ್ಲಿ ಶತಭಿಷೆಯನ್ನು ಚಂದ್ರದೇವನ 'ಹಾಸ'ವೆಂದು ತಿಳಿದು, ಅದೇ ಭಾವದಿಂದ ಅವನ ಪೂಜೆ ಮಾಡಬೇಕು (ಅನು 110/8).

**ಶತಮುಖ** – ಒಬ್ಬ ಮಹಾನ್ ಅಸುರ. ಇವನು ನೂರು ವರ್ಷಗಳಿಗಿಂತಲೂ ಅಧಿಕ ಕಾಲ ತನ್ನ ಮಾಂಸದ ಆಹುತಿಯನ್ನಿತ್ತಿದ್ದನು (ಅನು 14/84 –85). ಇದರಿಂದ ಸಂತುಷ್ಟನಾಗಿ ಭಗವಾನ್ ಶಂಕರನು ಇವನಿಗೆ ವರವನ್ನಿತ್ತನು (ಅನು 14/ 85–87).

**ಶತಯೂಪ** – ಕೇಕಯ ದೇಶದ ಪಂಡಿತ ರಾಜರ್ಷಿ. ಇವನು ಪುತ್ರನಿಗೆ ರಾಜ್ಯವನ್ನಿತ್ತು ಕುರುಕ್ಷೇತ್ರದ ಕಾಡಿನಲ್ಲಿ ತಪಸ್ಸು ಮಾಡುವುದ

ಕ್ಕೋಸ್ಕರ ಬಂದಿದ್ದನು. ಇವನ ಆಶ್ರಯದಲ್ಲೇ ಧೃತರಾಷ್ಟ್ರಾದಿಗಳು ತಂಗಿದ್ದರು. ಇವನು ಧೃತ ರಾಷ್ಟ್ರನಿಗೆ ವನವಾಸದ ವಿಧಿಯನ್ನು ತಿಳಿಸಿದ್ದನು (ಆಶ್ರಮ 19/8–13). ಇವನ ಅಜ್ಜನ ಹೆಸರು ಸಹಸ್ರಚಿತ್ಯನೆಂದಾಗಿತ್ತು (ಆಶ್ರಮ 20/6). ಈತ ನಾರದನೊಡನೆ ಧೃತರಾಷ್ಟ್ರನಿಗೆ ಸಿಗಬಹುದಾದ ಗತಿಯ ಕುರಿತು ಕೇಳಿದ್ದನು (ಆಶ್ರಮ 20/23–28).

**ಶತರಥ** – ಒಬ್ಬ ಪ್ರಾಚೀನ ರಾಜ (ಆದಿ 1/233). ಈತ ಯಮಸಭೆಯಲ್ಲಿದ್ದು ಸೂರ್ಯ ಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/26).

**ಶತರುದ್ರ** – ವೇದದ ಶತರುದ್ರೀಯ ಪ್ರಕರಣ. ಇದರಲ್ಲಿ ರುದ್ರದೇವನ ನೂರು ಹೆಸರುಗಳ ಉಲ್ಲೇಖವಿದೆ (ಅನು 150/14).

**ಶತಲೋಚನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).

**ಶತಶೀರ್ಷಾ** – ನಾಗರಾಜ ವಾಸುಕಿಯ ಪತ್ನಿ (ಉದ್ಯೋಗ 117/17).

**ಶತಶೃಂಗ** – (1) ಒಂದು ಪರ್ವತ. ಇಲ್ಲಿಗೆ ಗಂಧಮಾದನ, ಇಂದ್ರದ್ಯುಮ್ನ ಮತ್ತು ಹಂಸಕೂಟ ವನ್ನು ದಾಟಿ ಪಾಂಡುರಾಜನು ಆಗಮಿಸಿದ್ದನು. ಇಲ್ಲಿ ತಪಸ್ವೀ ಜೀವನವನ್ನು ಅನುಸರಿಸಿ ಕಠಿನ ತಪಸ್ಸಿನಲ್ಲಿ ಮಗ್ನನಾದನು (ಆದಿ 118/50). ಇಲ್ಲಿಯೇ ಐದೂ ಮಂದಿ ಪಾಂಡವರ ಜನನ ವಾಗಿತ್ತು. ಶತಶೃಂಗ ನಿವಾಸಿಗಳಾದ ಋಷಿಮುನಿ ಗಳು ಅರ್ಜುನನ ಜನನದಿಂದ ಅಪಾರ ಪ್ರಸನ್ನತೆ ಹೊಂದಿದ್ದರು. ಈ ಎಲ್ಲಾ ಸಹೋದರರ ನಾಮ ಕರಣ ಸಂಸ್ಕಾರ ಕೂಡಾ ಇಲ್ಲಿಯೇ ಆಗಿತ್ತು (ಆದಿ 122, 123 ಅಧ್ಯಾಯ). ರಾಜಾ ಪಾಂಡು ವಿನ ಮೃತ್ಯು ಮತ್ತು ಆತನೊಂದಿಗೆ ಮಾದ್ರಿಯ ಚಿತಾರೋಹಣದ ಘಟನೆ ಕೂಡಾ ಇಲ್ಲಿಯೇ ಸಂಭವಿಸಿತು (ಆದಿ 124 ಅಧ್ಯಾಯ). ಸ್ವಪ್ನಾವಸ್ಥೆಯಲ್ಲಿ ಶ್ರೀಕೃಷ್ಣನೊಂದಿಗೆ ಕೈಲಾಸಕ್ಕೆ ಹೋಗುತ್ತಿದ್ದ ಅರ್ಜುನನಿಗೆ ದಾರಿಯಲ್ಲಿ ಶತಶೃಂಗ ಪರ್ವತ ಸಿಕ್ಕಿತ್ತು (ದ್ರೋಣ 80/32). ಸುಲಭಾ ಎಂಬವಳ ಪೂರ್ವಜರ ಯಜ್ಞದಲ್ಲಿ, ದೇವರಾಜ ಇಂದ್ರನ ಸಹಯೋಗದಿಂದ, ದ್ರೋಣ, ಶತಶೃಂಗ ಮತ್ತು ಚಕ್ರದ್ವಾರಗಳೆಂಬ ಪರ್ವತಗಳು ಇಟ್ಟಿಗೆಯ ಸ್ಥಾನಕ್ಕೆ ಆರಿಸಲ್ಪಟ್ಟಿದ್ದವು (ಶಾಂತಿ 320/185).

(2) ಒಬ್ಬ ರಾಕ್ಷಸ. ಇವನಿಗೆ 'ಸಂಯಮ' 'ವಿಯಮ' ಮತ್ತು ಮಹಾಬಲವಂತನಾದ 'ಸುಯಮ'ರೆಂಬ ಹೆಸರಿನ ಮೂವರು ಪುತ್ರ ರಿದ್ದರು (ಶಾಂತಿ 98/11).

**ಶತಸಹಸ್ರ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಲೋಕವಿಖ್ಯಾತ ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಸಹಸ್ರಗೋದಾನದ ಫಲ ದೊರಕು ತ್ತದೆ. ಇಲ್ಲಿ ಮಾಡಿದ ದಾನ ಮತ್ತು ಉಪವಾಸದ ಮಹತ್ವ, ಇತರೆಡೆಗಳಿಗಿಂತ ಸಾವಿರ ಪಾಲು ಹೆಚ್ಚಿನದಾಗಿದೆ (ವನ 83/157–159).

**ಶತಸಾಹಸ್ರಕ** – ಗೋಮತಿಯ ರಾಮತೀರ್ಥ ದೊಳಗಿರುವ ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿ ನಿಯಮಪಾಲನೆಯ ಮೂಲಕ ನಿಯಮಿತ ಭೋಜನಮಾಡುವ ಮನುಷ್ಯ ಸಹಸ್ರಗೋದಾನದ ಫಲಪಡೆಯುತ್ತಾನೆ (ವನ 84/74–75).

**ಶತಾನಂದ** – ಒಬ್ಬ ದಿವ್ಯ ಮಹರ್ಷಿ. ಈತ ಭೀಷ್ಮನನ್ನು ನೋಡಲು ಆಗಮಿಸಿದ್ದನು (ಅನು 26/8).

**ಶತಾನಂದಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/11).

**ಶತಾನೀಕ** – (1) ನಕುಲನಿಂದ ದ್ರೌಪದಿಯ ಹೊಟ್ಟೆಯಲ್ಲಿ ಹುಟ್ಟಿದವ (ಆದಿ 63/123; ಆದಿ 95/75). ಇವನು ವಿಶ್ವೇದೇವರ ಅಂಶದಿಂದ ಜನಿಸಿದ್ದನು (ಆದಿ 67/127–128). ಕೌರವ ಕುಲದ ಮಹಾನುಭಾವ ರಾಜರ್ಷಿ ಶತಾನೀಕನ ಹೆಸರನ್ನಾಧರಿಸಿ ನಕುಲನು ತನ್ನ ಪುತ್ರನ ಹೆಸರಿಟ್ಟಿದ್ದನು (ಆದಿ 220/84). ಇವನಿಂದ ಜಯಸೇನನ ಪರಾಭವ (ಭೀಷ್ಮ 79/42–45). ದುಷ್ಕರ್ಣನ ಪರಾಜಯ (ಭೀಷ್ಮ 79/46–52). ವೃಷಸೇನನೊಂದಿಗೆ ಇವನ ಯುದ್ಧ (ದ್ರೋಣ 16/7–8). ಇವನ ಕುದುರೆಗಳ ವರ್ಣನೆ (ದ್ರೋಣ 23/30). ಇವನಿಂದ ಭೂತಕರ್ಮಾ ಎಂಬವನ ವಧೆ (ದ್ರೋಣ 25/23). ಚಿತ್ರಸೇನನ ಪರಾಜಯ (ದ್ರೋಣ 168/12). ಧೃತರಾಷ್ಟ್ರ ಪುತ್ರ ಶ್ರುತಕರ್ಮನೊಂದಿಗೆ ಇವನ ಘೋರ ಯುದ್ಧ (ಕರ್ಣ 25/13–16). ಅಶ್ವತ್ಥಾಮ ನೊಂದಿಗೆ ಇವನ ಯುದ್ಧ (ಕರ್ಣ 55/14–17).

ಇವನಿಂದ ಕಲಿಂಗ ರಾಜಕುಮಾರನ ವಧೆ (ಕರ್ಣ 85/21). ಅಶ್ವತ್ಥಾಮನಿಂದ ಇವನ ವಧೆ (ಸೌಪ್ತಿಕ 8/57–58). ಮಹಾಭಾರತದಲ್ಲಿ ಬಂದಿರುವ ಶತಾನೀಕನ ಹೆಸರುಗಳು – ನಕುಲದಾಯಾದ, ನಕುಲಸುತ, ನಕುಲಾತ್ಮಜ ಮತ್ತು ನಾಕುಲಿ ಇತ್ಯಾದಿ.

(2) ಪರೀಕ್ಷಿತಪುತ್ರ ಜನಮೇಜಯನ ಪತ್ನಿ ವಪುಷ್ಟಮಾ ಎಂಬವಳ ಗರ್ಭದಲ್ಲಿ ಹುಟ್ಟಿದ ರಾಜಕುಮಾರ. ಇವನ ಪತ್ನಿ ವಿದೇಹ ರಾಜ ಕುಮಾರಿಯಾಗಿದ್ದಳು. ಇವನ ಪುತ್ರನ ಹೆಸರು ಅಶ್ವಮೇಧದತ್ತ (ಆದಿ 95/86).

(3) ಕುರುಕುಲದ ಒಬ್ಬ ಪ್ರಾಚೀನ ರಾಜರ್ಷಿ. ಅವನ ಹೆಸರನ್ನೇ ನಕುಲ ತನ್ನ ಮಗನಿಗೆ ಇಟ್ಟಿದ್ದನು (ವನ 220/84).

(4) (ಸೂರ್ಯದತ್ತ) ಮತ್ಸ್ಯನರೇಶ ವಿರಾಟನ ಸಹೋದರ ಮತ್ತು ಸೇನಾಪತಿ. ಇವನು ಗೋಹರಣಕಾಲದಲ್ಲಿ ಚಿನ್ನದ ಕವಚ ಧರಿಸಿ ತ್ರಿಗರ್ತರೊಂದಿಗೆ ಯುದ್ಧಕ್ಕೆ ಹೋದನು (ವಿರಾಟ 31/11–12). ಇವನ ಇನ್ನೊಂದು ಹೆಸರು ಸೂರ್ಯದತ್ತನೆಂದಾಗಿತ್ತು (ವಿರಾಟ 31/15). ತ್ರಿಗರ್ತರೊಂದಿಗೆ ಇವನ ಘೋರ ಸಂಗ್ರಾಮ (ವಿರಾಟ 33/19–21). ಇವನನ್ನು ಭೀಷ್ಮನು ಧರಾಶಾಯಿಯಾಗುವಂತೆಯೂ, ಗಾಯಾಳುವಾಗುವಂತೆಯೂ ಮಾಡಿದ್ದನು (ಭೀಷ್ಮ 118/27). ಇವನು ಪಾಂಡವರ ಪ್ರಮುಖ ಸಹಾಯಕನಾಗಿದ್ದನು (ದ್ರೋಣ 158/41). ಶಲ್ಯನಿಂದ ಇವನ ವಧೆ (ದ್ರೋಣ 167/30).

(5) ವಿರಾಟನ ತಮ್ಮ. ದ್ರೋಣಾಚಾರ್ಯನಿಂದ ಇವನ ವಧೆ (ದ್ರೋಣ 21/28).

**ಶತಾಯು** – (1) ಪುರೂರವನಿಂದ ಉರ್ವಶಿಯಲ್ಲಿ ಹುಟ್ಟಿದ ಆರು ಪುತ್ರರಲ್ಲಿ ಒಬ್ಬ. ಉಳಿದ ಐದು ಮಂದಿಯ ಹೆಸರು ಆಯು, ಧೀಮಾನ್, ಅಮಾವಸು, ದೃಢಾಯು, ಮತ್ತು ವನಾಯು (ಆದಿ 75/24–25).

(2) ಕೌರವ ಪಕ್ಷದ ಒಬ್ಬ ‘ಯೋಧ. ಇವನು ಭೀಷ್ಮನಿರ್ಮಿತ ಕ್ರೌಂಚವ್ಯೂಹದ ಜಘನ ಪ್ರದೇಶದಲ್ಲಿ ನಿಂತಿದ್ದನು (ಭೀಷ್ಮ 75/22). ಇವನು ಕೊಲ್ಲಲ್ಪಟ್ಟ ವರ್ಣನೆ (ಶಲ್ಯ 2/19).

**ಶತೋದರೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/15).

**ಶತೋಲೂಖಲಮೇಖಲಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/10).

**ಶತ್ರುಘ್ನ** – ಮಹಾರಾಜ ದಶರಥನ ಮಗ. ಶ್ರೀರಾಮನ ಸಹೋದರ. ಇವನ ತಾಯಿಯ ಹೆಸರು ಸುಮಿತ್ರೆ (ವನ 274/7–8). ಇವನು ಶ್ರೀರಾಮನ ಆಜ್ಞೆ ಪ್ರಕಾರ ಮಧುವಿನ ಮಗ ಲವಣನೆಂಬ ರಾಕ್ಷಸನ ವಧೆ ಮಾಡಿದ್ದನು (ಸಭಾ 38/29). ಕಾಡಿನಿಂದ ಹಿಂತಿರುಗಿದ ಬಳಿಕ ಅಣ್ಣ ಶ್ರೀರಾಮನೊಂದಿಗೆ ಇವನ ಭೇಟಿ (ವನ 291/63).

**ಶತ್ರುಂಜಯ** – (1) ಸೌವೀರ ದೇಶದ ಒಬ್ಬ ರಾಜಕುಮಾರ. ಇವನು ಜಯದ್ರಥನ ರಥದ ಹಿಂದಿನಿಂದ ಕೈಯಲ್ಲಿ ಧ್ವಜ ತೆಗೆದುಕೊಂಡು ಹೋಗುತ್ತಿದ್ದನು (ವನ 265/10). ದ್ರೌಪದೀ ಹರಣದ ಸಂದರ್ಭದಲ್ಲಿ ಅರ್ಜುನನಿಂದ ಈತನ ವಧೆ (ವನ 271/27).

(2) ಧೃತರಾಷ್ಟ್ರನ ಪುತ್ರ, ದುರ್ಯೋಧನನು ಈತನಿಗೆ ಭೀಷ್ಮರ ರಕ್ಷಣೆಯ ಭಾರವನ್ನು ಒಪ್ಪಿಸಿದ್ದನು (ಭೀಷ್ಮ 51/8). ಸಹೋದರ ಸಹಿತನಾಗಿ ಈತ ಐದುಮಂದಿ ಕೇಕಯ ರಾಜಕುಮಾರರ ಮೇಲೆ ಆಕ್ರಮಣ ಮಾಡಿದ್ದನು (ಭೀಷ್ಮ 79/56). ಭೀಮಸೇನನಿಂದ ಇವನ ವಧೆ (ದ್ರೋಣ 137/29–30).

(3) ಕೌರವಪಕ್ಷದ ಯೋಧ, ಕರ್ಣನ ಸಹೋದರ, ಅರ್ಜುನನು ಈತನ ವಧೆ ಮಾಡಿದನು (ದ್ರೋಣ 32/61).

(4) ಕೌರವ ಪಕ್ಷದ ಯೋಧ. ಇವನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 48/15–16).

(5) ದ್ರುಪದನ ಒಬ್ಬ ಮಗ. ಇವನು ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟನು (ದ್ರೋಣ 156/181).

(6) ಸೌವೀರ ದೇಶದ ರಾಜ. ಇವನಿಗೆ ಭಾರದ್ವಾಜ ಕಣಿಕನು ರಾಜಧರ್ಮ ಮತ್ತು ರಾಜಕೀಯ ಗುಪ್ತನೀತಿಯನ್ನು ಉಪದೇಶಿಸಿದ್ದನು (ಶಾಂತಿ 140).

**ಶತ್ರುಂಜಯಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/6).

**ಶತ್ರುತಪನ** – ಶತ್ರುಗಳನ್ನು ಕಷ್ಟಪಡಿಸುವ ಒಬ್ಬ

ದಾನವ. ಇವನು ಕಶ್ಯಪಪತ್ನಿ ದನುವಿನ ಗರ್ಭ ದಿಂದ ಹುಟ್ಟಿದ್ದನು (ಆದಿ 65/29).

**ಶತ್ರುಂತಪ** – ದುರ್ಯೋಧನನ ಸೇನೆಯ ಒಬ್ಬ ರಾಜ. ಕೌರವರಿಂದ ವಿರಾಟನ ಗೋಗ್ರಹಣ ವಾದಾಗ ಅರ್ಜುನನಿಂದ ಈತನ ವಧೆ (ವಿರಾಟ 54/11–13).

**ಶತ್ರುಸಹ** – ಧೃತರಾಷ್ಟ್ರನ ಒಬ್ಬ ಪುತ್ರ. ಇವನು ಅರ್ಜುನನಿಂದ ಕರ್ಣನನ್ನು ರಕ್ಷಿಸುವುದಕ್ಕಾಗಿ ಅವನ ಸಮ್ಮುಖಕ್ಕೆ ಹೋಗಿದ್ದನು (ವಿರಾಟ 54/7). ಸಹೋದರರ ಸಹಿತನಾಗಿ ಇವನು ಐದು ಮಂದಿ ಕೇಕಯ ರಾಜಕುಮಾರರ ಮೇಲೆ ಆಕ್ರಮಣ ಮಾಡಿದ್ದನು (ಭೀಷ್ಮ 79/56). ಭೀಮಸೇನನಿಂದ ಇವನ ವಧೆ (ದ್ರೋಣ 137/29–30).

**ಶನೈಶ್ಚರ** – ಒಬ್ಬ ಗ್ರಹ. ಇವನು ಬ್ರಹ್ಮನ ಸಭೆಯಲ್ಲಿರುತ್ತಾ, ಅವನ ಉಪಾಸನೆ ಮಾಡುತ್ತಾನೆ (ಸಭಾ 11/29). ಇವನು ಮಹಾತೇಜಸ್ವಿ ಮತ್ತು ತೀಕ್ಷ್ಣ ಸ್ವಭಾವವುಳ್ಳ ಗ್ರಹವಾಗಿದ್ದಾನೆ. ಇವನು ರೋಹಿಣೀ ನಕ್ಷತ್ರವನ್ನು ಪೀಡಿಸುವಾಗ, ಜಗತ್ತಿಗೆ ವಿಪತ್ಕಾರಕನಾಗುತ್ತಾನೆ (ಉದ್ಯೋಗ 143/8). ಈ ರೀತಿಯ ಯೋಗ ಬಂದರೆ ಪ್ರಪಂಚಕ್ಕೆ ದೊಡ್ಡ ಭಯ ಪ್ರಾಪ್ತವಾಗುವ ಸೂಚನೆಯಾಗುತ್ತದೆ (ಭೀಷ್ಮ 2/32). ಈತ ಮುಂದಿನ ಯುಗದಲ್ಲಿ ಮನುವಿನ ಅಧಿಕಾರದಲ್ಲಿ ಪ್ರತಿಷ್ಠಿತನಾಗುವವ ನಿದ್ದಾನೆ (ಶಾಂತಿ 349/55). ನಿತ್ಯ ಸ್ಮರಣೀಯ ದೇವತೆಗಳಲ್ಲಿ ಶನೈಶ್ಚರ ಗ್ರಹನ ಹೆಸರೂ ಇದೆ (ಅನು 165/17).

**ಶಬರ** – ಒಂದು ಮ್ಲೇಚ್ಛಜಾತಿ. ಇದು ವಸಿಷ್ಠನ ನಂದಿನೀ ಹಸುವಿನ ಸೆಗಣಿ ಮತ್ತು ಮೂತ್ರದಿಂದ ಹುಟ್ಟಿತ್ತು (ಆದಿ 174/36–37). ಶಬರ ದಕ್ಷಿಣ ಭಾರತದ ಒಂದು ಜನಪದವಾಗಿದೆ (ಭೀಷ್ಮ 50/53). ಸಾತ್ಯಕಿಯು ಕೌರವ ಸೇನೆಯ ಸಂಹಾರ ಮಾಡುವಾಗ ಸಾವಿರಾರು ಶಬರರ ಹೆಣಗಳಿಂದ ಭೂಮಿಯನ್ನು ಮುಚ್ಚಿದ್ದನು (ದ್ರೋಣ 119/46). ವಸಿಷ್ಠರ ಆಜ್ಞೆ ಪ್ರಕಾರ ನಂದಿನಿಯು ಶಬರರನ್ನು ಸೃಷ್ಟಿಸಿದಳು (ಶಲ್ಯ 40/21). ಇವರು ಮಾಂಧಾತಾನ ರಾಜ್ಯದಲ್ಲಿ ವಾಸಿಸು ತ್ತಿದ್ದರು ಮತ್ತು ಕಳವು, ಡಕಾಯತಿಗಳಿಂದ ಹೊಟ್ಟೆ ಹೊರೆಯುತ್ತಿದ್ದರು (ಶಾಂತಿ 65/13–15). ದಕ್ಷಿಣ ಭಾರತದಲ್ಲಿ ಜನ್ಮತಾಳುವ ಶಬರಾದಿಗಳು ಮ್ಲೇಚ್ಛರೆಂದು ತಿಳಿಯಲ್ಪಡುತ್ತಾರೆ (ಶಾಂತಿ 207/42). ಭಗವಾನ್ ಶಂಕರನು ಕಿರಾತರ ಮತ್ತು ಶಬರರ ರೂಪ ಕೂಡ ಧರಿಸುತ್ತಾನೆ (ಅನು 14/141–142). ಶಬರರು ಮೊದಲು ಕ್ಷತ್ರಿಯ ರಾಗಿದ್ದರು. ಆದರೆ ಬ್ರಾಹ್ಮಣರ ಕೋಪದಿಂದ ಅವರಿಗೆ ಶೂದ್ರತ್ವ ಬಂತು (ಅನು 35/17–18). ಅನೇಕ ಕ್ಷತ್ರಿಯರು ಪರಶುರಾಮನ ಭಯದಿಂದ ಗುಹೆಗಳಲ್ಲಿ ಅಡಗಿ ಸ್ವಧರ್ಮ ಭ್ರಷ್ಟರಾದರು. ಅವರಿಗೆ ಬ್ರಾಹ್ಮಣ ದರ್ಶನವಾಗಲಿಲ್ಲ. ಇದರಿಂ ದಾಗಿ ಅವರು ಪುನಃ ತಮ್ಮ ಧರ್ಮವನ್ನು ತಿಳಿಯದಾದರು ಮತ್ತು ಶಬರಾದಿಗಳ ಸಹವಾಸ ದಿಂದ ಹಾಗೆಯೇ ಆಗಿಹೋದರು (ಆಶ್ವ 29/15–16).

**ಶಬಲ** – ಕಶ್ಯಪನಿಂದ ಕದ್ರುವಿನಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/7).

**ಶಬಲಾಕ್ಷ** – ಒಬ್ಬ ದಿವ್ಯ ಮಹರ್ಷಿ. ಈತ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/7).

**ಶಬಲಾಶ್ವ** – ಇವನು ಮಹಾರಾಜ ಕುರುವಿನ ಮೊಮ್ಮಗ ಮತ್ತು (ಅಶ್ವವಂತ) ಅವಿಕ್ಷಿತನ ಪುತ್ರನಾಗಿದ್ದನು. ಇವನಿಗೆ ಇನ್ನು ಆರು ಸಹೋ ದರರಿದ್ದರು. ಅವರ ಹೆಸರುಗಳು – ಪರೀಕ್ಷಿತ, ಆದಿರಾಜ, ವಿರಾಜ, ಶಾಲ್ಮಲಿ, ಉಚ್ಚೈಃಶ್ರವಾ, ಭಂಗಕಾರ ಮತ್ತು ಜಿತಾರಿ (ಆದಿ 94/52–53).

**ಶಮ** – (1) 'ಅಹಃ' ಎಂಬ ಹೆಸರಿನ ವಸುವಿನ ನಾಲ್ವರು ಪುತ್ರರಲ್ಲಿ ಒಬ್ಬ ಉಳಿದ ಮೂವರ ಹೆಸರುಗಳು – ಜ್ಯೋತಿ, ಶಾಂತಿ ಮತ್ತು ಮುನಿ (ಆದಿ 66/23).

(2) ಧರ್ಮನ ಶ್ರೇಷ್ಠ ಮೂವರು ಪುತ್ರರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರುಗಳು: ಕಾಮ ಮತ್ತು ಹರ್ಷ. ಇವರ ಭಾರ್ಯೆಯ ಹೆಸರು 'ಪ್ರಾಪ್ತಿ' ಎಂದಾಗಿದೆ (ಆದಿ 66/32–33).

**ಶಮಠ** – ಒಬ್ಬ ವಿದ್ವಾಂಸ ಬ್ರಾಹ್ಮಣ. ಇವನು ಯುಧಿಷ್ಠಿರನಿಗೆ ಅಮೂರ್ತರಯಾನ ಪುತ್ರನಾದ ರಾಜಾ ಗಯನ ಯಜ್ಞದ ವೃತ್ತಾಂತ ತಿಳಿಸಿದ್ದನು (ವನ 95/17–29).

**ಶಮೀಕ** – (1) ಒಬ್ಬ ಋಷಿ. ಇವನು ಗೋಪುರಗಳಿರುವ ಸ್ಥಳದಲ್ಲಿ ಕುಳ್ಳಿರುತ್ತಿದ್ದನು

ಮತ್ತು ದನಗಳ ಹಾಲು ಕುಡಿಯುವಾಗ ಕರುಗಳ ಬಾಯಿಯಿಂದ ಹೊರಬರುತ್ತಿದ್ದ ನೊರೆಯನ್ನು ತಿಂದು, ಕುಡಿದು ತಪಸ್ಸು ಮಾಡುತ್ತಿದ್ದನು. ಇವನು ಮೌನವ್ರತವನ್ನು ಪಾಲಿಸುತ್ತಿದ್ದನು. ಇವನ ಬಳಿಗೆ ಹಸಿದ, ಬಾಯಾರಿದ ಪರೀಕ್ಷಿತನ ಆಗಮನ ಮತ್ತು ಅವನಿಂದ ಈತನ ಕೊರಳಿನ ಮೇಲೆ ಸತ್ತ ಹಾವು ಇಡಲ್ಪಟ್ಟ ಕಥೆ (ಆದಿ 40/17–21). ಇವನ ಪುತ್ರನ ಹೆಸರು 'ಶೃಂಗೀ' ಋಷಿ ಎಂದಾಗಿತ್ತು (ಆದಿ 40/25). ಇವನು ತನ್ನ ಪುತ್ರನನ್ನು ನಿಂದಿಸಿದುದು ಮತ್ತು ರಾಜನ ಮಹತ್ತ್ವ ಮತ್ತು ಅವಶ್ಯಕತೆಯನ್ನು ತಿಳಿಸಿದುದು (ಆದಿ 41/20–33). ಕೋಪದ ನಿಂದೆ ಮತ್ತು ಕ್ಷಮೆಯ ಪ್ರಶಂಸೆ ಮಾಡುತ್ತಾ ಈತ ತನ್ನ ಪುತ್ರನಿಗೆ ಸಂಯಮದಿಂದಿದ್ದು, ಕೋಪವನ್ನು ಹತ್ತಿಕ್ಕಲು ಆದೇಶ ನೀಡಿದುದು (ಆದಿ 42/3–12). ಇವನು ಗೌರಮುಖನೆಂಬ ಶೀಲವಂತನಾದ ಶಿಷ್ಯನನ್ನು, ರಾಜಾಪರೀಕ್ಷಿತನ ಬಳಿಗೆ ಸಂದೇಶ ಕೊಟ್ಟು ಕಳುಹಿಸಿದುದು (ಆದಿ 42/13–14). ಈತ ಇಂದ್ರಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾನೆ (ಸಭಾ 7/16). ವ್ಯಾಸನು ಜನಮೇಜಯನಿಗೆ ಸ್ವರ್ಗೀಯ ರಾಜಾ ಪರೀಕ್ಷಿತನ ದರ್ಶನಮಾಡಿಸುವಾಗ, ಪುತ್ರಸಹಿತ ಶಮೀಕಮುನಿಯನ್ನು ಕೂಡಾ ಅಲ್ಲಿ ಉಪಸ್ಥಿತಗೊಳಿಸಿದ್ದನು (ಆಶ್ವ 35/8).

(2) (ಸಮೀಕ) ವೃಷ್ಣಿವಂಶದ ಒಬ್ಬ ವೀರ. ಈತ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/19). ಇವನು ದ್ವಾರಕೆಯ ಏಳು ಮಹಾರಥಿಗಳಲ್ಲಿ ಒಬ್ಬನಾಗಿದ್ದನು (ಸಭಾ 14/58). ಧೃತರಾಷ್ಟ್ರನು ಇವನ ಬಲಪರಾಕ್ರಮಗಳ ಕುರಿತು ಸಂಶಯ ಪಟ್ಟದ್ದು (ದ್ರೋಣ 11/28).

**ಶಮ್ಯಾಕ** – ಒಬ್ಬ ಪರಮಶಾಂತ, ಜೀವನ್ಮುಕ್ತ, ತ್ಯಾಗಿ ಬ್ರಾಹ್ಮಣ (ಶಾಂತಿ 176/2–3). ತ್ಯಾಗದ ಮಹಿಮೆಯ ಕುರಿತು ಈತನಿಂದ ಭೀಷ್ಮನಿಗೆ ಉಪದೇಶ (ಶಾಂತಿ 176/4–22).

**ಶಮ್ಬರ** – (1) ಒಬ್ಬ ದಾನವ. ಕಶ್ಯಪ ಮತ್ತು ದನುವಿನ ಪ್ರಖ್ಯಾತ ಮೂವತ್ತನಾಲ್ಕು ಪುತ್ರರಲ್ಲಿ ಒಬ್ಬ (ಆದಿ 65/22). ಇಂದ್ರನಿಂದ ಇವನ ಪರಾಜಯ (ಆದಿ 137/43; ವನ 168/81). ಸಾಂಬನು ಬಾಲ್ಯಕಾಲದಲ್ಲಿಯೇ ಇವನ ಸೇನೆಯನ್ನು ನಷ್ಟಭ್ರಷ್ಟಗೊಳಿಸಿದ್ದನು (ವನ 120/13). ಇಂದ್ರನಿಂದ ಇವನ ವಧೆಯ ವರ್ಣನೆ (ಉದ್ಯೋಗ 16/14; ಶಾಂತಿ 98/50). ಇಂದ್ರನು ಕೇಳಿದಾಗ ಇವನು ಬ್ರಾಹ್ಮಣರ ಮಹಿಮೆಯನ್ನು ವರ್ಣಿಸಿದುದು (ಅನು 36/4–18).

(2) ಒಬ್ಬ ಅಸುರ. ಇವನನ್ನು ಶ್ರೀಕೃಷ್ಣನು (ತನ್ನ ವಿಭೂತಿ ಸ್ವರೂಪ ಪ್ರದ್ಯುಮ್ನನ ಮೂಲಕ). ಕೊಲ್ಲಿಸಿದ್ದನು (ಸಭಾ 38/29). ಸ್ವತಃ ಶ್ರೀಕೃಷ್ಣನು ಕೂಡಾ ಶಂಬರನೆಂಬ ಅಸುರನನ್ನು ಸೋಲಿಸಿದ್ದನು (ಉದ್ಯೋಗ 68/4). ಇವನು ಭೂಮಂಡಲದ ಪ್ರಾಚೀನ ಶಾಸಕರಲ್ಲಿದ್ದನು (ಶಾಂತಿ 227/49). ರುಕ್ಮಿಣೀನಂದನ ಪ್ರದ್ಯುಮ್ನನ ಮೂಲಕ ಇವನ ವಧೆಯಾಗಿತ್ತು (ಅನು 14/28).

**ಶಮ್ಬೂಕ** – (1) ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

(2) ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ತನ್ನದಾಗಿಸಿಕೊಂಡ ಒಬ್ಬ ಶೂದ್ರ. ಸತ್ಯಪರಾಕ್ರಮಿಯಾದ ಶ್ರೀರಾಮಚಂದ್ರನ ಮೂಲಕ ಪರಧರ್ಮಾಪಹಾರಿಯಾದ ಶಂಭೂಕನೆಂಬ ಶೂದ್ರನು ಕೊಲ್ಲಲ್ಪಟ್ಟಾಗ, ಆ ಧರ್ಮದ ಪ್ರಭಾವದಿಂದ ಒಬ್ಬ ಸತ್ತ ಬ್ರಾಹ್ಮಣ ಬಾಲಕ ಬದುಕಿದನೆಂಬ ವರದಿ ಹೇಳಲ್ಪಟ್ಟಿದೆ (ಶಾಂತಿ 153/67).

**ಶಮ್ಭು** – (1) ಒಬ್ಬ ಪ್ರಾಚೀನ ರಾಜ (ಆದಿ 1/234). ಇವನು ಜೀವಮಾನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/66).

(2) ಒಬ್ಬ ಅಗ್ನಿ. ವೇದಪಾರಂಗತ ವಿದ್ವಾಂಸರಾದ ಬ್ರಾಹ್ಮಣರು ಇವನನ್ನು ಅತ್ಯಂತ ದೇದೀಪ್ಯಮಾನನೆಂದೂ, ತೇಜಃಪುಂಜನೆಂದೂ ಹೇಳುತ್ತಾರೆ (ವನ 221/5).

(3) ಶ್ರೀಕೃಷ್ಣನ ಪುತ್ರ. ಈತ ರುಕ್ಮಿಣೀ ದೇವಿಯ ಗರ್ಭದಿಂದ ಜನಿಸಿದ್ದನು (ಅನು 14/33).

(4) ಏಕಾದಶ ರುದ್ರರಲ್ಲಿ ಒಬ್ಬ (ಅನು 50/12–13).

**ಶಮ್ಯಾನಿಪಾತ** – ಭೂಮಿ ಅಥವಾ ದೂರದ ಅಳತೆ. ದಂಡವನ್ನು ಶಮ್ಯಾ ಎನ್ನುತ್ತಾರೆ. ಒಬ್ಬ ಬಲವಂತನಾದ ಪುರುಷ ದಂಡವನ್ನು ಚೆನ್ನಾಗಿ ಶಕ್ತಿಹಾಕಿ ಎಸೆದರೆ, ಅದು ಬಿದ್ದಲ್ಲಿಗೆ ಇರುವ ದೂರದ ಸ್ಥಾನವನ್ನು ಒಂದು ಶಮ್ಯಾನಿಪಾತ

33

ವೆನ್ನುತ್ತಾರೆ (ವನ 84/9).

**ಶಮ್ಯಾಪಾತ** – ಭೂಮಿ ಅಥವಾ ದೂರದ ಅಳತೆ (ಶಾಂತಿ 29/95) (ನೋಡಿರಿ – ಶಮ್ಯಾನಿಪಾತ).

**ಶರಣ** – ವಾಸುಕಿ ವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಯಜ್ಞದಲ್ಲಿ ಉರಿದುಹೋಗಿದ್ದನು (ಆದಿ 57/6).

**ಶರದ್ವಂತ** – ಗೌತಮಗೋತ್ರದ ಒಬ್ಬ ಮಹರ್ಷಿ (ಆದಿ 63/107). ಇವನು ಮಹರ್ಷಿ ಗೌತಮರ ಪುತ್ರನಾಗಿದ್ದನು ಮತ್ತು ಧನುರ್ಬಾಣಗಳ ಸಮೇತನಾಗಿ ಹುಟ್ಟಿದ್ದನು. ಇವನು ಸ್ವತಃ ಗೌತಮನೆಂದು ಕರೆಯಲ್ಪಡುತ್ತಿದ್ದನು. ಇವನಿಗೆ ಧನುರ್ವೇದದಲ್ಲಿರುವಷ್ಟು ಆಸಕ್ತಿ ವೇದಾಧ್ಯಯನ ದಲ್ಲಿರಲಿಲ್ಲ (ಆದಿ 129/2–3). ಇತರ ಬ್ರಹ್ಮಚಾರಿ ಗಳು ತಪಸ್ಸಿನ ಮೂಲಕ ವೇದಗಳ ಜ್ಞಾನ ಪ್ರಾಪ್ತಮಾಡಿಕೊಂಡಂತೆ, ಈತ ತಪಸ್ಸಿನಲ್ಲಿ ಮಗ್ನ ನಾಗಿ ಸಂಪೂರ್ಣ ಅಸ್ತ್ರ–ಶಸ್ತ್ರಗಳನ್ನು ಪಡ ಕೊಂಡನು. ಇವನು ಧನುರ್ವೇದದಲ್ಲಂತೂ ಪಾರಂಗತನಾಗಿದ್ದನು. ಇವನ ತಪಸ್ಸೂ ಅತ್ಯಂತ ಕಠಿನವಾಗಿತ್ತು. ಇದರಿಂದಾಗಿ ಈತ ದೇವರಾಜ ಇಂದ್ರನನ್ನು ಚಿಂತಾಮಗ್ನನಾಗಿ ಮಾಡಿದ್ದನು. ಆಗ ದೇವರಾಜನು ಜಾನಪದಿ ಎಂಬ ಒಬ್ಬ ದೇವಕನ್ಯೆಯನ್ನು ಇವನ ಬಳಿಗೆ ಕಳುಹಿಸಿದ್ದನು. ಶರದ್ವಂತನ ತಪಸ್ಸನ್ನು ಭಗ್ನಗೊಳಿಸುವಂತೆ ಆಕೆಗೆ ಆದೇಶ ನೀಡಿದ್ದನು. ಜಾನಪದಿ ಶರದ್ವಂತನ ರಮಣೀಯವಾದ ಆಶ್ರಮಕ್ಕೆ ಹೋಗಿ ಈತನನ್ನು ಪ್ರಲೋಭನಗೊಳಿಸತೊಡಗಿದಳು. ಆ ಅಪ್ರತಿಮ ಸುಂದರಿಯಾದ ಅಪ್ಸರೆಯನ್ನು ನೋಡಿ ಇವನ ಕಣ್ಣುಗಳು ಸಂತೋಷದಿಂದ ಅರಳಿದವು ಮತ್ತು ಕೈಯಿಂದ ಧನುಸ್ಸು ಮತ್ತು ಬಾಣಗಳು ಜಾರಿ ಭೂಮಿಯ ಮೇಲೆ ಬಿದ್ದವು. ಅವಳ ಕಡೆಗೆ ನೋಡಿದುದರಿಂದ ಇವನ ಶರೀರದಲ್ಲಿ ಕಂಪನ ವುಂಟಾಯಿತು. ಶರದ್ವಂತನು ಜ್ಞಾನದಲ್ಲಿ ತುಂಬಾ ಮೇಲ್ಮಟ್ಟದವನಾಗಿದ್ದನು. ಇವನಲ್ಲಿ ತಪಸ್ಸಿನ ಪ್ರಬಲಶಕ್ತಿ ಇತ್ತು. ಆದುದರಿಂದ ಈ ಮಹಾ ಪ್ರಾಜ್ಞಮುನಿ ಅತ್ಯಂತ ಧೈರ್ಯದಿಂದ ತನ್ನ ಅಂಕೆಯೊಳಗಿದ್ದನು. ಆದರೆ ಇವನ ಮನಸ್ಸಿನಲ್ಲಿ ಒಮ್ಮಿಂದೊಮ್ಮೆಗೆ ಬಂದ ವಿಕಾರದಿಂದಾಗಿ ಇವನ ವೀರ್ಯ ಸ್ಖಲಿಸಿತು. ಆದರೆ ಅವನಿಗೆ ಇದರ ಪರಿವೆ ಇರಲಿಲ್ಲ. ಈತ ಧನುಸ್ಸು–ಬಾಣ, ಕಪ್ಪಾದ ಮೃಗಚರ್ಮ, ಆ ಆಶ್ರಮ ಮತ್ತು ಆ ಅಪ್ಸರೆ ಎಲ್ಲವನ್ನು ಅಲ್ಲೇ ಬಿಟ್ಟು ಅಲ್ಲಿಂದ ನಡೆದೇ ಬಿಟ್ಟನು. ಅವನ ವೀರ್ಯ ಧನುರ್ಬಾಣಗಳ ಸಮುದಾಯದ ಮೇಲೆ ಬಿದ್ದು ಎರಡು ಭಾಗ ಗಳಾಗಿ ವಿಭಕ್ತವಾಯಿತು. ಅದರಿಂದ ಒಬ್ಬ ಪುತ್ರ ಮತ್ತು ಒಬ್ಬ ಕನ್ಯೆಯ ಜನನವಾಯಿತು. ಇವ ರನ್ನು ರಾಜಾ ಶಂತನು ಕೃಪೆಯಿಂದ ಸಾಕಿದನು ಮತ್ತು ಅವರಿಗೆ ಕೃಪ ಮತ್ತು ಕೃಪಿಯೆಂದು ಹೆಸರಿಟ್ಟನು. ಶರದ್ವಂತನಿಗೆ ತಪೋಬಲದಿಂದ ಈ ವಿಚಾರಗಳು ತಿಳಿದುವು. ಇವನು ಗುಟ್ಟಾಗಿ ಬಂದು ಪುತ್ರನಿಗೆ ಗೋತ್ರಾದಿಗಳ ಪರಿಚಯ ಕೊಟ್ಟು ಅವನಿಗೆ ನಾಲ್ಕು ಪ್ರಕಾರದ ಧನುರ್ವೇದ, ನಾನಾ ಪ್ರಕಾರದ ಶಾಸ್ತ್ರ ಮತ್ತು ಅವೆಲ್ಲವುಗಳ ಗೂಢರಹಸ್ಯವನ್ನು ಕೂಡ ಪೂರ್ಣರೂಪದಿಂದ ಉಪದೇಶಮಾಡಿದನು (ಆದಿ 129/4–22).

**ಶರಭ** – (1) ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟುಹೋದನು (ಆದಿ 57/9).

(2) ಐರಾವತ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾದನು (ಆದಿ 57/11).

(3) ಕಶ್ಯಪ ಮತ್ತು ದನುವಿನ ಪ್ರಖ್ಯಾತ ಮೂವತ್ತನಾಲ್ಕು ಪುತ್ರರಲ್ಲಿ ಒಬ್ಬ ದಾನವ (ಆದಿ 65/26).

(4) ಒಬ್ಬ ಋಷಿ. ಈತ ಯಮರಾಜನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 8/4).

(5) ಚೇದಿರಾಜ ಧೃಷ್ಟಕೇತುವಿನ ತಮ್ಮ. ಇವನು ಪಾಂಡವರ ಸಹಾಯಕ್ಕೆ ಬಂದಿದ್ದನು (ಉದ್ಯೋಗ 50/47). ಅಶ್ವಮೇಧದ ತುರಗ ರಕ್ಷಣೆಗೆ ಹೋಗಿದ್ದ ಅರ್ಜುನನೊಂದಿಗೆ ಇವನು ಮೊದಲು ಯುದ್ಧಮಾಡಿದನು. ಆದರೆ ಅನಂತರ ವಿಧಿವ ತ್ತಾಗಿ ಆ ಅಶ್ವದ ಪೂಜೆ ಮಾಡಿದನು (ಆಶ್ವ 83/3).

(6) ಶಕುನಿಯ ಸಹೋದರ. ಭೀಮಸೇನನಿಂದ ಇವನ ವಧೆ (ದ್ರೋಣ 157/24–26).

(7) ಪ್ರಾಚೀನ ಕಾಲದ ಒಂದು ಬಲವಂತ, ವನವಾಸಿ ಮತ್ತು ಸಮಸ್ತ ಪ್ರಾಣಿಗಳ ಹಿಂಸಕ ಪಶು. ಇದಕ್ಕೆ ಎಂಟು ಕಾಲುಗಳು ಮತ್ತು

ಮೇಲ್ಗಡೆಗೆ ಕಣ್ಣುಗಳು ಇರುತ್ತಿದ್ದವು. ಇದು ರಕ್ತಕುಡಿಯುವ ಪ್ರಾಣಿಯೆಂದು ತಿಳಿಯಲ್ಪಡುತ್ತದೆ. ಸಿಂಹಗಳೂ ಇದಕ್ಕೆ ಹೆದರುತ್ತಿದ್ದವು (ಶಾಂತಿ 117/12–13).

**ಶರಭಂಗ** – ಒಬ್ಬ ಪ್ರಾಚೀನ ಋಷಿ. ಉತ್ತರಾಖಂಡದಲ್ಲಿ ಅವನಿಗೆ ಪ್ರಖ್ಯಾತ ಆಶ್ರಮವಿತ್ತು (ವನ 90/9). ದಕ್ಷಿಣದಲ್ಲಿ ದಂಡಕಾರಣ್ಯದ ಸಮೀಪ ಕೂಡಾ ಇವನ ಒಂದು ಆಶ್ರಮವಿತ್ತು. ಶ್ರೀರಾಮನು ಇವನ ಆಶ್ರಮಕ್ಕೆ ಹೋಗಿ, ಇವನನ್ನು ಸತ್ಕರಿಸಿದ್ದನು (ವನ 277/40–41).

**ಶರಭಂಗ ಆಶ್ರಮ** – ಒಂದು ತೀರ್ಥ. ಇಲ್ಲಿಗೆ ಹೋಗುವ ಮನುಷ್ಯ ಎಂದೂ ದುರ್ಗತಿ ಪಡೆಯುವುದಿಲ್ಲ; ತನ್ನ ಕುಲವನ್ನು ಪವಿತ್ರಗೊಳಿಸುತ್ತಾನೆ (ವನ 85/42).

**ಶರಸ್ತಂಬ** – ಒಂದು ಪ್ರಾಚೀನ ತೀರ್ಥ. ಅದರ ನೀರಿನಲ್ಲಿ ಸ್ನಾನಮಾಡುವವನು. ಸ್ವರ್ಗದಲ್ಲಿ ಅಪ್ಸರೆಯರಿಂದ ಸೇವೆ ಪಡೆಯುತ್ತಾನೆ (ಅನು 25/28).

**ಶರಾವತಿ** – ಭಾರತವರ್ಷದ ಒಂದು ನದಿ. ಇಲ್ಲಿರುವ ಜನರು ಅದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/20).

**ಶರಾಸನ** – (ನೋಡಿರಿ – ಚಿತ್ರಶರಾಸನ).

**ಶರು** – ಒಬ್ಬ ದೇವಗಂಧರ್ವ. ಇವನು ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ಉಪಸ್ಥಿತನಾಗಿದ್ದನು (ಆದಿ 122/58).

**ಶರ್ಮಕ** – ಪೂರ್ವೋತ್ತರ ಭಾರತದ ಒಂದು ಜಾನಪದ. ಇದು 'ವರ್ಮಕ' ಪ್ರದೇಶದ ಸಮೀಪದಲ್ಲಿತ್ತು. ಭೀಮಸೇನನು ದಿಗ್ವಿಜಯ ಕಾಲದಲ್ಲಿ ಇಲ್ಲಿರುವ ಆಡಳಿತಗಾರರಿಗೆ ತಿಳುವಳಿಕೆ ನೀಡಿ ಗೆದ್ದುಕೊಂಡಿದ್ದನು (ಸಭಾ 30/13).

**ಶರ್ಮಿಷ್ಠಾ** – ದಾನವರಾಜ ವೃಷಪರ್ವಾನ ಪುತ್ರಿ. ಈಕೆ ತಿಳುವಳಿಕೆ ಇಲ್ಲದೆ ಸರೋವರದ ತಟದಲ್ಲಿದ್ದ ದೇವಯಾನಿಯ ವಸ್ತ್ರವನ್ನು ಉಟ್ಟಿದ್ದಳು (ಆದಿ 78/6). ದೇವಯಾನಿ ಈಕೆಯನ್ನು ನಿಂದಿಸಿದುದು (ಆದಿ 78/8). ಇವಳಿಂದ ದೇವಯಾನಿಯ ತಿರಸ್ಕಾರ. ಆಕೆ ಬಾವಿಗೆ ಬೀಳಿಸಲ್ಪಟ್ಟದ್ದು (ಆದಿ 78/9–13). ತಂದೆಯ ಆಜ್ಞೆ ಪ್ರಕಾರ, ತನ್ನ ಜಾತಿಯ, ಸಹೋದರರ ರಕ್ಷಣೆಗಾಗಿ, ಈಕೆ ತನ್ನ ಒಂದು ಸಾವಿರ ದಾಸಿಯರೊಂದಿಗೆ, ಅಜೀವನ ಪರ್ಯಂತ, ದೇವಯಾನಿಯ ದಾಸಿಯಾಗಿರಲು ಪ್ರತಿಜ್ಞೆ ಮಾಡಿದುದು (ಆದಿ 80/17–22). ಇವಳಲ್ಲಿ ದೇವಯಾನಿಯ ಕೊಂಕುಮಾತು ಮತ್ತು ಈಕೆಯಿಂದ ಆಕೆಗೆ ಸರಿಯಾದ ಉತ್ತರ (ಆದಿ 80/23–24). ಒಂದು ಸಾವಿರ ದಾಸಿಯರೊಂದಿಗೆ ಶರ್ಮಿಷ್ಠೆಯು ದೇವಯಾನಿಯ ಸೇವೆಗೆ ಉಪಸ್ಥಿತಳಾಗಿ, ಅವಳೊಂದಿಗೆ ವನವಿಹಾರಕ್ಕೆ ಹೋದುದು ಮತ್ತು ಅಲ್ಲಿ ಆಮೋದ ಪ್ರಮೋದದಲ್ಲಿ ಮಗ್ನರಾದುದು (ಆದಿ 81/2–4). ರಾಜಾ ಯಯಾತಿಯು ಅಲ್ಲಿಗೆ ನೀರು ಕುಡಿಯುವ ಇಚ್ಛೆಯಿಂದ ಬಂದುದು ಮತ್ತು ಶರ್ಮಿಷ್ಠೆಯಿಂದ ಸೇವಿಸಲ್ಪಡುತ್ತಿದ್ದ ದೇವಯಾನಿಯೊಡನೆ ಅವರಿಬ್ಬರ ಪರಿಚಯ ಕೇಳಿದುದು. ದೇವಯಾನಿಯು ದಾನವರಾಜ ವೃಷಪರ್ವನ ಪುತ್ರಿಯಾದ ಶರ್ಮಿಷ್ಠೆಯನ್ನು ತನ್ನ ದಾಸಿಯೆಂದು ಹೇಳಿದುದು (ಆದಿ 81/5–10). ಶುಕ್ರಾಚಾರ್ಯನು ತನ್ನ ಮಗಳನ್ನು ಯಯಾತಿಗೆ ಸಮರ್ಪಿಸುವಾಗ ಕುಮಾರಿ ಶರ್ಮಿಷ್ಠೆಯನ್ನು ಸಮರ್ಪಿಸಿದುದು. ಆದರೆ ಆಕೆಯನ್ನು ತನ್ನ ಶಯ್ಯೆಗೆ ಕರೆಯದಂತೆ ಅಡ್ಡಿ ಹೇಳಿದುದು (ಆದಿ 81/34–35). ಒಂದು ದಿನ ತಾನು ರಜಸ್ವಲಾವಸ್ಥೆಯಲ್ಲಿರುವುದನ್ನು ಕಂಡು ಶರ್ಮಿಷ್ಠೆ ಚಿಂತಾಮಗ್ನಳಾದಳು. ಸ್ನಾನಮಾಡಿ, ಶುದ್ಧಳಾಗಿ, ಸಮಸ್ತ ಆಭರಣಗಳಿಂದ ವಿಭೂಷಿತಳಾಗಿರುವ ಶರ್ಮಿಷ್ಠೆ, ಸುಂದರ ಪುಷ್ಪಗುಚ್ಛಗಳಿಂದ ತುಂಬಿದ ಅಶೋಕೆಯ ಗೆಲ್ಲನ್ನಾಶ್ರಯಿಸಿ ನಿಂತಿದ್ದಳು. ಅವಳು ಕನ್ನಡಿಯಲ್ಲಿ ತನ್ನ ಮುಖ ನೋಡಿದಳು; ಈಕೆಗೆ ಪತಿದರ್ಶನದ ಆಸೆ ಜಾಗ್ರತವಾಯಿತು. ನೀನು ನನಗೂ ಪ್ರಿಯತಮನ ದರ್ಶನ ಮಾಡಿಸಿ, ನಿನ್ನಂತಯೇ ನನ್ನನ್ನು (ಶೋಕರಹಿತ) ಅಶೋಕಳನ್ನಾಗಿ ಮಾಡೆಂದು ಈಕೆ ಅಶೋಕವೃಕ್ಷವನ್ನು ಪ್ರಾರ್ಥಿಸಿದಳು. ಅನಂತರ ಇವಳು ರಾಜಾ ಯಯಾತಿಯನ್ನೇ ಪತಿಯಾಗಿ ಮಾಡಿಕೊಳ್ಳುವ ನಿಶ್ಚಯಮಾಡಿದಳು. ರಾಜನನ್ನು ಏಕಾಂತದಲ್ಲಿ ಕಂಡು, ನಮ್ರತಾಪೂರ್ವಕವಾಗಿ ಈಕೆ ಅವನ ಮುಂದೆ ತನ್ನ ಮನೋಭಾವ ಪ್ರಕಟಿಸಿದಳು. ಈ ವಿಷಯದಲ್ಲಿ, ಅವರಿಬ್ಬರೊಳಗೆ ಸ್ವಲ್ಪ ಹೊತ್ತಿನವರೆಗೆ ಸಂವಾದ ನಡೆಯಿತು. ಕೊನೆಗೆ ರಾಜನು

ಈಕೆಯೊಂದಿಗೆ ಸಮಾಗಮ ಮಾಡಿದನು. ಶರ್ಮಿಷ್ಠೆಗೆ ಗರ್ಭ ನಿಂತಿತು ಮತ್ತು ಸಕಾಲದಲ್ಲಿ ಈಕೆ ದೇವೋಪಮನಾದ ಒಬ್ಬ ಪುತ್ರನಿಗೆ ಜನ್ಮ ನೀಡಿದಳು (ಆದಿ 82/5–27). ಈಕೆಗೆ ಪುತ್ರ ನಾದ ಸುದ್ದಿಕೇಳಿ, ದೇವಯಾನಿಯು ಈಕೆ ಯೊಡನೆ ಆ ಕುರಿತು ವಿಚಾರಣೆ ಮಾಡಿದುದು; ಶರ್ಮಿಷ್ಠೆಯು ತನಗೆ ಒಬ್ಬ ಶ್ರೇಷ್ಠ ಋಷಿಯಿಂದ ಸಂತಾನ ಪ್ರಾಪ್ತವಾಗಿದೆಯೆಂದು ಹೇಳಿ ಆಕೆಯನ್ನು ಸಂತುಷ್ಟಗೊಳಿಸಿದುದು (ಆದಿ 83/1–8). ಇವಳ ಗರ್ಭದಿಂದ ಕ್ರಮವಾಗಿ ದ್ರುಹ್ಯು, ಅನು ಮತ್ತು ಪೂರು ಎಂಬ ಮೂವರು ಕುಮಾರರ ಜನನ (ಆದಿ 83/10; ಆದಿ 75/35). ಶರ್ಮಿಷ್ಠೆಯ ಪುತ್ರರಿಂದ ಅವರ ತಂದೆ ತಾಯಿಯ ಯಥಾರ್ಥ ಪರಿಚಯ ಪಡೆದು, ದೇವಯಾನಿ ಶರ್ಮಿಷ್ಠೆ ಯನ್ನು ನಿಂದಿಸಿದುದು ಮತ್ತು ಶರ್ಮಿಷ್ಠೆ ಆಕೆಗೆ ಮುಖಕ್ಕೆ ಹೊಡೆದಂತೆ ಉತ್ತರವನ್ನಿತ್ತದ್ದು (ಆದಿ 83/18–22).

**ಶರ್ಮೀ** – ಯಾಮುನ ಪರ್ವತದ ಬುಡದಲ್ಲಿ ನೆಲಸಿದ 'ಪರ್ಣಶಾಲಾ' ಎಂಬ ಹೆಸರಿನ ಹಳ್ಳಿ ಯಲ್ಲಿರುವ, ಅಗಸ್ತ್ಯಗೋತ್ರದ, ಶಮ ಪರಾಯಣ ನಾದ ಒಬ್ಬ ಅಧ್ಯಾಪಕ ಬ್ರಾಹ್ಮಣ. ಇವನನ್ನು ಕರೆಸಲು ಯಮರಾಜನು ದೂತರನ್ನು ಕಳುಹಿಸಿ ದ್ದನು (ಅನು 68/3–7). ಇದೇ ಹೆಸರು ಮತ್ತು ಗುಣವುಳ್ಳ ಇನ್ನೊಬ್ಬ ಬ್ರಾಹ್ಮಣನೂ ಆ ಹಳ್ಳಿ ಯಲ್ಲಿದ್ದನು; ಅವನನ್ನು ತರಲು ಯಮರಾಜನು ನಿಷೇಧಿಸಿದ್ದನು (ಅನು 68/7–8). ಯಮ ದೂತರು ಅದೇ ಬ್ರಾಹ್ಮಣನನ್ನು ಕೊಂಡು ಹೋದರು; ಆತ ಯಮರಾಜನಿಂದ ನಿಷೇಧಿಸ ಲ್ಪಟ್ಟವನಾಗಿದ್ದನು. ಯಮರಾಜನು ಅವನ ಪೂಜೆ ಮಾಡಿ ಮನೆಗೆ ಹೋಗಲು ಆಜ್ಞೆಯನ್ನಿತ್ತನು. ಮಾತ್ರವಲ್ಲದೆ ಅವನು ಕೇಳಿದಾಗ, ಮಹಾಪುಣ್ಯ ದಾಯಕ ಕರ್ಮದ ಸಂದರ್ಭದಲ್ಲಿ ತಿಲದಾನ, ಅನ್ನದಾನ ಮತ್ತು ಜಲದಾನದ ವಿಶೇಷ ಮಹಿಮೆ ಯನ್ನು ಹೇಳಿದನು (ಅನು 68/10–22). ಯಮ ದೂತರು ಮೊದಲು ತರಲ್ಪಟ್ಟವನನ್ನು ಅವನ ಮನೆಗೆ ತಲುಪಿಸಿದರು ಮತ್ತು ಇನ್ನೊಬ್ಬನನ್ನು ಕರಕೊಂಡು ಬಂದು, ಯಮರಾಜನಿಗೆ ಈ ಕುರಿತಾಗಿ ಸೂಚನೆಯನ್ನಿತ್ತರು. ಯಮರಾಜನು ಅವನ ಪೂಜೆಯನ್ನು ಮಾಡಿ ಅವನನ್ನು ಬೀಳ್ಕೊಂಡನು ಮತ್ತು ಅವನಿಗಾಗಿಯೂ ಹಿಂದೆ ಹೇಳಿದ ಎಲ್ಲಾ ಉಪದೇಶವನ್ನಿತ್ತನು. ಅಲ್ಲಿಂದ ಹಿಂತಿರುಗಿದ ಮೇಲೆ ಶರ್ಮಿಯು ಯಮರಾಜನು ಹೇಳಿದ ಪ್ರಕಾರ ಎಲ್ಲಾ ಕಾರ್ಯಗಳನ್ನು ಮಾಡಿ ದನು (ಅನು 68/24–26).

**ಶರ್ಯಾತಿ** – ಒಬ್ಬ ಪ್ರಾಚೀನ ರಾಜ (ಆದಿ 1/226). ಇವನು ವೈವಸ್ವತ ಮನುವಿನ ಪುತ್ರನಾಗಿ ದ್ದನು (ಆದಿ 75/16; ಅನು 30/6). ರಾಜಾ ಶರ್ಯಾತಿ ಯಮಸಭೆಯಲ್ಲಿರುತ್ತಾ ವೈವಸ್ವತ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/14). ಇವನಿಂದ ಚ್ಯವನಮಹರ್ಷಿಗೆ ತನ್ನ ಕನ್ಯೆ ಯಾದ ಸುಕನ್ಯೆಯ ದಾನ (ವನ 122/26). ಮಹರ್ಷಿ ಚ್ಯವನನ ಮೂಲಕ ಇವನು ಯಜ್ಞ ವನ್ನು ಸಾಂಗಗೊಳಿಸಿದುದು; ಮತ್ತು ಅದರಲ್ಲಿ ಅಶ್ವಿನೀಕುಮಾರರ ಸೋಮಪಾನ (ವನ 124, 125 ಅಧ್ಯಾಯ). ಇವನ ವಂಶದಲ್ಲಿ ಇಬ್ಬರು ಪ್ರಖ್ಯಾತ ರಾಜರಾಗಿದ್ದರು. ಹೈಹಯ ಮತ್ತು ತಾಲಜಂಘ (ಅನು 30/6–7).

**ಶರ್ಯಾತಿವನ** – ಒಂದು ಪವಿತ್ರ ಕಾಡು ಪ್ರದೇಶ. ಇದು ಕನಸಿನಲ್ಲಿ ಶ್ರೀಕೃಷ್ಣನೊಂದಿಗೆ ಶಿವನ ಬಳಿಗೆ ಹೋಗುತ್ತಿದ್ದ ಅರ್ಜುನನಿಗೆ ಮಾರ್ಗದಲ್ಲಿ ಸಿಕ್ಕಿತ್ತು (ದ್ರೋಣ 80/32).

**ಶಲ** – (1) ವಾಸುಕಿವಂಶದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಜ್ಞ ದಲ್ಲಿ ದಗ್ಧನಾದನು (ಆದಿ 57/5).

(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 116/4). ಇವನು ಭೀಮಸೇನನ ಮೇಲೆ ಆಕ್ರಮಣ ಮಾಡಿದುದು (ದ್ರೋಣ 127/34; ಕರ್ಣ 51/8–9). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 84/3–6).

(3) ಕುರುವಂಶದ ರಾಜಾ ಸೋಮದತ್ತನ ಮಗ ಮತ್ತು ಭೂರಿಶ್ರವನ ಸಹೋದರ. ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/15). ಈತ ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಹೋಗಿದ್ದನು (ಸಭಾ 34/8). ದುರ್ಯೋಧನನ ಸೇನೆಯಲ್ಲಿ ಒಬ್ಬ ವಿಶಿಷ್ಟ ಯೋಧನಾಗಿದ್ದನು (ಉದ್ಯೋಗ 55/63). ಭೀಷ್ಮನಿಂದ ನಿರ್ಮಿಸಲ್ಪಟ್ಟ ಮಹಾವ್ಯೂಹದ ಎಡ

ಭಾಗದಲ್ಲಿ ನಿಂತು, ಇವನು ಪೂರ್ಣಸೇನೆಯ ರಕ್ಷಣೆ ಮಾಡುತ್ತಾ ಹೋಗುತ್ತಿದ್ದನು (ಭೀಷ್ಮ 51/57). ಇವನು ಅಭಿಮನ್ಯುವಿನ ಮೇಲೆ ಆಕ್ರಮಣ ಮಾಡಿದ್ದನು (ದ್ರೋಣ 37/5-24). ಇವನ ಧ್ವಜದ ವರ್ಣನೆ (ದ್ರೋಣ 105/24-25). ದ್ರೌಪದೀಕುಮಾರರೊಂದಿಗೆ ಇವನ ಯುದ್ಧ (ದ್ರೋಣ 106/15). ಶ್ರುತಕರ್ಮನಿಂದ ಇವನ ವಧೆ (ದ್ರೋಣ 108/10). ವ್ಯಾಸರು ಆವಾಹನೆ ಮಾಡಿದಾಗ, ಇತರ ಕೌರವವೀರರೊಂದಿಗೆ, ಈತನೂ ಗಂಗೆಯಲ್ಲಿ ಪ್ರಕಟಗೊಂಡಿದ್ದನು (ಆಶ್ರಮ 32/10). ಮರಣಾ ನಂತರ ವಿಶ್ವೇ ದೇವರಲ್ಲಿ ಸೇರಿಹೋದನು (ಸ್ವರ್ಗ 5/16-18).

(4) ಇಕ್ಷ್ವಾಕುವಂಶದ ರಾಜಾ ಪರೀಕ್ಷಿತನ ಪುತ್ರ. ಇವನ ತಾಯಿ ಮಂಡೂಕ ರಾಜನಕನ್ಯೆ ಸುಶೋಭನಾ ಆಗಿದ್ದಳು. ಇವನ ಇನ್ನಿಬ್ಬರು ಸಹೋದರರಿದ್ದರು. ಅವರ ಹೆಸರುಗಳು ದಲ ಮತ್ತು ಬಲ. ತಂದೆಯಿಂದ ಇವನಿಗೆ ರಾಜ್ಯಾಭಿಷೇಕ (ವನ 192/38). ಈತ ಮಹರ್ಷಿ ವಾಮದೇವನೊಡನೆ ವಾಮ್ಯೋಹ ಅಶ್ವಗಳನ್ನು ಯಾಚಿಸಿದುದು ಮತ್ತು ಪುನಃ ಹಿಂತಿರುಗಿಸುವ ಶರ್ತದಲ್ಲಿ ಇವನಿಗೆ ಆ ಅಶ್ವಗಳು ಪ್ರಾಪ್ತವಾದುದು (ವನ 192/43). ಕುದುರೆಗಳನ್ನು ಹಿಂತಿರುಗಿಸುವ ವಿಷಯದಲ್ಲಿ ಮಹರ್ಷಿ ವಾಮದೇವನೊಡನೆ ಈತನ ಸಂವಾದ (ವನ 192/48-56). ಅಶ್ವಗಳನ್ನು ಹಿಂತಿರುಗಿಸದಾಗ ಮಹರ್ಷಿ ವಾಮದೇವನಿಂದ ಸೃಷ್ಟಿಸಲ್ಪಟ್ಟ ರಾಕ್ಷಸರ ಪ್ರಹಾರದಿಂದ ಇವನ ವಧೆ (ವನ 192/57-59).

**ಶಲಕರ** - ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಸುಟ್ಟು ಹೋದನು (ಆದಿ 57/9).

**ಶಲಭ** - (1) ದನುವಿನ ಪ್ರಖ್ಯಾತ ಮೂವತ್ತ ನಾಲ್ಕು ಪುತ್ರರಲ್ಲಿ ಒಬ್ಬ (ಆದಿ 65/26). ಇವನು ಬಾಹ್ಲೀಕರಾಜ ಪ್ರಹ್ಲಾದನ ರೂಪದಲ್ಲಿ ಭೂಮಿಯಲ್ಲಿ ಹುಟ್ಟಿದ್ದನು (ಆದಿ 67/30-31).

(2) ಪಾಂಡವಪಕ್ಷದ ಒಬ್ಬ ಮಹಾರಥಿ ಯೋಧ. ಇವನು ಕರ್ಣನಿಂದ ಕೊಲ್ಲಲ್ಪಟ್ಟನು (ಕರ್ಣ 56/49-50).

**ಶಲಭೀ** - ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/26).

**ಶಲ್ಯ** - ಬಾಹ್ಲೀಕ (ಮತ್ತು ಮದ್ರ). ದೇಶದ ಶ್ರೇಷ್ಠ ರಾಜ. ಈ ರೂಪದಲ್ಲಿ ಹಿರಣ್ಯಕಶಿಪುವಿನ ಪುತ್ರ ಮತ್ತು ಪ್ರಹ್ಲಾದನ ತಮ್ಮ ಸಂಹ್ಲಾದನೇ ಈ ಭೂಮಿಯಲ್ಲಿ ಹುಟ್ಟಿದ್ದನು (ಆದಿ 67/6). ಇವನಿಂದ ಭೀಷ್ಮನಿಗೆ ಸತ್ಕಾರ ಮತ್ತು ಪಾಂಡುವಿಗಾಗಿ ಆತನಿಗೆ ಮಾದ್ರಿಯ ಸಮರ್ಪಣೆ (ಆದಿ 112/3-16). ಮದ್ರರಾಜ ಶಲ್ಯ ತನ್ನ ಪುತ್ರರಾದ ವೀರ ರುಕ್ಮಾಂಗದ ಮತ್ತು ರುಕ್ಮರಥನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/13-14). ದ್ರೌಪದೀ ಸ್ವಯಂವರದಲ್ಲಿ ಮತ್ಸ್ಯಭೇದನಕ್ಕಾಗಿ ಧನುಸ್ಸನ್ನು ಏರಿಸಲಸಾಧ್ಯನಾದನು (ಆದಿ 186/28). ದ್ರೌಪದೀ ಸ್ವಯಂವರದಲ್ಲಿ ಭೀಮಸೇನನಿಂದ ಇವನ ಪರಾಜಯ (ಆದಿ 189/23-29). ನಕುಲನ ಪಶ್ಚಿಮ ದಿಗ್ವಿಜಯಕಾಲದಲ್ಲಿ, ಮಾವನಾದ ಶಲ್ಯನನ್ನು ಪ್ರೀತಿಯಿಂದಲೇ ವಶಪಡಿಸಿಕೊಂಡನು. ನಕುಲನು ರಾಜಧಾನಿಗೆ ಬಂದಾಗ ಈತ ವಿಶೇಷವಾಗಿ ಸತ್ಕರಿಸಿದನು (ಸಭಾ 32/14-16). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಆಗಮಿಸಿದ್ದನು (ಸಭಾ 34/7). ಶಿಶುಪಾಲನು ಇವನನ್ನು ಶ್ರೀಕೃಷ್ಣನಿಂದ ಶ್ರೇಷ್ಠನೆಂದು ಹೇಳಿದನು (ಸಭಾ 37/14). ಅಭಿಷೇಕ ಕಾಲದಲ್ಲಿ ಇವನು ಯುಧಿಷ್ಠಿರನಿಗೆ ಉತ್ತಮ ಹಿಡಿಕೆಯುಳ್ಳ ಖಡ್ಗವನ್ನು ಕೊಟ್ಟನು ಮತ್ತು ನೆಲುವಿನಲ್ಲಿಟ್ಟ ಸುವರ್ಣಭೂಷಿತ ಕಲಶವನ್ನು ಕೊಟ್ಟನು (ಸಭಾ 53/9). ದ್ಯೂತಕ್ಕಾಗಿ ಹಸ್ತಿನಾಪುರಕ್ಕೆ ಬಂದಾಗ, ರಾಜಾ ಯುಧಿಷ್ಠಿರನು ಅಲ್ಲಿಗೆ ಈಗಾಗಲೇ ಆಗಮಿಸಿದ್ದ ರಾಜಾ ಶಲ್ಯನನ್ನು ಭೇಟಿಮಾಡಿದ್ದನು (ಸಭಾ 58/24-25). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲಾಗಿತ್ತು (ಉದ್ಯೋಗ 4/8). ಹಾದಿಯಲ್ಲಿ ದುರ್ಯೋಧನನ ಸತ್ಕಾರದಿಂದ ಪ್ರಸನ್ನನಾಗಿ ಆತನ ಪಕ್ಷದಲ್ಲಿರುವೆನೆಂದು, ಇವನು ಅವನಿಗೆ ವರವನ್ನಿತ್ತುದ್ದು (ಉದ್ಯೋಗ 8/18). ಯುಧಿಷ್ಠಿರನ ಬಳಿಗೆಹೋದುದು. ಪಾಂಡವರನ್ನು ಭೇಟಿಯಾದುದು, ಅಲ್ಲಿ ಸತ್ಕಾರ ಸ್ವೀಕರಿಸಿ ಯುಧಿಷ್ಠಿರನೊಡನೆ ಮಾತಾಡಿದುದು ಮತ್ತು ಕರ್ಣನ ಉತ್ಸಾಹ ನಷ್ಟ ಮಾಡುವೆನೆಂದು ಅವರಿಗೆ ವಚನವನ್ನಿತ್ತದ್ದು (ಉದ್ಯೋಗ 8/24-

48). ಇವನು ಯುಧಿಷ್ಠಿರನಿಗೆ ಇಂದ್ರವಿಜಯ ವೆಂಬ ಉಪಾಖ್ಯಾನ ಹೇಳಿದುದು (ಉದ್ಯೋಗ ಅಧ್ಯಾಯ 9ರಿಂದ 18/20ರ ತನಕ). ಕುಂತೀ ಕುಮಾರರನ್ನು ಬೀಳ್ಕೊಂಡು ದುರ್ಯೋಧನನ ಬಳಿಗೆ ಹಿಂತಿರುಗಿದುದು (ಉದ್ಯೋಗ 18/25). ಇವನು ಒಂದು ಅಕ್ಷೌಹಿಣೀ ಸೇನಾಸಮೇತನಾಗಿ ದುರ್ಯೋಧನನ ಬಳಿಗೆ ಬಂದುದು (ಉದ್ಯೋಗ 19/16–17). ದುರ್ಯೋಧನನು ಧೃತರಾಷ್ಟ್ರನ ಸಮಕ್ಷಮದಲ್ಲಿ ಇವನ ಪರಾಕ್ರಮವನ್ನು ವರ್ಣಿಸಿ ದುದು (ಉದ್ಯೋಗ 55/43). ದುರ್ಯೋಧನನು ಇವನನ್ನು ಒಂದು ಅಕ್ಷೌಹಿಣೀ ಸೇನೆಗೆ ನಾಯಕ ನಾಗಿ ನೇಮಿಸಿ, ವಿಧಿವತ್ತಾಗಿ ಇವನಿಗೆ ಅಭಿಷೇಕ ಮಾಡಿದುದು (ಉದ್ಯೋಗ 155/32–33). ಯುಧಿಷ್ಠಿರನಿಗೆ ಯುದ್ಧಮಾಡಲು ಆಜ್ಞೆಯನ್ನಿತ್ತು, ಆತನಿಗೆ ಶುಭವನ್ನು ಹಾರೈಸಿದುದು (ಭೀಷ್ಮ 43/79–87). ಪ್ರಥಮದಿನದ ಸಂಗ್ರಾಮದಲ್ಲಿ ಯುಧಿಷ್ಠಿರನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 45/28–30). ಇವನಿಂದ ವಿರಾಟಕುಮಾರ ಉತ್ತರನ ವಧೆ (ಭೀಷ್ಮ 47/35–39). ಇವನಿಂದ ವಿರಾಟಕುಮಾರ ಶಂಖನ ಪರಾಜಯ (ಭೀಷ್ಮ 49/39). ಧೃಷ್ಟದ್ಯುಮ್ನನೊಂದಿಗೆ ಇವನ ಯುದ್ಧ (ಭೀಷ್ಮ 62/8–14). ಭೀಮಸೇನನಿಂದ ಇವನ ಪರಾಜಯ (ಭೀಷ್ಮ 64/27). ಯುಧಿಷ್ಠಿರ ನೊಂದಿಗೆ ಇವನ ಯುದ್ಧ (ಭೀಷ್ಮ 71/20–21)ರ ಇವನ ಮೇಲೆ ನಕುಲ ಮತ್ತು ಸಹ ದೇವರ ಆಕ್ರಮಣ (ಭೀಷ್ಮ 81/26). ಸಹದೇವ ನಿಂದ ಈತನ ಪರಾಜಯ (ಭೀಷ್ಮ 83/51–53). ಶಿಖಂಡಿಯ ಮೇಲೆ ಇವನ ಆಕ್ರಮಣ (ಭೀಷ್ಮ 85/27). ಪಾಂಡವರೊಂದಿಗೆ ನಡೆದ ಯುದ್ಧ ದಲ್ಲಿ ಈತ ಯುಧಿಷ್ಠಿರನನ್ನು ಗಾಯಗೊಳಿಸಿ ದುದು (ಭೀಷ್ಮ 105/30–33). ಭೀಮಸೇನ ಮತ್ತು ಅರ್ಜುನನೊಂದಿಗೆ ಯುದ್ಧ (ಭೀಷ್ಮ 113; 114 ಅಧ್ಯಾಯ). ಯುಧಿಷ್ಠಿರನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 116/40–41). ನಕುಲನೊಂದಿಗೆ ಯುದ್ಧ (ದ್ರೋಣ 14/31–32). ಅಭಿಮನ್ಯು ವಿನೊಂದಿಗೆ ಯುದ್ಧ (ದ್ರೋಣ 14/78–82). ಭೀಮಸೇನನೊಂದಿಗೆ ಗದಾಯುದ್ಧ ಮತ್ತು ಈತನ ಪರಾಜಯ (ದ್ರೋಣ 15/8–32). ಯುಧಿಷ್ಠಿರನೊಂದಿಗೆ ಯುದ್ಧ (ದ್ರೋಣ 25/15–17). ಅಭಿಮನ್ಯುವಿನೊಂದಿಗೆ ಯುದ್ಧ ಮತ್ತು ಆತನ ಪ್ರಹಾರದಿಂದ ಮೂರ್ಛಿತನಾದುದು (ದ್ರೋಣ 37/24–34; ದ್ರೋಣ 38/3). ಅಭಿ ಮನ್ಯುವಿನಿಂದ ಪರಾಜಿತನಾದುದು (ದ್ರೋಣ 48/14–15). ಯುಧಿಷ್ಠಿರನೊಂದಿಗೆ ಯುದ್ಧ (ದ್ರೋಣ 96/29–30). ಅರ್ಜುನನಿಗೆ ಬಾಣ ಹೊಡೆದುದು (ದ್ರೋಣ 104/27–28). ಇವನ ಧ್ವಜದ ವರ್ಣನೆ (ದ್ರೋಣ 105/18–20). ಜಯದ್ರಥನ ಸಂರಕ್ಷಕರಲ್ಲಿ ಇವನೂ ಒಬ್ಬನಾಗಿ ದ್ದನು. ಅರ್ಜುನನೊಂದಿಗೆ ಇವನ ಯುದ್ಧ (ದ್ರೋಣ 145/9; 54). ಅರ್ಜುನನು ಇವನಿಗೆ ಬಾಣ ಹೊಡೆದುದು (ದ್ರೋಣ 146/54). ಇವನಿಂದ ವಿರಾಟನ ಸಹೋದರನಾದ ಶತಾ ನೀಕನ ವಧೆ ಮತ್ತು ವಿರಾಟನ ಪರಾಜಯ (ದ್ರೋಣ 167/30–34). ದ್ರೋಣಾಚಾರ್ಯನು ವಧಿಸಲ್ಪಟ್ಟಾಗ ಇವನು ಯುದ್ಧ ಸ್ಥಳದಿಂದ ಓಡಿದುದು (ದ್ರೋಣ 193/11). ಇವನ ಮೇಲೆ ಶ್ರುತಕೀರ್ತಿಯ ಆಕ್ರಮಣ (ಕರ್ಣ 13/10). ಕರ್ಣನು ದುರ್ಯೋಧನನೊಡನೆ ಈತನ ಬಲ ಪರಾಕ್ರಮ ಮತ್ತು ಅಶ್ವವಿಜ್ಞಾನದ ಪ್ರಶಂಸೆ ಮಾಡಿ, ಇವನನ್ನು ತನ್ನ ಸಾರಥಿಯಾಗಿ ಮಾಡುವಂತೆ ಪ್ರಸ್ತಾವಿಸಿದುದು (ಕರ್ಣ 31/58–69). ಕರ್ಣನ ಸಾರಥ್ಯ ಮಾಡುವಂತೆ ದುರ್ಯೋಧನನು ಹೇಳಿ ದಾಗ, ಈತ ಕುಪಿತನಾಗಿ, ಅವನಿಗೆ ಕ್ರೋಧ ಪೂರ್ಣ ಉತ್ತರ ನೀಡಿದುದು ಮತ್ತು ಸಿಟ್ಟಾಗಿ ಹೊರಟುಹೋದುದು; ಅನಂತರ ಶ್ರೀಕೃಷ್ಣನಿಗೆ ಸಮಾನನೆಂಬ ತನ್ನ ವರ್ಣನೆ ಕೇಳಿ, ಅವನ ಸೂಚನೆಯನ್ನು ಸ್ವೀಕರಿಸಿದುದು (ಕರ್ಣ 32 ಅಧ್ಯಾಯ). ದುರ್ಯೋಧನನು ಈತನಿಗೆ ತ್ರಿಪುರ ವಿಜಯದ ಕಥೆ ಹೇಳಿದುದು (ಕರ್ಣ 33;34 ಅಧ್ಯಾಯ). ದುರ್ಯೋಧನನೊಂದಿಗೆ ಇವನ ಮಾತುಕತೆ; ಕರ್ಣನ ಸಾರಥಿಯಾಗಲು ತಾನು ಒಪ್ಪಿಗೆ ನೀಡಿದುದು (ಕರ್ಣ 35 ಅಧ್ಯಾಯ). ಕರ್ಣನಲ್ಲಿ ಪಾಂಡವರ ಪ್ರಶಂಸೆ ಮಾಡಿದುದು (ಕರ್ಣ 36/27–32). ಕರ್ಣನನ್ನು ನಿಂದಿಸಿ, ಅರ್ಜುನನನ್ನು ಹೊಗಳಿದುದು (ಕರ್ಣ 37/33–40). ಕರ್ಣನ ಕುರಿತಾಗಿ ಆಕ್ಷೇಪಪೂರ್ಣ ಮಾತು (ಕರ್ಣ 39 ಅಧ್ಯಾಯ). ಕರ್ಣನು ಶಲ್ಯನನ್ನು ನಿಂದಿಸಿದುದು ಮತ್ತು ಕೊಲ್ಲುವೆ

ನೆಂದು ಬೆದರಿಕೆ ಹಾಕಿದುದು (ಕರ್ಣ 40 ಅಧ್ಯಾಯ). ಕರ್ಣನನ್ನು ಕಾಗೆ ಮತ್ತು ಹಂಸಗಳ ಉಪಾಖ್ಯಾನ ಹೇಳಿ ನಿಂದಿಸಿದುದು (ಕರ್ಣ 41 ಅಧ್ಯಾಯ). ಈತ ಕರ್ಣನಿಗೆ ಉತ್ತರ ನೀಡಿದುದು (ಕರ್ಣ 45/40–46). ಈತನಿಂದ ಕರ್ಣನ ಮುಂದೆ ಅರ್ಜುನನ ವರ್ಣನೆ ಮತ್ತು ಪಾಂಡವಪಕ್ಷದ ಪ್ರಮುಖ ವೀರರ ವರ್ಣನೆ (ಕರ್ಣ 46/41–86). ಭೀಮಸೇನನಿಗೆ ಅರ್ಜುನನ ಪ್ರತಿಜ್ಞೆಯನ್ನು ನೆನಪಿಸಿ, ಕರ್ಣನ ನಾಲಿಗೆ ಕತ್ತರಿಸದಂತೆ ತಡೆದುದು (ಕರ್ಣ 50/47). ನಕುಲ, ಸಹದೇವ ಮತ್ತು ಯುಧಿಷ್ಠಿರರನ್ನು ಕರ್ಣನು ವಧಿಸದಂತೆ ತಡೆದುದು (ಕರ್ಣ 63/21–29). ಕರ್ಣನೊಡನೆ ಅರ್ಜುನನ ಪರಾಕ್ರಮದ ವರ್ಣನೆ ಮಾಡಿ, ಅವನನ್ನು ವಧಿಸಲು ಹೇಳಿದುದು (ಕರ್ಣ 79/19–48). ಭೀಮಸೇನನ ಭಯದಿಂದ ಹೆದರಿದ ಕರ್ಣನನ್ನು ಸಮಾಧಾನಪಡಿಸಿದುದು (ಕರ್ಣ 84/8–17). ಕರ್ಣನ ಮಾತಿಗೆ ಉತ್ತರ ನೀಡಿದುದು (ಕರ್ಣ 87/103). ಕರ್ಣ ವಧೆಯಿಂದ ದುಃಖಿತನಾದ ದುರ್ಯೋಧನನಿಗೆ ಸಮಾಧಾನ ಹೇಳಿದುದು (ಕರ್ಣ 92/10–14). ದುರ್ಯೋಧನನಿಗೆ ರಣಭೂಮಿಯ ಸಂಕ್ಷಿಪ್ತ ವರ್ಣನೆ ಮಾಡಿದುದು (ಕರ್ಣ 94/2–23). ದುರ್ಯೋಧನನ ಪ್ರಾರ್ಥನೆ ಪ್ರಕಾರ ಸೇನಾಪತಿ ಪದವಿಯನ್ನು ಸ್ವೀಕರಿಸಿದುದು (ಶಲ್ಯ 6/28). ಇವನ ವೀರೋಚಿತ ಉದ್ಗಾರಗಳು (ಶಲ್ಯ 7/13–20). ಇವನ ಅದ್ಭುತ ಪರಾಕ್ರಮ (ಶಲ್ಯ 11/20–32). ಭೀಮಸೇನನಿಂದ ಈತನ ಪರಾಜಯ (ಶಲ್ಯ 11/60–62). ಭೀಮಸೇನನೊಂದಿಗೆ ಗದಾಯುದ್ಧ (ಶಲ್ಯ 12/12–27). ಯುಧಿಷ್ಠಿರನೊಂದಿಗೆ ಯುದ್ಧ (ಶಲ್ಯ 12/47–63). ಇವನ ಅದ್ಭುತ ಪರಾಕ್ರಮ (ಶಲ್ಯ 13 ಅಧ್ಯಾಯ). ಪಾಂಡವವೀರರೊಂದಿಗೆ ಇವನ ಯುದ್ಧ (ಶಲ್ಯ 15/10–43). ಯುಧಿಷ್ಠಿರನಿಂದ ಇವನ ಪರಾಜಯ (ಶಲ್ಯ 16/63–66). ಯುಧಿಷ್ಠಿರನಿಂದ ಇವನ ವಧೆ (ಶಲ್ಯ 17/52). ವ್ಯಾಸರು ಆವಾಹನೆ ಮಾಡಿದಾಗ ಯುದ್ಧದಲ್ಲಿ ಸತ್ತ ಕೌರವ ಪಾಂಡವ ವೀರರೊಂದಿಗೆ ಈತನೂ ಗಂಗಾಜಲದಿಂದ ಪ್ರಕಟಗೊಂಡಿದ್ದನು (ಆಶ್ರಮ 32/10). ಮಹಾಭಾರತದಲ್ಲಿ ಬಂದಿರುವ ಶಲ್ಯನ ಹೆಸರುಗಳು – ಆರ್ತಾಯನಿ, ಬಾಹ್ಲೀಕ ಪುಂಗವ, ಮದ್ರಾಧಿಪ, ಮದ್ರಾಧಿಪತಿ, ಮದ್ರಜ, ಮದ್ರಜನಾಧಿಪ, ಮದ್ರಜನೇಶ್ವರ, ಮದ್ರಕ, ಮದ್ರಕಾಧಮ, ಮದ್ರಕಾಧಿಪ, ಮದ್ರಕೇಶ್ವರ, ಮದ್ರಪ, ಮದ್ರಪತಿ, ಮದ್ರರಾಟ್, ಮದ್ರರಾಜ, ಮದ್ರೇಶ, ಮದ್ರೇಶ್ವರ, ಸೌವೀರ ಇತ್ಯಾದಿ.

**ಶಲ್ಯಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಶಶಕ** – ಒಂದು ಜಾತಿ. ಈ ಜಾತಿಯ ರಾಜನನ್ನು ಕರ್ಣನು ದಿಗ್ವಿಜಯ ಸಮಯದಲ್ಲಿ ಸೋಲಿಸಿದ್ದನು (ವನ 254/21).

**ಶಶಬಿಂದು** – ಒಬ್ಬ ಪ್ರಾಚೀನ ರಾಜ (ಆದಿ 1/228). ಈತ ಯಮಸಭೆಯಲ್ಲಿದ್ದು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/17). ಇವನು ಚಿತ್ರರಥನ ಪುತ್ರ. ಸೃಂಜಯನನ್ನು ಸಂತೈಸುತ್ತಿದ್ದ ನಾರದನಿಂದ ಇವನ ನಡತೆ ಹಾಗೂ ದಾನಾದಿಗಳ ವರ್ಣನೆ (ದ್ರೋಣ 65 ಅಧ್ಯಾಯ). ಶ್ರೀಕೃಷ್ಣನಿಂದ ಇವನ ಪ್ರಭಾವದ ವರ್ಣನೆ (ಶಾಂತಿ 29/105–110). ಇವನಿಗೆ ಹತ್ತು ಸಾವಿರ ಹೆಂಡತಿಯರಿದ್ದರು ಮತ್ತು ಪ್ರತಿಯೊಬ್ಬಳ ಗರ್ಭದಿಂದ ಒಂದೊಂದು ಸಾವಿರ ಪುತ್ರರಾಗಿದ್ದರು. ಈ ರೀತಿ ಇವನಿಗೆ ಒಟ್ಟು ಒಂದು ಕೋಟಿ ಪುತ್ರರಿದ್ದರು (ಶಾಂತಿ 208/11–12). ಯಮನು ಇವನಿಗೆ ಶ್ರಾದ್ಧ ಕರ್ಮಗಳ ಉಪದೇಶ ಮಾಡಿದ್ದನು (ಅನು 89/1–15). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/60). ಇವನು ಸಾಯಂಪ್ರಾತಃ ಸ್ಮರಣೀಯನಾದ ರಾಜ (ಅನು 165/51).

**ಶಶಯಾನ** – ಒಂದು ದುರ್ಲಭ ತೀರ್ಥ. ಇಲ್ಲಿ ಸರಸ್ವತಿ ಜಲದಲ್ಲಿ, ಪ್ರತಿವರ್ಷ ಕಾರ್ತಿಕ ಪೂರ್ಣಿಮೆಯ ದಿನ, ಶಶದ ರೂಪದಲ್ಲಿ ಅಡಗಿರುವ ಪುಷ್ಕರದ ದರ್ಶನವಾಗುತ್ತದೆ. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯ ಚಂದ್ರನಂತೆ ಪ್ರಕಾಶಿತನಾಗುತ್ತಾನೆ. ಮತ್ತು ಸಹಸ್ರ ಗೋದಾನದ ಫಲ ಪಡೆಯುತ್ತಾನೆ (ವನ 82/114–116).

**ಶಶಲೋಮ** – ಒಬ್ಬ ರಾಜ. ಈತ ಕುರುಕ್ಷೇತ್ರದ ತಪೋವನದಲ್ಲಿ ತಪಸ್ಸು ಮಾಡಿ ಸ್ವರ್ಗ ಪಡೆದಿದ್ದನು (ಆಶ್ರಮ 20/14–15).

**ಶಶಾದ** – ಮಹಾರಾಜ ಇಕ್ಷ್ವಾಕುವಿನ ಪರಮ

ಧರ್ಮಾತ್ಮನಾದ ಪುತ್ರ. ಇವನು ತಂದೆಯ ಅನಂತರ ಅಯೋಧ್ಯೆಯ ರಾಜನಾದನು (ವನ 202/1). ಇವನ ಪುತ್ರನ ಹೆಸರು ಕಕುತ್ಸ್ಥ ನೆಂದಾಗಿತ್ತು (ವನ 202/2).

**ಶಶಿಕ** – ಒಂದು ಭಾರತೀಯ ಜನಪದ (ಭೀಷ್ಮ 9/46).

**ಶಶೋಲೂಕಮುಖೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/22).

**ಶಾಕ** – ಶಾಕದ್ವೀಪದ ಒಂದು ವೃಕ್ಷ. ಇದರ ಹೆಸರಿನಲ್ಲಿ ಆ ದ್ವೀಪದ ಹೆಸರು ಪ್ರಸಿದ್ಧವಾಗಿದೆ (ಭೀಷ್ಮ 11/28).

**ಶಾಕದ್ವೀಪ** – ಭೂಮಂಡಲದ ಏಳು ಮಹಾದ್ವೀಪ ಗಳಲ್ಲಿ ಒಂದು. ಸಂಜಯನಿಂದ ಧೃತರಾಷ್ಟ್ರನಿಗೆ ಇದರ ವರ್ಣನೆ (ಭೀಷ್ಮ 11 ಅಧ್ಯಾಯ).

**ಶಾಕಂಭರೀ** – ದೇವೀ ಸಂಬಂಧವಾದ ಒಂದು ತೀರ್ಥ. ಇಲ್ಲಿ ಶಾಕಂಭರಿಯ ಬಳಿಗೆ ಹೋಗಿ, ಮನುಷ್ಯನು ಬ್ರಹ್ಮಚರ್ಯಪಾಲನಪೂರ್ವಕ ಏಕಾಗ್ರನೂ ಪವಿತ್ರನೂ ಆಗಿ, ಮೂರು ರಾತ್ರಿಗಳ ವರೆಗೆ ಕೇವಲ ಶಾಕವನ್ನು ತಿಂದು ವಾಸಿಸಿದರೆ, ಹನ್ನೆರಡು ವರ್ಷಗಳ ವರೆಗೆ ಶಾಕಾಹಾರ ಮಾಡಿದ ಪುಣ್ಯ ಪ್ರಾಪ್ತವಾಗುತ್ತದೆ (ವನ 84/13–17).

**ಶಾಕಲ** – ಒಂದು ನಗರ. ಇದು ಮದ್ರದೇಶದ ರಾಜಧಾನಿಯಾಗಿತ್ತು (ಆಧುನಿಕ ಅಭಿಪ್ರಾಯ ಪ್ರಕಾರ ಈಗಿರುವ ಸಿಯಾಲ್‌ಕೋಟ್ ಪ್ರದೇಶವೇ ಶಾಕಲವಾಗಿದೆ.) (ಸಭಾ 32/14).

**ಶಾಕಲದ್ವೀಪ** – ಒಂದು ದೇಶ. ಇಲ್ಲಿ ರಾಜಾ ಪ್ರತಿವಿಂಧ್ಯನನ್ನು ಅರ್ಜುನ ಗೆದ್ದಿದ್ದನು (ಸಭಾ 26/6).

**ಶಾಕಲ** – ಶಿವಭಕ್ತನಾದ ಒಬ್ಬ ಋಷಿ. ಇವನು ಒಂಭೈನೂರು ವರ್ಷಗಳ ವರೆಗೆ ಮನೋಮಯ ಯಜ್ಞ (ಧ್ಯಾನದ ಮೂಲಕ ಭಗವಾನ್ ಶಿವನ ಆರಾಧನೆ.) ಮಾಡಿದ್ದನು (ಅನು 14/100).

**ಶಾಕವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಶಾಖ** – ಅನಲನೆಂಬ ವಸುವಿನ ಪುತ್ರ. ಕುಮಾರ ಕಾರ್ತಿಕೇಯನ ತಮ್ಮ. ಇವನಿಗೆ ಇನ್ನಿಬ್ಬರು ತಮ್ಮಂದಿರಿದ್ದರು. ಅವರ ಹೆಸರು – ವಿಶಾಖ ಮತ್ತು ನೈಗಮೇಯ (ಕೆಲವರ ಅಭಿಪ್ರಾಯ ಪ್ರಕಾರ ಈ ಮೂರೂ ಕುಮಾರ ಕಾರ್ತಿಕೇಯನ ಹೆಸರುಗಳಾಗಿವೆ. ಅನ್ಯ ಕೆಲವರ ಅಭಿಪ್ರಾಯ ಪ್ರಕಾರ ಈ ಮೂರೂ ಹೆಸರುಗಳು ಕುಮಾರ ಕಾರ್ತಿಕೇಯನ ಮಕ್ಕಳದ್ದಾಗಿದೆ. ಕಲ್ಪ ಭೇದದಿಂದ ಎಲ್ಲವೂ ಸರಿಯಾಗುತ್ತವೆ). ನಿಜವಾಗಿ ಶಾಖ, ವಿಶಾಖ ಮತ್ತು ನೈಗಮೇಯ –ಕುಮಾರ ಕಾರ್ತಿಕೇಯನ ರೂಪಾಂತರಗಳಾಗಿವೆ. ಸ್ವಯಂ ಕುಮಾರನು ಇವರ ರೂಪದಲ್ಲಿ ಪ್ರಕಟಗೊಂಡಿ ದ್ದಾನೆ (ಶಲ್ಯ 44/37).

**ಶಾಣ್ಡಿಲೀ** – (1) ದಕ್ಷನ ಪುತ್ರಿ ಮತ್ತು ಧರ್ಮನ ಪತ್ನಿ. ಇವಳ ಗರ್ಭದಿಂದ ಅನಲನೆಂಬ ವಸು ವಿನ ಜನ್ಮವಾಗಿತ್ತು (ಆದಿ 66/17–20).

(2) ಋಷಭಪರ್ವತದ ಮೇಲೆ ವಾಸಿಸುವ ಒಬ್ಬ ತಪಸ್ವಿನಿ. ಈಕೆಯನ್ನು ನಿಂದಿಸಿದುದರಿಂದ ಗರುಡನ ರೆಕ್ಕೆಗಳು ಬಿದ್ದು ಹೋಗಿದ್ದವು. ಪುನಃ ಈಕೆಯಿಂದ ಗರುಡನಿಗೆ ವರಪ್ರಾಪ್ತಿಯಾಯಿತು (ಉದ್ಯೋಗ 113/12–17).

(3) ದೇವಲೋಕದಲ್ಲಿರುವ ಒಬ್ಬ ಪತಿವ್ರತೆ ದೇವಿ. ಈಕೆ ಎಲ್ಲಾ ತತ್ತ್ವಗಳನ್ನು ತಿಳಿದವಳು ಮತ್ತು ಉಚ್ಚ ವಿಚಾರವುಳ್ಳವಳಾಗಿದ್ದಳು. ಇವಳ ಮೂಲಕ ಕೇಕಯ ರಾಜಕುಮಾರಿ ಸುಮನಾಳಿಗೆ ಪಾತಿವ್ರತ್ಯದ ಉಪದೇಶ (ಅನು 123/8–20).

**ಶಾಂಡಿಲ್ಯ** – ಮಹಾತಪಸ್ವಿಯಾದ ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/17). ಇವನ ಪುತ್ರಿಯ ತಪಸ್ಸಿನ ವರ್ಣನೆ (ಶಲ್ಯ 54/5–8). ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/6). ಇವನು ಎತ್ತಿನಗಾಡಿಯ ದಾನವನ್ನು ಸುವರ್ಣ, ಜಲ ಇತ್ಯಾದಿ ಎಲ್ಲಾ ಶ್ರೇಷ್ಠ ವಸ್ತುಗಳ ದಾನಕ್ಕೆ ಸಮಾನವೆಂದು ಹೇಳಿರುತ್ತಾನೆ (ಅನು 65/19). ಸುಮನ್ಯು ಎಂಬವನು ಭಕ್ಷ್ಯಭೋಜ್ಯ ಪದಾರ್ಥ ಗಳ ಪರ್ವತೋಪಮವಾದ ಅನೇಕ ರಾಶಿಗಳನ್ನು ಮಾಡಿ ಶಾಂಡಿಲ್ಯನಿಗೆ ದಾನಮಾಡಿದ್ದನು. ಇದ ರಿಂದಾಗಿ ಸ್ವರ್ಗದಲ್ಲಿ ಸ್ಥಾನಪಡೆದಿದ್ದನು (ಅನು 137/22).

**ಶಾನ್ತ** – 'ಅಹಃ'ನೆಂಬ ವಸುವಿನ ನಾಲ್ಕು ಪುತ್ರರಲ್ಲಿ ಒಬ್ಬ. ಉಳಿದ ಮೂವರ ಹೆಸರು– ಶಮ, ಜ್ಯೋತಿ ಮತ್ತು ಮುನಿ (ಆದಿ 66/23).

**ಶಾನ್ತನು** – ಮಹಾರಾಜ ಪ್ರತೀಪನ ದ್ವಿತೀಯ ಪುತ್ರ, ದೇವಾಪಿಯ ತಮ್ಮ, ಬಾಹ್ಲೀಕನ ಅಣ್ಣ. ಇವನ ತಾಯಿಯ ಹೆಸರು ಸುನಂದಾ (ಆದಿ 94/61; ಆದಿ 95/44). ಇವನ ಅಣ್ಣ ದೇವಾಪಿ ಬಾಲ್ಯಾವಸ್ಥೆಯಲ್ಲಿಯೇ ರಾಜ್ಯಬಿಟ್ಟು ಕಾಡಿಗೆ ಹೋದ ಕಾರಣ ಇವನೇ ರಾಜನಾದನು (ಆದಿ 94/62; ಆದಿ 95/45). ಇವನು ತನ್ನ ಎರಡೂ ಕೈಗಳಿಂದ ಯಾರನ್ನು ಸ್ಪರ್ಶಿಸುತ್ತಿದ್ದನೋ ಅವನು ಸುಖ-ಶಾಂತಿಯ ಅನುಭವ ಪಡೆಯುತ್ತಿದ್ದನು ಮತ್ತು ವೃದ್ಧಾಪ್ಯದಿಂದ ಯೌವನಕ್ಕೆ ಹೋಗುತ್ತಿದ್ದನು. ಆದುದರಿಂದಲೇ ಇವನ ಹೆಸರು ಶಾಂತನು ಆಯಿತು (ಆದಿ 95/46). ಇವನು ಪೂರ್ವಜನ್ಮದಲ್ಲಿ ರಾಜಾ ಮಹಾಭಿಷನಾಗಿದ್ದನು. ಇವನು ಸ್ವರ್ಗಲೋಕದಿಂದ ಮರ್ತ್ಯಲೋಕಕ್ಕೆ ಬಂದ ಇತಿಹಾಸ (ಆದಿ 96/1-9). ಗಂಗೆಯನ್ನು ಪತ್ನಿರೂಪದಲ್ಲಿ ಸ್ವೀಕರಿಸಲು ಇವನಿಗೆ ತಂದೆಯ ಆದೇಶ (ಆದಿ 97/21-23). ಗಂಗೆಯ ಅನುಪಮ ರೂಪದಿಂದ ಆಕೃಷ್ಟನಾಗಿ, ಆಕೆಯೊಡನೆ ತನ್ನ ಪತ್ನಿಯಾಗುವಂತೆ ಇವನ ಯಾಚನೆ (ಆದಿ 97/31-32). ಗಂಗೆಯೊಂದಿಗೆ ಇವನ ವಿವಾಹದ ಶರ್ತ (ಆದಿ 98/3). ಇವನಿಂದ ಗಂಗೆಗೆ ನಿಂದನೆ (ಆದಿ 98/16). ವಸಿಷ್ಠನಿಂದ ವಸುಗಳಿಗೆ ಪ್ರಾಪ್ತವಾದ ಶಾಪದ ವೃತ್ತಾಂತವನ್ನು ಈತನಿಗೆ ಹೇಳಿ ಗಂಗೆಯು ಅಂತರ್ಧಾನಳಾದುದು (ಆದಿ 99/5-46). ಸಮ್ರಾಟ ಪದವಿಯಲ್ಲಿ ಇವನಿಗೆ ಅಭಿಷೇಕ (ಆದಿ 100/7). ಇವನ ರಾಜ್ಯದ ವಿಶೇಷತೆ (ಆದಿ 100/8-20). ಗಂಗೆಯು ಇವನಿಗೆ ಬಾಲಕ ಭೀಷ್ಮನ ಪರಿಚಯ ಮಾಡಿಸಿದುದು (ಆದಿ 100/33). ಸತ್ಯವತಿಯ ರೂಪದಿಂದ ಮೋಹಿತನಾಗಿ, ಆಕೆಯ ಪ್ರಾಪ್ತಿಗಾಗಿ ನಿಷಾದ ರಾಜನೊಡನೆ ಇವನ ಯಾಚನೆ (ಆದಿ 100/50-51). ಸತ್ಯವತೀ ಪುತ್ರನನ್ನೇ ಸಮ್ರಾಟನ ಪಟ್ಟದಲ್ಲಿ ಅಭಿಷಿಕ್ತನಾಗಿ ಮಾಡಲು ನಿಷಾದ ರಾಜನು ಇವನಲ್ಲಿ ಹೇಳಿದುದು (ಆದಿ 100/54-56). ಇವನು ನಿಷಾದನ ಸೂಚನೆಯನ್ನು ತಿರಸ್ಕರಿಸಿದುದು (ಆದಿ 100/57-58). ಏಕಮಾತ್ರ ಪುತ್ರನು, ಪುತ್ರನಿಲ್ಲದಿರುವುದಕ್ಕೆ ಸಮಾನವೆಂದು ಹೇಳಿ, ಸಂತಾನದ ಮಹಿಮೆಯನ್ನು ವರ್ಣಿಸಿದುದು (ಆದಿ 100/66-70). ಇವನಿಗೆ ವಂಶಚ್ಛೇದನದ ಮರುಕ (ಆದಿ 100/70-71). ಇವನಿಗೆ ಭೀಷ್ಮನ ಮೂಲಕ ಸತ್ಯವತಿಯ ಸಮರ್ಪಣೆ (ಆದಿ 100/100). ಇವನಿಂದ ಭೀಷ್ಮನಿಗೆ ಸ್ವಚ್ಛಂದಮೃತ್ಯುವಿನ ವರದಾನ (ಆದಿ 100/102). ಸತ್ಯವತಿಯೊಂದಿಗೆ ವಿಧಿಪೂರ್ವಕ ಈತನ ವಿವಾಹ (ಆದಿ 101/1). ಇವನಿಂದ ಸತ್ಯವತಿಯ ಗರ್ಭದಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರ ಜನ್ಮ (ಆದಿ 101/2-3). ಇವನ ಸ್ವರ್ಗವಾಸ (ಆದಿ 101/4). ಇವನು ತನ್ನ ಜೀವನಕಾಲದಲ್ಲಿ ಕಾಡಿನಲ್ಲಿ ಅನಾಥವಾಗಿ ಬಿದ್ದಿದ್ದ ಬಾಲಕ ಕೃಪ ಮತ್ತು ಕೃಪಿಯನ್ನು ಮನೆಗೆ ತಂದು, ಅವರ ಪಾಲನ ಪೋಷಣ ಮತ್ತು ಸಮಸ್ತ ಸಂಸ್ಕಾರ ಮಾಡಿಸಿದುದು (ಆದಿ 229/18). ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/25). ಇವನು ಆರ್ಚೀಕ ಪರ್ವತದ ಮೇಲೆ ತಪಸ್ಸು ಮಾಡಿ ನಿತ್ಯಧಾಮವನ್ನು ಪ್ರಾಪ್ತಿಸಿಕೊಂಡಿದ್ದನು (ವನ 125/19). ಇವನು ಭೀಷ್ಮನಿಂದ ಪಿಂಡ ಸ್ವೀಕರಿಸಲು ತನ್ನ ಕೈ ಚಾಚಿದ್ದನು (ಅನು 84/15). ಇವನು ಸಾಯಂಪ್ರಾತಃಕಾಲದಲ್ಲಿ ಸ್ಮರಣೆ ಮಾಡಲು ಯೋಗ್ಯ ರಾಜರಲ್ಲಿ ಗಣಿಸಲ್ಪಟ್ಟಿದ್ದಾನೆ (ಅನು 165/58). ಮಹಾಭಾರತದಲ್ಲಿ ಬಂದಿರುವ ಶಾಂತನುವಿನ ಹೆಸರುಗಳು:- ಭಾರತ, ಭಾರತಗೋಪ್ತಾ, ಭರತಸತ್ತಮ, ಕೌರವ್ಯ, ಕುರುಸತ್ತಮ, ಪ್ರಾತೀಪ – ಇತ್ಯಾದಿ.

**ಶಾನ್ತಮಯ** – ಒಬ್ಬ ಪ್ರಾಚೀನ ರಾಜ (ಆದಿ 1/236).

**ಶಾನ್ತಾ** – ರಾಜಾಲೋಮಪಾದನು ದತ್ತಸ್ವೀಕಾರ ಮಾಡಿದ ಮಗಳು. ಈಕೆಯನ್ನು ರಾಜನು ಮಹರ್ಷಿ ಋಷ್ಯಶೃಂಗನಿಗೆ ವಿವಾಹಮಾಡಿ ಕೊಟ್ಟಿದ್ದನು (ವನ 110/26; ವನ 113/11). ತನ್ನ ಪತಿ ಋಷ್ಯಶೃಂಗನೊಂದಿಗೆ ಆಶ್ರಮಕ್ಕೆ ಬಂದುದು ಮತ್ತು ಆತನ ಸೇವೆಯಲ್ಲಿ ಮಗ್ನಳಾದುದು (ವನ 113/22-24). ಮಹರ್ಷಿ ಋಷ್ಯಶೃಂಗನಿಗೆ ಶಾಂತೆಯನ್ನು ದಾನಮಾಡಿದುದುದರಿಂದ, ರಾಜಾಲೋಮಪಾದನು ಎಲ್ಲಾ ಪ್ರಕಾರದ ಬಹಳ ಭೋಗಗಳಿಂದ ಸಂಪನ್ನನಾದನು (ಶಾಂತಿ 234/34).

34

**ಶಾನ್ತಿ** – (1) ಈ ಹಿಂದಿನ ನಾಲ್ಕನೆಯ ಇಂದ್ರನ ಹೆಸರು (ಆದಿ 196/29).

(2) ಒಬ್ಬ ಪ್ರಾಚೀನ ಋಷಿ. ಈತ ರಾಜಾ ಉಪರಿಚರನ ಯಜ್ಞದಲ್ಲಿ ಸದಸ್ಯನಾಗಿದ್ದನು (ಶಾಂತಿ 336/8). ಇವನ ತಂದೆಯ ಹೆಸರು ಅಂಗೀರಸನೆಂದಾಗಿತ್ತು. ಈತ ಅಗ್ನಿವಂಶದಲ್ಲಿ ಹುಟ್ಟಿದ್ದರಿಂದ ಆಗ್ನೇಯನೆಂದು ಕರೆಯಲ್ಪಟ್ಟನು (ಅನು 85/130–131).

**ಶಾನ್ತಿಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಶಾಮಿತ್ರ** – ಯಜ್ಞದಲ್ಲಿ ಸೇರಿದ ಒಂದು ಕರ್ಮ (ಆದಿ 196/1).

**ಶಾರದ್ವತೀ** – ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ಗಾನಮಾಡಿದ್ದಳು (ಆದಿ 122/64).

**ಶಾರ್ಙ್ಗ** – ಭಗವಾನ್ ಶ್ರೀಕೃಷ್ಣನ ದಿವ್ಯ ಧನುಸ್ಸು (ಸಭಾ 2/14; ಸಭಾ 38/29; ವನ 20/19). ಕೌರವಸಭೆಯಲ್ಲಿ ವಿಶ್ವರೂಪ ಧರಿಸಿದ ಶ್ರೀಕೃಷ್ಣನ ಒಂದು ಭುಜದಲ್ಲಿ ಇದು ಶೋಭಾಯಮಾನ ವಾಗಿತ್ತು (ಉದ್ಯೋಗ 131/10). ಇಂದ್ರನ ವಿಜಯವೆಂಬ ಧನುಸ್ಸನ್ನು ಇದರೊಂದಿಗೆ ತುಲನೆಮಾಡಿದುದು (ಉದ್ಯೋಗ 158/4). ಇದು ಮೂರು ದಿವ್ಯಧನುಸ್ಸುಗಳಲ್ಲಿ ಒಂದಾಗಿದೆ. ಇದು ಭಗವಾನ್ ವಿಷ್ಣುವಿನ ತೇಜಸ್ವಿ ಧನುಸ್ಸೆಂದು ಹೇಳಲ್ಪಟ್ಟಿದೆ (ಉದ್ಯೋಗ 158/5). ಲೋಕ ಪಿತಾಮಹ ಬ್ರಹ್ಮನು ಇದರ ನಿರ್ಮಾಣ ಮಾಡಿ, ಶ್ರೀಹರಿಗೆ ಸಮರ್ಪಿಸಿದ್ದನು (ಅನು 141/8).

**ಶಾರ್ಙ್ಗಕೋಪಾಖ್ಯಾನ** – ಶಾರ್ಙ್ಗಕ ಪಕ್ಷಿಗಳ ಕಥೆ (ಆದಿ ಅಧ್ಯಾಯ 228ರಿಂದ 232ರ ವರೆಗೆ).

**ಶಾರ್ಙ್ಗರವ** – ಒಬ್ಬ ಋಷಿ. ಇವನು ಜನಮೇಜಯನ ಸರ್ಪಸತ್ರದಲ್ಲಿ ಅಧ್ವರ್ಯು ವಾಗಿದ್ದನು (ಆದಿ 53/6).

**ಶಾರ್ದೂಲೀ** – ಕ್ರೋಧವಶಾನ ಪುತ್ರಿ. ಈಕೆ ಸಿಂಹಗಳಿಗೂ, ಹುಲಿಗಳಿಗೂ, ಚಿರತೆಗಳಿಗೂ ಜನ್ಮಕೊಟ್ಟಳು (ಆದಿ 66/61, 65).

**ಶಾಲಕಟಂಕಟ** – ರಾಕ್ಷಸ ಅಲಂಬುಷನ ನಾಮಾಂತರ (ದ್ರೋಣ 109/22–31). (ನೋಡಿರಿ – ಅಲಂಬುಷ).

**ಶಾಲಿಕ** – ಒಬ್ಬ ದಿವ್ಯ ಮಹರ್ಷಿ ಹಸ್ತಿನಾಪುರಕ್ಕೆ ಹೋಗುತ್ತಿದ್ದ ಕೃಷ್ಣನ ಭೇಟಿ ಮಾಡಿದ್ದನು (ಉದ್ಯೋಗ 83/64).

**ಶಾಲಿಪಿಂಡ** – ಕಶ್ಯಪನಿಗೆ ಕದ್ರುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/14).

**ಶಾಲಿಶಿರಾ** – ಒಬ್ಬ ದೇವಗಂಧರ್ವ. ಈತ ಕಶ್ಯಪಪತ್ನಿ ಮುನಿಯ ಗರ್ಭದಿಂದ ಹುಟ್ಟಿದ್ದನು (ಆದಿ 65/44). ಈತ ಅರ್ಜುನನ ಜನ್ಮಕಾಲದ ಮಹೋತ್ಸವದಲ್ಲಿ ಉಪಸ್ಥಿತನಾಗಿದ್ದನು (ಆದಿ 122/56).

**ಶಾಲಿಸೂರ್ಯ** – ಕುರುಕ್ಷೇತ್ರದ ಎಲ್ಲೆಯೊಳಗಿ ರುವ ಒಂದು ತೀರ್ಥ. ಇದು ಶಾಲಿಹೋತ್ರನ ಸ್ಥಾನವಾಗಿದೆ. ಇಲ್ಲಿ ಸ್ನಾನ ಮಾಡುವುದರಿಂದ ಸಹಸ್ರ ಗೋದಾನದ ಫಲ ದೊರಕುತ್ತದೆ (ವನ 83/107).

**ಶಾಲಿಹೋತ್ರ** – ಒಬ್ಬ ಮುನಿ. ಇವನ ಆಶ್ರಮದಲ್ಲಿ ವ್ಯಾಸನು ಉಳಕೊಂಡಿದ್ದನು. ಇವನ ಆಶ್ರಮದ ಬಳಿಯಲ್ಲಿ ಒಂದು ಸರೋವರ ಮತ್ತು ಪವಿತ್ರ ಮರವಿತ್ತು. ಆ ವೃಕ್ಷ ಚಳಿ, ಸೆಕೆ ಮತ್ತು ಮಳೆಯನ್ನು ಬಹಳ ಚೆನ್ನಾಗಿ ಸಹಿಸುತ್ತಿತ್ತು. ಅಲ್ಲಿ ಕೇವಲ ಜಲವನ್ನು ಕುಡಿಯುವುದರಿಂದ ಹಸಿವು ಬಾಯಾರಿಕೆ ದೂರವಾಗುತ್ತಿತ್ತು. ಆ ಸರೋವರ ಮತ್ತು ವೃಕ್ಷದ ನಿರ್ಮಾಣವನ್ನು ಶಾಲಿಹೋತ್ರ ಮುನಿಯು ತನ್ನ ತಪಸ್ಸಿನ ಮೂಲಕ ಮಾಡಿದ್ದನು (ಆದಿ 154/15). ಇವನ ಆಶ್ರಮಕ್ಕೆ ಹಿಡಿಂಬೆಯೊಂದಿಗೆ ಪಾಂಡವರ ಆಗಮನ. ಇವನಿಂದ ಹಸಿದು ಕಂಗೆಟ್ಟ ಪಾಂಡವರಿಗೆ ಭೋಜನಪ್ರದಾನ (ಆದಿ 154/18). ಇವನು ಅಶ್ವವಿದ್ಯೆಯ ಆಚಾರ್ಯನಾಗಿದ್ದನು. ಈತ ಕುದುರೆಗಳ ಜಾತಿ ಮತ್ತು ಅವುಗಳ ವಿಷಯದ ತಾತ್ತ್ವಿಕ ವಿಚಾರಗಳನ್ನು ತಿಳಿದಿದ್ದನು (ವನ 71/27). ಶಾಲಿಸೂರ್ಯ ಹೆಸರಿನಿಂದ ಪ್ರಸಿದ್ಧ ವಾದ ಇವನ ಒಂದು ತೀರ್ಥವಿದೆ. ಇಲ್ಲಿ ಸ್ನಾನ ಮಾಡಿದರೆ ಸಾವಿರ ಗೋದಾನದ ಫಲ ಸಿಗುತ್ತದೆ (ವನ 83/107).

**ಶಾಲೂಕಿನೀ** – ಕುರುಕ್ಷೇತ್ರದೊಳಗಿರುವ ಒಂದು ತೀರ್ಥ. ಇಲ್ಲಿಗೆ ಹೋಗಿ, ದಶಾಶ್ವಮೇಧ ತೀರ್ಥದಲ್ಲಿ ಸ್ನಾನಮಾಡುವುದರಿಂದ, ಮನುಷ್ಯ ಹತ್ತು ಅಶ್ವಮೇಧಗಳ ಫಲಪಡೆಯುತ್ತಾನೆ (ವನ 83/13).

**ಶಾಲ್ಮಲಿ** – ಸೋಮವಂಶದ ಮಹಾರಾಜ ಕುರುವಿನ ಮೊಮ್ಮಗ ಮತ್ತು (ಅಶ್ವವಂತ) ಅವಿಕ್ಷಿತನ ಪುತ್ರ. ಇವನ ಇತರ ಏಳು ಸಹೋದರರ ಹೆಸರುಗಳು– ಪರೀಕ್ಷಿತ, ಆದಿರಾಜ, ವಿರಾಜ, ಶಬಲಾಶ್ವ, ಉಚ್ಚೈಃಶ್ರವಾ, ಭಂಗಕಾರ ಮತ್ತು ಜಿತಾರಿ (ಆದಿ 94/52–53).

**ಶಾಲ್ಮಲಿದ್ವೀಪ** – ಸುಪ್ರಸಿದ್ಧವಾದ ಜಂಬೂ ಮೊದಲಾದ ಏಳು ದ್ವೀಪಗಳಲ್ಲಿ ಒಂದು (ಭೀಷ್ಮ 11/3). ಶಾಲ್ಮಲಿ ವೃಕ್ಷದಿಂದಾಗಿ ಹೆಸರಾದ ಈ ದ್ವೀಪದಲ್ಲಿ, ಅದರ ಪೂಜೆ ನಡೆಯುತ್ತದೆ (ಭೀಷ್ಮ 12/6).

**ಶಾಲ್ವ** – (1) ಒಬ್ಬ ಕ್ಷತ್ರಿಯ ರಾಜ. ಈತ ವೃಷಪರ್ವನ ತಮ್ಮ. ಅಜಕನೆಂಬವನ ಅಂಶದಿಂದ ಹುಟ್ಟಿದ್ದನು (ಆದಿ 67/16–17). ಕಾಶೀರಾಜನ ಪುತ್ರಿ ಅಂಬೆಯ ಸ್ವಯಂವರದಲ್ಲಿ ಭೀಷ್ಮನಿಂದ ಇವನ ಪರಾಜಯ (ಆದಿ 102/34–49). ಇವನು ಸೌಭವೆಂಬ ವಿಮಾನದ ಅಧಿಪತಿಯಾಗಿದ್ದನು. ಅಂಬೆಯು ಮನಸ್ಸಿನಲ್ಲಿಯೇ ಈತನನ್ನು ಪತಿಯಾಗಿ ಆರಿಸಿಕೊಂಡಿದ್ದಳು (ಆದಿ 102/61–62). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 186/15). ಯುಧಿಷ್ಠಿರನ ರಾಜಸೂಯಯಜ್ಞಕ್ಕೂ ಬಂದಿದ್ದನು (ಸಭಾ 34/9). ಶ್ರೀಕೃಷ್ಣನಿಂದ ಈತ ಕೊಲ್ಲಲ್ಪಟ್ಟ ವರ್ಣನೆ (ವನ 12/32). ಇವನ ವಧೆಯ ಸಂಕ್ಷಿಪ್ತ ಕಥೆ (ವನ 14 ಅಧ್ಯಾಯ). ದ್ವಾರಕೆಯ ಮೇಲೆ ಇವನ ಆಕ್ರಮಣ. ಸಾಂಬ, ಪ್ರದ್ಯುಮ್ನ ಮೊದಲಾದವರೊಡನೆ ಯುದ್ಧ ಮತ್ತು ಶ್ರೀಕೃಷ್ಣನಿಂದ ಈತನ ವಧೆಯ ಕಥನ (ವನ ಅಧ್ಯಾಯ 15ರಿಂದ 22 ವರೆಗೆ). ಭೀಷ್ಮನಿಂದ ಆಜ್ಞೆ ಪಡಕೊಂಡು ಬಂದ ಅಂಬೆಯನ್ನು ಈತ ಪರಿತ್ಯಜಿಸಿದುದು (ಉದ್ಯೋಗ 175/24).

(2) ವ್ಯುಷಿತಾಶ್ವನ ಪತ್ನಿ ಭದ್ರೆ ತನ್ನ ಮೃತ ಪತಿಯ ಶವದೊಂದಿಗೆ ಪವಡಿಸಿ, ಮೂವರು 'ಶಾಲ್ವರು' ಮತ್ತು ನಾಲ್ವರು 'ಮದ್ರ'ರಿಗೆ ಜನ್ಮ ನೀಡಿದ್ದಳು (ಇಲ್ಲಿ 'ಶಾಲ್ವ' 'ಮದ್ರ'ರೆಂಬುದಕ್ಕೆ ಅರ್ಥ ಆಯಾಯ ದೇಶದ ಶಾಸಕರೆಂದಾಗಿದೆ). (ಆದಿ 120/32–36). ಶಾಲ್ವದೇಶದ ಜನರು ಜರಾಸಂಧನ ಭಯದಿಂದ ದಕ್ಷಿಣ ದಿಕ್ಕಿಗೆ ಓಡಿ ಹೋಗಿದ್ದರು (ಸಭಾ 14/26). ಪ್ರಾಚೀನ ಕಾಲದಲ್ಲಿ ಶಾಲ್ವದೇಶದಲ್ಲಿ ದ್ಯುಮತ್ಸೇನನೆಂಬ ಒಬ್ಬ ಧರ್ಮಾತ್ಮನಾದ ಕ್ಷತ್ರಿಯ ರಾಜನು ಶಾಸನ ಮಾಡುತ್ತಿದ್ದನು. ಇವನ ಪುತ್ರ ಸತ್ಯವಾನನಿಗೆ ಸಾವಿತ್ರಿಯೊಂದಿಗೆ ವಿವಾಹವಾಗಿತ್ತು (ವನ 294/7). ಕೌರವ ಸೇನೆಯ ಸಂರಕ್ಷಕರಲ್ಲಿ ಶಾಲ್ವ ದೇಶದ ಯೋಧರ ಹೆಸರೂ ಬಂದಿದೆ (ಉದ್ಯೋಗ 160/102–103). ಶಾಲ್ವ ಒಂದು ಭಾರತೀಯ ಜನಪದವಾಗಿದೆ (ಭೀಷ್ಮ 9/39). ಶಾಲ್ವ ಯೋಧರು ಅರ್ಜುನನ ಮೇಲೆ ಆಕ್ರಮಣ ಮಾಡಿದ್ದರು (ಭೀಷ್ಮ 117/34–35). ಪಾಂಡವ ಪಕ್ಷದ ಶಾಲ್ವದೇಶೀಯ ಯೋಧರು ದ್ರೋಣಾಚಾರ್ಯನ ಮೇಲೆ ಆಕ್ರಮಣ ಮಾಡಿದ್ದರು (ದ್ರೋಣ 154/10–14). ಶಾಲ್ವ ಮೊದಲಾದ ದೇಶದ ಭಾಗ್ಯವಂತ ಜನರು ಸನಾತನ ಧರ್ಮವನ್ನು ತಿಳಿದಿದ್ದಾರೆ (ಕರ್ಣ 45/14–15).

(3) ಪಾಂಡವ ಪಕ್ಷದ ಒಬ್ಬ ಯೋಧ. ಇವನನ್ನು ಕೌರವಪಕ್ಷದ ಭೀಮರಥನು ಕೊಂದಿದ್ದನು (ಈ ಭೀಮರಥನು ಧೃತರಾಷ್ಟ್ರನ ಪುತ್ರನಲ್ಲ) (ದ್ರೋಣ 25/26).

(4) ಮ್ಲೇಚ್ಛಗಣಗಳ ಒಬ್ಬ ರಾಜ. ಈತ ಪಾಂಡವರ ವಿಶಾಲಸೇನೆಯನ್ನು ಎದುರಿಸಲು ಅದರ ಮೇಲೆ ಆಕ್ರಮಣ ಮಾಡಿದ್ದನು (ಶಲ್ಯ 20/1). ಇವನ ಆನೆ ಪರ್ವತದಂತೆ ವಿಶಾಲ ಕಾಯವುಳ್ಳದ್ದು, ಮದಜಲವನ್ನು ಸುರಿಸುವಂತಹದು, ಮಹೋನ್ನತ್ತವಾದುದು ಮತ್ತು ಐರಾವತದಂತೆ ಶಕ್ತಿಶಾಲಿಯಾದುದು. ಅದು ಮಹಾಭದ್ರವೆಂಬ ಗಜರಾಜನ ಕುಲದಲ್ಲಿ ಹುಟ್ಟಿತ್ತು. ಧೃತರಾಷ್ಟ್ರ ಪುತ್ರ ದುರ್ಯೋಧನನು ಯಾವಾಗಲೂ ಅದನ್ನು ಗೌರವಿಸುತ್ತಿದ್ದನು. ಗಜಶಾಸ್ತ್ರವನ್ನು ತಿಳಿದ ಪುರುಷರು ಅದನ್ನು ಚೆನ್ನಾಗಿ ಅಲಂಕರಿಸಿದ್ದರು. ಅದು ಯುದ್ಧದ ಸಂದರ್ಭದಲ್ಲಿ ಯಾವಾಗಲೂ ಸವಾರಿಯ ಉಪಯೋಗಕ್ಕಾಗಿ ತರಲ್ಪಡುತ್ತಿತ್ತು (ಶಲ್ಯ 20/2–3). ಆ ಆನೆಯ ಮೇಲೇರಿದ ರಾಜಾ ಶಾಲ್ವನಿಂದ ಪಾಂಡವರ ಮೇಲೆ ಆಕ್ರಮಣ ಮತ್ತು ತನ್ನ ಪರಾಕ್ರಮದಿಂದ ಆತ ಪಾಂಡವ ಸೇನೆಯನ್ನು ಕಲಕಿದುದು. ಇವನ ಆನೆ ಧೃಷ್ಟದ್ಯುಮ್ನನ ಮೇಲೆ ಆಕ್ರಮಣ ಮಾಡಿ, ಅವನ ರಥವನ್ನು, ಕುದುರೆ ಮತ್ತು ಸಾರಥಿ ಸಹಿತವಾಗಿ ಮೆಟ್ಟಿದುದು; ಧೃಷ್ಟದ್ಯುಮ್ನನಿಂದ ಆ

ಗಜರಾಜನ ವಧೆ ಮತ್ತು ಸಾತ್ಯಕಿಯಿಂದ ಶಾಲ್ವನ ಶಿರಚ್ಛೇದನ (ಶಲ್ಯ 20/4–26).

**ಶಾಲ್ವಸೇನಿ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/61).

**ಶಾಲ್ವಾಯನ** – ಒಬ್ಬ ಪ್ರಾಚೀನ ರಾಜ. ಈತ ಜರಾಸಂಧನ ಭಯದಿಂದ ತನ್ನ ಸಹೋದರ ಮತ್ತು ಸೇವಕರ ಜೊತೆಯಲ್ಲಿ ದಕ್ಷಿಣ ದಿಕ್ಕಿಗೆ ಓಡಿಹೋದನು (ಸಭಾ 14/27).

**ಶಾಲ್ವೇಯ (ಶಾಲ್ವೇಯಕ)** – ಶಾಲ್ವದೇಶ ಮತ್ತು ಅಲ್ಲಿರುವ ನಿವಾಸಿಗಳು (ವನ 264/6; ವಿರಾಟ 30/2; ಉದ್ಯೋಗ 54/18; ಉದ್ಯೋಗ 163/10).

**ಶಿಂಶುಮಾ** – ಗಾಂಧಾರ ರಾಜನ ಪುತ್ರಿ. ಇವಳ ಇನ್ನೊಂದು ಹೆಸರು ಸುಕೇಶೀ ಎಂದೂ ಆಗಿತ್ತು. ಭಗವಾನ್ ಶ್ರೀಕೃಷ್ಣನ ರಾಣಿ (ಸಭಾ 38/29) (ವಿಶೇಷ ನೋಡಿರಿ– ಸುಕೇಶೀ).

**ಶಿಕ್ಷಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/76).

**ಶಿಖಂಡ–ಛತ್ರಕ** (ನಾಯಿಕೊಡೆ) – ಇದು ವೃತ್ರಾಸುರನ ರಕ್ತದಿಂದ ಹುಟ್ಟಿದೆ. ಇದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಅಭಕ್ಷ್ಯ ವಸ್ತುವಾಗಿದೆ (ಶಾಂತಿ 272/60).

**ಶಿಖಂಡಿನೀ** – ರಾಜಾ ದ್ರುಪದನ ಮಗಳು. ಈಕೆ ಮುಂದೆ ಪುರುಷರೂಪಕ್ಕೆ ಪರಿವರ್ತನೆ ಹೊಂದಿದ್ದಳು. ಪುರುಷರೂಪದಲ್ಲಿ ಇವಳ ಹೆಸರು 'ಶಿಖಂಡೀ' ಎಂದಾಗಿತ್ತು (ಉದ್ಯೋಗ 188/4–14; ಉದ್ಯೋಗ 191/1) (ವಿಶೇಷ ನೋಡಿರಿ– ಶಿಖಂಡೀ).

**ಶಿಖಂಡೀ** – ರಾಜಾ ದ್ರುಪದನ ಪುತ್ರ. ಇವನು ಮೊದಲು ಶಿಖಂಡಿನೀ ಎಂಬ ಹೆಸರಿನ ಕನ್ಯೆಯಾಗಿ ಹುಟ್ಟಿ, ಅನಂತರ ಪುತ್ರರೂಪದಲ್ಲಿ ಪರಿವರ್ತಿತನಾಗಿದ್ದನು. ಸ್ಥೂಣಾಕರ್ಣನೆಂಬ ಯಕ್ಷನು ಇವನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ, ಈತನನ್ನು ಪುರುಷನಾಗಿ ಮಾಡಿದ್ದನು (ಆದಿ 63/125). ಈತ ರಾಕ್ಷಸನ ಅಂಶದಿಂದ ಹುಟ್ಟಿದ್ದನು (ಆದಿ 67/126). ಉಪಪ್ಲವ್ಯ ನಗರದಲ್ಲಿ ಅಭಿಮನ್ಯುವಿನ ವಿವಾಹೋತ್ಸವದಲ್ಲಿ ಭಾಗವಹಿಸಿದ್ದನು (ವಿರಾಟ 72/17). ಇವನು ಉಲೂಕನಿಗೆ ದುರ್ಯೋಧನನ ಸಂದೇಶಕ್ಕೆ ಉತ್ತರ ಕೊಟ್ಟಿದ್ದನು (ಉದ್ಯೋಗ 163/43–45). ದ್ರುಪದನಲ್ಲಿ, ಅವನ ಮನಸ್ವಿನಿ ರಾಣಿಯ ಗರ್ಭದಿಂದ ಪುತ್ರಿರೂಪದಲ್ಲಿ ಈತನ ಜನನ. ತಾಯಿ ತಂದೆಯರು ಪುತ್ರಿ ರೂಪವನ್ನು ಅಡಗಿಸಿ, ಪುತ್ರನೆಂದು ಘೋಷಣೆ ಮಾಡಿದುದು. ಇವನಿಗೆ ಪುತ್ರೋಚಿತ ಸಂಸ್ಕಾರಗಳನ್ನು ಪೂರ್ಣ ಮಾಡಿಸಿದುದು (ಉದ್ಯೋಗ 188/9–19). ಇವನಿಗೆ ಲೇಖನ ಮತ್ತು ಶಿಲ್ಪಕಲೆಯ ಶಿಕ್ಷಣ ಪ್ರಾಪ್ತವಾದುದು. ತಾಯಿ ತಂದೆ ಪರಸ್ಪರ ಸಮಾಲೋಚಿಸಿ, ಈತನಿಗೆ ದಶಾರ್ಣರಾಜನ ಕನ್ಯೆಯೊಡನೆ ವಿವಾಹಮಾಡಿದುದು (ಉದ್ಯೋಗ 189/1–13). ದಶಾರ್ಣರಾಜನ ಮಗಳಿಗೆ ಶಿಖಂಡಿಯ ಸ್ತ್ರೀತ್ವ ತಿಳಿದಾಗ, ಆಕೆ ತನ್ನ ದಾಸಿಯರಿಗೂ ಸಖಿಯರಿಗೂ ಈ ಕುರಿತು ಸೂಚನೆ ನೀಡಿದುದು; ದಾಸಿಯರು ದಶಾರ್ಣ ರಾಜನಿಗೆ ಈ ಸಮಾಚಾರ ತಲುಪಿಸಿದುದು ದಶಾರ್ಣ ರಾಜನು ಕ್ರೋಧಗೊಂಡದ್ದು. ಶಿಖಂಡಿಯು ರಾಜ ಪರಿವಾರದೊಳಗೆ ಪುರುಷನಂತೆ ಅತ್ತಿತ್ತ ಸುಳಿದಾಡಿದುದು ಮತ್ತು ದೂತನನ್ನು ಕಳುಹಿಸಿ, ಕನ್ಯೆಯನ್ನು ಪುತ್ರನೆಂದು ಹೇಳಿ ಮೋಸಮಾಡಿದ ಅಪರಾಧಕ್ಕಾಗಿ, ದ್ರುಪದನನ್ನು ಸಮೂಲವಾಗಿ ಕಿತ್ತೆಸೆಯುವ ಬೆದರಿಕೆಹಾಕಿದುದು (ಉದ್ಯೋಗ 189/13–23). ಹಿರಣ್ಯವರ್ಮನ ಭಯದಿಂದ ಗಾಬರಿಗೊಂಡ ದ್ರುಪದ ತನ್ನ ಮಹಾರಾಣಿಯೊಂದಿಗೆ ಸಂಕಟದಿಂದ ಬದುಕುವ ಉಪಾಯ ಕೇಳಿದುದು. ಪುತ್ರಿಯನ್ನು ಪುತ್ರನೆಂದು ಘೋಷಿಸಿದ ಉದ್ದೇಶವನ್ನು ದ್ರುಪದ ಪತ್ನಿಗೆ ಹೇಳಿದುದು. ರಾಜನಿಂದ ನಗರ ರಕ್ಷಣೆಯ ವ್ಯವಸ್ಥೆ ಮತ್ತು ದೇವಾರಾಧನೆ, ಕಾಡಿನಲ್ಲಿ ಪ್ರಾಣತ್ಯಾಗಮಾಡುವ ಇಚ್ಛೆಯಿಂದ, ಶಿಖಂಡಿ ಕಾಡಿಗೆ ಹೋದುದು. ಅಲ್ಲಿ ಸ್ಥೂಣಾಕರ್ಣನೆಂಬ ಯಕ್ಷನ ಭವನದಲ್ಲಿ ತಪಸ್ಸು ಮಾಡಿದುದು. ವರ ಕೇಳಿಕೊಳ್ಳುವಂತೆ ಯಕ್ಷನು ಈತನಿಗೆ ಹೇಳಿದುದು; ತನ್ನ ಮಾತಾಪಿತರ ಮೇಲೆ ಬಂದಿರುವ ಸಂಕಟದ ನಿವಾರಣೆಗಾಗಿ, ತಾನು ಪುರುಷ ರೂಪಕ್ಕೆ ಪರಿವರ್ತನೆ ಹೊಂದುವಂತೆ, ಶಿಖಂಡಿನಿಯು ತನ್ನ ಇಚ್ಛೆಯನ್ನು ಪ್ರಕಟಿಸಿದುದು (ಉದ್ಯೋಗ 191 ಅಧ್ಯಾಯ). ಪುನಃ ಹಿಂತಿರುಗಿಸುವ ಶರ್ತದ ಮೇಲೆ, ಸ್ವಲ್ಪ ಕಾಲದ ವರೆಗೆ ಸ್ಥೂಣಾಕರ್ಣನು ಈತನಿಗೆ ತನ್ನ ಪುರುಷತ್ವವನ್ನು

ಪ್ರದಾನಮಾಡಿದುದು. ಶಿಖಂಡಿಯು ನಗರಕ್ಕೆ ಹಿಂತಿರುಗಿ ತನ್ನ ತಂದೆ ಮತ್ತು ಹಿರಣ್ಯ ವರ್ಮನಿಗೆ ತನ್ನ ಪುರುಷತ್ವದಲ್ಲಿ ನಂಬಿಕೆ ಹುಟ್ಟಿಸಿ ಸಂತುಷ್ಟಿಗೊಳಿಸಿದುದು (ಉದ್ಯೋಗ 192/1-32). ಶಿಖಂಡಿಯು ಪುರುಷತ್ವವನ್ನು ಹಿಂತಿರು ಗಿಸಲು ಯಕ್ಷನ ಬಳಿಗೆ ಹೋದುದು; ತನಗೆ ಸ್ತ್ರೀ ರೂಪವೇ ಉಳಿಯುವಂತೆ ಶಾಪಪ್ರಾಪ್ತವಾದು ದನ್ನು ಯಕ್ಷನು ಹೇಳಿ, ಈತನನ್ನು ಹಿಂತಿರುಗಿಸಿ ದುದು (ಉದ್ಯೋಗ 192/53-57). ದ್ರೋಣಾ ಚಾರ್ಯನಿಂದ ಅಸ್ತ್ರ ಶಿಕ್ಷಣ ಪ್ರಾಪ್ತಿ (ಉದ್ಯೋಗ 192/60-61). ಪ್ರಥಮ ದಿನದ ಯುದ್ಧದಲ್ಲಿ ಅಶ್ವತ್ಥಾಮನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/46-48). ದ್ರೋಣಾಚಾರ್ಯನ ಭಯದಿಂದ ಈತ ಯುದ್ಧದಿಂದ ದೂರ ಸರಿದುದು (ಭೀಷ್ಮ 69/31). ಅಶ್ವತ್ಥಾಮನೊಂದಿಗೆ ಯುದ್ಧ ಮತ್ತು ಆತನಿಂದ ಪರಾಜಿತನಾದುದು (ಭೀಷ್ಮ 82/26-38). ಶಲ್ಯನ ಅಸ್ತ್ರವನ್ನು ದಿವ್ಯಾಸ್ತ್ರದಿಂದ ವಿದೀರ್ಣ ಮಾಡಿದುದು (ಭೀಷ್ಮ 85/29-30). ಭೀಷ್ಮನಿಗೆ ಉತ್ತರ ನೀಡಿದುದು ಮತ್ತು ಅವನನ್ನು ಕೊಲ್ಲಲು ಪ್ರಯತ್ನ ಮಾಡಿದುದು (ಭೀಷ್ಮ 108/45-50). ಅರ್ಜುನನ ಪ್ರೋತ್ಸಾಹದಿಂದ ಭೀಷ್ಮನ ಮೇಲೆ ಇವನ ಆಕ್ರಮಣ (ಭೀಷ್ಮ 110/1-3). ಭೀಷ್ಮನ ಮೇಲೆ ಹಲ್ಲೆ (ಭೀಷ್ಮ 114/40). ಅರ್ಜುನನಿಂದ ಸುರಕ್ಷಿತನಾಗಿದ್ದು ಭೀಷ್ಮನ ಮೇಲೆ ಪ್ರಹಾರ (ಭೀಷ್ಮ 119/43-44). ಧೃತರಾಷ್ಟ್ರನ ಮೂಲಕ ಇವನ ಪರಾಕ್ರಮದ ವರ್ಣನೆ (ದ್ರೋಣ 10/45-46). ಭೂರಿ ಶ್ರವನೊಂದಿಗೆ ಈತನ ಯುದ್ಧ (ದ್ರೋಣ 14/43-45). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/19-20). ವಿಕರ್ಣನೊಂದಿಗೆ ಯುದ್ಧ (ದ್ರೋಣ 25/36-37). ಬಾಹ್ಲೀಕ ನೊಂದಿಗೆ ಯುದ್ಧ (ದ್ರೋಣ 96/7-10). ಕೃತ ವರ್ಮನೊಂದಿಗೆ ಯುದ್ಧ ಮತ್ತು ಆತನಿಂದ ಇವನ ಪರಾಜಯ (ದ್ರೋಣ 114/82-97). ಕೃಪಾಚಾರ್ಯನಿಂದ ಪರಾಜಯ (ದ್ರೋಣ 169/22-32). ಕೃತವರ್ಮನೊಂದಿಗೆ ಯುದ್ಧದಲ್ಲಿ ಇವನು ಮೂರ್ಛಿತನಾದುದು (ಕರ್ಣ 26/26-37). ಕೃಪಾಚಾರ್ಯನಿಂದ ಪರಾಜಿತನಾಗಿ ಓಡಿ ದುದು (ಕರ್ಣ 54/1-23). ಕರ್ಣನಿಂದ ಈತನ ಪರಾಜಯ (ಕರ್ಣ 61/7-23). ಪ್ರಭದ್ರಕರ ಸೇನೆಯೊಂದಿಗೆ ಕೂಡಿಕೊಂಡು ಕೃತವರ್ಮ ಮತ್ತು ಮಹಾರಥಿ ಕೃಪಾಚಾರ್ಯನೊಂದಿಗೆ ಯುದ್ಧ (ಶಲ್ಯ 15/7). ದ್ರೋಣಪುತ್ರ ಅಶ್ವತ್ಥಾಮ ನನ್ನು ಮುಂದುವರಿಯದಂತೆ ತಡೆದುದು (ಶಲ್ಯ 16/6). ಅಶ್ವತ್ಥಾಮನಿಂದ ಈತನ ವಧೆ (ಸೌಪ್ತಿಕ 8/65). ಮಹಾಭಾರತದಲ್ಲಿ ಬಂದಿರುವ ಶಿಖಂಡಿಯ ಹೆಸರುಗಳು – ಭೀಷ್ಮಹಂತಾ, ಭೀಷ್ಮನಿಹಂತಾ, ಶಿಖಂಡಿನೀ, ದ್ರೌಪದೇಯ, ದ್ರುಪದಾತ್ಮಜ, ಪಾಂಚಾಲ್ಯ, ಯಾಜ್ಞಸೇನಿ ಇತ್ಯಾದಿ.

**ಶಿಖಾವರ್ತ** – ಒಬ್ಬ ಯಕ್ಷ. ಇವನು ಕುಬೇರನ ಸಭೆಗೆ ಬಂದು ಅವನ ಸೇವೆಗೆ ಸಿದ್ಧನಿರುತ್ತಾನೆ (ಸಭಾ 10/17).

**ಶಿಖಾವಂತ (ಶಿಖಾವಾನ್)**. ಒಬ್ಬ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/14).

**ಶಿಖೀ** – ಕಶ್ಯಪ ಕುಲದಲ್ಲಿ ಹುಟ್ಟಿದ ಒಬ್ಬ ನಾಗ (ಉದ್ಯೋಗ 103/12).

**ಶಿತಿಕಂಠ** – ಒಬ್ಬ ನಾಗ. ಇವನು ಬಲರಾಮನ ಪರಂಧಾಮಗಮನ ಕಾಲದಲ್ಲಿ ಸ್ವಾಗತಕ್ಕೆ ಬಂದಿದ್ದನು (ಮೌಸಲ 4/16).

**ಶಿತಿಕೇಶ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

**ಶಿನಿ** – ದೇವಮೀಢನ ವಂಶದಲ್ಲಿ ಹುಟ್ಟಿದ ಒಬ್ಬ ಪ್ರಧಾನ ಯಾದವ. ಇವನು ಒಬ್ಬನೇ ಸಮಸ್ತ ರಾಜರನ್ನು ಸೋಲಿಸಿ, ವಸುದೇವನಿಗಾಗಿ ದೇವಕಿ ಯನ್ನು ಗೆದ್ದಿದ್ದನು (ದ್ರೋಣ 144/6-10). ಸೋಮದತ್ತನೊಂದಿಗೆ ಇವನ ಯುದ್ಧ. ಅವನನ್ನು ಕುಕ್ಕಿ, ಒದೆದದ್ದು ಮತ್ತು ಅವನ ಜುಟ್ಟನ್ನು ಹಿಡಿದುದು (ದ್ರೋಣ 144/12-13).

**ಶಿಪಿವಿಷ್ಟ** – ಶ್ರೀಕೃಷ್ಣನ ಒಂದು ಹೆಸರು. ಇದರ ವಿವರಣೆ (ಶಾಂತಿ 342/71).

**ಶಿಬಿ** – (1) ಒಬ್ಬ ದೈತ್ಯ. ಈತ ಹಿರಣ್ಯಕಶಿಪುವಿನ ಮಗ (ಆದಿ 65/18). ಇವನು ದ್ರುಮನೆಂಬ ರಾಜನ ರೂಪದಲ್ಲಿ ಭೂಮಿಯಲ್ಲಿ ಜನ್ಮವೆತ್ತಿದ್ದನು (ಆದಿ 67/8).

(2) ಒಬ್ಬ ಪ್ರಾಚೀನ ರಾಜರ್ಷಿ. ಇವನ ಸಹವಾಸ ಪ್ರಾಪ್ತಿಯಿಂದ ಯಯಾತಿ ಸ್ವರ್ಗವನ್ನು ಪಡೆದನು (ಆದಿ 86/6). ಯಯಾತಿಯೊಂದಿಗೆ ಈತ ತನಗೆ ಸಿಗಬಹುದಾದ ಪುಣ್ಯಲೋಕಗಳ

ಕುರಿತಾಗಿ ಕೇಳಿದುದು; ಅದಕ್ಕೆ ಯಯಾತಿ ಉತ್ತರಿಸಿದುದು. ಈತ ಯಯಾತಿಗೆ ತನ್ನ ಪುಣ್ಯ ಲೋಕಗಳನ್ನು ನೀಡಿದುದು. ಆತ ಅಸ್ವೀಕಾರ ಮಾಡಿದುದು (ಆದಿ 93/6–9). ಅಷ್ಟಕನೇ ಮೊದಲಾದ ರಾಜರ್ಷಿಗಳೊಂದಿಗೆ ಇವನು ಸ್ವರ್ಗಕ್ಕೆ ಹೋದುದು (ಆದಿ 93/16). ಸ್ವರ್ಗದ ಮಾರ್ಗದಲ್ಲಿ ಅಷ್ಟಕನು ಕೇಳಿದಾಗ, ಯಯಾತಿ ಯಿಂದ ಇವನ ಶ್ರೇಷ್ಠತ್ವ ಮತ್ತು ಈತನ ದಾನದ ಮಹಿಮೆಯ ವರ್ಣನೆ (ಆದಿ 93/18–19). ಈತ ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10). ಸುಹೋತ್ರನು ಈತನ ಮಾರ್ಗವನ್ನು ತಡೆದಾಗ ನಾರದನಿಂದ ಈತನ ಶ್ರೇಷ್ಠತ್ವದ ವರ್ಣನೆ (ವನ 194/5). ಇವನ ಶ್ರೇಷ್ಠತ್ವದ ಪರೀಕ್ಷೆಗೆ ದೇವತೆಗಳ ಮಂತ್ರಾಲೋಚನೆ (ವನ 197/1). ಇವನ ಶರಣಾಗತ ರಕ್ಷಣೆಯ ಕುರಿತಾಗಿ ಗೃಧ್ರರೂಪ ಧರಿಸಿದ ಇಂದ್ರನಿಂದ ವರ್ಣನೆ (ವನ 197/11–19). ಇವನು ತನ್ನ ಶರೀರದ ಮಾಂಸವನ್ನು ಕಡಿದು, ಹದ್ದಿಗಾಗಿ, ತ್ರಾಸಿನ ತಟ್ಟೆಯಲ್ಲಿರಿಸಿ ದುದು; ಆದರೆ ಸಾಕಷ್ಟು ಆಗದಿರುವಾಗ ತಾನೇ ಅದರ ಮೇಲೆ ಏರಿದುದು (ವನ 197/21–23). ಕಪೋತರೂಪಧರಿಸಿದ ಅಗ್ನಿಯಿಂದ ಇವನಿಗೆ ವರಪ್ರದಾನ (ವನ 197/26–28). ದೇವರ್ಷಿ ನಾರದನಿಂದ ಇವನ ಮಹತ್ವದ ಪ್ರತಿಪಾದನೆ; ಬ್ರಾಹ್ಮಣನಿಗೋಸ್ಕರ ಇವನಿಂದ ತನ್ನ ಪುತ್ರ ವಧೆಯ ಕಥೆ (ವನ 198 ಅಧ್ಯಾಯ). ವಿರಾಟ ನಗರದಲ್ಲಿ ಗೋಗ್ರಹಣ ಕಾಲದಲ್ಲಿ, ಕೃಪಾಚಾರ್ಯ ಮತ್ತು ಅರ್ಜುನನ ಯುದ್ಧವನ್ನು ನೋಡುವುದ ಕ್ಕೋಸ್ಕರ, ಇಂದ್ರನೊಂದಿಗೆ ವಿಮಾನದಲ್ಲಿ ಕುಳಿತು ಬಂದಿದ್ದನು (ವಿರಾಟ 56/9–10). ಇವನು ಯಯಾತಿಯ ಪುತ್ರಿ ಮಾಧವಿಯ ಗರ್ಭದಿಂದ ಉಶೀನರ ರಾಜನ ಮೂಲಕ ಜನ್ಮವೆತ್ತಿದನು (ಉದ್ಯೋಗ 118/1–20). ಇವನು ಯಯಾತಿಗೆ ತನ್ನ ಪುಣ್ಯಫಲವನ್ನಿತ್ತದ್ದು (ಉದ್ಯೋಗ 122/8–11). ಇವನಿಗೆ ಭಾರತವರ್ಷವು ಅತ್ಯಂತ ಪ್ರಿಯ ವಾದುದು (ಭೀಷ್ಮ 9/7–9). ಸೃಂಜಯನನ್ನು ಸಮಾಧಾನಗೊಳಿಸುತ್ತಿದ್ದ ಸಮಯದಲ್ಲಿ ನಾರದ ನಿಂದ ಇವನ ಯಜ್ಞ ಮತ್ತು ದಾನದ ವರ್ಣನೆ (ದ್ರೋಣ 58 ಅಧ್ಯಾಯ). ನಾರದ–ಸೃಂಜಯ ಸಂವಾದವನ್ನು ಉಲ್ಲೇಖಿಸಿ, ಶ್ರೀಕೃಷ್ಣನು ಇವನ ದಾನ ಯಜ್ಞವನ್ನು ವರ್ಣಿಸಿದುದು (ಶಾಂತಿ 29/39–44). ಯದುವಂಶದವರಿಂದ ಇವನಿಗೆ ಖಡ್ಗ ಪ್ರಾಪ್ತಿ (ಶಾಂತಿ 166/80). ಬ್ರಾಹ್ಮಣನಿಗಾಗಿ ಈತ ತನ್ನ ಔರಸ ಪುತ್ರನನ್ನು ದಾನಮಾಡಿದುದು. ಅದರಿಂದಾಗಿ ಇವನಿಗೆ ಸ್ವರ್ಗಪ್ರಾಪ್ತಿ (ಶಾಂತಿ 234/19; ಅನು 137/4). ಅಗಸ್ತ್ಯರ ಕಮಲಗಳು ಕದಿಯಲ್ಪಟ್ಟಾಗ ಈತ ಶಪಥ ಮಾಡಿದುದು (ಅನು 94/26). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/61).

(3) ಒಂದು ದೇಶ ಮತ್ತು ಅಲ್ಲಿ ವಾಸಿಸುವ ಜನರು. ಮಹಾರಾಜ ಶಾಂತನುವಿನ ತಾಯಿ ಸುನಂದಾ ಈ ದೇಶದ ರಾಜಕುಮಾರಿಯಾಗಿದ್ದಳು (ಆದಿ 95/44). ಯುಧಿಷ್ಠಿರನ ಮಾವ ಗೋವಾಸನ ಈ ದೇಶದ ರಾಜನಾಗಿದ್ದನು (ಆದಿ 95/76). ಪಶ್ಚಿಮ ದಿಗ್ವಿಜಯ ಕಾಲದಲ್ಲಿ ಈ ದೇಶವನ್ನು ನಕುಲನು ಗೆದ್ದಿದ್ದನು (ಸಭಾ 32/7). ಈ ದೇಶದ ನಿವಾಸಿಗಳು ರಾಜಾ ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 52/14). ಈ ದೇಶದ ರಾಜ ಉಶೀನರನಾಗಿದ್ದನು (ವನ 131/21). ಈ ದೇಶ ಒಂದು ಕಾಲದಲ್ಲಿ ಜಯ ದ್ರಥನ ಅಧೀನದಲ್ಲಿತ್ತು (ವನ 267/11). ಅರ್ಜುನನು ಜಯದ್ರಥನೊಂದಿಗೆ ಬಂದ ಶಿಬಿ ದೇಶದ ಸೈನಿಕರನ್ನು ಸಂಹರಿಸಿದನು (ವನ 271/78). ಈ ದೇಶದ ಮಹಾರಥಿಗಳು ತಮ್ಮ ಸೇನೆಯೊಂದಿಗೆ ದುರ್ಯೋಧನನ ಸಹಾಯಕ್ಕೆ ನಿಂತಿದ್ದರು (ಉದ್ಯೋಗ 195/7–8). ಶಿಬಿ ದೇಶವನ್ನು ಒಮ್ಮೆ ಕರ್ಣನು ಜಯಿಸಿದ್ದನು (ದ್ರೋಣ 91/38–40). ಈ ದೇಶದ ಜನರು ಹಿಂದೆ ಕಡಿಮೆ ಬುದ್ಧಿಯವರಾಗಿದ್ದರು (ಕರ್ಣ 45/34–35).

(4) ಉಶೀನರ ದೇಶ ಅಥವಾ ಕುಲದಲ್ಲಿ ಹುಟ್ಟಿದ ಒಬ್ಬ ರಾಜ. ಈತ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/16). ಇವನು ಪಾಂಡವಪಕ್ಷದ ಒಬ್ಬ ಯೋಧನಾಗಿದ್ದನು; ಈತ ದ್ರೋಣಾಚಾರ್ಯನೊಂದಿಗೆ ಯುದ್ಧ ಮಾಡಿದ್ದನು (ದ್ರೋಣ 8/25). ದ್ರೋಣಾ ಚಾರ್ಯನಿಂದ ಈತನ ವಧೆ (ದ್ರೋಣ 155/19).

(5) ಭೂತಪೂರ್ವ ಐವರು ಇಂದ್ರರಲ್ಲಿ ಒಬ್ಬ. ಈತ ಪರ್ವತದ ಗುಹೆಯಲ್ಲಿ ಬಂಧಿಸಲ್ಪಟ್ಟಿದ್ದನು. ಇವರೆಲ್ಲರೂ ಮಾನವಲೋಕದಲ್ಲಿ ಜನ್ಮವೆತ್ತುವಂತೆ ಭಗವಾನ್ ಶಿವನ ಆದೇಶ (ಆದಿ 196/19–30).

**ಶಿರೀಷಕ** – ಕಶ್ಯಪವಂಶದ ಒಬ್ಬ ನಾಗ (ಉದ್ಯೋಗ 103/14).

**ಶಿರೀಷೀ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/54).

**ಶಿಲೀ** – ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪಯಜ್ಞದಲ್ಲಿ ಸುಟ್ಟು ಹೋದನು (ಆದಿ 57/9).

**ಶಿವ** – (1) ಸಚ್ಚಿದಾನಂದ ಸ್ವರೂಪನಾದ ಪರಮಾತ್ಮ. ಈತ ಈಶಾನನೆಂದು ಹೇಳಲ್ಪಟ್ಟಿದ್ದಾನೆ. ಇವನೇ ತ್ರಿಮೂರ್ತಿ ಬ್ರಹ್ಮಾ, ವಿಷ್ಣು ಮತ್ತು ಶಿವ ಆಗಿದ್ದಾನೆ (ಆದಿ 1/22). ಬ್ರಾಹ್ಮಕಲ್ಪದ ಆದಿಯಲ್ಲಿ ಪ್ರಕಟವಾದ ಮಹಾದಿವ್ಯ ಅಂಡದಲ್ಲಿ ಸತ್ಯಸ್ವರೂಪ, ಜ್ಯೋತಿರ್ಮಯ ಸನಾತನ ಬ್ರಹ್ಮ ಅಂತರ್ಯಾಮಿ ರೂಪದಿಂದ ಪ್ರವೇಶ ಮಾಡಿದ್ದನು. ಅದರಿಂದ ಬ್ರಹ್ಮಾ ಮತ್ತು ಸ್ಥಾಣು ಎಂಬ ಹೆಸರಿನ ಶಿವನ ಪ್ರಾದುರ್ಭಾವವೂ ಆಯಿತು (ಆದಿ 1/30–32). ಇವನು ಬ್ರಹ್ಮನ ಪ್ರಾರ್ಥನೆಯ ಪ್ರಕಾರ ಮೂರುಲೋಕದ ರಕ್ಷಣೆಗಾಗಿ ಕಾಲಕೂಟವೆಂಬ ವಿಷವನ್ನು ಕಂಠದಲ್ಲಿ ಧರಿಸಿಕೊಂಡನು. ಅಂದಿನಿಂದಲೇ ಕಂಠದಲ್ಲಿ ನೀಲಚಿಹ್ನೆಯಾದ ಕಾರಣ 'ನೀಲಕಂಠ'ನೆಂದು ಕರೆಯಲ್ಪಡತೊಡಗಿದನು (ಆದಿ 18/ 41–43). ಸ್ಥಾಣುವೆಂಬ ಹೆಸರಿನಿಂದ ಈತನೇ ಪರಮತೇಜಸ್ವಿಗಳಾದ ಏಕಾದಶ ರುದ್ರರ ತಂದೆಯಾಗಿದ್ದಾನೆ (ಆದಿ 66/1). ಅಶ್ವತ್ಥಾಮಾ ಈತನ ಅಂಶದಿಂದ ಹುಟ್ಟಿದ್ದನು (ಆದಿ 67/72–73). ಇವನು ಗಾಂಧಾರಿಗೆ ನೂರು ಪುತ್ರರಾಗುವಂತೆ ವರವನ್ನಿತ್ತಿದ್ದನು (ಆದಿ 109/10). ಇವನು ಒಬ್ಬ ತಪಸ್ವಿನಿ ಋಷಿಕನ್ಯೆಗೆ ಐದು ಮಂದಿ ಪತಿಗಳಾಗುವಂತೆ ವರವನ್ನಿತ್ತನು. ಆಕೆ ಮರುಜನ್ಮದಲ್ಲಿ ದ್ರೌಪದಿಯಾಗಿದ್ದಳು (ಆದಿ 168/6–15). ಇವನಿಂದ ಐದು ಮಂದಿ ಇಂದ್ರರಿಗೆ ಹಿಮಾಲಯದ ಗುಹೆಯಲ್ಲಿ ಬಂಧನ ಮತ್ತು ಅವರಿಗೆ ಮನುಷ್ಯಲೋಕದಲ್ಲಿ ಪಾಂಡವರ ರೂಪದಲ್ಲಿ ಜನ್ಮವೆತ್ತಲು ಆದೇಶ (ಆದಿ 196/16–30). ತಿಲೋತ್ತಮೆಯ ರೂಪವನ್ನು ನೋಡಲು ಈತನು ಚತುರ್ಮುಖನಾದುದು (ಆದಿ 210/22–28). ಇವನಿಂದ ಪ್ರಭಂಜನನಿಗೆ ಅವನ ಕುಲದಲ್ಲಿ ಒಂದೊಂದು ಸಂತಾನವಾಗುವಂತೆ ವರದಾನ (ಆದಿ 214/20–21). ಹನ್ನೆರಡು ವರ್ಷಗಳವರೆಗೆ ಅಗ್ನಿಯಲ್ಲಿ ನಿರಂತರ ಆಹುತಿಕೊಡಲು ಇವನಿಂದ ಶ್ವೇತಕಿಗೆ ಆದೇಶ (ಆದಿ 222/41–48). ಬ್ರಾಹ್ಮಣರಿಂದ ಯಜ್ಞ ಮಾಡಿಸುವುದಕ್ಕಾಗಿ ಸಾಮಗ್ರಿಗಳನ್ನು ಸಂಗ್ರಹಿಸುವಂತೆ ಶ್ವೇತಕಿಗೆ ಈತನ ಆಜ್ಞೆ (ಆದಿ 222/51–53). ಅವನ ಯಜ್ಞವನ್ನು ಪೂರ್ತಿಗೊಳಿಸಲು ದುರ್ವಾಸನಿಗೆ ಈತನ ಆದೇಶ (ಆದಿ 222/ 57–58). ಒಂದು ಸಾವಿರ ಯುಗ ಕಳೆದಾಗ ಬಿಂದು ಸರೋವರದಲ್ಲಿ ಶಿವನೇ ಮೊದಲಾದವರು ಯಜ್ಞಮಾಡುತ್ತಾರೆ (ಸಭಾ 3/15). ಇವನು ಪಾರ್ವತೀದೇವಿ ಮತ್ತು ತನ್ನ ಗಣಗಳೊಂದಿಗೆ ಕುಬೇರನ ಸಭೆಯಲ್ಲಿ ವಿರಾಜಮಾನನಾಗಿರುತ್ತಾನೆ (ಸಭಾ 10/21–24). ಜರಾಸಂಧನು ಉಗ್ರತಪಸ್ಸು ಮಾಡಿ, ಇವನನ್ನು ಆರಾಧಿಸಿ, ಒಂದು ವಿಶೇಷ ಪ್ರಕಾರದ ಶಕ್ತಿಯನ್ನು ಪಡಕೊಂಡಿದ್ದನು. ಎಲ್ಲ ರಾಜರೂ ಅದರಿಂದಾಗಿ ಪರಾಜಯ ಹೊಂದಿದ್ದರು (ಸಭಾ 14/64–65). ಬಾಣಾಸುರನಿಗೆ ಇವನ ವರದಾನ. ಇವನಿಂದ ಬಾಣಾಸುರನ ರಾಜಧಾನಿಯ ರಕ್ಷಣೆ ಮತ್ತು ಬಾಣಾಸುರನ ರಕ್ಷಣೆಗೋಸ್ಕರ ಇವನು ಶ್ರೀಕೃಷ್ಣನೊಂದಿಗೆ ಭಯಾನಕ ಯುದ್ಧ ಮಾಡಿದುದು (ಸಭಾ 38/ 29). ಇವನು ಭಗವಾನ್ ಶ್ರೀಹರಿಯ ಲಲಾಟದಿಂದ ಪ್ರಕಟಗೊಂಡಿದ್ದನು (ವನ 12/40). ಅರ್ಜುನನ ಉಗ್ರತಪಸ್ಸಿನ ಕುರಿತಾಗಿ ಮಹರ್ಷಿಗಳಿಂದ ಪಿನಾಕಪಾಣಿ ಮಹಾದೇವನೊಂದಿಗೆ ವಾರ್ತಾಲಾಪ ಮತ್ತು ಇವನು ಅವರಿಗೆ ಆಶ್ವಾಸನೆ ನೀಡಿ ವಿದಾಯಹೇಳಿದುದು (ವನ 38/28–35). ಇವನು ಕಿರಾತವೇಷ ಧರಿಸಿ, ಧನುಸ್ಸು ಬಾಣಗಳನ್ನು ತೆಗೆದುಕೊಂಡು, ನಾನಾ ವೇಷಧಾರಿ ಭೂತಗಳು, ಸಹಸ್ರಾರು ಸ್ತ್ರೀಯರು ಮತ್ತು ಭಗವತಿ ಉಮೆಯೊಂದಿಗೆ ಕಾಡಿನಲ್ಲಿ ಅರ್ಜುನನ ಬಳಿಗೆ ಹೋದುದು ಮತ್ತು ಅವನನ್ನು ಕೊಲ್ಲಲು ಹೊಂಚುಹಾಕುತ್ತಿದ್ದ ಮೂಕನೆಂಬ ಹಂದಿಯ ರೂಪಧಾರಿ ದಾನವ

ನಿಗೆ ಅರ್ಜುನನ ಜೊತೆಯಲ್ಲಿಯೇ ಬಾಣ ಹೊಡೆದುದು. ಅನಂತರ ಅರ್ಜುನನೊಂದಿಗೆ ಇವನ ವಿವಾದ ಮತ್ತು ಯುದ್ಧ. ಅರ್ಜುನನ ಬಾಣಗಳು ಇವನ ಮೇಲೆ ವಿಫಲವಾದುದು. ಈತನೊಂದಿಗೆ ಆತನ ಮಲ್ಲಯುದ್ಧ. ಪರಾಜಿತ ನಾದ ಅರ್ಜುನನು, ಭಗವಾನ್ ಶಿವನಿಗೆ ಶರಣಾಗಿ, ಇವನ ಪಾರ್ಥಿವ ಮೂರ್ತಿಗೆ ಪೂಜೆ ಮಾಡಿದುದು; ತಾನು ಅರ್ಪಿಸಿದ ಮಾಲೆಯು ಕಿರಾತನ ತಲೆಯಲ್ಲಿರುವುದನ್ನು ನೋಡಿ, ಈತ ನನ್ನು ಗುರುತಿಸಿ ಅರ್ಜುನನು, ಇವನ ಚರಣಗಳಲ್ಲಿ ಬಿದ್ದುದು. ಭಗವಾನ್ ಶಿವನು ಸಂತುಷ್ಟನಾಗಿ, ಆತನಿಗೆ ಪಾಶುಪತಾಸ್ತ್ರ ಕೊಡಲು ಹೇಳಿದುದು ಅರ್ಜುನನಿಂದ ಇವನ ಸ್ತುತಿ. ಇವನು ಅರ್ಜುನನನ್ನು ಅಪ್ಪಿಕೊಂಡದ್ದು; ಅವನಿಗೆ ವರವನ್ನಿತ್ತು, ಪಾಶುಪತಾಸ್ತ್ರದ ಧಾರಣೆ ಮತ್ತು ಪ್ರಯೋಗದ ನಿಯಮವನ್ನು ಹೇಳುತ್ತಾ, ಆತನಿಗೆ ಆ ಅಸ್ತ್ರದ ಉಪದೇಶ ನೀಡಿದುದು. ಆ ಪ್ರಜ್ವಲಿತ ವಾದ ಅಸ್ತ್ರ ಅರ್ಜುನನ ಪಾರ್ಶ್ವ ಭಾಗದಲ್ಲಿರು ವಂತೆ ಕಾಣಿಸಿದುದು. ಇವನ ಸ್ಪರ್ಶದಿಂದ ಅರ್ಜುನನಿಗಾದ ಅಶುಭವೆಲ್ಲ ನಷ್ಟವಾದುದು; ಅರ್ಜುನನಿಗೆ ಸ್ವರ್ಗಕ್ಕೆ ಹೋಗಲು ಆಜ್ಞೆಯನ್ನಿತ್ತು; ಅವನಿಗೆ ಗಾಂಡೀವ ಮೊದಲಾದುವನ್ನು ಹಿಂತಿ ರುಗಿಸಿ, ಉಮಾ ಸಹಿತನಾಗಿ ಭಗವಾನ್ ಶಿವನು ಆಕಾಶಮಾರ್ಗದಿಂದ ಹೊರಟುಹೋದುದು (ವನ ಅಧ್ಯಾಯ 39 ರಿಂದ 40 ವರೆಗೆ). ಮಂಕಣಕ ಮುನಿಯ ನೃತ್ಯ ತಡೆಯಲು ಇವನು ತನ್ನ ಬೆರಳಿನಿಂದ ಭಸ್ಮ ಸೃಷ್ಟಿಸಿದುದು (ವನ 83/117–125). ಇವನಿಂದ ಮಂಕಣಕನಿಗೆ ವರ ಪ್ರದಾನ (ವನ 83/132–134). ಇವನಿಂದ ರಾಜಾ ಸಗರನಿಗೆ ಸಂತಾನಪ್ರಾಪ್ತಿಗಾಗಿ ವರದಾನ (ವನ 106/15–16). ಇವನು ರಾಜಾ ಭಗೀ ರಥನಿಗೆ ವರವನ್ನಿತ್ತದ್ದು (ವನ 109/1–2). ಗಂಗೆಯನ್ನು ಶಿರದಲ್ಲಿ ಧರಿಸಿದುದು (ವನ 109 /9). ಇವನ ವೀರ್ಯದಿಂದ ಮಿಂಚಿಕಾ ಮಿಂಚಿಕ ವೆಂಬ ಜೋಡಿಯ ಉತ್ಪತ್ತಿ (ವನ 231/10). ಇವನ ಭದ್ರವಟಯಾತ್ರೆ (ವನ 231/38–54). ದೇವಾಸುರ ಸಂಗ್ರಾಮದಲ್ಲಿ ಮಹಿಷಾಸುರನ ವಧೆಗೋಸ್ಕರ ಇವನು ಸ್ಕಂಧನನ್ನು ಸ್ಮರಿಸಿದುದು (ವನ 231/90). ಇವನಿಂದ ಜಯದ್ರಥನಿಗೆ ವರದಾನ (ವನ 272/28). ಇವನಿಂದ ನರನ ಸಖ ನಾರಾಯಣನ ಮಹಿಮೆಯ ವರ್ಣನೆ (ವನ 272/31–77). ಇವನು ಭೀಷ್ಮನ ವಧೆ ಗಾಗಿ ಅಂಬೆಗೆ ವರವನ್ನಿತ್ತದ್ದು (ಉದ್ಯೋಗ 187/12–15). ಇವನು ದ್ರುಪದನಿಗೆ ಒಬ್ಬ ಕನ್ಯೆ ಹುಟ್ಟುವಳೆಂದು ವರವನ್ನಿತ್ತದ್ದು (ಉದ್ಯೋಗ 188/4–5). ಭಗವಾನ್ ಶಿವನು ಮೇರುಪರ್ವತದ ಮೇಲೆ ಉಮೆಯೊಂದಿಗೆ ವಾಸಿಸುತ್ತಾನೆ. ಇವನು ಒಂದು ಲಕ್ಷ ವರ್ಷಗಳ ವರೆಗೆ ಗಂಗೆಯನ್ನು ತನ್ನ ತಲೆಯ ಮೇಲೆಯೇ ಧರಿಸಿಕೊಂಡಿದ್ದನು (ಭೀಷ್ಮ 6/25–31). ಶಾಕದ್ವೀಪದಲ್ಲಿ ಇವನ ಆರಾಧನೆ ನಡೆಸಲ್ಪಡುತ್ತದೆ (ಭೀಷ್ಮ 11/28). ಕೋಪಗೊಂಡ ಬ್ರಹ್ಮನನ್ನು ಶಾಂತಗೊಳಿಸಲು ಇವನ ಪ್ರಾರ್ಥನೆ ಮತ್ತು ಇವರಿಬ್ಬರ ಪರಸ್ಪರ ಮಾತುಕತೆ (ದ್ರೋಣ 53/1–14). ಪುಣ್ಯಜನರು ಪೃಥ್ವಿಯನ್ನು ಕರೆಯುವಾಗ, ಇವನು ಕರು ವಾಗಿದ್ದನು (ದ್ರೋಣ 69/24). ಇವನು ನರ ನಾರಾಯಣ ಸ್ವರೂಪರಾದ ಶ್ರೀಕೃಷ್ಣ ಮತ್ತು ಅರ್ಜುನನನ್ನು ಸ್ವಾಗತಿಸಿದುದು ಮತ್ತು ಅವರಿಗೆ ಅಭೀಷ್ಟ ವರಕೊಡಲು ಹೇಳಿದುದು (ಅರ್ಜುನನ ಸ್ವಪ್ನ) (ದ್ರೋಣ 80/51–52). ಅರ್ಜುನನಿಗೆ ಪಾಶುಪತಾಸ್ತ್ರ ದಾನ (ಅರ್ಜುನನ ಸ್ವಪ್ನ) (ದ್ರೋಣ 81/21–22). ಬ್ರಹ್ಮಸಹಿತರಾದ ದೇವತೆ ಗಳ ಪ್ರಾರ್ಥನೆಯಿಂದ ಪ್ರಸನ್ನನಾಗಿ ಇಂದ್ರನಿಗೆ ಕವಚಪ್ರದಾನ ಮಾಡಿದುದು (ದ್ರೋಣ 94/61–63). ಸೋಮದತ್ತನಿಗೆ ಪುತ್ರನಾಗುವಂತೆ ವರವ ನ್ನಿತ್ತದ್ದು ಮತ್ತು ತಾನು ಶ್ರೀಕೃಷ್ಣನಿಗಿಂತ ಭಿನ್ನನು ಎಂದು ಹೇಳಿದುದು (ದ್ರೋಣ 144/16–18). ನಾರಾಯಣನಿಂದ ಶಿವನ ಆರಾಧನೆ, ಸ್ತುತಿ ಮತ್ತು ಇವನಿಂದ ವರಪ್ರಾಪ್ತಿಯ ಕಥೆ (ದ್ರೋಣ 201/56–96). ವ್ಯಾಸರು ಅರ್ಜುನನಿಗೆ ಭಗವಾನ್ ಶಿವನ ಮಹಿಮೆ ಹೇಳಿದುದು ಮತ್ತು ತ್ರಿಪುರ ವಧೆಯ ಕಾಲದಲ್ಲಿ ಈತನ ರಥ ಇತ್ಯಾದಿ ಸಾಮಗ್ರಿಗಳನ್ನು ಉಲ್ಲೇಖಿಸಿದುದು (ದ್ರೋಣ 202 ಅಧ್ಯಾಯ). ತ್ರಿಪುರರಿಂದ ಭಯಭೀತರಾದ ದೇವತೆಗಳಿಗೆ ಅಭಯದಾನ (ಕರ್ಣ 33/63). ದೇವತೆಗಳ ಅರ್ಧಶಕ್ತಿಯನ್ನು ಪಡೆದು ತ್ರಿಪುರ ವಧೆಗೆ ಸಿದ್ಧನಾದುದು (ಕರ್ಣ 34/14). ಇವನ ವಿಚಿತ್ರ ರಥ ಇತ್ಯಾದಿಗಳ ವರ್ಣನೆ (ಕರ್ಣ

34/16–57). ಇವನಿಂದ ವೃಷಭನ ಗೊರಸುಗಳು ಸಿಗಿಯಲ್ಪಟ್ಟದ್ದು ಮತ್ತು ಕುದುರೆಗಳ ಸ್ತನವನ್ನು ಕಡಿದುದು (ಕರ್ಣ 34/105). ಇವನಿಂದ ತ್ರಿಪುರರ ವಧೆ (ಕರ್ಣ 34/114). ಪರಶುರಾಮನಿಗೆ ಇವನಿಂದ ವರಪ್ರದಾನ (ಕರ್ಣ 34/146–147). ಕರ್ಣ ಮತ್ತು ಅರ್ಜುನನ ದ್ವೈರಥಯುದ್ಧದಲ್ಲಿ ಇಂದ್ರನು ಪ್ರಶ್ನಿಸಿದಾಗ, ಅರ್ಜುನನಿಗೆ ವಿಜಯವೆಂದು ಹೇಳಿದುದು (ಕರ್ಣ 87/69–85). ಮಂಕಣಕ ಮುನಿಯ ಮೇಲೆ ಕೃಪೆ (ಶಲ್ಯ 38/52–58). ಸ್ಕಂದನಿಗೆ ಪಾರ್ಷದನ ರೂಪದಲ್ಲಿ ಒಬ್ಬ ಮಹಾ ಅಸುರನನ್ನು ನೀಡಿದುದು (ಶಲ್ಯ 45/26). ಸ್ಕಂದನಿಗೆ ಧ್ವಜ ಮತ್ತು ಅಸುರಸೇನೆಯನ್ನು ಕೊಟ್ಟದ್ದು (ಶಲ್ಯ 46/46–48). ಅರುಂಧತಿಯನ್ನು ಪರೀಕ್ಷಿಸಿದುದು ಮತ್ತು ಆಕೆಗೆ ವರವನ್ನಿತ್ತದ್ದು (ಶಲ್ಯ 48/38–54). ರಾತ್ರಿಯಲ್ಲಿ ಆಕ್ರಮಣ ಮಾಡುತ್ತಿದ್ದ ಅಶ್ವತ್ಥಾಮನ ಅಸ್ತ್ರಗಳನ್ನು ನುಂಗುತ್ತಿದ್ದುದು (ಸೌಪ್ತಿಕ 6/11–17). ಅಶ್ವತ್ಥಾಮನ ಆತ್ಮಸಮರ್ಪಣೆಯಿಂದ ಪ್ರಸನ್ನನಾಗಿ, ಅವನ ಶರೀರವನ್ನು ಪ್ರವೇಶಿಸಿದುದು ಮತ್ತು ಅವನಿಗೆ ಒಂದು ಖಡ್ಗ ಪ್ರದಾನ ಮಾಡಿದುದು (ಸೌಪ್ತಿಕ 7/66). ಇವನು ಕುಪಿತನಾಗಿ ತನ್ನ ಲಿಂಗವನ್ನು ಕಡಿದು ಹಾಕಿದುದು (ಸೌಪ್ತಿಕ 17/21). ಇವನ ಕೋಪದಿಂದ ದೇವತೆ, ಯಜ್ಞ ಮತ್ತು ಜಗತ್ತಿನ ದುರವಸ್ಥೆ (ಸೌಪ್ತಿಕ 18/4–19). ಇವನ ಕೃಪೆಯಿಂದ ಎಲ್ಲರೂ ಸ್ವಸ್ಥರಾದುದು (ಸೌಪ್ತಿಕ 18/20–23). ಇವನು ಗಜಾಸುರನ ಚರ್ಮವನ್ನು ವಸ್ತ್ರದಂತೆ ಧರಿಸುತ್ತಾನೆ. ಸರ್ವಸ್ವ ಸಮರ್ಪಣವೆಂಬ ಹೆಸರಿನ ಯಜ್ಞದಲ್ಲಿ ತನ್ನನ್ನೇ ತಾನು ಹೋಮಮಾಡಿ ದೇವತೆಗಳ ದೇವತೆಯೂ ಆಗಿದ್ದಾನೆ (ಶಾಂತಿ 20/12). ಪರಶುರಾಮನು ಇವನಿಂದ ಅನೇಕ ಪ್ರಕಾರದ ಅಸ್ತ್ರ ಮತ್ತು ಅತ್ಯಂತ ತೇಜಸ್ವಿಯಾದ ಕೊಡಲಿಯನ್ನು ಪಡೆದುಕೊಂಡಿದ್ದನು (ಶಾಂತಿ 49/33). ಇವನು ಬ್ರಹ್ಮನ ದಂಡನೀತಿ ಶಾಸ್ತ್ರವನ್ನು ಎಲ್ಲರಿಗಿಂತ ಮೊದಲು, ತಾನೇ ಸ್ವೀಕರಿಸಿ ಸಂಕ್ಷಿಪ್ತಗೊಳಿಸಿದನು. ಇವನಿಂದ ಅದನ್ನು ಇಂದ್ರನು ಸ್ವೀಕರಿಸಿದನು (ಶಾಂತಿ 59/80–82). ಸತ್ತುಹೋದ ಒಬ್ಬ ಬ್ರಾಹ್ಮಣ ಬಾಲಕನಿಗೆ ಮರುಜೀವನ ಮತ್ತು ಹದ್ದು ಹಾಗೂ ನರಿಗೆ ಹಸಿವು ಕಳೆದುಹೋಗುವ ವರವನ್ನಿತ್ತದ್ದು (ಶಾಂತಿ 153/114–115). ಬ್ರಹ್ಮನಿಂದ ಖಡ್ಗಪ್ರಾಪ್ತಿ ಮಾಡಿ ದಾನವರನ್ನು ಸೋಲಿಸಿದುದು (ಶಾಂತಿ 166/54–63). ಅನಂತರ ಭಗವಾನ್ ಶಿವನು ಅದನ್ನು ಭಗವಾನ್ ವಿಷ್ಣುವಿನ ಕೈಗೆ ನೀಡಿದುದು (ಶಾಂತಿ 166/66). ಕುಪಿತನಾದ ಬ್ರಹ್ಮನ ಕೋಪವನ್ನು ಶಾಂತಗೊಳಿಸಿದುದು (ಶಾಂತಿ 257/6–12). ವೃತ್ರಾಸುರನನ್ನು ಕೊಲ್ಲುವಂತೆ ಇಂದ್ರನಿಗೆ ಪ್ರೋತ್ಸಾಹ ಮತ್ತು ತನ್ನ ಅಂಶದಿಂದ ಅವನಲ್ಲಿ ಪ್ರವೇಶ ಮಾಡಿದುದು (ಶಾಂತಿ 281/34–38). ದಕ್ಷಯಜ್ಞದ ಕುರಿತು ಪಾರ್ವತಿಯೊಂದಿಗೆ ಮಾತುಕತೆ. ದಕ್ಷಯಜ್ಞದ ನಾಶ (ಶಾಂತಿ 283/23–44). ಪಾರ್ವತಿಗೆ ಸಮಾಧಾನ ಹೇಳಿದುದು (ಶಾಂತಿ 284/24–28). ತನ್ನ ಶರೀರದಿಂದ ವೀರಭದ್ರನನ್ನು ಪ್ರಕಟಗೊಳಿಸಿದುದು (ಶಾಂತಿ 284/29). ದಕ್ಷನು ಶರಣಾಗತನಾದಾಗ, ಹವನಕುಂಡದಿಂದ ಪ್ರಕಟನಾಗಿ ಅವನ ಮೇಲೆ ಕೃಪೆದೋರಿದುದು (ಶಾಂತಿ 284/58–60). ಸಹ್ರನಾಮದ ಮೂಲಕ ದಕ್ಷನು ಈತನ ಸ್ತುತಿಮಾಡಿದಾಗ, ಅವನಿಗೆ ವರನೀಡಿ ಈತ ಅಂತರ್ಧಾನನಾದುದು (ಶಾಂತಿ 284/182–191). ಉಶನನ ಮೇಲೆ ಈತ ಕೋಪ ಮಾಡಿದುದು ಮತ್ತು ಅವನನ್ನು ಶಿಶ್ನ ದ್ವಾರದಿಂದ ಹೊರಗೆ ಹಾಕಿದ್ದು (ಶಾಂತಿ 289/14–34). ಶುಕ್ರಾಚಾರ್ಯನಿಗೆ ಅಭಯದಾನ ನೀಡಿದುದು (ಶಾಂತಿ 289/36). ಅಸುರ ಭಾವವನ್ನು ನಷ್ಟಗೊಳಿಸಿದುದು (ಶಾಂತಿ 294/16–17). ವ್ಯಾಸನಿಗೆ ಪುತ್ರಪ್ರಾಪ್ತಿಗಾಗಿ ವರವನ್ನಿತ್ತದ್ದು (ಶಾಂತಿ 323/27–29). ವ್ಯಾಸಪುತ್ರ ಶುಕದೇವನಿಗೆ ಉಪನಯನ ಸಂಸ್ಕಾರ ಮಾಡಿದುದು (ಶಾಂತಿ 324/19). ಪುತ್ರಶೋಕದಿಂದ ವ್ಯಾಕುಲನಾದ ವ್ಯಾಸನನ್ನು ಸಮಾಧಾನಪಡಿಸಿದುದು (ಶಾಂತಿ 333/34–38). ನಾರಾಯಣನೊಂದಿಗೆ ಯುದ್ಧ ಮಾಡಿದುದು (ಶಾಂತಿ 342/110–116). ವೈಜಯಂತ ಪರ್ವತದಲ್ಲಿ ಪರಮಪುರುಷನ ಕುರಿತಾಗಿ ಬ್ರಹ್ಮನೊಡನೆ ಈತನ ಪ್ರಶ್ನೆ (ಶಾಂತಿ 350/23–24). ಶಿವನ ಮಹಾತ್ಮೆಯ ವಿಶೇಷ ವರ್ಣನೆ (ಅನು 14ನೇ ಅಧ್ಯಾಯ). ತಂಡಿಮುನಿಗೆ ವರಪ್ರದಾನ ಮಾಡಿದುದು (ಅನು 16/69–71). ಇವನ

ಸಹಸ್ರನಾಮದ ವರ್ಣನೆ (ಅನು 17 ಅಧ್ಯಾಯ). ದಕ್ಷನು ಇವನಿಗೆ ಒಂದು ವೃಷಭವನ್ನು ನೀಡಿದನು. ಅದು ಇವನ ವಾಹನ ಮತ್ತು ಧ್ವಜವಾಯಿತು (ಅನು 77/27–28). ವರುಣ ರೂಪದಿಂದ ಇವನ ಯಜ್ಞದ ವರ್ಣನೆ (ಅನು 85/88–116). ಧರ್ಮಸಂಬಂಧಿಯಾದ ಈತನ ರಹಸ್ಯವರ್ಣನೆ (ಅನು 140/33–38). ಪಾರ್ವತಿಯೊಂದಿಗೆ ಸಂವಾದ (ಅನು 140/42ರಿಂದ ಅನಂತರ ಅನು 145 ಅಧ್ಯಾಯದ ವರೆಗೆ). ಪಾರ್ವತಿಯೊಂದಿಗೆ ಸ್ತ್ರೀಧರ್ಮದ ವರ್ಣನೆ ಮಾಡಲು ಹೇಳಿದುದು (ಅನು 146/2–12). ಇವನಿಂದ ಶ್ರೀಕೃಷ್ಣನ ವಂಶಪರಂಪರೆ ಮತ್ತು ಮಹಾತ್ಮೆಯ ವರ್ಣನೆ (ಅನು 147). ಇವನಿಂದ ದಕ್ಷಯಜ್ಞ ವಿಧ್ವಂಸ (ಅನು 160/11–24). ಈತ ತ್ರಿಪುರರನ್ನು ದಗ್ಧಗೊಳಿಸಿದುದು (ಅನು 160/25–31). ಐದು ಶಿಖೆಯುಳ್ಳ ಬಾಲಕನ ರೂಪ ಧರಿಸಿ ಈತ ಪಾರ್ವತಿಯ ಮಡಿಲಿಗೆ ಬಂದದ್ದು (ಅನು 160/32). ಈತ ಮುಂಜವಾನ್ ಎಂಬ ಪರ್ವತದ ಮೇಲೆ ಸದಾ ತಪಸ್ಸು ಮಾಡುತ್ತಾನೆ (ಆಶ್ವ 8/1). ಇವನ ಹೆಸರುಗಳಿಂದ ತುಂಬಿದ ಸ್ತುತಿ (ಆಶ್ವ 8/12–23). ಮಹಾಭಾರತದಲ್ಲಿ ಬಂದಿರುವ ಶಿವನ ಹೆಸರುಗಳು – ಅಜ, ಅಂಬಿಕಾಭರ್ತಾ, ಅನಂಗಾಂಗಹರ, ಅನಂತ, ಅಂಧಕಘಾತಿ, ಅಂಧಕನಿಪಾತಿ, ಅಥರ್ವಾ, ಬಹುರೂಪ, ಭಗಘ್ನ, ಭವ, ಭವಘ್ನ, ಭೀಮ, ಶಂಕರ, ಶರ್ವ, ಶಿತಿಕಂಠ, ಶ್ಮಶಾನವಾಸಿ, ಶ್ರೀಕಂಠ, ಶುಕ್ರ, ಶೂಲಭೃತ್, ಶೂಲಧರ, ಶೂಲಧೃಕ್, ಶೂಲಹಸ್ತ, ಶೂಲಾಂಕ, ಶೂಲಪಾಣಿ, ಶೂಲೀ, ದಕ್ಷಕ್ರತುಹರ, ಧನ್ವೀ, ಧ್ರುವ, ಧೂರ್ಜಟಿ, ದಿಗ್ವಾಸಾ, ದಿವ್ಯಗೋವೃಷಭಧ್ವಜ, ಏಕಾಕ್ಷ, ಗಣಾಧ್ಯಕ್ಷ, ಗಣೇಶ, ಗೌರೀಶ, ಗೌರೀಹೃದಯವಲ್ಲಭ, ಗಿರೀಶ, ಗಿರಿಶ, ಗೋವೃಷಾಂಕ, ಗೋವೃಷಧ್ವಜ, ಗೋವೃಷೋತ್ತಮವಾಹನ, ಹರ, ಹರ್ಯಕ್ಷ, ಜಟಾಧರ, ಜಟಿಲ, ಜಟೀ, ಕಾಮಾಂಗನಾಶ, ಕಪಾಲೀ, ಕಾಪಾಲಿ, ಕಪರ್ದೀ, ಖಟ್ವಾಂಗಧಾರೀ, ಕೃತ್ತಿವಾಸಾ, ಕುಮಾರಪಿತಾ, ಲಲಾಟಾಕ್ಷ, ಲೇಲಿಹಾನ, ಮಹಾದೇವ, ಮಹಾಗಣಪತಿ, ಮಹಾಯೋಗಿ, ಮಹೇಶ, ಮಹೇಶ್ವರ, ಮಹಿಷಘ್ನ, ಮಖಘ್ನ, ಮೀಢ್ವಾ, ಮೃಗವ್ಯಾಧ, ಮುನೀಂದ್ರ, ನಂದೀಶ್ವರ, ನಿಶಾಚರಪತಿ, ನೀಲಗ್ರೀವ, ನೀಲಕಂಠ, ನೀಲಲೋಹಿತ, ಪಶುಭರ್ತಾ, ಪಶುಪತಿ, ಪಿನಾಕಧೃಕ್, ಪಿನಾಕಗೋಪ್ತಾ, ಪಿನಾಕಹಸ್ತ, ಪಿನಾಕಪಾಣಿ, ಪಿನಾಕೀ, ಪಿಂಗಲ, ಪ್ರಜಾಪತಿಮಖಘ್ನ, ರುದ್ರ, ಋಷಭಕೇತು, ಸರ್ವ, ಸರ್ವಯೋಗೇಶ್ವರೇಶ್ವರ, ಸ್ಥಾಣು, ತ್ರಿಶೂಲಹಸ್ತ, ತ್ರಿಶೂಲಪಾಣಿ, ತ್ರಿಲೋಚನ, ತ್ರಿನಯನ, ತ್ರಿನೇತ್ರ, ತ್ರಿಪುರಘಾತಿ, ತ್ರಿಪುರಘ್ನ, ತ್ರಿಪುರಹರ್ತಾ, ತ್ರಿಪುರಮರ್ದನ, ತ್ರಿಪುರನಾಶನ, ತ್ರಿಪುರಾಂತಕ, ತ್ರಿಪುರಾಂತಕರ, ತ್ರಿಪುರಾರ್ದನ, ತ್ರಿಪುರವಿಘ್ನ, ತ್ರ್ಯಕ್ಷ, ತ್ರ್ಯಂಬಕ, ಉಗ್ರ, ಉಗ್ರೇಶ, ಉಮಾಪತಿ, ವಿಶಾಲಾಕ್ಷ, ವಿಲೋಹಿತ, ವಿರೂಪಾಕ್ಷ, ವೃಷಭಧ್ವಜ, ವೃಷಭಾಂಕ, ವೃಷಭವಾಹನ, ವೃಷಧ್ವಜ, ವೃಷಕೇತನ, ವೃಷಾಂಕ, ವೃಷವಾಹನ, ಯಾಮ್ಯ, ಯತಿ, ಯೋಗೇಶ್ವರ ಇತ್ಯಾದಿ.

(2) ಒಬ್ಬ ಅಗ್ನಿ. ಇವನು ಶಕ್ತಿಯ ಆರಾಧನೆಯಲ್ಲಿ ಮಗ್ನನಾಗಿರುತ್ತಾನೆ. ಇವನು ಸಮಸ್ತ ದುಃಖಿ ಮನುಷ್ಯರ ಶಿವ (ಕಲ್ಯಾಣ) ಮಾಡುತ್ತಾನೆ. ಆದುದರಿಂದಲೇ ಇವನನ್ನು ಶಿವನೆನ್ನುತ್ತಾರೆ (ವನ 221/2).

**ಶಿವಾ** – (1) ಅನಿಲನೆಂಬ ವಸುವಿನ ಹೆಂಡತಿ. ಇವಳಿಗೆ ಇಬ್ಬರು ಪುತ್ರರಿದ್ದರು – ಮನೋಜವ ಮತ್ತು ಅವಿಜ್ಞಾತಗತಿ (ಆದಿ 66/25).

(2) ಅಂಗೀರಸನ ಪತ್ನಿ. ಈಕೆ ಶೀಲ, ರೂಪ, ಸದ್ಗುಣಗಳಿಂದ ಸಂಪನ್ನಳಾಗಿದ್ದಳು (ವನ 225/1).

(3) ಭಾರತವರ್ಷದ ಒಂದು ನದಿ. ಇಲ್ಲಿರುವ ಜನರು ಅದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/25).

**ಶಿವೋದ್ಭೇದ** – ಒಂದು ತೀರ್ಥ. ಇಲ್ಲಿ ಸರಸ್ವತೀ ದರ್ಶನವಾಗುತ್ತದೆ. ಇಲ್ಲಿ ಸ್ನಾನಮಾಡಿದ ಮನುಷ್ಯ ಸಾವಿರ ಗೋದಾನದ ಫಲಪಡೆಯುತ್ತಾನೆ (ವನ 82/112–113).

**ಶಿಶಿರ** – ಸೋಮನೆಂಬ ವಸುವಿನಿಂದ ಮನೋಹರೆಯ ಗರ್ಭದಲ್ಲಿ ಹುಟ್ಟಿದ ನಾಲ್ಕು ಪುತ್ರರಲ್ಲಿ ಒಬ್ಬ. ಉಳಿದ ಮೂವರ ಹೆಸರು– ವರ್ಚಾ, ಪ್ರಾಣ ಮತ್ತು ರಮಣ (ಆದಿ 66/22).

**ಶಿಶು** – ಭಗವಾನ್ ಸ್ಕಂದನ ಕೃಪೆಯಿಂದ

ಸಪ್ತಮಾತೃಕೆಯರ ಪುತ್ರ. ಈತ ಅದ್ಭುತ ಪರಾಕ್ರಮಿ, ಅತ್ಯಂತ ದಾರುಣ ಹಾಗೂ ಭಯಂಕರನಾಗಿದ್ದನು. ಇವನ ಕಣ್ಣುಗಳು ರಕ್ತವರ್ಣದವುಗಳಾಗಿದ್ದವು. ಮಾತೃಕೆಯರ ಸಮೇತವಾಗಿ ಇವನನ್ನು 'ವೀರಾಷ್ಟಕ'ವೆಂದು ಹೇಳಲಾಗಿದೆ (ವನ 228/11–12).

**ಶಿಶುಪಾಲ** – ಚೇದಿದೇಶದ ಒಬ್ಬ ಪ್ರಸಿದ್ಧ ರಾಜ. ಇವನ ರೂಪದಲ್ಲಿ ಹಿರಣ್ಯಕಶಿಪುವೆಂಬ ದೈತ್ಯನೇ ಈ ಭೂಮಿಯಲ್ಲಿ ಜನ್ಮವೆತ್ತಿದ್ದನು (ಆದಿ 67/5). ದ್ರೌಪದೀ ಸ್ವಯಂವರಕ್ಕೆ ಇವನ ಆಗಮನ (ಆದಿ 185/23). ಇವನು ದಮಘೋಷನ ಪುತ್ರನಾಗಿದ್ದನು. ದ್ರೌಪದೀ ಸ್ವಯಂವರದಲ್ಲಿ ಧನುಸ್ಸಿನ ಮೇಲೆ ಕೈ ಹಾಕುತ್ತಲೇ, ಇವನು ಮೊಣಕಾಲೂರಿ ಭೂಮಿಯ ಮೇಲೆ ಬಿದ್ದಿದ್ದನು (ಆದಿ 186/25). ಇವನು ಕಲಿಂಗರಾಜನ ಮಗಳ ಸ್ವಯಂವರಕ್ಕೆ ಹೋಗಿದ್ದನು (ಶಾಂತಿ 4/6). ಯುಧಿಷ್ಠಿರನ ಮಯನಿರ್ಮಿತ ಸಭಾಭವನದಲ್ಲಿ ಇವನು ಕುಳ್ಳಿರುತ್ತಿದ್ದನು (ಸಭಾ 4/29). ಇವನು ಜರಾಸಂಧನನ್ನು ಆಶ್ರಯಿಸಿ, ಅವನ ಪ್ರಧಾನ ಸೇನಾಪತಿಯಾಗಿದ್ದನು (ಸಭಾ 14/10–11). ಭೀಮಸೇನನು ತನ್ನ ದಿಗ್ವಿಜಯ ಕಾಲದಲ್ಲಿ ಇವನಿಂದ ಸಮ್ಮಾನಿಸಲ್ಪಟ್ಟಿದ್ದನು (ಸಭಾ 29/11–12). ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಬಂದಿದ್ದನು (ಸಭಾ 34/14). ರಾಜಸೂಯ ಯಜ್ಞದಲ್ಲಿ ಅಗ್ರಪೂಜಾ ಸನ್ನಿವೇಶದಲ್ಲಿ, ಶ್ರೀಕೃಷ್ಣನ ಕುರಿತು ಈತನಿಂದ ಆಕ್ಷೇಪಕರ ಮಾತು. ಈತನಿಗೆ ಯುಧಿಷ್ಠಿರನು ತಿಳಿಯ ಹೇಳಿದುದು ಮತ್ತು ಭೀಷ್ಮನು ಇವನ ಆಕ್ಷೇಪಗಳಿಗೆ ಉತ್ತರ ಹೇಳಿದುದು (ಸಭಾ 38/1–29). ಶ್ರೀಕೃಷ್ಣನ ಅಗ್ರಪೂಜಾ ಕಾರಣಕ್ಕಾಗಿ ರಾಜಸೂಯ ಯಜ್ಞದಲ್ಲಿ ತೊಂದರೆಯುಂಟು ಮಾಡಲು ಇವನ ಪ್ರಯತ್ನ (ಸಭಾ 39/11–12). ಇವನು ಭೀಷ್ಮನನ್ನು ನಿಂದಿಸಿದುದು (ಸಭಾ 41 ಅಧ್ಯಾಯ). ಇವನ ಮಾತುಗಳಿಂದ ಭೀಮಸೇನನು ಕುಪಿತನಾದುದು (ಸಭಾ 42/1–12). ಭೀಷ್ಮನಿಂದ ಇವನ ಜನ್ಮಕಾಲದ ಕಥೆಯ ವರ್ಣನೆ. ಇವನ ಜನನ ಕಾಲದ ಆಕಾಶವಾಣಿ, ಇವನ ಮರಣಕಾರಣದ ಉದ್ಘೋಷಣೆ ಮತ್ತು ಶ್ರೀಕೃಷ್ಣನ ಮಡಿಲಿಗೆ ಬಂದಾಗ ಇವನ ಎರಡು ಭುಜಗಳು ಮತ್ತು ಒಂದು ಕಣ್ಣು ಅದೃಶ್ಯವಾದುದು (ಸಭಾ 43 ಅಧ್ಯಾಯ). ಇವನು ಭೀಷ್ಮನನ್ನು ತೆಗಳಿದುದು (ಸಭಾ 44/6–32). ಶ್ರೀಕೃಷ್ಣನ ಅನುಪಸ್ಥಿತಿಯಲ್ಲಿ ಈತನಿಂದ ದ್ವಾರಕೆಯ ದಹನ (ಸಭಾ 45/7). ಇವನಿಂದ ವಸುದೇವನ ಯಜ್ಞಾಶ್ವದ ಅಪಹಾರ (ಸಭಾ 45/9). ಇವನು ಬಭ್ರುವಿನ ಪತ್ನಿಯನ್ನು ಅಪಹರಿಸಿದುದು (ಸಭಾ 45/10). ವಿಶಾಲಾರಾಜ (ತನ್ನ ಮಾವ)ನ ಪುತ್ರಿಯನ್ನು ಅಪಹರಿಸಿದುದು (ಸಭಾ 45/11). ಶ್ರೀಕೃಷ್ಣನಿಂದ ಇವನ ಶಿರಚ್ಛೇದನ (ವಧೆ) (ಸಭಾ 45/25). ಪರಮಾತ್ಮನಾದ ಶ್ರೀಕೃಷ್ಣನಲ್ಲಿ ಇವನ ತೇಜಸ್ಸಿನ ಐಕ್ಯ (ಸಭಾ 45/26–27). ಶ್ರೀಕೃಷ್ಣನು ಅರ್ಜುನನಲ್ಲಿ ಈತನ ವಧೆಯ ಕಾರಣ ತಿಳಿಸಿದುದು (ದ್ರೋಣ 181/21–22). ಮಹಾಭಾರತದಲ್ಲಿ ಬಂದಿರುವ ಶಿಶುಪಾಲನ ಹೆಸರುಗಳು – ಚೈದ್ಯ, ಚೇದಿಪ, ಚೇದಿಪತಿ, ಚೇದಿಪುಂಗವ, ಚೇದಿರಾಟ್, ಚೇದಿರಾಜ, ಚೇದಿವೃಷ, ಶ್ರೌತಶ್ರವಸ್, ದಮಘೋಷಸುತ, ದಮಘೋಷಾತ್ಮಜ ಇತ್ಯಾದಿ.

**ಶಿಶುಪಾಲವಧಪರ್ವ** – ಸಭಾಪರ್ವದ ಒಳಗಿರುವ ಒಂದು ಅವಾಂತರಪರ್ವ (ಅಧ್ಯಾಯ 40 ರಿಂದ 45).

**ಶಿಶುಮಾರಮುಖೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/22).

**ಶಿಶುರೋಮಾ** – ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/10).

**ಶೀಘ್ರಾ** – ಭಾರತವರ್ಷದ ಒಂದು ಪ್ರಮುಖ ನದಿ. ಅದರ ನೀರನ್ನು ಇಲ್ಲಿರುವ ಜನರು ಕುಡಿಯುತ್ತಾರೆ (ಭೀಷ್ಮ 9/29).

**ಶೀತಪೂತನಾ** – ಭಯಂಕರ ಆಕಾರದ ಒಬ್ಬ ಪಿಶಾಚಿ. ಇವಳು ಮನುಷ್ಯಸ್ತ್ರೀಯರ ಗರ್ಭವನ್ನು ಅಪಹರಿಸುವವಳಾಗಿದ್ದಾಳೆ (ವನ 230/28).

**ಶೀತಾಶೀ** – ಶಾಕದ್ವೀಪದಲ್ಲಿ ಪವಿತ್ರ ಜಲವುಳ್ಳ ನದಿ (ಭೀಷ್ಮ 11/32).

**ಶೀಲವಂತ** – ಒಬ್ಬ ದಿವ್ಯ ಮಹರ್ಷಿ. ಇವನು ಹಸ್ತಿನಾಪುರಕ್ಕೆ ಹೋಗುತ್ತಿದ್ದಾಗ ಶ್ರೀಕೃಷ್ಣನ ಭೇಟಿಮಾಡಿದ್ದನು (ಉದ್ಯೋಗ 83/64).

**ಶುಕ** – (1) ಶರ್ಯಾತಿವಂಶದ ಪೃಷತ್‌ನ ಪುತ್ರ.

ಇವನು ತನ್ನ ಪರಾಕ್ರಮದಿಂದ ಶತ್ರುಗಳನ್ನು ಸಂತಪ್ತಗೊಳಿಸುತ್ತಿದ್ದನು. ಇವನು ಅಖಿಲ ಭೂಮಂಡಲವನ್ನು ಜಯಿಸಿ ತನ್ನ ಅಧಿಕಾರ ದೊಳಗೆ ಇರಿಸಿಕೊಂಡಿದ್ದನು. ಅಶ್ವಮೇಧದಂತಹ ನೂರು ದೊಡ್ಡ ದೊಡ್ಡ ಯಜ್ಞಗಳನ್ನು ಸಾಂಗ ಗೊಳಿಸಿದ್ದನು. ದೇವತೆ ಮತ್ತು ಪಿತೃಗಳ ಆರಾಧನೆ ಮಾಡಿದ್ದನು. ಅನಂತರ ಈತ ರಾಜ್ಯ ವನ್ನು ತ್ಯಜಿಸಿ ಶತಶೃಂಗ ಪರ್ವತಕ್ಕೆ ಬಂದಿದ್ದನು. ಅಲ್ಲಿ ಶಾಕ ಮತ್ತು ಫಲಮೂಲಾಹಾರ ಸೇವಿಸುತ್ತಾ ತಪಸ್ಸು ಮಾಡತೊಡಗಿದನು. ಈತನೇ ಶ್ರೇಷ್ಠ ಉಪಕರಣಗಳಿಂದಲೂ, ಶಿಕ್ಷಣದಿಂದಲೂ ಪಾಂಡವರ ಯೋಗ್ಯತೆಯನ್ನು ಹೆಚ್ಚಿಸಿದನು. ಇವನ ಕೃಪಾಪ್ರಸಾದದಿಂದಲೇ ಎಲ್ಲಾ ಪಾಂಡವರು ಧನುರ್ವೇದದಲ್ಲಿ ಪಾರಂಗತರಾದರು. ಇವನು ಅರ್ಜುನನಿಗೆ ನಾನಾವಿಧದ ಅಸ್ತ್ರಶಸ್ತ್ರಗಳನ್ನು ಪ್ರದಾನಮಾಡಿದ್ದನು (ಆದಿ 123/31).

(2) ರಾವಣನ ಮಂತ್ರಿ, ಇವನು ವಾನರ ರೂಪ ಧರಿಸಿ, ಶ್ರೀರಾಮನ ಸೇನೆಯೊಳಗೆ ಬಂದಾಗ, ವಿಭೀಷಣನಿಂದ ಬಂಧಿಸಲ್ಪಟ್ಟನು (ವನ 283/52). ರಾಕ್ಷಸರೂಪದಲ್ಲಿ ಈತ ಪ್ರಕಟಗೊಂಡಾಗ, ಶ್ರೀರಾಮನು ತನ್ನ ಸೈನ್ಯವನ್ನು ತೋರಿಸಿ, ಇವ ನನ್ನು ಬಿಡುಗಡೆಗೊಳಿಸಿದನು (ವನ 283/53).

(3) ಗಾಂಧಾರ ರಾಜ ಸುಬಲನ ಒಬ್ಬ ಮಗ. ಶಕುನಿಯ ಸಹೋದರ, ಇರಾವಂತನಿಂದ ಇವನ ವಧೆ (ಭೀಷ್ಮ 90/26–32).

**ಶುಕದೇವ** – ವ್ಯಾಸನ ಪುತ್ರ ಮತ್ತು ಶಿಷ್ಯ. ವ್ಯಾಸನು ಮೊದಲು ಇವನಿಗೆ ಮಹಾಭಾರತ ಗ್ರಂಥದ ಅಧ್ಯಯನ ಮಾಡಿಸಿದನು (ಆದಿ 1/104). ಶುಕದೇವನು ಗಂಧರ್ವ, ಯಕ್ಷ ಮತ್ತು ರಾಕ್ಷಸರಿಗೆ ಹದಿನಾಲ್ಕು ಲಕ್ಷಶ್ಲೋಕಗಳಿಂದ ಕೂಡಿದ ಮಹಾಭಾರತದ ಕಥೆಯನ್ನು ಹೇಳಿದ್ದನು (ಆದಿ 1/106–108; ಸ್ವರ್ಗ 5/55–56). ಇವನು ಸಂಪೂರ್ಣ ವೇದಗಳ ಮತ್ತು ಮಹಾ ಭಾರತದ ಶಿಕ್ಷಣವನ್ನು ಇವರಿಗೆ ನೀಡಿದನು (ಆದಿ 63/89). ಇವನು ಯುಧಿಷ್ಠಿರನ ಸಭೆಯಲ್ಲಿರು ತ್ತಿದ್ದನು (ಸಭಾ 4/11). ಧರ್ಮಪಾಲನೆ ಯಿಂದಲೇ ಇವನ ಹೃದಯಶುದ್ಧವಾಗಿದೆ (ವನ 31/12). ಶುಕದೇವನ ಪ್ರಶ್ನೆಗೆ ಅನುಸಾರವಾಗಿ ವ್ಯಾಸನಿಂದ ಜ್ಞಾನದ ಸಾಧನಗಳು ಮತ್ತು ಅದರ ಮಹಿಮೆ, ಯೋಗದಿಂದ ಪರಮಾತ್ಮಪ್ರಾಪ್ತಿ, ಕರ್ಮ ಮತ್ತು ಜ್ಞಾನದ ಅಂತರ, ಬ್ರಹ್ಮಪ್ರಾಪ್ತಿಯ ಉಪಾಯಗಳು, ಬ್ರಹ್ಮಚರ್ಯ ಆಶ್ರಮ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮ, ಸನ್ಯಾಸದ ಆಚರಣೆ, ಪರಮಾತ್ಮನ ಶ್ರೇಷ್ಠತೆ, ಅವನ ದರ್ಶನಕ್ಕಿರುವ ಉಪಾಯಗಳು, ಜ್ಞಾನೋ ಪದೇಶಕನ ಪಾತ್ರನಿರ್ಣಯ, ಮಹಾಭೂತಾದಿ ತತ್ವಗಳ ವಿವೇಚನೆ, ಬುದ್ಧಿಯ ಶ್ರೇಷ್ಠತೆ, ಪ್ರಕೃತಿ ಪುರುಷ ವಿವೇಕ, ಜ್ಞಾನದ ಸಾಧನಗಳು, ಜ್ಞಾನಿಯ ಲಕ್ಷಣ, ಪರಮಾತ್ಮ ಪ್ರಾಪ್ತಿಯ ಸಾಧನ ಗಳು, ಸಂಸಾರನದಿ, ಜ್ಞಾನದಿಂದ ಬ್ರಹ್ಮಪ್ರಾಪ್ತಿ, ಬ್ರಹ್ಮವೇತ್ತನ ಲಕ್ಷಣ, ಶರೀರದಲ್ಲಿ ಪಂಚ ಭೂತಗಳ ಕಾರ್ಯ ಮತ್ತು ಗುಣಗಳ ಪರಿ ಚಯ, ಪರಮಾತ್ಮ ಸಾಕ್ಷಾತ್ಕಾರದ ರೀತಿಗಳು, ಕಾಮವೃಕ್ಷ, ಅದನ್ನು ಕಡಿದು ಮೋಕ್ಷ ಪ್ರಾಪ್ತಿ, ಶರೀರನಗರ ಮತ್ತು ಪಂಚಭೂತ, ಮನ ಮತ್ತು ಬುದ್ಧಿಯ ಗುಣ ಇತ್ಯಾದಿಗಳ ವರ್ಣನೆ (ಶಾಂತಿ 239/2ರಿಂದ 255). ತಂದೆಯ ಆದೇಶ ಪ್ರಕಾರ ಮೋಕ್ಷತತ್ತ್ವದ ಉಪದೇಶಕ್ಕೋಸ್ಕರ ಈತ ಗುರು ವಿನ ಬಳಿಗೆ ಹೋದುದು (ಶಾಂತಿ 321/94). ಅರಣಿಕಾಷ್ಠದಿಂದ ವ್ಯಾಸರ ವೀರ್ಯದ ಮೂಲಕ ಇವನ ಹುಟ್ಟಿನ ವರ್ಣನೆ (ಶಾಂತಿ 324/9–10). ಶಿವನ ಮೂಲಕ ಈತನ ಉಪನಯನ ಸಂಸ್ಕಾರ (ಶಾಂತಿ 324/19). ತಂದೆಯ ಆಜ್ಞೆಯಿಂದ ಮಿಥಿಲೆಗೆ ಹೋದುದು ಮತ್ತು ಅಲ್ಲಿ ಸ್ವಾಗತ ಸತ್ಕಾರದ ಅನಂತರ ಈತ ಧ್ಯಾನಸ್ಥಿತನಾದುದು (ಶಾಂತಿ 325 ಅಧ್ಯಾಯ). ರಾಜಾ ಜನಕನಿಂದ ಈತನ ಪೂಜೆ (ಶಾಂತಿ 326/3–5). ಇವನು ರಾಜನಿಗೆ ತನ್ನ ಆಗಮನದ ಕಾರಣ ತಿಳಿಸಿದುದು (ಶಾಂತಿ 326/10–13). ರಾಜಾಜನಕನೊಡನೆ ಜ್ಞಾನವಿಜ್ಞಾನ ವಿಷಯವಾಗಿ ಪ್ರಶ್ನೆ (ಶಾಂತಿ 326/20–21). ಮಿಥಿಲೆಯಿಂದ ಹಿಂತಿರುಗಿ ಈತ ತಂದೆಯ ಬಳಿಗೆ ಹೋದುದು (ಶಾಂತಿ 327/31). ವ್ಯಾಸನು ಇವನಿಗೆ ಅನಧ್ಯಾಯದ ಕಾರಣ ಹೇಳುತ್ತಾ ಪ್ರವಹವೇ ಮೊದಲಾದ ಏಳು ವಾಯುಗಳ ಪರಿಚಯವನ್ನಿತ್ತದ್ದು (ಶಾಂತಿ 328/28–56). ಇವನು ನಾರದನೊಡನೆ ಕಲ್ಯಾಣ ಪ್ರಾಪ್ತಿಯ ಉಪಾಯ ಕೇಳಿದುದು (ಶಾಂತಿ 329/4). ಸೂರ್ಯಲೋಕಕ್ಕೆ ಹೋಗುವ ನಿಶ್ಚಯ

ಮಾಡಿ ನಾರದ ಮತ್ತು ವ್ಯಾಸನೊಡನೆ ಆಜ್ಞೆಯನ್ನು ಯಾಚಿಸಿದುದು (ಶಾಂತಿ 331/49–62). ಇವನ ಊರ್ಧ್ವಗತಿಯ ವರ್ಣನೆ (ಶಾಂತಿ 332 ಅಧ್ಯಾಯ). ಇವನ ಪರಮಪದ ಪ್ರಾಪ್ತಿ (ಶಾಂತಿ 333/1–18). ತನ್ನ ತಂದೆ ವ್ಯಾಸನೊಡನೆ ಇವನು ವಿವಿಧ ಪ್ರಶ್ನೆ ಕೇಳಿದುದು (ಅನು 81/8–11). ಮಹಾಭಾರತದಲ್ಲಿ ಬಂದಿರುವ ಶುಕದೇವನ ಹೆಸರುಗಳು – ಆರಣೇಯ, ಅರಣೀಸುತ, ದ್ವೈಪಾಯಾನಾತ್ಮಜ, ವೈಯಾಸಕಿ, ವ್ಯಾಸಾತ್ಮಜ ಇತ್ಯಾದಿ.

**ಶುಕೀ** – ತಾಮ್ರಾ ಎಂಬವಳ ಪುತ್ರಿ. ಈಕೆ ಶುಕಗಳನ್ನು (ಗಿಳಿ) ಉತ್ಪನ್ನ ಮಾಡಿದಳು (ಆದಿ 66/56–59).

**ಶುಕ್ತಿಮತಿ** – (1) ಒಂದು ನದಿ. ಈಕೆ ಉಪರಿಚರವಸುವಿನ ರಾಜಧಾನಿಯ ಸಮೀಪವೇ ಹರಿಯುತ್ತಿದ್ದಳು. ಕೋಲಾಹಲ ಪರ್ವತನು ಕಾಮವಶನಾಗಿ ಈ ದಿವ್ಯರೂಪಧಾರಿಣಿ ನದಿಯನ್ನು ತಡೆದುನಿಲ್ಲಿಸಿದನು; ಆದರೆ ರಾಜಾ ಉಪರಿಚರವಸುವಿನ ಪಾದಪ್ರಹಾರದಿಂದ ಪರ್ವತವು ಸೀಳಾಯಿತು. ಅದೇ ಮಾರ್ಗದಿಂದ ಈ ನದಿ ಪುನಃ ಹರಿಯತೊಡಗಿದಳು. ಈಕೆಯ ಗರ್ಭದಿಂದ ಕೋಲಾಹಲ ಪರ್ವತನ ಮೂಲಕ ಅವಳಿ ಸಂತಾನದ ಜನನವಾಯಿತು. ಅವರನ್ನು ಶುಕ್ತಿಮತಿಯು ರಾಜಾ ಉಪರಿಚರವಸುವಿಗೆ ಅರ್ಪಿಸಿದಳು. ರಾಜನು ಆ ಮಕ್ಕಳಲ್ಲಿ ಪುತ್ರನನ್ನು ತನ್ನ ಸೇನಾಪತಿಯಾಗಿ ಮಾಡಿಕೊಂಡನು ಮತ್ತು ಪುತ್ರಿಯಾದ, ಗಿರಿಕೆಯೆಂಬವಳನ್ನು ತನ್ನ ಪತ್ನಿಯಾಗಿ ಮಾಡಿಕೊಂಡನು (ಆದಿ 63/34–41). ಭಾರತದ ಪ್ರಮುಖ ನದಿಗಳಲ್ಲಿ ಈಕೆ ಗಣಿಸಲ್ಪಟ್ಟಿದ್ದಾಳೆ (ಭೀಷ್ಮ 9/35).

(2) ಒಂದು ಪಟ್ಟಣ, ಇದು ಚೇದಿ ರಾಜನಾದ ಧೃಷ್ಟಕೇತುವಿನ ರಾಜಧಾನಿಯಾಗಿತ್ತು (ವನ 22/50).

**ಶುಕ್ತಿಮಂತ** – ಒಂದು ಪರ್ವತ. ಪೂರ್ವ ದಿಗ್ವಿಜಯ ಕಾಲದಲ್ಲಿ ಭೀಮಸೇನನು ಇದನ್ನು ಗೆದ್ದಿದ್ದನು (ಸಭಾ 30/5). ಇದು ಭಾರತ ವರ್ಷದ ಏಳು ಕುಲಪರ್ವತಗಳಲ್ಲಿ ಒಂದಾಗಿದೆ (ಭೀಷ್ಮ 9/11).

**ಶುಕ್ರ** – ಒಬ್ಬ ರಾಕ್ಷಸ (ಅನು 14/214).

**ಶುಕ್ರಾಚಾರ್ಯ** – ಮಹರ್ಷಿ ಭೃಗುವಿನ ಪುತ್ರ. ಈತ ಅಸುರರ ಉಪಾಧ್ಯಾಯ ಇವನ ಇನ್ನೊಂದು ಹೆಸರು ಉಶನಾ ಎಂದಾಗಿತ್ತು. ಇವನಿಗೆ ನಾಲ್ವರು ಪುತ್ರರಿದ್ದರು. ಅವರೆಲ್ಲ ದೈತ್ಯರ ಪುರೋಹಿತರಾಗಿದ್ದರು (ಆದಿ 65/36). (ಕೆಲವು ಕಡೆಗಳಲ್ಲಿ ಈತ ಭೃಗುವಿನ ಪೌತ್ರನೆಂದೂ ಹೇಳಲಾಗಿದೆ.). ಈತ ಮಹರ್ಷಿಭೃಗುವಿನ ಪೌತ್ರ ಮತ್ತು ಕವಿಯ ಪುತ್ರನಾಗಿದ್ದನು. ಇವನೇ ಗ್ರಹನಾಗಿ ಮೂರು ಲೋಕಗಳ ಜೀವನ ರಕ್ಷಣೆಗಾಗಿ ವೃಷ್ಟಿ, ಅನಾವೃಷ್ಟಿ, ಭಯ ಮತ್ತು ಅಭಯವನ್ನು ಹುಟ್ಟಿಸುತ್ತಾನೆ. ಬ್ರಹ್ಮನ ಪ್ರೇರಣೆಯಿಂದ ಸಮಸ್ತ ಲೋಕಗಳನ್ನು ಸುತ್ತುತ್ತಿರುತ್ತಾನೆ. ಮಹಾಬುದ್ಧಿವಂತನಾದ ಶುಕ್ರನೇ ಯೋಗದ ಆಚಾರ್ಯ ಮತ್ತು ದೈತ್ಯರ ಗುರುವಾಗಿದ್ದನು. ಇವನೇ ಬೃಹಸ್ಪತಿಯ ರೂಪದಲ್ಲಿ ಪ್ರಕಟವಾಗಿ ದೇವತೆಗಳಿಗೂ ಗುರುವಾದನು (ಆದಿ 66/42–43). ದೈತ್ಯರು ಇವನನ್ನು ಪುರೋಹಿತ ಪದವಿಗೆ ಪ್ರಾರ್ಥಿಸಿದುದು ಮತ್ತು ಬೃಹಸ್ಪತಿಯೊಂದಿಗೆ ಇವನ ಸ್ಪರ್ಧೆ (ಆದಿ 76/8). ಇವನ ಪುತ್ರಿಯ ಹೆಸರು ದೇವಯಾನಿ ಎಂದಾಗಿತ್ತು (ಆದಿ 76/15). ದಾನವರಾಜ ವೃಷಪರ್ವನ ಪಟ್ಟಣಕ್ಕೆ ಹೋಗಿ, ಕಚನು ಶುಕ್ರಾಚಾರ್ಯನೊಡನೆ ತನ್ನನ್ನು ಶಿಷ್ಯನಾಗಿ ಸ್ವೀಕರಿಸಲು ಪ್ರಾರ್ಥಿಸಿದುದು ಮತ್ತು ಈತನ ಸೇವೆಯಲ್ಲಿದ್ದು ಒಂದು ಸಾವಿರ ವರ್ಷಗಳವರೆಗೆ ಬ್ರಹ್ಮಚರ್ಯಪಾಲನೆಗೆ ಅನುಮತಿ ಬೇಡಿದುದು ಮತ್ತು ಇವನು ಕಚನನ್ನು ಸ್ವಾಗತಪೂರ್ವಕ ಶಿಷ್ಯನಾಗಿ ಸ್ವೀಕರಿಸಿದುದು (ಆದಿ 76/18–19). ಕಚನಿಗಾಗಿ ಚಿಂತಾಕ್ರಾಂತಳಾದ ದೇವಯಾನಿಗೆ ಧೈರ್ಯ ಹೇಳಿ, ಈತ ಸಂಜೀವಿನಿ ವಿದ್ಯೆಯ ಪ್ರಯೋಗ ಮಾಡಿ, ಕಚನನ್ನು ಕರೆದುದು ಮತ್ತು ಆ ವಿದ್ಯೆಯ ಬಲದಿಂದ ಕಚನು ನಾಯಿಗಳ ಶರೀರವನ್ನು ಸಿಗಿದು ಹಾಕಿ ಹೊರಗೆ ಬಂದುದು (ಆದಿ 76/31–34). ಇವನಿಂದ ಕಚನಿಗೆ ಎರಡನೇ ಬಾರಿ ಜೀವದಾನ (ಆದಿ 76/41–42). ಮೂರನೇ ಬಾರಿ ದಾನವರು ಕಚನನ್ನು ಕೊಂದು ಬೆಂಕಿಯಲ್ಲಿ ಸುಟ್ಟರು. ಸುಟ್ಟ ಹೆಣದ ಭಸ್ಮವನ್ನು ಮದಿರೆಯಲ್ಲಿ ಸೇರಿಸಿದರು. ಅದೇ ಮದಿರೆಯನ್ನು ಅವರು ಬ್ರಾಹ್ಮಣನಾದ ಶುಕ್ರಾಚಾರ್ಯನಿಗೆ ಕುಡಿಸಿದರು

(ಆದಿ 76/43). ಕಚನನ್ನು ಪುನಃ ಜೀವಂತ ಗೊಳಿಸಲು ದೇವಯಾನಿಯ ಒತ್ತಾಯ, ಶುಕ್ರಾಚಾರ್ಯನ ಔದಾಸೀನ್ಯ, ದೇವಯಾನಿ ಪ್ರಾಣ ತ್ಯಾಗಮಾಡಲು ಸಿದ್ಧಳಾದಾಗ, ಇವನು ಅಸುರರ ಮೇಲೆ ಸಿಟ್ಟಾಗಿ, ಸಂಜೀವಿನಿ ವಿದ್ಯೆಯ ಮೂಲಕ ಕಚನನ್ನು ಕರೆದುದು, ಕಚನು ತಾನು ಶುಕ್ರನ ಹೊಟ್ಟೆಯಲ್ಲೇ ಇರುವೆನೆಂದು ಹೇಳಿದುದು ಮತ್ತು ಇವನು ವಿಚಾರಿಸಿದಾಗ, ತಾನು ಮದಿರೆಯ ಜೊತೆಯಲ್ಲಿ ಈತನ ಹೊಟ್ಟೆಯನ್ನು ಸೇರಿದ ವೃತ್ತಾಂತವನ್ನು ಹೇಳಿದುದು. ಕಚನನ್ನು ಬದುಕಿಸುವುದರಿಂದ ತನ್ನ ವಧೆಯಾಗುವ ಶಂಕೆಯನ್ನು ಈತ ಹೇಳಿದುದು. ತಂದೆ ಮತ್ತು ಕಚ ಇವರಿಬ್ಬರಲ್ಲಿ ಯಾರಾದರೊಬ್ಬ ನಾಶವಾದರೂ ತನ್ನ ಮರಣ ಖಚಿತವೆಂದು ದೇವಯಾನಿ ಹೇಳಿದುದು. ಆಗ ಇವನು ಕಚನನ್ನು ಸಿದ್ಧನಾಗಲು ಹೇಳಿ, ಅವನಿಗೆ ಸಂಜೀವಿನಿ ವಿದ್ಯೆಯನ್ನು ಉಪದೇಶಿಸಿದುದು. ಕಚನು ಇವನ ಹೊಟ್ಟೆಯಿಂದ ಹೊರಟು ವಿದ್ಯೆಯ ಬಲದಿಂದ ಈತನನ್ನು ಪುನಃ ಜೀವಂತಗೊಳಿಸಿದುದು ಮತ್ತು ಪ್ರಣಾಮಮಾಡಿ ಇವನನ್ನು ತನ್ನ ತಾಯಿ ತಂದೆಯೆಂದು ಹೇಳಿದುದು ಮತ್ತು ಎಂದೂ ಈತನಿಗೆ ದ್ರೋಹ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದುದು (ಆದಿ 76/44-64). ಇವನು ಮದಿರಾಪಾನವು ಬ್ರಹ್ಮಹತ್ಯೆಗೆ ಸಮಾನವೆಂದೂ, ಅದು ಬ್ರಾಹ್ಮಣರಿಗೆ ಸರ್ವಥಾ ನಿಷಿದ್ಧವೆಂದೂ ಘೋಷಿಸಿದುದು (ಆದಿ 76/67-68). ದೇವಯಾನಿಯೊಡನೆ ಈತನು ತನ್ನ ಪ್ರಭಾವವನ್ನು ವರ್ಣಿಸಿದುದು (ಆದಿ 78/37-40). ಶರ್ಮಿಷ್ಠೆಯಿಂದ ಪೀಡಿಸಲ್ಪಟ್ಟ ದೇವಯಾನಿಗೆ ಇವನು ಧೈರ್ಯ ಹೇಳಿದುದು, ಸಹನಶೀಲತೆಯನ್ನು ಪ್ರಶಂಸಿಸುತ್ತಾ, ಕ್ರೋಧದ ವೇಗವನ್ನು ತಡೆಯುವವರನ್ನು ಪರಮಶ್ರೇಷ್ಠರೆಂದು ಹೇಳಿದುದು (ಆದಿ 79/1-7). ಅಧರ್ಮದ ಫಲ ಅವಶ್ಯವಾಗಿ ಪ್ರಾಪ್ತವಾಗುತ್ತದೆ - ಈ ವಿಚಾರವನ್ನು ದೃಷ್ಟಾಂತ ಪೂರ್ವಕ ವೃಷಪರ್ವಾನಿಗೆ ತಿಳಿಸಿದುದು (ಆದಿ 80/1-6). ದೇವಯಾನಿಯನ್ನು ಪ್ರಸನ್ನಗೊಳಿಸಲು ಈತನಿಂದ ವೃಷಪರ್ವಾನಿಗೆ ಆದೇಶ (ಆದಿ 80/9-12). ಯಯಾತಿಯೊಂದಿಗೆ ತನ್ನ ವಿವಾಹ ಮಾಡುವಂತೆ ದೇವಯಾನಿಯ ಪ್ರಾರ್ಥನೆ (ಆದಿ 81/30). ತನ್ನ ಪುತ್ರಿಯನ್ನು ಪರಿಗ್ರಹಿಸಲು ಯಯಾತಿಯೊಡನೆ ಹೇಳಿದುದು (ಆದಿ 81/31). ಧರ್ಮಲೋಪ ಭಯದಿಂದ ಭೀತನಾದ ಯಯಾತಿಗೆ ಈತನಿಂದ ಧೈರ್ಯದ ಕೊಡುಗೆ (ಆದಿ 81/33). ದೇವಯಾನಿಯೊಂದಿಗೆ ವಿವಾಹವಾಗಲು ಮತ್ತು ಶರ್ಮಿಷ್ಠೆಯೊಂದಿಗೆ, ಪತ್ನಿಗೆ ಉಚಿತವಾದ ವ್ಯವಹಾರ ಮಾಡದಿರಲು ಯಯಾತಿಗೆ ಇವನ ಆಜ್ಞೆ. ಯಯಾತಿಗೆ ಜರಾಗ್ರಸ್ತನಾಗಲು ಇವನಿಂದ ಶಾಪ (ಆದಿ 83/31). ಯಯಾತಿಯು ಪ್ರಾರ್ಥಿಸಿದಾಗ, ಅವನು ತನ್ನ ವೃದ್ಧಾವಸ್ಥೆಯನ್ನು ವಿನಿಮಯ ಮಾಡಲು ಸಾಧ್ಯವಾಗುವ ಸೌಲಭ್ಯವನ್ನು ಈತನು ನೀಡಿದುದು (ಆದಿ 83/39). ಇವನು ದೇವರಾಜ ಇಂದ್ರನ ಸಭೆಯಲ್ಲಿರುತ್ತಾನೆ (ಸಭಾ 7/22). ಗ್ರಹರೂಪದಿಂದ ಬ್ರಹ್ಮನ ಸಭೆಯಲ್ಲೂ ಇರುತ್ತಾನೆ (ಸಭಾ 11/29). ಇವನು ಮೇರು ಪರ್ವತದ ಶಿಖರದ ಮೇಲೆ ದೈತ್ಯರೊಂದಿಗೆ ವಾಸಿಸುತ್ತಾನೆ. ಎಲ್ಲಾ ರತ್ನಗಳು ಮತ್ತು ರತ್ನಮಯ ಪರ್ವತಗಳು ಇವನದೇ ಅಧಿಕಾರದಲ್ಲಿವೆ. ಭಗವಾನ್ ಕುಬೇರನು ಇವನ ಐಶ್ವರ್ಯದ ಚತುರ್ಥ ಭಾಗವನ್ನು ಪಡೆದು, ಅದನ್ನು ಉಪಯೋಗಿಸುತ್ತಾನೆ (ಭೀಷ್ಮ 6/22-23). ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/8). ಮಹಾರಾಜ ಪೃಥುವಿನ ಪುರೋಹಿತನಾಗಿದ್ದನು (ಶಾಂತಿ 59/110). ಶ್ರೇಯಃ ಪ್ರಾಪ್ತಿಗಾಗಿ ಇಂದ್ರನನ್ನು ಪ್ರಹ್ಲಾದ ಬಳಿಗೆ ಕಳುಹಿಸಿದ್ದನು (ಶಾಂತಿ 124/27). ಇವನು ವಾನಪ್ರಸ್ಥವನ್ನು ಪಾಲನೆ ಮಾಡಿ ಸ್ವರ್ಗಪ್ರಾಪ್ತಿಮಾಡಿಕೊಂಡನು (ಶಾಂತಿ 44/17-18). ವೃತ್ರಾಸುರನೊಡನೆ, ದೇವತೆಗಳಿಂದ ಪರಾಜಿತನಾದರೂ ದುಃಖಿಯಾಗದಿರಲು ಕಾರಣ ಕೇಳಿದನು (ಶಾಂತಿ 279/15). ವೃತ್ರಾಸುರನಿಗೆ ಭಗವಾನ್ ವಿಷ್ಣುವಿನ ಮಾಹಾತ್ಮ್ಯ ತಿಳಿಸುವಂತೆ ಸನತ್ಕುಮಾರನಿಗೆ ಹೇಳಿದನು (ಶಾಂತಿ 280/5). ಯೋಗಬಲದಿಂದ ಕುಬೇರನ ಧನವನ್ನು ಅಪಹರಿಸಿದನು (ಶಾಂತಿ 289/9). ಕ್ರೋಧಗೊಂಡ ಶಿವನಿಂದ ನುಂಗಲ್ಪಟ್ಟು, ಈತ ಅಲ್ಲಿಯೇ ಅಡ್ಡಾಡುತ್ತಾ, ತಪಸ್ಸು ಮಾಡುತ್ತಾ ಇದ್ದನು (ಶಾಂತಿ 289). ಶಿವನ ಲಿಂಗದಿಂದ ಶುಕ್ರ

ದೊಂದಿಗೆ ಹೊರ ಬಂದ ಕಾರಣ ಶುಕ್ರನೆಂದು ಈತನ ಹೆಸರಾದುದು ಮತ್ತು ಪಾರ್ವತಿದೇವಿ ಈತನನ್ನು ಪುತ್ರನೆಂದು ಸ್ವೀಕರಿಸಿದುದು (ಶಾಂತಿ 289/32–35). ಇವನಿಂದ ಮಹಾದೇವನಿಗೆ ಶಾಪ (ಶಾಂತಿ 342/26). ಇವನಿಗೆ ತಂಡಿಯಿಂದ ಶಿವಸಹಸ್ರನಾಮದ ಉಪದೇಶ ಪ್ರಾಪ್ತವಾಗಿತ್ತು. ಇವನು ಗೌತಮನಿಗೆ ಅದರ ಉಪದೇಶವಿತ್ತಿದ್ದನು (ಅನು 17/177). ಇವನು ಭೃಗುವಿನ ಏಳು ಪುತ್ರರಲ್ಲಿ ಒಬ್ಬನಾಗಿದ್ದಾನೆ (ಅನು 85/129). ಬಲಿಯು ಕೇಳಿದಾಗ ಅವನಿಗೆ ಪುಷ್ಪಾದಿದಾನಗಳ ಮಹತ್ವ ತಿಳಿಸಿದುದು (ಅನು 98/16–64). ಮಹಾಭಾರತದಲ್ಲಿ ಬಂದಿರುವ ಶುಕ್ರಾಚಾರ್ಯನ ಹೆಸರುಗಳು – ಭಾರ್ಗವ, ಭಾರ್ಗವದಾಯಾದ, ಭೃಗುಶ್ರೇಷ್ಠ, ಭೃಗೂದ್ವಹ, ಭೃಗುಕುಲೋದ್ವಹ, ಭೃಗುನಂದನ, ಭೃಗುಸೂನು, ಕವಿಪುತ್ರ, ಕವಿಸುತ, ಕಾವ್ಯ, ಉಶನಾ ಇತ್ಯಾದಿ.

**ಶುಕ್ಲ** – ಪಾಂಡವ ಪಕ್ಷದ ಪಾಂಚಾಲ ದೇಶದ ಒಬ್ಬ ಯೋಧ (ದ್ರೋಣ 23/59). ಕರ್ಣನಿಂದ ಈತ ಗಾಯಗೊಂಡದ್ದು (ಕರ್ಣ 56/45).

**ಶುಚಿ** – (1) ಒಬ್ಬ ರಾಜ. ಈತ ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/14).

(2) ಒಬ್ಬ ವ್ಯಾಪಾರಿ. ವ್ಯಾಪಾರೀ ದಳದ ಒಡೆಯ, ಕಾಡಿನಲ್ಲಿ ದಮಯಂತಿಯೊಡನೆ ಈತನ ಭೇಟಿ ಮತ್ತು ಮಾತುಕತೆ (ವನ 64/127–131).

(3) ಒಬ್ಬ ಅಗ್ನಿ, ಗಾಳಿ ಬೀಸಿದಾಗ ಅಗ್ನಿಗಳ ಪರಸ್ಪರ ಸಂಪರ್ಕವಾದರೆ, ಈ ಅಗ್ನಿಗೆ ಅಷ್ಟಾಕಪಾಲ ಪುರೋಡಾಶದಿಂದ ಆಹುತಿ ಕೊಡಲ್ಪಡುತ್ತದೆ (ವನ 221/24).

(4) ವಿಶ್ವಾಮಿತ್ರನ ಬ್ರಹ್ಮವಾದೀ ಪುತ್ರರಲ್ಲಿ ಒಬ್ಬ (ಅನು 4/54).

(5) ಮಹರ್ಷಿ ಭೃಗುವಿನ ಪುತ್ರ (ಅನು 85/128).

**ಶುಚಿಕಾ** – ಒಬ್ಬ ಅಪ್ಸರೆ. ಈಕೆ ಅರ್ಜುನನ ಜನ್ಮಮಹೋತ್ಸವದಲ್ಲಿ ನೃತ್ಯ ಮಾಡಿದ್ದಳು (ಆದಿ 122/62).

**ಶುಚಿವ್ರತ** – ಒಬ್ಬ ಪ್ರಾಚೀನ ರಾಜ (ಆದಿ 1/236).

**ಶುಚಿಶ್ರವಾ** – ಭಗವಾನ್ ಶ್ರೀಕೃಷ್ಣನ ಹೆಸರು ಈ ಹೆಸರಿನ ನಿರುಕ್ತಿ (ಶಾಂತಿ 342/91).

**ಶುಚಿಸ್ಮಿತಾ** – ಒಬ್ಬ ಅಪ್ಸರೆ. ಈಕೆ ಕುಬೇರನ ಸಭೆಯಲ್ಲಿದ್ದು ಅವನ ಸೇವೆ ಮಾಡುತ್ತಾಳೆ (ಸಭಾ 10/10).

**ಶುಣ್ಡಿಕ** – ಪೂರ್ವಭಾರತದ ಒಂದು ಜನಪದ. ಇದನ್ನು ಕರ್ಣನು ಗೆದ್ದಿದ್ದನು (ವನ 254/8).

**ಶುನಃಶೇಪ** – ಋಚೀಕ(ಅಜೀಗರ್ತ)ನ ಒಬ್ಬ ಮಹಾತಪಸ್ವಿ ಪುತ್ರ. ಇವನನ್ನು ಹರಿಶ್ಚಂದ್ರನ ಯಜ್ಞದಲ್ಲಿ ಯಜ್ಞಪಶುವಾಗಿ ಮಾಡಿ ತರಲಾಗಿತ್ತು. ವಿಶ್ವಾಮಿತ್ರನು ದೇವತೆಗಳನ್ನು ಸಂತುಷ್ಟಗೊಳಿಸಿ ಇವನನ್ನು ಬಿಡಿಸಿಕೊಂಡನು. ಆದುದರಿಂದ ಇವನು ವಿಶ್ವಾಮಿತ್ರನ ಪುತ್ರ ಸ್ವರೂಪನಾದನು. ದೇವತೆಗಳು ಕೊಟ್ಟದ್ದರಿಂದ ಇವನ ಹೆಸರು 'ದೇವರಾತ'ನೆಂದಾಯಿತು. ಇವನು ವಿಶ್ವಾಮಿತ್ರನ ಜ್ಯೇಷ್ಠ ಪುತ್ರನೆಂದು ಪರಿಗಣಿಸಲ್ಪಟ್ಟನು (ಅನು 3/6–8).

**ಶುನಃಸಖ** – ಸನ್ಯಾಸಿಯ ವೇಷದಲ್ಲಿ ನಾಯಿಯೊಂದಿಗೆ ತಿರುಗಾಡುತ್ತಿರುವ ಇಂದ್ರನ ಹೆಸರು. ಇವನು ಸಪ್ತರ್ಷಿಗಳ ಬಳಿಗೆ ಹೋದುದು (ಅನು 93/59). ಕೃತ್ಯೆಯ ವಧೆ ಮಾಡಿ ಸಪ್ತರ್ಷಿಗಳನ್ನು ರಕ್ಷಿಸಿದುದು (ಅನು 93/105). ಸಪ್ತರ್ಷಿಗಳ ತಾವರೆದಂಟನ್ನು ಕದ್ದದ್ದು (ಅನು 93/109). ಸಪ್ತರ್ಷಿಗಳ ಮುಂದೆ ಶಪಥ ಮಾಡಿದುದು (ಅನು 93/132). ಸಪ್ತರ್ಷಿಗಳಿಗೆ ತನ್ನ ಪರಿಚಯ ಹೇಳಿದುದು (ಅನು 93/134–139). ಅಗಸ್ತ್ಯನ ಕಮಲಗಳ ಅಪಹಾರವಾದಾಗ ಶಪಥ ಮಾಡಿದುದು (ಅನು 94/40).

**ಶುನಕ** – (1) ಒಬ್ಬ ಮಹರ್ಷಿ. ಇವನು ರುರುವಿನ ಪುತ್ರ. ಇವನ ಜನ್ಮ ಪ್ರಮದ್ವರೆಯ ಗರ್ಭದಿಂದಾಗಿತ್ತು. ಶುನಕ ವೇದಪಾರಂಗತನೂ, ವಿದ್ವಾಂಸನೂ, ಧರ್ಮಾತ್ಮನೂ ಆಗಿದ್ದನು. ಇವನನ್ನು ಶೌನಕನ ಅಜ್ಜನೆಂದು ಹೇಳಲಾಗಿದೆ (ಆದಿ 5/10). ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10). ಶ್ರೀಕೃಷ್ಣನು ದೂತನಾಗಿ ಹಸ್ತಿನಾವತಿಗೆ ಹೋಗುವಾಗ ಮಾರ್ಗದಲ್ಲಿ ಇವನು ಅವನನ್ನು ಅಭಿನಂದಿಸಿದ್ದನು (ಉದ್ಯೋಗ 83/64). ಕೆಲವು ಕಡೆಗಳಲ್ಲಿ ಶೌನಕನನ್ನು ಶುನಕನ ಪುತ್ರನೆಂದು ಹೇಳಲಾಗಿದೆ (ಅನು 30/65).

(2) ಒಬ್ಬ ರಾಜರ್ಷಿ. ಇವನು ಚಂದ್ರಹಂತನೆಂಬ ಅಸುರನ ಅಂಶದಿಂದ ಜನಿಸಿದ್ದನು (ಆದಿ 67/38). ಚಂದ್ರತೀರ್ಥದಲ್ಲಿ ಇವನಿಗೆ ಪರಮ ಧಾಮದ ಪ್ರಾಪ್ತಿಯಾಗಿತ್ತು (ವನ 125/18–19). ಮಹಾರಾಜ ಹರಿಣಾಶ್ವನಿಂದ ಇವನಿಗೆ ಖಡ್ಗ ಪ್ರಾಪ್ತಿಯಾಯಿತು ಮತ್ತು ಇವನು ಆ ಖಡ್ಗವನ್ನು ಉಶೀನರನಿಗೆ ಕೊಟ್ಟಿದ್ದನು (ಶಾಂತಿ 166/79).

**ಶುಭವಕ್ತ್ರಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/7).

**ಶುಭಾಂಗದ** – ಒಬ್ಬ ರಾಜ. ಈತ ದ್ರೌಪದೀ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/22).

**ಶುಭಾಂಗೀ** – ದಶಾರ್ಹಕುಲದ ಒಬ್ಬ ಕನ್ಯೆ. ಇವಳು ಸೋಮವಂಶದ ಮಹಾರಾಜ ಕುರುವಿನ ಪತ್ನಿಯಾಗಿದ್ದಳು. ಇವಳ ಗರ್ಭದಿಂದ ವಿದೂರ ನೆಂಬ ಪುತ್ರ ಜನಿಸಿದ್ದನು (ಆದಿ 95/39).

**ಶೂಕರ** – ಒಂದು ದೇಶ. ಇಲ್ಲಿರುವ ರಾಜಾ ಕೃತಿ ಎಂಬವನು ಯುಧಿಷ್ಠಿರನಿಗೆ ರಾಜಸೂಯ ಯಜ್ಞದಲ್ಲಿ ನೂರಾರು ಗಜರತ್ನಗಳನ್ನು ಕಾಣಿಕೆ ಯಾಗಿ ನೀಡಿದ್ದನು (ಸಭಾ 52/25).

**ಶೂದ್ರ** – ನಾಲ್ಕನೆಯ ವರ್ಣ ಅಥವಾ ಜಾತಿಯ ಜನರು. ನಕುಲನು ದಿಗ್ವಿಜಯ ಕಾಲದಲ್ಲಿ ಇವರನ್ನು ಗೆದ್ದು ತನ್ನ ಸ್ವಾಧೀನಪಡಿಸಿದ್ದನು (ಸಭಾ 32/10). ಈ ಹೆಸರು ದಕ್ಷಿಣ ಭಾರತದ ಒಂದು ಜನಪದಕ್ಕೂ ಇದೆ (ಭೀಷ್ಮ 9/67). ಭಗವಂತನ ಶರಣಾಗತರಾದಾಗ ಪಾಪಿಗಳಾಗಿ ಹುಟ್ಟಿದ ಜೀವರೂ, ಶೂದ್ರರೂ ಪರಮಗತಿ ಯನ್ನು ಪಡೆಯುತ್ತಾರೆ (ಭೀಷ್ಮ 33/32). ಶೂದ್ರಜನಪದದ ಜನರು ದುರ್ಯೋಧನನನ್ನು ಮುಂದಿಟ್ಟುಕೊಂಡು, ಕರ್ಣನ ಬೆಂಗಡೆಯಲ್ಲಿ ರುತ್ತಾ, ಧೃತರಾಷ್ಟ್ರ ಪುತ್ರರ ಸಂಗಡ ಯುದ್ಧ ಕ್ಷೇತ್ರಕ್ಕೆ ಹೋಗಿದ್ದರು (ದ್ರೋಣ 7/15–16).

**ಶೂನ್ಯಪಾಲ** – ದಿವ್ಯಲೋಕದ ಒಬ್ಬ ಋಷಿ. ಇವನು ಪಾಂಡವರ ದೂತನಾಗಿ ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಮಾರ್ಗದಲ್ಲಿ ಭೇಟಿ ಯಾಗಿದ್ದನು (ಉದ್ಯೋಗ 83/64). ಇವನೊಬ್ಬ ವಾನಪ್ರಸ್ಥೀ ಋಷಿಯಾಗಿದ್ದನು ಮತ್ತು ವಾನಪ್ರಸ್ಥ ಧರ್ಮಪಾಲನೆಯಿಂದ ಸ್ವರ್ಗವನ್ನು ಪಡೆದನು (ಶಾಂತಿ 244/18).

**ಶೂರ** – (1) ಒಬ್ಬ ಪ್ರಾಚೀನ ರಾಜ (ಆದಿ 1/232).

(2) ಮಹಾರಾಜ ಈಲಿನನಿಂದ ರಥಂತರಿಯ ಗರ್ಭದಲ್ಲಿ ಹುಟ್ಟಿದ ಐದು ಪುತ್ರರಲ್ಲಿ ಒಬ್ಬ. ಉಳಿದ ನಾಲ್ವರ ಹೆಸರುಗಳು – ದುಷ್ಯಂತ, ಭೀಮ, ಪ್ರವಸು ಮತ್ತು ವಸು (ಆದಿ 94/17–18).

(3) ಸೌವೀರ ದೇಶದ ಒಬ್ಬ ರಾಜಕುಮಾರ (ವನ 265/10). ದ್ರೌಪದೀಹರಣದ ಸಮಯ ದಲ್ಲಿ ಅರ್ಜುನನಿಂದ ಇವನ ವಧೆ (ವನ 271/ 27).

**ಶೂರಸೇನ** (ಶೂರ) – (1) ವಸುದೇವನ ತಂದೆ. ಯದುವಂಶದ ಒಬ್ಬ ಶ್ರೇಷ್ಠ ಪುರುಷ. ಇವನ ಪುತ್ರಿಯ ಹೆಸರು ಪೃಥೆ (ಆದಿ 67/129; ಆದಿ 109/1). ಇವನು ತನ್ನ ಪುತ್ರಿ ಪೃಥೆಯನ್ನು ತನ್ನ ಮಿತ್ರ ರಾಜಾ ಕುಂತೀಭೋಜನಿಗೆ ದತ್ತಕವಾಗಿ ಒಪ್ಪಿಸಿದುದು (ಆದಿ 67/131, ಆದಿ 109/2; ಆದಿ 110/3). ಇವನು ಯದುವಂಶದ ದೇವಮೀಢನ ಪುತ್ರನಾಗಿದ್ದನು. ಇವನ ಪುತ್ರನ ಹೆಸರು ವಸುದೇವನೆಂದಾಗಿತ್ತು (ದ್ರೋಣ 144/ 6–7). ಕೆಲವು ಕಡೆ ಇವನನ್ನು ಚಿತ್ರರಥನ ಪುತ್ರನೆಂದು ಹೇಳಲಾಗಿದೆ. ದೇವಮೀಢನ ಇನ್ನೊಂದು ಹೆಸರು ಚಿತ್ರರಥನೆಂದಾಗಿರಲೂ ಬಹುದು (ಅನು 147/29–32).

(2) ಒಂದು ಜನಪದ ಮತ್ತು ಅಲ್ಲಿರುವ ನಿವಾಸಿ ಗಳು (ಆಧುನಿಕ ಮಥುರಾಮಂಡಲ ಅಥವಾ ವ್ರಜಮಂಡಲ). ಈ ದೇಶದ ಜನರು ಜರಾ ಸಂಧನ ಭಯದಿಂದ ತಮ್ಮ ಸಹೋದರ ಸೇವಕರ ಸಮೇತ ದಕ್ಷಿಣ ದಿಕ್ಕಿಗೆ ಓಡಿಹೋಗಿದ್ದರು (ಸಭಾ 14/26–28). ಸಹದೇವನು ದಕ್ಷಿಣ ದಿಗ್ವಿಜಯ ಕಾಲದಲ್ಲಿ, ಇಂದ್ರಪ್ರಸ್ಥದಿಂದ ಹೊರಟು, ಮೊತ್ತ ಮೊದಲು ಶೂರಸೇನ ನಿವಾಸಿಗಳ ಮೇಲೆಯೇ ಪೂರ್ಣರೂಪದ ವಿಜಯ ಪಡೆದಿದ್ದನು (ಸಭಾ 31/1–2). ಈ ದೇಶದ ಜನರು ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಕಾಣಿಕೆ ತಂದಿದ್ದರು (ಸಭಾ 52/13). ಪಾಂಡವರು ಪಾಂಚಾಲ ದಕ್ಷಿಣಕ್ಕಿರುವ ಯಕೃಲ್ಲೋಮ ಮತ್ತು ಶೂರಸೇನ ದೇಶಗಳ ಮಧ್ಯದಿಂದಾಗಿ ಮತ್ಸ್ಯದೇಶಕ್ಕೆ ಹೋಗಿದ್ದರು (ವಿರಾಟ 5/4). ಇದು ಒಂದು ಭಾರತೀಯ ಜನಪದವಾಗಿದೆ (ಭೀಷ್ಮ 9/29,

52). ಈ ದೇಶದ ಶೂರವೀರ ಸೈನಿಕರು ತಮ್ಮ ಶರೀರವನ್ನು ಬಲಿದಾನವಾಗಿಡಲು ಸಿದ್ಧರಾಗಿ, ವಿಶಾಲ ರಥ ಸಮುದಾಯದೊಂದಿಗೆ ಪಿತಾಮಹ ಭೀಷ್ಮನ ರಕ್ಷಣೆ ಮಾಡುತ್ತಿದ್ದರು (ಭೀಷ್ಮ 18/12–14). ಈ ದೇಶದ ಸೈನಿಕರು ಕೃತವರ್ಮಾ ಮತ್ತು ಕಾಂಬೋಜ ರಾಜನೊಂದಿಗೆ ಬಂದು ಅರ್ಜುನನು ಮುಂದುವರಿಯದಂತೆ ತಡೆದಿದ್ದರು (ದ್ರೋಣ 91/37–38). ಶೂರದೇಶದ ಯೋಧರು ಅರ್ಜುನನ ಮೇಲೆ ಬಾಣಗಳ ಮಳೆಗರೆದಿದ್ದರು (ದ್ರೋಣ 93/12). ಸಾತ್ಯಕಿಯನ್ನು ಮುಂದು ವರಿಯದಂತೆ ತಡೆದಿದ್ದರು (ದ್ರೋಣ 141/9). ಯುಧಿಷ್ಠಿರನು ಶೂರಸೇನರ ಸಂಹಾರಮಾಡಿ, ಭೂಮಿಯ ಮೇಲೆ ರಕ್ತದ ಕೆಸರನ್ನು ಚೆಲ್ಲಿದನು (ದ್ರೋಣ 157/29). ಭೀಮಸೇನನು ಶೂರಸೇನ ದೇಶದ ರಣದುರ್ಮದ ಕ್ಷತ್ರಿಯರನ್ನು ಕಡಿದು ಕಡಿದು, ಅಲ್ಲಿರುವ ರಣಭೂಮಿಯನ್ನು ಮುಚ್ಚಿಬಿಟ್ಟನು. ಇದರಿಂದಾಗಿ ಅಲ್ಲಿ ರಕ್ತದ ಕೆಸರು ತುಂಬಿತು (ದ್ರೋಣ 161/4–5). ಶೂರಸೇನ ನಿವಾಸಿಗಳು ಯಜ್ಞಮಾಡುತ್ತಾರೆ (ಕರ್ಣ 45/28). ಪಾಂಡವ ಪಕ್ಷದ, ಶೂರಸೇನ ದೇಶದ ವೀರರೊಂದಿಗೆ, ಕೃಪಾಚಾರ್ಯ, ಕೃತವರ್ಮಾ ಮತ್ತು ಶಕುನಿ ಯುದ್ಧ ಮಾಡಿದ್ದರು (ಕರ್ಣ 47/16–18).

(3) ಒಬ್ಬ ರಾಜ. ಇವನು ಕೌರವಪಕ್ಷದ ಸಹಾಯಕನಾಗಿದ್ದನು. ಇವನು ಭೀಷ್ಮ ನಿರ್ಮಿತ ಕ್ರೌಂಚವ್ಯೂಹದ ಕುತ್ತಿಗೆಯ ಭಾಗದಲ್ಲಿ ದುರ್ಯೋಧನನೊಂದಿಗೆ ನಿಂತಿದ್ದನು (ಭೀಷ್ಮ 75/18).

**ಶೂರಸೇನಪುರ**– ಇದನ್ನೇ ಮಥುರಾ ಎನ್ನುತ್ತಾರೆ (ಸಭಾ 38/295) (ವಿಶೇಷ ನೋಡಿರಿ – ಮಥುರಾ).

**ಶೂರಸೇನೀ** – ರಾಜಾ ಪೂರುವಿನ ಪುತ್ರ ಪ್ರವೀರನ ಪತ್ನಿ. ಈಕೆಯ ಗರ್ಭದಿಂದ ಮನಸ್ಯುವೆಂಬ ಪುತ್ರ ಜನಿಸಿದ್ದನು (ಆದಿ 94/6).

**ಶೂರ್ಪಣಖಾ** – ರಾವಣನ ಸಹೋದರಿ. ಶ್ರೀರಾಮನು ಲಕ್ಷ್ಮಣನ ಮೂಲಕ ಈಕೆಯ ಮೂಗನ್ನು ಕೊಯ್ಸಿದ್ದನು (ಸಭಾ 38/29). ಇವಳು ವಿಶ್ರವಸನಿಂದ ರಾಕಾ ಎಂಬವಳ ಗರ್ಭದಲ್ಲಿ ಜನಿಸಿದ್ದಳು. ಇವಳ ಸಹೋದರ ಖರನಾಗಿದ್ದನು (ವನ 275/8). ಖರ ಮತ್ತು ಶೂರ್ಪಣಖಾ – ಈ ಇಬ್ಬರು ಸೋದರ ಸೋದರಿಯರು, ತಪಸ್ಸಿನಲ್ಲಿ ಮಗ್ನರಾದ ರಾವಣಾದಿ ಸಹೋದರರ ಪರಿಚರ್ಯೆ ಹಾಗೂ ರಕ್ಷಣೆಯನ್ನು ಪ್ರಸನ್ನಮನಸ್ಸಿನಿಂದ ಮಾಡುತ್ತಿದ್ದರು (ವನ 275/19). ಈಕೆಯ ಮೂಗು ಕಳಕೊಂಡು, ಜನಸ್ಥಾನನಿವಾಸಿಗಳಾದ ಖರಾದಿ ರಾಕ್ಷಸರು ಕೊಲ್ಲಲ್ಪಟ್ಟಾಗ, ಲಂಕೆಯಲ್ಲಿರುವ ತನ್ನ ಅಣ್ಣ ರಾವಣನ ಬಳಿಗೆ ಹೋದಳು ಮತ್ತು ಅವನ ಪಾದಕ್ಕೆ ಬಿದ್ದಳು (ವನ 277/45–46). ಇವಳು ರಾವಣನೊಡನೆ ರಾಕ್ಷಸಸಂಹಾರದ ಎಲ್ಲಾ ವೃತ್ತಾಂತ ಹೇಳಿದಳು (ವನ 277/52).

**ಶೂರ್ಪಾರಕ** – ಪಶ್ಚಿಮ ಭಾರತದ ಒಂದು ಜನಪದ. ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ಇದನ್ನು ಗೆದ್ದಿದ್ದನು (ಸಭಾ 31/65). ಇಲ್ಲಿ ಪರಶುರಾಮಸೇವಿತ ಶೂರ್ಪಾರಕ ತೀರ್ಥವಿದೆ. ಅಲ್ಲಿಗೆ ಹೋಗಿ, ರಾಮತೀರ್ಥದಲ್ಲಿ ಸ್ನಾನಮಾಡುವುದರಿಂದ, ಮನುಷ್ಯನಿಗೆ ಅಪಾರ ಸುವರ್ಣರಾಶಿ ಪ್ರಾಪ್ತವಾಗುತ್ತದೆ (ವನ 85/43). ಈ ಶೂರ್ಪಾರಕ ಕ್ಷೇತ್ರದಲ್ಲಿ ಮಹಾತ್ಮಾ ಜಮದಗ್ನಿಯ ಯಜ್ಞವೇದಿಕೆ ಇದೆ. ಅಲ್ಲಿ ರಮಣೀಯ ಪಾಷಾಣತೀರ್ಥ ಮತ್ತು ಪುನಶ್ಚಂದ್ರಾ ಎಂಬ ತೀರ್ಥವಿಶೇಷವಿದೆ (ವನ 88/12). ಯುಧಿಷ್ಠಿರನು ಈ ಪುಣ್ಯಮಯ ತೀರ್ಥದ ದರ್ಶನ ಮಾಡಿದನು (ವನ 118/8). ಸಮುದ್ರನು ಪರಶುರಾಮನಿಗೋಸ್ಕರ ಸ್ಥಳವನ್ನು ಖಾಲಿಮಾಡಿ, ಶೂರ್ಪಾರಕ ದೇಶದ ನಿರ್ಮಾಣಮಾಡಿದ್ದನು. ಇದನ್ನು ಅಪರಾಂತ ಭೂಮಿಯೆಂದೂ ಹೇಳುತ್ತಾರೆ (ಶಾಂತಿ 49/66–67). ಶೂರ್ಪಾರಕ ಕ್ಷೇತ್ರದ ನೀರಿನಲ್ಲಿ ಸ್ನಾನಮಾಡಿ ಒಂದು ಪಕ್ಷದ ವರೆಗೆ ನಿರಾಹಾರವಾಗಿರುವವನು, ಇನ್ನೊಂದು ಜನ್ಮದಲ್ಲಿ ರಾಜಕುಮಾರನಾಗುತ್ತಾನೆ (ಅನು 25/50).

**ಶೃಗಾಲ** – ಸ್ತ್ರೀರಾಜ್ಯದ ಸ್ವಾಮಿ, ಈತ ಕಲಿಂಗ ರಾಜ ಚಿತ್ರಾಂಗದನ ಕನ್ಯೆಯ ಸ್ವಯಂವರಕ್ಕೆ ಆಗಮಿಸಿದ್ದನು (ಶಾಂತಿ 4/7).

**ಶೃಂಗ** – ಶಂಕರನ ವಾದ್ಯವಿಶೇಷ (ವನ 88/8).

**ಶೃಂಗವಂತ** – (1) ಹಿರಣ್ಯಕ ವರ್ಷದ ಒಂದು ಪರ್ವತ. ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನ

ಇಲ್ಲಿಗೆ ಹೋಗಿದ್ದನು ಮತ್ತು ಇದನ್ನು ದಾಟಿ ಉತ್ತರ ಕುರುವರ್ಷಕ್ಕೆ ಹೊರಟು ಹೋಗಿದ್ದನು (ಸಭಾ 28/6). ಇದು ಆರು ವರ್ಷಪರ್ವತ ಗಳಲ್ಲಿ ಗಣಿಸಲ್ಪಟ್ಟಿದೆ. ಇದು ಎಲ್ಲಾ ಧಾತು ಗಳಿಂದ ತುಂಬಿದೆ ಮತ್ತು ವಿಚಿತ್ರ ಶೋಭೆಯಿಂದ ಕೂಡಿದೆ. ಇಲ್ಲಿ ಸಿದ್ಧರೂ ಚಾರಣರೂ ವಾಸ ಮಾಡುತ್ತಾರೆ (ಭೀಷ್ಮ 6/5). ಧೃತರಾಷ್ಟ್ರನಲ್ಲಿ ಸಂಜಯನಿಂದ ಇದರ ವಿಶೇಷ ವರ್ಣನೆ (ಭೀಷ್ಮ 8/8–9). ಸಾಯಂ ಪ್ರಾತಃಕಾಲಗಳಲ್ಲಿ ಸ್ಮರಣೀಯವಾದ ಪರ್ವತಗಳಲ್ಲಿ ಕೂಡಾ ಇದರ ಹೆಸರಿದೆ (ಅನು 165/32).

(2) ಒಬ್ಬ ಪ್ರಾಚೀನ ಋಷಿ. ಇವನು ಗಾಲವನ ಪುತ್ರ. ಇವನು ಒಂದು ಶರ್ತದೊಂದಿಗೆ ವೃದ್ಧಕನ್ಯೆಯ ಪಾಣಿಗ್ರಹಣ ಮಾಡಿದ್ದನು (ಶಲ್ಯ 52/15–17). ಒಂದು ರಾತ್ರಿ ಇವನೊಂದಿಗಿದ್ದು ವೃದ್ಧಕನ್ಯೆ ಹೊರಟು ಹೋದಾಗ, ಈತ ಆಕೆಯ ರೂಪವನ್ನು ನೆನೆಯುತ್ತಾ ಅತ್ಯಂತ ದುಃಖಿತ ನಾದನು ಮತ್ತು ಶರೀರ ತ್ಯಾಗಮಾಡಿ, ಈತನೂ ಆಕೆಯ ದಾರಿಯನ್ನೇ ಅನುಸರಿಸಿದನು (ಶಲ್ಯ 52/19–24).

**ಶೃಂಗವೇರ** – ಕೌರವ್ಯಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪ ಯಜ್ಞದಲ್ಲಿ ಸುಟ್ಟುಹೋದನು (ಆದಿ 57/13).

**ಶೃಂಗವೇರಪುರ** – ಒಂದು ತೀರ್ಥ. ಇಲ್ಲಿ ಪೂರ್ವಕಾಲದಲ್ಲಿ ವನವಾಸದ ಸಮಯದಲ್ಲಿ ದಶರಥನಂದನ ಶ್ರೀರಾಮನು ಗಂಗೆಯನ್ನು ದಾಟಿದ್ದನು. ಆ ತೀರ್ಥದಲ್ಲಿ ಸ್ನಾನಮಾಡುವು ದರಿಂದ ಮನುಷ್ಯ ಎಲ್ಲಾ ಪಾಪಗಳಿಂದ ಮುಕ್ತ ನಾಗುತ್ತಾನೆ (ವನ 85/65–66). (ಇಲ್ಲಿಯೇ ನಿಷಾದರಾಜ ಗುಹನ ರಾಜಧಾನಿ ಇತ್ತು. ಬಹುಶಃ ಪ್ರತಾಪಗಢ ಜಿಲ್ಲೆಯ ಸಿಂಗರೌರಾ ಎಂಬ ಹಳ್ಳಿಯೇ ಪ್ರಾಚೀನ ಶೃಂಗವೇರಪುರ ವಾಗಿದೆ.).

**ಶೃಂಗೀ** – ಶಮೀಕ ಋಷಿಯ ತರುಣ ಪುತ್ರ. ಈತ ಮಹಾತಪಸ್ವಿ, ದುಃಸಹ ತೇಜಸ್ವಿ ಮತ್ತು ಮಹಾವ್ರತಧಾರಿಯಾಗಿದ್ದನು. ಅವನಲ್ಲಿ ಸಿಟ್ಟು ಅತಿಯಾಗಿತ್ತು (ಆದಿ 40/25–26). ಆಚಾರ್ಯನ ಸೇವೆಯಿಂದ ಹಿಂತಿರುಗುತ್ತಿದ್ದಾಗ, ತನ್ನ ಮಿತ್ರ ಕೃಶನ ಮೂಲಕ ರಾಜಾ ಪರೀಕ್ಷಿತನ ಅಪರಾಧದ ಸಮಾಚಾರ ಕೇಳಿ, ಆತ ತಕ್ಷಕನ ಕಡಿತದಿಂದ ಮರಣಹೊಂದುವಂತೆ ಈತ ಶಾಪವನ್ನಿತ್ತದ್ದು (ಆದಿ 40/29 ರಿಂದ ಆದಿ 41/14ರ ವರೆಗೆ; ಆದಿ 50/4–11). ಪರೀಕ್ಷಿತನಿಗೆ ಶಾಪಕೊಟ್ಟ ಕಾರಣಕ್ಕಾಗಿ ತಂದೆಯಿಂದ ಇವನಿಗೆ ಧಿಕ್ಕಾರ ಮತ್ತು ರಾಜನ ಮಹತ್ವ ಮತ್ತು ಆವಶ್ಯಕತೆಯ ಪ್ರತಿಪಾದನೆ (ಆದಿ 41/20–33). ವ್ಯಾಸರು ಆವಾಹನೆ ಮಾಡಿದಾಗ ಸ್ವರ್ಗದಿಂದ ಪರೀ ಕ್ಷಿತನೊಂದಿಗೆ ಶೃಂಗಿ ಮತ್ತು ಅವನ ತಂದೆ ಶಮೀಕ ಕೂಡಾ ಜನಮೇಜಯನ ಯಜ್ಞಕ್ಕೆ ಬಂದಿದ್ದರು (ಆಶ್ರಮ 35/8).

**ಶೇಷನಾಗ** – ನಾಗರಾಜ ಅನಂತ (ಇವನು ಸಾಕ್ಷಾತ್ ಭಗವಂತ ನಾರಾಯಣನ ಸ್ವರೂಪ ವಾಗಿದ್ದಾನೆ ಮತ್ತು ಆತನಿಗಾಗಿ ಶಯ್ಯಾರೂಪ ನಾಗಿ, ಆತನನ್ನು ಧಾರಣ ಮಾಡುತ್ತಾನೆ.). ಇವನಿಂದ ಮಂದರಾಚಲವು ಕೀಳಲ್ಪಟ್ಟದ್ದು (ಆದಿ 18/8). ನಾಗಗಳಲ್ಲಿ ಸರ್ವಪ್ರಥಮವಾಗಿ ಇವನೇ ಪ್ರಕಟಗೊಂಡನು (ಆದಿ 35/2–5). ನಾಗಗಳ ಪರಸ್ಪರ ದ್ವೇಷದಿಂದ ಬೇಸತ್ತು ಇವನು ಪುಷ್ಕರಾದಿ ಕ್ಷೇತ್ರಗಳಲ್ಲಿ ತಪಸ್ಸು ಮಾಡಿದುದು (ಆದಿ 36/3–5). ಧರ್ಮದಲ್ಲಿ ಅಚಲನಿಷ್ಠೆ ಇರುವಂತೆ ಬ್ರಹ್ಮನಲ್ಲಿ ಇವನಿಂದ ವರ ಯಾಚನೆ (ಆದಿ 36/17). ಬ್ರಹ್ಮನಿಂದ ಇವನಿಗೆ ವರದಾನ ಮತ್ತು ಪೃಥ್ವಿಯನ್ನು ಹೊರುವಂತೆ ಆಜ್ಞೆ ನೀಡಿದುದು (ಆದಿ 36/18–19). ಪೃಥ್ವಿಯನ್ನು ಸ್ಥಿರವಾಗಿ ಧಾರಣ ಮಾಡುವುದಕ್ಕಾಗಿ ಬ್ರಹ್ಮನಿಂದ ಧೈರ್ಯದ ಆಶ್ವಾಸನೆ (ಆದಿ 36/20). ಇವನ ತಾಯಿ ಕದ್ರು ಮತ್ತು ತಂದೆ ಕಶ್ಯಪರಾಗಿದ್ದಾರೆ (ಆದಿ 65/41). ಇವನ ಅಂಶದಿಂದ ಬಲ ರಾಮನು ಅವತರಿಸಿದ್ದನು (ಆದಿ 67/152). ಭಗವಂತನಾದ ನಾರಾಯಣನು ಶೇಷನನ್ನು ಶಯ್ಯೆಯಾಗಿ ಮಾಡಿ, ಇವನ ಮೇಲೆ ಪವಡಿಸು ತ್ತಾನೆ (ವನ 272/38–40). ತ್ರಿಪುರದಹನದ ಸಮಯದಲ್ಲಿ ಈತ ಶಿವನ ರಥದ ಅಚ್ಚು ಆಗಿದ್ದನು (ದ್ರೋಣ 202/72).

**ಶೈಖಾವತ್ಯ** – ಮಹಾತಪಸ್ವಿಯಾದ ಒಬ್ಬ ಪ್ರಾಚೀನ ಋಷಿ. ಇವನು ಶಾಲ್ವನಿಂದ ಪರಿತ್ಯಕ್ತೆ ಳಾಗಿ, ಆಶ್ರಮಕ್ಕೆ ಬಂದು ಅಳುತ್ತಿದ್ದ ಅಂಬೆ ಯೊಡನೆ ಮಾತುಕತೆ ಮಾಡಿದ್ದನು. ಈತ

ಕಠೋರ ವ್ರತಾಚರಣೆ ಮಾಡುತ್ತಿದ್ದ ತಪೋವೃದ್ಧ ಬ್ರಹ್ಮರ್ಷಿಯಾಗಿದ್ದನು. ಶಾಸ್ತ್ರ ಮತ್ತು ಆರಣ್ಯಕಾದಿ ಗ್ರಂಥಗಳ ಶಿಕ್ಷಣ ನೀಡುವ ಸದ್ಗುರುವಾಗಿದ್ದನು (ಉದ್ಯೋಗ 175/38–49).

**ಶೈಬ್ಯ** – (1) ಒಬ್ಬ ಪ್ರಾಚೀನ ರಾಜ (ಆದಿ 1/225). ಇವನ ಪುತ್ರನ ಹೆಸರು ಸೃಂಜಯ ನೆಂದಾಗಿತ್ತು. ಅವನಿಗೆ ಪರ್ವತ ಮತ್ತು ನಾರದರಲ್ಲಿ ಸ್ನೇಹವಿದ್ದಿತು (ದ್ರೋಣ 55/5).

(2) ಶಿಬಿ ದೇಶದ ರಾಜ. ಈತ ಯುಧಿಷ್ಠಿರನ ಮಾವನಾಗಿದ್ದನು. ಇವನ ಹೆಸರು ಗೋವಾಸನ ಎಂದಾಗಿತ್ತು (ಆದಿ 95/76). ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/25). ಇವನೂ ಕಾಶೀರಾಜನೂ ಯುಧಿಷ್ಠಿರನ ಪ್ರೀತಿಪಾತ್ರರಾಗಿದ್ದರು. ಇವನು ಒಂದು ಅಕ್ಷೌಹಿಣೀ ಸೇನೆಯೊಂದಿಗೆ ಉಪಪ್ಲವ್ಯಕ್ಕೆ ಬಂದು ಅಭಿಮನ್ಯು ವಿನ ವಿವಾಹದಲ್ಲಿ ಭಾಗವಹಿಸಿದ್ದನು (ವಿರಾಟ 72/16). ಕೃತವರ್ಮನೊಂದಿಗೆ ಯುದ್ಧಮಾಡುವ ಕೆಲಸ ಇವನಿಗೆ ಒಪ್ಪಿಸಲ್ಪಟ್ಟಿತ್ತು (ಉದ್ಯೋಗ 164/6). ದುರ್ಯೋಧನನು ನರಶ್ರೇಷ್ಠ ಶೈಭ್ಯ ನನ್ನು ಪಾಂಡವಸೇನೆಯ ಮಹಾನ್ ಧನುರ್ಧಾರಿ ಗಳಲ್ಲಿ ಒಬ್ಬನೆಂದು ಪರಿಗಣಿಸಿದ್ದನು. ಇವನು ಕಾಶಿರಾಜನೊಂದಿಗೆ ಸೇರಿ ಮೂವತ್ತು ಸಾವಿರ ರಥಿಕರೊಂದಿಗೆ ಧೃಷ್ಟದ್ಯುಮ್ನನಿರ್ಮಿತ ಕ್ರೌಂಚ ವ್ಯೂಹದ ರಕ್ಷಣೆ ಮಾಡುತ್ತಿದ್ದನು (ಭೀಷ್ಮ 50/56–57). ಇವನು ಉಶೀನರನ ಮೊಮ್ಮಗ ನೆಂದು ಹೇಳಲಾಗಿದೆ. ಧೃತರಾಷ್ಟ್ರನಿಂದ ಇವನ ವೀರತನದ ವರ್ಣನೆ (ದ್ರೋಣ 10/64–70). ನೀಲಕಮಲದಂತೆ ಬಣ್ಣವುಳ್ಳ, ಸುವರ್ಣಮಯ ಆಭೂಷಣಗಳಿಂದ ಅಲಂಕರಿಸಲ್ಪಟ್ಟ, ವಿಚಿತ್ರ ಮಾಲೆಗಳುಳ್ಳ ಅಶ್ವಗಳು, ವಿಚಿತ್ರ ರಥದಿಂದ ಕೂಡಿದ ರಾಜಾ ಶೈಬ್ಯನನ್ನು ಯುದ್ಧರಂಗಕ್ಕೆ ಕರಕೊಂಡು ಹೋಗಿದ್ದವು (ದ್ರೋಣ 23/61).

(3) ಭಗವಾನ್ ಶ್ರೀಕೃಷ್ಣನ ರಥದ ಒಂದು ಕುದುರೆ (ಆದಿ 219; ವನ ಅಧ್ಯಾಯ 20, 22, 183; ವಿರಾಟ ಅಧ್ಯಾಯ 45; ಉದ್ಯೋಗ ಅಧ್ಯಾಯ 8, 131; ದ್ರೋಣ ಅಧ್ಯಾಯ 79, 145/57; ಸೌಪ್ತಿಕ, ಅಧ್ಯಾಯ 13; ಶಾಂತಿ ಅಧ್ಯಾಯ 36, 46, 53).

(4) ವೃಷ್ಣಿ ವಂಶದ ಒಬ್ಬ ಕ್ಷತ್ರಿಯ ವೀರ. ಇವನು ಅರ್ಜುನನಿಂದ ಧನುರ್ವೇದದ ಶಿಕ್ಷಣ ಪಡೆದಿದ್ದನು. ಇವನು ಯುಧಿಷ್ಠಿರನ ಸಭೆಯಲ್ಲಿ ವಿರಾಜಮಾನನಾಗಿರುತ್ತಿದ್ದನು (ಸಭಾ 4/34–35).

(5) ಒಬ್ಬ ಕ್ಷತ್ರಿಯ ರಾಜ. ಇವನನ್ನು ಶ್ರೀಕೃಷ್ಣನು ಪರಾಜಯಗೊಳಿಸಿದ್ದನು (ಸಭಾ 38/29).

(6) ಕೌರವ ಪಕ್ಷದ ಒಬ್ಬ ಪ್ರಮುಖ ಯೋಧ. ಇವನು ಭೀಷ್ಮನಿರ್ಮಿತ ಸರ್ವತೋಭದ್ರವೆಂಬ ವ್ಯೂಹದ ಮುಖಭಾಗದಲ್ಲಿ ನಿಂತಿದ್ದನು (ಭೀಷ್ಮ 99/2).

**ಶೈಬ್ಯಾ** – (1) ರಾಜಾ ಸಗರನ ಒಬ್ಬಳು ಪತ್ನಿ. ಇವಳಿಂದ ವಂಶಪ್ರವರ್ತಕನಾದ ಒಬ್ಬನೇ ಮಗ ಹುಟ್ಟಿದ್ದನು. ಆ ಪುತ್ರನ ಹೆಸರು ಅಸಮಂಜಸ ನೆಂದಾಗಿತ್ತು (ವನ 106/20; ವನ 107/39).

(2) ಶಾಲ್ವದೇಶದ ಪ್ರಾಚೀನ ರಾಜ ದ್ಯುಮತ್ಸೇನ ರಾಣಿ. ಈಕೆ ರಾತ್ರಿಯಾದರೂ, ಆಶ್ರಮಗಳಿಗೆ ಹೋಗಿ, ತನ್ನ ಪುತ್ರ ಸತ್ಯವಾನ ಮತ್ತು ಸೊಸೆ ಸಾವಿತ್ರಿಯ ಸುಳಿವನ್ನು ಹುಡುಕಿದ್ದಳು (ವನ 258/2).

(3) ಭಾರತವರ್ಷದ ಒಂದು ಪ್ರಮುಖ ನದಿ. ಇಲ್ಲಿರುವ ಜನರು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/24).

(4) ಶ್ರೀಕೃಷ್ಣನ ಪಟ್ಟಮಹಿಷಿಯರಲ್ಲಿ ಒಬ್ಬಳು. ಶ್ರೀಕೃಷ್ಣನು ಪರಂಧಾಮವನ್ನೈದಿದಾಗ ಈಕೆ ಪತಿಲೋಕ ಪ್ರಾಪ್ತಿಗಾಗಿ ಅಗ್ನಿಪ್ರವೇಶ ಮಾಡಿದಳು (ಮೌಸಲ 7/73).

**ಶೈರೀಷಕ** – ಒಂದು ದೇಶ. ಪಶ್ಚಿಮ ದಿಗ್ವಿಜಯ ಸಂದರ್ಭದಲ್ಲಿ ನಕುಲನು ಈ ದೇಶವನ್ನು ಗೆದ್ದಿದ್ದನು (ಸಭಾ 32/6).

**ಶೈಲಕಂಪೀ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/63).

**ಶೈಲಾಭ** – ಒಬ್ಬ ಸನಾತನ ವಿಶ್ವೇದೇವ (ಅನು 91/32).

**ಶೈಲಾಲಯ** – ಒಬ್ಬ ರಾಜ. ಇವನು ಭಗದತ್ತನ ಪಿತಾಮಹನಾಗಿದ್ದನು ಮತ್ತು ಕುರುಕ್ಷೇತ್ರದ ತಪೋವನದಲ್ಲಿ ತಪಸ್ಸುಮಾಡಿ ಇಂದ್ರಲೋಕಕ್ಕೆ ಹೋಗಿದ್ದನು (ಆಶ್ರಮ 20/10).

**ಶೈಲೂಷ** – ಒಬ್ಬ ಗಂಧರ್ವ. ಈತ ಕುಬೇರ ಸಭೆಯಲ್ಲಿದ್ದು ಅವನು ಉಪಾಸನೆ ಮಾಡುತ್ತಾನೆ

(ಸಭಾ 10/26).

**ಶೈಲೋದಾ** – ಮೇರು ಮತ್ತು ಮಂದರಾಚಲದ ಮಧ್ಯವರ್ತಿಯಾಗಿರುವ ಒಂದು ನದಿ. ಇದರ ದಡದಲ್ಲಿ ವಾಸಿಸುವ ಮ್ಲೇಚ್ಛರನ್ನು ಅರ್ಜುನನು ಗೆದ್ದಿದ್ದನು (ಸಭಾ 28/6). ಇದರ ಎರಡೂ ದಡಗಳಲ್ಲಿ ಬಿದಿರನ ನೆರಳಲ್ಲಿ ವಾಸಿಸುವ 'ಖಸ'ವೇ ಮೊದಲಾದ ಮ್ಲೇಚ್ಛರು, ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಪಿಪೀಲಕ ಎಂಬ ಸುವರ್ಣದ ಕಾಣಿಕೆ ಸಮರ್ಪಿಸಿದ್ದರು (ಸಭಾ 52/2–4).

**ಶೈವಾಲ** – ಒಂದು ಭಾರತೀಯ ಜನಪದ (ಭೀಷ್ಮ 9/54).

**ಶೈಶವ** – ಒಂದು ದೇಶ. ಇಲ್ಲಿರುವ ಕ್ಷತ್ರಿಯ ರಾಜರು ಕಾಣಿಕೆ ಹಿಡಕೊಂಡು ಬಂದು ಯುಧಿಷ್ಠಿರನ ರಾಜದ್ವಾರದಲ್ಲಿ ನಿಂತಿದ್ದರು (ಸಭಾ 52/18).

**ಶೋಣ** – ಒಂದು ನದಿ. ಇವಳು ವರುಣ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾಳೆ (ಸಭಾ 9/21). ಶ್ರೀಕೃಷ್ಣನು ಇಂದ್ರಪ್ರಸ್ಥದಿಂದ ರಾಜಗೃಹಕ್ಕೆ ಹೋಗುವಾಗ ಮಾರ್ಗದಲ್ಲಿ ಇದನ್ನು ದಾಟಿದ್ದನು (ಸಭಾ 20/27). ಶೋಣ ಮತ್ತು ಜ್ಯೋತಿರಥ್ಯದ ಸಂಗಮದಲ್ಲಿ ಸ್ನಾನಮಾಡಿ, ಪವಿತ್ರನೂ ಜಿತೇಂದ್ರಿಯನೂ ಆದ ಪುರುಷನು, ಪಿತೃಗಳಿಗೆ ತರ್ಪಣವನ್ನಿತ್ತರೆ ಅಗ್ನಿಷ್ಟೋಮ ಯಜ್ಞದ ಫಲ ಪ್ರಾಪ್ತವಾಗುತ್ತದೆ. ಇದರ ಉತ್ಪತ್ತಿಸ್ಥಾನ ವಂಶಗುಲ್ಮತೀರ್ಥವಾಗಿದೆ. ಅಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧ ಯಜ್ಞದ ಫಲಪ್ರಾಪ್ತವಾಗುತ್ತದೆ (ವನ 85/8–9). ಇದು ಅಗ್ನಿಯ ಉತ್ಪತ್ತಿ ಸ್ಥಾನವೆಂದು ತಿಳಿಯಲ್ಪಟ್ಟಿದೆ (ವನ 222/25). ಭಾರತದ ಪ್ರಮುಖ ನದಿಗಳಲ್ಲಿ ಇದು ಗಣಿಸಲ್ಪಟ್ಟಿದೆ (ಭೀಷ್ಮ 9/29).

**ಶೋಣಾಶ್ವ** – ದ್ರೋಣರ ಇನ್ನೊಂದು ಹೆಸರು (ದ್ರೋಣ 93).

**ಶೋಣಿತಪುರ** – ಬಾಣಾಸುರನ ರಾಜಧಾನಿ. ಶಿವ, ಕಾರ್ತಿಕೇಯ, ಭದ್ರಕಾಲೀದೇವಿ ಮತ್ತು ಅಗ್ನಿ ಮೊದಲಾದ ದೇವತೆಗಳು ಈ ನಗರದ ರಕ್ಷಣೆ ಮಾಡುತ್ತಿದ್ದರು. ಶ್ರೀಕೃಷ್ಣನು ಇವರೆಲ್ಲರನ್ನು ಗೆದ್ದು ಉತ್ತರದ್ವಾರದಿಂದ ಪ್ರವೇಶಿಸಿದನು. ಇಲ್ಲಿ ಶಂಕರನನ್ನೂ ಯುದ್ಧದ ಮೂಲಕ ಸೋಲಿಸಿ, ಅವನು ಈ ಶ್ರೇಷ್ಠ ನಗರದೊಳಗೆ ಬಂದನು. ಇಲ್ಲಿ ಅವನು ಬಾಣಾಸುರನ ಭುಜಗಳನ್ನು ಕತ್ತರಿಸಿ, ಆತನನ್ನು ಸೋಲಿಸಿದನು ಮತ್ತು ಅನಿರುದ್ಧ ಹಾಗೂ ಉಷಾಳನ್ನು ಬಂಧನದಿಂದ ಮುಕ್ತಗೊಳಿಸಿದನು (ಸಭಾ 38/29).

**ಶೋಣಿತೋದ** – ಒಬ್ಬ ಯಕ್ಷ. ಈತ ಕುಬೇರನ ಸಭೆಯಲ್ಲಿರುತ್ತಾ, ಆತನ ಸೇವೆಗೆ ಉಪಸ್ಥಿತ ನಾಗಿರುತ್ತಾನೆ (ಸಭಾ 10/17).

**ಶೋಭನಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/6).

**ಶೌಣ್ಡಿಕ** – ಒಂದು ಜಾತಿ. ಈ ಜಾತಿಯವರು ಮೊದಲು ಕ್ಷತ್ರಿಯರಾಗಿದ್ದರು. ಆದರೆ ಬ್ರಾಹ್ಮಣರ ಕ್ರೋಧದಿಂದ ನೀಚರಾದರು (ಅನು 35/17–18).

**ಶೌನಕ** – ಭೃಗುವಂಶದಲ್ಲಿ ಹುಟ್ಟಿದ ಒಬ್ಬ ಮಹರ್ಷಿ. ಈತ ನೈಮಿಷಾರಣ್ಯವಾಸಿ ಮತ್ತು ಅಲ್ಲಿರುವ ಆಶ್ರಮದ ಕುಲಪತಿಯಾಗಿದ್ದನು. ಇವನ ದ್ವಾದಶವಾರ್ಷಿಕ ಯಜ್ಞಕ್ಕೆ ಉಗ್ರಶ್ರವಾನು ಬರುವುದು ಮತ್ತು ಮಹಾಭಾರತದ ಕಥೆ ಹೇಳಿದುದು (ಆದಿ 1/19). ಇವನು ಭೃಗುವಂಶದ ಶುನಕನ ಪುತ್ರ (ಅನು 30/65). ಮಹಾಭಾರತದಲ್ಲಿ ಬಂದಿರುವ ಶೌನಕನ ಹೆಸರು ಗಳು – ಭಾರ್ಗವ, ಭಾರ್ಗವೋತ್ತಮ, ಭೃಗು ಶಾರ್ದೂಲ, ಭೃಗೂದ್ವಹ, ಭೃಗುಕುಲೋದ್ವಹ, ಭೃಗುನಂದನ ಇತ್ಯಾದಿ.

(2) ಯುಧಿಷ್ಠಿರನ ವನಗಮನ ಕಾಲದಲ್ಲಿ ಅವನೊಂದಿಗೆ ಹೋದ ಒಬ್ಬ ಬ್ರಾಹ್ಮಣ. ಇವನಿಂದ ಯುಧಿಷ್ಠಿರನಿಗೆ ವಿವೇಕಿ–ಅವಿವೇಕಿಗಳ ಗತಿಗಳ ವರ್ಣನೆ (ವನ 2/64–81). ಇವನಿಂದ ಯುಧಿಷ್ಠಿರನಿಗೆ ತಪಸ್ಸು ಮಾಡಲು ಆದೇಶ (ವನ 2/82–84).

**ಶೌರಿ** – ಶೂರನ ಮಗ ವಸುದೇವ (ದ್ರೋಣ 144/7) (ನೋಡಿರಿ–ವಸುದೇವ).

**ಶ್ಯಾಮ** – ಶಾಕದ್ವೀಪದ ಒಂದು ಮಹಾನ್ ಪರ್ವತ. ಇದು ಮೇಘದಂತೆ ಶ್ಯಾಮವೂ, ತುಂಬಾ ಎತ್ತರವೂ ಆಗಿದೆ. ಇಲ್ಲಿ ವಾಸಿಸು ವುದರಿಂದ ಪ್ರಜೆಗಳು ಶ್ಯಾಮಲತ್ವವನ್ನು ಪಡೆದಿ ದ್ದಾರೆ (ಭೀಷ್ಮ 11/19–20).

**ಶ್ಯಾಮಾಯನ** – ವಿಶ್ವಾಮಿತ್ರನ ಬ್ರಹ್ಮವಾದಿ

ಪುತ್ರರಲ್ಲಿ ಒಬ್ಬ (ಅನು 4/55).

**ಶ್ಯಾಮಾಶ್ರಮ** – ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನ, ನಿವಾಸ ಮತ್ತು ಒಂದು ಪಕ್ಷಕಾಲ ಉಪವಾಸ ಮಾಡುವುದರಿಂದ ಅಂತರ್ಧಾನ ರೂಪಫಲ ಪ್ರಾಪ್ತಿಯಾಗುತ್ತದೆ (ಅನು 25/30).

**ಶ್ಯೇನ** – (1) ಪಕ್ಷಿಗಳ ಒಂದು ಜಾತಿ. ಇದು ತಾಮ್ರಾಕುಮಾರಿ ಶ್ಯೇನಿಯ ಸಂತಾನವಾಗಿದೆ (ಆದಿ 66/56–57).

(2) ಒಬ್ಬ ಪ್ರಾಚೀನ ಋಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/11).

**ಶ್ಯೇನಚಿತ್ರ** – ಒಬ್ಬ ಪ್ರಾಚೀನ ರಾಜ. ಈತ ತನ್ನ ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/63).

**ಶ್ಯೇನಜಿತ್** – (1) ಇಕ್ಷ್ವಾಕುವಂಶದ ರಾಜಾ ದಲನ ಪುತ್ರ. ಇವನು ತಂದೆಗೆ ಅತ್ಯಂತ ಪ್ರೀತಿಪಾತ್ರನಾಗಿದ್ದನು (ವನ 192/63).

(2) ಮಹಾರಥಿಯಾದ ಒಬ್ಬ ರಾಜ. ಇವನು ಭೀಮಸೇನನ ಮಾವನಾಗಿದ್ದನು (ಉದ್ಯೋಗ 141/27).

**ಶ್ಯೇನೀ** – ತಾಮ್ರಾ ಎಂಬವಳ ಪುತ್ರಿ. ಇವಳು ಗೃಧ್ರಪಕ್ಷಿಗಳಿಗೆ ಜನ್ಮವಿತ್ತಿದ್ದಳು (ಆದಿ 66/56–57). ಇವಳು ಗರುಡನ ಅಣ್ಣ ಅರುಣನ ಭಾರ್ಯೆಯಾಗಿದ್ದಳು. ಇವಳ ಗರ್ಭದಿಂದ ಮಹಾಬಲವಂತರಾದ ಇಬ್ಬರು ಪುತ್ರರು ಹುಟ್ಟಿದರು. ಅವರ ಹೆಸರು – ಸಂಪಾತಿ ಮತ್ತು ಜಟಾಯು (ಆದಿ 66/69–70).

**ಶ್ರದ್ಧಾ** – (1) ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಧರ್ಮನ ಪತ್ನಿ. ಬ್ರಹ್ಮನು ಧರ್ಮನ ಹತ್ತು ಪತ್ನಿಯರನ್ನು ಧರ್ಮದ ದ್ವಾರಗಳೆಂದು ನಿಶ್ಚೈಸಿದ್ದಾನೆ (ಆದಿ 66/13–15).

(2) ಇವಳು ಸೂರ್ಯನ ಮಗಳು. ಆದುದರಿಂದ ವೈವಸ್ವತಿ, ಸಾವಿತ್ರಿ ಮತ್ತು ಪ್ರಸವಿತ್ರಿ ಎನ್ನುತ್ತಾರೆ (ಶಾಂತಿ 264/8). (ವಿಶೇಷ ನೋಡಿರಿ–ಸಾವಿತ್ರಿ).

**ಶ್ರವಣ** – ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು. ಶ್ರವಣ ನಕ್ಷತ್ರ ಬಂದಾಗ, ವಸ್ತ್ರ ಮುಚ್ಚಿದ ಕಂಬಳಿ ದಾನ ಕೊಡುವವನು, ಬಿಳಿಯ ವಿಮಾನದ ಮೂಲಕ ತೆರೆದಿರುವ ಸ್ವರ್ಗಕ್ಕೆ ಹೋಗುತ್ತಾನೆ (ಅನು 64/28). ಶ್ರವಣ ನಕ್ಷತ್ರದಲ್ಲಿ ಶ್ರಾದ್ಧವನ್ನು ದಾನಮಾಡುವವನು, ಮರಣಾನಂತರ ಸದ್ಗತಿ ಪಡೆಯುತ್ತಾನೆ (ಅನು 89/11). ಚಂದ್ರವ್ರತ ಮಾಡುವ ಸಾಧಕನು, ಶ್ರವಣನಕ್ಷತ್ರದಲ್ಲಿ ಚಂದ್ರನ ಕಿವಿಯನ್ನು ಭಾವಿಸಿ, ಅವನ ಪೂಜೆ ಮಾಡಬೇಕು (ಅನು 110/7).

**ಶ್ರುವಾ** – ಗೃತ್ಸಮದ ವಂಶದ ಮಹರ್ಷಿ ಸಂತನ ಪುತ್ರ. ಇವನು ತಮನ ತಂದೆ (ಅನು 30/67).

**ಶ್ರಾದ್ಧಪರ್ವ** – ಸ್ತ್ರೀ ಪರ್ವದ ಅಂತರ್ಗತವಾದ ಒಂದು ಅವಾಂತರ ಪರ್ವ (ಅಧ್ಯಾಯ 26 ರಿಂದ 27ರ ವರೆಗೆ).

**ಶ್ರಾವ** – ಇವನು ಇಕ್ಷ್ವಾಕುವಂಶದ ಮಹಾರಾಜ ಯುವನಾಶ್ವನ ಪುತ್ರ. ಇವನ ಪುತ್ರನ ಹೆಸರು ಶ್ರಾವಸ್ತನೆಂದಾಗಿತ್ತು (ವನ 202/3–4).

**ಶ್ರಾವಣ** – (ಹನ್ನೆರಡು ತಿಂಗಳುಗಳಲ್ಲಿ ಒಂದು, ಯಾವ ತಿಂಗಳ ಪೂರ್ಣಿಮೆಯಂದು ಶ್ರವಣ ನಕ್ಷತ್ರದ ಯೋಗವಿರುತ್ತದೋ ಅದನ್ನು ಶ್ರಾವಣ ವೆನ್ನುತ್ತಾರೆ. ಇದು ಆಷಾಡದ ಅನಂತರ ಮತ್ತು ಭಾದ್ರಪದದ ಮೊದಲು ಬರುತ್ತದೆ). ಮನಸ್ಸನ್ನೂ ಇಂದ್ರಿಯಗಳನ್ನೂ ಸಂಯಮದಲ್ಲಿರಿಸಿ ಶ್ರಾವಣ ಮಾಸದಲ್ಲಿ ಪ್ರತಿದಿನ ಒಂದು ಹೊತ್ತು ಊಟ ಮಾಡುವವನು, ಬೇರೆ ಬೇರೆ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯಫಲವನ್ನು ಪಡೆಯುತ್ತಾನೆ ಮತ್ತು ತನ್ನ ಕುಟುಂಬದವರ ವೃದ್ಧಿಯನ್ನು ಮಾಡುತ್ತಾನೆ (ಅನು 106/27). ಶ್ರಾವಣಮಾಸ ದ್ವಾದಶಿ ತಿಥಿಯಂದು, ಹಗಲುರಾತ್ರಿ ಉಪವಾಸ ಮಾಡಿ ಭಗವಂತನಾದ ಶ್ರೀಧರನನ್ನು ಆರಾಧನೆ ಮಾಡುವವನು, ಐದು ಮಹಾಯಜ್ಞಗಳ ಫಲ ಪಡೆಯುತ್ತಾನೆ ಮತ್ತು ವಿಮಾನದಲ್ಲಿ ಕುಳಿತು ಸುಖ ಅನುಭವಿಸುತ್ತಾನೆ (ಅನು 109/11).

**ಶ್ರಾವಸ್ತ** – ಇವನು ಇಕ್ಷ್ವಾಕುವಂಶದ ಮಹಾರಾಜ ಶ್ರಾವಣನ ಪುತ್ರ. ಇವನ ಮಗನ ಹೆಸರು ಬೃಹದಶ್ವ. ರಾಜಾ ಶ್ರಾವಸ್ತನು ಶ್ರಾವಸ್ತಿ ಪುರವನ್ನು ನಿರ್ಮಾಣಮಾಡಿದ್ದನು (ವನ 202/4).

**ಶ್ರಾವಸ್ತೀಪುರಿ** – ಇದು ಇಕ್ಷ್ವಾಕುವಂಶದ ರಾಜ ಶ್ರಾವಸ್ತನ ರಾಜಧಾನಿಯಾಗಿತ್ತು. ಇದನ್ನು ಇದೇ ರಾಜನೇ ನಿರ್ಮಾಣಮಾಡಿದ್ದನು (ವನ 202/4).

**ಶ್ರೀ** – (1) ಭಗವಂತನಾದ ವಿಷ್ಣುವಿನ ಪತ್ನಿ,

ಲಕ್ಷ್ಮಿ. (ನೋಡಿರಿ – ಲಕ್ಷ್ಮಿ)
(2) ಧರ್ಮನ ಒಬ್ಬಳು ಪತ್ನಿಯ ಹೆಸರು (ಆದಿ 66/14).

**ಶ್ರೀಕಂಠ** – ಭಗವಂತನಾದ ಶಂಕರನ ಕಂಠದಲ್ಲಿ ಶ್ರೀಮನ್ನಾರಾಯಣನ ಕೈಯಿಂದ ಅಂಕಿತವಾದ ಚಿಹ್ನೆ ಇರುವ ಕಾರಣ, ಆತ ಶ್ರೀಕಂಠನೆಂದು ಕರೆಯಲ್ಪಡುತ್ತಾನೆ (ಶಾಂತಿ 342/134).

**ಶ್ರೀಕುಂಜ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಸರಸ್ವತಿಯ ಒಂದು ತೀರ್ಥ. ಇದರಲ್ಲಿ ಸ್ನಾನ ಮಾಡುವುದರಿಂದ ಅಗ್ನಿಷ್ಟೋಮ ಯಜ್ಞದ ಫಲ ಸಿಗುತ್ತದೆ (ವನ 83/108).

**ಶ್ರೀಕುಂಡ** – ತ್ರಿಭುವನ ವಿಖ್ಯಾತವಾದ ಒಂದು ಕುಂಡ. ಇಲ್ಲಿಗೆ ಹೋಗಿ ಬ್ರಹ್ಮನಿಗೆ ನಮಸ್ಕಾರ ಮಾಡುವುದರಿಂದ ಸಹಸ್ರಗೋದಾನದ ಫಲ ಪ್ರಾಪ್ತವಾಗುತ್ತದೆ (ವನ 82/86).

**ಶ್ರೀತೀರ್ಥ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ತೀರ್ಥ. ಇಲ್ಲಿಗೆ ಹೋಗಿ ಸ್ನಾನ ಹಾಗೂ ದೇವ–ಪಿತೃಗಳ ಪೂಜೆ ಮಾಡುವುದರಿಂದ ಮನುಷ್ಯನು ಉತ್ತಮ ಸಂಪತ್ತು ಪಡೆಯುತ್ತಾನೆ (ವನ 83/46).

**ಶ್ರೀಪರ್ವತ** – ತೀರ್ಥಮೂಲವಾದ ಒಂದು ಪರ್ವತ. ಇಲ್ಲಿಗೆ ಹೋಗಿ ನದಿ ದಡದಲ್ಲಿ ಸ್ನಾನಮಾಡಿದ ಅನಂತರ ಭಗವಾನ್ ಶಂಕರನ ಪೂಜೆಮಾಡುವುದರಿಂದ ಮನುಷ್ಯನು ಅಶ್ವಮೇಧ ಯಜ್ಞದ ಫಲ ಪಡೆಯುತ್ತಾನೆ (ವನ 85/18).

**ಶ್ರೀಮತಿ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/3).

**ಶ್ರೀಮದ್ಭಗವದ್ಗೀತಾಪರ್ವ** – ಭೀಷ್ಮ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 13 ರಿಂದ 42 ವರೆಗೆ).

**ಶ್ರೀಮಾನ್** – ದತ್ತಾತ್ರೇಯ ಕುಮಾರ ನಿಮಿಯ ಕಾಂತಿವಂತ ಪುತ್ರ. ಇವನು ಒಂದು ಸಾವಿರ ವರ್ಷಗಳವರೆಗೆ ಕಠೋರ ತಪಸ್ಸುಮಾಡಿ, ಅಂತ್ಯ ಕಾಲದಲ್ಲಿ, ಕಾಲಧರ್ಮಕ್ಕೆ ಅಧೀನನಾಗಿ ತನ್ನ ಪ್ರಾಣತ್ಯಾಗ ಮಾಡಿದ್ದನು (ಅನು 91/5–6).

**ಶ್ರೀವತ್ಸ** – ಭಗವಾನ್ ನಾರಾಯಣನ ವಕ್ಷ ಸ್ಥಲದಲ್ಲಿ ಭಗವಾನ್ ಶಂಕರನ ತ್ರಿಶೂಲದಿಂದಾದ ಚಿಹ್ನೆ (ಶಾಂತಿ 342/134).

**ಶ್ರೀವಹ** – ಕಶ್ಯಪನಿಂದ ಕದ್ರುವಿನ ಗರ್ಭದಲ್ಲಿ ಹುಟ್ಟಿದ ಒಬ್ಬ ನಾಗ (ಆದಿ 35/13).

**ಶ್ರುತಕರ್ಮಾ** (ಶ್ರುತಸೇನ) – (1) ಸಹದೇವ ನಿಂದ ದ್ರೌಪದಿಯ ಗರ್ಭದಲ್ಲಿ ಹುಟ್ಟಿದವನು (ಆದಿ 95/75). ಪ್ರಥಮದಿನದ ಯುದ್ಧದಲ್ಲಿ ಸುದರ್ಶನನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/66–68). ದುರ್ಮುಖನಿಂದ ಇವನ ಪರಾ ಜಯ (ಭೀಷ್ಮ 79/35–38). ಇವನ ಕುದುರೆ ಗಳ ವರ್ಣನೆ (ದ್ರೋಣ 23/31). ಚಿತ್ರಸೇನ ಪುತ್ರನೊಂದಿಗೆ ಇವನ ಯುದ್ಧ (ದ್ರೋಣ 25/27–28). ಇವನಿಂದ ಮಹಾ ಬುದ್ಧಿವಂತ ಶಲನ ವಧೆ (ದ್ರೋಣ 108/10). ಇವನಿಂದ ಅಭಿಸಾರ ನರೇಶನಾದ ಚಿತ್ರಸೇನನ ವಧೆ (ಕರ್ಣ 41/1–14). ಇವನಿಂದ ಅಶ್ವತ್ಥಾಮನ ಮೇಲೆ ಪ್ರಹಾರ (ಕರ್ಣ 55/13–19). ಅಶ್ವತ್ಥಾಮನಿಂದ ಇವನ ವಧೆ (ಸೌಪ್ತಿಕ 8/60).
(2) (ಶ್ರುತಕೀರ್ತಿ) – ದ್ರೌಪದಿಯ ಗರ್ಭದಲ್ಲಿ ಹುಟ್ಟಿದ ಅರ್ಜುನನ ಮಗ. ಇವನಿಗೆ ಶ್ರುತಕರ್ಮಾ ಎಂದು ಹೆಸರಾಗಲು ಕಾರಣ (ಆದಿ 220/83; ವನ 235/10). (ವಿಶೇಷ ನೋಡಿರಿ– ಶ್ರುತಕೀರ್ತಿ).
(3) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. ಶತಾನೀಕನೊಂದಿಗೆ ಇವನ ಯುದ್ಧ (ಕರ್ಣ 25/13–16).

**ಶ್ರುತಕೀರ್ತಿ** – ದ್ರೌಪದಿಯ ಗರ್ಭದಿಂದ ಅರ್ಜುನನ ಮೂಲಕ ಹುಟ್ಟಿದವನು (ಆದಿ 63/123; ಆದಿ 95/75). ವಿಶ್ವೇದೇವನ ಅಂಶದಿಂದ ಇವನ ಜನನವಾಗಿತ್ತು (ಆದಿ 67/127–128). ಜಯತ್ಸೇನನೊಂದಿಗೆ ಇವನ ಯುದ್ಧ (ಭೀಷ್ಮ 79/41). ಇವನ ಕುದುರೆಗಳ ವರ್ಣನೆ (ದ್ರೋಣ 23/32). ದುಃಶಾಸನನ ಪುತ್ರನೊಂದಿಗೆ ಯುದ್ಧ (ದ್ರೋಣ 25/32–33). ಅಶ್ವತ್ಥಾಮನಿಂದ ಇವನ ವಧೆ (ಸೌಪ್ತಿಕ 8/61–62).

**ಶ್ರುತಂಜಯ** – ತ್ರಿಗರ್ತರಾಜ ಸುಶರ್ಮನ ಸಹೋದರ. ಅರ್ಜುನನಿಂದ ಇವನ ವಧೆ (ಕರ್ಣ 27/12).

**ಶ್ರುತಧ್ವಜ** – ವಿರಾಟನ ಸಹೋದರ. ಇವನು ಪಾಂಡವರ ರಕ್ಷಕನೂ ಸಹಾಯಕನೂ ಆಗಿದ್ದನು (ದ್ರೋಣ 158/41).

**ಶ್ರುತವರ್ಮ** – (1) ಒಬ್ಬ ಪ್ರಾಚೀನ ರಾಜ. ಇವನ ಬಳಿಗೆ ಅಗಸ್ತ್ಯ ಹಣಯಾಚಿಸಲು ಹೋಗಿದ್ದನು (ವನ 98/1). ಅಗಸ್ತ್ಯ ಧನ ಯಾಚಿಸಿದಾಗ ಈತ ಅವನ ಮುಂದೆ ತನ್ನ ಆಯವ್ಯಯದ ವಿವರಣೆ ಹೇಳಿದುದು (ವನ 98/5). ಇವನು ಅಗಸ್ತ್ಯನೊಂದಿಗೆ ಇತರ ರಾಜರ ಬಳಿಗೆ ಹೋದುದು (ವನ 98/7). ಅಗಸ್ತ್ಯನ ಆಜ್ಞೆ ಪಡೆದು ಇವನು ತನ್ನ ರಾಜಧಾನಿಗೆ ಹಿಂತಿರುಗಿದುದು (ವನ 99/18).

(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. ಇವನು ತನ್ನ ಹತ್ತು ಸಹೋದರರೊಂದಿಗೆ ಭೀಮಸೇನನ ಮೇಲೆ ಆಕ್ರಮಣ ಮಾಡಿದುದು, ಮತ್ತು ಆತನಿಂದ ಇವನ ವಧೆ (ಶಲ್ಯ 26/6–32).

**ಶ್ರುತಶ್ರವಾ** – (1) ಒಬ್ಬ ಋಷಿ. ಇವನ ಪುತ್ರನ ಹೆಸರು ಸೋಮಶ್ರವಾ ಎಂದಾಗಿತ್ತು. ಸೋಮಶ್ರವಾನನ್ನು ತನ್ನ ಪುರೋಹಿತನಾಗಿ ಮಾಡಿಕೊಳ್ಳಲು ಜನಮೇಜಯನಿಂದ ಇವನಲ್ಲಿ ಪ್ರಾರ್ಥನೆ (ಆದಿ 3/13–15). ಇವನು ತನ್ನ ಮಗನ ಜನನ ಪ್ರಸಂಗ ಮತ್ತು ಉದಾರತಾ ಪೂರ್ಣ ಸ್ವಭಾವ ಇತ್ಯಾದಿ ವರ್ಣನೆ ಮಾಡುತ್ತಾ, ಅವನ ಪ್ರಾರ್ಥನೆ ಸ್ವೀಕರಿಸಿದುದು (ಆದಿ 3/16–19). ಇವನು ಜನಮೇಜಯನ ಸರ್ಪಸತ್ರದಲ್ಲಿ ಸದಸ್ಯನಾಗಿದ್ದನು (ಆದಿ 53/9–10). ತಪಸ್ಸು ಮಾಡಿ ಸಿದ್ಧಿಪಡೆದ ಋಷಿಗಳಲ್ಲಿ ಇವನ ಹೆಸರೂ ಇದೆ (ಶಾಂತಿ 292/16–17).

(2) ಒಬ್ಬ ರಾಜರ್ಷಿ. ಈತ ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/9).

(3) ಚೇದಿರಾಜ ದಮಘೋಷನ ಪತ್ನಿ. ಶ್ರೀಕೃಷ್ಣನ ಅತ್ತೆ ಮತ್ತು ಶಿಶುಪಾಲನ ತಾಯಿ. ತನ್ನ ಪುತ್ರ ಶಿಶುಪಾಲನ ಜೀವ ಉಳಿಸಲು ಶ್ರೀಕೃಷ್ಣನಲ್ಲಿ ಈಕೆಯ ಪ್ರಾರ್ಥನೆ (ಸಭಾ 43/1–20). 'ಶಿಶುಪಾಲನ ನೂರು ಅಪರಾಧಗಳನ್ನು ಕ್ಷಮಿಸುತ್ತೇನೆ' ಎಂದು ಹೇಳಿ, ಶ್ರೀಕೃಷ್ಣನು ಆಶ್ವಾಸನೆ ನೀಡಿದುದು (ಸಭಾ 43/24).

**ಶ್ರುತಶ್ರೀ** – ಒಬ್ಬ ದೈತ್ಯ, ಗರುಡನಿಂದ ಇವನ ವಧೆಯಾಗಿತ್ತು (ಉದ್ಯೋಗ 105/12).

**ಶ್ರುತಸೇನ** – (1) ಮಹಾರಾಜ ಜನಮೇಜಯನ ಸಹೋದರ. ಇವನು ತನ್ನ ಇತರ ಸಹೋದರರೊಂದಿಗೆ, ದೇವತೆಗಳ ಹೆಣ್ಣುನಾಯಿ, ಸರಮೆಯ ಪುತ್ರ ಸಾರಮೇಯನಿಗೆ ಹೊಡೆದಿದ್ದನು (ಆದಿ 3/1).

(2) ತಕ್ಷಕ ನಾಗನ ತಮ್ಮ (ಆದಿ 3/141–142).

(3) (ಶ್ರುತಕರ್ಮಾ) ದ್ರೌಪದಿಯ ಗರ್ಭದಿಂದ ಸಹದೇವನ ಮೂಲಕ ಹುಟ್ಟಿದವನು (ಆದಿ 63/124). ಇವನು ವಿಶ್ವೇದೇವನ ಅಂಶದಿಂದ ಹುಟ್ಟಿದನು (ಆದಿ 67/127). ಶ್ರುತಸೇನನೆಂದು ಇವನ ಹೆಸರಾಗಲು ಕಾರಣ (ಆದಿ 220/85). (ವಿಶೇಷ ನೋಡಿರಿ– ಶ್ರುತಕರ್ಮಾ).

(4) ಒಬ್ಬ ದೈತ್ಯ. ಗರುಡನಿಂದ ಇವನ ವಧೆಯಾಗಿತ್ತು (ಉದ್ಯೋಗ 105/12).

(5) ಕೌರವ ಪಕ್ಷದ ಒಬ್ಬ ಯೋಧ. ಇವನಿಗೆ ಅರ್ಜುನನು ಬಾಣ ಹೊಡೆದನು (ಕರ್ಣ 27/10–11).

**ಶ್ರುತಾನೀಕ** – ವಿರಾಟನ ಸಹೋದರ. ಇವನು ಪಾಂಡವರ ರಕ್ಷಕನೂ ಸಹಾಯಕನೂ ಆಗಿದ್ದನು (ದ್ರೋಣ 158/41).

**ಶ್ರುತಾಂತ (ಚಿತ್ರಾಂಗ)** – ಧೃತರಾಷ್ಟ್ರನ ಪುತ್ರ. ಇವನು ಇತರ ಸಹೋದರರೊಂದಿಗೆ ಸೇರಿ ಭೀಮಸೇನನ ಮೇಲೆ ಆಕ್ರಮಣಮಾಡಿದನು ಮತ್ತು ಅವನಿಂದಲೇ ಕೊಲ್ಲಲ್ಪಟ್ಟನು (ಶಲ್ಯ 26/4–11).

**ಶ್ರುತಾಯು (ಶ್ರುತಾಯುಧ)** – (1) ಕಲಿಂಗ ದೇಶದ ರಾಜ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/26). ಇವನು ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನಿಗೆ ಮಣಿರತ್ನಗಳನ್ನು ಕಾಣಿಕೆಕೊಟ್ಟಿದ್ದನು (ಸಭಾ 51/74). ಇವನು ದ್ರೌಪದೀ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/13). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸಲು ನಿಶ್ಚಯವಾಗಿತ್ತು (ಉದ್ಯೋಗ 4/24). ಈ ಕಲಿಂಗ ರಾಜ ಕೌರವ ಪಕ್ಷದ ಒಂದು ಅಕ್ಷೌಹಿಣೀ ಸೇನೆಯ ಅಧಿನಾಯಕನಾಗಿದ್ದನು (ಭೀಷ್ಮ 16/16). ಭೀಮಸೇನನೊಂದಿಗೆ ಯುದ್ಧ ಮತ್ತು ಅವನಿಂದ ಗಾಯಗೊಂಡದ್ದು (ಭೀಷ್ಮ 54/67–75). ಇವನ ಇಬ್ಬರು ಚಕ್ರ ರಕ್ಷಕರಾದ ಸತ್ಯದೇವ ಮತ್ತು ಸತ್ಯ ಭೀಮಸೇನನಿಂದ ಕೊಲ್ಲಲ್ಪಟ್ಟರು

(ಭೀಷ್ಮ 54/76). ಅರ್ಜುನನೊಂದಿಗೆ ಇವನ ಯುದ್ಧ (ದ್ರೋಣ 92/36–44). ಇವನು ಪರ್ಣಾಶಾ ಎಂಬವಳ ಗರ್ಭದಿಂದ ವರುಣನ ಮೂಲಕ ಜನಿಸಿದ್ದನು. ಇವನಿಗೆ ವರುಣನಿಂದ ಗದೆ ಪ್ರಾಪ್ತವಾಗಿತ್ತು (ದ್ರೋಣ 92/45–51). ತನ್ನದೇ ಗದೆಯಿಂದ ಇವನ ವಧೆ (ದ್ರೋಣ 92/54).

(2) ಒಬ್ಬ ಕ್ಷತ್ರಿಯ ರಾಜ. ಈತ ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/64). ಇವನು ಮಹಾರಥಿ ವೀರನಾಗಿದ್ದನು. ಮತ್ತು ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/21). ಮಹಾಬಲವಂತನಾದ ಶ್ರುತಾಯು ಯುಧಿಷ್ಠಿರನ ಸಭೆಯಲ್ಲೂ ಒಬ್ಬ ಸದಸ್ಯನಾಗಿದ್ದನು (ಸಭಾ 4/28). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲ್ಪಟ್ಟಿತ್ತು (ಉದ್ಯೋಗ 4/23). ಪ್ರಥಮ ದಿನದ ಯುದ್ಧದಲ್ಲಿ ಇರಾವಂತನೊಂದಿಗೆ ಇವನ ಯುದ್ಧ (ಭೀಷ್ಮ 45/69–71). ಇವನು ಅಂಬಷ್ಠದೇಶದ ರಾಜನಾಗಿದ್ದನು ಮತ್ತು ಭೀಷ್ಮನ ರಕ್ಷಣೆ ಮಾಡುತ್ತಾ, ಇವನು ಅರ್ಜುನನನ್ನು ಪ್ರತಿಭಟಿಸಿದ್ದನು (ಭೀಷ್ಮ 59/75–76). ಇವನು ಭೀಷ್ಮನಿರ್ಮಿತ ಕ್ರೌಂಚ ವ್ಯೂಹದ ನಿತಂಬ ಭಾಗದಲ್ಲಿ ನಿಂತಿದ್ದನು (ಭೀಷ್ಮ 75/22). ಇವನು ಯುದ್ಧದಲ್ಲಿ ಯುಧಿಷ್ಠಿರನಿಂದ ಪರಾಜಿತನಾಗಿದ್ದನು (ಭೀಷ್ಮ 84/1–17). ಅರ್ಜುನನ ಮೇಲೆ ಇವನ ಆಕ್ರಮಣ ಮತ್ತು ಆತನಿಂದ ವಧೆ (ದ್ರೋಣ 93/60–69).

(3) ಕೌರವಪಕ್ಷದ ಒಬ್ಬ ಯೋಧ. ಇವನು ಅಚ್ಯುತಾಯುವಿನ ಸಹೋದರನಾಗಿದ್ದನು. ಇವನು ತನ್ನ ಸಹೋದರ ಅಚ್ಯುತಾಯುವಿನೊಂದಿಗೆ ಕೌರವಸೇನೆಯ ದಕ್ಷಿಣಭಾಗದ ರಕ್ಷಣೆ ಮಾಡಿದ್ದನು (ಭೀಷ್ಮ 51/18). ಈ ಇಬ್ಬರು ಸಹೋದರರಿಗೆ ಅರ್ಜುನನೊಂದಿಗೆ ಯುದ್ಧ ಮತ್ತು ಆತನಿಂದ ಇವರ ವಧೆ (ದ್ರೋಣ 93/7–24).

**ಶ್ರುತಾವತೀ** – ತಪಸ್ವಿನಿಯಾದ ಒಬ್ಬ ಕನ್ಯೆ. ಈಕೆ ಘೃತಾಚೀ ಎಂಬ ಅಪ್ಸರೆಯನ್ನು ಕಂಡು, ಭರದ್ವಾಜನಿಂದ ಸ್ಖಲಿತವಾದ ವೀರ್ಯದಿಂದ ಹುಟ್ಟಿದವಳು. ಇವಳು ಘೋರ ತಪಸ್ಸು ಮಾಡಿ ಇಂದ್ರನನ್ನು ಪತಿರೂಪದಲ್ಲಿ ಪಡೆದಿದ್ದಳು (ಶಲ್ಯ 48 ಅಧ್ಯಾಯ).

**ಶ್ರುತಾಹ್ವ** – ಪಾಂಡವ ಪಕ್ಷದ ರಾಜ. ಅಶ್ವತ್ಥಾಮನಿಂದ ಇವನ ವಧೆ (ದ್ರೋಣ 156/182).

**ಶ್ರುತಿ** – ಒಬ್ಬ ಪ್ರಾಚೀನ ರಾಜ (ಆದಿ 1/238).

**ಶ್ರೇಣಿಮಂತ – ಶ್ರೇಣಿಮಾನ್** – ಒಬ್ಬ ರಾಜರ್ಷಿ ಶ್ರೇಷ್ಠ. ಇವನು ಕಾಲೇಯರೆಂಬ ದೈತ್ಯರಲ್ಲಿ ನಾಲ್ಕನೆಯ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/51). ಇವನು ದ್ರೌಪದೀ ಸ್ವಯಂವರಕ್ಕೂ ಆಗಮಿಸಿದ್ದನು (ಆದಿ 185/11). ಇವನು ಕುಮಾರದೇಶದ ರಾಜನಾಗಿದ್ದನು. ಪೂರ್ವ ದಿಗ್ವಿಜಯ ಕಾಲದಲ್ಲಿ ಭೀಮಸೇನನು ಇವನನ್ನು ಸೋಲಿಸಿದ್ದನು (ಸಭಾ 30/1). ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನೂ ಈತನನ್ನು ಗೆದ್ದಿದ್ದನು (ಸಭಾ 31/5). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲಾಗಿತ್ತು (ಉದ್ಯೋಗ 4/21). ಸೇನೆಯು ಪ್ರಯಾಣಿಸುತ್ತಿದ್ದ ಸಮಯದಲ್ಲಿ ಈತ ಯುಧಿಷ್ಠಿರನನ್ನು ಸುತ್ತುವರಿದು ಅವನ ಹಿಂದೆಯೇ ಹೋಗುತ್ತಿದ್ದನು (ಉದ್ಯೋಗ 151/63–64). ಪಾಂಡವ ವೀರರಲ್ಲಿ ಈತ ಅತಿರಥಿ ವೀರನೆಂದು ಗಣಿಸಲ್ಪಟ್ಟಿದ್ದನು (ಉದ್ಯೋಗ 171/27). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/37). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/35).

**ಶ್ವಾವಿಲ್ಲೋಮಾಪಹ** – ಕುರುಕ್ಷೇತ್ರದ ಒಳಗಿರುವ ಒಂದು ತೀರ್ಥ (ವನ 83/61).

**ಶ್ವಾಸಾ** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಧರ್ಮನ ಪತ್ನಿ. ಇವಳ ಗರ್ಭದಿಂದ ಅನಿಲನೆಂಬ ವಸು ಜನ್ಮವೆತ್ತಿದನು (ಆದಿ 66/17–19).

**ಶ್ವೇತ** – (1) ಒಬ್ಬ ಪ್ರಾಚೀನ ಧರ್ಮನಿಷ್ಠ ರಾಜರ್ಷಿ (ಆದಿ 1/233). ಇವನು ತನ್ನ ಮೃತ ಪುತ್ರನನ್ನು ಪುನಃ ಸಜೀವಗೊಳಿಸಿದ್ದನು (ಶಾಂತಿ 153/68). ಇವನು ಎಂದೂ ಮಾಂಸ ತಿನ್ನಲಿಲ್ಲ (ಅನು 115/66). ಇವನು ಸಾಯಂಪ್ರಾತಃ ಕಾಲಗಳಲ್ಲಿ ಸ್ಮರಣೀಯನಾದ ರಾಜರ್ಷಿಯಾಗಿದ್ದಾನೆ (ಅನು 150/52).

(2) ಒಬ್ಬ ರಾಜ. ಶ್ರೀಕೃಷ್ಣನು ಇವನನ್ನು ಭಾರತದ ಪ್ರಸಿದ್ಧ ವೀರರಲ್ಲಿ ಗಣನೆಗೆ ತೆಗೆದುಕೊಂಡಿದ್ದಾನೆ (ಸಭಾ 14/61).

(3) ಉತ್ತರಾಖಂಡದ ಒಂದು ಪರ್ವತ. ಇದನ್ನು ಉತ್ತರಿಸಿ ಪಾಂಡವರು ಮುಂದೆ ಹೋಗಿದ್ದರು (ವನ 139/1).

(4) ವಿರಾಟನ ಮಗ. ವಿರಾಟನ ಹಿರಿಯ ರಾಣಿ ಕೋಸಲ ರಾಜಕುಮಾರಿ ಸುರಥಾ ಎಂಬವಳ ಗರ್ಭದಿಂದ ಹುಟ್ಟಿದವನು (ವಿರಾಟ 16/51). ಇವನು ರಾಜಾ ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಬಂದಿದ್ದನು. ಶಿಶುಪಾಲನು ಇವನ ಹೆಸರನ್ನು ಉಲ್ಲೇಖಿಸಿದ್ದಾನೆ (ಸಭಾ 44/20). ಇವನ ವಿಚಿತ್ರ ಪರಾಕ್ರಮ (ಭೀಷ್ಮ 47/44–62). ಭೀಷ್ಮನೊಂದಿಗೆ ಇವನ ಅದ್ಭುತ ಯುದ್ಧ ಮತ್ತು ಆತನಿಂದ ಇವನ ವಧೆ (ಭೀಷ್ಮ 47 ಅಧ್ಯಾಯ).

(5) ಒಂದು ದೇಶದ ಹೆಸರು. ನೀಲ ಪರ್ವತದಿಂದ ಉತ್ತರಕ್ಕೆ ಶ್ವೇತವರ್ಷವಿದೆ ಮತ್ತು ಅದರಿಂದ ಉತ್ತರಕ್ಕೆ ಹಿರಣ್ಯಕ ವರ್ಷವಿದೆ (ಭೀಷ್ಮ 6/37).

(6). ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ಶ್ವೇತಕಿ** – ಸದಾ ಯಜ್ಞದಲ್ಲಿ ನಿರತನಾಗಿದ್ದ ಒಬ್ಬ ರಾಜ (ಆದಿ 222/17). ಇವನಿಂದ ವಿವಿಧ ಯಜ್ಞಗಳ ಅನುಷ್ಠಾನ (ಆದಿ 222/19). ದೀರ್ಘಕಾಲದ ವರೆಗೆ ಇವನ ಯಜ್ಞದಲ್ಲಿ ಆಹುತಿ ಕೊಟ್ಟ ಕಾರಣ ಖಿನ್ನರಾದ ಋತ್ವಿಜರಿಂದ ಇವನ ಪರಿತ್ಯಾಗ; ಇತರ ಋತ್ವಿಜರನ್ನು ಕರೆಸಿ, ತಾನು ಪ್ರಾರಂಭಿಸಿದ ಯಜ್ಞವನ್ನು ಪೂರ್ಣಗೊಳಿಸಿದುದು (ಆದಿ 222/21–23). ಯಜ್ಞ ಕಾರ್ಯ ಪೂರ್ತಿಗೊಳಿಸುವ ಬಗ್ಗೆ ಇವನಿಂದ ಘೋರ ತಪಸ್ಸು ಮತ್ತು ಭಗವಾನ್ ಶಿವನ ಆರಾಧನೆ (ಆದಿ 222/36–39). ಹನ್ನೆರಡು ವರ್ಷಗಳ ತನಕ ಅಗ್ನಿಯಲ್ಲಿ ನಿರಂತರ ಆಹುತಿ ಕೊಡಲು ಇವನಿಗೆ ಶಿವನ ಆದೇಶ (ಆದಿ 222/47). ಭಗವಾನ್ ಶಿವನು ಪ್ರಸನ್ನನಾಗಿ, ತನ್ನದೇ ಅಂಶಭೂತನಾದ ದುರ್ವಾಸನಿಗೆ ಈತನ ಯಜ್ಞಕಾರ್ಯ ಪೂರ್ಣಗೊಳಿಸಲು ಆದೇಶಿಸಿದುದು (ಆದಿ 222/58). ದುರ್ವಾಸನ ಮೂಲಕ ಇವನ ನೂರು ವರ್ಷಗಳ ಯಜ್ಞ ಕಾರ್ಯಪೂರ್ಣವಾದುದು (ಆದಿ 222/59). ಇವನ ಯಜ್ಞದಲ್ಲಿ ಹನ್ನೆರಡು ವರ್ಷಗಳ ವರೆಗೆ ಎಡೆಬಿಡದೆ ಘೃತಪಾನ ಮಾಡಿದುದರಿಂದ ಅಗ್ನಿದೇವನಿಗೆ ಅಜೀರ್ಣತ್ವದ ಕಷ್ಟ ಉಂಟಾದುದು (ಆದಿ 222/63–67).

**ಶ್ವೇತಕೇತು** – ಒಬ್ಬ ಋಷಿ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ಸದಸ್ಯನಾಗಿದ್ದನು (ಆದಿ 53/7). ಇವನು ಗೌತಮ ಕುಲದಲ್ಲಿ ಹುಟ್ಟಿದ ಮಹರ್ಷಿ ಉದ್ದಾಲಕನ ಪುತ್ರನು. ಈತ ಇಂದ್ರಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾನೆ (ಸಭಾ 7/12). ಇವನು ಅಷ್ಟಾವಕ್ರನ ಮಾವನಾಗಿದ್ದನು. ಇವನು ಅಷ್ಟಾವಕ್ರನನ್ನು ತನ್ನ ತಂದೆಯ ಮಡಿಲಿನಿಂದ ಸೆಳೆದುದು (ವನ 132/18). ಅಷ್ಟಾವಕ್ರನೊಂದಿಗೆ ರಾಜಾ ಜನಕನ ಯಜ್ಞಕ್ಕೆ ಹೋದುದು (ವನ 132/23). ಹಸ್ತಿನಾಪುರಕ್ಕೆ ಹೋಗುವಾಗ ಮಾರ್ಗದಲ್ಲಿ ಶ್ರೀಕೃಷ್ಣನೊಡನೆ ಇವನ ಭೇಟಿ (ಉದ್ಯೋಗ 83/64). ಕಪಟ ವ್ಯವಹಾರದ ಕಾರಣಕ್ಕಾಗಿ ತಂದೆಯಿಂದ ಈತನ ಪರಿತ್ಯಾಗ (ಶಾಂತಿ 57/10). ಮಹರ್ಷಿ ದೇವಲನ ಬಳಿಗೆ ಅವನ ಕನ್ಯೆಗೋಸ್ಕರ ಹೋದದು; ಸುವರ್ಚಲಾಳೊಂದಿಗೆ ಇವನ ವಿವಾಹ, ಪತ್ನಿಯೊಂದಿಗೆ ಬೇರೆ ಬೇರೆ ಅಧ್ಯಾತ್ಮಿಕ ವಿಚಾರದಲ್ಲಿ ಪ್ರಶ್ನೋತ್ತರ, ಗೃಹಸ್ಥ ಧರ್ಮದ ಪಾಲನೆ ಮಾಡುತ್ತಾ ಇವನಿಗೆ ಪರಮ ಗತಿಯ ಪ್ರಾಪ್ತಿ (ಶಾಂತಿ 220). ಇವನು ಉತ್ತರ ದಿಕ್ಕಿನ ಋಷಿಯಾಗಿದ್ದಾನೆ (ಅನು 165/45).

**ಶ್ವೇತದ್ವೀಪ** – ಭಗವಾನ್ ನಾರಾಯಣನ ಅನಿರ್ವಚನೀಯ ಧಾಮ. ಕ್ಷೀರಸಾಗರದ ಉತ್ತರ ಭಾಗದ ಶ್ವೇತವೆಂಬ ಹೆಸರಿನ ಪ್ರಖ್ಯಾತವಾದ ವಿಶಾಲ ದ್ವೀಪ. ಇದರ ಎತ್ತರ ಮೇರು ಪರ್ವತದಿಂದ ಮೂವತ್ತೆರಡು ಸಾವಿರ ಯೋಜನದಷ್ಟಿದೆ. ಇಲ್ಲಿ ವಾಸಿಸುವವರು ಇಂದ್ರಿಯ ರಹಿತರು, ನಿರಾಹಾರರು ಮತ್ತು ಜ್ಞಾನಸಂಪನ್ನರು ಆಗಿರುತ್ತಾರೆ. ಅವರ ಅಂಗಗಳಿಂದ ಉತ್ತಮ ಸುಗಂಧ ಹೊರಡುತ್ತಿರುತ್ತದೆ. ಅವರು ನಿಷ್ಪಾಪರು ಮತ್ತು ಶ್ವೇತ ವರ್ಣದವರೂ ಆಗಿರುತ್ತಾರೆ. ಅವರ ಶರೀರ ಮತ್ತು ಎಲುಬುಗಳು ವಜ್ರದಂತೆ ಸುದೃಢವಾಗಿರುತ್ತವೆ. ಅವರು ಮಾನಾಪಮಾನದಿಂದ ದೂರವಾಗಿದ್ದು, ದಿವ್ಯರೂಪ ಮತ್ತು ಬಲದಿಂದ ಸಂಪನ್ನರಾಗಿರುತ್ತಾರೆ. ತಲೆ ಕೊಡೆಯಂತೆ, ಹಾಗೂ ಸ್ವರ ಮೇಘ ಘರ್ಜನೆಯಂತೆ ಗಂಭೀರವಾಗಿರುತ್ತದೆ. ಅವರೆಲ್ಲರಿಗೂ ಸರಿ ಸಮಾನವಾಗಿ ನಾಲ್ಕು ಭುಜಗಳು, ಬಾಯಿಯಲ್ಲಿ

35

ಅರುವತ್ತು ಬಿಳಿ ಹಲ್ಲುಗಳು ಮತ್ತು ಎಂಟು ದವಡೆಯ ಹಲ್ಲುಗಳಿರುತ್ತವೆ. ಅವರು ದಿವ್ಯಕಾಂತಿ ವಂತರಾಗಿರುತ್ತಾರೆ ಮತ್ತು ಕಾಲನನ್ನೂ ಕಬಳಿಸಿ ಬಿಡುತ್ತಾರೆ. ಅವರು ಅನಂತ ಗುಣಗಳ ಭಂಡಾರವಾದ ಭಗವಂತನನ್ನು ತಮ್ಮ ಹೃದಯ ದಲ್ಲಿ ಧರಿಸಿಕೊಂಡಿರುತ್ತಾರೆ (ಶಾಂತಿ 335/8–12). ಶ್ವೇತದ್ವೀಪದ ಪ್ರಭಾವದ ವಿಶೇಷ ವರ್ಣನೆ (ಶಾಂತಿ 336/27–59).

**ಶ್ವೇತಭದ್ರ** – ಒಬ್ಬ ಗುಹ್ಯಕ. ಇವನು ಕುಬೇರನ ಸಭೆಗೆ ಬಂದು ಅವನ ಸೇವೆಗೆ ಉಪಸ್ಥಿತ ನಾಗುತ್ತಾನೆ (ಸಭಾ 10/15).

**ಶ್ವೇತವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ಶ್ವೇತವಾಹನ** – ಅರ್ಜುನನ ಒಂದು ಹೆಸರು (ಆದಿ 199/10) (ವಿಶೇಷ ನೋಡಿರಿ ಅರ್ಜುನ).

**ಶ್ವೇತಸಿದ್ಧ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ಶ್ವೇತಾ** – (1) ಕ್ರೋಧವಶಾನ ಪುತ್ರಿ. ಇವಳು ವೇಗವಾಗಿ ಹೋಗುವ ದಿಗ್ಗಜವಾದ ಶ್ವೇತವನ್ನು ಉತ್ಪನ್ನಗೊಳಿಸಿದಳು (ಆದಿ 66/61–66).

(2) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/22).

**ಶ್ವೈತ್ಯ** – ಪ್ರಾಚೀನ ರಾಜನಾದ ಸೃಂಜಯನ ಹೆಸರು (ದ್ರೋಣ 55/50). (ವಿಶೇಷ ನೋಡಿರಿ –ಸೃಂಜಯ).

## ಷ

**ಷಷ್ಟಿಹ್ರದ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಅನ್ನದಾನಕ್ಕಿಂತಲೂ ಮಿಗಿಲಾದ ಫಲಪ್ರಾಪ್ತವಾಗುತ್ತದೆ (ಅನು 25/36).

**ಷಷ್ಟೀದೇವೀ** – ಬ್ರಾಹ್ಮಣ ಸಭೆಯಲ್ಲಿ ಅವನ ಉಪಾಸನೆಗೋಸ್ಕರ ಕುಳಿತುಕೊಳ್ಳುವ ಒಬ್ಬ ದೇವಿ (ಸಭಾ 11/41).

## ಸ

**ಸಂಕೋಚ** – ಒಬ್ಬ ರಾಕ್ಷಸ. ಪ್ರಾಚೀನ ಕಾಲದಲ್ಲಿ ಅವನು ಈ ಪೃಥ್ವಿಯ ಶಾಸಕನಾಗಿದ್ದನು. ಕಾಲಾಧೀನನಾಗಿ ಇದನ್ನೆಲ್ಲ ಬಿಟ್ಟು ಮೃತಿ ಯನ್ನೈದಿದನು (ಶಾಂತಿ 227/52).

**ಸಂಕೃತಿ** – ಒಬ್ಬ ಪ್ರಾಚೀನ ರಾಜ (ಆದಿ 1/234). ಇವನು ರಾಜಾ ರಂತಿದೇವನ ತಂದೆ (ವನ 294/17; ದ್ರೋಣ 67/1).

**ಸಂಕ್ರಮ** – ಭಗವಾನ್ ವಿಷ್ಣುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಮೂವರು ಪಾರ್ಷದರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರು; ಚಕ್ರ ಮತ್ತು ವಿಕ್ರಮ (ಶಲ್ಯ 45/37).

**ಸಂಗ್ರಹ** – ಸಮುದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ವಿಗ್ರಹ (ಶಲ್ಯ 45/50).

**ಸಂಗ್ರಾಮಜಿತ್** – ಕರ್ಣನ ಒಬ್ಬ ಸಹೋದರ. ವಿರಾಟನ ಗೋವುಗಳ ಅಪಹಾರ ಸಮಯದಲ್ಲಿ ಅರ್ಜುನನಿಂದ ಇವನು ವಧಿಸಲ್ಪಟ್ಟನು (ವಿರಾಟ 54/18).

**ಸಂಚಾರಕ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/74).

**ಸಂಜ್ಞಾ** – ತ್ವಷ್ಟಾನ ಮಗಳು ಮತ್ತು ಭಗವಾನ್ ಸೂರ್ಯನ ಧರ್ಮಪತ್ನಿ. ಇವಳು ಅತ್ಯಂತ ಸೌಭಾಗ್ಯವತಿ. ಈಕೆ ಅಶ್ವಿನಿಯ ರೂಪಧರಿಸಿ, ಅಶ್ವಿನಿಕುಮಾರರಿಬ್ಬರಿಗೆ ಅಂತರಿಕ್ಷದಲ್ಲಿ ಜನ್ಮ ಕೊಟ್ಟಳು (ಆದಿ 66/35). ನಾಸತ್ಯ ಮತ್ತು ದಸ್ರರೆಂಬ ಅಶ್ವಿನಿಕುಮಾರರಿಬ್ಬರೂ ಅಶ್ವರೂಪ ಧಾರಣೆ ಮಾಡಿದ್ದ ಸಂಜ್ಞೆಯ ಮೂಗಿನಿಂದ ಹುಟ್ಟಿದ್ದರು. ಇವರ ಪ್ರಾದುರ್ಭಾವ ಭಗವಾನ್ ಸೂರ್ಯನ ವೀರ್ಯದಿಂದಾಗಿತ್ತು (ಅನು 150/17–18).

**ಸಂತರ್ಜನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/58).

**ಸಂತಾನಿಕಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/9).

**ಸಂಧ್ಯಾ** – (1) ಒಂದು ನದಿ. ಈಕೆ ವರುಣ ಸಭೆಯಲ್ಲಿದ್ದು ವರುಣದೇವನ ಉಪಾಸನೆ ಮಾಡುತ್ತಾಳೆ (ಸಭಾ 9/23).

(2) ಸಾಯಂಕಾಲದ ಸಂಧ್ಯೆಯ ಅಧಿಷ್ಠಾತ್ರಿ. ಇವಳು ಮಹರ್ಷಿ ಪುಲಸ್ತ್ಯನ ಪತ್ನಿಯಾಗಿದ್ದಳು (ಉದ್ಯೋಗ 117/16). (ಮೂಲಗತ ಹೆಸರು 'ಪ್ರತೀಚ್ಯಾ').

**ಸಂನತೇಯು** – ಪೂರುವಿನ ಮೂರನೇ ಮಗ. ಮಹಾಬುದ್ಧಿವಂತನಾದ ರೌದ್ರಾಶ್ವನಿಂದ ಮಿಶ್ರ ಕೇಶೀ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ಮಹಾ ಧನುರ್ಧಾರಿಯಾದ ಪುತ್ರ. ಇವನ ಇತರ ಸಹೋದರರ ಹೆಸರು – ಋಚೇಯು, ಪಕ್ಷೇಯು, ಕೃಕಣೇಯು, ಸ್ಥಂಡಿಲೇಯು, ವನೇಯು, ಜಲೇಯು, ತೇಜೇಯು, ಸತ್ಯೇಯು ಮತ್ತು ಧರ್ಮೇಯು ಎಂದಾಗಿತ್ತು (ಆದಿ 94/8–11).

**ಸನ್ಯಸ್ತಪಾದ** – ಒಂದು ದೇಶ. ಇಲ್ಲಿದ್ದ ರಾಜ. ಹಾಗೂ ರಾಜಕುಮಾರ ಜರಾಸಂಧನ ಭಯ ದಿಂದ ಪೀಡಿತರಾಗಿ ಉತ್ತರ ದಿಕ್ಕನ್ನು ಬಿಟ್ಟು, ದಕ್ಷಿಣ ದಿಕ್ಕನ್ನು ಆಶ್ರಯಿಸಿದ್ದರು (ಸಭಾ 14/28).

**ಸಂಯಮ** – ರಾಕ್ಷಸ ಶತಶೃಂಗನ ಪ್ರಥಮಪುತ್ರ. ಇವನು ಅಂಬರೀಷನ ಸೇನಾಪತಿಯಾದ ಸುದೇವನಿಂದ ಕೊಲ್ಲಲ್ಪಟ್ಟಿದ್ದನು (ಶಾಂತಿ 98/11).

**ಸಂಯಮನ** – (1) ಯಮನ ರಾಜಧಾನಿ ಸಂಯಮನೀಪುರ. ಇದು ದಕ್ಷಿಣ ದಿಕ್ಕಿನಲ್ಲಿದೆ (ವನ 163/8–9).

(2) ಸೋಮದತ್ತನ ಇನ್ನೊಂದು ಹೆಸರು (ಭೀಷ್ಮ 61/33).

**ಸಂಯಮನೀಪುರೀ** – ಯಮನ ರಾಜಧಾನಿ ಅಥವಾ ಪಟ್ಟಣ. ಇದರ ಇನ್ನೊಂದು ಹೆಸರು 'ಸಂಯಮನ' ಎಂದೂ ಇದೆ (ವನ 163/89; ದ್ರೋಣ 72/44; ದ್ರೋಣ 119/24; ದ್ರೋಣ 142/10). ಇಲ್ಲಿ ಯಾರೂ ಸುಳ್ಳಾಡುವುದಿಲ್ಲ. ಯಾವಾಗಲೂ ಸತ್ಯವನ್ನೇ ಮಾತಾಡುತ್ತಾನೆ. ಇಲ್ಲಿ ನಿರ್ಬಲ ಮನುಷ್ಯನೂ ಕೂಡ ಬಲವಂತ ನೊಡನೆ, ತನಗೆ ಮಾಡಿದ ಅನ್ಯಾಯಕ್ಕಾಗಿ ಪ್ರತೀ ಕಾರ ಮಾಡುತ್ತಾರೆ. ಮನುಷ್ಯರನ್ನು ಸಂಯಮ ದಿಂದಿರಿಸುವ ಯಮರಾಜನ ಅದೇ ಪಟ್ಟಣ 'ಸಂಯಮನಿ' ಎಂಬ ಹೆಸರಿನಿಂದ ಪ್ರಸಿದ್ಧ ವಾಗಿದೆ (ಅನು 102/16).

**ಸಂಯಾತಿ** – (1) ರಾಜಾ ನಹುಷನ ತೃತೀಯ ಪುತ್ರ. ಯಯಾತಿಯ ತಮ್ಮ. ಇವನ ಇತರ ಸಹೋದರರ ಹೆಸರು – ಯತಿ, ಯಯಾತಿ, ಆಯಾತಿ, ಅಯತಿ ಮತ್ತು ಧ್ರುವ (ಆದಿ 75/30–31).

(2) ಇವನು ಮಹಾರಾಜ ಪೂರುವಿನ ಪ್ರಪೌತ್ರ ಮತ್ತು ಪ್ರಾಚೀನ್ವಂತನ ಪುತ್ರ. ಯದುಕುಲದ ಕನ್ಯೆ ಅಶ್ಮಕೀ ಇವನ ತಾಯಿಯಾಗಿದ್ದಳು (ಆದಿ 95/13). ಇವನಿಂದ ದೃಷದ್ವಂತನ ಪುತ್ರಿ ವರಾಂಗಿಯ ಗರ್ಭದಲ್ಲಿ 'ಅಹಂಯಾತಿ' ಎಂಬ ಪುತ್ರನ ಜನನವಾಯಿತು (ಆದಿ 95/14).

**ಸಂವರಣ** – ಸೋಮವಂಶದ ಅಜಮೀಢನ ಮೊಮ್ಮಗ ಮತ್ತು ಋಕ್ಷನ ಪುತ್ರ (ಆದಿ 94/31–34). ಪಾಂಚಾಲರಾಜನಿಂದ ಇವನ ಮೇಲೆ ಆಕ್ರಮಣ ಮತ್ತು ಈತನ ಪರಾಜಯ (ಆದಿ 94/37–38). ಶತ್ರುಭಯದಿಂದ ಈತ ರಾಜ್ಯ ಬಿಟ್ಟು ಸಿಂಧುತಟದಲ್ಲಿ ವಾಸಿಸಿದುದು (ಆದಿ 94/39–40). ರಾಜ್ಯಪ್ರಾಪ್ತಿಗಾಗಿ ಇವನಿಂದ ಪುರೋಹಿತನಾಗಿ ವಸಿಷ್ಠನ ಸ್ವೀಕಾರ (ಆದಿ 94/42–44). ವಸಿಷ್ಠನ ಸಹಾಯದಿಂದ ಇವ ನಿಗೆ ತನ್ನ ರಾಜ್ಯಪ್ರಾಪ್ತಿ ಮತ್ತು ಇವನಿಂದ ವಿವಿಧ ಯಜ್ಞಗಳ ಪೂರ್ಣಗೊಳಿಸುವಿಕೆ (ಆದಿ 94/45–47). ಇವನಿಂದ ಸೂರ್ಯಕನ್ಯೆ ತಪತಿಯ ಗರ್ಭದಲ್ಲಿ 'ಕುರು'ವಿನ ಜನ್ಮ (ಆದಿ 94/48). ಸೂರ್ಯನ ಪ್ರತಿಯಾಗಿ ಇವನ ಭಕ್ತಿ ಮತ್ತು ಆರಾಧನೆ (ಆದಿ 170/12–14). ಗುಣರೂಪ ಗಳಲ್ಲಿ ರಾಜಾ ಸಂವರಣನಿಗೆ ಸರಿಸಮಾನರು ಈ ಭೂಮಿಯಲ್ಲಿ ಯಾರೂ ಇರಲಿಲ್ಲ. ಇವನು ಧರ್ಮಜ್ಞನೂ ಕೃತಜ್ಞನೂ ಆಗಿದ್ದನು. ತನ್ನ ದಿವ್ಯಕಾಂತಿಯಿಂದ ಸೂರ್ಯನಂತೆ ಪ್ರಕಾಶ ಮಾನನಾಗಿದ್ದನು. ಪ್ರಜೆಗಳು ಇವನನ್ನು ಪೂಜಿಸು ತ್ತಿದ್ದರು. ಈತ ಉತ್ತಮ ಗುಣ ಸಂಪನ್ನನೂ, ಶ್ರೇಷ್ಠ ಆಚಾರ ವಿಚಾರಗಳಿಂದ ಕೂಡಿದವನೂ ಆಗಿದ್ದನು (ಆದಿ 170/15–19). ಇವನೊಂದಿಗೆ ತಪತಿಯ ವಿವಾಹವಾಗಲು ಸೂರ್ಯನ ಸಂಕಲ್ಪ (ಆದಿ 170/20). ಒಂದು ದಿನ ಇವನು ಪರ್ವತದ ಸಮೀಪವಿರುವ ಉಪವನದಲ್ಲಿ ಬೇಟೆ ಯಾಡಲು ಹೋದನು. ಅಲ್ಲಿ ಆಯಾಸದಿಂದ ಇವನ ಕುದುರೆ ಸತ್ತು ಹೋಯಿತು. ಅನಂತರ ಇವನು ಏಕಾಕಿಯಾಗಿ ಕಾಲ್ನಡೆಯಿಂದ ತಿರುಗು ತ್ತಿದ್ದನು. ತಿರುಗಾಡುತ್ತಿದ್ದಾಗ ಇವನಿಗೆ ಉಪವನ

ದಲ್ಲಿ ಒಬ್ಬಳು ವಿಶಾಲಲೋಚನೆಯಾದ ದಿವ್ಯಕನ್ಯೆ ಕಾಣಸಿಕ್ಕಿದಳು. (ಅವಳು ಸೂರ್ಯಕನ್ಯೆ ತಪತಿ ಯಾಗಿದ್ದಳು.) (ಆದಿ 170/21–23). ತಪತಿಯ ರೂಪಸೌಂದರ್ಯವನ್ನು ನೋಡಿ ಇವನ ಮೋಹ (ಆದಿ 170/24–34). ಇವನು ಆಕೆಯ ಪರಿಚಯ ಕೇಳಿದುದು ಆಕೆ ಅದೃಶಳಾದುದು ಮತ್ತು ಆಕೆಯ ವಿಯೋಗದಿಂದ ಈತನ ಮೂರ್ಛೆ (ಆದಿ 170/36–44). ತಪತಿಯಿಂದ ಇವನಿಗೆ ಆಶ್ವಾಸನೆ (ಆದಿ 171/4–5). ಗಾಂಧರ್ವವಿಧಿಯಿಂದ ತನ್ನ ಪತ್ನಿಯಾಗಲು, ತಪತಿಯೊಡನೆ ಈತನ ಪ್ರಾರ್ಥನೆ (ಆದಿ 171/7–19). ತಪತಿಯನ್ನು ಪಡೆಯುವುದಕ್ಕಾಗಿ ಈತನಿಂದ ಸೂರ್ಯನ ಆರಾಧನೆ ಮತ್ತು ವಸಿಷ್ಠನನ್ನು ಸ್ಮರಿಸಿದುದು (ಆದಿ 172/12–13). ವಸಿಷ್ಠನ ಕೃಪೆ ಮತ್ತು ಪ್ರಯತ್ನದಿಂದ ಇವನಿಗೆ ತಪತಿಯ ಪ್ರಾಪ್ತಿ (ಆದಿ 172/14–32). ತಪತಿಯೊಂದಿಗೆ ವಿಧಿವತ್ತಾಗಿ ಇವನ ವಿವಾಹ (ಆದಿ 172/33). ತಪತಿಯೊಂದಿಗೆ ಇವನ ವಿಹಾರ (ಆದಿ 172/37). ಇವನ ರಾಜ್ಯದಲ್ಲಿ ಹನ್ನೆರಡು ವರ್ಷ ಅನಾವೃಷ್ಟಿ (ಆದಿ 172/38). ಇವನು ಸಾಯಂಪ್ರಾತಃಸ್ಮರಣೀಯನಾದ ರಾಜ ನಾಗಿದ್ದಾನೆ (ಅನು 165/54). ಮಹಾಭಾರತದಲ್ಲಿ ಬಂದಿರುವ ಸಂವರಣನ ಹೆಸರುಗಳು : ಆಜಮೀಢ, ಆರ್ಕ್ಷ, ಪೌರವ, ಪೌರವನಂದನ, ಋಕ್ಷಪುತ್ರ – ಇತ್ಯಾದಿ.

**ಸಂವರ್ತ** – ಮಹರ್ಷಿ ಅಂಗಿರಸನ ತೃತೀಯ ಪುತ್ರ, ಉಳಿದ ಇಬ್ಬರ ಹೆಸರು ಬೃಹಸ್ಪತಿ ಮತ್ತು ಉತಥ್ಯ (ಆದಿ 66/5). ಇವನು ಇಂದ್ರಸಭೆ ಯಲ್ಲಿರುತ್ತಾ ದೇವರಾಜನ ಉಪಾಸನೆ ಮಾಡು ತ್ತಾನೆ (ಸಭಾ 7/19). ಬ್ರಹ್ಮನ ಸಭೆಯಲ್ಲಿದ್ದು ಅವನ ಉಪಾಸನೆಮಾಡುತ್ತಾನೆ (ಸಭಾ 11/12). ಇವನು ಪ್ಲಕ್ಷಾವತರಣ ತೀರ್ಥದಲ್ಲಿ ರಾಜಾ ಮರುತ್ತನ ಯಜ್ಞ ಮಾಡಿಸಿದ್ದನು (ವನ 129/ 13–17). ಬೃಹಸ್ಪತಿಯೊಂದಿಗೆ ಸ್ಪರ್ಧೆ ಇದ್ದುದ ರಿಂದ ಇವನು ಮಹಾರಾಜ ಮರುತ್ತನ ಯಜ್ಞ ಮಾಡಿಸಿದನು (ಶಾಂತಿ 29/20–21). ಇವನು ಶರಶಯ್ಯೆಯಲ್ಲಿ ಮಲಗಿದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/9). ಮಹಾ ಪ್ರಯಾಣದ ಕಾಲದಲ್ಲಿ ಭೀಷ್ಮನ ಬಳಿಗೆ ಹೋಗಿದ್ದನು (ಅನು 26/5). ಇವನು ಅಂಗಿರಸನ ಎಂಟು ಪುತ್ರರಲ್ಲಿ ಒಬ್ಬನಾಗಿದ್ದನು. ಉಳಿದವರ ಹೆಸರುಗಳು – ಬೃಹಸ್ಪತಿ, ಉತಥ್ಯ, ಪಯಸ್ಯ, ಶಾಂತಿ, ಘೋರ, ವಿರೂಪ ಮತ್ತು ಸುಧನ್ವಾ (ಅನು 85/30–31). ತನ್ನ ಜೊತೆ ಯನ್ನು ಬಿಟ್ಟು ಹೋಗುವಂತೆ ಇವನು ಮರುತ್ತ ನನ್ನು ಒತ್ತಾಯಿಸಿದುದು (ಆಶ್ವ 6/31–33). ಮರುತ್ತನಿಂದ ತನ್ನ ಪಕ್ಷದಲ್ಲಿರುವೆನೆಂದು ಪ್ರತಿಜ್ಞೆ ಮಾಡಿಸಿ, ಅವನ ಯಜ್ಞ ಮಾಡಿಸುವೆನೆಂದು ಒಪ್ಪಿದುದು (ಆಶ್ವ 7/24–27). ಸುವರ್ಣ ಪ್ರಾಪ್ತಿಗಾಗಿ ಮರುತ್ತನಿಗೆ ಶಿವನ ನಾಮಮಯ ವಾದ ಸ್ತುತಿಯನ್ನು ಉಪದೇಶ ಮಾಡಿದುದು (ಆಶ್ವ 8/13). ಅಗ್ನಿದೇವನನ್ನು ಸುಟ್ಟುಹಾಕುವ ಬೆದರಿಕೆಯೊಡ್ಡಿದುದು (ಆಶ್ವ 9/19). ಇಂದ್ರನ ವಜ್ರವನ್ನು ಸ್ತಂಭನಗೊಳಿಸಿದುದು (ಆಶ್ವ 10/17). ಇಂದ್ರನನ್ನು ಮರುತ್ತನ ಯಜ್ಞಶಾಲೆಗೆ ಕರೆಸಿ ದುದು (ಆಶ್ವ 10/20). ಇಂದ್ರನೇ ಆವಶ್ಯಕ ಕಾರ್ಯಗಳ ಉಪದೇಶ ಕೊಡಲು ಮತ್ತು ದೇವತೆಗಳ ಭಾಗ ನಿಶ್ಚಿತಗೊಳಿಸಲು ಹೇಳಿದುದು (ಆಶ್ವ 10/25).

**ಸಂವರ್ತಕ** – (1) ಕಶ್ಯಪ ಮತ್ತು ಕದ್ರುವಿನಿಂದ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/10). (2) ಮಾಲ್ಯವಂತ ಪರ್ವತದಲ್ಲಿ ಸದಾ ಪ್ರಜ್ವಲಿಸುತ್ತಿರುವ ಅಗ್ನಿದೇವನ ಹೆಸರು (ಭೀಷ್ಮ 7/27–28).

**ಸಂವರ್ತವಾಪೀ** – ಒಂದು ದುರ್ಲಭ ತೀರ್ಥ. ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಸುಂದರ ರೂಪ ಪಡೆಯುತ್ತಾನೆ (ವನ 85/31).

**ಸಂವಹ** – ಆಕಾಶಮಾರ್ಗದಲ್ಲಿ ಹೋಗುವ ದೇವತೆಗಳ ವಿಮಾನಗಳನ್ನು ಸ್ವತಃ ಹೊತ್ತೊ ಯ್ಯುವ, ಪರ್ವತಗಳ ಮಾನಮರ್ದನ ಮಾಡುವ ನಾಲ್ಕನೆಯ ವಾಯು ಸಂವಹವೆಂದು ಪ್ರಸಿದ್ಧ ವಾಗಿದೆ. ಇದರ ವಿಶೇಷ ವರ್ಣನೆ (ಶಾಂತಿ 328/41–43).

**ಸಂವೃತ್ತ** – ಕಾಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/14).

**ಸಂವೃತ್ತಿ** – ಬ್ರಹ್ಮನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುವ ಒಬ್ಬಳು ದೇವಿ (ಸಭಾ 11/43).

**ಸಂವೇದ್ಯ** – ಒಂದು ತೀರ್ಥ. ಇಲ್ಲಿ ಪ್ರಾತಃ ಸಂಧ್ಯೆಯ ಸಮಯ ಸ್ನಾನಮಾಡುವುದರಿಂದ ವಿದ್ಯೆ ಪ್ರಾಪ್ತವಾಗುತ್ತದೆ (ವನ 85/1).

**ಸಂಶಪ್ತಕವಧಪರ್ವ** – ದ್ರೋಣಪರ್ವದ ಒಂದು ಅವಾಂತರ ಪರ್ವ (ದ್ರೋಣ ಅಧ್ಯಾಯ 17 ರಿಂದ 32ರ ವರೆಗೆ).

**ಸಂಶ್ರುತ್ಯ** – ವಿಶ್ವಾಮಿತ್ರನ ಬ್ರಹ್ಮವಾದೀ ಪುತ್ರರಲ್ಲಿ ಒಬ್ಬ (ಅನು 4/55).

**ಸಂಸ್ಥಾನ** – ಒಂದು ದೇಶ. ಇಲ್ಲಿರುವ ಸೈನಿಕರು ಭೀಷ್ಮನನ್ನು ರಕ್ಷಿಸುವಂತೆ ಆದೇಶ ಕೊಡಲಾಗಿತ್ತು (ಭೀಷ್ಮ 51/7).

**ಸಂಹತಾಪನ** – ಐರಾವತಕುಲದ ಒಬ್ಬ ನಾಗ. ಈತ ಜನಮೇಜಯನ ಸರ್ಪಸತ್ರಲ್ಲಿ ಸುಟ್ಟು ಹೋದನು (ಆದಿ 57/11-12).

**ಸಂವಹನ** – ರಾಜಾ ಪುರುವಿನ ಮರಿಮಗ ಮತ್ತು ಮನಸ್ಯುವಿನ ಪುತ್ರ. ತಾಯಿಯ ಹೆಸರು ಸೌವೀರೀ. ಇವನು ಶೂರ, ವೀರ ಮತ್ತು ಮಹಾರಥಿಯಾಗಿದ್ದನು (ಆದಿ 94/57).

**ಸಂಹ್ರಾದ (ಸಂಹ್ಲಾದ)** – ಹಿರಣ್ಯಕಶಿಪುವಿನ ಎರಡನೆಯ ಪುತ್ರ, ಪ್ರಹ್ಲಾದನ ತಮ್ಮ. ಇವನ ಉಳಿದ ಸಹೋದರರ ಹೆಸರು – ಪ್ರಹ್ಲಾದ, ಅನುಹ್ಲಾದ, ಶಿವಿ ಮತ್ತು ಬಾಷ್ಕಲಿ ಎಂದಾಗಿತ್ತು (ಆದಿ 65/17-18). ಬಾಹ್ಲೀಕ ದೇಶದ ಸುಪ್ರಸಿದ್ಧ ರಾಜಾ ಶಲ್ಯ ಇವನ ಅಂಶದಿಂದಲೇ ಹುಟ್ಟಿದ್ದನು (ಆದಿ 67/6). ಈತ ವರುಣ ಸಭೆಯಲ್ಲಿದ್ದು ಕೊಂಡು, ಅವನ ಉಪಾಸನೆ ಮಾಡುತ್ತಿದ್ದನು (ಸಭಾ 9/12).

**ಸಕೃದ್‌ಗ್ರಹ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/66).

**ಸಗರ** – ಒಬ್ಬ ಪ್ರಾಚೀನ ರಾಜ (ಆದಿ 1/234). ಇವನು ಯಮಸಭೆಯಲ್ಲಿರುತ್ತಾ, ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/19). ಇವನು ಇಕ್ಷ್ವಾಕುವಂಶದ ಪ್ರತಾಪಿ ರಾಜ ನಾಗಿದ್ದನು. ಇವನಿಗೆ ಇಬ್ಬರು ರಾಣಿಯರಿದ್ದರು. ವೈದರ್ಭೀ ಮತ್ತು ಶೈವ್ಯಾ. ಸಂತಾನಪ್ರಾಪ್ತಿಗಾಗಿ ಇವನ ತಪಸ್ಸು. ಒಬ್ಬಳಿಂದ ಅರುವತ್ತು ಸಾವಿರ ಮತ್ತು ಇನ್ನೊಬ್ಬಳಿಂದ ಒಬ್ಬನೇ ವಂಶೋದ್ಧಾರಕ ಪುತ್ರನಾಗುವ ವರದಾನ (ವನ 47/19; ವನ 106/7-16). ಇವನ ಒಬ್ಬ ರಾಣಿ ವೈದರ್ಭಿಯ ಗರ್ಭದಿಂದ ಒಂದು ಕುಂಬಳಕಾಯಿ ಹುಟ್ಟಿತು. ರಾಜನು ಅದನ್ನು ಎಸೆಯಲು ಬಯಸುತ್ತಿದ್ದನು; ಆದರೆ ಆಕಾಶವಾಣಿಯು ತಡೆದುದರಿಂದ ಸುಮ್ಮ ನಾದನು ಮತ್ತು ಅದರ ನಿರ್ದೇಶಾನುಸಾರವಾಗಿ ಕುಂಬಳಕಾಯಿಯ ಒಂದೊಂದು ಬೀಜ ತೆಗೆದು ಅರುವತ್ತು ಸಾವಿರ ಘೃತ ತುಂಬಿದ ಕಲಶಗಳಲ್ಲಿ ಇಟ್ಟನು ಮತ್ತು ಅವುಗಳ ರಕ್ಷಣೆಗಾಗಿ ದಾದಿ ಯರನ್ನು ನೇಮಕಮಾಡಿದನು. ಅನಂತರ ದೀರ್ಘ ಕಾಲದ ಬಳಿಕ ಅರುವತ್ತು ಸಾವಿರ ಪುತ್ರರು ಆ ಗಡಿಗೆಗಳಿಂದ ಹೊರಟುಬಂದರು (ವನ 106/18 ರಿಂದ ವನ 107/4). ಇವನಿಂದ ಅಶ್ವಮೇಧ ಯಜ್ಞದ ದೀಕ್ಷೆ (ವನ 107/11). ಇವನ ಅರುವತ್ತು ಸಾವಿರ ಪುತ್ರರು ಕಪಿಲನ ಕ್ರೋಧಾಗ್ನಿ ಯಿಂದ ಭಸ್ಮವಾದುದು (ವನ 107/33). ಇವನಿಂದ ತನ್ನ ಪುತ್ರನಾದ ಅಸಮಂಜಸನ ತ್ಯಾಗ (ವನ 107/39-43; ಶಾಂತಿ 57/8). ಇವನು ಅಂಶುಮಂತನಿಗೆ ರಾಜ್ಯವನ್ನಿತ್ತು ಸ್ವರ್ಗಕ್ಕೆ ಹೋದುದು (ವನ 107/64). ಇವನು ಅರ್ಜುನ ಮತ್ತು ಕೃಪಾಚಾರ್ಯರ ಯುದ್ಧನೋಡಲು ಇಂದ್ರನ ವಿಮಾನದಲ್ಲಿ ಕುಳಿತು ವಿರಾಟನಗರದ ಬಳಿಗೆ ಬಂದಿದ್ದನು (ವಿರಾಟ 53/10). ಶ್ರೀಕೃಷ್ಣ ನಿಂದ ಇವನ ದಾನ, ಯಜ್ಞಾದಿಗಳ ಕುರಿತು ವರ್ಣನೆ (ಶಾಂತಿ 29/130-131). ಮಹರ್ಷಿ ಅರಿಷ್ಟನೇಮಿಯೊಡನೆ ಮೋಕ್ಷದ ಕುರಿತು ಈತನ ಪ್ರಶ್ನೆ (ಶಾಂತಿ 288/3). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/66). ಇವನು ಸಾಯಂಪ್ರಾತಃ ಸ್ಮರಣೀಯನಾದ ರಾಜರ್ಷಿಯಾಗಿದ್ದಾನೆ (ಅನು 165/49).

**ಸಙ್ಕರ** – ಒಂದು ಮಿಶ್ರಿತ ಜಾತಿ. ಭಿನ್ನ ಭಿನ್ನ ವರ್ಣದ ತಾಯಿ ತಂದೆಯರಿಂದ ಹುಟ್ಟುವ ಸಂತಾನ 'ಸಂಕರಜಾತಿ'ಯ ಒಳಗೆ ಬರುತ್ತದೆ. ಭಾರತವರ್ಷದಲ್ಲಿ ಈ ಜಾತಿಯ ಜನರೂ ಇದ್ದಾರೆ (ಭೀಷ್ಮ 9/13-14).

**ಸಙ್ಕರ್ಷಣ** – ಬಲದೇವ (ಸಭಾ 22/36) (ನೋಡಿರಿ : ಬಲರಾಮ). ಇವನ ಹುಟ್ಟು ಮತ್ತು ಮಹಿಮೆಯ ವರ್ಣನೆ (ಶಾಂತಿ 207/1-12).

**ಸಞ್ಜಯ** – (1) ಗವಲ್ಗಣನೆಂಬ ಸೂತನ ಮಗ. ಇವನು ಮುನಿಗಳ ಸಮಾನನಾದ ಜ್ಞಾನಿಯೂ, ಧರ್ಮಾತ್ಮನೂ ಆಗಿದ್ದನು. ಈತ ಧೃತರಾಷ್ಟ್ರನ

ಮಂತ್ರಿಯಾಗಿದ್ದನು (ಆದಿ 63/97). ಧೃತ ರಾಷ್ಟ್ರನು ತನ್ನ ವಿಜಯದ ಕುರಿತಾದ ನಿರಾಶೆಯ ಅನುಭವವನ್ನು ಈತನಿಗೆ ಹೇಳಿದುದು (ಆದಿ 1/150–218). ಇವನಿಂದ ಧೃತರಾಷ್ಟ್ರನಿಗೆ ಆಶ್ವಾಸನೆ (ಆದಿ 1/222–251). ಇವನು ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಹೋಗಿದ್ದನು. ರಾಜರ ಸೇವೆ ಮತ್ತು ಸತ್ಕಾರದ ಕಾರ್ಯಕ್ಕೆ ಇವನನ್ನು ನೇಮಿಸಲಾಗಿತ್ತು (ಸಭಾ 35/6). ಇವನು ಧೃತರಾಷ್ಟ್ರನನ್ನು ನಿಂದಿಸಿದುದು (ಸಭಾ 81/5–18). ಧೃತರಾಷ್ಟ್ರನ ಆದೇಶ ಪ್ರಕಾರ ವಿದುರನನ್ನು ಕರೆಯಲು ಈತ ಕಾಮ್ಯಕವನಕ್ಕೆ ಹೋದುದು ಮತ್ತು ವಿದುರನಿಗೆ ಸಂದೇಶ ತಿಳಿಸಿದುದು (ವನ 6/5–17). ಇವನಿಂದ ಸಂತಾಪ ಪಡುತ್ತಿದ್ದ ಧೃತರಾಷ್ಟ್ರನ ಮಾತುಗಳ ಸಮರ್ಥನೆ (ವನ 49/1–13). ದುರ್ಯೋಧನನ ವಧೆಗಾಗಿ ಶ್ರೀಕೃಷ್ಣಾದಿಗಳಿಂದ ಕಾಮ್ಯಕವನದಲ್ಲಿ ಮಾಡಲ್ಪಟ್ಟ ಪ್ರತಿಜ್ಞೆಯ ವರ್ಣನೆಯನ್ನು ಈತ ಧೃತರಾಷ್ಟ್ರನ ಮುಂದೆ ಮಾಡಿದುದು (ವನ 51/15–44). ಧೃತರಾಷ್ಟ್ರನು ಕಳುಹಿಸಿದಾಗ ಯುಧಿಷ್ಠಿರನ ಬಳಿಗೆ ಹೋಗಿ ಅವರ ಕುಶಲ ಸಮಾಚಾರ ಕೇಳಿದುದು (ಉದ್ಯೋಗ 23/1–5). ಯುಧಿಷ್ಠಿರನ ಪ್ರಶ್ನೆಗಳಿಗೆ ಉತ್ತರವನ್ನಿತ್ತುದ್ದು (ಉದ್ಯೋಗ 24 ಅಧ್ಯಾಯ). ಪಾಂಡವರ ಸಭೆಯಲ್ಲಿ ಧೃತರಾಷ್ಟ್ರನ ಸಂದೇಶ ತಿಳಿಸಿದುದು (ಉದ್ಯೋಗ 25 ಅಧ್ಯಾಯ). ಯುಧಿಷ್ಠಿರನಿಗೆ ಯುದ್ಧದಲ್ಲಿ ದೋಷವಾಗುವ ಪೂರ್ವಸೂಚನೆಯನ್ನು ನೀಡಿ ಶಾಂತನಾಗಿರಲು ಹೇಳಿದುದು (ಉದ್ಯೋಗ 27 ಅಧ್ಯಾಯ). ಯುಧಿಷ್ಠಿರನ ಬಳಿಯಿಂದ ಹಸ್ತಿನಾವತಿಗೆ ಹಿಂತಿರುಗಿ, ಧೃತರಾಷ್ಟ್ರನೊಡನೆ ಅವರ ಕುಶಲ ಸಮಾಚಾರ ಹೇಳಿದುದು ಮತ್ತು ಧೃತರಾಷ್ಟ್ರನ ಕಾರ್ಯಗಳನ್ನು ನಿಂದಿಸಿದುದು (ಉದ್ಯೋಗ 32/11–30). ಕೌರವ ಸಭೆಗೆ ಆಗಮನ (ಉದ್ಯೋಗ 47/14). ಕೌರವ ಸಭೆಯಲ್ಲಿ ಅರ್ಜುನನ ಸಂದೇಶ ತಿಳಿಸಿದುದು (ಉದ್ಯೋಗ 48 ಅಧ್ಯಾಯ). ಧೃತರಾಷ್ಟ್ರನಿಗೆ ಯುಧಿಷ್ಠಿರನ ಪ್ರಧಾನ ಸಹಾಯಕರ ವರ್ಣನೆ ಮಾಡಿದುದು (ಉದ್ಯೋಗ 50 ಅಧ್ಯಾಯ). ಧೃತರಾಷ್ಟ್ರನ ದೋಷಗಳನ್ನು ಹೇಳುತ್ತಾ, ದುರ್ಯೋಧನನ ಮೇಲೆ ಅಧಿಕಾರವಿರಿಸಿಕೊಳ್ಳುವಂತೆ ಸಲಹೆ ಮಾಡಿದುದು (ಉದ್ಯೋಗ 54 ಅಧ್ಯಾಯ). ದುರ್ಯೋಧನನಿಗೆ ಪಾಂಡವರ ರಥ ಮತ್ತು ಅಶ್ವಗಳ ವರ್ಣನೆ ಮಾಡಿದುದು (ಉದ್ಯೋಗ 56/7–17). ಪಾಂಡವರ ಯುದ್ಧ ಸಿದ್ಧತೆಯ ವರ್ಣನೆ (ಉದ್ಯೋಗ 57/2–25). ಧೃಷ್ಟದ್ಯುಮ್ನನ ಶಕ್ತಿ ಮತ್ತು ಸಂದೇಶದ ವರ್ಣನೆ (ಉದ್ಯೋಗ 57/47–62). ಧೃತರಾಷ್ಟ್ರನು ಕೇಳಿದಾಗ ಶ್ರೀಕೃಷ್ಣನೂ ಅರ್ಜುನನೂ ಅಂತಃಪುರದಲ್ಲಿ ಹೇಳಿದ ಸಂದೇಶವನ್ನು ತಿಳಿಸಿದುದು (ಉದ್ಯೋಗ 59 ಅಧ್ಯಾಯ). ಧೃತರಾಷ್ಟ್ರನಿಗೆ ಅರ್ಜುನನ ಸಂದೇಶ ತಿಳಿಸಿದುದು (ಉದ್ಯೋಗ 66/3–15). ಧೃತರಾಷ್ಟ್ರನಲ್ಲಿ ಶ್ರೀಕೃಷ್ಣನ ಮಹಿಮೆಯ ವರ್ಣನೆ ಮಾಡಿದುದು (ಉದ್ಯೋಗ ಅಧ್ಯಾಯ 68ರಿಂದ 70ರ ತನಕ). ಧೃತರಾಷ್ಟ್ರನೊಡನೆ ಕರ್ಣ ಮತ್ತು ಶ್ರೀಕೃಷ್ಣನ ಮಾತುಕತೆಯ ವೃತ್ತಾಂತ ಹೇಳಿದುದು (ಉದ್ಯೋಗ 143 ಅಧ್ಯಾಯ). ಧೃತರಾಷ್ಟ್ರನಿಗೆ ಕುರುಕ್ಷೇತ್ರದಲ್ಲಿ ಸೈನ್ಯದ ಡೇರೆಗಳು ಹಾಕಲ್ಪಟ್ಟ ಅನಂತರದ ಸಮಾಚಾರ ತಿಳಿಸಲು ಪ್ರಾರಂಭಿಸಿದುದು (ಉದ್ಯೋಗ 159/8). ವ್ಯಾಸರ ಕೃಪೆಯಿಂದ ಇವನಿಗೆ ದಿವ್ಯದೃಷ್ಟಿ ಪ್ರಾಪ್ತಿ (ಭೀಷ್ಮ 2/10). ಧೃತರಾಷ್ಟ್ರನು ಕೇಳಿದಾಗ ಭೂಮಿಯ ಗುಣಗಳ ವರ್ಣನೆ ಮಾಡಿದುದು (ಭೀಷ್ಮ 4/10 ರಿಂದ ಭೀಷ್ಮ 5/12 ತನಕ). ಸುದರ್ಶನ ದ್ವೀಪದ ವರ್ಣನೆ ಮಾಡಿದುದು (ಭೀಷ್ಮ 5/13). ಧೃತರಾಷ್ಟ್ರನಿಗೆ ಭೀಷ್ಮನ ಮರಣದ ಸಮಾಚಾರ ಹೇಳಿದುದು (ಭೀಷ್ಮ 13 ಅಧ್ಯಾಯ). (ಇಲ್ಲಿಂದ ಸೌಪ್ತಿಕಪರ್ವದ 9ನೇ ಅಧ್ಯಾಯದ ವರೆಗೆ ಸಂಜಯನು ಧೃತರಾಷ್ಟ್ರನಿಗೆ ಯುದ್ಧದ ವಾರ್ತೆ ತಿಳಿಸಿದ್ದಾನೆ.). ಧೃತರಾಷ್ಟ್ರನನ್ನು ನಿಂದಿಸಿದುದು (ದ್ರೋಣ 76 ಅಧ್ಯಾಯ). ಕರ್ಣನು ಅರ್ಜುನನ ಮೇಲೆ ಶಕ್ತಿಯ ಪ್ರಯೋಗ ಯಾಕೆ ಮಾಡಲಿಲ್ಲವೆಂಬ ಕಾರಣವನ್ನು ಧೃತರಾಷ್ಟ್ರನಿಗೆ ಹೇಳಿದುದು (ದ್ರೋಣ 182 ಅಧ್ಯಾಯ). ಕೌರವ ಪಕ್ಷದಲ್ಲಿ ಕೊಲ್ಲಲ್ಪಟ್ಟ ಪ್ರಮುಖ ವೀರರ ಪರಿಚಯ ಹೇಳಿದುದು (ಕರ್ಣ 5 ಅಧ್ಯಾಯ). ಪಾಂಡವ ಪಕ್ಷದಲ್ಲಿ ಕೊಲ್ಲಲ್ಪಟ್ಟ ಪ್ರಮುಖ ವೀರರ ಪರಿಚಯ ಹೇಳಿದುದು (ಕರ್ಣ 6 ಅಧ್ಯಾಯ). ಕೌರವ ಪಕ್ಷದ ಜೀವಂತ ಯೋಧರ ವರ್ಣನೆ (ಕರ್ಣ 7

ಅಧ್ಯಾಯ). ಸಾತ್ಯಕಿಯಿಂದ ಈತ ಜೀವಂತ ಬಂಧಿಸಲ್ಪಟ್ಟದ್ದು (ಶಲ್ಯ 25/57–58). ವ್ಯಾಸನ ಅನುಗ್ರಹದಿಂದ ಸಾತ್ಯಕಿಯ ಬಂಧನದಿಂದ ಬಿಡುಗಡೆ ಹೊಂದಿದುದು (ಶಲ್ಯ 29/39). ಇವನ ದಿವ್ಯದೃಷ್ಟಿ ಹೊರಟು ಹೋದುದು (ಸೌಪ್ತಿಕ 9/62). ಧೃತರಾಷ್ಟ್ರನಿಗೆ ಸಮಾಧಾನ ಹೇಳಿದುದು (ಸ್ತ್ರೀ 1/23–43). ಧೃತರಾಷ್ಟ್ರ ನೊಡನೆ ಸ್ವಜನರ ಶವಸಂಸ್ಕಾರ ಮಾಡಲು ಹೇಳಿದುದು (ಸ್ತ್ರೀ 9/5–7). ಯುಧಿಷ್ಠಿರನಿಂದ ಇವನಿಗೆ ಕೃತಾಕೃತ ಕೆಲಸಗಳ ಪರಿವೀಕ್ಷಣೆ ಮತ್ತು ಆಯವ್ಯಯದ ನಿರೀಕ್ಷಣೆಯ ಕಾರ್ಯ ಒಪ್ಪಿಸ ಲ್ಪಟ್ಟದ್ದು (ಶಾಂತಿ 41/11). ಧೃತರಾಷ್ಟ್ರ ಮತ್ತು ಗಾಂಧಾರಿಯೊಂದಿಗೆ ಈತನ ವನಗಮನ (ಆಶ್ರಮ 15/8). ಯಾತ್ರೆಯ ಪ್ರಥಮ ದಿನ ಗಂಗಾತಟದಲ್ಲಿ ಧೃತರಾಷ್ಟ್ರನಿಗೋಸ್ಕರ ಹಾಸಿಗೆ ಯನ್ನು ಹಾಕಿದುದು. ವನವಾಸಿಗಳಾದ ಮಹರ್ಷಿ ಗಳಿಗೆ ಪಾಂಡವರು ಹಾಗೂ ಅವರ ಪತ್ನಿಯರ ಪರಿಚಯ ಮಾಡಿದುದು (ಆಶ್ರಮ 25 ಅಧ್ಯಾಯ). ಇವನು ಕಾಡಿನಲ್ಲಿ ಆರನೆಯ ಹೊತ್ತು ಅಂದರೆ ಎರಡು ದಿನ ಉಪವಾಸ ಮಾಡಿ ಮೂರನೇ ದಿನ ಆಹಾರ ಗ್ರಹಣ ಮಾಡುತ್ತಿದ್ದನು (ಆಶ್ರಮ 37/13). ಇವನು ಯಾವಾಗಲೂ ಧೃತರಾಷ್ಟ್ರನ ಹಿಂದೆಯೇ ನಡೆಯುತ್ತಾ, ಏರುತಗ್ಗಾದ ನೆಲದಲ್ಲಿ ಅವನಿಗೆ ಸಹಕಾರಕೊಟ್ಟು ಕರಕೊಂಡು ಹೋಗುತ್ತಿದ್ದನು (ಆಶ್ರಮ 37/16–17). ಕಾಡಿನಲ್ಲಿ ದಾವಾನಲ ಹತ್ತಿಕೊಂಡಾಗ ಸಂಜಯನು ದೂರ ಓಡಿ ಹೋಗುವಂತೆ ಧೃತರಾಷ್ಟ್ರನು ಹೇಳಿದನು. ಈ ರೀತಿ ಕಾಡ್ಗಿಚ್ಚಿನಲ್ಲಿ ಉರಿದುಬರುವ ಮೃತ್ಯು ರಾಜನಿಗೆ ಅನಿಷ್ಟವೆಂದು ಸಂಜಯನು ಹೇಳಿ ದನು. ಆದರೆ ಅದರಿಂದ ಬದುಕಿಸುವ ಯಾವ ಮಾರ್ಗವನ್ನು ಕಾಣದೆ ತನ್ನ ಕರ್ತವ್ಯವೇನೆಂದು ಕೇಳಿದನು. 'ಗೃಹತ್ಯಾಗಿಗಳಿಗೆ ಈ ಮೃತ್ಯು ಅನಿಷ್ಟಕಾರಕವಲ್ಲ; ಉತ್ತಮವಾಗಿದೆ; ನೀನು ಓಡಿಹೋಗು' ಎಂದು ರಾಜನು ಹೇಳಿದನು. ಆಗ ಸಂಜಯನು ರಾಜನಿಗೆ ಪ್ರದಕ್ಷಿಣೆ ಮಾಡಿ, ಆತ ಧ್ಯಾನಸ್ಥನಾಗುವಂತೆ ಹೇಳಿದನು. ರಾಜಾ ಧೃತರಾಷ್ಟ್ರ, ಗಾಂಧಾರಿ ಮತ್ತು ಕುಂತಿ– ಮೂವರು ದಗ್ಧರಾದರು. ಆದರೆ ಈತ ದಾವಾನಲದಿಂದ ಮುಕ್ತನಾದನು. ಅನಂತರ ಗಂಗಾ ದಡದಲ್ಲಿರುವ ತಪಸ್ವಿಗಳಿಗೆ ರಾಜನು ದಗ್ಧನಾದ ಸಮಾಚಾರ ಹೇಳಿ, ತಾನು ಹಿಮಾಲಯಕ್ಕೆ ಹೋದನು (ಆಶ್ರಮ 37/19–34).

(2) ಸೌವೀರ ದೇಶದ ಒಬ್ಬ ರಾಜಕುಮಾರ. ಇವನು ಕೈಯಲ್ಲಿದ್ದ ಧ್ವಜಹಿಡಿದುಕೊಂಡು ಜಯದ್ರಥನ ಹಿಂದಿನಿಂದ ಹೋಗುತ್ತಿದ್ದನು (ವನ 265/10). ದ್ರೌಪದಿಹರಣ ಕಾಲದಲ್ಲಿ ಅರ್ಜುನ ನಿಂದ ಇವನ ವಧೆ (ವನ 271/27).

(3) ಸೌವೀರ ದೇಶದ ಒಬ್ಬ ರಾಜಕುಮಾರ. ಇವನ ತಾಯಿ ವಿದುಲಾ ಎಂಬವಳು. ಒಂದು ದಿನ ಯುದ್ಧಭೂಮಿಯಿಂದ ಓಡಿಬಂದಾಗ, ತಾಯಿ ಇವನನ್ನು ಚೆನ್ನಾಗಿ ಬೈದಳು ಮತ್ತು ಯುದ್ಧ ಮಾಡುವಂತೆ ಪ್ರೋತ್ಸಾಹಿಸಿದಳು (ಉದ್ಯೋಗ ಅಧ್ಯಾಯ 133 ರಿಂದ 136/12ರ ವರೆಗೆ). ತಾಯಿಯ ಉಪದೇಶದಿಂದ ಯುದ್ಧಕ್ಕೆ ಸಿದ್ಧನಾಗಿ, ಆಕೆಯ ಆಜ್ಞೆಯನ್ನು ಯಥಾವತ್ತಾಗಿ ಪಾಲಿಸಿದನು (ಉದ್ಯೋಗ 136/13–16).

**ಸಞ್ಜಯಂತೀ** – ದಕ್ಷಿಣ ಭಾರತದ ಒಂದು ಪಟ್ಟಣ. ದಕ್ಷಿಣ ದಿಗ್ವಿಜಯಕಾಲದಲ್ಲಿ ಸಹದೇವನು ದೂತರ ಮೂಲಕ ಸಂದೇಶ ಕಳುಹಿಸಿ ಈ ದೇಶವನ್ನು ತನ್ನ ಅಧಿಕಾರಕ್ಕೊಳಪಡಿಸಿ, ಅಲ್ಲಿಂದ ಕಪ್ಪವನ್ನು ಪಡೆದಿದ್ದನು (ಸಭಾ 31/70).

**ಸಞ್ಜಯಯಾನಪರ್ವ** – ಉದ್ಯೋಗಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 20 ರಿಂದ 32ರ ವರೆಗೆ).

**ಸಞ್ಜೀವನ ಮಣಿ** – ಒಂದು ರೀತಿಯ ರತ್ನ. ಇದು ನಾಗಗಳ ಜೀವನಾಧಾರ. ಬಭ್ರುವಾಹನ ನಿಂದ ಹೊಡೆಯಲ್ಪಟ್ಟ ಅರ್ಜುನ ಮರಣ ಹೊಂದಿದಾಗ, ಉಲೂಪಿಯು ಇದನ್ನು ಸ್ಮರಿಸಿ ಕೈಗೆತ್ತಿಕೊಂಡಿದ್ದಳು. ಈ ಮಣಿ ಸದಾ ಸತ್ತ ನಾಗ ರಾಜರನ್ನು ಜೀವಂತಗೊಳಿಸುತ್ತಿತ್ತು. ಉಲೂಪಿಯ ಆಜ್ಞೆಯಂತೆ ಬಭ್ರುವಾಹನನು ಇದನ್ನು ಅರ್ಜುನನ ಎದೆಯ ಮೇಲಿರಿಸಿದನು. ಇದರಿಂದಾಗಿ ಅರ್ಜುನನು ಸಜೀವನಾಗಿ ಮೇಲೆದ್ದನು (ಆಶ್ವ 80/42–52).

**ಸಞ್ಜೀವನೀ** – ಒಂದು ವಿದ್ಯೆ. ಇದರಿಂದ ಮೃತ ವ್ಯಕ್ತಿಗಳಿಗೆ ಕೂಡಾ ಜೀವಕೊಡಲ್ಪಡಲು ಸಾಧ್ಯ ವಿದೆ. ಶುಕ್ರಾಚಾರ್ಯನು ಇದೇ ವಿದ್ಯೆಯ

ಬಲದಿಂದ ದೇವಾಸುರ ಸಂಗ್ರಾಮದಲ್ಲಿ ಸತ್ತ ದಾನವರನ್ನು ಬದುಕಿಸಿದ್ದನು (ಆದಿ 76/8). ಇದರ ಬಲದಿಂದಲೇ ದಾನವರಿಂದ ಕೊಲ್ಲಲ್ಪಟ್ಟ ಕಚನನ್ನು ಮೂರು ಬಾರಿ ಬದುಕಿಸಿದ್ದನು. ಶುಕ್ರಾಚಾರ್ಯನು ಕಚನಿಗೂ ಈ ವಿದ್ಯೆಯನ್ನು ಉಪದೇಶಿಸಿದ್ದನು (ಆದಿ 76/28–61).

**ಸಣು** – ಒಂದು ಭಾರತೀಯ ಜನಪದ (ಭೀಷ್ಮ 9/43).

**ಸತತ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ವಿಷ್ಣುಸಂಬಂಧಿಯಾದ ಒಂದು ತೀರ್ಥ. ಇಲ್ಲಿ ಶ್ರೀಹರಿ ಸದಾ ವಾಸಿಸುತ್ತಾನೆ (ವನ 83/10). ಇಲ್ಲಿ ಸ್ನಾನ ಮತ್ತು ಭಗವಾನ್ ಶ್ರೀಹರಿಗೆ ನಮಸ್ಕಾರ ಮಾಡಿದರೆ, ಮನುಷ್ಯನು ಅಶ್ವಮೇಧ ಯಜ್ಞದ ಫಲಪಡೆಯುತ್ತಾನೆ ಮತ್ತು ಭಗವಂತ ನಾದ ವಿಷ್ಣುವಿನ ಲೋಕಕ್ಕೆ ಹೋಗುತ್ತಾನೆ (ವನ 83/10–11).

**ಸತ್ಯ** – (1) ಒಬ್ಬ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10).

(2) ಒಬ್ಬ ಅಗ್ನಿ. ಈತ ನಿಶ್ಚ್ಯವನನೆಂಬ ಅಗ್ನಿಯ ಪುತ್ರ. ಇವನು ನಿಷ್ಪಾಪನು ಮತ್ತು ಕಾಲಧರ್ಮದ ಪ್ರವರ್ತಕನಾಗಿದ್ದಾನೆ. ವೇದನೆಯಿಂದ ಕೂಡಿದ ಪ್ರಾಣಿಗಳನ್ನು ಕಷ್ಟದಿಂದ ನಿಷ್ಕೃತಿ(ಬಿಡುಗಡೆ) ಗೊಳಿಸುವ ಕಾರಣದಿಂದಾಗಿ ಇವನ ಇನ್ನೊಂದು ಹೆಸರು ನಿಷ್ಕೃತಿ ಎಂದಾಗಿದೆ. ಇವನೇ ಪ್ರಾಣಿ ಗಳಿಂದ ಸೇವಿಸಲ್ಪಡುವ ಮನೆ ಮತ್ತು ಉದ್ಯಾನಾದಿಗಳಲ್ಲಿ ಶೋಭೆಯ ಸೃಷ್ಟಿಮಾಡು ತ್ತಾನೆ. ಇವನ ಪುತ್ರನ ಹೆಸರು ಸ್ವನ (ವನ 219/13–15).

(3) ಕಲಿಂಗ ಸೇನೆಯ ಒಬ್ಬ ಯೋಧ. ಇವನು ಕಲಿಂಗರಾಜ ಶ್ರುತಾಯುವಿನ ಚಕ್ರರಕ್ಷಕನಾಗಿದ್ದನು. ಭೀಮಸೇನನಿಂದ ಇವನ ವಧೆ (ಭೀಷ್ಮ 54/76).

(4) ವಿದರ್ಭನಿವಾಸಿ ಒಬ್ಬ ಧರ್ಮಾತ್ಮನಾದ ತಪಸ್ವಿ ಬ್ರಾಹ್ಮಣ (ಶಾಂತಿ 272/6). ಇವನ ಅಹಿಂಸಾಪೂರ್ಣ ಯಜ್ಞದ ವರ್ಣನೆ (ಶಾಂತಿ 272/10–20).

(5) ಭಗವಂತನಾದ ಶ್ರೀಕೃಷ್ಣನ ಒಂದು ಹೆಸರು ಮತ್ತು ಇದರ ಅರ್ಥ (ಶಾಂತಿ 342/75–76).

(6) ವೀತಹವ್ಯವಂಶದ ವೀತತ್ಯನ ಪುತ್ರ. ಇವನ ಪುತ್ರನ ಹೆಸರು ಸಂತನೆಂದಾಗಿತ್ತು (ಅನು 30/62).

**ಸತ್ಯಕ** – ಯದುವಂಶದ ಒಬ್ಬ ಕ್ಷತ್ರಿಯ. ಇವನು ಸಾತ್ಯಕಿಯ ತಂದೆ (ಆದಿ 63/105). ಇವನು ರೈವತಕ ಪರ್ವತದಲ್ಲಿ ಆಗುವ ಉತ್ಸವದಲ್ಲಿ ಭಾಗವಹಿಸಿದ್ದನು (ಆದಿ 218/11). ಇವನ ಮೂಲಕ ಅಭಿಮನ್ಯುವಿನ ಶ್ರಾದ್ಧಮಾಡಲ್ಪಟ್ಟಿತು (ಆಶ್ವ 62/6).

**ಸತ್ಯಕರ್ಮಾ** – ತ್ರಿಗರ್ತರಾಜ ಸುಶರ್ಮಾನ ಸಹೋದರ. ಇವನು ಅರ್ಜುನನನ್ನು ಕೊಲ್ಲುವ ಶಪಥಮಾಡಿದ್ದನು. ಇವನು ಒಬ್ಬ ಸಂಶಪ್ತಕ ಯೋಧನಾಗಿದ್ದನು (ದ್ರೋಣ 17/17–18). ಅರ್ಜುನನಿಂದ ಇವನ ವಧೆ (ಶಲ್ಯ 27/39–40).

**ಸತ್ಯಜಿತ್** – ರಾಜಾ ದ್ರುಪದನ ಸಹೋದರ. ಅವನೊಂದಿಗೆ ದ್ರುಪದನು ಅರ್ಜುನನ ಮೇಲೆ ಆಕ್ರಮಣ ಮಾಡಿದ್ದನು (ಆದಿ 137/42). ಅರ್ಜುನನೊಂದಿಗೆ ಈತನ ಯುದ್ಧ (ಆದಿ 137/53). ಅರ್ಜುನನು ಈತನಿಗೆ ಯುಧಿಷ್ಠಿರನ ರಕ್ಷಣೆಯ ಭಾರವನ್ನು ಒಪ್ಪಿಸಿದುದು (ದ್ರೋಣ 17/44–45). ದ್ರೋಣಾಚಾರ್ಯನಿಂದ ಇವನ ವಧೆ (ದ್ರೋಣ 21/21). ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/4).

**ಸತ್ಯದೇವ** – ಕಲಿಂಗಸೇನೆಯ ಒಬ್ಬ ಯೋಧ. ಇವನು ಕಲಿಂಗರಾಜ ಶ್ರುತಾಯುವಿನ ಚಕ್ರ ರಕ್ಷಕನಾಗಿದ್ದನು. ಭೀಮಸೇನನಿಂದ ಇವನ ವಧೆ (ಭೀಷ್ಮ 54/76).

**ಸತ್ಯಧರ್ಮಾ** – ಸೋಮಕವಂಶದ ಒಬ್ಬ ರಾಜ ಕುಮಾರ. ಇವನು ಯುಧಿಷ್ಠಿರನ ಸಹಾಯಕ ನಾಗಿದ್ದನು (ಉದ್ಯೋಗ 141/25).

**ಸತ್ಯಧೃತಿ** – (1) ಪಾಂಡವಪಕ್ಷದ ಮಹಾರಥಿ ಯಾದ ಒಬ್ಬ ಯೋಧ. ಭೀಷ್ಮನು ಇವನನ್ನು ರಥಿಗಳಲ್ಲಿ ಶ್ರೇಷ್ಠನೆಂದು ಒಪ್ಪಿದ್ದನು (ಉದ್ಯೋಗ 171/18). ಇವನು ದ್ರೌಪದೀ ಸ್ವಯಂವರಕ್ಕೂ ಹೋಗಿದ್ದನು (ಆದಿ 185/10). ಇವನು ಸುಚಿತ್ತನ ಪುತ್ರನಾಗಿದ್ದನು. ಇವನು ಯುದ್ಧದಲ್ಲಿ ಹಿಡಿಂಬೆಯ ಮಗನಾದ ಘಟೋತ್ಕಚನಿಗೆ ಸಹಾಯಮಾಡಿದ್ದನು (ಭೀಷ್ಮ 93/13). ಇವನ ಕುದುರೆಗಳ ಬಣ್ಣ ಕೆಂಪಾಗಿತ್ತು. ಆದರೆ ಅವುಗಳ ಕಾಲುಗಳ ಬಣ್ಣ ಕಪ್ಪಾಗಿತ್ತು. ಇವೆಲ್ಲಾ ಸುವರ್ಣ

ಮಯವಾದ ವಿಚಿತ್ರ ಕವಚಗಳಿಂದ ಸುಸಜ್ಜಿತ ವಾಗಿದ್ದವು. ಕುಮಾರ ಸತ್ಯಧೃತಿಯು ಅಸ್ತ್ರಗಳ ಜ್ಞಾನ, ಧನುರ್ವೇದ ಮತ್ತು ಬ್ರಾಹ್ಮವೇದಗಳಲ್ಲಿ ಪಾರಂಗತನಾಗಿದ್ದನು (ದ್ರೋಣ 23/36,39). ದ್ರೋಣಾಚಾರ್ಯನಿಂದ ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/34).

(2) ರಾಜಾ ಕ್ಷೇಮನ ಪುತ್ರ, ಪಾಂಡವ ಪಕ್ಷದ ಯೋಧ. ಇವನ ಕುದುರೆಗಳ ವರ್ಣನೆ (ದ್ರೋಣ 23/58).

**ಸತ್ಯಪಾಲ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/14).

**ಸತ್ಯಭಾಮಾ** – ಭಗವಾನ್ ಶ್ರೀಕೃಷ್ಣನ ಪಟ್ಟ ಮಹಿಷಿ. ಶ್ರೀಕೃಷ್ಣನು ನರಕಾಸುರನನ್ನು ಕೊಂದು, ಈಕೆಯೊಂದಿಗೆ ನರಕಾಸುರನ ಮನೆಯ ನಿರೀಕ್ಷೆ ಮಾಡಿದನು. ಅನಂತರ ಆತ ಆಕೆಯನ್ನು ಕರ ಕೊಂಡು ದೇವಲೋಕಕ್ಕೆ ಹೋದನು. ಅಲ್ಲಿ ಶಚೀದೇವಿಯು ಇವಳನ್ನು ದೇವಮಾತೆ ಅದಿತಿ ದೇವಿಯೊಡನೆ ಭೇಟಿ ಮಾಡಿಸಿದಳು. 'ಎಂದಿನ ತನಕ ಶ್ರೀಕೃಷ್ಣನು ಮಾನವ ಶರೀರದಲ್ಲಿರುವನೋ ನೀನು ಕೂಡಾ ವೃದ್ಧಾವಸ್ಥೆಯನ್ನು ಪಡೆಯಲಾರೆ, ದಿವ್ಯಸುಗಂಧ ಮತ್ತು ಉತ್ತಮ ಗುಣಗಳಿಂದ ಸುಶೋಭಿತಳಾಗಿರುವೆ' ಎಂದು ಅದಿತಿದೇವಿ ಈಕೆಗೆ ವರವನ್ನಿತ್ತಳು. ಸತ್ಯಭಾಮೆಯು ಶಚಿ ಯೊಡನೆ ಸ್ವರ್ಗದಲ್ಲಿ ತಿರುಗಾಡಿ, ಅವಳ ಅನುಮತಿ ಪಡೆದು ಶ್ರೀಕೃಷ್ಣನೊಂದಿಗೆ ಪುನಃ ದ್ವಾರಕೆಗೆ ಬಂದಳು. ದ್ವಾರಕೆಯಲ್ಲಿ ಈಕೆಗೆ ವಾಸಿ ಸಲು ಬಿಳಿಯ ಬಣ್ಣದ ಪ್ರಾಸಾದವು ಲಭಿಸಿತ್ತು. ಅದರಲ್ಲಿ ವಿಚಿತ್ರ ರತ್ನಗಳ ಮೆಟ್ಟಲುಗಳಿದ್ದವು. ಅಲ್ಲಿಗೆ ಪ್ರವೇಶ ಮಾಡಿದರೆ ಗ್ರೀಷ್ಮ ಋತುವಿ ನಲ್ಲೂ ಶೈತ್ಯದ ಅನುಭವವಾಗುತ್ತಿತ್ತು. ಈ ಅರ ಮನೆ ಒಂದು ಸುಂದರ ಉದ್ಯಾನದಲ್ಲಿ ರಚಿಸ ಲ್ಪಟ್ಟಿತ್ತು. ಇದರ ನಾಲ್ಕೂ ಕಡೆಗಳಲ್ಲಿ ಎತ್ತರವಾದ ಧ್ವಜಗಳು ಹಾರಾಡುತ್ತಿದ್ದವು. ಈಕೆ ಸಭಾಭವನ ದಲ್ಲಿ ಭಗವಂತನ ವೈಭವ ಮತ್ತು ಹೊಸತಾಗಿ ಬಂದ ರಾಣಿಯರನ್ನು ನೋಡಲು ಹೋಗಿದ್ದಳು (ಸಭಾ 38/29). ಈಕೆ ಶ್ರೀಕೃಷ್ಣನೊಂದಿಗೆ ಕಾಮ್ಯಕ ವನಕ್ಕೆ ಬಂದು ದ್ರೌಪದಿಯ ಭೇಟಿ ಮಾಡಿದುದು (ವನ 183/11). ಈಕೆ ದ್ರೌಪದಿಯೊಡನೆ ಗಂಡನು ತನಗೆ ಅನುಕೂಲನಾಗಿರುವಂತೆ ಮಾಡಿಕೊಳ್ಳುವ ಉಪಾಯವನ್ನು ಕೇಳಿದುದು (ವನ 233/4–8). ಈಕೆ ದ್ರೌಪದಿಗೆ ಧೈರ್ಯ ವನ್ನಿತ್ತು ದ್ವಾರಕೆಗೆ ಹೋದುದು (ವನ 235/4–18). ಈಕೆ ಸತ್ರಾಜಿತನ ಪುತ್ರಿಯಾಗಿದ್ದಳು. ಶ್ರೀಕೃಷ್ಣ ಪರಂಧಾಮದ ಬಳಿಕ, ಅರ್ಜುನನು ದ್ವಾರಕೆಗೆ ಬಂದಾಗ, ಅವನ ಬಳಿಗೆ ಬಂದು ರುಕ್ಮಿಣಿಯೇ ಮೊದಲಾದವರೊಡನೆ ಈಕೆಯೂ ವಿಲಪಿಸಿದ್ದಳು (ಮೌಸಲ 5/13). ಶ್ರೀಕೃಷ್ಣಪ್ರಿಯೆಯಾದ ಸತ್ಯ ಭಾಮೆ ತಪಸ್ಸಿನ ನಿಶ್ಚಯಮಾಡಿ ಕಾಡಿನಲ್ಲಿ ಹೊರಟುಹೋದಳು (ಮೌಸಲ 7/74).

**ಸತ್ಯಯುಗ** – ನಾಲ್ಕು ಯುಗಗಳಲ್ಲಿ ಪ್ರಥಮ ಯುಗ (ವಿಶೇಷ ನೋಡಿರಿ ಕೃತಯುಗ).

**ಸತ್ಯರಥ** – ತ್ರಿಗರ್ತರಾಜ ಸುಶರ್ಮನ ಸಹೋದರ. ಈತ ತನ್ನ ಐದು ಮಂದಿ ರಥಿಕ ಬಂಧುಗಳಲ್ಲಿ ಪ್ರಧಾನನಾಗಿದ್ದನು (ಉದ್ಯೋಗ 166/11). ಇವನು ಅರ್ಜುನನನ್ನು ಕೊಲ್ಲಲು ಪ್ರತಿಜ್ಞೆ ಮಾಡಿದ್ದನು (ದ್ರೋಣ 17/17–18). (ಇವನು ಒಬ್ಬ ಸಂಶಪ್ತಕ ಯೋಧನಾಗಿದ್ದನು.).

**ಸತ್ಯವತೀ** – (1) ಉಪರಿಚರವಸುವಿನ ವೀರ್ಯ ದಿಂದ, ಬ್ರಹ್ಮಶಾಪದಿಂದಾಗಿ ಮತ್ಸ್ಯ ರೂಪ ಹೊಂದಿದ್ದ 'ಅದ್ರಿಕೆ'ಯೆಂಬ ಅಪ್ಸರೆಯ ಗರ್ಭ ದಲ್ಲಿ ಹುಟ್ಟಿದ ಒಬ್ಬ ರಾಜಕನ್ಯೆ. ಅಂಬಿಗರು ಮೀನಿನ ಹೊಟ್ಟೆಯನ್ನು ಸೀಳಿ ಒಬ್ಬಳು ಕನ್ಯೆ ಮತ್ತು ಒಬ್ಬ ಪುರುಷನನ್ನು ಹೊರತೆಗೆದರು. ರಾಜನಿಗೆ ಈ ವಿಚಾರ ತಿಳಿಸಲ್ಪಟ್ಟಾಗ ಅವನು ಪುತ್ರನನ್ನು ತಾನೇ ಇರಿಸಿಕೊಂಡನು; ಅವನೇ 'ಮತ್ಸ್ಯ'ನೆಂಬ ಧರ್ಮಾತ್ಮನಾದ ರಾಜನಾದನು. ಅವರಲ್ಲಿ ಕನ್ಯೆಯಾಗಿದ್ದವಳ ಶರೀರದಿಂದ ಮೀನಿನ ವಾಸನೆ ಬರುತ್ತಿತ್ತು. ಆದುದರಿಂದ ರಾಜನು ಆಕೆಯನ್ನು ಅಂಬಿಗರಿಗೆ ಒಪ್ಪಿಸಿದನು ಮತ್ತು 'ಈಕೆ ನಿನ್ನ ಮಗಳಾಗಿರಲಿ' ಎಂದನು. ಸತ್ವ, ಸತ್ಯ ಮತ್ತು ಸದ್ಗುಣಗಳಿಂದ ಸಂಪನ್ನಳಾದ ಕಾರಣ ಈಕೆ 'ಸತ್ಯವತಿ'ಯೆಂದು ಪ್ರಸಿದ್ಧಳಾದಳು. ಅಂಬಿಗರ ಆಶ್ರಯದಲ್ಲಿ ವಾಸ ಮತ್ತು ಮೀನಿ ನಂತಹ ವಾಸನೆ ಇದ್ದುದರಿಂದ ಅವಳು ಸ್ವಲ್ಪ ಕಾಲ 'ಮತ್ಸ್ಯಗಂಧೆ' ಎಂದು ಕರೆಯಲ್ಪಟ್ಟಳು. ಈಕೆ ತಂದೆಯ ಸೇವೆಗಾಗಿ ಯಮುನೆಯಲ್ಲಿ ದೋಣಿ ನಡೆಸುತ್ತಿದ್ದಳು (ಆದಿ 63/50–69). ಇವಳು ಹೆಚ್ಚಿನ ರೂಪಸೌಂದರ್ಯಗಳಿಂದ

ಸುಶೋಭಿತಳಾಗಿದ್ದಳು. ಒಂದು ದಿನ ಪರಾಶರ ಮುನಿ ಈಕೆಯನ್ನು ನೋಡಿದನು. ಮತ್ತು ಈಕೆಯೊಂದಿಗೆ ಸಮಾಗಮದ ಇಚ್ಛೆಯನ್ನು ಪ್ರಕಟಿಸಿದನು. ಈಕೆಯ ಅಪೇಕ್ಷೆಯಂತೆ, ಕತ್ತಲಾಗುವಂತೆ ಆತ ಹಿಮವನ್ನು ಸೃಷ್ಟಿಸಿದನು. ಇವಳ ಕನ್ಯಾವಸ್ಥೆ ಹಾಳಾಗದಂತೆ ಮತ್ತು ಶರೀರದಿಂದ ಉತ್ತಮ ಸುಗಂಧ ಹೊರಹೊಮ್ಮುವಂತೆ ಕೂಡಾ ಮಹರ್ಷಿಯು ಈಕೆಗೆ ವರವನ್ನಿತ್ತನು. ಅನಂತರ ಈಕೆ ಮಹರ್ಷಿಯೊಂದಿಗೆ ಸಮಾಗಮ ಮಾಡಿದಳು. ಶರೀರದಿಂದ ಉತ್ತಮ ಪರಿಮಳ ಹೊರಟ ಕಾರಣ ಈಕೆಗೆ 'ಗಂಧವತಿ' ಎಂಬ ಹೆಸರು ಪ್ರಸಿದ್ಧವಾಯಿತು. ಈ ಭೂಮಿಯಲ್ಲಿ ಒಂದು ಯೋಜನ ದೂರದ ಮನುಷ್ಯನೂ ಈಕೆಯ ಸುಗಂಧವನ್ನು ಆಘ್ರಾಣಿಸುತ್ತಿದ್ದನು. ಆದ ಕಾರಣ ಈಕೆಗೆ ಹೆಸರು 'ಯೋಜನಗಂಧಾ' ಎಂದಾಯಿತು (ಆದಿ 63/70–83). ಸತ್ಯವತಿಯು ಪರಾಶರನ ಸಂಪರ್ಕದಿಂದ ತತ್‌ಕ್ಷಣವೇ ಒಬ್ಬ ಶಿಶುವಿಗೆ ಜನ್ಮವಿತ್ತಳು. ಯಮುನೆಯ ಒಂದು ದ್ವೀಪದಲ್ಲಿ ಅತ್ಯಂತ ಶಕ್ತಿಶಾಲಿಯಾದ ಪರಾಶರನಂದನ ವ್ಯಾಸನು ಜನ್ಮವೆತ್ತಿದನು. ಅವನು ತಾಯಿಯೊಡನೆ ಹೀಗೆ ಹೇಳಿದನು. 'ಆವಶ್ಯಕತೆ ಬಂದಾಗ ನೀನು ನನ್ನ ಸ್ಮರಣೆ ಮಾಡು; ನಾನು ಖಂಡಿತವಾಗಿ ಕಾಣಿಸಿಕೊಳ್ಳುತ್ತೇನೆ' ಇಷ್ಟು ಹೇಳಿ ಅವನು ತಾಯಿಯ ಆಜ್ಞೆಯಂತೆ ತಪಸ್ಸಿನಲ್ಲಿ ಮಗ್ನನಾದನು (ಆದಿ 63/84–85). ತಂದೆಯು ವಿಚಾರಿಸಿದಾಗ ತನ್ನ ಶರೀರಕ್ಕೆ ಉತ್ತಮ ಸುಗಂಧವುಂಟಾಗಲು ಮಹರ್ಷಿ ಪರಾಶರರ ಕೃಪೆಯೇ ಕಾರಣವೆಂದು ಹೇಳಿದುದು (ಆದಿ 63/86). ಇವಳ ಒಂದು ಹೆಸರು 'ಗಂಧಕಾಲಿ' ಎಂದೂ ಇದ್ದಿತು. ಶಾಂತನುವಿನೊಂದಿಗೆ ಈಕೆಯ ವಿವಾಹ ಮತ್ತು ಅವನಿಂದಾಗಿ ಈಕೆಯ ಗರ್ಭದಿಂದ ಚಿತ್ರಾಂಗದ ಮತ್ತು ವಿಚಿತ್ರವೀರ್ಯರ ಜನನ (ಆದಿ 95/48–50; ಆದಿ 101/3). ವಂಶದ ರಕ್ಷಣೆಗಾಗಿ ವಿವಾಹವಾಗಲು ಮತ್ತು ಅಂಬಿಕೆಯೇ ಮೊದಲಾದವರ ಗರ್ಭದಿಂದ ಪುತ್ರೋತ್ಪಾದನೆ ಮಾಡಲು ಭೀಷ್ಮನಲ್ಲಿ ಈಕೆಯ ಒತ್ತಾಯ (ಆದಿ 103/10–11). ಈಕೆ ಭೀಷ್ಮನೊಡನೆ ತನ್ನ ಗರ್ಭದಿಂದ ವ್ಯಾಸರ ಜನನ ವೃತ್ತಾಂತವನ್ನು ತಿಳಿಸಿದುದು (ಆದಿ 104/5–14). ವಿಚಿತ್ರವೀರ್ಯನ ಪತ್ನಿಯರಲ್ಲಿ ಸಂತಾನೋತ್ಪಾದನೆ ಮಾಡುವುದಕ್ಕಾಗಿ ವ್ಯಾಸರನ್ನು ಕರೆಸುವ ಕುರಿತು ಭೀಷ್ಮನೊಡನೆ ಈಕೆಯ ಪರಾಮರ್ಶೆ (ಆದಿ 104/18–19). ಭೀಷ್ಮನ ಅನುಮತಿ ದೊರಕಿದಾಗ ಕುರುವಂಶದ ರಕ್ಷಣೆಗಾಗಿ ಈಕೆಯಿಂದ ವ್ಯಾಸನ ಸ್ಮರಣೆ (ಆದಿ 104/23–24). ವಿಚಿತ್ರವೀರ್ಯನ ಪತ್ನಿಯರಲ್ಲಿ ಪುತ್ರೋತ್ಪಾದನೆಗೋಸ್ಕರ ಈಕೆಯಿಂದ ವ್ಯಾಸನಿಗೆ ಆದೇಶ (ಆದಿ 104/35–38). ಈಕೆ ರಾಣಿ ಅಂಬಿಕೆಯನ್ನು ಒಡಂಬಡಿಸಿ, ಅನುಕೂಲಳನ್ನಾಗಿ ಮಾಡಿ, ಪುತ್ರೋತ್ಪಾದನೆಗಾಗಿ ವ್ಯಾಸನ ನಿರೀಕ್ಷೆ ಮಾಡುವಂತೆ ಆಜ್ಞೆ ನೀಡಿದುದು (ಆದಿ 104/49ರಿಂದ ಆದಿ 105/2 ವರೆಗೆ). ಈಕೆ ಅಂಬಾಲಿಕೆಯನ್ನು ಸಿದ್ಧಗೊಳಿಸಿದುದು ಮತ್ತು ಆಕೆಯ ಗರ್ಭದಿಂದ ಪುತ್ರೋತ್ಪಾದನೆಗಾಗಿ ವ್ಯಾಸನನ್ನು ಕರೆಸಿದುದು (ಆದಿ 105/13–14). ಪಾಂಡುವಿನ ಮರಣದಿಂದ ವ್ಯಾಕುಲಳಾದ ಸತ್ಯವತಿಗೆ ವ್ಯಾಸನು ಧೈರ್ಯವನ್ನಿತ್ತು, ಮುಂದೆ ಬರಲಿರುವ ಭಯಂಕರ ಸಮಯದ ಪರಿಣಾಮವನ್ನು ಹೇಳಿ, ತಪೋವನಕ್ಕೆ ತಪಸ್ಸಿಗೋಸ್ಕರ ಹೋಗಲು ಸಮ್ಮತಿನೀಡಿದುದು (ಆದಿ 127/5–8). ತನ್ನ ಇಬ್ಬರು ಸೊಸೆಯರ (ಅಂಬಿಕಾ ಮತ್ತು ಅಂಬಾಲಿಕಾ) ಜೊತೆಯಲ್ಲಿ ಈಕೆ ತಪೋವನಕ್ಕೆ ಹೋದುದು ಮತ್ತು ತಪಸ್ಸಿನ ಮೂಲಕ ಪರಮಪದವನ್ನು ಪಡೆದುದು (ಆದಿ 127/13). ಮಹಾಭಾರತದಲ್ಲಿ ಬಂದಿರುವ ಸತ್ಯವತಿಯ ಹೆಸರುಗಳು : ದಾಶೇಯೀ, ಗಂಧಕಾಲೀ, ಗಂಧವತೀ, ಕಾಲೀ, ಸತ್ಯಾ, ವಾಸವೀ ಮತ್ತು ಯೋಜನಗಂಧಾ ಇತ್ಯಾದಿ.

(2) ಕೇಕಯಕುಲದ ಕನ್ಯೆ. ಇಕ್ಷ್ವಾಕುವಂಶದ ಮಹಾರಾಜ ತ್ರಿಶಂಕುವಿನ ಪತ್ನಿ ಮತ್ತು ರಾಜಾ ಹರಿಶ್ಚಂದ್ರನ ತಾಯಿ (ಸಭಾ 12/10).

(3) ಮಹಾರಾಜ ಗಾಧಿಯ ಮಗಳು. ರಾಜನು ಒಂದು ಸಾವಿರ ಕಿವಿಕಪ್ಪಾಗಿರುವ ಕುದುರೆಗಳನ್ನು ಪಡೆಕೊಂಡು, ಈಕೆಯ ವಿವಾಹವನ್ನು ಋಚೀಕ ಮುನಿಯೊಂದಿಗೆ ಮಾಡಿದ್ದನು (ವನ 115/26–29).

(4) ನಾರದನ ಹೆಂಡತಿ (ಉದ್ಯೋಗ 117/15).

**ಸತ್ಯವರ್ಮಾ** – ತ್ರಿಗರ್ತರಾಜ ಸುಶರ್ಮಾನ

ಸಹೋದರ (ಸಂಶಪ್ತಕ ಯೋಧ). ಇವನು ಅರ್ಜುನನನ್ನು ಕೊಲ್ಲಲು ಪ್ರತಿಜ್ಞೆ ಮಾಡಿದ್ದನು (ದ್ರೋಣ 17/17–18).

**ಸತ್ಯವಾಕ್** – ಒಬ್ಬ ದೇವಗಂಧರ್ವ. ಇವನು ಕಶ್ಯಪನ ಪತ್ನಿಯಾದ 'ಮುನಿ'ಯ ಪುತ್ರನಾಗಿದ್ದನು (ಆದಿ 65/43).

**ಸತ್ಯವಾನ್** – (1) ಶಾಲ್ವರಾಜ ದ್ಯುಮತ್ಸೇನನ ಪುತ್ರ. ಇವನು ನಗರದಲ್ಲಿ ಹುಟ್ಟಿದ್ದರೂ ತಪೋವನದಲ್ಲಿ ಪಾಲಿಸಿ ಪೋಷಿಸಲ್ಪಟ್ಟು ಸಂವರ್ಧಿತನಾಗಿದ್ದನು (ವನ 294/10). ಮದ್ರರಾಜನಾದ ಅಶ್ವಪತಿಯ ಕನ್ಯೆ ಸಾವಿತ್ರಿಯೊಡನೆ ಇವನ ವಿವಾಹ (ವನ 295/15). ಸಮಿಧೆಗೋಸ್ಕರ ಈತ ಕಾಡಿಗೆ ಹೋಗಲು ಸಿದ್ಧನಾದುದು. ತನ್ನನ್ನೂ ಜೊತೆಯಲ್ಲಿ ಕರಕೊಂಡು ಹೋಗುವಂತೆ ಸಾವಿತ್ರಿ ಈತನನ್ನು ಒತ್ತಾಯಿಸಿದುದು. ತಾಯಿತಂದೆಯ ಅನುಮತಿ ಪಡೆದು ಇವನು ಆಕೆಯನ್ನು ಕರಕೊಂಡು ಹೋಗಲು ಒಪ್ಪಿಗೆಯನ್ನಿತ್ತದ್ದು (ವನ 296/18–23). ಇವನು ಕಾಡಿನಲ್ಲಿ ಹಣ್ಣುಗಳನ್ನು ಕ್ಯೊದು ಬುಟ್ಟಿಯಲ್ಲಿಟ್ಟದ್ದು, ಅನಂತರ ಕಟ್ಟಿಗೆ ಸಿಗಿದುದು, ಶ್ರಮದಿಂದಾಗಿ ಇವನಿಗೆ ತಲೆನೋವಾದುದು, ಸಾವಿತ್ರಿಯೊಡನೆ ತನ್ನ ಅಸ್ವಸ್ಥತೆ ಮತ್ತು ಸಾಮರ್ಥ್ಯಹೀನತೆಯನ್ನು ವರ್ಣಿಸಿದುದು, ಯಮರಾಜನು ಸಾವಿತ್ರಿಯೊಡನೆ ಇವನ ಆಯುಸ್ಸು ಮುಗಿದುದರಿಂದ, ಇವನನ್ನು ಕಟ್ಟಿ ತೆಗೆದುಕೊಂಡು ಹೋಗಲು ತಾನು ಆಗಮಿಸಿದ ಕುರಿತು ಹೇಳಿದುದು ಮತ್ತು ಸತ್ಯವಾನನ ಶರೀರದಲ್ಲಿ ಪಾಶದಿಂದ ಬಂಧಿಸಲ್ಪಟ್ಟ ಅಂಗುಷ್ಠ ಪರಿಮಾಣದ ಜೀವನನ್ನು ಬಲಾತ್ಕಾರವಾಗಿ ಸೆಳೆದು ಹೊರತೆಗೆದುದು (ವನ 296/1–17). ಇವನು ಪುನಃ ಸಜೀವನಾದುದು ಮತ್ತು ಸಾವಿತ್ರಿಯೊಡನೆ, ಮಾತುಕತೆ ಮಾಡಿದುದು; ತಾಯಿತಂದೆಯರ ದರ್ಶನಕ್ಕಾಗಿ ಇವನ ಚಿಂತೆ (ವನ 297/64–102). ಸಾವಿತ್ರಿಯೊಡನೆ ಆಶ್ರಮಕ್ಕೆ ಈತನ ಗಮನ (ವನ 297/107–11). ಪತ್ನಿಯೊಂದಿಗೆ ಇವನು ಆಶ್ರಮವನ್ನು ತಲುಪಿದುದು (ವನ 298/21). ಋಷಿಗಳು ವಿಚಾರಿಸಿದಾಗ ಆಶ್ರಮಕ್ಕೆ ತಡವಾಗಿ ಬಂದ ಕಾರಣ ಹೇಳಿದುದು (ವನ 298/30–32). ಯುವರಾಜ ಪಟ್ಟದಲ್ಲಿ ಈತನಿಗೆ ಅಭಿಷೇಕ (ವನ 299/11). ರಾಜ್ಯಪಾಲನೆಯ ಕುರಿತು ತಂದೆಯೊಡನೆ ಮಾತುಕತೆ (ಶಾಂತಿ 267 ಅಧ್ಯಾಯ). ಜನರು ಕೇಳಿದಾಗ ಕನ್ಯಾದಾನದ ಕುರಿತು ಇವನು ನಿರ್ಣಯ ಹೇಳಿದುದು (ಅನು 44/51–56).

(2) ಕೌರವಪಕ್ಷದ ಒಬ್ಬ ಸೇನಾಪತಿ. ಈತ ಮಹಾರಥಿ ವೀರನಾಗಿದ್ದನು (ಉದ್ಯೋಗ 167/30).

**ಸತ್ಯವ್ರತ** – (1) ಒಬ್ಬ ಪ್ರಾಚೀನ ರಾಜ (ಆದಿ 1/236).

(2) (ಸತ್ಯಸೇನ, ಸತ್ಯಸಂಧ, ಸಂಧ). ಧೃತರಾಷ್ಟ್ರನ ಒಬ್ಬ ಮಹಾರಥಿ ಪುತ್ರ (ಆದಿ 63/119–120). (ವಿಶೇಷ ನೋಡಿರಿ – ಸತ್ಯಸಂಧ).

(3) ತ್ರಿಗರ್ತರಾಜ ಸುಶರ್ಮನ ಸಹೋದರ (ಒಬ್ಬ ಸಂಶಪ್ತಕ ಯೋಧ). ಇವನು ಅರ್ಜುನನನ್ನು ಕೊಲ್ಲಲು ಪ್ರತಿಜ್ಞೆ ಮಾಡಿದುದು (ದ್ರೋಣ 17/17–18).

**ಸತ್ಯಶ್ರವಾ** – ಕೌರವಪಕ್ಷದ ಒಬ್ಬ ಯೋಧ. ಈತ ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 45/3).

**ಸತ್ಯಸಂಧ** – (ಸತ್ಯವ್ರತ, ಸತ್ಯಸೇನ ಅಥವಾ ಸಂಧ). (1) ಧೃತರಾಷ್ಟ್ರನ ನೂರುಪುತ್ರರಲ್ಲಿ ಒಬ್ಬ. ಇವನು ಹನ್ನೊಂದು ಮಹಾರಥಿಗಳಲ್ಲಿ ಒಬ್ಬನಾಗಿದ್ದನು (ಆದಿ 63/119–120, ಆದಿ 67/ 100; ಆದಿ 116/9). ಇವನು ತನ್ನ ಸಹೋದರರೊಂದಿಗೆ ಶಲ್ಯನ ರಕ್ಷಣೆಯಲ್ಲಿ ತತ್ಪರನಾಗಿದ್ದನು (ಭೀಷ್ಮ 62/17). ಅಭಿಮನ್ಯು ಬಾಣ ಹೊಡೆದು ಇವನನ್ನು ಗಾಯಗೊಳಿಸಿದ್ದನು (ಭೀಷ್ಮ 62/ 28–29). ಅಭಿಮನ್ಯುವಿನೊಂದಿಗೆ ಇವನ ಯುದ್ಧ (ಭೀಷ್ಮ 73/24–26). ಸಾತ್ಯಕಿಯು ಇವನಿಗೆ ಬಾಣಹೊಡೆದಿದ್ದನು (ದ್ರೋಣ 116/7–8). ಇವನಿಗೆ ಸತ್ಯಸೇನನೆಂದೂ ಹೆಸರಿದೆ. ಇವನೂ ಸುಷೇಣನೂ ಯುದ್ಧದಲ್ಲಿ ಚಿತ್ರಸೇನನೊಂದಿಗೆ ನಿಂತಿದ್ದರು (ಕರ್ಣ 7/17). ಭೀಮಸೇನನಿಂದ ಈತನ ವಧೆ (ಕರ್ಣ 84/2–6).

(2) ಮಿತ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸುವ್ರತನೆಂದಾಗಿತ್ತು (ಶಲ್ಯ 45/41).

(3) ಮಹಾವ್ರತಧಾರಿಯಾದ ಒಬ್ಬ ಪ್ರಾಚೀನ

36

ರಾಜ. ಇವನು ತನ್ನ ಪ್ರಾಣದ ಮೂಲಕ ಒಬ್ಬ ಬ್ರಾಹ್ಮಣನ ಪ್ರಾಣರಕ್ಷಣೆ ಮಾಡಿದ್ದನು. ಇದರಿಂದಾಗಿ ಈತ ಸ್ವರ್ಗಕ್ಕೆ ಹೋಗಿದ್ದನು (ಶಾಂತಿ 234/16).

**ಸತ್ಯಸೇನ** (ಸತ್ಯಸಂಧ ಅಥವಾ ಸಂಧ) – (1) ಧೃತರಾಷ್ಟ್ರನ ಒಬ್ಬ ಮಗ (ಆದಿ 67/100; ಆದಿ 116/9) (ವಿಶೇಷ ನೋಡಿರಿ– ಸತ್ಯಸಂಧ).

(2) ತ್ರಿಗರ್ತರಾಜ ಸುಶರ್ಮಾನ ಸಹೋದರ. ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 27/3–22).

(3) ಕರ್ಣನ ಮಗ. ಇವನು ತನ್ನ ತಂದೆಯ ಚಕ್ರರಕ್ಷಕನಾಗಿದ್ದನು (ಕರ್ಣ 48/18).

**ಸತ್ಯಾ** – (1) ಶ್ರೀಕೃಷ್ಣನ ಒಬ್ಬ ಪಟ್ಟದ ರಾಣಿ. ಈಕೆ ಶ್ರೀ ಯೊಂದಿಗೆ ಶ್ರೀಕೃಷ್ಣನ ದರ್ಶನ ಪಡೆಯಲು ಸಭಾಭವನಕ್ಕೆ ಹೋಗಿದ್ದಳು (ಸಭಾ 38/29).

(2) ಶಂಯು ಎಂಬ ಅಗ್ನಿಯ ಪತ್ನಿ. ಆಕೆ ರೂಪ ಮತ್ತು ಗುಣಗಳಲ್ಲಿ ತುಲನಾತೀತಳಾಗಿದ್ದಳು. ಇವಳ ಗರ್ಭದಿಂದ ಭಾರದ್ವಾಜನೆಂಬ ಪುತ್ರ ಮತ್ತು ಮೂವರು ಪುತ್ರಿಯರಾಗಿದ್ದರು (ವನ 219/4–5).

**ಸತ್ಯೇಯು** – ಪೂರುವಿನ ಮೂರನೆಯ ಮಗ. ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ಒಬ್ಬ ಮಹಾ ಧನುರ್ಧಾರಿ ಪುತ್ರ (ಆದಿ 94/8–12).

**ಸತ್ಯೇಷು** – (1) ತ್ರಿಗರ್ತರಾಜ ಸುಶರ್ಮಾನ ಸಹೋದರ (ಒಬ್ಬ ಸಂಶಪ್ತಕಯೋಧ) ಅರ್ಜುನನನ್ನು ಕೊಲ್ಲಲು ಈತ ಪ್ರತಿಜ್ಞೆ ಮಾಡಿದುದು. ಅರ್ಜುನನಿಂದ ಇವನ ವಧೆ (ದ್ರೋಣ 17/17–18; ಶಲ್ಯ 27/40–41).

(2) ಒಬ್ಬ ರಾಕ್ಷಸ. ಇವನು ಪ್ರಾಚೀನ ಕಾಲದಲ್ಲಿ ಈ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲನಿಂದ ಪೀಡಿತನಾಗಿ ಈ ಭೂಮಿಯನ್ನು ಬಿಟ್ಟುಹೋದನು (ಶಾಂತಿ 227/51).

**ಸತ್ರಾಜಿತ** – ಒಬ್ಬ ಪ್ರಮುಖ ಯಾದವ. ಪ್ರಸೇನಜಿತನ ಸಹೋದರ. ಸತ್ರಾಜಿತ ಮತ್ತು ಪ್ರಸೇನಜಿತ – ಇವರಿಬ್ಬರೂ ಅವಳಿ ಸೋದರರಾಗಿದ್ದರು. ಇವರ ಬಳಿ ಸ್ಯಮಂತಕಮಣಿ ಇತ್ತು. ಇದರಿಂದ ದೊಡ್ಡ ಪ್ರಮಾಣದಲ್ಲಿ ಚಿನ್ನ ಹುಟ್ಟುತ್ತಿತ್ತು (ಸಭಾ 14/60). ಕೃತವರ್ಮಾನು ಮಣಿಯ ದುರಾಶೆಯಿಂದ ಸತ್ರಾಜಿತನ ವಧೆ ಮಾಡಿಸಿದ್ದನು. ಈ ವಿಚಾರವನ್ನು ಸಾತ್ಯಕಿಯು ಶ್ರೀಕೃಷ್ಣನಿಗೆ ನೆನಪಿಸಿದ್ದನು (ಮೌಸಲ 3/23). ಇವನ ಪುತ್ರಿಯ ಹೆಸರು ಸತ್ಯಭಾಮಾ ಎಂದಾಗಿತ್ತು (ಮೌಸಲ 5/13).

**ಸದಶ್ವ** – ಒಬ್ಬ ರಾಜ. ಈತ ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

**ಸದಃಸುವಾಕ್** – (ಸಹಸ್ರವಾಕ್). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/100; ಆದಿ 116/9).

**ಸದಸ್ಯೋರ್ಮಿ** – ಒಬ್ಬ ರಾಜ. ಈತ ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆಮಾಡುತ್ತಾನೆ (ಸಭಾ 8/11).

**ಸದಾಕಾಂತಾ** – ಒಂದು ಪವಿತ್ರ ನದಿ. ಈಕೆ ವರುಣಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾಳೆ (ಸಭಾ 10/27). ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/24). (ಕೆಲವರ ಅಭಿಪ್ರಾಯ ಪ್ರಕಾರ ಕರತೋಯಾ ನದಿಯ ಹೆಸರೇ 'ಸದಾನೀರಾ' ಅಥವಾ 'ಸದಾನೀರವಹಾ' ಎಂದಾಗಿದೆ. ಕರತೋಯಾ ಜಲಪಾಯಿಗುಡಿಯ ಕಾಡುಗಳಿಂದ ಹೊರಟು, ರಂಗಪುರದ ಮೂಲಕ, ಬೋಗಡಾ ಜಿಲ್ಲೆಯ ದಕ್ಷಿಣದಲ್ಲಿ ಹಲಹಲಿಯಾ ನದಿಗೆ ಸೇರುತ್ತದೆ. ಇನ್ನೊಂದು ಅಭಿಪ್ರಾಯ ಪ್ರಕಾರ ಸರಯೂ ನದಿಯ ಸಹಾಯಕ ನದಿ 'ರಾಪ್ತಿ'ಯೇ ಸದಾನೀರಾ ಆಗಿದೆ. ಗ್ರಂಥಾಂತರದಲ್ಲಿ ಅಜಿರವತಿ ಮತ್ತು ಇರಾವತಿಯೆಂದೂ ಇದರ ಹೆಸರುಗಳು ಸಿಗುತ್ತವೆ.)

**ಸನತ್ಕುಮಾರ** – ಒಬ್ಬ ಋಷಿ. ಇವನು ಭೂಲೋಕದಲ್ಲಿ ಪ್ರದ್ಯುಮ್ನನ ರೂಪದಲ್ಲಿ ಅವತಾರ ಹೊಂದಿದ್ದನು (ಆದಿ 67/152). ಇವನು ಬ್ರಹ್ಮಲೋಕದಿಂದ ಬಂದು ರಾಜಾ ಪುರೂರವನನ್ನು ಸಂತೈಸಿದ್ದನು (ಆದಿ 75/21–22). ಮಹಾತಪಸ್ವಿ, ಯೋಗಾಚಾರ್ಯ, ಭಗವಾನ್ ಸನತ್ಕುಮಾರನು ಬ್ರಹ್ಮಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 11/23). ಕನಖಲದ ಬಳಿ ಮಹಾನದಿಯಾದ ಗಂಗೆಯ

ದಡದಲ್ಲಿ ಇವನಿಗೆ ಸಿದ್ಧಿಪ್ರಾಪ್ತವಾಗಿತ್ತು (ವನ 135/5). ಇವನಿಂದ ಗೌತಮ ಮತ್ತು ಅತ್ರಿಯ ವಿವಾದದ ನಿರ್ಣಯ (ವನ 185/27–31). ಇವನು ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ನೋಡಲು ಬಂದಿದ್ದನು (ಶಾಂತಿ 47/8). ವಿಭಾಂಡಕಾದಿ ಋಷಿಗಳಿಗೆ ಇವನ ಉಪದೇಶ (ಶಾಂತಿ 222). ವೃತ್ರಾಸುರನಿಗೆ ಅಧ್ಯಾತ್ಮಿಕ ಉಪದೇಶ (ಶಾಂತಿ 280/7–56). ಇವನು ಗಂಧರ್ವರಾಜ ವಸುವಿಗೆ ಒಮ್ಮೆ ಉಪದೇಶ ಮಾಡಿದ್ದನು (ಶಾಂತಿ 318/61). ಋಷಿಗಳಿಗೆ ಇವನ ಉಪದೇಶ (ಶಾಂತಿ 329/5–7). ಇವನು ಬ್ರಹ್ಮನ ಮಾನಸಪುತ್ರ. ಈತನಿಗೆ ತಾನಾಗಿಯೇ ಪೂರ್ಣಜ್ಞಾನ ಪ್ರಾಪ್ತವಾಗಿದೆ. ಇವನು ನಿವೃತ್ತಿ ಧರ್ಮದಲ್ಲಿದ್ದಾನೆ. ಈತ ಯೋಗಜ್ಞಾನಿ, ಸಾಂಖ್ಯಜ್ಞಾನ ವಿಶಾರದ, ಧರ್ಮಶಾಸ್ತ್ರಗಳ ಆಚಾರ್ಯ ಮತ್ತು ಮೋಕ್ಷಧರ್ಮದ ಪ್ರವರ್ತಕನಾಗಿದ್ದಾನೆ (ಶಾಂತಿ 34/72–74). ಇವನು ಬ್ರಹ್ಮನಿಂದ ಸಾತ್ವತ ಧರ್ಮದ ಉಪದೇಶ ಸ್ವೀಕರಿಸಿದನು; ಇವನಿಂದ ವೀರಣ ಪ್ರಜಾಪತಿಗೆ ಈ ಧರ್ಮದ ಉಪದೇಶ ಪ್ರಾಪ್ತವಾಯಿತು (ಶಾಂತಿ 348/40–41). ಪ್ರದ್ಯುಮ್ನನು ಸ್ವರ್ಗಕ್ಕೆ ಹೋದ ಬಳಿಕ ಈತನ ಸ್ವರೂಪದೊಳಗೆ ಪ್ರವೇಶಿಸಿದನು (ಸ್ವರ್ಗಾ 5/13).

**ಸನತ್ಸುಜಾತ** (ಅಥವಾ ಸನತ್ಕುಮಾರ) – ಒಬ್ಬ ಸನಾತನ ಋಷಿ. ಇವನು ವಿದುರನು ಸ್ಮರಿಸಿದಾಗ ಪ್ರಕಟನಾದನು (ಉದ್ಯೋಗ 41/8). ಇವನಿಂದ ಧೃತರಾಷ್ಟ್ರನಿಗೆ ಉಪದೇಶ (ಉದ್ಯೋಗ ಅಧ್ಯಾಯ 42 ರಿಂದ 46ರ ತನಕ).

**ಸನತ್ಸುಜಾತಪರ್ವ** – ಉದ್ಯೋಗಪರ್ವದ ಒಂದು ಅವಾಂತರಪರ್ವ (ಅಧ್ಯಾಯ 41ರಿಂದ 46 ವರೆಗೆ).

**ಸನಾತನ** – (1) ಒಬ್ಬ ಮಹರ್ಷಿ. ಈತ ರಾಜಾ ಯುಧಿಷ್ಠಿರನಸಭೆಯಲ್ಲಿರುತ್ತಿದ್ದನು (ಸಭಾ 4/16). (2) ಬ್ರಹ್ಮನ ಒಬ್ಬ ಮಾನಸ ಪುತ್ರ (ಶಾಂತಿ 340/72).

**ಸನೀಯ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/63).

**ಸನ್ತ** – ವೀತಹವ್ಯವಂಶದ ಸತ್ಯನ ಪುತ್ರ. ಇವನ ಪುತ್ರನ ಹೆಸರು ಶ್ರವಾ ಎಂದಾಗಿತ್ತು (ಅನು 30/62–63).

**ಸನ್ನತೇಯು** – ಪೂರುವಿನ ಮೂರನೇ ಮಗನಾದ ರೌದ್ರಾಶ್ವನಿಂದ ಮಿಶ್ರಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ಒಬ್ಬ ಮಹಾಧನುರ್ಧಾರಿ ಪುತ್ರ (ಆದಿ 94/8–11).

**ಸನ್ನಿಹತೀ ತೀರ್ಥ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಮತ್ತು ತಪೋಧನರಾದ ಮಹರ್ಷಿಗಳು ಪ್ರತಿ ತಿಂಗಳು ಮಹಾ ಪುಣ್ಯದಿಂದ ಸಂಪನ್ನರಾಗಿ ಹೋಗುತ್ತಾರೆ. ಸೂರ್ಯಗ್ರಹಣ ಕಾಲದಲ್ಲಿ ಇಲ್ಲಿ ಸ್ನಾನ ಮಾಡುವುದರಿಂದ ನೂರು ಅಶ್ವಮೇಧ ಯಜ್ಞಗಳ ಫಲ ದೊರಕುತ್ತದೆ ಇಲ್ಲಿಗೆ ಭೂಮಿ ಮತ್ತು ಆಕಾಶದ ಎಲ್ಲಾ ತೀರ್ಥಗಳು ಅಮಾವಾಸ್ಯೆಯಂದು ಬರುತ್ತವೆ. ತೀರ್ಥಸಂಘಾತದಿಂದ ಯುಕ್ತವಾಗಿರುವ ಕಾರಣ ಇದನ್ನು ಸನ್ನಿಹತೀ ಎನ್ನುತ್ತಾರೆ. ಇಲ್ಲಿ ಶ್ರಾದ್ಧ ಮಾಡುವುದರಲ್ಲಿ ವಿಶೇಷ ಮಹಿಮೆ ಇದೆ (ವನ 83/190–199).

**ಸನ್ನಿಹಿತ** – ಒಬ್ಬ ಅಗ್ನಿ. ಈತ ದೇಹಧಾರಿಗಳ ಪ್ರಾಣವನ್ನಾಶ್ರಯಿಸಿ, ಅವರ ಶರೀರವನ್ನು ಕಾರ್ಯದಲ್ಲಿ ಪ್ರವೃತ್ತಗೊಳಿಸುತ್ತಾನೆ. ಇವನು ಮನುವಿನ ಮೂರನೇ ಮಗ. ಇವನಿಂದ ಶಬ್ದ ಮತ್ತು ರೂಪವನ್ನು ಗ್ರಹಣ ಮಾಡುವುದರಲ್ಲಿ ಸಫಲತೆ ದೊರಕುತ್ತದೆ (ವನ 221/19).

**ಸಪ್ತಕೃತ್** – ಒಬ್ಬ ಸನಾತನ ವಿಶ್ವೇದೇವ (ಅನು 91/36).

**ಸಪ್ತಗಂಗ** – ಒಂದು ಪ್ರಾಚೀನ ತೀರ್ಥ. ಇಲ್ಲಿ ವಿಧಿಪೂರ್ವಕ ದೇವತೆ, ಪಿತೃಗಳಿಗೆ ತರ್ಪಣ ಕೊಡುವ ಮನುಷ್ಯ ಪುಣ್ಯಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ (ವನ 84/29). ಪಿತೃಗಳಿಗೆ ತರ್ಪಣ ಕೊಡುವ ಮನುಷ್ಯ ಇಲ್ಲಿ ಜನ್ಮವೆತ್ತಿದರೆ, ಅಮೃತ ಭೋಜೀ ದೇವತೆಯಾಗುತ್ತಾನೆ (ಅನು 25/16).

**ಸಪ್ತಗೋದಾವರ** – ಶೂರ್ಪಾರಕ ಕ್ಷೇತ್ರದ ಸಮೀಪವಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನ ಮಾಡಿ, ನಿಯಮಪೂರ್ವಕ ನಿಯಮಿತ ಭೋಜನ ಮಾಡುವ ಪುರುಷ ತುಂಬಾ ಪುಣ್ಯ ಸಂಪಾದಿಸುತ್ತಾನೆ ಮತ್ತು ದೇವಲೋಕಕ್ಕೆ ಹೋಗುತ್ತಾನೆ (ವನ 85/44).

**ಸಪ್ತಚರು** – ಇಲ್ಲಿ ಎಲ್ಲ ದೇವತೆಗಳೂ,

ಪ್ರಾಣಿಗಳೂ ಭಗವಾನ್ ಕೇಶವನನ್ನು ಪ್ರಸನ್ನ ಗೊಳಿಸಲು ಋಗ್ವೇದದ ಏಳೇಳು ಋಕ್ಕುಗಳಿಂದ ಏಳೇಳು ಆಹುತಿಗಳನ್ನು ಕೊಟ್ಟಿದ್ದರು. ಆದುದ ರಿಂದಲೇ ಇದರ ಹೆಸರು ಸಪ್ತಚರುವೆಂದಾಯಿತು. ಇಲ್ಲಿ ಅಗ್ನಿಗೆ ಕೊಡಲ್ಪಡುವ ಚರು ಒಂದು ಲಕ್ಷ ಗೋದಾನ, ನೂರು ರಾಜಸೂಯ ಯಜ್ಞ ಮತ್ತು ಸಾವಿರ ಅಶ್ವಮೇಧ ಯಜ್ಞಗಳಿಂದಲೂ ಹೆಚ್ಚು ಕಲ್ಯಾಣಕರವಾಗಿದೆ (ವನ 82/96–99).

**ಸಪ್ತರಾವ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ಸಪ್ತರ್ಷಿಕುಂಡ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಬ್ರಹ್ಮೋದುಂಬರ ತೀರ್ಥದಲ್ಲಿರುವ ಒಂದು ಕುಂಡ. ಇಲ್ಲಿ ಸ್ನಾನಮಾಡುವುದರಿಂದ ಮಹಾ ಪುಣ್ಯಪ್ರಾಪ್ತವಾಗುತ್ತದೆ (ವನ 83/72).

**ಸಪ್ತಸಾರಸ್ವತ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಮಂಕಣಕ ಮುನಿಗೆ ಸಿದ್ಧಿಪ್ರಾಪ್ತವಾಗಿತ್ತು (ವನ 83/115–116). ಇದು ಸರಸ್ವತೀ ತೀರ್ಥದಲ್ಲಿ ಅತ್ಯಂತ ಶ್ರೇಷ್ಠವಾದುದು. ಬಲರಾಮನು ತನ್ನ ತೀರ್ಥ ಯಾತ್ರಾ ಸಂದರ್ಭದಲ್ಲಿ ಇಲ್ಲಿಗೆ ಬಂದಿದ್ದನು (ಶಲ್ಯ 37/61). ಈ ತೀರ್ಥದ ಉತ್ಪತ್ತಿ ಮತ್ತು ಮಹಿಮೆಯ ವಿಶೇಷ ವರ್ಣನೆ (ಶಲ್ಯ 38/3–32).

**ಸಭಾಪತಿ** – ಕೌರವಪಕ್ಷದ ಒಬ್ಬ ರಾಜಕುಮಾರ. ಅರ್ಜುನನಿಂದ ಈತನ ವಧೆಯಾಗಿತ್ತು (ಕರ್ಣ 89/64).

**ಸಭಾಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಸಮ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/96; ಆದಿ 116/9). ಭೀಮಸೇನ ನೊಂದಿಗೆ ಈತನ ಯುದ್ಧ (ಭೀಷ್ಮ 64/29). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 51/7–16).

**ಸಮಙ್ಗ** – (1) ದುರ್ಯೋಧನನ ಒಬ್ಬ ಗೊಲ್ಲ. ಇವನು ಧೃತರಾಷ್ಟ್ರನೊಡನೆ ಅವನ ಗೋವುಗಳ ಸಮೀಪ ಹೋಗಲು ಸೂಚನೆ ನೀಡಿದ್ದನು (ವನ 239/2).

(2) ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/60).

(3) ಒಬ್ಬ ಪ್ರಾಚೀನ ಋಷಿ. ನಾರದನು ಕೇಳಿದಾಗ ಈತ ತನ್ನ ಶೋಕರಹಿತ ಸ್ಥಿತಿಯ ವರ್ಣನೆ ಮಾಡಿದುದು (ಶಾಂತಿ 286/5–21).

**ಸಮಙ್ಗಾ** – ಒಂದು ನದಿ. ತಂದೆಯ ಆಜ್ಞೆಯಂತೆ ಇದರಲ್ಲಿ ಸ್ನಾನಮಾಡಿದ ಕಾರಣ ಅಷ್ಟಾವಕ್ರನ ಅಂಗಗಳು ಸರಿಯಾಗಿದ್ದವು. ಅಂದಿ ನಿಂದ ಈ ನದಿ ಪುಣ್ಯಮಯವಾಯಿತು. ಇದ ರಲ್ಲಿ ಸ್ನಾನಮಾಡುವ ಮನುಷ್ಯ ಎಲ್ಲಾ ಪಾಪಗ ಳಿಂದ ಮುಕ್ತನಾಗುತ್ತಾನೆ (ವನ 134/39–40). ಇದರ ಇನ್ನೊಂದು ಹೆಸರು ಮಧುವಿಲಾ ಎಂದಾಗಿದೆ (ವನ 135/1–2).

**ಸಮಂತಪಂಚಕ** – ಒಂದು ಕ್ಷೇತ್ರ. ಪರಶು ರಾಮನು ಇಲ್ಲಿ ರಕ್ತದ ಐದು ಸರೋವರಗಳನ್ನು ನಿರ್ಮಿಸಿದ್ದನು. ಅವುಗಳಲ್ಲಿಯೇ ರಕ್ತಾಂಜಲಿಯ ಮೂಲಕ ತನ್ನ ಪಿತೃಗಳಿಗೆ ತರ್ಪಣವಿತ್ತಿದ್ದನು (ಆದಿ 2/4–5; ವನ 117/9–10). ಪರಶುರಾಮನ ಪಿತೃಗಳ ವರದಾನದಿಂದ ಇದು ಪ್ರಸಿದ್ಧ ತೀರ್ಥ ವಾಯಿತು (ಆದಿ 2/8–11). ದ್ವಾಪರ ಮತ್ತು ಕಲಿಯುಗದ ಸಂಧಿಯಲ್ಲಿ ಕೌರವ–ಪಾಂಡವರ ಮಹಾಭಾರತ ಯುದ್ಧ ಇಲ್ಲಿಯೇ ನಡೆಯಿತು. ಇದೇ ಕಾರಣ 'ಸಮೇತಾನಾಮ್ ಅಂತೋ ಯಸ್ಮಿನ್ ತತ್ ಸಮಂತಮ್' ಈ ವ್ಯುತ್ಪತ್ತಿಯ ಅನುಸಾರವಾಗಿ ಇದರ ಹೆಸರು ಸಮಂತಪಂಚಕ ವೆಂದಾಯಿತು (ಆದಿ 2/13–15). ಬಲರಾಮನ ಸಲಹೆಯಂತೆ ಪಾಂಡವರು ಮತ್ತು ದುರ್ಯೋ ಧನ ಈ ಕ್ಷೇತ್ರದಲ್ಲಿ ಯುದ್ಧಕ್ಕಾಗಿ ಹೋದುದು (ಶಲ್ಯ 55/5–18). ಇದೇ ಕ್ಷೇತ್ರದಲ್ಲಿ ದುರ್ಯೋ ಧನನ ನಿಧನ (ಶಲ್ಯ 39/40).

**ಸಮನ್ತರ** – ಒಂದು ಭಾರತೀಯ ಜನಪದ (ಭೀಷ್ಮ 9/50).

**ಸಮಯಪಾಲನಪರ್ವ** – ವಿರಾಟಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 13).

**ಸಮರಥ** – ರಾಜಾ ವಿರಾಟನ ಸಹೋದರ. ಈತ ಪಾಂಡವರ ಪ್ರಧಾನ ಸಹಾಯಕನಾಗಿದ್ದನು (ದ್ರೋಣ 158/42).

**ಸಮವೇಗವಶ** – ಒಂದು ದಕ್ಷಿಣ ಭಾರತೀಯ ಜನಪದ (ಭೀಷ್ಮ 9/61).

**ಸಮಸೌರಭ** – ವೇದವಿದ್ಯಾಪಾರಂಗತನಾದ ಒಬ್ಬ ಬ್ರಾಹ್ಮಣ. ಇವನು ಜನಮೇಜಯನ

ಸರ್ಪಸತ್ರದ ಸದಸ್ಯನಾಗಿದ್ದನು (ಆದಿ 53/9).

**ಸಮಾ** – ಪುಷ್ಕರ ದ್ವೀಪದ ಮುಂದೆ ನೆಲಸಿರುವ ಜನರ ಒಂದು ಚೌಕಾಕಾರದ ಗ್ರಾಮ ಅಥವಾ ಸಾಗುವಳಿ ಭೂಮಿ ಇದರಲ್ಲಿ 33 ಮಂಡಲ ಗಳಿವೆ. ಇಲ್ಲಿ ವಾಮನ, ಐರಾವತ, ಸುಪ್ರತೀಕ ಮತ್ತು ಅಂಜನ – ಈ ನಾಲ್ಕು ದಿಗ್ಗಜಗಳಿರು ತ್ತವೆ. ಇವುಗಳ ಮುಖದಿಂದ ಮುಕ್ತವಾಗಿ ಹರಿ ಯುವ ವಾಯುವಿನಿಂದ ಅಲ್ಲಿರುವ ಪ್ರಜೆಗಳು ಜೀವನಧಾರಣೆ ಮಾಡುತ್ತಾರೆ (ಭೀಷ್ಮ 12/32–38).

**ಸಮಿತಿಂಜಯ** – ದ್ವಾರಕೆಯಲ್ಲಿರುವ ಯಾದವರ ಏಳು ಮಹಾರಥಿಗಳಲ್ಲಿ ಒಬ್ಬ (ಸಭಾ 14/58).

**ಸಮೀಕ** – ದ್ವಾರಕೆಯಲ್ಲಿರುವ ಯಾದವರ ಏಳು ಮಹಾರಥಿಗಳಲ್ಲಿ ಒಬ್ಬ (ಸಭಾ 14/58).

**ಸಮೀಚೀ** – ಒಬ್ಬ ಅಪ್ಸರೆ. ಈಕೆ ವರ್ಗಾ ಎಂಬವಳ ಸಖಿಯಾಗಿದ್ದಳು (ಆದಿ 215/20). ಬ್ರಾಹ್ಮಣ ಶಾಪದಿಂದ ಮೊಸಳೆಯಾಗಿ ಈಕೆಯ ಜನ್ಮ (ಆದಿ 215/23). ಅರ್ಜುನನಿಂದ ಈಕೆಗೆ ಮೊಸಳೆಯ ರೂಪದಿಂದ ಮೋಕ್ಷ (ಆದಿ 216/21). ಈಕೆ ವರುಣನ ಸಭೆಯಲ್ಲಿದ್ದುಕೊಂಡು ಅವನ ಉಪಾಸನೆ ಮಾಡುತ್ತಾಳೆ (ಸಭಾ 10/11).

**ಸಮುದ್ರವೇಗ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/63).

**ಸಮುದ್ರಸೇನ** – ಒಬ್ಬ ಕ್ಷತ್ರಿಯ ರಾಜ. ಇವನು ಏಳನೆಯ ಕಾಲೇಯನೆಂಬ ಹೆಸರಿನ ದೈತ್ಯನ ಅಂಶದಿಂದ ಹುಟ್ಟಿದ್ದನು. ಇವನು ಧರ್ಮ ಮತ್ತು ಅರ್ಥತತ್ತ್ವಗಳ ಜ್ಞಾನಿಯಾಗಿದ್ದನು. ಸಮುದ್ರದ ವರೆಗೆ ಪೂರ್ಣ ಭೂಮಿಯ ಮೇಲೆ ಇವನ ಪ್ರಸಿದ್ಧಿ ಇತ್ತು (ಆದಿ 67/54). ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಚಂದ್ರಸೇನ ಸಹಿತನಾದ ಈತನನ್ನು ಗೆದ್ದಿದ್ದನು (ಸಭಾ 30/24). ಇವನು ಪರಾಕ್ರಮಿಯಾಗಿ ದ್ದನು. ಪಾಂಡವರ ಪಕ್ಷದಿಂದ ಪುತ್ರಸಹಿತನಾದ ಈತನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯವಾಗಿತ್ತು (ಉದ್ಯೋಗ 4/22). ಇವನಿಂದ ಚಿತ್ರಸೇನನ ವಧೆಯ ವರ್ಣನೆ (ಕರ್ಣ 6/15–16).

**ಸಮುದ್ರೋನ್ಮಾದನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ಸಮೂಹ** – ಒಬ್ಬ ಸನಾತನ ವಿಶ್ವೇದೇವ (ಅನು 91/30).

**ಸಮೃದ್ಧ**– ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/18).

**ಸಮೇಡೀ** – ಸ್ಕಂದನ ಅನುಚರಿಯಾದ ಒಬ್ಬ ಮಾತೃಕೆ (ಶಲ್ಯ 46/13).

**ಸಮ್ಪಾತಿ** – (1) ವಿನತೆಯ ಪುತ್ರನಾದ ಅರುಣನ ಮಗ. ಇವನ ತಾಯಿಯ ಹೆಸರು ಶ್ಯೇನಿ. ಇವನ ತಮ್ಮನ ಹೆಸರು ಜಟಾಯುವೆಂದಾಗಿತ್ತು (ಆದಿ 66/70–71). ಸೀತೆ ರಾವಣನ ಪಟ್ಟಣವಾದ ಲಂಕೆಯಲ್ಲಿದ್ದಾಳೆಂಬ ಸಮಾಚಾರವನ್ನು ಈತ ಹನುಮಂತನೇ ಮೊದಲಾದ ವಾನರರಿಗೆ ನೀಡಿ ದ್ದನು (ವನ 148/5). ಆಮರಣ ನಿರಶನ ವ್ರತ ಕೈಗೊಂಡು, ಮಾತಾಡುತ್ತಿದ್ದಾಗ ಜಟಾಯುವಿನ ವರ್ಣನೆ ಮಾಡುತ್ತಿದ್ದ ವಾನರರೊಡನೆ ಜಟಾಯು ವಿನ ಸಮಾಚಾರ ಕೇಳಿದುದು, ತಾನು ಆತನ ಸಹೋದರನೆಂದು ಹೇಳಿದುದು, ಜಟಾಯುವಿ ನೊಂದಿಗೆ ಸೂರ್ಯಮಂಡಲದ ಸಮೀಪದ ವರೆಗೆ ಹಾರಿಹೋದುದರಿಂದ ತನ್ನ ರೆಕ್ಕೆಗಳು ಸುಟ್ಟ ಮತ್ತು ಪರ್ವತ ಶಿಖರದಲ್ಲಿ ಬಿದ್ದ ವೃತ್ತಾಂತ ತಿಳಿಸಿದುದು, ಅನಂತರ ವಾನರರ ಮುಖದಿಂದ ಸೀತಾಪಹಾರ ಮತ್ತು ಜಟಾಯು ಮರಣದ ಸಮಾಚಾರ ಕೇಳಿ ಸಹೋದರನಿಗಾಗಿ ದುಃಖಿಸಿದುದು; ಲಂಕೆಯಲ್ಲಿ ಸೀತೆ ಇರಬಹು ದಾದ ನಿಶ್ಚಿತ ಸಂಭಾವನೆಯನ್ನು ಹೇಳಿ, ವಾನರರು ಅಲ್ಲಿಗೆ ಹೋಗುವಂತೆ ಪ್ರೇರಿಸಿದುದು (ವನ 282/46–47).

(2) ಕೌರವಪಕ್ಷದ ಯೋಧ. ಈತ ದ್ರೋಣ ನಿರ್ಮಿತ ಗರುಡವ್ಯೂಹದ ಹೃದಯಸ್ಥಾನದಲ್ಲಿ ವಿಶಾಲಸೇನೆಯೊಂದಿಗೆ ನಿಂತಿದ್ದನು (ದ್ರೋಣ 20/12).

**ಸಮ್ಪ್ರಿಯಾ** – ಮಧುವಂಶದ ಕನ್ಯೆ ಅಥವಾ ಮಹಾರಾಜ ವಿದೂರನ ಪತ್ನಿ. ಇವಳ ಗರ್ಭ ದಿಂದ ಅನಶ್ವಾನ ಜನನವಾಯಿತು (ಆದಿ 95/40).

**ಸಮ್ಬಲ** – ಒಂದು ಗ್ರಾಮ. ಇಲ್ಲಿ ಯುಗಾಂತ ಕಾಲದಲ್ಲಿ ಕಾಲನ ಪ್ರೇರಣೆಯಿಂದ ಯಾವನೋ ಬ್ರಾಹ್ಮಣನ ಮನೆಯಲ್ಲಿ, ಭಗವಂತನ ಅವತಾರ

ವಾದ ವಿಷ್ಣುಯಶಾ ಕಲ್ಕಿಯ ಜನನವಾಗುವುದು (ವನ 190/94). (ಕೆಲವರ ಅಭಿಪ್ರಾಯದಂತೆ ಮುರದಾಬಾದು ಜಿಲ್ಲೆಯ ಸಂಬಲವೆಂಬ ಕಸ್ಬೆಯೇ ಈ ಗ್ರಾಮವಾಗಿದೆ. ಇಲ್ಲಿ ಕಲ್ಕಿಯ ಅವತಾರವಾಗಲಿದೆ.).

**ಸಮ್ಭವಪರ್ವ** – ಆದಿಪರ್ವದ ಒಂದು ಅವಾಂತರ ಪರ್ವದ ಹೆಸರು (ಅಧ್ಯಾಯ 65 ರಿಂದ 139ರ ತನಕ).

**ಸರಕತೀರ್ಥ** – ಕುರುಕ್ಷೇತ್ರದ ಗಡಿಯೊಳಗಿರುವ ಒಂದು ಲೋಕವಿಖ್ಯಾತ ತೀರ್ಥ. ಇಲ್ಲಿ ಕೃಷ್ಣ ಪಕ್ಷದ ಚತುರ್ದಶಿಯ ದಿನ ಭಗವಾನ್ ಶಂಕರನ ದರ್ಶನ ಮಾಡುವುದರಿಂದ, ಮನುಷ್ಯನು ಎಲ್ಲಾ ಆಸೆಗಳನ್ನು ಪಡೆಯುತ್ತಾನೆ ಮತ್ತು ಸ್ವರ್ಗಕ್ಕೆ ಹೋಗುತ್ತಾನೆ. ಅಲ್ಲಿ ರುದ್ರಕೋಟಿ, ಕೂಪ ಮತ್ತು ಕುಂಡಗಳಲ್ಲಿ ಒಟ್ಟು ಸೇರಿ ಮೂರು ಕೋಟಿ ತೀರ್ಥಗಳಿವೆ. ಇದರ ಪೂರ್ವಭಾಗದಲ್ಲಿ ಮಹಾತ್ಮಾ ನಾರದನ ಅಂಬಾಜನವೆಂಬ ವಿಖ್ಯಾತ ತೀರ್ಥವಿದೆ (ವನ 83/75–81).

**ಸರಮಾ** – ದೇವಲೋಕದ ಹೆಣ್ಣು ನಾಯಿ. ಇದು ಸಾರಮೇಯಗಳ ತಾಯಿಯಾಗಿತ್ತು (ಆದಿ 3/1). ಹೊಡೆಯಲ್ಪಟ್ಟ ಮಗನ ದುಃಖದಿಂದ ದುಃಖಿತೆಯಾಗಿ ಇದು ಸರ್ಪಸತ್ರಕ್ಕೆ ಬಂದಿತ್ತು (ಆದಿ 3/7). ಇದರಿಂದ ಜನಮೇಜಯನಿಗೆ ದೊಡ್ಡ ಗಾಬರಿಯಾಯಿತು (ಆದಿ 3/10). ಇದು ಬ್ರಹ್ಮನ ಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತದೆ (ಸಭಾ 11/40). ದೇವತೆಗಳ ನಾಯಿ, ದೇವಜಾತಿಯ ಸರಮೆ, ಸ್ಕಂದನ ಒಂದು ಗ್ರಹವಾಗಿದೆ. ಇದೂ ಸ್ತ್ರೀಯರ ಗರ್ಭಸ್ಥ ಬಾಲಕರನ್ನು ಅಪಹರಿಸುತ್ತದೆ (ವನ 230/34).

**ಸರಯೂ** – (1) ಹಿಮಾಲಯದ ಸ್ವರ್ಣ ಶಿಖರದಿಂದ ಉಗಮಗೊಂಡ ಗಂಗೆಯ ಏಳು ಧಾರೆಗಳಲ್ಲಿ ಒಂದು. ಇದರ ನೀರು ಕುಡಿಯುವವರ ಪಾಪ, ತತ್‌ಕ್ಷಣ ನಷ್ಟವಾಗುತ್ತದೆ (ಆದಿ 169/20–21). ಈಕೆ ವರುಣಸಭೆಯಲ್ಲಿದ್ದು ಅವನ ಉಪಾಸನೆ ಮಾಡುತ್ತಾಳೆ (ಸಭಾ 7/22). ಇಂದ್ರಪ್ರಸ್ಥದಿಂದ ಗಿರಿವ್ರಜಕ್ಕೆ ಹೋಗುತ್ತಿದ್ದ ಶ್ರೀಕೃಷ್ಣ, ಅರ್ಜುನ ಮತ್ತು ಭೀಮಸೇನರು ಹಾದಿಯಲ್ಲಿ ಈ ನದಿಯನ್ನು ದಾಟಿದ್ದರು (ಸಭಾ 20/28). ಗೋಪ್ರತಾರವೆಂಬ ತೀರ್ಥ ಸರಯೂವಿನ ಜಲದಲ್ಲಿಯೇ ಇದೆ. ಇಲ್ಲಿ ಮುಳುಗುಹಾಕಿ, ಭಗವಾನ್ ಶ್ರೀರಾಮನು ತನ್ನ ದಳಬಲಸಮೇತ ಪರಮಧಾಮಕ್ಕೆ ಹೋಗಿದ್ದನು (ವನ 84/70–71). ಈ ನದಿ ಅಗ್ನಿಯ ಉತ್ಪತ್ತಿ ಸ್ಥಾನವಾಗಿದೆ (ವನ 222/22). ಭಾರತವರ್ಷದ ಪ್ರಜೆಗಳು ನೀರು ಕುಡಿಯುವ ನದಿಗಳಲ್ಲಿ ಇದೂ ಒಂದಾಗಿದೆ (ಭೀಷ್ಮ 9/19). ಕೈಲಾಸದ ಕಡೆಗೆ ಹೋಗುತ್ತಿರುವ ಗಂಗೆಯನ್ನು ವಸಿಷ್ಠನು ಮಾನಸ ಸರೋವರಕ್ಕೆ ತೆಗೆದುಕೊಂಡು ಹೋದನು. ಅಲ್ಲಿಗೆ ಬರುತ್ತಲೇ ಗಂಗೆಯು ಆ ಸರೋವರದ ಕಟ್ಟಣೆಯನ್ನು ಮುರಿದಳು. ಗಂಗೆಯಿಂದ ಸರೋವರ ಭೇದಿಸಲ್ಪಟ್ಟಾಗ ಹೊರಟ ಶ್ರೋತವೇ ಸರಯೂ ಎಂದು ಪ್ರಸಿದ್ಧವಾಯಿತು (ಅನು 155/23–24). ಇದು ಸಾಯಂಪ್ರಾತಃ ಸ್ಮರಣೀಯ ನದಿಗಳಲ್ಲಿ ಒಂದಾಗಿದೆ (ಅನು 165/21).

(2) ವೀರನೆಂಬ ಅಗ್ನಿಯ ಪತ್ನಿ. ಈಕೆಯಿಂದ ಆತ ಸಿದ್ಧಿಯೆಂಬ ಪುತ್ರನನ್ನು ಪಡೆದಿದ್ದನು (ವನ 219/11).

**ಸರಸ್ವತೀ** – (1) ಒಬ್ಬಳು ದೇವಿ. ಪ್ರತಿಯೊಂದು ಪರ್ವದ ಆರಂಭದಲ್ಲಿ ಈಕೆಯ ವಂದನೆ ಮಾಡಲಾಗಿದೆ (ಆದಿ 1 ಮಂಗಲಾಚರಣ). ಈಕೆ ಇಂದ್ರ ಸಭೆಯಲ್ಲಿರುತ್ತಾಳೆ (ಸಭಾ 7/19). ತಾರ್ಕ್ಷ್ಯಮುನಿಗೆ, ಆತನ ಪ್ರಶ್ನೆಗೆ ಅನುಸಾರವಾಗಿ, ಈಕೆಯಿಂದ ಗೋದಾನ, ಅಗ್ನಿಹೋತ್ರ ಇತ್ಯಾದಿ ವಿವಿಧ ವಿಷಯಗಳ ಉಪದೇಶ ಕೊಡಲ್ಪಟ್ಟಿತು (ವನ 185 ಅಧ್ಯಾಯ). ತ್ರಿಪುರದಹನದ ಸಮಯದಲ್ಲಿ ಈಕೆ ಶಿವನ ರಥ ಮುಂದುವರಿಯುವ ಮಾರ್ಗವಾಗಿದ್ದಳು (ಕರ್ಣ 34/34). ದಂಡನೀತಿ ಸ್ವರೂಪಳಾದ ಸರಸ್ವತಿ ಬ್ರಹ್ಮನ ಮಗಳಾಗಿದ್ದಾಳೆ (ಶಾಂತಿ 121/24). ಮಹರ್ಷಿ ಯಾಜ್ಞವಲ್ಕ್ಯನು ಚಿಂತನೆ ನಡೆಸಿದಾಗ, ಸ್ವರ ಮತ್ತು ವ್ಯಂಜನ ವರ್ಣಗಳಿಂದ ವಿಭೂಷಿತಳಾದ ವಾಗ್ದೇವಿ ಸರಸ್ವತಿ 'ಓಂ'ಕಾರವನ್ನು ಮುಂದಿಟ್ಟು, ಅವನ ಮುಂದೆ ಪ್ರತ್ಯಕ್ಷಳಾದಳು (ಶಾಂತಿ 238/14).

(2) ಒಂದು ನದಿ. ಇದರ ದಡದಲ್ಲಿ ರಾಜಾ ಮತಿನಾರನು ಯಜ್ಞಮಾಡಿದ್ದನು. ಯಜ್ಞವು ಸಮಾಪ್ತವಾದಾಗ ನದಿಯ ಅಧಿದೇವತೆಯಾದ ಸರಸ್ವತಿಯು ಅವನ ಬಳಿಗೆ ಬಂದು, ಅವನನ್ನು

ಪತಿಯಾಗಿ ವರಿಸಿದಳು. ಮತಿನಾರನು ಇವಳ ಗರ್ಭದಿಂದ ತಂಸು ಎಂಬ ಮಗನನ್ನು ಪಡೆದನು (ಆದಿ 95/26–27). ಇವಳು ಗಂಗೆಯ ಏಳು ಧಾರೆಗಳಲ್ಲಿ ಒಂದು, ಮತ್ತು ಅತ್ತಿಮರದ ಬೇರಿನಿಂದ ಪ್ರಕಟಗೊಂಡಿದ್ದಾಳೆ. ಇವಳ ನೀರು ಕುಡಿದರೆ ಸರ್ವಪಾಪಗಳೂ ತತ್‌ಕ್ಷಣ ನಾಶವಾಗುತ್ತವೆ (ಆದಿ 16/19–21). ಈಕೆ ವರುಣ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾಳೆ (ಸಭಾ 9/9). ಪಾಂಡವರು ವನ ವಾಸ ಕಾಲದಲ್ಲಿ ಇದನ್ನು ದಾಟಿದ್ದರು (ವನ 5/2). ಶ್ರೀಕೃಷ್ಣನಿಂದ ಸರಸ್ವತೀ ತಟದಲ್ಲಿ ಮಾಡಲ್ಪಟ್ಟ ಯಜ್ಞಾನುಷ್ಠಾನದ ವರ್ಣನೆ (ವನ 12/14). ಕಾಮ್ಯಕವನದ ಭೂಭಾಗ ಸರಸ್ವತಿಯ ದಡದಲ್ಲಿದೆ (ವನ 36/41). ಈ ನದಿ ತೀರ್ಥ ಸ್ವರೂಪವಾಗಿದೆ. ಇಲ್ಲಿ ಬಂದು ದೇವತೆಗಳಿಗೂ ಪಿತೃಗಳಿಗೂ ತರ್ಪಣಕೊಡುವುದರಿಂದ ಯಾತ್ರಿ ಕನು ಸಾರಸ್ವತಲೋಕಗಳಿಗೆ ಹೋಗುತ್ತಾನೆ. ಮತ್ತು ಆನಂದಕ್ಕೆ ಪಾತ್ರನಾಗುತ್ತಾನೆ (ವನ 84/66). ತೀರ್ಥಗಳ ಪಂಕ್ತಿಯಲ್ಲಿ ಶೋಭಾಯ ಮಾನವಾದ ಈ ನದಿ ಅತ್ಯಂತ ಪುಣ್ಯಪ್ರದ ವಾಗಿದೆ (ವನ 90/3). ದಧೀಚಿಯ ಆಶ್ರಮ ಸರಸ್ವತೀ ನದಿಯ ಮತ್ತೊಂದು ದಡದಲ್ಲಿತ್ತು (ವನ 100/13). ಲೋಮಶನಿಂದ ಇದರ ಮಹಾತ್ಮೆಯ ವರ್ಣನೆ (ವನ 129/20–21). ಇದು ವಿನಶನ ತೀರ್ಥದಲ್ಲಿ ಲುಪ್ತವಾಗಿ ಚಮಸೋದ್ಭೇದದಲ್ಲಿ ಪುನಃ ಪ್ರಕಟವಾಗಿದೆ (ವನ 130/3–5). ಅಗ್ನಿಯ ಉತ್ಪತ್ತಿಗೆ ಕಾರಣ ಸ್ಥಾನವಾದ ನದಿಗಳಲ್ಲಿ ಇದೂ ಸೇರಿದೆ (ವನ 222/22). ಇದು ಗಂಗೆಯ ಏಳು ಧಾರೆಗಳಲ್ಲಿ ಒಂದಾಗಿದೆ (ಭೀಷ್ಮ 6/48). ಭಾರತವಾಸಿಗಳು ನೀರು ಕುಡಿಯುವ ಪವಿತ್ರನದಿಗಳಲ್ಲಿ ಸರ ಸ್ವತಿಯೂ ಸೇರಿದೆ (ಭೀಷ್ಮ 9/14). ಸರಸ್ವತೀ ತಟದ ತೀರ್ಥಗಳ ಮಹಿಮೆಯ ವಿಶೇಷ ವರ್ಣನೆ (ಶಲ್ಯ ಅಧ್ಯಾಯ 35ರಿಂದ 54ರ ವರೆಗೆ). ಇದು ಬ್ರಹ್ಮ ಸರೋವರದಿಂದ ಪ್ರಕಟವಾಗಿದೆ. ಇದರ ಮೂಲಕ ವಸಿಷ್ಠನು ತೇಲಿಸಲ್ಪಟ್ಟದ್ದು (ಶಲ್ಯ 42/29). ವಿಶ್ವಾಮಿತ್ರ ನಿಂದ ಈ ನದಿಗೆ ಶಾಪ ಪ್ರಾಪ್ತಿ (ಶಲ್ಯ 42/38–39). ಋಷಿಗಳ ಪ್ರಯತ್ನದಿಂದ ಶಾಪನಿವೃತ್ತಿ (ಶಲ್ಯ 43/16). ಈಕೆ ದಧೀಚ ಮಹರ್ಷಿಯ ವೀರ್ಯವನ್ನು ಧರಿಸಿ, ಪುತ್ರ ಜನನವಾದಾಗ, ಆತನಿಗೆ ಸಮರ್ಪಿಸಿದುದು (ಶಲ್ಯ 51/13–14). ಮಹರ್ಷಿಯಿಂದ ವರದಾನ ಪ್ರಾಪ್ತಿ (ಶಲ್ಯ 51/17–24). ಬಲರಾಮನಿಂದ ಇದರ ಮಹಿಮೆಯ ವರ್ಣನೆ (ಶಲ್ಯ 54/38–39). ಅರ್ಜುನನು ಸಾತ್ಯಕಿಯ ಮಗನನ್ನು ಈ ನದಿಯ ತಟವರ್ತೀ ಪ್ರದೇಶಕ್ಕೆ ಅಧಿಕಾರಿಯಾಗಿ ಮಾಡಿದನು (ಮೌಸಲ 8/71). ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರು ಈ ಸರಸ್ವತಿ ನದಿಗೆ ಹಾರಿ ಪ್ರಾಣತ್ಯಾಗ ಮಾಡಿದರು (ಸ್ವರ್ಗಾ 5/25).

(3) ಮನುವಿನ ಪತ್ನಿಯ ಹೆಸರು (ಉದ್ಯೋಗ 117/14).

**ಸರಸ್ವತೀ – ಅರುಣಾ–ಸಂಗಮ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಲೋಕವಿಖ್ಯಾತ ಪವಿತ್ರ ತೀರ್ಥ. ಇಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸ ಮಾಡಿದರೆ ಮನುಷ್ಯನಿಗೆ ಬ್ರಹ್ಮಹತ್ಯೆಯಿಂದಲೂ ಮೋಕ್ಷ ಸಿಗುತ್ತದೆ. ಅವನು ಅಗ್ನಿಷ್ಟೋಮ ಮತ್ತು ಅತಿರಾತ್ರ ಯಜ್ಞಗಳಿಂದ ದೊರಕುವ ಫಲವನ್ನೂ ಪಡೆಯುತ್ತಾನೆ. ಅವನು ತನ್ನ ಕುಲದ ಏಳು ತಲೆಮಾರಿನವರವನ್ನು ಪವಿತ್ರಗೊಳಿಸುತ್ತಾನೆ (ವನ 83/151–153).

**ಸರಸ್ವತೀಸಂಗಮ** – ಅತ್ಯಂತ ಪುಣ್ಯಮಯವಾದ ಒಂದು ಲೋಕ ವಿಖ್ಯಾತ ತೀರ್ಥ. ಇಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳೂ, ತಪೋಧನ ಮಹರ್ಷಿ ಗಳೂ, ಭಗವಾನ್ ಕೇಶವನ ಉಪಾಸನೆ ಮಾಡು ತ್ತಾರೆ. ಇಲ್ಲಿ ಚೈತ್ರಶುದ್ಧ ಚತುರ್ದಶಿಯಂದು ವಿಶೇಷ ಜಾತ್ರೆ ನಡೆಯುತ್ತದೆ. ಇಲ್ಲಿ ಸ್ನಾನ ಮಾಡಿದರೆ ತುಂಬಾ ಸುವರ್ಣಪ್ರಾಪ್ತಿಯಾಗುತ್ತದೆ ಮತ್ತು ಪಾಪರಹಿತ ಶುದ್ಧಚಿತ್ತನಾದ ಮನುಷ್ಯ ಬ್ರಹ್ಮಲೋಕಕ್ಕೆ ಹೋಗುತ್ತಾನೆ (ವನ 82/125–127).

**ಸರಸ್ವತಿ ಸಾಗರ ಸಂಗಮ** – ಪಶ್ಚಿಮ ಸಮುದ್ರದ ದಡದಲ್ಲಿ, ಸರಸ್ವತೀ ಮತ್ತು ಸಮುದ್ರದ ಸಂಗಮ ವಾದಲ್ಲಿರುವ ತೀರ್ಥ. ಇಲ್ಲಿಗೆ ಹೋಗಿ ಸ್ನಾನ ಮಾಡಿ ದೇವೇಶ್ವರನಾದ ಮಹಾದೇವನ ಆರಾಧನೆ ಮಾಡಿದುದರಿಂದ ಚಂದ್ರನು ತನ್ನ ಕಳೆದು ಹೋದ ಕಾಂತಿಯನ್ನು ಪುನಃ ಪಡಕೊಂಡಿದ್ದನು

(ಶಲ್ಯ 35/77). (ಇಲ್ಲಿಯೇ ಸೋಮನಾಥ ಮತ್ತು ಪ್ರಭಾಸಕ್ಷೇತ್ರವಿದೆ.).

**ಸರಿದ್ವೀಪ** – **ಸರಿದ್ವೀಪ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಂದು (ಉದ್ಯೋಗ 101/11).

**ಸರ್ಪ** – ಏಕಾದಶ ರುದ್ರರಲ್ಲಿ ಒಬ್ಬ. ಬ್ರಹ್ಮನ ಪೌತ್ರ ಮತ್ತು ಸ್ಥಾಣುವಿನ ಪುತ್ರ (ಆದಿ 66/2).

**ಸರ್ಪದೇವೀ** – ಕುರುಕ್ಷೇತ್ರ ಸೀಮೆಯೊಳಗಿರುವ ಒಂದು ತೀರ್ಥ. ಅಲ್ಲಿ ಹೋಗಿ ಉತ್ತಮ ನಾಗ ತೀರ್ಥವನ್ನು ಸೇವಿಸಿದರೆ ಮನುಷ್ಯನು ಅಗ್ನಿ ಷ್ಟೋಮದ ಫಲ ಪಡೆಯುತ್ತಾನೆ ಮತ್ತು ನಾಗ ಲೋಕಕ್ಕೆ ಹೋಗುತ್ತಾನೆ (ವನ 83/14–15).

**ಸರ್ಪಮಾಲೀ** – ಒಬ್ಬ ದಿವ್ಯ ಮಹರ್ಷಿ. ಈತ ಹಸ್ತಿನಾವತಿಗೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಮಾರ್ಗದಲ್ಲಿ ಭೇಟಿಮಾಡಿದ್ದನು (ಉದ್ಯೋಗ 83/64).

**ಸರ್ಪಾಂತ** – ಗರುಡನ ಪ್ರಮುಖ ಸಂತಾನಗಳ ಪರಂಪರೆಯಲ್ಲಿ ಹುಟ್ಟಿದ ಒಂದು ಪಕ್ಷಿ (ಉದ್ಯೋಗ 101/12).

**ಸರ್ಪಿಮಾಲೀ** – ಒಬ್ಬ ಋಷಿ. ಈತ ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10).

**ಸರ್ವ** – ಭಗವಾನ್ ಶ್ರೀಕೃಷ್ಣನ ಒಂದು ಹೆಸರು ಮತ್ತು ಅದರ ಅರ್ಥ (ಉದ್ಯೋಗ 70/12).

**ಸರ್ವಕರ್ಮಾ** – ಸೌದಾಸನ ಒಬ್ಬ ಮಗ. ಪರಶು ರಾಮ ಕ್ಷತ್ರಿಯ ಸಂಹಾರ ಮಾಡುತ್ತಿದ್ದಾಗ, ಈತ ಪ್ರಾಣ ಉಳಿಸಿಕೊಂಡವನು. ಪೃಥ್ವಿಯಿಂದ ಕಶ್ಯಪ ನಿಗೆ ಈತನ ಇರುವಿಕೆ ತಿಳಿಸಲ್ಪಟ್ಟಿತು (ಶಾಂತಿ 49/76–77).

**ಸರ್ವಕಾಮದುಘಾ** – ಸುರಭಿಯ ಧೇನು ಸ್ವರೂಪದ ಕನ್ಯೆ. ಈಕೆ ಉತ್ತರ ದಿಶೆಯನ್ನು ಧಾರಣೆ ಮಾಡಿದ್ದಾಳೆ (ಉದ್ಯೋಗ 102/10).

**ಸರ್ವಗ** – ಭೀಮಸೇನನಿಂದ ಜಲಂಧರೆ ಯೆಂಬವಳಲ್ಲಿ ಹುಟ್ಟಿದ ಪುತ್ರ (ಆದಿ 95/77).

**ಸರ್ವತೋಭದ್ರ** – ಜಲಾಧಿಪನಾದ ವರುಣನ ಸಮೃದ್ಧಶಾಲಿ ನಿವಾಸಸ್ಥಾನ (ಉದ್ಯೋಗ 98/10).

**ಸರ್ವದಮನ** – ಶಕುಂತಲೆಯ ವೀರಪುತ್ರನಾದ ಭರತ (ಆದಿ 74/8). (ವಿಶೇಷ ನೋಡಿರಿ– ಭರತ).

**ಸರ್ವದೇವ ತೀರ್ಥ** – ಕುರುಕ್ಷೇತ್ರದ ಸೀಮೆಯೊಳಗಿರುವ ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಮನುಷ್ಯ ಸಹಸ್ರ ಗೋದಾನ ಗಳ ಫಲ ಪಡೆಯುತ್ತಾನೆ (ವನ 83/88–89).

**ಸರ್ವಪಾಪಪ್ರಮೋಚನ ಕೂಪ** – ಸಮಸ್ತ ಪಾಪಗಳನ್ನು ದೂರಮಾಡುವ ಒಂದು ಕೂಪ. ಇದು ನಾರಾಯಣಸ್ಥಾನದಲ್ಲಿದೆ. ಇಲ್ಲಿ ಯಾವಾ ಗಲೂ ನಾಲ್ಕುಸಮುದ್ರಗಳು ನಿವಾಸಿಸುತ್ತವೆ. ಈ ತೀರ್ಥದಲ್ಲಿ ಸ್ನಾನಮಾಡಿದರೆ ಮನುಷ್ಯ ಎಂದೂ ದುರ್ಗತಿಗೆ ಬೀಳುವುದಿಲ್ಲ (ವನ 84/126–127).

**ಸರ್ವರ್ತುಕ** – ರೈವತಕ ಪರ್ವತದ ಬಳಿ ಶೋಭಿಸುವ ಒಂದು ವನ (ಸಭಾ 38/29).

**ಸರ್ವಸಾರಂಗ** – ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಈತ ಜನಮೇಜಯನ ಸರ್ಪ ಯಜ್ಞದಲ್ಲಿ ಸುಟ್ಟುಹೋದನು (ಆದಿ 57/18).

**ಸರ್ವಸೇನ** – ಕಾಶಿಯ ಒಬ್ಬ ರಾಜ. ಇವನ ಪುತ್ರಿ ಸುನಂದೆಯೊಂದಿಗೆ ಸಮ್ರಾಟ್ ಭರತನ ವಿವಾಹವಾಗಿತ್ತು. ಸುನಂದೆಯ ಗರ್ಭದಿಂದ ಹುಟ್ಟಿದ ಈತನ ಮೊಮ್ಮಗನ ಹೆಸರು ಭುಮನ್ಯು ಎಂದಾಗಿತ್ತು (ಆದಿ 95/32).

**ಸರ್ವಾ** – ಒಂದು ಪವಿತ್ರ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/36).

**ಸಲಿಲಹ್ರದ** – ಒಂದು ತೀರ್ಥ. ಬ್ರಹ್ಮಚರ್ಯ ಪಾಲನೆಯೊಂದಿಗೆ ಇದರಲ್ಲಿ ಮುಳುಗುಹಾಕಿದರೆ ಅಶ್ವಮೇಧಯಜ್ಞದ ಫಲಸಿಗುತ್ತದೆ (ಅನು 25/14).

**ಸವನ** – ಮಹರ್ಷಿ ಭೃಗುವಿನ ಏಳು ಪುತ್ರರಲ್ಲಿ ಒಬ್ಬ (ಇವನಿಗೆ 'ವಾರುಣ' ಎಂಬ ಹೆಸರಿದೆ.). (ಅನು 85/129).

**ಸವಿತಾ** – ದ್ವಾದಶಾದಿತ್ಯರಲ್ಲಿ ಒಬ್ಬ. ಇವನ ತಾಯಿ ಅದಿತಿ ಮತ್ತು ತಂದೆ ಕಶ್ಯಪ (ಆದಿ 65/15).

**ಸವ್ಯಸಾಚೀ** – ಅರ್ಜುನನ ಒಂದು ಹೆಸರು ಮತ್ತು ಇದರ ಅರ್ಥ (ವಿರಾಟ 44/19).

**ಸಹ** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 116/2). ಈತ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/1). ಇವನಿಂದ ಭೀಮಸೇನನ ಮೇಲೆ ಆಕ್ರಮಣ (ಕರ್ಣ 51/8). (2) ಒಬ್ಬ ಪ್ರಭಾವಶಾಲಿ ಅಗ್ನಿ. ಈತ ಸಮುದ್ರ ದಲ್ಲಿ ಅಡಗಿದ್ದನು (ವನ 222/7). ದೇವತೆಗಳು ಹುಡುಕಿದಾಗ, ಈತ ಅಥರ್ವಾನನ್ನು ಅಗ್ನಿಯ

ಪದವಿಯಲ್ಲಿ ಪ್ರತಿಷ್ಠೆಗೊಳಿಸಿ ಎಲ್ಲಿಗೋ ಹೋದುದು (ವನ 222/8–10). ಇವನಿಂದ ಮೀನುಗಳಿಗೆ ಶಾಪ ಮತ್ತು ತನ್ನ ಶರೀರದ ತ್ಯಾಗ (ವನ 222/10–12). ಇವನ ಶರೀರದ ಅವಯವಗಳಿಂದ ವಿವಿಧ ಧಾತುಗಳ ಉತ್ಪತ್ತಿ (ವನ 222/14–16). ಸಮುದ್ರದಲ್ಲಿ ಅಡಗಿದ ಈತ ಅಗ್ನಿಯ ಮೂಲಕ ಪುನಃ ಪ್ರಕಟನಾದುದು (ವನ 222/20).

**ಸಹಜ** – ಚೇದಿ ಮತ್ತು ಮತ್ಸ್ಯ ದೇಶದ ಒಬ್ಬ ಕುಲಕಳಂಕ ರಾಜ (ಉದ್ಯೋಗ 74/16).

**ಸಹಜನ್ಯಾ** – ಆರು ಮಂದಿ ಶ್ರೇಷ್ಠ ಅಪ್ಸರೆಯರಲ್ಲಿ ಒಬ್ಬಳು. ಇವಳು ಅರ್ಜುನನ ಜನ್ಮಮಹೋತ್ಸವಕ್ಕೆ ಬಂದು ಅಲ್ಲಿ ಹಾಡಿದ್ದಳು (ಆದಿ 122/64). ಇವಳು ಕುಬೇರನ ಸಭೆಯಲ್ಲಿ ಆತನ ಸೇವೆಗಾಗಿ ಉಪಸ್ಥಿತಳಾಗಿರುತ್ತಾಳೆ (ಸಭಾ 10/11). ಇವಳು ಅರ್ಜುನನ ಸ್ವಾಗತಕ್ಕಾಗಿ ಇಂದ್ರಭವನದ ಸಭೆಯಲ್ಲಿ ನೃತ್ಯ ಮಾಡಿದ್ದಳು (ವನ 43/30).

**ಸಹದೇವ** – (1) ಪಾಂಡುವಿನ ಕ್ಷೇತ್ರಜ ಪುತ್ರ, ಅಶ್ವಿನೀ ಕುಮಾರರಿಂದ ಮಾದ್ರಿಯ ಗರ್ಭದಲ್ಲಿ ಹುಟ್ಟಿದ ಇಬ್ಬರು ಪುತ್ರರಲ್ಲಿ ಒಬ್ಬ. ಈ ಇಬ್ಬರೂ ಸಹೋದರರು ಅವಳಿಯಾಗಿ ಹುಟ್ಟಿದ್ದರು. ಇವರಿಬ್ಬರೂ ಸುಂದರರು ಮತ್ತು ಹಿರಿಯರ ಸೇವೆಯಲ್ಲಿ ತತ್ಪರರಾಗಿದ್ದರು (ಆದಿ 1/114; ಆದಿ 63/117; ಆದಿ 95/63). ಅನುಪಮ ರೂಪಶಾಲಿ ಮತ್ತು ಪರಮಮನೋಹರರಾದ ನಕುಲಸಹದೇವರು ಅಶ್ವಿನೀಕುಮಾರರ ಅಂಶದಿಂದ ಹುಟ್ಟಿದ್ದರು (ಆದಿ 67/111–112). ಇವರ ಹುಟ್ಟು ಮತ್ತು ಶತಶೃಂಗ ನಿವಾಸಿಗಳಾದ ಋಷಿಗಳಿಂದ ಇವರಿಗೆ ನಾಮಕರಣ ಸಂಸ್ಕಾರ (ಆದಿ 123/17–21). ವಸುದೇವನ ಪುರೋಹಿತ ಕಾಶ್ಯಪನ ಮೂಲಕ ಇವರಿಗೆ ಉಪನಯನಾದಿ ಸಂಸ್ಕಾರ ಮತ್ತು ರಾಜರ್ಷಿ ಶುಕನ ಮೂಲಕ ಇವರ ಅಸ್ತ್ರ ವಿದ್ಯಾಭ್ಯಾಸ ಮತ್ತು ಕತ್ತಿ ಗುರಾಣಿ ಪ್ರಯೋಗ ಕಲೆಯಲ್ಲಿ ನಿಪುಣತೆ (ಆದಿ 123/31). ಪಾಂಡುವಿನ ಮರಣಾನಂತರ ಮಾದ್ರಿ ತನ್ನ ಪುತ್ರರನ್ನು (ನಕುಲ–ಸಹದೇವ) ಕುಂತಿಯ ಕೈಗಳಿಗೆ ಒಪ್ಪಿಸಿ, ಪತಿಯೊಂದಿಗೆ ಚಿತೆಯನ್ನೇರಿದುದು (ಆದಿ 124 ಅಧ್ಯಾಯ). ಶತಶೃಂಗ ನಿವಾಸಿಗಳಾದ ಋಷಿಗಳು ಸಹದೇವಾದಿ ಐದೂ ಮಂದಿ ಪಾಂಡವರನ್ನು ಕುಂತಿ ಸಹಿತ ಹಸ್ತಿನಾಪುರಕ್ಕೆ ಕರಕೊಂಡು ಹೋದುದು ಮತ್ತು ಅವರನ್ನು ಭೀಷ್ಮಾದಿಗಳ ಕೈಗೆ ಒಪ್ಪಿಸಿದುದು. ದ್ರೋಣಾಚಾರ್ಯನು ಪಾಂಡವರಿಗೆ ನಾನಾ ಪ್ರಕಾರದ ದಿವ್ಯ ಹಾಗೂ ಮಾನವ ಅಸ್ತ್ರ ಶಸ್ತ್ರಗಳ ಶಿಕ್ಷಣವನ್ನಿತ್ತದ್ದು (ಆದಿ 131/9). ದ್ರುಪದನ ಮೇಲೆ ಆಕ್ರಮಣ ಮಾಡುವಾಗ ಅರ್ಜುನನು ಮಾದ್ರೀ ಕುಮಾರರನ್ನು ತನ್ನ ಚಕ್ರ ರಕ್ಷಕರನ್ನಾಗಿ ಮಾಡಿದ್ದನು (ಆದಿ 137/27). ದ್ರೋಣನಿಂದ ಸುಶಿಕ್ಷಿತನಾದ ಸಹದೇವ ತನ್ನ ಸಹೋದರರ ಅಧೀನ (ಅನುಕೂಲ). ಇರುತ್ತಿದ್ದನು (ಆದಿ 138/18). ಧೃತರಾಷ್ಟ್ರನ ಆದೇಶ ಪ್ರಕಾರ ಕುಂತಿ ಸಹಿತ ಪಾಂಡವರ ವಾರಣಾವತ ಯಾತ್ರೆ; ಅಲ್ಲಿ ಅವರ ಸ್ವಾಗತ ಮತ್ತು ಲಾಕ್ಷಾ ಗೃಹದಲ್ಲಿ ವಾಸ (ಆದಿ ಅಧ್ಯಾಯ 142 ರಿಂದ 145). ಲಾಕ್ಷಾಗೃಹದಹನ ಮತ್ತು ಪಾಂಡವರು ಸುರಂಗದಾರಿಯಲ್ಲಿ ಹೊರಟದ್ದು, ಭೀಮಸೇನನು ನಕುಲ ಸಹದೇವರನ್ನು ತೊಡೆಯಲ್ಲಿಟ್ಟು ನಡೆದುದು (ಆದಿ 147 ಅಧ್ಯಾಯ). ಪಾಂಡವರಿಗೆ ವ್ಯಾಸರ ದರ್ಶನ ಮತ್ತು ಅವರು ಏಕಚಕ್ರ ನಗರಿಗೆ ಪ್ರವೇಶಿಸಿದುದು (ಆದಿ 155 ಅಧ್ಯಾಯ). ಪಾಂಡವರ ಪಾಂಚಾಲಯಾತ್ರೆ (ಆದಿ 169 ಅಧ್ಯಾಯ). ಇವರು ದ್ರುಪದನ ರಾಜಧಾನಿಗೆ ಹೋಗಿ ಕುಂಬಾರನಲ್ಲಿ ವಾಸಿಸಿದುದು (ಆದಿ 184 ಅಧ್ಯಾಯ). ಐದೂ ಮಂದಿ ಪಾಂಡವರಿಗೆ ದ್ರೌಪದಿಯೊಂದಿಗೆ ವಿವಾಹದ ವಿಚಾರ (ಆದಿ 190 ಅಧ್ಯಾಯ). ಐದೂ ಮಂದಿ ಪಾಂಡವರು ಕುಂತಿ ಸಹಿತ ದ್ರುಪದನ ಮನೆಗೆ ಹೋಗಿ ಸಮ್ಮಾನಿತರಾದುದು (ಆದಿ 193 ಅಧ್ಯಾಯ). ದ್ರೌಪದಿಯೊಂದಿಗೆ ವಿಧಿಪೂರ್ವಕ ಈತನ ವಿವಾಹ (ಆದಿ 197/13). ವಿದುರನೊಂದಿಗೆ ಪಾಂಡವರು ಹಸ್ತಿನಾವತಿಗೆ ಬಂದುದು ಮತ್ತು ಅರ್ಧರಾಜ್ಯ ಪಡೆದು, 'ಇಂದ್ರಪ್ರಸ್ಥ' ನಗರದ ನಿರ್ಮಾಣ ಮಾಡಿದುದು. ದ್ರೌಪದಿಯ ವಿಷಯದಲ್ಲಿ ಐದೂ ಸಹೋದರರು ನಿಯಮನಿರ್ಧರಿಸಿದುದು (ಆದಿ 211 ಅಧ್ಯಾಯ). ಸಹದೇವನಿಂದ ದ್ರೌಪದಿಯ ಗರ್ಭದಲ್ಲಿ ಶ್ರುತಸೇನ (ಶ್ರುತಕರ್ಮಾ)ನ ಜನನ (ಆದಿ 220/80; ಆದಿ 95/75). ಮದ್ರರಾಜ ದ್ಯುತಿಮಂತನ ಪುತ್ರಿ ವಿಜಯಳೊಡನೆ ಈತನ ವಿವಾಹ ಮತ್ತು

ಇವನಿಂದ ಅವಳ ಗರ್ಭದಲ್ಲಿ ಸಹೋತ್ರನ ಜನನ (ಆದಿ 95/80). ಇವನಿಂದ ದಕ್ಷಿಣ ದಿಕ್ಕಿನ ರಾಜರ ಸೋಲು (ಸಭಾ 31 ಅಧ್ಯಾಯ). ಇವನಿಂದ ಮತ್ಸ್ಯರಾಜ ವಿರಾಟನ ಪರಾಜಯ (ಸಭಾ 31/2). ದಂತವಕ್ತ್ರನ ಪರಾಜಯ (ಸಭಾ 31/3). ಮಾಹಿಷ್ಮತಿ ನರೇಶ ನೀಲನೊಂದಿಗೆ ಇವನ ಘೋರಯುದ್ಧ (ಸಭಾ 31/21). ಇವನಿಂದ ಅಗ್ನಿಯ ಸ್ತುತಿ (ಸಭಾ 31/41). ಅಗ್ನಿಯ ಕೃಪೆಯಿಂದ ಈತನಿಗೆ ನೀಲನಿಂದ ಕಪ್ಪಕಾಣಿಕೆ ಪ್ರಾಪ್ತವಾದುದು (ಸಭಾ 31/59). ಲಂಕೆಯಿಂದ ಕಪ್ಪ ತರಲು, ಈತ ಘಟೋತ್ಕಚನನ್ನು ದೂತಕಾರ್ಯಕ್ಕೆ ನೇಮಿಸಿ, ರಾಕ್ಷಸರಾಜ ವಿಭೀಷಣನ ಬಳಿಗೆ ಕಳುಹಿಸಿದುದು. ಘಟೋತ್ಕಚನೊಂದಿಗೆ ವಿಭೀಷಣನ ಮಾತುಕತೆ. ವಿಭೀಷಣನು ತುಂಬಾ ಸುವರ್ಣ, ಮಣಿ, ರತ್ನ ಇತ್ಯಾದಿ ಕಾಣಿಕೆಗಳನ್ನಿತ್ತು ದೂತನನ್ನು ಬೀಳ್ಕೊಂಡದ್ದು. ಆ ಕಾಣಿಕೆ ಸಾಮಗ್ರಿಗಳನ್ನು ತಲುಪಿಸಲು ಎಂಭತ್ತೆಂಟು ಸಾವಿರ ರಾಕ್ಷಸರು ಬಂದಿದ್ದರು (ಸಭಾ 31/72). ಯಜ್ಞದ ಆವಶ್ಯಕ ಉಪಕರಣಗಳು, ಖಾದ್ಯಾನ್ನ ಇತ್ಯಾದಿ ಸಂಗ್ರಹಿಸಿಡಲು ಇತರ ಮಂತ್ರಿಗಳೊಂದಿಗೆ ಸಹದೇವನಿಗೆ ಯುಧಿಷ್ಠಿರನ ಆಜ್ಞೆ (ಸಭಾ 33/27–31). ರಾಜಸೂಯ ಯಜ್ಞ ಕಾಲದಲ್ಲಿ ಈತ ಯುಧಿಷ್ಠಿರನ ಮಂತ್ರಿಯಾಗಿದ್ದನು (ಸಭಾ 33/40). ಇವನಿಂದ ರಾಜಸೂಯ ಯಜ್ಞದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆ (ಸಭಾ 36/30). ಶ್ರೀಕೃಷ್ಣನ ಅಗ್ರಪೂಜಾ ಸಂದರ್ಭದಲ್ಲಿ, ವಿರೋಧಿ ರಾಜರಿಗೆ ಇವನ ಪಂಥಾಹ್ವಾನ (ಸಭಾ 39/1–5). ರಾಜಸೂಯಯಜ್ಞಾ ನಂತರ ಈತ ಆಚಾರ್ಯ ದ್ರೋಣ ಮತ್ತು ಅಶ್ವತ್ಥಾಮರನ್ನು ತಲುಪಿಸಿ ಬರಲು ಅವರೊಂದಿಗೆ ಹೋಗಿದ್ದನು (ಸಭಾ 45/48). ಯುಧಿಷ್ಠಿರನಿಂದ ಈತ ಜೂಜಿನ ಪಣವಾಗಿ ಇಡಲ್ಪಟ್ಟನು ಮತ್ತು ಸೋಲಿಸಲ್ಪಟ್ಟಿದ್ದನು (ಸಭಾ 65/15). ಶಕುನಿಯನ್ನು ಕೊಲ್ಲುವುದಾಗಿ ಈತನ ಪ್ರತಿಜ್ಞೆ (ಸಭಾ 77/29–42). 'ಈ ದುರ್ದಿನದಲ್ಲಿ ಯಾರೂ ನನ್ನ ಗುರುತಿಸದಿರಲಿ' ಎಂದು ಯೋಚಿಸಿ ಸಹದೇವನು ತನ್ನ ಮುಖದ ಮೇಲೆ ಮಣ್ಣನ್ನು ಪೂಸಿ, ಕಾಡಿನ ಕಡೆಗೆ ಹೋಗಿದ್ದನು (ಸಭಾ 80/17). ಅರ್ಜುನನಿಗಾಗಿ ಈತನ ಚಿಂತೆ (ವನ 80/27–30). ಇವನು ಜಟಾಸುರನ ಹಿಡಿತದಿಂದ ತಪ್ಪಿ, ಭೀಮಸೇನನನ್ನು ಕರೆದುದು (ವನ 157/11). ಈತ ಶಿಷ್ಯಸಹಿತನಾದ ದುರ್ವಾಸನನ್ನು ಕರೆಸುವುದಕ್ಕಾಗಿ ನದಿಯ ದಡಕ್ಕೆ ಹೋದುದು ಮತ್ತು ಹುಡುಕಿದುದು (ವನ 263/37–38). ಜಯದ್ರಥನೊಡನೆ ದ್ರೌಪದಿಯಿಂದ ಇವನ ಪರಾಕ್ರಮ ಮತ್ತು ಜ್ಞಾನ ಇತ್ಯಾದಿ ಸದ್ಗುಣಗಳ ವರ್ಣನೆ (ವನ 270/15–19). ದ್ರೌಪದೀ ಹರಣದ ಸಮಯದಲ್ಲಿ ತನ್ನ ಕುದುರೆಗಳು ಕೊಲ್ಲಲ್ಪಟ್ಟಾಗ, ಯುಧಿಷ್ಠಿರನು ಸಹದೇವನ ರಥದಲ್ಲಿ ಬಂದುದು; ಮತ್ತು ಧೌಮ್ಯ ಮತ್ತು ದ್ರೌಪದಿಯನ್ನು ಸಹದೇವನು ಅದೇ ರಥಕ್ಕೆ ಏರುವಂತೆ ಮಾಡಿದುದು (ವನ 271/15–34). ದ್ವೈತವನದಲ್ಲಿ ಜಲತರಲು ಹೋದುದು ಮತ್ತು ಸರೋವರದ ಬಳಿ ಬಿದ್ದದ್ದು (ವನ 312/19). ವಿರಾಟನಗರದಲ್ಲಿ ತಂತಿಪಾಲನೆಂಬ ಹೆಸರಿನಿಂದ ಇರುವೆನೆಂದು ಈತ ಹೇಳಿದುದು (ವಿರಾಟ 3/9). ವಿರಾಟ ರಾಜನಲ್ಲಿ ತಾನು ಅರಿಷ್ಟನೇಮಿಯೆಂಬ ವೈಶ್ಯನೆಂದು ಪರಿಚಯ ಹೇಳಿ, ತನ್ನನ್ನು ಇರಿಸಿಕೊಳ್ಳುವಂತೆ ಪ್ರಾರ್ಥಿಸಿದುದು ಮತ್ತು ಆತನಿಂದ ಗೋಶಾಲಾಧ್ಯಕ್ಷ ಸ್ಥಾನದಲ್ಲಿ ನಿಯುಕ್ತನಾದುದು (ವಿರಾಟ 10/5–16). ಈತ ಗೊಲ್ಲರ ವೇಷಧರಿಸಿ ಪಾಂಡವರಿಗೆ ಹಾಲು, ಮೊಸರು, ತುಪ್ಪಗಳನ್ನು ಕೊಡುತ್ತಿದ್ದನು (ವಿರಾಟ 13/9). ದ್ರೌಪದಿಯು ಭೀಮಸೇನನೊಡನೆ ಸಹದೇವನ ವರ್ತಮಾನ ದುಃಖಮಯ ಪರಿಸ್ಥಿತಿಯನ್ನು ಹೇಳಿ, ಈತನಿಗಾಗಿ ಶೋಕವನ್ನು ಪ್ರಕಟಿಸಿದುದು (ವಿರಾಟ 19/33–41). ವಿರಾಟನ ಗೋವುಗಳ ಅಪಹರಣ ಕಾಲದಲ್ಲಿ ತ್ರಿಗರ್ತರೊಡನೆ ಈತನ ಯುದ್ಧ (ವಿರಾಟ 33/34). ಸಂಜಯನಿಂದ ಧೃತರಾಷ್ಟ್ರನಿಗೆ ಈತನ ಪರಾಕ್ರಮದ ವರ್ಣನೆ (ಉದ್ಯೋಗ 50/31–33). ಶಾಂತಿದೂತನಾಗಿ ಹೋಗಲು ಸಿದ್ಧನಾದ ಶ್ರೀಕೃಷ್ಣನೊಡನೆ, ಯುದ್ಧದ ಯೋಜನೆಯನ್ನೇ ಮಾಡುವಂತೆ ಸಮ್ಮತಿಸಿದುದು (ಉದ್ಯೋಗ 81/1–4). ವಿರಾಟನನ್ನು ಸೇನಾಪತಿಯಾಗಿ ಮಾಡಲು ಈತನ ಸೂಚನೆ (ಉದ್ಯೋಗ 151/10). ಉಲೂಕನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರಿಸುತ್ತಾ ಪುತ್ರ ಸಹಿತ ಶಕುನಿಯನ್ನು ಕೊಲ್ಲುವೆನೆಂದು ಘೋಷಣೆ ಮಾಡಿ

ದುದು (ಉದ್ಯೋಗ 162/31–36). ಉಲೂಕ ನೊಡನೆ ದುರ್ಯೋಧನನ ಸಂದೇಶಕ್ಕೆ ಉತ್ತರ ನೀಡಿದುದು (ಉದ್ಯೋಗ 163/39–40). ಕವಚ ಬಿಚ್ಚಿ, ಕಾಲ್ನಡೆಯಲ್ಲಿ ಕೌರವಸೇನೆಯ ಬಳಿಗೆ ಹೋಗುತ್ತಿದ್ದ ಯುಧಿಷ್ಠಿರೊಡನೆ ಪ್ರಶ್ನೆ ಮಾಡಿ ದುದು (ಭೀಷ್ಮ 43/19). ಪ್ರಥಮದಿನದ ಸಂಗ್ರಾ ಮದಲ್ಲಿ ದುರ್ಮುಖನೊಂದಿಗೆ ದ್ವಂದ್ವ ಯುದ್ಧ (ಭೀಷ್ಮ 45/25–27). ವಿಕರ್ಣನೊಂದಿಗೆ ಯುದ್ಧ (ಭೀಷ್ಮ 71/21). ಇವನಿಂದ ಶಲ್ಯನ ಪರಾಜಯ (ಭೀಷ್ಮ 83/53). ಕೌರವನ ಅಶ್ವಸೇನೆಯ ಸಂಹಾರ (ಭೀಷ್ಮ 89/32–34). ಇವನಿಂದ ಕುದುರೆ ಸವಾರರ ಸಂಹಾರ ಮತ್ತು ಪಲಾಯನ (ಭೀಷ್ಮ 105/16–23). ಕೃಪಾ ಚಾರ್ಯನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/ 12–13; ಭೀಷ್ಮ 111/28–33). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/ 31–33). ಶಕುನಿಯೊಂದಿಗೆ ಇವನ ಯುದ್ಧ (ದ್ರೋಣ 14/22–25). ಇವನ ರಥದ ಕುದುರೆ ಗಳ ವರ್ಣನೆ (ದ್ರೋಣ 23/9). ಶಕುನಿಯೊಂ ದಿಗೆ ಯುದ್ಧ (ದ್ರೋಣ 96/21–25). ದುರ್ಮುಖನೊಂದಿಗೆ ಯುದ್ಧ (ದ್ರೋಣ 106/ 13). ಇವನಿಂದ ದುರ್ಮುಖನ ಪರಾಜಯ (ದ್ರೋಣ 107/21–24). ತ್ರಿಗರ್ತರಾಜಕುಮಾರ ನಿರಮಿತ್ರನ ವಧೆ (ದ್ರೋಣ 107/25–26). ಕರ್ಣನೊಂದಿಗೆ ಯುದ್ಧದಲ್ಲಿ ಇವನ ಪರಾಜಯ (ದ್ರೋಣ 167/15). ದುಃಶಾಸನನೊಂದಿಗೆ ಯುದ್ಧ ಮತ್ತು ಆತನನ್ನು ಸೋಲಿಸಿದುದು (ದ್ರೋಣ 188/2–9). ಇವನು ಧೃಷ್ಟದ್ಯುಮ್ನನ ರಕ್ಷಣೆಗೆ ಹೋದುದು (ದ್ರೋಣ 189/7). ಧೃಷ್ಟದ್ಯುಮ್ನನನ್ನು ಕೊಲ್ಲಲು ಮೇಲ್ವಾಯ್ದು ಬರು ತ್ತಿದ್ದ ಸಾತ್ಯಕಿಯನ್ನು ಅನುನಯ ವಿನಯಗಳಿಂದ ಶಾಂತಗೊಳಿಸಿದುದು (ದ್ರೋಣ 198/53–59). ಇವನಿಂದ ಪುಂಡ್ರ ರಾಜನ ಪರಾಜಯ (ಕರ್ಣ 22/14–15). ದುಃಶಾಸನನ ಪರಾಜಯ (ಕರ್ಣ 23 ಅಧ್ಯಾಯ). ದುರ್ಯೋಧನನೊಂದಿಗೆ ಯುದ್ಧದಲ್ಲಿ ಈತ ಗಾಯಗೊಂಡದ್ದು (ಕರ್ಣ 56/7–18). ಇವನಿಂದ ಉಲೂಕನ ಪರಾಜಯ (ಕರ್ಣ 61/44). ಕರ್ಣನಿಂದ ಇವನ ಪರಾಜಯ (ಕರ್ಣ 63/33). ಇವನಿಂದ ಶಲ್ಯನ ಪುತ್ರನ ವಧೆ (ಶಲ್ಯ 11/43). ಶಲ್ಯನೊಂದಿಗೆ ಯುದ್ಧ (ಶಲ್ಯ 13 ಅಧ್ಯಾಯ 15 ಅಧ್ಯಾಯ). ಇವನಿಂದ ಶಕುನಿಪುತ್ರ ಉಲೂಕನ ವಧೆ (ಶಲ್ಯ 28/32–33). ಇವನಿಂದ ಶಕುನಿಯ ವಧೆ (ಶಲ್ಯ 28/46–61). ಮಮತೆ ಮತ್ತು ಆಸಕ್ತಿರಹಿತನಾಗಿ ರಾಜ್ಯಭಾರ ಮಾಡಲು ಯುಧಿಷ್ಠಿರನಿಗೆ ಸಲಹೆ ನೀಡಿದುದು (ಶಾಂತಿ 13 ಅಧ್ಯಾಯ). ತನ್ನ ಎಲ್ಲಾ ಅವಸ್ಥೆಗಳಲ್ಲಿ ರಕ್ಷಣೆಯ ಕಾರ್ಯವನ್ನು ಯುಧಿಷ್ಠಿರನು ಈತನಿಗೆ ಒಪ್ಪಿಸಿದುದು (ಶಾಂತಿ 41/15). ಯುಧಿಷ್ಠಿರನಿಂದ ಕೊಡಲ್ಪಟ್ಟ, ದುರ್ಮುಖನ ಅರಮನೆಯಲ್ಲಿ ಇವನ ಪ್ರವೇಶ (ಶಾಂತಿ 44/12–13). ಯುಧಿಷ್ಠಿರನು ಕೇಳಿದಾಗ ಇವನು ತ್ರಿವರ್ಗಗಳಲ್ಲಿ ಅರ್ಥದ ಪ್ರಧಾನತೆ ಯನ್ನು ಹೇಳಿದುದು (ಶಾಂತಿ 167/22–27). ಇವನಿಂದ ಶಕುನಿಯು ಕೊಲ್ಲಲ್ಪಟ್ಟ ಕುರಿತು ಶ್ರೀಕೃಷ್ಣನಿಂದ ವರ್ಣನೆ (ಆಶ್ವ 60/25). ಅಭಿ ಮನ್ಯುವಿನ ಬಾಲಕನ ರಕ್ಷಣೆಯಿಂದ ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವರ ಜೀವನ ರಕ್ಷಣೆಯೂ ಆಗುವುದು – ಹೀಗೆ ಕುಂತಿಯು ಶ್ರೀಕೃಷ್ಣನಿಗೆ ವರ್ಣಿಸಿದುದು (ಆಶ್ವ 66/19). ಅಶ್ವಮೇಧ ಯಜ್ಞದ ಸಂದರ್ಭದಲ್ಲಿ ವ್ಯಾಸನಿಂದ ಮತ್ತು ಯುಧಿಷ್ಠಿರನಿಂದ ಇವನಿಗೆ ಕುಟುಂಬಪಾಲನ ಸಂಬಂಧಿ ಸಮಸ್ತ ಕಾರ್ಯಗಳ ಮೇಲ್ವಿಚಾರಣೆಯ ಕೆಲಸ ಒಪ್ಪಿಸಲ್ಪಟ್ಟದ್ದು (ಆಶ್ವ 72/20–26). ವನಗಮನ ಮಾಡುವ ಕುಂತಿ ಇವನನ್ನು ಯುಧಿಷ್ಠಿರನಿಗೆ ಒಪ್ಪಿಸಿದುದು ಮತ್ತು ಇವನಲ್ಲಿ ಸದಾ ಪ್ರಸನ್ನನಾಗಿರುವಂತೆ ಆದೇಶ ನೀಡಿದುದು (ಆಶ್ರಮ 16/10). ನಕುಲ ಮತ್ತು ಸಹದೇವ ಸದಾ ಗುರುಜನರ ಆಜ್ಞಾಪಾಲನೆಯಲ್ಲಿ ತತ್ಪರರಾಗಿರುತ್ತಿದ್ದರು. ಇವನಿಗೆ ಹಸಿವೆಯ ಕಷ್ಟ ಅನುಭವಿಸುವಂತಾಗದಿರಲಿ. ಇದಕ್ಕಾಗಿ ಕುಂತಿಯು ಯುಧಿಷ್ಠಿರನನ್ನು ಯುದ್ಧಕ್ಕಾಗಿ ಹುರಿದುಂಬಿಸಿ ದಳು (ಆಶ್ರಮ 17/8). ತಾಯಿಯ ದರ್ಶನಕ್ಕಾಗಿ ಕಾಡಿಗೆ ತೆರಳುವ ವಿಚಾರವನ್ನು ಯುಧಿಷ್ಠಿರನು ತಿಳಿಸಿದಾಗ ಈತ ಹರ್ಷಿತನಾದುದು ಮತ್ತು ತಾನೂ ಅವನೊಂದಿಗೆ ಹೋಗಲು ಉತ್ಸಾಹ ತೋರಿದುದು (ಆಶ್ರಮ 22/9–13). ಕಾಡಿನಲ್ಲಿ ತಾಯಿಯನ್ನು ದೂರದಿಂದಲೇ ನೋಡಿ ಈತ ಓಡಿದುದು ಮತ್ತು ಹತ್ತಿರ ಹೋಗಿ, ಅವಳ

ಎರಡೂ ಕಾಲುಗಳನ್ನು ಹಿಡಿದು ಬಿಕ್ಕಿ ಬಿಕ್ಕಿ ಅತ್ತದ್ದು, ಕಣ್ಣುಗಳಿಂದ ನೀರು ಸುರಿಸುತ್ತಿದ್ದ ಕುಂತಿಯೂ ಈತನನ್ನು ಕೈಗಳಿಂದೆತ್ತಿ ಆಲಿಂಗಿಸಿ ಕೊಂಡದ್ದು ಮತ್ತು ಗಾಂಧಾರಿಗೆ ಇವರ ಆಗ ಮನದ ಸೂಚನೆ ನೀಡಿದುದು (ಆಶ್ರಮ 24/8–10). ಸಂಜಯನು ಋಷಿಗಳಿಗೆ ಸಹದೇವ ಮತ್ತು ಆತನ ಪತ್ನಿಯ ಪರಿಚಯ ನೀಡಿದುದು (ಆಶ್ರಮ 25/8–13). ಇವನು ಕಣ್ಣೀರು ತುಂಬಿ ಕೊಂಡು ಯುಧಿಷ್ಠಿರನ ಮುಂದೆ ತಾನು ವನದಲ್ಲಿ ನೆಲಸುವ ಇಚ್ಛೆಯನ್ನು ಪ್ರಕಟಿಸಿದುದು, ತಾಯಿಯನ್ನು ಬಿಟ್ಟು ಮನೆಗೆ ಹೋಗುವ ಕುರಿತು ಅಸಂತೋಷ ತೋರಿದುದು ಮತ್ತು ಮಾತಾಪಿತರ ಸೇವೆ ಮಾಡುತ್ತಾ ತಪಸ್ಸಿನಿಂದ ಶರೀರವನ್ನು ಒಣಗಿಸುವ ವಿಚಾರವನ್ನು ವ್ಯಕ್ತ ಪಡಿಸಿದುದು. ಇವನ ಮಾತು ಕೇಳಿ ಕುಂತಿ ಇವನನ್ನು ಆಲಂಗಿಸಿ, ತನ್ನ ಮಾತನ್ನು ಒಪ್ಪು ವಂತೆ ಹೇಳಿ, ಮನೆಗೆ ಹೋಗಲು ಆಜ್ಞೆ ನೀಡಿ ದುದು (ಆಶ್ರಮ 36/36–43). 'ಕುಂತಿಗೆ ವಿಶೇಷ ಪ್ರೀತಿಪಾತ್ರನಾದ ಮಾದ್ರಿ ಕುಮಾರ ಸಹದೇವನೂ, ಆಕೆ ಬೆಂಕಿಯಲ್ಲಿ ದಗ್ಧಳಾದಾಗ ರಕ್ಷಿಸಲಾರದಾದನು' – ಹೀಗೆ ಹೇಳಿ ಯುಧಿಷ್ಠಿರನು ವಿಲಪಿಸಿದನು (ಆಶ್ರಮ 38/18–19). ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ ಸಹದೇವ ಮತ್ತು ದ್ರೌಪದಿ – ಈ ಆರು ವ್ಯಕ್ತಿಗಳು ಒಂದೇ ಹೃದಯವನ್ನಿರಿಸಿಕೊಂಡಿದ್ದರು (ಮೌಸಲ 17/3). ಮಹಾಪ್ರಸ್ಥಾನದ ಕುರಿತು ಯುಧಿಷ್ಠಿರನು ಕೈಗೊಂಡ ನಿಶ್ಚಯಕ್ಕೆ ಈತನ ಅನುಮೋದನೆ (ಮಹಾಪ್ರ 1/5). ಸಹೋದರ ರೊಂದಿಗೆ ಈತನ ಮಹಾಪ್ರಸ್ಥಾನಯಾತ್ರೆ (ಮಹಾಪ್ರ 1/22–25). ಆ ಯಾತ್ರೆಯಲ್ಲಿ ನಕುಲನ ಹಿಂದೆ ದ್ರೌಪದಿ ಮುಂದೆ ಈತ ನಡೆಯುತ್ತಿದ್ದನು (ಮಹಾಪ್ರ 1/31–32). ಮಹಾಪರ್ವತ ಮೇರುವಿನ ಬಳಿ ದ್ರೌಪದಿ ಪತನ ಹೊಂದಿದ ಬಳಿಕ, ದಾರಿಯಲ್ಲಿ ಸಹ ದೇವನೂ ಧರಾಶಾಯಿಯಾದನು. ಭೀಮಸೇನನು ಕೇಳಿದಾಗ ಯುಧಿಷ್ಠಿರನು ಈತನ ಪತನದ ಕಾರಣವನ್ನು ಹೇಳಿದುದು (ಮಹಾಪ್ರ 2/11). ಮಹಾಭಾರತದಲ್ಲಿ ಬಂದಿರುವ ಸಹದೇವನ ಹೆಸರುಗಳು – ಆಶ್ವಿನೇಯ, ಅಶ್ವಿನೀಸುತ, ಅಶ್ವಿಸುತ, ಭರತಶಾರ್ದೂಲ, ಭರತಶ್ರೇಷ್ಠ, ಭರತರ್ಷಭ, ಭರತಸತ್ತಮ, ಕೌರವ್ಯ, ಕುರುನಂದನ, ಮಾದ್ರಿಪುತ್ರ, ಮಾದ್ರವತೀಸುತ, ಮಾದ್ರೇಯ, ಮಾದ್ರೀನಂದನ, ಮಾದ್ರೀನಂದಕರ, ಮಾದ್ರೀತನುಜ, ನಕುಲಾನುಜ, ಪಾಂಡವ, ಪಾಂಡುನಂದನ, ಪಾಂಡುಪುತ್ರ, ಪಾಂಡುಸುತ, ತಂತಿಪಾಲ, ಯಮ, ಯಮಜ, ಮಾದ್ರಿಸುತ ಇತ್ಯಾದಿ.

(2) ಒಬ್ಬ ಮಹರ್ಷಿ. ಈತ ಇಂದ್ರ ಸಭೆಯಲ್ಲಿರುತ್ತಿದ್ದನು (ಸಭಾ 7/16).

(3) ಒಬ್ಬ ಪ್ರಾಚೀನ ರಾಜ. ಇವನು ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/17). ಆಚಾರ್ಯ ನೀಲಕಂಠರ ಅಭಿಪ್ರಾಯ ಪ್ರಕಾರ, ಇವನು ಸುಪ್ರಸಿದ್ಧ ರಾಜ ಸೃಂಜಯನ ಮಗ ನಾಗಿದ್ದನು. ಇವನು ಯಮುನೆಯ ಅಗ್ನಿಶಿರ ವೆಂಬ ತೀರ್ಥದಲ್ಲಿ ಒಂದು ಲಕ್ಷ ಸ್ವರ್ಣಮುದ್ರೆ ಗಳ ದಕ್ಷಿಣೆಯನ್ನಿತ್ತು, ವಿಶಾಲಯಜ್ಞವನ್ನು ಪೂರೈಸಿದ್ದನು (ವನ 90/5–7).

(4) ಜರಾಸಂಧನ ಪುತ್ರ, ಇವನಿಗೆ ಇಬ್ಬರು ಸಹೋದರಿಯರಿದ್ದರು. ಅವರನ್ನು ಕಂಸನಿಗೆ ವಿವಾಹಮಾಡಿಕೊಡಲಾಗಿತ್ತು. ಅವರ ಹೆಸರು– ಅಸ್ತಿ ಮತ್ತು ಪ್ರಾಪ್ತಿ (ಸಭಾ 14/31). ಇವನು ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/8). ಜರಾಸಂಧನು ಇವನ ರಾಜ್ಯಾಭಿಷೇಕಕ್ಕೆ ಆಜ್ಞೆ ನೀಡಿದುದು (ಸಭಾ 22/31). ತಂದೆಯು ಕೊಲ್ಲಲ್ಪಟ್ಟಾಗ ಇವನು ಕಾಣಿಕೆ ತೆಗೆದುಕೊಂಡು ಬಂದು ಭಗವಾನ್ ಶ್ರೀಕೃಷ್ಣನಿಗೆ ಶರಣಾಗತ ನಾದುದು. ಶ್ರೀಕೃಷ್ಣನು ಇವನಿಗೆ ಅಭಯವನ್ನಿತ್ತು, ತಂದೆಯ ರಾಜ್ಯದಲ್ಲಿ ಅಭಿಷಿಕ್ತನಾಗಿ ಮಾಡಿ ದುದು ಮತ್ತು ಇವನನ್ನು ತನ್ನ ಅಭಿನ್ನ ಸ್ನೇಹಿತನಾಗಿ ಮಾಡಿಕೊಂಡದ್ದು. ಭೀಮ ಮತ್ತು ಅರ್ಜುನನಿಂದಲೂ ಈತನಿಗೆ ಸತ್ಕಾರ ನಡೆದುದು (ಸಭಾ 24/42). ಒಂದು ಅಕ್ಷೌಹಿಣೀಸೇನೆ ಯೊಂದಿಗೆ ಇವನು ಯುಧಿಷ್ಠಿರನ ಸಹಾಯಕ್ಕೆ ಬಂದುದು (ಉದ್ಯೋಗ 19/8). ಸಂಜಯನಿಂದ ಇವನ ಪರಾಕ್ರಮದ ವರ್ಣನೆ (ಉದ್ಯೋಗ 50/48). ಯುಧಿಷ್ಠಿರನ ಸೇನೆಯ ಏಳು ಮಂದಿ ಸೇನಾಪತಿಗಳಲ್ಲಿ ಒಬ್ಬ ಮಗಧ ರಾಜ

ಸಹದೇವನೂ ಆಗಿದ್ದನು. ಯುಧಿಷ್ಠಿರನು ಆ ಪದವಿಯಲ್ಲಿ ಇವನಿಗೆ ಅಭಿಷೇಕ ಮಾಡಿದ್ದನು (ಉದ್ಯೋಗ 157/11–14). ಇವನ ಕುದುರೆಗಳ ವರ್ಣನೆ (ದ್ರೋಣ 23/48). ದ್ರೋಣಾಚಾರ್ಯ ನಿಂದ ಇವನ ವಧೆ (ದ್ರೋಣ 125/45). ಮಹಾಭಾರತದಲ್ಲಿ ಬಂದಿರುವ ಸಹದೇವನ ಹೆಸರುಗಳು – ಜರಾಸಂಧಸುತ, ಜರಾಸಂಧಾತ್ಮಜ, ಜಾರಸಂಧಿ ಮತ್ತು ಮಾಗಧ.

**ಸಹಭೋಜನ** – ಗರುಡನ ಪ್ರಮುಖ ಸಂತಾನಗಳ ಪರಂಪರೆಯಲ್ಲಿ ಹುಟ್ಟಿದ ಒಂದು ಪಕ್ಷಿ (ಉದ್ಯೋಗ 101/12).

**ಸಹಸ್ರಚಿತ್ಯ** – ಒಬ್ಬ ಪ್ರಾಚೀನ ರಾಜ. ಇವನು ಒಬ್ಬ ಬ್ರಾಹ್ಮಣನಿಗಾಗಿ ತನ್ನ ಪ್ರಾಣದ ಬಲಿದಾನವನ್ನಿತ್ತು ಸ್ವರ್ಗಪ್ರಾಪ್ತಿ ಹೊಂದಿದ್ದನು (ಅನು 137/20). ಈ ತೇಜಸ್ವಿರಾಜ ಕೇಕಯ ದೇಶದ ಪ್ರಜೆಗಳ ಪಾಲನೆ ಮಾಡುತ್ತಿದ್ದನು ಮತ್ತು ರಾಜರ್ಷಿ ಶತಯೂಪನ ಪಿತಾಮಹನಾಗಿದ್ದನು. ಇವನು ತನ್ನ ಪರಮ ಧರ್ಮಾತ್ಮನಾದ ಜ್ಯೇಷ್ಠ ಪುತ್ರನಿಗೆ ರಾಜ್ಯಭಾರವನ್ನೊಪ್ಪಿಸಿ, ತಪಸ್ಸಿಗಾಗಿ ಕಾಡಿಗೆ ಹೋದನು. ಅಲ್ಲಿ ತನ್ನ ಕಠಿನ ತಪಸ್ಸನ್ನು ಪೂರ್ಣಗೊಳಿಸಿ ಇಂದ್ರಲೋಕವನ್ನು ಪಡೆದನು. ತಪಸ್ಸಿನಿಂದ ಇವನ ಎಲ್ಲಾ ಪಾಪಗಳು ಭಸ್ಮವಾಗಿದ್ದವು (ಆಶ್ರಮ 20/6–9).

**ಸಹಸ್ರಜಿತ್** – ಮಹಾಯಶಸ್ವಿಯಾದ ಒಬ್ಬ ರಾಜರ್ಷಿ. ಇವನು ಬ್ರಾಹ್ಮಣನಿಗಾಗಿ ತನ್ನ ಪ್ರೀತಿಯ ಪ್ರಾಣಗಳನ್ನು ತ್ಯಾಗ ಮಾಡಿ ಉತ್ತಮ ಲೋಕವನ್ನು ಪಡೆದಿದ್ದನು (ಶಾಂತಿ 234/31).

**ಸಹಸ್ರಜ್ಯೋತಿ** – ಸುಭ್ರಾಟನ ಮೂವರು ಪುತ್ರರಲ್ಲಿ ಒಬ್ಬ. ಇವನಿಗೆ ಹತ್ತು ಲಕ್ಷ ಮಕ್ಕಳಿದ್ದರು (ಆದಿ 1/46).

**ಸಹಸ್ರಪಾದ** – ಒಬ್ಬ ಪ್ರಾಚೀನ ಋಷಿ. ಇವನು ಶಾಪವಶದಿಂದ ಡುಂಡುಭವೆಂಬ ಸರ್ಪವಾಗಿದ್ದನು. ಇವನು ರುರುವಿಗೆ ತನ್ನ ಪರಿಚಯವನ್ನಿತ್ತಿದ್ದು (ಆದಿ 10/7). ಇವನ ಆತ್ಮಕಥೆ ಮತ್ತು ಇವನಿಂದ ರುರುವಿಗೆ ಅಹಿಂಸೆಯ ಉಪದೇಶ (ಆದಿ 11 ಅಧ್ಯಾಯ). ರುರುವಿನೊಂದಿಗೆ ಸರ್ಪ ಸತ್ರದ ಕುರಿತು ಜಿಜ್ಞಾಸೆ ಮಾಡಿದಾಗ 'ನೀನು ಬ್ರಾಹ್ಮಣರ ಮುಖದಿಂದ ಆಸ್ತೀಕನ ಇತಿಹಾಸವನ್ನು ಕೇಳುವೆ' ಎಂದು ರುರುವಿಗೆ ಹೇಳಿ ಈತ ಅಂತರ್ಧಾನನಾದುದು (ಆದಿ 12/3). ಇವನು ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/22).

**ಸಹಸ್ರಬಾಹು** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/59).

**ಸಹಸ್ರವಾಕ್** (ಸದಃಸುವಾಕ್) – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/100; ಆದಿ 116/9).

**ಸಹಾ** – ಒಬ್ಬ ಅಪ್ಸರೆ. ಈಕೆ ಅರ್ಜುನನ ಸ್ವಾಗತದಲ್ಲಿ, ಇಂದ್ರಭವನದಲ್ಲಿ ನರ್ತನ ಮಾಡಿದ್ದಳು (ವನ 43/30).

**ಸಹೋಢ** – ಒಂದು ರೀತಿಯ ಮಗ. ಇಂತಹನನ್ನು ಅಬಂಧು ದಾಯಾದನೆನ್ನುತ್ತಾರೆ (ಆದಿ 119/35). (ಕನ್ಯಾವಸ್ಥೆಯಲ್ಲಿಯೇ ಗರ್ಭವತಿಯಾಗಿ ವಿವಾಹಮಾಡಲ್ಪಟ್ಟವಳ ಗರ್ಭದಿಂದ ಹುಟ್ಟಿದ ಪುತ್ರ ಸಹೋಢನೆನ್ನಿಸುತ್ತಾನೆ).

**ಸಹ್ಯ** – ಲವಣ ಸಮುದ್ರ ದಡದಲ್ಲಿರುವ ಒಂದು ಪರ್ವತ. ಇದು ಸೀತಾನ್ವೇಷಣೆಗೆ ಹೋಗಿದ್ದ ಹನುಮಂತನೇ ಮೊದಲಾದ ವಾನರರ ಮಾರ್ಗದಲ್ಲಿ ಕಾಣಲು ಸಿಕ್ಕಿತ್ತು (ವನ 282/43). ಈ ಪರ್ವತದ ಮೇಲೆ ದೇವರಾಜ ನಹುಷನು ಅಪ್ಸರೆಯರು ಮತ್ತು ದೇವಕನ್ಯೆಯರ ಜೊತೆಯಲ್ಲಿ ವಿಹಾರಮಾಡಿದ್ದನು (ಉದ್ಯೋಗ 11/12–13). ಇದು ಭಾರತವರ್ಷದ ಏಳು ಕುಲಪರ್ವತಗಳಲ್ಲಿ ಒಂದಾಗಿದೆ (ಭೀಷ್ಮ 9/11).

**ಸಾಂಯಮನಿ** – ಸೋಮದತ್ತ ಪುತ್ರ ಶಲನ ನಾಮಾಂತರ (ಭೀಷ್ಮ 61/11).

**ಸಾಗರಕ** – 'ಸಾಗರ' ಜನಪದದ ನಿವಾಸಿ ಕ್ಷತ್ರಿಯ ರಾಜ. ಇವನು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 52/18).

**ಸಾಗರೋದಕ** – ಸಮುದ್ರದ ತೀರ್ಥಸ್ವರೂಪ ಜಲ. ಇದರಲ್ಲಿ ಸ್ನಾನಮಾಡಿ ಮನುಷ್ಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ (ಅನು 25/9).

**ಸಾಜಾಶ್ವ** – ಒಬ್ಬ ಪ್ರಾಚೀನ ರಾಜ. ಇವನು ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10).

**ಸಾಙ್ಕೃತಿ** – (1) ಒಬ್ಬ ರಾಜ. ಇವನು ಯಮನ

ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/10).

(2) ಅತ್ರಿವಂಶದಲ್ಲಿ ಹುಟ್ಟಿದ ಒಬ್ಬ ಋಷಿ. ಇವನು ಶಿಷ್ಯರಿಗೆ ನಿರ್ಗುಣ, ಬ್ರಹ್ಮನ ಉಪದೇಶ ನೀಡಿ ಉತ್ತಮ ಲೋಕಗಳನ್ನು ಪ್ರಾಪ್ತಿಸಿಕೊಂಡಿದ್ದನು (ಶಾಂತಿ 234/22). ಇವನು ವಾನಪ್ರಸ್ಥ ಧರ್ಮದ ಪಾಲನೆ ಮತ್ತು ಪ್ರಸಾರಮಾಡಿ ಸ್ವರ್ಗವನ್ನು ಪಡೆದನು (ಶಾಂತಿ 244/17).

**ಸಾತ್ಯಕಿ** – ವೃಷ್ಣಿವಂಶದ ಶಿನಿಕುಮಾರ ಸತ್ಯಕನ ಮಗ (ಆದಿ 63/105). ಈತ ವೃಷ್ಣಿಕುಲ ಭೂಷಣ, ಸತ್ಯಪ್ರತಿಜ್ಞ ಮತ್ತು ಶತ್ರುಮರ್ದನ ವೀರನಾಗಿದ್ದನು ಮತ್ತು ಮರುತ್ ದೇವತೆಗಳ ಅಂಶದಿಂದ ಹುಟ್ಟಿದ್ದನು (ಆದಿ 67/79). ಇವನು ದ್ರೌಪದೀ ಸ್ವಯಂವರಕ್ಕೆ ಆಗಮಿಸಿದ್ದನು (ಆದಿ 185/18). ಅರ್ಜುನ ಮತ್ತು ಸುಭದ್ರೆಯರಿಗಾಗಿ ವರದಕ್ಷಿಣೆ ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಬಂದಿದ್ದನು (ಆದಿ 220/31). ಸಾತ್ಯಕಿಯ ಮುಖ್ಯ ಹೆಸರು ಯುಯುಧಾನನೆಂದಾಗಿತ್ತು. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು ಮತ್ತು ಇವನು ಅಲ್ಲಿಯೇ ಅರ್ಜುನನಿಂದ ಧನುರ್ವೇದದ ಶಿಕ್ಷಣ ಪಡೆದಿದ್ದನು (ಸಭಾ 4/34–36). ವೃಷ್ಣವಾಂಶದ ಯಾದವರ ಏಳುಮಂದಿ ಅತಿರಥಿ ವೀರರಲ್ಲಿ ಇವನು ಗಣಿಸಲ್ಪಟ್ಟಿದ್ದಾನೆ (ಸಭಾ 14/57–58). ಯುಧಿಷ್ಠಿರನ ಅಭಿಷೇಕ ಕಾಲದಲ್ಲಿ, ಈತ ಅವನ ಮೇಲೆ ಛತ್ರ ಹಿಡಿದಿದ್ದನು (ಸಭಾ 53/13). ಪ್ರಭಾಸ ಕ್ಷೇತ್ರದಲ್ಲಿ ಪಾಂಡವರ ದುಃಖ ನೋಡಿ ಇವನ ಶೌರ್ಯಪೂರ್ಣ ಉದ್ಗಾರ (ವನ 120/1–22). ಇವನು ಉಪಪ್ಲವ್ಯ ನಗರದಲ್ಲಿ ಅಭಿಮನ್ಯುವಿನ ವಿವಾಹೋತ್ಸವದಲ್ಲಿ ಸಮ್ಮಿಲಿತನಾಗಿದ್ದನು (ವಿರಾಟ 72/21). ಬಲರಾಮನ ಹೇಳಿಕೆಯನ್ನು ಟೀಕಿಸುತ್ತಾ ಇವನ ವಿರೋಚಿತ ಉದ್ಗಾರ (ಉದ್ಯೋಗ 3 ಅಧ್ಯಾಯ). ಇವನು ವಿಶಾಲ ಚತುರಂಗ ಸೇನೆಯೊಂದಿಗೆ ಯುಧಿಷ್ಠಿರನ ಬಳಿಗೆ ಬಂದುದು (ಉದ್ಯೋಗ 19/1). ಸಂಜಯನಿಂದ ಇವನ ಪರಾಕ್ರಮದ ವರ್ಣನೆ (ಉದ್ಯೋಗ 50/39). ಶಾಂತಿದೂತನಾಗಿ ಕೌರವರಲ್ಲಿಗೆ ಹೋಗಲು ಸಿದ್ಧನಾದ ಕೃಷ್ಣನಲ್ಲಿ ಯುದ್ಧಕ್ಕೇ ತನ್ನ ಸಮ್ಮತಿ ನೀಡಿದುದು (ಉದ್ಯೋಗ 81/5–7). ಶ್ರೀಕೃಷ್ಣನು ಸಾತ್ಯಕಿಯೊಡನೆ ತನ್ನ ರಥದಲ್ಲಿ ಅಸ್ತ್ರಶಸ್ತ್ರಗಳನ್ನು ಇಡಲು ಹೇಳಿದುದು ಮತ್ತು ಇವನನ್ನು ರಥದಲ್ಲಿ ಕುಳ್ಳಿರಿಸಿ ಜೊತೆಯಲ್ಲಿ ಕರಕೊಂಡು ಹೋದುದು (ಉದ್ಯೋಗ 83/12–22). ದುರ್ಯೋಧನನ ಒಳಸಂಚಿನ ರಹಸ್ಯವನ್ನು ಭೇದಿಸಿದುದು (ಉದ್ಯೋಗ 130/14–17). ಪ್ರಥಮ ದಿನದ ಸಂಗ್ರಾಮದಲ್ಲಿ ಕೃತವರ್ಮಾನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/12–13). ಕಲಿಂಗ ಸೇನೆಯನ್ನು ಪರಾಜಯಗೊಳಿಸಿದ ಬಳಿಕ ಭೀಮಸೇನನನ್ನು ಅಭಿನಂದಿಸಿದುದು (ಭೀಷ್ಮ 54/121–122). ಭೀಷ್ಮನ ಬಾಣಗಳಿಂದ ಆಚ್ಛಾದಿತನಾದ ಅರ್ಜುನನ ಸಹಾಯಕ್ಕೆ ತಲುಪಿದುದು (ಭೀಷ್ಮ 59/78). ಭೂರಿಶ್ರವನೊಂದಿಗೆ ಇವನ ಯುದ್ಧ (ಭೀಷ್ಮ 64/1–2). ಭೀಷ್ಮನಿಂದ ಸಾರಥಿ ಕೊಲ್ಲಲ್ಪಟ್ಟಾಗ ಇವನ ಕುದುರೆಗಳು ರಥವನ್ನು ಎಳಕೊಂಡು ಓಡಿದುದು (ಭೀಷ್ಮ 73/28–29). ಭೂರಿಶ್ರವನೊಂದಿಗೆ ಇವನ ಯುದ್ಧ. ಅವನಿಂದ ಈತನ ಹತ್ತು ಪುತ್ರರ ವಧೆ (ಭೀಷ್ಮ 74/1–27). ಇವನಿಂದ ಅಲಂಬುಷನ ಪರಾಜಯ (ಭೀಷ್ಮ 72/45). ಅಶ್ವತ್ಥಾಮನನ್ನು ಮೂರ್ಛೆಗೊಳಿಸಿದುದು (ಭೀಷ್ಮ 101/47). ಭೀಷ್ಮನೊಂದಿಗೆ ಇವನ ಯುದ್ಧ (ಭೀಷ್ಮ 104/29–36). ದುರ್ಯೋಧನನನೊಂದಿಗೆ ದ್ವಂದ್ವಯುದ್ಧ (ಭೀಷ್ಮ 110/14; ಭೀಷ್ಮ 111/14–18). ಅಲಂಬುಷನೊಂದಿಗೆ ಯುದ್ಧ (ಭೀಷ್ಮ 111/1–6). ಭಗದತ್ತನೊಂದಿಗೆ ಈತನ ಯುದ್ಧ (ಭೀಷ್ಮ 111/7–13). ಅಶ್ವತ್ಥಾಮನೊಂದಿಗೆ ದ್ವಂದ್ವಯುದ್ಧ (ಭೀಷ್ಮ 116/9–12). ಧೃತರಾಷ್ಟ್ರನಿಂದ ಇವನ ಪರಾಕ್ರಮದ ವರ್ಣನೆ (ದ್ರೋಣ 10/33–39). ಕೃತವರ್ಮಾನೊಂದಿಗೆ ಯುದ್ಧ (ದ್ರೋಣ 14/35–36; ದ್ರೋಣ 25/8–9). ಕ್ಷೇಮಧೂರ್ತಿ ಮತ್ತು ಬೃಹಂತನೊಂದಿಗೆ ಯುದ್ಧ (ದ್ರೋಣ 25/47–48). ಭಗದತ್ತನ ಆನೆಯಿಂದ ಇವನ ರಥ ಎಸೆಯಲ್ಪಟ್ಟದ್ದು (ದ್ರೋಣ 26/47–48). ಕರ್ಣನೊಂದಿಗೆ ಯುದ್ಧ (ದ್ರೋಣ 32/67–70). ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ಇವನ ರಣಯಾತ್ರೆ (ದ್ರೋಣ 84/21). ಅರ್ಜುನನ ಆದೇಶ ಪ್ರಕಾರ ಯುಧಿಷ್ಠಿರನ ರಕ್ಷಣೆಗೆ ಹೋದುದು (ದ್ರೋಣ 84/35). ದುಃಶಾಸನ

ನೊಂದಿಗೆ ಯುದ್ಧ (ದ್ರೋಣ 96/14–17). ಈತ ದ್ರೋಣಾಚಾರ್ಯರ ಪ್ರಹಾರದಿಂದ ಧೃಷ್ಟದ್ಯುಮ್ನ ನನ್ನು ರಕ್ಷಿಸಿದುದು (ದ್ರೋಣ 97/32). ದ್ರೋಣಾಚಾರ್ಯನೊಂದಿಗೆ ಅದ್ಭುತ ಸಂಗ್ರಾಮ ಮತ್ತು ಎಡೆಬಿಡದೆ ಆತನ ನೂರು ಬಿಲ್ಲುಗಳನ್ನು ತುಂಡರಿಸಿದುದು (ದ್ರೋಣ 98 ಅಧ್ಯಾಯ). ವ್ಯಾಘ್ರದತ್ತನೊಂದಿಗೆ ಇವನ ಯುದ್ಧ (ದ್ರೋಣ 106/14). ಇವನಿಂದ ವ್ಯಾಘ್ರದತ್ತನ ವಧೆ (ದ್ರೋಣ 107/32). ದ್ರೋಣಾಚಾರ್ಯನಿಂದ ಈತ ಗಾಯಗೊಂಡದ್ದು (ದ್ರೋಣ 110/2–13). ಯುಧಿಷ್ಠಿರನಿಂದ ಅರ್ಜುನನ ಸಹಾಯಕ್ಕೆ ಹೋಗುವಂತೆ ಆದೇಶಸಿಕ್ಕಿದಾಗ, ಅವನಿಗೆ ಉತ್ತರ ವಿತ್ತದ್ದು (ದ್ರೋಣ 111/3–39). ಅರ್ಜುನನ ಬಳಿಗೆ ಹೋಗಲು ಸಿದ್ಧತೆ ಮತ್ತು ಪ್ರಸ್ಥಾನ (ದ್ರೋಣ 112/4–53). ಭೀಮಸೇನನನ್ನು ಯುಧಿಷ್ಠಿರನ ರಕ್ಷಣೆಗಾಗಿ ಹಿಂತಿರುಗಿಸಿದುದು (ದ್ರೋಣ 112/71–76). ಇವನಿಂದ ಕೌರವ ಸೇನೆಯ ಸಂಹಾರ (ದ್ರೋಣ 113/6–20). ದ್ರೋಣಾಚಾರ್ಯನೊಂದಿಗೆ ಯುದ್ಧಮಾಡಿ, ಅವನನ್ನು ಬಿಟ್ಟು ಮುಂದುವರಿದುದು (ದ್ರೋಣ 113/21–34). ಕೃತವರ್ಮನೊಂದಿಗೆ ಯುದ್ಧ ಮತ್ತು ಅವನನ್ನು ಗಾಯಗೊಳಿಸಿ ಮುಂದು ವರಿದುದು (ದ್ರೋಣ 113/46–60). ಇವನಿಂದ ಕೃತವರ್ಮನ ಪರಾಜಯ (ದ್ರೋಣ 115/10–11). ಜಲಸಂಧನ ವಧೆ (ದ್ರೋಣ 115/52–53). ದುರ್ಯೋಧನನ ಪರಾಜಯ (ದ್ರೋಣ 116/24–25). ಇವನಿಂದ ಕೃತವರ್ಮನ ಪರಾಜಯ (ದ್ರೋಣ 116/41). ದ್ರೋಣಾಚಾರ್ಯನ ಪರಾಜಯ (ದ್ರೋಣ 117/30). ಸುದರ್ಶನನ ವಧೆ (ದ್ರೋಣ 118/15). ಸಾರಥಿಯೊಂದಿಗೆ ಸಂವಾದ ಮತ್ತು ಕೌರವಸೇನೆಯನ್ನು ಕಲಕಿದುದು (ದ್ರೋಣ 119 ಅಧ್ಯಾಯ). ಸಹೋದರರ ಸಮೇತ ದುರ್ಯೋಧನನನ್ನು ಪರಾಜಯಗೊಳಿಸಿದುದು (ದ್ರೋಣ 120/42–44). ಇವನಿಂದ ಮ್ಲೇಚ್ಛ ಸೇನಾ ಸಹಿತನಾದ ದುಃಶಾಸನನ ಪರಾಜಯ (ದ್ರೋಣ 121/29–46). ದುಃಶಾಸನನ ಪರಾಜಯ (ದ್ರೋಣ 123/31–34). ರಾಜಾ ಅಲಂಬುಷನ ವಧೆ (ದ್ರೋಣ 140/18). ಅದ್ಭುತ ಪರಾಕ್ರಮ ತೋರಿಸುತ್ತಾ ಈತ ಅರ್ಜುನನ ಬಳಿಗೆ ತಲಪಿದುದು (ದ್ರೋಣ 141/11). ಭೂರಿಶ್ರವನೊಂದಿಗೆ ಯುದ್ಧದಲ್ಲಿ ಪರಾಜಿತನಾಗಿ, ಅವನಿಂದ ಇವನ ಜುಟ್ಟು ಹಿಡಿಯಲ್ಪಟ್ಟದ್ದು (ದ್ರೋಣ 142/51–63). ಆಮರಣ ನಿರಶನ ವ್ರತ ಕೈಕೊಂಡು ಕುಳಿತ ಭೂರಿಶ್ರವನನ್ನು ಈತ ವಧಿಸಿದುದು (ದ್ರೋಣ 143/54). ಕೌರವರ ಆಕ್ಷೇಪಗಳಿಗೆ ಈತ ಉತ್ತರ ನೀಡಿದುದು (ದ್ರೋಣ 143/60–68). ಕರ್ಣನೊಂದಿಗೆ ಯುದ್ಧದಲ್ಲಿ ಆತನನ್ನು ಪರಾಜಯಗೊಳಿಸಿದುದು (ದ್ರೋಣ 147/64–65). ಸೋಮದತ್ತನೊಂದಿಗೆ ಇವನ ಯುದ್ಧ ಮತ್ತು ಸೋಮದತ್ತನ ಪರಾಜಯ (ದ್ರೋಣ 156/29; ದ್ರೋಣ 157/10–11). ಇವನಿಂದ ಸೋಮದತ್ತನ ವಧೆ (ದ್ರೋಣ 162/33). ಭೂರಿಯ ವಧೆ (ದ್ರೋಣ 166/12). ಕರ್ಣ ಮತ್ತು ವೃಷಸೇನನೊಂದಿಗೆ ಯುದ್ಧ ಮತ್ತು ವೃಷಸೇನನನ್ನು ಪರಾಜಯ ಗೊಳಿಸಿದುದು (ದ್ರೋಣ 170/30–43). ಇವನಿಂದ ದುರ್ಯೋಧನನ ಪರಾಜಯ (ದ್ರೋಣ 171/23). ಶ್ರೀಕೃಷ್ಣನೊಡನೆ ಕರ್ಣನು ಅರ್ಜುನನ ಮೇಲೆ ಶಕ್ತಿ ಪ್ರಯೋಗ ಮಾಡದಿರಲು ಕಾರಣ ಕೇಳಿದುದು (ದ್ರೋಣ 182/34). ದುರ್ಯೋಧನನೊಂದಿಗೆ ಸಂವಾದ ಮತ್ತು ಯುದ್ಧ (ದ್ರೋಣ 189/22–48). ಅರ್ಜುನನಿಂದ ಇವನ ಶೌರ್ಯ ಪರಾಕ್ರಮಗಳ ಪ್ರಶಂಸೆ (ದ್ರೋಣ 191/45–53). ದ್ರೋಣಾಚಾರ್ಯನ ವಧಾ ರೂಪವಾದ ಧೃಷ್ಟದ್ಯುಮ್ನನ ಕುಕೃತ್ಯವನ್ನು ಈತ ನಿಂದಿಸಿದುದು (ದ್ರೋಣ 198/8–24). ಧೃಷ್ಟದ್ಯುಮ್ನನನ್ನು ಕೊಲ್ಲಲು ಗದಾಪಾಣಿಯಾಗಿ ಹಾರಿದುದು. ಭೀಮಸೇನ ಮತ್ತು ಸಹದೇವ ಹೀಗೆ ಮಾಡದಂತೆ ಈತನನ್ನು ತಡೆದುದು (ದ್ರೋಣ 198/46–59). ಕೌರವಪಕ್ಷದ ಆರು ಮಂದಿ ಮಹಾರಥಿಗಳನ್ನು ಒಂದೇ ಬಾರಿ ಓಡಿಸಿದುದು (ದ್ರೋಣ 200/53). ಅಶ್ವತ್ಥಾಮನೊಂದಿಗೆ ಯುದ್ಧ ಮತ್ತು ಮೂರ್ಚ್ಛೆ ಹೊಂದಿದುದು (ದ್ರೋಣ 200/56–69). ಇವನಿಂದ ಕೇಕಯ ರಾಜಕುಮಾರ ಅನುವಿಂದನ ವಧೆ (ಕರ್ಣ 13/11). ವಿಂದನ ವಧೆ (ಕರ್ಣ 13/35). ಬಂಗ ರಾಜನ ವಧೆ (ಕರ್ಣ 22/13). ಕರ್ಣನೊಂದಿಗೆ ಯುದ್ಧ (ಕರ್ಣ 30 ಅಧ್ಯಾಯ). ವೃಷಸೇನ

ನೊಂದಿಗೆ ಯುದ್ಧ ಮತ್ತು ಅವನನ್ನು ಪರಾಜಯಗೊಳಿಸಿದುದು (ಕರ್ಣ 48/40). ಶಕುನಿಯನ್ನು ಪರಾಜಯಗೊಳಿಸಿದುದು (ಕರ್ಣ 61/48–49). ಇವನ ಮೂಲಕ ಕರ್ಣಪುತ್ರ ಪ್ರಸೇನನ ವಧೆ (ಕರ್ಣ 82/6). ಶಲ್ಯನೊಂದಿಗೆ ಇವನ ಯುದ್ಧ (ಶಲ್ಯ 13 ಅಧ್ಯಾಯ; ಶಲ್ಯ 15 ಅಧ್ಯಾಯ). ಇವನಿಂದ ಕೃತವರ್ಮನ ಪರಾಜಯ (ಶಲ್ಯ 17/77–78). ಮ್ಲೇಚ್ಛರಾಜ ಶಾಲ್ವನ ವಧೆ (ಶಲ್ಯ 20/26). ಕ್ಷೇಮಧೂರ್ತಿಯ ವಧೆ (ಶಲ್ಯ 21/8). ಕೃತವರ್ಮನ ಪರಾಜಯ (ಶಲ್ಯ 21/29–30). ಸಂಜಯನು ಜೀವಂತ ಹಿಡಿಯಲ್ಪಟ್ಟದ್ದು (ಶಲ್ಯ 25/57–58). ಇವನು ಸಂಜಯನನ್ನು ಕೊಲ್ಲಲು ಸಿದ್ಧನಾದುದು ಮತ್ತು ವ್ಯಾಸರ ಆಜ್ಞೆಯಿಂದ ಆತನನ್ನು ಬಿಟ್ಟದ್ದು (ಶಲ್ಯ 29/38–39). ಶ್ರೀಕೃಷ್ಣನ ಆಜ್ಞೆಯಿಂದ ಯುಧಿಷ್ಠಿರನ ಬಳಿಗೆ ಹೋದುದು ಮತ್ತು ಆತನ ಸಂದೇಶ ತಿಳಿಸಿದುದು (ಶಾಂತಿ 53/12–13). ಶ್ರೀಕೃಷ್ಣನೊಂದಿಗೆ ಹಸ್ತಿನಾಪುರದಿಂದ ದ್ವಾರಕೆಗೆ ಪ್ರಸ್ಥಾನ (ಆಶ್ವ 52/57–58). ಶ್ರೀಕೃಷ್ಣನೊಂದಿಗೆ ರೈವತಕ ಪರ್ವತದಲ್ಲಿ ಆಗುವ ಮಹೋತ್ಸವದಲ್ಲಿ ಸಮ್ಮಿಲಿತನಾದುದು (ಆಶ್ವ 59/17). ಇವನಿಂದ ಅಭಿಮನ್ಯುವಿನ ಶ್ರಾದ್ಧ (ಆಶ್ವ 62/6). ಯುಧಿಷ್ಠಿರನ ಅಶ್ವಮೇಧ ಯಜ್ಞಕ್ಕಾಗಿ ಹಸ್ತಿನಾಪುರಕ್ಕೆ ಆಗಮಿಸಿದುದು (ಆಶ್ವ 66/3). ಸುರಾಪಾನ ಮಾಡಿ ಮದೋನ್ಮತ್ತನಾಗಿ, ಕೃತವರ್ಮನು ನಿದ್ದೆ ಮಾಡುತ್ತಿದ್ದ ಬಾಲಕರ ವಧೆ ಮಾಡಿದ ವಿವರಣೆ ನೀಡುತ್ತಾ ಪರಿಹಾಸ ಮಾಡಿದುದು (ಮೌಸಲ 3/16–18). ಪ್ರದ್ಯುಮ್ನನಿಂದ ಇವನ ಹೇಳಿಕೆಯ ಅನುಮೋದನೆ ಮತ್ತು ಕೃತವರ್ಮನು ಭೂರಿಶ್ರವನ ವಧೆಯ ವಿಷಯ ಹೇಳಿ ಈತನನ್ನು ತಿರಸ್ಕರಿಸಿದುದು (ಮೌಸಲ 3/19–21). ಇವನು ಶ್ರೀಕೃಷ್ಣನಿಗೆ ಕೃತವರ್ಮನಿಂದ ಸ್ಯಮಂತಕಮಣಿಯ ಅಪಹರಣ ಮತ್ತು ಸತ್ರಾಜಿತನ ವಧೆಯ ಸ್ಮರಣೆ ನೀಡಿದುದು ಮತ್ತು ಸತ್ಯಭಾಮೆ ಅಳುತ್ತಿರುವುದನ್ನು ನೋಡಿ, ಸಿಟ್ಟಿನಿಂದ ಎದ್ದು ಕತ್ತಿಯಿಂದ ಕೃತವರ್ಮನ ತಲೆ ಕಡಿದು ಹಾಕಿದುದು (ಮೌಸಲ 3/22–28). ಈತ ಇತರರನ್ನೂ ವಧಿಸುವುದನ್ನು ನೋಡಿ, ಶ್ರೀಕೃಷ್ಣನು ಇವನನ್ನು ತಡೆಯಲು ಓಡಿದುದು, ಭೋಜರೂ, ಅಂಧಕರೂ ಒಗ್ಗಟ್ಟಾಗಿ ಇವನನ್ನು ನಾಲ್ಕೂ ಕಡೆಗಳಿಂದ ಮುತ್ತಿಗೆ ಹಾಕಿ, ಎಂಜಲು ಪಾತ್ರೆಗಳಿಂದ ಹೊಡೆದುದು. ಇವರನ್ನು ಬದುಕಿಸಲು ಪ್ರದ್ಯುಮ್ನನು ಮಧ್ಯಕ್ಕೆ ಹಾರಿದುದು. ಪ್ರದ್ಯುಮ್ನ ಸಹಿತನಾಗಿ ಸಾತ್ಯಕಿ, ಭೋಜ ಮತ್ತು ಅಂಧಕರೊಡನೆ ಹೋರಾಡಿದುದು ಮತ್ತು ಶ್ರೀಕೃಷ್ಣನು ನೋಡುತ್ತಿದ್ದಂತೆ ಬಹುಸಂಖ್ಯಾತ ವಿರೋಧಿಗಳಿಂದ ಹೊಡೆಯಲ್ಪಟ್ಟದ್ದು (ಮೌಸಲ 3/29–33). ಅರ್ಜುನನು ಈತನ ಪ್ರಿಯಪುತ್ರನಾದ ಯೌಯುಧಾನಿಯನ್ನು ಸರಸ್ವತೀ ದಡದ ದೇಶಕ್ಕೆ ಅಧಿಕಾರಿ ಮತ್ತು ನಿವಾಸಿಯಾಗಿ ಮಾಡಿದನು ಮತ್ತು ವೃದ್ಧರನ್ನೂ ಬಾಲಕರನ್ನೂ ಅವನ ಜೊತೆಮಾಡಿಬಿಟ್ಟನು (ಮೌಸಲ 7/71). ಸ್ವರ್ಗಕ್ಕೆ ಹೋಗಿ ಈತ ಮರುದ್ಗಣಗಳಲ್ಲಿ ಸೇರಿದನು (ಸ್ವರ್ಗಾ 4/17–18). ಮಹಾಭಾರತದಲ್ಲಿ ಬಂದಿರುವ ಸಾತ್ಯಕಿಯ ಹೆಸರುಗಳು – ಆನರ್ತ, ಶೈನೇಯ, ಶೈನೇಯನಂದನ, ಶೌರಿ, ಶಿನಿಪೌತ್ರ, ಶಿನಿಪುತ್ರ, ಶಿನಿಸುತ, ಶಿನಿನಪ್ತಾ, ಶಿನಿಪ್ರವರ, ಶಿನಿಪ್ರವೀರ, ಶಿನಿಪುಂಗವ, ಶಿನಿವೀರ, ಶಿನಿವೃಷಭ, ದಾಶಾರ್ಹ, ಮಾಧವ, ಮಾಧವಾಗ್ರ್ಯ, ಮಾಧವಸಿಂಹ, ಮಾಧವೋತ್ತಮ, ಮಧೂದ್ವಹ, ಸಾತ್ವತ, ಸಾತ್ವತಶ್ರೇಷ್ಠ, ಸಾತ್ವತಾಗ್ರ್ಯ, ಸಾತ್ವತಮುಖ್ಯ, ಸಾತ್ವತಪ್ರವರ, ಸಾತ್ವತರ್ಷಭ, ಸಾತ್ಯಕ, ವಾರ್ಷ್ಣೇಯ, ವೃಷ್ಣಿ, ವೃಷ್ಣಿಶಾರ್ದೂಲ, ವೃಷ್ಣಿಕುಲೋದ್ವಹ, ವೃಷ್ಣಿಪ್ರವೀರ, ವೃಷ್ಣಿಪುಂಗವ, ವೃಷ್ಣಿಸಿಂಹ, ವೃಷ್ಣಿವರ, ವೃಷ್ಣಿವೀರ, ವೃಷ್ಣ್ಯಂಧಕಪ್ರವೀರ, ವೃಷ್ಣ್ಯಂಧಕವ್ಯಾಘ್ರ, ಯಾದವ, ಯದೂದ್ವಹ, ಯದೂತ್ತಮ, ಯದುವೀರ, ಯದುವ್ಯಾಘ್ರ, ಮತ್ತು ಯಯುಧಾನ ಇತ್ಯಾದಿ.

**ಸಾತ್ವತ** – (1) ಯದುಕುಲದಲ್ಲಿ ಹುಟ್ಟಿದ ಒಬ್ಬ ಶ್ರೇಷ್ಠ ಮಹಾಪುರುಷ. ಇವನ ವಂಶದಲ್ಲಿ ಹುಟ್ಟಿದವರು ಸಾತ್ವತರೆಂದು ಹೇಳಲ್ಪಡುತ್ತಾರೆ. ಸಾತ್ಯಕಿ ಕೂಡಾ ಸಾತ್ವತ ಕುಲದ ಒಂದು ರತ್ನವಾಗಿದ್ದನು (ಸಭಾ 2/30).

(2) ಶ್ರೀಕೃಷ್ಣನ ಒಂದು ಹೆಸರು ಮತ್ತು ಇದರ ಅರ್ಥ (ಶಾಂತಿ 342/77–78).

**ಸಾದ್ಯಸ್ಕ** – ಒಂದು ಪ್ರಕಾರದ ರಾಜರ್ಷಿಯಜ್ಞ. ಇದು ಒಂದೇ ದಿನದಲ್ಲಿ ಸಮಾಪ್ತವಾಗುವುದಾಗಿದೆ (ವನ 240/17).

**ಸಾಧ್ಯ** – ಒಂದು ದೇವತೆಗಳ ಗಣ. ವಿರಾಟ ಅಂಡದಿಂದ ಇವರು ಪ್ರಕಟಗೊಂಡದ್ದು (ಆದಿ 1/35). ಅಮೃತಕ್ಕಾಗಿ ಗರುಡ ಮತ್ತು ದೇವತೆಗಳೊಳಗೆ ಯುದ್ಧಮಾಡುವಾಗ, ಇವರು ಪಕ್ಷಿ ರಾಜನಿಂದ ಪರಾಜಿತರಾಗಿ ಓಡಿಹೋಗಿದ್ದರು (ಆದಿ 32/16). ವಿಶ್ವಾಮಿತ್ರನ ಪ್ರಭಾವದಿಂದ ಇವರು ಭಯಭೀತರಾಗಿರುವ ವರ್ಣನೆ (ಆದಿ 71/39). ಅರ್ಜುನನ ಜನ್ಮಸಮಯದಲ್ಲಿ ಸಾಧ್ಯ ಗಣ ಅಲ್ಲಿಗೆ ಬಂದಿತ್ತು (ಆದಿ 122/70). ದ್ರೌಪದಿಯ ಸ್ವಯಂವರ ನೋಡುವುದಕ್ಕೋಸ್ಕರ ಇವರು ವಿಮಾನಗಳ ಮೂಲಕ ದ್ರುಪದ ನಗರದ ಆಕಾಶದಲ್ಲಿ ನೆರೆದಿದ್ದರು (ಆದಿ 176/6). ನೈಮಿಷಾರಣ್ಯಕ್ಷೇತ್ರದಲ್ಲಿ ದೇವತೆಗಳಿಂದ ಸಂಯೋಜಿಸಲ್ಪಟ್ಟ ಯಜ್ಞದಲ್ಲಿ ಇವರೆಲ್ಲರೂ ಬಂದಿದ್ದರು (ಆದಿ 196/3). ಖಾಂಡವದಾಹ ಸಮಯದಲ್ಲಿ ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ಯುದ್ಧಕ್ಕಾಗಿ ಇವರು ನಾನಾ ಪ್ರಕಾರದ ಅಸ್ತ್ರಶಸ್ತ್ರ ತೆಗೆದುಕೊಂಡು ಬಂದಿದ್ದರು (ಆದಿ 226/38). ಸಾಧ್ಯರು ಇಂದ್ರಸಭೆಯಲ್ಲಿರುತ್ತಾರೆ (ಸಭಾ 7/22). ಇವರು ಬ್ರಹ್ಮಸಭೆಯಲ್ಲೂ ಅವನ ಆರಾಧನೆಗಾಗಿ ಉಪಸ್ಥಿತರಾಗಿರುತ್ತಾರೆ (ಸಭಾ 11/44). ಸ್ಕಂದ ಮತ್ತು ತಾರಕಾಸುರನ ಯುದ್ಧದ ಸಮಯದಲ್ಲಿ ಇವರೂ ದಾನವರೊಂದಿಗೆ ಯುದ್ಧ ಮಾಡಿದ್ದರು (ವನ 231/73). ದತ್ತಾತ್ರೇಯನಲ್ಲಿ, ಆತನ ಉದಾರ ವಾಣಿಯನ್ನು ಕೇಳುವುದಕ್ಕೋಸ್ಕರ ಇವರ ಪ್ರಾರ್ಥನೆ (ಉದ್ಯೋಗ 36/3). ಕರ್ಣ ಮತ್ತು ಅರ್ಜುನನ ಯುದ್ಧದಲ್ಲಿ ಇವರು ಅರ್ಜುನನ ವಿಜಯವನ್ನು ಸಮರ್ಥಿಸಿದ್ದರು (ಕರ್ಣ 87/46). ಸ್ಕಂದನ ಜನನ ಕಾಲದಲ್ಲಿ ಇವರು ಆತನನ್ನು ನೋಡಲು ಬಂದಿದ್ದರು (ಶಲ್ಯ 44/29). ಸ್ಕಂದನ ಅಭಿಷೇಕ ಕಾಲದಲ್ಲೂ ಇವರು ಉಪಸ್ಥಿತರಾಗಿದ್ದರು (ಶಲ್ಯ 45/6). ಇವರು ಸ್ಕಂದನಿಗೆ ಸೇನಾಪತಿತ್ವವನ್ನು ಅರ್ಪಿಸಿದ್ದರು (ಶಲ್ಯ 45/53). ಇವರು ರಾಜಾ ಮರುತ್ತನ ಯಜ್ಞದಲ್ಲಿ ಅಡುಗೆ ಪದಾರ್ಥ ಬಡಿಸುವ ಕೆಲಸ ಮಾಡುತ್ತಿದ್ದರು (ಶಾಂತಿ 29/22). ಸಾಧ್ಯರು ಧರ್ಮನ ಪುತ್ರರೆಂದು ಹೇಳಲ್ಪಟ್ಟಿದ್ದಾರೆ (ಶಾಂತಿ 207/23). ಹಂಸ ರೂಪಧಾರಿ ಬ್ರಹ್ಮನೊಂದಿಗೆ ಮೋಕ್ಷ ವಿಷಯವಾಗಿ ಇವರು ಪ್ರಶ್ನೆ ಮಾಡಿದುದು (ಶಾಂತಿ 299 ಅಧ್ಯಾಯ). ಇವರು ಮುಂಜವಾನ್ ಪರ್ವತದಲ್ಲಿ ಭಗವಾನ್ ಶಿವನ ಆರಾಧನೆ ಮಾಡುತ್ತಾರೆ (ಆಶ್ವ 8/1–4).

**ಸಾಂದೀಪನಿ** – ಶ್ರೀಕೃಷ್ಣ ಮತ್ತು ಬಲರಾಮನ ವಿದ್ಯಾಗುರು. ಇವನಲ್ಲಿ ಆ ಇಬ್ಬರೂ ಸಹೋದರರು ಅಧ್ಯಯನಕ್ಕಾಗಿ ಹೋಗಿದ್ದರು. ಇವನು ಅವರಿಗೆ ಷಡಂಗ ಸಹಿತ ವೇದ, ಚಿತ್ರಕಲೆ, ಗಣಿತ, ಗಾಂಧರ್ವವೇದ ಮತ್ತು ವೈದ್ಯಶಾಸ್ತ್ರವನ್ನೂ ಕಲಿಸಿದ್ದನು. ಗಜಶಿಕ್ಷಣ ಮತ್ತು ಅಶ್ವಶಿಕ್ಷಣದ ಜ್ಞಾನಕೂಡಾ ಮಾಡಿಸಿದ್ದನು. ಇವನು ಧನುರ್ವೇದದ ಶ್ರೇಷ್ಠ ಆಚಾರ್ಯನಾಗಿದ್ದನು. ಇವನು ಶ್ರೀಕೃಷ್ಣ ಬಲರಾಮರಿಗೆ ಹತ್ತು ಅಂಗಗಳ ಸಹಿತ, ಸುಪ್ರತಿಷ್ಠಿತ ಹಾಗೂ ರಹಸ್ಯ ಸಹಿತ ಸಂಪೂರ್ಣ ಧನುರ್ವೇದದ ಜ್ಞಾನಪ್ರಾಪ್ತಿ ಮಾಡಿಸಿದ್ದನು (ಅನಂತರ ಸಾಂದೀಪನಿ ಗುರುದಕ್ಷಿಣಾ ರೂಪದಲ್ಲಿ ಈ ಸಹೋದರರೊಡನೆ ತನ್ನ ಸತ್ತುಹೋದ ಮಗನನ್ನು ಕೇಳಿದನು ಮತ್ತು ಅವನನ್ನು ಜೀವಂತಗೊಳಿಸಿ ತಂದುಕೊಡಲು ಆಜ್ಞೆ ಮಾಡಿದನು. ಆಗ ಈ ಇಬ್ಬರು ಸಹೋದರರು ಗುರುದಕ್ಷಿಣಾರೂಪದಲ್ಲಿ ಇವನಿಗೆ ತುಂಬಾ ಧನ ಮತ್ತು ಐಶ್ವರ್ಯವನ್ನು ಕೊಟ್ಟು, ಈತನ ಮೃತಪುತ್ರನನ್ನು ಜೀವಂತವಾಗಿ ಒಪ್ಪಿಸಿದರು (ಸಭಾ 38/29).

**ಸಾಮುದ್ರಕ ತೀರ್ಥ** – ಒಂದು ಪವಿತ್ರ ತೀರ್ಥ. ಇದು ಅರುಂಧತಿ ವಟದ ಸಮೀಪವಿದೆ. ಇದರಲ್ಲಿ ಸ್ನಾನಮಾಡಿ, ಬ್ರಹ್ಮಚರ್ಯ ಪಾಲನೆಯೊಂದಿಗೆ ಏಕಾಗ್ರಚಿತ್ತನಾಗಿ ಮೂರು ರಾತ್ರಿ ಉಪವಾಸ ಮಾಡಿದ್ದರಿಂದ, ಅಶ್ವಮೇಧ ಯಜ್ಞ ಮತ್ತು ಸಹಸ್ರಗೋದಾನದ ಫಲ ಸಿಗುತ್ತದೆ. ಆತ ತನ್ನ ಕುಲದ ಉದ್ಧಾರ ಮಾಡುತ್ತಾನೆ (ವನ 84/41–42).

**ಸಾಮುದ್ರನಿಷ್ಕುಟ** – ಒಂದು ಭಾರತೀಯ ಜನಪದ (ಭೀಷ್ಮ 9/49).

**ಸಾಮ್ಬ** – (1) ಶ್ರೀಕೃಷ್ಣನಿಂದ ಜಾಂಬವತಿಯ ಗರ್ಭದಲ್ಲಿ ಹುಟ್ಟಿದ ಒಬ್ಬ ಯಾದವ ವೀರ. ಇವನು ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/17). ಅರ್ಜುನ ಮತ್ತು ಸುಭದ್ರೆಗಾಗಿ ವರದಕ್ಷಿಣೆ ತೆಗೆದುಕೊಂಡು ಬಂದಿದ್ದನು (ಆದಿ 220/31). ಇವನು ಅರ್ಜುನನಿಂದ ಧನು

ವೇದದ ಶಿಕ್ಷಣ ಪಡೆದಿದ್ದನು. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/34–35). ದ್ವಾರಕೆಯ ಏಳುಮಂದಿ ಅತಿರಥ ವೀರರಲ್ಲಿ ಇವನೂ ಒಬ್ಬನಾಗಿದ್ದನು (ಸಭಾ 14/57). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲೂ ಉಪಸ್ಥಿತನಾಗಿದ್ದನು (ಸಭಾ 34/16). ಶಾಲ್ವನ ಸೇನಾಪತಿ ಮತ್ತು ಮಂತ್ರಿಯಾದ ಕ್ಷೇಮವೃದ್ಧಿಯೊಂದಿಗೆ ಈತನ ಯುದ್ಧ ಮತ್ತು ಇವನಿಂದ ಆತನ ಪರಾಜಯ (ವನ 16/9–16). ವೇಗವಂತನೆಂಬ ದೈತ್ಯನೊಂದಿಗೆ ಯುದ್ಧ ಮತ್ತು ಇವನಿಂದ ಆತನ ವಧೆ (ವನ 16/17–20). ಪ್ರಭಾಸ ಕ್ಷೇತ್ರದಲ್ಲಿ ಒಟ್ಟಾಗಿದ್ದ ವೃಷ್ಣಿ ಕುಲದವರು ಮತ್ತು ಪಾಂಡವರ ಮಧ್ಯದಲ್ಲಿ ಸಾತ್ಯಕಿಯಿಂದ ಬಲರಾಮನಲ್ಲಿ ಇವನ ಪರಾಕ್ರಮದ ವರ್ಣನೆ (ವನ 120/13–14). ಇವನು ಉಪಪ್ಲವ್ಯ ನಗರಕ್ಕೆ ಅಭಿಮನ್ಯುವಿನ ವಿವಾಹೋತ್ಸವಕ್ಕೆ ಬಂದಿದ್ದನು (ವಿರಾಟ 72/22). ಇವನು ಯುಧಿಷ್ಠಿರನ ಅಶ್ವಮೇಧ ಯಜ್ಞದ ಸಂದರ್ಭದಲ್ಲಿ ಶ್ರೀಕೃಷ್ಣನೊಂದಿಗೆ ಹಸ್ತಿನಾಪುರಕ್ಕೆ ಆಗಮಿಸಿದ್ದನು (ಆಶ್ವ 66/3). ಸಾರಣಾದಿ ವೀರರು ಸಾಂಬನನ್ನು ಸ್ತ್ರೀವೇಷದಿಂದ ಅಲಂಕರಿಸಿ, ಋಷಿಗಳ ಬಳಿಗೆ ಕರಕೊಂಡು ಹೋದರು, ಮತ್ತು ಅವರೊಡನೆ 'ಈಕೆ ಬಭ್ರುವಿನ ಪತ್ನಿ ಇವಳ ಗರ್ಭದಿಂದ ಏನು ಹುಟ್ಟುತ್ತದೆ' ಎಂದು ಕೇಳಿದರು (ಮೌಸಲ 1/16–17). ಋಷಿಗಳು ಹೇಳಿದರು 'ಭಗವಾನ್ ಕೃಷ್ಣನ ಮಗ ಈ ಸಾಂಬನು ಕಬ್ಬಿಣದ ಒಂದು ಭಯಂಕರ ಒನಕೆಯನ್ನು ಉತ್ಪನ್ನಗೊಳಿಸುತ್ತಾನೆ. ಅದು ವೃಷ್ಣಿ ಮತ್ತು ಅಂಧಕವಂಶದ ವಿನಾಶಕ್ಕೆ ಕಾರಣವಾಗುವುದು." (ಮೌಸಲ 1/19). ಮರುದಿನ ಬೆಳಗಾಗುತ್ತಲೇ ಇವನ ಹೊಟ್ಟೆಯಿಂದ ಒನಕೆಯ ಉತ್ಪತ್ತಿ (ಮೌಸಲ 1/25). ಮೌಸಲ ಯುದ್ಧದಲ್ಲಿ ಇವನು ಕೊಲ್ಲಲ್ಪಟ್ಟದ್ದು (ಮೌಸಲ 3/44). ಮೃತ್ಯುವಿನ ಅನಂತರ ಇವನು ವಿಶ್ವೇದೇವರಲ್ಲಿ ಪ್ರವೇಶ ಹೊಂದಿದನು (ಸ್ವರ್ಗಾ 5/16–18).

(2) ಒಬ್ಬ ಸದಾಚಾರಿ ಮತ್ತು ಅರ್ಥಜ್ಞಾನದಲ್ಲಿ ನಿಪುಣ ಬ್ರಾಹ್ಮಣ. ವನಗಮನಕ್ಕಾಗಿ ಧೃತರಾಷ್ಟ್ರನು ಅನುಮತಿಯಾಚಿಸಿದಾಗ, ಇವನು ಪ್ರಜೆಗಳ ವತಿಯಿಂದ ಆತನಿಗೆ ಸಮಾಧಾನಕರವಾದ ಉತ್ತರ ಕೊಟ್ಟಿದ್ದನು (ಆಶ್ರಮ 10/13–50).

**ಸಾರಂಗಾಶ್ವ** – ಬಿಳುಪು, ನೀಲಿ ಮತ್ತು ಕೆಂಪು ಬಣ್ಣ ಮಿಶ್ರವಾಗಿರುವ ಕುದುರೆ (ದ್ರೋಣ 23).

**ಸಾರಣ** – (1) ಒಬ್ಬ ಯದುವಂಶದ ಕ್ಷತ್ರಿಯ. ಇವನು ವಸುದೇವನಿಂದ ದೇವಕಿಯ ಗರ್ಭದಲ್ಲಿ ಜನಿಸಿದ್ದನು. ಶ್ರೀಕೃಷ್ಣ ಮತ್ತು ಸುಭದ್ರೆಯ ಸಹೋದರನಾಗಿದ್ದನು (ಆದಿ 218/17). ಇವನು ಅರ್ಜುನ ಮತ್ತು ಸುಭದ್ರೆಗೋಸ್ಕರ ವರದಕ್ಷಿಣೆ ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಬಂದಿದ್ದನು (ಆದಿ 220/32). ಈತ ಯುಧಿಷ್ಠಿರನ ಸಭೆಯಲ್ಲಿ ಇರುತ್ತಿದ್ದನು (ಸಭಾ 4/30). ಇವನು ರಾಜಸೂಯ ಯಜ್ಞದಲ್ಲಿ ಭಾಗವಹಿಸಿದ್ದನು (ಸಭಾ 34/15). ಯುಧಿಷ್ಠಿರನ ಅಶ್ವಮೇಧ ಯಜ್ಞದಲ್ಲಿ ಶ್ರೀಕೃಷ್ಣನೊಂದಿಗೆ ಬಂದಿದ್ದನು (ಆಶ್ವ 66/4). ಸಾಂಬನನ್ನು ಸ್ತ್ರೀಯಂತೆ ಮಾಡಿ, ಋಷಿಗಳ ಸಮ್ಮುಖಕ್ಕೆ ತೆಗೆದುಕೊಂಡು ಹೋದ ಯದುಕುಮಾರರಲ್ಲಿ ಇವನು ಪ್ರಧಾನನಾಗಿದ್ದನು (ಮೌಸಲ 1/15).

(2) ರಾವಣನ ಮಂತ್ರಿ. ಇವನು ವಾನರ ರೂಪದಲ್ಲಿ ಶ್ರೀರಾಮನ ಸೇನೆಯೊಳಗೆ ನುಸುಳಿದಾಗ, ವಿಭೀಷಣನಿಂದ ಬಂಧಿಸಲ್ಪಟ್ಟನು. ಶ್ರೀರಾಮನಿಂದ ಇವನ ಬಿಡುಗಡೆ (ವನ 283/52–53).

**ಸಾರಮೇಯ** – ಕಶ್ಯಪ ಪತ್ನಿ ಸರಮೆಯ ಪುತ್ರ ಸಾರಮೇಯ (ನಾಯಿ) (ಆದಿ 3/1). ಜನಮೇಜಯನ ಸಹೋದರರು ಹೊಡೆದಾಗ ತಾಯಿಯ ಮುಂದೆ ಈತ ಅತ್ತದ್ದು (ಆದಿ 3/4).

**ಸಾರಸ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/11).

**ಸಾರಸ್ವತ** – (1) ಒಬ್ಬ ಪ್ರಾಚೀನ ಋಷಿ. ಅಲಂಬುಷಾ ಅಪ್ಸರೆಯನ್ನು ನೋಡಿ ದಧೀಚನ ವೀರ್ಯ ಸ್ಖಲಿತವಾಯಿತು. ಅದನ್ನು ಧರಿಸಿದ ಸರಸ್ವತೀ ನದಿಯ ಗರ್ಭದಿಂದ ಈತ ಹುಟ್ಟಿದ್ದನು (ಶಲ್ಯ 51/7–11). ಇವನ ಸ್ಥಾನ ಸಾರಸ್ವತ ತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಇವನ ಸ್ಥಾನವು 'ತುಂಗಕಾರಣ್ಯ'ವೆಂದೂ ಕೆಲವೆಡೆ ಉಲ್ಲೇಖ ದೊರಕುತ್ತದೆ (ವನ 85/46). ಹನ್ನೆರಡು ವರ್ಷಗಳ ಕ್ಷಾಮಕಾಲದ ಅನಂತರ ಇವನು ಋಷಿಗಳನ್ನು ಶಿಷ್ಯರಾಗಿ ಮಾಡಿಕೊಂಡು ವೇದಗಳನ್ನು ಕಲಿಸಿದ್ದನು (ಶಲ್ಯ 51/3).

(2) ಒಬ್ಬ ಮಹರ್ಷಿ. ಇವನು ಅತ್ರಿಯ ಪುತ್ರ. ಈತ ಪಶ್ಚಿಮ ದಿಕ್ಕಿನಲ್ಲಿ ವಾಸಿಸುತ್ತಾನೆ (ಶಾಂತಿ 208/31).

**ಸಾರಿಕ** – ಯುಧಿಷ್ಠಿರನ ಸಭೆಯಲ್ಲಿ ಉಪಸ್ಥಿತ ನಾಗುವ ಒಬ್ಬ ಋಷಿ (ಸಭಾ 4/13).

**ಸಾರಿಮೇಜಯ** – ಒಬ್ಬ ರಾಜ. ಈತ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/19).

**ಸಾರಿಸೃಕ್ಕ** – ಒಬ್ಬ ಶಾಂರ್ಗಿಕ. ಈತ ಪಕ್ಷಿರೂಪ ಧಾರಿ ಮಂದಪಾಲ ಋಷಿಯಿಂದ ಜರಿತೆಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 227/17). ತನ್ನ ಅಣ್ಣ ಜಾರಿತಾರಿಯೊಡನೆ ತನ್ನ ರಕ್ಷಣೆಗೋಸ್ಕರ ಹೇಳಿದುದು (ಆದಿ 231/3). ಇವನಿಂದ ಅಗ್ನಿಯ ಸ್ತುತಿ (ಆದಿ 231/9–11). ಅಗ್ನಿದೇವನ ಕೃಪೆ ಯಿಂದ ಖಾಂಡವವನದಲ್ಲಿ ಅಗ್ನಿದಾಹದಿಂದ ಇವನ ರಕ್ಷಣೆ (ಆದಿ 231/21).

**ಸಾರ್ಥ**– ವ್ಯಾಪಾರಿಗಳ ಒಂದು ಗುಂಪು (ವನ 64/111). ಕಾಡಾನೆಗಳಿಂದ ಇವರ ವಿನಾಶ (ವನ 65/15).

**ಸಾರ್ವಭೌಮ** – (1) ಸೋಮವಂಶೀರಾಜ ಅಹಂಯಾತಿಯಿಂದ ಕೃತವೀರ್ಯ ಕುಮಾರಿ ಭಾನುಮತಿಯ ಗರ್ಭದಲ್ಲಿ ಹುಟ್ಟಿದವನು (ಆದಿ 95/15). ಇವನ ಭಾರ್ಯೆಯ ಹೆಸರು ಸುನಂದಾ ಎಂದಾಗಿತ್ತು. ಅವಳು ಕೇಕಯ ದೇಶದ ಕನ್ಯೆ ಯಾಗಿದ್ದಳು. ಅವಳ ಗರ್ಭದಿಂದ ಜಯತ್ಸೇನ ನೆಂಬ ಪುತ್ರನು ಹುಟ್ಟಿದನು (ಆದಿ 95/16).

(2) ದಿಗ್ಗಜ ಕುಲದಲ್ಲಿ ಹುಟ್ಟಿದ ಒಂದು ಆನೆ (ದ್ರೋಣ 121/26).

**ಸಾಲಕಟಂಕಟೀ** – ರಾಕ್ಷಸಿಯಾದ ಹಿಡಿಂಬೆಯ ನಾಮಾಂತರ (ಆದಿ 154/10). (ವಿಶೇಷ ನೋಡಿರಿ ಹಿಡಿಂಬಾ).

**ಸಾಲಂಕಾಯನ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/52).

**ಸಾವರ್ಣ** – (1) ಒಬ್ಬ ಮಹರ್ಷಿ. ಇವನು ಯುಧಿಷ್ಠಿರನಸಭೆಯಲ್ಲಿರುತ್ತಿದ್ದನು (ಸಭಾ 4/15).

(2) ಒಬ್ಬ ಭಾವೀ ಮನು. ಇವನ ಮನ್ವಂತರ ಕಾಲದಲ್ಲಿ ಪರಾಶರ ಪುತ್ರ ವ್ಯಾಸನು ಸಪ್ತರ್ಷಿಗಳ ಸ್ಥಾನದಲ್ಲಿ ಪ್ರತಿಷ್ಠಿತನಾಗುವನು (ಅನು 18/42–43).

**ಸಾವರ್ಣೀ** – (1) ಒಬ್ಬ ಋಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/10–12). ಸತ್ಯಯುಗದಲ್ಲಿ ಈತ ಆರುಸಾವಿರ ವರ್ಷಗಳ ವರೆಗೆ ತಪಸ್ಸು ಮಾಡಿದ್ದನು. ಆಗ ಭಗವಾನ್ ಶಂಕರನು ದರ್ಶನಕೊಟ್ಟು, ಇವನಿಗೆ ವಿಖ್ಯಾತ ಗ್ರಂಥಕಾರ ಮತ್ತು ಅಜರ ಅಮರನಾಗುವ ವರಕೊಟ್ಟನು (ಅನು 14/103–104).

(2) ಒಬ್ಬ ಭಾವೀ ಮನು. ಇವನಿಂದ ಕಟ್ಟಲ್ಪಟ್ಟ ಮರ್ಯಾದೆಯನ್ನು ಭಗವಾನ್ ಸೂರ್ಯನು ಉಲ್ಲಂಘಿಸುವುದಿಲ್ಲ (ಉದ್ಯೋಗ 109/11).

**ಸಾವಿತ್ರ** – (1) ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/20).

(2) ಸುಮೇರು ಪರ್ವತದ ಒಂದು ಶಿಖರ. ಇದರ ಇನ್ನೊಂದು ಹೆಸರು ಜ್ಯೋತಿಷ್ಕವೆಂದಾ ಗಿತ್ತು. ಇದು ಎಲ್ಲ ಪ್ರಕಾರದ ರತ್ನಗಳಿಂದ ವಿಭೂಷಿತ, ಅಪ್ರಮೇಯ, ಸಮಸ್ತಲೋಕಗಳಿಗೂ ಅಗಮ್ಯ ಮತ್ತು ಮೂರೂ ಲೋಕಗಳಿಂದಲೂ ಪೂಜಿತವಾಗಿತ್ತು. ಇಲ್ಲಿ ಮೊದಲು ಭಗವಾನ್ ಶಂಕರ ಮತ್ತು ದೇವಿ ಉಮಾ ಇರುತ್ತಿದ್ದರು. ಅನೇಕ ದೇವತೆಗಳೂ, ಋಷಿಗಳೂ ಅವರ ಉಪಾಸನೆಮಾಡುತ್ತಿದ್ದರು. ಗಂಗೆ ದಿವ್ಯರೂಪ ಧರಿಸಿ, ಇಲ್ಲಿ ಮಹಾದೇವನ ಆರಾಧನೆ ಮಾಡುತ್ತಿದ್ದಳು (ಶಾಂತಿ 283/5–18).

(3) ಅಷ್ಟ ವಸುಗಳಲ್ಲಿ ಒಬ್ಬ (ಅನು 150/16–17).

**ಸಾವಿತ್ರೀ** – (1) ಸೂರ್ಯದೇವನ ಪುತ್ರಿ ಮತ್ತು ಬ್ರಹ್ಮನ ಪತ್ನಿ. ಇವಳು ತಪತಿಯ ಅಕ್ಕ (ಆದಿ 170/7). ಈಕೆ ಬ್ರಹ್ಮನ ಸಭೆಯಲ್ಲಿರುತ್ತಾಳೆ (ಸಭಾ 11/34). ಈಕೆ ಗಾಯತ್ರಿಮಂತ್ರದ ಅಧಿಷ್ಠಾತ್ರಿ ದೇವಿಯಾಗಿದ್ದಾಳೆ. ಇವಳು ಅಗ್ನಿಹೋತ್ರದಿಂದ ಪ್ರಕಟಗೊಂಡು, ತನ್ನ ಆರಾಧಕನಾದ ಅಶ್ವಪತಿಗೆ ಪ್ರತ್ಯಕ್ಷ ದರ್ಶನವನ್ನಿತ್ತು ವರನೀಡಿದ್ದಳು (ವನ 293/8–18). ತ್ರಿಪುರದಹನಕ್ಕಾಗಿ ಹೋಗುತ್ತಿದ್ದ ಭಗವಾನ್ ಶಂಕರನು ಈಕೆಯನ್ನು ತನ್ನ ರಥದ ಕುದುರೆಗಳ ವಾಘೆಯನ್ನಾಗಿ ಮಾಡಿದ್ದನು (ದ್ರೋಣ 202/75). ಆತನ ಸಂವತ್ಸರಮಯ ಧನುಸ್ಸಿನ ಹಗ್ಗವೂ ಈಕೆಯೇ ಆಗಿದ್ದಳು (ಕರ್ಣ 34/36). ಒಬ್ಬ ಜಾಪಕ ಬ್ರಾಹ್ಮಣನಿಂದ ಮಾಡ ಲ್ಪಟ್ಟ ಗಾಯತ್ರಿ ಜಪದಿಂದ ಸಂತುಷ್ಟಳಾಗಿ, ಈಕೆ ಅವನಿಗೆ ದರ್ಶನ ಕೊಟ್ಟು ಇಚ್ಛಾನುಸಾರ

ವರವನ್ನಿತ್ತಿದ್ದಳು (ಶಾಂತಿ 199/5–16). ವಿದರ್ಭ ನಿವಾಸಿ, ಧರ್ಮಾತ್ಮಾ ತಪಸ್ವೀ ಸತ್ಯನೆಂಬ ಬ್ರಾಹ್ಮಣನ ಯಜ್ಞದಲ್ಲಿ ಇವಳ ಪಾದಾರ್ಪಣ ಮತ್ತು ಪುನಃ ಯಜ್ಞಾಗ್ನಿಯಲ್ಲಿ ಪ್ರವೇಶ (ಶಾಂತಿ 272/11–12). ಇವಳಿಂದ ಅನ್ನದಾನದ ಮಹಿಮೆಯ ವರ್ಣನೆ (ಅನು 67/8–9).

(2) ಉಮಾದೇವಿಯ ಅನುಗಾಮಿನಿ ಒಬ್ಬ ಸಹಚರಿ (ವನ 231/49).

(3) ಮದ್ರರಾಜ ಅಶ್ವಪತಿಯ ಕನ್ಯೆ. ಇವಳು ಸಾವಿತ್ರಿದೇವಿಯಿಂದ ಕೊಡಲ್ಪಟ್ಟ ವರದಾನಕ್ಕೆ ಅನುಸಾರವಾಗಿ ಆತನಿಗೆ ಪ್ರಾಪ್ತವಾಗಿದ್ದಳು (293 /23–24). ಇವಳ ಅದ್ಭುತರೂಪ ಸೌಂದರ್ಯ ಹಾಗೂ ತೇಜಸ್ಸಿನ ವರ್ಣನೆ (ವನ 293/25–27). ಇವಳು ತಂದೆಯ ಆಜ್ಞೆಯಿಂದ ತಾನೇ ತನ್ನ ಪತಿಯನ್ನು ಆಯ್ಕೆ ಮಾಡಲು ಹೊರಟದ್ದು (ವನ 293/32–38). ಈಕೆ ತಂದೆಯ ಮನೆಗೆ ಹಿಂತಿರುಗಿದುದು ಮತ್ತು ಆತ ಕೇಳಿದಾಗ ಶಾಲ್ವರಾಜನ ವನವಾಸಿ ಪುತ್ರ ಸತ್ಯವಾನನನ್ನು ಪತಿರೂಪದಲ್ಲಿ ವರಿಸಿದ ವಿಷಯ ಹೇಳಿದುದು. ನಾರದನಿಂದ ಆತ ಅಲ್ಪಾಯುವೆಂಬ ವಿಷಯ ತಿಳಿದು ಕೂಡಾ, ಇವಳು ಸತ್ಯವಾನನನ್ನೇ ವಿವಾಹ ಮಾಡಿಕೊಳ್ಳುವ ದೃಢ ನಿಶ್ಚಯ ಮಾಡಿದುದು (ವನ 294/2–27). ಸತ್ಯವಾನನೊಂದಿಗೆ ಸಾವಿತ್ರಿಯ ವಿವಾಹ. ಈಕೆ ತನ್ನ ಸೇವೆಗಳಿಂದ ಎಲ್ಲರನ್ನು ಸಂತುಷ್ಟಗೊಳಿಸಿದುದು (ವನ 295 ಅಧ್ಯಾಯ). ಸಾವಿತ್ರಿಯ ಬ್ರಹ್ಮಚರ್ಯ ಮತ್ತು ಸತ್ಯವಾನನೊಂದಿಗೆ ಈಕೆ ಕಾಡಿಗೆ ಹೋದುದು (ವನ 296 ಅಧ್ಯಾಯ). ಯಮರಾಜನೊಂದಿಗೆ ಈಕೆಯ ಸಂಭಾಷಣೆ ಮತ್ತು ಆತನಿಂದ ಈಕೆಗೆ ವರ ಮತ್ತು ಮೃತಪತಿಗೆ ಪುನರ್ಜೀವನ ಪ್ರಾಪ್ತಿ (ವನ 297/11–60). ಸತ್ಯವಾನನೊಂದಿಗೆ ಈಕೆಯ ಮಾತುಕತೆ (ವನ 297/65–102). ಗಂಡನನ್ನು ಕರಕೊಂಡು ಆಶ್ರಮದ ಕಡೆಗೆ ಈಕೆಯ ಪ್ರಸ್ಥಾನ (ವನ 297/107). ಆಶ್ರಮವನ್ನು ಸೇರಿ, ಈಕೆ ಋಷಿಗಳ ಮುಂದೆ ಕಾಡಿನಲ್ಲಿ ನಡೆದ ಎಲ್ಲಾ ವೃತ್ತಾಂತ ಹೇಳಿದುದು (ವನ 298/37–42). ಇವಳ ಮಾವನಿಗೆ ರಾಜ್ಯ ದೊರಕಿದುದು ಮತ್ತು ಗಂಡನಿಗೆ ಯುವರಾಜ ಪದವಿಯಲ್ಲಿ ಅಭಿಷೇಕ. ಇವಳಿಗೆ ನೂರುಪುತ್ರರ ಮತ್ತು ನೂರು ಸಹೋದರರ ಪ್ರಾಪ್ತಿ (ವನ 299 ಅಧ್ಯಾಯ). ಇವಳ ಪಾತಿವ್ರತ್ಯದ ಪ್ರಶಂಸೆ (ವಿರಾಟ 21/15).

(4) ಧರ್ಮಪರಾಯಣಳಾದ ಒಬ್ಬ ರಾಜಪತ್ನಿ. ಇವಳು ಎರಡು ದಿವ್ಯಕುಂಡಲಿಗಳನ್ನು ದಾನ ಮಾಡಿ ಉತ್ತಮಲೋಕ ಪಡೆದಿದ್ದಳು (ಶಾಂತಿ 234/24). (ಇವಳು ಸತ್ಯವಾನನ ಪತ್ನಿಯೇ ಆಗಿರಬಹುದು).

**ಸಾಶ್ವ** – ಒಬ್ಬ ಪ್ರಾಚೀನ ರಾಜ. ಈತ ಯಮಸಭೆಯಲ್ಲಿದ್ದು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/17).

**ಸಾಹಸ್ರಕ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಲೋಕವಿಖ್ಯಾತ ತೀರ್ಥ. ಇಲ್ಲಿ ಸ್ನಾನ ಮಾಡುವುದರಿಂದ ಸಹಸ್ರಗೋದಾನದ ಫಲ ಸಿಗುತ್ತದೆ. ಇಲ್ಲಿ ಮಾಡಿದ ದಾನ ಮತ್ತು ಉಪವಾಸದ ಮಹತ್ವ ಇತರ ಕಡೆಗಿಂತ ಸಾವಿರ ಪಾಲು ಹೆಚ್ಚಿನದ್ದಾಗಿದೆ (ವನ 83/158–159).

**ಸಿಂಹಕೇತು** – ಪಾಂಡವಪಕ್ಷದ ಒಬ್ಬ ಯೋಧ. ಇವನು ಕರ್ಣನಿಂದ ಕೊಲ್ಲಲ್ಪಟ್ಟನು (ಕರ್ಣ 56/49).

**ಸಿಂಹಚಂದ್ರ** – ಯುಧಿಷ್ಠಿರನ ಸಂಬಂಧಿ ಮತ್ತು ಸಹಾಯಕ ರಾಜ (ದ್ರೋಣ 158/40).

**ಸಿಂಹಪುರ** – ಉತ್ತರ ಭಾರತದ ಒಂದು ಪ್ರಾಚೀನ ಪರ್ವತೀಯ ನಗರ. ಇದು ರಾಜಾ ಚಿತ್ರಾಯುಧನಿಂದ ಸುರಕ್ಷಿತ ಮತ್ತು ಸುರಮ್ಯವಾಗಿತ್ತು. ಅರ್ಜುನನು ಇದನ್ನು ಉತ್ತರ ದಿಗ್ವಿಜಯ ಸಮಯದಲ್ಲಿ ಗೆದ್ದು ತನ್ನ ಅಧಿಕಾರಕ್ಕೆ ಸೇರಿಸಿದ್ದನು (ಸಭಾ 27/20).

**ಸಿಂಹಲ** – ಒಂದು ದೇಶ ಮತ್ತು ಜಾತಿ. ನಂದಿನಿಯ ಪಾರ್ಶ್ವಭಾಗದಿಂದ ಸಿಂಹಲವೆಂಬ ಮ್ಲೇಚ್ಛಜಾತಿಯ ಸೃಷ್ಟಿಯಾಗಿತ್ತು (ಆದಿ 174/37). ಸಿಂಹಲ ದೇಶದ ರಾಜ ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಬಂದಿದ್ದನು (ಸಭಾ 34/12). ಈ ದೇಶದ ಕ್ಷತ್ರಿಯರು ರಾಜಾ ಯುಧಿಷ್ಠಿರನಿಗೆ ಸಮುದ್ರದ ಸಾರಭೂತವಾದ ವೈಡೂರ್ಯ, ಮುತ್ತಿನರಾಶಿ ಮತ್ತು ಆನೆಯ ನೂರಾರು ಮೇಲ್ಹಾಸುಗಳನ್ನು ಅರ್ಪಿಸಿದ್ದರು. ಸಿಂಹಲ ದೇಶದ ವೀರರು ಮಣಿಯುಕ್ತವಾದ ವಸ್ತ್ರಗಳನ್ನು ಧರಿಸಿದ್ದರು. ಇವರ ಶರೀರದ ಬಣ್ಣ ಕಪ್ಪಾಗಿತ್ತು.

ಕಣ್ಣುಗಳ ಕೊನೆ ಕೆಂಪಾಗಿ ಕಾಣಿಸುತ್ತಿದ್ದವು (ಸಭಾ 52/35–36). ಸಿಂಹಲದೇಶದ ಸೈನಿಕರು ದ್ರೋಣನಿಂದ ನಿರ್ಮಿಸಲ್ಪಟ್ಟ ಗರುಡವ್ಯೂಹ ದೊಳಗೆ, ಅದರ ಕುತ್ತಿಗೆಯ ಭಾಗದಲ್ಲಿ ನಿಂತಿದ್ದರು (ದ್ರೋಣ 20/6).

**ಸಿಂಹಸೇನ** – (1) ಪಾಂಡವಪಕ್ಷದ ಪಾಂಚಾಲ ದೇಶದ ಒಬ್ಬ ಯೋಧ. ದ್ರೋಣಾಚಾರ್ಯ ನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಕೊಲ್ಲಲ್ಪಟ್ಟದ್ದು (ದ್ರೋಣ 16/32–37).

(2) ಪಾಂಡವ ಪಕ್ಷದ ಒಬ್ಬ ಪಾಂಚಾಲಯೋಧ. ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/50). ಕರ್ಣನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಗಾಯಗೊಂಡದ್ದು (ಕರ್ಣ 56/44–48).

**ಸಿಂಹಿಕಾ** – ದಕ್ಷ ಪ್ರಜಾಪತಿಯ ಪುತ್ರಿ ಮತ್ತು ಕಶ್ಯಪ ಋಷಿಯ ಪತ್ನಿ (ಆದಿ 65/12). ಇವಳ ಗರ್ಭದಿಂದ ನಾಲ್ವರು ಪುತ್ರರು ಜನಿಸಿದ್ದರು. ರಾಹು, ಚಂದ್ರ, ಚಂದ್ರಹರ್ತಾ ಮತ್ತು ಚಂದ್ರ ಪ್ರಮರ್ದನ ಎಂದು ಅವರ ಹೆಸರಾಗಿತ್ತು (ಆದಿ 65/31).

**ಸಿಕತ** – ಒಬ್ಬ ಪ್ರಾಚೀನ ಮಹರ್ಷಿ. ಇವನು ದ್ರೋಣಾಚಾರ್ಯನ ಬಳಿಗೆ ಹೋಗಿ ಯುದ್ಧ ನಿಲ್ಲಿಸುವಂತೆ ಹೇಳಿದ್ದನು (ದ್ರೋಣ 190/34–40). ಇವನಿಗೆ ಸ್ವಾಧ್ಯಾಯದಿಂದ ಸ್ವರ್ಗ ದೊರಕಿತ್ತು (ಶಾಂತಿ 26/7).

**ಸಿಕತಾಕ್ಷ** – ಒಂದು ತೀರ್ಥ. ಯುಧಿಷ್ಠಿರನು ಅದರ ದರ್ಶನ ಮಾಡಿದ್ದನು (ವನ 125/12).

**ಸಿತ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/69).

**ಸಿದ್ಧ** – (1) ಒಬ್ಬ ದೇವಗಂಧರ್ವ. ಇವನು ಕಶ್ಯಪನಿಂದ 'ಪ್ರಾಧಾ' ಎಂಬವಳಲ್ಲಿ ಹುಟ್ಟಿದ್ದನು (ಆದಿ 65/46).

(2) ಒಂದು ಪ್ರಕಾರದ ದೇವಗಣ. ಇವರು ಹಿಮಾಲಯ ಪರ್ವತದಲ್ಲಿ ಕಣ್ವಾಶ್ರಮದ ಸಮೀಪದ ತಪೋವನದಲ್ಲಿ ಅಡ್ಡಾಡುತ್ತಿದ್ದರು (ಆದಿ 70/15). ಇವರು ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾರೆ (ಸಭಾ 8/29).

(3) ಒಂದು ಭಾರತೀಯ ಜನಪದ (ಭೀಷ್ಮ 9/57).

**ಸಿದ್ಧಗ್ರಹ** – ಸಿದ್ಧರೂಪದ ಗ್ರಹ. ತಿರಸ್ಕೃತರಾದ ಸಿದ್ಧಪುರುಷರ ಶಾಪದಿಂದ, ಹುಚ್ಚು ಮೊದಲಾದ ರೋಗಗಳು ಪ್ರಾಪ್ತವಾದರೆ, ಅಂತಹವರಿಗೆ 'ಸಿದ್ಧರೂಪದ ಗ್ರಹಬಾಧೆ' ಎಂದು ತಿಳಿಯಬೇಕು (ವನ 230/49).

**ಸಿದ್ಧಪಾತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಸಿದ್ಧಾರ್ಥ** – (1) ಒಬ್ಬ ರಾಜ. ಇವನು 'ಕ್ರೋಧವಶ'ನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/60).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/64).

**ಸಿದ್ಧಿ** – (1) ಒಬ್ಬಳು ದೇವಿ. ಕುಂತಿಯ ರೂಪದಲ್ಲಿ ಭೂಮಿಯಲ್ಲಿ ಪ್ರಕಟಗೊಂಡಿದ್ದಳು (ಆದಿ 67/160). ದೈತ್ಯರೊಂದಿಗೆ ಯುದ್ಧಕ್ಕೆ ಹೋಗುತ್ತಿರುವ ಸ್ಕಂದನ ಸೈನಿಕರ ಮುಂದೆ ಮುಂದೆ ಈಕೆ ನಡೆಯುತ್ತಿದ್ದಳು (ಶಲ್ಯ 46/64).

(2) ವೀರನೆಂಬ ಅಗ್ನಿಯ ಪುತ್ರ. ಇವನ ತಾಯಿಯ ಹೆಸರು ಸರಯೂ ಎಂದಾಗಿತ್ತು. ಇವನು ತನ್ನ ಪ್ರಭೆಯಿಂದ ಸೂರ್ಯನನ್ನು ಮುಚ್ಚಿದ್ದನು. ಸೂರ್ಯನು ಆಚ್ಛಾದಿತನಾದ ಮೇಲೆ ಇವನು ಅಗ್ನಿದೇವತಾಸಂಬಂಧಿಯಾದ ಯಜ್ಞವನ್ನು ಅನುಷ್ಠಾನಗೊಳಿಸಿದನು. ಆಹ್ವಾನ ಮಂತ್ರದಲ್ಲಿ ಇವನ ಸ್ತುತಿಯನ್ನೇ ಮಾಡಲಾಗುತ್ತಿದೆ (ವನ 218/11).

**ಸಿನಿವಾಕ್** – ಒಬ್ಬ ಮಹರ್ಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/14).

**ಸಿನೀವಾಲೀ**– ಮಹರ್ಷಿ ಅಂಗೀರಸನ ತೃತೀಯ ಪುತ್ರಿ. (ಚತುರ್ದಶೀಯುಕ್ತ ಅಮಾವಾಸ್ಯಾ) ಇವಳ ಇನ್ನೊಂದು ಹೆಸರು 'ದೃಶ್ಯಾದೃಶ್ಯಾ'. ಯಾಕೆಂದರೆ ಈಕೆ ಅತ್ಯಂತ ಕೃಶಳಾದುದರಿಂದ ಒಮ್ಮೊಮ್ಮೆ ಕಾಣಿಸುತ್ತಾಳೆ. ಒಮ್ಮೊಮ್ಮೆ ಇಲ್ಲ. ಭಗವಾನ್ ರುದ್ರನು ಈಕೆಯನ್ನು ತನ್ನ ಲಲಾಟದಲ್ಲಿ ಧಾರಣೆ ಮಾಡುತ್ತಾನೆ. ಆದುದರಿಂದ ಆಕೆಯನ್ನು ರುದ್ರ ಸುತಾ ಎಂದೂ ಹೇಳುತ್ತಾರೆ (ವನ 218/5). ತ್ರಿಪುರದಹನಕಾಲದಲ್ಲಿ ಭಗವಾನ್ ಶಂಕರನು ಈಕೆಯನ್ನು ತನ್ನ ರಥದ ಕುದುರೆಗಳ ಜತಿಗೆಯ ಹುರಿಯನ್ನಾಗಿ ಮಾಡಿಕೊಂಡಿದ್ದನು (ಕರ್ಣ 34/32–33). ಇವಳು ಸ್ಕಂದನ ಜನ್ಮಸಮಯದಲ್ಲಿ ಆತನನ್ನು ನೋಡಲು ಬಂದಿದ್ದಳು (ಶಲ್ಯ 45/13).

**ಸಿನ್ಧು (ಸಿಂಧು)** – (1) ಒಂದು ಮಹಾನದಿ. ಇದರ ದಡದಲ್ಲಿರುವ ಲತಾಮಂಟಪದಲ್ಲಿ ಶತ್ರುಗಳಿಂದ ಪರಾಜಿತನಾದ ರಾಜಾ ಸಂವರಣನು ಆಶ್ರಯಪಡೆದಿದ್ದನು (ಆದಿ 94/40). (ಇದು ಪಂಜಾಬದ ಪಶ್ಚಿಮ ಭಾಗದಲ್ಲಿದೆ.) ಇವನು ವರುಣನ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 9/19). ಇವನನ್ನು ಮಾರ್ಕಂಡೇಯನು ಭಗವಾನ್ ಬಾಲಮುಕುಂದನ ಉದರದಲ್ಲಿ ನೋಡಿದ್ದನು (ವನ 188/103). ಇವನು ಅಗ್ನಿಯ ಉತ್ಪತ್ತಿಸ್ಥಾನವಾಗಿದ್ದಾನೆ (ವನ 222/22). ಗಂಗೆಯ ಏಳು ಧಾರೆಗಳಲ್ಲಿ ಒಂದು (ಭೀಷ್ಮ 6/48). ಈ ಪವಿತ್ರ ನದಿಯಲ್ಲಿ ಸ್ನಾನಮಾಡಿ ಶೀಲವಂತ ಪುರುಷನು ಮೃತ್ಯುವಿನ ಅನಂತರ ಸ್ವರ್ಗಕ್ಕೆ ಹೋಗುತ್ತಾನೆ (ಅನು 25/8). ಸ್ತ್ರೀ ಧರ್ಮದ ವರ್ಣನೆ ಮಾಡುವ ಸಮಯದಲ್ಲಿ ಇತರ ನದಿಗಳೊಂದಿಗೆ ಇವನೂ ಶಿವಪಾರ್ವತಿಯರ ಸಮೀಪಕ್ಕೆ ಬಂದಿದ್ದನು (ಅನು 146/18). ಇವನು ಸಾಯಂಪ್ರಾತಃ ಸ್ಮರಣೀಯ ನದವಾಗಿದ್ದಾನೆ (ಅನು 165/19).

(2) ಒಂದು ಜನಪದ. ಇದರ ಒಡೆಯ ಜಯದ್ರಥನಾಗಿದ್ದನು. ಇವನು ದ್ರೌಪದಿಯ ಸ್ವಯಂವರಕ್ಕೆ ಬಂದಿದ್ದನು (ಆದಿ 185/21). ಒಂದು ಬಾರಿ ಸಿಂಧು ನರೇಶ ಜಯದ್ರಥನು ಶಾಲ್ವದೇಶಕ್ಕೆ ವಿವಾಹದ ಅಪೇಕ್ಷೆಯಿಂದ ಹೋಗುತ್ತಿದ್ದಾಗ, ಕಾಮ್ಯಕವನದಲ್ಲಿ ಪಾಂಡವರ ಆಶ್ರಮದ ಹತ್ತಿರ ಹೋಗಿದ್ದನು (ವನ 264/6–7; ವನ 267/17–19).

**ಸಿನ್ಧುದ್ವೀಪ** – ಒಬ್ಬ ಪ್ರಾಚೀನ ರಾಜರ್ಷಿ. ಇವನು ಪೃಥೂದಕ ತೀರ್ಥದಲ್ಲಿ ತಪಸ್ಸುಮಾಡಿ ಬ್ರಾಹ್ಮಣತ್ವ ಪಡೆದಿದ್ದನು (ಶಲ್ಯ 39/37). ಇವನು ರಾಜಾ ಜಹ್ನುವಿನ ಪುತ್ರನಾಗಿದ್ದನು. ಇವನ ಪುತ್ರನ ಹೆಸರು ವಲಾಕಾಶ್ವನೆಂದಾಗಿತ್ತು (ಅನು 4/4).

**ಸಿನ್ಧುಪುಲಿಂದ** – ಒಂದು ಭಾರತೀಯ ಜನಪದ (ಭೀಷ್ಮ 9/40).

**ಸಿನ್ಧು ಪ್ರಭವ** – ಒಂದು ತೀರ್ಥ. ಇದು ಸಿಂಧುನದದ ಉದ್ಗಮಸ್ಥಾನವಾಗಿದೆ. ಇದು ಸಿದ್ಧರಿಂದ ಮತ್ತು ಗಂಧರ್ವರಿಂದ ಸೇವಿತವಾಗಿದೆ. ಇಲ್ಲಿಗೆ ಹೋಗಿ ಐದು ರಾತ್ರಿ ಉಪವಾಸ ಮಾಡುವುದರಿಂದ ಅಪಾರ ಸುವರ್ಣರಾಶಿ ಪ್ರಾಪ್ತವಾಗುತ್ತದೆ (ವನ 84/46).

**ಸಿನ್ಧುಸೌವೀರ** – ವಾಯುವ್ಯ ಭಾರತದ ಒಂದು ಜನಪದ (ಭೀಷ್ಮ 9/53). ಸಿಂಧು ಸೌವೀರ ದೇಶದ ಜನರು ಧರ್ಮವನ್ನು ತಿಳಿದಿಲ್ಲ (ಕರ್ಣ 40/42–43).

**ಸಿನ್ಧೂತ್ತಮ** – ವಸುಧಾರೆಯಲ್ಲಿ ಒಂದು ಪ್ರಸಿದ್ಧ ತೀರ್ಥ. ಇದು ಸರ್ವಪಾಪಗಳನ್ನು ನಾಶ ಮಾಡುತ್ತದೆ. ಇದರಲ್ಲಿ ಸ್ನಾನಮಾಡುವುದರಿಂದ ತುಂಬಾ ಸುವರ್ಣರಾಶಿ ಪ್ರಾಪ್ತವಾಗುತ್ತದೆ (ವನ 82/79).

**ಸೀತವನ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ವನ. ಇಲ್ಲಿ ಮಹಾತೀರ್ಥವಿದೆ. ಒಂದು ಬಾರಿ ಅಲ್ಲಿಗೆ ಹೋಗುವುದರಿಂದ ಅಥವಾ ಅದರ ದರ್ಶನದಿಂದಲೇ ಅದು ಪವಿತ್ರಗೊಳಿಸುತ್ತದೆ. ಅಲ್ಲಿ ಕೇಶಗಳನ್ನು ತೊಳೆದ ಮಾತ್ರದಿಂದಲೇ ಮನುಷ್ಯ ಪವಿತ್ರನಾಗುತ್ತಾನೆ (ವನ 83/59–60).

**ಸೀತಾ** – (1) ಮಹಾರಾಜ ಜನಕನ ಪುತ್ರಿ. ರಾಜಾ ಜನಕನ ಧನುರ್ಯಜ್ಞದಲ್ಲಿ ಶಿವನ ಧನುಸ್ಸನ್ನು ಮುರಿದಾಗ ಶ್ರೀರಾಮನೊಂದಿಗೆ ಸೀತೆಯ ವಿವಾಹವಾಯಿತು. ಇವಳನ್ನು ಸಂಗಡ ಕರೆದುಕೊಂಡು ಶ್ರೀರಾಮನು ಅಯೋಧ್ಯಾನಗರಕ್ಕೆ ಹೋದನು ಮತ್ತು ಅಲ್ಲಿ ಆನಂದದಿಂದ ವಾಸಿಸ ತೊಡಗಿದನು. ಶ್ರೀರಾಮನ ವನವಾಸದ ಕಾಲದಲ್ಲಿ ಅತ್ಯಂತ ರೂಪವತಿಯಾದ, ಧರ್ಮಪತ್ನಿ ಸೀತೆಯೂ ಅವನೊಂದಿಗೆ ಹೋಗಿದ್ದಳು. ಅವತಾರ ಪೂರ್ವದಲ್ಲಿ ವಿಷ್ಣುರೂಪದಲ್ಲಿದ್ದಾಗ ಜೊತೆಯಲ್ಲಿ ಲಕ್ಷ್ಮೀರೂಪದಿಂದಿದ್ದವಳೇ ಅವತಾರ ಕಾಲದಲ್ಲಿ ಸೀತೆಯ ರೂಪದಲ್ಲಿ ಅವತರಿಸಿ ಪತಿಯನ್ನು ಅನುಸರಿಸುತ್ತಿದ್ದಳು. ರಾವಣನಿಂದ ಈಕೆಯ ಅಪಹಾರವಾದಾಗ, ಶ್ರೀರಾಮನು ರಾವಣನನ್ನು ಕೊಂದು ಇವಳನ್ನು ಪಡೆದನು ಮತ್ತು ಈಕೆಯೊಂದಿಗೆ ಅಯೋಧ್ಯೆಗೆ ಬಂದು, ಧರ್ಮಯುಕ್ತವಾಗಿ ರಾಜ್ಯಪಾಲನೆ ಮಾಡತೊಡಗಿದನು (ಸಭಾ 38/29). (ವನ ಪರ್ವದಲ್ಲಿ ಪುನಃ ಇವಳ ಕಥೆ ಬಂದಿದೆ.) ಜನಕನಂದಿನಿ ಸೀತೆ ಶ್ರೀರಾಮನೊಂದಿಗೆ ಕಾಡಿಗೆ ಹೋದುದು (ವನ 277/29). ಈಕೆ ಶ್ರೀರಾಮನೊಡನೆ ಕಪಟಮೃಗವನ್ನು ವಧಿಸಲು ಹೇಳಿದುದು (ವನ 278/18).

ಲಕ್ಷ್ಮಣನಲ್ಲಿ ಈಕೆಯಿಂದ ಸಂದೇಹಪೂರ್ಣವಾದ ಕಠೋರ ಮಾತು (ವನ 278/27–29). ರಾವಣನಿಂದ ಅಪಹರಣ (ವನ 278/43). ಅಶೋಕವನದಲ್ಲಿ ತ್ರಿಜಟೆಯಿಂದ ಈಕೆಗೆ ಧೈರ್ಯದ ಮಾತು (ವನ 280/55–72). ರಾವಣನೊಂದಿಗೆ ಈಕೆಯ ಸಂವಾದ (ವನ 281 ಅಧ್ಯಾಯ). ಹನುಮಂತನಿಗೆ ಗುರುತಿಗಾಗಿ, ಈಕೆ ಚೂಡಾಮಣಿಯನ್ನು ಕೊಟ್ಟದ್ದು (ವನ 282/68–69). ರಾವಣವಧೆಯ ಅನಂತರ ಅವಿಂಧ್ಯ ಮತ್ತು ವಿಭೀಷಣರು ಸೀತೆಯನ್ನು ಶ್ರೀರಾಮನ ಬಳಿಗೆ ತಂದೊಪ್ಪಿಸಿದರು. ಈಕೆಯ ಚಾರಿತ್ರ್ಯದ ಮೇಲೆ ಸಂದೇಹಪಟ್ಟು ಶ್ರೀರಾಮನು ಇವಳನ್ನು ತ್ಯಾಗ ಮಾಡಿದನು. ಸೀತೆಗೆ ಇದರಿಂದಾಗಿ ತುಂಬಾ ವ್ಯಥೆಯಾಯಿತು. ಇವಳು ತನ್ನ ಶುದ್ಧತೆಗಾಗಿ ಶಪಥ ಮಾಡಿದಳು. ದೇವತೆಗಳೂ ಈಕೆಯ ಶುದ್ಧತೆಯನ್ನು ಸಮರ್ಥಿಸಿದರು. ಇದರಿಂದಾಗಿ ಶ್ರೀರಾಮನು ಸಂತೋಷಪೂರ್ವಕವಾಗಿ ಕೂಡಿಕೊಂಡನು. ಸೀತೆಯನ್ನು ಮುಂದಿಟ್ಟುಕೊಂಡು, ಪುಷ್ಪಕವಿಮಾನದಲ್ಲಿ ಆರೂಢನಾಗಿ, ಸಮುದ್ರವನ್ನು ಮೇಲಿಂದಲೇ ದಾಟಿದನು. ಸೀತೆಗೆ ಕಾಡಿನ ಶೋಭೆಯನ್ನು ತೋರಿಸುತ್ತಾ, ಕಿಷ್ಕಿಂಧೆಯ ಮೂಲಕ ಅಯೋಧ್ಯಾನಗರಕ್ಕೆ ಹೋದನು. ಇವರ ದರ್ಶನಮಾಡಿ ಭರತ ಶತ್ರುಘ್ನರಿಗೆ ತುಂಬಾ ಹರ್ಷವುಂಟಾಯಿತು (ವನ 291/39–65). ಇವಳ ಪಾತಿವ್ರತ್ಯದ ಪ್ರಶಂಸೆ (ವಿರಾಟ 21/12–13).

(2) ಒಂದು ನದಿ. ಇದನ್ನು ಮಾರ್ಕಂಡೇಯನು ಭಗವಾನ್ ಬಾಲಮುಕುಂದನ ಉದರದಲ್ಲಿ ನೋಡಿದ್ದನು (ವನ 188/102). ಇದು ಗಂಗೆಯ ಏಳು ಧಾರೆಗಳಲ್ಲಿ ಒಂದು (ಭೀಷ್ಮ 6/47–48). ಪ್ರಾಯಶಃ ಇದರಲ್ಲಿ ನಾವೆಯೂ ಮುಳುಗುತ್ತದೆ (ಶಾಂತಿ 82/45).

**ಸುಕಕ್ಷ** – ದ್ವಾರಕೆಯ ಪಶ್ಚಿಮ ಭಾಗದಲ್ಲಿರುವ ಒಂದು ರಜತಮಯ ಪರ್ವತ (ಸಭಾ 38/29).

**ಸುಕಂದಕ** – ಒಂದು ಭಾರತೀಯ ಜನಪದ (ಭೀಷ್ಮ 9/53).

**ಸುಕನ್ಯಾ** – (1) ರಾಜಾ ಶರ್ಯಾತಿಯ ಸುಂದರಿಯಾದ ಮಗಳು (ವನ 122/6). ಈಕೆ ಕಾಡಿನಲ್ಲಿ ಒಬ್ಬಳೇ ತಿರುಗಾಡಿದುದು. ಚ್ಯವನನಿಗೆ ಈಕೆಯ ದರ್ಶನದಿಂದ ಪ್ರಸನ್ನತೆ. ಹುತ್ತದಲ್ಲಿ ಅಡಗಿದ್ದ ಮುನಿವರ ಚ್ಯವನನ ಕಣ್ಣುಗಳು ಈಕೆಯಿಂದ ಚುಚ್ಚಲ್ಪಟ್ಟದ್ದು (ವನ 122/6–14). ಮುನಿಯ ಸಿಟ್ಟಿನಿಂದ ಸೇನೆ ಮತ್ತು ತಂದೆ ನೋಯಿಸಲ್ಪಟ್ಟದ್ದನ್ನು ಕಂಡು, ಈಕೆ ತಾನು ಎರಡು ಹೊಳೆಯುತ್ತಿದ್ದ ವಸ್ತುಗಳನ್ನು ಚುಚ್ಚಿದ ವಿಷಯವನ್ನು ಹೇಳಿದುದು (ವನ 122/20–21). ಮುನಿಯು ಅಪೇಕ್ಷಿಸಿದಾಗ ಈಕೆಯು ತಂದೆಯಿಂದ ಸಮರ್ಪಿಸಲ್ಪಟ್ಟದ್ದು (ವನ 122/24–26). ಇವಳಿಂದ ಪತಿಯ ಸೇವೆ ಮತ್ತು ಆರಾಧನೆ (ವನ 122/28–29). ಮೋಹಿತರಾದ ಅಶ್ವಿನೀಕುಮಾರರ ಮಾತಿಗೆ ಈಕೆಯ ವಿರೋಧ (ವನ 123/2–14). ಈಕೆಯ ಪತಿಯೊಡನೆ ಸಲಹೆ ಪಡೆದು, ಆತನನ್ನು ರೂಪ ಯೌವನ ಸಂಪನ್ನನನ್ನಾಗಿ ಮಾಡುವಂತೆ ಅಶ್ವಿನೀಕುಮಾರರನ್ನು ಪ್ರಾರ್ಥಿಸಿದುದು (ವನ 123/14–16). ಈಕೆ ಅಶ್ವಿನೀಕುಮಾರರ ಮಧ್ಯದಲ್ಲಿ ತನ್ನ ಪತಿಯನ್ನು ಗುರುತಿಸಿ, ಆತನನ್ನೇ ಸ್ವೀಕರಿಸಿದುದು (ವನ 123/21). ಇವಳ ಪಾತಿವ್ರತ್ಯದ ಪ್ರಶಂಸೆ (ವಿರಾಟ 21/10).

(2) ಮಾತರಿಶ್ವನ ಪತ್ನಿ. ಈಕೆಯ ಗರ್ಭದಿಂದ ಮಂಕಣಕ ಮುನಿಯ ಜನನವಾಯಿತು (ಶಲ್ಯ 38/59).

**ಸುಕರ್ಮಾ** – ವಿಧಾತನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸುವ್ರತ (ಶಲ್ಯ 45/42).

**ಸುಕುಟ** – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ನಿವಾಸಿಗಳು (ಸಭಾ 14/16).

**ಸುಕುಂಡಲ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/98).

**ಸುಕುಮಾರ** – (1) ತಕ್ಷಕ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಸರ್ಪಯಾಗದಲ್ಲಿ ದಗ್ಧನಾದನು (ಆದಿ 57/9).

(2) ಪುಲಿಂದರ ಮಹಾನಗರ(ಅಥವಾ ರಾಜಧಾನಿ)ದ ಶಾಸಕನಾದ ಒಬ್ಬ ರಾಜಕುಮಾರ ಅಥವಾ ರಾಜ. ಅವನು ಪ್ರಾಯಶಃ ರಾಜಾ ಸುಮಿತ್ರನ ಪುತ್ರನಾಗಿದ್ದನು. ಸುಕುಮಾರ ಮತ್ತು ಸುಮಿತ್ರ – ಇಬ್ಬರನ್ನೂ ಭೀಮಸೇನನು ಪೂರ್ವ ದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ

29/10). ದ್ರೌಪದೀ ಸ್ವಯಂವರಕ್ಕೂ ಪುಲಿಂದ ರಾಜ ಸುಕುಮಾರ ತನ್ನ ತಂದೆ ಸುಮಿತ್ರ (ಅಥವಾ ಸುಚಿತ್ರ)ನೊಂದಿಗೆ ಬಂದಿದ್ದನು (ಆದಿ 185/10). ಪುಲಿಂದ ನಗರದ ರಾಜಾ ಸುಕುಮಾರ ಮತ್ತು ಸುಮಿತ್ರನನ್ನು ಸಹದೇವನು ಕೂಡಾ ದಕ್ಷಿಣ ದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ 31/4). ಇವನು ಯುಧಿಷ್ಠಿರನ ಸೇನೆಯಲ್ಲಿ ಒಬ್ಬ ಉದಾರ ರಥಿಕನಾಗಿದ್ದನು (ಉದ್ಯೋಗ 171/15).

(3) ಶಾಕದ್ವೀಪದ ಜಲಧಾರಗಿರಿಯ ಹತ್ತಿರದ ಒಂದು ದೇಶ (ಭೀಷ್ಮ 11/25).

**ಸುಕುಮಾರಿ** – (1) ಶಾಕದ್ವೀಪದ ಪವಿತ್ರ ಜಲವುಳ್ಳ ಒಂದು ನದಿ (ಭೀಷ್ಮ 11/32).

(2) ರಾಜಾ ಸೃಂಜಯನ ಪುತ್ರಿ ಮತ್ತು ನಾರದನ ಪತ್ನಿ (ದ್ರೋಣ 55/7–13; ಶಾಂತಿ 30/14–30).

**ಸುಕುಸುಮಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/24).

**ಸುಕೇತು** – (1) ಒಬ್ಬ ರಾಜ. ಇವನು ತನ್ನ ಪುತ್ರ ಸುನಾಮಾ ಮತ್ತು ಸುವರ್ಚಾನೊಂದಿಗೆ ದ್ರೌಪದೀ ಸ್ವಯಂವರಕ್ಕೆ ಬಂದಿದ್ದನು (ಆದಿ 185/9).

(2) ಶಿಶುಪಾಲನ ಒಬ್ಬ ಪುತ್ರ. ಇವನು ದ್ರೋಣಾಚಾರ್ಯನಿಂದ ಕೊಲ್ಲಲ್ಪಟ್ಟನು. ಈ ಕುರಿತು ವರ್ಣನೆ (ಕರ್ಣ 6/33).

(3) ಪಾಂಡವ ಪಕ್ಷದ ಒಬ್ಬ ಮಹಾಬಲವಂತ ರಾಜ. ಇವನು ಚಿತ್ರಕೇತುವಿನ ಪುತ್ರನಾಗಿದ್ದನು. ಕೃಪಾಚಾರ್ಯನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 54/21–29).

**ಸುಕೇಶೀ** – (1) ಗಾಂಧಾರ ರಾಜನ ಕುಲೀನ ಕನ್ಯೆ. ಇವಳು ಶ್ರೀಕೃಷ್ಣನ ಪ್ರೇಯಸಿಯಾಗಿದ್ದಳು. ಜಾಂಬೂನದ ಸುವರ್ಣದಂತೆ ಪ್ರಕಾಶಮಾನವಾಗಿದ್ದ ಬಾಗಿಲುಳ್ಳ ದ್ವಾರಕೆಯ ಅರಮನೆಯಲ್ಲಿ ಭಗವಂತನು ಈಕೆಯನ್ನು ಇರಗೊಡಿಸಿದ್ದನು. ಅದು ನೋಡುವಾಗ ಪ್ರಜ್ವಲಿಸುವ ಅಗ್ನಿಯಂತೆ ಕಾಣುತ್ತಿತ್ತು. ವೈಶಾಲ್ಯದಲ್ಲಿ ಅದಕ್ಕೆ ಸಮುದ್ರವೇ ಉಪಮೆಯಾಗಿತ್ತು. ಅದು ಮೇರುವೆಂಬ ಹೆಸರಿನಿಂದ ಪ್ರಖ್ಯಾತವಾಗಿತ್ತು (ಸಭಾ 38/29).

(2) ಅಲಕಾಪುರದ ಒಬ್ಬ ಅಪ್ಸರೆ. ಇವಳು ಅಷ್ಟಾವಕ್ರನ ಸ್ವಾಗತ ಸಮಾರಂಭದಲ್ಲಿ ಕುಬೇರ ಭವನದಲ್ಲಿ ನೃತ್ಯಮಾಡಿದ್ದಳು (ಅನು 19/45).

**ಸುಕ್ರತು** – ಒಬ್ಬ ಪ್ರಾಚೀನ ರಾಜ. ಸಂಜಯನು ಅವನ ಹೆಸರನ್ನು ಪ್ರಾಚೀನ ರಾಜರ ಗಣನೆಯಲ್ಲಿ ಉಲ್ಲೇಖಿಸಿದ್ದಾನೆ (ಆದಿ 1/235).

**ಸುಕ್ಷತ್ರ** – ಪಾಂಡವಪಕ್ಷದ ಒಬ್ಬ ಯೋಧ. ಇವನು ಕೋಸಲ ರಾಜನ ಪುತ್ರ. ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/57).

**ಸುಖದಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/28).

**ಸುಗಣಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/27).

**ಸುಗಂಧಾ** – (1) ಒಬ್ಬ ಅಪ್ಸರೆ. ಇವಳು ಅರ್ಜುನನ ಜನ್ಮಮಹೋತ್ಸವದಲ್ಲಿ ನೃತ್ಯ ಮಾಡಿದ್ದಳು (ಆದಿ 122/63).

(2) ಒಂದು ತೀರ್ಥ. ಇಲ್ಲಿಗೆ ಹೋದ ಮನುಷ್ಯ ಸ್ವರ್ಗದಲ್ಲಿ ಪ್ರತಿಷ್ಠಿತನಾಗುತ್ತಾನೆ ಮತ್ತು ಎಲ್ಲ ಪಾಪಗಳಿಂದ ಮುಕ್ತನಾಗಿ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ (ವನ 84/10; 84/36).

**ಸುಗೋಪ್ತಾ** – ಒಬ್ಬ ಸನಾತನ ವಿಶ್ವೇದೇವ (ಅನು 91/37).

**ಸುಗ್ರೀವ** – (1) ವಾನರರ ಒಬ್ಬ ರಾಜ. ಇವನು ಭಗವಾನ್ ಸೂರ್ಯನ ಪುತ್ರ. ಪೂರ್ವಕಾಲದಲ್ಲಿ ಎಲ್ಲಾ ವಾನರಯೂಥಪತಿಗಳು ಇವನ ಕೈಂಕರ್ಯದಲ್ಲಿದ್ದರು (ವನ 147/28–29). ಇವನ ಜೊತೆ ಶ್ರೀರಾಮನ ಸ್ನೇಹ. ಇವನ ಸಹೋದರ ವಾಲಿಯ ವಧೆಯ ಸಂಕ್ಷಿಪ್ತ ವೃತ್ತಾಂತ (ಸಭಾ 38/29). ಶ್ರೀರಾಮನು ಇವನ ಬಳಿಗೆ ಹೋದುದು. ಇವನೊಂದಿಗೆ ಆತನ ಮೈತ್ರಿ. ಇವನು ಶ್ರೀರಾಮನಿಗೆ ಸೀತೆಯ ವಸ್ತ್ರಗಳನ್ನು ತೋರಿಸಿದುದು. ಶ್ರೀರಾಮನು ಇವನನ್ನು ವಾನರ ಸಮ್ರಾಟ ಪದವಿಯಲ್ಲಿ ಅಭಿಷಿಕ್ತನಾಗಿ ಮಾಡಿದುದು ಮತ್ತು ಸುಗ್ರೀವನು ಸೀತೆಯನ್ನು ಹುಡುಕುವ ಕುರಿತು ಪ್ರತಿಜ್ಞೆ ಮಾಡಿದುದು (ವನ 280/9–14). ತನ್ನ ಸಹೋದರ ವಾಲಿಯೊಂದಿಗೆ ಈತನ ಯುದ್ಧ (ವನ 280/30–36). ಶ್ರೀರಾಮನೊಡನೆ ಸೀತಾನ್ವೇಷಣೆಯ ವಿಷಯದಲ್ಲಿ ಈತ ತನ್ನ ಕಾರ್ಯವನ್ನು ತಿಳಿಸಿದುದು (ವನ 282/22). ಕುಂಭಕರ್ಣನಿಂದ ಇವನ ಅಪಹರಣ (ವನ 287/11). ಶ್ರೀರಾಮನೊಂದಿಗೆ ಪುಷ್ಪಕ

ವಿಮಾನದಲ್ಲಿ ಇವನು ಅಯೋಧ್ಯೆಗೆ ಬಂದುದು (ವನ 291/60). ರಾಜ್ಯಾಭಿಷೇಕದ ಅನಂತರ ಶ್ರೀರಾಮನು ಇವನಿಗೆ ಕರ್ತವ್ಯದ ಶಿಕ್ಷಣವನ್ನಿತ್ತು ಬಹಳ ದುಃಖದಿಂದ ವಿದಾಯ ಹೇಳಿದುದು (ವನ 292/67–68).

(2) ಭಗವಾನ್ ಶ್ರೀಕೃಷ್ಣನ ರಥದ ಒಂದು ಕುದುರೆಯ ಹೆಸರು (ದ್ರೋಣ 147/47).

**ಸುಘೋಷ** – ನಕುಲನ ಶಂಖದ ಹೆಸರು (ಭೀಷ್ಮ 25/16).

**ಸುಚಕ್ರ** – ಸ್ಕಂಧನ ಒಬ್ಬ ಸೈನಿಕ (ಶಲ್ಯ 45/59).

**ಸುಚಂದ್ರ** – (1) ಒಬ್ಬ ಅಸುರ. ಇವನು ಸಿಂಹಿಕೆಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/31).

(2) ಒಬ್ಬ ದೇವಗಂಧರ್ವ. ಇವನು ಕಶ್ಯಪನಿಂದ ಪ್ರಾಧಾ ಎಂಬವಳ ಗರ್ಭದಲ್ಲಿ ಹುಟ್ಟಿದ್ದನು (ಆದಿ 66/46–48). ಇವನು ಅರ್ಜುನನ ಜನ್ಮ ಕಾಲದ ಮಹೋತ್ಸವದಲ್ಲಿ ಸಮ್ಮಿಲಿತನಾಗಿದ್ದನು (ಆದಿ 122/58).

**ಸುಚಾರು** – (1) ಧೃತರಾಷ್ಟ್ರನ ಒಬ್ಬ ಪುತ್ರ. ಇವನು ಇತರ ಏಳು ಮಂದಿ ಸಹೋದರರ ಜೊತೆಗೂಡಿ, ಅಭಿಮನ್ಯುವಿನ ಮೇಲೆ ಆಕ್ರಮಣ ಮಾಡಿದ್ದನು (ಭೀಷ್ಮ 79/22–23). (ವಿಶೇಷ ನೋಡಿರಿ– ಚಾರು, ಚಾರುತೀರ್ಥ).

(2) ಶ್ರೀಕೃಷ್ಣನಿಗೆ ರುಕ್ಮಿಣೀದೇವಿಯಲ್ಲಿ ಹುಟ್ಟಿದ ಮಗ (ಅನು 14/33).

**ಸುಚಿತ್ರ** – (1) ಧೃತರಾಷ್ಟ್ರ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಯಾಗದಲ್ಲಿ ದಗ್ಧನಾದನು (ಆದಿ 57/18).

(2) ದ್ರೌಪದೀ ಸ್ವಯಂವರಕ್ಕೆ ಹೋದ ಒಬ್ಬ ರಾಜ. ಇವನ ಜೊತೆಯಲ್ಲಿ ಸುಕುಮಾರನ ಹೆಸರೂ ಬಂದಿದೆ. ಆದುದರಿಂದ ಇವನು ಪುಲಿಂದ ರಾಜ ಸುಕುಮಾರನ ತಂದೆ ಸುಮಿತ್ರನಾಗಿರಬಹುದು (ಪ್ರಾಯಶಃ ಸುಮಿತ್ರನ ಸ್ಥಳದಲ್ಲಿ ಸುಚಿತ್ರನೆಂದು ಪಾಠಾಂತರವಾಗಿರ ಬಹುದು. ಅಥವಾ ಸುಮಿತ್ರನಿಗೇ ಸುಚಿತ್ರನೆಂಬ ಇನ್ನೊಂದು ಹೆಸರಿರಬಹುದು.) (ಆದಿ 185/10).

(3) ಧೃತರಾಷ್ಟ್ರನ ಒಬ್ಬ ಮಗ. ಇವನು ತನ್ನ ಸಹೋದರರೊಂದಿಗೆ ಅಭಿಮನ್ಯುವಿನ ಮೇಲೆ ಆಕ್ರಮಣ ಮಾಡಿದ್ದನು (ಭೀಷ್ಮ 79/22–23). (ವಿಶೇಷ ನೋಡಿರಿ– ಚಿತ್ರ).

(4) ಪಾಂಡವಪಕ್ಷದ ಒಬ್ಬ ಮಹಾವೀರ, ಮಹಾರಥಿ. ಇವನು ಚಿತ್ರವರ್ಮನ ತಂದೆ. ಯುದ್ಧರಂಗದಲ್ಲಿ ಸುತ್ತುತ್ತಿದ್ದ ಇವರಿಬ್ಬರನ್ನು ದ್ರೋಣಾಚಾರ್ಯನು ಕೊಂದಿದ್ದನು. ಈ ಕುರಿತು ವರ್ಣನೆ (ಕರ್ಣ 6/27–28).

**ಸುಚೇತಾ** – ವೀತಹವ್ಯವಂಶದ ಗೃತ್ಸಮದನ ಪುತ್ರ. ಇವನ ಪುತ್ರನ ಹೆಸರು ವರ್ಚಾ (ಅನು 30/61).

**ಸುಜಾತ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ. ಇವನು ಸಹೋದರರೊಂದಿಗೆ ಭೀಮಸೇನ ನೊಂದಿಗೆ ಯುದ್ಧಮಾಡಿದನು ಮತ್ತು ಆತನಿಂದ ಯುದ್ಧದಲ್ಲಿ ಮಡಿದನು (ಶಲ್ಯ 26/5–18).

**ಸುಜಾತಾ** – ಮಹರ್ಷಿ ಉದ್ದಾಲಕನ ಪುತ್ರಿ. ಕಹೋಳ ಋಷಿಯೊಂದಿಗೆ ಈಕೆಯ ವಿವಾಹ ವಾಗಿತ್ತು (ವನ 232/9). ಇವಳು ಪತಿಯೊಡನೆ ಹಣಕ್ಕಾಗಿ ಆಗ್ರಹ ಮಾಡಿದುದು (ವನ 232/14). ತನ್ನ ಮಗ ಅಷ್ಟಾವಕ್ರನೊಡನೆ ಗಂಡನ ಮರಣ ವೃತ್ತಾಂತವನ್ನು ಹೇಳಿದುದು (ವನ 132/20).

**ಸುಜಾನು** – ಒಬ್ಬ ದಿವ್ಯ ಮಹರ್ಷಿ. ಇವನು ಹಸ್ತಿನಾಪುರಕ್ಕೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಭೇಟಿ ಮಾಡಿದ್ದನು (ಉದ್ಯೋಗ 83/64).

**ಸುತನು** – ಆಹುಕ (ಉಗ್ರಸೇನ)ನ ಮಗಳು. ಶ್ರೀಕೃಷ್ಣನು ಇವಳ ವಿವಾಹವನ್ನು ಅಕ್ರೂರ ನೊಂದಿಗೆ ಮಾಡಿಸಿದ್ದನು (ಸಭಾ 14/33).

**ಸುತಸೋಮ** – ದ್ರೌಪದಿಯ ಗರ್ಭದಿಂದ ಭೀಮಸೇನನ ಮೂಲಕ ಹುಟ್ಟಿದ ಮಗ (ಆದಿ 63/123). (ಆದಿ 95/75). ಇವನ ಜನನ ವಿಶ್ವೇದೇವರ ಅಂಶದಿಂದಾಗಿತ್ತು (ಆದಿ 67/127–128). ಇವನಿಗೆ ಸುತಸೋಮನೆಂದು ಹೆಸರಾಗಲು ಕಾರಣ (ಆದಿ 220/79; 82; ದ್ರೋಣ 23/28–29). ಪ್ರಥಮ ದಿನದ ಸಂಗ್ರಾಮದಲ್ಲಿ ವಿಕರ್ಣನೊಂದಿಗೆ ದ್ವಂದ್ವಯುದ್ಧ (ಭೀಷ್ಮ 45/58–59). ದುರ್ಮುಖನಿಂದ ಶ್ರುತಕರ್ಮನನ್ನು ರಕ್ಷಿಸಿದುದು (ಭೀಷ್ಮ 79/39). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/28). ವಿವಿಂಶತಿಯೊಂದಿಗೆ ಯುದ್ಧ (ದ್ರೋಣ 25/24–25). ಶಕುನಿಯೊಂದಿಗೆ ಯುದ್ಧ ಮತ್ತು

ಪರಾಜಯ (ಕರ್ಣ 25/18–40). ಅಶ್ವತ್ಥಾಮನೊಂದಿಗೆ ಯುದ್ಧ (ಕರ್ಣ 55/14–16). ರಾತ್ರಿ ಅಶ್ವತ್ಥಾಮನಿಂದ ಈತನ ವಧೆ (ಸೌಪ್ತಿಕ 8/55–56).

**ಸುತೀರ್ಥ** – ಕುರುಕ್ಷೇತ್ರದ ಸೀಮೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ದೇವತೆಗಳು ಪಿತೃಗಳೊಂದಿಗೆ ಸದಾ ಇರುತ್ತಾರೆ. ಇಲ್ಲಿ ದೇವತೆ ಹಾಗೂ ಪಿತೃಗಳ ಪೂಜೆಯಲ್ಲಿ ತತ್ಪರನಾಗಿ ಸ್ನಾನಮಾಡಿದರೆ ಅಶ್ವಮೇಧ ಯಜ್ಞದ ಫಲ ಸಿಗುತ್ತದೆ ಮತ್ತು ಯಾತ್ರಿಕನು ಪಿತೃಲೋಕಕ್ಕೆ ಹೋಗುತ್ತಾನೆ (ವನ 83/54–55).

**ಸುತೇಜನ** – ಯುಧಿಷ್ಠಿರನ ಒಬ್ಬ ಸಂಬಂಧಿ ಮತ್ತು ಸಹಾಯಕ ರಾಜ (ದ್ರೋಣ 158/40).

**ಸುದಕ್ಷಿಣ** – (1) ಕಾಂಬೋಜ ದೇಶ (ಕಾಬುಲ್)ದ ರಾಜ ಅಥವಾ ರಾಜಕುಮಾರ. ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/15). ಇವನು ಒಂದು ಅಕ್ಷೌಹಿಣೀ ಸೇನೆಯೊಂದಿಗೆ ದುರ್ಯೋಧನನ ಸಹಾಯಕ್ಕೆ ಬಂದಿದ್ದನು (ಉದ್ಯೋಗ 19/21). ಇವನನ್ನು ದುರ್ಯೋಧನನ ಪಕ್ಷದ ಒಬ್ಬ ವೀರ ರಥಿಕನೆಂದು ಗುರುತಿಸಲಾಗಿತ್ತು (ಉದ್ಯೋಗ 166/1). ಪ್ರಥಮ ದಿನದ ಯುದ್ಧದಲ್ಲಿ ಶ್ರುತಕರ್ಮಾನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/66–68). ಅಭಿಮನ್ಯುವಿನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 110/15; ಭೀಷ್ಮ 111/18–21). ಅರ್ಜುನನೊಂದಿಗೆ ಯುದ್ಧ ಮತ್ತು ಆತನಿಂದ ಇವನ ವಧೆ (ದ್ರೋಣ 92/61–71). ಇವನ ತಮ್ಮನೂ ಅರ್ಜುನನನ್ನು ಆಕ್ರಮಿಸಿದನು ಮತ್ತು ಆತನಿಂದ ಹತನಾದನು (ಕರ್ಣ 56/110–111).

(2) ಪಾಂಡವ ಪಕ್ಷದ ಯೋಧ. ಇವನನ್ನು ದ್ರೋಣಾಚಾರ್ಯನು ಹೊಡೆದು ರಥದ ಪೀಠದಿಂದ ಕೆಳಗೆ ಬೀಳಿಸಿದ್ದನು (ದ್ರೋಣ 21/56).

**ಸುದತ್ತಾ** – ಶ್ರೀಕೃಷ್ಣನ ಒಬ್ಬ ಪಟ್ಟದ ರಾಣಿ. ದ್ವಾರಕೆಯಲ್ಲಿರುವುದಕ್ಕೆ ಈಕೆಗೆ ಕೇತುಮಾನ್ ಎಂಬ ಪ್ರಾಸಾದ ಪ್ರಾಪ್ತವಾಗಿತ್ತು. ಅದರ ವಿಶೇಷ ವರ್ಣನೆ (ಸಭಾ 38/29).

**ಸುದರ್ಶನ** (ಚಕ್ರ) – (1) ಭಗವಾನ್ ನಾರಾಯಣ ಹಾಗೂ ಶ್ರೀಕೃಷ್ಣನ ಚಕ್ರದ ಹೆಸರು. ಇದರ ತೇಜಸ್ವಿ ಹಾಗೂ ಪ್ರಭಾವಶಾಲಿ ದಿವ್ಯರೂಪದ ವರ್ಣನೆ (ಆದಿ 19/20–29). ಅಗ್ನಿದೇವನು ಶ್ರೀಕೃಷ್ಣನಿಗೆ ಈ ಚಕ್ರವನ್ನು ಕೊಟ್ಟನು ಮತ್ತು ಇದರ ಪ್ರಭಾವವನ್ನು ತಾನೇ ವರ್ಣಿಸಿದನು (ಆದಿ 224/23–27). ಶ್ರೀ ಕೃಷ್ಣನು ಈ ಅಸ್ತ್ರದಿಂದ ಶಿಶುಪಾಲನ ತಲೆ ಕಡಿದನು (ಸಭಾ 45/21–25). ಇದರಿಂದ ಸೌಭವಿಮಾನದ ವಿಧ್ವಂಸ ಮತ್ತು ಶಾಲ್ವನ ಸಂಹಾರ (ವನ 22/29–37). ಶ್ರೀಕೃಷ್ಣನು ಅರ್ಜುನನನ್ನು ತಾನು ಕೊಟ್ಟ ಚಕ್ರದಿಂದ ಶತ್ರುಗಳ ತಲೆಕಡಿಯುವಂತೆ ಪ್ರೇರಿಸಿದುದು (ಕರ್ಣ 89/45–46).

(2) ದೇವರಾಜ ಇಂದ್ರನ ರಥದ ಹೆಸರು (ಅಥವಾ ವಿಶೇಷಣ) (ವಿರಾಟ 56/3).

(3) ದೇವತೆಗಳಿಗೆ ಆದರಣೀಯನಾದ ಒಬ್ಬ ರಾಜ. ಇವನು ರಾಜಾ ನಗ್ನಜಿತನಿಂದ ಬಂಧಿಸಲ್ಪಟ್ಟಿದ್ದನು. ಶ್ರೀಕೃಷ್ಣನು ನಗ್ನಜಿತನ ಸಮಸ್ತ ಪುತ್ರರನ್ನು ಸೋಲಿಸಿ ಇವನನ್ನು ಸೆರೆಯಿಂದ ಬಿಡಿಸಿದ್ದನು (ಉದ್ಯೋಗ 48/75).

(4) ಒಂದು ದ್ವೀಪ (ಇದು ಜಂಬೂದ್ವೀಪದ ನಾಮಾಂತರ). ಸಂಜಯನಿಂದ ಧೃತರಾಷ್ಟ್ರನಿಗೆ ಇದರ ವರ್ಣನೆ (ಭೀಷ್ಮ 5/13ರಿಂದ 6 ಅಧ್ಯಾಯವರೆಗೆ).

(5) ಜಂಬೂದ್ವೀಪದ ಜಂಬುನೇರಳೆ ಮರದ ಹೆಸರು. ಈ ಮರದ ಎತ್ತರ ಹನ್ನೊಂದು ಸಾವಿರ ಯೋಜನವಾಗಿದೆ. ಇದರ ಫಲಗಳ ಉದ್ದ ಎರಡೂವರೆ ಸಾವಿರ ಅರತ್ನಿಯೆನ್ನಲಾಗಿದೆ (ಭೀಷ್ಮ 7/19–22).

(6) ಕೌರವಪಕ್ಷದ ಒಬ್ಬ ರಾಜ. ಇವನು ಸಾತ್ಯಕಿಯಿಂದ ಕೊಲ್ಲಲ್ಪಟ್ಟನು (ದ್ರೋಣ 118/14–15).

(7) ಮಾಳವ ರಾಜ. ಪಾಂಡವಪಕ್ಷದ ಒಬ್ಬ ಯೋಧ. ಅಶ್ವತ್ಥಾಮನಿಂದ ಇವನ ವಧೆ (ದ್ರೋಣ 200/73–83).

(8) ಧೃತರಾಷ್ಟ್ರನ ಒಬ್ಬ ಮಗ. ಇವನು ಭೀಮಸೇನನ ಮೇಲೆ ಆಕ್ರಮಣ ಮಾಡಿದನು. ಅನಂತರ ಅವನಿಂದಲೇ ಕೊಲ್ಲಲ್ಪಟ್ಟನು (ಶಲ್ಯ 27/31–50).

(9) ಅಗ್ನಿದೇವನ ಪುತ್ರ. ಇವನ ತಾಯಿ

ಇಕ್ಷ್ವಾಕುವಂಶದ ದುರ್ಯೋಧನನ ಪುತ್ರಿ ಸುದರ್ಶನಾ ಎಂಬವಳು (ಅನು 2/35–36). ಮಹಾರಾಜ ಓಘವಂತನ ಪುತ್ರಿ ಓಘವತಿ ಯೊಂದಿಗೆ ಇವನ ವಿವಾಹ (ಅನು 2/38–39). ಅತಿಥಿಸತ್ಕಾರದಿಂದ ಈತ ಮೃತ್ಯುವನ್ನೇ ಗೆದ್ದ ವನು (ಅನು 2/40–98).

**ಸುದರ್ಶನಾ** – ಮಾಹಿಷ್ಮತಿಯ ರಾಜ ನೀಲ (ಅಥವಾ ದುರ್ಯೋಧನ)ನ ಅನುಪಮ ಸುಂದರಿಯಾದ ಮಗಳು. ಈಕೆ ಪ್ರತಿದಿನ ತಂದೆಯ ಅಗ್ನಿಹೋತ್ರ ಗೃಹದಲ್ಲಿ ಅಗ್ನಿಯನ್ನು ಪ್ರಜ್ವಲಗೊಳಿಸಲು ಇರುತ್ತಿದ್ದಳು (ಸಭಾ 31/28). ಈಕೆಯ ಮೇಲೆ ಅಗ್ನಿದೇವನಿಗೆ ಆಸಕ್ತಿ (ಸಭಾ 31/30–31). ತಂದೆಯಿಂದ ಈಕೆ ಅಗ್ನಿದೇವನ ಸೇವೆಗೆ ಸಮರ್ಪಣೆ (ಸಭಾ 31/33). ಇವಳು ರಾಜಾ ದುರ್ಯೋಧನನ(ನೀಲ)ನಿಂದ ನರ್ಮದಾ ನದಿಯ ಗರ್ಭದಲ್ಲಿ ಜನಿಸಿದ್ದಳು. ಅಗ್ನಿದೇವ ನೊಂದಿಗೆ ಈಕೆಯ ವಿವಾಹ (ಅನು 2/34). ಅಗ್ನಿಯಿಂದ ಈಕೆಗೆ ಸುದರ್ಶನನೆಂಬ ಪುತ್ರನ ಪ್ರಾಪ್ತಿ (ಅನು 2/36).

**ಸುದಾಮಾ** – (1) ದಶಾರ್ಣದ ಒಬ್ಬ ಮಹಾ ಮಾನ್ಯ ರಾಜ. ಇವನಿಗೆ ಇಬ್ಬರು ಪುತ್ರಿಯರಿ ದ್ದರು. ಒಬ್ಬಳ ವಿವಾಹ ವಿದರ್ಭರಾಜ ಭೀಮ ನೊಂದಿಗೂ, ಎರಡನೇಯವಳದು ಚೇದಿ ರಾಜ ವೀರಬಾಹುವಿನೊಂದಿಗೂ ನಡೆದಿತ್ತು (ವನ 96/14–15).

(2) ಉತ್ತರ ಭಾರತದ ಒಂದು ಜನಪದ (ಭೀಷ್ಮ 9/55). ಇದನ್ನು ಮತ್ತು ಇಲ್ಲಿದ್ದ ರಾಜನನ್ನು ಅರ್ಜುನನು ಗೆದ್ದಿದ್ದನು (ಸಭಾ 27/11).

(3) ಪಾಂಡವಪಕ್ಷದ ಒಬ್ಬ ಯೋಧ. ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/49).

(4) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/10).

**ಸುದಾಸ** – ಕೋಸಲ ದೇಶದ ಒಬ್ಬ ರಾಜ. ಇವನು ಸಾಯಂ–ಪ್ರಾತಃಸ್ಮರಣೆ, ಕೀರ್ತನೆಗೆ ಯೋಗ್ಯನಾದವನು (ಅನು 165/57).

**ಸುದಿನ** – ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಲೋಕವಿಖ್ಯಾತ ತೀರ್ಥ. ಇದರಲ್ಲಿ ಸ್ನಾನಮಾಡಿದರೆ ಮನುಷ್ಯ ಸೂರ್ಯಲೋಕಕ್ಕೆ ಹೋಗುತ್ತಾನೆ (ವನ 83/100).

**ಸುದಿವಾ** – ವಾನಪ್ರಸ್ಥನಾದ ಒಬ್ಬ ಋಷಿ. ಇವನು ವಾನಪ್ರಸ್ಥಧರ್ಮದ ಪಾಲನೆಮಾಡುತ್ತಾ ಸ್ವರ್ಗ ಲೋಕವನ್ನು ಪಡೆದನು (ಶಾಂತಿ 244/17–18).

**ಸುದೃಷ್ಟ** – ಒಂದು ಭಾರತೀಯ ಜನಪದ (ಭೀಷ್ಮ 9/51).

**ಸುದೇವ** – (1) ವಿದರ್ಭ ನರೇಶನು ದಮ ಯಂತಿಯನ್ನು ಹುಡುಕಲು ನೇಮಿಸಿದ ಬ್ರಾಹ್ಮಣ ರಲ್ಲಿ ಒಬ್ಬ. ಇವನು ಚೇದಿರಾಜನ ಅರಮನೆ ಯಲ್ಲಿ ದಮಯಂತಿಯನ್ನು ಗುರುತಿಸಿ, ಆಕೆ ಯೊಡನೆ ಸಂಭಾಷಣೆ ಮಾಡಿದನು (ವನ 68/2 –30). ಇವನು ಚೇದಿರಾಜನ ತಾಯಿಗೆ ದಮ ಯಂತಿಯ ಪರಿಚಯ ಹೇಳಿದುದು (ವನ 69/ 1–9). ದಮಯಂತಿಯನ್ನು ನೋಡಿ ಪ್ರಸನ್ನನಾದ ರಾಜಾ ಭೀಮನಿಂದ ಇವನಿಗೆ ಪುರಸ್ಕಾರ ಪ್ರಾಪ್ತಿ (ವನ 69/27). ದಮಯಂತಿಯು ಇವನನ್ನು ಅಯೋಧ್ಯಾಧೀಶ ಋತುಪರ್ಣನ ಬಳಿಗೆ ಸ್ವಯಂವರದ ಸಂದೇಶದೊಂದಿಗೆ ಕಳುಹಿಸಿ ದುದು. ಇವನು ಅಯೋಧ್ಯೆಗೆ ಹೋಗಿ, ರಾಜಾ ಋತುಪರ್ಣನೊಂದಿಗೆ ದಮಯಂತಿಯ ಸ್ವಯಂ ವರ ಸಂದೇಶ ಹೇಳಿದುದು (ವನ 70/22–27).

(2) ಮಹಾರಾಜ ಅಂಬರೀಷನ ಒಬ್ಬ ಶಾಂತ ಸ್ವಭಾವದ ಸೇನಾಪತಿ. ಇವನಿಗೆ ರಾಜನಿಗಿಂತ ಮೊದಲೇ ಸ್ವರ್ಗಲೋಕ ಪ್ರಾಪ್ತವಾಗಿತ್ತು. ಇವ ನನ್ನು ಇಂದ್ರನ ಬಳಿಯಲ್ಲಿ ನೋಡಿ, ರಾಜನು ಆಶ್ಚರ್ಯಚಕಿತನಾಗಿ, ಇವನ ಕುರಿತು ಇಂದ್ರ ನನ್ನು ಪ್ರಶ್ನಿಸಿದುದು (ಶಾಂತಿ 98/3–11). ರಾಜನ ಆಜ್ಞೆಯಂತೆ ರಾಕ್ಷಸರೊಡನೆ ಹೋರಾ ಡಲು ಇವನ ನಿರ್ಗಮನ (ಶಾಂತಿ 98/11). ಶತ್ರುವು ಪ್ರಬಲನೆಂದು ತಿಳಿದು, ಇವನು ಶಿವನಿಗೆ ಶರಣಾದುದು ಮತ್ತು ಅವನನ್ನು ಪ್ರಸನ್ನಗೊಳಿಸಿ ದುದು (ಶಾಂತಿ 98/11). ಶಿವನಿಂದ ಇವನಿಗೆ ವರ ಪ್ರಾಪ್ತಿ (ಶಾಂತಿ 98/11). ಇವನಿಂದ ರಾಕ್ಷಸ ಸಂಹಾರ ಮತ್ತು ತಾನೂ ವಿಯಮನಿಂದ ಕೊಲ್ಲಲ್ಪಟ್ಟದ್ದು, ಮಾತ್ರವಲ್ಲದೆ ಸಾಯುತ್ತಿದ್ದಂತೆ ವಿಯಮನನ್ನೂ ಕೊಂದು ಹಾಕಿದುದು (ಶಾಂತಿ 98/11).

(3) ಕಾಶೀರಾಜ ಹರ್ಯಶ್ವನ ಪುತ್ರ. ಇವನು ದೇವತೆಯಂತೆ ತೇಜಸ್ವಿ, ಇನ್ನೊಬ್ಬ ಧರ್ಮರಾಜ

ನಂತೆ ನ್ಯಾಯಪ್ರಿಯನಾಗಿದ್ದನು. ತಂದೆಯ ಅನಂತರ ಇವನು ಕಾಶೀರಾಜನ ಪದವಿಯಲ್ಲಿ ಅಭಿಷಿಕ್ತನಾದನು. ಈ ಮಧ್ಯೆ ವೀತಹವ್ಯನ ಪುತ್ರರು ಇವನ ಮೇಲೆ ಆಕ್ರಮಣ ಮಾಡಿ, ಇವನನ್ನು ಧರಾಶಾಯಿಯಾಗಿ ಮಾಡಿದರು. ಅನಂತರ ಇವನ ಮಗ ದಿವೋದಾಸನು ತಂದೆಯ ಸಿಂಹಾಸನದಲ್ಲಿ ಅಭಿಷಿಕ್ತನಾದನು (ಅನು 30/13–15).

**ಸುದೇವಾ** – (1) ಅಂಗರಾಜನ ಮಗಳು. ಇವಳು ಮಹಾರಾಜ ಅರಿಹನ ಪತ್ನಿ. ಇವಳ ಗರ್ಭದಿಂದ ಋಚನೆಂಬ ಪುತ್ರನ ಜನನವಾಗಿತ್ತು (ಆದಿ 95/24).

(2) ದಶಾರ್ಹಕುಲದ ಕನ್ಯೆ. ಇವಳು ಪೂರು ವಂಶದ ಮಹಾರಾಜ ವಿಕುಂಠನನ ಪತ್ನಿಯಾಗಿದ್ದಳು. ಇವಳ ಗರ್ಭದಿಂದ ಅಜಮೀಢನ ಜನ್ಮವಾಗಿತ್ತು (ಆದಿ 95/36).

**ಸುದೇಷ್ಣ** (1) ದೇವರಾಜ ಇಂದ್ರ ದ್ವಾರಕೆಗೆ ಬಂದು ಭೇಟಿಯಾದ ಪ್ರಧಾನ ಯಾದವರಲ್ಲಿ ಇವನೂ ಒಬ್ಬನಾಗಿದ್ದನು (ಸಭಾ 38/29).

(2) ಒಂದು ಭಾರತೀಯ ಜನಪದ (ಭೀಷ್ಮ 9/46).

**ಸುದೇಷ್ಣಾ** – ಮತ್ಸ್ಯರಾಜ ವಿರಾಟನ ಭಾರ್ಯೆ. ಕೇಕಯರಾಜನ ಕನ್ಯೆ. ಇವಳ ಇನ್ನೊಂದು ಹೆಸರು ಚಿತ್ರಾ ಎಂದಾಗಿತ್ತು (ವಿರಾಟ 9/6). ಇವಳ ಬಳಿಗೆ ದ್ರೌಪದಿ ಸೈರಂಧ್ರಿ ವೇಷದಲ್ಲಿ ಬಂದುದು; ಮಾತುಕತೆಯಾದ ಮೇಲೆ ಈಕೆ ದ್ರೌಪದಿಯ ಶರ್ತಗಳನ್ನು ಒಪ್ಪಿ, ಆಕೆಗೆ ತನ್ನ ಬಳಿಗೆ ಆಶ್ರಯ ಕೊಟ್ಟದ್ದು (ವಿರಾಟ 9/8–36). ಸೈರಂಧ್ರಿಯ ವಿಷಯದಲ್ಲಿ ಈಕೆಯೊಡನೆ ಕಾಮಾಸಕ್ತ ಕೀಚಕನ ಮಾತುಕತೆ ಮತ್ತು ಆತ ಪ್ರಾರ್ಥಿಸಿದಾಗ ಈಕೆ ಅವನಿಗೆ ತನ್ನ ಸಮ್ಮತಿ ಸೂಚಿಸಿದುದು (ವಿರಾಟ 14/6–10). ದ್ರೌಪದಿಯನ್ನು ಕೀಚಕನ ಮನೆಗೆ ಕಳುಹಿಸಿದುದು (ವಿರಾಟ 15 ಅಧ್ಯಾಯ). ಕೀಚಕನು ಹೊಡೆದಾಗ ಅಳುತ್ತಿದ್ದ ದ್ರೌಪದಿ ಇವಳ ಬಳಿಗೆ ಬಂದುದು; ಈಕೆ ಅವಳು ಅಳುವ ಕಾರಣ ಕೇಳಿದುದು ಮತ್ತು ಸಮಾಧಾನದ ಧೈರ್ಯ ಹೇಳಿದುದು (ವಿರಾಟ 16/48–50). ವಿರಾಟನು ಈಕೆಯ ಮೂಲಕ ದ್ರೌಪದಿಯು ಹೊರಟು ಹೋಗುವಂತೆ ಹೇಳಿಸಿದುದು (ವಿರಾಟ 24/8–10). ದ್ರೌಪದಿಯು ಅರಮನೆಯಿಂದ ಹೊರಟು ಹೋಗುವಂತೆ ಈಕೆಯ ಮೂಲಕ ರಾಜನ ಸಂದೇಶ ತಿಳಿಸಲ್ಪಟ್ಟದ್ದು (ವಿರಾಟ 24/27–28). ದ್ರೌಪದಿಯು ಇನ್ನೂ ಹದಿಮೂರು ದಿನ ಇರುವಂತೆ ಪ್ರಾರ್ಥಿಸಿದಾಗ, ಸುಧೇಷ್ಣೆಯು ಆಕೆಯ ಇಚ್ಛಾನುಸಾರ ಇರುವಂತೆ ಆಜ್ಞೆ ನೀಡಿದುದು ಮತ್ತು ತನ್ನ ಪತಿ–ಪುತ್ರರನ್ನು ರಕ್ಷಿಸುವಂತೆ ಆಕೆಗೆ ಶರಣಾದುದು (ವಿರಾಟ 24/29). ಉತ್ತರೆಯ ವಿವಾಹೋತ್ಸವದಲ್ಲಿ ಉಪಪ್ಲವ್ಯ ನಗರದಲ್ಲಿ ಈಕೆ ದ್ರೌಪದಿಯ ಬಳಿಗೆ ಹೋದುದು (ವಿರಾಟ 72/30).

**ಸುದ್ಯುಮ್ನ** – ಒಬ್ಬ ಪ್ರಾಚೀನ ರಾಜರ್ಷಿ. ಇವನು ಯಮಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/16). ತನ್ನ ಸಹೋದರ ಶಂಖನು ಕಳುಹಿಸಿದಾಗ, ನ್ಯಾಯ ನಿರ್ಣಯಕ್ಕಾಗಿ ಲಿಖಿತನು ಇವನ ಬಳಿಗೆ ಬಂದುದು ಮತ್ತು ಇವನು ಕಳ್ಳತನಕ್ಕೆ ದಂಡನೆಯ ರೂಪವಾಗಿ ಲಿಖಿತನ ಕೈಯನ್ನು ಕಡಿಸಿದ್ದು (ಶಾಂತಿ 23/29–36). ದಂಡನೆಯ ರೂಪದ ಧರ್ಮಪಾಲನೆಯಿಂದ ಈತನಿಗೆ ಪರಮ ಸಿದ್ಧಿಯ ಪ್ರಾಪ್ತಿ (ಶಾಂತಿ 23/45). ಮಹರ್ಷಿ ಲಿಖಿತನಿಗೆ ಧರ್ಮಮಾರ್ಗದ ದಂಡನೆ ವಿಧಿಸಿದ್ದರಿಂದ ಇವನಿಗೆ ಪರಮ ಉತ್ತಮ ಲೋಕಗಳ ಪ್ರಾಪ್ತಿ (ಅನು 137/19).

**ಸುಧನ್ವಾ** – (1) ಮಹರ್ಷಿ ಅಂಗೀರಸನ ಪುತ್ರ. ಕೇಶಿನಿಗಾಗಿ ಪ್ರಹ್ಲಾದ ಪುತ್ರ ವಿರೋಚನನೊಂದಿಗೆ ಇವನ ಸಂವಾದವಾದಾಗ ಪ್ರಹ್ಲಾದನ ಬಳಿಗೆ ನ್ಯಾಯನಿರ್ಣಯಕ್ಕೆ ಹೋದುದು ಮತ್ತು ಆತ ನಿರ್ಣಯ ಹೇಳಿದುದು (ಸಭಾ 68/65–67; ಉದ್ಯೋಗ 35/14–36). ಇವನು ವಿರೋಚನನಿಗೆ ಜೀವನದಾನವಿತ್ತದ್ದು (ಉದ್ಯೋಗ 35/37–38). ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೋಡಲು ಹೋದುದು (ಅನು 26/7). ಇವನು ಮಹರ್ಷಿ ಅಂಗೀರಸನ ಎಂಟನೇ ಮಗನಾಗಿದ್ದನು (ಅನು 85/30–31). ಇವನು ಸ್ಕಂದನಿಗೆ ಒಂದು ಗಾಡಿ ಮತ್ತು ವಿಶಾಲ ನೊಗದಿಂದ ಕೂಡಿದ ರಥವನ್ನು ಒಪ್ಪಿಸಿದ್ದನು (ಅನು 86/24).

(2) ಒಬ್ಬ ಸಂಶಪ್ತಕ ಯೋಧ. ಇವನು ಅರ್ಜುನನಿಂದ ಕೊಲ್ಲಲ್ಪಟ್ಟನು (ದ್ರೋಣ 18/42).

(3) ಪಾಂಡವಪಕ್ಷದ ಒಬ್ಬ ಪಾಂಚಾಲ ಯೋಧ. ಇವನು ದ್ರುಪದನ ಪುತ್ರ. ಇವನ ಕುದುರೆಗಳ ವರ್ಣನೆ (ದ್ರೋಣ 23/55). ಇವನು ವೀರ ಕೇತುವಿನ ಸಹೋದರ. ವೀರಕೇತು ಕೊಲ್ಲಲ್ಪಟ್ಟಾಗ ಇವನು ದುಃಖಿತನಾಗಿ ಸಹೋದರರ ಸಮೇತ ನಾಗಿ ಆಚಾರ್ಯ ದ್ರೋಣರ ಮೇಲೆ ಆಕ್ರಮಣ ಮಾಡಿದ್ದನು (ದ್ರೋಣ 122/44). ದ್ರೋಣಾ ಚಾರ್ಯನು ಇವನನ್ನು ರಥಹೀನನನ್ನಾಗಿ ಮಾಡಿ ಕೊಂದು ಕೆಡಹಿದನು (ದ್ರೋಣ 122/45–49).

(4) ಒಬ್ಬ ಪ್ರಾಚೀನ ರಾಜ. ಈತನನ್ನು ಮಾಂ ಧಾತನು ಗೆದ್ದಿದ್ದನು (ದ್ರೋಣ 62/10–11).

**ಸುಧರ್ಮಾ** – (1) ಯಾದವರ ಒಂದು ಸಭೆ. ಸೈನಿಕರು ಅಲ್ಲಿಗೆ ಹೋಗಿ ಸುಭದ್ರಾಹರಣದ ಸಮಾಚಾರ ತಿಳಿಸಿದ್ದರು (ಆದಿ 219/10). ಈ ಸಭೆಯನ್ನು ದಾಶಾರ್ಹೀ ಎನ್ನುತ್ತಾರೆ. ಇದರ ಉದ್ದಗಲಗಳು ಒಂದೊಂದು ಯೋಜನದಷ್ಟಿ ದ್ದವು. ಇದರಲ್ಲಿ ಕುಳಿತಿದ್ದ ಭಗವಾನ್ ಶ್ರೀಕೃಷ್ಣನ ಬಳಿಗೆ ದೇವರಾಜ ಇಂದ್ರನು ಬಂದನು ಮತ್ತು ಭೌಮಾಸುರನನ್ನು ಕೊಂದು ಅದಿತಿಯ ಕುಂಡಲಗಳನ್ನು ತರುವಂತೆ ಪ್ರಾರ್ಥಿಸಿದನು. ಈ ಕಾರ್ಯವನ್ನು ಪೂರ್ಣಗೊಳಿಸಿ ಶ್ರೀಕೃಷ್ಣನು ಸ್ವರ್ಗದಿಂದ ಹಿಂತಿರುಗಿದಾಗ, ಅವನನ್ನು ಅವನ ನವಾಗತ ರಾಣಿಯರನ್ನೂ ನೋಡುವುದಕ್ಕೋಸ್ಕರ ಯಶೋದಾ, ದೇವಕಿ, ರೋಹಿಣಿ ಮೊದಲಾದ ತಾಯಂದಿರು, ಶ್ರೀಕೃಷ್ಣನ ಎಂಟೂ ಮಂದಿ ಪಟ್ಟದ ರಾಣಿಯರು ಮತ್ತು ಏಕಾನಂಗಾ ಎಂಬ ಯಶೋದಾಪುತ್ರಿ – ಇವರೆಲ್ಲ ಈ ಸಭೆಗೆ ಬಂದರು (ಸಭಾ 38/29). ಈ ಸಭೆಗೆ ಅರ್ಜುನನ ಪ್ರವೇಶ (ಮೌಸಲ 7/7).

(2) ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದ ವೃಷ್ಣಿ ವಂಶದ ಒಬ್ಬ ರಾಜಕುಮಾರ. ಇವನು ಅರ್ಜುನ ನಿಂದ ಧನುರ್ವೇದದ ಶಿಕ್ಷಣ ಪಡೆದಿದ್ದನು (ಸಭಾ 4/28–35).

(3) ದಶಾರ್ಣದೇಶದ ಒಬ್ಬ ರಾಜ. ಇವನ ಪರಾಕ್ರಮದಿಂದ ಸಂತುಷ್ಟನಾಗಿ, ಮಹಾಬಲ ವಂತನಾದ ಭೀಮಸೇನನು ಇವನನ್ನು ತನ್ನ ಸೇನಾಪತಿಯಾಗಿ ಮಾಡಿಕೊಂಡಿದ್ದನು (ಸಭಾ 29/5–6).

(4) ಇಂದ್ರಸಾರಥಿ ಮಾತಲಿಯ ಪತ್ನಿ (ಉದ್ಯೋಗ 97/19).

(5) ಒಬ್ಬ ಸಂಶಪ್ತಕ ಯೋಧ. ಅರ್ಜುನ ನೊಂದಿಗೆ ಇವನಿಗೆ ಯುದ್ಧವಾಗಿತ್ತು (ದ್ರೋಣ 18/20).

**ಸುಧಾಮಾ** – ಕುಶ ದ್ವೀಪದ ಒಂದು ಸುವರ್ಣ ಮಯ ಪರ್ವತ. ಇದು ಹವಳಗಳಿಂದ ತುಂಬಿದೆ ಮತ್ತು ದುರ್ಗಮವಾಗಿದೆ (ಭೀಷ್ಮ 12/10).

**ಸುನಕ್ಷತ್ರಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/9).

**ಸುನಂದಾ** – (1) ಕೇಕಯ ರಾಜಕುಮಾರಿ. ಇವಳು ಕುರುವಂಶದ ರಾಜಾ ಸಾರ್ವಭೌಮನ ಪತ್ನಿ. ಇವಳ ಗರ್ಭದಿಂದ ಜಯತ್ಸೇನನ ಜನನವಾಗಿತ್ತು (ಆದಿ 95/16).

(2) ಕಾಶೀರಾಜ ಸರ್ವಸೇನನ ಮಗಳು. ಇವಳು ದುಷ್ಯಂತ ಪುತ್ರ ಸಮ್ರಾಟ ಭರತನ ಪತ್ನಿಯಾಗಿ ದ್ದಳು. ಇವಳ ಗರ್ಭದಿಂದ ಭುಮನ್ಯು ಎಂಬ ಪುತ್ರನ ಜನನವಾಗಿತ್ತು (ಆದಿ 95/32).

(3) ಶಿಬಿ ದೇಶದ ರಾಜಕನ್ಯೆ. ಇವಳು ಮಹಾರಾಜ ಪ್ರತೀಪನ ಪತ್ನಿ. ಇವಳ ಗರ್ಭದಿಂದ ದೇವಾಪಿ, ಶಾಂತನು ಮತ್ತು ಬಾಹ್ಲೀಕರ ಜನನವಾಗಿತ್ತು (ಆದಿ 95/44).

(4) ಚೇದಿ ರಾಜ ಸುಬಾಹುವಿನ ಸೋದರಿ. ರಾಜಮಾತೆಯು ಇವಳೊಂದಿಗೆ ಇರುವಂತೆ ದಮಯಂತಿಗೆ ಆಜ್ಞೆ ಮಾಡಿದ್ದಳು (ವನ 65/ 73–76). ವಿದರ್ಭ ನಿವಾಸಿ ಸುದೇವ ಬ್ರಾಹ್ಮಣ ನೊಂದಿಗೆ ಏಕಾಂತದಲ್ಲಿ ದಮಯಂತಿ ಮಾತಾಡುವುದನ್ನು ನೋಡಿ, ಈಕೆ ರಾಜಮಾತೆಗೆ ಈ ಕುರಿತು ಸೂಚನೆ ನೀಡಿದ್ದಳು (ವನ 68/ 33–34). ಬ್ರಾಹ್ಮಣ ಸುದೇವನು ಹೇಳಿದ್ದರಿಂದ ಈಕೆ ದಮಯಂತಿಯ ಹಣೆಯಲ್ಲಿರುವ ಪ್ರಾಕೃತಿಕ ವಾದ ಶಿರೋಮಣಿಯ ಕೊಳೆಯನ್ನು ತೊಳೆ ದುದು ಮತ್ತು ಗುರುತಿಸಿದ ಬಳಿಕ ದುಃಖಿಸಿದುದು ಮತ್ತು ದಮಯಂತಿಯನ್ನು ಅಪ್ಪಿಕೊಂಡದ್ದು (ವನ 69/10–12). ಇವಳ ತಂದೆಯ ಹೆಸರು ವೀರಬಾಹು ಎಂದಾಗಿತ್ತು. ಇವಳು ದಮ ಯಂತಿಯ ತಾಯಿಯ ಸಹೋದರಿಯ ಮಗಳಾ ಗಿದ್ದಳು (ವನ 69/14–15).

**ಸುನಯ** – ದಕ್ಷಿಣ ಭಾರತದ ಒಂದು ಜನಪದ

(ಭೀಷ್ಮ 9/64).

**ಸುನಸಾ** – ಒಂದು ಪವಿತ್ರನದಿ. ಭಾರತ ವಾಸಿಗಳು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/31).

**ಸುನಾಭ** (ಪದ್ಮನಾಭ) – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 116/5). ಭೀಮಸೇನನೊಂದಿಗೆ ಇವನ ಯುದ್ಧ ಮತ್ತು ಅವನಿಂದ ಈತನ ವಧೆ (ಭೀಷ್ಮ 88/12).

(2) ವರುಣನ ಮಂತ್ರಿ. ಇವನು ತನ್ನ ಪುತ್ರ ಪೌತ್ರರ ಸಹಿತನಾಗಿ, ಗೌಪುಷ್ಕರ ತೀರ್ಥಗಳೊಂದಿಗೆ ವರುಣನ ಉಪಾಸನೆ ಮಾಡುತ್ತಾನೆ (ಸಭಾ 9/28–29).

(3) ಒಬ್ಬ ದಿವ್ಯ ಪರ್ವತ. ಇವನು ಧನಾಧೀಶ ಕುಬೇರನ ಸಭೆಯಲ್ಲಿದ್ದುಕೊಂಡು ಅವನ ಸೇವೆ ಮಾಡುತ್ತಾನೆ (ಸಭಾ 10/32–33).

**ಸುನಾಮಾ** – (1) ರಾಜಾ ಸುಕೇತುವಿನ ಒಬ್ಬ ಮಗ. ಇವನು ದ್ರೌಪದೀ ಸ್ವಯಂವರಕ್ಕೆ ತನ್ನ ತಂದೆ ಮತ್ತು ಸಹೋದರನೊಂದಿಗೆ ಬಂದಿದ್ದನು (ಆದಿ 185/9).

(2) ಉಗ್ರಸೇನನ ಮಗ. ಕಂಸನ ಸಹೋದರ. ಇವನನ್ನು ಶ್ರೀಕೃಷ್ಣ ಮತ್ತು ಬಲರಾಮರು ಕೊಂದಿದ್ದರು (ಸಭಾ 14/34). ಇವನು ಕಂಸನ ಸೇನಾಪತಿಯೂ ಆಗಿದ್ದನು. ಕಂಸನಷ್ಟೇ ಬಲವಂತನೂ ಆಗಿದ್ದನು. ಅವನು ಕುದುರೆ ಸವಾರ ಸೇನೆಯ ಮುಖಂಡನಾಗಿದ್ದನು (ಸಭಾ 38/29).

(3) ತನ್ನ ವಂಶವನ್ನು ವಿಸ್ತಾರಗೊಳಿಸಿದ, ಗರುಡನ ಒಬ್ಬ ಮಗ (ಉದ್ಯೋಗ 101/2).

(4) ಸ್ಕಂದನ ಒಬ್ಬ ಸೈನಿಕ (ಶಲ್ಯ 45/59).

**ಸುನೀಥ** – (1) ಒಂದು ಮಂತ್ರ. ಹಗಲು ಅಥವಾ ರಾತ್ರಿ ಇದರ ಸ್ಮರಣೆ ಮಾಡಿದರೆ ಸರ್ಪಗಳ ಭಯವಿಲ್ಲ (ಆದಿ 58/23–26).

(2) ಒಬ್ಬ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/16).

(3) ಇಬ್ಬರು ಬೇರೆ ಬೇರೆ ಪ್ರಾಚೀನ ರಾಜರು. ಇವರು ಯಮನ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾರೆ (ಸಭಾ 8/11–15).

(4) ಶಿಶುಪಾಲನ ಇನ್ನೊಂದು ಹೆಸರು (ಸಭಾ 39/11) (ವಿಶೇಷ ನೋಡಿರಿ– ಶಿಶುಪಾಲ).

(5) ಒಂದು ಜನಪದ ಮತ್ತು ಅಲ್ಲಿರುವ ರಾಜ. ಯುಧಿಷ್ಠಿರನ ಅಭಿಷೇಕ ಮತ್ತು ಶ್ರೀಕೃಷ್ಣನ ಅಗ್ರಪೂಜಾ ಕಾರ್ಯಕ್ಕೆ ತೊಂದರೆಯುಂಟಾಗಬೇಕೆಂದು ಇವನ ಅಪೇಕ್ಷೆಯಾಗಿತ್ತು (ಸಭಾ 34/14–15).

(6). ವೃಷ್ಣಿವಂಶದ ಒಬ್ಬ ಕುಮಾರ. ಇವನಿಗೆ ಪ್ರದ್ಯುಮ್ನನಿಂದ ಧನುರ್ವೇದ ಶಿಕ್ಷಣ ದೊರಕಿತ್ತು (ವನ 183/28).

**ಸುನೀಥಾ** – ಮೃತ್ಯುವಿನ ಮಾನಸಪುತ್ರಿ. ಇವಳು ತನ್ನ ರೂಪದಿಂದ, ಗುಣಗಳಿಂದ ಮೂರೂ ಲೋಕಗಳಲ್ಲಿ ವಿಖ್ಯಾತಳಾಗಿದ್ದಳು. ಇವಳೇ (ರಾಜರ್ಷಿ ಅಂಗನ ಮೂಲಕ) ವೇನನಿಗೆ ಜನ್ಮ ವಿತ್ತಿದ್ದಳು (ಶಾಂತಿ 59/93).

**ಸುನೇತ್ರ** – (1) ಸೋಮವಂಶದ ಮಹಾರಾಜ ಕುರುವಿನ ವಂಶದಲ್ಲಿ ಹುಟ್ಟಿದ ಧೃತರಾಷ್ಟ್ರನ ಹನ್ನೆರಡು ಪುತ್ರರಲ್ಲಿ ಒಬ್ಬ. ಇವನು ಲೋಕ ವಿಖ್ಯಾತನಾಗಿದ್ದನು (ಆದಿ 94/59–60).

(2) ತನ್ನ ವಂಶವನ್ನು ವಿಸ್ತಾರ ಮಾಡುವ ಗರುಡನ ಒಬ್ಬ ಪುತ್ರ (ಉದ್ಯೋಗ 101/2).

**ಸುನ್ದ** – ನಿಕುಂಭ ದೈತ್ಯನ ಪುತ್ರ ಮತ್ತು ಉಪಸುಂದನ ಸಹೋದರ. ಈ ಇಬ್ಬರು ಸಹೋದರರು ಭಯಂಕರ ಮತ್ತು ಕ್ರೂರ ಹೃದಯದವರಾಗಿದ್ದರು (ಆದಿ 208/2–3). ಈ ಇಬ್ಬರು ಸಹೋದರರ ಪಾರಸ್ಪರಿಕ ಪ್ರೇಮದ ವರ್ಣನೆ (ಆದಿ 208/4–6). ತ್ರಿಭುವನಗಳಲ್ಲೂ ವಿಜಯಪಡೆಯಲು ವಿಂಧ್ಯಪರ್ವತದಲ್ಲಿ ಇವರಿಬ್ಬರ ಉಗ್ರತಪಸ್ಸು (ಆದಿ 208/7). ಇವರ ತಪಸ್ಸಿಗೆ ದೇವತೆಗಳು ವಿಘ್ನಮಾಡಿದುದು (ಆದಿ 208/11). ಇವರಿಬ್ಬರೂ ತಮ್ಮ ಸಹೋದರನಿಂದಲ್ಲದೆ ಬೇರೆ ಯಾರಿಂದಲೂ ಮರಣ ಬಾರದಂತೆ ಬ್ರಹ್ಮನಿಂದ ವರದಾನ ಪಡೆದುದು (ಆದಿ 208/24–25). ತ್ರಿಭುವನಗಳಲ್ಲಿ ಈ ಇಬ್ಬರ ಅತ್ಯಾಚಾರ (ಆದಿ 209 ಅಧ್ಯಾಯ). ತಿಲೋತ್ತಮೆಯ ಕಾರಣದಿಂದ ಈ ಇಬ್ಬರು ಸಹೋದರರು ಪರಸ್ಪರ ಗದಾಯುದ್ಧದಿಂದ ಮಡಿದುದು (ಆದಿ 211/19).

**ಸುನ್ದರಿಕಾ** – ಒಂದು ತೀರ್ಥ. ಇಲ್ಲಿಗೆ ಹೋಗುವುದರಿಂದ ಮನುಷ್ಯ ಸುಂದರ ರೂಪ ಪಡೆಯು

ತ್ತಾನೆ. ಸುಂದರಿಕಾ ಕುಂಡದಲ್ಲಿ ಸ್ನಾನ ಮಾಡುವುದರಿಂದ ರೂಪ ಮತ್ತು ತೇಜಸ್ಸು ಪ್ರಾಪ್ತವಾಗುತ್ತದೆ (ವನ 84/56; ಅನು 25/21).

**ಸುಪರ್ಣ** – (1) ಒಬ್ಬ ದೇವಗಂಧರ್ವ. ಇವನು ಕಶ್ಯಪನ ಪತ್ನಿ ಮುನಿಯ ಪುತ್ರನಾಗಿದ್ದನು (ಆದಿ 65/42).

(2) ಒಬ್ಬ ದೇವಗಂಧರ್ವ. ಈತ ಕಶ್ಯಪನಿಂದ ಪ್ರಾಧಾ ಎಂಬವಳ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/47).

(3) ಮಯೂರನೆಂಬ ಅಸುರನ ತಮ್ಮ. ಇವನು ರಾಜಾ ಕಾಲಕೀರ್ತಿಯ ರೂಪದಲ್ಲಿ ಭೂಮಿಯ ಮೇಲೆ ಹುಟ್ಟಿದ್ದನು (ಆದಿ 67/36–37).

(4) ಗರುಡನ ಒಂದು ಹೆಸರು (ಉದ್ಯೋಗ 101/1) (ವಿಶೇಷ ನೋಡಿರಿ– ಗರುಡ).

(5) ಒಬ್ಬ ಋಷಿ. ಇವನು ಇಂದ್ರಿಯ ಸಂಯಮ ಮತ್ತು ಮನೋನಿಗ್ರಹದ ಮೂಲಕ ಚೆನ್ನಾಗಿ ತಪಸ್ಸುಮಾಡಿ ಭಗವಾನ್ ಪುರುಷೋತ್ತಮನಿಂದ ಸಾತ್ವತಧರ್ಮವನ್ನು ಪಡೆದನು. ಇವನಿಂದ ವಾಯುದೇವನು ಈ ಧರ್ಮದ ಉಪದೇಶ ಪಡೆದನು (ಶಾಂತಿ 348/20–22).

(6). ಭಗವಾನ್ ವಿಷ್ಣುವಿನ ಒಂದು ಹೆಸರು (ಅನು 149/34).

**ಸುಪರ್ವಾ** – ರಾಜಾ ಭಗದತ್ತನ ನಾಮಾಂತರ (ದ್ರೋಣ 26/52–53) (ವಿಶೇಷ ನೋಡಿರಿ – ಭಗದತ್ತ).

**ಸುಪಾರ್ಶ್ವ** – (1) ಒಬ್ಬ ಕ್ಷತ್ರಿಯ ರಾಜ. ಇವನು ಕುಪಟನೆಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/28–29). ಪಾಂಡವರ ಕಡೆಯಿಂದ ಇವನಿಗೆ ರಣದ ಆಮಂತ್ರಣಕಳುಹಿಸುವ ನಿಶ್ಚಯವಾಗಿತ್ತು (ಉದ್ಯೋಗ 4/14).

(2) ಒಂದು ದೇಶ. ಇಲ್ಲಿರುವ ರಾಜಾ ಕ್ರಥನನ್ನು ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಗೆದ್ದಿದ್ದನು (ಸಭಾ 30/7–8).

**ಸುಪುಣ್ಯಾ** – ಭಾರತವರ್ಷದ ಒಂದು ಪ್ರಮುಖ ನದಿ. ಇದರ ನೀರನ್ನು ಇಲ್ಲಿರುವ ನಿವಾಸಿಗಳು ಕುಡಿಯುತ್ತಾರೆ (ಭೀಷ್ಮ 9/36).

**ಸುಪ್ರಜಾ** – ಭಾನುವೆಂಬ ಅಗ್ನಿಯ ಇಬ್ಬರು ಪತ್ನಿಯರಲ್ಲಿ ಒಬ್ಬಳು. ಇನ್ನೊಬ್ಬಳ ಹೆಸರು ಬೃಹದ್ಭಾಸಾ ಎಂದಾಗಿತ್ತು. ಇವರಿಬ್ಬರೂ ಆರು ಪುತ್ರರಿಗೆ ಜನ್ಮವಿತ್ತರು (ವನ 221/9).

**ಸುಪ್ರತರ್ದನ** – ಒಬ್ಬ ಪ್ರಾಚೀನ ರಾಜ. ಇವನು ಅರ್ಜುನ ಮತ್ತು ಕೃಪಾಚಾರ್ಯನ ಯುದ್ಧ ನೋಡಲು ಇಂದ್ರನ ವಿಮಾನದಲ್ಲಿ ಕುಳಿತು ಬಂದಿದ್ದನು (ವಿರಾಟ 56/9–10).

**ಸುಪ್ರತಿಮ** – ಒಬ್ಬ ಪ್ರಾಚೀನ ರಾಜ. ಸಂಜಯನು ಈತನನ್ನು ಪ್ರಾಚೀನ ರಾಜರಲ್ಲಿ ಗಣಿಸಿದ್ದಾನೆ (ಆದಿ 1/235).

**ಸುಪ್ರತಿಷ್ಠಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/29).

**ಸುಪ್ರತೀಕ** – (1) ಒಬ್ಬ ಪ್ರಾಚೀನ ನರೇಶ (ಆದಿ 1/235).

(2) ಒಬ್ಬ ಮಹರ್ಷಿ. ಇವನು ವಿಭಾವಸುವಿನ ಸಹೋದರ ಮತ್ತು ದೊಡ್ಡ ತಪಸ್ವಿಯಾಗಿದ್ದನು. ಇವನು ಸಹೋದರನೊಡನೆ ಧನವನ್ನು ವಿಭಾಗಿಸಲು ಹಠಮಾಡುತ್ತಿದ್ದನು. ಇವನಿಗೆ ಆನೆಯ ಯೋನಿಯಲ್ಲಿ ಹುಟ್ಟುವಂತೆ ಸಹೋದರನಿಂದ ಶಾಪ ಪ್ರಾಪ್ತವಾದುದು; ಇವನೂ ಸಹೋದರನು ಆಮೆಯಾಗುವಂತೆ ಶಾಪ ನೀಡಿದುದು (ಆದಿ 29/16–24).

(3) ಒಂದು ದಿಗ್ಗಜ. ಇವನ ವಂಶದಲ್ಲಿ ನಾಗರಾಜ ಐರಾವತ, ವಾಮನ, ಕುಮುದ ಮತ್ತು ಅಂಜನರ ಜನನವಾಯಿತು (ಉದ್ಯೋಗ 99/15). ಇದರ ಅಪ್ರಮೇಯ ರೂಪದ ವಿಶೇಷ ವರ್ಣನೆ (ಭೀಷ್ಮ 12/33–35).

(4) ಭಗದತ್ತನ ಗಜರಾಜನ ಹೆಸರು. ಇದರ ಅದ್ಭುತ ಪರಾಕ್ರಮ (ಭೀಷ್ಮ 95/24–86, ದ್ರೋಣ 26/19–68). ಅರ್ಜುನನಿಂದ ಇದರ ವಧೆ (ದ್ರೋಣ 29/43).

**ಸುಪ್ರಭಾ** – (1) ಶ್ರೀಕೃಷ್ಣನ ಪಟ್ಟದ ರಾಣಿಯರಲ್ಲಿ ಒಬ್ಬಳು. ದ್ವಾರಕೆಯಲ್ಲಿ ಇವಳ ವಾಸಕ್ಕೆ ಪದ್ಮಕೂಟವೆಂಬ ಪ್ರಾಸಾದ ಪ್ರಾಪ್ತವಾಗಿತ್ತು. ಇದರ ವಿಶೇಷ ವರ್ಣನೆ (ಸಭಾ 38/29).

(2) ಪುಷ್ಕರದಲ್ಲಿ ಹರಿಯುವ ಸರಸ್ವತಿಯ ಹೆಸರು. ಬ್ರಹ್ಮನ ಆವಾಹನೆಯಿಂದ ಈಕೆ ಪ್ರಕಟಗೊಂಡಿದ್ದಳು (ಶಲ್ಯ 38/13–14).

(3) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/10).

(4) ವದಾನ್ಯ ಋಷಿಯ ಕನ್ಯೆ (ಅನು 19/12).

ಅಷ್ಟಾವಕ್ರನೊಂದಿಗೆ ಈಕೆಯ ವಿವಾಹ (ಅನು 21/18).

**ಸುಪ್ರಯೋಗಾ** – ಒಂದು ಪವಿತ್ರ ನದಿ. ಇದು ಅಗ್ನಿಯ ಉತ್ಪತ್ತಿ ಸ್ಥಾನ (ವನ 222/25). ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/21).

**ಸುಪ್ರವೃದ್ಧ** – ಸೌವೀರ ದೇಶದ ಒಬ್ಬ ರಾಜ ಕುಮಾರ. ಇವನು ಕೈಯಲ್ಲಿ ಧ್ವಜ ಹಿಡಿದು ಕೊಂಡು ಜಯದ್ರಥನ ಹಿಂದೆ ಹೋಗುತ್ತಿದ್ದನು (ವನ 265/10). ಅರ್ಜುನನಿಂದ ಇವನ ವಧೆ (ವನ 271/27).

**ಸುಪ್ರಸಾದ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/71).

**ಸುಪ್ರಸಾದಾ** – ಒಬ್ಬ ಅಪ್ಸರೆ. ಇವಳು ದಕ್ಷಕನ್ಯೆ ಪ್ರಾಧಾಳ ಗರ್ಭದಿಂದ ಮಹರ್ಷಿ ಕಶ್ಯಪನ ಮೂಲಕ ಹುಟ್ಟಿದ್ದಳು (ಆದಿ 65/51). ಇವಳು ಅರ್ಜುನನ ಜನ್ಮಮಹೋತ್ಸವಕ್ಕೆ ಹೋಗಿ ನೃತ್ಯ ಮಾಡಿದ್ದಳು (ಆದಿ 122/63).

**ಸುಬಲ** – (1) ಒಬ್ಬ ಪ್ರಾಚೀನ ರಾಜ (ಆದಿ 1/236).

(2) ಗಾಂಧಾರ ದೇಶದ ಒಬ್ಬ ರಾಜ. ಇವನು ಪ್ರಹ್ಲಾದನ ಶಿಷ್ಯ ನಗ್ನಜಿತನ ಅಂಶದಿಂದ ಹುಟ್ಟಿದ್ದನು. ಇವನ ಸಂತತಿಯು ದೇವತೆಗಳ, ಧರ್ಮದ ನಾಶಕಾರಕವಾಯಿತು. ಇವನ ಪುತ್ರ ಶಕುನಿ 'ಸೌಬಲ'ನೆಂಬ ಹೆಸರಿನಿಂದ ವಿಖ್ಯಾತ ನಾದನು. ಇವನ ಪುತ್ರಿ ಗಾಂಧಾರಿ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ಈಕೆ ದುರ್ಯೋಧನನ ತಾಯಿಯಾಗಿದ್ದಳು. ಈ ಸಹೋದರ ಸಹೋದರಿಯರಿಬ್ಬರೂ ಅರ್ಥಶಾಸ್ತ್ರದ ಜ್ಞಾನದಲ್ಲಿ ನಿಪುಣರಾಗಿದ್ದರು (ಆದಿ 63/111–112). ಭೀಷ್ಮನು ಧೃತರಾಷ್ಟ್ರನಿಗೋಸ್ಕರ ಗಾಂಧಾರಿಯನ್ನು ಪರಿಗ್ರಹಿಸುವ ನಿಮಿತ್ತ ಗಾಂಧಾರ ರಾಜನಲ್ಲಿಗೆ ತನ್ನ ದೂತನನ್ನು ಕಳುಹಿಸಿದಾಗ, 'ಧೃತರಾಷ್ಟ್ರನು ಕುರುಡ'ನೆಂಬ ವಿಚಾರದಲ್ಲಿ ರಾಜಾ ಸುಬಲನು ದೊಡ್ಡ ಯೋಚನೆಗೀಡಾದನು. ಆದರೆ ಆತನ ಕುಲಪ್ರಸಿದ್ಧಿ ಮತ್ತು ಆಚಾರ ವಿಚಾರದ ವಿಷಯದಲ್ಲಿ ಬುದ್ಧಿಪೂರ್ವಕ ವಿಮರ್ಶಿಸಿ, ತನ್ನ ಕನ್ಯೆ ಗಾಂಧಾರಿಯನ್ನು ಕೊಡಲು ವಾಗ್ದಾನ ಮಾಡಿದನು (ಆದಿ 109/11–12). ಯುಧಿಷ್ಠಿರನ ರಾಜಸೂಯ ಯಜ್ಞದಲ್ಲಿ ಗಾಂಧಾರ ರಾಜ ಸುಬಲ, ತನ್ನ ಮಹಾಬಲವಂತ ಪುತ್ರ ಶಕುನಿ, ಅಚಲ ಮತ್ತು ವೃಷಕರೊಂದಿಗೆ ಆಗಮಿಸಿದ್ದನು (ಸಭಾ 34/6–7). ರಾಜಸೂಯ ಯಜ್ಞ ಸಮಾಪ್ತಿಯಾದ ಬಳಿಕ, ಸುಬಲನು ತನ್ನ ಪುತ್ರರ ಸಮೇತ ರಾಜ್ಯಕ್ಕೆ ಹೊರಟಾಗ, ನಕುಲನು ಜೊತೆಯಲ್ಲಿ ಹೋಗಿ ತನ್ನ ರಾಜ್ಯದ ಗಡಿಯ ತನಕ ತಲುಪಿಸಿದ್ದನು (ಸಭಾ 45/49).

(3) ಇಕ್ಷ್ವಾಕುವಂಶದ ಒಬ್ಬ ರಾಜ. ಇವನ ಪುತ್ರ ಜಯದ್ರಥನ ಒಡನಾಡಿಯಾಗಿದ್ದನು (ವನ 265/8–9).

(4) ತನ್ನ ವಂಶ ವಿಸ್ತಾರ ಮಾಡುವ ಗರುಡನ ಒಬ್ಬ ಪುತ್ರ (ಉದ್ಯೋಗ 101/3).

**ಸುಬಾಹು** – (1) ಕಶ್ಯಪ ಮತ್ತು ಕದ್ರುವಿನ ಪರಂಪರೆಯಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/14; ಉದ್ಯೋಗ 103/16).

(2) ಒಬ್ಬ ಅಪ್ಸರೆ. ಇವಳು ದಕ್ಷ ಪುತ್ರಿ ಪ್ರಾಧಾ ಎಂಬವಳ ಗರ್ಭದಲ್ಲಿ ಮಹರ್ಷಿ ಕಶ್ಯಪನಿಂದ ಜನ್ಮ ಪಡೆದಳು (ಆದಿ 65/50). ಅರ್ಜುನನ ಜನ್ಮಕಾಲದಲ್ಲಿ ನೃತ್ಯಮಾಡಲು ಈಕೆ ಬಂದಿದ್ದಳು (ಆದಿ 122/63).

(3) ಒಬ್ಬ ಕ್ಷತ್ರಿಯ ರಾಜ. ಇವನು ಹರನೆಂಬ ದಾನವನ ಅಂಶದಿಂದ ಹುಟ್ಟಿದ್ದನು (ಆದಿ 67/23–24). ಪಾಂಡವರ ಕಡೆಯಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ವಾಗಿತ್ತು (ಉದ್ಯೋಗ 4/14).

(4) ಒಬ್ಬ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಜನಿಸಿದ್ದನು (ಆದಿ 67/60).

(5) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/94; ಆದಿ 116/3). ಭೀಮಸೇನನಿಂದ ಇವನ ವಧೆ (ಭೀಷ್ಮ 96/26–27).

(6) ಕಾಶಿಯ ಒಬ್ಬ ರಾಜ. ಇವನು ಯುದ್ಧದಲ್ಲಿ ಬೆನ್ನು ತೋರಿಸುವವನಾಗಿರಲಿಲ್ಲ. ಭೀಮಸೇನನು ಪೂರ್ವದಿಗ್ವಿಜಯ ಕಾಲದಲ್ಲಿ ಇವನನ್ನು ಬಲ ಪೂರ್ವಕವಾಗಿ ಸೋಲಿಸಿದ್ದನು (ಸಭಾ 30/6–7). 'ಸುಚಿತ್ರ'ನೆಂಬ ಹೆಸರಿನಲ್ಲಿ ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿರುವ ಉಲ್ಲೇಖವೂ ಇದೆ. ಅಲ್ಲಿ ಇವನೊಂದಿಗೆ ಇವನ ಮಗ

ಸುಕುಮಾರನೂ ಇದ್ದನು (ಆದಿ 185/10).

(7) ಒಬ್ಬ ರಾಕ್ಷಸ. ಇವನು ತಾಟಕೆಯೆಂಬ ರಾಕ್ಷಸಿಯ ಪುತ್ರ ಮತ್ತು ಮಾರೀಚನ ಸಹೋದರ ನಾಗಿದ್ದನು. ಭಗವಾನ್ ಶ್ರೀರಾಮನಿಂದ ಇವನ ವಧೆ (ಸಭಾ 38/29).

(8) ಚೇದಿ ದೇಶದ ಒಬ್ಬ ರಾಜ. ಇವನು ವೀರಬಾಹುವಿನ ಪುತ್ರ ಮತ್ತು ಸುನಂದೆಯ ಸಹೋದರನಾಗಿದ್ದನು (ಇವನು ದಮಯಂತಿಯ ತಾಯಿಯ ಸಹೋದರಿಯ ಮಗನಾಗಿದ್ದನು.) (ವನ 65/45).

(9) ಕುಲಿಂದರ ಒಬ್ಬ ರಾಜ. ಇವನ ರಾಜ್ಯ ಮತ್ತು ನಗರ ಹಿಮಾಲಯಕ್ಕೆ ಬಹಳ ಹತ್ತಿರ ದಲ್ಲಿತ್ತು. ಅಲ್ಲಿ ಅನೇಕ ಪ್ರಕಾರದ ಆಶ್ಚರ್ಯಜನಕ ವಸ್ತುಗಳು ಕಾಣಿಸುತ್ತಿದ್ದವು. ಅಲ್ಲಿ ಆನೆ ಕುದುರೆಗಳು ಅಸಂಖ್ಯಾತವಾಗಿದ್ದವು. ಕಿರಾತ, ತಂಗಣ ಮತ್ತು ಕುಲಿಂದ ಇತ್ಯಾದಿ ಜಾತಿಯ ಜನರು ಅಲ್ಲಿ ವಾಸಮಾಡುತ್ತಿದ್ದರು. ಆ ಪ್ರದೇಶ ದೇವತೆಗಳಿಂದಲೂ ಸೇವಿಸಲ್ಪಡುತ್ತಿತ್ತು. ಸುಬಾಹು ರಾಜ್ಯದ ಗಡಿಪ್ರದೇಶಕ್ಕೆ ಹೋಗಿ, ಪಾಂಡವರನ್ನು ಆದರ ಸತ್ಕಾರಗಳಿಂದ ಬರಮಾಡಿಕೊಂಡನು. ಇವನಿಂದ ಪೂಜಿತರಾಗಿ, ಅವರೆಲ್ಲರೂ ಅಲ್ಲಿ ಸುಖವಾಗಿದ್ದರು. ಮರುದಿನ ಪಾಂಡವರು ಇವನಲ್ಲಿ ತಮ್ಮ ಸೇವಕರನ್ನೂ, ದ್ರೌಪದಿಯ ಸಾಮಗ್ರಿಗಳನ್ನೂ ಒಪ್ಪಿಸಿ ಮುಂದಕ್ಕೆ ಪ್ರಸ್ಥಾನ ಮಾಡಿದ್ದರು (ವನ 140/24–28). ಇವನು ಮಹಾಭಾರತ ಯುದ್ಧದಲ್ಲಿ ಪಾಂಡವರ ಪಕ್ಷಕ್ಕೆ ಬಂದಿದ್ದನು. ಜಯದ್ರಥವಧೆಯ ಪ್ರತಿಜ್ಞೆಯನ್ನು ಸಫಲಗೊಳಿಸುವುದಕ್ಕಾಗಿ ಶ್ರೀಕೃಷ್ಣನಲ್ಲಿ ಯುಧಿ ಷ್ಠಿರನು ಪ್ರಾರ್ಥನೆ ಮಾಡಿದಾಗ, ಅವರ ಶಿಬಿರ ದಲ್ಲಿ ಸುಬಾಹು ಕೂಡಾ ಉಪಸ್ಥಿತನಾಗಿದ್ದನು (ದ್ರೋಣ 83/4–6).

(10) ಒಬ್ಬ ಸಂಶಪ್ತಕ ಯೋಧ. ಅರ್ಜುನ ನೊಂದಿಗೆ ಇವನ ಯುದ್ಧ (ದ್ರೋಣ 18/17–20). ಯುಯುತ್ಸುವಿನೊಂದಿಗೆ ಯುದ್ಧ ಮತ್ತು ಆತನಿಂದ ಇವನ ಎರಡೂ ಭುಜಗಳು ಕತ್ತರಿಸ ಲ್ಪಟ್ಟದ್ದು (ದ್ರೋಣ 25/13–14).

(11).ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

(12). ಒಬ್ಬ ಪ್ರಾಚೀನ ರಾಜ. ಇವನು ತನ್ನ ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/66).

**ಸುಬೇಲ** – ಲಂಕಾಪುರ ಸಮೀಪದ ಒಂದು ಪರ್ವತ (ವನ 284/21).

**ಸುಭಗ** – ಶಕುನಿಯ ಸಹೋದರ. ಇವನು ಭೀಮಸೇನನಿಂದ ಕೊಲ್ಲಲ್ಪಟ್ಟನು (ದ್ರೋಣ 147/26).

**ಸುಭಗಾ** – (1) 'ಪ್ರಾಧಾ' ಎಂಬ ಕಶ್ಯಪ ಪತ್ನಿ ಯಿಂದ ಹುಟ್ಟಿದ ಒಬ್ಬ ಕನ್ಯೆ (ಆದಿ 65/46).

(2) ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/18).

**ಸುಭದ್ರಾ** – (1) ವಸುದೇವನ ಪುತ್ರಿ (ಆದಿ 218 /14–18). ಶ್ರೀಕೃಷ್ಣ ಮತ್ತು ಸಾರಣನ ಒಡ ಹುಟ್ಟಿದ ಸಹೋದರಿ (ಆದಿ 218/17–18). ಇವಳು ತನ್ನ ತಂದೆಗೆ ಅತ್ಯಂತ ಪ್ರೀತಿಪಾತ್ರ ಳಾಗಿದ್ದಳು (ಆದಿ 218/17). ಅರ್ಜುನನಿಗೆ ಇವಳಲ್ಲಿ ಪ್ರೇಮ. ಆತ ಶ್ರೀಕೃಷ್ಣನ ಮುಂದೆ ಈಕೆಯನ್ನು ತನ್ನ ಪತ್ನಿಯಾಗಿ ಮಾಡಿಕೊಳ್ಳುವ ಮನೋಭಾವವನ್ನು ಪ್ರಕಟಿಸಿದುದು (ಆದಿ 218 /19). ಶ್ರೀಕೃಷ್ಣನ ಸಲಹೆಯ ಪ್ರಕಾರ, ರೈವತಕ ಪರ್ವತದ ಉತ್ಸವದಲ್ಲಿ, ಸುತ್ತುಬರುತ್ತಿದ್ದಾಗ ಅರ್ಜುನನಿಂದ ಈಕೆಯ ಅಪಹಾರ (ಆದಿ 219/ 6–8). ಅರ್ಜುನನೊಂದಿಗೆ ಈಕೆಯ ವಿಧಿವತ್ತಾದ ವಿವಾಹ (ಆದಿ 220/13). ಅರ್ಜುನನ ಪ್ರೇರಣೆಯಿಂದ ಗೋಪೀವೇಷದಲ್ಲಿ ದ್ರೌಪದಿಯ ಬಳಿಗೆ ಈಕೆಯ ಆಗಮನ. ಇವಳಿಗಾಗಿ ದ್ವಾರಕೆ ಯಿಂದ ವರದಕ್ಷಿಣೆ ಬಂದುದು (ಆದಿ 220 ಅಧ್ಯಾಯ). ಇವಳ ಗರ್ಭದಿಂದ ಅಭಿಮನ್ಯುವಿನ ಜನನ (ಆದಿ 220/65–66; ಆದಿ 95/78). ಪಾಂಡವರಿಗೆ ವನವಾಸವಾದಾಗ, ಕಾಡಿನಿಂದ ಈಕೆ ಅಭಿಮನ್ಯು ಸಹಿತಳಾಗಿ, ಶ್ರೀಕೃಷ್ಣನೊಂದಿಗೆ ದ್ವಾರಕೆಗೆ ಹೋಗಿದ್ದಳು (ವನ 22/3–4). ಉಪಪ್ಲವ್ಯ ನಗರಕ್ಕೆ ಅಭಿಮನ್ಯುವಿನ ವಿವಾಹೋ ತ್ಸವಕ್ಕೆ ಈಕೆ ಬಂದುದು (ವಿರಾಟ 72/22). ಪುತ್ರಶೋಕದಿಂದ ದುಃಖಿತಳಾದಾಗ ಶ್ರೀಕೃಷ್ಣ ನಿಂದ ಧೈರ್ಯದ ಆಶ್ವಾಸನೆ (ದ್ರೋಣ 77/12–26). ಶ್ರೀಕೃಷ್ಣನ ಮುಂದೆ ಅಭಿಮನ್ಯುವಿಗಾಗಿ ಈಕೆಯ ಪ್ರಲಾಪ (ದ್ರೋಣ 78/2–35). ಶ್ರೀಕೃಷ್ಣನೊಂದಿಗೆ ಹಸ್ತಿನಾಪುರದಿಂದ ದ್ವಾರಕೆಗೆ ಪ್ರಸ್ಥಾನ (ಆಶ್ವ 52/55). ವಸುದೇವನ ಮುಂದೆ

ಶ್ರೀಕೃಷ್ಣನೊಡನೆ ಅಭಿಮನ್ಯುವಿನ ವಧಾವೃತ್ತಾಂತ ವಿವರಿಸಲು ಹೇಳಿ ಮೂರ್ಛಿತಳಾದುದು (ಆಶ್ವ 61/4). ಯುಧಿಷ್ಠಿರನ ಅಶ್ವಮೇಧಯಜ್ಞದಲ್ಲಿ ಭಾಗವಹಿಸಲು ದ್ವಾರಕೆಯಿಂದ ಹಸ್ತಿನಾವತಿಗೆ ಆಗಮಿಸಿದುದು (ಆಶ್ವ 66/4). ಉತ್ತರೆಯ ಮೃತಪುತ್ರನನ್ನು ಬದುಕಿಸುವಂತೆ ಶ್ರೀಕೃಷ್ಣನೊಡನೆ ಈಕೆಯ ಪ್ರಾರ್ಥನೆ (ಆಶ್ವ 67 ಅಧ್ಯಾಯ). ಪರೀಕ್ಷಿತನು ಜೀವಿತನಾದಾಗ ಇವಳ ಸಂತೋಷ (ಆಶ್ವ 70/6–7). ಈಕೆ ಉಲೂಪಿ ಮತ್ತು ಚಿತ್ರಾಂಗದೆಯರನ್ನು ಭೇಟಿ ಮಾಡಿದುದು. ಅವರಿಬ್ಬರಿಗೂ ಉಡುಗೊರೆ ನೀಡಿದುದು (ಆಶ್ವ 88/3–4). ಇವಳು, ಕುಂತಿ ಮತ್ತು ಗಾಂಧಾರಿ, ಈ ಇಬ್ಬರೂ ಅತ್ತೆಯರನ್ನು ಸಮಾನ ಭಾವ ದಿಂದ ಉಪಚರಿಸುತ್ತಿದ್ದಳು (ಆಶ್ರಮ 1/9). ಇವಳು ಅಭಿಮನ್ಯುವಿಗಾಗಿ ಚಿಂತಿತಳಾಗಿದ್ದುದ ರಿಂದ ಯಾವಾಗಲೂ ಅಸಂತುಷ್ಟಳೂ, ಹರ್ಷ ಶೂನ್ಯಳೂ ಆಗಿ ಇರುತ್ತಿದ್ದಳು. ಕೇವಲ ಪರೀಕ್ಷಿತ ನನ್ನು ನೋಡಿ ಜೀವನ ಧರಿಸಿದ್ದಳು (ಆಶ್ರಮ 21/15–16). ಸಂಜಯನು ಋಷಿಗಳ ಮುಂದೆ ಈಕೆಯ ಪರಿಚಯ ನೀಡಿದುದು (ಆಶ್ರಮ 25/10). ಗಾಂಧಾರಿಯು ವ್ಯಾಸರ ಮುಂದೆ ಈಕೆ ಪುತ್ರಶೋಕದಿಂದ ಸಂತಪ್ತಳೆಂದು ಹೇಳಿದುದು (ಆಶ್ರಮ 29/42). ಯುಧಿಷ್ಠಿರನು ದುಃಖದಿಂದ ಆರ್ತನಾಗಿ, ಸುಭದ್ರೆಯೊಡನೆ ಪರೀಕ್ಷಿತ ಮತ್ತು ವಜ್ರರ ಪಾಲನೆ ಮಾಡುವಂತೆ ಹೇಳಿದುದು (ಮಹಾಪ್ರಸ್ಥಾ 1/7–9).

(2) ಸುರಭಿಯ ಧೇನುರೂಪದ ಪುತ್ರಿ. ಇವಳು ಪಶ್ಚಿಮ ದಿಕ್ಕನ್ನು ಧರಿಸುವವಳಾಗಿದ್ದಾಳೆ (ಉದ್ಯೋಗ 102/9).

**ಸುಭದ್ರಾಹರಣಪರ್ವ** – ಆದಿ ಪರ್ವದ ಒಂದು ಅವಾಂತರ ಪರ್ವ (ಆದಿ ಅಧ್ಯಾಯ 218 ರಿಂದ 219 ರ ವರೆಗೆ).

**ಸುಭಾ** – ಮಹರ್ಷಿ ಅಂಗೀರಸನ ಪತ್ನಿ. ಇವಳ ಗರ್ಭದಿಂದ ಬೃಹತ್ಕೀರ್ತಿ ಮೊದಲಾದ ಏಳು ಪುತ್ರರಾದರು (ವನ 218/1–2).

**ಸುಭೀಮ** – ತಾಪನೆಂಬ ಹೆಸರಿನ ಪಾಂಚಜನ್ಯ ನಾಮದ ಅಗ್ನಿಯ ಪುತ್ರ. ಇವನು ಯಜ್ಞದಲ್ಲಿ ವಿಘ್ನವುಂಟುಮಾಡುವ ಹದಿನೈದು ಉತ್ತರ ದೇವತೆಗಳಲ್ಲಿ (ವಿನಾಯಕರು) ಒಬ್ಬನಾಗಿದ್ದಾನೆ (ವನ 220/11).

**ಸುಭೂಮಿಕ** – ಸರಸ್ವತೀ ದಡದಲ್ಲಿರುವ ಒಂದು ಪ್ರಾಚೀನತೀರ್ಥ. ಇದರ ವಿಶೇಷ ವರ್ಣನೆ (ಶಲ್ಯ 37/2–8).

**ಸುಭ್ರಾಜ** – ಸೂರ್ಯನಿಂದ ಸ್ಕಂದನಿಗೆ ಕೊಡ ಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಭಾಸ್ವರ (ಶಲ್ಯ 45/31).

**ಸುಭ್ರು** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/8).

**ಸುಮಂಗಲಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/12).

**ಸುಮಣಿ** – ಚಂದ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಮಣಿ ಎಂದಾಗಿತ್ತು (ಶಲ್ಯ 45/32).

**ಸುಮಂಡಲ** – ಒಬ್ಬ ರಾಜ. ಇವನನ್ನು ಸೇನೆ ಸಹಿತವಾಗಿ ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನನು ಗೆದ್ದಿದ್ದನು (ಸಭಾ 26/4).

**ಸುಮತಿ** – (1) ಒಬ್ಬ ರಾಕ್ಷಸ. ಇವನು ವರುಣ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾನೆ (ಸಭಾ 9/13).

(2) ಒಬ್ಬ ದಿವ್ಯಮಹರ್ಷಿ. ಇವನು ಶರಶಯ್ಯೆ ಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/4).

**ಸುಮನ** – ಇಂದ್ರನ ಸಭೆಯಲ್ಲಿ ವಿರಾಜ ಮಾನನಾದ ಒಬ್ಬ ದೇವತೆ (ಸಭೆ 7/22).

**ಸುಮನಾ** – (1) ಕಿರಾತರ ಒಬ್ಬ ರಾಜ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/25).

(2) ಒಬ್ಬ ಪ್ರಾಚೀನ ರಾಜ. ಇವನು ಯಮ ಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/12).

(3) ಒಬ್ಬ ಅಸುರ. ಇವನು ವರುಣ ಸಭೆಯಲ್ಲಿ ರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 9/13).

(4) ದೇವಲೋಕದಲ್ಲಿ ವಾಸಿಸುವ ಕೇಕಯ ರಾಜನ ಪುತ್ರಿ. ಈಕೆ ಶಾಂಡಿಲಿ ದೇವಿಯೊಡನೆ, ಆಕೆಯ ಸಾಧನೆಯ ಕುರಿತು ಪ್ರಶ್ನೆ ಮಾಡಿದ್ದಳು (ಅನು 123/3–6).

**ಸುಮನಾಖ್ಯ** – ಕಶ್ಯಪ ಮತ್ತು ಕದ್ರುವಿನಿಂದ

ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/8).

**ಸುಮನೋಮುಖ** – ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/12).

**ಸುಮಂತು** – ಒಬ್ಬ ಋಷಿ. ಇವನು ಮಹರ್ಷಿ ವ್ಯಾಸನ ಶಿಷ್ಯನಾಗಿದ್ದನು. ವ್ಯಾಸನು ಇವನಿಗೆ ಎಲ್ಲಾ ವೇದಗಳ ಮತ್ತು ಮಹಾಭಾರತದ ಅಧ್ಯಯನ ಮಾಡಿಸಿದ್ದನು (ಆದಿ 63/89). ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/11). ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಹೋಗಿದ್ದನು (ಶಾಂತಿ 47/5).

**ಸುಮಂತ್ರ** – ಅಯೋಧ್ಯೆಯ ರಾಜ ದಶರಥನ ಸಾರಥಿ (ವಿರಾಟ 12/8).

**ಸುಮನ್ಯು** – ಒಬ್ಬ ಪ್ರಾಚೀನ ರಾಜ. ಇವನು ಮುನಿವರ ಶಾಂಡಿಲ್ಯನಿಗೆ ಭಕ್ಷ್ಯಭೋಜ್ಯ ಪದಾರ್ಥಗಳ ಪರ್ವತೋಪಮ ರಾಶಿಗಳನ್ನು ದಾನವಾಗಿ ಕೊಟ್ಟಿದ್ದನು (ಅನು 137/22). (ಯಾವುದೋ ಪ್ರತಿಯ ಪ್ರಕಾರ ಈತ ರಾಜಾ ಭ್ಯುಮನ್ಯುವಾಗಿದ್ದನು.).

**ಸುಮಲ್ಲಿಕ** – ಒಂದು ಭಾರತೀಯ ಜನಪದ (ಭೀಷ್ಮ 9/55).

**ಸುಮಹ** – ಪರಶುರಾಮನ ಸಾರಥಿ (ವಿರಾಟ 12/8).

**ಸುಮಿತ್ರ** – (1) ಒಬ್ಬ ಪ್ರಾಚೀನ ರಾಜ (ಆದಿ 1/236).

(2) ಒಬ್ಬ ರಾಜ. ಇವನು ಕ್ರೋಧವಶನೆಂಬ ರಾಕ್ಷಸನ ಅಂಶದಿಂದ ಹುಟ್ಟಿದ್ದನು (ಆದಿ 67/63). ಇವನು ಸೌವೀರ ದೇಶದ ರಾಜನಾಗಿದ್ದನು. ಇವನನ್ನು ಜನರು ದತ್ತಾಮಿತ್ರನೆಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಅರ್ಜುನನು ಬಾಣಗಳ ಮೂಲಕ ಇವನ ದಮನಮಾಡಿದ್ದನು (ಆದಿ 138/23). ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/25).

(3) ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/10).

(4) ಕುಲಿಂದನಗರದ ಶಾಸಕ ರಾಜಾ ಸುಮಿತ್ರ. ಇವನ ಮಗ ಸುಕುಮಾರನಾಗಿದ್ದನು. ಪೂರ್ವ ದಿಗ್ವಿಜಯಕಾಲದಲ್ಲಿ ಭೀಮಸೇನನು ಇವನನ್ನು ಗೆದ್ದಿದ್ದನು (ಸಭಾ 29/10). ಸಹದೇವನೂ ಸುಮಿತ್ರ ಮತ್ತು ಸುಕುಮಾರನನ್ನು ಜೈಸಿದ್ದನು (ಸಭಾ 31/4).

(5) ತಪನೆಂಬ ಹೆಸರಿನ ಪಾಂಚಜನ್ಯನೆಂಬ ಅಗ್ನಿಯ ಮಗ. ಇವನು ಯಜ್ಞದಲ್ಲಿ ವಿಘ್ನ ವುಂಟುಮಾಡುವ ಹದಿನೈದು ಉತ್ತರದೇವತೆಗಳಲ್ಲಿ (ವಿನಾಯಕರು) ಒಬ್ಬನಾಗಿದ್ದಾನೆ (ವನ 220/12).

(6) ಅಭಿಮನ್ಯುವಿನ ಸಾರಥಿ (ದ್ರೋಣ 35/31). ಇವನು ಅಭಿಮನ್ಯುವಿನೊಡನೆ ಯುದ್ಧ ಸಂಬಂಧಿಯಾದ ಕರ್ತವ್ಯದ ಕುರಿತು ಪರಾಮರ್ಶಿಸಲು ಪ್ರಾರ್ಥಿಸಿದುದು (ದ್ರೋಣ 36/3–4). ಅಭಿಮನ್ಯುವಿನ ಆದೇಶ ಪ್ರಕಾರ ಈತ ದ್ರೋಣಾಚಾರ್ಯನ ಕಡೆಗೆ (ಚಕ್ರವ್ಯೂಹಕ್ಕೆ) ರಥವನ್ನು ಮುಂದುವರಿಸಿದ್ದನು (ದ್ರೋಣ 36/9–10).

(7) ಹೈಹಯವಂಶದ ಒಬ್ಬ ರಾಜ. ಇವನು ಒಂದು ಮೃಗದ ಹಿಂದೆ ಓಡಿದುದು (ಶಾಂತಿ 125/9–19). ಮೃಗವನ್ನರಸುತ್ತಾ ಈತ ಋಷಿಗಳ ಆಶ್ರಮಕ್ಕೆ ತಲುಪಿದುದು. ಮತ್ತು ಅವರೊಡನೆ ಆಶೆಯ ಕುರಿತು ಪ್ರಶ್ನೆಮಾಡಿದುದು (ಶಾಂತಿ 126/8–19). ಋಷಭನು ಇವನಿಗೆ ವೀರದ್ಯುಮ್ನ ಮತ್ತು ತನುವೆಂಬ ಮುನಿಗಳ ವೃತ್ತಾಂತ ಹೇಳಿದುದು (ಶಾಂತಿ 127 ಅಧ್ಯಾಯ). ಋಷಭ ಋಷಿಯ ಉಪದೇಶದಿಂದ ಇವನು ಆಶೆಯನ್ನು ಪರಿತ್ಯಾಗ ಮಾಡಿದುದು (ಶಾಂತಿ 128/25).

**ಸುಮಿತ್ರಾ** – (1) ಶ್ರೀಕೃಷ್ಣನ ಒಬ್ಬಳು ಪತ್ನಿ (ಸಭಾ 38/29).

(2) ಮಹಾರಾಜ ದಶರಥನ ಒಬ್ಬಳು ಪಟ್ಟದ ರಾಣಿ. ಲಕ್ಷ್ಮಣ ಮತ್ತು ಶತ್ರುಘ್ನರ ತಾಯಿ (ವನ 274/8). ಇವಳು ಶ್ರೀರಾಮನನ್ನು ಹಿಂತಿರುಗಿಸಿ ಕರಕೊಂಡು ಬರುವುದಕ್ಕಾಗಿ ಭರತನೊಡನೆ ಚಿತ್ರಕೂಟಕ್ಕೆ ಹೋಗಿದ್ದಳು (ವನ 277/36).

**ಸುಮೀಢ** – ಮಹಾರಾಜ ಸುಹೋತ್ರನಿಂದ ಐಕ್ಷ್ವಾಕಿಯ ಗರ್ಭದಲ್ಲಿ ಹುಟ್ಟಿದ ಮೂವರು ಪುತ್ರರಲ್ಲಿ ಒಬ್ಬ. ಇವನ ಉಳಿದ ಇಬ್ಬರು ಸಹೋದರರು ಅಜಮೀಢ ಮತ್ತು ಪುರುಮೀಢ (ಆದಿ 94/30).

**ಸುಮುಖ** – (1) ಕಶ್ಯಪ ಮತ್ತು ಕದ್ರುವಿನ ಪರಂಪರೆಯಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗ (ಆದಿ 35/14). ಇವನು ಐರಾವತ ಕುಲದಲ್ಲಿ

40

ಹುಟ್ಟಿದ ಆರ್ಯಕನ ಮೊಮ್ಮಗ, ವಾಮನನ ದೌಹಿತ್ರ ಮತ್ತು ಚಿಕುರನ ಪುತ್ರನಾಗಿದ್ದನು (ಉದ್ಯೋಗ 103/24-25). ಮಾತಲಿಕನ್ಯೆ ಗುಣಕೇಶಿಯೊಂದಿಗೆ ಇವನ ವಿವಾಹ ಪ್ರಸ್ತಾವ. ಭಗವಾನ್ ವಿಷ್ಣುವಿನ ಆದೇಶ ಪ್ರಕಾರ ಇಂದ್ರನು ಇವನನ್ನು ದೀರ್ಘಾಯುವಂತನಾಗಿ ಮಾಡಿದುದು. ಗುಣಕೇಶಿಯನ್ನು ವಿವಾಹವಾಗಿ ಈತ ಮನೆಗೆ ಹೋದುದು (ಉದ್ಯೋಗ 104/27-29). ಭಗವಾನ್ ವಿಷ್ಣು ಇವನನ್ನು ಕಾಲಿನ ಹೆಬ್ಬೆರಳಿನಿಂದ ಎತ್ತಿ ಗರುಡನ ಎದೆಯ ಮೇಲೆ ಇರಿಸಿದ್ದನು. ಅಂದಿನಿಂದಲೇ ಗರುಡನು ಇವನನ್ನು ಯಾವಾಗಲೂ ಜೊತೆಯಾಗಿಟ್ಟುಕೊಳ್ಳುತ್ತಾನೆ (ಉದ್ಯೋಗ 105/31).

(2) ಒಬ್ಬ ರಾಜ. ಇವನು ರಾಜಾ ಯುಧಿಷ್ಠಿರನ ಬಳಿಗೆ ಉಡುಗೊರೆಯ ಪ್ರಮುಖ ವಸ್ತುಗಳನ್ನು ಕಳುಹಿಸಿದ್ದನು (ಸಭಾ 51/7).

(3) ತನ್ನ ವಂಶದ ವಿಸ್ತಾರ ಮಾಡುವ, ಗರುಡನ ಒಬ್ಬ ಪುತ್ರ (ಉದ್ಯೋಗ 101/2).

(4) ಗರುಡನ ಪ್ರಮುಖ ಸಂತಾನಗಳ ಪರಂಪರೆಯಲ್ಲಿ ಹುಟ್ಟಿದ ಒಂದು ಪಕ್ಷಿ (ಉದ್ಯೋಗ 101/12).

**ಸುಮುಖೀ** – (1) ಕರ್ಣನ ಸರ್ಪಮುಖ ಬಾಣದಲ್ಲಿ ಪ್ರವೇಶಿಸಿದ ಅಶ್ವಸೇನ ನಾಗನ ತಾಯಿ. ಮುಖದಿಂದ ಪುತ್ರನ ರಕ್ಷಣೆ ಮಾಡಿದ ಕಾರಣ ಇದನ್ನು ಸುಮುಖೀ ಎನ್ನುತ್ತಾರೆ (ಕರ್ಣ 90/42).

(2) ಅಲಕಾಪುರದ ಅಪ್ಸರೆ. ಈಕೆ ಅಷ್ಟಾವಕ್ರನ ಸ್ವಾಗತ ಸಮಾರಂಭದಲ್ಲಿ ಕುಬೇರ ಭವನದಲ್ಲಿ ನೃತ್ಯಮಾಡಿದ್ದಳು (ಅನು 19/45).

**ಸುಮೇರು** – ಒಂದು ಪರ್ವತ. (ನೋಡಿರಿ ಮೇರು)

**ಸುಯಜು** – ಸಮ್ರಾಟ ಭರತನ ಮೊಮ್ಮಗ ಹಾಗೂ ಭುಮನ್ಯುವಿನ ಪುತ್ರ. ಇವನ ತಾಯಿಯ ಹೆಸರು 'ಪುಷ್ಕರಿಣೀ' ಎಂದಾಗಿತ್ತು (ಆದಿ 94/24).

**ಸುಯಜ್ಞಾ** – ಪ್ರಸೇನಜಿತನ ಮಗಳು. ಪುರುವಂಶದ ಮಹಾರಾಜ ಮಹಾಭೌಮನ ಪತ್ನಿ ಮತ್ತು ಅಯುತನಾಯಿಯ ತಾಯಿ (ಆದಿ 95/20).

**ಸುಯಶಾ** – ಬಾಹುದರಾಜನ ಪುತ್ರಿ ಈಕೆಯೊಂದಿಗೆ ಅನಶ್ವಾನ ಪುತ್ರ ಪರೀಕ್ಷಿತನು ವಿವಾಹವಾಗಿದ್ದನು. ಇವಳ ಗರ್ಭದಿಂದ ಭೀಮಸೇನನ ಜನ್ಮವಾಯಿತು (ಆದಿ 95/41-42).

**ಸುಯಮ** – ರಾಕ್ಷಸ ಶತಶೃಂಗನ ಮೂರನೇ ಮಗ. ಇವನು ಅಂಬರೀಷನ ಸೇನಾಪತಿ ಸುದೇವನಿಂದ ಕೊಲ್ಲಲ್ಪಟ್ಟನು (ಶಾಂತಿ 98/11).

**ಸುರಕೃತ್** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/57).

**ಸುರಜಾ** – ಒಬ್ಬ ಅಪ್ಸರೆ. ಇವಳು ದಕ್ಷಪುತ್ರಿ 'ಪ್ರಾಧಾ'ಳ ಗರ್ಭದಿಂದ ಕಶ್ಯಪನ ಮೂಲಕ ಜನ್ಮಪಡೆದಿದ್ದಳು (ಆದಿ 65/50). ಇವಳು ಅರ್ಜುನನ ಜನ್ಮಕಾಲದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/63).

**ಸುರತಾ** – ಒಬ್ಬ ಅಪ್ಸರೆ. ಇವಳು ದಕ್ಷಪುತ್ರಿ 'ಪ್ರಾಧಾ'ಳ ಗರ್ಭದಿಂದ ಕಶ್ಯಪನ ಮೂಲಕ ಹುಟ್ಟಿದವಳು (ಆದಿ 65/50). ಇವಳು ಅರ್ಜುನನ ಜನನಕಾಲದಲ್ಲಿ ನೃತ್ಯಮಾಡಲು ಬಂದಿದ್ದಳು (ಆದಿ 122/63).

**ಸುರಥ** – (1) ಒಬ್ಬ ರಾಜ. ಇವನು ಕ್ರೋಧವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/62).

(2) ಒಬ್ಬ ಪ್ರಾಚೀನ ರಾಜ. ಇವನು ಯಮಸಭೆಯಲ್ಲಿದ್ದುಕೊಂಡು ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/11).

(3) ಒಬ್ಬ ರಾಜ. ಇವನು ಶಿಬಿದೇಶದ ರಾಜಕುಮಾರ ಕೋಟಿಕಾಸ್ಯನ ತಂದೆಯಾಗಿದ್ದನು (ವನ 265/6).

(4) ತ್ರಿಗರ್ತ ದೇಶದ ಒಬ್ಬ ರಾಜ. ಇವನು ಜಯದ್ರಥನ ಹಿಂಬಾಲಕನಾಗಿದ್ದನು. ದ್ರೌಪದೀ ಹರಣಕಾಲದಲ್ಲಿ ನಕುಲನೊಂದಿಗೆ ಈತನ ಯುದ್ಧ ಮತ್ತು ಆತನಿಂದ ಇವನ ವಧೆ (ವನ 271/18-22).

(5) ಒಬ್ಬ ಸಂಶಪ್ತಕ ಯೋಧ. ಅರ್ಜುನನೊಂದಿಗೆ ಇವನ ಯುದ್ಧವಾಗಿತ್ತು (ದ್ರೋಣ 18/20-23).

(6) ದ್ರುಪದನ ಮಗ. ಇವನು ಅಶ್ವತ್ಥಾಮನಿಂದ ಹೊಡೆಯಲ್ಪಟ್ಟಿದ್ದನು (ದ್ರೋಣ 156/180).

(7) ಪಾಂಡವ ಪಕ್ಷದ ಒಬ್ಬ ಪಾಂಚಾಲ

ಮಹಾರಥಿ. ಇವನು ಅಶ್ವತ್ಥಾಮನೊಂದಿಗೆ ಯುದ್ಧ ಮಾಡುತ್ತಾ ಅವನಿಂದ ಕೊಲ್ಲಲ್ಪಟ್ಟನು (ಶಲ್ಯ 14/37–43).

(8). ಜಯದ್ರಥನ ಪುತ್ರ. ಇವನು ದುಶ್ಶಲೆಯ ಗರ್ಭದಿಂದ ಹುಟ್ಟಿದ್ದನು. ಅಶ್ವಮೇಧದ ಕುದುರೆಯೊಂದಿಗೆ ಅರ್ಜುನ ಸಿಂಧುದೇಶಕ್ಕೆ ತಲುಪಿದ ಸುದ್ದಿಕೇಳಿ, ತಂದೆಯ ಮರಣದ ನೆನಪಿನಿಂದ ಭಯಪಟ್ಟು, ಈತನು ಪ್ರಾಣತ್ಯಾಗ ಮಾಡಿದನು (ಆಶ್ವ 78/28–30).

**ಸುರಥಾ** – ರಾಜಾ ಶಿಬಿಯ ತಾಯಿ (ವನ 197/25).

**ಸುರಥಾಕಾರ** – ಕುಶದ್ವೀಪದ ಮೂರನೇ ದೇಶ (ವರ್ಷ). (ಭೀಷ್ಮ 12/13).

**ಸುರಪ್ರವೀರ** – ತಪನಾಮಧರಿಸಿದ ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಇವನು ಯಜ್ಞದಲ್ಲಿ ವಿಘ್ನವುಂಟುಮಾಡುವ ಹದಿನೈದು ಉತ್ತರ ದೇವತೆ(ವಿನಾಯಕರು)ಗಳಲ್ಲಿ ಒಬ್ಬ (ವನ 220/13).

**ಸುರಭಿ (ಸುರಭೀ)** – ಕಾಮಧೇನುವೆಂಬ ಗೋವು. ಇವಳು ಸಮುದ್ರದಿಂದ ಪ್ರಕಟವಾದಳು (ಆದಿ 18/36). ಇವಳನ್ನು ದಕ್ಷನ ಕನ್ಯೆಯೆಂದು ಹೇಳಲಾಗಿದೆ. ದೇವಿ ಸುರಭಿಯು ಕಶ್ಯಪನ ಸಹವಾಸದಿಂದ ಒಬ್ಬ ಗೋವಿಗೆ ಜನ್ಮವಿತ್ತಳು. ಆಕೆಯ ಹೆಸರು ನಂದಿನಿ. ಮಹರ್ಷಿ ವಸಿಷ್ಠನು ನಂದಿನಿಯನ್ನು ತನ್ನ ಹೋಮಧೇನುವಿನ ರೂಪದಲ್ಲಿ ಪಡಕೊಂಡಿದ್ದನು (ಆದಿ 98/8–9). ಇವಳು ಬ್ರಹ್ಮಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾಳೆ (ಸಭಾ 11/40). ಈಕೆ ತನ್ನ ಪುತ್ರ ಎತ್ತಿಗೋಸ್ಕರ ಇಂದ್ರನೊಡನೆ ದುಃಖವನ್ನು ಪ್ರಕಟಪಡಿಸಿದುದು (ವನ 9/9–14). ನಾರದನಿಂದ ಮಾತಲಿಯೊಡನೆ ಈಕೆಯ ಮತ್ತು ಈಕೆಯ ಸಂತಾನದವರ ವರ್ಣನೆ (ಉದ್ಯೋಗ 102 ಅಧ್ಯಾಯ). ಇವಳ ನೊರೆಯಿಂದ ಬಕ ರಾಜ ರಾಜಧರ್ಮಾ ಎಂಬವನಿಗೆ ಜೀವಪ್ರಾಪ್ತವಾದುದು (ಶಾಂತಿ 172/3–5). ಪ್ರಜಾಪತಿಯ ಸುರಭಿ–ಗಂಧಯುಕ್ತ ಶ್ವಾಸದಿಂದ ಇವಳ ಉತ್ಪತ್ತಿಯ ವರ್ಣನೆ (ಅನು 77/17). ಇವಳ ತಪಸ್ಸು, ಬ್ರಹ್ಮನಿಂದ ಈಕೆಗೆ ಅಮರತ್ವ ಮತ್ತು ಗೋಲೋಕದಲ್ಲಿ ನಿವಾಸದ ಪ್ರಾಪ್ತಿ (ಅನು 83/29–39). ಇವಳ ನಿವಾಸವಾದ ಗೋಲೋಕದ ದಿವ್ಯತೆಯ ವರ್ಣನೆ (ಅನು 83/37–44). ಈಕೆ ಕಾರ್ತಿಕೇಯನಿಗೆ ಒಂದು ಲಕ್ಷ ಗೋವುಗಳನ್ನು ಉಡುಗೊರೆಯಾಗಿ ಕೊಟ್ಟದ್ದು (ಅನು 86/23). ಅಗಸ್ತ್ಯರ ಕಮಲಗಳು ಅಪಹರಿಸಲ್ಪಟ್ಟಾಗ ಈಕೆ ಶಪಥ ಮಾಡಿದುದು (ಅನು 94/41).

(2) ಕ್ರೋಧವಶೆಯ (ಕ್ರೋಧಾ). ಕ್ರೋಧ ಜನಿತ ಕನ್ಯೆ. ಇವಳಿಂದ ಇಬ್ಬರು ಪುತ್ರಿಯರ ಜನನ. ಅವರ ಹೆಸರು ರೋಹಿಣೀ ಮತ್ತು ಗಂಧರ್ವೀ (ಆದಿ 66/61–67).

**ಸುರಭಿಮಾನ್ (ಸುರಭಿಮಂತ)** – ಒಬ್ಬ ಅಗ್ನಿ. ಮೃತ್ಯುಸೂಚಕ ವಿಲಾಪ ಕೇಳಿಸಿದರೆ ಅಥವಾ ಕೋಳಿಯೇ ಮೊದಲಾದವುಗಳು ಅಗ್ನಿಹೋತ್ರದ ಅಗ್ನಿಯನ್ನು ಸ್ಪರ್ಶಮಾಡಿದರೆ ಈ ಅಗ್ನಿಗೆ 'ಅಷ್ಟಾಕಪಾಲ' ಪುರೋಡಾಶವನ್ನು ಕೊಡುವ ವಿಧಾನವಿದೆ (ವನ 221/28).

**ಸುರಭೀಪತ್ತನ** – ದಕ್ಷಿಣ ಭಾರತದ ಒಂದು ಜನಪದ. ಇದನ್ನು ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ದೂತರ ಮೂಲಕವೇ ತನ್ನ ಅಧೀನ ಮಾಡಿಕೊಂಡನು (ಸಭಾ 31/68).

**ಸುರವೀಥೀ** – ಇಂದ್ರಲೋಕದಲ್ಲಿ ಪ್ರಸಿದ್ಧವಾದ ನಕ್ಷತ್ರ ಮಾರ್ಗ (ವನ 43/12).

**ಸುರಸ** – ಕಶ್ಯಪ ವಂಶದ ಒಬ್ಬ ನಾಗ (ಉದ್ಯೋಗ 103/16).

**ಸುರಸಾ** – (1) ಕ್ರೋಧವಶೆಯ ಕ್ರೋಧಜನಿತ ಕನ್ಯೆ. ನಾಗ ಮತ್ತು ಪನ್ನಗ ಜಾತಿಯ ಸರ್ಪಗಳ ತಾಯಿ. ಇವಳಿಗೆ ಮೂವರು ಪುತ್ರಿಯರಿದ್ದರು. ಅವರ ಹೆಸರುಗಳು – ಅನಲಾ, ರುಹಾ ಮತ್ತು ವೀರುಧಾ (ಆದಿ 66/61, 70). ಈಕೆ ಬ್ರಹ್ಮನ ಸಭೆಯಲ್ಲಿ ಉಪಸ್ಥಿತಳಾಗಿ, ಅವನ ಉಪಾಸನೆ ಮಾಡುತ್ತಾಳೆ (ಸಭಾ 11/39).

(2) ಒಬ್ಬ ಅಪ್ಸರೆ. ಇವಳು ಅರ್ಜುನನ ಜನ್ಮೋತ್ಸವದಲ್ಲಿ ನೃತ್ಯಮಾಡಿದ್ದಳು (ಆದಿ 122/63).

**ಸುರಹನ್ತಾ** – ತಪನಾಮಧಾರಿ ಪಾಂಚಜನ್ಯನೆಂಬ ಅಗ್ನಿಯ ಪುತ್ರ. ಇವನು ಯಜ್ಞಗಳಲ್ಲಿ ವಿಘ್ನವುಂಟುಮಾಡುವ ಹದಿನೈದು ಉತ್ತರದೇವತೆ (ವಿನಾಯಕರು)ಗಳಲ್ಲಿ ಒಬ್ಬನು (ವನ 220/13).

**ಸುರಾ** – ಒಬ್ಬಳು ದೇವಿ. ಇವಳು ಸಮುದ್ರ (ವರುಣಾಲಯ)ದಿಂದ ಪ್ರಕಟಗೊಂಡಳು (ಆದಿ

18/35). ಈಕೆ ವರುಣನಿಂದ ಆತನ ಜ್ಯೇಷ್ಠ ಪತ್ನಿ 'ದೇವಿ'ಯ ಗರ್ಭದಲ್ಲಿ ಜನ್ಮತಾಳಿದಳು. ಇವಳು ದೇವತೆಗಳಿಗೆ ಆನಂದಕೊಡುವವಳಾಗಿದ್ದಳು (ಇವಳನ್ನು ವಾರುಣಿ ಎಂದೂ ಹೇಳುತ್ತಾರೆ). (ಆದಿ 66/52). ಇವಳು ಬ್ರಹ್ಮನ ಸಭೆಯಲ್ಲಿದ್ದು ಕೊಂಡು ಆತನ ಉಪಾಸನೆ ಮಾಡುತ್ತಾಳೆ (ಸಭಾ 11/12).

**ಸುರಾರಿ** – ಒಬ್ಬ ರಾಜ. ಇವನಿಗೆ ಪಾಂಡವರ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ಆಲೋಚನೆ ಮಾಡಲ್ಪಟ್ಟಿತ್ತು (ಉದ್ಯೋಗ 4/15).

**ಸುರಾವ** – ಇಲ್ವಲನಿಂದ ಅಗಸ್ತ್ಯನಿಗೆ ಕೊಡಲ್ಪಟ್ಟ ರಥದ ಒಂದು ಕುದುರೆಯ ಹೆಸರು (ವನ 99/17).

**ಸುರಾಷ್ಟ್ರ** – (1) ನೈಋತ್ಯ ಭಾರತದ ಒಂದು ಜನಪದ. ಅಲ್ಲಿರುವ ರಾಜ ಕೌಶಿಕಾಚಾರ್ಯ ಆಕೃತಿಯನ್ನು ಮಾದ್ರಿಕುಮಾರ ಸಹದೇವನು ಸೋಲಿಸಿದ್ದನು (ಸಭಾ 31/61). ದಕ್ಷಿಣದಿಕ್ಕಿನ ತೀರ್ಥಗಳ ವರ್ಣನೆಯ ಸಂದರ್ಭದಲ್ಲಿ ಸುರಾಷ್ಟ್ರ ದೇಶದ ಒಳಗೆ ಇರುವ ಚಮಸೋದ್ಭೇದ, ಪ್ರಭಾಸಕ್ಷೇತ್ರ, ಪಿಂಡಾರಕ ಮತ್ತು ಉಜ್ಜಯಂತ (ರೈವತಕ) ಪರ್ವತ ಇತ್ಯಾದಿ ಪುಣ್ಯ ಸ್ಥಳಗಳ ಉಲ್ಲೇಖವಾಗಿದೆ (ವನ 88/19–21).

(2) ಒಂದು ಕ್ಷತ್ರಿಯ ವಂಶ. ಇದರಲ್ಲಿ ರುಷರ್ಧಿಕ ನೆಂಬ ಕುಲಗೇಡಿ ರಾಜನು ಹುಟ್ಟಿದ್ದನು (ಉದ್ಯೋಗ 74/14).

**ಸುರುಚ** – ತನ್ನ ವಂಶ ವಿಸ್ತಾರ ಮಾಡುವ, ಗರುಡನ ಒಬ್ಬ ಪುತ್ರ (ಉದ್ಯೋಗ 101/3).

**ಸುರೂಪಾ** – ಸುರಭಿಯ ಧೇನುಸ್ವರೂಪದ ಒಬ್ಬ ಪುತ್ರಿ. ಈಕೆ ಪೂರ್ವದಿಕ್ಕನ್ನು ಧಾರಣೆ ಮಾಡುತ್ತಾಳೆ (ಉದ್ಯೋಗ 102/8).

**ಸುರೇಣು** – ಋಷಭದ್ವೀಪದಲ್ಲಿ ಹರಿಯುವ ಸರಸ್ವತಿ ನದಿಯ ಹೆಸರು (ಶಲ್ಯ 38/26).

**ಸುರೇಶ** – (1) ತಪನಾಮಧಾರಿ ಪಾಂಚ ಜನ್ಯನೆಂಬ ಅಗ್ನಿಯ ಪುತ್ರ. ಇವನು ಯಜ್ಞದಲ್ಲಿ ವಿಘ್ನವನ್ನುಂಟುಮಾಡುವ ಹದಿನೈದು ಉತ್ತರ ದೇವತೆ(ವಿನಾಯಕರು)ಗಳಲ್ಲಿ ಒಬ್ಬ (ವನ 220/13).

(2) ಒಬ್ಬ ಸನಾತನ ವಿಶ್ವೇದೇವ (ಅನು 91/35).

**ಸುರೇಶ್ವರ** – ಏಕಾದಶ ರುದ್ರರಲ್ಲಿ ಒಬ್ಬ (ಶಾಂತಿ 208/19).

**ಸುರೋಚನಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/29).

**ಸುರೋದ** – ಸುರೆಯ ಸಮುದ್ರ. ಇದು ದಧಿಮಂಡೋದ ಸಾಗರದ ಅನಂತರವಿದೆ (ಭೀಷ್ಮ 12/2).

**ಸುರೋಮಾ** – ತಕ್ಷಕ ಕುಲದ ಒಬ್ಬ ಸರ್ಪ. ಇವನು ಜನಮೇಜಯನ ಸರ್ಪಯಜ್ಞದಲ್ಲಿ ದಗ್ಧನಾಗಿದ್ದನು (ಆದಿ 57/10).

**ಸುಲಭಾ** – ಒಬ್ಬ ಸನ್ಯಾಸಿನಿ ಕುಮಾರಿ. ಇವಳು ಯೋಗಧರ್ಮದ ಅನುಷ್ಠಾನದ ಮೂಲಕ ಸಿದ್ಧಿಪಡೆದು ಒಬ್ಬಳೇ ಭೂಮಿಯ ಮೇಲೆ ಸುತ್ತುತ್ತಿದ್ದಳು (ಶಾಂತಿ 320/7). ಈಕೆ ತ್ರಿದಂಡೀ ಸನ್ಯಾಸಿಗಳ ಮುಖದಿಂದ, ಮೋಕ್ಷ ತತ್ತ್ವದ ತಿಳುವಳಿಕೆಯ ವಿಷಯದಲ್ಲಿ ಮಿಥಿಲಾಪತಿ ರಾಜಾ ಜನಕನ ಪ್ರಶಂಸೆಯನ್ನು ಕೇಳಿದಳು. ಅದನ್ನು ಕೇಳಿ, ಈಕೆಯ ಮನಸ್ಸಿನಲ್ಲಿ ಆತನ ದರ್ಶನದ ಆಕಾಂಕ್ಷೆಯುಂಟಾಯಿತು. ಇವಳು ಯೋಗಶಕ್ತಿಯಿಂದ ತನ್ನ ಮೊದಲನೆಯ ಶರೀರ ಬಿಟ್ಟು ಇನ್ನೊಂದು ಪರಮಸುಂದರ ಶರೀರ ಧಾರಣೆ ಮಾಡಿದಳು. ಅನಂತರ ಇವಳು ಕ್ಷಣಮಾತ್ರದಲ್ಲಿ ವಿದೇಹ ದೇಶದ ರಾಜಧಾನಿ ಮಿಥಿಲೆಯನ್ನು ಸೇರಿದಳು. ಅಲ್ಲಿ ಇವಳು ಭಿಕ್ಷೆ ಕೇಳುವ ನೆಪದಲ್ಲಿ ಮಿಥಿಲೇಶ್ವರನ ದರ್ಶನ ಮಾಡಿದಳು. ರಾಜನು ಈಕೆಯ ಸ್ವಾಗತ ಪೂಜೆ ಮಾಡಿ, ಅನ್ನನೀಡಿ ಸಂತೋಷಪಡಿಸಿದನು. ಅನಂತರ ಇವಳು ತನ್ನ ಯೋಗಶಕ್ತಿಯಿಂದ ಅವನ ಬುದ್ಧಿಯನ್ನು ಪ್ರವೇಶಿಸಿದಳು ಮತ್ತು ಅವನ ಮನಸ್ಸನ್ನು ಬಂಧಿಸಿದಳು. ಅನಂತರ ಒಂದೇ ಶರೀರದಲ್ಲಿದ್ದುಕೊಂಡು, ರಾಜ ಮತ್ತು ಸುಲಭಾ ಪರಸ್ಪರ ಸಂವಾದ ಆರಂಭಿಸಿದರು. ರಾಜನಿಂದ ಅಯೋಗ್ಯ ಮತ್ತು ಅಸಂಗತ ವಚನ ಗಳೊಂದಿಗೆ ಈಕೆಯ ತಿರಸ್ಕಾರ (ಶಾಂತಿ 320/8–75). ರಾಜನ ವಚನಗಳಿಂದ ವಿಚಲಿತ ಳಾಗದೆ, ಈಕೆ ವಿದ್ವತ್ಪೂರ್ಣ ಭಾಷಣದ ಮೂಲಕ, ಆತನಿಗೆ ಉತ್ತರ ನೀಡಿದಳು ಮತ್ತು ತನ್ನ ಪರಿಚಯ ನೀಡುತ್ತಾ ಹೇಳಿದಳು. 'ನಾನು ರಾಜರ್ಷಿ ಪ್ರಧಾನರ ಕುಲದಲ್ಲಿ ಹುಟ್ಟಿದ್ದೇನೆ.

ಕ್ಷತ್ರಿಯ ಕನ್ಯೆಯಾಗಿದ್ದೇನೆ. ನಾನು ಅಖಂಡ ಬ್ರಹ್ಮಚರ್ಯ ಪಾಲನೆ ಮಾಡಿದ್ದೇನೆ. ನನ್ನ ಹೆಸರು ಸುಲಭಾ. ನಾನು ಸದಾ ಸ್ವಧರ್ಮದಲ್ಲಿ ಸ್ಥಿತಳಾಗಿರುತ್ತೇನೆ' (ಶಾಂತಿ 320/76-192).

**ಸುಲೋಚನ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/94; ಆದಿ 116/4). ಇವನು ದುರ್ಯೋಧನನೊಂದಿಗಿದ್ದು, ರಾಜಾದ್ರುಪದನ ಮೇಲೆ ಆಕ್ರಮಣ ಮಾಡಿದ್ದನು (ಆದಿ 137/6). ಭೀಮಸೇನನಿಂದ ಇವನ ವಧೆ (ಭೀಷ್ಮ 64/37-38).

**ಸುವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/73).

**ಸುವರ್ಚಲಾ** – (1) ಮಹರ್ಷಿ ದೇವಲನ ಪುತ್ರಿ. ಈಕೆ ತಂದೆಯೊಡನೆ ತನಗೆ ಬೇಕಾದ ವರನ ಲಕ್ಷಣ ಹೇಳಿದುದು. ಸ್ವಯಂವರದಲ್ಲಿ ಇವಳಿಂದ ಋಷಿಕುಮಾರರ ತಿರಸ್ಕಾರ. ಶ್ವೇತಕೇತು ಮತ್ತು ಈಕೆಯ ಮಾತುಕತೆ ಮತ್ತು ಈಕೆ ಶ್ವೇತಕೇತುವನ್ನು ವರಿಸಿದುದು. ಶ್ವೇತಕೇತುವಿನೊಂದಿಗೆ ಈಕೆಯ ವಿವಾಹ. ಪತಿಯೊಂದಿಗೆ ಆಕೆಯ ಅಧ್ಯಾತ್ಮಸಂಬಂಧಿ ಪ್ರಶ್ನೋತ್ತರ. ಗೃಹಸ್ಥಧರ್ಮದ ಪಾಲನೆ ಮಾಡುತ್ತಾ ಇವಳಿಗೆ ಪರಮಗತಿಯ ಪ್ರಾಪ್ತಿ (ಶಾಂತಿ 220).

(2) ಸೂರ್ಯನ ಪತ್ನಿ (ಅನು 146/5).

**ಸುವರ್ಚಾ** – (1) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/102; ಆದಿ 116/10). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/3). ಭೀಮಸೇನನಿಂದ ಇವನ ವಧೆ (ಕರ್ಣ 84/5-6).

(2) ರಾಜಾ ಸುಕೇತುವಿನ ಒಬ್ಬ ಪುತ್ರ. ಇವನು ತನ್ನ ತಂದೆ ಮತ್ತು ಸಹೋದರ ಸುನಾಮನ ಜೊತೆಯಲ್ಲಿ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/9).

(3) ತಪನಾಮಧಾರಿ ಪಾಂಚಜನ್ಯನೆಂಬ ಹೆಸರಿನ ಅಗ್ನಿಯ ಮಗ. ಇವನು ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ಹದಿನೈದು ಉತ್ತರ ದೇವತೆ (ವಿನಾಯಕರು)ಗಳಲ್ಲಿ ಒಬ್ಬ (ವನ 220/13).

(4) ಒಬ್ಬ ಸತ್ಯವಾದಿ ಬ್ರಾಹ್ಮಣ ಋಷಿ. ಇವನು ರಾತ್ರಿಯಾದರೂ ಸತ್ಯವಾನ ಸಾವಿತ್ರಿಯರು ಹಿಂತಿರುಗದಿದ್ದಾಗ ಚಿಂತಿತನಾದ ಮಹಾರಾಜ ದ್ಯುಮತ್ಸೇನನಿಗೆ ಧೈರ್ಯ ತುಂಬಿದ್ದನು (ವನ 298/10).

(5) ತನ್ನ ವಂಶವನ್ನು ವಿಸ್ತರಿಸುವ, ಗರುಡನ ಒಬ್ಬ ಪುತ್ರ (ಉದ್ಯೋಗ 101/2).

(6) ಕೌರವ ಪಕ್ಷದ ಒಬ್ಬ ಯೋಧ. ಇವನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 48/15-16).

(7) ಹಿಮವಂತನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಅತಿವರ್ಚಾ ಎಂದಾಗಿತ್ತು (ಶಲ್ಯ 45/46).

(8) ಸೂರ್ಯವಂಶದ ರಾಜ ಖನೀನೇತ್ರನ ಪುತ್ರ. ಪ್ರಜೆಗಳು ಇವನ ತಂದೆ ಖನೀನೇತ್ರನನ್ನು ದೂರಸರಿಸಿ, ಇವನಿಗೆ ರಾಜಪದವಿಯ ಅಭಿಷೇಕ ಮಾಡಿದರು (ಆಶ್ವ 4/9). ಇವನಿಗೆ ಕರಂಧಮನೆಂದು ಹೆಸರು ಬರಲು ಕಾರಣ (ಆಶ್ವ 4/15-16). ತ್ರೇತಾಯುಗದ ಆರಂಭದಲ್ಲಿ ಇವನಿಗೆ ಒಬ್ಬ ತೇಜಸ್ವೀ ಮಗನಾದನು. ಅವನು ಕಾರಂಧಮನೆಂಬ ಹೇಳಲ್ಪಟ್ಟನು. ಇವನ ಹೆಸರೇ ಅವಿಕ್ಷಿತನೆಂದಾಗಿತ್ತು (ಆಶ್ವ 4/18).

**ಸುವರ್ಣ** – (1) ಒಬ್ಬ ಬ್ರಹ್ಮಚಾರಿ ಮತ್ತು ವಿಖ್ಯಾತ ಗುಣವಂತನಾದ ದೇವಗಂಧರ್ವ. ಇವನು ಅರ್ಜುನನ ಜನ್ಮೋತ್ಸವಕ್ಕೆ ಬಂದಿದ್ದನು (ಅದಿ 122/58).

(2) ಒಬ್ಬ ತಪಸ್ವೀ ಬ್ರಾಹ್ಮಣ. ಇವನ ಕಾಂತಿ ಸುವರ್ಣದಂತಿತ್ತು. ಇವನು ಮನುವಿನೊಡನೆ ಪುಷ್ಪಾದಿ ದಾನಗಳ ಕುರಿತು ಪ್ರಶ್ನೆ ಮಾಡಿದ್ದನು (ಅನು 98/3-9).

**ಸುವರ್ಣಚೂಡ** – ಗರುಡನ ಪ್ರಮುಖ ಸಂತಾನಗಳಲ್ಲಿ ಒಬ್ಬ (ಉದ್ಯೋಗ 101/9).

**ಸುವರ್ಣತೀರ್ಥ** – ಒಂದು ಪುಣ್ಯಮಯ ತೀರ್ಥ. ಇಲ್ಲಿ ಪೂರ್ವಕಾಲದಲ್ಲಿ ಭಗವಾನ್ ವಿಷ್ಣು ರುದ್ರದೇವನ ಪ್ರಸನ್ನತೆಗಾಗಿ, ಅವನ ಆರಾಧನೆ ಮಾಡಿದನು ಮತ್ತು ಅವನಿಂದ ಅನೇಕ ದೇವದುರ್ಲಭ ಉತ್ತಮ ವರಗಳನ್ನು ಪಡೆದನು. ಈ ತೀರ್ಥದಲ್ಲಿ ಭಗವಾನ್ ಶಂಕರನ ಪೂಜೆ ಮಾಡುವುದರಿಂದ, ಅಶ್ವಮೇಧ ಯಜ್ಞದ ಫಲ ಮತ್ತು ಗಣಪತಿ ಪದದ ಪ್ರಾಪ್ತಿಯಾಗುತ್ತದೆ (ವನ 84/18-22).

**ಸುವರ್ಣವರ್ಮಾ** – ಕಾಶಿಯ ರಾಜ. ಇವನು ವಪುಷ್ಟಮಾಳ ತಂದೆ. ಜನಮೇಜಯನ ಮಂತ್ರಿಗಳು ಇವನ ಬಳಿಗೆ ಹೋಗಿ ರಾಜಕುಮಾರಿ

ವಪುಷ್ಟಮಾಳನ್ನು ವರಣ ಮಾಡಿದ್ದರು (ಆದಿ 44/8). ಇವನಿಂದ ರಾಜಾ ಜನಮೇಜಯನೊಂದಿಗೆ ತನ್ನ ಪುತ್ರಿಯ ವಿವಾಹ (ಆದಿ 44/9).

**ಸುವರ್ಣಶಿರಾ** – ಪಶ್ಚಿಮ ದಿಕ್ಕಿನಲ್ಲಿದ್ದುಕೊಂಡು ಸಾಮಗಾನ ಮಾಡುವ ಒಬ್ಬ ಮಹರ್ಷಿ. ಇವನ ತಲೆಕೂದಲುಗಳು ಹಳದಿ ಮಿಶ್ರಿತ ಕೆಂಪು ವರ್ಣದವುಗಳು. ಇವನ ಪ್ರಭಾವ ಅಪ್ರಮೇಯವಾದುದು ಮತ್ತು ಮೂರ್ತಿ ಅಗೋಚರವಾದುದು (ಉದ್ಯೋಗ 110/12).

**ಸುವರ್ಣಷ್ಠೀವೀ** – ರಾಜಾ ಸೃಂಜಯನ ಪುತ್ರ. ಇವನಿಗೆ ಸುವರ್ಣಷ್ಠೀವಿಯೆಂದು ಹೆಸರು ಬರಲು ಕಾರಣ (ದ್ರೋಣ 55/23). ಚೋರರಿಂದ ಇವನ ಅಪಹಾರ ಮತ್ತು ವಧೆ (ದ್ರೋಣ 55/30–31). ನಾರದನ ವರದಿಂದ ಪುನರುಜ್ಜೀವನ (ದ್ರೋಣ 71/8–9). ಇವನ ಜನ್ಮ ಮತ್ತು ಮರಣ ಮತ್ತು ಪುನರುಜ್ಜೀವನದ ವೃತ್ತಾಂತದ ಪುನರ್ವರ್ಣನೆ (ಶಾಂತಿ 31 ಅಧ್ಯಾಯ).

**ಸುವರ್ಣಾ** – ಇಕ್ಷ್ವಾಕುವಂಶದ ಕನ್ಯೆ. ಪೂರು ವಂಶದ ರಾಜಾಸುಹೋತ್ರನ ಪತ್ನಿ. ಹಸ್ತಿಯೆಂಬ ಹೆಸರಿನ ರಾಜನ ತಾಯಿ (ಆದಿ 95/34).

**ಸುವರ್ಣಾಭ** – ಸ್ವಾರೋಚಿಷ ಮನುವಿನ ಪೌತ್ರ ಮತ್ತು ಶಂಖಪದನ ಪುತ್ರ. ಇವನು ದಿಕ್ಪಾಲನಾಗಿದ್ದನು. ಇವನಿಗೆ ತಂದೆ ಸಾತ್ವತ ಧರ್ಮದ ಉಪದೇಶವಿತ್ತನು (ಶಾಂತಿ 348/38).

**ಸುವರ್ಮಾ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/97; ಆದಿ 116/6). ಭೀಮಸೇನನಿಂದ ಇವನ ವಧೆ (ದ್ರೋಣ 127/66).

**ಸುವಸ್ತ್ರಾ** – ಒಂದು ಪವಿತ್ರನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/25).

**ಸುವಾಕ್** – ಒಬ್ಬ ಋಷಿ. ಇವನು ಅಜಾತಶತ್ರು ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/24).

**ಸುವಾಮಾ** – ಒಂದು ಪವಿತ್ರ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/28).

**ಸುವಾಸ್ತುಕ** – ಒಬ್ಬ ರಾಜ. ಇವನಿಗೆ ಪಾಂಡವ ಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲ್ಪಟ್ಟಿತ್ತು (ಉದ್ಯೋಗ 4/13).

**ಸುವಾಹ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/66).

**ಸುವಿಶಾಲಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/28).

**ಸುವೀರ** – (1) ಒಬ್ಬ ರಾಜ. ಇವನು ಕ್ರೋಧ ವಶನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/60).

(2) ಒಂದು ಕ್ಷತ್ರಿಯಕುಲ. ಇದರಲ್ಲಿ ಅಜವಿಂದು ಎಂಬ ಕುಲಕಳಂಕ ರಾಜ ಜನ್ಮವೆತ್ತಿದ್ದನು (ಉದ್ಯೋಗ 74/14).

(3) ರಾಜಾ ದ್ಯುತಿಮಂತನ ಧರ್ಮಾತ್ಮನಾದ ಮಗ. ಇವನು ಎಲ್ಲಾ ಲೋಕಗಳಲ್ಲಿ ವಿಖ್ಯಾತನಾಗಿದ್ದನು. ಇವನು ಇಂದ್ರನಿಗೆ ಸಮಾನನಾದ ಪರಾಕ್ರಮಿಯಾಗಿದ್ದನು. ಇವನ ಪುತ್ರನ ಹೆಸರು ದುರ್ಜಯನೆಂದಾಗಿತ್ತು (ಅನು 2/10–12).

**ಸುವೇಣಾ** – ಒಂದು ನದಿ. ಮಾರ್ಕಂಡೇಯನು ಬಾಲಮುಕುಂದನ ಉದರದಲ್ಲಿ ಇದನ್ನು ಕಂಡಿದ್ದನು (ವನ 188/104).

**ಸುವ್ರತ** – (1) ಒಬ್ಬ ಅನಂತಕೀರ್ತಿ, ಅಮಿತ ತೇಜಸ್ವಿ ಮಹಾತ್ಮ. ಇವನ ಪವಿತ್ರ ಆಶ್ರಮ ಉತ್ತರಾಖಂಡದಲ್ಲಿದೆ (ವನ 90/12–13).

(2) ಮಿತ್ರನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸತ್ಯಸಂಧನೆಂದಾಗಿತ್ತು (ಶಲ್ಯ 45/41).

(3) ವಿಧಾತಾನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಸುಕರ್ಮಾ ಎಂದಾಗಿತ್ತು (ಶಲ್ಯ 45/42).

**ಸುಶರ್ಮಾ** – (1) ವೃದ್ಧಕ್ಷೇಮನ ಪುತ್ರ ಮತ್ತು ತ್ರಿಗರ್ತದೇಶದ ರಾಜ. ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/9). ಇವನು ದುರ್ಯೋಧನನಿಗೆ ಮತ್ಸ್ಯದೇಶದ ಮೇಲೆ ಆಕ್ರಮಣಮಾಡಲು ಸಲಹೆ ನೀಡಿದುದು (ವಿರಾಟ 30/1–13). ಇವನಿಂದ ವಿರಾಟನಗರದ ಮೇಲೆ ಮುತ್ತಿಗೆ (ವಿರಾಟ 30/26). ಗೋಹರಣದ ಸಮಯದಲ್ಲಿ ಇವನು ರಾಜಾ ವಿರಾಟನನ್ನು ಬಂಧಿಸಿದುದು (ವಿರಾಟ 33/7–9). ಭೀಮನು ಇವನನ್ನು ಜೀವಂತ ಸೆರೆಹಿಡಿದುದು (ವಿರಾಟ 33/25–48). ಯುಧಿಷ್ಠಿರನ

ಕೃಪೆಯಿಂದ ಇವನ (ದಾಸಭಾವದಿಂದ) ಬಿಡುಗಡೆ (ವಿರಾಟ 33/58–61). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲಾಗಿತ್ತು (ಉದ್ಯೋಗ 4/20). ಪ್ರಥಮ ದಿನ ಸಂಗ್ರಾಮದಲ್ಲಿ ಚೇಕಿತಾನನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 45/60–62). ಅರ್ಜುನನಿಂದ ಪರಾಜಿತನಾಗಿ ಯುದ್ಧದಿಂದ ತೊಲಗಿದುದು (ಭೀಷ್ಮ 82/1). ಅರ್ಜುನನೊಂದಿಗೆ ಯುದ್ಧ (ಭೀಷ್ಮ 84/53; ಭೀಷ್ಮ 102/10–18). ಅರ್ಜುನ ಮತ್ತು ಭೀಮಸೇನನೊಂದಿಗೆ ಯುದ್ಧ (ಭೀಷ್ಮ 114 ಅಧ್ಯಾಯ). ಧೃಷ್ಟದ್ಯುಮ್ನನೊಂದಿಗೆ ಯುದ್ಧ (ದ್ರೋಣ 14/37–39). ಅರ್ಜುನನನ್ನು ಕೊಲ್ಲಲು ಸಹೋದರರ ಸಹಿತ ಇವನ ಪ್ರತಿಜ್ಞೆ (ದ್ರೋಣ 17/11–18). ಸಹೋದರರು ಮತ್ತು ಸಂಶಪ್ತಕ ಸೇನಾಸಹಿತನಾಗಿ ಇವನು ಶಪಥ ಮಾಡಿದುದು (ದ್ರೋಣ 17/29–36). ದ್ರೋಣಾಚಾರ್ಯನು ಕೊಲ್ಲಲ್ಪಟ್ಟಾಗ ಯುದ್ಧಕ್ಷೇತ್ರದಿಂದ ಓಡಿದುದು (ದ್ರೋಣ 193/18). ಅರ್ಜುನನೊಂದಿಗೆ ಯುದ್ಧ ಮಾಡುವಾಗ, ಸಂಶಪ್ತಕರ ಮೂಲಕ, ಇವನು ಅರ್ಜುನನ ರಥ ಮತ್ತು ಸಾರಥಿಯನ್ನು ಹಿಡಿಸಿದುದು (ಕರ್ಣ 53/13–16). ಅರ್ಜುನನಿಂದ ಇವನು ಕೊಲ್ಲಲ್ಪಟ್ಟದ್ದು (ಶಲ್ಯ 27/46). ಮಹಾಭಾರತದಲ್ಲಿ ಬಂದಿರುವ ಸುಶರ್ಮಾನ ಹೆಸರುಗಳು – ಪ್ರಸ್ಥಲಾಧಿಪ, ಪ್ರಸ್ಥಲಾಧಿಪತಿ, ರುಕ್ಮರಥ, ತ್ರೈಗರ್ತ, ತ್ರಿಗರ್ತ, ತ್ರಿಗರ್ತಾಧಿಪತಿ, ತ್ರಿಗರ್ತರಾಟ್ ಮತ್ತು ತ್ರಿಗರ್ತರಾಜ ಇತ್ಯಾದಿ.

(2) ಪಾಂಡವ ಪಕ್ಷದ ಒಬ್ಬ ಪಾಂಚಾಲಯೋಧ. ಚಿತ್ರಸೇನನೊಂದಿಗೆ ಇವನ ದ್ವಂದ್ವಯುದ್ಧ (ಭೀಷ್ಮ 116/27–29). ಇವನು ಭೀಷ್ಮನಿಂದ ಪೀಡಿತನಾದುದು ಮತ್ತು ಅರ್ಜುನನಿಂದ ಇವನ ರಕ್ಷಣೆ (ಭೀಷ್ಮ 118/41–42). ಕರ್ಣನೊಂದಿಗೆ ಇವನ ಯುದ್ಧ ಮತ್ತು ಆತನಿಂದ ಇವನ ವಧೆ (ಕರ್ಣ 56/44–48).

**ಸುಶೋಭನಾ** – ಮಂಡೂಕರಾಜನ ಕನ್ಯೆ. ಇಕ್ಷ್ವಾಕುವಂಶದ ರಾಜಾ ಪರೀಕ್ಷಿತನೊಂದಿಗೆ ಈಕೆಯ ಮಿಲನ ಮತ್ತು ವಿವಾಹ (ಶಲ್ಯ 192/9–12). ಇವಳು ತನ್ನ ಶರ್ತದಂತೆ ಬಾವಿಯಲ್ಲಿ ಅದೃಶ್ಯಳಾದುದು (ಶಲ್ಯ 192/22). ಪುನಃ ರಾಜನೊಡನೆ ಈಕೆಯ ಭೇಟಿ (ಶಲ್ಯ 192/35). ಇವಳ ಗರ್ಭದಿಂದ ಶಲ, ದಲ, ಬಲರೆಂಬ ಮೂವರು ಪುತ್ರರ ಜನನ (ಶಲ್ಯ 192/38).

**ಸುಶ್ರವಾ** – ವಿದರ್ಭ ರಾಜಕುಮಾರಿ. ಪೂರುವಂಶದ ರಾಜಾ ಜಯತ್ಸೇನನ ಪತ್ನಿ. ಅವಾಚೀನನ ತಾಯಿ (ಆದಿ 95/17).

**ಸುಶ್ರುತ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/55).

**ಸುಷೇಣ** – (1) ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/16).

(2) ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/97; ಆದಿ 116/7). ಭೀಮಸೇನನಿಂದ ಇವನ ವಧೆ (ಭೀಷ್ಮ 64/34; ದ್ರೋಣ 27/60). (ಧೃತರಾಷ್ಟ್ರ ಪುತ್ರ 'ಸುಷೇಣ'ನ ವಧೆ ಎರಡು ಕಡೆಗಳಲ್ಲಿ ಬಂದಿದೆ. ಆದುದರಿಂದ ಆತನಿಗೆ ಇಬ್ಬರು ಪುತ್ರರು ಇದೊಂದೇ ಹೆಸರಿನಿಂದ ಪ್ರಸಿದ್ಧರಾಗಿದ್ದರೋ ಎಂಬ ಸಂಶಯ ಬರುತ್ತದೆ. ಅವರಿಗೆ ಪ್ರತ್ಯಪ್ರತ್ಯೇಕ ಬೇರೆಯೇ ಹೆಸರುಗಳೂ ಇರಬಹುದು. ಆದರೆ ಆ ಹೆಸರಿನಿಂದ ಅವರು ಪ್ರಸಿದ್ಧರಾಗಿರಲಿಲ್ಲ).

(3) ಪೂರುವಂಶದ ಮಹಾರಾಜ ಅವಿಕ್ಷಿತನ ಮೊಮ್ಮಗ ಮತ್ತು ಪರೀಕ್ಷಿತನ ಪುತ್ರ (ಆದಿ 94/52–55).

(4) ಜಮದಗ್ನಿ ಪುತ್ರ, ತಾಯಿ ರೇಣುಕೆ. ಮಾತೃವಧೆಯ ಆಜ್ಞಾಪಾಲನೆ ಮಾಡದುದಕ್ಕಾಗಿ ಈತನಿಗೆ ತಂದೆಯ ಶಾಪ (ವನ 116/12). ಪರಶುರಾಮನಿಂದ ಇವನಿಗೆ ಶಾಪದಿಂದ ಬಿಡುಗಡೆ (ವನ 116/17).

(5) ವಾನರ ರಾಜ ವಾಲಿಯ ಮಾವ. ತಾರೆಯ ತಂದೆ. ಇವನು ಸಹಸ್ರಕೋಟಿ ವಾನರ ಸೇನೆಯೊಂದಿಗೆ ಶ್ರೀರಾಮನ ಮುಂದೆ ಉಪಸ್ಥಿತನಾದುದು (ವನ 283/2).

(6) ಕರ್ಣನ ಪುತ್ರ ಮತ್ತು ಚಕ್ರರಕ್ಷಕ. ನಕುಲನೊಂದಿಗೆ ಇವನ ಯುದ್ಧ (ಕರ್ಣ 48/18, 34–40). ಉತ್ತಮೌಜಸನಿಂದ ಇವನ ವಧೆ (ಕರ್ಣ 75/13).

(7) ಕರ್ಣನ ಮಗ. ನಕುಲನಿಂದ ಇವನ ವಧೆ

(ಶಲ್ಯ 10/49–50). (ಕರ್ಣಪುತ್ರ ಸುಷೇಷಣನ ವಧೆ ಎರಡು ಸ್ಥಳಗಳಲ್ಲಿ ಬಂದಿದೆ. ಆದುದರಿಂದ ಕರ್ಣನ ಇಬ್ಬರು ಪುತ್ರರು ಇದೇ ಹೆಸರಿನಿಂದ ಪ್ರಸಿದ್ಧರೋ ಎಂಬ ಅನುಮಾನವಿದೆ.)

**ಸುಸಂಕುಲ** – ಉತ್ತರ ಭಾರತದ ಒಂದು ಜನಪದ. ಇದನ್ನು ಮತ್ತು ಇಲ್ಲಿರುವ ರಾಜನನ್ನು ಅರ್ಜುನ ಗೆದ್ದಿದ್ದನು (ಸಭಾ 27/11).

**ಸುಸಾಮಾ** – ಧನಂಜಯ ಗೋತ್ರದ ಒಬ್ಬ ಶ್ರೇಷ್ಠಬ್ರಾಹ್ಮಣ. ಇವನು ಯುಧಿಷ್ಠಿರನ ರಾಜ ಸೂಯಯಜ್ಞದಲ್ಲಿ ಸಾಮಗಾನ ಮಾಡುತ್ತಿದ್ದನು (ಸಭಾ 33/34).

**ಸುಸ್ಥಲ** – ಒಂದು ಭಾರತೀಯ ಜನಪದ ಮತ್ತು ಅಲ್ಲಿರುವ ಜನರು (ಸಭಾ 14/16).

**ಸುಸ್ವರ** – ಗರುಡನ ಪ್ರಮುಖ ಸಂತಾನಗಳ ಪರಂಪರೆಯಲ್ಲಿ ಹುಟ್ಟಿದ ಒಬ್ಬ ಪಕ್ಷಿ (ಉದ್ಯೋಗ 101/14).

**ಸುಹನು** – ಒಬ್ಬ ದಾನವ. ಈತ ವರುಣ ಸಭೆಯಲ್ಲಿರುತ್ತಾ, ಆತನ ಉಪಾಸನೆ ಮಾಡು ತ್ತಾನೆ (ಸಭಾ 9/13).

**ಸುಹವಿ** – ಸಮ್ರಾಟ್ ಭರತನ ಪೌತ್ರ ಮತ್ತು ಭುಮನ್ಯುವಿನ ಪುತ್ರ. ಇವನ ತಾಯಿಯ ಹೆಸರು 'ಪುಷ್ಕರಿಣೀ' ಎಂದಾಗಿತ್ತು (ಆದಿ 94/24).

**ಸುಹಸ್ತ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/102; ಆದಿ 116/10). ಭೀಮ ಸೇನನಿಂದ ಇವನ ವಧೆ (ದ್ರೋಣ 157/19).

**ಸುಹೋತ್ರ** – (1) ಒಬ್ಬ ಪ್ರಾಚೀನ ರಾಜ (ಆದಿ 1/226). ಇವನು ಭರತನ ಮೊಮ್ಮಗ ಮತ್ತು ಭುಮನ್ಯುವಿನ ಜ್ಯೇಷ್ಠಪುತ್ರ.. ಇವನ ತಾಯಿಯ ಹೆಸರು 'ಪುಷ್ಕರಿಣೀ' ಎಂದಾಗಿತ್ತು (ಆದಿ 94/24). ಇವನಿಗೆ ಭೂಮಂಡಲದ ರಾಜ್ಯ ದೊರಕಿತು. ಇವನು ರಾಜಸೂಯ ಮತ್ತು ಅಶ್ವಮೇಧ ಇತ್ಯಾದಿ ಅನೇಕ ಯಜ್ಞಗಳನ್ನು ಮಾಡಿದ್ದನು. ಇವನ ರಾಜ್ಯದ ವಿಶೇಷತೆ (ಆದಿ 94/25–29). ಇವನಿಂದ ಇಕ್ಷ್ವಾಕುಕುಲ ನಂದಿನಿ ಯಾದ ಸುವರ್ಣಾ ಎಂಬವಳ ಗರ್ಭದಲ್ಲಿ ಅಜಮೀಢ, ಸುಮೀಢ ಮತ್ತು ಪುರುಮೀಢರು ಜನಿಸಿದರು (ಆದಿ 94/30). ಇವನ ದಾನ ಶೀಲತೆ ಮತ್ತು ಪರಾಕ್ರಮ ಇತ್ಯಾದಿ ಗುಣಗಳ ವಿಶೇಷ ವರ್ಣನೆ (ದ್ರೋಣ 56 ಅಧ್ಯಾಯ). ಇವನು ಅತಿಥಿಸತ್ಕಾರದಲ್ಲಿ ಪ್ರೀತಿಯುಳ್ಳವನಾಗಿ ದ್ದನು. ಇವನ ರಾಜ್ಯದಲ್ಲಿ ಇಂದ್ರನು ಒಂದು ವರ್ಷದವರೆಗೆ ಚಿನ್ನದ ಮಳೆ ಸುರಿಸಿದ್ದನು. ನದಿಗಳು ತಮ್ಮ ನೀರಿನೊಂದಿಗೆ ಸ್ವರ್ಣವನ್ನು ಹರಿಸುತ್ತಿದ್ದವು. ಇಂದ್ರನು ಚಿನ್ನದ ಅನೇಕ ಆಮೆ ಗಳು, ಏಡಿಗಳು, ಮೊಸಳೆಗಳು, ಮೀನುಗಳು, ಕಡಲಹಂದಿಗಳು – ಇತ್ಯಾದಿಗಳನ್ನು ಆ ನದಿ ಗಳಲ್ಲಿ ಬೀಳಿಸಿದ್ದನು. ರಾಜನು ಎಲ್ಲಾ ಸುವರ್ಣ ರಾಶಿಗಳನ್ನು ಬ್ರಾಹ್ಮಣರಿಗೆ ಹಂಚಿದ್ದನು (ಶಾಂತಿ 29/25–29).

(2) ಮದ್ರರಾಜ ದ್ಯುತಿಮಂತನ ಮಗಳು ವಿಜಯಾಳ ಗರ್ಭದಿಂದ ಪಾಂಡುಕುಮಾರ ಸಹದೇವನ ಮೂಲಕ ಹುಟ್ಟಿದ ಪುತ್ರ (ಆದಿ 95/80).

(3) ಒಬ್ಬ ಋಷಿ. ಇವನು ಅಜಾತಶತ್ರು ಯುಧಿಷ್ಠಿರನನ್ನು ಗೌರವಿಸುತ್ತಿದ್ದನು (ವನ 26/24).

(4) ಕುರುವಂಶದ ಒಬ್ಬ ರಾಜ. ಇವನು ರಾಜಾ ಉಶೀನರ ವಂಶದ ಶಿಬಿಯ ಮಾರ್ಗವನ್ನು ತಡೆದುದು. ನಾರದನು ಹೇಳಿದ ಮೇಲೆ ಇವನು ಶಿಬಿಗೆ ದಾರಿಬಿಟ್ಟದ್ದು (ವನ 194/2,7).

(5) ಒಬ್ಬ ರಾಕ್ಷಸ. ಇವನು ಪ್ರಾಚೀನ ಕಾಲದಲ್ಲಿ ಈ ಭೂಮಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಇದನ್ನು ಬಿಟ್ಟು ಸತ್ತುಹೋದನು (ಶಾಂತಿ 227/51).

**ಸುಹೋತಾ** – ಸಮ್ರಾಟ ಭರತನ ಪೌತ್ರ ಮತ್ತು ಭ್ಯುಮನ್ಯುವಿನ ಪುತ್ರ. ಇವನ ತಾಯಿಯ ಹೆಸರು 'ಪುಷ್ಕರಿಣೀ' ಎಂದಾಗಿತ್ತು (ಆದಿ 94/24).

**ಸುಹ್ಮ** – (1) ಪೂರ್ವಭಾರತದ ಒಂದು ಪ್ರಾಚೀನ ಜನಪದ. ಮಹಾರಾಜ ಪಾಂಡು ಇದನ್ನು ಜಯಿಸಿದ್ದನು (ಆದಿ 112/29). ಭೀಮಸೇನನೂ ಪೂರ್ವದಿಗ್ವಿಜಯ ಕಾಲದಲ್ಲಿ ಈ ಜನಪದವನ್ನು ಗೆದ್ದಿದ್ದನು (ಸಭಾ 30/16).

(2) ಉತ್ತರ ಭಾರತದ ಒಂದು ಪರ್ವತೀಯ ಪ್ರದೇಶ. ಇದನ್ನು ಅರ್ಜುನನು ಉತ್ತರ ದಿಗ್ವಿಜಯಕಾಲದಲ್ಲಿ ಗೆದ್ದಿದ್ದನು (ಸಭಾ 27/21).

**ಸೂಕ್ಷ್ಮ** – ಒಬ್ಬ ವಿಖ್ಯಾತ ದಾನವ. ಇವನು ಕಶ್ಯಪನಿಂದ ದನುವಿನಲ್ಲಿ ಹುಟ್ಟಿದ್ದನು (ಆದಿ 65/25). ಇವನೇ ಈ ಭೂಮಿಯಲ್ಲಿ ರಾಜಾ

ಬೃಹದ್ರಥನ ರೂಪದಲ್ಲಿ ಹುಟ್ಟಿದ್ದನು (ಆದಿ 67/18–19).

**ಸೂಚೀವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/72).

**ಸೂತ** – ಒಬ್ಬ ಋಷಿ. ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/12). ಇವನು ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರನಾಗಿದ್ದಾನೆ (ಅನು 4/57).

**ಸೂಪಕರ್ತಾ** – ತರತರದ ಅಡುಗೆಗಳನ್ನು ತಯಾರಿಸುವ ಬಾಣಸಿಗ (ವಿರಾಟ 2/9).

**ಸೂರ್ಯ** – (1) ಭಗವಾನ್ ಸೂರ್ಯ ಅಥವಾ ಸವಿತಾ. ದಿವಃಪುತ್ರ ಇತ್ಯಾದಿ ಹನ್ನೆರಡು ಹೆಸರುಗಳು ವಿವಸ್ವಂತ(ಸೂರ್ಯ)ನನ್ನೇ ಹೇಳುವವುಗಳಾಗಿವೆ. ಇವುಗಳಲ್ಲಿ ಕೊನೆಯ ಹೆಸರು ರವಿ ಆಗಿದೆ. ರವಿಯನ್ನು 'ಮಹ್ಯ'ನೆಂದು ಹೇಳಲಾಗಿದೆ. ಅವನ ಪುತ್ರ ದೇವಭ್ರಾಟ್ (ಆದಿ 1/42–43). ಮೋಸದಿಂದ ಅಮೃತಪಾನ ಮಾಡುತ್ತಿರುವ ರಾಹುವಿನ ಗುಟ್ಟು ಇವನಿಂದ ಭೇದಿಸಲ್ಪಟ್ಟಿತು (ಆದಿ 19/5). ಇದರಿಂದಲೇ ರಾಹುವಿಗೆ ಇವನಲ್ಲಿ ಶತ್ರುತ್ವ ಉಂಟಾಯಿತು (ಆದಿ 19/9). ರಾಹುವಿನಿಂದ ಪೀಡಿತನಾಗಿ ಇವನು ಜಗತ್ತಿನ ವಿನಾಶಕ್ಕಾಗಿ ಸಂಕಲ್ಪ ಮಾಡಿದನು (ಆದಿ 24/10). ಅನಂತರ ದೇವತೆಗಳ ಪ್ರೇರಣೆಯಿಂದ ಅರುಣನು ಇವನ ಸಾರಥ್ಯ ಸ್ವೀಕರಿಸಿದನು (ಆದಿ 24/20). ಕಶ್ಯಪನಿಂದ ಅದಿತಿಯ ಗರ್ಭದಲ್ಲಿ ಪ್ರಕಟಗೊಂಡ ಹನ್ನೆರಡು ಆದಿತ್ಯರು ಇವನ ಸ್ವರೂಪದವರೇ ಆಗಿದ್ದಾರೆ (ಆದಿ 65/14–15). ಇವನ ಭಾರ್ಯೆ ತ್ವಷ್ಟಾನ ಪರಮಸೌಭಾಗ್ಯವತಿ ಪುತ್ರಿಯಾದ 'ಸಂಜ್ಞಾ'ದೇವಿಯಾಗಿದ್ದಾಳೆ (ಆದಿ 66/35). ಇವನಿಂದ ಕುಂತಿಯ ಗರ್ಭದಲ್ಲಿ ಕರ್ಣನ ಜನ್ಮ (ಆದಿ 110/18). ವಸಿಷ್ಠನ ಪ್ರಾರ್ಥನೆ ಪ್ರಕಾರ ಇವನು ತನ್ನ ಪುತ್ರಿ ತಪತಿಯನ್ನು ಸಂವರಣನಿಗಾಗಿ ಸಮರ್ಪಿಸಿದುದು (ಆದಿ 172/26). ಧೌಮ್ಯನಿಂದ ಯುಧಿಷ್ಠಿರನಿಗೆ ಸೂರ್ಯದೇವನ ನೂರ ಎಂಟು ನಾಮಗಳ ಉಪದೇಶ, ಯುಧಿಷ್ಠಿರನಿಂದ ಇವನ ಪೂಜೆ, ಉಪಾಸನೆ ಮತ್ತು ಪೂರ್ವೋಕ್ತ ನಾಮಗಳ ಜಪ ಮತ್ತು ಸ್ತುತಿ. ಇದರಿಂದ ಸಂತುಷ್ಟನಾಗಿ ಈತನು ಅವನಿಗೆ ದರ್ಶನವಿತ್ತದ್ದು ಮತ್ತು ಅಕ್ಷಯಪಾತ್ರೆ ನೀಡಿದುದು ಮತ್ತು ಹದಿನಾಲ್ಕನೇ ವರ್ಷದಲ್ಲಿ ರಾಜ್ಯಪ್ರಾಪ್ತವಾಗುವ ಆಶೀರ್ವಾದ ಮಾಡಿದುದು (ವನ 3/15–74). ಧೌಮ್ಯನಿಂದ ಇವನ ಗತಿಯ ವರ್ಣನೆ (ವನ 163/28–42). ಕರ್ಣನಿಗೆ ಸ್ವಪ್ನದಲ್ಲಿ ದರ್ಶನವಿತ್ತು, ಇಂದ್ರನಿಗೆ ಕವಚ ಕುಂಡಲಕೊಡದಂತೆ ಈತ ಆದೇಶ ನೀಡಿದುದು (ವನ 300/10–20; ವನ 301 ಅಧ್ಯಾಯ). ಇಂದ್ರನ ಶಕ್ತಿಯನ್ನು ಪಡಕೊಂಡೇ, ಕವಚ ಕುಂಡಲ ಕೊಡಲು ಕರ್ಣನಿಗೆ ಸಮ್ಮತಿ ನೀಡಿದುದು (ವನ 302/11–17). ಕುಂತಿಯ ಆವಾಹನೆಯಿಂದ ಪ್ರಕಟನಾದುದು ಮತ್ತು ಆಕೆಯೊಂದಿಗೆ ವಾರ್ತಾಲಾಪಮಾಡಿದುದು (ವನ 306/8–28). ಕುಂತಿಯ ಉದರದಲ್ಲಿ ಇವನಿಂದ ಗರ್ಭಸ್ಥಾಪನೆ (ವನ 307/28). ದ್ರೌಪದಿಯಿಂದ ಭಗವಾನ್ ಸೂರ್ಯನ ಉಪಾಸನೆ ಮತ್ತು ದ್ರೌಪದಿಯ ರಕ್ಷಣೆಗೋಸ್ಕರ ಇವನು ಅದೃಶ್ಯ ರೂಪದಲ್ಲಿ ಒಬ್ಬ ರಾಕ್ಷಸನನ್ನು ನೇಮಿಸಿದುದು (ವಿರಾಟ 15/19–20). ಸೂರ್ಯನು ಯಾವ ಕಡೆ ಉದಯಿಸುತ್ತಾನೋ ಅದೇ ಪೂರ್ವದಿಕ್ಕು. ಪೂರ್ವದಿಕ್ಕೇ ಸೂರ್ಯಮಾರ್ಗದ ದ್ವಾರವಾಗಿದೆ (ಉದ್ಯೋಗ 108/3–5). ಈತ ಇತರರಿಗೆ ಅಹಿತವನ್ನುಂಟುಮಾಡುವ ಕೃತಘ್ನ ಅಸುರರನ್ನು ಸಿಟ್ಟಿನಿಂದ ನಾಶಮಾಡುತ್ತಾನೆ (ಉದ್ಯೋಗ 108/16). ಪೂರ್ವಕಾಲದಲ್ಲಿ ಭಗವಾನ್ ಸೂರ್ಯನು ವೇದೋಕ್ತವಿಧಿಯಿಂದ ಯಜ್ಞ ಮಾಡಿ, ಆಚಾರ್ಯ ಕಶ್ಯಪನಿಗೆ ದಕ್ಷಿಣಾರೂಪದಲ್ಲಿ ಯಾವ ದಿಕ್ಕನ್ನು ದಾನವಾಗಿತ್ತನೋ, ಅದನ್ನೇ ದಕ್ಷಿಣ ದಿಕ್ಕೆಂದು ಹೇಳುತ್ತಾರೆ (ಉದ್ಯೋಗ 109/1). ಯಾವ ದಿಕ್ಕಿನಲ್ಲಿ ಹಗಲಿನ ಅನಂತರ ಸೂರ್ಯದೇವನು ತನ್ನ ಕಿರಣಗಳನ್ನು ವಿಸರ್ಜಿಸುತ್ತಾನೋ ಅದೇ ಪಶ್ಚಿಮ ದಿಕ್ಕಾಗಿದೆ (ಉದ್ಯೋಗ 110/2). ಕರ್ಣನಲ್ಲಿ ಕುಂತಿಯು ಹೇಳಿದುದನ್ನು ಸೂರ್ಯನು ಸಮರ್ಥಿಸಿದುದು (ಉದ್ಯೋಗ 146/1–2). ಇವನ ವಿಸ್ತಾರ ಇತ್ಯಾದಿಗಳ ವರ್ಣನೆ (ಭೀಷ್ಮ 12/44–45). ಕರ್ಣ ಮತ್ತು ಅರ್ಜುನರ ದ್ವೈರಥ ಯುದ್ಧದಲ್ಲಿ ಕರ್ಣನ ವಿಜಯಕ್ಕಾಗಿ ಇಂದ್ರನೊಡನೆ ಈತನ ವಿವಾದ (ಕರ್ಣ 87/57–59). ಇವನಿಂದ ಸ್ಕಂದನಿಗೆ ಪಾರ್ಷದ ಪ್ರದಾನ (ಶಲ್ಯ 45/31).

ಮಹಾದೇವನು ಇವನನ್ನು ತೇಜಸ್ವೀ ಗ್ರಹಗಳಿಗೆ ಅಧಿಪತಿಯಾಗಿ ಮಾಡಿದನು (ಶಾಂತಿ 112/31). ಇವನು ಯಾಜ್ಞವಲ್ಕ್ಯನಿಗೆ ವೇದಜ್ಞಾನದ ವರವನ್ನಿತ್ತನು (ಶಾಂತಿ 318/6–12). ಮಹಾ ಪದ್ಮನೆಂಬ ನಾಗನೊಡನೆ ಈತ ಉಂಛ ಮತ್ತು ಶಿಲ ವೃತ್ತಿಯ ಮಹಿಮೆಯನ್ನು ವರ್ಣಿಸಿದುದು (ಶಾಂತಿ 363 ಅಧ್ಯಾಯ). ಕಾರ್ತಿಕೇಯನಿಗೆ ಸುಂದರಕಾಂತಿಯ ಉಡುಗೊರೆಯನ್ನಿತ್ತದ್ದು (ಅನು 86/23). ಮಹರ್ಷಿ ಜಮದಗ್ನಿಯೊಡನೆ ಕ್ಷಮಾ ಪ್ರಾರ್ಥನೆ ಮಾಡಿ ಅವನಿಗೆ ಶರಣಾ ಗತನಾದುದು (ಅನು 95/20ರಿಂದ 96/7ರ ತನಕ). ಜಮದಗ್ನಿ ಋಷಿಗೆ ಛತ್ರಿ ಮತ್ತು ಪಾದ ರಕ್ಷೆಯನ್ನು ನೀಡಿದುದು (ಅನು 96/14–15). ದೇವಾಸುರ ಸಂಗ್ರಾಮದಲ್ಲಿ ರಾಹುವಿನಿಂದ ಸೂರ್ಯ ಮತ್ತು ಚಂದ್ರರು ಗಾಯಗೊಂಡದ್ದ ರಿಂದ ಎಲ್ಲ ಕಡೆ ಅಂಧಕಾರ ವ್ಯಾಪಿಸಿತು. ದೇವತೆಗಳು ಅಸುರರಿಂದ ಕೊಲ್ಲಲ್ಪಡತೊಡಗಿ ದರು. ಆ ಸಮಯದಲ್ಲಿ ದೇವತೆಗಳ ಪ್ರಾರ್ಥನೆ ಪ್ರಕಾರ ಅತ್ರಿಮುನಿಯು ಚಂದ್ರನ ಸ್ವರೂಪವನ್ನು ಧರಿಸಿದನು ಮತ್ತು ಸೂರ್ಯನನ್ನು ತೇಜಸ್ವಿಯಾಗಿ ಮಾಡಿದನು (ಅನು 156/2–10). ಕುಂತಿಯು ವ್ಯಾಸರ ಮುಂದೆ, ತನ್ನ ಗರ್ಭದಿಂದ, ಸೂರ್ಯ ದೇವತೆಯ ಮೂಲಕ ಕರ್ಣನ ಜನ್ಮದ ಪ್ರಸಂಗ ವನ್ನು ಹೇಳಿದ್ದಳು (ಆಶ್ರಮ 30 ಅಧ್ಯಾಯ).

(2) ಒಬ್ಬ ವಿಖ್ಯಾತ ದಾನವ. ಇವನು ಕಶ್ಯಪ ನಿಂದ ಕದ್ರುವಿನಲ್ಲಿ ಹುಟ್ಟಿದ್ದನು (ಆದಿ 65/26). ಇವನು ರಾಜಾ ದರದನ ರೂಪದಲ್ಲಿ ಈ ಭೂಮಿಯ ಮೇಲೆ ಹುಟ್ಟಿದ್ದನು (ಆದಿ 67/58).

**ಸೂರ್ಯತೀರ್ಥ** – ಕುರುಕ್ಷೇತ್ರ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನ ಮತ್ತು ದೇವತೆ–ಪಿತೃಗಳ ಅರ್ಚನೆ ಮಾಡಿ, ಉಪವಾಸ ಮಾಡುವವ ಅಗ್ನಿಷ್ಟೋಮ ಯಜ್ಞದ ಫಲ ಪಡೆಯುತ್ತಾನೆ ಮತ್ತು ಸೂರ್ಯಲೋಕಕ್ಕೆ ಹೋಗುತ್ತಾನೆ (ವನ 83/48–49).

**ಸೂರ್ಯದತ್ತ** – ವಿರಾಟನ ಸಹೋದರ (ಉದ್ಯೋಗ 57/6). ಇವನ ಹೆಸರು ಶತಾನೀಕ ನೆಂದೂ ಇದ್ದಿತು (ವಿರಾಟ 31/11–12). ಇವನು ಗೋಹರಣದ ಸಮಯದಲ್ಲಿ ಕವಚಧಾರಣೆ ಮಾಡಿ ಯುದ್ಧಕ್ಕಾಗಿ ಹೋಗಿದ್ದನು (ವಿರಾಟ 31/15). ಇವನು ತ್ರಿಗರ್ತರ ಸೇನೆಯ ಮೇಲೆ ಮುಂದಿನಿಂದ ಆಕ್ರಮಣ ಮಾಡಿದ್ದನು ಮತ್ತು ನೂರು ತ್ರಿಗತರನ್ನು ಕೊಂದು, ಈತ ಅವರ ಸೇನೆಯೊಳಗೆ ನುಗ್ಗಿದ್ದನು (ವಿರಾಟ 32/19–21). ಇವನು ಉದಾರ ರಥಿಕನಾಗಿದ್ದನು (ಉದ್ಯೋಗ 171/15–16). ದ್ರೋಣನಿಂದ ಇವನು ಕೊಲ್ಲಲ್ಪಟ್ಟ ವರ್ಣನೆ (ಕರ್ಣ 6/34).

**ಸೂರ್ಯಧ್ವಜ** – ಒಬ್ಬ ರಾಜ. ಇವನು ದ್ರೌಪದೀ ಸ್ವಯಂವರದಲ್ಲಿ ಉಪಸ್ಥಿತನಾಗಿದ್ದನು (ಆದಿ 185/10).

**ಸೂರ್ಯನೇತ್ರ** – ಗರುಡನ ಪ್ರಮುಖ ಸಂತಾನ ಗಳ ಪರಂಪರೆಯಲ್ಲಿ ಹುಟ್ಟಿದ ಒಂದು ಪಕ್ಷಿ (ಉದ್ಯೋಗ 101/13).

**ಸೂರ್ಯಮಾಸ** – ಕೌರವ ಪಕ್ಷದ ಯೋಧ. ಇವನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು (ದ್ರೋಣ 48/15–16).

**ಸೂರ್ಯವರ್ಚಾ** – ಒಬ್ಬ ದೇವಗಂಧರ್ವ. ಇವನು ಕಶ್ಯಪನಿಂದ ಮುನಿಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 65/42). ಇವನು ಅರ್ಜು ನನ ಜನ್ಮೋತ್ಸವಕ್ಕೆ ಬಂದಿದ್ದನು (ಆದಿ 122/55).

**ಸೂರ್ಯವರ್ಮಾ** – ತ್ರಿಗರ್ತದೇಶದ ರಾಜ. ಅಶ್ವಮೇಧ ಕುದುರೆಯನ್ನು ಹಿಂಬಾಲಿಸುತ್ತಿದ್ದ ಅರ್ಜುನನೊಂದಿಗೆ ಯುದ್ಧಮಾಡಿ ಈತ ಪರಾ ಜಿತನಾಗಿದ್ದನು (ಆಶ್ವ 74/9–13). ಇವನ ಸಹೋ ದರನ ಹೆಸರು ಕೇತುವರ್ಮಾ. ಇವನು ಅರ್ಜುನ ನಿಂದ ವಧಿಸಲ್ಪಟ್ಟನು (ಆಶ್ವ 74/14–15).

**ಸೂರ್ಯಶ್ರೀ** – ಒಬ್ಬ ಸನಾತನ ವಿಶ್ವೇದೇವ (ಅನು 91/33).

**ಸೂರ್ಯಸಾವಿತ್ರ** – ಒಬ್ಬ ಸನಾತನ ವಿಶ್ವೇದೇವ (ಅನು 91/34).

**ಸೂರ್ಯಾಕ್ಷ** – ಒಬ್ಬ ರಾಜ. ಇವನು ಕ್ರಥನ ನೆಂಬ ಅಸುರನ ಅಂಶದಿಂದ ಹುಟ್ಟಿದ್ದನು (ಆದಿ 67/57).

**ಸೃಂಜಯ** – (1) ಒಬ್ಬ ಪ್ರಾಚೀನ ರಾಜ (ಆದಿ 1/225). ಇವನು ಯಮಸಭೆಯಲ್ಲಿದ್ದು ಸೂರ್ಯ ಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/15). ಈತ ಶೈಬ್ಯನ ಪುತ್ರ. ಪರ್ವತ, ನಾರದ ರೆಂಬ ಋಷಿಗಳಿಬ್ಬರೂ ಈತನ ಮಿತ್ರರಾಗಿದ್ದರು

(ದ್ರೋಣ 55/5). ಇವನು ನಾರದನಿಗೆ ತನ್ನ ಕನ್ಯೆಯನ್ನು ಕೊಡಲು ಒಪ್ಪಿದುದು (ದ್ರೋಣ 55/13). ಪುತ್ರಕಾಮನೆಯಿಂದ ಬ್ರಾಹ್ಮಣರ ಆರಾಧನೆ ಮಾಡಿದುದು (ದ್ರೋಣ 55/18–19). ನಾರದನಿಂದ ಪುತ್ರಪ್ರಾಪ್ತಿಯ ವರ ಬೇಡಿದುದು (ದ್ರೋಣ 55/22–23). ಇವನಿಗೆ ಸುವರ್ಣಷ್ಠೀವಿ ಎಂಬ ಪುತ್ರ ಪ್ರಾಪ್ತಿ (ದ್ರೋಣ 55/24). ಆತನನ್ನು ಕಳ್ಳರು ಕೊಂದಾಗ ಇವನು ಪುತ್ರಶೋಕದಿಂದ ವಿಲಪಿಸಿದುದು (ದ್ರೋಣ 55/33–34). ನಾರದನು ಇವನಿಗೆ ಷೋಡಶರಾಜರ ಉಪಾಖ್ಯಾನ ತಿಳಿಸಿ ಸಮಾಧಾನಪಡಿಸಿದುದು (ದ್ರೋಣ 55/36 ರಿಂದ ದ್ರೋಣ 71/3ರ ವರೆಗೆ). ನಾರದನು ಸಮಾಧಾನಪಡಿಸಿದ ಬಳಿಕ ಈತ ಶೋಕರಹಿತನಾದುದು (ದ್ರೋಣ 71/4–5). ನಾರದನ ಪ್ರಭಾವದಿಂದ ಇವನ ಮಗ ಜೀವಂತನಾಗಿ ಪ್ರತ್ಯಕ್ಷನಾದುದು (ದ್ರೋಣ 71/8). ಭಗವಾನ್ ಶ್ರೀಕೃಷ್ಣನು ಯುಧಿಷ್ಠಿರನಿಗೆ ಸಮಾಧಾನಕೊಡಲು ನಾರದ ಸೃಂಜಯ ಸಂವಾದವನ್ನು ಪ್ರಸ್ತುತಪಡಿಸಿ ಷೋಡಶ ರಾಜರ ಉಪಾಖ್ಯಾನವನ್ನು ಹೇಳಿದುದು (ಶಾಂತಿ 29 ಅಧ್ಯಾಯ). ಸೃಂಜಯನು ಪುತ್ರಪ್ರಾಪ್ತಿಗಾಗಿ ಪರ್ವತ ಮುನಿಯೊಡನೆ ವರಬೇಡಿದುದು (ಶಾಂತಿ 31/15). ಇವನಿಗೆ ಸುವರ್ಣಷ್ಠೀವಿ ಎಂಬ ಪುತ್ರನ ಪ್ರಾಪ್ತಿ (ಶಾಂತಿ 31/23). ಪುತ್ರನ ಮೃತ್ಯುವಿಗಾಗಿ ಇವನ ವಿಲಾಪ (ಶಾಂತಿ 31/37). ನಾರದನ ಕೃಪೆಯಿಂದ ಇವನ ಪುತ್ರ ಪುನಃ ಜೀವಂತನಾದುದು (ಶಾಂತಿ 31/42). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/63).

(2) ಒಂದು ದಕ್ಷಿಣ ಭಾರತೀಯ ಜನಪದ (ಭೀಷ್ಮ 9/63).

**ಸೃಷ್ಟಿ** – ಒಬ್ಬಳು ದೇವಿ. ಇವಳು ಬ್ರಹ್ಮನ ಸಭೆಯಲ್ಲಿದ್ದುಕೊಂಡು ಆತನ ಉಪಾಸನೆ ಮಾಡುತ್ತಾಳೆ (ಸಭಾ 11/47).

**ಸೇಕ** – ಒಂದು ದೇಶ. ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ಇದನ್ನು ಗೆದ್ದಿದ್ದನು (ಸಭಾ 31/9).

**ಸೇದುಕ** – ಒಬ್ಬ ಪ್ರಾಚೀನ ರಾಜ. ಇವನು ನೀತಿ ಮಾರ್ಗದಲ್ಲಿ ನಡೆಯುವವನು. ಅಸ್ತ್ರ ಮತ್ತು ಉಪಾಸ್ತ್ರಗಳ ವಿದ್ಯೆಯಲ್ಲಿ ನಿಪುಣನಾಗಿದ್ದನು (ವನ 196/2). ಇವನು ತನ್ನ ಬಳಿಗೆ ಬಂದ ಗುರುದಕ್ಷಿಣಾ ಯಾಚಕರಾದ ಬ್ರಾಹ್ಮಣರನ್ನು ರಾಜಾ ವೃಷದರ್ಭನ ಬಳಿಗೆ ಕಳುಹಿಸಿದ್ದನು (ವನ 196/4–6).

**ಸೇನಜಿತ್** – (1) ಒಬ್ಬ ರಾಜ. ಇವನಿಗೆ ಪಾಂಡವರ ಕಡೆಯಿಂದ ಯುದ್ಧಕ್ಕೆ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/13).

(2) ಒಬ್ಬ ಪ್ರಾಚೀನ ರಾಜ. ವ್ಯಾಸರಿಂದ ಇವನ ಶೋಕಪೂರ್ಣ ಉದ್ಗಾರಗಳ ವರ್ಣನೆ (ಶಾಂತಿ 25/14–28). ಪುತ್ರಶೋಕದಿಂದ ದುಃಖಿತನಾದ ಸೇನಜಿತನು ಒಬ್ಬ ಬ್ರಾಹ್ಮಣನೊಂದಿಗೆ ಸಂವಾದ ಮಾಡಿದುದು (ಶಾಂತಿ 174 ಅಧ್ಯಾಯ).

**ಸೇನಾ** – ಐದು ನೂರು ಆನೆಗಳೂ, ಐದು ನೂರು ರಥಗಳೂ ಸೇರಿದಾಗ ಒಂದು ಸೇನೆ (ಉದ್ಯೋಗ 155). ಹತ್ತು ಸೇನೆಗಳಿಗೆ ಒಂದು ಪೃತನಾ. ಹತ್ತು ಪೃತನೆಗಳಿಗೆ ಒಂದು ವಾಹಿನಿ ಎಂದು ಕರೆಯುತ್ತಾರೆ. ಸೇನಾ, ವಾಹಿನಿ, ಪೃತನಾ, ಧ್ವಜಿನೀ, ಚಮೂ, ಅಕ್ಷೌಹಿಣೀ, ವರೂಥಿನೀ – ಇವುಗಳೆಲ್ಲ ಸೇನೆಯ ಪರ್ಯಾಯ ಪದಗಳು. ಸೇನೆಯ ಒಂದೊಂದು ಭಾಗಕ್ಕೆ ಒಂದೊಂದು ಹೆಸರು. ಆದರೆ ಕೋಷ್ಟಕಪ್ರಕಾರ ಸೇನಾಮುಖವೆಂಬ ವಿಭಾಗವಿದೆ. ಸೇನಾ ಎಂಬುದಿಲ್ಲ (ಭಾ.ಪ್ರ.).

**ಸೇನಾನಿ (ಸೇನಾಪತಿ)** – ಧೃತರಾಷ್ಟ್ರನ ಒಬ್ಬ ಮಗ (ನೋಡಿರಿ– ಸೇನಾಪತಿ).

**ಸೇನಾಪತಿ** – (ಸೇನಾನಿ). ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬ (ಆದಿ 67/97; ಆದಿ 116/9). ಭೀಮಸೇನನಿಂದ ಇವನ ವಧೆ (ಭೀಷ್ಮ 64/32).

**ಸೇನಾಮುಖ** – ಸೇನಾವಿಶೇಷ. ಪತ್ತಿಯ ಮೂರರಷ್ಟು ಸಂಖ್ಯೆಯನ್ನು ಸೇನಾಮುಖವೆನ್ನುತ್ತಾರೆ (ಆದಿ 2/20).

**ಸೇನಾವಿಂದು** – (1) ಒಬ್ಬ ಕ್ಷತ್ರಿಯ ರಾಜ. ಇವನು 'ತುಹುಂಡ'ನೆಂಬ ದೈತ್ಯನ ಅಂಶದಿಂದ ಹುಟ್ಟಿದ್ದನು (ಆದಿ 67/19–20). ಇವನು ದ್ರೌಪದೀ ಸ್ವಯಂವರಕ್ಕೆ ಹೋಗಿದ್ದನು (ಆದಿ 185/9). ಅರ್ಜುನನು ಉತ್ತರ ದಿಗ್ವಿಜಯ

ಕಾಲದಲ್ಲಿ ಉಲೂಕ ರಾಜನೊಂದಿಗೆ, ಇವನ ಮೇಲೆ ಆಕ್ರಮಣಮಾಡಿ, ಈತನನ್ನು ರಾಜ್ಯಚ್ಯುತನಾಗಿ ಮಾಡಿದ್ದನು (ಸಭಾ 27/10). ಪಾಂಡವರ ಪಕ್ಷದಿಂದ ಇವನಿಗೆ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯಮಾಡಲ್ಪಟ್ಟಿತ್ತು (ಉದ್ಯೋಗ 4/13). ಇವನ ಇನ್ನೊಂದು ಹೆಸರು ಕ್ರೋಧಾಹಂತಾ ಎಂದಾಗಿತ್ತು. ಇವನು ಶ್ರೀಕೃಷ್ಣ ಮತ್ತು ಭೀಮಸೇನನಿಗೆ ಸಮಾನ ಪರಾಕ್ರಮಿಯೆಂದು ತಿಳಿಯಲ್ಪಡುತ್ತಿದ್ದನು (ಉದ್ಯೋಗ 171/20-21). ಇವನ ರಥದ ಕುದುರೆಗಳ ವರ್ಣನೆ (ದ್ರೋಣ 23/25-26). ಇವನ ಮರಣದ ವಿವರಣೆ (ಕರ್ಣ 6/32).

(2) ಪಾಂಡವಪಕ್ಷದ ಒಬ್ಬ ಪಾಂಚಾಲಯೋಧ. ಕರ್ಣನಿಂದ ಇವನ ವಧೆ (ಕರ್ಣ 48/15).

**ಸೇನೋದ್ಯೋಗಪರ್ವ** - ಉದ್ಯೋಗ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 1 ರಿಂದ 19ರ ವರೆಗೆ).

**ಸೆಯನ** - ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/58).

**ಸೈಂಧವ** - (1) ಸಿಂಧು ದೇಶದ ನಿವಾಸಿ ಅಥವಾ ಒಡೆಯ (ವನ 51/25).

(2) ಸಿಂಧೂ ದೇಶದ ಕುದುರೆ. ಕುತ್ತಿಗೆ ನೀಳವಾಗಿದ್ದು, ಅವುಗಳ ಶಿಶ್ನಗಳು ಮುಖಕ್ಕೆ ತಾಗುವಷ್ಟು ಉದ್ದವಾಗಿವೆ. ಅವುಗಳ ಕಣ್ಣುಗಳು ವಿಶಾಲವಾಗಿದ್ದು, ಕೂದಲುಗಳು ಸೂಕ್ಷ್ಮವಾಗಿವೆ. ಅವುಗಳು ಬಲಿಷ್ಠವಾಗಿವೆ (ದ್ರೋಣ 23).

**ಸೈಂಧವಾಯನ** - ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/51).

**ಸೈಂಧವಾರಣ್ಯ** - ಒಂದು ಪ್ರಾಚೀನ ತೀರ್ಥ (ವನ 89/15).

**ಸೈನ್ಯನಿರ್ಯಾಣಪರ್ವ** - ಉದ್ಯೋಗ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 151 ರಿಂದ 159ರ ವರೆಗೆ).

**ಸೈರಂಧ್ರೀ** - ವಿರಾಟ ನಗರದಲ್ಲಿ ಅಜ್ಞಾತವಾಸ ಕಾಲದಲ್ಲಿ ದ್ರೌಪದಿಯ ಗುಪ್ತಹೆಸರು ಮತ್ತು ಸೈರಂಧ್ರಿಯ ಕಾರ್ಯ ಹಾಗೂ ಸ್ವರೂಪದ ವರ್ಣನೆ (ವಿರಾಟ 3/18-19) (ವಿಶೇಷ ನೋಡಿರಿ- ದ್ರೌಪದಿ).

**ಸೈಸಿರಿಂಧ್ರ** - ಒಂದು ಭಾರತೀಯ ಜನಪದ (ಭೀಷ್ಮ 9/57).

**ಸೋದರ್ಯವಾನ್** - ಧ್ವಜಪತಾಕೆಗಳಿಂದ ಕೂಡಿದ, ಜರಾಸಂಧನ ದಿವ್ಯರಥ ಇವನು ವಧಿಸಲ್ಪಟ್ಟ ಬಳಿಕ, ಇದನ್ನು ಇಂದ್ರನು ತನ್ನ ಅಧಿಕಾರಕ್ಕೆ ತೆಗೆದುಕೊಂಡನು. ಅದರಲ್ಲಿ ಇಬ್ಬರು ಮಹಾರಥಿ ಯೋಧರು ಒಟ್ಟಾಗಿ ಕುಳಿತು ಯುದ್ಧಮಾಡಲು ಸಾಧ್ಯವಾಗುತ್ತಿತ್ತು. ಇದರಲ್ಲಿ ಮತ್ತೆ ಮತ್ತೆ ಶತ್ರುಗಳ ಮೇಲೆ ಆಘಾತಮಾಡುವ ಸೌಕರ್ಯವಿತ್ತು. ಇದು ದರ್ಶನೀಯವೂ ದುರ್ಜಯವೂ ಆಗಿತ್ತು. ಇದೇ ರಥದ ಮೇಲೆ ಆರೂಢನಾಗಿ ಹಿಂದೆ ಇಂದ್ರನು ತೊಂಭತ್ತೊಂಭತ್ತು ದಾನವರ ವಧೆ ಮಾಡಿದ್ದನು. ಇದರ ಧ್ವಜ ಇತ್ಯಾದಿಗಳ ವಿಶೇಷತೆಯ ವರ್ಣನೆ (ಸಭಾ 24/12-22). ಈ ರಥವು ಇಂದ್ರನಿಂದ ಉಪರಿಚರವಸುವಿಗೂ, ವಸುವಿನಿಂದ ರಾಜಾ ಬೃಹದ್ರಥನಿಗೂ, ಬ್ರಹದ್ರಥನಿಂದ ಜರಾಸಂಧನಿಗೂ ಪ್ರಾಪ್ತವಾಗಿತ್ತು (ಸಭಾ 24/48).

**ಸೋಮ** - (1) ಚಂದ್ರ. ಇವನಿಗೆ ಇಪ್ಪತ್ತೇಳು ಪತ್ನಿಯರಿದ್ದರು (ಆದಿ 66/16). ಸಪ್ತರ್ಷಿಗಳಿಂದ ಪೃಥ್ವೀದೋಹನ ಕಾಲದಲ್ಲಿ ಈತ ಕರುವಾಗಿದ್ದನು (ದ್ರೋಣ 69/23) (ವಿಶೇಷ ನೋಡಿರಿ - ಚಂದ್ರ).

(2) ಭಾನುವೆಂಬ ಅಗ್ನಿಯ ಮೂರನೇ ಪತ್ನಿ ನಿಶಾ ಎಂಬವಳ ಗರ್ಭದಿಂದ ಹುಟ್ಟಿದ ಇಬ್ಬರು ಪುತ್ರರಲ್ಲಿ ಒಬ್ಬ. ಇವನ ಇನ್ನೊಬ್ಬ ಸಹೋದರನ ಹೆಸರು ಅಗ್ನಿ ಎಂದಾಗಿದೆ. ಇವನ ಸಹೋದರಿಯ ಹೆಸರು ರೋಹಿಣೀ. ಇವನಿಗೆ ವೈಶ್ವಾನರನೇ ಮೊದಲಾದ ಇತರ ಐದು ಸಹೋದರರಿದ್ದಾರೆ (ವನ 221/15).

**ಸೋಮಕ** - (1) ಸೋಮಕ ವಂಶದ ಕ್ಷತ್ರಿಯರ ಸಮುದಾಯ (ಆದಿ 122/40).

(2) ಒಬ್ಬ ಪ್ರಾಚೀನ ರಾಜ. ಇವನು ಯಮ ಸಭೆಯಲ್ಲಿರುತ್ತಾ ಸೂರ್ಯಪುತ್ರ ಯಮನ ಉಪಾಸನೆ ಮಾಡುತ್ತಾನೆ (ಸಭಾ 8/8). ಇವನು ಪಾಂಚಾಲ ದೇಶದ ಪ್ರಸಿದ್ಧ ದಾನಿಯಾದ ರಾಜನಾಗಿದ್ದನು. ಇವನ ತಂದೆಯ ಹೆಸರು ಸಹದೇವನೆಂದಾಗಿತ್ತು (ವನ 125/26). ನೂರು ಪುತ್ರರ ಪ್ರಾಪ್ತಿಗಾಗಿ, ತನ್ನ ಏಕಮಾತ್ರ ಪುತ್ರನನ್ನು ಬಲಿಕೊಟ್ಟು, ಇವನಿಂದ ಯಜ್ಞದ ಪೂರೈಕೆ

ಮತ್ತು ಪುತ್ರರ ಪ್ರಾಪ್ತಿ (ವನ 128/2–7). ಇವನು ತನ್ನ ಪುರೋಹಿತನ ಜೊತೆಯಲ್ಲಿಯೇ ಸಮಾನರೂಪದಿಂದ ನರಕ ಮತ್ತು ಪುಣ್ಯ ಲೋಕಗಳ ಭೋಗಗಳನ್ನು ಭೋಗಿಸಿ ಬಿಡುಗಡೆ ಹೊಂದಿದುದು (ವನ 128/11–18). ಇವನು ಗೋದಾನಮಾಡಿ ಸ್ವರ್ಗ ಪಡೆದಿದ್ದನು (ಅನು 76/25–27). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/63).

**ಸೋಮಕೀರ್ತಿ** – ಧೃತರಾಷ್ಟ್ರನ ನೂರು ಪುತ್ರರಲ್ಲಿ ಒಬ್ಬ (ಆದಿ 67/99; ಆದಿ 116/8).

**ಸೋಮಗಿರಿ** – ಒಂದು ಪರ್ವತ. ಇದು ಸಾಯಂಪ್ರಾತಃಕಾಲ ಸ್ಮರಣೆಮಾಡಲು ಯೋಗ್ಯ ವಾಗಿದೆ (ಅನು 165/33).

**ಸೋಮತೀರ್ಥ** – ಕುರುಕ್ಷೇತ್ರದೊಳಗಿರುವ ಒಂದು ಪ್ರಾಚೀನ ತೀರ್ಥ. ಇದು ಜಯಂತಿ ಯಲ್ಲಿದೆ. ಇಲ್ಲಿ ಸ್ನಾನಮಾಡಿದರೆ ಮನುಷ್ಯನಿಗೆ ರಾಜಸೂಯಯಜ್ಞದ ಫಲ ಪ್ರಾಪ್ತವಾಗುತ್ತದೆ (ವನ 83/19).

(2) ಕುರುಕ್ಷೇತ್ರದ ಎಲ್ಲೆಯೊಳಗಿರುವ ಒಂದು ಪ್ರಾಚೀನ ತೀರ್ಥ. ಇದರಲ್ಲಿ ಸ್ನಾನಮಾಡುವುದರಿಂದ ಸೋಮಲೋಕದ ಪ್ರಾಪ್ತಿಯಾಗುತ್ತದೆ (ವನ 83/114–115, 185).

**ಸೋಮದತ್ತ** – ಕುರುವಂಶದ ಮಹಾರಾಜ ಪ್ರತೀಪನ ಮೊಮ್ಮಗ, ಹಾಗೂ ಬಾಹ್ಲೀಕನ ಪುತ್ರ. ಇವನಿಗೆ ಭೂರಿ, ಭೂರಿಶ್ರವಾ ಮತ್ತು ಶಲನೆಂಬ ಹೆಸರಿನ ಮೂವರು ಪುತ್ರರಿದ್ದರು. ಇವನು ತನ್ನ ಮೂವರೂ ಪುತ್ರರೊಡನೆ ದ್ರೌಪದಿಯ ವಿವಾಹಕ್ಕೆ ಬಂದಿದ್ದನು (ಆದಿ 185/14–15). ಯುಧಿಷ್ಠಿರನ ರಾಜಸೂಯಯಜ್ಞಕ್ಕೂ ಇವನ ಶುಭಾಗಮನ ವಾಗಿತ್ತು (ಸಭಾ 34/8). ದೇವಕಿಯ ಸ್ವಯಂವರ ಕಾಲದಲ್ಲಿ ಶಿನಿಯೊಂದಿಗೆ ಇವನ ಬಾಹು ಯುದ್ಧ ಮತ್ತು ಶಿನಿಯು ಇವನನ್ನು ನೆಲಕ್ಕೆ ಕುಕ್ಕಿ ಕಾಲಿನಿಂದ ಒದೆದುದು, ಮತ್ತು ಇವನ ಜುಟ್ಟು ಹಿಡಿದುದು (ದ್ರೋಣ 144/11–13). ಶಿನಿಯು ಬಿಟ್ಟ ಬಳಿಕ ಇವನ ತಪಸ್ಸು ಮತ್ತು ಮುಯ್ಯಿ ತೀರಿಸಲು ವರ ಮತ್ತು ಪುತ್ರ ಪ್ರಾಪ್ತಿ (ದ್ರೋಣ 144/15–19). ಸಾತ್ಯಕಿಯೊಂದಿಗೆ ಯುದ್ಧದಲ್ಲಿ ಈತ ಪರಾಜಿತನಾದುದು (ದ್ರೋಣ 156/21–29). ಸಾತ್ಯಕಿ ಮತ್ತು ಭೀಮಸೇನನ ಪ್ರಹಾರ ದಿಂದ ಮೂರ್ಛಿತನಾದುದು (ದ್ರೋಣ 157/10–11). ಸಾತ್ಯಕಿಯಿಂದ ಇವನ ವಧೆ (ದ್ರೋಣ 162/33). ಇವನ ಶರೀರದ ದಹನ ಸಂಸ್ಕಾರ (ಸ್ತ್ರೀ 26/33). ಧೃತರಾಷ್ಟ್ರನಿಂದ ಇವನ ಶ್ರಾದ್ಧ (ಆಶ್ರಮ 11/17). ವ್ಯಾಸರು ಆವಾಹನೆ ಮಾಡಿ ದಾಗ ಕುರುಕ್ಷೇತ್ರದಲ್ಲಿ ಸತ್ತ ಕೌರವವೀರರೊಂದಿಗೆ ಇವನೂ ಗಂಗಾಜಲದಿಂದ ಪ್ರಕಟಗೊಂಡನು (ಆಶ್ರಮ 32/12). ಮಹಾಭಾರತದಲ್ಲಿ ಬಂದಿರುವ ಸೋಮದತ್ತನ ಹೆಸರುಗಳು– ಬಾಹ್ಲೀಕ, ಬಾಹ್ಲೀ ಕಾತ್ಮಜ, ಕೌರವ, ಕೌರವೇಯ, ಕೌರವ್ಯ, ಕುರುಪುಂಗವ ಇತ್ಯಾದಿ.

**ಸೋಮಧೇಯ** – ಪೂರ್ವಭಾರತದ ಒಂದು ಜನಪದ. ಇಲ್ಲಿರುವ ನಿವಾಸಿಗಳನ್ನು ಭೀಮ ಸೇನನು ಪರಾಜಯಗೊಳಿಸಿದ್ದನು (ಸಭಾ 30/10).

**ಸೋಮಪ** – (1) ಸ್ಕಂದನ ಒಬ್ಬ ಸೈನಿಕ (ಶಲ್ಯ 45/70).

(2) ಒಬ್ಬ ಸನಾತನ ವಿಶ್ವೇದೇವ (ಅನು 91/34).

**ಸೋಮಪದ** – ಒಂದು ತೀರ್ಥ. ಇಲ್ಲಿ ಮಾಹೇಶ್ವರ ಪದದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧ ಯಜ್ಞದ ಫಲಸಿಗುತ್ತದೆ (ವನ 84/119).

**ಸೋಮಪಾ** – ಏಳು ಪಿತೃಗಳಲ್ಲಿ ಒಬ್ಬ. ನಾಲ್ಕು ಮಂದಿ ಮೂರ್ತ ಪಿತೃಗಳಲ್ಲಿ ಇವನನ್ನು ಪರಿಗಣಿಸುತ್ತಾರೆ. ಇವನು ತೃಪ್ತನಾದರೆ ಸೋಮ ದೇವತೆಗೆ ತೃಪ್ತಿಯಾಗುತ್ತದೆ (ಸಭಾ 11/47–48). ಈ ಎಲ್ಲಾ ಪಿತೃಗಳು ಬ್ರಹ್ಮನ ಸಭೆಯಲ್ಲಿ ಉಪ ಸ್ಥಿತರಾಗಿ, ಸಂತೋಷದಿಂದ ಆತನ ಉಪಾಸನೆ ಮಾಡುತ್ತಾರೆ (ಸಭಾ 11/49).

**ಸೋಮವರ್ಚಾ** – (1) ಒಬ್ಬ ಸನಾತನ ವಿಶ್ವೇ ದೇವ (ಅನು 91/33).

(2) ಒಬ್ಬ ಸನಾತನ ವಿಶ್ವೇದೇವ (ಅನು 91/36).

**ಸೋಮಶ್ರವ** – ಒಬ್ಬ ತಪಸ್ಯಾಪರಾಯಣ ಋಷಿ. ಇವನು ಶ್ರುತಶ್ರವಾನ ಪುತ್ರ. ಇವನನ್ನು ಪುರೋ ಹಿತನಾಗಿ ಮಾಡಲು, ಇವನ ತಂದೆಯೊಂದಿಗೆ ಜನಮೇಜಯನ ಪ್ರಾರ್ಥನೆ (ಆದಿ 3/13–15). ಇವನು ಸರ್ಪಿಣಿಯ ಗರ್ಭದಿಂದ ಹುಟ್ಟಿದವನು,

ತಪಸ್ವೀ ಮತ್ತು ಸ್ವಾಧ್ಯಾಯ ಶೀಲನಾಗಿದ್ದನು. ಬ್ರಾಹ್ಮಣನಿಗೆ ಅಭೀಷ್ಟವಸ್ತು ಕೊಡುವೆನೆಂದು ಇವನ ಗುಟ್ಟಾದ ನಿಯಮವಿತ್ತು. ಜನಮೇಜಯನು ಇವನ ನಿಯಮವನ್ನು ಸ್ವೀಕಾರಮಾಡಿ, ಈತನನ್ನು ತನ್ನ ಜೊತೆ ಕರಕೊಂಡು ಹೋದನು (ಆದಿ 3/16–20).

**ಸೋಮಾ** – ಒಬ್ಬ ಅಪ್ಸರೆ. ಇವಳು ಅರ್ಜುನನ ಜನ್ಮೋತ್ಸವಕ್ಕೆ ಬಂದು ನೃತ್ಯಮಾಡಿದ್ದಳು (ಆದಿ 122/61).

**ಸೋಮಾಶ್ರಮ** – ಒಂದು ತೀರ್ಥ. ಅಲ್ಲಿ ಯಾತ್ರೆ ಮಾಡಿದ ಮನುಷ್ಯ ಈ ಭೂಮಿಯಲ್ಲಿ ಪೂಜಿಸಲ್ಪಡುತ್ತಾನೆ (ವನ 84/157).

**ಸೋಮಾಶ್ರಯಾಯಣ** – ಗಂಗಾ ತಟದ ಒಂದು ಪ್ರಾಚೀನ ತೀರ್ಥ. ಏಕಚಕ್ರದಿಂದ ಪಾಂಚಾಲಕ್ಕೆ ಹೋಗುತ್ತಿದ್ದಾಗ ಇಲ್ಲಿಗೆ ಪಾಂಡವರ ಆಗಮನ ವಾಯಿತು. ಇಲ್ಲಿ ಸ್ತ್ರೀಯರೊಂದಿಗೆ ಚಿತ್ರರಥ (ಗಂಧರ್ವ) ಜಲಕ್ರೀಡೆಮಾಡುತ್ತಿದ್ದನು. ಇವನು ಅರ್ಜುನನಿಂದ ಪರಾಜಿತನಾಗಿದ್ದನು (ಆದಿ 169/3–33).

**ಸೌಗಂಧಿಕ** – ಕುಬೇರನ ಒಂದು ಕಾಡು. ಇದರ ಸುಗಂಧದ ಭಾರವನ್ನು ತೆಗೆದುಕೊಂಡು ವಾಯು ಕುಬೇರ ಸಭೆಯಲ್ಲಿ ಧನಾಧ್ಯಕ್ಷನ ಸೇವೆ ಮಾಡು ತ್ತಾನೆ (ಸಭಾ 10/7).

**ಸೌಗಂಧಿಕವನ** – ಒಂದು ತೀರ್ಥ ಮೂಲವಾದ ಕಾಡು. ಇಲ್ಲಿ ಬ್ರಹ್ಮಾದಿ ದೇವತೆಗಳು, ತಪೋ ಧನರಾದ ಋಷಿಗಳು, ಸಿದ್ಧ, ಚಾರಣ, ಗಂಧರ್ವ, ಕಿನ್ನರ ಮತ್ತು ದೊಡ್ಡ ದೊಡ್ಡ ನಾಗಗಳು ವಾಸಮಾಡುತ್ತವೆ. ಇಲ್ಲಿಗೆ ಪ್ರವೇಶ ಮಾಡುತ್ತಲೇ ಮಾನವನು ಎಲ್ಲ ಪಾಪಗಳಿಂದಲೂ ಮುಕ್ತನಾಗು ತ್ತಾನೆ (ವನ 84/4–6).

**ಸೌತಿ** – ರೋಮಹರ್ಷಣನ ಪುತ್ರ ಉಗ್ರಶ್ರವಾ. ಇವನು ನೈಮಿಷಾರಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ಮಹಾಭಾರತ ಶ್ರವಣಮಾಡಿಸಿದನು (ಆದಿ 1/5).

**ಸೌದಾಸ** – ಇಕ್ಷ್ವಾಕುವಂಶದ ಒಬ್ಬ ರಾಜ (ನೋಡಿರಿ– ಕಲ್ಮಾಷಪಾದ).

**ಸೌಪ್ತಿಕ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಸೌಭ** – ರಾಜಾಶಾಲ್ವನ ಆಕಾಶಚಾರೀ ವಿಮಾನ. ಇದನ್ನು ಸೌಭನಗರವೆಂದೂ ಹೇಳಲಾಗುತ್ತಿತ್ತು. ಶ್ರೀಕೃಷ್ಣನು ಚಕ್ರದಿಂದ ಇದನ್ನು ಧ್ವಂಸ ಮಾಡಿದ್ದನು (ವನ 22/33–34).

**ಸೌಭದ್ರ** – ದಕ್ಷಿಣ ಸಮುದ್ರದ ಬಳಿಯಿರುವ ಒಂದು ತೀರ್ಥ. ಐದು ನಾರೀತೀರ್ಥಗಳಲ್ಲಿ ಒಂದು (ಆದಿ 215/1–3). ತೀರ್ಥಯಾತ್ರೆಗಾಗಿ ಇಲ್ಲಿಗೆ ಅರ್ಜುನನ ಆಗಮನ. ಶಾಪವಶದಿಂದ ಮೊಸಳೆಯಾಗಿದ್ದ ವರ್ಗಾ (ಅಪ್ಸರೆ) ಎಂಬವಳು ಅವನಿಂದ ಉದ್ಧಾರವಾದುದು (ಆದಿ 215/8–14). ಯುಧಿಷ್ಠಿರನು ಇಲ್ಲಿಗೆ ಬಂದುದು ಮತ್ತು ಅರ್ಜುನನ ಪರಾಕ್ರಮವನ್ನು ಕೇಳಿ ಆನಂದ ಹೊಂದಿದುದು (ವನ 118/4–7).

**ಸೌಭಪತಿ** – ಶಾಲ್ವರಾಜ (ಆದಿ 102/61) (ನೋಡಿರಿ – ಶಾಲ್ವ).

**ಸೌಭರ** – ಪಾಂಚಜನ್ಯರೆಂಬ ಪಿತೃಗಳಿಗಾಗಿ ಹುಟ್ಟಿಸಲ್ಪಟ್ಟ ಐವರು ಪುತ್ರರಲ್ಲಿ ಒಬ್ಬ. ಇವನ ಜನ್ಮ ವರ್ಚಾನ ಅಂಶದಿಂದಾಗಿತ್ತು (ವನ 220/6–9).

**ಸೌಮದತ್ತಿ** – ಸೋಮದತ್ತನ ಪುತ್ರ ಭೂರಿಶ್ರವಾ (ವಿಶೇಷ ನೋಡಿರಿ – ಭೂರಿಶ್ರವಾ).

**ಸೌಮ್ಯಾಕ್ಷದ್ವೀಪ** – ಒಂದು ದ್ವೀಪದ ಹೆಸರು (ಸಭಾ 38/29).

**ಸೌರಭೇಯೀ** – ಒಬ್ಬ ಅಪ್ಸರೆ. ಇವಳು ವರ್ಗಾ ಎಂಬವಳ ಸಖಿ (ಆದಿ 215/20). ಇವಳು ಬ್ರಾಹ್ಮಣ ಶಾಪದಿಂದ 'ಮೊಸಳೆ'ಯಾಗಿದ್ದಳು (ಆದಿ 215/23). ಅರ್ಜುನನ ಮೂಲಕ ಈಕೆ ಮೊಸಳೆಯ ಜನ್ಮದಿಂದ ಉದ್ಧಾರವಾದಳು (ಆದಿ 216/21). ಇವಳು ಕುಬೇರನ ಸಭೆಯಲ್ಲಿ ಅವನ ಸೇವೆಗಾಗಿ ಉಪಸ್ಥಿತಳಾಗಿರುತ್ತಾಳೆ (ಸಭಾ 10/11).

**ಸೌವೀರ** – ಸಿಂಧು ಅಥವಾ ಅದಕ್ಕೆ ತಾಗಿಕೊಂಡಿರುವ ದೇಶ. ಅಲ್ಲಿದ್ದ ರಾಜ ವಿಪುಲ ಅರ್ಜುನನಿಂದ ಕೊಲ್ಲಲ್ಪಟ್ಟಿದ್ದನು (ಆದಿ 138/20–22).

**ಸೌವೀರೀ** – ರಾಜಾ ಪೂರುವಿನ ಮೊಮ್ಮಗ ಮತ್ತು ಪ್ರವೀರನ ಮಗನಾದ ಮನಸ್ಯುವಿನ ಪತ್ನಿ (ಆದಿ 94/5–7).

**ಸೌಶಲ್ಯ** – ಒಂದು ಭಾರತೀಯ ಜನಪದ (ಭೀಷ್ಮ 9/40).

**ಸೌಶ್ರುತಿ** – ತ್ರಿಗರ್ತರಾಜ ಸುಶರ್ಮಾನ ಸಹೋದರ. ಅರ್ಜುನನೊಂದಿಗೆ ಇವನ ಯುದ್ಧ ಮತ್ತು ಅವನಿಂದ ಈತನ ಮರಣ (ಕರ್ಣ 27/3–22).

**ಸೌಹೃದ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/59).

**ಸ್ಕಂದ** – ದೇವ ಸೇನಾಪತಿ ಕುಮಾರ ಕಾರ್ತಿಕೇಯ. ಇವನು ಖಾಂಡವ ವನದ ಯುದ್ಧದಲ್ಲಿ ಶಕ್ತಿಯನ್ನು ಧರಿಸಿ, ಶ್ರೀಕೃಷ್ಣ ಮತ್ತು ಅರ್ಜುನನೊಂದಿಗೆ ಯುದ್ಧ ಮಾಡಲು ಬಂದಿದ್ದನು (ಆದಿ 226/33). ಇವನು ಪ್ರಕಟನಾದುದು ಮತ್ತು ಸ್ಕಂದನೆಂದು ಹೆಸರು ಬರಲು ಕಾರಣ (ವನ 225/16–18). ಇವನು ಕ್ರೌಂಚ ಪರ್ವತವನ್ನು ವಿದೀರ್ಣಗೊಳಿಸಿದುದು (ವನ 225/33). ಇವನು ಮಾತೃಕೆಯರನ್ನು ತಾಯಿಯೆಂದು ಸ್ವೀಕರಿಸಿದುದು (ವನ 226/24). ಇವನ ಶರೀರದಿಂದ ವಿಶಾಖನ ಉತ್ಪತ್ತಿ (ವನ 227/16–17). ಪರಾಜಿತರಾದ ದೇವತೆಗಳ ಸಹಿತನಾದ ಇಂದ್ರನಿಗೆ ಇವನು ಅಭಯದಾನ ಮಾಡಿದುದು (ವನ 227/18). ಇವನ ಪಾರ್ಷದರ ವರ್ಣನೆ (ವನ 228 ಅಧ್ಯಾಯ). ಇಂದ್ರನೊಂದಿಗೆ ಇವನ ಮಾತುಕತೆ; ಇಂದ್ರನಿಂದ ದೇವ ಸೇನಾಪತಿ ಪದವಿಯಲ್ಲಿ ಅಭಿಷೇಕ; ದೇವಸೇನೆಯೊಂದಿಗೆ ಇವನ ವಿವಾಹ (ವನ 229 ಅಧ್ಯಾಯ). ಕೃತ್ತಿಕೆಯರನ್ನು ಮಾತೆಯರಾಗಿ ಸ್ವೀಕರಿಸಿದುದು (ವನ 230/6). ಮಾತೃಗಣಗಳನ್ನು ಮಾತೆಯಾಗಿ ಸ್ವೀಕರಿಸಿದುದು (ವನ 230/15). ಪೀಡಾಕಾರಕ ಗ್ರಹಗಳಾಗುವಂತೆ ತಾಯಂದಿರಿಗೆ ಆದೇಶ (ವನ 230/22). ಇವನಿಂದ ಸ್ವಾಹಾದೇವಿಗೆ ಸತ್ಕಾರ (ವನ 231 /5–6). ರುದ್ರದೇವನೊಂದಿಗೆ ಈತನ ಭದ್ರವಟ ಯಾತ್ರೆ (ವನ 231/54). ಸ್ಕಂದನ ರಕ್ಷಣೆಯ ಭಾರವನ್ನು ಮಾರುತನು ವಹಿಸಿದುದು (ವನ 231/56). ಇವನಿಂದ ಮಹಿಷಾಸುರನ ವಧೆ (ವನ 231/96). ಇವನ ಪ್ರಸಿದ್ಧ ಹೆಸರುಗಳ ವರ್ಣನೆ (ವನ 232/3–9). ಇವನ ಹುಟ್ಟಿನ ಕಥೆ (ಶಲ್ಯ 44 ಅಧ್ಯಾಯ). ಇವನ ಅಭಿಷೇಕ ಮತ್ತು ಇವನ ಮಹಾ ಪಾರ್ಷದರ ನಾಮ ರೂಪಾದಿಗಳ ವರ್ಣನೆ (ಶಲ್ಯ 45 ಅಧ್ಯಾಯ). ಇವನಿಂದ ತಾರಕಾಸುರ, ಮಹಿಷಾಸುರ, ತ್ರಿಪಾದ ಮತ್ತು ಹ್ರದೋದರನ ವಧೆ (ಶಲ್ಯ 46/73–75). ಇವನಿಂದ ಬಾಣಾಸುರನ ಪರಾಜಯ ಮತ್ತು ಕ್ರೌಂಚಪರ್ವತದ ಭೇದನ (ಶಲ್ಯ 46/83–84). ಇವನಿಂದ ತಾರಕನ ಮಗ ಮತ್ತು ತಮ್ಮನ ವಧೆ (ಶಲ್ಯ 46/90–91). ಭಗವಾನ್ ಶಂಕರನು ಇವನನ್ನು ಭೂತಗಳ ಶ್ರೇಷ್ಠರಾಜನಾಗಿ ಮಾಡಿದನು (ಶಾಂತಿ 122/32). ಹಿಮಾಲಯದಲ್ಲಿ ಶಕ್ತಿಯನ್ನು ಹುಗಿದುದು ಮತ್ತು ಅದನ್ನು ಕಿತ್ತು ತೆಗೆಯುವ ಘೋಷಣೆ ಮಾಡಿದುದು (ಶಾಂತಿ 327/9–11). ಇವನ ಹುಟ್ಟಿನ ವರ್ಣನೆ ಮತ್ತು ಇವನ ಬೇರೆಬೇರೆ ಹೆಸರುಗಳ ಕಾರಣ (ಅನು 85/164). ಇವನ ಉತ್ಪತ್ತಿಯ ಪ್ರಸಂಗದ ಮರು ಉಲ್ಲೇಖ (ಅನು 86/5–14). ಇವನು ದೇವ ಸೇನಾ ಪದವಿಯಲ್ಲಿ ಅಭಿಷಿಕ್ತನಾದುದರ ಕುರಿತು ಎರಡನೇ ಬಾರಿ ವರ್ಣನೆ (ಅನು 86/28). ಇವನಿಂದ ತಾರಕಾಸುರನ ವಧೆಯಾದುದರ ಕುರಿತು ಪುನಃ ವರ್ಣನೆ (ಅನು 86/29). ಧರ್ಮ ಸಂಬಂಧವಾಗಿ ಇವನ ರಹಸ್ಯ (ಅನು 134/1–7).

**ಸ್ಕಂದಗ್ರಹ** – ಮಾತೃಕಾಗಣ ಮತ್ತು ಪುರುಷ ಗ್ರಹರ ಸಮುದಾಯ (ವನ 230/43–44).

**ಸ್ಕಂದಾಪಸ್ಮಾರ** – ಸ್ಕಂದನ ಶರೀರದಿಂದ ಹುಟ್ಟಿದ ಪ್ರಸವ ಗ್ರಹ (ವನ 230/26).

**ಸ್ಕಂಧ** – ಧೃತರಾಷ್ಟ್ರನ ಕುಲದಲ್ಲಿ ಹುಟ್ಟಿದ ಒಬ್ಬ ನಾಗ. ಇವನು ಜನಮೇಜಯ ಸರ್ಪಸತ್ರದಲ್ಲಿ ದಗ್ಧನಾಗಿದ್ದನು (ಆದಿ 57/18).

**ಸ್ಕಂಧಾಕ್ಷ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/60).

**ಸ್ತನಕುಂಡ** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ವಾಜಪೇಯ ಯಜ್ಞದ ಫಲಸಿಗುತ್ತದೆ (ವನ 84/152).

**ಸ್ತನಪೋಷಿಕ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/68).

**ಸ್ತನವಾಲ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/63).

**ಸ್ತಂಬಮಿತ್ರ** – ಒಬ್ಬ ಶಾರ್ಙ್ಗಕ. ಇವನು ಮಂದಪಾಲ ಋಷಿಯಿಂದ ಜರಿತೆಯ ಗರ್ಭದಲ್ಲಿ ಹುಟ್ಟಿದ್ದನು (ಆದಿ 228/17). ತನ್ನ ಅಣ್ಣ

ಜರಿತಾರಿಯೊಡನೆ ತನ್ನನ್ನು ರಕ್ಷಿಸಲು ಹೇಳಿದುದು. ಇವನಿಂದ ಅಗ್ನಿಯ ಸ್ತುತಿ (ಆದಿ 231). (ಆದಿ 231/12–14). ಅಗ್ನಿದೇವನ ಕೃಪೆಯಿಂದ ಖಾಂಡವ ವನದಹನ ಕಾಲದಲ್ಲಿ ಇವನ ರಕ್ಷಣೆ (231/21).

**ಸ್ತುಭ** – ಭಾನುವೆಂಬ ಅಗ್ನಿಯ ಆರು ಪುತ್ರರಲ್ಲಿ ಒಬ್ಬ (ವನ 221/14).

**ಸ್ತ್ರೀಪರ್ವ** – ಮಹಾಭಾರತದ ಒಂದು ಪ್ರಧಾನ ಪರ್ವ.

**ಸ್ತ್ರೀರಾಜ್ಯ** – ಪ್ರಾಚೀನ ಕಾಲದ ಒಂದು ರಾಜ್ಯ. ಅಲ್ಲಿದ್ದ ರಾಜ, ಯುಧಿಷ್ಠಿರನ ರಾಜಸೂಯಾಧ್ವರಕ್ಕೆ ಬಂದಿದ್ದನು (ವನ 51/25).

**ಸ್ತ್ರೀವಿಲಾಪಪರ್ವ** – ಸ್ತ್ರೀ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 16 ರಿಂದ 25ರ ವರೆಗೆ).

**ಸ್ಥಂಡಿಲೇಯು** – ಪೂರುವಿನ ಮೂರನೇ ಮಗ. ರೌದ್ರಾಶ್ವನ ಮೂಲಕ ಮಿಶ್ರಕೇಶಿ ಎಂಬ ಅಪ್ಸರೆಯ ಗರ್ಭದಲ್ಲಿ ಹುಟ್ಟಿದ ಒಬ್ಬ ಮಹಾಧನುರ್ಧರ ಪುತ್ರ (ಆದಿ 94/8–10).

**ಸ್ಥಾಣು** – (1) ಬ್ರಹ್ಮನ ಮಾನಸ ಪುತ್ರ. ಇವನು ಮರೀಚಿಯೇ ಮೊದಲಾದ ಆರು ಪುತ್ರರಿಗಿಂತ ಬೇರೆಯಾದವನು. ಏಕಾದಶರುದ್ರರು ಇವನ ಮಕ್ಕಳು (ಆದಿ 66/1–3).

(2) ಬ್ರಹ್ಮನ ಪೌತ್ರ ಹಾಗೂ ಸ್ಥಾಣುವಿನ ಪುತ್ರ. ಇವನು ಏಕಾದಶ ರುದ್ರರಲ್ಲಿ ಒಬ್ಬನಾಗಿದ್ದಾನೆ (ಆದಿ 66/3).

(3) ಒಬ್ಬ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಿದ್ದನು (ಸಭಾ 7/17).

**ಸ್ಥಾಣುವಟ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಪ್ರಾಚೀನ ತೀರ್ಥ. ಅಲ್ಲಿ ಸ್ನಾನಮಾಡಿ, ರಾತ್ರಿಯಿಡೀ ವಾಸಿಸುವ ಮನುಷ್ಯ ರುದ್ರಲೋಕಕ್ಕೆ ಹೋಗುತ್ತಾನೆ (ವನ 83/178–179).

**ಸ್ಥಾಣುಸ್ಥಾನ** – ಮಹಾತ್ಮಾ ಸ್ಥಾಣುವಿನ ಮುಂಜವಟವೆಂಬ ಸ್ಥಾನ. ಅಲ್ಲಿ ಒಂದು ರಾತ್ರಿ ವಾಸಿಸಿದರೆ ಗಣಪತಿ ಪದವು ಪ್ರಾಪ್ತವಾಗುತ್ತದೆ (ವನ 83/22). ಸರಸ್ವತಿಯ ಪೂರ್ವದಲ್ಲಿ, ವಸಿಷ್ಠರ ಆಶ್ರಮವಿರುವಲ್ಲಿ, ಭಗವಾನ್ ಸ್ಥಾಣುವು ತಪಸ್ಸು, ಸರಸ್ವತಿಯ ಪೂಜೆ ಮತ್ತು ಯಜ್ಞ ಮಾಡಿ, ತೀರ್ಥವನ್ನು ಸ್ಥಾಪಿಸಿದ್ದನು. ಆದುದರಿಂದಲೇ ಇದು ಸ್ಥಾಣುತೀರ್ಥವೆಂದು ಪ್ರಸಿದ್ಧವಾಯಿತು. ಇಲ್ಲಿಯೇ ದೇವತೆಗಳು ಸ್ಕಂದನಿಗೆ ಸೇನಾಪತಿತ್ವದ ಅಭಿಷೇಕ ಮಾಡಿದ್ದರು (ಶಲ್ಯ 42/4–7).

**ಸ್ಥಿರ** – ಮೇರುವಿನಿಂದ ಸ್ಕಂದನಿಗೆ ಕೊಡಲ್ಪಟ್ಟ ಇಬ್ಬರು ಪಾರ್ಷದರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ಅತಿಸ್ಥಿರನೆಂದಾಗಿತ್ತು (ಶಲ್ಯ 45/48).

**ಸ್ಥೂಣ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/51).

**ಸ್ಥೂಣಕರ್ಣ** – ಒಬ್ಬ ಋಷಿ. ಇವನು ಅಜಾತಶತ್ರು ಯುಧಿಷ್ಠಿರನನ್ನು ಗೌರವಿಸುತ್ತಿದ್ದನು (ವನ 26/23).

**ಸ್ಥೂಣಾಕರ್ಣ** – ಒಬ್ಬ ಯಕ್ಷ. ಇವನು ಶಿಖಂಡಿಗೆ ತನ್ನ ಪುರುಷತ್ವ ಕೊಟ್ಟಿದ್ದನು. ಇವನು ಶಿಖಂಡಿನಿಯ ಮನೋರಥವನ್ನು ಪೂರ್ಣಗೊಳಿಸುವ ಪ್ರತಿಜ್ಞೆ ಮಾಡಿದುದು (ಉದ್ಯೋಗ 191/24–25). ಇವನಿಂದ ಶಿಖಂಡಿನಿಗೆ ತನ್ನ ಪುರುಷತ್ವ ದಾನ (ಉದ್ಯೋಗ 192/9). ಇದರಿಂದಾಗಿ ಸ್ತ್ರೀಯಾಗಿಯೇ ಉಳಿಯುವಂತೆ ಕುಬೇರನ ಶಾಪ (ಉದ್ಯೋಗ 192/45–47). ಕುಬೇರನಿಂದ ಶಾಪದ ಅಂತ್ಯವು ಹೇಳಲ್ಪಟ್ಟದ್ದು (ಉದ್ಯೋಗ 192/50).

**ಸ್ಥೂಲಕೇಶ** – ಒಬ್ಬ ಪ್ರಾಚೀನ ಋಷಿ. ಇವನು ಸಂಪೂರ್ಣವಾಗಿ ಪ್ರಾಣಿಗಳ ಹಿತರಕ್ಷಣೆಯಲ್ಲಿಯೇ ಮಗ್ನನಾಗಿದ್ದನು (ಆದಿ 8/5). ಇವನಿಂದ, ಕಾಡಿನಲ್ಲಿ ಅನಾಥೆಯಾಗಿ ಬಿದ್ದಿದ್ದ 'ಪ್ರಮದ್ವರೆ'ಯ ಪಾಲನೆ ಘೋಷಣೆ, ನಾಮಕರಣ ಮತ್ತು ಮಹರ್ಷಿ ರುರುವಿಗೆ ವಾಗ್ದಾನ (ಆದಿ 8/9–16).

**ಸ್ಥೂಲವಾಲುಕಾ** – ಒಂದು ಪವಿತ್ರ ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/15).

**ಸ್ಥೂಲಶಿರಾ** – ಒಬ್ಬ ಋಷಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/11). ರಾಜಾಯುಧಿಷ್ಠಿರನು ಇವನ ರಮಣೀಯವಾದ ಆಶ್ರಮಕ್ಕೆ ಹೋದುದು (ವನ 135/8). ಹಸ್ತಿನಾವತಿಗೆ ದೂತನಾಗಿ ಹೋಗುತ್ತಿದ್ದ ಶ್ರೀಕೃಷ್ಣನನ್ನು ಮಾರ್ಗಮಧ್ಯದಲ್ಲಿ ಈತ ಭೇಟಿ ಮಾಡಿದುದು (ಉದ್ಯೋಗ 83/64). ಇವನು ಪೂರ್ವಕಾಲದಲ್ಲಿ ಮೇರುವಿನ ಪೂರ್ವೋತ್ತರ ಭಾಗದಲ್ಲಿ ತಪಸ್ಸು ಮಾಡುತ್ತಿದ್ದನು. ಇವನು ವಾಯುವಿನ

ಮೇಲೆ ಪ್ರಸನ್ನನಾಗಿ, ವೃಕ್ಷಗಳ ಮೇಲೆ ಕೋಪಾವಿಷ್ಟನಾಗಿ, ಅವುಗಳಿಗೆ ಶಾಪ ನೀಡಿದುದು (ಶಾಂತಿ 342/59). ಇವನು ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/5).

**ಸ್ಥೂಲಾಕ್ಷ** – ಒಬ್ಬ ದಿವ್ಯ ಮಹರ್ಷಿ. ಇವನು ಶರಶಯ್ಯೆಯಲ್ಲಿರುವ ಭೀಷ್ಮನನ್ನು ನೋಡಲು ಬಂದಿದ್ದನು (ಅನು 26/7).

**ಸ್ಮೃತಿ** – ಸ್ಮರಣೆಯ ಅಧಿಷ್ಠಾತ್ರಿ ದೇವತೆ. ಈಕೆ ಕುಮಾರ ಮಹಾಸೇನನ ಸೇನೆಯ ಮುಂದಿನಿಂದ ಹೋಗುತ್ತಿದ್ದಳು (ಶಲ್ಯ 46/64).

**ಸ್ಯಮಂತಕ** – ಒಂದು ದಿವ್ಯಮಣಿ. ಇದನ್ನು ಭಗವಾನ್ ಸೂರ್ಯನು ಸತ್ರಾಜಿತನಿಗೆ ಕೊಟ್ಟಿದ್ದನು. ಸತ್ರಾಜಿತ ಮತ್ತು ಪ್ರಸೇನಜಿತರಲ್ಲಿದ್ದ ಸ್ಯಮಂತಕ ಮಣಿ ತುಂಬಾ ಚಿನ್ನವನ್ನು ಸುರಿಸುತ್ತಿತ್ತು (ಸಭಾ 14/60). ಕೃತವರ್ಮನ ಮೋಸದಿಂದ ಈ ಮಣಿ ಕದಿಯಲ್ಪಟ್ಟಿತು ಮತ್ತು ಸತ್ರಾಜಿತನು ಕೊಲ್ಲಲ್ಪಟ್ಟನು. ಸಾತ್ಯಕಿಯು ಈ ಘಟನೆಯನ್ನು ಶ್ರೀಕೃಷ್ಣನಿಗೆ ನೆನಪು ಮಾಡಿದ್ದನು (ಮೌಸಲ 3/23).

**ಸ್ಯೂಮರಶ್ಮಿ** – ಒಬ್ಬ ಪ್ರಾಚೀನ ಋಷಿ. ಇವನು ಹಸುವಿನೊಳಗೆ ಪ್ರವೇಶಮಾಡಿದ್ದನು. ಕಪಿಲನೊಂದಿಗೆ ಇವನ ಸಂವಾದ ಮತ್ತು ಇವನಿಂದ ಯಜ್ಞದ ಅವಶ್ಯಕರ್ತವ್ಯತೆಯ ನಿರೂಪಣೆ (ಶಾಂತಿ 268 ಅಧ್ಯಾಯ). ಪ್ರವೃತ್ತಿ – ನಿವೃತ್ತಿ ಮಾರ್ಗದ ವಿಷಯದಲ್ಲಿ ಸ್ಯೂಮರಶ್ಮಿ ಮತ್ತು ಕಪಿಲನ ಸಂವಾದ (ಶಾಂತಿ 269 ಅಧ್ಯಾಯ). ಇವರ ಸಂವಾದದಲ್ಲಿ– ನಾಲ್ಕೂ ಆಶ್ರಮಗಳಲ್ಲಿ ಉತ್ತಮ ಉಪಾಯಗಳ ಮೂಲಕ ಬ್ರಹ್ಮಪ್ರಾಪ್ತಿಯ ವಿವರಣೆ (ಶಾಂತಿ 270 ಅಧ್ಯಾಯ).

**ಸ್ರಜ** – ಒಬ್ಬ ಸನಾತನ ವಿಶ್ವೇದೇವ (ಅನು 91/33).

**ಸ್ವಕ್ಷ** – ಒಂದು ಭಾರತೀಯ ಜನಪದ (ಭೀಷ್ಮ 9/45).

**ಸ್ವನ** – ಸತ್ಯನ ಪುತ್ರ. ಈತ ರೋಗಕಾರಕ ಅಗ್ನಿಯಾಗಿದ್ದಾನೆ. ಇವನಿಂದ ಪೀಡಿಸಲ್ಪಟ್ಟು, ಜನರು ನೋವಿನಿಂದ ಆರ್ತನಾದ ಮಾಡುತ್ತಾರೆ. ಸ್ವನ (ಚೀತ್ಕಾರ) ಮಾಡಲು ಕಾರಣವಾದುದರಿಂದ ಇವನ ಹೆಸರು 'ಸ್ವನ'ವೆಂದಾಯಿತು (ವನ 219/15).

**ಸ್ವಯಂಜಾತ** – ವಿವಾಹಿತೆಯಾದ ಪತ್ನಿಯಲ್ಲಿ ತನ್ನಿಂದಲೇ ಹುಟ್ಟಿದ ಪುತ್ರ (ಬಂಧುದಾಯಾದ). (ಆದಿ 119/33).

**ಸ್ವಯಂಪ್ರಭಾ** – ಒಬ್ಬ ಅಪ್ಸರೆ. ಇವಳು ಅರ್ಜುನನ ಸ್ವಾಗತಕ್ಕಾಗಿ ಇಂದ್ರಸಭೆಯಲ್ಲಿ ನೃತ್ಯ ಮಾಡಿದ್ದಳು (ವನ 43/29).

**ಸ್ವಯಂವರ** – (1) ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 183ರಿಂದ 191 ವರೆಗೆ).

(2) ರಾಜರ ಒಂದು ಸಭೆ. ಇಲ್ಲಿ ರಾಜಕನ್ಯೆಯರು ತಾವೇ ತಮಗೋಸ್ಕರ ವರನನ್ನು ವರಿಸುತ್ತಾರೆ (ವನ 54/8).

**ಸ್ವರಾಷ್ಟ್ರ** – ಒಂದು ಭಾರತೀಯ ಜನಪದ (ಭೀಷ್ಮ 9/48).

**ಸ್ವರೂಪ** – ಒಬ್ಬ ದೈತ್ಯ. ಈತ ವರುಣ ಸಭೆಯಲ್ಲಿದ್ದು ಅವನ ಉಪಾಸನೆ ಮಾಡುತ್ತಾನೆ (ಸಭಾ 9/14).

**ಸ್ವರ್ಗ** – ಪುಣ್ಯಕರ್ಮಗಳಿಂದ ಪ್ರಾಪ್ತವಾಗುವ ದೇವಲೋಕ. ಇದರಲ್ಲಿ ಇಂದ್ರಲೋಕ ಪ್ರಧಾನವಾದುದು. ರಾಜಾಯಯಾತಿಯು ಸ್ವರ್ಗಕ್ಕೆ ಹೋಗಿ, ದೇವಭವನದಲ್ಲಿ ವಾಸಿಸುತ್ತಿದ್ದನು. ಅಲ್ಲಿ ದೇವತೆಗಳು, ಸಾಧ್ಯಗಣಗಳು, ಮರುದ್ಗಣಗಳು ಮತ್ತು ವಸುಗಳು ಆತನಿಗೆ ದೊಡ್ಡ ಸತ್ಕಾರ ಮಾಡಿದ್ದರು. ಅಲ್ಲಿ ಈತನಿಗೆ ಇಂದ್ರನೊಂದಿಗೆ ಮಾತಾಡುವ ಸಂದರ್ಭ ದೊರಕಿತ್ತು (ಆದಿ 87/1–3). ಸ್ವರ್ಗಲೋಕದಲ್ಲಿ ರಮಣೀಯವಾಗಿರುವ ಇಂದ್ರಪುರವು, ನೂರು ಯೋಜನ ವಿಸ್ತಾರ ಮತ್ತು ಒಂದು ಸಾವಿರ ಬಾಗಿಲುಗಳಿಂದ ಸುಶೋಭಿತವಾಗಿತ್ತು. ಇಲ್ಲಿ ಯಯಾತಿಯು ಒಂದು ಸಾವಿರ ವರ್ಷಗಳ ವರೆಗೆ ವಾಸಿಸಿದ್ದನು. ಅಲ್ಲಿಯೇ ನಂದನವನವಿದೆ. ಅಲ್ಲಿ ಇಚ್ಛಾನುಸಾರ ರೂಪಧರಿಸಿ, ಅಪ್ಸರೆಯೊಂದಿಗೆ ವಿಹರಿಸುತ್ತಾ, ಅವನು ಹತ್ತು ಲಕ್ಷ ವರ್ಷಗಳ ವರೆಗೆ ಇದ್ದನು (ಆದಿ 89/16, 19). ಸಾಧುಪುರುಷರು ಸ್ವರ್ಗಕ್ಕೆ ಏಳು ಬಾಗಿಲುಗಳಿವೆಯೆಂದು ಹೇಳುತ್ತಾರೆ. ಅವುಗಳ ಮೂಲಕ ಪ್ರಾಣಿಗಳು ಒಳಪ್ರವೇಶ ಮಾಡುತ್ತವೆ. ತಪ, ದಾನ, ಶಮ, ದಮ, ಲಜ್ಜಾ, ಸರಲತಾ ಮತ್ತು ಸಮಸ್ತ ಪ್ರಾಣಿಗಳ ಕಡೆಗೆ

ದಯೆ (ಆದಿ 90/22). ಸ್ವರ್ಗದಲ್ಲಿ ಇಂದ್ರನ ಸಭೆಯ ಉದ್ದ ಒಂದು ನೂರ ಐವತ್ತು ಯೋಜನ ಮತ್ತು ಅಗಲ ನೂರು ಯೋಜನ ಗಳಷ್ಟಾಗಿದೆ. ಅದು ಆಕಾಶದಲ್ಲಿ ಸಂಚರಿಸು ವಂಥಾದ್ದು ಮತ್ತು ಇಚ್ಛಾನುಸಾರ ಮಂದ ಅಥವಾ ತೀವ್ರಗತಿಯಿಂದ ಚಲಿಸುವಂತಹದೂ ಆಗಿದೆ. ಅದರ ಎತ್ತರವೂ ಐದು ಯೋಜನ ಗಳಷ್ಟಿದೆ. ಅದರಲ್ಲಿ ವೃದ್ಧಾಪ್ಯ, ಶೋಕ ಮತ್ತು ಆಯಾಸದ ಪ್ರವೇಶವಿಲ್ಲ. ಅಲ್ಲಿ ಭಯವಿಲ್ಲ. ಅದು ಮಂಗಲಮಯವೂ ದಿವ್ಯ ಶೋಭೆಯಿಂದ ಕೂಡಿದುದೂ ಆಗಿದೆ. ಅದರಲ್ಲಿ ವಾಸಿಸಲು ಸುಂದರವಾದ ಅರಮನೆಗಳು ಮತ್ತು ಕುಳಿತು ಕೊಳ್ಳಲು ಉತ್ತಮೋತ್ತಮ ಸಿಂಹಾಸನಗಳೂ ಸಿದ್ಧವಾಗಿವೆ. ಆ ರಮಣೀಯ ಸಭಾಭವನ ದಿವ್ಯ ವೃಕ್ಷಗಳಿಂದ ಸುಶೋಭಿತವಾಗಿದೆ. ಅಲ್ಲಿ ಇಂದ್ರಾಣಿ ಶಚಿಯೊಂದಿಗೆ ಮತ್ತು ಸ್ವರ್ಗದ ಲಕ್ಷ್ಮಿಯೊಂದಿಗೆ ದೇವರಾಜನಾದ ಇಂದ್ರ ಸರ್ವಶ್ರೇಷ್ಠ ಸಿಂಹಾಸನ ದಲ್ಲಿ ಮಂಡಿಸಿರುತ್ತಾನೆ. ಗಂಧರ್ವರೂ, ಅಪ್ಸರೆ ಯರೂ, ನೃತ್ಯ, ವಾದ್ಯ ಮತ್ತು ಗೀತೆಗಳಿಂದ ಅವನ ಮನೋರಂಜನೆ ಮಾಡುತ್ತಾರೆ (ಸಭಾ 7 ಅಧ್ಯಾಯ). ಸ್ವರ್ಗದಲ್ಲಿ, ರಾಜಸೂಯ ಯಜ್ಞದ ಪ್ರಭಾವದಿಂದ ರಾಜಾ ಹರಿಶ್ಚಂದ್ರನಿಗೆ ಸರ್ವೋ ತ್ತಮ ವೈಭವ ಪ್ರಾಪ್ತವಾಗಿತ್ತು. ಅದನ್ನು ನೋಡಿ ಪಾಂಡುರಾಜನು ಆಶ್ಚರ್ಯಚಕಿತನಾಗಿದ್ದನು. ಅವನು ನಾರದನ ಮೂಲಕ ಧರ್ಮರಾಯನು ರಾಜಸೂಯಾಧ್ವರ ಮಾಡುವಂತೆ ಸಂದೇಶಕಳು ಹಿಸಿದ್ದನು (ಸಭಾ 12/23–26). ಸತ್ಯಭಾಮೆಯು ಶ್ರೀಕೃಷ್ಣನೊಂದಿಗೆ ಸ್ವರ್ಗಕ್ಕೆ ಹೋಗಿ ಅಲ್ಲಿರುವ ವೈಭವವನ್ನು ನೋಡಿದ್ದಳು ಮತ್ತು ಅಲ್ಲಿ ಆಕೆಗೆ ದೇವಮಾತೆಯಾದ ಅದಿತಿಯ ಆಶೀರ್ವಾದ ದೊರಕಿತ್ತು (ಸಭಾ 38/29). ಅರ್ಜುನನು ಸ್ವರ್ಗಕ್ಕೆ ಹೋಗುವ ಸಂದರ್ಭದಲ್ಲಿ ಅಂಬರದಲ್ಲಿ ಸಹಸ್ರಾರು ಅದ್ಭುತ ವಿಮಾನಗಳನ್ನು ಕಂಡನು. ಅಲ್ಲಿ ಸೂರ್ಯನಾಗಲಿ, ಚಂದ್ರನಾಗಲಿ ಪ್ರಕಾಶಿ ಸುವುದಿಲ್ಲ. ಅಗ್ನಿಯ ಪ್ರಭೆಯೂ ಅಲ್ಲಿ ಉಪ ಯೋಗವಾಗುವುದಿಲ್ಲ. ಸ್ವರ್ಗದ ನಿವಾಸಿಗಳು ತಮ್ಮ ಪುಣ್ಯಕರ್ಮದಿಂದ ಪ್ರಾಪ್ತವಾದ, ತಮ್ಮದೇ ಪ್ರಭೆಯಿಂದ ಪ್ರಕಾಶಿಸಲ್ಪಡುತ್ತಾರೆ. ಅರ್ಜುನನಿಗೆ ಸ್ವರ್ಗದ ದ್ವಾರದಲ್ಲಿ, ಸುಂದರವಾದ ವಿಜಯೀ ಗಜರಾಜ ಐರಾವತ ನಿಂತಿರುವುದು ಕಾಣಿಸಿತು. ಅದರ ನಾಲ್ಕು ದಂತಗಳು ಹೊರಕ್ಕೆ ಚಾಚಿದ್ದವು (ವನ 42/40). ಸಿದ್ಧರಿಂದಲೂ, ಚಾರಣ ರಿಂದಲೂ ಸೇವಿಸಲ್ಪಡುವ ರಮಣೀಯವಾದ ಅಮರಾವತಿಪುರ ಎಲ್ಲಾ ಋತುಗಳ ಹಣ್ಣುಗಳಿಂ ದಲೂ ಪುಣ್ಯಮಯವಾದ ವೃಕ್ಷಗಳಿಂದಲೂ ಸುಶೋಭಿತವಾಗಿದೆ. ಅಪ್ಸರೆಯರಿಂದ ಸೇವಿಸ ಲ್ಪಡುವ ನಂದನವನದ ಶೋಭೆ ಅದ್ಭುತವಾಗಿದೆ. ತಪಸ್ಸು ಮತ್ತು ಅಗ್ನಿಹೋತ್ರವನ್ನು ದೂರ ಮಾಡಿದವರು, ಯುದ್ಧಕ್ಕೆ ಬೆನ್ನು ಹಾಕಿದವರು ಇಂತಹ ಜನರು ಪುಣ್ಯಾತ್ಮರ ಈ ಲೋಕವನ್ನು ದರ್ಶನಮಾಡಲಾರರು. ಯಜ್ಞ, ವ್ರತ, ವೇದಾಧ್ಯ ಯನ, ತೀರ್ಥಸ್ನಾನ ಮತ್ತು ದಾನ ಇತ್ಯಾದಿ ಸತ್ಕರ್ಮಗಳಿಂದ ವಂಚಿತರಾದವರು, ಕುಡುಕರು, ಗುರುತಲ್ಪಗಾಮಿಗಳು, ಮಾಂಸಾಹಾರಿಗಳು ಮತ್ತು ದುರಾತ್ಮರು ಈ ದಿವ್ಯಲೋಕದ ದರ್ಶನ ಮಾಡ ಲಾರರು. ದೇವತೆಗಳು, ಸಿದ್ಧರು ಮತ್ತು ಮಹರ್ಷಿ ಗಳು ಇಲ್ಲಿ ಅರ್ಜುನನಿಗೆ ಸ್ವಾಗತ–ಸತ್ಕಾರ ಮಾಡಿದರು. ಅಪ್ಸರೆಯರು ನೃತ್ಯಗೀತಗಳಿಂದ ಅವನ ಮನೋರಂಜನೆ ಮಾಡಿದರು (ವನ 43 ಅಧ್ಯಾಯ). ಯಾವುದನ್ನು ಸ್ವರ್ಲೋಕವೆಂದು ಹೇಳುತ್ತಾರೋ ಅದು, ಇಲ್ಲಿಂದ ತುಂಬಾ ಎತ್ತರ ದಲ್ಲಿದೆ. ಅಲ್ಲಿಗೆ ತಲುಪಲು ಮೇಲಕ್ಕೆ ಹೋಗ ಬೇಕಾಗುತ್ತದೆ. ಆದುದರಿಂದ ಅದರ ಹೆಸರು ಊರ್ಧ್ವಗವೆಂದೂ ಇದೆ. ಅಲ್ಲಿಗೆ ಹೋಗಲು ಇರುವ ಮಾರ್ಗ ಉತ್ತಮವಾಗಿದೆ. ಅಲ್ಲಿರುವ ವ್ಯಕ್ತಿಗಳು ಯಾವಾಗಲೂ ವಿಮಾನಗಳಲ್ಲಿ ವಿಚರಿ ಸುತ್ತಾರೆ. ತಪಸ್ಸು ಮಾಡದವರು, ದೊಡ್ಡದೊಡ್ಡ ಯಜ್ಞ ಮಾಡದವರು, ಅಸತ್ಯವಾದಿಗಳು ಮತ್ತು ನಾಸ್ತಿಕರು ಈ ಲೋಕಕ್ಕೆ ಹೋಗಲಾರರು. ಧರ್ಮಾತ್ಮರು, ಮನಸ್ಸನ್ನು ವಶದಲ್ಲಿರಿಸಿಕೊಳ್ಳು ವವರು, ಶಮದಮಗಳಿಂದ ಸಂಪನ್ನರು, ಅಸೂಯಾರಹಿತರು, ದಾನಧರ್ಮಪರಾಯಣರು, ಯುದ್ಧಕಲೆಯಲ್ಲಿ ಪ್ರಸಿದ್ಧ ಶೂರವೀರ ಮನುಷ್ಯರು, ಎಲ್ಲಾ ಧರ್ಮಗಳಲ್ಲಿ ಶ್ರೇಷ್ಠವಾದ ಇಂದ್ರಿಯ ಸಂಯಮ ಮತ್ತು ಮನೋನಿಗ್ರಹ ರೂಪಿಯಾದ ಯೋಗವನ್ನವಲಂಬಿಸಿ, ಸತ್ಪುರುಷರಿಂದ ಸೇವಿಸ ಲ್ಪಡುವ ಪುಣ್ಯವಂತರು ಈ ಲೋಕಕ್ಕೆ ಹೋಗು ತ್ತಾರೆ. ಇಲ್ಲಿ ದೇವತೆ, ಸಾಧ್ಯ, ವಿಶ್ವೇದೇವ,

ಮಹರ್ಷಿಗಣ, ಯಾಮ, ಧಾಮ, ಗಂಧರ್ವ ಮತ್ತು ಅಪ್ಸರೆಯರೇ ಮೊದಲಾದ ದೇವ ಸಮೂಹಗಳಿಗೆ ಬೇರೆ ಬೇರೆ ಅನೇಕ ಪ್ರಕಾಶ ಮಾನ ಲೋಕಗಳಿವೆ. ಇವುಗಳೆಲ್ಲಾ ಇಚ್ಛಾನುಸಾರ ಪ್ರಾಪ್ತವಾಗುವ ಭೋಗಗಳಿಂದ ಕೂಡಿದ್ದು, ತೇಜಃಪೂರ್ಣವೂ, ಮಂಗಲಕಾರಿಗಳೂ ಆಗಿರು ತ್ತವೆ. ಸ್ವರ್ಗದಲ್ಲಿ ಮೂವತ್ತಮೂರು ಸಾವಿರ ಯೋಜನದ ಸುವರ್ಣಮಯವಾದ ಒಂದು ಎತ್ತರವಾದ ಪರ್ವತವಿದೆ. ಅದು ಮೇರು ಪರ್ವತವೆಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಅಲ್ಲಿಯೇ ದೇವತೆಗಳ ನಂದನವೆಂಬ ಪವಿತ್ರ ಉದ್ಯಾನ ಮತ್ತು ಪುಣ್ಯಾತ್ಮರಾದ ಪುರುಷರ ವಿಹಾರಸ್ಥಳಗಳಿವೆ. ಅಲ್ಲಿ ಯಾರಿಗೂ ಹಸಿವು ಬಾಯಾರಿಕೆಗಳಾಗುವುದಿಲ್ಲ; ಮನಸ್ಸಿಗೆ ಗ್ಲಾನಿ ಯಾಗುವುದಿಲ್ಲ; ಶೀತೋಷ್ಣ ಬಾಧೆ ಇರುವುದಿಲ್ಲ ಮತ್ತು ಯಾವ ಭಯವೂ ಇರುವುದಿಲ್ಲ. ಅಸಹ್ಯವಾದ, ತಿರಸ್ಕಾರ ಯೋಗ್ಯ, ಅಶುಭಪ್ರದ ವಾದ ಯಾವ ವಸ್ತುವೂ ಅಲ್ಲಿರುವುದಿಲ್ಲ. ಅಲ್ಲಿ ಎಲ್ಲಾ ಕಡೆ ಮನೋಹ್ಲಾದಕರವಾದ ಪರಿಮಳ, ಸುಖಕರವಾದ ಸ್ಪರ್ಶ ಮತ್ತು ಕಿವಿ ಹಾಗೂ ಮನಸ್ಸಿಗೆ ಪ್ರಿಯವಾದ ಮಧುರ ಶಬ್ದಗಳು ಕೇಳಿಸುತ್ತವೆ. ಸ್ವರ್ಗದಲ್ಲಿ ಶೋಕವಾಗಲಿ, ವೃದ್ಧಾಪ್ಯವಾಗಲಿ ಇಲ್ಲ. ಅಲ್ಲಿ ಆಯಾಸ ಮತ್ತು ಕರುಣಾಜನಕ ವಿಲಾಪ ಕೂಡಾ ಇರುವುದಿಲ್ಲ. ಸ್ವರ್ಗಲೋಕ ಹೀಗೆಯೇ ಇರುತ್ತದೆ. ತನ್ನ ಸತ್ಕರ್ಮಗಳ ಫಲಸ್ವರೂಪವಾಗಿಯೇ ಅದು ಪ್ರಾಪ್ತವಾಗುತ್ತದೆ. ಮನುಷ್ಯ ತಾನು ಮಾಡಿದ ಪುಣ್ಯಕರ್ಮದಿಂದಲೇ ಅಲ್ಲಿರಬಲ್ಲನು. ಸ್ವರ್ಗವಾಸಿ ಗಳ ಶರೀರದಲ್ಲಿ ತೈಜಸ ತತ್ವದ ಪ್ರಧಾನತೆ ಇರುತ್ತದೆ. ಆ ಶರೀರಗಳು ಪುಣ್ಯಕರ್ಮದಿಂದಲೇ ದೊರಕುತ್ತವೆ. ತಾಯಿ ತಂದೆಯರ ರಜೋ ವೀರ್ಯಗಳಿಂದ ಅವುಗಳ ಉತ್ಪತ್ತಿಯಾಗುವು ದಲ್ಲ. ಆ ಶರೀರಗಳಲ್ಲಿ ಎಂದೂ ಬೆವರು ಹೊರಡುವುದಿಲ್ಲ; ದುರ್ಗಂಧ ಬರುವುದಿಲ್ಲ ಮತ್ತು ಮಲಮೂತ್ರವೂ ಅಭಾವ ಹೊಂದಿರು ತ್ತದೆ. ಅವರ ಬಟ್ಟೆಗಳಲ್ಲಿ ಎಂದೂ ಕೊಳೆ ನಿಲ್ಲುವು ದಿಲ್ಲ. ಸ್ವರ್ಗವಾಸಿಗಳಲ್ಲಿರುವ ದಿವ್ಯಮಾಲೆಗಳು (ದಿವ್ಯ ಕುಸುಮಗಳ) ಎಂದೂ ಬಾಡುವುದಿಲ್ಲ. ಅವುಗಳಿಂದ ನಿರಂತರವಾಗಿ ದಿವ್ಯಸುಗಂಧ ಹರಡುತ್ತಿರುತ್ತದೆ ಮತ್ತು ನೋಡಲು ಕೂಡಾ ತುಂಬಾ ಮನೋಹರವಾಗಿರುತ್ತವೆ. ಸ್ವರ್ಗವಾಸಿ ಗಳು ಇಂತಹದೇ ವಿಮಾನಗಳಲ್ಲಿ ವಿಹರಿಸುತ್ತಾರೆ. ತಮ್ಮ ಸತ್ಕರ್ಮಗಳ ಮೂಲಕ ಸ್ವರ್ಗದ ಮೇಲೆ ವಿಜಯ ಸಾಧಿಸಿದವರು, ಅಲ್ಲಿ ತುಂಬಾ ಸುಖ ದಿಂದ ಜೀವನಮಾಡುತ್ತಾರೆ. ಅವರಿಗೆ ಯಾರ ಮೇಲೂ ಮತ್ಸರವಿರುವುದಿಲ್ಲ. ಅವರು ಎಂದೂ ಶೋಕ ಮತ್ತು ಆಯಾಸ ಪಡೆಯುವುದಿಲ್ಲ. ಅವರು ಮೋಹ ಮತ್ತು ಮಾತ್ಸರ್ಯಗಳಿಂದ ಸದಾ ದೂರವಿರುತ್ತಾರೆ. ತಾನು ಮಾಡಿದ ಸತ್ಕರ್ಮಗಳ ಫಲವೇ ಸ್ವರ್ಗದಲ್ಲಿ ಭೋಗ ರೂಪದಲ್ಲಿ ದೊರಕುತ್ತದೆ. ಅಲ್ಲಿ ಯಾವುದೇ ಹೊಸ ಕರ್ಮ ಮಾಡಲ್ಪಡುವುದಿಲ್ಲ. ತನ್ನ ಪುಣ್ಯ ರೂಪದ ಮೂಲ ಧನವನ್ನು ವೆಚ್ಚಮಾಡುವುದ ರಿಂದಲೇ, ಅಲ್ಲಿರುವ ಭೋಗಪ್ರಾಪ್ತವಾಗುತ್ತದೆ (ವನ 261/ 2–16, 28). ಯುಧಿಷ್ಠಿರನಿಂದ ಸ್ವರ್ಗಲೋಕದ ದರ್ಶನ (ಸ್ವರ್ಗಾ 4 ಅಧ್ಯಾಯ).

**ಸ್ವರ್ಗತೀರ್ಥ** – ಒಂದು ತೀರ್ಥ. ಇದು ನೈಮಿ ಷಾರಣ್ಯದಲ್ಲಿದೆ. ಇಲ್ಲಿ ಒಂದು ತಿಂಗಳ ತನಕ ಪಿತೃಗಳಿಗೆ ಜಲಾಂಜಲಿಯನ್ನಿತ್ತರೆ ಪುರುಷ ಮೇಧಯಜ್ಞದ ಫಲ ದೊರಕುತ್ತದೆ (ಅನು 25/33).

**ಸ್ವರ್ಗದ್ವಾರ** – ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಪ್ರಾಚೀನ ತೀರ್ಥ. ಅಲ್ಲಿ ಸೇವೆ ಮಾಡಿದರೆ ಮನುಷ್ಯ ಸ್ವರ್ಗವನ್ನು ಪಡೆಯುತ್ತಾನೆ ಮತ್ತು ಬ್ರಹ್ಮಲೋಕಕ್ಕೆ ಹೋಗುತ್ತಾನೆ (ವನ 83/167).

**ಸ್ವರ್ಗ ಮಾರ್ಗತೀರ್ಥ** – ಒಂದು ತೀರ್ಥ. ಇಲ್ಲಿ ಸ್ನಾನಮಾಡಿದರೆ ಮನುಷ್ಯ ಬ್ರಹ್ಮಲೋಕಕ್ಕೆ ಹೋಗುತ್ತಾನೆ (ಅನು 25/61).

**ಸ್ವರ್ಗಾರೋಹಣಪರ್ವ** – ಮಹಾಭಾರತದ ಒಂದು ಪ್ರಮುಖ ಪರ್ವ.

**ಸ್ವರ್ಣಗ್ರೀವ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಸ್ವರ್ಣವಿಂದು** – ಒಂದು ತೀರ್ಥ. ಇಲ್ಲಿ ಸ್ನಾನ ಮಾಡಿದರೆ ಮನುಷ್ಯ ಸ್ವರ್ಗಕ್ಕೆ ಹೋಗುತ್ತಾನೆ (ಅನು 25/9).

**ಸ್ವರ್ಭಾನವೀ** – ಸ್ವರ್ಭಾನುವಿನ ಪುತ್ರಿ. ಪುರೂರವನ ಮಗ ಆಯುವಿನ ಪತ್ನಿ ನಹುಷನೇ

ಮೊದಲಾದ ಐದು ಮಂದಿ ಪುತ್ರರ ತಾಯಿ (ಆದಿ 75/26).

**ಸ್ವರ್ಭಾನು** – ಒಬ್ಬ ಪ್ರಸಿದ್ಧ ದಾನವ. ಇವನು ದನುವಿನ ಗರ್ಭದಿಂದ ಕಶ್ಯಪನ ಮೂಲಕ ಜನಿಸಿದ್ದನು (ಆದಿ 65/24). ಇವನು ಮಹಾ ಸುರನಾದ ಉಗ್ರಸೇನನ ರೂಪದಲ್ಲಿ ಈ ಪೃಥ್ವಿ ಯಲ್ಲಿ ಹುಟ್ಟಿದ್ದನು (ಆದಿ 67/12–13). ಇವನು ಪ್ರಾಚೀನಕಾಲದಲ್ಲಿ ಜಗತ್ತಿನ ಶಾಸಕನಾಗಿದ್ದನು. ಆದರೆ ಕಾಲಾಧೀನನಾಗಿ ಇದನ್ನೆಲ್ಲಾ ಬಿಟ್ಟು ಸತ್ತುಹೋದನು (ಶಾಂತಿ 227/50).

**ಸ್ವಸ್ತಿಕ** – (1) ಗಿರಿವ್ರಜ ನಿವಾಸಿಯಾದ ಒಬ್ಬ ನಾಗ (ಸಭಾ 21/9). ಇವನು ವರುಣ ಸಭೆ ಯಲ್ಲಿದ್ದು ಆತನ ಉಪಾಸನೆ ಮಾಡುತ್ತಾನೆ (ಸಭಾ 9/9).

(2) ಸ್ಕಂದನ ಒಬ್ಬ ಸೈನಿಕ (ಶಲ್ಯ 45/65).

**ಸ್ವಸ್ತಿಪುರತೀರ್ಥ**– ಕುರುಕ್ಷೇತ್ರದ ಎಲ್ಲೆಯಲ್ಲಿರುವ ಒಂದು ಪ್ರಾಚೀನ ತೀರ್ಥ. ಅದಕ್ಕೆ ಪ್ರದಕ್ಷಿಣೆ ಮಾಡಿದರೆ ಸಹಸ್ರಗೋದಾನದ ಫಲ ಸಿಗುತ್ತದೆ (ವನ 83/174).

**ಸ್ವಸ್ತಿಮತೀ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/12).

**ಸ್ವಸ್ತ್ಯಾತ್ರೇಯ** – ಒಬ್ಬ ಪ್ರಾಚೀನ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಿದ್ದನು (ಸಭಾ 7/10). ಇವನು ದಕ್ಷಿಣದಿಕ್ಕಿನಲ್ಲಿ ವಾಸಿಸುವ ಋಷಿಯಾಗಿದ್ದಾನೆ (ಶಾಂತಿ 208/28).

**ಸ್ವಾತೀ** – ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು. ಈ ನಕ್ಷತ್ರದಲ್ಲಿ ತನಗೆ ಅತ್ಯಧಿಕ ಪ್ರಿಯವಾದ ವಸ್ತು ವನ್ನು ದಾನಮಾಡುವ ಮನುಷ್ಯ ಶುಭಲೋಕ ಗಳಿಗೆ ಹೋಗುತ್ತಾನೆ ಮತ್ತು ಮಹಾಯಶಸ್ವಿ ಯಾಗುತ್ತಾನೆ (ಅನು 64/18). ಈ ನಕ್ಷತ್ರದ ಯೋಗದಲ್ಲಿ ಪಿತೃಗಳ ಪೂಜೆಮಾಡುವವ, ವಾಣಿಜ್ಯದಿಂದ ಜೀವನ ನಿರ್ವಹಣೆಮಾಡುತ್ತಾನೆ (ಅನು 89/7). ಚಾಂದ್ರವ್ರತದಲ್ಲಿ ಸ್ವಾತೀ ನಕ್ಷತ್ರವನ್ನು ಚಂದ್ರನ ಹಲ್ಲುಗಳೆಂದು ಭಾವಿಸಿ ಪೂಜಿಸುವ ಪದ್ಧತಿ ಇದೆ (ಅನು 110/7).

**ಸ್ವಾಯಂಭುಮನು** – ಇವನಿಂದ ಋಷಿಗಳಿಗೆ ಧರ್ಮೋಪದೇಶ (ಶಾಂತಿ 36 ಅಧ್ಯಾಯ). ಪ್ರಜೆಗಳು ಇವನನ್ನು ರಾಜನೆಂದು ಸ್ವೀಕರಿಸಿ ದುದು (ಶಾಂತಿ 68/23–29). ಇವನು ರಾಜ ನಾಗಿ ಶತ್ರುಗಳ ದಮನ ಮಾಡಿದುದು (ಶಾಂತಿ 68/31–32).

**ಸ್ವಾರೋಚಿಷ** – ಒಬ್ಬ ಮನು. ಇವನಿಗೆ ಬ್ರಹ್ಮನು ಸಾತ್ವತ ಧರ್ಮದ ಉಪದೇಶ ಮಾಡಿದ್ದನು. ಇವನು ತನ್ನ ಪುತ್ರ ಶಂಖಪದನಿಗೆ ಈ ಧರ್ಮದ ಶಿಕ್ಷಣವಿತ್ತಿದ್ದನು (ಶಾಂತಿ 348/36–37).

**ಸ್ವಾಹಾ** – (1) ಅಗ್ನಿಯ ಪತ್ನಿ (ಆದಿ 198/5). ಈಕೆ ಬ್ರಹ್ಮನ ಸಭೆಯಲ್ಲಿ ಅವನ ಸೇವೆಗಾಗಿ ಉಪಸ್ಥಿತಳಾಗಿರುತ್ತಾಳೆ (ಸಭಾ 11/42). ಮುನಿಪತ್ನಿಯರ ರೂಪದಲ್ಲಿ ಅಗ್ನಿಯೊಂದಿಗೆ ಈಕೆಯ ಸಮಾಗಮ (ವನ 225/7). ಗರುಡೀ ರೂಪ ಧರಿಸಿದುದು (ವನ 225/9). ಇವಳು ಆರು ಬಾರಿ ಸಮಾಗಮ ಮಾಡಿ, ಅಗ್ನಿಯ ವೀರ್ಯವನ್ನು ಜೊಂಡುಹುಲ್ಲಿನ ಮೇಲೆ ಬೀಳಿಸಿ ದುದು (ವನ 225/15). ಈಕೆ ಅಗ್ನಿದೇವ ನೊಂದಿಗೆ ಸದಾ ಇರುವಂತೆ, ಸ್ಕಂದನ ಸಮ್ಮುಖ ದಲ್ಲಿ ತನ್ನ ಅಭಿಪ್ರಾಯ ಪ್ರಕಟಿಸಿದುದು (ವನ 231/3–4). ಸ್ಕಂದನ ಅಭಿಷೇಕ ಕಾಲದಲ್ಲಿ ಸ್ವಾಹಾದೇವಿಯೂ ಉಪಸ್ಥಿತಳಾಗಿದ್ದಳು (ಶಲ್ಯ 45/13).

(2) ಬೃಹಸ್ಪತಿಯ ಮಗಳು. ಇವಳು ತುಂಬಾ ಸಿಟ್ಟಿನವಳು. ಈಕೆ ಎಲ್ಲಾ ಭೂತಗಳೊಳಗೆ ವಾಸಿಸುತ್ತಾಳೆ. ಇವಳ ಪುತ್ರ 'ಕಾಮಾ'ನೆಂಬ ಅಗ್ನಿ (ವನ 219/22–23).

**ಸ್ವಿಷ್ಟಕೃತ್** – (1) ಪ್ರತಿಯೊಂದು ಗೃಹ್ಯಕರ್ಮ ಗಳಲ್ಲಿ ಅಗ್ನಿಗೆ ಕೊಡುವ ತುಪ್ಪದ ಧಾರೆ ಸದಾ ಉತ್ತರಾಭಿಮುಖವಾಗಿಯೇ ಇರಬೇಕು. ಆದುದ ರಿಂದ ಅದು ಅಭೀಷ್ಟ ಸಾಧಕವಾಗಿರುತ್ತದೆ. ಆದುದರಿಂದ ಈ ಉತ್ಕೃಷ್ಟ ಅಗ್ನಿಯ ಹೆಸರು 'ಸ್ವಿಷ್ಟಕೃತ್' ಆಗಿದೆ. ಈ ಅಗ್ನಿಯನ್ನು ಬೃಹ ಸ್ಪತಿಯ ಆರನೆಯ ಮಗನೆಂದು ತಿಳಿಯಬೇಕು (ವನ 219/21).

(2) ಮನುವಿನ ದ್ವಿತೀಯ ಪುತ್ರ ವಿಶ್ವಪತಿಯೆಂಬ ಅಗ್ನಿ. ಮನುವಿನ ಕನ್ಯೆ ರೋಹಿಣಿ ಕೂಡಾ ಸ್ವಿಷ್ಟಕೃತ್ ಎಂದು ತಿಳಿಯಲ್ಪಡುತ್ತಾಳೆ. ಇವನ ಪ್ರಭಾವದಿಂದಲೇ, ಹವಿಸ್ಸಿನ ಸೌಂದರ್ಯದಿಂದ ಆಹುತಿಕ್ರಿಯೆಯು ಚೆನ್ನಾಗಿ ನೆರವೇರುತ್ತದೆ. ಆದುದರಿಂದ ಈತ 'ಸ್ವಿಷ್ಟಕೃತ್' ಎಂದು ಹೇಳಲ್ಪಡುತ್ತಾನೆ (ವನ 221/17–18).

# ಹ

**ಹಂಸ** – (1) ಒಂದು ಶ್ರೇಷ್ಠ ಪಕ್ಷಿ. ಕಶ್ಯಪ ಪತ್ನಿ ತಾಮ್ರಾ ದೇವಿಯ ಪುತ್ರಿ ಧೃತರಾಷ್ಟ್ರಿಯಿಂದ ಹಂಸಗಳ ಜನನವಾಗಿತ್ತು (ಆದಿ 66/56–58). ಸುವರ್ಣಮಯ ರೆಕ್ಕೆಗಳಿಂದ ಭೂಷಿತವಾದ ಒಂದು ಹಂಸ. ನಳ ಮತ್ತು ದಮಯಂತಿಯರ ಹತ್ತಿರ, ಪರಸ್ಪರರ ಸಂದೇಶವನ್ನು ತಲುಪಿಸಿ, ಅವರಲ್ಲಿ ಅನುರಾಗವನ್ನು ಹುಟ್ಟಿಸಿತ್ತು (ವನ 53/19–32). ಸಪ್ತರ್ಷಿಗಳು ಹಂಸರೂಪಧಾರಣೆ ಮಾಡಿ, ಭೀಷ್ಮನ ಹತ್ತಿರ ಬಂದು, ಆತ ದಕ್ಷಿಣಾಯನದಲ್ಲಿ ಪ್ರಾಣತ್ಯಾಗಮಾಡದಂತೆ ತಡೆದಿದ್ದರು (ಭೀಷ್ಮ 119/102). ಒಂದು ಹಂಸ ಮತ್ತು ಕಾಗೆಯ ಉಪಾಖ್ಯಾನ (ಕರ್ಣ 41/14–70).

(2) ಜರಾಸಂಧನ ಒಬ್ಬ ಮಂತ್ರಿ, ಇವನು ಡಿಂಭಕನ ಸಹೋದರ. ಯಾವುದೇ ಅಸ್ತ್ರ ಶಸ್ತ್ರಗಳಿಂದ ಮರಣಹೊಂದದಂತೆ, ದೇವತೆಗಳಿಂದ ಈತನಿಗೆ ವರಪ್ರಾಪ್ತವಾಗಿತ್ತು (ಸಭಾ 14/37). ಇವನು ತನ್ನ ಸಹೋದರನಾದ ಡಿಂಭಕನ ಮರಣವಾರ್ತೆಯನ್ನು ಕೇಳಿ, ಯಮುನೆಗೆ ಹಾರಿದನು; ಮತ್ತು ಸತ್ತುಹೋದನು (ಸಭಾ 14/42). ಜರಾಸಂಧನಿಗೆ ಸಲಹೆ ನೀಡಲು, ಈ ಇಬ್ಬರು ಸಹೋದರರರೇ ನೀತಿ ನಿಪುಣ ಮಂತ್ರಿಗಳಾಗಿದ್ದರು (ಸಭಾ 19/26). ಭೀಮಸೇನನೊಂದಿಗೆ ಯುದ್ಧದ ನಿಶ್ಚಯವಾದಾಗ, ಅವನು ಈ ಇಬ್ಬರೂ ಸ್ವರ್ಗೀಯ ಮಂತ್ರಿಗಳಾದ ಕೌಶಿಕ ಮತ್ತು ಚಿತ್ರಸೇನರ – ಹಂಸ ಮತ್ತು ಡಿಂಭಕರ ಸ್ಮರಣೆ ಮಾಡಿದ್ದನು (ಸಭಾ 22/32).

(3) ಜರಾಸಂಧನ ಸೇನೆಯ ಒಬ್ಬ ರಾಜ. ಇವನು ಹದಿನೇಳನೆಯ ಬಾರಿಯ ಯುದ್ಧದಲ್ಲಿ ಬಲರಾಮನಿಂದ ಹೊಡೆಯಲ್ಪಟ್ಟಿದ್ದನು (ಸಭಾ 14/40).

**ಹಂಸಕಾಯನ** – ಕ್ಷತ್ರಿಯರ ಒಂದು ಜಾತಿ. ಈ ಜಾತಿಯ ಉತ್ತಮ ಕುಲೋತ್ಪನ್ನ ಕ್ಷತ್ರಿಯರು ಕಾಣಿಕೆ ತೆಗೆದುಕೊಂಡು ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಬಂದಿದ್ದರು (ಸಭಾ 52/14).

**ಹಂಸಕೂಟ** – ಒಂದು ಪರ್ವತ. ಪತ್ನಿಯರೊಂದಿಗೆ ಪಾಂಡು ಇಲ್ಲಿಗೆ ಬಂದಿದ್ದನು. ಇದನ್ನು ದಾಟಿ ಅವರು ಶತಶೃಂಗ ಪರ್ವತದ ಮೇಲೆ ತಲುಪಿದ್ದರು (ಆದಿ 118/50). ಈ ಪರ್ವತದ ಶಿಖರವನ್ನು ಶ್ರೀಕೃಷ್ಣನು ದ್ವಾರಕಾ ನಗರದಲ್ಲಿ ಸ್ಥಾಪಿಸಿದ್ದನು. ಅದು ಅರುವತ್ತು ತಾಳೆ ಮರದಷ್ಟು ಎತ್ತರ ಮತ್ತು ಅರ್ಧ ಯೋಜನದಷ್ಟು ಅಗಲವಾಗಿತ್ತು (ಸಭಾ 38/29).

**ಹಂಸಚೂಡ** – ಒಬ್ಬ ಯಕ್ಷ. ಇವನು ಕುಬೇರನ ಸೇವೆಗಾಗಿ ಅವನ ಸಭೆಯಲ್ಲಿರುತ್ತಾನೆ (ಸಭಾ 10/17).

**ಹಂಸಜ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/68).

**ಹಂಸಪಥ** – ಒಂದು ದೇಶ. ಇಲ್ಲಿರುವ ಸೈನಿಕರು ದ್ರೋಣನಿರ್ಮಿತ ಗರುಡವ್ಯೂಹದ ಕುತ್ತಿಗೆಯ ಭಾಗದಲ್ಲಿ ನಿಂತಿದ್ದರು (ದ್ರೋಣ 20/7).

**ಹಂಸಪ್ರಪತನ ತೀರ್ಥ** – ಪ್ರಯಾಗದಲ್ಲಿರುವ ಒಂದು ಲೋಕವಿಖ್ಯಾತ ತೀರ್ಥ. ಇದು ಗಂಗಾ ತಟದಲ್ಲಿದೆ (ವನ 85/87).

**ಹಂಸವಕ್ತ್ರ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/75).

**ಹಂಸಿಕಾ** – ಸುರಭಿಯ ಪುತ್ರಿ. ಈಕೆ ದಕ್ಷಿಣ ದಿಕ್ಕನ್ನು ಧಾರಣೆ ಮಾಡುವವಳಾಗಿದ್ದಾಳೆ (ಉದ್ಯೋಗ 102/7–8).

**ಹಂಸೀ** – ರಾಜರ್ಷಿ ಭಗೀರಥನ ಒಬ್ಬ ಕೀರ್ತಿಶಾಲಿ ಕನ್ಯೆ. ಅವನು ಈಕೆಯನ್ನು ಕಾತ್ಸ ಋಷಿಯ ಕೈಗಿತ್ತನು (ಅನು 137/26).

**ಹನುಮಾನ್** – (ಕೇಸರಿಯ ಪತ್ನಿ ಅಂಜನೆಯ ಗರ್ಭದಿಂದ, ವಾಯುವಿನ ಮೂಲಕ ಹುಟ್ಟಿದ ಮಹಾವೀರನಾದ ಮಾರುತಿ.) ಇವನು ಕದಲೀ ವನದಲ್ಲಿ ಭೀಮಸೇನನ ಮಾರ್ಗವನ್ನು ತಡೆದು ಮಲಗಿದುದು (ವನ 146/66–67). ಭೀಮಸೇನನೊಂದಿಗೆ ಇವನ ಸಂವಾದ (ವನ ಅಧ್ಯಾಯ 147ರಿಂದ 150ರ ತನಕ). ಇವನು ಭೀಮಸೇನನಿಗೆ ಶ್ರೀರಾಮನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸಿದುದು (ವನ 148 ಅಧ್ಯಾಯ). ಇವನಿಂದ ಚತುರ್ಯುಗ ಧರ್ಮದ ವರ್ಣನೆ (ವನ 148 ಅಧ್ಯಾಯ). ಇವನು ಭೀಮಸೇನನಿಗೆ ತನ್ನ ವಿಶಾಲರೂಪ ತೋರಿಸಿದುದು (ವನ 150/3–4). ಇವನಿಂದ ಚತುರ್ವರ್ಣ ಧರ್ಮದ ಪ್ರತಿಪಾದನೆ (ವನ 150/30–36). ಇವನಿಂದ ರಾಜಧರ್ಮದ ವರ್ಣನೆ

(ವನ 150/37–49). ಇವನು ಭೀಮಸೇನನ ಸಿಂಹನಾದವನ್ನು ತನ್ನ ಗರ್ಜನೆಯಿಂದ ಹೆಚ್ಚಿಸುವ, ಅರ್ಜುನನ ಧ್ವಜದ ಮೇಲೆ ಕುಳಿತು ತನ್ನ ಭೀಷಣ ಗರ್ಜನೆಯಿಂದ ಶತ್ರುಗಳನ್ನು ಹೆದರಿಸುವ ಆಶ್ವಾಸನೆಯನ್ನಿತ್ತು ಅಂತರ್ಧಾನನಾದುದು (ವನ 151/16–19). ಇವನು ಲಂಕೆಯಿಂದ ಹಿಂತಿರುಗಿ, ಶ್ರೀರಾಮನೊಡನೆ ಸೀತೆಯ ಸಮಾಚಾರ ಹೇಳಿದುದು (ವನ 282/17–57). ಇವನಿಂದ ಧೂಮ್ರಾಕ್ಷನ ವಧೆ (ವನ 286/14). ಇವನಿಂದ ವಜ್ರವೇಗನ ವಧೆ (ವನ 287/26). ಇವನು ದೂತನಾಗಿ ಭರತನ ಬಳಿಗೆ ಹೋದುದು ಮತ್ತು ಹಿಂತಿರುಗಿ ಶ್ರೀರಾಮನಿಗೆ ಈ ಕುರಿತು ಸೂಚನೆ ನೀಡಿದುದು (ವನ 291/61–62).

**ಹನ್ಯಮಾನ** – ದಕ್ಷಿಣ ಭಾರತದ ಒಂದು ಜನಪದ (ಭೀಷ್ಮ 9/69).

**ಹಯಗ್ರೀವ** – (1) ನರಕಾಸುರನ ರಾಜ್ಯರಕ್ಷಣೆ ಮಾಡುತ್ತಿದ್ದ ನಾಲ್ಕು ಅಸುರರಲ್ಲಿ ಒಬ್ಬ. ಶ್ರೀಕೃಷ್ಣನಿಂದಲೇ ಇವನ ವಧೆಯಾಗಬೇಕಾಗಿತ್ತು (ಸಭಾ 38/29). ಶ್ರೀಕೃಷ್ಣನಿಂದ ಹಯಗ್ರೀವನು ಕೊಲ್ಲಲ್ಪಟ್ಟ ವರ್ಣನೆ (ಉದ್ಯೋಗ 130/50).

(2) ವಿದೇಹವಂಶದ ಒಬ್ಬ ಕುಲಗೇಡಿ ರಾಜ (ಉದ್ಯೋಗ 74/15).

(3) ಒಬ್ಬ ಪ್ರಾಚೀನ ರಾಜರ್ಷಿ. ಇವನು ಶತ್ರುಗಳನ್ನು ಗೆದ್ದಿದ್ದನು. ಆದರೆ ಅನಂತರ ಅಸಹಾಯನಾಗಿ ಕೊಲ್ಲಲ್ಪಟ್ಟನು. ಇವನು ಯುದ್ಧದಿಂದ ಉತ್ತಮ ಕೀರ್ತಿ ಪಡೆದನು. ಈಗ ಸ್ವರ್ಗದಲ್ಲಿ ಆನಂದವನ್ನನುಭವಿಸುತ್ತಿದ್ದಾನೆ. ಇವನ ವಿಶೇಷ ವರ್ಣನೆ (ಶಾಂತಿ 24/23–34).

**ಹಯಜ್ಞಾನ** – ಅಶ್ವ ಸಂಚಾಲನೆಯ ಒಂದು ವಿದ್ಯೆ. ಇದರಿಂದ ಕುದುರೆಗಳ ಗತಿಯನ್ನು ಬಹಳ ಹೆಚ್ಚು ವೃದ್ಧಿಪಡಿಸಲಾಗುತ್ತದೆ. ಮತ್ತು ಅವುಗಳ ಗುಣದೋಷ ಕೂಡಾ ತಿಳಿಯಲ್ಪಡುತ್ತದೆ (ವನ 77/17).

**ಹಯಶಿರಾ** – (ಹಯಗ್ರೀವ). ಭಗವಂತನ ಒಂದು ಅವತಾರ. ಇದರ ವಿಶೇಷ ವರ್ಣನೆ (ಶಾಂತಿ 347 ಅಧ್ಯಾಯ).

**ಹರ** – (1) ಒಬ್ಬ ವಿಖ್ಯಾತ ದಾನವ. ಇವನು ದನುವಿನ ಗರ್ಭದಿಂದ ಕಶ್ಯಪನ ಮೂಲಕ ಜನಿಸಿದ್ದನು (ಆದಿ 65/25). ಇವನು ರಾಜಾ ಸುಬಾಹುವಿನ ರೂಪದಲ್ಲಿ ಈ ಭೂಮಿಯಲ್ಲಿ ಹುಟ್ಟಿದ್ದನು (ಆದಿ 67/23–24).

(2) ಮಹಾದೇವ. ಇವನು ಸ್ಕಂದನ ಅಭಿಷೇಕಕ್ಕೆ ಆಗಮಿಸಿದ್ದನು (ಶಲ್ಯ 45/10). 'ಹರ' ಏಕಾದಶ ರುದ್ರರಲ್ಲಿ ಒಬ್ಬನಾಗಿದ್ದಾನೆ (ಶಾಂತಿ 208/19).

**ಹರಣಾಹರಣಪರ್ವ** – ಆದಿಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 220).

**ಹರಿ** – (1) ರಾವಣನ ಸೇವೆಯಲ್ಲಿರುವ ಪಿಶಾಚ ಮತ್ತು ಅಧಮ ರಾಕ್ಷಸರ ಒಂದು ದಳ. ಇವರು ವಾನರ ಸೇನೆಯ ಮೇಲೆ ದಾಳಿ ಮಾಡಿದ್ದರು (ವನ 285/1–2).

(2) ಗರುಡನ ಮಹಾಬಲಶಾಲಿ, ಕೀರ್ತಿಶಾಲಿ ವಂಶಜರಲ್ಲಿ ಒಬ್ಬ (ಉದ್ಯೋಗ 101/13).

(3) ಕುದುರೆಗಳ ಒಂದು ಭೇದ. ಇವುಗಳ ಕುತ್ತಿಗೆಯ ದೊಡ್ಡ ದೊಡ್ಡ ಕೂದಲುಗಳು ಮತ್ತು ಶರೀರದ ರೋಮಗಳು ಬಂಗಾರದ ವರ್ಣದವುಗಳಾಗಿರುತ್ತವೆ. ಇವು ಬಣ್ಣದಲ್ಲಿ ರೇಶ್ಮೆಯ ಪೀತಾಂಬರದಂತೆ ಕಾಣಿಸುತ್ತವೆ. ಇಂತಹ ಕುದುರೆಗಳು ಹರಿ ಎಂದು ಕರೆಯಲ್ಪಡುತ್ತವೆ (ದ್ರೋಣ 23/13).

(4) ರಾಜಾ ಅಕಂಪನನ ಪುತ್ರ. ಇವನು ಶಕ್ತಿಯಲ್ಲಿ ಭಗವಾನ್ ನಾರಾಯಣನಿಗೆ ಸಮಾನನಾಗಿದ್ದನು. ಅಸ್ತ್ರವಿದ್ಯಾ ಪಾರಂಗತನಾಗಿದ್ದನು. ಮೇಧಾವಿಯೂ, ಶ್ರೀಸಂಪನ್ನನೂ, ಯುದ್ಧದಲ್ಲಿ ಇಂದ್ರನಿಗೆ ಸಮಾನ ಪರಾಕ್ರಮಿಯೂ ಆಗಿದ್ದನು. ಇವನು ಯುದ್ಧಕ್ಷೇತ್ರದಲ್ಲಿ ಶತ್ರುಗಳಿಂದ ಕೊಲ್ಲಲ್ಪಟ್ಟನು (ದ್ರೋಣ 52/27–29). ಇವನ ಮೃತ್ಯುವಿನ ವರ್ಣನೆ (ಶಾಂತಿ 256/8).

(5) ಒಬ್ಬ ಅಸುರ. ಇವನು ತಾರಕಾಕ್ಷನ ಬಲವಂತನಾದ ಪುತ್ರನಾಗಿದ್ದನು. ಇವನು ತಪಸ್ಸಿನಿಂದ ಬ್ರಹ್ಮನನ್ನು ಪ್ರಸನ್ನಗೊಳಿಸಿ, ಅವನಿಂದ ವರಪಡೆದು, ತ್ರಿಪುರಗಳಲ್ಲಿಯೂ ಮೃತ ಸಂಜೀವನೀ ಬಾವಿಯನ್ನು ನಿರ್ಮಾಣ ಮಾಡಿದ್ದನು (ಕರ್ಣ 33/27–30).

(6) ಪಾಂಡವ ಪಕ್ಷದ ಒಬ್ಬ ಯೋಧ. ಇವನು ಕರ್ಣನಿಂದ ಕೊಲ್ಲಲ್ಪಟ್ಟನು (ಕರ್ಣ 56/49–50).

(7) ಸ್ಕಂದನ ಒಬ್ಬ ಸೈನಿಕ (ಶಲ್ಯ 45/61).

(8) ಶ್ರೀಕೃಷ್ಣನ ಒಂದು ಹೆಸರು. ಈ ಹೆಸರಿನ ಅರ್ಥ (ಶಾಂತಿ 342/68).

**ಹರಿಣ** – (1) ಐರಾವತ ಕುಲದಲ್ಲಿ ಹುಟ್ಟಿದ

ಒಬ್ಬ ನಾಗ. ಈತ ಜನಮೇಜಯನ ಸರ್ಪ ಸತ್ರದಲ್ಲಿ ದಗ್ಧನಾದನು (ಆದಿ 57/11-12).

(2) ಬಿಡಾಲೋಪಾಖ್ಯಾನದಲ್ಲಿ ಬಂದ ಮುಂಗುಸಿಯ ಹೆಸರು (ಶಾಂತಿ 138/31).

**ಹರಿಣಾಶ್ವ** – ಒಬ್ಬ ಪ್ರಾಚೀನ ರಾಜ. ಇವನಿಗೆ ಮಹಾರಾಜ ರಘುವಿನಿಂದ ಖಡ್ಗಪ್ರಾಪ್ತವಾಗಿತ್ತು ಮತ್ತು ಈತ ಆ ಖಡ್ಗವನ್ನು ಶುನಕನಿಗೆ ಕೊಟ್ಟಿದ್ದನು (ಶಾಂತಿ 166/78-79).

**ಹರಿತಾಲ** – ಪರ್ವತದ ಒಂದು ಧಾತು. ಇದು ಸಂಧ್ಯಾಕಾಲದ ಮೋಡಗಳಂತೆ ಕೆಂಪು ಬಣ್ಣದ್ದಾಗಿದೆ (ವನ 158/94).

**ಹರಿದ್ರಕ** – ಕಶ್ಯಪ ವಂಶದಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗರಾಜ (ಆದಿ 35/12).

**ಹರಿಪಿಂಡಾ** – ಸ್ಕಂದನ ಅನುಚರಿ ಒಬ್ಬ ಮಾತೃಕೆ (ಶಲ್ಯ 46/24).

**ಹರಿಮೇಧಾ** – ಒಬ್ಬ ಪ್ರಾಚೀನ ರಾಜರ್ಷಿ. ಇವನ ಯಜ್ಞಕ್ಕೆ ಸಮಾನವಾದುದು ಜನಮೇಜಯನ ಯಜ್ಞವೆಂದು ಹೇಳಲಾಗಿದೆ (ಆದಿ 55/3). ಇವನ ಮಗಳ ಹೆಸರು ಧ್ವಜವಂತೀ ಎಂದಾಗಿತ್ತು. ಅವಳು ಪಶ್ಚಿಮದಿಕ್ಕಿನಲ್ಲಿ ವಾಸಿಸುತ್ತಿದ್ದಳು (ಉದ್ಯೋಗ 110/13).

**ಹರಿಬಭ್ರು** – ಒಬ್ಬ ಜಿತಾತ್ಮಾ ಮತ್ತು ಜಿತೇಂದ್ರಿಯ ಮುನಿ. ಇವನು ಯುಧಿಷ್ಠಿರನ ಸಭೆಯಲ್ಲಿರುತ್ತಿದ್ದನು (ಸಭಾ 4/16).

**ಹರಿವರ್ಷ** – ಹೇಮಕೂಟ ಪರ್ವತದ ಉತ್ತರದಲ್ಲಿರುವ ಒಂದು ದೇಶ. ಉತ್ತರ ದಿಗ್ವಿಜಯ ಕಾಲದಲ್ಲಿ ಅರ್ಜುನ ಇಲ್ಲಿಗೆ ಹೋಗಿದ್ದನು ಮತ್ತು ಅದನ್ನು ಸ್ವಾಧೀನಪಡಿಸಿ, ತುಂಬಾ ರತ್ನಗಳನ್ನು ಪಡಕೊಂಡಿದ್ದನು (ಸಭಾ 28/6).

**ಹರಿಶ್ಚಂದ್ರ** – ಇಕ್ಷ್ವಾಕುವಂಶದ ರಾಜಾ ತ್ರಿಶಂಕುವಿನ ಮಗ. ಇವನ ತಾಯಿಯ ಹೆಸರು ಸತ್ಯವತಿ (ಸಭಾ 12/10). ಇವನು ಇಂದ್ರಸಭೆಯಲ್ಲಿ ಗೌರವದಿಂದಿರುತ್ತಾನೆ (ಸಭಾ 7/13). ಇವನು ದೊಡ್ಡ ಬಲವಂತನೂ, ಸಮಸ್ತ ಭೂಪಾಲರಿಗೆ ಸಮ್ರಾಟನೂ ಆಗಿದ್ದನು. ಭೂಮಂಡಲದ ಎಲ್ಲಾ ರಾಜರು ಇವನ ಆಜ್ಞಾಪಾಲನೆಗಾಗಿ ತಲೆತಗ್ಗಿಸಿ ನಿಂತಿರುತ್ತಿದ್ದರು. ಇವನು ತನ್ನ ಏಕೈಕ ರಥವಾದ ಜೈತ್ರದ ಮೇಲೆ ಕುಳಿತು, ತನ್ನ ಶಸ್ತ್ರಗಳ ಪ್ರತಾಪದಿಂದ, ಸಪ್ತ ದ್ವೀಪಗಳ ಮೇಲೂ ವಿಜಯಪ್ರಾಪ್ತಿಸಿಕೊಂಡಿದ್ದನು. ಇವನು ರಾಜಸೂಯವೆಂಬ ಯಜ್ಞವನ್ನು ಸಾಂಗಗೊಳಿಸಿದ್ದನು. ಇವನು ಯಾಚಕರು ಬೇಡಿದಾಗ, ಅವರ ಬೇಡಿಕೆಯ ಐದುಪಟ್ಟು ಅಧಿಕ ಧನವನ್ನು ದಾನ ಮಾಡಿದ್ದನು. ಬ್ರಾಹ್ಮಣರಿಗೆ ಧನರತ್ನಗಳನ್ನಿತ್ತು ಸಂತುಷ್ಟಗೊಳಿಸಿದ್ದನು. ಆದುದರಿಂದಲೇ ಈತ ಅನ್ಯರಾಜರಿಗಿಂತ ಅಧಿಕ ತೇಜಸ್ವಿಯೂ, ಯಶಸ್ವಿಯೂ ಆಗಿದ್ದಾನೆ. ಮಾತ್ರವಲ್ಲ ಅಧಿಕ ಗೌರವಪೂರ್ವಕವಾಗಿ ಇಂದ್ರ ಸಭೆಯಲ್ಲಿ ವಿರಾಜಮಾನನಾಗಿದ್ದಾನೆ (ಸಭಾ 12/11-18). ಇವನ ವೈಭವವನ್ನು ನೋಡಿ, ಚಕಿತನಾಗಿ, ಸ್ವರ್ಗೀಯನಾಗಿದ್ದ ರಾಜಾ ಪಾಂಡು, ನಾರದನ ಮೂಲಕ, ಯುಧಿಷ್ಠಿರನಿಗೆ ರಾಜಸೂಯಧ್ವರ ಮಾಡುವಂತೆ ಸಂದೇಶ ಕಳುಹಿಸಿದ್ದನು (ಸಭಾ 12/23-26). ಇವನಿಂದ ಮಾಂಸಭಕ್ಷಣ ನಿಷೇಧ (ಅನು 115/61). ಇವನು ಸಾಯಂಪ್ರಾತಃಸ್ಮರಣೀಯ ರಾಜನಾಗಿದ್ದಾನೆ (ಅನು 165/52).

**ಹರಿಶ್ರಾವಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/28).

**ಹರೀ** – ಕ್ರೋಧವಶೆಯ ಪುತ್ರಿ. ಈಕೆ ವೇಗವಂತ ಕುದುರೆಗಳಿಗೂ ವಾನರರಿಗೂ ಜನ್ಮನೀಡಿದ್ದಳು. ಮತ್ತು ದನದಂತೆ ಬಾಲವುಳ್ಳ ಮಂಗಗಳೂ ಈಕೆಯ ಪುತ್ರರೆಂದೇ ಹೇಳಲಾಗಿದೆ (ಆದಿ 66/60, 64).

**ಹರ್ಯಶ್ವ** – (1) ಅಯೋಧ್ಯೆಯ ರಾಜ. ಈತ ಮಹಾಪರಾಕ್ರಮಿ, ಚತುರಂಗ ಸೇನಾಸಂಪನ್ನ, ಕೋಶ, ಧನ-ಧಾನ್ಯ ಸಂಪನ್ನ ಮತ್ತು ಸೈನಿಕ ಶಕ್ತಿಯಿಂದ ಸಮೃದ್ಧನಾಗಿದ್ದನು. ಪ್ರಜೆಗಳು ಈತನಿಗೆ ಪ್ರೀತಿಪಾತ್ರರಾಗಿದ್ದರು. ಬ್ರಾಹ್ಮಣರ ಮೇಲೆ ಇವನಿಗೆ ಪ್ರೇಮವಿತ್ತು. ಇವನು ಪ್ರಜೆಗಳ ಹಿತ ಬಯಸುವವನೂ, ಸಂತಾನದ ಕಾಮನೆಯುಳ್ಳವನೂ ಆಗಿದ್ದನು. ಈತ ಶಾಂತಭಾವದಿಂದ ತಪಸ್ಸಿನಲ್ಲಿ ಮಗ್ನನಾಗಿರುತ್ತಿದ್ದನು (ಉದ್ಯೋಗ 115/18-19). ಇವನ ಬಳಿಗೆ ಯಯಾತಿಯ ಕನ್ಯೆಯೊಂದಿಗೆ ಗಾಲವನ ಆಗಮನ (ಉದ್ಯೋಗ 115/20-21). ಗಾಲವನಿಗೆ ಶುಲ್ಕರೂಪದಲ್ಲಿ, ಇನ್ನೂರು ಕಿವಿಕಪ್ಪಾದ ಕುದುರೆಗಳನ್ನು ಕೊಟ್ಟು, ಇವನು ಯಯಾತಿ ಕನ್ಯೆ ಮಾಧವಿಯನ್ನು

ಒಂದು ಸಂತಾನ ಪಡೆಯುವುದಕ್ಕಾಗಿ ಪತ್ನಿಯಾಗಿ ಮಾಡಿಕೊಂಡದ್ದು ಮತ್ತು ಮಾಧವಿಯ ಗರ್ಭದಿಂದ ವಸುಮನ ಎಂಬ ಪುತ್ರನ ಪ್ರಾಪ್ತಿ (ಉದ್ಯೋಗ 116/16–17). ಪುತ್ರೋತ್ಪತ್ತಿಯ ಅನಂತರ ಪುನಃ ಮಾಧವಿಯನ್ನು ಗಾಲವ ಮುನಿಗೆ ಹಿಂತಿರುಗಿಸಿದುದು (ಉದ್ಯೋಗ 116/20). ಇವನು ಜೀವನದಲ್ಲಿ ಎಂದೂ ಮಾಂಸ ತಿಂದಿರಲಿಲ್ಲ (ಅನು 115/67).

(2) ಕಾಶೀರಾಜ ಸುದೇವನ ತಂದೆ. ಇವನು ವೀತಹವ್ಯನ ಪುತ್ರರಿಂದ ಕೊಲ್ಲಲ್ಪಟ್ಟನು (ಅನು 30/10–11).

**ಹರ್ಷ** – ಧರ್ಮನ ಮೂವರು ಶ್ರೇಷ್ಠ ಪುತ್ರರಲ್ಲಿ ಒಬ್ಬ. ಉಳಿದ ಇಬ್ಬರ ಹೆಸರು ಶಮ ಮತ್ತು ಕಾಮ. ಹರ್ಷನ ಪತ್ನಿಯ ಹೆಸರು ನಂದಾ ಎಂದಾಗಿದೆ (ಆದಿ 66/32–33).

**ಹಲಧರ** – ಬಲರಾಮನ ಒಂದು ಹೆಸರು (ನೋಡಿರಿ–ಬಲದೇವ).

**ಹಲಿಕ** – ಕಶ್ಯಪವಂಶದಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗರಾಜ (ಆದಿ 35/15).

**ಹಲಿಮಾ** – ಶಿಶುವಿನ ಸಪ್ತಮಾತೃಕೆಗಳಲ್ಲಿ ಒಬ್ಬಳು (ವನ 228/10).

**ಹಲೀಮಕ** – ವಾಸುಕಿ ಕುಲೋತ್ಪನ್ನನಾದ ಒಬ್ಬ ನಾಗ. ಇವನು ಜನಮೇಜಯನ ಸರ್ಪಸತ್ರದಲ್ಲಿ ಉರಿದುಹೋಗಿದ್ದನು (ಆದಿ 57/5).

**ಹವನ** – ಏಕಾದಶ ರುದ್ರರಲ್ಲಿ ಒಬ್ಬ (ಅನು 150/13).

**ಹವಿಘ್ನ** – ಒಬ್ಬ ಪ್ರಾಚೀನ ರಾಜ. ಅವನ ಹೆಸರು ಸಾಯಂಪ್ರಾತಃ ಸ್ಮರಣೀಯವಾಗಿದೆ (ಅನು 165/58).

**ಹವಿರ್ಧಾಮಾ** – ಮನುವಂಶದ ಅಂತರ್ಧಾಮಾ ಎಂಬವನ ಪುತ್ರ. ಇವನ ಪುತ್ರ ಪ್ರಾಚೀನ ಬರ್ಹಿ ಎಂಬ ಹೆಸರಿನಿಂದ ಜನಿಸುವನು (ಅನು 147/24).

**ಹವಿಃಶ್ರವಾ** – ಚಂದ್ರವಂಶದ ಮಹಾರಾಜ ಕುರುವಿನ ವಂಶದ ಧೃತರಾಷ್ಟ್ರನ ಪುತ್ರ (ಆದಿ 94/59).

**ಹವಿಷ್ಮತೀ** – ಅಂಗೀರಸ ಮಹರ್ಷಿಯ ಐದನೆಯ ಪುತ್ರಿ. ಈಕೆಯ ಸಾನ್ನಿಧ್ಯದಲ್ಲಿ ಹವಿಸ್ಸಿನ ಮೂಲಕ ದೇವತೆಗಳಿಗೆ ಯಜ್ಞ ಮಾಡಲ್ಪಡುತ್ತದೆ (ವನ 218/6).

**ಹವಿಷ್ಮಾನ್** – ಒಬ್ಬ ಪ್ರಾಚೀನ ಮಹರ್ಷಿ. ಇವನು ಇಂದ್ರಸಭೆಯಲ್ಲಿರುತ್ತಾ ಆತನ ಉಪಾಸನೆ ಮಾಡುತ್ತಾನೆ (ಸಭಾ 7/13).

**ಹಸನ** – ಸ್ಕಂದನ ಒಬ್ಬ ಸೈನಿಕ (ಶಲ್ಯ 45/67).

**ಹಸ್ತಿಕಶ್ಯಪ** – ಒಬ್ಬ ಪ್ರಾಚೀನ ಋಷಿ. ಇವನು ಪರ್ವತದ ಮೇಲೆ ತಪಸ್ಸುಮಾಡುತ್ತಿದ್ದಾಗ ಶ್ರೀಕೃಷ್ಣನ ಬಳಿಗೆ ಹೋಗುತ್ತಿದ್ದನು (ಅನು 139/11). ಇವನು ಉತ್ತರ ದಿಕ್ಕಿನ ನಿವಾಸಿಯಾಗಿದ್ದಾನೆ (ಅನು 165/46).

**ಹಸ್ತಿಪದ** – ಕಶ್ಯಪ ವಂಶದಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗರಾಜ (ಆದಿ 35/9).

**ಹಸ್ತಿಪಿಂಡ** – ಕಶ್ಯಪ ವಂಶದಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗರಾಜ (ಆದಿ 35/14).

**ಹಸ್ತಿಭದ್ರ** – ಕಶ್ಯಪ ವಂಶದಲ್ಲಿ ಹುಟ್ಟಿದ ಒಬ್ಬ ನಾಗ (ಉದ್ಯೋಗ 103/13).

**ಹಸ್ತಿಸೋಮಾ** – ಭಾರತವರ್ಷದ ಒಂದು ನದಿ. ಇದರ ನೀರನ್ನು ಭಾರತವಾಸಿಗಳು ಕುಡಿಯುತ್ತಾರೆ (ಭೀಷ್ಮ 9/19).

**ಹಸ್ತೀ** – (1) ಸೋಮವಂಶದ ಮಹಾರಾಜ ಕುರುವಿನ ವಂಶಜ ಧೃತರಾಷ್ಟ್ರನ ಮಗ (ಆದಿ 94/58).

(2) ಚಂದ್ರವಂಶದ ರಾಜಾ ಸುಹೋತ್ರನ ಮಗ. ಇವನ ತಾಯಿ ಇಕ್ಷ್ವಾಕುವಂಶದ ಸುವರ್ಣಾ ಆಗಿದ್ದಳು. ಇವನ ಪತ್ನಿ ತ್ರಿಗರ್ತರಾಜಪುತ್ರಿ ಯಶೋಧರೆಯಾಗಿದ್ದಳು. ಹಸ್ತಿನಾಪುರವನ್ನು ಇವನೇ ಸ್ಥಾಪಿಸಿದ್ದನು (ಆದಿ 95/34–35).

**ಹಾಟಕ** – ಹಿಮಾಲಯದ ಉತ್ತರಭಾಗದ ಒಂದು ದೇಶ. ಇದು ಗುಹ್ಯಕರ ನಿವಾಸ ಸ್ಥಾನವಾಗಿದೆ. ಉತ್ತರದಿಗ್ವಿಜಯದ ಸಂದರ್ಭದಲ್ಲಿ ಅರ್ಜುನ ಇಲ್ಲಿಗೆ ಹೋದನು ಮತ್ತು ಗುಹ್ಯಕರನ್ನು ಸಮಾಧಾನಪಡಿಸಿ, ತನ್ನ ಅಧೀನರನ್ನಾಗಿ ಮಾಡಿಕೊಂಡನು (ಸಭಾ 28/3–4).

**ಹಾರ** – ಒಂದು ದೇಶ. ಇಲ್ಲಿರುವ ರಾಜನನ್ನು ನಕುಲನು ಪಶ್ಚಿಮದಿಗ್ವಿಜಯ ಕಾಲದಲ್ಲಿ ಆಜ್ಞಾಮಾತ್ರದಿಂದಲೇ ತನ್ನ ಅಧೀನನಾಗಿ ಮಾಡಿಕೊಂಡನು (ಸಭಾ 32/12–13). ಈ ದೇಶದ ರಾಜ. ಯುಧಿಷ್ಠಿರನ ರಾಜಸೂಯಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದನು (ಸಭಾ 51/54).

**ಹಾರೀತ** – ಒಬ್ಬ ಪ್ರಾಚೀನ ಋಷಿ. ಇವನು ಯುಧಿಷ್ಠಿರನನ್ನು ವಿಶೇಷವಾಗಿ ಗೌರವಿಸುತ್ತಿದ್ದನು (ವನ 26/23). ಇವನು ಶರಶಯ್ಯೆಯಲ್ಲಿದ್ದ ಭೀಷ್ಮನನ್ನು ನೋಡಲು ಬಂದಿದ್ದನು (ಶಾಂತಿ 47/7). ಇವನ ಮೂಲಕ ಸನ್ಯಾಸಾಶ್ರಮದ ವರ್ಣನೆ (ಶಾಂತಿ 278 ಅಧ್ಯಾಯ).

**ಹಾರ್ದಿಕ್ಯ** – (1) ಅಶ್ವಪತಿ ಎಂಬ ದೈತ್ಯನ ಅಂಶದಿಂದ ಹುಟ್ಟಿದ ಒಬ್ಬ ಕ್ಷತ್ರಿಯ ರಾಜ (ಆದಿ 67/15). ಇವನಿಗೆ ಪಾಂಡವಪಕ್ಷದಿಂದ ಯುದ್ಧದ ಆಮಂತ್ರಣ ಕಳುಹಿಸುವ ನಿಶ್ಚಯ ಮಾಡಲ್ಪಟ್ಟಿತ್ತು (ಉದ್ಯೋಗ 4/12).

(2) ಯದುಕುಲದಲ್ಲಿ ಹುಟ್ಟಿದ ಹೃದೀಕನ ಮಗ ಕೃತವರ್ಮಾ. ಇವನು ರೈವತಕ ಪರ್ವತದ ಮೇಲೆ ಜರಗುತ್ತಿದ್ದ ಉತ್ಸವದಲ್ಲಿ ಭಾಗವಹಿಸಿದ್ದನು (ಆದಿ 218/11–12).

**ಹಾಸಿನೀ** – ಅಲಕಾಪುರದ ಒಬ್ಬ ಅಪ್ಸರೆ. ಇವಳು ಅಷ್ಟಾವಕ್ರನ ಸ್ವಾಗತ ಸಂದರ್ಭದಲ್ಲಿ, ಕುಬೇರ ಭವನದಲ್ಲಿ ನೃತ್ಯಮಾಡಿದ್ದಳು (ಅನು 19/45).

**ಹಾಸ್ತಿನಪುರ (ಹಸ್ತಿನಾಪುರ)** – ಗಂಗಾ ತಟದಲ್ಲಿ ನೆಲಸಿರುವ ಒಂದು ನಗರ. ಇದನ್ನು ಸುಹೋತ್ರನ ಪುತ್ರ ರಾಜಾಹಸ್ತಿಯು ಸ್ಥಾಪಿಸಿದ್ದನು. ಆದುದರಿಂದ ಇದರ ಹೆಸರು 'ಹಾಸ್ತಿನಪುರ'ವೆಂದಾಯಿತು (ಆದಿ 95/34). ಇದು ಕೌರವರ ರಮಣೀಯ ರಾಜಾಧಾನಿಯಾಗಿತ್ತು. ಇಲ್ಲಿ ಒಂದು ಕಾಲದಲ್ಲಿ ರಾಜಾ ಶಾಂತನು ರಾಜ್ಯಭಾರ ಮಾಡುತ್ತಿದ್ದನು (ಆದಿ 100/12). ಅಭಿಮನ್ಯು ಪುತ್ರ ಪರೀಕ್ಷಿತ ಇಲ್ಲಿಯೇ ರಾಜನಾಗಿ ಮಾಡಲ್ಪಟ್ಟನು (ಮಹಾ ಪ್ರ. 1/8). (ಆಧುನಿಕ ಅಭಿಪ್ರಾಯ ಪ್ರಕಾರ ಮೇರಠದಿಂದ 22ಮೈಲು ಈಶಾನ್ಯ ಮತ್ತು ಬಿಜನೌರಿನಿಂದ ನೈಋತ್ಯದಲ್ಲಿ ಗಂಗೆಯ ಎಡದಂಡೆಯಲ್ಲಿ ಈ ಸ್ಥಳವೆಂದು ತಿಳಿಯಲಾಗಿದೆ.)

**ಹಾಹಾ** – ಒಬ್ಬ ಶ್ರೇಷ್ಠ ಗಂಧರ್ವ. ಇವನು ಮಹರ್ಷಿ ಕಶ್ಯಪನಿಂದ ಪ್ರಾಧೆಯ ಗರ್ಭದಲ್ಲಿ ಜನ್ಮವೆತ್ತಿದ್ದನು (ಆದಿ 65/51; ವನ 43/14). ಇವನು ಅರ್ಜುನನ ಜನ್ಮಮಹೋತ್ಸವಕ್ಕೆ ಆಗಮಿಸಿದ್ದನು (ಆದಿ 122/59). ಇವನು ಕುಬೇರನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡುತ್ತಾನೆ (ಸಭಾ 10/25–27). ಇವನು ಇಂದ್ರಲೋಕದ ಸಭೆಯಲ್ಲಿ ಅರ್ಜುನನನ್ನು ಸ್ವಾಗತಿಸಿದ್ದನು (ವನ 43/14).

**ಹಿಂಗುಲ** – ಪರ್ವತದ ಒಂದು ಧಾತು. ಇದು ಸಂಧ್ಯಾಕಾಲದ ಮೋಡದಂತೆ ಕೆಂಬಣ್ಣದಿಂದ ಕೂಡಿರುತ್ತದೆ (ವನ 158/94).

**ಹಿಡಿಂಬ** – ಶಾಲವೃಕ್ಷದ ಮೇಲೆ ವಾಸಿಸುವ ಒಬ್ಬ ಕ್ರೂರ, ನರಮಾಂಸಭಕ್ಷಕ ರಾಕ್ಷಸ. ಇವನ ಮುಖ ತುಂಬಾ ಭಯಂಕರವಾಗಿತ್ತು (ಆದಿ 151/1–3). ನಿದ್ರಿಸಿದ್ದ ಪಾಂಡವರನ್ನು ನೋಡಿ ಇವನ ಸಂತೋಷ; ತನ್ನ ಸಹೋದರಿ ಹಿಡಿಂಬೆಗೆ ಅವರ ವಿಚಾರ ತಿಳಿಯಲು ಮತ್ತು ಅವರನ್ನು ಕೊಂದು ತರಲು ಈತನ ಆದೇಶ (ಆದಿ 151/7–14). ಹಿಡಿಂಬೆಯ ಮೇಲೆ ಈತನ ಕೋಪ (ಆದಿ 152/16–19). ಕೊಲ್ಲುವ ಇಚ್ಛೆಯಿಂದ ಪಾಂಡವರ ಮತ್ತು ಹಿಡಿಂಬೆಯ ಮೇಲೆ ಈತನ ಆಕ್ರಮಣ (ಆದಿ 152/20). ಭೀಮಸೇನನೊಂದಿಗೆ ಇವನ ವಿವಾದ ಮತ್ತು ಯುದ್ಧ (ಆದಿ 152/22–42). ಭೀಮಸೇನನಿಂದ ಈತನ ವಧೆ (ಆದಿ 153/30–32).

**ಹಿಡಿಂಬವಧಪರ್ವ** – ಆದಿ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 151 ರಿಂದ 155ರ ವರೆಗೆ).

**ಹಿಡಿಂಬವನ** – ಒಂದು ವನ. ಇಲ್ಲಿ ಹಿಡಿಂಬನೆಂಬ ರಾಕ್ಷಸ ವಾಸಿಸುತ್ತಿದ್ದನು (ವನ 12/93).

**ಹಿಡಿಂಬಾ** – ರಾಕ್ಷಸ ರಾಜ ಹಿಡಿಂಬನ ಸಹೋದರಿ; ಭೀಮಸೇನನ ಪತ್ನಿ ಮತ್ತು ಘಟೋತ್ಕಚನ ತಾಯಿ (ಆದಿ 61/25). ನಿದ್ರಿಸುತ್ತಿದ್ದ ಪಾಂಡವರನ್ನು ಕೊಂದು ತರಲು ಇವಳಿಗೆ ಹಿಡಿಂಬನ ಆಜ್ಞೆ (ಆದಿ 151/7–14). ಭೀಮಸೇನನ ರೂಪದಿಂದ ಮೋಹಿತಳಾಗಿ, ಆತನು ತನ್ನ ಪತಿಯಾಗುವಂತೆ ಈಕೆಯ ಪ್ರಾರ್ಥನೆ (ಆದಿ 151/17–29). ಇವನ ಮೇಲೆ ಹಿಡಿಂಬನ ಕೋಪ ಮತ್ತು ಈಕೆಯ ಭಯ (ಆದಿ 152/20). ಈಕೆ ಕುಂತಿಯೇ ಮೊದಲಾದವರೊಡನೆ ತನ್ನ ಮನೋಭಾವ ಪ್ರಕಟಿಸಿದುದು (ಆದಿ 153/5–12). ಭೀಮಸೇನನು ತನ್ನ ಪತಿಯಾಗಬೇಕೆಂದು ಕುಂತಿಯೊಡನೆ ಈಕೆಯ ಪ್ರಾರ್ಥನೆ (ಆದಿ 154/4–15). ಯುಧಿಷ್ಠಿರನು ಒಂದು ನಿಯಮ

ಪ್ರಕಾರ ಹಿಡಿಂಬೆಯು ಭೀಮಸೇನನ ಸೇವೆಯಲ್ಲಿರುವಂತೆ ಆದೇಶ ನೀಡಿದುದು (ಆದಿ 154/16-18). ಭೀಮಸೇನನು ಒಂದು ಶರ್ತ ಪ್ರಕಾರ ಅವಳೊಂದಿಗೆ ಹೋಗಲು ಸಿದ್ಧನಾದುದು (ಆದಿ 154/19-20). ಈಕೆ ಭೀಮಸೇನನನ್ನು ಕರಕೊಂಡು ಆಕಾಶದಲ್ಲಿ ಹಾರಿಹೋದುದು ಮತ್ತು ಪರಮ ಸುಂದರ ರೂಪಧರಿಸಿ, ರಮಣೀಯ ಪ್ರದೇಶಗಳಲ್ಲಿ ಅವನೊಂದಿಗೆ ವಿಹರಿಸಿದುದು (ಆದಿ 154/21-30). ಇವಳ ಗರ್ಭದಿಂದ ಭೀಮಸೇನನ ಮೂಲಕ ಘಟೋತ್ಕಚನ ಜನನ (ಆದಿ 154/31). ಈಕೆ ಪಾಂಡವರನ್ನು ಭೇಟಿಮಾಡಿ ತನ್ನ ಐಚ್ಛಿಕ ಸ್ಥಾನಕ್ಕೆ ಹೋದುದು (ಆದಿ 154/40).

**ಹಿಮವಂತ (ಹಿಮವಾನ್)** – ಭಾರತದ ಉತ್ತರ ಗಡಿಯಲ್ಲಿರುವ ಒಬ್ಬ ವಿಶಾಲ ಪರ್ವತ ರಾಜ. ಇವನು ಶರೀರದಿಂದ ಪರ್ವತವಾದರೂ 'ಆತ್ಮ'ದಲ್ಲಿ ದೇವತೆಯಾಗಿದ್ದಾನೆ. ಇಲ್ಲಿ ಹಿಮವಾನ್ ಎಂಬುದರ ಅರ್ಥ ಹಿಮಾಲಯ ಪರ್ವತ ಮತ್ತು ಅದರ ಅಧಿಷ್ಠಾತೃ ದೇವತೆಯೆಂದು ತಿಳಿಯಬೇಕು. ವಾಲಖಿಲ್ಯ ಮುನಿಗಳು ಇಲ್ಲಿ ತಪಸ್ಸು ಮಾಡಲು ಬಂದಿದ್ದರು (ಆದಿ 30/18). ಶೇಷನಾಗನು ಸಂಯಮ ನಿಯಮ ಮತ್ತು ಏಕಾಂತವಾಸಕ್ಕಾಗಿ ಹಿಮಾಲಯ ಪರ್ವತಕ್ಕೆ ಬಂದಿದ್ದನು (ಆದಿ 36/3-4). ವ್ಯಾಸರು ಗಾಂಧಾರಿಯ ಬಾಲಕರ ರಕ್ಷಣೆಗೆ ವ್ಯವಸ್ಥೆಮಾಡಿ, ಹಿಮಾಲಯದ ಮೇಲೆ ತಪಸ್ಸಿಗೋಸ್ಕರ ಹೊರಟು ಹೋಗಿದ್ದರು (ಆದಿ 114/24). ರಾಜಾಪಾಂಡು ಕಾಲಕೂಟ ಮತ್ತು ಹಿಮಾಲಯ ಪರ್ವತವನ್ನು ದಾಟಿ, ಗಂಧಮಾದನ ಪರ್ವತಕ್ಕೆ ಹೋಗಿದ್ದನು (ಆದಿ 118/48). ಕ್ಷತ್ರಿಯರು ಭೃಗುವಂಶದ ಬ್ರಾಹ್ಮಣರ ಗರ್ಭಸ್ಥ ಬಾಲಕರನ್ನು ಕೂಡ ಹತ್ಯೆ ಮಾಡುತ್ತಾ, ಪ್ರಪಂಚವಿಡೀ ತಿರುಗಾಡ ತೊಡಗಿದರು. ಇದನ್ನು ಕಂಡು, ಭಯದಿಂದ, ಭೃಗುವಂಶದವರ ಪತ್ನಿಯರು, ದುರ್ಗಮ ಹಿಮಾಲಯ ಪರ್ವತವನ್ನು ಆಶ್ರಯಿಸಿದರು (ಆದಿ 177/20-21). ಪರಾಶರನು ಸಮಸ್ತ ರಾಕ್ಷಸರ ವಿನಾಶಕ್ಕಾಗಿ ನಡೆಸಲಿರುವ ಸತ್ರಕ್ಕಾಗಿ ಸಂಗ್ರಹಿಸಿದ ಅಗ್ನಿಯನ್ನು, ಉತ್ತರ ದಿಕ್ಕಿನಲ್ಲಿ, ಹಿಮಾಲಯದ ಅಕ್ಕಪಕ್ಕದಲ್ಲಿ, ಒಂದು ವಿಶಾಲ ವನದಲ್ಲಿ ಬಿಟ್ಟುಬಿಟ್ಟನು (ಆದಿ 180/22). ಇಂದ್ರಪುತ್ರ ಅರ್ಜುನನೂ ಹಿಮಾಲಯದ ಯಾತ್ರೆ ಮಾಡಿದ್ದನು (ಆದಿ 214/1). ಹಿಮವಂತನು ಕುಬೇರನ ಸಭೆಯಲ್ಲಿದ್ದುಕೊಂಡು, ಧನಪತಿಯೂ, ಮಹಾಮಾನ್ಯನೂ ಆದ ಭಗವಾನ್ ಕುಬೇರನ ಉಪಾಸನೆಮಾಡುತ್ತಾನೆ (ಸಭಾ 10/31-34). ದೇವರ್ಷಿ ನಾರದನು, ಬ್ರಹ್ಮನ ಸಭಾದರ್ಶನ ಪಡೆಯುವ ಉದ್ದೇಶದಿಂದ ಸೂರ್ಯನ ಹೇಳಿಕೆಯಂತೆ, ಹಿಮಾಲಯದ ಶಿಖರದ ಮೇಲೆ, ಒಂದು ಸಾವಿರ ವರ್ಷಗಳಲ್ಲಿ ಪೂರ್ಣವಾಗುವ ಮಹಾವ್ರತದ ಅನುಷ್ಠಾನ ಮಾಡಿದ್ದನು (ಸಭಾ 11/8-9). ಅರ್ಜುನನು ಯುದ್ಧದಲ್ಲಿ ಹಿಮವಂತನನ್ನು ಗೆದ್ದು, ಧವಲಗಿರಿಗೆ ಬಂದು, ಅಲ್ಲೇ ತನ್ನ ಸೇನೆಯ ಬೀಡುಬಿಟ್ಟಿದ್ದನು (ಸಭಾ 27/29). ಭೀಮಸೇನನು ಹಿಮಾಲಯದ ಬಳಿಗೆ ಹೋಗಿ, ಪೂರ್ಣ ಜಲೋದ್ಭವ ದೇಶದ ಮೇಲೆ, ಸ್ವಲ್ಪವೇ ಸಮಯದಲ್ಲಿ ಅಧಿಕಾರ ಪಡಕೊಂಡನು (ಸಭಾ 30/4). ಹಿಮಾಲಯ ಪರ್ವತದ ಮೇಲೆ ಮೇರು ಸಾವರ್ಣಿಯು, ಯುಧಿಷ್ಠಿರನಿಗೆ ಧರ್ಮ ಮತ್ತು ಜ್ಞಾನದ ಉಪದೇಶ ಮಾಡಿದ್ದನು (ಸಭಾ 78/14). ರಾಜಾ ಭಗೀರಥನು ತಪಸ್ಸಿಗಾಗಿ ಹಿಮಾಲಯ ಪರ್ವತಕ್ಕೆ ಹೋದನು. ಗಿರಿರಾಜ ಹಿಮಾಲಯನು ವಿವಿಧ ವಸ್ತುಗಳಿಂದ ವಿಭೂಷಿತನೂ, ನಾನಾ ಪ್ರಕಾರದ ಶಿಖರಗಳಿಂದ ಅಲಂಕೃತನೂ ಆಗಿದ್ದಾನೆ. ಇವನ ರಮಣೀಯ ಶೋಭೆಯ ವಿಸ್ತೃತ ವರ್ಣನೆ (ವನ 108/3-11). ಕುಲಿಂದ ರಾಜ ಸುಬಾಹುವಿನ ವಿಶಾಲ ರಾಜ್ಯವು ಹಿಮಾಲಯದ ಹತ್ತಿರದಲ್ಲಿತ್ತು. ಪಾಂಡವರು ರಾತ್ರಿಯಲ್ಲಿ ಅಲ್ಲಿದ್ದು ಮರುದಿನ ಬೆಳಿಗ್ಗೆ ಹಿಮಾಲಯದ ಕಡೆಗೆ ನಡೆದಿದ್ದರು (ವನ 140/24-27). ಪಾಂಡವರು ಹದಿನೇಳನೇ ದಿನ ಹಿಮಾಲಯದ ಒಂದು ಪಾವನ ಪೃಷ್ಠಭಾಗಕ್ಕೆ ತಲುಪಿದರು. ವೃಷಪರ್ವನ ಆ ಪಾವನ ಪ್ರದೇಶದಲ್ಲಿ ವೃಷಪರ್ವನ ಪವಿತ್ರ ಆಶ್ರಮವಿತ್ತು. ಅಲ್ಲಿಗೆ ಹೋಗಿ ಅವರು ವೃಷಪರ್ವನಿಗೆ ಪ್ರಣಾಮ ಮಾಡಿದರು (ವನ 158/18-21). ಭೀಮಸೇನನು ಹಿಮಾಲಯ ಪರ್ವತದ ಸುಂದರ ಪ್ರದೇಶಗಳ ಅವಲೋಕನ ಮಾಡುತ್ತಾ, ಕಾಡಿನಲ್ಲಿ ಬೇಟೆಯಾಡಲು ತೊಡಗಿದನು. ಈ

ಸಂದರ್ಭದಲ್ಲಿ ಅವನನ್ನು ಒಂದು ಅಜಗರವು ಹಿಡಿದುಕೊಂಡಿತು (ವನ 178 ಅಧ್ಯಾಯ). ಮಾರ್ಕಂಡೇಯನು ಭಗವಾನ್ ಬಾಲ ಮುಕುಂದನ ಉದರದಲ್ಲಿ ಹಿಮವಂತ ಮತ್ತು ಹೇಮಕೂಟವೇ ಮೊದಲಾದ ಪರ್ವತಗಳನ್ನು ಕಂಡಿದ್ದನು (ವನ 188/112). ಹಿಮಾಲಯ ಪರ್ವತದಲ್ಲಿ ಪ್ರಾವಾರಕರ್ಣವೆಂಬ ಒಂದು ಗೂಗೆ ವಾಸಮಾಡುತ್ತದೆ. ಅದು ಮಾರ್ಕಂಡೇಯನಿಗಿಂತಲೂ ಮೊದಲೇ ಹುಟ್ಟಿದ್ದಾಗಿದೆ (ವನ 199/4). ಕರ್ಣನು ಹಿಮಾಲಯ ಪರ್ವತದ ಮೇಲೆ ಇರುವ ಹಿಮವತ್ ಪ್ರದೇಶದ ಸಮಸ್ತ ಭೂಪಾಲರನ್ನು ಗೆದ್ದು ಅವರೆಲ್ಲರಿಂದ ಕಪ್ಪ ಸಂಗ್ರಹಿಸಿದ್ದನು (ವನ 254/4-6). ಉತ್ತರದಲ್ಲಿ ಹಿಮವಂತನ ಶಿಖರದ ಮೇಲೆ ಭಗವಾನ್ ಮಹೇಶ್ವರನು, ಭಗವತಿ ಉಮೆ ಯೊಂದಿಗೆ ನಿತ್ಯನಿವಾಸ ಮಾಡುತ್ತಾನೆ (ಉದ್ಯೋಗ 111/5). ಹಿಮವಂತನು ಪೂರ್ವದಿಂದ ಪಶ್ಚಿಮದ ಕಡೆಗೆ ಹರಡಿದ ಆರು ವರ್ಷಪರ್ವತಗಳಲ್ಲಿ ಒಬ್ಬನಾಗಿದ್ದಾನೆ (ಭೀಷ್ಮ 6/3-5). ಅರ್ಜುನನು ಸ್ವಪ್ನದಲ್ಲಿ ಭಗವಾನ್ ಶ್ರೀಕೃಷ್ಣನೊಂದಿಗೆ ಕೈಲಾಸದ ಯಾತ್ರೆ ಮಾಡುತ್ತಿದ್ದಾಗ, ಪವಿತ್ರ ಹಿಮವಂತನ ಶಿಖರವನ್ನು ಕಂಡಿದ್ದನು (ದ್ರೋಣ 80/23-24). ತ್ರಿಪುರದಹನ ಕಾಲದಲ್ಲಿ ಹಿಮವಂತನೂ, ವಿಂಧ್ಯನೂ ಭಗವಾನ್ ರುದ್ರನ ರಥದಲ್ಲಿ ಆಧಾರ ಕಾಷ್ಠವಾಗಿದ್ದರು (ಕರ್ಣ 34/22). ಗಂಗೆಯು ತನ್ನ ಗರ್ಭವನ್ನು ದೇವ ಪೂಜಿತವಾದ ಹಿಮವಂತನ ಸುರಮ್ಯ ಶಿಖರದಲ್ಲಿ ಬಿಟ್ಟಿದ್ದಳು. ಇದರಿಂದ ಸ್ಕಂದನು ಪ್ರಕಟಗೊಂಡನು (ಕರ್ಣ 44/9). ಕುಮಾರ ಕಾರ್ತಿಕೇಯನ ಅಭಿಷೇಕ ಮಾಡುವುದಕ್ಕೋಸ್ಕರ, ಗಿರಿರಾಜ ಹಿಮಾಲಯನ ಅಧಿಷ್ಠಾತೃ ದೇವತೆಯಾದ ಹಿಮವಂತನೂ ಆಗಮಿಸಿದ್ದನು (ಶಲ್ಯ 45/14-18). ಇವನು ಕುಮಾರನಿಗೆ ಸುವರ್ಚಾ ಮತ್ತು ಅತಿವರ್ಚಾ ಎಂಬ ಇಬ್ಬರು ಪಾರ್ಷದರನ್ನು ಕೊಟ್ಟಿದ್ದನು (ಶಲ್ಯ 45/46-47). ಭಗವಾನ್ ಶ್ರೀಕೃಷ್ಣನು ಹಿಮಾಲಯದ ಘಟ್ಟದಲ್ಲಿದ್ದುಕೊಂಡು, ಬಹಳ ದೊಡ್ಡ ತಪಸ್ಸಿನ ಮೂಲಕ, ರುಕ್ಮಿಣೀದೇವಿಯ ಗರ್ಭದಿಂದ ಪ್ರದ್ಯುಮ್ನನಿಗೆ ಜನ್ಮವಿತ್ತನು (ಸೌಪ್ತಿಕ 12/30-31). ಪರ್ವತಗಳಲ್ಲಿ ಶ್ರೇಷ್ಠನಾದ ಹಿಮವಂತನು ರಾಜಾ ಪೃಥುವಿಗೆ ಅಕ್ಷಯ ಧನವನ್ನು ಸಮರ್ಪಿಸಿದ್ದನು (ಶಾಂತಿ 59/118). ನೂರು ಯೋಜನಗಳಷ್ಟು ವಿಸ್ತಾರವಾದ, ಹಿಮಾಲಯದ ರಮಣೀಯವಾದ ಶಿಖರದ ಮೇಲೆ, ಭಗವಾನ್ ಬ್ರಹ್ಮನು ಒಂದು ಯಜ್ಞ ಮಾಡಿದ್ದನು (ಶಾಂತಿ 166/32-37). ಪೂರ್ವ ಕಾಲದಲ್ಲಿ ಪ್ರಜಾಪತಿ ದಕ್ಷನು ಹಿಮಾಲಯದ ಪಕ್ಕದಲ್ಲಿರುವ ಗಂಗಾದ್ವಾರದ ಶುಭಪ್ರದೇಶದಲ್ಲಿ ಒಂದು ಯಜ್ಞವನ್ನು ಹಮ್ಮಿಕೊಂಡಿದ್ದನು (ಶಾಂತಿ 284/3). ರಾಜಾ ಜನಕನ ಉಪದೇಶ ಕೇಳಿ ಶುಕದೇವನು ಹಿಮಾಲಯ ಪರ್ವತಕ್ಕೆ ಹೋದನು. ಈ ಪರ್ವತದಲ್ಲಿ ಸಿದ್ಧರೂ ಚಾರಣರೂ ನಿವಾಸಮಾಡುತ್ತಾರೆ. ಒಂದು ಬಾರಿ ದೇವರ್ಷಿ ನಾರದನು ಇದರ ದರ್ಶನ ಮಾಡಲು ಅಲ್ಲಿಗೆ ಆಗಮಿಸಿದ್ದನು. ಅಲ್ಲಿ ಎಲ್ಲಾ ಕಡೆ ಅಪ್ಸರೆಯರು ಸಂಚರಿಸುತ್ತಾರೆ. ವಿವಿಧ ಪ್ರಾಣಿಗಳ ಶಾಂತ ಮಧುರ ಧ್ವನಿಯಿಂದ ಅಲ್ಲಿರುವ ಎಲ್ಲಾ ಪ್ರದೇಶ ವ್ಯಾಪಿಸಲ್ಪಟ್ಟಿದೆ. ಸಾವಿರಾರು ಕಿನ್ನರರು, ಭ್ರಮರಗಳು, ಖಂಜನ ಪಕ್ಷಿಗಳು, ಚಕೋರಗಳು, ನವಿಲುಗಳು ಮತ್ತು ಕೋಗಿಲೆಗಳು ತಮ್ಮ ಕಲರವವನ್ನು ಹರಡುತ್ತಿರುತ್ತವೆ. ಪಕ್ಷಿರಾಜ ಗರುಡನು ಹಿಮವಂತನ ಮೇಲೆ ನಿತ್ಯನಿವಾಸ ಮಾಡುತ್ತಾನೆ. ನಾಲ್ಕು ಮಂದಿ ಲೋಕಪಾಲರು, ದೇವತೆಗಳು ಮತ್ತು ಋಷಿಗಳು ಜಗತ್ತಿನ ಹಿತಾಕಾಂಕ್ಷೆಯಿಂದ, ಇಲ್ಲಿಗೆ ಸದಾ ಬರುತ್ತಿರುತ್ತಾರೆ. ಭಗವಾನ್ ಶ್ರೀಕೃಷ್ಣನು ಪುತ್ರನಿಗಾಗಿ ಇಲ್ಲಿಯೇ ತಪಸ್ಸು ಮಾಡಿದ್ದನು. ಇಲ್ಲಿಯೇ ಕುಮಾರ ಕಾರ್ತಿಕೇಯನು ಬಾಲ್ಯಾವಸ್ಥೆಯಲ್ಲಿ ದೇವತೆಗಳ ಮೇಲೆ ಆಕ್ಷೇಪಮಾಡಿದನು ಮತ್ತು ಮೂರೂ ಲೋಕಗಳನ್ನು ಅಪಮಾನಿಸಿ, ತನ್ನ ಶಕ್ತಿಯನ್ನು ಹುಗಿದನು ಮತ್ತು ಈ ಮಾತು ಹೇಳಿದನು 'ಯಾರು ನನಗಿಂತಲೂ ಅಧಿಕ ಬಲವಂತ, ಬ್ರಾಹ್ಮಣಭಕ್ತ ಮತ್ತು ಪರಾಕ್ರಮಿಯಾಗಿರುವನೋ, ಅವನು ಈ ಶಕ್ತಿಯನ್ನು ಕೀಳಲಿ ಅಥವಾ ಅಲುಗಾಡಿಸಲಿ' ಭಗವಾನ್ ವಿಷ್ಣುವು ಕುಮಾರನ ಗೌರವರಕ್ಷಣೆಗಾಗಿ, ಆ ಶಕ್ತಿಯನ್ನು ಕೇವಲ ಅಲುಗಾಡಿಸಿದನು; ಕಿತ್ತು ಹಾಕಲಿಲ್ಲ. ಹಿರಣ್ಯಕಶಿಪುವಿನ ಪುತ್ರ ಪ್ರಹ್ಲಾದನು ಅದನ್ನು ಕೀಳಲು ಪ್ರಯತ್ನಮಾಡಿದನು; ಆದರೆ ಅವನು

ಚೀತ್ಕಾರ ಮಾಡಿ, ಮೂರ್ಛಿತನಾಗಿ, ಹಿಮಾಲಯದ ಶಿಖರದ ಮೇಲೆ ಬಿದ್ದನು. ಗಿರಿರಾಜ ಹಿಮಾಲಯದ ಪಾರ್ಶ್ವಭಾಗದಲ್ಲಿ, ಉತ್ತರದಿಕ್ಕಿನ ಕಡೆಯಲ್ಲಿ, ಭಗವಾನ್ ಶಿವನು ದುರ್ಧರ್ಷ ತಪಸ್ಸು ಮಾಡಿದ್ದನು. ಭಗವಾನ್ ಶಂಕರನ ಆ ಆಶ್ರಮವನ್ನು ಪ್ರಜ್ವಲಿತ ಅಗ್ನಿಯು ನಾಲ್ಕು ಕಡೆಗಳಿಂದ ಆವರಿಸಿದ್ದಾನೆ. ಆ ಪರ್ವತ ಶಿಖರದ ಹೆಸರು ಆದಿತ್ಯಗಿರಿ. ಅದರ ಮೇಲೆ ಅಜಿತಾತ್ಮರಾದ ಪುರುಷರು ಹತ್ತಲಾರರು. ಅದರ ವಿಸ್ತಾರ ಹತ್ತು ಯೋಜನವಿದೆ. ಅದು ಬೆಂಕಿಯ ನಾಲಿಗೆಗಳಿಂದ ಆವರಿಸಲ್ಪಟ್ಟಿದೆ. ಶಕ್ತಿಶಾಲಿಯಾದ ಭಗವಾನ್ ಅಗ್ನಿದೇವ ಅಲ್ಲಿ ಸ್ವತಃ ನೆಲಸಿರುತ್ತಾನೆ. ಗಿರಿರಾಜನಾದ ಹಿಮವಂತನ ಪೂರ್ವದಿಕ್ಕಿನ ಆಶ್ರಯ ಪಡೆದು, ಪರ್ವತದ ಏಕಾಂತ ತಟ ಪ್ರದೇಶದಲ್ಲಿ, ಒಂದು ಕಾಲದಲ್ಲಿ ಮಹರ್ಷಿ ವ್ಯಾಸನು ತನ್ನ ಶಿಷ್ಯರಾದ ಸುಮಂತು, ಜೈಮಿನಿ, ಪೈಲ ಮತ್ತು ವೈಶಂಪಾಯನರಿಗೆ ವೇದಗಳನ್ನು ಕಲಿಸುತ್ತಿದ್ದನು (ಶಾಂತಿ 327/2–27). ಶುಕದೇವನು ಊರ್ಧ್ವಲೋಕಕ್ಕೆ ಗಮಿಸುತ್ತಿದ್ದಾಗ, ಗಿರಿರಾಜ ಹಿಮಾಲಯನು ವಿದೀರ್ಣನಾದಂತೆ ಭಾಸವಾಗುತ್ತಿತ್ತು. ಅವನು ತನ್ನ ಮಾರ್ಗದಲ್ಲಿ ಪರ್ವತದ ಎರಡು ದಿವ್ಯ ಶಿಖರಗಳನ್ನು ನೋಡಿದನು. ಅವು ಪರಸ್ಪರ ಅಂಟಿಕೊಂಡಿದ್ದವು. ಅವುಗಳಲ್ಲಿ ಒಂದು ಹಿಮಾಲಯದ ಶಿಖರವಾಗಿತ್ತು; ಮತ್ತೊಂದು ಮೇರುವಿನದು. ಶುಕದೇವನು ಅವುಗಳನ್ನು ನೋಡಿಯೂ ನಿಲ್ಲಲಿಲ್ಲ. ಅವುಗಳ ಹತ್ತಿರ ಬಂದಾಗ, ಅವೆರಡೂ ಕೂಡಲೇ ವಿದೀರ್ಣವಾಗಿ ಇಬ್ಭಾಗವಾದುವು (ಶಾಂತಿ 333/5–10). ಹಿಮವಂತನ ಪುತ್ರಿಯ ಹೆಸರು ಉಮಾ. ಅವಳನ್ನು ಪತ್ನಿಯಾಗಿ ಪಡೆಯಲು ರುದ್ರದೇವನು ಬಯಸಿದನು. ಇದೇ ಕಾಲದಲ್ಲಿ ಮಹರ್ಷಿ ಭೃಗುವು ಬಂದು, ಹಿಮವಂತನಲ್ಲಿ ಆ ಕನ್ಯೆಯನ್ನು ತನಗಾಗಿ ಯಾಚಿಸಿದನು. ಹಿಮವಂತನು ಹೇಳಿದನು. 'ಇವಳಿಗೆ ನೋಡಿ ಮಾಡಿ ರುದ್ರದೇವನೇ ವರನೆಂದು ನಿಶ್ಚಯ ಮಾಡಲಾಗಿದೆ' ಇದನ್ನು ಕೇಳಿ ಭೃಗು ಹಿಮವಂತನಿಗೆ ಶಾಪಕೊಟ್ಟನು. 'ನೀನು ರತ್ನಗಳ ಭಂಡಾರವಾಗಿ ಇರುವುದಿಲ್ಲ' (ಶಾಂತಿ 342/62). ಭಗವಾನ್ ಶಂಕರ ಮತ್ತು ನಾರಾಯಣನ ಯುದ್ಧದಿಂದ ಹಿಮಾಲಯ ಪರ್ವತ ವಿದೀರ್ಣವಾಗತೊಡಗಿತ್ತು (ಶಾಂತಿ 342/122). ಹಿಮಾಲಯ ಪರ್ವತದ ಮೇಲೆ ದೇವರ್ಷಿ ನಾರದನ ಸ್ವಂತ ಆಶ್ರಮವಿದೆ (ಶಾಂತಿ 346/3). ಭಗವಾನ್ ಶ್ರೀಕೃಷ್ಣನು ಹಿಮಾಲಯ ಪರ್ವತದ ಮೇಲೆ ಹೋಗಿ ಮಹಾತ್ಮಾ ಉಪಮನ್ಯುವಿನ ದಿವ್ಯ ಆಶ್ರಮವನ್ನು ಕಂಡಿದ್ದನು (ಅನು 14/43–45). ಹಿಮಾಲಯ ಪರ್ವತದ ಮೇಲೆ, ಮಹಾತ್ಮನಾದ ರಾಜಾ ಮರುತ್ತನ ಯಜ್ಞದಲ್ಲಿ ಬ್ರಾಹ್ಮಣರು ತುಂಬಾ ಧನವನ್ನು ಅಲ್ಲಿಯೇ ಬಿಟ್ಟು ಹೋಗಿದ್ದರು (ಆಶ್ವ 3/20–21). ಧೃತರಾಷ್ಟ್ರ ಮತ್ತು ಗಾಂಧಾರಿ ದಾವಾನಲದಲ್ಲಿ ದಗ್ಧರಾದ ಅನಂತರ ಸಂಜಯನು ಹಿಮಾಲಯಕ್ಕೆ ಹೊರಟುಹೋದನು (ಆಶ್ರಮ 37/33–34). ಮಹಾಪ್ರಸ್ಥಾನ ಕಾಲದಲ್ಲಿ ಯೋಗಯುಕ್ತರಾದ ಪಾಂಡವರು; ಹಾದಿಯಲ್ಲಿ, ಮಹಾಪರ್ವತವಾದ ಹಿಮಾಲಯದ ದರ್ಶನ ಮಾಡಿದರು; ಅದನ್ನು ಹಾದು ಮುಂದು ವರಿದಾಗ, ಅವರಿಗೆ ಹೊಯಿಗೆಯ ಸಮುದ್ರ ಕಾಣಿಸಿತು (ಮಹಾಪ್ರ 2/1–2).

**ಹಿರಣ್ಮಯ** – (1) ಒಬ್ಬ ಪ್ರಾಚೀನ ಋಷಿ. ಇವನು ಇಂದ್ರಸಭೆಯಲ್ಲಿರುತ್ತಾನೆ (ಸಭಾ 7/18). (2) ಸುದರ್ಶನ ಅಥವಾ ಜಂಬೂ ದ್ವೀಪದ ಒಂದು ದೇಶ. ಇದು ನೀಲಪರ್ವತದ ದಕ್ಷಿಣಕ್ಕೆ ಮತ್ತು ನಿಷಧ ಪರ್ವತದ ಉತ್ತರದಲ್ಲಿದೆ (ಭೀಷ್ಮ 8/5–8).

**ಹಿರಣ್ಯಕವರ್ಷ** – ಜಂಬೂದ್ವೀಪದ ಒಂದು ಖಂಡ. ಇದು ಶ್ವೇತಪರ್ವತದಿಂದ ಮುಂದಕ್ಕಿದೆ (ಸಭಾ 28/6).

**ಹಿರಣ್ಯಕಶಿಪು** – (1) ದಿತಿಯ ಒಬ್ಬ ಪ್ರಖ್ಯಾತ ಪುತ್ರ. ಇವನು ದೂರದೃಷ್ಟಿಯುಳ್ಳವನಾಗಿದ್ದನು. ಇವನಿಗೆ ಐವರು ಪುತ್ರರಿದ್ದರು (ಆದಿ 65/17–18). ಇವನೇ ಈ ಭೂಮಿಯಲ್ಲಿ ರಾಜಾ ಶಿಶುಪಾಲನ ರೂಪದಲ್ಲಿ ಪ್ರಕಟಗೊಂಡಿದ್ದನು (ಆದಿ 67/5). ಇವನು ದೇವತೆಗಳ ಶತ್ರು ಮತ್ತು ಸಮಸ್ತ ದೈತ್ಯರ ರಾಜನಾಗಿದ್ದನು. ಇವನಿಗೆ ತನ್ನ ಶಕ್ತಿಯ ಬಗ್ಗೆ ದೊಡ್ಡ ದುರಭಿಮಾನವಿತ್ತು. ಇವನು ಮೂರೂ ಲೋಕಗಳಿಗೂ ಕಂಟಕ ಪ್ರಾಯನಾಗಿದ್ದನು. ದೈತ್ಯಕುಲದ ಆದಿಪುರುಷ ಇವನೇ ಆಗಿದ್ದನು. ಇವನು ಕಾಡಿಗೆ ಹೋಗಿ

ದೊಡ್ಡ ತಪಸ್ಸು ಮಾಡಿದನು. ಅದರಿಂದಾಗಿ ಬ್ರಹ್ಮನು ಸಂತುಷ್ಟನಾದನು (ಆದಿ 38/29). ಇವನ ಬೇಡಿಕೆಯಂತೆ, ಬ್ರಹ್ಮನು ಇವನಿಗೆ ಅಸ್ತ್ರಶಸ್ತ್ರಗಳಿಂದ ಅವಧ್ಯನಾಗಿರುವಂತೆ ವರ ನೀಡಿದನು. ತ್ರಿಭುವನಗಳಲ್ಲಿ ಇವನ ಉತ್ಪಾತಗಳು ಮತ್ತು ಭಗವಾನ್ ನರಸಿಂಹನಿಂದ ಇವನ ವಧೆ (ಸಭಾ 38/29). ಪ್ರಾಚೀನ ಕಾಲದಲ್ಲಿ ಇವನು ಸಮಸ್ತ ಭೂಮಂಡಲದ ಶಾಸಕನಾಗಿದ್ದನು (ಶಾಂತಿ 227/53).

(2) ಒಬ್ಬ ದಾನವ. ಪೂರ್ವಕಾಲದಲ್ಲಿ ಇವನು ಮೇರುಪರ್ವತವನ್ನು ಅಲುಗಾಡಿಸಿದ್ದನು. ಭಗವಾನ್ ಶಂಕರನಿಂದ, ಒಂದು ಅರ್ಬುದ ವರ್ಷಗಳ ಕಾಲಕ್ಕೆ, ದೇವತೆಗಳ ಸಂಪೂರ್ಣ ಐಶ್ವರ್ಯವನ್ನು ಪಡಕೊಂಡನು. ಇವನ ಪುತ್ರನ ಹೆಸರು ಮಂದಾರನೆಂದಾಗಿತ್ತು (ಅನು 14/73-74).

**ಹಿರಣ್ಯಗರ್ಭ** – ಭಗವಾನ್ ಶ್ರೀಕೃಷ್ಣನ ಒಂದು ಹೆಸರು ಮತ್ತು ಇದರ ಅರ್ಥ (ಶಾಂತಿ 342/96).

**ಹಿರಣ್ಯಧನು** – ಒಬ್ಬ ನಿಷಾದರಾಜ. ಇವನು ಏಕಲವ್ಯನ ತಂದೆಯಾಗಿದ್ದನು (ಆದಿ 131/31).

**ಹಿರಣ್ಯನಾಭ** – ಸಂಜಯ ಪುತ್ರ ಸುವರ್ಣಷ್ಠೀವಿ, ಮರಣಾನಂತರ, ನಾರದನ ಕೃಪೆಯಿಂದ ಜೀವಂತನಾದಾಗ, ಅವನಿಗೆ ಈ ಹೆಸರು ಇಡಲ್ಪಟ್ಟಿತ್ತು. ಇವನ ಆಯುಸ್ಸು ಒಂದು ಸಾವಿರ ವರ್ಷಗಳದ್ದಾಗಿತ್ತು (ಶಾಂತಿ 129/149).

**ಹಿರಣ್ಯಪುರ** – ಪುಲೋಮೆ ಮತ್ತು ಕಾಲಕಾ ಎಂಬವರ ಪ್ರಾರ್ಥನೆಯಿಂದ ಅವರ ಪುತ್ರರಿಗಾಗಿ, ಬ್ರಹ್ಮನಿಂದ ನಿರ್ಮಿತವಾದ ಒಂದು ವಿಮಾನದಂತಿರುವ, ಆಕಾಶಚಾರಿ ದಿವ್ಯ ನಗರ. ಇದು ಪೌಲೋಮ ಮತ್ತು ಕಾಲಕೇಯರೆಂಬ ದಾನವರ ನಿವಾಸ ಸ್ಥಾನವಾಗಿತ್ತು ಮತ್ತು ಅವರಿಂದ ಸುರಕ್ಷಿತವಾಗಿತ್ತು (ವನ 173/9-13). ಅರ್ಜುನನಿಂದ ಇದರ ಸಂಹಾರ (ವನ 173/30). ನಾರದನಿಂದ ಮಾತಲಿಗೆ ಈ ನಗರದ ಪರಿಚಯ (ಉದ್ಯೋಗ 100 ಅಧ್ಯಾಯ).

**ಹಿರಣ್ಯಬಾಹು** – ವಾಸುಕಿ ವಂಶೋದ್ಭವ ಒಬ್ಬ ನಾಗ. ಇವನು ಜನಮೇಜಯ ಸರ್ಪಸತ್ರದಲ್ಲಿ ದಗ್ಧನಾದನು (ಆದಿ 57/6).

**ಹಿರಣ್ಯಬಿಂದು** – ಹಿಮಾಲಯದ ಹತ್ತಿರವಿರುವ ಒಂದು ತೀರ್ಥ. ತೀರ್ಥಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಅರ್ಜುನನ ಆಗಮನವಾಗಿತ್ತು (ಆದಿ 214/4). ಮನಸ್ಸನ್ನೂ, ಇಂದ್ರಿಯಗಳನ್ನೂ ಸಂಯಮದಲ್ಲಿ ಇಟ್ಟುಕೊಂಡು, ಹಿರಣ್ಯಬಿಂದು ತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿರುವ ಪ್ರಮುಖ ದೇವತೆ ಭಗವಾನ್ ಕುಶೇಶಯನಿಗೆ ಪ್ರಣಾಮ ಮಾಡುವವನ ಎಲ್ಲಾ ಪಾಪಗಳು ತೊಳೆಯಲ್ಪಡುತ್ತವೆ (ಅನು 25/10-11). ಕಾಲಿಂಜರ ಪರ್ವತದಲ್ಲಿರುವ ಒಂದು ಮಹಾತ್ ತೀರ್ಥ (ವನ 87/21).

**ಹಿರಣ್ಯರೇತಾ** – ಅಗ್ನಿಯ ಹೆಸರು (ಆದಿ 55/10).

**ಹಿರಣ್ಯರೋಮಾ** – ದಾಕ್ಷಿಣಾತ್ಯ ದೇಶಗಳ ಅಧಿಪತಿ ವಿದರ್ಭರಾಜ ಭೀಷ್ಮಕನ ಇನ್ನೊಂದು ಹೆಸರು (ಉದ್ಯೋಗ 158/1).

**ಹಿರಣ್ಯವರ್ಮಾ** – ದಶಾರ್ಣದೇಶದ ರಾಜ. ಇವನು ಶಿಖಂಡಿಯೊಂದಿಗೆ ತನ್ನ ಮಗಳ ವಿವಾಹ ಮಾಡಿದ್ದನು (ಉದ್ಯೋಗ 189/10). ಶಿಖಂಡಿಯ ಸ್ತ್ರೀತ್ವದ ತಿಳುವಳಿಕೆ ಬಂದಾಗ, ಕುಪಿತನಾಗಿ, ದ್ರುಪದನಿಗೆ ಇವನ ಸಂದೇಶ (ಉದ್ಯೋಗ 189/21-23). ಮಿತ್ರರಾಜರ ಆಲೋಚನೆ ಪ್ರಕಾರ, ದ್ರುಪದನ ಮೇಲೆ ಆಕ್ರಮಣ ಮಾಡಲು ಇವನು ನಿಶ್ಚಯ ಮತ್ತು ಸಂದೇಶ (ಉದ್ಯೋಗ 190/9-10). ರಾಜಾ ದ್ರುಪದನ ರಾಜಧಾನಿಯ ಬಳಿಗೆ ಬಂದು ಇವನ ಪುರೋಹಿತರ ಮೂಲಕ ಸಂದೇಶ ನೀಡಿದುದು (ಉದ್ಯೋಗ 192/20-21). ಯುವತಿಯರಿಂದ ಶಿಖಂಡಿಯ ಪರೀಕ್ಷೆ ಮಾಡಿಸಿ ಪ್ರಸನ್ನನಾದುದು ಮತ್ತು ದ್ರುಪದ ಹಾಗೂ ಶಿಖಂಡಿಯನ್ನು ಗೌರವಿಸಿ ಹಿಂತಿರುಗಿದುದು (ಉದ್ಯೋಗ 192/28-32).

**ಹಿರಣ್ಯಶೃಂಗ** – ಕೈಲಾಸಪರ್ವತದ ಉತ್ತರದಲ್ಲಿ ಮೈನಾಕ ಪರ್ವತದ ಸಮೀಪದಲ್ಲಿರುವ ಮಣಿಮಯವಾದ ಒಂದು ವಿಶಾಲ ಪರ್ವತ (ಸಭಾ 3/10; ಭೀಷ್ಮ 6/42).

**ಹಿರಣ್ಯಸರ** – ಪಶ್ಚಿಮ ದಿಕ್ಕಿನ ಒಂದು ಪ್ರಾಚೀನ ತೀರ್ಥ. ಇಲ್ಲಿ ಸ್ನಾನಮಾಡಿ ಚಂದ್ರನು ಪಾಪದಿಂದ ಬಿಡುಗಡೆಗೊಂಡಿದ್ದನು. ಅಂದಿನಿಂದಲೇ

ಇದರ ಹೆಸರು 'ಪ್ರಭಾಸ'ವೆಂದಾಯಿತು (ಶಾಂತಿ 342/57).

**ಹಿರಣ್ಯಹಸ್ತ** – ಒಬ್ಬ ಪ್ರಾಚೀನ ಋಷಿ. ಇವನಿಗೆ ರಾಜಾ ಮದಿರಾಶ್ವನು ತನ್ನ ಸುಂದರಿಯಾದ ಮಗಳನ್ನು ಕೊಟ್ಟಿದ್ದನು (ಶಾಂತಿ 234/35).

**ಹಿರಣ್ಯಾಕ್ಷ** – ವಿಶ್ವಾಮಿತ್ರನ ಬ್ರಹ್ಮವಾದಿ ಪುತ್ರರಲ್ಲಿ ಒಬ್ಬ (ಅನು 4/57).

**ಹಿರಣ್ಯವತೀ** – ಕುರುಕ್ಷೇತ್ರದಲ್ಲಿ ಹರಿಯುವ ಒಂದು ಪವಿತ್ರ ನದಿ. ಇದು ಸ್ವಚ್ಛವೂ ಶುದ್ಧವೂ ಆದ ನೀರಿನಿಂದ ತುಂಬಿರುತ್ತದೆ. ಇದರಲ್ಲಿ ಹರಳು, ಕಲ್ಲುಗಳಾಗಲಿ, ಕೆಸರಾಗಲಿ ಇಲ್ಲವೇ ಇಲ್ಲ. ಇದರ ದಡದಲ್ಲೇ ಶ್ರೀಕೃಷ್ಣನು ಪಾಂಡವ ಸೇನಾ ಶಿಬಿರವನ್ನು ಹಾಕಿಸಿದ್ದನು (ಉದ್ಯೋಗ 152/7–8). ಇದು ಭಾರತವರ್ಷದ ಪ್ರಮುಖ ನದಿಗಳಲ್ಲಿ ಒಂದಾಗಿದೆ. ಭಾರತವಾಸಿಗಳು ಇದರ ನೀರನ್ನು ಕುಡಿಯುತ್ತಾರೆ (ಭೀಷ್ಮ 9/25).

**ಹೀಕ** – ವಿಪಾಶಾದಲ್ಲಿ ವಾಸಿಸುವ ಒಬ್ಬ ರಾಕ್ಷಸ. ಇವನು ವಹಿ ಎಂಬ ನಿಶಾಚರನ ಜೊತೆಗಾರ ನಾಗಿದ್ದನು. ಇವನ ಸಂತಾನದವರು ವಾಹೀಕ ರೆಂದು ಕರೆಯಲ್ಪಡುತ್ತಾರೆ (ಕರ್ಣ 44/41–42).

**ಹುಣ್ಡ** (ಹುಂಡ) – ಒಂದು ಜನಪದ. ಈ ದೇಶದ ಜನರು ನಕುಲ ಸಹದೇವರೊಂದಿಗೆ ಕ್ರೌಂಚಾರುಣವ್ಯೂಹದ ಎಡರೆಕ್ಕೆಯ ಸ್ಥಾನದಲ್ಲಿ ನಿಂತಿದ್ದರು (ಭೀಷ್ಮ 50/52–53).

**ಹುತಹವ್ಯವಹ** – 'ಧರ'ನೆಂಬ ವಸುವಿನ ಪುತ್ರರಲ್ಲಿ ಒಬ್ಬ. ಇನ್ನೊಬ್ಬನ ಹೆಸರು ದ್ರವಿಣನೆಂದಾಗಿತ್ತು (ಆದಿ 66/21).

**ಹೂಣ** – ಒಂದು ಜಾತಿ. ಇವರ ಉತ್ಪತ್ತಿ ನಂದಿನಿ ಗೋವಿನ ನೊರೆಯಿಂದಾಯಿತು (ಆದಿ 174/38). ಹೂಣರ ನಿವಾಸ ಸ್ಥಳವನ್ನು ಹೂಣ ದೇಶವೆಂದು ಹೇಳಲಾಗಿದೆ. ಪಶ್ಚಿಮ ಭಾಗದಲ್ಲಿದ್ದ ಈ ದೇಶ ಮತ್ತು ಜಾತಿಯ ರಾಜರನ್ನು ನಕುಲನು, ದೂತರ ಮೂಲಕವೇ ವಶಮಾಡಿ ಕೊಂಡಿದ್ದನು (ಸಭಾ 32/12). ಹೂಣದೇಶದ ಭೂಪಾಲಕರು ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಕಾಣಿಕೆ ತೆಗೆದುಕೊಂಡು ಬಂದಿದ್ದರು (ಸಭಾ 51/24).

**ಹೂಹೂ** – ಒಬ್ಬ ಶ್ರೇಷ್ಠ ಗಂಧರ್ವ. ಇವನು ಮಹರ್ಷಿ ಕಶ್ಯಪನಿಂದ ಪ್ರಾಧೆಯ ಗರ್ಭದಲ್ಲಿ ಜನಿಸಿದ್ದನು (ಆದಿ 65/51; ವನ 43/41). ಇವನು ಅರ್ಜುನನ ಜನ್ಮಮಹೋತ್ಸವಕ್ಕೆ ಆಗ ಮಿಸಿದ್ದನು (ಆದಿ 122/59). ಇವನು ಕುಬೇರನ ಸಭೆಯಲ್ಲಿರುತ್ತಾ ಅವನ ಉಪಾಸನೆ ಮಾಡು ತ್ತಾನೆ (ಸಭಾ 10/25–27). ಇವನು ಇಂದ್ರ ಲೋಕದ ಸಭೆಯಲ್ಲಿ ಅರ್ಜುನನ್ನು ಸ್ವಾಗತಿಸಿ ದ್ದನು (ವನ 43/14).

**ಹೃದೀಕ** – ಭೋಜವಂಶದ ಒಬ್ಬ ಯಾದವ. ಇವನು ಕೃತವರ್ಮನ ತಂದೆ (ಆದಿ 63/105).

**ಹೃದ್ಯ** – ಒಬ್ಬ ಪ್ರಾಚೀನ ಋಷಿ. ಇವನು ಇಂದ್ರಸಭೆಯಲ್ಲಿದ್ದಾನೆ (ಸಭಾ 7/13).

**ಹೃಷೀಕೇಶ** – ಭಗವಾನ್ ಶ್ರೀಕೃಷ್ಣನ ಒಂದು ಹೆಸರು ಮತ್ತು ಇದರ ಅರ್ಥ (ಶಾಂತಿ 342/67).

**ಹೇಮಕೂಟ** – (1) ಉತ್ತರ ಭಾಗದ ಒಂದು ಪರ್ವತ. ಇಲ್ಲಿ ಅರ್ಜುನನು ತನ್ನ ಶಿಬಿರ ಹೂಡಿದ್ದನು. ಅಲ್ಲಿಂದ ಅವನು ಹರಿವರ್ಷಕ್ಕೆ ಹೋಗಿದ್ದನು (ಸಭಾ 28/6).

(2) ನಂದಾ ನದಿಯ ದಡದಲ್ಲಿರುವ ದುರ್ಗಮ ಪರ್ವತ. ಇಲ್ಲಿಗೆ ರಾಜಾ ಯುಧಿಷ್ಠಿರನು ಬಂದಿ ದ್ದನು. ಇದನ್ನು ಋಷಭಕೂಟವೆಂದೂ ಹೇಳು ತ್ತಾರೆ. ಅವನು ಇಲ್ಲಿ ಅನೇಕ ಅದ್ಭುತ ವಿಷಯ ಗಳನ್ನು ನೋಡಿದನು. ಇಲ್ಲಿ ಗಾಳಿಯಿಲ್ಲದೆಯೇ ಮುಗಿಲುಗಳು ಹುಟ್ಟಿಕೊಳ್ಳುತ್ತವೆ ಮತ್ತು ಮಂಜನ್ನು ಸುರಿಸುತ್ತವೆ. ಇಲ್ಲಿ ವೇದಗಳ ಸ್ವಾಧ್ಯಾಯ ಧ್ವನಿ ಕೇಳಿಸುತ್ತದೆ. ಆದರೆ ಅಲ್ಲಿ ಯಾರೂ ಕಾಣಿಸುವುದಿಲ್ಲ ಇತ್ಯಾದಿ ಇದರ ಕಾರಣದ ವರ್ಣನೆ (ವನ 110/2–18).

**ಹೇಮಗುಹ** – ಕಶ್ಯಪ ವಂಶದಲ್ಲಿ ಹುಟ್ಟಿದ ಒಬ್ಬ ಪ್ರಮುಖ ನಾಗರಾಜ (ಆದಿ 35/9).

**ಹೇಮನೇತ್ರ** – ಒಬ್ಬ ಯಕ್ಷ. ಇವನು ಕುಬೇರ ಸಭೆಯಲ್ಲಿದ್ದು ಆತನ ಉಪಾಸನೆ ಮಾಡುತ್ತಾನೆ (ಸಭಾ 10/17).

**ಹೇಮಮಾಲೀ** – ದ್ರುಪದನ ಒಬ್ಬ ಮಗ. ಇವನು ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟನು (ದ್ರೋಣ 156/182).

**ಹೇಮವರ್ಣ** – ರಾಜಾ ರೋಚಮಾನನ ಪುತ್ರ. ಇವನು ಪಾಂಡವಪಕ್ಷದ ಯೋಧನಾಗಿದ್ದನು. ಇವನ ಕುದುರೆಗಳ ವರ್ಣನೆ (ದ್ರೋಣ 23/67).

**ಹೇಮಾ** – ಭಾರತವರ್ಷದ ಒಂದು ನದಿ. ಇಲ್ಲಿ ವಾಸಿಸುವವರು ಇದರ ನೀರು ಕುಡಿಯುತ್ತಾರೆ (ಭೀಷ್ಮ 9/23).

**ಹೇರಂಬಕ** – ದಕ್ಷಿಣ ಭಾರತದ ಒಂದು ಜನಪದ ಮತ್ತು ಅಲ್ಲಿರುವ ನಿವಾಸಿಗಳು. ದಕ್ಷಿಣ ದಿಗ್ವಿಜಯ ಕಾಲದಲ್ಲಿ ಸಹದೇವನು ಇವರನ್ನು ಸೋಲಿಸಿದ್ದನು (ಸಭಾ 31/13).

**ಹೈಮವತ** – ಒಂದು ದೇಶದ ಹೆಸರು. ಇದು ಹಿಮಾಲಯದ ಉತ್ತರಕ್ಕಿದೆ (ಭೀಷ್ಮ 6/7). ಮೇರುವಿನಿಂದ ಮಿಥಿಲೆಗೆ ಹೋಗುವಾಗ ಶುಕ ದೇವನು ಈ ದೇಶವನ್ನು ದಾಟಿದ್ದನು ಮತ್ತು ಅವನು ಪುನಃ ಭಾರತವರ್ಷಕ್ಕೆ ಬಂದಿದ್ದನು (ಶಾಂತಿ 325/14).

**ಹೈಮವತೀ** – (1) ಹಿಮಾಲಯದಿಂದ ಹೊರಟ ಒಂದು ನದಿ. 'ಶತದ್ರು'ವಿಗೆ 'ಹೈಮವತಿ' ಎಂಬ ಶಬ್ದ ಪ್ರಯೋಗಿಸಲ್ಪಟ್ಟಿದೆ (ಆದಿ 176/8–9).

(2) ವಿಶ್ವಾಮಿತ್ರನ ಪ್ರೀತಿಯ ಪತ್ನಿ (ಉದ್ಯೋಗ 117/13).

(3) ಭಗವಾನ್ ಶ್ರೀಕೃಷ್ಣನ ಒಬ್ಬ ಪತ್ನಿ. ಈಕೆ ಪತಿಯ ದಾಹಸಂಸ್ಕಾರ ಕಾಲದಲ್ಲಿ ಚಿತಾರೋಹಣ ಮಾಡಿದ್ದಳು (ಮೌಸಲ 7/73).

**ಹೈರಣ್ಯವತೀ** – ಹಿರಣ್ಮಯ ವರ್ಷದ ಒಂದು ನದಿ (ಭೀಷ್ಮ 8/15).

**ಹೈಹಯ** – (1) ಕ್ಷತ್ರಿಯರ ಒಂದು ಕುಲ. ಪರಶುರಾಮನು ಇದರ ಸಂಹಾರ ಮಾಡಿದ್ದನು. ಕಾರ್ತವೀರ್ಯ ಅರ್ಜುನನು ಹೈಹಯವಂಶದ ಕ್ಷತ್ರಿಯರ ಅಧಿಪತಿಯಾಗಿದ್ದನು. ಇವನು ಪರಶುರಾಮನಿಂದ ಕೊಲ್ಲಲ್ಪಟ್ಟನು (ಸಭಾ 38/29). ರಾಜಾ ಸಗರನು ಈ ವಂಶದ ಕ್ಷತ್ರಿಯರನ್ನು ಗೆದ್ದಿದ್ದನು (ವನ 106/8). ರಾಜಾ ಪರಪುರಂಜಯನು ಹೈಹಯವಂಶದ ಕ್ಷತ್ರಿಯರ ವಂಶಪರಂಪರೆಯನ್ನು ಅಭಿವೃದ್ಧಿಗೊಳಿಸಿದವನಾಗಿದ್ದನು. ಇವನು ತಿಳಿಯದೆ ಒಬ್ಬ ಮುನಿಗೆ ಬಾಣ ಹೊಡೆದಿದ್ದನು. ಅನಂತರ ಕೆಲವು ಮಂದಿ ಹೈಹಯರು ಅವನನ್ನು ಸಂಗಡ ಕರೆದುಕೊಂಡು, ಮುನಿಶ್ರೇಷ್ಠನಾದ, ಕಶ್ಯಪ ಪುತ್ರ ಅರಿಷ್ಟನೇಮಾನ ಬಳಿಗೆ ಹೋದರು. ಅವರು ಆ ಮುನಿಯನ್ನು ಜೀವಂತ ತೋರಿಸಿ, ಸದ್ಧರ್ಮಾಚರಣೆಯ ಪ್ರಭಾವದಿಂದ, ನಮ್ಮ ಮೇಲೆ ಮೃತ್ಯುವಿನ ಆದೇಶ ನಡೆಯುವುದಿಲ್ಲ ಎಂದರು (ವನ 184/3–22). ಈ ವಂಶದಲ್ಲಿ ಮುದಾವರ್ತನೆಂಬ ಒಬ್ಬ ಕುಲಕಳಂಕ ರಾಜನಾಗಿದ್ದನು (ಉದ್ಯೋಗ 74/13). ಬ್ರಾಹ್ಮಣರು ದರ್ಭೆಯುಕ್ತವಾದ ತಮ್ಮ ಧ್ವಜವನ್ನು ಹಾರಾಡಿಸುತ್ತಾ, ಒಮ್ಮೆ ಹೈಹಯ ವಂಶದ ಕ್ಷತ್ರಿಯರ ಮೇಲೆ ಆಕ್ರಮಣ ಮಾಡಿದ್ದರು (ಉದ್ಯೋಗ 156/4). ಗುಣಾವತಿಯ ಉತ್ತರಕ್ಕೆ ಮತ್ತು ಖಾಂಡವ ವನದಿಂದ ದಕ್ಷಿಣ ಪರ್ವತದ ಹತ್ತಿರವಿರುವ ಪ್ರದೇಶದಲ್ಲಿ, ಲಕ್ಷಾಂತರ ಹೈಹಯವಂಶದ ಕ್ಷತ್ರಿಯವೀರರು ಪರಶುರಾಮನ ಮೂಲಕ ರಣರಂಗದಲ್ಲಿ ಕೊಲ್ಲಲ್ಪಟ್ಟರು (ದ್ರೋಣ 70/8–9). ಕೃತವೀರ್ಯನ ಬಲವಂತ ಪುತ್ರನಾದ ಅರ್ಜುನನು ಹೈಹಯ ವಂಶದ ರಾಜನಾದನು (ಶಾಂತಿ 49/35). ರಾಜಾ ಸುಮಿತ್ರನು ಹೈಹಯ ವಂಶದ ರಾಜನಾಗಿದ್ದನು (ಶಾಂತಿ 126/8).

(2) ಶರ್ಯಾತಿಯ ವಂಶದಲ್ಲಿ ಹುಟ್ಟಿದ ಒಬ್ಬ ರಾಜ. ಇವನ ಹೆಸರಿನಲ್ಲಿ ಹೈಹಯವಂಶದ ಪರಂಪರೆ ಪ್ರಚಲಿತವಾಯಿತು. ಹೈಹಯನು ವತ್ಸನ ಪುತ್ರನಾಗಿದ್ದನು. ಇವನ ಇನ್ನೊಂದು ಹೆಸರು ವೀತಹವ್ಯನೆಂದಾಗಿತ್ತು. ಇವನಿಗೆ ಹತ್ತು ಮಂದಿ ಪತ್ನಿಯರಿದ್ದರು. ಅವರಿಂದ ನೂರು ಮಂದಿ ವೀರಪುತ್ರರು ಜನಿಸಿದ್ದರು (ಅನು 30/7–8) (ವಿಶೇಷ ನೋಡಿರಿ– ವೀತಹವ್ಯ).

**ಹೋತ್ರವಾಹನ** – ಒಬ್ಬ ಪ್ರಾಚೀನ ರಾಜರ್ಷಿ. ಇವನು ಯುಧಿಷ್ಠಿರನನ್ನು ತುಂಬಾ ಗೌರವಿಸುತ್ತಿದ್ದನು (ವನ 26/24–25). ಇವನು ಕೌಶೀರಾಜನ ಪುತ್ರಿಯಾದ ಅಂಬೆಯ ಅಜ್ಜನಾಗಿದ್ದನು. ಇವನು ಅಂಬೆಗೆ ಪರಶುರಾಮರ ಹತ್ತಿರ ಹೋಗಲು ಸಮ್ಮತಿಯನ್ನಿತ್ತನು (ಉದ್ಯೋಗ 176/28–34). ಇವನು ಅಕೃತವ್ರಣನಿಗೆ ಅಂಬೆಯ ಪರಿಚಯ ನೀಡಿದನು (ಉದ್ಯೋಗ 176/44–56).

**ಹ್ರದಪ್ರವೇಶಪರ್ವ** – ಶಲ್ಯ ಪರ್ವದ ಒಂದು ಅವಾಂತರ ಪರ್ವ (ಅಧ್ಯಾಯ 29).

**ಹ್ರದೋದರ** – ಒಬ್ಬ ರಾಕ್ಷಸ. ಸ್ಕಂದನಿಂದ ಇವನ ವಧೆಯಾಗಿತ್ತು (ಶಲ್ಯ 46/75).

**ಹ್ರಾದ** – ಒಬ್ಬ ನಾಗ. ಇವನು ಬಲರಾಮನ ಪರಮಧಾಮಗಮನ ಕಾಲದಲ್ಲಿ ಸ್ವಾಗತಕ್ಕಾಗಿ ಬಂದಿದ್ದನು (ಮೌಸಲ 4/16).

**ಹ್ರೀ** – ಒಬ್ಬ ದೇವಿ. ಇವಳು ಬ್ರಹ್ಮಸಭೆಯಲ್ಲಿದ್ದುಕೊಂಡು, ಆತನ ಉಪಾಸನೆ ಮಾಡುತ್ತಾಳೆ (ಸಭಾ 11/42). ಅರ್ಜುನನು ಇಂದ್ರಲೋಕಕ್ಕೆ ಹೋಗುತ್ತಿರುವಾಗ, ಅವನಿಗೆ ಮಂಗಲಾಶಂಸನೆ ಮಾಡಲು, ದ್ರೌಪದಿಯು ಹ್ರೀ ದೇವಿಯ ಸ್ಮರಣೆ ಮಾಡಿದ್ದಳು (ವನ 37/33). ಸ್ಕಂದನ ಅಭಿಷೇಕಕ್ಕೆ ಈಕೆಯೂ ಆಗಮಿಸಿದ್ದಳು (ಶಲ್ಯ 45/13).

**ಹ್ರೀನಿಷೇವ** – ಒಬ್ಬ ದೈತ್ಯ ಅಥವಾ ರಾಜರ್ಷಿ. ಇವನು ಪ್ರಾಚೀನ ಕಾಲದಲ್ಲಿ ಪೃಥ್ವಿಯ ಶಾಸಕನಾಗಿದ್ದನು. ಆದರೆ ಕಾಲವಶನಾಗಿ ಅದನ್ನೆಲ್ಲಾ ಬಿಟ್ಟು ಮರಣಹೊಂದಿದನು (ಶಾಂತಿ 227/51).

**ಹ್ರೀಮಾನ್** – ಒಬ್ಬ ಸನಾತನ ವಿಶ್ವೇದೇವ (ಅನು 91/31).



ಭಾಷೆ ಮತ್ತು ಸಂಸ್ಕೃತಿಯ ಅಧ್ಯಯನದಲ್ಲಿ ವಿವಿಧ ರೀತಿಯ ನಿಘಂಟುಗಳಿಗೆ ಇರುವ ಸ್ಥಾನ ಹಿರಿದಾದುದು. ಈ ಬೃಹದ್ಗಾತ್ರದ ಕೋಶದಲ್ಲಿ ಮಹಾಭಾರತದ ವ್ಯಕ್ತಿ, ಸ್ಥಳ, ವಿಷಯ, ಘಟನೆ ಇತ್ಯಾದಿಗಳ ಬಗೆಗೆ ಅಧಿಕೃತವಾದ ಮಾಹಿತಿ ದೊರೆಯುತ್ತದೆ. ಇದು ಮಹಾಭಾರತವನ್ನು ಕುರಿತಾದ ಸುಲಭಗೊಳಿಸಿದ ಮತ್ತು ಕ್ರಮಬದ್ಧಗೊಳಿಸಿದ ವಿವರಣೆಗಳ ಕೈಪಿಡಿ. ನಮ್ಮೆಲ್ಲ ಸಾಂಸ್ಕೃತಿಕ ಅಧ್ಯಯನಾಸಕ್ತರಿಗೆ ಇದು ಅತ್ಯುಪಯುಕ್ತವಾದ ಪರಾಮರ್ಶನ ಗ್ರಂಥ.

ಕನ್ನಡದಲ್ಲಿ ಈಗಾಗಲೇ ಪುರಾಣನಾಮಚೂಡಾಮಣಿ, ಪುರಾಣ ಭಾರತಕೋಶ ಮೊದಲಾದ ಈ ಮಾದರಿಯ ಕೋಶಗಳು ಬಂದಿದ್ದರೂ ಇದು ಅವುಗಳೆಲ್ಲವುಗಳಿಗಿಂತಲೂ ಹೆಚ್ಚು ವಿಸ್ತಾರವಾದುದು, ಅಧಿಕೃತವಾದುದು; ಆದುದರಿಂದಲೇ ಹೆಚ್ಚು ಉಪಯುಕ್ತವೂ ಆದುದು.

ಈ ಕೃತಿಯನ್ನು ಸಿದ್ಧಪಡಿಸಿದ ಕರಾವಳಿ ಕರ್ನಾಟಕದ ಖ್ಯಾತ ಯಕ್ಷಗಾನ ಅರ್ಥಧಾರಿಗಳಾದ ಶ್ರೀ ಸಿ. ಗೋಪಾಲಕೃಷ್ಣ ಶಾಸ್ತ್ರಿ ಮೂಡಂಬೈಲು ಅವರ ಪರಿಶ್ರಮ ಶ್ಲಾಘನೀಯ; ಅವರು ೧೯೫೮ರಿಂದ ಪುರಾಣಪ್ರವಚನಕಾರರಾಗಿ ಮತ್ತು ಅರ್ಥಧಾರಿಗಳಾಗಿಯೂ ಅನುಭವವುಳ್ಳವರು; ಪುರಾಣಪ್ರಪಂಚವನ್ನು ನಮ್ಮ ಮುಂದೆ ಕಲಾತ್ಮಕವಾಗಿ ನಿರೂಪಿಸಬಲ್ಲವರು. ಈಗಾಗಲೇ ಹಲವು ಕೃತಿಗಳನ್ನು ಬರೆದಿರುವ ಇವರ ಈ ಗ್ರಂಥವು ಕನ್ನಡದಲ್ಲಿ ಬಹಳ ಮಹತ್ತ್ವಪೂರ್ಣವಾದುದು.







**MAHABHARATA KOSHA**

**Sri Ramakrishna Ashrama, Yadavagiri, Mysuru - 570020**
**Email : mysuru.publication@rkmm.org**

*Code*: 684

₹ 300